# ಪರಿಪೂರ್ಣಚಂದ್ರಿಕಾ

## ಭಾಗ - ೩

ಸೂತ್ರ-ಭಾಷ್ಯ-ಟೀಕಾ-ಟಿಪ್ಪಣಿ-ಮೊದಲಾದ 18 ಗ್ರಂಥಗಳೊಂದಿಗೆ
ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾ ಸಂಸ್ಕೃತಮೂಲ ಹಾಗೂ ಕನ್ನಡಾನುವಾದ



ಆನಂದಮಯಾಧಿಕರಣ
ಅಂತಸ್ಥತ್ವಾಧಿಕರಣ

ಪ್ರಕಾಶಕರು : ಶ್ರೀಪಾದರಾಜಮಠ, ಮುಳಬಾಗಿಲು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

## ಭಾಗ - ೩

# ಪರಿಪೂರ್ಣಚಂದ್ರಿಕಾ

## ಆನಂದಮಯಾಧಿಕರಣ, ಅಂತಸ್ಥತ್ವಾಧಿಕರಣ

ಬ್ರಹ್ಮಸೂತ್ರ
ಸೂತ್ರದೀಪಿಕಾ
ತಂತ್ರದೀಪಿಕಾ
ನ್ಯಾಯಮುಕ್ತಾವಳಿ

ಬ್ರಹ್ಮಸೂತ್ರಭಾಷ್ಯ
ಭಾಷ್ಯದೀಪಿಕಾ
ಸತ್ತರ್ಕದೀಪಾವಳಿ
ತತ್ವಪ್ರಕಾಶಿಕಾ
ಭಾವದೀಪ
ವಾಕ್ಯಾರ್ಥಮಂಜರೀ

ತಾತ್ಪರ್ಯಚಂದ್ರಿಕಾ
ಪ್ರಕಾಶ
ಗುರುರಾಜೀಯ
ಭಾಟ್ಟಸಂಗ್ರಹ

ನ್ಯಾಯವಿವರಣ
ನ್ಯಾಯವಿವರಣಟೀಕಾ
ಅಣುಭಾಷ್ಯ
ತತ್ವಮಂಜರೀ

(ಶಂಕರಭಾಷ್ಯ, ಭಾಮತೀ, ಶ್ರೀಭಾಷ್ಯ ಇವುಗಳ ಆಯ್ದ ಭಾಗಗಳು)

* * * * * *

ಪ್ರಧಾನಸಂಪಾದಕರು :
ವಿ॥ ಆರ್. ವೇಂಕಟೇಶಾಚಾರ್ಯ
ಶ್ರೀರಂಗಮ್

ಸಂಗ್ರಹ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು

\- - - - - -

ಪ್ರಕಾಶಕರು
ಶ್ರೀಪಾದರಾಜಮಠ
ಮುಳಬಾಗಿಲು.

'ಪರಿಪೂರ್ಣಚಂದ್ರಿಕಾ' ॥ ವಿಕೃತಿ ನಾಮಸಂವತ್ಸರ ಪೌಷ ಬಹುಳ ದ್ವಿತೀಯಾ (ದಿನಾಂಕ : 5-2-2011) ಶ್ರೀಶ್ರೀವಿಜ್ಞಾನನಿಧಿತೀರ್ಥಶ್ರೀಪಾದಂಗಳವರ ಬೃಂದಾವನ ಪ್ರತಿಷ್ಠಾಪನೆಯ ಶುಭಮುಹೂರ್ತದಲ್ಲಿ ಮುಳಬಾಗಿಲು ಕ್ಷೇತ್ರದಲ್ಲಿ ಬಿಡುಗಡೆಯಾಯಿತು.

ಪ್ರಕಾಶನ : ಶ್ರೀಪಾದರಾಜಮಠ, ಮುಳಬಾಗಿಲು.

ಸಹಯೋಗ : ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ
ಡಾಯಲ್ಸ್ ಟೌನ್, ಪೆನ್ಸಿಲ್ವೇನಿಯಾ, ೧೮೯೦೧,
ಯು.ಎಸ್.ಎ.

ಪ್ರಥಮಮುದ್ರಣ : 2011

ಬೆಲೆ : 1000 ರೂ

ಪ್ರತಿಗಳು : 1000





ಅಕ್ಷರಜೋಡಣೆ :

ಬಿ.ಎನ್. ಚಿತ್ರಾ ಶ್ರೀನಿವಾಸರಾವ್, ಬೆಮ್ಮತ್ತಿ .

ನಾಗಲತಾ(ಸುಧಾ)ಗಿರಿ, ಬೆಂಗಳೂರು.

ಸುಬ್ಬಣ್ಣ ಕೆಂಪದಾಳಿಹಳ್ಳಿ - 91413 11280

ಮುಖಪುಟ :
ಕುಂ ॥ ಸೌ ॥ ಬಿ.ಎನ್. ಪರಿಮಳ
ಮುದ್ರಣ
ದರ್ಶನ್ ಪ್ರಿಂಟರ್ಸ್, ರಾಘವೇಂದ್ರಕಾಲೋನಿ, ಬೆಂಗಳೂರು.

# ಚಿರಋಣಿ

ಗ್ರಂಥಕಾರರಾದ ಶ್ರೀವ್ಯಾಸತೀರ್ಥರ ಪ್ರಚಂಡ ಪಾಂಡಿತ್ಯವನ್ನು ಗಮನಿಸಿ ಸಮಸ್ತ ಪಂಡಿತ ಮಂಡಳಿಯೇ ನಿಬ್ಬೆರಗಾಗಿದೆ. ಆದರೆ ಇವರ ಹಿಂದೆ ಅಡಗಿರುವ ಒಂದು ದಿವ್ಯ ಶಕ್ತಿಯೆಂದರೆ ಇವರ ಗುರುಗಳಾದ ಶ್ರೀಲಕ್ಷ್ಮೀನಾರಾಯಣ ಮುನಿಗಳು. ಅವರೇ ಶ್ರೀಶ್ರೀಪಾದರಾಜರು.

ತಮ್ಮ ಶಿಷ್ಯಂದಿರಾದ ಶ್ರೀವ್ಯಾಸತೀರ್ಥರಿಗೆ ಜ್ಞಾನಧಾರೆಯನ್ನೆರೆದು ಸಕಲವಿಧ ಪ್ರೋತ್ಸಾಹಗಳನ್ನು ನೀಡಿ ತಾತ್ಪರ್ಯಚಂದ್ರಿಕಾ ಮೊದಲಾದ ಉದ್ಗ್ರಂಥಗಳನ್ನು ಬರೆಸಿದವರು ಶ್ರೀಪಾದರಾಜರೇ ಆಗಿದ್ದಾರೆ. ಬೇಡಿದವರ ಇಷ್ಟಾರ್ಥಗಳನ್ನು ನೀಡುವುದರಲ್ಲಿ ಅಗ್ರಗಣ್ಯರಾದ ಶ್ರೀಪಾದರಾಜರ ಉಪಕಾರವನ್ನು ಎಂದೆಂದಿಗೂ ನಾವು ಮರೆಯುವಂತಿಲ್ಲ.

''ತಾತ್ಪರ್ಯಚಂದ್ರಿಕಾ ಮೊದಲಾದ ವ್ಯಾಸತ್ರಯಗಳನ್ನು ಅಲ್ಪಮತಿಗಳಾದ ನಾವು ಸ್ವಲ್ಪವಾದರೂ ಓದಿ ತಿಳಿಯೋಣ ಅಥವಾ ಮತ್ತೊಬ್ಬರಿಂದ ಓದಿಸೋಣ''

ಎಂಬ ಸಂಕಲ್ಪವನ್ನು ಮಾಡಿದಾಗಷ್ಟೇ ಶ್ರೀಪಾದರಾಜರು ನಮ್ಮ ವಿಷಯದಲ್ಲಿ ಸಂತುಷ್ಟರಾಗಲು ಸಾಧ್ಯ.

ಆಶ್ಚರ್ಯ ! ಈ ಗ್ರಂಥವು ಶ್ರೀಪಾದರಾಜಮಠದಿಂದಲೇ ಪ್ರಕಾಶನವಾಗುತ್ತಿರುವುದು ಸಂತಸದ ಸಂಗತಿ. ಸಾವಿರಾರು ಪುಟಗಳ ಗ್ರಂಥದ ದುಬಾರಿ ಮುದ್ರಣದ ಭಾರದಲ್ಲಿ ಸಿಲುಕಿಕೊಂಡಾಗ ನನಗೆ ದಾರಿ ತೋರಿದವರು ಶ್ರೀಪಾದರಾಜರು. ಹಲವಾರು ಸಮಸ್ಯೆಗಳನ್ನು ಪರಿಹರಿಸಿ ಪ್ರಕಾಶನದ ಜವಾಬ್ದಾರಿಯನ್ನು ಸ್ವತಃ ಶ್ರೀಪಾದರಾಜಮಠವೇ ವಹಿಸಿಕೊಂಡಿದ್ದು ಹೇಳಲಾಗದಷ್ಟು ಸಂತೋಷದ ವಿಷಯ. ಕಣ್ಣಾರೆ ಕಂಡಂತೆ ಎಲ್ಲ ಮಾಧ್ವರನ್ನು ಒಗ್ಗೂಡಿಸಿ ಒಮ್ಮತದಿಂದ ಮಾಧ್ವಸಮಾಜವನ್ನು ನಿರ್ಮಾಣಮಾಡಬೇಕೆಂಬ ಹೆಬ್ಬಯಕೆಯಿದ್ದದ್ದು ಪರಮಪೂಜ್ಯ ಶ್ರೀಶ್ರೀವಿಜ್ಞಾನನಿಧಿತೀರ್ಥ-ಶ್ರೀಪಾದಂಗಳವರಲ್ಲಿ. ಉತ್ತಮತಪಸ್ವಿಗಳೂ ಉದಾರ ತ್ಯಾಗಿಗಳೂ ಆದ ಇವರ ಮತ್ತೊಂದು ಹೆಬ್ಬಯಕೆ ರಾಷ್ಟ್ರಿಯವೇದವಿಜ್ಞಾನಸಂಸ್ಥೆ (ರಿ.). ಈ ಸಂಸ್ಥೆಯ ವತಿಯಿಂದ ಸಾವಿರಾರು ಜನರಿಗೆ ಅನುಕೂಲವಾಗುವಂತಹ ಗ್ರಂಥಪ್ರಕಾಶನಗಳು ನಡೆಯಬೇಕು. ಹಾಗೂ ಸಂಶೋಧಿತಪುಸ್ತಕಗಳು ಮುದ್ರಣವಾಗಬೇಕು. ಜನರಿಗೆ ಮುಟ್ಟುವ ಭಾಷೆಯಲ್ಲಿಯೇ ಉದ್‌ಗ್ರಂಥಗಳನ್ನು ದೊರಕಿಸ-

ಬೇಕೆಂಬುದು ಈ ಸಂಸ್ಥೆಯ ಮುಖ್ಯ ಉದ್ದೇಶ. ಈ ಸಂಸ್ಥೆಯ ಸಹಕಾರದಿಂದ ಇನ್ನೂ ಹಲವಾರು ಗ್ರಂಥಗಳು ಮುಂದೆ ಹೊರಬರಲಿವೆ. ಇಂತಹ ದಿವ್ಯ ಅನುಭಾವಿಗಳಾದ ಹರಿಪದಂಗತರಾದ ೧೦೮ ಶ್ರೀಶ್ರೀ ವಿಜ್ಞಾನನಿಧಿತೀರ್ಥಶ್ರೀಪಾದಂಗಳವರ ವೃಂದಾವನಪ್ರತಿಷ್ಠಾಪನಾ ಸಂದರ್ಭದಲ್ಲಿ ಈ ಗ್ರಂಥವು ಹರಿವಾಯುಗುರುಗಳಿಗೆ ಸಮರ್ಪಿತವಾಗುತ್ತಿರುವುದು ನಮ್ಮೆಲ್ಲರ ಸೌಭಾಗ್ಯ.

ಶ್ರೀಶ್ರೀಪಾದರಾಜರ ಮಹಾಮಹಿಮೋಪೇತವಾದ ಪೀಠದಲ್ಲಿ ಅಲಂಕರಿಸಿರುವ ಶ್ರೀಶ್ರೀಕೇಶವನಿಧಿ ಶ್ರೀಪಾದಂಗಳವರಿಗೆ ಸಾಷ್ಟಾಂಗ ನಮಸ್ಕಾರಗಳನ್ನಷ್ಟೇ ಮಾಡುತ್ತೇನೆ. ಇವರ ಆಶೀರ್ವಾದ ನಿರಂತರವಿರಲಿ.

ಗುರುಗಳಾದ ಶ್ರೀಪಾದರಾಜರ ಹೆಸರನ್ನೇ ಹೊಂದಿರುವ ಶ್ರೀಪಾದಪುತ್ರರಾದ ಶ್ರೀಲಕ್ಷ್ಮೀ-ನಾರಾಯಣಾಚಾರ್ಯರು ಈ ಕೃತಿಯ ಪ್ರಕಾಶನಕ್ಕಾಗಿ ಅಸದೃಶವಾದ ಉಪಕಾರವನ್ನು ಮಾಡುತ್ತಿದ್ದಾರೆ. ''ತಾತ್ಪರ್ಯಚಂದ್ರಿಕಾ ಗ್ರಂಥವು ಕನ್ನಡ ಅನುವಾದದಿಂದ ಪ್ರಕಾಶನಗೊಳ್ಳುತ್ತಿದೆ. ಈ ಗ್ರಂಥವು ಎಲ್ಲಾ ಮಾಧ್ವರಿಗೂ ಸುಲಭವಾಗಿ ದೊರೆಯಬೇಕು. ಹಾಗೂ ಅನುವಾದಕರಿಗೆ ಉಳಿದ ಯಾವುದೇ ಚಿಂತೆಗಳೂ ಇರಬಾರದು'' ಎಂಬುದಷ್ಟೇ ಇವರ ಉದ್ದೇಶವಾಗಿದೆ. ಇವರ ಉಪಕಾರವನ್ನು ಎಂದೆಂದೂ ಮರೆಯಲಾರೆ. ಮುಂದಿನ ಎಲ್ಲಾ ಗ್ರಂಥ ಪ್ರಕಾಶನಗಳಿಗೂ ಇವರ ಸಂಪೂರ್ಣ ಬೆಂಬಲವನ್ನೂ ಪುನಃ ಅಪೇಕ್ಷಿಸುತ್ತೇನೆ. ಇವರ ತಮ್ಮಂದಿರಾದ 'ಶ್ರೀ ಜಯರಾಜ್' ಇವರು ನಿರಂತರ ಶ್ರೀಪಾದರಾಜರ ಕೈಂಕರ್ಯದಲ್ಲಿ ತಲ್ಲೀನರಾಗಿದ್ದಾರೆ. ಇವರಿಗೂ ಅನಂತ ಕೃತಜ್ಞತೆಗಳು. ಹಾಗೂ ಮತ್ತೊಬ್ಬ ತಮ್ಮಂದಿರಾದ ಶ್ರೀಯುತ ಮುರಳಿಯವರು ಉದಾರತೆಯ ಮತ್ತೊಂದು ಪ್ರತಿರೂಪದಂತಿದ್ದಾರೆ. ಇವರಿಂದ ಮಾಧ್ವಸಮಾಜದಲ್ಲಿ ಅನೇಕ ಭವ್ಯಕಾರ್ಯಗಳು ಮುಂದೆ ನಡೆಯಲಿವೆ. ಇವರಿಗೂ ಅನಂತ ಕೃತಜ್ಞತೆಗಳು.

ಈ ಗ್ರಂಥ ಪ್ರಕಾಶನಕ್ಕೆ ಮೊದಲಿಂದಲೂ ಬಹಳಷ್ಟು ಪ್ರೋತ್ಸಾಹಿಸುತ್ತಿರುವ ಸತ್ಕುಲ ಪ್ರಸೂತರು ದೊಡ್ಡ ತ್ಯಾಗಿಗಳೂ ನಿರಂತರ ಹಸನ್ಮುಖಿಗಳೂ ಧೀರೋದಾತ್ತ ಸ್ವಭಾವವುಳ್ಳ ಮತ್ತೊಬ್ಬ ಹರಿಭಕ್ತರು ಶ್ರೀಮತಿ ಲೀಲಾ ಮತ್ತು ಶ್ರೀ ಶ್ರೀನಿವಾಸ ಪ್ರಹ್ಲಾದ ಇವರು. ಇವರ ಬೆಂಬಲವಿಲ್ಲದಿದ್ದಲ್ಲಿ 'ಪರಿಪೂರ್ಣಚಂದ್ರಿಕಾ' ಗ್ರಂಥವು ಪ್ರಕಾಶನವಾಗುತ್ತಿತ್ತೋ? ಇಲ್ಲವೋ? ಎಂದೇ ಅನೇಕ ಬಾರಿ ಸಂಶಯ ಬರುತ್ತದೆ. ಇವರ ಸೇವೆ ಗುರುಗಳಿಗೆ ಭಗವಂತನಿಗೆ ನಿಶ್ಚಯವಾಗಿಯೂ ತಲುಪಿದೆ. ಇವರಿಗೆ ಶ್ರೀಹರಿವಾಯುಗುರುಗಳು ಪರಮಮಂಗಳವನ್ನುಂಟು ಮಾಡಿ ಮತ್ತಷ್ಟು ಹರಿಭಕ್ತಿ, ತತ್ವಜ್ಞಾನ ವಿಷಯವೈರಾಗ್ಯಗಳನ್ನು ಅಭಿವೃದ್ಧವಾಗುವಂತೆ ಅನುಗ್ರಹಿಸಲೆಂದಷ್ಟೇ ಪ್ರಾರ್ಥಿಸುತ್ತೇನೆ.

ಸ್ವತಃ ತಾವೇ ಹುಡುಕಿಕೊಂಡು ಬಂದು ಈ ಕಾರ್ಯಕ್ಕೆ ಪ್ರೋತ್ಸಾಹಿಸಿದ ಮತ್ತೊಬ್ಬ ಹರಿಭಕ್ತರು ಶ್ರೀ ಭೀಮಣ್ಣ ಹಾಗೂ ಶ್ರೀಮತಿ ವಿಜಯಾ ದಂಪತಿಗಳು. ಇವರು ಈ ಗ್ರಂಥ ಪ್ರಕಾಶನಕ್ಕೆ ಆರ್ಥಿಕ ಸಹಾಯವನ್ನು ಮಾಡಿದ್ದಲ್ಲದೆ ಶಾಸ್ತ್ರನಿಧಿ ಬಿ. ವೆಂಕಟೇಶಾಚಾರ್ಯ ಮೆಮೋರಿಯಲ್ ಟ್ರಸ್ಟ್‌ನ

ಮುಖ್ಯಾಧಿಕಾರಿಗಳಾದ ಶ್ರೀ ಬಿ.ಆರ್. ಚಕ್ರಪಾಣಿ ಇವರಿಂದಲೂ ಆರ್ಥಿಕ ಸಹಾಯವನ್ನು ಮಾಡಿಸಿ-ದ್ದಾರೆ. ಶ್ರೀ ಭೀಮಣ್ಣನವರ ಉಪಕಾರವನ್ನು ಎಂದೂ ಮರೆಯಲಾರೆ. ಇವರೀರ್ವ ದಂಪತಿಗಳಿಗೆ ಶ್ರೀಹರಿವಾಯುಗುರುಗಳು ಉತ್ತಮವಾದ ಜ್ಞಾನಭಕ್ತಿವೈರಾಗ್ಯಗಳನ್ನು ನೀಡಲಿ ಹಾಗೂ ಇವರ ತಂದೆ-ತಾಯಂದಿರಾದ ಕೀರ್ತಿಶೇಷ ಅನುಸೂಯಬಾಯಿ, ಬಾಡಿಗಾರ್ಡ್ ಪ್ರಾಣೇಶ್‌ರಾವ್ ಇವರಿಗೆ ಈ ಗ್ರಂಥದ ಜ್ಞಾನದಾನದ ಪುಣ್ಯವು ದೊರೆಯಲೆಂದು ಹಾರೈಸುತ್ತೇನೆ.

'ಹೂವ ತರುವರ ಮನೆಗೆ ಹುಲ್ಲ ತರುವೆ' ಎಂಬ ದಾಸವಾಣಿ ನೆನಪಾಗುವುದು ಜಡ್ಜ್ II ರಂಗನಾಥಾಚಾರ್ಯ ಅಗ್ನಿಹೋತ್ರಿಗಳನ್ನು ನೋಡಿದಾಗ. ಇವರು ಮನೆಯಲ್ಲಿ ಸ್ವತಃ ಹತ್ತಾರು ಮಂದಿಗೆ ಪಾಠವನ್ನು ಮಾಡುವವರಾದರೂ ನಿರಹಂಕಾರಭಾವನೆಯಿಂದ ಎಲ್ಲರ ಬಳಿಯೂ ವಿದ್ಯಾರ್ಜನೆ ಮಾಡುತ್ತಾರೆ. ಪರಿಪೂರ್ಣಚಂದ್ರಿಕಾಗ್ರಂಥವನ್ನು ನೂರಕ್ಕೂ ಹೆಚ್ಚು ಮಂದಿಯ ಮನೆಗಳಿಗೆ ತಲುಪಿಸಿ ದೊಡ್ಡ ಕ್ರಾಂತಿಯನ್ನೇ ಮಾಡಿದ್ದಾರೆ. ಇವರ ಉಪಕಾರಕ್ಕೆ ಎಂದೆಂದೂ ಚಿರಋಣಿಯಾಗಿದ್ದೇನೆ.

ಮತ್ತು ನಮ್ಮ ಗ್ರಂಥಪ್ರಕಾಶನದಲ್ಲಿ ತಾದಾತ್ಮ್ಯ ಹೊಂದಿರುವ ಮಾಲಿನೀ ವೆಂಕಟೇಶಮೂರ್ತಿ-ಯವರಿಗೂ, ಆನಂದಮಯಾಧಿಕರಣದ 'ಭಾವದೀಪ'ದ ಕನ್ನಡಾನುವಾದವನ್ನು ಮಾಡಿಕೊಟ್ಟ ವಿದ್ವಾನ್ ರವಿಕುಮಾರಾಚಾರ್ಯರಿಗೂ ಅನಂತ ಕೃತಜ್ಞತೆಗಳು. ಮತ್ತು ನಮಸ್ಕಾರಗಳು.

ತೆರೆ ಹಿಂದೆ ಉಪಕರಿಸಿ ಧನ್ಯರಾದ ನನ್ನ ಆತ್ಮೀಯ ಸ್ನೇಹಿತರಿಗೂ ಧನ್ಯವಾದಗಳು.

ಈ ಎಲ್ಲಾ ಸತ್ಕಾರ್ಯಗಳು ನೆಚ್ಚಿನ ಗುರುಗಳ ಅಂತರ್ಯಾಮಿಗೆ ಸಮರ್ಪಿತವಾಗಲಿ.

ಅನುವಾದಕರು

ಬೆಮ್ಮತ್ತಿ ವೆಂಕಟೇಶಾಚಾರ್ಯ.

# * ಪರಿಪೂರ್ಣಚಂದ್ರಿಕಾ *

ಒಳಗೇನಿದೆ?

| | |
|---|---|
| ೧. ಬ್ರಹ್ಮಸೂತ್ರ - | ಸರ್ವತಂತ್ರಸ್ವತಂತ್ರ ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ ಚತುರ್ದಶಲೋಕಗುರು ಸರ್ವಜ್ಞಶಿಖಾಮಣಿ ಶ್ರೀವೇದವ್ಯಾಸದೇವರು |
| ೨. ಬ್ರಹ್ಮಸೂತ್ರಭಾಷ್ಯ - | ಜಗದ್ಗುರು ಶ್ರೀಮದಾನಂದತೀರ್ಥ - ಭಗವತ್ಪಾದರು |
| ೩. ನ್ಯಾಯವಿವರಣ - | ಜಗದ್ಗುರು ಶ್ರೀಮದಾನಂದತೀರ್ಥ - ಭಗವತ್ಪಾದರು |
| ೪. ಅಣುಭಾಷ್ಯ - | ಜಗದ್ಗುರು ಶ್ರೀಮದಾನಂದತೀರ್ಥ - ಭಗವತ್ಪಾದರು |
| ೫. ಸತ್ತರ್ಕದೀಪಾವಳಿ - | ಪ್ರಾಚೀನಟೀಕಾಕಾರರಾದ ಶ್ರೀಪದ್ಮನಾಭತೀರ್ಥರು |
| ೬. ತತ್ವಪ್ರಕಾಶಿಕಾ - | ಸರ್ವಜ್ಞಕಲ್ಪ ಟೀಕಾಕೃತ್ಪಾದರೆಂದು ಪ್ರಸಿದ್ಧರಾದ ಶ್ರೀಜಯತೀರ್ಥರು |
| ೭. ನ್ಯಾಯವಿವರಣಟೀಕಾ - | ಸರ್ವಜ್ಞಕಲ್ಪ ಟೀಕಾಕೃತ್ಪಾದರೆಂದು ಪ್ರಸಿದ್ಧರಾದ ಶ್ರೀಜಯತೀರ್ಥರು |
| ೮. ತಾತ್ಪರ್ಯಚಂದ್ರಿಕಾ - | ಚಂದ್ರಿಕಾಚಾರ್ಯರಾದ ಶ್ರೀವ್ಯಾಸತೀರ್ಥರು |

೯. ಪ್ರಕಾಶ - ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೦. ತತ್ವಪ್ರಕಾಶಿಕಾಭಾವದೀಪ ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೧. ತತ್ವಮಂಜರೀ - ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೨. ನ್ಯಾಯಮುಕ್ತಾವಳಿ - ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೩. ತಂತ್ರದೀಪಿಕಾ - ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೪. ಭಾಟ್ಟಸಂಗ್ರಹ - ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥರು

೧೫. ಸೂತ್ರದೀಪಿಕಾ - ಭಾಷ್ಯದೀಪಿಕಾಚಾರ್ಯರಾದ
ಶ್ರೀಜಗನ್ನಾಥಯತಿಗಳು

೧೬. ಭಾಷ್ಯದೀಪಿಕಾ - ಭಾಷ್ಯದೀಪಿಕಾಚಾರ್ಯರಾದ
ಶ್ರೀಜಗನ್ನಾಥಯತಿಗಳು

೧೭. ಗುರುರಾಜೀಯ(ಚಂದ್ರಿಕಾ) - ಪಾಂಡುರಂಗೀ ಕೇಶವಾಚಾರ್ಯರು

೧೮. ವಾಕ್ಯಾರ್ಥಮಂಜರೀ(ತತ್ವಪ್ರಕಾಶಿಕಾ) -
ಶರ್ಕರಾ ಶ್ರೀನಿವಾಸಾಚಾರ್ಯರು

* * * *

# ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನ ಕ್ರಮ

ಮೂರು ಹಂತಗಳಲ್ಲಿ ಇದನ್ನು ಅಧ್ಯಯನ ಮಾಡಬಹುದು.

## ಪ್ರಥಮಪ್ರವೇಶ
## ಸೂತ್ರ, ಭಾಷ್ಯ, ಟೀಕೆಗಳ ಅಧ್ಯಯನ

ಅ) ಬ್ರಹ್ಮಸೂತ್ರಭಾಷ್ಯ, ತತ್ತ್ವಪ್ರಕಾಶಿಕಾ, ವಾಕ್ಯಾರ್ಥಮಂಜರೀ (ಭಾಗ -೧)

ಆ) ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ, ಸತ್ತರ್ಕದೀಪಾವಳಿ (ಭಾಗ -೧)

ಇ) ಬ್ರಹ್ಮಸೂತ್ರ, ಸೂತ್ರದೀಪಿಕಾ(ಭಾಗ-೧), ತಂತ್ರದೀಪಿಕಾ (ಭಾಗ-೩)

ಈ) ಅಣುಭಾಷ್ಯ, ತತ್ತ್ವಮಂಜರೀ(ಭಾಗ-೩)

## ದ್ವಿತೀಯಪ್ರವೇಶ
## ನ್ಯಾಯವಿವರಣದ ಅಧ್ಯಯನ

ಅ) ನ್ಯಾಯವಿವರಣ, ನ್ಯಾಯವಿವರಣಟೀಕಾ (ಭಾಗ-೩)

## ತೃತೀಯಪ್ರವೇಶ
## ಚಂದ್ರಿಕಾಧ್ಯಯನ

ಅ) ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ (ಭಾಗ -೨)

ಆ) ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತಿ, ಶ್ರೀಭಾಷ್ಯ ಇವುಗಳ ಆಯ್ದ ಭಾಗಗಳು (ಭಾಗ-೨)

ಇ) ನ್ಯಾಯಮುಕ್ತಾವಳಿ (ಚಂದ್ರಿಕಾಗ್ರಂಥದಲ್ಲಿರುವ ಅಧಿಕರಣದ ಸಾರ) (ಭಾಗ-೩)

ಈ) ಭಾವದೀಪ (ಚಂದ್ರಿಕಾಗ್ರಂಥದಲ್ಲಿರುವ ತತ್ತ್ವಪ್ರಕಾಶಿಕಾವಾಕ್ಯಗಳ ಸಂಯೋಜನೆ) (ಭಾಗ-೧)

# ಭಾಗಾನುಕ್ರಮಣಿಕಾ

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ, ವಾಕ್ಯಾರ್ಥಮಂಜರೀ

## ಭಾಗ - ೨

ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,
ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ,
ಶ್ರೀಭಾಷ್ಯ, ಇವುಗಳ ಆಯ್ದ ಭಾಗಗಳು

## ಭಾಗ -೩

ಅಣುಭಾಷ್ಯ, ತತ್ವಮಂಜರೀ, ನ್ಯಾಯವಿವರಣ,
ನ್ಯಾಯವಿವರಣಟೀಕಾ, ನ್ಯಾಯಮುಕ್ತಾವಳಿ,
ತಂತ್ರದೀಪಿಕಾ,

# ಭೂಮಿಕಾ

ಪ್ರಾರಂಭದ ಐದು ಅಧಿಕರಣಗಳೂ ಅಧ್ಯಾಯ ಹಾಗೂ ಪಾದಗಳಿಗೆ ಪೀಠದಂತಿದೆ. ಆ ಐದು ಅಧಿಕರಣಗಳನ್ನು ಅಧ್ಯಯನ ಮಾಡಿದ್ದಾಯಿತು. ಮುಂದೆ ಸಕಲವೈದಿಕಶಬ್ದಗಳು ಭಗವಂತನನ್ನು ಹೇಗೆ ಪ್ರತಿಪಾದಿಸುತ್ತವೆಂಬುದನ್ನು ಅಧ್ಯಯನ ಮಾಡೋಣ.

ಆನಂದಮಯಾಧಿಕರಣದಿಂದಲೇ ಸಮನ್ವಯವು ಪ್ರಾರಂಭವಾಗುತ್ತಿದೆ. ಭಗವಂತನು ಆನಂದಮಯಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಇಲ್ಲಿ ಮುಖ್ಯವಾಗಿ ಪ್ರತಿಪಾದಿಸುತ್ತಿದ್ದಾರೆ. ಇದರ ಜೊತೆಗೆ ಅನ್ನಮಯ, ಪ್ರಾಣಮಯ, ಮನೋಮಯ ಮತ್ತು ವಿಜ್ಞಾನಮಯ ಶಬ್ದಗಳಿಂದಲೂ ಪ್ರತಿಪಾದ್ಯನೆಂದು ಸಮರ್ಥಿಸುತ್ತಿದ್ದಾರೆ.

ಮನುಷ್ಯೋತ್ತಮರು ಉಪಾಸನೆ ಮಾಡಬೇಕಾದ ಭಗವಂತನ ನಾಲ್ಕು ಗುಣಗಳಲ್ಲಿ ಆನಂದವೂ ಒಂದು. ಆನಂದವನ್ನು ಪಡೆಯುವುದೇ ಸಕಲಜೀವರ ಗುರಿಯಾಗಿದೆ. ಭಗವಂತನನ್ನು ಆನಂದಸ್ವರೂಪನೆಂದು ಉಪಾಸನೆ ಮಾಡಿದಾಗ ಮಾತ್ರ ನಾವು ಆನಂದವನ್ನು ಪಡೆಯಲು ಸಾಧ್ಯ. ಆದ್ದರಿಂದಲೇ ಭಗವಾನ್ ಬಾದರಾಯಣರು ಪ್ರಾರಂಭದಲ್ಲಿ ಆನಂದಮಯಶಬ್ದಪ್ರತಿಪಾದ್ಯತ್ವವನ್ನು ಸಮರ್ಥಿಸುತ್ತಿದ್ದಾರೆ.

ತೈತ್ತೀರಿಯ ಉಪನಿಷತ್ತಿನಲ್ಲಿರುವ ಬ್ರಹ್ಮವಲ್ಲಿ ಹಾಗೂ ಭೃಗುವಲ್ಲಿಯಲ್ಲಿರುವ ಸಕಲವೈದಿಕಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡುವುದೂ ಸಹ ಈ ಅಧಿಕರಣದ ಉದ್ದೇಶವಾಗಿದೆ. ಬ್ರಹ್ಮವಲ್ಲಿಯಲ್ಲಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಶಬ್ದಗಳು ಹೆಚ್ಚಾಗಿ ಕೇಳಿಸುತ್ತಿವೆ. ಈ ಶಬ್ದಗಳಲ್ಲಿ ಮಯಟ್ ಪ್ರತ್ಯಯವಿರುವುದರಿಂದ ವಿಕಾರ ವಸ್ತುವನ್ನು ಪ್ರತಿಪಾದಿಸುತ್ತದಂದು ಭ್ರಾಂತಿ ಬರುತ್ತದೆ. ಗೋವಿನ ವಿಕಾರವನ್ನು ಗೋಮಯ ಶಬ್ದವು ತಿಳಿಸುವಂತೆ ಈ ಶಬ್ದಗಳೂ ಸಹ ಅನ್ನವಿಕಾರವಾಗಿರುವ ಕೋಶಮುಂತಾದವುಗಳನ್ನೇ ನಿರೂಪಿಸುತ್ತವೆಂದು ಭಾಸವಾಗುತ್ತದೆ. ಹೀಗಿರುವಾಗ ಬ್ರಹ್ಮವಲ್ಲಿಯಲ್ಲಿರುವ ಶಬ್ದಗಳೂ ಭಗವಂತನನ್ನು ಹೇಗೆ ತಾನೆ ವರ್ಣಿಸಲು ಸಾಧ್ಯ?

ಈ ಆಕ್ಷೇಪವನ್ನು ಪರಿಹರಿಸುವುದಕ್ಕಾಗಿಯೇ ಆನಂದಮಯೋಽಭ್ಯಾಸಾತ್ ಎಂಬ ಸೂತ್ರವು ಹೊರಟಿದೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ

ಇವುಗಳೆಲ್ಲವು ಭಗವಂತನ ಪಂಚ ರೂಪಗಳು. ಏಕೆಂದರೆ ಉಪನಿಷತ್ತು ಅನ್ನಮಯಾದಿಗಳನ್ನು ನಿರೂಪಿಸುವಾಗ ''ಬ್ರಹ್ಮ'' ಎಂದು ಕರೆದಿದೆ. ಪರಮಾತ್ಮನನ್ನು ಬಿಟ್ಟು ಬೇರೆ ಯಾರೂ ಸಹ ಬ್ರಹ್ಮರಾಗಲು ಸಾಧ್ಯವಿಲ್ಲ. ಆದ್ದರಿಂದ ಅನ್ನಮಯಾದಿಗಳನ್ನು ಕೋಶಗಳೆಂದು ಹೇಳಬಾರದು. ಹೊರತಾಗಿ ಬಂಗಾರದ ವಸ್ತುವನ್ನು ಸುವರ್ಣಮಯವೆಂದು ಹೇಳಿದಂತೆ, ಸೂರ್ಯನನ್ನು ಪ್ರಕಾಶಮಯನೆಂದು ಹೇಳುವಂತೆ ಆನಂದಪೂರ್ಣನಾದ ಭಗವಂತನನ್ನು ಆನಂದಮಯನೆಂದು ಹೇಳಬೇಕು. ಆದ್ದರಿಂದ ಅನ್ನಮಯ ಮೊದಲಾದ ಐದು ಪದಗಳಲ್ಲಿರುವ ಮಯಟ್ ಪ್ರತ್ಯಯಕ್ಕೆ ಪೂರ್ಣಾರ್ಥಕತ್ವವನ್ನೇ ಹೇಳಬೇಕು; ಹೊರತು ವಿಕಾರಾರ್ಥವನ್ನು ಹೇಳಬಾರದು. ಪ್ರಲಯ ಕಾಲದಲ್ಲಿ ಭಗವಂತನು ಎಲ್ಲವನ್ನು ಧರಿಸಿರುತ್ತಾನೆ. ಆನಂದಪೂರ್ಣನಾಗಿ ಎಲ್ಲರಿಗೂ ನಿಯಾಮಕನಾಗಿರುತ್ತಾನೆ. ಇತ್ಯಾದಿ ಗುಣಗಳಿರುವುದರಿಂದ ವಿಷ್ಣುವೇ ಆನಂದಮಯನೆಂದು ತೀರ್ಮಾನಿಸಬಹುದು.

ಮತ್ತು ಸಮಗ್ರ ವಿಶ್ವವನ್ನು ವ್ಯಷ್ಟಿಯಾಗಿ ಹಾಗೂ ಸಮಷ್ಟಿಯಾಗಿ ತಿಳಿದಿರುವುದರಿಂದ ಮನೋಮಯನೆಂದು ಮತ್ತು ವಿಜ್ಞಾನಮಯನೆಂದು ಕರೆಸಿಕೊಳ್ಳುತ್ತಾನೆ. ಜಗತ್ತಿನ ಸಕಲ ಪ್ರವೃತ್ತಿಗಳಿಗೆ ಕಾರಣನಾದ್ದರಿಂದ ಪ್ರಾಣಮಯನೆಂದು, ಸಮಗ್ರ ವಿಶ್ವವು ಭಗವಂತನನ್ನು ಅವಲಂಬಿಸಿರುವುದರಿಂದ ಅನ್ನಮಯನೆಂದು ಕರೆಸಿಕೊಳ್ಳುತ್ತಾನೆ. ಹೀಗೆ ಭಗವಂತನ ಈ ಐದು ರೂಪಗಳನ್ನು ಸಾಧಕರು ಹೆಚ್ಚು ಹೆಚ್ಚಾಗಿ ಉಪಾಸನೆ ಮಾಡಬೇಕು.

ಅನ್ನಮಯ ಮೊದಲಾದ ಐದು ಶಬ್ದಗಳು ಭಗವಂತನನ್ನು ಪ್ರತಿಪಾದಿಸುತ್ತವೆನ್ನಲು ಮತ್ತೊಂದು ಕಾರಣವಿದೆ - ಬ್ರಹ್ಮವಲ್ಲಿಯ ಮುಂದಿನ ಉಪನಿಷತ್ತು ಭೃಗುವಲ್ಲಿ ಅದರಲ್ಲಿ ಭೃಗು ಋಷಿಗಳು ತಂದೆಯಾದ ವರುಣರ ಬಳಿ ಅನ್ನಮಯ ಮುಂತಾದ ರೂಪಗಳನ್ನು ಉಪದೇಶಿಸುವಂತೆ ಪ್ರಾರ್ಥಿಸುತ್ತಾರೆ. ಅದರಂತೆ ವರುಣರು ಅನ್ನಮಯ ಮೊದಲಾದವು ಭಗವಂತನ ಐದು ರೂಪಗಳೆಂದು ಉಪದೇಶಿಸುತ್ತಾರೆ. ಇದರಿಂದಲೂ ಪರಬ್ರಹ್ಮನೇ ಅನ್ನಮಯಾದಿಗಳೆಂದು ನಿರ್ಣಯವಾಗುತ್ತದೆ.

ಇವೇ ಮೊದಲಾದ ಅನೇಕ ಕಾರಣಗಳಿಂದ ಭಗವಂತನೇ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯನೆಂದು ನಿರ್ಣಯವಾಗುತ್ತದೆ. ಹೀಗೆ ಬ್ರಹ್ಮಸೂತ್ರವು ಭಗವಂತನಲ್ಲಿ ಅನೇಕ ಶಬ್ದಗಳನ್ನು ಸಮನ್ವಯ ಮಾಡಿದೆ. ಈ ಉದಾಹರಣೆಯಂತೆ ವೇದದಲ್ಲಿರುವ ಎಲ್ಲ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಬೇಕು. ಏಕೆಂದರೆ ಸಕಲ ವೈದಿಕಶಬ್ದಗಳು ಒಂದಲ್ಲ ಒಂದು ಗುಣವನ್ನು ಹೇಳಿಯೇ ತೀರುತ್ತವೆ. ಒಂದು ವೇಳೆ ಕೆಲವು ಶಬ್ದಗಳಿಂದ ಭಗವಂತನು ಪ್ರತಿಪಾದ್ಯನಾಗದಿದ್ದರೆ, ಆ ಶಬ್ದದಿಂದ ತಿಳಿಯುವ ಗುಣವು ಭಗವಂತನಲ್ಲಿ ಇಲ್ಲವೆಂದಾದೀತು. ಆದಕಾರಣ ಎಷ್ಟೆಷ್ಟು ಶಬ್ದಗಳನ್ನು ಸಮನ್ವಯ ಮಾಡುತ್ತೇವೋ ಅಷ್ಟಷ್ಟು ಗುಣಗಳು ಭಗವಂತನಲ್ಲಿ

ಹೆಚ್ಚುತ್ತದೆ. ಆದ್ದರಿಂದಲೇ ಸಮನ್ವಯಾಧಿಕರಣದಲ್ಲಿ ಸಕಲ ಶಬ್ದಗಳನ್ನೇ ಸಮನ್ವಯ ಮಾಡಿದ್ದಾರೆ. ಇದರಿಂದ ಸಕಲಗುಣಪರಿಪೂರ್ಣತ್ವವು ನಿರ್ಣಯವಾಗುತ್ತದೆ. ಅನಂತಗುಣಪರಿಪೂರ್ಣತ್ವವು ಭಗವಂತನ ಮುಖ್ಯಲಕ್ಷಣವಾಗಿದೆ.

ಇದನ್ನು ಸಮರ್ಥಿಸುವುದಕ್ಕಾಗಿ ಜಗಜ್ಜನ್ಮಾದಿಕಾರಣತ್ವವನ್ನು ಎರಡನೇ ಸೂತ್ರವು ಪ್ರತಿಪಾದಿಸಿದೆ. ಆದ್ದರಿಂದ ಕೇವಲ ಜಗಜ್ಜನ್ಮಾದಿಕಾರಣತ್ವವನ್ನು ಹೇಳಿದರೆ ಸಾಲದು; ಹೊರತಾಗಿ ಅನಂತಗುಣ-ಪರಿಪೂರ್ಣತ್ವವನ್ನು ಸಹ ಭಗವಂತನ ಲಕ್ಷಣವೆಂದು ತಿಳಿಯಬೇಕು. ವಿಶಾಲವಾದ ಜಗತ್ತಿನ ಸಕಲ ವ್ಯಾಪಾರಗಳಿಗೆ ಕಾರಣನಾಗಬೇಕಾದರೆ, ಭಗವಂತನು ಅನಂತಗುಣ- ಪರಿಪೂರ್ಣನಾಗಿರಲೇ-ಬೇಕೆಂಬುದು ಇದರ ಹಿನ್ನೆಲೆ. ಗುಣಪೂರ್ಣತ್ವ ಮತ್ತು ಜಗಜ್ಜನ್ಮಾದಿಕಾರಣತ್ವ ಈ ಎರಡು ವಿಶಿಷ್ಟ ಕಾರಣಗಳಿಂದ ಭಗವಂತನು ಜೀವಜಡಗಳಿಗಿಂತ ಭಿನ್ನನೆಂದು ಸಾಧಿಸಬಹುದು.

ವೇದದಲ್ಲಿರುವ ಇಂದ್ರ, ಅಗ್ನಿ ಮೊದಲಾದ ಕೆಲವು ನಾಮವಾಚಕಪದಗಳು ಗುಣಗಳನ್ನು ಹೇಳುವುದರ ಜೊತೆಗೆ ವ್ಯಕ್ತಿಯನ್ನೂ ಸಹ ಪ್ರತಿಪಾದಿಸುತ್ತವೆ. ಇಂದ್ರ ಪದವು ಐಶ್ವರ್ಯವೆಂಬ ಗುಣವನ್ನು ಹೇಳುವುದರ ಜೊತೆಗೆ ಪುರಂದರ ಎಂಬ ವ್ಯಕ್ತಿಯನ್ನೂ ಹೇಳುತ್ತದೆ.

ಈ ಎಲ್ಲಾ ಪದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿದಾಗ ಆ ಗುಣಗಳೆಲ್ಲವೂ ಭಗವಂತನಲ್ಲಿಯೇ ಸಮರ್ಪಿತವಾಗುತ್ತವೆ. ದೇವೇಂದ್ರಾದಿಗಳಲ್ಲಿರುವ ಗುಣಗಳು ಪರಿಮಿತವಾಗಿವೆ. ಮತ್ತು ಪರಮಾತ್ಮನ ಅಧೀನವಾಗಿವೆ. ಭಗವಂತನ ಅನುಗ್ರಹವಿದ್ದರೆ ಮಾತ್ರ ದೇವೇಂದ್ರಾದಿಗಳು ತಮ್ಮ ತಮ್ಮ ಐಶ್ವರ್ಯವನ್ನು ಪಡೆಯಲು ಸಮರ್ಥರಾಗುತ್ತಾರೆ. ಆದರೆ ಭಗವಂತನಲ್ಲಿರುವ ಐಶ್ವರ್ಯಗಳು ಅಪರಿಮಿತವಾಗಿವೆ. ಮತ್ತು ಸ್ವತಂತ್ರವಾಗಿವೆ. ಭಗವಂತನು ಯಾರ ಅನುಗ್ರಹದಿಂದಲೂ ಇಂತಹ ಐಶ್ವರ್ಯಾದಿಗಳನ್ನು ಹೊಂದಲಾರ.

ಆದ್ದರಿಂದ ಇಂದ್ರ ಮೊದಲಾದ ಶಬ್ದಗಳು ದೇವೇಂದ್ರಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ ಪರಮಾತ್ಮನಲ್ಲಿ ಪರಮಮುಖ್ಯವೃತ್ತಿಯಿಂದ ಇರುತ್ತವೆ. ಭಗವಂತನಲ್ಲಿ ಇರುವಷ್ಟು ಮುಖ್ಯವಾಗಿ ದೇವೇಂದ್ರಾದಿಗಳಲ್ಲಿ ಇರಲಾರವು. ಆದ್ದರಿಂದ ಎಲ್ಲ ವೈದಿಕಪದಗಳಿಂದ ಭಗವಂತನೇ ಮುಖ್ಯ-ಪ್ರತಿಪಾದ್ಯನೆಂಬುದನ್ನು ಮನದಟ್ಟಾಗಿಸಿಕೊಳ್ಳಬೇಕು.

ಹೀಗೆ ಆನಂದಮಯಾಧಿಕರಣದಿಂದ ಸಮನ್ವಯವು ಪ್ರಾರಂಭವಾಗುತ್ತದೆ. ಈ ಎಲ್ಲಾ ವಿಚಾರ-ವನ್ನು ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ, ಅನುವ್ಯಾಖ್ಯಾನ, ನ್ಯಾಯಸುಧಾ ಮೊದಲಾದೆಡೆ ಸುಸ್ಪಷ್ಟವಾಗಿ ಪ್ರತಿಪಾದನೆ ಮಾಡಿದ್ದಾರೆ.

ಪ್ರಕೃತ ಶ್ರೀವ್ಯಾಸತೀರ್ಥರು ತಾತ್ಪರ್ಯಚಂದ್ರಿಕೆಯಲ್ಲಿ ಆನಂದಮಯಾಧಿಕರಣದ ವ್ಯಾಖ್ಯಾನವನ್ನು ಹೇಗೆ ಮಾಡಿದ್ದಾರೆಂಬುದನ್ನು ಚಿಂತನೆ ಮಾಡೋಣ. ಹಿಂದಿನ ಅಧಿಕರಣಗಳಲ್ಲಿ ಶ್ರೀವ್ಯಾಸತೀರ್ಥರ

ವ್ಯಾಖ್ಯಾನದ ಅಪೂರ್ವ ಕೌಶಲ್ಯವನ್ನು ಹಲವು ಬಗೆಯಲ್ಲಿ ಗಮನಿಸಿದ್ದೇವೆ. ಇನ್ನು ಕೆಲವು ದೃಷ್ಟಿಯಿಂದ ಶ್ರೀವ್ಯಾಸತೀರ್ಥರ ವ್ಯಾಖ್ಯಾನದ ಅಪೂರ್ವತೆಯನ್ನು ಗಮನಿಸೋಣ -

ಬ್ರಹ್ಮಸೂತ್ರದಲ್ಲಿರುವ ಪ್ರತಿಯೊಂದು ಅಧಿಕರಣಕ್ಕೂ ಹಿಂದಿನ ಅಧಿಕರಣಗಳ ಜೊತೆ ಸಂಗತಿಯನ್ನು ತೋರಿಸುವುದು. ಸಂಗತಿಯೆಂದರೆ - ಒಂದು ಅಧಿಕರಣದ ಅನಂತರ ಇನ್ನೊಂದು ಅಧಿಕರಣ ಬರುವುದಕ್ಕೆ ಕಾರಣ ಎಂದರ್ಥ. ಇದಕ್ಕೆ ''ಆನಂತರ್ಯಸಂಗತಿ'' ಎಂದು ಕರೆಯುತ್ತಾರೆ.

ಇದೇ ರೀತಿಯಲ್ಲಿ ಪ್ರತಿಯೊಂದು ಅಧಿಕರಣಕ್ಕೂ ''ಅಂತರ್ಭಾವಸಂಗತಿ'' ಇರುತ್ತದೆ. ಅಂತ-ರ್ಭಾವವು ಶಾಸ್ತ್ರ, ಅಧ್ಯಾಯ, ಪಾದ ಎಂದು ಮೂರು ವಿಧವಾಗಿದೆ. ಆನಂತರ್ಯಸಂಗತಿಯಾದರೋ ಆಕ್ಷೇಪಿಕೀ, ಆತಿದೇಶಿಕೀ, ಔಪೋದ್ಘಾತಿಕೀ, ಆಪವಾದಿಕೀ ಮೊದಲಾದ ಅನೇಕ ವಿಧವಾಗಿದೆ. ಈ ಎರಡು ರೀತಿಯ ಸಂಗತಿಗಳಲ್ಲಿ (ಅಂತರ್ಭಾವ ಮತ್ತು ಆನಂತರ್ಯಸಂಗತಿಗಳಲ್ಲಿ) - ಅಂತರ್ಭಾವಸಂಗತಿಗಿಂತ ಆನಂತರ್ಯಸಂಗತಿಯು ದುರ್ಬೋಧವಾಗಿದೆ. ಈ ಆನಂತರ್ಯಸಂಗತಿ-ಯನ್ನು ಚಂದ್ರಿಕಾಚಾರ್ಯರು ಎಲ್ಲಾ ಅಧಿಕರಣಗಳಲ್ಲಿಯೂ ಭಾಷ್ಯ, ಅನುವ್ಯಾಖ್ಯಾನ, ತತ್ತ್ವಪ್ರಕಾಶಿಕಾ, ಸುಧಾದಲ್ಲಿ ಸೂಚಿತವಾದುದನ್ನು ಅನೇಕ ರೀತಿಯಿಂದ ಎತ್ತಿ ತೋರಿಸುತ್ತಾರೆ.

ಶ್ರೀಮದಾಚಾರ್ಯರು ಹೀಗೆ ಕೆಲವು ಸಂಗತಿಗಳನ್ನು ಸೂಚಿತವಾಗಿ, ಇನ್ನು ಕೆಲವನ್ನು ಕಂಠತಃ ಹೇಳಲು ಏನು ಕಾರಣ? ಎಂಬುದನ್ನು ಚಂದ್ರಿಕಾಚಾರ್ಯರು ಹೃದಯಂಗಮವಾಗಿ ವರ್ಣಿಸಿದ್ದಾರೆ.

ನಿದರ್ಶನಕ್ಕಾಗಿ 'ಅಂತಸ್ಥತ್ವಾಧಿಕರಣ' ವನ್ನು ಚಿಂತನೆ ಮಾಡೋಣ.

ಹಿಂದಿನ ಆನಂದಮಯಾಧಿಕರಣದಲ್ಲಿ, ತೈತ್ತಿರೀಯ ಉಪನಿಷತ್ತಿನಲ್ಲಿ ಬರುವ ಕೆಲವು ವಾಕ್ಯಗಳು ವಿಷಯವಾಕ್ಯಗಳಾಗಿವೆ. ಅದೇ ಉಪನಿಷತ್ತಿನಲ್ಲಿಯೇ 'ಅದೃಶ್ಯೇ, ಅನಾತ್ಮ್ಯೇ, ಅನಿರುಕ್ತೇ' ಎಂಬ ವಾಕ್ಯವಿದೆ. ಈ ವಾಕ್ಯದಿಂದ ಆನಂದಮಯನಲ್ಲಿ ಅದೃಶ್ಯತ್ವಧರ್ಮವು ಕೇಳಿಬರುತ್ತಿದೆ. ಅದೃಶ್ಯತ್ವ-ವೆಂದರೆ ಸಾಕಲ್ಯೇನ ಅಜ್ಞೇಯತ್ವವೆಂದರ್ಥ. ಇಂತಹ ಅದೃಶ್ಯತ್ವಧರ್ಮವನ್ನು, ಬೇರೊಂದು ವಾಕ್ಯ 'ಅಂತಶ್ಚಂದ್ರಮಸಿ ಮನಸಾ ಚರಂತಂ । ಸಹೈವ ಸಂತಂ ನ ವಿಜಾನಂತಿ ದೇವಾಃ' ಎಂದು ಅಂತಸ್ಥನಲ್ಲಿ ಹೇಳುತ್ತಿದೆ. ಈ ಅಂತಸ್ಥನು ಯಾರೆಂದು ಈಗ ನಿರ್ಣಯವಾಗಬೇಕು.

ಒಂದು ಪಕ್ಷ ಅಂತಸ್ಥನು ವಿಷ್ಣುವಿಗಿಂತ ಬೇರೆಯಾಗಿದ್ದರೆ, 'ಅದೃಶ್ಯತ್ವ' ಎಂಬ ಧರ್ಮವೂ ಸಹ ವಿಷ್ಣುವನ್ನು ಹೊರತುಪಡಿಸಿ ಇತರರಲ್ಲಿ ಎಂದು ಸಿದ್ಧವಾಗುತ್ತದೆ. ಆವಾಗ ಅದೃಶ್ಯತ್ವ ಧರ್ಮವುಳ್ಳ ಆನಂದಮಯನೂ ವಿಷ್ಣುವಲ್ಲವೆಂದು ಶಂಕೆ ಬರುತ್ತದೆ.

ಇದರಿಂದ ಅಂತಸ್ಥತ್ವಾಧಿಕರಣಕ್ಕೆ ಹಿಂದಿನ ಆನಂದಮಯಾಧಿಕರಣದಿಂದ ಆಕ್ಷೇಪಿಕೀಸಂಗತಿಯನ್ನು ಹೇಳಿದಂತಾಯಿತು. (ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸಿ ಈ ಅಧಿಕರಣದ ಪೂರ್ವಪಕ್ಷವು ಹುಟ್ಟಿರುವುದರಿಂದ ಆಕ್ಷೇಪಿಕೀಸಂಗತಿಯನ್ನು ತಿಳಿಯಬೇಕು.) ಈ ಆಕ್ಷೇಪಿಕೀಸಂಗತಿಯನ್ನು ಭಾಷ್ಯದಲ್ಲಿ

ಕಂಠತಃ ಹೇಳಿದ್ದಾರೆ. ಇದನ್ನು ಚಂದ್ರಿಕಾಚಾರ್ಯರು ಮೊದಲು ವಿವರಿಸಿ ಅನಂತರ ಮತ್ತೆರಡು ಸಂಗತಿಯನ್ನು ತೋರಿಸುತ್ತಾರೆ - (೧) ಪ್ರತ್ಯುದಾಹರಣಸಂಗತಿ (೨) ಆಪವಾದಿಕೀಸಂಗತಿ ಎಂದು.

೧) ಪ್ರತ್ಯುದಾಹರಣಸಂಗತಿ : ಹಿಂದಿನ ಆನಂದಮಯಾಧಿಕರಣದಲ್ಲಿ ಸಮನ್ವಯ ಮಾಡಿದ ಆನಂದಮಯಶಬ್ದವು ಬೇರೆ ಕಡೆ ಪ್ರಸಿದ್ಧಿಯನ್ನು ಪಡೆದಿಲ್ಲ. ಆದರೆ ಈ ಅಂತಸ್ಥತ್ವಾಧಿಕರಣದಲ್ಲಿ, ಸಮನ್ವಯ ಮಾಡುತ್ತಿರುವ ಇಂದ್ರಾದಿಶಬ್ದಗಳು ಬೇರೆಯವರಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಹೀಗೆ ಪೂರ್ವಾಧಿಕರಣಕ್ಕಿಂತ ವಿಲಕ್ಷಣವಾದ್ದರಿಂದ ಈ ಅಧಿಕರಣಕ್ಕೆ ಪ್ರತ್ಯುದಾಹರಣ ಸಂಗತಿ ಇರುತ್ತದೆಂದು ತಿಳಿಯಬೇಕು.

೨) ಆಪವಾದಿಕೀಸಂಗತಿ : ಹಿಂದಿನ ಅಧಿಕರಣದಲ್ಲಿ ಬ್ರಹ್ಮಶಬ್ದ ಇರುವುದರಿಂದ ಆನಂದಮಯನು ವಿಷ್ಣು ಎಂದು ನಿರ್ಣಯ ಮಾಡಲಾಗಿದೆ. ಆದರೆ ಈ ನಿರ್ಣಯವು ಸಾಪವಾದವಾಗಿದೆ. ಒಂದು ವೇಳೆ ಲಿಂಗವು ನಿರವಕಾಶವಾದರೆ, ಸ್ವಭಾವತಃ ಪ್ರಬಲವಾದ ಶ್ರುತಿಯನ್ನು ಬಾಧಿಸಿರುವುದನ್ನು ತೋರಿಸಿ ಲಿಂಗದಿಂದ ನಿರ್ಣಯ ಮಾಡಬೇಕು. ಹೀಗೆ ಹಿಂದಿನ ಅಧಿಕರಣದ ಶ್ರುತಿಯು ಲಿಂಗಕ್ಕಿಂತ ಪ್ರಬಲವೆಂಬ ನಿರ್ಣಯವನ್ನು ಕುರಿತು ಅಪವಾದ ರೂಪವಾಗಿ ನಿರವಕಾಶಲಿಂಗವು ಸಾವಕಾಶ ಶ್ರುತಿಗಿಂತ ಪ್ರಬಲವೆಂದು ನಿರ್ಣಯಿಸುವ ಮುಂದಿನ ಅಧಿಕರಣವು ಪ್ರವೃತ್ತವಾಗಿದೆ.

ಪ್ರತ್ಯುದಾಹರಣ ಮತ್ತು ಆಪವಾದಿಕೀ ಎಂಬ ಈ ಸಂಗತಿಗಳು ಭಾಷ್ಯದಲ್ಲಿ ಕಂಠತಃ ಉಕ್ತವಾಗಿಲ್ಲದಿದ್ದರೂ ಅನುವ್ಯಾಖ್ಯಾನ ಮತ್ತು ಸುಧಾದಲ್ಲಿ ಸೂಚಿತವಾಗಿವೆ ಎಂದು ಚಂದ್ರಿಕಾ-ಚಾರ್ಯರು ಸಮರ್ಥಿಸಿದ್ದಾರೆ.

ಈ ರೀತಿಯಾಗಿ ಒಟ್ಟು ಮೂರು ಸಂಗತಿಗಳನ್ನು ತೋರಿಸಿ, ಅವುಗಳಲ್ಲಿ ಆಕ್ಷೇಪಿಕೀಸಂಗತಿಯು ಕಂಠತಃ ಉಕ್ತವಾಗಿದೆ, ಉಳಿದೆರಡು ಪ್ರತ್ಯುದಾಹರಣ ಹಾಗೂ ಆಪವಾದಿಕೀಸಂಗತಿಗಳು ಸೂಚಿತ-ವಾಗಿವೆ ಎಂದು ಹೇಳಿದ್ದಾರೆ.

ಆದರೆ ಭಾಷ್ಯಕಾರರ ಮೇಲೆ ಹೀಗೊಂದು ಆಕ್ಷೇಪ ಬರಬಹುದು - ಆಕ್ಷೇಪಿಕೀಸಂಗತಿಯನ್ನು ತೋರಿಸಿದ್ದು. ಋಜುಮಾರ್ಗವಲ್ಲ - ಏಕೆಂದರೆ ಆನಂದಮಯನಲ್ಲಿ ಶ್ರುತವಾದ ಅದೃಶ್ಯತ್ವವು ಮತ್ತೊಬ್ಬ ಅಂತಸ್ಥನಲ್ಲಿ ತೋರುತ್ತಿದೆ; ಆದ್ದರಿಂದ ಆನಂದಮಯನು ವಿಷ್ಣುವಾಗುವುದಿಲ್ಲವೆಂದು, ಆಕ್ಷೇಪಿಕೀಸಂಗತಿಯನ್ನು ಈ ರೀತಿಯಾಗಿ ತೋರಿಸುವುದರ ಬದಲಾಗಿ ನೇರವಾಗಿಯೇ ತೋರಿಸ-ಬಹುದು. ಹೇಗೆಂದರೆ ಆನಂದಮಯನಲ್ಲಿ 'ಯೋ ವೇದ ನಿಹಿತಂ ಗುಹಾಯಾಂ' ಎಂಬುದಾಗಿ, 'ಗುಹಾನಿಹಿತತ್ವ' ತಿಳಿದು ಬರುತ್ತದೆ. ಇದೇ ಗುಹಾನಿಹಿತತ್ವವು (ಅಂತಸ್ಥತ್ವವು) ಬೇರೆಕಡೆ ಇಂದ್ರಾದಿ-ಗಳಲ್ಲಿ ತೋರಿರುವುದರಿಂದ ಆನಂದಮಯನೂ ಇಂದ್ರಾದಿಗಳೇ ಹೊರತು ವಿಷ್ಣುವಾಗುವುದಿಲ್ಲ ಎಂದು. ಆದ್ದರಿಂದ, ಭಾಷ್ಯಕಾರರು ಈ ಋಜುಮಾರ್ಗವನ್ನು ಬಿಟ್ಟು ವಕ್ರಮಾರ್ಗವನ್ನು ಆಶ್ರಯಿಸಿ-

ರುವುದು ಸರಿಯಲ್ಲ ಎಂಬ ಶಂಕೆಗೆ, ಈ ರೀತಿಯಲ್ಲಿ ಚಂದ್ರಿಕಾಚಾರ್ಯರು ಪರಿಹಾರವನ್ನು ಕೊಟ್ಟಿದ್ದಾರೆ; ಅದೃಶ್ಯತ್ವಮುಖೇನ ಆಕ್ಷೇಪವನ್ನು ಮಾಡದಿದ್ದರೆ, ಆಗ ಒಂದು ಸಂದೇಹ ಬರಬಹುದು.

ಅದೃಶ್ಯತ್ವವೆಂಬ ಧರ್ಮವು ಆನಂದಮಯನಿಗೆ ಹೇಳಲ್ಪಟ್ಟಿದೆ. ಇದೇ ಅದೃಶ್ಯತ್ವಧರ್ಮವು. ಅಂತಸ್ಥನಲ್ಲಿಯೂ ತೋರುತ್ತಿರುವುದರಿಂದ ಅಂತಸ್ಥನೂ ವಿಷ್ಣುವೇ ಏಕೆ ಆಗಬಾರದು? ಎಂಬ ಸಂದೇಹ ಉಂಟಾಗದಿರಲಿ ಎಂದು ಆಚಾರ್ಯರು ವಕ್ರಮಾರ್ಗವನ್ನೇ ಆಶ್ರಯಿಸಿದ್ದಾರೆ. ಏಕೆಂದರೆ ಇಂದ್ರಾದಿಗಳಲ್ಲಿ ಅದೃಶ್ಯತ್ವಧರ್ಮವು ಕೇಳಿಬರುತ್ತಿರುವುದರಿಂದ ವಿಷ್ಣುವಿನ ಅಸಾಧಾರಣ ಧರ್ಮವಾಗುವುದಿಲ್ಲ. ಆದ್ದರಿಂದ ಅದೃಶ್ಯತ್ವಮುಖೇನ ವಕ್ರವಾದ ಆಕ್ಷೇಪವನ್ನು ತೋರಿಸಿರುವುದು ಸರಿಯಾಗಿದೆ ಎಂದು ಚಂದ್ರಿಕಾಚಾರ್ಯರ ಅಭಿಪ್ರಾಯವಾಗಿದೆ.

ಚಂದ್ರಿಕಾಚಾರ್ಯರು ಈ ಕ್ರಮದಲ್ಲಿ ಭಾಷ್ಯ ಅನುವ್ಯಾಖ್ಯಾನಗಳಲ್ಲಿ ಕಂಠತಃ ಉಕ್ತವಾದ ಮತ್ತು ಸೂಚಿತವಾದ ಅನೇಕರೀತಿಯ ಸಂಗತಿಗಳನ್ನು ಪ್ರತಿಯೊಂದು ಅಧಿಕರಣದಲ್ಲಿಯೂ ವಿವರಿಸುತ್ತಾರೆ. ಅದರ ಮೇಲೆ ಉಂಟಾಗುವ ಆಕ್ಷೇಪಗಳಿಗೆ ಸಮಾಧಾನವನ್ನೂ ಸಹ ತಿಳಿಸುತ್ತಾರೆ.

### ವೈದಿಕಶಬ್ದಗಳು ನಾಲ್ಕೇ ರೀತಿಯಾಗಿವೆ ಏಕೆ?

ಬ್ರಹ್ಮಸೂತ್ರದ ಸಮನ್ವಯಾಧ್ಯಾಯವು ವಿಷ್ಣುವಿನ ಗುಣಪೂರ್ಣತ್ವವನ್ನು ಸಾಧಿಸುತ್ತದೆ. ವೇದದಲ್ಲಿ ಬರುವ ಸಕಲ ಶಬ್ದಗಳೂ ವಿಷ್ಣುಪರ ಎಂದು ಸಾಧಿಸುವ ಮೂಲಕ, ಪ್ರತಿಯೊಂದು ಶಬ್ದದ ಪ್ರವೃತ್ತಿ ನಿಮಿತ್ತವು ವಿಷ್ಣುವಿನಲ್ಲಿದೆ. ಅಂದರೆ ಪ್ರತಿಯೊಂದು ಶಬ್ದದಿಂದ ಉಕ್ತವಾದ ಗುಣವು ವಿಷ್ಣುವಿನಲ್ಲಿದೆ ಎಂದೇ ಸಾಧಿಸಲ್ಪಟ್ಟಿದೆ.

ವೇದದಲ್ಲಿ ಬರುವ ಸಕಲಶಬ್ದಗಳನ್ನು ನಾಲ್ಕು ವಿಧವಾಗಿ ವಿಭಾಗಿಸಬಹುದು.

೧) ಅನ್ಯತ್ರೈವಪ್ರಸಿದ್ಧ, ೨) ಉಭಯತ್ರಪ್ರಸಿದ್ಧ, ೩) ಅನ್ಯತ್ರಪ್ರಸಿದ್ಧ, ೪) ತತ್ರಪ್ರಸಿದ್ಧ ಎಂದು. ಈ ನಾಲ್ಕು ರೀತಿಯ ಶಬ್ದಗಳನ್ನು ನಾಲ್ಕು ಪಾದಗಳಲ್ಲಿ ಸಮನ್ವಯ ಮಾಡಿದ್ದಾರೆ.

ಶ್ರೀವ್ಯಾಸರಾಜರು ಈ ನಾಲ್ಕು ರೀತಿಯಲ್ಲಿ ಶಬ್ದಗಳನ್ನು ವಿಭಾಗಮಾಡುವುದರ ಬಗ್ಗೆ ಬಹಳ ವಿಚಾರ ಮಾಡಿದ್ದಾರೆ. ಆನಂದಮಯಾಧಿಕರಣದ ಪ್ರಾರಂಭದಲ್ಲಿಯೇ ಈ ವಿಚಾರವನ್ನು ಮಾಡುತ್ತಾ, ನಾಲ್ಕು ಪ್ರಕಾರವಾಗಿ ಶಬ್ದಗಳನ್ನೂ ವಿಭಾಗಿಸಿದ ರೀತಿಯು ಸರಿಯಿಲ್ಲ ಎಂದು ದೀರ್ಘವಾಗಿ ಆಕ್ಷೇಪವನ್ನು ಮಾಡಿ, ಅನಂತರ ಪ್ರತಿಯೊಂದು ಆಕ್ಷೇಪಕ್ಕೂ ಸಮಾಧಾನವನ್ನು ಕೊಟ್ಟು, ಈ ವಿಭಾಗವನ್ನು ಸಮರ್ಥನೆ ಮಾಡಿದ್ದಾರೆ. ಹಾಗೆಯೇ ಪ್ರತಿಯೊಂದು ವಿಭಾಗಕ್ಕೂ ಅನ್ಯೂನ-ಅನತಿರಿಕ್ತವಾಗಿ (ಸಾಂಕರ್ಯ ಬರದಂತೆ) ಲಕ್ಷಣವನ್ನು ಹೇಳುತ್ತಾರೆ.

ಈ ಲಕ್ಷಣವನ್ನು ಹೇಳುವಾಗಲೂ ಹೇತುಮುಖ, ಸ್ವರೂಪಮುಖ, ಫಲಮುಖ ಎಂಬ ಮೂರು ರೀತಿಯ ಶೀರ್ಷಿಕೆಯಲ್ಲಿ ವಿವರಿಸಿದ್ದಾರೆ.

ಈ ರೀತಿಯಾಗಿ ಇಡೀ ವೇದವಾಙ್ಮಯದಲ್ಲಿರುವ ಶಬ್ದಗಳನ್ನು ನಾಲ್ಕು ರೀತಿಯಲ್ಲಿಯೇ ವಿಭಾಗಿಸಬೇಕು ಎಂಬುದನ್ನು ಸಮರ್ಥನೆ ಮಾಡಿದ ಚಂದ್ರಿಕಾಚಾರ್ಯರ ಕುಶಲತೆ ಅಪೂರ್ವವಾಗಿದೆ.

ವೈದಿಕಶಬ್ದಗಳು ನಾಲ್ಕು ರೀತಿಯಾಗಿವೆ ಎನ್ನುವ ವಿಚಾರದ ಮೇಲೆ ಬರುವ ಆಕ್ಷೇಪಗಳು :

೧. ಅನ್ಯತ್ರಪ್ರಸಿದ್ಧ ಹಾಗೂ ಅನ್ಯತ್ರೈವಪ್ರಸಿದ್ಧ ಎಂದು ವಿಭಾಗ ಮಾಡಿದಂತೆ, ತತ್ರಪ್ರಸಿದ್ಧ ಮತ್ತು ತತ್ರೈವಪ್ರಸಿದ್ಧ ಎಂಬ ವಿಭಾಗವನ್ನೂ ಮಾಡಬೇಕಾಗಿತ್ತಲ್ಲವೆ? ಹೀಗಿರುವಾಗ ತತ್ರಪ್ರಸಿದ್ಧ ಎಂಬ ವಿಭಾಗವನ್ನು ಮಾತ್ರ ಏಕೆ ಮಾಡಿದ್ದಾರೆ? ತತ್ರೈವಪ್ರಸಿದ್ಧವನ್ನು ಏಕೆ ಮಾಡಿಲ್ಲ?

೨. ಅನ್ಯತ್ರಪ್ರಸಿದ್ಧ ಹಾಗೂ ಅನ್ಯತ್ರೈವಪ್ರಸಿದ್ಧ ಶಬ್ದಗಳ ಲಕ್ಷಣವು ಅವ್ಯಾಪ್ತಿ, ಅತಿವ್ಯಾಪ್ತಿ ದೋಷಗ್ರಸ್ತವಾಗಿದೆ.

೩. ಉಭಯತ್ರಪ್ರಸಿದ್ಧ ಶಬ್ದಗಳಿಗೂ ಅನ್ಯತ್ರಪ್ರಸಿದ್ಧ ಶಬ್ದಗಳಿಗೂ ಭೇದವಿಲ್ಲ.

೪. ಒಂದೇ ಶಬ್ದವು ಅನ್ಯತ್ರಪ್ರಸಿದ್ಧ, ಉಭಯತ್ರಪ್ರಸಿದ್ಧ ಮತ್ತು ಅನ್ಯತ್ರೈವಪ್ರಸಿದ್ಧ ಶಬ್ದಗಳ ವರ್ಗದಲ್ಲಿ ಹೇಗೆ ಸೇರುತ್ತದೆ? ಉದಾ: ಆಕಾಶಶಬ್ದವನ್ನು 'ಆಕಾಶಸ್ತಲ್ಲಿಂಗಾತ್' ಎಂಬ ಮೊದಲನೇ ಪಾದದಲ್ಲಿ, ''ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್' ಎಂಬಲ್ಲಿ ಮೂರನೇ ಪಾದದಲ್ಲಿ, 'ಕಾರಣತ್ವೇನ ಚ ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ನಾಲ್ಕನೇ ಪಾದದಲ್ಲೂ ಸಮನ್ವಯ ಮಾಡಿದ್ದಾರೆ.

ಈ ನಾಲ್ಕು ಆಕ್ಷೇಪಗಳಿಗೂ ಯಾವ ರೀತಿಯಲ್ಲಿ ಸಮಾಧಾನವನ್ನು ಚಂದ್ರಿಕಾಚಾರ್ಯರು ಕೊಟ್ಟಿದ್ದಾರೆಂದು ತಿಳಿಯುವುದಕ್ಕಿಂತ ಮೊದಲು ಈ ಆಕ್ಷೇಪವನ್ನು ಹೇಗೆ ರೋಚಕವಾಗಿ ಬಲಪಡಿಸಿದ್ದಾರೆಂಬುದನ್ನು ಗಮನಿಸಬಹುದು.

ಆಕ್ಷೇಪ : ಅನ್ಯತ್ರಪ್ರಸಿದ್ಧ ಮತ್ತು ಅನ್ಯತ್ರೈವಪ್ರಸಿದ್ಧ ಎಂದು ವಿಭಾಗ ಮಾಡಿದಂತೆ, ತತ್ರಪ್ರಸಿದ್ಧ ಹಾಗೂ ತತ್ರೈವಪ್ರಸಿದ್ಧ ಎಂಬ ವಿಭಾಗವೂ ಮಾಡಬೇಕಿತ್ತಲ್ಲವೆ?

ಸಮಾಧಾನ : ತತ್ರಪ್ರಸಿದ್ಧ ಎಂದರೆ ತತ್ರೈವಪ್ರಸಿದ್ಧ ಎಂದೇ ಅರ್ಥೈಸಬೇಕಾಗುತ್ತದೆ. ಏಕೆಂದರೆ - ತತ್ರ ಎಂಬುದಕ್ಕೆ ತತ್ರಾಪಿ ಅಥವಾ ತತ್ರೈವ ಎಂದರ್ಥ. ಅದರಲ್ಲಿ ತತ್ರಾಪಿ ಎಂದರೆ ಉಭಯತ್ರ ಎಂದರ್ಥವಾಗುತ್ತದೆ. ಉಭಯತ್ರ ಎಂಬ ಮತ್ತೊಂದು ವಿಭಾಗವು ಮೊದಲೇ ಇರುವುದರಿಂದ, ತತ್ರೈವ ಎನ್ನುವ ಎರಡನೇ ಅರ್ಥವನ್ನು ಇಟ್ಟುಕೊಳ್ಳಬೇಕು. ಆದ್ದರಿಂದ ತತ್ರಪ್ರಸಿದ್ಧ ಎಂಬುವುದಕ್ಕೆ ತತ್ರೈವಪ್ರಸಿದ್ಧ ಎಂದೇ ಅರ್ಥೈಸಬೇಕಾಗುತ್ತದೆ.

ಆಕ್ಷೇಪ : ಹಾಗಾದರೆ, ಅನ್ಯತ್ರಪ್ರಸಿದ್ಧ ಎಂಬುದಕ್ಕೂ, ಅನ್ಯತ್ರಾಪಿ ಅಥವಾ ಅನ್ಯತ್ರೈವ ಎಂದು ಎರಡು ರೀತಿಯಲ್ಲಿ ಅರ್ಥವಾಗಬಹುದು. ಅದರಲ್ಲಿ ಅನ್ಯತ್ರಾಪಿ ಎಂಬುದು ಉಭಯತ್ರಪ್ರಸಿದ್ಧ

ಎಂಬುದರಲ್ಲಿ ಅಂತರ್ಗತವಾಗುವುದರಿಂದ ಅನ್ಯತ್ರಪ್ರಸಿದ್ಧ ಎಂದರೆ ಅನ್ಯತ್ರೈವಪ್ರಸಿದ್ಧ ಎಂದೇ ಅರ್ಥ. ಆದ್ದರಿಂದ ಅನ್ಯತ್ರ ಹಾಗೂ ಅನ್ಯತ್ರೈವಪ್ರಸಿದ್ಧ ಎಂದು ಎರಡು ವಿಭಾಗವನ್ನು ಮಾಡಿದ್ದೇಕೆ?

ಸಮಾಧಾನ : ಅನ್ಯತ್ರಪ್ರಸಿದ್ಧ ಹಾಗೂ ಅನ್ಯತ್ರೈವಪ್ರಸಿದ್ಧ ಶಬ್ದಗಳಲ್ಲಿ ಭೇದವಿದೆ. ಲೋಕತಃ ಅನ್ಯತ್ರೈವಪ್ರಸಿದ್ಧವಾದದ್ದು - ಅನ್ಯತ್ರಪ್ರಸಿದ್ಧವೆನಿಸುತ್ತದೆ; ಶ್ರುತ್ಯಾದಿಗಳಿಂದ ಅನ್ಯತ್ರೈವಪ್ರಸಿದ್ಧವಾದರೆ - ಅನ್ಯತ್ರೈವಪ್ರಸಿದ್ಧವೆನಿಸುತ್ತಿದೆ. ಉದಾ : ಇಂದ್ರ ಎನ್ನುವ ಶಬ್ದ ಲೋಕದಲ್ಲಿ ಪುರಂದರನಲ್ಲಿ ಪ್ರಸಿದ್ಧವಾಗಿದೆ. ಅಂತಹ ಶಬ್ದಗಳು ಅನ್ಯತ್ರಪ್ರಸಿದ್ಧ ಶಬ್ದಗಳು. ಅವ್ಯಕ್ತ ಎನ್ನುವ ಶಬ್ದವು ಅವರತ್ವ ಎನ್ನುವ ಲಿಂಗದ ಬಲದಿಂದ ಅನ್ಯತ್ರಪ್ರಸಿದ್ಧಿಯನ್ನು ಹೊಂದಿದೆ. ಹೀಗೆ ಅನ್ಯತ್ರ ಹಾಗೂ ಅನ್ಯತ್ರೈವಪ್ರಸಿದ್ಧ ಶಬ್ದಗಳಿಗೆ ಭೇದ ಇದೆ. ಅದರಂತೆ, ಲೋಕತಃ ಅನ್ಯತ್ರೈವಪ್ರಸಿದ್ಧ ಶಬ್ದಗಳನ್ನು ತತ್ರಪ್ರಸಿದ್ಧ ಎಂದೂ ಹಾಗೂ ಶ್ರುತ್ಯಾದಿಭಿಃ ಅನ್ಯತ್ರೈವಪ್ರಸಿದ್ಧ ಶಬ್ದಗಳನ್ನು ತತ್ರೈವಪ್ರಸಿದ್ಧ ಶಬ್ದಗಳು ಎಂದು ವಿಭಾಗವನ್ನು ತೋರಿಸಬಹುದು. ಆದರೆ, ಈ ವೈಲಕ್ಷಣ್ಯವನ್ನು ವಿವಕ್ಷಿಸದಿದ್ದಲ್ಲಿ ಕೇವಲ ತತ್ರಪ್ರಸಿದ್ಧ ಎಂಬ ಒಂದೇ ವಿಭಾಗವನ್ನು ಮಾಡಲಾಗಿದೆ.

ಆಕ್ಷೇಪ : ಈ ರೀತಿಯಲ್ಲಿ ಸಮಾಧಾನ ಹೇಳುವುದು ಸರಿಯಲ್ಲ. ಏಕೆಂದರೆ : ಇಂದ್ರ, ಆಕಾಶ ಮೊದಲಾದ ಶಬ್ದಗಳು ಲೋಕತಃ ಅನ್ಯತ್ರಪ್ರಸಿದ್ಧಗಳಾದ್ದರಿಂದ ಪುರಂದರನನ್ನು ಭೂತಾಕಾಶವನ್ನು ಹೇಳುತ್ತವೆಂದು ಹೇಳಬಹುದು. ಆದರೆ ಆನಂದಮಯ ಮೊದಲಾದ ಇನ್ನು ಕೆಲವು ಶಬ್ದಗಳಿಗೆ ಲೋಕತಃ ಬೇರೆಯವರಲ್ಲಿ ಪ್ರಸಿದ್ಧಿ ಇಲ್ಲ. ಆದ್ದರಿಂದ ಅಂತಹ ಶಬ್ದಗಳನ್ನು ಅನ್ಯತ್ರಪ್ರಸಿದ್ಧ ಶಬ್ದಗಳಲ್ಲಿ ಅಂತರ್ಭಾವ ಮಾಡಲು ಹೇಗೆ ಸಾಧ್ಯ ?

ಅದರಂತೆಯೇ ಲಿಂಗಾತ್ಮಕಶಬ್ದದಲ್ಲಿಯೂ ಲೋಕತಃ ಅನ್ಯತ್ರಪ್ರಸಿದ್ಧಿ ಇಲ್ಲ. ಉದಾ : ಸರ್ವಗತತ್ವ ಎನ್ನುವ ಲಿಂಗವು ಸೂರ್ಯನಲ್ಲಿ ಪ್ರಸಿದ್ಧಿಯನ್ನು ಹೊಂದಿಲ್ಲ. ಆದ್ದರಿಂದ ಅನ್ಯತ್ರಪ್ರಸಿದ್ಧಿಶಬ್ದಗಳೆಂದರೆ ಲೋಕತಃ ಅನ್ಯತ್ರಪ್ರಸಿದ್ಧಶಬ್ದಗಳೆಂಬ ಲಕ್ಷಣ ಹೇಳಿದರೆ ಆ ಲಕ್ಷಣವು ಅವ್ಯಾಪ್ತಿದೋಷಗ್ರಸ್ತವಾಗಿದೆ. ಆದುದರಿಂದ ಅನ್ಯತ್ರಪ್ರಸಿದ್ಧ ಹಾಗೂ ಅನ್ಯತ್ರೈವಪ್ರಸಿದ್ಧ ಎಂಬ ವಿಭಾಗ ಮಾಡಿರುವುದು ಸರಿಯಾಗಿಲ್ಲ. ಇದಲ್ಲದೆಯೇ ಅನ್ಯತ್ರೈವಪ್ರಸಿದ್ಧ ಲಕ್ಷಣವು ಅತಿವ್ಯಾಪ್ತವೂ ಆಗಿದೆ.

ಹೇಗೆಂದರೆ : ಅವ್ಯಕ್ತಶಬ್ದವು ಅವರತ್ವಾದಿಲಿಂಗದಿಂದ ಅನ್ಯತ್ರೈವಪ್ರಸಿದ್ಧವಾದಂತೆ, ಸರ್ವಗತತ್ವ-ಲಿಂಗವೂ ಕೂಡ ಆದಿತ್ಯಶ್ರುತಿಯ ಸಾಹಚರ್ಯದಿಂದ ಅನ್ಯತ್ರೈವಪ್ರಸಿದ್ಧವಾಗ- ಬೇಕಾಗುತ್ತದೆ. ಆದುದರಿಂದ ಸರ್ವಗತತ್ವಲಿಂಗವು ಹೇಗೆ ಅನ್ಯತ್ರಪ್ರಸಿದ್ಧವಾಗುತ್ತದೆ?

ಸಮಾಧಾನ : ಅನ್ಯತ್ರೈವಪ್ರಸಿದ್ಧಶಬ್ದದ ಲಕ್ಷಣದಲ್ಲಿ ಅವ್ಯಾಪ್ತಿ ಬರುವುದಿಲ್ಲ. ಸರ್ವಗತತ್ವಲಿಂಗವು ಅನ್ಯತ್ರಪ್ರಸಿದ್ಧವಾಗಿದೆ. ಏಕೆಂದರೆ. ಸ್ವಭಾವತಃ ಸರ್ವಗತತ್ವಲಿಂಗವು ಅನ್ಯತ್ರಪ್ರಸಿದ್ಧವಾಗದಿದ್ದರೂ, ಅನ್ಯತ್ರಪ್ರಸಿದ್ಧಿಯನ್ನು ಸಾಧಿಸುವ ಆದಿತ್ಯಶ್ರುತಿ ಇರುವುದರಿಂದ, (ಲೋಕವ್ಯವಹಾರದಲ್ಲಿ, 'ಆದಿತ್ಯ' ಎಂಬ ಹೆಸರು ಸೂರ್ಯನಲ್ಲಿ ಪ್ರಸಿದ್ಧವಾಗಿರುವುದರಿಂದ) ಅಂದರೆ ಆದಿತ್ಯಶ್ರುತಿಯ ಸಾಹ-

ಚರ್ಯವಿರುವುದರಿಂದ, ಸರ್ವಗತತ್ವಲಿಂಗವು ಅನ್ಯತ್ರಪ್ರಸಿದ್ಧವಾಗಿದೆ ಎಂದೇ ನಿರ್ಧರಿಸ-ಬೇಕಾಗುತ್ತದೆ.

**ಆಕ್ಷೇಪ :** ಈ ರೀತಿಯಲ್ಲಿ ಅನ್ಯತ್ರಪ್ರಸಿದ್ಧಶಬ್ದದ ಲಕ್ಷಣಕ್ಕೆ ಅವ್ಯಾಪ್ತಿಯನ್ನು ಪರಿಹಾರ ಮಾಡಲು ಬರುವುದಿಲ್ಲ. ಏಕೆಂದರೆ, ಈ ನ್ಯಾಯವನ್ನು ಅನ್ಯತ್ರೈವಪ್ರಸಿದ್ಧಶಬ್ದದಲ್ಲಿಯೂ ಅನ್ವಯಿಸಬಹುದಾಗಿದೆ. ಉದಾ:- ನಾಲ್ಕನೇ ಪಾದದಲ್ಲಿ ಸಮನ್ವಯ ಮಾಡುವ ಅವ್ಯಕ್ತಶಬ್ದವೂ ಕೂಡ ಸ್ವಭಾವತಃ ಅನ್ಯತ್ರಪ್ರಸಿದ್ಧವಾಗದಿದ್ದರೂ, ಅನ್ಯತ್ರಪ್ರಸಿದ್ಧವನ್ನು ಸಾಧಿಸುವ ಅವರತ್ವ ಎಂಬ ಲಿಂಗದ ಬಲದಿಂದ ಅನ್ಯತ್ರಪ್ರಸಿದ್ಧವಾಗಬೇಕಾಗುತ್ತದೆ. ಹಿಗೆ ಅವ್ಯಾಪ್ತಿ ದೋಷವನ್ನು ಪರಿಹಾರ ಮಾಡಲಿಕ್ಕೆ ಪ್ರಯತ್ನಿಸಿದರೆ ಅತಿವ್ಯಾಪ್ತಿ ದೋಷ ಬರುತ್ತದೆ. ಆದ್ದರಿಂದ 'ಉಭಯತಃ ಪಾಶಾರಜ್ಜುಃ' ಎಂಬ ನ್ಯಾಯದಂತೆ ಬಾಧಕವಾಗುತ್ತದೆ.

ಇನ್ನೊಂದು ಪ್ರಕಾರದಿಂದಲೂ, ಅನ್ಯತ್ರಪ್ರಸಿದ್ಧ ಹಾಗೂ ಅನ್ಯತ್ರೈವಪ್ರಸಿದ್ಧ ಶಬ್ದದ ಲಕ್ಷಣಗಳು ಅತಿವ್ಯಾಪ್ತವಾಗಿವೆ.

ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳು ಅನ್ಯತ್ರಪ್ರಸಿದ್ಧವಾಗುತ್ತವೆ. ಶ್ರುತ್ಯಾದಿನಾ ಅನ್ಯತ್ರಪ್ರಸಿದ್ಧವಾದ ಶಬ್ದಗಳು ಅನ್ಯತ್ರೈವಪ್ರಸಿದ್ಧ ಎಂದು ಹೇಳುವುದಾದರೆ, ನಾಲ್ಕನೇ ಪಾದದಲ್ಲಿ (ಅನ್ಯತ್ರೈವಪ್ರಸಿದ್ಧಶಬ್ದವನ್ನು ಸಮನ್ವಯ ಮಾಡುವ) ಅವ್ಯಕ್ತ, ಪ್ರಕೃತಿ ಮುಂತಾದ ಶಬ್ದಗಳನ್ನು ಸಮನ್ವಯ ಮಾಡುತ್ತಾರೆ. ಆದರೆ ಈ ಶಬ್ದಗಳಿಗೆ ಶ್ರುತ್ಯಾದಿನಾ ಅನ್ಯತ್ರಪ್ರಸಿದ್ಧಿ ಇರುವಂತೆ, ಲೋಕದ ರೂಢಿಯಲ್ಲೂ ಕೂಡ ಅನ್ಯತ್ರಪ್ರಸಿದ್ಧಿ ಇರುತ್ತದೆ. ಆದ್ದರಿಂದ, ನಾಲ್ಕನೇ ಪಾದದಲ್ಲಿ ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯ ಏಕಾಗಬಾರದು?

ಅದರಂತೆ, ಮೊದಲೆರಡು ಪಾದಗಳಲ್ಲಿ ಸಮನ್ವಯ ಮಾಡುವ ಅನ್ಯತ್ರಪ್ರಸಿದ್ಧವಾದ ಇಂದ್ರ, ಆಕಾಶ ಶಬ್ದಗಳಿಗೆ, ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧಿ ಇರುವಂತೆ, ಶ್ರುತ್ಯಾದಿನಾ ಅನ್ಯತ್ರಪ್ರಸಿದ್ಧಿಯೂ ಇರುವುದರಿಂದ ಅನ್ಯತ್ರೈವಪ್ರಸಿದ್ಧ ಶಬ್ದಗಳು ಏಕಾಗಬಾರದು ?

**ಮೇಲಿನ ಆಕ್ಷೇಪಕ್ಕೆ ಶ್ರೀವ್ಯಾಸರಾಜರು ಈ ರೀತಿ ಸಮಾಧಾನ** - ಅನ್ಯತ್ರಪ್ರಸಿದ್ಧ ಹಾಗೂ ಅನ್ಯತ್ರೈವಪ್ರಸಿದ್ಧಶಬ್ದಗಳಿಗೆ ಭೇದವಿದೆ. ಹೇಗೆಂದರೆ, ಪ್ರಬಲವಾದ ಶ್ರುತಿಲಿಂಗಗಳಿಂದ ಅನ್ಯತ್ರಪ್ರಸಿದ್ಧವಾದರೆ, ಅನ್ಯತ್ರೈವಪ್ರಸಿದ್ಧಶಬ್ದಗಳು ಉದಾ: 'ಅವರತ್ವ' ಎನ್ನುವ ಪ್ರಬಲವಾದ ಲಿಂಗದಿಂದ ಅವರತ್ವ ಎನ್ನುವ ಧರ್ಮವು ಯಾವ ರೀತಿಯಿಂದಲೂ ವಿಷ್ಣುವಿನಲ್ಲಿದೆ ಎನ್ನಲಾಗುವುದಿಲ್ಲ ಅವ್ಯಕ್ತ ಶಬ್ದವು ಅನ್ಯತ್ರೈವಪ್ರಸಿದ್ಧವಾಗಿದೆ. ಕೇವಲ (ಪ್ರಬಲವಲ್ಲದ) ಶ್ರುತ್ಯಾದಿಗಳಿಂದ ಅನ್ಯತ್ರ-ಪ್ರಸಿದ್ಧವಾದರೆ, ಅವು ಅನ್ಯತ್ರಪ್ರಸಿದ್ಧಶಬ್ದಗಳು ಉದಾ: 'ಇಂದ್ರ' ಎಂಬುವ ಶಬ್ದವು ಲೋಕರೂಢಿ-ಯಿಂದ ಪುರಂದರನನ್ನು ಹೇಳುತ್ತದೆ. ಈ ರೀತಿಯಲ್ಲಿ ಇವೆರಡಕ್ಕೂ ಭೇದವಿರುವುದರಿಂದ, ಲಕ್ಷಣವು ಪರಸ್ಪರ ಅತಿವ್ಯಾಪ್ತವಾಗಿಲ್ಲ.

ಆಕ್ಷೇಪ : ಆದರೆ ಈ ರೀತಿ ಸಮಾಧಾನವನ್ನು ಹೇಳಲಿಕ್ಕೆ ಬರುವುದಿಲ್ಲ. ಏಕೆಂದರೆ, ಎಲ್ಲ ಕಡೆಯಲ್ಲೂ ಈ ಸಮಾಧಾನವನ್ನು ಇಟ್ಟುಕೊಂಡಿಲ್ಲ. ಉದಾ:- ಎರಡನೇ ಪಾದದಲ್ಲಿ ಸಮನ್ವಯ ಮಾಡುವ 'ಋತಪಾತೃತ್ವ' ಎಂಬ ಧರ್ಮವು (ಋತಂ ಪಿಬಂತೌ ಪರಮೇ ಪರಾರ್ಧೇ ಎನ್ನುವ ವಿಷಯವಾಕ್ಯದಲ್ಲಿ) ಅನ್ಯತ್ರಪ್ರಸಿದ್ಧವಾಗಿದೆ. ಹೇಗೆಂದರೆ, 'ಪಿಬಂತೌ' ಎಂಬ ಈ ದ್ವಿವಚನವನ್ನು ಯಾವರೀತಿಯಿಂದಲೂ ವಿಷ್ಣುವಿನಲ್ಲಿ ಕೂಡಿಸಲಿಕ್ಕಾಗುವುದಿಲ್ಲ.

ಯಾವರೀತಿಯಿಂದ ಅವರತ್ವಲಿಂಗವು ವಿಷ್ಣುವಿನಲ್ಲಿದೆ ಎನ್ನುವುದಕ್ಕೆ ಬರುವುದಿಲ್ಲವೋ ಮತ್ತು ಅಷ್ಟೇ ಪ್ರಬಲವಾಗಿರುವ 'ಅವರತ್ವ' ಎನ್ನುವ ಪ್ರಬಲವಾದ ಲಿಂಗದಿಂದ ಅವ್ಯಕ್ತಶಬ್ದವು ಅನ್ಯತ್ರೈವ-ಪ್ರಸಿದ್ಧವಾಗಿದೆಯೋ, ಅದರಂತೆ 'ದ್ವಿತ್ವ' ಎನ್ನುವ ಪ್ರಬಲವಾದ ಧರ್ಮದಿಂದ, 'ಋತಪಾತೃತ್ವ' ಎನ್ನುವ ಧರ್ಮವೂ ಕೂಡ ಅನ್ಯತ್ರೈವಪ್ರಸಿದ್ಧಲಿಂಗವಾಗಬೇಕು ಹೊರತು ಎರಡನೇ ಪಾದದಲ್ಲಿ (ಅನ್ಯತ್ರಪ್ರಸಿದ್ಧಶಬ್ದಸಮನ್ವಯವನ್ನು ಮಾಡುವ ಪಾದದಲ್ಲಿ) ಹೇಗೆ ಸೇರಿಸುವುದಕ್ಕಾಗುತ್ತದೆ?

ಆಕ್ಷೇಪ : ಅದರಂತೆಯೇ ಉಭಯತ್ರಪ್ರಸಿದ್ಧ ಹಾಗೂ ಅನ್ಯತ್ರಪ್ರಸಿದ್ಧ ಶಬ್ದಗಳಿಗೂ ಭೇದವಿಲ್ಲ. ಏಕೆಂದರೆ ಉಭಯಪ್ರಸಿದ್ಧಿಯನ್ನು ಲೋಕತಃ ಅಥವಾ ಶ್ರುತ್ಯಾದಿನಾ ಹೇಳಬೇಕು ಅದರಲ್ಲಿ ಮೊದಲನೇ ಪಕ್ಷವು ಸರಿಯಲ್ಲ. ಏಕೆಂದರೆ, ಉದಾ:- ಮೂರನೇ ಪಾದದ ಮೊದಲನೇ ಅಧಿಕರಣದಲ್ಲಿ, ದ್ಯುಭ್ವಾದ್ಯಾಯತನತ್ವವೆಂಬ ಧರ್ಮವು ಪ್ರಕೃತಿಯಲ್ಲಾಗಲಿ, ರುದ್ರಾದಿಗಳಲ್ಲಾಗಲಿ ಲೋಕತಃ ಪ್ರಸಿದ್ಧವಾಗಿಲ್ಲ.

ಹಾಗೆ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಜ್ಯೋತಿಶ್ಶಬ್ದವು ಜೀವನನ್ನು ಅಥವಾ ವಿಷ್ಣುವನ್ನು ಲೋಕತಃ ಹೇಳುವುದಿಲ್ಲ. ಇನ್ನು ಎರಡನೇ ಪಕ್ಷವೂ (ಶ್ರುತ್ಯಾದಿನಾ) ಸರಿಯಲ್ಲ.

ಯಾಕೆಂದರೆ, ಶ್ರುತ್ಯಾದಿನಾ ಅನ್ಯತ್ರಪ್ರಸಿದ್ಧಿಯನ್ನು ಎಲ್ಲ ಕಡೆಯಲ್ಲೂ ಹೇಳಬಹುದು. ಉದಾ:- ಆನಂದಮಯಶಬ್ದವಾಗಲಿ, ಇಂದ್ರ, ಆಕಾಶಾ ಮೊದಲಾದ ಶಬ್ದಗಳಾಗಲಿ, ಪೂರ್ವಪಕ್ಷದಲ್ಲಿ ಹೇಳುವ ಶ್ರುತಿಲಿಂಗ ಮೊದಲಾದವುಗಳಿಂದ ಅನ್ಯತ್ರಪ್ರಸಿದ್ಧಿಯನ್ನು ಹೊಂದಿವೆ. ಹಾಗೆ ಸಿದ್ಧಾಂತದಲ್ಲಿ ಹೇಳುವ ಶ್ರುತಿಲಿಂಗ ಮೊದಲಾದವುಗಳಿಂದ ವಿಷ್ಣುವಿನಲ್ಲಿ ಪ್ರಸಿದ್ಧಿಯನ್ನು ಹೊಂದಿವೆ. ಈ ರೀತಿಯಾಗಿ ಪೂರ್ವಪಕ್ಷ ಹಾಗೂ ಸಿದ್ಧಾಂತಗಳಲ್ಲಿ ತಿಳಿಸುವ ಶ್ರುತಿ ಮತ್ತು ಲಿಂಗಗಳಿಂದ ಎಲ್ಲ ಶಬ್ದಗಳೂ ಉಭಯತ್ರಪಸಿದ್ಧಶಬ್ದಗಳಾಗುತ್ತವೆ.

೧) ಅನ್ಯತ್ರ, ಅನ್ಯತ್ರೈವ, ಉಭಯತ್ರ, ತತ್ರ ಎಂದು ನಾಲ್ಕು ರೀತಿಯಾಗಿ ಶಬ್ದಗಳನ್ನು ವಿಭಾಗ ಮಾಡಿರುವುದು ಸರಿಯಾಗಿಲ್ಲ.

೨) ಈ ವಿಭಾಗವನ್ನು ಒಪ್ಪಿದರೂ, ಅವುಗಳ ಲಕ್ಷಣವನ್ನು ಹೇಳುವುದಕ್ಕೆ ಬರುವುದಿಲ್ಲ. (ಅವ್ಯಾಪ್ತಿ, ಅತಿವ್ಯಾಪ್ತಿ, ದೋಷಗ್ರಸ್ತವಾಗಿದೆ) .

ಎಂದು ಈ ಎಲ್ಲಾ ಆಕ್ಷೇಪಗಳ ಸಾರಾಂಶ. ಈ ಎಲ್ಲಾ ಆಕ್ಷೇಪಗಳನ್ನೂ ಆಪಾತತಃ ಕಾಣುವ ಭಾಷ್ಯ, ತತ್ವಪ್ರಕಾಶಿಕಾ, ಅನುವ್ಯಾಖ್ಯಾನ, ಸುಧಾದಲ್ಲಿರುವ ಅನೇಕ ವಾಕ್ಯಗಳಿಂದ ಶ್ರೀವ್ಯಾಸತೀರ್ಥರು ದೃಢಪಡಿಸಿದ್ದಾರೆ.

ಮೇಲ್ಕಂಡ ಆಕ್ಷೇಪಗಳಿಗೆ ಸಮಾಧಾನವನ್ನು ಹೇಳುವವರಾಗಿ, ಚಂದ್ರಿಕಾಚಾರ್ಯರು ಮೊದಲು ಎಲ್ಲಾ ರೀತಿಯ ಶಬ್ದಗಳಿಗೆ ನಿತ್ಕೃಷ್ಟವಾದ ಲಕ್ಷಣವನ್ನು ಹೇಳುತ್ತಾರೆ. ಅಷ್ಟೇ ಅಲ್ಲದೆಯೇ ಪ್ರತಿಯೊಂದು ರೀತಿಯ ಶಬ್ದಕ್ಕೂ ಮೂರು ರೀತಿಯ ಲಕ್ಷಣವನ್ನು ಹೇಳುತ್ತಾರೆ.

ಅನ್ಯತ್ರಪ್ರಸಿದ್ಧ, ಉಭಯತ್ರಪ್ರಸಿದ್ಧ ಹಾಗೂ ಅನ್ಯತ್ರೈವಪ್ರಸಿದ್ಧ ಶಬ್ದಗಳಲ್ಲಿ ಪ್ರತಿಯೊಂದಕ್ಕೂ ಹೇತುಮುಖಲಕ್ಷಣ, ಸ್ವರೂಪಮುಖಲಕ್ಷಣ ಹಾಗೂ ಫಲಮುಖಲಕ್ಷಣಗಳನ್ನು ಚಂದ್ರಿಕಾಚಾರ್ಯರು ತೋರಿಸುತ್ತಾರೆ.

ಹೇತುಮುಖಲಕ್ಷಣದಲ್ಲಿ ಪ್ರಸಿದ್ಧಿಗೆ ಹೇತು(ಕಾರಣ)ವನ್ನು ತೋರಿಸುತ್ತಾ ಆ ಶಬ್ದಗಳ ಲಕ್ಷಣವನ್ನು ಹೇಳುವುದು.

ಸ್ವರೂಪಮುಖಲಕ್ಷಣದಲ್ಲಿ - ಆ ಶಬ್ದದ ಸ್ವರೂಪವನ್ನು ತೋರಿಸುತ್ತಾ ಲಕ್ಷಣವನ್ನು ಹೇಳುವುದು.

ಫಲಮುಖಲಕ್ಷಣದಲ್ಲಿ - ಆಯಾ ಶಬ್ದಗಳು ''ಸಕಲಶಬ್ದಗಳನ್ನು ವಿಷ್ಣುವಿನಲ್ಲಿ ಮಾಡುವ ಪ್ರಮೇಯಕ್ಕೆ ಯಾವ ರೀತಿಯಲ್ಲಿ ಪ್ರತಿಬಂಧಕಗಳಾಗಿವೆ'' ಎನ್ನುವುದನ್ನು ತೋರಿಸುತ್ತಾ ಲಕ್ಷಣವನ್ನು ಹೇಳುವುದು.

ಈ ರೀತಿಯಾಗಿ ಶಬ್ದಗಳ ಸಮನ್ವಯವನ್ನು ಮಾಡುವ ಮೊದಲು ಆ ಶಬ್ದಗಳ ವಿಭಾಗವನ್ನು ಮಾಡಿ, ಪ್ರತಿಯೊಂದು ವಿಭಾಗಕ್ಕೂ ಅನ್ಯೂನಾನತಿರಿಕ್ತ ರೀತಿಯಲ್ಲಿ ಲಕ್ಷಣವನ್ನು ತೋರಿಸಿ ಹಿಂದೆ ಹೇಳಿರುವ ಎಲ್ಲಾ ಆಕ್ಷೇಪಗಳಿಗೆ ಸಮಾಧಾನವನ್ನು ತೋರಿಸುತ್ತಾರೆ.

ಇವುಗಳ ಸಾಮಾನ್ಯ ಅಭಿಪ್ರಾಯ ಹೀಗಿದೆ :

ಉಭಯತ್ರಪ್ರಸಿದ್ಧಶಬ್ದಗಳು ಯಾವುವು?

**ಹೇತುಮುಖಲಕ್ಷಣ :** ಯಾವ ಶಬ್ದಕ್ಕೆ ಮೇಲ್ನೋಟಕ್ಕೆ ಲೋಕದಲ್ಲಾಗಲಿ (ವಿಷ್ಣು ಇತರರಲ್ಲಾಗಲಿ) ವಿಷ್ಣುವಿನಲ್ಲಾಗಲಿ, ವ್ಯವಹಾರವಿಲ್ಲದೇ ಇರುವಾಗ, ಆ ಶಬ್ದಕ್ಕೆ ಯಾರು ವಾಚ್ಯರು ಅಂತ ನಿರ್ಣಯ ಮಾಡುವುದಕ್ಕೋಸ್ಕರ ಶ್ರುತಿಯನ್ನು ಹುಡುಕುತ್ತಿರುವಾಗ, ಎರಡೂ ಬಗೆಯಿಂದಲೂ (ವಿಷ್ಣು ಹಾಗೂ ಇತರರಲ್ಲಿ) ಪ್ರಸಿದ್ಧಿಯು ಸಿಗುತ್ತದೋ ಆಗ ಆ ಶಬ್ದವನ್ನು ''ಉಭಯತ್ರಪ್ರಸಿದ್ಧ'' ವೆನ್ನುತ್ತಾರೆ.

ಅನ್ವೇಷಣೆ ಮಾಡುತ್ತಿರುವಾಗ, ಇಬ್ಬರಲ್ಲಿ (ವಿಷ್ಣು ಹಾಗೂ ಇತರರಲ್ಲಿ) ಪ್ರಸಿದ್ಧಿಯು ಅನೇಕ ರೀತಿಯಿಂದ ಬರಬಹುದು.

೧. ಶ್ರುತಿಯಲ್ಲೇ ಇಬ್ಬರಿಗೂ ಪ್ರಸಿದ್ಧಿ ಇರಬಹುದು. ಉದಾ: ದ್ಯುಭ್ವಾದ್ಯಾಯತನ ಯಾರು ಎಂದು ಹುಡುಕುತ್ತಿರುವಾಗ, ''ರುದ್ರೋವಾವ ಲೋಕಾಧಾರಃ'' ಎಂದು ರುದ್ರನಲ್ಲಿ ದ್ಯುಭ್ವಾದ್ಯಯತನತ್ವ ಇರುವಂತೆ, ''ವಿಷ್ಣಾವೇವ ಓತಶ್ಚ, ಪ್ರೋತಶ್ಚ'' ಎಂಬ ಶ್ರುತಿಯೂ ಸಿಗುತ್ತದೆ. ಈ ಶ್ರುತಿಯು ವಿಷ್ಣುವಿಗೆ ದ್ಯುಭ್ವಾದ್ಯಾಯತನತ್ವವನ್ನು ಹೇಳುತ್ತಿದೆ.

೨. ಆ ಶಬ್ದದ ಪ್ರವೃತ್ತಿನಿಮಿತ್ತವು ಇಬ್ಬರಲ್ಲಿಯೂ (ಅಂದರೆ ವಿಷ್ಣು ಹಾಗೂ ಇತರರಲ್ಲಿ) ಸಾಧಾರಣವಾಗಿರುವುದರಿಂದ, ಇಬ್ಬರಲ್ಲಿಯೂ ಪ್ರಸಿದ್ಧಿಯು ಬರಬಹುದು.

ಉದಾ. ಅಕ್ಷರಶಬ್ದದಿಂದ ವಾಚ್ಯರು ಯಾರಾಗುತ್ತಾರೆಂದು ಅನ್ವೇಷಣೆ ಮಾಡುವಾಗ, ಅಕ್ಷರಶಬ್ದದ ಪ್ರವೃತ್ತಿನಿಮಿತ್ತವಾಗಿರುವ ಅವಿನಾಶಿತ್ವ ಎನ್ನುವ ಧರ್ಮವು ಜೀವರಲ್ಲಿ, ಹಾಗೂ ಈಶ್ವರನಲ್ಲಿ ಇರುವುದರಿಂದ ಇಬ್ಬರಲ್ಲೂ ಪ್ರಸಿದ್ಧಿ ಇದೆ.

೩. ಪ್ರಯೋಗ ಸಾಧಾರಣ್ಯ : ಇಬ್ಬರಲ್ಲಿಯೂ ಆ ಶಬ್ದದ ಪ್ರಯೋಗವು ಇದ್ದರೆ ಆಗ ಇಬ್ಬರಲ್ಲೂ ಪ್ರಸಿದ್ಧಿಯು ಬರಬಹುದು.

ಉದಾ: ಆಕಾಶಶಬ್ದದಿಂದ ಯಾರು ವಾಚ್ಯರಾಗಿದ್ದಾರೆ ಎಂದು ಅನ್ವೇಷಣೆ ಮಾಡುವಾಗ, ''ಆಕಾಶೋ ವೈ ನಾಮ ನಾಮರೂಪಯೋಃ ನಿರ್ವಹಿತಾ' ಎಂದು ಭೂತಾಕಾಶದಲ್ಲಿ, ಹಾಗೆಯೇ ಆಕಾಶಃ ತಲ್ಲಿಂಗಾತ್ ಎಂದು ಮೊದಲನೇ ಪಾದದಲ್ಲಿ ಮೊದಲೇ ಆಕಾಶಶಬ್ದ ವಾಚ್ಯನು ವಿಷ್ಣು ಎಂದು ಸಿದ್ಧಮಾಡಿದ್ದರಿಂದ. ಇಬ್ಬರಲ್ಲಿಯೂ ಪ್ರಯೋಗವಿರುವುದರಿಂದ ಪ್ರಸಿದ್ಧಿಯು ಇದೆ

೪. ಧರ್ಮಸಾಧಾರಣ್ಯ : ಒಂದೇ ಧರ್ಮವು ಇಬ್ಬರಲ್ಲಿಯೂ ಇದ್ದಾಗ, ಆ ಸಾಧಾರಣ-ಧರ್ಮದಿಂದ, ಇಬ್ಬರಲ್ಲಿಯೂ ಪ್ರಸಿದ್ಧಿಯು ಬರಬಹುದು. ಉದಾ: 'ಸತ್' ಶಬ್ದದಿಂದ ವಾಚ್ಯರಾಗು-ವವರು ಯಾರು ಎಂದು ಅನ್ವೇಷಣೆ ಮಾಡುತ್ತಿರುವಾಗ, 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂದು ಸತ್ ಶಬ್ಧ ವಾಚ್ಯನಾದ ವಸ್ತುವಿಗೆ ಸ್ರಷ್ಟೃತ್ವವು ಕೇಳಿ ಬರುತ್ತಿದೆ.

ಆದರೆ, ಅದೇ ಸ್ರಷ್ಟೃತ್ವವು ''ಜನ್ಮಾದ್ಯಸ್ಯ ಯತಃ'' ಎಂಬ ಸೂತ್ರದಲ್ಲಿ ಹೇಳಿರುವಂತೆ ವಿಷ್ಣುವಿಗೆ ಉಕ್ತವಾಗಿದೆ. ಹೀಗೆ ಒಂದೇ ಧರ್ಮವು (ಸ್ರಷ್ಟೃತ್ವ)ವು ಸತ್‌ಪದಾರ್ಥಕ್ಕೆ ಹಾಗೂ ವಿಷ್ಣುವಿಗೆ ಉಕ್ತವಾಗಿರುವುದರಿಂದ, ಇಬ್ಬರಲ್ಲಿಯೂ ಪ್ರಸಿದ್ಧಿ ಇದೆ.

ಈ ರೀತಿ ಅನೇಕವಿಧದಲ್ಲಿ ಉಭಯತ್ರಪ್ರಸಿದ್ಧಿಯನ್ನು ಹೇಳಬಹುದು.

ಸ್ವರೂಪಮುಖಲಕ್ಷಣ : ಯಾವ ಶಬ್ದಕ್ಕೆ ಇಬ್ಬರಲ್ಲಿಯೂ (ವಿಷ್ಣು ಹಾಗೂ ಇತರರಲ್ಲಿ) ಪ್ರಸಿದ್ಧಿಯು ಇರುವುದರಿಂದ (ಮೇಲೆ ಹೇಳಿದಂತೆ ಅನೇಕ ರೀತಿಯಲ್ಲಿ ಪ್ರಸಿದ್ಧಿಯನ್ನು ಹೇಳಬಹುದು). ಆ ಶಬ್ದ ಘಟಿತವಾದ ವಾಕ್ಯವನ್ನು ಅರ್ಥಮಾಡಿಕೊಳ್ಳುವಾಗ, ಇಬ್ಬರೂ ಉಪಸ್ಥಾಪಿತರಾಗುತ್ತಾರೋ ಅಂತಹ ಶಬ್ದಗಳು ಉಭಯತ್ರಪ್ರಸಿದ್ಧ ಶಬ್ದಗಳೆಂದೆನಿಸುತ್ತವೆ.

ಫಲಮುಖಲಕ್ಷಣ : ಯಾವ ಶಬ್ದವು ಇಬ್ಬರಲ್ಲಿಯೂ ಪ್ರಸಿದ್ಧವಾದುದರಿಂದ ಹಾಗೂ ವಿಷಯವಾಕ್ಯವನ್ನು ಪರಿಶೀಲನೆ ಮಾಡುತ್ತಿರುವಾಗ, ಇಬ್ಬರನ್ನೂ ಉಪಸ್ಥಾಪನೇ ಮಾಡುತ್ತದೆಯೋ, ಆದ್ದರಿಂದಲೇ ಆ ಶಬ್ದವು ಕೇವಲ ವಿಷ್ಣುವನ್ನು ಕುರಿತು ವಾಚ್ಯವಾಗುವ ಸಂದರ್ಭದಲ್ಲಿ ವಿಷ್ಣು ಇತರರೂ (ಪ್ರಸಿದ್ಧಿ ಇರುವುದರಿಂದ) ಯಾಕೆ ವಾಚ್ಯರಾಗಬಾರದು ಎಂದು ಪ್ರತಿಬಂಧಕವನ್ನು ತಂದುಕೊಡುತ್ತದೋ ಅವು ಉಭಯತ್ರಪ್ರಸಿದ್ಧಿ ಶಬ್ದಗಳು.

ಹೀಗೆ ಮೂರು ರೀತಿಯ ಲಕ್ಷಣಗಳನ್ನು (ಹೇತುಮುಖ, ಸ್ವರೂಪಮುಖ ಮತ್ತು ಫಲಮುಖ) ಮೂರು ತರಹದ ಶಬ್ದಗಳಿಗೂ (ಉಭಯತ್ರ, ಅನ್ಯತ್ರ ಹಾಗೂ ಅನ್ಯತ್ರೈವಪ್ರಸಿದ್ಧ ಶಬ್ದಗಳಿಗೆ) ಅತ್ಯಂತ ನಿಖರವಾಗಿ ಚಂದ್ರಿಕಾಚಾರ್ಯರು ತೋರಿಸಿದ್ದಾರೆ.

ಇನ್ನು ಅನ್ಯತ್ರ ಹಾಗೂ ಅನ್ಯತ್ರೈವಪ್ರಸಿದ್ಧಶಬ್ದಗಳಲ್ಲಿ ಭೇದವನ್ನು ಚಂದ್ರಿಕಾಚಾರ್ಯರು ಹೀಗೆ ತೋರಿಸಿದ್ದಾರೆ -

ಎರಡರಲ್ಲಿಯೂ ಅನ್ಯತ್ರ, ಲೋಕಪ್ರಸಿದ್ಧಿ ಇದ್ದರೂ ಅನ್ಯತ್ರೈವಪ್ರಸಿದ್ಧಶಬ್ದಗಳಲ್ಲಿ, ಒಂದು ವಿಶೇಷ ಇದೆ. ಆ ವಿಶೇಷ ಯಾವುದೆಂದರೆ, ಪ್ರಬಲಶ್ರುತಿಲಿಂಗಾದಿಗಳು ಇರುವುದರಿಂದ ವಿಷ್ಣುವಿನಲ್ಲಿ, ಆ ಶಬ್ದದ ಸಮನ್ವಯ ಮಾಡುವುದಕ್ಕೆ ಬರುವುದಿಲ್ಲ. 'ಪ್ರಾಬಲ್ಯ'ವೆಂದರೆ ಏನು ಎನ್ನುವುದನ್ನು ಸ್ಪಷ್ಟಪಡಿಸುತ್ತಾ, ಚಂದ್ರಿಕಾಚಾರ್ಯರು ಅದರ ಪರಿಷ್ಕಾರವನ್ನು ಹೇಳುತ್ತಾರೆ.

ಪ್ರಾಬಲ್ಯಂ ನಾಮ ಶಬ್ದಸ್ಯ ಅಪರಮಮುಖ್ಯವೃತ್ತ್ಯಾ ಅನ್ಯಪರತ್ವಂ ವಿನಾ ಅನುಪಪದ್ಯಮಾನತ್ವಂ - ಅಂದರೆ ಅನ್ಯತ್ರೈವಶಬ್ದಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನು ಹೇಳುತ್ತಿದ್ದರೂ, ಮುಖ್ಯವೃತ್ತಿಯಿಂದ ವಿಷ್ಣುವನ್ನು ಬಿಟ್ಟು ಬೇರೆಯವರನ್ನು ಹೇಳಲೇ ಬೇಕು ಉದಾ:- ಅವ್ಯಕ್ತಶಬ್ದ ಸಮನ್ವಯ ಸಂದರ್ಭದಲ್ಲಿ, 'ಅವರತ್ವ' ಎನ್ನುವ ಧರ್ಮವು ಮುಖ್ಯವೃತ್ತಿಯಿಂದ ವಿಷ್ಣುವನ್ನು ಹೇಳುವುದೇ ಇಲ್ಲ. ಅದು ಮುಖ್ಯವೃತ್ತ್ಯಾ ಅನ್ಯಪರವಾಗಿದ್ದು ಪರಮಮುಖ್ಯವೃತ್ತ್ಯಾ (ತದಧೀನತ್ವ ನ್ಯಾಯದಿಂದ) ವಿಷ್ಣುವನ್ನು ಹೇಳಿ, ಅವ್ಯಕ್ತಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿಕೊಡುತ್ತದೆ.

ಈ ರೀತಿಯ ಪ್ರಾಬಲ್ಯ ಅನ್ಯತ್ರಪ್ರಸಿದ್ಧಶಬ್ದಗಳಿಗೆ ಇರುವುದಿಲ್ಲ. ಹೀಗೆ ಒಟ್ಟಿನಲ್ಲಿ ಶಬ್ದದ ವಿಭಾಗದ ಮೇಲೆ ಬರುವ ಎಲ್ಲಾ ಆಕ್ಷೇಪಗಳನ್ನು ತೋರಿಸಿ, ಅವುಗಳನ್ನು ಅನೇಕ ರೀತಿಯಿಂದ ದೃಢಪಡಿಸಿ, ಆ ಆಕ್ಷೇಪಗಳ ಮೇಲೆ ಬರುವ ಸಮಾಧಾನಗಳನ್ನು ಭಾಷ್ಯ, ತತ್ವಪ್ರಕಾಶಿಕಾ, ಅನುವ್ಯಾಖ್ಯಾನ, ಸುಧಾ ಮೊದಲಾದ ಗ್ರಂಥಗಳಲ್ಲೇ ಬಂದಿರುವ ವಾಕ್ಯಗಳಿಂದಲೇ ಎತ್ತಿತೋರಿಸುವುದು ಚಂದ್ರಿಕೆಯಲ್ಲಿರುವ ಅಪೂರ್ವತೆ.

ಹೀಗೆ ಶ್ರೀವ್ಯಾಸರಾಜರು ಜಯತೀರ್ಥರ ಪ್ರತಿಯೊಂದು ಪದದಲ್ಲಿ ಇರುವ ಅರ್ಥಗಾಂಭೀರ್ಯವನ್ನು ಅನೇಕ ಕಡೆಯಲ್ಲಿ ತೋರಿಸಿದ್ದಾರೆ.

ಇದನ್ನೇ ''ಟೀಕಾಗಾಂಭೀರ್ಯಮುದ್ಧರ್ತುಂ ವ್ಯಾಸತೀರ್ಥಾದಯಃ ಕ್ಷಮಾಃ'' ಎಂದು ಶ್ರೀರಾಘವೇಂದ್ರತೀರ್ಥರು ತಮ್ಮ ಗ್ರಂಥದಲ್ಲಿ ಹೇಳುತ್ತಾರೆ.

ಹಾಗೆಯೇ ಶ್ರೀಜಯತೀರ್ಥರ ಪ್ರತಿಯೊಂದು ಪದದಲ್ಲೂ ಎಷ್ಟು ಗಾಂಭೀರ್ಯವಿದೆಯೆಂದು ತೋರಿಸಿಕೊಡುತ್ತಾ, ಶ್ರೀರಾಘವೇಂದ್ರತೀರ್ಥರು, ತತ್ವಪ್ರಕಾಶಿಕಾ ಭಾವದೀಪದಲ್ಲಿ

*ಟೀಕಾಗಾಂಭೀರ್ಯಮಹಾತ್ಮ್ಯಂ ಮರ್ಶಂ ಮರ್ಶಂ ಪುರೋ ಮನಃ ।*
*ನೈತಿ ತದ್ವಿಸ್ತರಭಯಾತ್ ಕರೋತ್ಯಗ್ರೇಸರಂ ಮನಃ ॥*

ಎಂದಿದ್ದಾರೆ. ಟೀಕೆಯ ಗಾಂಭೀರ್ಯವನ್ನು ವಿಮರ್ಶೆ ಮಾಡುತ್ತಾ, ಮಾಡುತ್ತಾ, ನನ್ನ ಮನಸ್ಸು ಮುಂದೆ ಹೋಗುವುದೇ ಇಲ್ಲ. ಆದರೂ ಗ್ರಂಥವಿಸ್ತಾರಭಯದಿಂದ ಹೆಚ್ಚು ವ್ಯಾಖ್ಯಾನ ಮಾಡಲಾರೆವು ಎಂದು ಹೇಳುತ್ತಾರೆ. ರಾಯರು ಇಷ್ಟು ಅರ್ಥಗಾಂಭೀರ್ಯವನ್ನು ಕಂಡಿರುವಾಗ, ಶ್ರೀವ್ಯಾಸರಾಜರು ಇದಕ್ಕಿಂತ ಹೆಚ್ಚು ಗಾಂಭೀರ್ಯವನ್ನು ಕಂಡಿದ್ದಾರೆಂಬುದರಲ್ಲಿ ಸಂದೇಹವೇ ಇಲ್ಲ.

ಇಂತಹ ಶ್ರೀವ್ಯಾಸತೀರ್ಥರ ಅನುಗ್ರಹವು ನಮ್ಮ ಮೇಲೆ ನಿರಂತರವಾಗಿ ಇರಲಿ.

॥ ಶ್ರೀಕೃಷ್ಣಾರ್ಪಣಮಸ್ತು ॥

* * *

# ವಿಷಯಾನುಕ್ರಮಣಿಕೆ

## ಆನಂದಮಯಾಧಿಕರಣ - ಭಾಷ್ಯ ತತ್ತ್ವಪ್ರಕಾಶಿಕಾ

## ಆನಂದಮಯಾಧಿಕರಣ - ತಾತ್ಪರ್ಯಚಂದ್ರಿಕಾ

## 

## ಅಂತಃಸ್ಥತ್ವಾಧಿಕರಣ --

# ತಾತ್ಪರ್ಯಚಂದ್ರಿಕಾ

* * * * *

ವಂದೇ ನೃಸಿಂಹತೀರ್ಥನಿಲಯಂ
ಶ್ರೀವ್ಯಾಸರಾಟ್‌ಪೂಜಿತಮ್ ।
ಧ್ಯಾಯಂತಂ ಮನಸಾ ನೃಸಿಂಹಚರಣಂ
ಶ್ರೀಪಾದರಾಜಂ ಗುರುಮ್ ॥

ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾತ್ ಅಸ್ಮದಿಷ್ಟಾರ್ಥಸಿದ್ಧಯೇ ॥

# ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ,
ಸತ್ತರ್ಕದೀಪಾವಳಿಃ, ತತ್ವಪ್ರಕಾಶಿಕಾ,
ಭಾವದೀಪ, ವಾಕ್ಯಾರ್ಥಮಂಜರೀ

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

# ಬ್ರಹ್ಮಮೀಮಾಂಸಾಶಾಸ್ತ್ರ

## ಆನಂದಮಯಾಧಿಕರಣ

**सू - ॐ ॥ आनन्दमयोऽभ्यासात् ॥ ॐ ॥ १२ ॥**

ಅನುವಾದ - ಆನಂದಮಯನಲ್ಲಿ ಅನೇಕ ಬಾರಿ ಬ್ರಹ್ಮಶಬ್ದವು ಕೇಳಿಸುತ್ತಿರುವುದರಿಂದ ಆನಂದಮಯನು ಬ್ರಹ್ಮನೇ ಹೊರತು ಜೀವಾತ್ಮನಲ್ಲ.

* * * *

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – आनन्दमयादिशब्दवाच्यो विष्णुरेव न प्रकृत्यादिः । कुतः? अभ्यासात् प्रतिप्रकरणमानन्दमयादौ ब्रह्मशब्दश्रवणादित्यर्थः ।

"ಆನಂದಮಯಃ" ಆನಂದಮಯಾದಿಶಬ್ದಗಳಿಂದ ವಾಚ್ಯನಾದವನು ವಿಷ್ಣುವೇ ಹೊರತು ಪ್ರಕೃತ್ಯಾದಿಗಳಲ್ಲ. ಏಕೆಂದರೆ ಅಭ್ಯಾಸಾತ್ = ಪ್ರತಿಯೊಂದು ಪ್ರಕರಣದಲ್ಲಿಯೂ ಆನಂದಮಯಾದಿಗಳಲ್ಲಿ ಬ್ರಹ್ಮಶಬ್ದವು ಮತ್ತೆ ಮತ್ತೆ ಕೇಳಿಸುತ್ತಿರುವುದರಿಂದ ಎಂದು ಸೂತ್ರಾರ್ಥ.

* * * *

## श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

## ಸಮನ್ವಯಾಧ್ಯಾಯವು ಸಮನ್ವಯಸೂತ್ರದ ವಿವರ

**भाष्यम् – तमेव समन्वयं प्रकटयति – 'आनन्दमयोऽभ्यासात्' इत्यादिना समस्तेनाध्यायेन प्रायेण(१) ।**

'ತತ್ತು ಸಮನ್ವಯಾತ್ ಎಂಬ ಸೂತ್ರದಲ್ಲಿ ಹೇಳಿದ ಶಬ್ದಸಮನ್ವಯವನ್ನೇ ಆನಂದಮಯೋಽಭ್ಯಾಸಾತ್ ಎಂಬ ಸೂತ್ರದಿಂದ ಪ್ರಾರಂಭಿಸಿ, ಪೂರ್ಣವಾದ ಪ್ರಥಮಾಧ್ಯಾಯದಿಂದ ಬಹುತೇಕವಾಗಿ ಸೂತ್ರಕಾರರು ವಿಶದಪಡಿಸುತ್ತಾರೆ(२).

ಪ್ರತಿಪದಾರ್ಥ — ಅಧ್ಯಾಯ ಹಾಗೂ ಪಾದಗಳಿಗೆ ಪೀಠವಾಗಿರುವ ಐದು ಅಧಿಕರಣಗಳಿಂದ ಬ್ರಹ್ಮಸ್ವರೂಪವನ್ನು ನಿರೂಪಿಸಿದ್ದಾಯಿತು. ಬ್ರಹ್ಮನ ಬಗ್ಗೆ

---

(१) अथाध्यायपादयोरुपोद्घाततत्वेन पीठरूपायामस्यां पञ्चाधिकरण्यां ब्रह्मस्वरूपनिरूपणेऽनवशेषात् किमध्यायात्मकशेषग्रन्थेनेत्यत आह - तमेवेति ।। तथाऽपीत्यादौ योज्यम् । समन्वयशब्दश्च विपरिणामेनाऽवर्तनीयः । तथा च – तथाऽपि प्रकटनं विनाऽध्यायाख्यशेषग्रन्थस्य कृत्यान्तराभावेऽपि 'तमेव' 'तत्तु समन्वयात्' इत्यनेन हेतुतया सामान्यतः सिद्धवदुपन्यस्तमेव समन्वयात् 'समन्वयम्' उपक्रमादिलिङ्गज्ञाप्यं सम्यग्वचनवृत्त्या सर्वशास्त्रीयवचनानां हरौ निरूपणं तत्परत्वं 'प्रकटयति' प्रतिवाक्यग्रहणेन तद्धेतूपन्यासादिना प्रपञ्चयति 'आनन्दमयोऽभ्यासात्' इत्यादिना अनेन प्रथमेनाध्यायेन सूत्रकार इत्यर्थः । अन्यथा प्रतिज्ञामात्रस्य 'तदेव शास्त्रयोनि, समन्वयात्' इति सिद्धवदुपन्यासमात्रस्य साधकत्वे 'विष्णोरन्यदेव शास्त्रयोनि, कुतः? समन्वयात् सम्यक्तात्पर्यविषयत्वात्, तथा अन्यदेव तात्पर्यविषयः, कुतः? उपक्रमादिलिङ्गात्' इत्यपि प्रतिवादी ब्रूयादिति भावः । यथोपक्रमादिकं तज्ज्ञाप्यं तात्पर्यं च समन्वयशब्दार्थः तथा भाष्यं योजितम् अधस्तात् ।

यद्यप्यत्र सूत्रस्य प्रतीकत्वेनोत्तरत्र उदाहरिष्यमाणत्वान्नात्राप्युदाहर्तव्यता । तथाऽपि सूत्रानुदाहरणे आनन्दमयाख्यविषयापरिज्ञानात् तस्य विष्णुत्वसमर्थने का पूर्वसङ्गतिरित्येवं शङ्कानुदयात् तन्मूलप्रश्नानुदयाद् आनन्दमयापरिज्ञाने ब्रह्मणस्तदवयवत्वप्रतीतिमुखेनाऽक्षेपरूपशङ्कानुदयाच्च एतदाक्षेपरूपसङ्गतिप्रदर्शनाय चाधिकरणसङ्गतिविषयकशङ्कोत्थापनायात्रापि सूत्रोदाहरणम्, उत्तरत्र तु प्रतीकत्वेनेति द्रष्टव्यम् । (– भाष्यदीपिका)

(२) ಈ ಭಾಗದ ಶ್ರೀಪದ್ಮನಾಭತೀರ್ಥರು ರಚಿಸಿರುವ ಸತ್ತರ್ಕದೀಪಾವಳಿಯ ಅನುವಾದವನ್ನು ಆಯಾಸೂತ್ರಗಳ ಭಾಷ್ಯದ ಕೊನೆಯಲ್ಲಿ ನೀಡಲಾಗಿದೆ. ಗಮನಿಸಬೇಕು.

ಹೇಳಬೇಕಾದ್ದು ಏನೂ ಉಳಿದಿಲ್ಲ. ಹೀಗಿರುವಾಗ ಉಳಿದ ಅಧ್ಯಾಯ ಹಾಗೂ ಪಾದಗಳು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ(೧).

ತಮೇವ ಸಮನ್ವಯಂ = ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ಸಮಸ್ತಶ್ರುತಿಗಳಿಂದ ಪರಮಾತ್ಮನೇ ಪ್ರತಿಪಾದ್ಯನು ಎಂದು ಸಮನ್ವಯಾಧಿಕರಣದಲ್ಲಿ ಮಾಡಿದ ಸಮನ್ವಯದ ಪ್ರತಿಜ್ಞೆಯನ್ನೇ, 'ಆನಂದಮಯೋಽಭ್ಯಾಸಾತ್' ಇತ್ಯಾದಿನಾ = ಆನಂದಮಯೋಭ್ಯಾಸಾತ್ ಎಂಬ ಸೂತ್ರದಿಂದ ಪ್ರಾರಂಭಿಸಿ, ಸಮಸ್ತೇನ = ಸಂಪೂರ್ಣವಾದ, ಅಧ್ಯಾಯೇನ = ಪ್ರಥಮಾಧ್ಯಾಯದಿಂದ, ಪ್ರಾಯೇಣ = ಬಹುತೇಕವಾಗಿ (ದೇವತಾಧಿಕರಣ ಮತ್ತು ಅಪಶೂದ್ರಾಧಿಕರಣಗಳನ್ನು ಬಿಟ್ಟು), ಪ್ರಕಟಯತಿ = ಸ್ಪಷ್ಟಪಡಿಸುತ್ತಾರೆ.

## ಸಮನ್ವಯಾಧ್ಯಾಯಕ್ಕೆ ಸಾರ್ಥಕ್ಯಚಿಂತನೆ

**तत्वप्रकाशिका – अथ ब्रह्मस्वरूपनिरूपणेऽनवशेषात् किमध्यायशेषेण? इत्यतः तत्कृत्यमाह – तमेवेति ।। कृत्यान्तराभावेऽपि 'तत्तु समन्वयात्' इत्युक्तमेवोपक्रमाद्यन्वयात् सम्यङ्निरूपणं शास्त्रीयशब्दानां प्रतिवाक्यग्रहणेन प्रकटयत्यनेनाध्यायेन सूत्रकारः । अन्यथा प्रतिज्ञामात्रस्यासाधकत्वेन 'अन्यदेव समन्वयात्' इत्यपि वक्तुं शक्यत्वादिति भावः ।**

ಈಗ ಬ್ರಹ್ಮನ ಸ್ವರೂಪ ನಿರೂಪಣೆ ಮಾಡುವ ವಿಷಯದಲ್ಲಿ ಎಲ್ಲವನ್ನೂ ಹೇಳಿಯಾಗಿದೆ. ಹೇಳಲು ಏನೂ ಉಳಿದಿಲ್ಲವಾದ್ದರಿಂದ ಈ ಅಧ್ಯಾಯದ ಮುಂದಿನ ಭಾಗ ಏಕೆ? ಎಂಬ ಪ್ರಶ್ನೆಗೆ "ತಮೇವ" ಎಂಬುದರಿಂದ ಉತ್ತರವನ್ನು ಹೇಳುತ್ತಿದ್ದಾರೆ. ವಸ್ತುತಃ ಉಳಿದ ಅಧ್ಯಾಯಕ್ಕೆ ಪ್ರಯೋಜನವಿಲ್ಲ. ಆದರೂ ಸಹ 'ತತ್ತು ಸಮನ್ವಯಾತ್' ಎಂಬ ಹಿಂದಿನ ಸೂತ್ರದಲ್ಲಿ ಕೇವಲ

---

(१) **भाष्यदीपिका** – अध्यायान्तरव्यावृत्त्यर्थमानन्दमयेत्यादि । प्रथमेनेत्यनुक्त्वा एवंवचनेन एतदधिकरणमारभ्याध्यायारम्भः, पञ्चाधिकरण्यास्तु नाध्यायान्तर्भाव इत्यपि सूचितम् । समन्वयाधिकरणमारभ्यैवाध्यायारम्भः । तस्यैतत्प्रपञ्चत्वादिति पक्षे 'अध्यायेन' अध्यायशेषेणेत्यर्थः । टीकानुगुण्यं चात्र भवति । आद्यपक्षे त्वध्यायरूपेणेत्यर्थ इत्यविरोधः । चतुर्थपादे न समन्वयः क्रियत इति परमतनिरासाय 'समस्तेन' समग्रेणेत्युक्तम् । देवतापशूद्राधिकरणयोः समन्वयाकरणात् समस्तेनेत्यनुपपन्नमित्याशङ्कानिराकरणाय 'प्रायेण' प्राचुर्येणेति । प्राय इति सकारान्ताव्ययपर्यायोऽयमकारान्तः प्रायशब्दः । तस्मात् प्रकृत्यादित्वात् तृतीयायां प्रायेणेति भवति । अत एव विष्णुतत्त्वनिर्णयटीकायां भूमार्थे 'प्रायः' इत्यव्ययमप्यस्ति इत्यपिशब्दः प्रायोजि । प्रमेयदीपेऽपि सान्तस्यैवाव्ययत्वमुक्तम् ।

ಸಮನ್ವಯವನ್ನು ಹೇಳಿದ್ದಾರೆ. ಅದನ್ನೇ ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ಶಾಸ್ತ್ರದಲ್ಲಿನ ಪ್ರತಿಯೊಂದು ಶಬ್ದಗಳನ್ನು ಸ್ವೀಕರಿಸಿ ಸೂತ್ರಕಾರರು ಅಧ್ಯಾಯದ ಮುಂದಿನ ಭಾಗದಿಂದ ಚೆನ್ನಾಗಿ ನಿರೂಪಣೆ ಮಾಡುತ್ತಿದ್ದಾರೆ. ಹಾಗೆ ಮಾಡದಿದ್ದರೆ ಕೇವಲ ಪ್ರತಿಜ್ಞೆಯು ಸಾಧಕವಾಗುವುದಿಲ್ಲವಾದ್ದರಿಂದ ಬೇರೆ ರೀತಿಯ ಸಮನ್ವಯವೂ ಇದೆಯೆಂಬುದಕ್ಕೆ ಅವಕಾಶವಿರುತ್ತಿತ್ತೆಂದು ಅಭಿಪ್ರಾಯ.

## ಸಮನ್ವಯಶಬ್ದಾರ್ಥ

भावदीपः – ।।ॐ।। आनन्दमयोभ्यासात् ।।ॐ

**अथेति** ।। अधिकरणपञ्चकोक्तप्रमेयानन्तरमित्यर्थः । **शेषेणेति** ।। यद्यप्येतदादिरेवाध्याय इति जिज्ञासासूत्रे व्यक्तम्, तथापि सुधारीत्या समन्वयसूत्रमारभ्यध्यायान्तर्भावोऽस्ति इत्यभिप्रेत्य **शेषेणे**त्युक्तम् । एवकारार्थमाह – **कृत्यन्तरेति** ।। 'तम्' इत्यस्यार्थं **'इत्युक्तमेव'** इति । 'समन्वयम्' इत्यत्रान्वयशब्दार्थमाह – **उपक्रमेति** ।। अन्वयशब्दोत्र करणव्युत्पत्त्या वाक्यानां शक्तितात्पर्यविषयेण सम्बन्ध**रूपान्वयज्ञापक**परः । तथा चोपक्रमादिरूपादन्वयादन्वयज्ञापकादित्यर्थः । **'अन्वयज्ञापकैरुपक्रमादिभिः'** इति यावत् । 'सम्'शब्दार्थः **'सम्यङ्निरूपणम्'** इति । शक्तितात्पर्याभ्यार्थप्रतिपादनप्रकारमित्यर्थः । **प्रतिवाक्येति** ।। इदं वाक्यं तत्स्थं पदं वैतदुपक्रमादिनैतमर्थं शक्तितात्पर्याभ्यां गोचरयतीत्येवंरूपेण प्रकटयतीत्यर्थः । 'विभागेन समन्वयम्' इत्यनुव्याख्यानसुधयोस्तु 'न केवलमुपक्रमादिकमन्वयशब्दार्थः, किन्तु तन्निर्णीततत्परत्वसम्बन्धोपि' इत्युक्तम् ।

ಓಂ ಆನಂದಮಯೋಽಭ್ಯಾಸಾತ್ ಓಂ ॥

'ಅಥ' ಶಬ್ದಕ್ಕೆ ಐದು ಅಧಿಕರಣಗಳಲ್ಲಿ ಹೇಳಿದ ಪ್ರಮೇಯದ ಅನಂತರ' ಎಂದರ್ಥ. ''ಶೇಷೇಣ'' ಇತ್ಯಾದಿವಾಕ್ಯದಿಂದ ಜಿಜ್ಞಾಸಾಸೂತ್ರದಲ್ಲಿ ಈ ಸೂತ್ರದಿಂದಲೇ ಅಧ್ಯಾಯವು ಪ್ರಾರಂಭವಾಗುತ್ತದೆಂದು ಸ್ಪಷ್ಟವಾಗಿ ಹೇಳಿದ್ದರೂ, ಸುಧಾರೀತ್ಯಾ 'ಸಮನ್ವಯಸೂತ್ರದಿಂದ ಆರಂಭಿಸಿ ಅಧ್ಯಾಯದ ಅಂತರ್ಭಾವವು ಇದೆ' ಎಂಬ ಅಭಿಪ್ರಾಯವನ್ನು ಸೂಚಿಸಿದ್ದಾರೆ.

''ಕೃತ್ಯಂತರಂ'' ಎಂಬುದಾಗಿ 'ಏವ'ಕಾರದ ಅರ್ಥವನ್ನು ಹೇಳುತ್ತಿದ್ದಾರೆ. 'ತಂ' ಎಂಬ ಪದಕ್ಕೆ 'ಇತ್ಯುಕ್ತಮೇವ' ಎಂಬುದಾಗಿ ಅರ್ಥವನ್ನು ಬಿಡಿಸಿದ್ದಾರೆ.

'ಸಮನ್ವಯಂ' ಎಂಬಲ್ಲಿ ಸೇರಿದ ಅನ್ವಯಶಬ್ದದ ಅರ್ಥವನ್ನು ''ಉಪಕ್ರಮ'' ಎಂಬುದಾಗಿ ಬಿಡಿಸಿದ್ದಾರೆ. ಅನ್ವಯಶಬ್ದಕ್ಕೆ ಕರಣವ್ಯುತ್ಪತ್ತಿಯನ್ನು ಮಾಡಿಕೊಂಡು 'ವಾಕ್ಯಗಳಿಗೆ ಶಕ್ತಿತಾತ್ಪರ್ಯವಿಷಯದಿಂದ

ಸಂಬಂಧರೂಪವಾದ ಅನ್ವಯವನ್ನು ಜ್ಞಾಪಿಸುವುದು' ಎಂದರ್ಥ. ಇದರಿಂದ 'ಉಪಕ್ರಮಾದಿರೂಪಾತ್ ಅನ್ವಯಾತ್' ಎಂದರೆ 'ಉಪಕ್ರಮಾದಿರೂಪ ಅನ್ವಯವನ್ನು ಜ್ಞಾಪಿಸುವಂತಹ ಕ್ರಮದಿಂದ' ಎಂದು ಅರ್ಥ. 'ಅನ್ವಯವನ್ನು ಜ್ಞಾಪಿಸುವ ಉಪಕ್ರಮಾದಿಗಳಿಂದ' ಎಂಬುದಾಗಿ ತಾತ್ಪರ್ಯಾರ್ಥವು ಸಂಪನ್ನವಾಗುತ್ತದೆ. 'ಸಂ'ಶಬ್ದಕ್ಕೆ 'ಸಮ್ಯಕ್‌ನಿರೂಪಣಮ್'' ಎಂಬುದಾಗಿ ಅರ್ಥವನ್ನು ವಿವರಿಸಿದ್ದಾರೆ. 'ಶಕ್ತಿ ಮತ್ತು ತಾತ್ಪರ್ಯಗಳಿಂದ ಅರ್ಥವನ್ನು ಪ್ರತಿಪಾದಿಸುವ ಕ್ರಮವನ್ನು' ಎಂಬುದಾಗಿ ಅರ್ಥ.

''ಪ್ರತಿವಾಕ್ಯ'' ಇತ್ಯಾದಿ ಅಂಶದಿಂದ 'ಈ ವಾಕ್ಯವು ಅಥವಾ ಆ ವಾಕ್ಯದಲ್ಲಿರುವ ಪದವು ಈ ರೀತಿಯ ಉಪಕ್ರಮಾದಿಗಳು ಇರುವುದರಿಂದ ಈ ಅರ್ಥವನ್ನು ಶಕ್ತಿ ಮತ್ತು ತಾತ್ಪರ್ಯಗಳಿಂದ ತಿಳಿಸಿಕೊಡುತ್ತದೆಂಬ ಕ್ರಮದಿಂದ ಸ್ಪಷ್ಟಪಡಿಸುತ್ತಾರೆ' ಎಂದು ಅರ್ಥ. 'ವಿಭಾಗೇನ ಸಮನ್ವಯಮ್' ಎಂಬ ಅನುವ್ಯಾಖ್ಯಾನ ಮತ್ತು ಅಲ್ಲಿನ ಸುಧಾಗ್ರಂಥದಲ್ಲಿ 'ಉಪಕ್ರಮಾದಿಗಳು ಮಾತ್ರ ಅನ್ವಯಶಬ್ದಕ್ಕೆ ಅರ್ಥವಲ್ಲ. ಆ ಉಪಕ್ರಮಾದಿಗಳಿಂದ ನಿರ್ಣೀತವಾದ ತತ್ಪರತ್ವಸಂಬಂಧವೂ ಕೂಡ ಅನ್ವಯಶಬ್ದಕ್ಕೆ ಅರ್ಥ' ಎಂಬುದಾಗಿ ವಿವರಿಸಿದ್ದಾರೆ.

## वाक्यार्थमञ्जरी

**वाक्यार्थमञ्जरी – बह्मस्वरूपनिरूपण इति** ।। आद्यसूत्रे जिज्ञास्यतयोक्त-ब्रह्मस्वरूपस्य द्वितीयतृतीयसूत्रोक्तलक्षणप्रमाणाभ्यां स्वेतरसकलवस्तुव्यावृत्ततया निश्चितत्वात् तत्रप्रवृत्तबाधकानां चतुर्थपञ्चमयोर्निरासान्नकिमपि निरूप्यमवशिष्टमित्यर्थः ।

एवकारार्थमाह – **कृत्यन्तराभावेपीति** ।। अभ्युपगम्येदमुदितम् । ब्रह्मणोऽवयवत्व-श्रवणान्नजिज्ञास्यत्वम् इत्यादिबाधकानां तत्र तत्र परिहारात् इतिध्येयं ।

समन्वयशब्दार्थः शास्त्रीयशब्दानामुपक्रमाद्यन्वयात् सम्याक् निरूपणमिति । अनेन सम्यगन्वयः शक्तितात्पर्यावगमो येन निरूपणेन भवतीति योगेन वा हेतुभूतोपक्रमादिलिङ्गवाचकसमन्वयपदेन लक्षणया वा तत्साध्यं निरूपणं ग्राह्यमित्युक्तं भवति । तेनान्वयोपपत्त्यादिलिङ्गमिति भाष्यदिशा समन्वयशब्देनोपक्रमादिलिङ्गग्रहणेऽध्यायशेषेणोपक्रमादिलिङ्गप्रकटनाभावत् प्रकटयतीत्यस्यानु-पपत्तिः । सुधोक्तरीत्या शक्तितात्पर्यलक्षणावगमसम्बंधज्ञानेपि तथैवेति निरस्तम् – **प्रतिवाक्यग्रहणेनेति** ।। उदाहरणत्वेनेतिशेषः । अन्यदेव रुद्राद्येव कारणमितिशेषः ।।

ಟೀಕಾದಲ್ಲಿ 'ಬ್ರಹ್ಮಸ್ವರೂಪನಿರೂಪಣೇ' ಎಂದು ಇದೆ. ಇದರ ಅಭಿಪ್ರಾಯ ಹೀಗಿದೆ - ಮೊದಲನೆಯ ಸೂತ್ರದಲ್ಲಿ ಜಿಜ್ಞಾಸ್ಯನಾದ ಬ್ರಹ್ಮನ ಸ್ವರೂಪವನ್ನು ಹೇಳಿದ್ದಾಯಿತು. ಎರಡನೆಯ ಮತ್ತು ಮೂರನೆಯ ಸೂತ್ರಗಳಿಂದ ಬ್ರಹ್ಮನ ಲಕ್ಷಣ ಮತ್ತು ಪ್ರಮಾಣಗಳನ್ನು ಸಕಲ ವಸ್ತುಗಳಿಂದ ಭಿನ್ನನಾಗಿದ್ದಾನೆಂದು ನಿಶ್ಚಯ ಮಾಡಲಾಗಿದೆ. ಈ ವಿಷಯದಲ್ಲಿ ಪ್ರವೃತ್ತವಾದ ಬಾಧಕಗಳನ್ನು ನಾಲ್ಕನೆಯ ಮತ್ತು ಐದನೆಯ ಸೂತ್ರಗಳಿಂದ ನಿರಾಕರಣೆ ಮಾಡಿರುವುದರಿಂದ ನಿರೂಪಣೆ ಮಾಡಲು ಯಾವ ವಿಷಯಗಳೂ ಉಳಿದಿಲ್ಲ ಎಂದು.

ಭಾಷ್ಯದ 'ತಮೇವ' ಎಂಬಲ್ಲಿರುವ ಏವಕಾರಾರ್ಥವನ್ನು 'ಕೃತ್ಯಂತರಾಭಾವೇಪಿ' ಎಂದು ಹೇಳಿದ್ದಾರೆ. ಪೂರ್ವಪಕ್ಷದ ಅಭಿಪ್ರಾಯವನ್ನು ಒಪ್ಪಿಕೊಂಡು ಈ ರೀತಿಯಾಗಿ ಹೇಳಿದ್ದಾರೆ. ಬ್ರಹ್ಮನು ಅವಯವನಾಗಿದ್ದಾನೆಂದು ಶ್ರುತಿಗಳಲ್ಲಿ ಕೇಳಿಬಂದಿರುವುದರಿಂದ ಅವನು ಜಿಜ್ಞಾಸ್ಯನಲ್ಲವೆಂಬ ಇತ್ಯಾದಿ ಬಾಧಕಗಳನ್ನು ಅಲ್ಲಿ ಅಲ್ಲಿಯೇ ಪರಿಹಾರ ಮಾಡಲಾಗಿದೆಯೆಂದು ತಿಳಿಯಬೇಕು. 'ಸಮನ್ವಯಶಬ್ದಕ್ಕೆ ಶಾಸ್ತ್ರೀಯಶಬ್ದಗಳನ್ನು ಉಪಕ್ರಮವೇ ಮೊದಲಾದವುಗಳ ಅನ್ವಯಗಳಿಂದ ಚೆನ್ನಾಗಿ ನಿರೂಪಣೆ ಮಾಡುವುದು ಎಂದರ್ಥ. ಆದ್ದರಿಂದ ಯಾವುದನ್ನು ನಿರೂಪಣೆ ಮಾಡುವುದರಿಂದ ಶಕ್ತಿತಾತ್ಪರ್ಯಗಳು ಚೆನ್ನಾಗಿ ತಿಳಿಯುತ್ತದೆಯೋ ಎಂದು ಯೋಗದಿಂದ, ಅಥವಾ ಕಾರಣಭೂತವಾದ ಉಪಕ್ರಮವೇ ಮೊದಲಾದ ಲಿಂಗವನ್ನು ಹೇಳುವ ಸಮನ್ವಯಪದದ ಲಕ್ಷಣಾದಿಂದ, ಅದು ಸಾಧ್ಯವೆಂಬ ನಿರೂಪಣವು ಗ್ರಾಹ್ಯವೆಂದು ಹೇಳಿದಂತಾಗುತ್ತದೆ.

ಹೀಗೆ ಸಮನ್ವಯ ಶಬ್ದಾರ್ಥವನ್ನು ಹೇಳಿದ್ದರಿಂದ ಮತ್ತೊಂದು ಆಕ್ಷೇಪವು ನಿರಸ್ತವಾಯಿತು. ಆಕ್ಷೇಪ ಹೀಗಿದೆ - 'ಅನ್ವಯಃ ಉಪಪತ್ತ್ಯಾದಿಲಿಂಗಮ್' ಎಂಬ ಸಮನ್ವಯಾಧಿಕರಣದ ಭಾಷ್ಯದ ಪ್ರಕಾರ ಸಮನ್ವಯಶಬ್ದಕ್ಕೆ ಉಪಕ್ರಮಾದಿಲಿಂಗಗಳನ್ನು ಸ್ವೀಕರಿಸಿದರೆ ಮುಂದಿನ ಅಧ್ಯಾಯದಲ್ಲಿ ಉಪಕ್ರಮಾದಿಲಿಂಗಗಳನ್ನು ಪ್ರಕಟಪಡಿಸದ ಕಾರಣ 'ಪ್ರಕಟಯತಿ' ಎಂಬ ಭಾಷ್ಯದ ಮಾತು ತಪ್ಪಾಗುತ್ತದೆ. ಇನ್ನು ಸುಧೆಯ ಪ್ರಕಾರ ಶಕ್ತಿತಾತ್ಪರ್ಯಲಕ್ಷಣಾವಗಮಸಂಬಂಧಜ್ಞಾನವನ್ನು ವಿವಕ್ಷಿಸಿದರೂ ದೋಷ ತಪ್ಪಿದ್ದಲ್ಲ. ಈ ಆಕ್ಷೇಪಕ್ಕೆ ಅವಕಾಶವಿಲ್ಲ.

'ಪ್ರತಿವಾಕ್ಯಗ್ರಹಣೇನ' ಎಂಬಲ್ಲಿ 'ಉದಾಹರಣತ್ವೇನ' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. 'ಅನ್ಯದೇವ' ಎಂದರೆ ರುದ್ರಾದಿಗಳೇ ಕಾರಣರೆಂದು ಅಧ್ಯಾಹಾರ ಮಾಡಿಕೊಳ್ಳಬೇಕು.

## ಭಾಷ್ಯದಲ್ಲಿ ಪ್ರಾಯೇಣ ಎಂದೇಕೆ ಹೇಳಿದರು?

**तत्वप्रकाशिका – एतदधिकरणसङ्गतिशङ्कोत्थापनाय सूत्रोदाहरणम् । चतुर्थपादे तु न समन्वय इत्येतदश्रद्धेयमिति भावेनोक्तम् – समस्तेनेति । 'प्रायेण' इति देवताद्यधिकरणव्यावृत्तये ।**

ಈ ಅಧಿಕರಣದ ಸಂಗತಿ ಮತ್ತು ಸಂದೇಹವನ್ನು ಉತ್ಥಾಪನೆ ಮಾಡುವುದಕ್ಕೋಸ್ಕರ ಭಾಷ್ಯದಲ್ಲಿ ಸೂತ್ರವನ್ನು ಉದಾಹರಿಸಿದ್ದಾರೆ. ಚತುರ್ಥಪಾದದಲ್ಲಿ ಸಮನ್ವಯವನ್ನು ಮಾಡಿಲ್ಲವೆಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲವೆಂಬ ಅಭಿಪ್ರಾಯದಿಂದ ''ಸಮಸ್ತೇನ'' ಎಂದು ಹೇಳಿದ್ದಾರೆ. ದೇವತಾಧಿಕರಣದಲ್ಲಿ ಸಮನ್ವಯವನ್ನು ಹೇಳಿಲ್ಲವಾದ್ದರಿಂದ ಅದರ ವ್ಯಾವೃತ್ತಿಗೋಸ್ಕರ ''ಪ್ರಾಯೇಣ'' ಎಂದು ಹೇಳಿದ್ದಾರೆ.

### ಭಾಷ್ಯದಲ್ಲಿ ಸೂತ್ರವನ್ನೇಕೆ ಉದಾಹರಿಸಿದರು?

भावदीपः – **सङ्गतिशङ्केति** ।। तथा च वक्ष्यति स्वयमेव शङ्कोत्थापनप्रकारं तथाप्यानन्दमयस्य विष्णुत्वे का पूर्वसङ्गतिरिति । सूत्रानुदाहरणे विषयाज्ञानेन

शङ्काया अनुदयादिति भावः । **इत्येतदिति** ।। 'परोक्तम्' इत्यर्थः । तच्चान्यत्र निरस्तमिति भावः । **देवतेति** ।। 'तदुपरि' इत्यत्र 'शुगस्य' इत्यत्र च देवताप-शूद्रनययोरधिकारतदभावचिन्तनादिति भावः ।

"ಸಂಗತಿಶಂಕಾ" ಎಂಬ ಅಂಶದಿಂದ ಮುಂದೆ ಹೇಳಲಿರುವ 'ತಥಾಪಿ ಆನಂದಮಯಸ್ಯ ವಿಷ್ಣುತ್ವೇ ಕಾ ಪೂರ್ವಸಂಗತಿಃ?' ಎಂಬ ಶಂಕೆಯನ್ನು ಸ್ವೀಕರಿಸಬೇಕು. 'ಸೂತ್ರವನ್ನು ಉದಾಹರಿಸದಿದ್ದರೆ ವಿಷಯವೇ ತಿಳಿಯದಿರುವುದರಿಂದ ಸಂಶಯವೇ ಉತ್ಪನ್ನವಾಗುವುದಿಲ್ಲ' ಎಂದು ಅಭಿಪ್ರಾಯ. "ಇತ್ಯೇತತ್" ಎಂಬ ಶಬ್ದಕ್ಕೆ 'ಬೇರೆಯವರು ಹೇಳಿದ' ಎಂಬುದಾಗಿ ಅರ್ಥ. 'ಅದನ್ನು ಬೇರೆ ಕಡೆಯಲ್ಲಿ ನಿರಾಕರಣೆ ಮಾಡಿದೆ' ಎಂಬ ಅಭಿಪ್ರಾಯವನ್ನು ಸ್ವೀಕರಿಸಬೇಕು.

"ದೇವತಾ" ಇತ್ಯಾದಿವಾಕ್ಯದಿಂದ– 'ತದುಪರಿ' ಎಂಬ ದೇವತಾಧಿಕರಣದ ಸೂತ್ರದಿಂದ '**ಶುಗಸ್ಯ**' ಎಂಬ ಅಪಶೂದ್ರಾಧಿಕರಣದ ಸೂತ್ರದಿಂದ ಅಧಿಕಾರ ಮತ್ತು ಅಧಿಕಾರದ ಅಭಾವವನ್ನು ಚಿಂತಿಸಿರುವುದರಿಂದ ಆ ಭಾಗದಲ್ಲಿ ಸಮನ್ವಯವನ್ನು ಹೇಳಿಲ್ಲ ಎಂದು ಅಭಿಪ್ರಾಯ.

**वाक्यार्थमञ्जरी – शङ्कोत्थापनायेति** ।। सूत्रानुदाहरणे आनन्दमयरूपविषयपरिज्ञाना-भावेन अस्य विष्णुत्वसमर्थने का पूर्वसंगतिरित्येवंरूपशङ्कानुदयादिति भावः ।।

**चतुर्थपाद इति** ।। आद्यपादत्रये स्पष्टास्पष्टलिङ्गसमन्वयः चतुर्थे तु प्रधानस्य शाब्दत्व-निराकरणमिति परैरङ्गीकारादिति भावः ।। **देवताद्यधिकरणेति** ।। तदुपर्यपि शुगस्येत्यनयोः क्रमेण देवशूद्रयोर्वेदविद्याधिकारविचारेण समन्वयानुक्तेरितिभावः ।।

'ಶಂಕೋತ್ಥಾಪನಾಯ' ಎಂದು ಟೀಕಾದಲ್ಲಿದೆ. ಇದರ ಅಭಿಪ್ರಾಯ - ಭಾಷ್ಯದಲ್ಲಿ ಸೂತ್ರವನ್ನು ಉದಾಹರಣೆ ಮಾಡದಿದ್ದರೆ ಆನಂದಮಯರೂಪವಿಷಯದ ಪರಿಜ್ಞಾನದ ಅಭಾವದಿಂದ ಆನಂದಮಯನಿಗೆ ವಿಷ್ಣುತ್ವಸಮರ್ಥನೆ ಮಾಡಲು ಪೂರ್ವಸಂಗತಿ ಏನು? ಎಂಬ ಶಂಕೆಗೆ ಅವಕಾಶವಿರುತ್ತದೆಂದು ಭಾವ.

'ಚತುರ್ಥಪಾದೇ' ಟೀಕಾವಾಕ್ಯದ ಅಭಿಪ್ರಾಯ ಮೊದಲ ಮೂರು ಪಾದಗಳಲ್ಲಿ ಸ್ಪಷ್ಟಾಸ್ಪಷ್ಟ-ಲಿಂಗಗಳ ಸಮನ್ವಯವನ್ನು ಮಾಡಿದ್ದಾರೆ. ನಾಲ್ಕನೆಯ ಪಾದದಲ್ಲಿ ಪ್ರಧಾನಕ್ಕೆ ಅಶಬ್ದತ್ವವನ್ನು ನಿರಾಕರಣೆ ಮಾಡಿದ್ದಾರೆಂದು ಪರಕೀಯರು ಅಂಗೀಕಾರ ಮಾಡಿದ್ದಾರೆಂದು.

'ದೇವತಾದ್ಯಧಿಕರಣ' ಎಂದರೆ 'ತದುಪರ್ಯಪಿ ಬಾದರಾಯಣಃ ಸಂಭವಾತ್' ಮತ್ತು 'ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ ಸೂಚ್ಯತೇ' ಇತ್ಯಾದಿ ಸೂತ್ರಗಳಿಂದ ಕ್ರಮವಾಗಿ ದೇವತೆಗಳಿಗೆ ಮತ್ತು ಶೂದ್ರರಿಗೆ ವೇದವಿದ್ಯಾಧಿಕಾರವಿಷಯದ ಬಗ್ಗೆ ವಿಚಾರ ಮಾಡಿರುವುದರಿಂದ ಸಮನ್ವಯವನ್ನು ಮಾಡಿಲ್ಲ ಎಂದು ಭಾವ.

ಭಾಷ್ಯದ 'ತಮೇವ' ಎಂಬಲ್ಲಿರುವ ಏವಕಾರಾರ್ಥವನ್ನು 'ಕೃತ್ಯಂತರಾಭಾವೇಪಿ' ಎಂದು ಹೇಳಿದ್ದಾರೆ. ಪೂರ್ವಪಕ್ಷದ ಅಭಿಪ್ರಾಯವನ್ನು ಒಪ್ಪಿಕೊಂಡು ಈ ರೀತಿಯಾಗಿ ಹೇಳಿದ್ದಾರೆ. ಬ್ರಹ್ಮನು ಅವಯವನಾಗಿದ್ದಾನೆಂದು ಶ್ರುತಿಗಳಲ್ಲಿ ಕೇಳಿಬಂದಿರುವುದರಿಂದ ಅವನು ಜಿಜ್ಞಾಸ್ಯನಲ್ಲವೆಂಬ ಇತ್ಯಾದಿ ಬಾಧಕಗಳನ್ನು ಅಲ್ಲಿ ಅಲ್ಲಿಯೇ ಪರಿಹಾರ ಮಾಡಲಾಗಿದೆಯೆಂದು ತಿಳಿಯಬೇಕು. 'ಸಮನ್ವಯಶಬ್ದಕ್ಕೆ ಶಾಸ್ತ್ರೀಯಶಬ್ದಗಳನ್ನು ಉಪಕ್ರಮವೇ ಮೊದಲಾದವುಗಳ ಅನ್ವಯಗಳಿಂದ ಚೆನ್ನಾಗಿ ನಿರೂಪಣೆ ಮಾಡುವುದು ಎಂದರ್ಥ. ಆದ್ದರಿಂದ ಯಾವುದನ್ನು ನಿರೂಪಣೆ ಮಾಡುವುದರಿಂದ ಶಕ್ತಿತಾತ್ಪರ್ಯಗಳು ಚೆನ್ನಾಗಿ ತಿಳಿಯುತ್ತದೆಯೋ ಎಂದು ಯೋಗದಿಂದ, ಅಥವಾ ಕಾರಣಭೂತವಾದ ಉಪಕ್ರಮವೇ ಮೊದಲಾದ ಲಿಂಗವನ್ನು ಹೇಳುವ ಸಮನ್ವಯಪದದ ಲಕ್ಷಣಾದಿಂದ, ಅದು ಸಾಧ್ಯವೆಂಬ ನಿರೂಪಣವು ಗ್ರಾಹ್ಯವೆಂದು ಹೇಳಿದಂತಾಗುತ್ತದೆ.

ಹೀಗೆ ಸಮನ್ವಯ. ಶಬ್ದಾರ್ಥವನ್ನು ಹೇಳಿದ್ದರಿಂದ ಮತ್ತೊಂದು ಆಕ್ಷೇಪವು ನಿರಸ್ತವಾಯಿತು. ಆಕ್ಷೇಪ ಹೀಗಿದೆ - 'ಅನ್ವಯಃ ಉಪಪತ್ತ್ಯಾದಿಲಿಂಗಮ್' ಎಂಬ ಸಮನ್ವಯಾಧಿಕರಣದ ಭಾಷ್ಯದ ಪ್ರಕಾರ ಸಮನ್ವಯಶಬ್ದಕ್ಕೆ ಉಪಕ್ರಮಾದಿಲಿಂಗಗಳನ್ನು ಸ್ವೀಕರಿಸಿದರೆ ಮುಂದಿನ ಅಧ್ಯಾಯದಲ್ಲಿ ಉಪಕ್ರಮಾದಿಲಿಂಗಗಳನ್ನು ಪ್ರಕಟಪಡಿಸದ ಕಾರಣ 'ಪ್ರಕಟಯತಿ' ಎಂಬ ಭಾಷ್ಯದ ಮಾತು ತಪ್ಪಾಗುತ್ತದೆ. ಇನ್ನು ಸುಧೆಯ ಪ್ರಕಾರ ಶಕ್ತಿತಾತ್ಪರ್ಯಲಕ್ಷಣಾವಗಮಸಂಬಂಧಜ್ಞಾನವನ್ನು ವಿವಕ್ಷಿಸಿದರೂ ದೋಷ ತಪ್ಪಿದ್ದಲ್ಲ. ಈ ಆಕ್ಷೇಪಕ್ಕೆ ಅವಕಾಶವಿಲ್ಲ.

'ಪ್ರತಿವಾಕ್ಯಗ್ರಹಣೇನ' ಎಂಬಲ್ಲಿ 'ಉದಾಹರಣತ್ವೇನ' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. 'ಅನ್ಯದೇವ' ಎಂದರೆ ರುದ್ರಾದಿಗಳೇ ಕಾರಣರೆಂದು ಅಧ್ಯಾಹಾರ ಮಾಡಿಕೊಳ್ಳಬೇಕು.

## ಭಾಷ್ಯದಲ್ಲಿ ಪ್ರಾಯೇಣ ಎಂದೇಕೆ ಹೇಳಿದರು?

**तत्वप्रकाशिका – एतदधिकरणसङ्गतिशङ्कोत्थापनाय सूत्रोदाहरणम् । चतुर्थपादे तु न समन्वय इत्येतदश्रद्धेयमिति भावेनोक्तम् – समस्तेनेति । 'प्रायेण' इति देवताद्यधिकरणव्यावृत्तये ।**

ಈ ಅಧಿಕರಣದ ಸಂಗತಿ ಮತ್ತು ಸಂದೇಹವನ್ನು ಉತ್ಥಾಪನೆ ಮಾಡುವುದಕ್ಕೋಸ್ಕರ ಭಾಷ್ಯದಲ್ಲಿ ಸೂತ್ರವನ್ನು ಉದಾಹರಿಸಿದ್ದಾರೆ. ಚತುರ್ಥಪಾದದಲ್ಲಿ ಸಮನ್ವಯವನ್ನು ಮಾಡಿಲ್ಲವೆಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲವೆಂಬ ಅಭಿಪ್ರಾಯದಿಂದ ''ಸಮಸ್ತೇನ'' ಎಂದು ಹೇಳಿದ್ದಾರೆ. ದೇವತಾಧಿಕರಣದಲ್ಲಿ ಸಮನ್ವಯವನ್ನು ಹೇಳಿಲ್ಲವಾದ್ದರಿಂದ ಅದರ ವ್ಯಾವೃತ್ತಿಗೋಸ್ಕರ ''ಪ್ರಾಯೇಣ'' ಎಂದು ಹೇಳಿದ್ದಾರೆ.

### ಭಾಷ್ಯದಲ್ಲಿ ಸೂತ್ರವನ್ನೇಕೆ ಉದಾಹರಿಸಿದರು?

भावदीपः – **सङ्गतिशङ्केति** ।। तथा च वक्ष्यति स्वयमेव शङ्कोत्थापनप्रकारं तथाप्यानन्दमयस्य विष्णुत्वे का पूर्वसङ्गतिरिति । सूत्रानुदाहरणे विषयाज्ञानेन

शङ्काया अनुदयादिति भावः । **इत्येतदिति** ।। 'परोक्तम्' इत्यर्थः । तच्चान्यत्र निरस्तमिति भावः । **देवतेति** ।। 'तदुपरि' इत्यत्र 'शुगस्य' इत्यत्र च देवतापशूद्रनययोरधिकारतदभावचिन्तनादिति भावः ।

''ಸಂಗತಿಶಂಕಾ'' ಎಂಬ ಅಂಶದಿಂದ ಮುಂದೆ ಹೇಳಲಿರುವ 'ತಥಾಪಿ ಆನಂದಮಯಸ್ಯ ವಿಷ್ಣುತ್ವೇ ಕಾ ಪೂರ್ವಸಂಗತಿಃ?' ಎಂಬ ಶಂಕೆಯನ್ನು ಸ್ವೀಕರಿಸಬೇಕು. 'ಸೂತ್ರವನ್ನು ಉದಾಹರಿಸದಿದ್ದರೆ ವಿಷಯವೇ ತಿಳಿಯದಿರುವುದರಿಂದ ಸಂಶಯವೇ ಉತ್ಪನ್ನವಾಗುವುದಿಲ್ಲ' ಎಂದು ಅಭಿಪ್ರಾಯ. ''ಇತ್ಯೇತತ್'' ಎಂಬ ಶಬ್ದಕ್ಕೆ 'ಬೇರೆಯವರು ಹೇಳಿದ' ಎಂಬುದಾಗಿ ಅರ್ಥ. 'ಅದನ್ನು ಬೇರೆ ಕಡೆಯಲ್ಲಿ ನಿರಾಕರಣೆ ಮಾಡಿದೆ' ಎಂಬ ಅಭಿಪ್ರಾಯವನ್ನು ಸ್ವೀಕರಿಸಬೇಕು.

''ದೇವತಾ'' ಇತ್ಯಾದಿವಾಕ್ಯದಿಂದ– 'ತದುಪರಿ' ಎಂಬ ದೇವತಾಧಿಕರಣದ ಸೂತ್ರದಿಂದ '**ಶುಗಸ್ಯ**' ಎಂಬ ಅಪಶೂದ್ರಾಧಿಕರಣದ ಸೂತ್ರದಿಂದ ಅಧಿಕಾರ ಮತ್ತು ಅಧಿಕಾರದ ಅಭಾವವನ್ನು ಚಿಂತಿಸಿರುವುದರಿಂದ ಆ ಭಾಗದಲ್ಲಿ ಸಮನ್ವಯವನ್ನು ಹೇಳಿಲ್ಲ ಎಂದು ಅಭಿಪ್ರಾಯ.

**वाक्यार्थमञ्जरी – शङ्कोत्थापनायेति** ।। सूत्रानुदाहरणे आनन्दमयरूपविषयपरिज्ञानाभावेन अस्य विष्णुत्वसमर्थने का पूर्वसंगतिरित्येवंरूपशङ्कानुदयादिति भावः ।।

**चतुर्थपाद इति** ।। आद्यपादत्रये स्पष्टास्पष्टलिङ्गसमन्वयः चतुर्थे तु प्रधानस्य शाब्दत्वनिराकरणमिति परैरङ्गीकारादिति भावः ।। **देवताद्यधिकरणेति** ।। तदुपर्यपि शुगस्येत्यनयोः क्रमेण देवशूद्रयोर्वेदविद्याधिकारविचारेण समन्वयानुक्तेरितिभावः ।।

'ಶಂಕೋತ್ಥಾಪನಾಯ' ಎಂದು ಟೀಕಾದಲ್ಲಿದೆ. ಇದರ ಅಭಿಪ್ರಾಯ - ಭಾಷ್ಯದಲ್ಲಿ ಸೂತ್ರವನ್ನು ಉದಾಹರಣೆ ಮಾಡದಿದ್ದರೆ ಆನಂದಮಯರೂಪವಿಷಯದ ಪರಿಜ್ಞಾನದ ಅಭಾವದಿಂದ ಆನಂದಮಯನಿಗೆ ವಿಷ್ಣುತ್ವಸಮರ್ಥನೆ ಮಾಡಲು ಪೂರ್ವಸಂಗತಿ ಏನು? ಎಂಬ ಶಂಕೆಗೆ ಅವಕಾಶವಿರುತ್ತದೆಂದು ಭಾವ.

'ಚತುರ್ಥಪಾದೇ' ಟೀಕಾವಾಕ್ಯದ ಅಭಿಪ್ರಾಯ ಮೊದಲ ಮೂರು ಪಾದಗಳಲ್ಲಿ ಸ್ಪಷ್ಟಾಸ್ಪಷ್ಟಲಿಂಗಗಳ ಸಮನ್ವಯವನ್ನು ಮಾಡಿದ್ದಾರೆ. ನಾಲ್ಕನೆಯ ಪಾದದಲ್ಲಿ ಪ್ರಧಾನಕ್ಕೆ ಅಶಬ್ದತ್ವವನ್ನು ನಿರಾಕರಣೆ ಮಾಡಿದ್ದಾರೆಂದು ಪರಕೀಯರು ಅಂಗೀಕಾರ ಮಾಡಿದ್ದಾರೆಂದು.

'ದೇವತಾದ್ಯಧಿಕರಣ' ಎಂದರೆ 'ತದುಪರ್ಯಪಿ ಬಾದರಾಯಣಃ ಸಂಭವಾತ್' ಮತ್ತು 'ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ ಸೂಚ್ಯತೇ' ಇತ್ಯಾದಿ ಸೂತ್ರಗಳಿಂದ ಕ್ರಮವಾಗಿ ದೇವತೆಗಳಿಗೆ ಮತ್ತು ಶೂದ್ರರಿಗೆ ವೇದವಿದ್ಯಾಧಿಕಾರವಿಷಯದ ಬಗ್ಗೆ ವಿಚಾರ ಮಾಡಿರುವುದರಿಂದ ಸಮನ್ವಯವನ್ನು ಮಾಡಿಲ್ಲ ಎಂದು ಭಾವ.

## ಪಾದಭೇದವ್ಯವಸ್ಥೆ

**भाष्यम् – प्रायेणान्यत्रप्रसिद्धानां शब्दानां परमात्मनि समन्वयः प्रदर्श्यतेऽस्मिन् पादे । नान्यथा, तददृष्टेः(१) ।**

ಪ್ರಥಮಪಾದದಲ್ಲಿ ಪ್ರಾಯಶಃ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ. ಹೊರತು ಬೇರೆ ಭಾಷ್ಯಕಾರರು ಹೇಳುವಂತೆ ಪಾದಗಳ ವ್ಯವಸ್ಥೆಯನ್ನು ಮಾಡಬಾರದು. ಏಕೆಂದರೆ ಅವರು ಹೇಳಿದ ಕ್ರಮವು ಪಾದಗಳಲ್ಲಿ ತೋರುತ್ತಿಲ್ಲ.

ಪ್ರತಿಪದಾರ್ಥ– ಹಾಗಾದಲ್ಲಿ ಸಂಪೂರ್ಣಪ್ರಥಮಾಧ್ಯಾಯವು ಒಂದೇ ವಿಷಯವನ್ನು ಪ್ರತಿಪಾದಿಸುತ್ತದೆ ಎಂದಂತಾಯಿತು. ಹೀಗಿರುವಾಗ ಪಾದಭೇದವನ್ನು ವಿವಕ್ಷಿಸಲು ಏನು ಕಾರಣ? ಎಂಬ ಪ್ರಶ್ನೆಗೆ ಸಮನ್ವಯದಲ್ಲಿಯೂ ಅವಾಂತರಭೇದವು ಇರುತ್ತದೆ. ಆದ್ದರಿಂದ ಪಾದಭೇದವ್ಯವಸ್ಥೆಯು ಅನಿವಾರ್ಯವಾಗಿದೆ ಎಂದು ತಿಳಿಸಲು ಪ್ರಥಮಪಾದಪ್ರತಿಪಾದ್ಯವಾದ ಪ್ರಮೇಯವನ್ನು ತೋರಿಸುತ್ತಿದ್ದಾರೆ. ಅನ್ಯತ್ರ = ಭಗವಂತನನ್ನು ಬಿಟ್ಟು, ಬೇರೆ ಕಡೆ, ಪ್ರಸಿದ್ಧಾನಾಂ = ಶ್ರುತಿ ಹಾಗೂ ಲೋಕಗಳಲ್ಲಿ

---

(१) भाष्यदीपिका – तर्हि अध्यायस्यैकार्थत्वात् पादभेदः किन्निबन्धन इत्यतः समन्वेतव्यभेदात् समन्वयेऽप्यवान्तरभेद इति भावेन प्रथमाध्यायप्रथमपादप्रतिपाद्यं दर्शयति – प्रायेणेति ।। 'अस्मिन्' प्रथमे पादे 'प्रायेण' बाहुल्येन 'अन्यत्र' विष्णोरन्यत्र 'प्रसिद्धानां' श्रुत्यादितो लोकतो वाऽपाततो रूढत्वेन प्रतीयमानानां नामात्मकानां 'शब्दानां' 'परमात्मनि' विष्णौ निरुक्तः 'समन्वयः' 'प्रदर्श्यते' प्रपञ्च्यत इत्यर्थः । अत्रापि अन्तरधिकरणे अन्तःस्थत्वलिङ्गसमन्वयप्रतिपादनाद् अव्याप्तिनिरासाय – प्रायेणेति ।। तत्त्वप्रदीपे तु, एक एव भाष्ये प्रायेणेति शब्दः । तस्यैवोत्तरत्रापि सम्बन्ध इत्याशयेन 'प्रायेणान्यत्र प्रसिद्धानां शब्दानामिति च सम्बन्धः' इत्युक्तम् । तथा – आनन्दमयाधिकरणे लिङ्गविचारात् तदपि प्रायेणेति व्यावर्त्यमिति चोक्तम् । यद्वा – टीकायामप्यावृत्त्यभिप्रायेणैकस्यैव पुनरुत्तरत्राप्यन्वयप्रदर्शनाय प्रतीकग्रहणं कृतमिति न ग्रन्थवैरूप्यं कल्प्यम् । अत एव तत्त्वप्रदीपानुसारेण 'आनन्दमयनाम्न इति टीकायामानन्दमयनामशब्दः आनन्दादिनामपरो वा योज्यः' इत्युक्तं चन्द्रिकायाम् ।

अथ परोक्तं पादार्थं दूषयति – नेति ।। 'अन्यथा' प्रथमे स्पष्टब्रह्मलिङ्गानां शब्दानां, द्वितीयतृतीययोरस्पष्टब्रह्मलिङ्गानां समन्वयः प्रतिपाद्यते । तयोस्तु सविशेषनिर्विशेषविषयतया भेदः । चतुर्थपादे तु प्रधानस्याशब्दत्वोक्तिरित्येवंरूपोऽस्मदुक्तादन्यप्रकारेण पादार्थो न वाच्य इत्यर्थः । कुतो नेत्यत आह - तदिति ।। 'तस्य' परोक्तपादार्थनियमस्य 'अदृष्टेः' एतदध्यायगतपादेष्वदर्शनादित्यर्थः । सर्वसाङ्कर्यादिति भावः । तच्च टीकादावुक्तम् ।

ಪ್ರಸಿದ್ಧವಾದ, ಶಬ್ದಾನಾಂ = ಆನಂದ, ಆಕಾಶ ಮೊದಲಾದ ನಾಮಾತ್ಮಕಶಬ್ದಗಳ, ಸಮನ್ವಯಃ = ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ವಾಚ್ಯತ್ವವು, ಅಸ್ಮಿನ್ = ಈ, ಪಾದೇ = ಪ್ರಥಮಪಾದದಲ್ಲಿ, ಪ್ರದರ್ಶ್ಯತೇ = ನಿರೂಪಿಸಲ್ಪಟ್ಟಿದೆ.

ಇತರ ಭಾಷ್ಯಕಾರರ ಪಾದಾರ್ಥವನ್ನು ಸೂಚನೆ ಮಾಡುತ್ತಿದ್ದಾರೆ. ಅನ್ಯಥಾ = ಇದಕ್ಕೆ ವಿರುದ್ಧವಾದ ಹೇಳಿಕೆಯು, ನ = ಯುಕ್ತವಲ್ಲ. ತತ್ = ಇತರರು ಹೇಳಿದ ಪಾದಾರ್ಥದ ಕ್ರಮವು, ಅದೃಷ್ಟೇಃ = ಈ ಅಧ್ಯಾಯದ ಪಾದಗಳಲ್ಲಿ ಕಾಣಸದೇ ಇರುವುದರಿಂದ.

## ನಾಲ್ಕು ಪಾದಗಳೇಕೆ?

**तत्वप्रकाशिका – तर्ह्यध्यायस्यैकार्थत्वात् पादभेदः किंनिबन्धन इत्यतः समन्वयेऽप्यवान्तरभेदेनेति भावेनतत्पादप्रतिपाद्यं दर्शयति – प्रायेणेति ॥**

ಹಾಗಾದರೆ ಸಂಪೂರ್ಣಅಧ್ಯಾಯವು ಒಂದೇ ವಿಷಯವನ್ನು ಪ್ರತಿಪಾದನೆ ಮಾಡುವುದಾದಲ್ಲಿ, ಪಾದಗಳನ್ನು ಬೇರೆ ಬೇರೆಯಾಗಿ ವಿಂಗಡನೆ ಮಾಡಲು ಏನು ಕಾರಣ? ಎಂದರೆ ಸಮನ್ವಯದಲ್ಲಿಯೂ ಕೂಡ ಅವಾಂತರಭೇದವಿದೆ. ಈ ಅಭಿಪ್ರಾಯದಿಂದಲೇ ಪಾದಪ್ರತಿಪಾದ್ಯವಿಷಯವನ್ನು ''ಪ್ರಾಯೇಣ'' ಎಂದು ತೋರಿಸುತ್ತಿದ್ದಾರೆ.

भावदीपः – **एकेति** ॥ 'अर्थैकत्वादेकं वाक्यम्' इति जैमिन्युक्तेरिति भावः ।

''ಏಕ'' ಎಂಬ ಅಂಶದಿಂದ ಜೈಮಿನಿಗಳು ಹೇಳಿದ 'ಅರ್ಥೈಕತ್ವಾದೇಕಂ ವಾಕ್ಯಮ್' (ಅರ್ಥವು ಒಂದೇ ಆಗಿರುವುದರಿಂದ ಒಂದು ವಾಕ್ಯ) ಎಂಬ ಉಕ್ತಿಯನ್ನು ಸ್ವೀಕರಿಸಬೇಕು.

**वाक्यार्थमञ्जरी – एकेति** ॥ समन्वयरूपेत्यर्थः ।

ಟೀಕಾದಲ್ಲಿ 'ಏಕಾರ್ಥತ್ವಾತ್' ಎಂದರೆ ಸಮನ್ವಯರೂಪ ಎಂದರ್ಥ.

## ಸಕಲವೈದಿಕಶಬ್ದಗಳು ಒಟ್ಟು ನಾಲ್ಕುವಿಧ

**तत्वप्रकाशिका – शब्दास्तावच्चतुर्विधाः । अन्यत्रैवप्रसिद्धा उभयत्रप्रसिद्धा अन्यत्रप्रसिद्धाः तत्रप्रसिद्धा इति । सर्वेऽपि नामलिङ्गात्मकतया प्रत्येकं द्विविधाः । तेषु न तत्रप्रसिद्धानां समन्वयो वाच्यः । तेष्वन्यत्रैव प्रसिद्धशब्दसमन्वयस्य प्रथममबुद्ध्यारोहाच्चतुर्थे तदुक्तिः । उभयत्रप्रसिद्धानामन्यत्रप्रसिद्धिपराकरण-मात्रस्यान्यत्रप्रसिद्धानां तत्प्रसिद्धिनिराकरणपूर्वकं भगवत्परत्वप्रतिपादनादमुख्यत्वेन प्राथम्यायोगात् तृतीये तदुक्तिः ।**

ಶಬ್ದಗಳು ಒಟ್ಟು ನಾಲ್ಕುವಿಧ –

೧) ಅನ್ಯತ್ರೈವಪ್ರಸಿದ್ಧ - ಭಗವಂತನನ್ನು ಬಿಟ್ಟು ಬೇರೆ ಕಡೆಯಲ್ಲಿಯೇ ಪ್ರಸಿದ್ಧ

೨) ಉಭಯತ್ರಪ್ರಸಿದ್ಧ - ಭಗವಂತನಲ್ಲಿ ಮತ್ತು ಬೇರೆಕಡೆಯಲ್ಲಿಯೂ ಪ್ರಸಿದ್ಧ

೩) ಅನ್ಯತ್ರಪ್ರಸಿದ್ಧ - ಲೋಕದ ದೃಷ್ಟಿಯಿಂದ ಬೇರೆ ಕಡೆ ಪ್ರಸಿದ್ಧ

೪) ತತ್ರಪ್ರಸಿದ್ಧ - ಭಗವಂತನಲ್ಲಿ ಪ್ರಸಿದ್ಧ

ಈ ಎಲ್ಲಾ ಶಬ್ದಗಳು ಪ್ರತ್ಯೇಕವಾಗಿ ನಾಮಾತ್ಮಕ ಮತ್ತು ಲಿಂಗಾತ್ಮಕ ಎಂದು ಎರಡು ವಿಧವಾಗಿವೆ.

ಅವುಗಳಲ್ಲಿ ಭಗವಂತನಲ್ಲಿ ಮಾತ್ರ ಪ್ರಸಿದ್ಧಗಳಾದ್ದರಿಂದ ತತ್ರಪ್ರಸಿದ್ಧಶಬ್ದಗಳ ಸಮನ್ವಯವನ್ನು ಹೇಳಬೇಕಾಗಿಲ್ಲ. ಅದರಂತೆ ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯವು ಬುದ್ಧಿಯಲ್ಲಿ ಆರೂಢ-ವಾಗುವುದಿಲ್ಲವಾದ್ದರಿಂದ ಚತುರ್ಥಪಾದದಲ್ಲಿ ಹೇಳುತ್ತಾರೆ. ಅದರಂತೆ 'ಉಭಯತ್ರಪ್ರಸಿದ್ಧ' ಶಬ್ದಗಳಲ್ಲಿ ಬೇರೆ ಕಡೆ ಪ್ರಸಿದ್ಧಿಯನ್ನು ನಿರಾಕರಣೆ ಮಾಡಿದರೆ ಸಾಕಾಗುತ್ತದೆ. 'ಅನ್ಯತ್ರೈವಪ್ರಸಿದ್ಧ'ಶಬ್ದಗಳಲ್ಲಿ ಬೇರೆ ಕಡೆ ಪ್ರಸಿದ್ಧಿಯನ್ನು ನಿರಾಕರಣೆ ಮಾಡಿ ಭಗವಂತನ ಪರವಾಗಿವೆ ಎಂದು ಪ್ರತಿಪಾದನೆ ಮಾಡಬೇಕಾದ್ದರಿಂದ ಅಮುಖ್ಯವಾಗಿವೆ. ಆದ್ದರಿಂದ ಅವನ್ನು ಮೊದಲಿಗೆ ಹೇಳದೆ ಮೂರನೆಯ ಪಾದದಲ್ಲಿ ಹೇಳಿದ್ದಾರೆ.

### ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವೇ ಮೊದಲು

भावदीपः – भाष्ये प्रतिपादमन्यत्रप्रसिद्धेत्याद्युक्त्या सूचितविभागं पादक्रमबीजं चाह – **शब्दा इति** ।। वैदिका इति योज्यम् । तथैव सुधोक्तेः । समन्वयस्तु त्रिविधानामेवेति तावच्छब्दः । **अन्यत्रैवेति** ।। व्युत्क्रमेणायं निर्देशोऽग्रे क्रमबीजोक्तिसौकर्याय । एतेषामसाङ्कर्यं चन्द्रिकायां व्यक्तम् । **तत्रेति** ।। 'तत्रैव' इत्यर्थः । तथैव सुधोक्तेः । तेन न पाञ्चविध्यं शङ्क्यम् । अन्यथा तत्रापीति विवक्षापत्योभयत्रान्तर्भावेन त्रैविध्यमेव स्यात् । **नामलिङ्गेति** ।। तत्स्वरूपमग्रे व्यक्तम् । **न तत्रेति** ।। अन्यपरत्वशङ्काशून्यानामेव तत्रप्रसिद्धशब्देन विवक्षितत्वादिति भावः । तेन 'जनितोत विष्णोः' इत्यादौ अन्यपरत्वव्युदासाय समन्वयो वाच्य इति न शङ्क्यम् । **प्रथममिति** ।। 'दुर्गमत्वाच्च नैवात्र प्राथम्येनोदितोञ्जसा' इत्यु-पासनापादीयानुव्याख्यानोक्तरीत्या पदवर्णस्वरादिसमन्वयरूपत्वेन वाक्य-समन्वयाभावादिति भावः । 'असर्वाधिकारत्वाच्च इत्युपलक्ष्यं महासमन्वये तस्मिन्नाधिकारोऽखिलस्य हि' इत्युक्तेः । तत्र प्रथमतोऽन्यत्रप्रसिद्धानां समन्वयः । 'शब्दानां वाच्य एवात्र महामल्लेशभङ्गवत्' इत्यनुभाष्योक्तदिशोभयत्रप्रसिद्धानाम-

प्राथम्ये बीजमाह – **उभयत्रेति ।। मात्रस्येति ।।** विष्णावपि दत्तपदत्वेन तत्र वृत्तेरव्युत्पाद्यत्वादिति भावः ।।

ಭಾಷ್ಯದಲ್ಲಿ ಪ್ರತಿಯೊಂದು ಪಾದದ ಆರಂಭದಲ್ಲಿ 'ಅನ್ಯತ್ರಪ್ರಸಿದ್ಧ' ಇತ್ಯಾದಿ ವಿಭಾಗವನ್ನು ಹೇಳಿರುವುದರಿಂದ ಈ ವಿಭಾಗವನ್ನು ಮತ್ತು ಆಯಾ ಪಾದಗಳಲ್ಲಿ ಆಯಾಯಾ ವಿಭಾಗವನ್ನು ಸೇರಿಸಿರುವುದಕ್ಕೆ ಕಾರಣವನ್ನು ''ಶಬ್ದಾಃ'' ಇತ್ಯಾದಿವಾಕ್ಯಗಳಿಂದ ವಿವರಿಸುತ್ತಿದ್ದಾರೆ. ಇಲ್ಲಿ ''ಶಬ್ದಾಃ'' ಎಂಬ ಪದದಿಂದ ವೈದಿಕಶಬ್ದಗಳು ಎಂಬುದಾಗಿ ಹೊಂದಿಸಿಕೊಳ್ಳಬೇಕು. ಸುಧಾದಲ್ಲೂ ಕೂಡ ಇದೇ ರೀತಿ ಹೇಳಿದ್ದಾರೆ. ನಾಲ್ಕುವಿಧ ಶಬ್ದಗಳಲ್ಲಿ ಮೂರು ಬಗೆಯ ಶಬ್ದಗಳಿಗೆ ಮಾತ್ರ ಸಮನ್ವಯದ ಆಗತ್ಯವಿದೆ ಎಂಬುದನ್ನು ''ತಾವತ್''ಶಬ್ದದಿಂದ ಸೂಚಿಸಿದ್ದಾರೆ.

''ಅನ್ಯತ್ರೈವ'' ಇತ್ಯಾದಿವಾಕ್ಯದಿಂದ ವ್ಯುತ್ಕ್ರಮವಾಗಿ ಶಬ್ದವಿಭಾಗವನ್ನು ಸೂಚಿಸಿರುವುದು ಮುಂದೆ ಅಧ್ಯಾಯಕ್ರಮಕ್ಕೆ ಕಾರಣವನ್ನು ತಿಳಿಸುವ ಸೌಕರ್ಯದ ಅಭಿಪ್ರಾಯದಿಂದ. ಈ ನಾಲ್ಕುವಿಧದ ಶಬ್ದಗಳಲ್ಲಿ ಪರಸ್ಪರ ಸಾಂಕರ್ಯವಿಲ್ಲ ಎಂಬುದು ಚಂದ್ರಿಕಾದಲ್ಲಿ ಸ್ಪಷ್ಟವಾಗಿದೆ. ''ತತ್ರ ಪ್ರಸಿದ್ಧಾಃ'' ಎಂಬ ವಿಭಾಗದಿಂದ 'ತತ್ರೈವ ಪ್ರಸಿದ್ಧಾಃ' ಎಂಬ ವಿಭಾಗವನ್ನು ಸ್ವೀಕರಿಸಬೇಕು. ಸುಧೆಯಲ್ಲಿಯೂ ಇದೇ ರೀತಿಯಾಗಿ ಹೇಳಿದ್ದಾರೆ. ಹೀಗೆ ಸ್ವೀಕರಿಸುವುದರಿಂದ ಶಬ್ದಗಳು ಐದು ಬಗೆ ಎಂಬ ಸಂದೇಹವು ಬರಲಾರದು. ಹಾಗಲ್ಲದಿದ್ದರೆ 'ತತ್ರ ಪ್ರಸಿದ್ಧಾಃ' ಎಂಬ ಶಬ್ದಕ್ಕೆ 'ತತ್ರಾಪಿ ಪ್ರಸಿದ್ಧಾಃ' ಎಂಬ ವಿವಕ್ಷೆ ಬರಬಹುದಾದ್ದರಿಂದ ಉಭಯತ್ರಪ್ರಸಿದ್ಧಶಬ್ದಗಳಲ್ಲಿ ಇದು ಸೇರಿ ಬಿಡುತ್ತದೆ. ಹೀಗೆ ಸೇರಿದಾಗ ಶಬ್ದವಿಭಾಗವು ಮೂರೇ ಎಂಬುದಾಗಿ ಶಂಕೆ ಬರಬಹುದಾಗಿದೆ. ''ನಾಮಲಿಂಗ'' ಇತ್ಯಾದಿವಾಕ್ಯದಿಂದ ಸೂಚಿಸಿರುವುದನ್ನು ಮುಂದೆ ಸ್ಪಷ್ಟವಾಗಿ ವಿವರಿಸಿದ್ದಾರೆ.

''ನ ತತ್ರ'' ಇತ್ಯಾದಿವಾಕ್ಯದಿಂದ ಈ ಶಬ್ದಗಳು ಬೇರೆಯವರನ್ನೂ ಹೇಳಬಹುದು ಎಂಬ ಸಂದೇಹಕ್ಕೆ ಅವಕಾಶವೇ ಇಲ್ಲದ ಸ್ಪಷ್ಟಶಬ್ದಗಳನ್ನು 'ತತ್ರ ಪ್ರಸಿದ್ಧಶಬ್ದ' ಎಂಬ ವಿಭಾಗದಿಂದ ವಿವಕ್ಷೆ ಮಾಡಿರುವುದರಿಂದ ಸಮನ್ವಯದ ಆಗತ್ಯವಿಲ್ಲ ಎಂದು ಅರ್ಥ. ಇದರಿಂದಾಗಿ '' 'ಜನಿತೋತ ವಿಷ್ಣೋಃ' ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಅನ್ಯಪರತ್ವವನ್ನು ನಿರಾಸ ಮಾಡುವುದಕ್ಕಾಗಿ ಸಮನ್ವಯವನ್ನು ಹೇಳಬೇಕು'' ಎಂಬ ಶಂಕೆಯೇ ಬರಲಾರದು.

''ಪ್ರಥಮಂ'' ಎಂಬ ವಾಕ್ಯಭಾಗದಿಂದ 'ದುರ್ಗಮತ್ವಾಚ್ಚ ನೈವಾತ್ರ ಪ್ರಾಥಮ್ಯೇನೋದಿತೋಽಂಜಸಾ'' (ಅನ್ಯತ್ರೈವ ಪ್ರಸಿದ್ಧಶಬ್ದಗಳಿಗೆ ಸಮನ್ವಯವನ್ನು ತಿಳಿಯುವುದು ಬಹಳ ಕಷ್ಟವಾದ್ದರಿಂದ ಮೊದಲು ಅವುಗಳನ್ನು ಸಮನ್ವಯ ಮಾಡುತ್ತಿಲ್ಲ) ಎಂಬ ಉಪಾಸನಾಪಾದದಲ್ಲಿ ಹೇಳಿದ ಅನುವ್ಯಾಖ್ಯಾನದ ವಚನದಂತೆ ಪದ, ವರ್ಣ, ಸ್ವರ ಇವುಗಳ ಸಮನ್ವಯವನ್ನೇ ಇಲ್ಲಿ ಮಾಡುತ್ತಿದ್ದು ವಾಕ್ಯಸಮನ್ವಯವನ್ನು ಮಾಡದಿರುವುದರಿಂದ ಪ್ರಾರಂಭದಲ್ಲಿ ಅನ್ಯತ್ರೈವ ಪ್ರಸಿದ್ಧಶಬ್ದಗಳನ್ನು ಸಮನ್ವಯಮಾಡದೆ ಅನ್ಯತ್ರಪ್ರಸಿದ್ಧಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ' ಎಂದು ಅಭಿಪ್ರಾಯ.

'ಮಹಾಸಮನ್ವಯೇ ತಸ್ಮಿನ್ನಾಧಿಕಾರೋಽಖಿಲಸ್ಯ ಹಿ' (ವೈದಿಕವಾದ ಎಲ್ಲಾ ಶಬ್ದಗಳಿಗೂ ಪೂರ್ಣವಾಗಿ ಸಮನ್ವಯಮಾಡುವ ವಿಷಯದಲ್ಲಿ ಬ್ರಹ್ಮದೇವರು ಮಾತ್ರ ಸರಿಯಾದ ಅಧಿಕಾರಿಗಳು) ಎಂಬ

ಅನುವ್ಯಾಖ್ಯಾನದ ವಚನದಂತೆ ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯದ ವಿಷಯದಲ್ಲಿ ಎಲ್ಲರಿಗೂ ಅಧಿಕಾರ ಇಲ್ಲದಿರುವುದರಿಂದ ಎಂಬ ಅಂಶವನ್ನು ಇಲ್ಲಿ ಸೇರಿಸಿಕೊಳ್ಳಬೇಕು.

''ಅನ್ಯತ್ರೈವ ಶಬ್ದಗಳನ್ನು ಹೊರತು ಪಡಿಸಿ ಉಳಿದ ಶಬ್ದವಿಭಾಗಗಳಲ್ಲಿ ಮೊದಲಾಗಿ ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವನ್ನು ಹೇಳುವುದೇ ಯುಕ್ತವಾಗಿದೆ. ಮಹಾಮಲ್ಲೇಶಭಂಗನ್ಯಾಯದಂತೆ (ಅನೇಕ ಮಲ್ಲರು ಯುದ್ಧಕ್ಕೆ ಬಂದಾಗ ಮೊದಲಾಗಿ ಯಾರನ್ನು ಯುದ್ಧಮಾಡಿ ಸೋಲಿಸುವುದು? ಎಂಬ ಸಂಶಯ ಬಂದಾಗ ಆ ಮಲ್ಲರಲ್ಲಿ ಪ್ರಧಾನನಾದ ಜಟ್ಟಿಯನ್ನು ಮೊದಲು ಸೋಲಿಸಿದರೆ ಉಳಿದವರು ಧೈರ್ಯ ಕಳೆದುಕೊಳ್ಳುವುದರಿಂದ ಸುಲಭವಾಗಿ ಅವರನ್ನು ಸೋಲಿಸಬಹುದು. ಹೀಗೆ ಉಭಯತ್ರ ಪ್ರಸಿದ್ಧಶಬ್ದಗಳು ಮತ್ತು ಅನ್ಯತ್ರಪ್ರಸಿದ್ಧಶಬ್ದಗಳಲ್ಲಿ ಅನ್ಯತ್ರಪ್ರಸಿದ್ಧಶಬ್ದಗಳು ಪ್ರಧಾನವಾದುದರಿಂದ ಇವುಗಳನ್ನು ಮೊದಲು ಸಮನ್ವಯ ಮಾಡಿದ್ದಾರೆ ಎಂದು ಅಭಿಪ್ರಾಯ.) ಈ ರೀತಿ ಮಾಡುತ್ತಿದ್ದಾರೆ. 'ಶಬ್ದಾನಾಂ ವಾಚ್ಯ ಏವಾತ್ರ ಮಹಾಮಲ್ಲೇಶಭಂಗವತ್' ಈ ಅನುವ್ಯಾಖ್ಯಾನದ ಮಾತಿನಂತೆ ಉಭಯತ್ರಪ್ರಸಿದ್ಧಶಬ್ದಗಳನ್ನು ಮೊದಲಾಗಿ ಸಮನ್ವಯ ಮಾಡದಿರುವುದಕ್ಕೆ ''ಉಭಯತ್ರ'' ಇತ್ಯಾದಿವಾಕ್ಯದಿಂದ ಕಾರಣವನ್ನು ಹೇಳಿದ್ದಾರೆ. ''ಮಾತ್ರಸ್ಯ'' ಎಂಬ ಅಂಶದಿಂದ 'ಉಭಯತ್ರಪ್ರಸಿದ್ಧಶಬ್ದಗಳು ವಿಷ್ಣುವಿನಲ್ಲಿಯೂ ಪ್ರಸಿದ್ಧವಾಗಿರುವುದರಿಂದ ಅಲ್ಲಿ ಹೊಸತಾಗಿ ವೃತ್ತಿಯನ್ನು ತೋರಿಸುವ ಅಗತ್ಯವಿಲ್ಲದಿರುವುದರಿಂದ' ಎಂದು ಅಭಿಪ್ರಾಯ.

**वाक्यार्थमञ्जरी –** अस्मिन्पादे अन्यत्रप्रसिद्धनामात्मकशब्दसमन्वयनिरूपणे निमित्तं वक्तुमाह – **शब्दास्तावदित्यादिना** ।।

नन्वन्यत्रप्रसिद्धा इति कोऽर्थः । किमन्यत्रैवप्रसिद्धा इत्युतान्यत्रापिप्रसिद्धा इति । प्रकारान्तराभावात् । तत्र नाद्यः । चतुर्थपादे समन्वेतव्यान्यत्रैवप्रसिद्धशब्दसाङ्कर्यात् । नापि द्वितीयः । उभयत्रप्रसिद्धशब्दसाङ्कर्यात् । नच लोकतोन्यत्रैवप्रसिद्धाः अन्यत्रप्रसिद्धाः । श्रुत्यादितोऽन्यत्रैवप्रसिद्धाः अन्यत्रैवप्रसिद्धाः । अत एव लोकप्रसिद्ध्या अन्यत्रनिरूढाना-मीन्द्रादिशब्दानां श्रुतिलिङ्गादिबलात् विष्णौ समन्वयः प्राक् प्रतिपादितः । इदानीं श्रुतिलिङ्गादिभिरेवान्यत्रप्रसिद्धानामपि शब्दानां समन्वयनिरूपणातन्नैतत्पादवैय्यर्थ्यम् । अनेनैवाभिप्रायेणान्यत्रैवेत्युक्तिरिति चतुर्थपादीयटीकेति वाच्यम् । तथात्वे अन्यत्रप्रसिद्धत्वेना-भिमतसर्वगतत्वादेरादित्यश्रुत्यादिना अन्यत्रप्रसिद्धेर्वक्ष्यमाणत्वेन तस्यान्यत्रैवप्रसिद्धतापत्तेः ।

नच प्रबलश्रुतिलिङ्गादिभिरन्यत्रप्रसिद्धा अन्यत्रैवप्रसिद्धाः । श्रुतिलिङ्गादिमात्रेणान्यत्रप्रसिद्धा अन्यत्रप्रसिद्धा इति भेद वाच्यम्। अन्यत्रैवप्रसिद्धाव्यक्तादिशब्दानामन्यत्रप्रसिद्धिसाधकावरत्वा-दीनामिवान्यत्रप्रसिद्धगुहाप्रविष्टत्वादेरन्यत्रप्रसिद्धसाधकद्वित्वादीनामप्य एकस्मिन् ब्रह्मण्यसंभवात् बलवत्वेन तस्याप्यन्यत्रैवप्रसिद्धतापातात् तस्मान्नान्यत्रप्रसिद्धानामन्यत्रैवप्रसिद्धेभ्यो भेद इति चेत्; उच्यते श्रुत्यादितो लोकतो वा अन्यत्रप्रसिद्धाः अन्यत्रप्रसिद्धाः । बलवल्लिङ्गश्रुत्यादिभिरन्यत्रप्रसिद्धाः अन्यत्रैवप्रसिद्धाः । यथोक्तं –

**श्रुत्यादितो लोकतो वाऽपीतरेषु प्रसिद्धता ।**
**बलवच्छ्रुतिलिङ्गाद्यैरन्येष्वेव प्रसिद्धता ।। इति ।**

अत एव पूर्वमुक्तचिच्छ्रुत्यादिनैवान्यत्रप्रसिद्धशब्दसमन्वयोक्तावपि एतत्पादीयश्रुत्यादीनां प्राबल्यादियमुक्तिरिति चतुर्थपादीयटीका । बलवन्वञ्च मुख्यतो भगवत्परत्वेऽपि अमुख्यतोऽन्य-परत्वं विनाऽनुपपद्यमानत्वम् । यथा 'इन्द्रियेभ्यः पराह्यार्थाः' इत्यत्रेन्द्रियादिशब्दनां मुख्यतो भगवत्परत्वेपि अमुख्यत इन्द्रियाद्यभिमानिदेवतापरत्वम् । अन्यथा देवतातारतम्याद्यसिद्धेः । नचैवं गुहाप्रविष्टत्वादेरन्यत्रप्रसिद्धत्वसम्पादकद्वित्वस्यान्यपरत्वं विनाऽनुपपद्यमानत्वमस्ति । येन तस्य प्राबल्यं स्यात् । अथवा येषां शब्दानां ब्रह्मण्यप्रसिद्धिः अन्यवस्तुषु प्रसिद्धिश्चेति द्वयं समन्वय-विरोधि ते अन्यत्रप्रसिद्धाः । येषां ब्रह्मण्यप्रसिद्धिरन्यत्रप्रसिद्धिर्ब्रह्मपरत्वेऽत्यशक्यतेति त्रयं समन्वयविरोधि ते अन्यत्रैवप्रसिद्धाः । यथोक्तं –

**येषां ब्रह्मण्यप्रसिद्धिः प्रसिद्धश्चान्यवस्तुषु ।**
**विरोधिन्यो हि तेऽन्यत्रप्रसिद्धाःकथिता इह ।।**

**येषामुक्तद्वयं ब्रह्मपरत्वस्यात्यशक्यता ।**
**इति तिस्रो विरोधिन्यस्तेऽन्यत्रैवप्रसिद्धका ।। इति ।**

**तत्रप्रसिद्धा इति** ।। तत्रैवप्रसिद्धा इत्यर्थः । तत्रापीत्यर्थत्वे उभयत्रप्रसिद्धिसाङ्कर्यात् । अतएव सुधायां ब्रह्मण्येव प्रसिद्धेत्युक्तं ।।

**नामलिङ्गात्मकतयेति** ।। साक्षात् धर्म्युपस्थापका नामात्मकाः धर्मद्वारा धर्म्युपस्थापकाः लिङ्गात्मकाः ।। **न तत्रेति** ।। ननु तत्रैवप्रसिद्धानामपि "जनितोत विष्णोः" इत्यादाविवा-न्यपरत्वशङ्कायां समन्वयो व्युत्पाद्यत एवेति चेन्न । तत्रप्रसिद्धेत्यनेन अन्यपरत्वशङ्काराहित्य-स्योक्तत्वात् ।

नन्वत्र कथं पादक्रमः? किं महामल्लभङ्गन्यायेन अथ प्रथममल्पसोपानमारोहति अनन्तरं स्थूलमनन्तरं स्थूलतरं ततःस्थूलतममिति सोपानारोहणन्यायेन । नाद्यः । तथात्वे अन्यत्रैवप्रसिद्धानां समन्वयस्यबहुप्रयत्नसाध्यत्वेन तस्यैव प्राथम्यप्रसङ्गात् । न द्वितीयः । उभयत्रप्रसिद्धस्य अल्पप्रयत्नसाध्यत्वेन तस्यैवप्राथम्यप्रसङ्गादित्यत आह – **तेष्वन्यत्रेति** ।। त्रिविधेष्वित्यर्थः । तथाच महामल्लभङ्गन्यायेनान्यत्रैवप्रसिद्धसमन्वयस्य प्रथमं प्राप्तत्वेपि प्रथमं बुध्यनारोहादेव

तत्परित्याग इतिभावः । पादत्रये महामल्लभङ्गन्यायेनक्रमइत्याह – **उभयत्रप्रसिद्धाना-मित्यादिना** । पराकरणमात्रस्य अमुख्यत्वेनेतिसम्बन्धः ।

अयमर्थः – उभयत्रप्रसिद्धानां हि शब्दानां अन्यपरत्वमात्रं निरसनीयम् । नतु भगवत्परत्व-मुपपादनीयं स्वतःसिद्धत्वात् । अन्यत्रप्रसिद्धानाञ्चान्यपरत्वं निरस्य भगवत्परत्वञ्च व्युत्पादनीयं तस्यासिद्धत्वात् । अन्यत्रप्रसिद्धिनिरासपूर्वकं भगवत्प्रसिद्धिव्युत्पादनापेक्षया अन्यप्रसिद्धिनिरसन-मात्रपरत्वममुख्यमिति तृतीये तदुक्तिरिति ॥

'ಶಬ್ದಾಸ್ತಾವತ್' ಇತ್ಯಾದಿ ವಾಕ್ಯಗಳಿಂದ ಈ ಪಾದದಲ್ಲಿ ಅನ್ಯತ್ರಪ್ರಸಿದ್ಧನಾಮಾತ್ಮಕ ಶಬ್ದಗಳ ಸಮನ್ವಯದ ನಿರೂಪಣೆ ಮಾಡಲು ನಿಮಿತ್ತವನ್ನು ಹೇಳುತ್ತಿದ್ದಾರೆ,

ಶಂಕಾ - ಅನ್ಯತ್ರಪ್ರಸಿದ್ಧ ಎಂದರೆ ಏನು ಅರ್ಥ? ಅನ್ಯತ್ರೈವಪ್ರಸಿದ್ಧ ಎಂದು ಅರ್ಥವೋ? ಅಥವಾ ಅನ್ಯತ್ರಾಪಿ ಪ್ರಸಿದ್ಧ ಎಂದು ಅರ್ಥವೋ? ಬೇರೆ ಪ್ರಕಾರ ಇಲ್ಲದಿರುವುದರಿಂದ ಇವೆರಡರಲ್ಲಿ ಒಂದಾಗಿರಬೇಕು. ಇದರಲ್ಲಿ ಮೊದಲನೆಯ ಅರ್ಥವನ್ನು ಹೇಳಲು ಬರುವುದಿಲ್ಲ. ಏಕೆಂದರೆ ನಾಲ್ಕನೆಯ ಪಾದದಲ್ಲಿ ಸಮನ್ವಯ ಮಾಡಲಿರುವ ಅನ್ಯತ್ರೈವಪ್ರಸಿದ್ಧಶಬ್ದದೊಂದಿಗೆ ಸಾಂಕರ್ಯ ಬರುತ್ತದೆ. ಎರಡನೆಯ ಅರ್ಥವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಉಭಯತ್ರಪ್ರಸಿದ್ಧ ಶಬ್ದದೊಂದಿಗೆ ಸಾಂಕರ್ಯ ಬರುತ್ತದೆ.

ಆಕ್ಷೇಪ - ಲೌಕಿಕವ್ಯವಹಾರಗಳಲ್ಲಿ ಅನ್ಯತ್ರೈವಪ್ರಸಿದ್ಧಶಬ್ದಗಳೆಂದರೆ ಶ್ರುತಿ,ಲಿಂಗಾದಿಗಳಿಂದ ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳೆಂದು. ಅನ್ಯತ್ರಪ್ರಸಿದ್ಧದಿಂದ ಭೇದವನ್ನು ಹೇಳಲು ನಾಲ್ಕನೆಯ ಪಾದದ ಟೀಕೆಯಲ್ಲಿ ಲೌಕಿಕಪ್ರಸಿದ್ಧಿಯಿಂದ ಅನ್ಯತ್ರ ರೂಢಿಯಲ್ಲಿರುವ ಇಂದ್ರ ಇವೇ ಮೊದಲಾದ ಶಬ್ದಗಳನ್ನು ಶ್ರುತಿಲಿಂಗವೇ ಮೊದಲಾದವುಗಳಿಂದ ವಿಷ್ಣುವಿನಲ್ಲಿ ಸಮನ್ವಯವನ್ನು ಮೊದಲನೆಯ ಪಾದದಲ್ಲಿ ಪ್ರತಿಪಾದನೆ ಮಾಡಿ, ಈ ನಾಲ್ಕನೆಯ ಪಾದದಲ್ಲಿ ಶ್ರುತಿಲಿಂಗಾದಿಗಳಿಂದಲೇ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡುತ್ತಿದ್ದೇವೆ. ಆದ್ದರಿಂದ ಈ ನಾಲ್ಕನೆಯ ಪಾದವು ವ್ಯರ್ಥವಲ್ಲ ಎಂದು ಹೇಳಿ ಅನ್ಯತ್ರಪ್ರಸಿದ್ಧಶಬ್ದಗಳಿಗೂ ಮತ್ತು ಅನ್ಯತ್ರೈವಪ್ರಸಿದ್ಧಶಬ್ದಗಳಿಗೂ ವೈಲಕ್ಷಣವನ್ನು ಹೇಳಿದ್ದೀರಿ. ಆದರೆ ನಿಮಗೆ ಈ ರೀತಿಯಾಗಿ ಹೇಳಲು ಬರುವುದಿಲ್ಲ. ಒಂದು ವೇಳೆ ಅನ್ಯತ್ರ ಪ್ರಸಿದ್ಧ ಶಬ್ದಗಳಿಗೂ ಮತ್ತು ಅನ್ಯತ್ರೈವ ಪ್ರಸಿದ್ಧ ಶಬ್ದಗಳಿಗೂ ಈ ರೀತಿಯಾದ ವೈಲಕ್ಷಣ್ಯಗಳನ್ನು ಹೇಳಿದರೆ, ಮುಂದೆ ಎರಡನೆಯ ಪಾದದಲ್ಲಿ ಸಮನ್ವಯ ಮಾಡುತ್ತಿರುವ ಅನ್ಯತ್ರಪ್ರಸಿದ್ಧ ಎಂದು ಅಭಿಮತವಾದ 'ಸರ್ವಗತತ್ವ'ವೇ ಮೊದಲಾದ ಲಿಂಗಗಳು ಆದಿತ್ಯ ಇವೇ ಮೊದಲಾದ ಶ್ರುತಿಗಳಲ್ಲಿ ಕೇಳಿಬಂದಿರುವುದರಿಂದ ಅವುಗಳು ಅನ್ಯತ್ರೈವ ಪ್ರಸಿದ್ಧಶಬ್ದಗಳಾಗಬೇಕಾಗು ತ್ತವೆ. ನಾವು ಪ್ರಬಲವಾದ ಶ್ರುತಿ ಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಅನ್ಯತ್ರೈವಪ್ರಸಿದ್ಧ ಶಬ್ದಗಳೆಂದು, ಶ್ರುತಿಲಿಂಗವೇ ಮೊದಲಾದವುಗಳಿಂದ ಮಾತ್ರವೇ ಅನ್ಯತ್ರಪ್ರಸಿದ್ಧವಾದವುಗಳನ್ನು ಅನ್ಯತ್ರಪ್ರಸಿದ್ಧ ಶಬ್ದಗಳೆಂದು ವಿಂಗಡನೆ ಮಾಡಿ ಭೇದವನ್ನು ಹೇಳುತ್ತೇವೆಂದರೆ, ಈ ರೀತಿಯಾಗಿಯೂ ಹೇಳಲು ಬರುವುದಿಲ್ಲ. ಏಕೆಂದರೆ ಅವ್ಯಕ್ತವೇ ಮೊದಲಾದ ಅನ್ಯತ್ರೈವಶಬ್ದಗಳಿಗೆ ಸಾಧಕವಾದ ಅವರತ್ವವೇ ಮೊದಲಾದವುಗಳಂತೆ, ಗುಹಾಪ್ರವಿಷ್ಟತ್ವವೇ ಮೊದಲಾದವುಗಳು ಅನ್ಯತ್ರಪ್ರಸಿದ್ಧ ಎಂದು ಸಾಧನೆ ಮಾಡುವ ದ್ವಿತ್ವಾದಿಗಳೂಸಹ ಒಬ್ಬನೇ ಬ್ರಹ್ಮನಲ್ಲಿ ಇರಲು ಸಾಧ್ಯವಿಲ್ಲದಿರುವುದರಿಂದ

ಬಲವಂತವಾಗಿ ಅವುಗಳನ್ನು ಸಹ ಅನ್ಯತ್ರೈವ ಪ್ರಸಿದ್ಧವೆಂದೇ ಪರಿಗಣಿಸಬೇಕಾಗುತ್ತದೆ. ಏಕೆಂದರೆ ಗುಹಾಪ್ರವಿಷ್ಟತ್ವಕ್ಕೆ ಸಾಧಕವಾದ ದ್ವಿತ್ವವು ಶ್ರುತಿಯಲ್ಲಿ 'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ' ಎಂದು ಕೇಳಿ ಬಂದಿದೆ. ಆದ್ದರಿಂದ ಅನ್ಯತ್ರಪ್ರಸಿದ್ಧ ಶಬ್ದಗಳಿಗೂ ಅನ್ಯತ್ರೈವ ಪ್ರಸಿದ್ಧಿಗಳಿಗೂ ಯಾವ ಭೇದವು ಇಲ್ಲ.

ಸಮಾಧಾನ - ಶ್ರುತಿಗಳಿಂದಾಗಲಿ ಅಥವಾ ಲೌಕಿಕ ವ್ಯವಹಾರಗಳಲ್ಲಾಗಲಿ ಅನ್ಯತ್ರಪ್ರಸಿದ್ಧವಾದವುಗಳು ಅನ್ಯತ್ರಪ್ರಸಿದ್ಧಶಬ್ದಗಳು. ಬಲವಾದ ಲಿಂಗ, ಶ್ರುತಿ ಮೊದಲಾದವುಗಳಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳು ಅನ್ಯತ್ರೈವಪ್ರಸಿದ್ಧ ಶಬ್ದಗಳು. ಈ ವಿಷಯದಲ್ಲಿ ಅನುವ್ಯಾಖ್ಯಾನದ ಮಾತು ಸಾಧಕವಾಗಿದೆ.

ಶ್ರುತ್ಯಾದಿತೋ ಲೋಕತೋ ವಾಪೀತರೇಷು ಪ್ರಸಿದ್ಧತಾ ।
ಬಲವತ್ ಶ್ರುತಿಲಿಂಗಾದ್ಯೈರನ್ಯೇಷ್ವೇವ ಪ್ರಸಿದ್ಧತಾ ॥

ಆದ್ದರಿಂದಲೇ ನಾಲ್ಕನೆಯ ಪಾದದ ಟೀಕೆಯಲ್ಲಿ ಈ ರೀತಿಯಾಗಿ ಹೇಳಿದ್ದಾರೆ - 'ಪೂರ್ವಂ ಕ್ವಚಿತ್ ಶ್ರುತ್ಯಾದಿನೈವಾನ್ಯತ್ರ ಪ್ರಸಿದ್ಧಸಮನ್ವಯೋಕ್ತಾವಪಿ ಏತತ್ಪಾದೀಯಶ್ರುತ್ಯಾದೀನಾಂ ಪ್ರಾಬಲ್ಯಾದಿಯಮುಕ್ತಿಃ'(ಪೂರ್ವದಲ್ಲಿ ಕೆಲವು ಶ್ರುತಿಲಿಂಗಾದಿಗಳಿಂದಲೇ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಮಾಡಿದ್ದರೂ ಸಹ ಈ ಪಾದದಲ್ಲಿರುವ ಶ್ರುತಿಯೇ ಮೊದಲಾದವುಗಳು ಪ್ರಬಲವಾಗಿರುವುದರಿಂದ ಅನ್ಯತ್ರೈವಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಮಾಡಲಾಗುತ್ತಿದೆ). ಶ್ರುತಿಗಳು ಪ್ರಬಲ ಎಂದರೆ ಮುಖ್ಯವಾಗಿ ಭಗವಂತನ ಪರವಾಗಿಯೇ ಇದ್ದರೂ ಸಹ ಅಮುಖ್ಯವಾಗಿ ಅನ್ಯ ದೇವತೆಗಳ ಪರವಾಗಿಯೂ ಇರುತ್ತವೆಯೆಂದು ಹೇಳಲೇಬೇಕು. ಉದಾಹರಣೆ- 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಎಂಬಲ್ಲಿ ಇಂದ್ರಿಯವೇ ಮೊದಲಾದ ಶಬ್ದಗಳು ಮುಖ್ಯವಾಗಿ ಭಗವಂತನ ಪರವಾಗಿದ್ದರೂ ಸಹ ಅಮುಖ್ಯವಾಗಿ ಇಂದ್ರಿಯವೆ ಮೊದಲಾದ ಅಭಿಮಾನಿದೇವತಾ ಪರವಾಗಿಯೂ ಇದೆ ಎಂದು ಹೇಳಲೇಬೇಕು. ಇಲ್ಲದಿದ್ದರೆ ದೇವತಾತಾರತಮ್ಯವು ಸಿದ್ಧವಾಗುವುದಿಲ್ಲ. ಇದೇ ರೀತಿಯಾಗಿ ಗುಹಾಪ್ರವಿಷ್ಟತ್ವಾದಿಗಳಲ್ಲಿ ಅನ್ಯತ್ರಪ್ರಸಿದ್ಧಿಯನ್ನು ಸಂಪದಾನೆ ಮಾಡುವ ದ್ವಿತ್ವಕ್ಕೆ ಅನ್ಯಪರತ್ವವನ್ನು ಹೇಳದೆ ಉಪಪದ್ಯವಾಗುವುದಿಲ್ಲ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ದ್ವಿತ್ವಕ್ಕಿಂತ ಗುಹಾಪ್ರವಿಷ್ಟತ್ವವು ಪ್ರಬಲವಾಗಿದೆ.

ಅಥವಾ ಯಾವ ಶಬ್ದಗಳು ಬ್ರಹ್ಮನಲ್ಲಿ ಅಪ್ರಸಿದ್ಧವಾಗಿ, ಅನ್ಯವಸ್ತುಗಳಲ್ಲಿ ಪ್ರಸಿದ್ಧವಾಗಿ ಎರಡು ರೀತಿಯ ಸಮನ್ವಯಕ್ಕೆ ವಿರೋಧಿಯಾದ ಶಬ್ದಗಳು ಇವೆಯೋ ಅವು ಅನ್ಯತ್ರಪ್ರಸಿದ್ಧ ಶಬ್ದಗಳಾಗಿವೆ.

ಯಾವ ಶಬ್ದಗಳು ಬ್ರಹ್ಮನಲ್ಲಿ ಅಪ್ರಸಿದ್ಧವಾಗಿ ಅನ್ಯತ್ರಪ್ರಸಿದ್ಧವಾಗಿ ಬ್ರಹ್ಮಪರವಾಗಲು ಅತ್ಯಂತ ಅಶಕ್ಯ ಎಂದು ಮೂರು ರೀತಿಯಾದ ಸಮನ್ವಯಕ್ಕೆ ವಿರೋಧಿಯಾದ ಶಬ್ದಗಳು ಅನ್ಯತ್ರೈವಪ್ರಸಿದ್ಧ ಶಬ್ದಗಳು.

'ಯೇಷಾಂ ಬ್ರಹ್ಮಣ್ಯಪ್ರಸಿದ್ಧಿಃ ಪ್ರಸಿದ್ಧಿಶ್ಚಾನ್ಯವಸ್ತುಷು ।
ವಿರೋಧಿನ್ಯೋಹಿ ತೇನ್ಯತ್ರಪ್ರಸಿದ್ಧಾಃ ಕಥಿತಾ ಇಹ ॥
ಯೇಷಾಮುಕ್ತದ್ವಯಂ ಬ್ರಹ್ಮಪರತ್ವಸ್ಯಾತ್ಯಶಕ್ಯತಾ।
ಇತಿ ತಿಸ್ರೋರ್ವಿರೋಧಿನ್ಯಸ್ತೇಽನ್ಯತ್ರೈವ ಪ್ರಸಿದ್ಧಕಾಃ' ॥

ಎಂಬ ವಚನವೂ ಇದಕ್ಕೆ ಸಾಧಕವಾಗಿದೆ.

ತತ್ರಪ್ರಸಿದ್ಧವೆಂದರೆ ತತ್ರೈವಪ್ರಸಿದ್ಧವೆಂದರ್ಥ. ತತ್ರಾಪಿಪ್ರಸಿದ್ಧವೆಂದು ಅರ್ಥ ಮಾಡಿದರೆ

ಉಭಯತ್ರಪ್ರಸಿದ್ಧ ಶಬ್ದಗಳೊಂದಿಗೆ ಸಾಂಕರ್ಯ ಬರುತ್ತದೆ. ಆದ್ದರಿಂದಲೇ ಸುಧೆಯಲ್ಲಿ 'ಬ್ರಹ್ಮಣ್ಯೇವ ಪ್ರಸಿದ್ಧಃ' ಇತ್ಯಾದಿಯಾಗಿ ಹೇಳಿದ್ದಾರೆ. 'ನಾಮಲಿಂಗಾತ್ಮಕತಯಾ' ಎಂದರೆ ಸಾಕ್ಷಾತ್ತಾಗಿ ಯಾವುದು ಧರ್ಮಿಯನ್ನು ತಿಳಿಸಿಕೊಡುತ್ತವೆಯೋ ಅವು ನಾಮಾತ್ಮಕಶಬ್ದಗಳು. ಧರ್ಮದ್ವಾರಾ ಧರ್ಮಿಯನ್ನು ತಿಳಿಸಿಕೊಡುವವು ಲಿಂಗಾತ್ಮಕಶಬ್ದಗಳು ಎಂದರ್ಥ.

ಹಾಗಾದರೆ ತತ್ರೈವಪ್ರಸಿದ್ಧವಾದವುಗಳೂ ಸಹ 'ಜನಿತೋತ ವಿಷ್ಣೋಃ' ಇವೇ ಮೊದಲಾದವುಗಳಂತೆ ಅನ್ಯಪರವಾಗಿವೆಂಬ ಶಂಕೆಗೆ ಆಸ್ಪದವಿದೆಯಲ್ಲವೇ? ಎಂದು ಶಂಕೆ ಮಾಡಿದರೆ 'ನ ತತ್ರ' ಎಂಬ ವಾಕ್ಯದಿಂದ ಉತ್ತರ ಹೇಳುತ್ತಿದ್ದಾರೆ. ಈ ರೀತಿಯಾದ ಶಂಕೆಗೆ ಅವಕಾಶವಿಲ್ಲ. ಏಕೆಂದರೆ 'ತತ್ರಪ್ರಸಿದ್ಧ' ಎಂಬುದರಿಂದ ಅನ್ಯಪರತ್ವ ಶಂಕೆಯನ್ನು ಪರಿಹರಿಸಿದ್ದರಿಂದ.

ಆಕ್ಷೇಪ - ಈ ಅಧ್ಯಾಯದಲ್ಲಿ ಸೂತ್ರಕಾರರು ಅನುಸರಿಸಿದ ಪಾದಕ್ರಮ ಹೇಗಿದೆ? ಮಹಾಮಲ್ಲಭಂಗನ್ಯಾಯವನ್ನು ಅನುಸರಿಸಿದ್ದಾರೆಯೇ? ಅಥವಾ ಮೊದಲು ಸಣ್ಣ ಮೆಟ್ಟಲನ್ನು ಹತ್ತಿ ಅನಂತರ ಸ್ವಲ್ಪ ದೊಡ್ಡಮೆಟ್ಟಲನ್ನು ಹತ್ತಿ ಕೊನೆಯಲ್ಲಿ ತುಂಬ ದೊಡ್ಡ ಮೆಟ್ಟಲನ್ನು ಹತ್ತುವಂತೆ ಸೋಪಾನಾರೋಹಣ ನ್ಯಾಯವನ್ನು ಅನುಸರಿಸಿದ್ದಾರೆಯೇ? ಮೊದಲನೆಯ ನ್ಯಾಯವನ್ನು ಅನುಸರಿಸಿದ್ದಾರೆಂದು ಹೇಳಲು ಬರುವುದಿಲ್ಲ. ಒಂದು ವೇಳೆ ಈ ನ್ಯಾಯವನ್ನು ಅನುಸರಿಸಿದರೆ ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯವು ಬಹಳ ಪ್ರಯತ್ನದಿಂದ ಸಾಧ್ಯವಾಗುವುದರಿಂದ ಅವುಗಳನ್ನೇ ಮೊದಲು ಸಮನ್ವಯ ಮಾಡಬೇಕಾಗುತ್ತದೆ. ಎರಡನೆಯ ನ್ಯಾಯವನ್ನು ಅನುಸರಿಸಿದ್ದಾರೆಂದು ಹೇಳಲು ಬರುವುದಿಲ್ಲ. ಏಕೆಂದರೆ ಉಭಯತ್ರಪ್ರಸಿದ್ಧಶಬ್ದಗಳ ಸಮನ್ವಯವು ಅಲ್ಪಪ್ರಯತ್ನದಿಂದ ಸಾಧ್ಯವಾಗುವುದರಿಂದ ಅವುಗಳ ಸಮನ್ವಯವನ್ನೇ ಪ್ರಥಮಪಾದದಲ್ಲಿ ಮಾಡಬೇಕಾಗಿತ್ತು.

ಸಮಾಧಾನ - ಈ ಆಕ್ಷೇಪಕ್ಕೆ 'ತೇಷು ಅನ್ಯತ್ರೈವ' ಎಂಬ ವಾಕ್ಯದಿಂದ ಸಮಾಧಾನವನ್ನು ಹೇಳಿದ್ದಾರೆ. 'ತೇಷು' ಎಂದರೆ ಮೂರುವಿಧ ಶಬ್ದಗಳಲ್ಲಿ ಎಂದರ್ಥ. ಮಹಾಮಲ್ಲಭಂಗನ್ಯಾಯಾನುಸಾರಿಯಾಗಿ ಅನ್ಯತ್ರೈವಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಮೊದಲು ಮಾಡಬೇಕು. ಆದರೆ ಅವುಗಳ ಸಮನ್ವಯವನ್ನು ಬುದ್ಧಿಯಲ್ಲಿ ಧಾರಣೆ ಮಾಡುವುದು ಕಷ್ಟವಾಗಿರುವುದರಿಂದ ಅದನ್ನು ಪರಿತ್ಯಾಗ ಮಾಡಿದ್ದಾರೆಂದು ತಿಳಿಯಬೇಕು. ಮೂರು ಪಾದಗಳಲ್ಲಿ ಮಹಾಮಲ್ಲಭಂಗನ್ಯಾಯಾನುಸಾರಿಯಾಗಿಯೇ ಪಾದಕ್ರಮವನ್ನು ಮಾಡಲಾಗಿದೆಂಬುದನ್ನು 'ಉಭಯತ್ರಪ್ರಸಿದ್ಧಾನಾಂ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ಪರಾಕರಣಮಾತ್ರಸ್ಯ' ಎಂಬುದಕ್ಕೆ ಅಮುಖ್ಯತ್ವೇನ ಎಂಬಲ್ಲಿ ಅನ್ವಯ ಮಾಡಬೇಕು.

ಈ ವಿಷಯದಲ್ಲಿ ಒಟ್ಟು ಅಭಿಪ್ರಾಯ ಈ ರೀತಿಯಾಗಿದೆ- ಉಭಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯದಲ್ಲಿ ಕೇವಲ ಅನ್ಯಪರತ್ವವನ್ನು ನಿರಾಕರಣೆ ಮಾಡಬೇಕು. ಭಗವಂತನ ಪರವಾಗಿ ಉಪಪಾದನೆ ಮಾಡುವ ಅವಶ್ಯಕತೆ ಇಲ್ಲ. ಏಕೆಂದರೆ ಅವು ಸ್ವಭಾವತಃ ಭಗವತ್ಪರವೆಂದು ಸಿದ್ಧವಾಗಿರುತ್ತವೆ. ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯದಲ್ಲಿ ಅನ್ಯಪರತ್ವವನ್ನು ನಿಷೇಧಮಾಡಿ, ಭಗವಂತನ ಪರವಾಗಿ ಸ್ಥಾಪನೆ ಮಾಡಬೇಕು. ಏಕೆಂದರೆ ಅವುಗಳು ಭಗವತ್ಪರವಾಗಿ ಸಿದ್ಧವಾಗಿರುವುದಿಲ್ಲ. ಅನ್ಯತ್ರಪ್ರಸಿದ್ಧಿನಿರಾಸಪೂರ್ವಕವಾಗಿ ಭಗವಂತನಲ್ಲಿಯೇ ಪ್ರಸಿದ್ಧಿಯನ್ನು ಉಪಪಾದನೆ ಮಾಡುವ ಅಪೇಕ್ಷೆಯಿಂದ ಕೇವಲ ಅನ್ಯಪರತ್ವ ನಿರಾಕರಣೆ ಮಾಡುವುದು ಅಮುಖ್ಯವಾಗಿರುವುದರಿಂದ ಉಭಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಮೂರನೆಯ ಪಾದದಲ್ಲಿ ಮಾಡಲಾಗಿದೆ.

*ಪರಿಪೂರ್ಣಚಂದ್ರಿಕಾ*

## ಮಾಯಾವಾದಿಗಳ ಪಾದಕ್ರಮ ಸರಿಯಿಲ್ಲ

**तत्वप्रकाशिका – अन्यपराणां मध्ये लिङ्गात्मकानां धर्मवाचित्वान्नामात्मकेभ्यो धर्मिवाचिभ्योऽमुख्यत्वेनाप्राथम्यात् तत्समन्वयोक्तिर्द्वितीये । ततोऽन्यत्रप्रसिद्धानां नामात्मकानां शब्दानां भगवति समन्वयः प्रदर्श्यतेऽस्मिन् पाद इति भावः । अत्रान्तस्थत्वलिङ्गसमन्वयप्रतिपादनात् – प्रायेणेति ।**

**अन्ये तु ब्रह्मनिष्ठतया स्पष्टलिङ्गानां प्रथमे द्वितीयतृतीययोरस्पष्टानां समन्वयः प्रतिपाद्यत इत्यन्यथा पादार्थानाचक्षते; तन्निराचष्टे – नान्यथेति ।। 'एतदमृतमभयमेतद् ब्रह्म' इत्युत्तराधिकरणोदाहृतवाक्येष्वपि स्पष्टब्रह्मलिङ्गानामुपलम्भेन तन्नियमादृष्टेर्नान्यथा पादार्थ इत्यर्थः ।**

ಅನ್ಯತ್ರಪ್ರಸಿದ್ಧಶಬ್ದಗಳಲ್ಲಿಯೂ ಲಿಂಗಾತ್ಮಕಶಬ್ದಗಳು ಧರ್ಮವನ್ನು ಹೇಳುವುದರಿಂದ ಧರ್ಮಿಯನ್ನು ಹೇಳುವ ನಾಮಾತ್ಮಕಶಬ್ದಗಳಿಂದ ಅಮುಖ್ಯವಾಗಿವೆ. ಆದ್ದರಿಂದ ಅವುಗಳ ಸಮನ್ವಯವನ್ನು ಮೊದಲಿಗೆ ಹೇಳದೇ ಎರಡನೆಯ ಪಾದದಲ್ಲಿ ಹೇಳಿದ್ದಾರೆ. ಆದ್ದರಿಂದ ಈ ಮೊದಲನೆಯ ಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಾರೆ ಎಂದು ಅಭಿಪ್ರಾಯ. ಈ ಪಾದದಲ್ಲಿ ನಾಮಾತ್ಮಕಶಬ್ದಗಳ ಸಮನ್ವಯದ ಜೊತೆಗೆ ಅಂತಸ್ಥತ್ವಲಿಂಗವನ್ನೂ ಸಮನ್ವಯ ಮಾಡಿದ್ದರಿಂದ ''ಪ್ರಾಯೇಣ'' ಎಂದು ಹೇಳಿದ್ದಾರೆ.

ಮಾಯಾವಾದಿಗಳು 'ಭಗವಂತನಲ್ಲಿಯೇ ಇರುವ ಸ್ಪಷ್ಟಲಿಂಗವುಳ್ಳ ಶಬ್ದಗಳನ್ನು ಪ್ರಥಮಪಾದದಲ್ಲಿ ಮತ್ತು ಅಸ್ಪಷ್ಟಲಿಂಗವುಳ್ಳ ಶಬ್ದಗಳನ್ನು ದ್ವಿತೀಯ, ತೃತೀಯಪಾದಗಳಲ್ಲಿ ಸಮನ್ವಯ ಮಾಡುತ್ತಾರೆ' ಎಂದು ಬೇರೆ ರೀತಿಯಾಗಿ ಪಾದಭೇದಕ್ಕೆ ಪ್ರಯೋಜನವನ್ನು ಹೇಳುತ್ತಾರೆ. ಇವರ ವಾದವನ್ನು 'ನಾನ್ಯಥಾ'' ಎಂಬುದರಿಂದ ನಿರಾಕರಣೆ ಮಾಡುತ್ತಿದ್ದಾರೆ. 'ಏತದಮೃತಮಭಯಮೇತದ್ ಬ್ರಹ್ಮ' ಎಂದು ಮುಂದಿನ ಪಾದದ ಅಧಿಕರಣಗಳಲ್ಲಿ ಉದಾಹರಣೆ ಮಾಡಿದ ವಾಕ್ಯಗಳಲ್ಲಿಯೂ ಸ್ಪಷ್ಟಲಿಂಗವುಳ್ಳ ಶಬ್ದಗಳು ಇರುವುದರಿಂದ ಅವರು ಹೇಳಿದ ಪಾದನಿಯಮವು ಕಾಣುತ್ತಿಲ್ಲ. ಆದ್ದರಿಂದ ಬೇರೆ ರೀತಿಯಾಗಿ ಪಾದದ ಪ್ರಯೋಜನವನ್ನು ತಿಳಿಯಬಾರದು ಎಂದು ಅಭಿಪ್ರಾಯ.

### ಲಿಂಗಾತ್ಮಕಶಬ್ದಸಮನ್ವಯ ಅನಂತರವೇಕೆ?

भावदीपः – नामलिङ्गयोरपि तन्यायेनैव क्रममाह – **अन्येति ।। धर्मेति ।।** लिङ्गानां यौगिकत्वान्नाम्नां रूढत्वादिति भावः । तथा च सुधोक्तदिशा

नाम्नामन्यबुद्धिजनकत्वं साक्षादेव । 'लिङ्गानां तु व्यवधानेन' इति नामसमन्वये यत्नगौरवात् प्राथम्यमिति । एतच्चोपलक्षणम् ।

तेषामन्यगतत्वे तु न स्यात् सम्यक्समन्वयः ।
इत्येवाशेषलिङ्गानां ब्रह्मण्येव समन्वयम् ।।
आह..'

इत्यनुभाष्योक्तदिशा लिङ्गैर्नामसमन्वयोक्तौ तेषां विष्ण्वेकनिष्ठतासाधकत्वाच्च इत्यपि ज्ञेयम् । एतेन यौगिकानि लिङ्गानि रूढानि नामानि योगरूढानि तूभयात्मकानीति सूचितम् । तद्विवृतं चन्द्रिकायाम् ।

अत्रेति ।। 'पादे' इत्यर्थः । साक्षात्त्वाशयेनेदं फलतस्तत्रापि नामसमन्वयात् ।

''ಅನ್ಯ'' ಇತ್ಯಾದಿವಾಕ್ಯದಿಂದ ನಾಮಲಿಂಗಶಬ್ದಗಳಲ್ಲಿ ಈ ಹಿಂದೆ ಹೇಳಿದ ನ್ಯಾಯದಂತೆಯೇ ಕ್ರಮವನ್ನು ತೋರಿಸಿದ್ದಾರೆ. ಲಿಂಗಾತ್ಮಕಶಬ್ದಗಳು ಯೌಗಿಕಶಬ್ದಗಳಾಗಿದ್ದು, ನಾಮಾತ್ಮಕಶಬ್ದಗಳು ರೂಢಶಬ್ದಗಳಾಗಿ-ರುವುದರಿಂದ ಧರ್ಮವಾಚಕಶಬ್ದಗಳಿಗಿಂತ ಧರ್ಮಿವಾಚಕಶಬ್ದಗಳು ಮುಖ್ಯವಾದ್ದರಿಂದ ಅವುಗಳ ಸಮನ್ವಯವನ್ನು ಎರಡನೇ ಪಾದದಲ್ಲಿ ಮಾಡಿದ್ದಾರೆ ಎಂದು ಅರ್ಥ. ಆದ್ದರಿಂದ ಸುಧೆಯಲ್ಲಿ ಹೇಳಿದಂತೆ ನಾಮಾತ್ಮಕಶಬ್ದಗಳಿಗೆ ಸಾಕ್ಷಾತ್ತಾಗಿಯೇ 'ವಿಷ್ಣುವಿಗಿಂತ ಅನ್ಯನನ್ನು ಈ ಶಬ್ದ ಹೇಳುತ್ತಿದೆ' ಎಂಬ ಬುದ್ಧಿಯನ್ನು ಹುಟ್ಟಿಸುವ ಸಾಮರ್ಥ್ಯವಿದೆ. ಲಿಂಗಾತ್ಮಕಶಬ್ದಗಳಿಗೆ 'ಶಬ್ದದ ವ್ಯುತ್ಪತ್ತಿಯನ್ನು ಗ್ರಹಿಸಿಕೊಂಡು ಆ ವ್ಯುತ್ಪತ್ತಿಯಂತೆ 'ಈ ಶಬ್ದವು ಯಾವೆಲ್ಲಾ ಅರ್ಥಗಳನ್ನು ತಿಳಿಸಬಹುದೋ ಆ ಎಲ್ಲವನ್ನೂ ತೋರಿಸಿಕೊಡುವ ಮೂಲಕ ಸಾಕ್ಷಾತ್ತಾಗಿ ಅನ್ಯಬುದ್ಧಿಯನ್ನು ಇವು ಉಂಟುಮಾಡಲಾರವು'. ಹೀಗೆ ನಾಮಾತ್ಮಕಶಬ್ದಗಳ ಸಮನ್ವಯದಲ್ಲಿ ಅಧಿಕವಾದ ಪ್ರಯತ್ನವು ಬೇಕಾಗಿರುವುದರಿಂದ ಇವುಗಳನ್ನು ಮೊದಲು ಸಮನ್ವಯ ಮಾಡಿದ್ದಾರೆ.

ಇಲ್ಲಿ ಹೇಳಿದ ವಿವರಣೆಯು ಉಪಲಕ್ಷಣವಾಗಿದ್ದು ಅನುಭಾಷ್ಯದಲ್ಲಿ ಹೇಳಿದಂತೆ

''ತೇಷಾಮನ್ಯಗತತ್ವೇ ತು ನ ಸ್ಯಾತ್ ಸಮ್ಯಕ್ ಸಮನ್ವಯಃ ।
ಇತ್ಯೇವಾಶೇಷಲಿಂಗಾನಾಂ ಬ್ರಹ್ಮಣ್ಯೇವ ಸಮನ್ವಯಮ್ ।
ಆಹ ............'

(ಲಿಂಗಾತ್ಮಕಶಬ್ದಗಳು ವಿಷ್ಣುವನ್ನು ಬಿಟ್ಟು ಬೇರೆಯವರನ್ನು ಹೇಳುತ್ತವಾದರೆ ಸಮನ್ವಯವು ಸರಿಯಾಗಿ ಆಗಲಾರದು. ಆದ್ದರಿಂದಲೇ ಎಲ್ಲಾ ಲಿಂಗಾತ್ಮಕಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿ ಹೇಳುತ್ತಿದ್ದಾರೆ.) ಲಿಂಗಾತ್ಮಕಶಬ್ದಗಳಿಂದ ನಾಮಾತ್ಮಕಶಬ್ದಗಳನ್ನು ಮೊದಲು ಸಮನ್ವಯ ಮಾಡಿದರೆ ಲಿಂಗಾತ್ಮಕಶಬ್ದಗಳು ವಿಷ್ಣುನಿಷ್ಠವಾಗಿವೆ ಎಂದು ಸುಲಭವಾಗಿ ಸಾಧಿಸಬರುವುದರಿಂದ ಲಿಂಗಾತ್ಮಕಶಬ್ದಗಳನ್ನು ಎರಡನೇ ಪಾದದಲ್ಲಿ

ಸಮನ್ವಯ ಮಾಡುತ್ತಿದ್ದಾರೆ ಎಂದು ಅಭಿಪ್ರಾಯ. ಈ ವಿವರಣೆಯಿಂದ ಯೌಗಿಕಪದಗಳೇ ಲಿಂಗಶಬ್ದಗಳು, ರೂಢಪದಗಳೇ ನಾಮಶಬ್ದಗಳು, ಯೋಗರೂಢಪದಗಳೇ ಉಭಯಾತ್ಮಕಶಬ್ದಗಳು ಎಂಬ ಅಂಶವನ್ನು ಸೂಚಿಸಿದಂತಾಗುತ್ತದೆ. ಇದನ್ನು ಚಂದ್ರಿಕಾದಲ್ಲಿ ವಿವರಿಸಿದ್ದಾರೆ.

"ಅತ್ರ" ಎಂಬ ಪದಕ್ಕೆ 'ಈ ಪಾದದಲ್ಲಿ' ಎಂದು ಅರ್ಥ. 'ಈ ಪಾದದಲ್ಲಿ ಸಾಕ್ಷಾತ್ತಾಗಿಯೇ ನಾಮಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ' ಎಂಬ ಅಭಿಪ್ರಾಯದಿಂದ ಈ ವಾಕ್ಯ ಹೊರಟಿದೆ. ವಾಸ್ತವಿಕವಾಗಿ ಮುಂದಿನ ಪಾದದಲ್ಲಿಯೂ ಕೂಡ ನಾಮವನ್ನೇ ಸಮನ್ವಯ ಮಾಡುತ್ತಿದ್ದಾರೆ.

**वाक्यार्थमञ्जरी – अमुख्यत्वेनेति** ।। धर्मधर्मिणोर्धर्मिण एव प्रधानत्वादिति भावः । **ततः** । परिशेषात् । **अन्ये** । मायावादिनः ।। **उत्तराधिकरणेति** ।। उत्तरपादीयाधिकरणेत्यर्थः । एतदुत्तराधिकरणे एतद्वाक्योदाहरणाभावात् । शास्त्राध्यायपादसङ्गतिः शास्त्राध्यायपादेषु अन्तर्भावः । तेन नैकवचनानुपपत्तिः शंक्या । अत्र ब्रह्मणीति शास्त्रे समन्वय इत्यध्याये अन्यत्रप्रसिद्धानामिति पादेऽन्तर्भावः । तत्रापि लोकत इति चतुर्थादन्यत्रति तृतीयान्नामेतिद्वितीयात् भेदः सूचितः । एवमग्रेपि । अत इत्यस्य विवरणं **सङ्गतिसद्भावा**दिति ।

यद्वा अतः प्रथमाधिकरणादित्यर्थः । अत्र विप्रकीर्णनानाशाखास्थवाक्यविचारपराधिकरणेषु नाव्यवहितपूर्वाधिकरणसङ्गतिनियमः । किन्तु येनकेनचित् पूर्वाधिकरणेनापीत्यतोऽत्र जिज्ञासाधिकरणतद्विषयवाक्याभ्यामेवाक्षेपिकीसङ्गतिरुक्ता । प्रत्यधिकरणमव्यवहितपूर्वाधि-करणसङ्गतिरपि चन्द्रिकाभावबोधयोर्व्यक्ता तत्रैवानुसन्धेया ।

'ಅಮುಖ್ಯತ್ವೇನ' ಎಂಬುದರಿಂದ ಧರ್ಮ ಮತ್ತು ಧರ್ಮಿಗಳ ಮಧ್ಯದಲ್ಲಿ ಧರ್ಮಿಯೇ ಪ್ರಧಾನವೆಂದು ಸೂಚಿಸುತ್ತಿದ್ದಾರೆ. 'ತತಃ' ಎಂದರೆ 'ಪರಿಶೇಷಾತ್' ಎಂದು ಭಾವ. 'ಅನ್ಯೇ' ಎಂದರೆ ಮಾಯವಾದಿಗಳು ಎಂದು. 'ಉತ್ತರಾಧಿಕರಣೇ' ಎಂದರೆ ಉತ್ತರಪಾದದ ಅಧಿಕರಣ ಎಂದರ್ಥ. ಏಕೆಂದರೆ ಮುಂದಿನ ಅಧಿಕರಣದಲ್ಲಿ ಈ ವಾಕ್ಯವನ್ನು ಉದಾಹರಿಸಿಲ್ಲ.

'ಶಾಸ್ತ್ರಾಧ್ಯಾಯಪಾದಸಂಗತಿಃ' ಎಂದರೆ ಶಾಸ್ತ್ರ ಅಧ್ಯಾಯ, ಪಾದಗಳಲ್ಲಿ ಅಂತರ್ಭಾವ ಸಂಗತಿ ಎಂದರ್ಥ. ಟೀಕೆಯಲ್ಲಿ ಏಕವಚನ ಕೊಡುವುದಿಲ್ಲವೆಂಬ ಶಂಕೆಗೆ ಅವಕಾಶವಿಲ್ಲ. ಈ ಅಧಿಕರಣದಲ್ಲಿ ಬ್ರಹ್ಮನಲ್ಲಿ ಎಂದು ಹೇಳಿದ್ದರಿಂದ ಶಾಸ್ತ್ರಸಂಗತಿಯು, ಸಮನ್ವಯವೆಂದು ಹೇಳಿದ್ದರಿಂದ ಅಧ್ಯಾಯಸಂಗತಿಯು, ಅನ್ಯತ್ರಪ್ರಸಿದ್ಧಗಳೆಂದು ಹೇಳಿದ್ದರಿಂದ ಪಾದಸಂಗತಿಯು ಹೇಳಿದಂತಾಯಿತು. ಅದರಲ್ಲೂ ಕೂಡ ಲೋಕತಃ ಎಂದು ಹೇಳಿರುವುದರಿಂದ ನಾಲ್ಕನೆಯ ಪಾದದಿಂದ, ಅನ್ಯತ್ರ ಎಂಬುದರಿಂದ ಮೂರನೆಯ ಪಾದದಿಂದ, ನಾಮ ಎಂಬುದರಿಂದ ದ್ವಿತೀಯಪಾದದಿಂದ ಭೇದವನ್ನು ಸೂಚನೆ ಮಾಡಿದ್ದಾರೆ. ಇದೇ ರೀತಿಯಾಗಿ ಮುಂದೆಯೂ ತಿಳಿಯಬೇಕು.

'ಅತಃ' ಶಬ್ದದ ವಿವರಣೆಯೇ ಸಂಗತಿ ಇರುವುದರಿಂದ ಎಂದು. ಅಥವಾ 'ಅತಃ' ಎಂದರೆ ಪ್ರಥಮಾಧಿಕರಣವಾಗಿರುವುದರಿಂದ ಎಂದರ್ಥ. ಈ ಅಧ್ಯಾಯದಲ್ಲಿ ಪ್ರತಿಯೊಂದು ಅಧಿಕರಣದಲ್ಲಿ ಬೇರೆ ಬೇರೆ ಶಾಖೆಗಳಲ್ಲಿರುವ ವಾಕ್ಯಗಳ ವಿಚಾರವನ್ನು ಮಾಡುತ್ತಿರುವುದರಿಂದ ನಿಯಮವಾಗಿ

ಹಿಂದಿನ ಅಧಿಕರಣದಿಂದಲೇ ಮುಂದಿನ ಅಧಿಕರಣಕ್ಕೆ ಸಂಗತಿಯು ಇರುವುದಿಲ್ಲ. ಆದರೆ ಹಿಂದಿನ ಯಾವುದಾದರೊಂದು ಅಧಿಕರಣದಿಂದ ಸಂಗತಿ ಇದ್ದೇ ಇರುತ್ತದೆ. ಆದ್ದರಿಂದಲೇ ಈ ಅಧಿಕರಣದಲ್ಲಿ ಜಿಜ್ಞಾಸಾಧಿಕರಣದ ವಿಷಯವಾಕ್ಯದಿಂದಲೇ ಆಕ್ಷೇಪಿಕೀ ಸಂಗತಿಯನ್ನು ಹೇಳಿದ್ದಾರೆ. ಪ್ರತಿಯೊಂದು ಅಧಿಕರಣಕ್ಕೆ ಅವ್ಯವಹಿತವಾಗಿ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ಚಂದ್ರಿಕಾದಲ್ಲಿ ಮತ್ತು ಭಾವಬೋಧದಲ್ಲಿ ತೋರಿಸಿದ್ದಾರೆ. ಅವುಗಳನ್ನು ಅಲ್ಲಿಯೇ ತಿಳಿಯಬೇಕು.

### ಸ್ಪಷ್ಟಬ್ರಹ್ಮಲಿಂಗಸಮನ್ವಯ ಎಲ್ಲಿ? ಹೇಗೆ?

**भावदीपः – स्पष्टेति ।। स्पष्टत्वं नाम वाक्यान्तरे ब्रह्मधर्मतया निर्णीतत्वं वा जीवादौ स्वारस्येनानुपपद्यमानत्वं वा ज्ञेयम् । उत्तरेति ।। द्वितीयतृतीय-पादस्थेत्यर्थः । 'अन्तर उपपत्तेः' इति द्वितीयपादस्थाधिकरणविषयवाक्ये 'य एषोन्तरक्षणि पुरुषो दृश्यते । एष आत्मेति होवाच । एतदमृतमभयमेतद् ब्रह्म' इत्यत्र अमृतत्वादिलिङ्गानां ब्रह्मणि स्पष्टत्वादित्यर्थः । ''वाक्येषु'' इति बहुवचनं बह्वधिकरणवाक्येषु व्यभिचारप्रदर्शनाय । तच्च विवृतं चन्द्रिकायाम् । एतद् वाक्योक्तिस्तु उदाहरणे समीप एव स्पष्टलिङ्गानां श्रवणादुदाहरणस्योभयसम्मतत्वाद्वा इति । तेन भवतामिवास्माकमपि प्रायिकत्वात् पादव्यवस्थेति कस्यचिच्चोद्यं निरस्तम् ।**

''ಸ್ಪಷ್ಟ'' ಇತ್ಯಾದಿ ಅಂಶದಲ್ಲಿ ಸ್ಪಷ್ಟತೆ ಎಂದರೆ 'ಬೇರೆ ವಾಕ್ಯಗಳಲ್ಲಿ ಈ ಶಬ್ದವು ಬ್ರಹ್ಮನನ್ನೇ ಹೇಳುತ್ತಿದೆ ಎಂದು ನಿರ್ಣಯಿಸಿರುವುದು' ಎಂಬುದಾಗಿ ಅರ್ಥ. ಅಥವಾ, 'ಜೀವಾದಿಗಳಲ್ಲಿ ಸ್ವರಸವಾಗಿ ಈ ಪದವು ಹೊಂದದಿರುವುದು' ಎಂದು ಅರ್ಥ.

''ಉತ್ತರ'' ಎಂಬ ಪದಕ್ಕೆ 'ದ್ವಿತೀಯತೃತೀಯಪಾದಗಳಲ್ಲಿ' ಎಂದು ಅರ್ಥ. 'ಅಂತರ ಉಪಪತ್ತೇಃ' ಎಂಬ ಎರಡನೆಯ ಪಾದದಲ್ಲಿರುವ ಅಧಿಕರಣದ ವಿಷಯವಾಕ್ಯದಲ್ಲಿ 'ಯ ಏಷೋಂತರಕ್ಷಿಣಿ ಪುರುಷೋ ದೃಶ್ಯತೇ । ಏಷ ಆತ್ಮೇತಿ ಹೋವಾಚ । ಏತದಮೃತಮಭಯಮೇತದ್‌ಬ್ರಹ್ಮ' (ಯಾವ ಪರಮಾತ್ಮನು ಜ್ಞಾನಿಗಳಿಗೆ ದಿವ್ಯದೃಷ್ಟಿಯಿಂದ ಗೋಚರನಾಗುವನೋ ಅವನೇ ವಾಮನರೂಪನಾದ ವಿಷ್ಣುವಾಗಿದ್ದಾನೆ. ಅವನು ಸ್ವತಃ ಮುಕ್ತನಾಗಿದ್ದಾನೆ. ಅವನಿಗೆ ಯಾವುದೇ ಭಯವಿಲ್ಲ. ಅವನು ಗುಣಪೂರ್ಣನೂ ಆಗಿದ್ದಾನೆ.) ಎಂಬ ವಾಕ್ಯದಲ್ಲಿ ಅಮೃತತ್ವಾದಿ ಲಿಂಗಗಳು ಬ್ರಹ್ಮನಲ್ಲೇ ಸ್ಪಷ್ಟವಾಗಿರುವುದರಿಂದ ಅಸ್ಪಷ್ಟವಾದುದನ್ನು ಉತ್ತರಪಾದಗಳಲ್ಲಿ ಸಮನ್ವಯ ಮಾಡುತ್ತಿದ್ದಾರೆ ಎಂಬ ಪಕ್ಷವು ಸರಿಯಲ್ಲ' ಎಂದು ಅಭಿಪ್ರಾಯ. ಇಲ್ಲಿ ''ವಾಕ್ಯೇಷು'' ಎಂಬುದಾಗಿ ಬಹುವಚನವನ್ನು ಹೇಳಿದ್ದು ಅನೇಕ ಅಧಿಕರಣಗಳ ವಿಷಯವಾಕ್ಯಗಳಲ್ಲಿ ಈ ರೀತಿಯಾದ ವ್ಯಭಿಚಾರವು ಇದೆ ಎಂಬುದನ್ನು ಸೂಚಿಸಲು. ಇದನ್ನು ಚಂದ್ರಿಕೆಯಲ್ಲಿ ವಿವರಿಸಿದ್ದಾರೆ. ಈ ವಾಕ್ಯವನ್ನು ಹೇಳಿರುವುದು ಏಕೆಂದರೆ 'ಇದರ ಸಮೀಪದಲ್ಲಿಯೇ ಸ್ಪಷ್ಟಲಿಂಗಗಳ ಶ್ರವಣವಿರುವುದರಿಂದ ಅಥವಾ ಈ ಉದಾಹರಣೆಯು ಉಭಯಪಕ್ಷದವರಿಗೂ ಸಮ್ಮತವಾಗಿರುವುದರಿಂದ' ಎಂದು ತಿಳಿಯಬೇಕು.

ಇದರಿಂದಾಗಿ 'ಭವತಾಮಿವಾಸ್ಮಾಕಮಪಿ ಪ್ರಾಯಿಕತ್ವಾತ್ ಪಾದವ್ಯವಸ್ಥಾ' (ನಿಮ್ಮ ಪಕ್ಷದಂತೆ ನಮ್ಮ ಪಕ್ಷದಲ್ಲೂ ಕೂಡ ಪಾದವ್ಯವಸ್ಥೆಯು ಪ್ರಾಯಿಕ (ಅಷ್ಟೊಂದು ಪರಿಪೂರ್ಣವಲ್ಲ)'' ಎಂಬುದಾಗಿ ಯಾರೋ ಒಬ್ಬರು ಹೇಳಿರುವ ಆಶಂಕೆಯನ್ನು ನಿರಾಸಮಾಡಿದಂತೆ ಆಗುತ್ತದೆ.



## ಆನಂದಮಯಾಧಿಕರಣದ ಗುರಿ ಏನು?

**भाष्यम् – ब्रह्मजिज्ञासा कर्तव्येत्युक्तम् । तच्च ब्रह्म 'ब्रह्म पुच्छं प्रतिष्ठा' (तै.२-५-२) इत्यानन्दमयावयवरूपं प्रतीयते । न ह्यवयविनं विना अवयवमात्रस्य ज्ञेयतेत्यत आह –**

**सू - ॐ ।। आनन्दमयोऽभ्यासात् ।। ॐ ।।**

ಜಿಜ್ಞಾಸಾಸೂತ್ರದಲ್ಲಿ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದರು. ಆದರೆ ಅಂತಹ ಬ್ರಹ್ಮನು ತೈತ್ತಿರೀಯೋಪನಿಷತ್ತಿನಲ್ಲಿ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂಬಲ್ಲಿ ಆನಂದಮಯನ ಅವಯವ ಎಂದು ವರ್ಣಿಸಲಾಗಿದೆ. ಅವಯವಿಯೆನಿಸಿದ ಆನಂದಮಯನನ್ನು ಬಿಟ್ಟು ಅವಯವ ಎನಿಸಿದ ಬ್ರಹ್ಮನನ್ನು ಮಾತ್ರ ತಿಳಿಯುವುದು ಸಾಧ್ಯವಿಲ್ಲ. ಈ ಶಂಕೆಯನ್ನು ಪರಿಹಾರಮಾಡಲು ಸೂತ್ರಕಾರರು ಹೇಳುತ್ತಿದ್ದಾರೆ. ''ಓಂ ಆನಂದಮಯೋಽಭ್ಯಾಸಾತ್ ಓಂ' = ಆನಂದಮಯಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ತೈತ್ತಿರೀಯ ಉಪನಿಷತ್ತಿನಲ್ಲಿ ಅನೇಕಬಾರಿ ಬ್ರಹ್ಮಶಬ್ದವು ಕೇಳಿಸುತ್ತಿರುವುದರಿಂದ(१).

---

(१) भाष्यदीपिका – नन्वानन्दमयाधिकरणमारभ्य सर्वेषामधिकरणानामवश्यवक्तव्ये सङ्गतिपञ्चकेऽस्मिन्नधिकरणे लोकतोऽन्यत्रप्रसिद्धानन्दमयशब्दोपलक्षितगुणिवाचिशब्दानामानन्दादिगुणवाचिशब्दानां च ब्रह्मणि समन्वयकरणाद् अस्यास्तु शास्त्रेऽध्याये पादे चान्तर्भावरूपा सङ्गतिः । तथाऽप्यानन्दमयस्य विष्णुत्वसमर्थने का पूर्वसङ्गतिरित्यतोऽव्यवहितपूर्वाधिकरणेनैव सङ्गतिर्वक्तव्येति नियमाभावाद् व्यवहितपूर्वेण जिज्ञासाधिकरणेन तद्विषयेण चास्याऽनन्तर्यलक्षणलक्षितामाक्षेपिकीं सङ्गतिं तावद् दर्शयति – ब्रह्मेति ।। 'उक्तं' जिज्ञासाधिकरण इति शेषः । तच्चेति ।। यज्जिज्ञास्यतया प्रतिज्ञातं ब्रह्म तदेवेत्यर्थः । यद्वा – प्रकृतानुसन्धानार्थश्चशब्दः । इतीत्यनन्तरं 'श्रुतौ' इति शेषः । आनन्दमयावयवरूपमिति ।। आनन्दमयाख्यस्य कस्यचित् पुच्छाख्यावयवभूतं प्रतीयत इत्यर्थः । ननु ब्रह्मणोऽवयवत्वोक्तावपि किमर्थमानन्दमयस्य विष्णुत्वसमर्थनमित्यत आह – न हीति ।। हिशब्दो हेतौ ।। 'अत' इत्यावर्तते । 'तच्च' इत्यादि 'इत्यत आह' इत्यन्तं सङ्गतिप्रयोजनोभयपरतया व्याख्येयम् । न हीत्येतत् तदुपपादकम् ।

योजना तु – यतो 'ब्रह्म पुच्छं प्रतिष्ठा' इति श्रुतौ जिज्ञास्यतयोक्तं ब्रह्म

आनन्दमयाख्यस्य कस्यचिदवयवरूपं 'प्रतीयते' उच्यते यतश्च अन्याङ्गतया जिज्ञास्यत्वेऽपि 'अवयविनम्' आनन्दमयं विना 'अवयवमात्रस्य' अवयवस्यैव केवलस्य ब्रह्मणो न पृथक् 'ज्ञेयता' जिज्ञास्यता सम्भवति । अमुख्यत्वात् । नापि जिज्ञासाया एव त्यागो युज्यते । 'तद् विजिज्ञासस्व' (तै. उ. ३-१.) इति श्रुतिविहितत्वादित्येवं शङ्का प्राप्ता । अतः शङ्कारूपसङ्गतिसद्भावाद् अत्राऽनन्दमयस्य विष्ण्वन्यत्वपक्षे ब्रह्मजिज्ञासाक्षेपाद् विष्णुत्वपक्षे च तत्समाधानाद् एवं च पूर्वपक्षसिद्धान्तयोः फलसद्भावाच्च 'अतो' ब्रह्मजिज्ञासासिद्ध्यर्थम् 'आनन्दमयोऽभ्यासात्' इत्यानन्दमयस्य विष्णुत्वम् 'आह' समर्थयति सूत्रकार इति ।

'तस्माद्वा एतस्माद् विज्ञानमयात् । अन्योऽन्तर आत्माऽऽनन्दमयः । तेनैष पूर्णः । स वा एष पुरुषविध एव । तस्य पुरुषविधताम् । अन्वयं पुरुषविधः । तस्य प्रियमेव शिरः । मोदो दक्षिणः पक्षः । प्रमोद उत्तरः पक्षः । आनन्द आत्मा । ब्रह्म पुच्छं प्रतिष्ठा' (तै.उ. २-५-२) इति तैत्तिरीयवाक्यस्यायमर्थः । 'तस्मात्' आत्मपदोदितात् 'एतस्मात्' जीवशरीरगताद् विज्ञानपूर्णत्वाद् विज्ञानमयशब्दवाच्याद् विष्णोरनन्योऽप्यन्यशब्दोक्तः 'आनन्दमयः' आनन्दपूर्णत्वादानन्दमयशब्दवाच्यः 'आत्मा' नारायणः 'अन्तरः' विज्ञानमयस्यान्तःस्थितः 'तेन' आनन्दमयेन 'एषः' विज्ञानमयशब्दवाच्यो वासुदेवः 'पूर्णः' निश्छिद्रत्वेन पूरितः । वैशब्दः प्रसिद्धौ । 'स एष' आनन्दमयः 'पुरुषविध एव' पुरुषाकार एव । 'तस्य' आनन्दमयस्य शरीरस्थानीयस्य पुरुषाकारताम् 'अनु' अनुसृत्य 'अयं' विज्ञानमयः शरीरस्थानीयः 'पुरुषविधः' तस्मात् प्रादुर्भूतः,

'उत्तरैः पूरिताः पूर्वे निश्छिद्रत्वेन सर्वशः ।
सर्वेऽपि पुरुषाकारा उत्तरात् पूर्वसम्भवः ॥'

इति तैत्तिरीयभाष्योक्तेः ।

'तस्य' आनन्दमयस्य विष्णोरवयवभूतं 'परेयं प्रियनामकम्' इति भाष्योक्तेः । परैरुत्तमैः देवैः प्राप्यत्वात्प्रियशब्दवाच्यं यत् सुखं तत् तस्य 'शिरः' तदेवाऽनन्दमयाख्यस्य जीवशरीरस्य परैरन्यैरुपकर्तृभिः प्राप्यत्वात् प्रियनामकमुपकारजन्यवैषयिकसुखाख्यं यच्छिरः तत्स्थं च । एवमानन्दमयाख्यस्य विष्णोः ये दक्षिणोत्तरबाहुमध्यदेहाः मोदप्रमोदकारित्वान न्दत्वनिमित्तैर्मोदप्रमोदानन्दनामानस्ते आनन्दमयाख्यजीवशरीरस्य दक्षिणोत्तरपक्षात्मनामानो दक्षिणसव्यबाहुमध्यदेहाः । 'मोदो' भोगनिमित्तकः 'प्रमोदः' 'तद्विशेषोत्थः' इत्यैतरेय-भाष्योक्तेः ।

'मुन्नाम विषयोत्थं यत् प्रकृष्टविषयात् प्रमुत् ।
सुखं स्वरूपभूतं यदानन्द इति कथ्यते ॥'

इति बृहद्भाष्योक्तेश्च । अपकृष्टविषयोद्भूतत्वप्रकृष्टविषयोत्थत्वजीवस्वरूपानन्दत्व-निमित्तैर्मोदप्रमोदानन्दनामानस्तेषु स्थिताश्च ।

एवमानन्दमयाख्यस्य विष्णोः 'पुच्छं' प्रतिष्ठति गच्छति लोक आभ्यामिति व्युत्पत्त्या प्रतिष्ठापदोक्तो यः पादाख्योऽवयवः तद् ब्रह्म 'ब्रह्मसृष्ट्या तु बृंहयेत्' इति तैत्तिरीयभाष्योक्तरीत्या सृष्ट्यादिक्रियया विश्वगुणवृद्धिकरत्वाद् ब्रह्मशब्दवाच्यः स एवाऽनन्दमयाख्यजीवशरीरस्य यत् पुच्छं यः पादाख्योऽवयवः तत्स्थिते ब्रह्माख्ये प्रधानवायौ स्थितः । अनेन कोशावयवस्य ब्रह्मशब्दवाच्यत्वं ब्रह्मशब्दवाच्यप्रधान-वाय्वधिष्ठानत्वनिमित्तं, प्रधानवायोर्ब्रह्मशब्दवाच्यत्वं तु परब्रह्माधिष्ठानत्वादित्युक्तं भवति । अनेनाऽनन्दमयादिशब्दवाच्यस्य विष्णोरवयवभूता ये प्रियादयस्ते विष्णवभिन्नाः ये चाऽनन्दमयादिजीवकोशावयवाः प्रियादयस्ते प्रतिशरीरं भिन्ना इति द्विविधाः प्रियादय इत्युक्तं भवति ।

यथोक्तं चन्द्रिकायाम् – ये जीवाभिमन्यमानानन्दमयादिकोशावयवाः प्रियादयस्ते प्रतिशरीरं भिन्नाः, न ते आनन्दमयाद्याख्यस्य विष्णोरवयवाः । ये च भगवतोऽवयवाः प्रियादयो न ते प्रतिशरीरं भिन्नाः किन्त्वभिन्ना इति जीवस्वरूपस्याऽनन्दस्य हृदयाख्यमध्यगतत्वात् कोशमध्यदेहत्वं स्वरूपदेहस्य जडावयवत्वं चामुख्यं युज्यते । यद्यपि भाष्ये 'शिरो नारायणः' इत्युदाहरिष्यमाणवचनपर्यालोचनयाऽऽनन्दमयाख्यो नारायणः पुनर्नारायणादिरूपेण पञ्चधा भिन्नः शिरःप्रभृत्यवयवात्मना तिष्ठतीति प्रतीयते । तैत्तिरीयभाष्ये तु – प्रियादीनामानन्दमयावयवत्वम् । तथाऽपि प्रियादिसुखविशेषदेह-स्थितब्रह्माख्यप्रधानवायुगतानां नारायणादिरूपाणामेवाऽनन्दमयाख्यविष्णवयवत्वसम्भवात् तेषामेव–

'परेयं प्रियनामकम् ।
मोदप्रमोदनामानौ मोदनाच्च प्रमोदनात् ।
देहस्थवायुसंस्थं च ब्रह्म सृष्ट्या तु बृंहयेत् ।।'

इति तैत्तिरीयभाष्योक्तरीत्या प्रियादिशब्दवाच्यत्वस्यापि सम्भवान्न विरोधः ।

तत्त्वप्रदीपे तु – प्रियशिरस्त्वादिनये 'श्रवणोत्थं प्रियं, दर्शनोत्थो मोदः, भोगोत्थः प्रमोदः' इति पदत्रयस्यार्थान्तरमुक्तम् । तथा तत्रैव 'अभावं बादरिः' इति सूत्रेण 'प्रियाप्रिये' (छां.८-१२-१) इति श्रुतिस्थप्रियशब्देन 'परेयं प्रियनामकम्' इति तैत्तिरीय-छान्दोग्यभाष्ययोरुक्तत्वात् परप्राप्यसुखसामान्यवाचकेन प्राकृतं सुखं ग्राह्यमिति सूचितम्' इति चोक्तम् । इदं त्ववधेयम् – परिदृश्यमानमन्नमयं शरीरम् । तदन्तः प्राणमयो देहः । तदन्तर्मनोमयो देहः । तदन्तर्विज्ञानमयो देहः । तदन्तरानन्दमयोऽस्ति । एतेषु पञ्चसु

ಪ್ರತಿಪದಾರ್ಥ– ಈ ಅಧಿಕರಣದಲ್ಲಿ ಆನಂದಮಯನು ವಿಷ್ಣುವೇ ಆಗಿದ್ದಾನೆಂದು ಸಮರ್ಥಿಸಲಾಗಿದೆ. ಈ ಸಮರ್ಥನೆಗೆ ಹಿಂದಿನ ಅಧಿಕರಣದಿಂದ ಏನು ಸಂಗತಿಯೆಂದು ತಿಳಿಯುವುದಿಲ್ಲ. ಆದ್ದರಿಂದ ಅವ್ಯವಹಿತವಾದ ಪೂರ್ವಾಧಿಕರಣದಿಂದಲೇ ಸಂಗತಿಯನ್ನು ಹೇಳಬೇಕೆಂಬ ನಿಯಮವಿಲ್ಲದ ಕಾರಣ ವ್ಯವಹಿತವಾದ ಜಿಜ್ಞಾಸಾಧಿಕರಣದಿಂದ ಮತ್ತು ಅದರ ವಿಷಯದಿಂದ ಆನಂತರ್ಯಸಂಗತಿಯೆನಿಸಿದ ಆಕ್ಷೇಪಿಕೀಸಂಗತಿಯನ್ನು ತೋರಿಸುತ್ತಿದ್ದಾರೆ.

ಬ್ರಹ್ಮಜಿಜ್ಞಾಸಾ = ಬ್ರಹ್ಮವಿಷಯಕವಾದ ಜಿಜ್ಞಾಸೆಯು, ಕರ್ತವ್ಯಾ = ಮಾಡಲ್ಪಡಬೇಕು. ಇತಿ = ಹೀಗೆ, ಉಕ್ತಮ್ = ಜಿಜ್ಞಾಸಾಧಿಕರಣದಲ್ಲಿ ಹೇಳಲಾಗಿತ್ತು. ತಚ್ಚ ಬ್ರಹ್ಮ = ಆ ಜಿಜ್ಞಾಸ್ಯನಾದ ಬ್ರಹ್ಮನಾದರೋ 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಇತಿ = ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬ ತೈತ್ತಿರೀಯೋಪನಿಷತ್ತಿನ ವಾಕ್ಯದಲ್ಲಿ , ಆನಂದಮಯಅವಯವರೂಪಂ = ಆನಂದಮಯನ ಅವಯವವೆಂದು, ಪ್ರತೀಯತೇ = ಕಾಣಿಸುತ್ತದೆ.

ಅವಯವಿನಂ ವಿನಾ = ಪೂರ್ಣದೇಹವನ್ನು ಬಿಟ್ಟು, ಅವಯವಮಾತ್ರಸ್ಯ = ದೇಹದ ಒಂದು ಏಕ ದೇಶವನ್ನು ಮಾತ್ರ, ಜ್ಞೇಯತಾ = ತಿಳಿಯುವುದು, ನಹಿ= ಸಾಧ್ಯವಿಲ್ಲವಷ್ಟೇ. ಇತ್ಯತಃ = ಈ ಶಂಕೆಯು ಬರುತ್ತಿರಲು, ಸೂತ್ರಕಾರರು ಹೇಳುತ್ತಿದ್ದಾರೆ. 'ಓಂ ಆನಂದಮಯೋಽಭ್ಯಾಸಾತ್ ಓಂ' ಆನಂದಮಯಃ = ಆನಂದಮಯಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆ, ಅಭ್ಯಾಸಾತ್ = ತೈತ್ತಿರೀಯೋಪನಿಷತ್ತಿನಲ್ಲಿ ಅನೇಕಬಾರಿ ಬ್ರಹ್ಮಶಬ್ದವು ಕೇಳಿಸುತ್ತಿರುವುದರಿಂದ.

**ಐದು ಬಗೆಯ ಸಂಗತಿಗಳೂ ಇರುತ್ತವೆ.**

**तत्वप्रकाशिका – नन्वत्रान्यत्रप्रसिद्धानन्दमयनाम्नो ब्रह्मणि समन्वय-समर्थनादस्तु शास्त्राध्यायपादसङ्गतिः । तथाप्यानन्दमयस्य विष्णुत्वसमर्थने का पूर्वसङ्गतिः? इत्यतः श्रुत्यधिकरणसङ्गती दर्शयति – ब्रह्मेति ।।**

ಈ ಅಧಿಕರಣದಲ್ಲಿ ಅನ್ಯತ್ರಪ್ರಸಿದ್ಧವಾದ 'ಆನಂದಮಯ' ಎಂಬ ನಾಮಸಮನ್ವಯವನ್ನು ಬ್ರಹ್ಮನಲ್ಲಿ ಸಮರ್ಥನೆ ಮಾಡುತ್ತಿರುವುದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ. ಆದರೆ 'ಆನಂದಮಯನು ವಿಷ್ಣುವೇ' ಎಂದು ಸಮರ್ಥನೆ ಮಾಡುವುದಕ್ಕೆ ಹಿಂದಿನ ಸಂಗತಿ ಏನು? ಎಂದರೆ ಶ್ರುತಿಸಂಗತಿ ಮತ್ತು ಅಧಿಕರಣಸಂಗತಿಗಳನ್ನು ''ಬ್ರಹ್ಮ'' ಎಂಬುದರಿಂದ ಹೇಳುತ್ತಾರೆ.

---

देहाख्यकोशेषु तत्तच्छब्दवाच्यानि पुरुषाकाराण्यनिरुद्धप्रद्युम्नसङ्कर्षणवासुदेवनारायणरूपाणि देहदेहिभावेन वर्तन्त इति ।

## ಶ್ರುತಿಯಲ್ಲಿ ಬ್ರಹ್ಮನ ವರ್ಣನೆ

**तत्वप्रकाशिका – 'अथातो ब्रह्मजिज्ञासा' इति यस्य ब्रह्मणो जिज्ञासा कर्तव्यतयोक्ता तच्च ब्रह्म तैत्तिरीयश्रुतावानन्दमयस्य पुच्छाख्यावयरूपं प्रतीयते । 'तस्माद्वा एतस्माद् विज्ञानमयात् अन्योऽन्तर आत्मानन्दमयः, तेनैष पूर्णः, स वा एष पुरुषविध एव, तस्य पुरुषविधताम्, अन्वयं पुरुषविधः, तस्य प्रियमेव शिरः, मोदो दक्षिणः पक्षः, प्रमोद उत्तरः पक्षः, आनन्द आत्मा, ब्रह्म पुच्छं प्रतिष्ठा' इति । अतः सङ्गतिसद्भावादानन्दमयस्य ब्रह्मत्वमत्रसमर्थ्यत इति भावः ।**

'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ'' ಎಂದು ಯಾವ ಬ್ರಹ್ಮನ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಲಾಗಿತ್ತೋ ''ತಸ್ಮಾದ್ ವಾ ಏತಸ್ಮಾದ್ ವಿಜ್ಞಾನಮಯಾತ್ ಅನ್ಯೋಽಂತರ ಆತ್ಮಾನಂದಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮ ಪುಚ್ಛಂ ಪ್ರತಿಷ್ಠಾ ॥'' ಎಂದು ತೈತ್ತಿರೀಯ ಶಾಖೆಯ ಶ್ರುತಿಖಂಡದಲ್ಲಿ ಆನಂದಮಯನ ಪುಚ್ಛವೆಂಬ ಅವಯವರೂಪವಾಗಿ (ಬಾಲವಾಗಿ) ಹೇಳಲ್ಪಟ್ಟಿದ್ದಾನೆ. ಆದ್ದರಿಂದ ಸಂಗತಿ ಇರುವುದರಿಂದ ಆನಂದಮಯನಿಗೆ ಬ್ರಹ್ಮತ್ವವನ್ನು ಇಲ್ಲಿ ಸಮರ್ಥಿಸುತ್ತಿದ್ದಾರೆ' ಎಂದು ಭಾವ.

## ಶ್ರುತ್ಯರ್ಥ

**तत्वप्रकाशिका – तेन आनन्दमयेनैष विज्ञानमयो निश्छिद्रतया पूर्णः स एष आनन्दमयः पुरुषाकार एव । तस्य आनन्दमयस्य पुरुषाकारतानुसारेण अयं विज्ञानमयः पुरुषाकारस्तस्मादुद्भूतः । उपकारजं प्रियम् । प्रकृष्टाप्रकृष्टाविषयोत्थौ मोदप्रमोदौ । स्वरूपभूत आनन्दः । यद्वा श्रवणोत्थं प्रियम् । दर्शनोत्थो मोदः । भोगोत्थः प्रमोदः । स्वरूपभूत आनन्दः । तत्तत्प्रवर्तकतया च तत्तद्व्यपदेश इति ।**

ತೇನಾನಂದಮಯೇನ = ಆನಂದಮಯನಿಂದ, ಏಷಃ ವಿಜ್ಞಾನಮಯಃ = ಈ ವಿಜ್ಞಾನಮಯನು, ನಿಶ್ಛಿದ್ರತಯಾ ಪೂರ್ಣಃ = ನಿಶ್ಛಿದ್ರತಯಾ ಪೂರ್ಣನು; ಸ ಏಷಃ = ಆ ಆನಂದಮಯನು ಪುರುಷಾಕಾರನೇ ಆಗಿದ್ದಾನೆ. ಆ ಆನಂದಮಯನ ಪುರುಷಾಕಾರದ ಅನುಸಾರಿಯಾಗಿ ಅವನಿಂದ ಹುಟ್ಟಿದ ಈ ವಿಜ್ಞಾನಮಯನು ಪುರುಷಾಕಾರನೇ ಆಗಿದ್ದಾನೆ. ಪ್ರಿಯಂ = ಉಪಕಾರದಿಂದ ಹುಟ್ಟಿದ ಸಂತೋಷ; ಮೋದಃ = ಹತ್ತಿರದಲ್ಲಿರುವ ವಿಷಯಗಳಿಂದ ಹುಟ್ಟಿದ ಸಂತೋಷ, ಮೋದಃ =

ನೋಡುವುದರಿಂದ ಜನ್ಯವಾದ ಸುಖ, ಪ್ರಮೋದ = ಭೋಗದಿಂದ ಜನ್ಯವಾದ ಸುಖ, ಆನಂದ = ಸ್ವರೂಪಭೂತವಾದ ಸುಖ. ಆ ಸುಖಗಳನ್ನು ಪ್ರವರ್ತನೆ ಮಾಡುತ್ತಾನಾದ್ದರಿಂದ ಭಗವಂತನು ಅವುಗಳ ಹೆಸರಿನಿಂದ ಕರೆಯಲ್ಪಡುತ್ತಾನೆ.

## ಸಂಗತಿ ಮತ್ತು ಸಮನ್ವಯ

**भावदीपः – सङ्गतिरिति ।। शास्त्राध्यायपादेष्वन्तर्भाव इत्यर्थः । तदुपपादनम् 'अन्यत्रप्रसिद्धेत्यादि' । तत्र 'ब्रह्मणि' इत्युक्त्या शास्त्रे 'समन्वय' इत्युक्त्या अध्याये 'अन्यत्र' इत्युक्त्या, पादे 'नाम्न' इत्युक्त्या प्रथमपादेन्तर्भाव उपपादितः ।**

**समन्वयो नाम – उपक्रमाद्यन्यतमप्रमाणकशक्तितात्पर्याभ्यामभिधानं वा; तादृगभिधानप्रयोजकोपक्रमाद्यन्यतमप्रमाणं वा । तस्य ब्रह्मविषये समर्थनात् विषयवाक्ये सद्भावप्रतिपादनादित्यर्थः । एवमग्रेपि प्रतिनयं बोध्यम् ।**

''ಸಂಗತಿಃ'' ಎಂಬ ಅಂಶದಿಂದ 'ಶಾಸ್ತ್ರ ಅಧ್ಯಾಯ ಪಾದಗಳಲ್ಲಿ ಅಂತರ್ಭಾವರೂಪವಾದ ಸಂಗತಿ' ಎಂಬ ಅರ್ಥವನ್ನು ತಿಳಿಸುತ್ತಿದ್ದಾರೆ. ಈ ಸಂಗತಿಯನ್ನೇ 'ಅನ್ಯತ್ರಪ್ರಸಿದ್ಧ' ಇತ್ಯಾದಿವಾಕ್ಯದಿಂದ ವಿವರಿಸುತ್ತಿದ್ದಾರೆ. ಆ ವಾಕ್ಯದಲ್ಲಿ 'ಬ್ರಹ್ಮಣಿ' ಎಂಬ ಶಬ್ದದಿಂದ ಶಾಸ್ತ್ರಾಂತರ್ಭಾವವನ್ನು ಹೇಳುತ್ತಿದ್ದಾರೆ. 'ಸಮನ್ವಯ' ಎಂಬ ಪದದಿಂದ ಅಧ್ಯಾಯಾಂತರ್ಭಾವವನ್ನು, 'ಅನ್ಯತ್ರ' ಎಂಬ ಪದದಿಂದ ಪಾದಾಂತರ್ಭಾವವನ್ನು, 'ನಾಮ್ನಃ' ಎಂಬ ಪದದಿಂದ ಪ್ರಥಮಪಾದದಲ್ಲಿ ಅಂತರ್ಭಾವವನ್ನು ಉಪಪಾದನೆ ಮಾಡಿದ್ದಾರೆ.

ಇಲ್ಲಿ 'ಸಮನ್ವಯ' ಎಂದರೆ 'ಉಪಕ್ರಮಾದಿಗಳಲ್ಲಿ ಯಾವುದಾದರೂ ಒಂದು ಪ್ರಮಾಣದಿಂದ ಕೂಡಿಕೊಂಡ ಶಕ್ತಿ ಮತ್ತು ತಾತ್ಪರ್ಯಗಳಿಂದ ಅರ್ಥವನ್ನು ತಿಳಿಸುವುದು' ಎಂದರ್ಥ. ಅಥವಾ 'ಶಕ್ತಿ ಮತ್ತು ತಾತ್ಪರ್ಯಗಳಿಂದ ಅರ್ಥವನ್ನು ತಿಳಿಸಲು ಪ್ರಯೋಜಕವಾದ ಉಪಕ್ರಮಾದಿಗಳಲ್ಲಿ ಯಾವುದಾದರೊಂದು ಪ್ರಮಾಣ' ಎಂದು ಅರ್ಥ. ''ಈ ಸಮನ್ವಯಕ್ಕೆ ಬ್ರಹ್ಮನ ವಿಷಯದಲ್ಲಿ ಸಮರ್ಥನೆ ಮಾಡುತ್ತಿರುವುದರಿಂದ ಅಂದರೆ 'ವಿಷಯವಾಕ್ಯವಿದೆ ಎಂದು ಪ್ರತಿಪಾದನೆ ಮಾಡುತ್ತಿರುವುದರಿಂದ' ಎಂಬುದಾಗಿ ಈ ವಾಕ್ಯಕ್ಕೆ ಅರ್ಥವನ್ನು ಗ್ರಹಿಸಬೇಕು. ಇದೇ ರೀತಿಯಾಗಿ ಪ್ರತಿಯೊಂದು ಅಧಿಕರಣದಲ್ಲೂ ಸಂಗತಿವಾಕ್ಯಕ್ಕೆ ಅರ್ಥವನ್ನು ತಿಳಿಯಬೇಕು.

## ಆನಂದಮಯಶಬ್ದವು ನಾಮಾತ್ಮಕವೋ, ಲಿಂಗಾತ್ಮಕವೋ?

**भावदीपः – 'आनन्दमयनाम हि' इत्यनुभाष्योक्तेः 'नाम' इत्युक्तम् । तत्वप्रदीपे तु 'उत्तराधिकरणेन्तस्थत्वमिवैतदपि लिङ्गम्' इत्युक्तम् । एतदन्नमयादिनाम्नामुपलक्षणम् । आनन्दमयस्य मुखत उक्तिः सङ्गतिसूचनायेत्यग्रे व्यक्तम् । तस्यान्यत्रप्रसिद्धिस्तु 'अन्नमय प्राणमय मनोमय विज्ञानमय आनन्दमया मे**

शुद्ध्यन्ताम्' इति अब्रह्मणि प्रयोगाद्वा निर्बाधरूढ्या जीवादौ प्रसिद्धब्रह्मपद-साहित्याद्वा विकारार्थकमयट्शब्दोपेतत्वाद्वा इति ज्ञेयम् ।

**का पूर्वेति** ।। एतेन सङ्गतिशङ्कोत्थापनायेति प्रागुक्तं विवृतम् । **श्रुतीति** ।। पूर्वेति योज्यम् अत्रेत्यनुषङ्गः । **यस्येति** ।। भाष्ये यद् ब्रह्मेति योज्यम् इति भावः ।

ಅನುಭಾಷ್ಯದಲ್ಲಿ 'ಆನಂದಮಯ ನಾಮ ಹಿ' ಎಂಬುದಾಗಿ ಹೇಳಿರುವುದರಿಂದ 'ನಾಮ' ಎಂಬ ಅಂಶವನ್ನು ಇಲ್ಲಿ ಬಳಸಿದ್ದಾರೆ. ಆದರೆ ತತ್ವಪ್ರದೀಪದಲ್ಲಿ 'ಮುಂದಿನ ಅಧಿಕರಣದಲ್ಲಿರುವ ಅಂತಃಸ್ಥತ್ವದಂತೆ ಇದೂ ಕೂಡ ಲಿಂಗ' ಎಂಬುದಾಗಿ ವಿವರಿಸಲಾಗಿದೆ. ಈ ಆನಂದಮಯ ಎಂಬ ನಾಮವು ಅನ್ನಮಯಾದಿ ನಾಮಶಬ್ದಗಳಿಗೆ ಉಪಲಕ್ಷಣವಾಗಿದೆ. 'ಇವುಗಳಲ್ಲಿ ಆನಂದಮಯಶಬ್ದವನ್ನು ಸ್ಪಷ್ಟವಾಗಿ ಹೇಳಿರುವುದು ಸಂಗತಿಯನ್ನು ಸೂಚಿಸುವುದಕ್ಕಾಗಿ' ಎಂದು ಮುಂದೆ ಸ್ಪಷ್ಟಪಡಿಸಲಾಗಿದೆ. ಈ ಶಬ್ದವು 'ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯಾ ಮೇ ಶುದ್ಧ್ಯಂತಾಮ್' ಎಂಬುದಾಗಿ ವಿರಜಾಮಂತ್ರದಲ್ಲಿ ಬ್ರಹ್ಮನನ್ನು ಬಿಟ್ಟು ಬೇರೆ ಕಡೆ ಪ್ರಯೋಗಮಾಡಿರುವುದರಿಂದ ಅನ್ಯತ್ರಪ್ರಸಿದ್ಧ-ಶಬ್ದವಾಗುತ್ತದೆ. ಅಥವಾ ಜೀವಾದಿಗಳಲ್ಲಿ ಯಾವುದೇ ಬಾಧವಿಲ್ಲದೆ ರೂಢಿಯಿಂದ ಪ್ರಸಿದ್ಧವಾದ ಬ್ರಹ್ಮಪದದ ಸಾಹಚರ್ಯ ಇರುವುದರಿಂದ ಇದು ಅನ್ಯತ್ರಪ್ರಸಿದ್ಧಶಬ್ದವಾಗಬಹುದು. ಅಥವಾ, ವಿಕಾರ ಎಂಬ ಅರ್ಥವನ್ನು ತಿಳಿಸುವ ಮಯಟ್ ಎಂಬ ಪ್ರತ್ಯಯವನ್ನು ಈ ಪದದಲ್ಲಿ ಬಳಸಿರುವುದರಿಂದ ವಿಕಾರವುಳ್ಳ ಜೀವಾದಿಗಳನ್ನು ಈ ಶಬ್ದ ಹೇಳುತ್ತಿದೆ ಎಂಬುದಾಗಿ ಇದು ಅನ್ಯತ್ರಪ್ರಸಿದ್ಧಶಬ್ದವಾಗಬಹುದು'' ಎಂದು ತಿಳಿಯಬೇಕು.

''ಕಾ ಪೂರ್ವಸಂಗತಿಃ'' ಎಂಬ ವಾಕ್ಯದಿಂದ 'ಸಂಗತಿಶಂಕೋತ್ಥಾಪನಾಯ' ಎಂಬುದಾಗಿ ಹಿಂದೆ ಹೇಳಿದ್ದನ್ನು ವಿವರಿಸಿದ್ದಾರೆ. ''ಶ್ರುತಿ'' ಇತ್ಯಾದಿ ವಾಕ್ಯದಲ್ಲಿ 'ಪೂರ್ವ' ಎಂಬ ಪದವನ್ನು ಸೇರಿಸಿಕೊಳ್ಳಬೇಕು. ಸಾಂದರ್ಭಿಕವಾಗಿ 'ಅತ್ರ' ಎಂಬ ಪದವನ್ನೂ ಇಟ್ಟುಕೊಳ್ಳಬೇಕು. ''ಯಸ್ಯ'' ಎಂಬ ಪದದಿಂದ ಭಾಷ್ಯದಲ್ಲಿ 'ಯತ್ ಬ್ರಹ್ಮ' ಎಂಬುದಾಗಿ ಇಟ್ಟುಕೊಳ್ಳಬೇಕೆಂದು ಅಭಿಪ್ರಾಯವನ್ನು ತೋರಿಸಿದ್ದಾರೆ.

### ಕಾ ಪೂರ್ವಸಂಗತಿಃ?

भावदीपः – **तैत्तिरीयेति** ।। 'ब्रह्म पुच्छं प्रतिष्ठा' इति वक्ष्यमाणेति शब्दस्येति तैत्तिरीयश्रुताविति पूर्वेणान्वयः । एतेन भाष्ये 'इति'शब्दानन्तरं 'तैत्तिरीयश्रुतौ' इति शेष इति । 'इत्यतः' इत्यत्र इति सङ्गतिसम्भवादिति सङ्गत्यर्थोऽतःशब्द इति सूचितम् । 'न ह्यवयविनं विना' इत्यादिवाक्यं तु फलोपपादकतया करिष्यमाणव्याख्यानदिशा सङ्गत्युपपादकमिति व्यक्तमिति भावः । 'अतः' इत्यनुवादेन सङ्गतिसम्भवादिति व्याख्यानम् । पूर्वोक्तब्रह्मजिज्ञासा न युक्ता ।

जिज्ञास्यत्वेनोक्तब्रह्मणोऽन्यावयवत्वेन श्रवणात्, अवयविनं विना अवयव-जिज्ञासामात्रस्यापुमर्थत्वेनायोगात् इति पूर्वाक्षेपरूपसङ्गतिसम्भवादित्यर्थः ।

एतेन 'तद्विजिज्ञासस्व' इति श्रुत्युक्तजिज्ञासा न युक्ता । जिज्ञास्यत्वेन भृगुवल्ल्युक्तब्रह्मणो ब्रह्मवल्ल्यां पूर्वत्रान्यावयवोक्तेरिति श्रुतिसङ्गतिरप्युक्ता भवति । 'अथातो ब्रह्मजिज्ञासा' इति टीकायां 'तद् विजिज्ञासस्व तद् ब्रह्म' इति श्रुतेरप्युपलक्षणात् । अत एव भाष्ये श्रुतिसूत्रसाधारण्येन ब्रह्मजिज्ञासा कर्तव्येत्युक्तमित्येवानुवादः ।

''विप्रकीर्णनानाशाखास्थवाक्यनिर्णायकेष्वधिकरणेषु वाचः क्रमवृत्तित्वेन क्रमे सिद्धे येन केनचित् पूर्वेणाक्षेपादिरूपैव सङ्गतिरपेक्षिता । तावतैव चिन्तायाः साफल्यसिद्धेर्न त्वव्यवहितेनैव पूर्वेणेति निर्बन्ध इति जिज्ञासाधिकरणतद्विषय-वाक्याभ्यां सङ्गतिरुक्ता'' इत्युक्तं चन्द्रिकायाम् । व्यक्ता च तत्रैव 'अव्यवहितपूर्वेणापि सङ्गतिः प्रत्यधिकरणम्' इति; नेहास्माभिरुच्यते ।

''ತೈತ್ತಿರೀಯ'' ಇತ್ಯಾದಿ ವಾಕ್ಯದಲ್ಲಿ ''ಬ್ರಹ್ಮಪುಚ್ಛಂ ಪ್ರತಿಷ್ಠಾ ಇತಿ'' ಎಂಬಲ್ಲಿ ಹೇಳಲಿರುವ ಇತಿ ಶಬ್ದದಿಂದ 'ಇತಿ ತೈತ್ತಿರೀಯಶ್ರುತೌ' ಎಂಬುದಾಗಿ ಹಿಂದಿನ ಭಾಗದಿಂದ ಅನ್ವಯವನ್ನು ಇಟ್ಟುಕೊಳ್ಳಬೇಕು. ಇದರಿಂದ ಭಾಷ್ಯದಲ್ಲಿ 'ಇತಿ'ಶಬ್ದದ ಅನಂತರ 'ತೈತ್ತಿರೀಯಶ್ರುತೌ ಇತಿ ಶೇಷಃ' ಎಂಬುದಾಗಿ ಮತ್ತು 'ಇತ್ಯತಃ' ಎಂಬಲ್ಲಿ 'ಹೀಗೆ ಸಂಗತಿಯು ಹೊಂದುವುದರಿಂದ' ಎಂಬ ಅರ್ಥ ಬರುವಂತೆ ಸಂಗತಿಯನ್ನು ತಿಳಿಸಲು ಅತಃಶಬ್ದವನ್ನು ಬಳಸಿದ್ದಾರೆ ಎಂಬುದನ್ನು ಸೂಚಿಸಿದ್ದಾರೆ.

''ನ ಹಿ ಅವಯವಿನಂ ವಿನಾ'' ಇತ್ಯಾದಿವಾಕ್ಯವು ಫಲವನ್ನು ತಿಳಿಸುವ ಮೂಲಕ ಮುಂದೆ ವ್ಯಾಖ್ಯಾನವನ್ನು ಮಾಡುವಂತೆ ಸಂಗತಿಯನ್ನು ಉಪಪಾದನೆ ಮಾಡುತ್ತದೆ ಎಂಬುದು ಸ್ಪಷ್ಟವಾಗಿದೆ – ಎಂಬ ಅಭಿಪ್ರಾಯವನ್ನು ಇಟ್ಟುಕೊಳ್ಳಬೇಕು. ಇಲ್ಲಿ 'ಅತಃ' ಎಂಬ ಶಬ್ದವನ್ನು ಅನುವಾದ ಮಾಡಿ 'ಸಂಗತಿಸಂಭವಾತ್' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ.

''ಹಿಂದೆ ಹೇಳಿದ ಬ್ರಹ್ಮಜಿಜ್ಞಾಸೆಯು ಯೋಗ್ಯವಾದುದಲ್ಲ. ಏಕೆಂದರೆ ಜಿಜ್ಞಾಸ್ಯನನ್ನಾಗಿ ಹೇಳಿದ ಬ್ರಹ್ಮನು ಇನ್ನೊಬ್ಬರ ಅವಯವವಾಗಿ ಶ್ರುತಿಯಲ್ಲಿ ಶ್ರುತನಾಗಿದ್ದಾನೆ. ಅವಯವಿಯನ್ನು ಬಿಟ್ಟು ಕೇವಲ ಅವಯವವನ್ನು ಜಿಜ್ಞಾಸೆ ಮಾಡುವುದು ಪುರುಷಾರ್ಥವಾಗಿ ಹೊಂದುವುದಿಲ್ಲ'' ಎಂಬ ರೀತಿಯಲ್ಲಿ ಪೂರ್ವವನ್ನು ಆಕ್ಷೇಪ ಮಾಡುವ ಮೂಲಕ ಇಲ್ಲಿ ಸಂಗತಿಯನ್ನು ಹೊಂದಿಸಬಹುದು ಎಂದು ಅಭಿಪ್ರಾಯ. ಹೀಗೆ ವಿವರಣೆ ಮಾಡಿರುವುದರಿಂದ 'ತದ್ ವಿಜಿಜ್ಞಾಸಸ್ವ' ಎಂಬಲ್ಲಿ ಏನು ಬ್ರಹ್ಮಜಿಜ್ಞಾಸೆಯನ್ನು ಹೇಳಿದ್ದಾರೋ ಅದು ಯುಕ್ತವಲ್ಲ. ಜಿಜ್ಞಾಸ್ಯನನ್ನಾಗಿ ಭೃಗುವಲ್ಲಿಯಲ್ಲಿ ಹೇಳಿದ ಬ್ರಹ್ಮನಿಗೆ ಅದರ ಹಿಂದಿನ ಬ್ರಹ್ಮವಲ್ಲಿಯಲ್ಲಿ ಅನ್ಯ

ಅವಯವವತ್ವವನ್ನು ಹೇಳಿರುವುದರಿಂದ ಇವೆರಡೂ ಹೊಂದಾಣಿಕೆಯಾಗಲಾರದು ಎಂಬುದಾಗಿ ಶ್ರುತಿಸಂಗತಿಯನ್ನೂ ತೋರಿಸಿದಂತೆ ಆಯಿತು. ಟೀಕಾದಲ್ಲಿರುವ 'ಅಥಾತೋ ಬ್ರಹ್ಮಜಿಜ್ಞಾಸಾ ಇತಿ' ಎಂಬ ಅಂಶವು 'ತದ್ ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬ ಶ್ರುತಿಗೂ ಕೂಡ ಉಪಲಕ್ಷಣವಾಗಿದೆ. ಆದ್ದರಿಂದಲೇ ಭಾಷ್ಯದಲ್ಲಿ ಶ್ರುತಿ ಮತ್ತು ಸೂತ್ರಕ್ಕೆ ಸಮಾನವಾದ ರೀತಿಯಲ್ಲಿ 'ಬ್ರಹ್ಮಜಿಜ್ಞಾಸಾ ಕರ್ತವ್ಯಾ ಇತ್ಯುಕ್ತಮ್' ಎಂಬುದಾಗಿಯೇ ಅನುವಾದ ಮಾಡಿದ್ದಾರೆ.

ಬೇರೆ ಬೇರೆಯಾಗಿ ನಾನಾ ಕಡೆಯಲ್ಲಿರುವ, ನಾನಾ ಶಾಖೆಗಳಲ್ಲಿರುವ ವಾಕ್ಯಗಳನ್ನು ನಿರ್ಣಯಿಸುವ ಅಧಿಕರಣಗಳಲ್ಲಿ ವಾಕ್ಯಗಳು ಕ್ರಮವಾಗಿ ಬರುವುದರಿಂದ ಈ ಕ್ರಮವು ಸಿದ್ಧವಾದ ನಂತರ ಯಾವುದಾದರೊಂದು ಪೂರ್ವವಾಕ್ಯದಿಂದ ಆಕ್ಷೇಪವನ್ನು ತೋರಿಸುವ ಸಂಗತಿಗೇ ಅಪೇಕ್ಷಿತವಾಗಿದೆ. ಹೊರತು ಅಷ್ಟರಿಂದಲೇ ವಿಮರ್ಶೆಗೆ ಸಾಫಲ್ಯವು ಸಿದ್ಧವಾಗುವುದರಿಂದ ಯಾವುದೇ ತಡೆಯಿಲ್ಲದ ಪೂರ್ವವಾಕ್ಯದಿಂದಲೇ ಸಂಗತಿಯನ್ನು ಹೇಳಬೇಕೆಂಬ ನಿರ್ಬಂಧವು ಇಲ್ಲ ಎಂಬುದಾಗಿ ಜಿಜ್ಞಾಸಾಧಿಕರಣ ಮತ್ತು ಅದರ ವಿಷಯವಾಕ್ಯದಿಂದ ಇಲ್ಲಿ ಸಂಗತಿಯನ್ನು ತಿಳಿಸಿದ್ದಾರೆ ಎಂದು ಚಂದ್ರಿಕಾದಲ್ಲಿ ವಿವರಿಸಿದ್ದಾರೆ. 'ಅವ್ಯವಹಿತಪೂರ್ವವಾಕ್ಯದಿಂದಲೂ ಕೂಡ ಪ್ರತಿಯೊಂದು ಅಧಿಕರಣದಲ್ಲೂ ಸಂಗತಿಯನ್ನು ತೋರಿಸಲು ಬರುತ್ತದೆ' ಎಂಬ ವಿಷಯವನ್ನು ನಾವು ಅಲ್ಲೇ(ಚಂದ್ರಿಕಾಪ್ರಕಾಶದಲ್ಲೇ) ಹೇಳಿದ್ದೇವೆ. ಆದ್ದರಿಂದ ಇಲ್ಲಿ ಅದನ್ನು ವಿವರಿಸುವುದಿಲ್ಲ.

### ಪ್ರಥಮಸ್ಥಾನ ಆನಂದಮಯಾಧಿಕರಣಕ್ಕೆ

भावदीपः – 'आह' इत्यस्य कर्माकाङ्क्षां सूत्रोक्त्या पूरयन्, विवक्षितमर्थमाह – **आनन्दमयस्येति** ।। सूत्रे 'अभ्यासात्' इत्यादिना प्रमाणोक्तेः समर्थ्यत इत्युक्तम् । भाष्यटीकयोः श्रुतिसङ्गतिफलयोरपि लाभायैवं सङ्गत्युक्तावपि –

**"........ तत्र आनन्दादयो गुणाः ।**
**ईशस्यैवेति निर्णीताः श्रुतियुक्तिसमाश्रयात् ।।"**

इति उपासनापादीयानुभाष्यसुधायाम् आनन्दमयाधिकरणस्याद्यत्वे हेतुं सूचयन् आह इत्यवतार्य, 'सर्वेषु हि मूर्धाभिषिक्ता आनन्दविज्ञानादयः अतो माङ्गलिक आचार्यस्तच्छब्दसमन्वयमादौ आह' इत्युक्तदिशा सर्वापेक्षितानन्दप्रदोपासनाविषय-पूर्णानन्दत्वरूपमहागुणस्यादौ वक्तव्यत्वाच्चेत्यपि सङ्गतिरुपलक्ष्या ।

"ಆಹ" ಎಂಬಲ್ಲಿ ಕರ್ಮಪದದ ಆಕಾಂಕ್ಷೆಯನ್ನು ಸೂತ್ರವನ್ನು ಹೇಳುವ ಮೂಲಕ ಪೂರ್ಣಗೊಳಿಸುತ್ತಾ, ವಿವಕ್ಷಿತವಾದ ಅರ್ಥವನ್ನು "ಆನಂದಮಯಸ್ಯ" ಇತ್ಯಾದಿವಾಕ್ಯದಿಂದ ವಿವರಿಸುತ್ತಿದ್ದಾರೆ. ಸೂತ್ರದಲ್ಲಿ 'ಅಭ್ಯಾಸಾತ್' ಇತ್ಯಾದಿಯಿಂದ ಪ್ರಮಾಣೋಕ್ತಿಗೆ ಸಮರ್ಥನೆಯನ್ನು ನೀಡಲಾಗುತ್ತಿದೆ ಎಂದು ಹಿಂದೆಯೇ ಹೇಳಿದೆ. ಭಾಷ್ಯ ಮತ್ತು ಟೀಕೆಗಳಲ್ಲಿ ಶ್ರುತಿಸಂಗತಿ ಮತ್ತು ಫಲಗಳನ್ನು ಹೊಂದಿಸಲೋಸ್ಕರವೇ ಸಂಗತಿಯನ್ನು ಹೇಳಿದ್ದರೂ,

"............ತತ್ರಾನಂದಾದಯೋಃ ಗುಣಾಃ।
ಈಶಸ್ಯೈವೇತಿ ನಿರ್ಣೀತಾಃ ಶ್ರುತಿಯುಕ್ತಿಸಮಾಶ್ರಯಾತ್"

(ಆ ಪರಮಾತ್ಮನ ಗುಣಗಳಲ್ಲಿ ಆನಂದವೇ ಮೊದಲಾದ ಗುಣಗಳನ್ನು ಸಮನ್ವಯ ಮಾಡುವ ಸಂದರ್ಭದಲ್ಲಿ ಶುಭಗುಣಗಳಲ್ಲಿ ಉತ್ತಮವೆನಿಸಿದ ಆನಂದಾದಿಗುಣಗಳು ಭಗವಂತನಿಗೆ ಮಾತ್ರ ಎಂಬುದಾಗಿ ಶ್ರುತಿ ಮತ್ತು ಯುಕ್ತಿಗಳ ಆಧಾರದಿಂದ ನಿರ್ಣಯಿಸಲ್ಪಟ್ಟಿವೆ).

ಎಂಬ ಉಪಾಸನಾಪಾದದಲ್ಲಿ ಬರುವ ಅನುವ್ಯಾಖ್ಯಾನದ ಸುಧಾದಲ್ಲಿ 'ಆನಂದಮಯಾಧಿಕರಣಕ್ಕೆ ಮೊದಲಸ್ಥಾನವನ್ನು ಕೊಡುವುದಕ್ಕೆ ಕಾರಣವನ್ನು ತಿಳಿಸುತ್ತಿದ್ದಾರೆ' ಎಂದು ಅವತರಣಿಕೆಯನ್ನು ನೀಡಿ ಎಲ್ಲಾ ವಿಷಯಗಳಲ್ಲೂ ಆನಂದವಿಜ್ಞಾನಾದಿಗಳು ಅತ್ಯಂತಪ್ರಧಾನವಾಗಿದೆ. ಆದ್ದರಿಂದ ಮಂಗಲಮಯರಾದ ಆಚಾರ್ಯರು ಆ ಶಬ್ದದ ಸಮನ್ವಯವನ್ನು ಮೊದಲು ಹೇಳಿದ್ದಾರೆ– ಎಂದು ವಿವರಿಸಿದ್ದಾರೆ. ಈ ವಿವರಣೆಯಂತೆ ಎಲ್ಲರಿಂದಲೂ ಅಪೇಕ್ಷಿತವಾದ ಆನಂದವನ್ನು ನೀಡುವ ಉಪಾಸನೆಗೆ ವಿಷಯವಾದ ಪೂರ್ಣಾನಂದತ್ವರೂಪವಾದ ಮಹಾಗುಣವು ಮೊದಲು ಹೇಳಬೇಕಾದ್ದು; ಆದ್ದರಿಂದಲೂ ಆನಂದ-ಮಯಾಧಿಕರಣವನ್ನು ಮೊದಲು ಹೇಳಿದ್ದಾರೆ ಎಂಬ ರೀತಿಯಿಂದಲೂ ಸಂಗತಿಯನ್ನು ಇಟ್ಟುಕೊಳ್ಳಬೇಕು.

### ಉಪನಿಷತ್ತಿನಲ್ಲಿ ಅರ್ಥಪೂರ್ಣಪದಗಳು

भावदीपः –

'उत्तरैः पूरिताः पूर्वे निश्छिद्रत्वेन सर्वशः ।
सर्वेपि पुरुषाकारा उत्तरात् पूर्वसम्भवः'

इति तैत्तिरीयभाष्यदिशा श्रुत्युर्थमाह – **तेनेति** ।। **तस्मादुद्भूत इति** ।। शरीरिस्थानीयादवान्तरान्नारायणाख्याद् आनन्दमयकोशस्थादानन्दमयनामकात् शरीरस्थानीयो बाह्यो वासुदेवो विज्ञानमयकोशस्थो विज्ञानमयनामकः प्रादुर्भूत इत्यर्थः । **उपकारजमित्यादि** ।। 'परेयं प्रियनामकम्' इति तैत्तिरीयभाष्योक्तेः । 'मोदो भोगनिमित्तकः' इत्याद्यैतरेयभाष्यान्तिमाध्यायोक्तेः ।

"सुखं स्वरूपभूतं यदानन्द इति कथ्यते ।
मुन्नामविषयोत्थं यत्प्रकृष्टविषयात् प्रमुत्"

इति षष्ठे बृहद्भाष्योक्तेरिति भावः । भाष्येऽनुक्तस्यापि समग्रवाक्यस्यात्रोक्तिस्तु 'स शिरः स दक्षिणः पक्ष' इत्यादि भाष्योपयोगार्था ।

"ತೇನ" ಇತ್ಯಾದಿವಾಕ್ಯದಿಂದ

'ಉತ್ತರೈಃ ಪೂರಿತಾಃ ಪೂರ್ವೇ ನಿಶ್ಛಿದ್ರತ್ವೇನ ಸರ್ವಶಃ।
ಸರ್ವೇಽಪಿ ಪುರುಷಾಕಾರಾ ಉತ್ತರಾತ್ ಪೂರ್ವಸಂಭವಃ ॥'

(ನಂತರದಲ್ಲಿ ಹೇಳಿದ ಆನಂದಮಯಾದಿರೂಪಗಳಿಂದ ಮೊದಲು ಹೇಳಿದ ವಿಜ್ಞಾನಮಯಾದಿ ರೂಪಗಳು ಯಾವುದೇ ದೋಷವಿಲ್ಲದಂತೆ ಪೂರ್ಣವಾಗಿವೆ. ವಿಜ್ಞಾನಮಯಾದಿ ಎಲ್ಲಾ ರೂಪಗಳೂ ಪುರುಷಾಕಾರವುಳ್ಳವುಗಳು. ನಂತರದ ರೂಪಗಳಿಂದ ಮೊದಲು ಹೇಳಿದ ರೂಪಗಳು ಅಭಿವ್ಯಕ್ತವಾಗಿವೆ.) ಹೀಗೆ ತೈತ್ತಿರೀಯವಾಕ್ಯದಲ್ಲಿ ಹೇಳಿದಂತೆ ಶ್ರುತಿಯ ಅರ್ಥವನ್ನು ವಿವರಿಸಿದ್ದಾರೆ.

''ತಸ್ಮಾದುದ್ಭೂತಃ'' ಎಂಬ ವಾಕ್ಯಭಾಗಕ್ಕೆ 'ಶರೀರದ ಒಳಗಿರುವ ಆನಂದಮಯಕೋಶದಲ್ಲಿರುವ ಆನಂದಮಯ ಎಂಬ ಹೆಸರುಳ್ಳ ನಾರಾಯಣನಿಂದ ಶರೀರದ ಒಳಗೆ ಹೊರಭಾಗದಲ್ಲಿರುವ ವಿಜ್ಞಾನ-ಮಯಕೋಶದಲ್ಲಿರುವುದರಿಂದ ವಿಜ್ಞಾನಮಯ ಎಂಬ ಹೆಸರನ್ನು ಪಡೆದಿರುವ ವಾಸುದೇವನು ವ್ಯಕ್ತನಾಗಿದ್ದಾನೆ' ಎಂಬ ಅರ್ಥವನ್ನು ಇಟ್ಟುಕೊಳ್ಳಬೇಕು.

'ಪರೇಯಂ ಪ್ರಿಯನಾಮಕಮ್' (ಪರರಿಂದ ಪ್ರಾಪ್ಯವಾದ ಆನಂದವನ್ನು ಪ್ರಿಯ ಎಂಬುದಾಗಿ ಕರೆಯುತ್ತಾರೆ;) ಎಂಬ ತೈತ್ತಿರೀಯಭಾಷ್ಯದ ಮಾತಿನಂತೆ ''ಉಪಕಾರಜಂ ಪ್ರಿಯಂ'' ಎಂಬ ಅರ್ಥವನ್ನು ವಿವರಿಸಿದ್ದಾರೆ. ಐತರೇಯಭಾಷ್ಯದ ಕೊನೆಯ ಅಧ್ಯಾಯದಲ್ಲಿ ಹೇಳಿದ 'ಮೋದೋ ಭೋಗನಿಮಿತ್ತಕಃ' (ವಿಷಯಭೋಗಗಳ ನಿಮಿತ್ತದಿಂದ ಬರುವ ಆನಂದವನ್ನು ಮೋದ ಎಂಬುದಾಗಿ ಕರೆಯುತ್ತಾರೆ) ಎಂಬ ಹೇಳಿಕೆಯಂತೆ 'ದರ್ಶನೋತ್ಥೋ ಮೋದಃ; ಭೋಗೋತ್ಥಃ ಪ್ರಮೋದಃ' ಎಂಬ ಅರ್ಥವನ್ನು ವಿವರಿಸಿದ್ದಾರೆ.

'ಸುಖಂ ಸ್ವರೂಪಭೂತಂ ಯದಾನಂದ ಇತಿ ಕಥ್ಯತೇ।
ಮುನ್ನಾಮವಿಷಯೋತ್ಥಂ ಯತ್ ಪ್ರಕೃಷ್ಟವಿಷಯಾತ್ ಪ್ರಮುದ್'

(ಸ್ವರೂಪಭೂತವಾದ ಯಾವ ಸುಖವಿದೆಯೋ ಅದನ್ನು ಆನಂದ ಎಂಬುದಾಗಿ ಕರೆಯುತ್ತಾರೆ. ವಿಷಯದಿಂದ ಉಂಟಾದ ಸುಖವನ್ನು ಮುತ್ ಎಂಬುದಾಗಿ ಕರೆಯುತ್ತಾರೆ. ಉತ್ಕೃಷ್ಟವಾದ ವಿಷಯಗಳಿಂದ ಉಂಟಾದ ಸುಖವನ್ನು ಪ್ರಮುತ್ ಎಂಬುದಾಗಿ ಕರೆಯುತ್ತಾರೆ.)

ಹೀಗೆ ಬೃಹದಾರಣ್ಯಕೋಪನಿಷತ್ತಿನ ಆರನೇ ಅಧ್ಯಾಯದ ಭಾಷ್ಯದಲ್ಲಿ ಹೇಳಿರುವುದರಿಂದ ಇವುಗಳಿಗೆ ಅನುಗುಣವಾಗಿ ಅರ್ಥವನ್ನು ವಿವರಿಸಿದ್ದಾರೆ. ಭಾಷ್ಯದಲ್ಲಿ ತೈತ್ತಿರೀಯೋಪನಿಷತ್ತಿನ ಸಮಗ್ರವಾಕ್ಯವನ್ನು ಹೇಳದಿದ್ದರೂ ಟೀಕಾರಾಯರು ಮುಂದೆ ಭಾಷ್ಯದಲ್ಲಿ ಉದಾಹರಿಸಲಿರುವ 'ಸ ಶಿರಃ; ಸ ದಕ್ಷಿಣಃ ಪಕ್ಷಃ' ಇತ್ಯಾದಿ ವಾಕ್ಯಗಳಲ್ಲಿ ಅರ್ಥವನ್ನು ಸುಲಭವಾಗಿ ತಿಳಿಸುವ ದೃಷ್ಟಿಯಿಂದ ಇಲ್ಲಿ ಪೂರ್ಣವಾಗಿ ವಾಕ್ಯವನ್ನು ಹೇಳಿದ್ದಾರೆ.

### ಭಗವಂತನಿಗೂ ಅವನ ಅವಯವಕ್ಕೂ ಭೇದವಿಲ್ಲ

भावदीपः – **किमर्थमिति** ।। किंनिमित्तम् किंप्रयोजनम् इति वाऽर्थः । **ब्रह्मणोऽन्य इति** ।। 'ब्रह्मत्वे तु एकैकशोङ्गानि धिया विभावयेत् पादादियावद्धसितं

गदाभृत' (भागवते) इत्युक्तदिशा वा वक्ष्यमाणदिशाऽवयवावयविनोर्भेदाभावेन वा तस्य जिज्ञास्यत्वं सेत्स्यतीति भावः ।

ननु लोके जीवशरीरेप्यवयवावयविनोर्भेदो नास्त्येव समवायस्य निरासात् । सत्यम् । सर्वैरवयवैरवयविनोत्यन्ताभेदेप्येकैकेन भेदस्यापि सत्वादिति भावः ।।

''ಕಿಮರ್ಥಮ್'' ಎಂಬ ಪದಕ್ಕೆ 'ಯಾವ ಕಾರಣದಿಂದ' ಎಂಬುದಾಗಿ ಅಥವಾ 'ಯಾವ ಪ್ರಯೋಜನದ ಉದ್ದೇಶದಿಂದ' ಎಂದು ಅರ್ಥ.

''ಬ್ರಹ್ಮಣೋಽನ್ಯಃ'' ಎಂಬ ವಾಕ್ಯಾಂಶದಿಂದ ಒಂದು ವೇಳೆ ಜಿಜ್ಞಾಸ್ಯನಾದವನು ಬ್ರಹ್ಮನಾಗಿದ್ದರೆ ಭಾಗವತದಲ್ಲಿ 'ಏಕೈಕಶೋಂಗಾನಿ ಧಿಯಾ ವಿಭಾವಯೇತ್ ಪಾದಾದಿಯಾವದ್ಧಸಿತಂ ಗದಾಭೃತಃ' (ಗದಾಧಾರಿಯಾದ ಭಗವಂತನ ಪಾದದಿಂದ ಆರಂಭಿಸಿ ನಡುವಿನ ತನಕ ಒಂದೊಂದೇ ಅಂಗಗಳನ್ನು ಮನಸ್ಸಿನಲ್ಲಿ ಚೆನ್ನಾಗಿ ಧ್ಯಾನಮಾಡಬೇಕು.) ಎಂದು ಹೇಳಿರುವುದರಿಂದ ಅವನಲ್ಲಿ ಜಿಜ್ಞಾಸ್ಯತ್ವವನ್ನು ಇದರಿಂದ ಸಾಧನೆ ಮಾಡುತ್ತೇವೆ. ಅಥವಾ ಮುಂದೆ ಹೇಳಲಿರುವಂತೆ ಅವಯವ ಮತ್ತು ಅವಯವಿಗಳಿಗೆ ಭೇದವು ಇಲ್ಲದಿರುವುದರಿಂದ ಆ ಬ್ರಹ್ಮನಿಗೆ ಜಿಜ್ಞಾಸ್ಯತ್ವವನ್ನು ಸಾಧನೆ ಮಾಡುತ್ತೇವೆ ಎಂಬ ಅಭಿಪ್ರಾಯವನ್ನು ಇಟ್ಟುಕೊಳ್ಳಬೇಕು.

ಇಲ್ಲಿ ಹೀಗೊಂದು ಶಂಕೆ ಬರಬಹುದು. ಲೋಕದಲ್ಲಿ ಜೀವಶರೀರದಲ್ಲೂ ಕೂಡ ಅವಯವ ಅವಯವಿಗಳಿಗೆ ಭೇದವು ಇಲ್ಲ ತಾನೇ? ಏಕೆಂದರೆ ಸಮವಾಯವನ್ನು ಮುಂದೆ ನಿರಾಕರಣೆ ಮಾಡಲಿರುವುದರಿಂದ ಹೀಗೆ ಒಪ್ಪಿಕೊಳ್ಳಬೇಕಲ್ಲವೇ?. ಹೌದು; ಆದರೆ ಎಲ್ಲಾ ಅವಯವಗಳಿಂದ ಅವಯವಿಯು ಅತ್ಯಂತಾಭೇದವನ್ನು ಪಡೆದಿದ್ದರೂ ಪ್ರತ್ಯೇಕವಾಗಿ ಅವಯವಗಳಲ್ಲಿ ಪರಸ್ಪರ ಭೇದವು ಇದ್ದೇ ಇದೆ.

**वाक्यार्थमञ्जरी – निछिद्रतया** निरवकाशतया । तस्य पुरुषविधतामन्वेतस्य पुरुषविधत्वे किंविविक्षतम्? अत आह – **तस्मादुद्भूत इति** ।। प्रादुर्भूत इत्यर्थः । परेषामुपकारे तत्कृतप्रत्युपकारेण यत्सुखमुत्पद्यते तत्प्रियम् । क्षीरपानादिप्रकृष्टविषयजः प्रमोदः । जलपानाद्यप्रकृष्टविषयजन्यो मोदः ।

अत्रेदं बोध्यम् । प्रतीयमानेऽन्नविकारे पुरषशरीरे अन्नमयनामनिरुद्धो वर्तते । तन्मध्ये प्राणमयनामकः कोशः तत्र प्राणमयनामा प्रद्युम्नः । तन्मध्ये मनोमयनामकः कोशः तत्र मनोमयनामा सङ्कर्षणः । तन्मध्ये विज्ञानमयनामकः कोशः तत्र विज्ञानमयनामा वासुदेवः । तन्मध्ये आनंदमय–नामकः कोशः तत्र आनन्दमयनामा नारायणः । तत्र पूर्वपूर्वोक्तानां देहत्वम् । उत्तरोक्तानां देहित्वम् । तत्रानन्दमयो देही विज्ञानमयाख्यं देह व्याप्य तिष्ठति । एवमन्येपि । तत्रानन्दमयाद् विज्ञानमयस्यावतारः एवमन्येषामपीति ।

ततश्चायमर्थः । ''ब्रह्मविदाप्नोति परम्'' इत्युक्तब्रह्मणः ''सत्यं ज्ञानमनन्तम्'' इतिलक्षण-मुक्तम् । तत्र सत्यत्वमन्नमयप्राणमयप्रकरणाभ्यां ज्ञानत्वं मनोमयविज्ञानमयप्रकरणाभ्यां व्याख्यातम् । अनन्तत्वं गुणतोऽपरिछिन्नत्वमित्याशयेन तत्प्रतिपादनायानन्दमयप्रकरणं प्राप्तम् । तस्माद्वा एतस्मादित्यदि तस्मात्सत्यत्वादिलक्षणोपेतात् एतस्मात् प्रकृताद् विज्ञानमयात् अन्यः आनन्दमयः विज्ञानमयस्यान्तरः अन्तर्विद्यमानः । अभेदेपि विशेषबलाद् भेदव्यवहारः । तेनानन्दमयेनैव विज्ञानमयः पूर्णः ईषदवकाशराहित्येन व्याप्तः । स एष आनन्दमयः पुरुषविधः पुरुषाकार एव । वाशब्दः प्रसिद्धौ । अयं विज्ञानमयः तस्यानन्दमयस्य पुरुषविधतां पुरुषाकारताम् अनु अनुसृत्य पुरुषविधः पुरुषाकारः तस्मात् प्रादुर्भूत इति यावत् । तस्यानन्दमयस्य प्रियं शिरः मोदो दक्षिणबाहुः प्रमादो वामबाहुः आनन्दो मध्यभागः ब्रह्म पुच्छाख्योऽवयवः । पुच्छं न लाङ्गूलमित्याह – **प्रतिष्ठेति** ।। प्रतितिष्ठत्याभ्यामिति प्रतिष्ठा पादौ । ''सुपां सुलुग्'' इति द्विवचनस्याकार इति ।।

'ನಿಶ್ಛಿದ್ರತಯಾ' ಎಂದರೆ ನಿರವಕಾಶವಾಗಿ ಎಂದರ್ಥ. 'ತಸ್ಯ ಪುರುಷವಿಧತಾಂ' ಎಂಬಲ್ಲಿರುವ ಪುರುಷವಿಧತ್ವದಿಂದ ಯಾರು ವಿವಕ್ಷಿತರಾಗಿದ್ದಾರೆ? ಎಂಬ ಪ್ರಶ್ನೆಗೆ 'ತಸ್ಮಾದುದ್ಭೂತಃ' ಎಂಬ ವಾಕ್ಯದಿಂದ ಉತ್ತರ ಹೇಳಿದ್ದಾರೆ. ಉದ್ಭೂತಃ ಎಂದರೆ ಪ್ರಾದುರ್ಭೂತ ಎಂದರ್ಥ. ಅನ್ಯರು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಮಾಡಿದಾಗ ಹುಟ್ಟುವ ಸುಖವೇ 'ಪ್ರಿಯ'. ಕ್ಷೀರಪಾನವೇ ಮೊದಲಾದ ಉತ್ಕೃಷ್ಟವಾದ ವಿಷಯಪದಾರ್ಥಗಳಿಂದ ಹುಟ್ಟುವ ಸುಖವೇ ಪ್ರಮೋದ. ನೀರೇ ಮೊದಲಾದ ನೀಚವಾದ ವಿಷಯ ಪದಾರ್ಥಗಳಿಂದ ಹುಟ್ಟುವ ಸುಖವೇ ಮೋದ.

ದೇಹದಲ್ಲಿರುವ ಕೋಶಗಳ ವಿಚಾರದಲ್ಲಿ ಈ ರೀತಿಯಾಗಿ ತಿಳಿಯಬೇಕು - ನಮಗೆ ತೋರುತ್ತಿರುವ ಅನ್ನವಿಕಾರವಾದ ಪುರುಷ ಶರೀರದಲ್ಲಿ ಅನ್ನಮಯ ಎಂಬ ಹೆಸರಿನ ಅನಿರುದ್ಧನು ಇದ್ದಾನೆ. ಅನ್ನಮಯಕೋಶದ ಮಧ್ಯದಲ್ಲಿ ಪ್ರಾಣಮಯ ಎಂಬ ಹೆಸರಿನ ಕೋಶವಿದೆ. ಆ ಕೋಶದಲ್ಲಿ ಪ್ರಾಣಮಯ ಎಂಬ ಹೆಸರಿನ ಪ್ರದ್ಯುಮ್ನ ಇದ್ದಾನೆ. ಆ ಪ್ರಾಣಮಯಕೋಶದ ಮಧ್ಯದಲ್ಲಿ ಮನೋಮಯ ಎಂಬ ಹೆಸರಿನ ಕೋಶವಿದೆ. ಅಲ್ಲಿ ಮನೋಮಯನೆಂಬ ಹೆಸರಿನ ಸಂಕರ್ಷಣನು ಇದ್ದಾನೆ. ಮನೋಮಯ ಕೋಶದ ಮಧ್ಯದಲ್ಲಿ ವಿಜ್ಞಾನಮಯ ಎಂಬ ಹೆಸರಿನ ಕೋಶವಿದೆ. ಆ ಕೋಶದಲ್ಲಿ ವಿಜ್ಞಾನಮಯ ಎಂಬ ಹೆಸರಿನ ವಾಸುದೇವ ಇದ್ದಾನೆ. ವಿಜ್ಞಾನಮಯಕೋಶದ ಮಧ್ಯದಲ್ಲಿ ಆನಂದಮಯ ಎಂಬ ಹೆಸರಿನ ಕೋಶವಿದೆ. ಆ ಕೋಶದಲ್ಲಿ ಆನಂದಮಯ ಎಂಬ ಹೆಸರಿನ ನಾರಾಯಣನು ಇದ್ದಾನೆ. ಅಲ್ಲಿ ಹಿಂದಿನವರು ದೇಹರಾಗಿದ್ದಾರೆ. ಮುಂದಿನವರು ದೇಹಿ ಆಗಿದ್ದಾರೆ. ಉದಾಹರಣೆ- ಆನಂದಮಯನು ದೇಹಿಯಾಗಿ ವಿಜ್ಞಾನಮಯವೆಂಬ ದೇಹವನ್ನು ವ್ಯಾಪಿಸಿಕೊಂಡು ಇರುತ್ತಾನೆ. ಇದೇ ರೀತಿಯಾಗಿ ಅನ್ಯರನ್ನು ತಿಳಿಯಬೇಕು. ಇಲ್ಲಿ ಆನಂದಮಯನಿಂದ ವಿಜ್ಞಾನಮಯನ ಅವತಾರ. ಅನ್ಯರ ವಿಷಯದಲ್ಲಿಯೂ ಸಹ ಇದೆ ರೀತಿಯಾಗಿ ತಿಳಿಯಬೇಕು.

ಒಟ್ಟು ಅಭಿಪ್ರಾಯ - 'ಬ್ರಹ್ಮವಿದಾಪ್ನೋತಿ ಪರಂ' ಎಂಬ ಶ್ರುತಿಯಲ್ಲಿರುವ ಬ್ರಹ್ಮನ ಲಕ್ಷಣವನ್ನು 'ಸತ್ಯಂ ಜ್ಞಾನಮನಂತಂ' ಎಂದು ಶ್ರುತಿಯು ಹೇಳುತ್ತಿದೆ. ಈ ಶ್ರುತಿಯಲ್ಲಿರುವ ಸತ್ಯತ್ವವನ್ನು ಅನ್ನಮಯ

ಪ್ರಾಣಮಯಪ್ರಕರಣಗಳಿಂದ, ಜ್ಞಾನತ್ವವನ್ನು ಮನೋಮಯ ವಿಜ್ಞಾನಮಯಪ್ರಕರಣಗಳಿಂದ ವ್ಯಾಖ್ಯಾನ ಮಾಡಲಾಗಿದೆ. ಅನಂತತ್ವ ಎಂದರೆ ಗುಣದಿಂದ ಪರಿಪೂರ್ಣನಾಗಿದ್ದಾನೆಂದು ಅರ್ಥ. ಈ ಪರಿಪೂರ್ಣತ್ವವನ್ನು ಪ್ರತಿಪಾದನೆ ಮಾಡಲು ಆನಂದಮಯಪ್ರಕರಣವು ಪ್ರಾಪ್ತವಾಗಿದೆ. 'ತಸ್ಮಾದ್ವಾ ಏತಸ್ಮಾತ್' ಇತ್ಯಾದಿ ಶ್ರುತಿಗಳು. ತಸ್ಮಾತ್- ಸತ್ಯತ್ವವೇ ಮೊದಲಾದ ಲಕ್ಷಣಗಳಿಂದ ಕೂಡಿದ, 'ಏತಸ್ಮಾತ್'- ಪ್ರಕೃತನಾದ ವಿಜ್ಞಾನಮಯನಿಂದ, ಅನ್ಯಃ - ಆನಂದಮಯನು, ಅಂತರಃ - ವಿಜ್ಞಾನಮಯನ ಒಳಗೆ ಇದ್ದಾನೆ. ವಸ್ತುತಃ ಅಭೇದ ಇದ್ದರೂ ವಿಶೇಷಬಲದಿಂದ ಭೇದದ ವ್ಯವಹಾರ ಮಾಡಲಾಗುತ್ತದೆ. 'ತೇನ'- ಆನಂದಮಯನಿಂದಲೇ ವಿಜ್ಞಾನಮಯನು 'ಪೂರ್ಣಃ' - ಸ್ವಲ್ಪವೂ ಅವಕಾಶ ಇಲ್ಲದೆ ವ್ಯಾಪ್ತನಾಗಿದ್ದಾನೆ. 'ಸ ಏಷಃ' - ಆನಂದಮಯನು 'ಪುರುಷವಿಧಃ' - ಪುರುಷಾಕಾರನೇ ಆಗಿದ್ದಾನೆ. 'ವಾ' ಶಬ್ದವು ಪ್ರಸಿದ್ಧಾರ್ಥವನ್ನು ಹೇಳುತ್ತದೆ. ಈ ವಿಜ್ಞಾನಮಯನು 'ತಸ್ಯ' - ಆನಂದಮಯನ 'ಪುರುಷವಿಧತಾಂ' - ಪುರುಷಾಕಾರವನ್ನು, 'ಅನು'- ಅನುಸರಿಸಿ, ಪುರುಷವಿಧಃ - ಪುರುಷಾಕಾರನಾಗಿದ್ದಾನೆ. ಅಂದರೆ ಆನಂದಮಯನಿಂದ ಪ್ರಾದುರ್ಭೂತನಾಗಿದ್ದಾನೆಂದು ತಿಳಿಯಬೇಕು.

'ತಸ್ಯ' - ಆನಂದಮಯನಿಗೆ, ಪ್ರಿಯವೇ - ಶಿರಸ್ಸು, ಮೋದವೇ ಬಲಬಾಹು, ಪ್ರಮೋದವೇ ಎಡಬಾಹು, ಆನಂದವೇ ಮಧ್ಯಭಾಗವು, ಬ್ರಹ್ಮನು ಪುಚ್ಛವೆಂಬ ಅವಯವ. ಪುಚ್ಛ ಎಂದರೆ ಬಾಲವಲ್ಲ ಎಂದು ತಿಳಿಸಲು 'ಪ್ರತಿಷ್ಠಾ' ಎಂದು ಹೇಳಿದೆ. 'ಯಾವುದರ ಮೇಲೆ ನಿಲ್ಲುತ್ತೇವೆಯೋ ಅದು ಪ್ರತಿಷ್ಠಾ ಅರ್ಥಾತ್ ಪಾದಗಳು' ಎಂದರ್ಥ. 'ಸುಪಾಂ ಸುಲುಗ್' ಎಂಬ ಸೂತ್ರಾನುಸಾರಿಯಾಗಿ ದ್ವಿವಚನವು ಲುಕ್ ಆಗಿದೆ.

## ಆನಂದಮಯನು ವಿಷ್ಣು ಆಗದಿದ್ದರೆ?

**ತत्वप्रकाशिका – ब्रह्मणोऽवयवत्वोक्तावपि किमर्थमानन्दमयस्य विष्णुत्व-समर्थनम्? इत्यत आह – न हीति ।। यद्यानन्दमयो ब्रह्मणोऽन्यस्तदा न ब्रह्मजिज्ञासा सम्भवति । अवयविन एवानन्दमयस्य जिज्ञास्यत्वप्राप्तेः । अवयविजिज्ञासां विना अवयवमात्रजिज्ञासाऽयोगात् । ब्रह्मजिज्ञासा च श्रुत्युक्ता न हातुं शक्या । अत आनन्दमयस्य विष्णोरन्यत्वे न ब्रह्मजिज्ञासा सम्भवतीति यतोऽतो ब्रह्मजिज्ञासासिद्ध्यर्थम् 'आनन्दमयोऽभ्यासात्' इत्यानन्दमयस्य विष्णुत्वमाह सूत्रकार इति भावः ।**

'ಬ್ರಹ್ಮನು ಆನಂದಮಯನ ಅವಯವ' ಎಂದು ಶ್ರುತಿಯಲ್ಲಿ ಹೇಳಿದ್ದರೂ ಆನಂದಮಯನಿಗೆ ವಿಷ್ಣುತ್ವಸಮರ್ಥನೆಯನ್ನು ಏಕೆ ಮಾಡುತ್ತೀರಿ? ಎಂಬ ಪ್ರಶ್ನೆಗೆ ''ನಹಿ'' ಎಂಬುದಾಗಿ ಹೇಳುತ್ತಾರೆ. ಒಂದು ವೇಳೆ ಆನಂದಮಯನು ಬ್ರಹ್ಮನಿಗಿಂತಲೂ ಭಿನ್ನನಾದರೆ ಜಿಜ್ಞಾಸೆಯೇ ಕೂಡುವುದಿಲ್ಲ. ಏಕೆಂದರೆ ಆನಂದಮಯನು ಅವಯವಿಯಾದ್ದರಿಂದ ಅವಯವಿಯಾದ ಆನಂದಮಯನೇ ಜಿಜ್ಞಾಸ್ಯನಾಗುತ್ತಾನೆ. ಅವಯವಿಯ ಜಿಜ್ಞಾಸೆಯನ್ನು ಮಾಡದೆ ಕೇವಲ ಅವಯವದ ಜಿಜ್ಞಾಸೆಯು

ಕೂಡುವುದಿಲ್ಲ. ಹಾಗೆಯೇ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮಜಿಜ್ಞಾಸೆಯನ್ನು ಬಿಡಲು ಸಾಧ್ಯವಿಲ್ಲ. ಆದ್ದರಿಂದ ಆನಂದಮಯನು ವಿಷ್ಣುವಿಗಿಂತ ಭಿನ್ನನಾದರೆ ಬ್ರಹ್ಮಜಿಜ್ಞಾಸೆಯು ಕೂಡುವುದಿಲ್ಲವಾದ್ದರಿಂದ ಬ್ರಹ್ಮಜಿಜ್ಞಾಸೆಯ ಸಿದ್ಧಿಗೋಸ್ಕರ 'ಆನಂದಯೋಽಭ್ಯಾಸಾತ್' ಎಂದು ಸೂತ್ರಕಾರರು ಆನಂದಮಯನಿಗೆ ವಿಷ್ಣುತ್ವವನ್ನು ಹೇಳಿದ್ದಾರೆ.

### ಅಧಿಕರಣಪ್ರಯೋಜನ

भावदीपः – एवं परिष्कृत्य 'न हि' इति वाक्यार्थमाह – **अवयवीति** ।। तन्मात्रज्ञानस्यापुमर्थत्वादिति भावः । अयुक्ता चेत्, त्यजताम्! इत्यत आह – **ब्रह्मेति** ।। 'न हि' इति वाक्यं न केवलं प्रागुक्तसङ्गत्युपपादकम् । किन्तु पूर्वपक्षे प्रागुक्तजिज्ञासाऽऽक्षेपः फलं सिद्धान्ते च तत्समाधिः फलमित्येतदधिकरणप्रयोजनोपपादकमपीति भावेन इत्यत आहेत्येतत् पूर्वं सङ्गतिपरं व्याख्यातमपि प्रकारान्तरेण व्याचष्टे – अत इति ।। एतेन भाष्ये 'अत' इत्यावर्तते द्वितीयं चतुर्थ्यर्थकं तस्य तस् 'आद्यादिभ्य उपसङ्ख्यानम्' इत्युक्तेः । 'न हि' इति हिशब्दो हेतौ । तथा च हि यतः अत एतस्मात् कारणात् अत एतदर्थं जिज्ञासासिद्ध्यर्थमित्यर्थो दर्शितः । 'ज्ञेयता' इत्यस्य 'जिज्ञास्यता' इति व्याख्यानात् ।

ಹೀಗೆ ಪೂರ್ವಭಾವಿವಿವರಣೆಯನ್ನು ವಿಸ್ತಾರವಾಗಿ ಹೇಳಿದನಂತರ 'ಅವಯವಿ' ಇತ್ಯಾದಿ ವಾಕ್ಯದಿಂದ 'ನ ಹಿ' ಇತ್ಯಾದಿ ಭಾಷ್ಯದ ಅರ್ಥವನ್ನು ವಿವರಿಸಿದ್ದಾರೆ. "ಅವಯವಿ" ಎಂಬ ವಾಕ್ಯಭಾಗಕ್ಕೆ 'ಕೇವಲ ಅವಯವದ ಜಿಜ್ಞಾಸೆಯು ಪುರುಷಾರ್ಥಕಸಾಧಕವಲ್ಲದ್ದರಿಂದ ಅವಯವಿಯ ಜಿಜ್ಞಾಸೆಯನ್ನೇ ಮಾಡಬೇಕು' ಎಂದು ಅಭಿಪ್ರಾಯ. ಅವಯವದ ಜಿಜ್ಞಾಸೆಯು ಯೋಗ್ಯವಲ್ಲದಿದ್ದರೆ ಬಿಡಬಹುದಲ್ಲವೇ? ಎಂಬುದಕ್ಕೆ ಉತ್ತರವಾಗಿ "ಬ್ರಹ್ಮ" ಇತ್ಯಾದಿ ವಾಕ್ಯ ಹೊರಟಿದೆ.

ಭಾಷ್ಯದಲ್ಲಿರುವ 'ನಹಿ' ಇತ್ಯಾದಿವಾಕ್ಯವು ಹಿಂದೆ ಹೇಳಿದಂತೆ ಸಂಗತಿಯನ್ನು ಮಾತ್ರ ತಿಳಿಸುತ್ತಿಲ್ಲ. ಪೂರ್ವಪಕ್ಷದಲ್ಲಿ ಹಿಂದೆ ಹೇಳಿದ ಜಿಜ್ಞಾಸೆಗೆ ಆಕ್ಷೇಪ ಮಾಡುವ ರೀತಿಯ ಫಲಿತಾರ್ಥವನ್ನು ತಿಳಿಸುತ್ತಿದೆ. ಸಿದ್ಧಾಂತದಲ್ಲಿ 'ಪೂರ್ವಪಕ್ಷಿಯು ಏನು ಆಕ್ಷೇಪ ಮಾಡಿದ್ದಾನೆ; ಅದಕ್ಕೆ ಸಮಾಧಾನವನ್ನು ಹೇಳುವ ಫಲಿತಾರ್ಥವನ್ನೂ ತಿಳಿಸುತ್ತಿದೆ. ಹೀಗೆ ಈ ಅಧಿಕರಣದ ಪ್ರಯೋಜನವನ್ನೂ ಕೂಡ ಈ ವಾಕ್ಯ ತಿಳಿಸುತ್ತಿದೆ ಎಂಬ ಅಭಿಪ್ರಾಯದಿಂದ ಮೊದಲು ಈ ಭಾಗವನ್ನು ಸಂಗತಿಪರವಾಗಿ ವಿವರಿಸಿದ್ದರೂ ಈಗ ಇದೇ ವಾಕ್ಯವನ್ನು "ಅತಃ" ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

ಹೀಗೆ ವ್ಯಾಖ್ಯಾನ ಮಾಡುವುದರಿಂದ ಭಾಷ್ಯದಲ್ಲಿ 'ಅತಃ' ಎಂಬ ಶಬ್ದವನ್ನು ಎರಡು ಬಾರಿ ಇಟ್ಟುಕೊಳ್ಳಬೇಕು. ಎರಡನೇ ಅತಃ ಶಬ್ದವು ಚತುರ್ಥೀವಿಭಕ್ತಿಯ ಅರ್ಥವನ್ನು ಹೇಳುತ್ತದೆ. 'ಆದ್ಯಾದಿಭ್ಯಃ ಉಪಸಂಖ್ಯಾನಮ್' ಎಂಬ ಸೂತ್ರದಂತೆ ಆ ಅತಃ ಶಬ್ದದಲ್ಲಿ ತಸ್‌ಪ್ರತ್ಯಯ ಬಂದಿದೆ. 'ನ ಹಿ' ಎಂಬಲ್ಲಿ

ಹಿಶಬ್ದಕ್ಕೆ 'ಕಾರಣ' ಎಂದರ್ಥ. ಆದ್ದರಿಂದ 'ಹಿ = ಯಾವ ಕಾರಣದಿಂದ, ಅತಃ = ಈ ಕಾರಣದಿಂದ ಅತಃ = ಇದಕ್ಕೋಸ್ಕರ ಅಂದರೆ ಜಿಜ್ಞಾಸಾದ ಸಿದ್ಧಿಗೋಸ್ಕರ ' ಎಂಬ ಅರ್ಥವನ್ನು ತಿಳಿಸಿದಂತೆ ಆಗುತ್ತದೆ. 'ಜ್ಞೇಯತಾ' ಎಂಬ ಪದಕ್ಕೆ 'ಜಿಜ್ಞಾಸ್ಯತಾ' ಎಂಬುದಾಗಿ ವ್ಯಾಖ್ಯಾನಮಾಡಿದ್ದಾರೆ.

**वाक्यार्थमञ्जरी – ब्रह्मणोऽन्य इति** ।। अनन्यत्वे तु एकैकावयवं ध्यायेदित्युक्तरीत्या नानुपपत्तिरितिभावः ॥ **अयोगादिति** ।। अवयवमात्रस्य फलदानासमर्थत्वादिति भावः । अयुक्ता चेत् मास्तु ब्रह्मजिज्ञासेत्यत आह – **ब्रह्मजिज्ञासेति** ।। **यतोत इति** ।। अनेनयत आहेति-भाष्यं । इति यतः शङ्का प्राप्ता अत आहेति यतः शब्दाध्याहारेण योजितं भवति ।

'ಬ್ರಹ್ಮಣೋಽನ್ಯ:' ಎಂದು ಇದೆ. 'ಅನನ್ಯತ್ವೇತ್ವೇಕೈಕಾವಯವಂ ಧ್ಯಾಯೇತ್' ಎಂಬಲ್ಲಿ ಹೇಳಿದ ಅನುಪಪತ್ತಿಯನ್ನು ಇಲ್ಲಿಯೂ ತಿಳಿಯಬೇಕು. 'ಅಯೋಗಾತ್' ಎಂದು ಇದೆ. ಅಂದರೆ ಕೇವಲ ಅವಯವವು ಫಲ ಕೊಡಲು ಸಮರ್ಥವಲ್ಲ ಎಂದು ಭಾವ. ಫಲವಿಲ್ಲದಿದ್ದರೆ ಬ್ರಹ್ಮಜಿಜ್ಞಾಸೆಯು ಬೇಡ ಎಂದರೆ ಅದಕ್ಕೆ 'ಬ್ರಹ್ಮಜಿಜ್ಞಾಸಾ' ಎಂಬ ಟೀಕಾವಾಕ್ಯ ಉತ್ತರಿಸುತ್ತಿದೆ.

'ಯತೋऽತಃ' ಎಂದು ಇದೆ. ಇದಕ್ಕೆ 'ಇತ್ಯತ ಆಹ' ಎಂಬ ಭಾಷ್ಯ ವಾಕ್ಯದ ಜೊತೆ 'ಯತಃ' ಯಾವಕಾರಣದಿಂದ ಶಂಕಾ ಪ್ರಾಪ್ತವಾಯಿತೋ 'ಅತಃ' ಆಕಾರಣದಿಂದ ಎಂದು ಯತಃ ಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ಯೋಜನೆ ಮಾಡಬೇಕು.



## ವಿಷಯ ಹಾಗೂ ಪೂರ್ವಪಕ್ಷ

**भाष्यम्– आनन्दमयो ब्रह्मादिः प्रकृतिर्विष्णुर्वा । ब्रह्मशब्दाद् हिरण्यगर्भस्य प्राप्तिः । शतानन्दनाम्ना च[१] ।**

---

(१) भाष्यदीपिका – अत्र सयुक्तिकं पूर्वपक्षानाह – ब्रह्मशब्दादिति ।। आनन्दमय-मधिकृत्योदाहृते 'अस्ति ब्रह्मेति चेद् वेद' (तै.उ. २-६-१.) इत्यादौ श्रुताद् ब्रह्मशब्दादित्यर्थः । ब्रह्मशब्दस्यान्यत्रापि वृत्तेः कथं तेन चतुर्मुखस्याऽनन्दमयत्वनिश्चय इत्यतो युक्त्यन्तरमाह – शतेति ।। चोऽप्यर्थे समुच्चये । 'ते ये शतं प्रजापतेरानन्दाः, स एको ब्रह्मण आनन्दः' (तै.उ. २-८-४.) इति वाक्यादर्थात् सूचितेन शतानन्द-नाम्नेत्यर्थः । यद्वा – आनन्दमयशब्दसमानार्थकेन हिरण्यगर्भे विद्यमानेन शतानन्द-नाम्नेत्यर्थः । 'प्राप्तिः' आनन्दमयत्वस्येति शेषः । तथा च – हिरण्यगर्भस्याऽनन्दमयत्वस्य प्राप्तिरित्यन्वयः ।।

एवं सङ्गतिं फलं चोक्त्वा विषयसंशयौ दर्शयति – आनन्दमय इति ।। आनन्दमय इत्युपलक्षकपदेन विषयो दर्शितः । ब्रह्मादिरित्यत्र ब्रह्मा आदिर्यस्य जीवसङ्घस्येति विग्रहः । ब्रह्मा चतुर्मुखः, आदिशब्देन रुद्रेन्द्रबृहस्पतिमुखा देवास्तत्तद्देहगतजीवाश्च गृह्यन्ते । प्रकृतिशब्देन च चित्प्रकृतिः । 'इति संशयः' इति शेषः ।

ಆನಂದಮಯಶಬ್ದದಿಂದ ವಾಚ್ಯನಾದವನು ಬ್ರಹ್ಮಾದಿಗಳೋ, ಜಡಪ್ರಕೃತಿಯೋ, ಲಕ್ಷ್ಮೀದೇವಿಯೋ, ಅಥವಾ ವಿಷ್ಣುವೋ? ಎಂದು ಸಂಶಯ. ಬ್ರಹ್ಮಶಬ್ದದ ಬಲದಿಂದ ಚತುರ್ಮುಖಬ್ರಹ್ಮರೇ ಆನಂದಮಯರಾಗುತ್ತಾರೆ. ಮತ್ತು ಆನಂದಮಯಶಬ್ದದ ಅರ್ಥವನ್ನೇ ಹೇಳುವ ಶತಾನಂದ ಎಂಬ ಹೆಸರು ಚತುರ್ಮುಖನಿಗಿದೆ. ಹೀಗೆ ಬ್ರಹ್ಮಶಬ್ದ ಹಾಗೂ ಶತಾನಂದನಾಮದ ಬಲದಿಂದ ಚತುರ್ಮುಖರೇ ಆನಂದಮಯರು.

ಪ್ರತಿಪದಾರ್ಥ – ಇಲ್ಲಿಯ ತನಕ ಸಂಗತಿ ಹಾಗೂ ಅಧಿಕರಣದ ಫಲವನ್ನು ಹೇಳಿದ್ದಾಯಿತು. ಈಗ ವಿಷಯ ಹಾಗೂ ಸಂಶಯಗಳನ್ನು ಹೇಳುತ್ತಿದ್ದಾರೆ.

ಆನಂದಮಯಃ = ಆನಂದಮಯಶಬ್ದವಾಚ್ಯನಾದವನು, ಬ್ರಹ್ಮಾದಿಃ = ಚತುರ್ಮುಖಬ್ರಹ್ಮನೇ ಮೊದಲಾದ ಜೀವರಾಶಿಯೋ, ವಾ = ಅಥವಾ, ಪ್ರಕೃತಿಃ = ಜಡಪ್ರಕೃತಿ ಅಥವಾ ಚೇತನಪ್ರಕೃತಿಯೋ (ಲಕ್ಷ್ಮೀದೇವಿಯೋ), ವಾ = ಅಥವಾ, ವಿಷ್ಣುಃ = ವಿಷ್ಣುವೋ?

ಯುಕ್ತಿಬದ್ಧವಾದ ಪೂರ್ವಪಕ್ಷವನ್ನು ಹೇಳುತ್ತಿದ್ದಾರೆ.

ಬ್ರಹ್ಮಶಬ್ದಾತ್ = ಬ್ರಹ್ಮಶಬ್ದವಿರುವುದರಿಂದ, ಹಿರಣ್ಯಗರ್ಭಸ್ಯ = ಚತುರ್ಮುಖಬ್ರಹ್ಮನ, ಪ್ರಾಪ್ತಿಃ = ಪ್ರಾಪ್ತಿಯಾಗುತ್ತದೆ. ಚ = ಮತ್ತು, ಶತಾನಂದನಾಮ್ನಾ = ಶತಾನಂದನೆಂಬ ಹೆಸರಿರುವುದು ಸಹ ಮತ್ತೊಂದು ಕಾರಣ.

## ಚತುರ್ಮುಖನೆಂದು ಪೂರ್ವಪಕ್ಷ

**तत्वप्रकाशिका – एवं सङ्गतिमुक्त्वा विषयसंशयौ दर्शयति – आनन्दमय इति ।। अत्राऽऽनन्दमयो विषयः । स किं ब्रह्मादिजीवसमूहः, उत चेतनप्रकृतिः अथाचेतना किं वा विष्णुः? । 'ब्रह्माणि जीवाः' 'मम योनिर्महद्ब्रह्म' 'पञ्चभिः पञ्चभिर्ब्रह्म' इत्यादिना जीवादिषु ब्रह्मशब्दप्रयोगः सन्देहबीजमिति भावः ।**

**तत्र सयुक्तिकं पूर्वपक्षानाह – ब्रह्मशब्दादित्यादिना ।। आनन्दमयमधिकृत्य 'अस्ति ब्रह्मेति चेद्वेद' इति हिरण्यगर्भनिष्ठब्रह्मशब्दश्रवणात् तस्याऽऽनन्दमयत्वं युज्यते । ब्रह्मशब्दस्यान्यत्रापि वृत्तेः कथं तेन तन्निश्चय इति चेत् आनन्दमय शब्दार्थवच्छतानन्दनाम्ना च हिरण्यगर्भे विद्यमानेन तस्य प्राप्तेः ।**

ಹೀಗೆ ಸಂಗತಿಯನ್ನು ಹೇಳಿ ವಿಷಯ ಮತ್ತು ಸಂಶಯವನ್ನು ಆನಂದಮಯ' ಎಂಬುದರಿಂದ ತೋರಿಸುತ್ತಿದ್ದಾರೆ. ಈ ಅಧಿಕರಣದಲ್ಲಿ ಆನಂದಮಯನು ವಿಷಯ. ಆ ಆನಂದಮಯನು ಬ್ರಹ್ಮಾದಿಜೀವಸಮೂಹವೋ? ಅಥವಾ ಚೇತನಪ್ರಕೃತಿಯೋ? ಅಥವಾ ಅಚೇತನಪ್ರಕೃತಿಯೋ? ಅಥವಾ ವಿಷ್ಣುವೋ? ಎಂದು ಸಂದೇಹ. 'ಬ್ರಹ್ಮಾಣಿ ಜೀವಾಃ' 'ಮಮ ಯೋನಿರ್ಮಹದ್ ಬ್ರಹ್ಮ'

'ಪಂಚಭಿಃ ಪಂಚಭಿಃ ಬ್ರಹ್ಮ' ಎಂದು ಇವೇ ಮೊದಲಾದ ಶ್ರುತಿಗಳಲ್ಲಿ ಜೀವ ಮುಂತಾದವರಲ್ಲಿ ಬ್ರಹ್ಮಶಬ್ದಪ್ರಯೋಗ ಮಾಡಿರಬಹುದು. ಇದೇ ಸಂದೇಹಕ್ಕೆ ಕಾರಣವಾಗಿದೆ.

ಈ ವಿಷಯದಲ್ಲಿ ಯುಕ್ತಿಯುಕ್ತವಾದ ಪೂರ್ವಪಕ್ಷಗಳನ್ನು ''ಬ್ರಹ್ಮಶಬ್ದಾತ್'' ಎಂಬುದರಿಂದ ಹೇಳುತ್ತಿದ್ದಾರೆ.

ಈ ಆನಂದಮಯನ ವಿಷಯದಲ್ಲಿ 'ಅಸ್ತಿ ಬ್ರಹ್ಮೇತಿ ಚೇದ್ ವೇದ' ಎಂದು ಚತುರ್ಮುಖನಲ್ಲಿ ಪ್ರಯೋಗಿಸುವ 'ಬ್ರಹ್ಮ'ಶಬ್ದವನ್ನು ಪ್ರಯೋಗ ಮಾಡಿರುವುದರಿಂದ ಚತುರ್ಮುಖಬ್ರಹ್ಮನೇ ಆನಂದಮಯನು. ಬ್ರಹ್ಮಶಬ್ದವನ್ನು ಅವನಲ್ಲಿ ಅಲ್ಲದೆ ಬೇರೆ ಕಡೆಯೂ ಪ್ರಯೋಗ ಮಾಡುತ್ತಾರೆ. ಹಾಗಿರುವಾಗ ಕೇವಲ ಬ್ರಹ್ಮಶಬ್ದಪ್ರಯೋಗದಿಂದ ಆನಂದಮಯನು ಚತುರ್ಮುಖಬ್ರಹ್ಮನೇ ಎಂದು ಹೇಗೆ ನಿಶ್ಚಯಿಸುವಿರಿ? ಎಂದರೆ 'ಆನಂದಮಯ' ಶಬ್ದದ ಅರ್ಥರೂಪವಾದ 'ಶತಾನಂದ' ಎಂಬ ಹೆಸರು ಅವನಲ್ಲಿರುವುದರಿಂದ ಆನಂದಮಯನು ಚತುರ್ಮುಖಬ್ರಹ್ಮನೇ ಎಂದು ನಿಶ್ಚಯಿಸಬಹುದು.

ಪ್ರಕೃತಿಯು ಬ್ರಹ್ಮಪದವಾಚ್ಯವೆನ್ನಲು ಅನೇಕ ಪ್ರಮಾಣಗಳು

भावदीपः – **सङ्गतिमिति** ।। 'एतद् विचारस्य पूर्वसङ्गतत्वं पूर्वाक्षेपसमाधिरूपप्रयोजनं चोक्त्वा' इत्यर्थः । 'आनन्दमयो विषयः' इत्यन्नमयादेर्गुणिसामान्यवाचिन उपलक्षणम् । 'ब्रह्मादिः' इति भाष्यस्थ'आदि'पदार्थः 'जीव' इति । 'प्रकृति'शब्दार्थं द्वेधाह – **उतेति** ।। **ब्रह्माणीति** ।। 'ब्रह्माणि जीवाः सर्वेऽपि परब्रह्माणि मुक्तिगाः' इति परमश्रुतौ । 'मम योनिर्महद् ब्रह्म तस्मिन् गर्भं ददाम्यहम्' इति गीतायाम् ।

**''पञ्चभिः पञ्चभिर्ब्रह्म चतुर्भिर्दशभिस्तथा ।**
**एतच्चतुर्विंशतिकं गणं प्राधानिकं विदुः'' इति भागवते ।**

'जीवचिदचित्प्रकृतिषु यथाक्रमं ब्रह्मपदप्रयोगः' इत्यर्थः । विष्णौ तु 'तदेव ब्रह्म परमं कवीनाम्' इति स्फुटत्वादादिपदेनोक्तिः । 'योनिर्भार्या' इति गीतातात्पर्योक्तिः ।।

''ಸಂಗತಿಮ್'' ಎಂಬ ಅಂಶದಿಂದ 'ಈ ವಿಚಾರವು ಪೂರ್ವಕ್ಕೆ ಸಂಗತವಾಗಿದೆ ಮತ್ತು ಹಿಂದೆ ಬಂದಿರುವ ಆಕ್ಷೇಪಕ್ಕೆ ಸಮಾಧಾನರೂಪವಾದ ಪ್ರಯೋಜನವನ್ನು ಹೇಳಿದಂತಾಗಿದೆ' ಎಂಬ ಅಭಿಪ್ರಾಯವನ್ನು ತಿಳಿಸಿದ್ದಾರೆ. 'ಆನಂದಮಯೋ ವಿಷಯಃ' ಎಂಬ ಅಂಶವು 'ಅನ್ನಮಯವೇ ಮೊದಲಾದ ಗುಣಿಸಾಮಾನ್ಯವನ್ನು ತಿಳಿಸುವುದಕ್ಕೆ ಉಪಲಕ್ಷಣವಾಗಿದೆ'. ಭಾಷ್ಯದಲ್ಲಿರುವ 'ಬ್ರಹ್ಮಾದಿಃ' ಎಂಬ ವಾಕ್ಯದಲ್ಲಿರುವ ಆದಿಪದಕ್ಕೆ

'ಜೀವ' ಎಂಬರ್ಥವನ್ನು ತಿಳಿಸಿದ್ದಾರೆ. 'ಉತ'' ಇತ್ಯಾದಿ ವಾಕ್ಯದಿಂದ ಪ್ರಕೃತಿಶಬ್ದದ ಅರ್ಥವನ್ನು ಎರಡು ರೀತಿಯಾಗಿ ವಿವರಿಸಿದ್ದಾರೆ.

''ಬ್ರಹ್ಮಾಣಿ ಜೀವಾಃ'' ಎಂಬ ವಾಕ್ಯವು ಪರಮಶ್ರುತಿಯಲ್ಲಿ ಹೇಳಿದಂತೆ 'ಬ್ರಹ್ಮಾಣಿ ಜೀವಾಃ ಸರ್ವೇಽಪಿ ಪರಬ್ರಹ್ಮಾಣಿ ಮುಕ್ತಿಗಾಃ' (ಎಲ್ಲಾ ಜೀವರನ್ನು ಬ್ರಹ್ಮ ಎಂದು ಕರೆಯುತ್ತಾರೆ. ಮುಕ್ತಿಯಲ್ಲಿರುವ ಜೀವರನ್ನು ಪರಬ್ರಹ್ಮ ಎಂದು ಕರೆಯುತ್ತಾರೆ.) ಎಂಬ ವಾಕ್ಯದ ಪ್ರತೀಕರೂಪವಾಗಿದೆ.

''ಮಮ ಯೋನಿರ್ಮಹದ್‌ಬ್ರಹ್ಮ ತಸ್ಮಿನ್ ಗರ್ಭಂ ದದಾಮ್ಯಹಮ್' (ಮಹದ್ ಬ್ರಹ್ಮ ಎಂಬಹೆಸರುಳ್ಳ ಚಿತ್ಪ್ರಕೃತಿಯು ನನ್ನ ಭಾರ್ಯೆಯಾಗಿದ್ದಾಳೆ. ಅವಳಲ್ಲಿ ನಾನು ಗರ್ಭವನ್ನು ಇರಿಸುತ್ತೇನೆ.) ಎಂಬುದು ಗೀತಾವಾಕ್ಯವಾಗಿದೆ.

'ಪಂಚಭಿಃ ಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಸ್ತಥಾ ।
ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ ॥'

(ಪಂಚಭೂತಗಳು ಪಂಚತನ್ಮಾತ್ರಗಳು ಅವ್ಯಕ್ತ, ಮಹತ್, ಅಹಂಕಾರ, ಮನಸ್ ತತ್ವಗಳು ಮತ್ತು ಹತ್ತು ಇಂದ್ರಿಯಗಳು ಇವುಗಳಿಂದ ಪೂರ್ಣವಾದ ಈ ಇಪ್ಪತ್ತನಾಲ್ಕು ತತ್ವಗಳ ಸಮೂಹವು ಪ್ರಧಾನದ ಕಾರ್ಯವೆಂದು ಜ್ಞಾನಿಗಳು ತಿಳಿಸುತ್ತಾರೆ.) ಇದು ಭಾಗವತದ ವಾಕ್ಯವಾಗಿದೆ.

ಈ ವಾಕ್ಯಗಳಲ್ಲಿ ಹೇಳಿದಂತೆ ಜೀವನಲ್ಲಿ ಚಿತ್‌ಪ್ರಕೃತಿಯಲ್ಲಿ ಹಾಗೂ ಅಚಿತ್‌ಪ್ರಕೃತಿಯಲ್ಲಿ ಕ್ರಮವಾಗಿ ಬ್ರಹ್ಮಶಬ್ದವನ್ನು ಪ್ರಯೋಗ ಮಾಡಲಾಗಿದೆ ಎಂದರ್ಥ. 'ತದೇವ ಬ್ರಹ್ಮ ಪರಮಂ ಕವೀನಾಮ್' ಎಂಬಲ್ಲಿ ವಿಷ್ಣುವಿನಲ್ಲಿ ಸ್ಪಷ್ಟವಾಗಿ ಬ್ರಹ್ಮಪದದ ಪ್ರಯೋಗ ಇರುವುದರಿಂದ ಇದನ್ನು 'ಆದಿ'ಪದದಿಂದ ಗ್ರಹಿಸಿದ್ದಾರೆ. 'ಮಮ ಯೋನಿರ್ಮಹದ್ ಬ್ರಹ್ಮ' ಎಂಬ ವಾಕ್ಯದಲ್ಲಿ 'ಯೋನಿ'ಶಬ್ದಕ್ಕೆ 'ಭಾರ್ಯಾ'(ಹೆಂಡತಿ) ಎಂಬರ್ಥವನ್ನು ಗೀತಾತಾತ್ಪರ್ಯದಲ್ಲಿ ಹೇಳಲಾಗಿದೆ.

### ಹಿರಣ್ಯಗರ್ಭನು ಬ್ರಹ್ಮಪದವಾಚ್ಯನೆನ್ನಲು ಪ್ರಮಾಣ

भावदीपः – **हिरण्यगर्भनिष्ठेति** ।। अनेनान्नमयादावपि तत्प्राप्तिर्दर्शिता । सर्वत्र ब्रह्मशब्दश्रवणात् । **शब्दार्थवदिति** ।। 'शब्दार्थयुक्ता' इत्यर्थः । मयटः प्राचुर्यार्थत्वमुपेत्यैतदुक्तिः । 'ते ये शतं प्रजापतेरानन्दाः स एको ब्रह्मण आनन्दः' इति सूचितशतानन्दरूपतत्पर्यायशब्दवाच्यत्वात् तत्प्राप्तिरित्यर्थः ।।

''ಹಿರಣ್ಯಗರ್ಭನಿಷ್ಠಾ'' ಎಂಬಂಶದಿಂದ ಅನ್ನಮಯಾದಿಗಳಲ್ಲೂ ಕೂಡ ಹಿರಣ್ಯಗರ್ಭಾದಿ ನಿಷ್ಠತ್ವವನ್ನು ತೋರಿಸಲಾಗಿದೆ. ಎಲ್ಲಾ ಕಡೆಯೂ ಬ್ರಹ್ಮಶಬ್ದದ ಶ್ರವಣವಿರುವುದರಿಂದ ಈ ರೀತಿಯ ಅರ್ಥವು ಪ್ರಾಪ್ತವಾಗುತ್ತದೆ. ''ಶಬ್ದಾರ್ಥವತ್'' ಎಂಬ ಪದಕ್ಕೆ 'ಶಬ್ದಾರ್ಥಗಳಿಂದ ಕೂಡಿದ' ಎಂದರ್ಥ. ಇಲ್ಲಿ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯಾರ್ಥವನ್ನು ಒಪ್ಪಿ ಈ ರೀತಿಯ ಅರ್ಥವನ್ನು ಹೇಳಲಾಗಿದೆ. ''ತೇ ಯೇ ಶತಂ ಪ್ರಜಾಪತೇರಾನಂದಾಃ ಸ ಏಕೋ ಬ್ರಹ್ಮಣ ಆನಂದಃ' ಎಂಬ ವಾಕ್ಯದಲ್ಲಿ ಸೂಚಿಸಿದಂತೆ

ಶತಾನಂದರೂಪವಾದ ಬ್ರಹ್ಮನನ್ನು ಹೇಳುವ ಪರ್ಯಾಯಶಬ್ದದಿಂದ ವಾಚ್ಯವಾಗಿರುವುದರಿಂದ ಶತಾನಂದಪದದಿಂದ ಹಿರಣ್ಯಗರ್ಭನು ಪ್ರಾಪ್ತನಾಗುತ್ತಾನೆ ಎಂದರ್ಥ.

**वाक्यार्थमञ्जरी –** ब्रह्माणि जीवाः सर्वेपि परब्रह्माणि मुक्तिगा इति श्रुतिः । ब्रह्माणि ब्रह्मशब्दवाच्या इत्यर्थः । 'मम योनिर्महद् ब्रह्म तस्मिन् गर्भं दधाम्यहम्' इति गीतावचनम् । महद् ब्रह्म चित् प्रकृतिः । "महती ब्रह्मणी द्वेतु प्रकृतिश्च महेश्वरः" इत्युक्तेः । मम योनिर्भार्या । योनिर्भार्येति गीतातात्पर्योक्तेः । तस्मिन् ब्रह्मणि अहं गर्भं दधामि इत्यर्थः ।

**पञ्चभिः पञ्चभिर्ब्रह्म चतुर्भिर्दशभिस्तथा ।**
**एतच्चतुर्विंशतिकं गणं प्राधानिकं विदुः ।।**

इति भागवतवचनम् । पञ्चभिः महाभूतैः । पञ्चभि तन्मात्राभिः । चतुर्भिः महदहङ्कार-मनोबुद्धिभिः दशभिरिन्द्रियैश्च ब्रह्म पूरितमेतच्चतुर्विंशतिकं गणं प्रधानकार्यं विदुरित्यर्थः । "तदेव ब्रह्म परमं कवीनाम्" इति हरौ प्रयोगः स्फुट इत्यादिशब्देन तद् ग्रहणम् । इत्यादिना क्रमेण जीवादिषु प्रसिद्धब्रह्मशब्दस्य आनन्दमये प्रयोग इत्यर्थः । अधिकृत्य उद्दिश्य ।। **आनन्दमय-शब्दार्थवदिति ।।** आनन्दमयशब्दस्य बह्वानन्दत्वं तद्युक्तेत्यर्थः । मयट्शतशब्दयोः बह्वर्थकत्वा-दिति भावः ।।

**हिरण्यगर्भे विद्यमानेनेति ।।** शतानन्दः शतधृतिरित्युक्तेरितिभावः ।।

ಬ್ರಹ್ಮಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನೆನ್ನಲು ಅನೇಕ ಪ್ರಮಾಣಗಳಿವೆ. 'ಬ್ರಹ್ಮಾಣಿ ಜೀವಾಃ ಸರ್ವೇಪಿ ಪರಬ್ರಹ್ಮಣಿ ಮುಕ್ತಿಗಾಃ' ಎಂಬ ಶ್ರುತಿ ಚತುರ್ಮುಖಬ್ರಹ್ಮನಲ್ಲಿ ಬ್ರಹ್ಮಶಬ್ದವು ಪ್ರಸಿದ್ಧವಾಗಿದೆ ಎಂದರ್ಥ. 'ಮಮಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಮ್' ಎಂದು ಗೀತಾವಚನವು 'ಮಹದ್ಬ್ರಹ್ಮ ಚಿತ್ಪ್ರಕೃತಿಃ' 'ಮಹತೀ ಬ್ರಹ್ಮಣೀ ದ್ವೇ ತು ಪ್ರಕೃತಿಶ್ಚ ಮಹೇಶ್ವರ:' ಇತ್ಯಾದಿ ವಚನಗಳು ಪ್ರಸಿದ್ಧವಾಗಿವೆ. 'ತಸ್ಮಿನ್' ಎಂದರೆ ಬ್ರಹ್ಮನಲ್ಲಿ ನಾನು ಗರ್ಭವನ್ನು ಧರಿಸುತ್ತೇನೆ.

'ಪಂಚಭಿಃ ಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಸ್ತಥಾ ।
ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ' ॥

ಎಂಬ ಭಾಗವತವಚನವೂ ಆಧಾರವಾಗಿದೆ. ಪಂಚಭಿಃ - ಮಹಾಭೂತಗಳಿಂದ, ಪಂಚಭಿಃ - ತನ್ಮಾತ್ರಾಗಳಿಂದ, ಚತುರ್ಭಿಃ -ಮಹತ್,ಅಹಂಕಾರ, ಮನಸ್ಸು, ಬುದ್ಧಿಗಳಿಂದ, ದಶಭಿಃ - ಹತ್ತು ಇಂದ್ರಿಯಗಳಿಂದ ಬ್ರಹ್ಮನು ಪೂರ್ಣನಾಗಿ, ಈ ಇಪ್ಪತ್ತುನಾಲ್ಕು ಗಣಂ - ಪ್ರಧಾನಕಾರ್ಯವನ್ನು ವಿದು: - ತಿಳಿದಿದ್ದಾನೆ ಎಂದರ್ಥ. 'ತದೇವ ಬ್ರಹ್ಮ ಪರಮಂ ಕವೀನಾಂ' ಎಂದು ಹರಿಯಲ್ಲಿ ಪ್ರಯೋಗವು ಸ್ಫುಟವಾಗಿ ತಿಳಿಯುತ್ತದೆ. ಇತ್ಯಾದಿ ಪ್ರಮಾಣಗಳಿಂದ ಜೀವಾದಿಗಳಲ್ಲಿ ಪ್ರಸಿದ್ಧವಾದ ಬ್ರಹ್ಮಶಬ್ದವನ್ನು ಆನಂದಮಯನಲ್ಲಿ ಪ್ರಯೋಗ ಮಾಡಲಾಗಿದೆಯೆಂದರ್ಥ.

*ಪರಿಪೂರ್ಣಚಂದ್ರಿಕಾ*

'ಅಧಿಕೃತ್ಯ' ಎಂದರೆ ಉದ್ದೇಶಿಸಿ ಎಂದರ್ಥ.

'ಆನಂದಮಯಶಬ್ದಾರ್ಥವತ್' ಎಂದು ಇದೆ. ಇದರ ಅಭಿಪ್ರಾಯ ಆನಂದಮಯಶಬ್ದಕ್ಕೆ ಬಹಳವಾದ ಆನಂದವುಳ್ಳವನೆಂದು. 'ಮಯಟ್' 'ಶತ'ಶಬ್ದಗಳಿಗೆ ಬಹು ಎಂಬರ್ಥ ಇರುವುದರಿಂದ 'ಹಿರಣ್ಯಗರ್ಭೇ ವಿದ್ಯಮಾನೇನ' ಎಂದು ಏಕೆ ಹೇಳಿದರೆಂದರೆ 'ಶತಾನಂದಃ ಶತಧೃತಿಃ' ಎಂದು ವಾಕ್ಯವಿರುವುದರಿಂದ.

• • • • •

## ರುದ್ರಾದಿಗಳು ಆನಂದಮಯರೆಂದು ಪೂರ್ವಪಕ್ಷ

**भाष्यम्– अष्टमूर्तित्वात् सूर्ये प्रोक्तत्वाच्च रुद्रस्य । एवमन्येषामपि[१] ।**

ಅಥವಾ ರುದ್ರನೂ ಆನಂದಮಯನಾಗಬಹುದು ಏಕೆಂದರೆ, ಆನಂದಮಯಪ್ರಕರಣದಲ್ಲಿ 'ಯಶ್ಚಾಸಾವಾದಿತ್ಯೇ' ಎಂಬುದಾಗಿ ಸೂರ್ಯಮಂಡಲದಲ್ಲಿ ಆನಂದಮಯನ ಇರುವಿಕೆಯನ್ನು ಹೇಳಲಾಗಿದೆ. ಸೂರ್ಯಮಂಡಲವು ರುದ್ರನ ಅಷ್ಟಮೂರ್ತಿಗಳಲ್ಲಿ ಒಂದಾಗಿದೆ. ಆದ್ದರಿಂದ ರುದ್ರನೇ ಆನಂದಮಯನು.

ಅಥವಾ ಇಂದ್ರ, ಬೃಹಸ್ಪತ್ಯಾದಿಗಳೂ ಸಹ ಆನಂದಮಯರಾಗಬಹುದು. ಏಕೆಂದರೆ, ಅವರೂ ಸಹ ಸೂರ್ಯನಿಯಾಮಕರಾಗಿ ಸೂರ್ಯನಲ್ಲಿರುತ್ತಾರೆ.

ಪ್ರತಿಪದಾರ್ಥ– ಇಲ್ಲಿಯವರೆಗೂ ಪೂರ್ವಪಕ್ಷವನ್ನು ತೋರಿಸಿ, ಮತ್ತೊಂದು ಬಗೆಯ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ.

'ಯಶ್ಚಾಸಾವಾದಿತ್ಯೇ' ಎಂಬ ಶ್ರುತಿಯಲ್ಲಿ, ಸೂರ್ಯೇ = ಸೂರ್ಯಮಂಡಲದಲ್ಲಿ, ಪ್ರೋಕ್ತತ್ವಾಚ್ಚ = ಆನಂದಮಯನ ಇರುವಿಕೆಯನ್ನು ಹೇಳಿರುವುದರಿಂದಲೂ, ಅಷ್ಟಮೂರ್ತಿತ್ವಾತ್ = ರುದ್ರದೇವರಿಗೆ ಸೂರ್ಯ ಮೊದಲಾದ ಎಂಟು ಸ್ಥಾನಗಳನ್ನು ಹೇಳಿರುವುದರಿಂದಲೂ, ರುದ್ರಸ್ಯ = ರುದ್ರನಿಗೂ, ಪ್ರಾಪ್ತಿಃ = ಆನಂದಮಯಶಬ್ದದ ಪ್ರತಿಪಾದ್ಯತ್ವವು ಹೊಂದುತ್ತದೆ.

---

(१) भाष्यदीपिका – एवमेकं पूर्वपक्षमभिधाय अन्यमाह – अष्टमूर्तित्वादिति ।। चशब्दो रुद्रस्य चेति सम्बध्यते । प्राप्तिरित्यस्यानुकर्षणार्थो वा । तथा च - रुद्रस्य चाऽनन्दमयत्वप्राप्तिः । कुतः? सूर्ये प्रोक्तत्वात् । 'यश्चासावादित्ये' (तै.उ. २-८-५) इत्यानन्दमयस्य सूर्ये स्थितेरुक्तत्वाद् रुद्रस्य च सूर्याद्यष्टशरीरत्वादित्यर्थः । तथा च – रुद्रलिङ्गस्य आनन्दमये श्रुतत्वाद् आनन्दमयो रुद्र एवेति भावः । रुद्रस्य सूर्याद्यष्टप्रतिमत्वं च –

'सूर्यो जलं मही वह्निर्वायुराकाश एव च ।
दीक्षितो ब्राह्मणः सोम इत्येतास्तनवः क्रमात् ।।' इति विष्णुपुराणवाक्यात् सिद्धम् ।

पूर्वपक्षान्तरं दर्शयति – एवमिति ।। उक्ताभ्याम् 'अन्येषाम्' इन्द्रबृहस्पत्यादीनामपि 'एवम्' उक्तप्रकारेण स्वावरसूर्याद्यधिष्ठातृत्वादिनाऽऽनन्दमयत्वप्राप्तिरित्यर्थः ।

ಮತ್ತೊಂದು ಬಗೆಯ ಪೂರ್ವಪಕ್ಷ. ಏವಮ್ = ಇದೇ ರೀತಿಯಾಗಿ ಸೂರ್ಯಮಂಡಲಸ್ಥಿತತ್ವ ಎಂಬ ಕಾರಣದಿಂದಲೇ, ಅನ್ಯೇಷಾಮಪಿ = ಇಂದ್ರ; ಬೃಹಸ್ಪತಿ ಮೊದಲಾದವರಿಗೂ, ಪ್ರಾಪ್ತಿಃ = ಆನಂದಮಯಶಬ್ದದ ಪ್ರತಿಪಾದ್ಯತ್ವವು ಕೂಡುತ್ತದೆ.

## ರುದ್ರನೂ ಸಹ ಆನಂದಮಯನು

**तत्वप्रकाशिका – रुद्रस्य वाऽऽनन्दमयत्वप्राप्तिः । 'यश्चासावादित्ये' इत्यानन्दमयस्य सूर्ये प्रोक्तत्वाद् रुद्रस्य सूर्याद्यष्टप्रतिमत्वात् । तथा च विष्णुपुराणे ।**

**'सूर्यो जलं मही वन्हिर्वायुराकाशमेव च ।**
**दीक्षितो ब्राह्मणः सोम इत्येतास्तनवः क्रमात्' इति ।**

**एवमिन्द्रबृहस्पत्यादीनामपि सूर्याधिष्ठातृत्वादिनाऽऽनन्दमयत्वप्राप्तिः ।**

ಅಥವಾ ರುದ್ರನು ಆನಂದಮಯಶಬ್ದವಾಚ್ಯನು ಎಂದು ಹೇಳಬಹುದು. ಹೇಗೆಂದರೆ 'ಯಶ್ಚಾಸಾವಾದಿತ್ಯೇ' (ಆನಂದಮಯನು ಸೂರ್ಯನಲ್ಲಿದ್ದಾನೆ) ಎಂದು ಹೇಳಿದ್ದಾರೆ. 'ಸೂರ್ಯ ಮೊದಲಾದ ಎಂಟು ವಸ್ತುಗಳು ರುದ್ರನಿಗೆ ಪ್ರತಿಮೆಗಳು (ಆವಾಸಸ್ಥಾನ)' ಎಂದು ವಿಷ್ಣುಪುರಾಣದಲ್ಲಿ ಹೇಳಲ್ಪಟ್ಟಿದೆ. ''ಸೂರ್ಯ, ನೀರು, ಭೂಮಿ, ಅಗ್ನಿ, ವಾಯು, ಆಕಾಶ, ದೀಕ್ಷಿತನಾದ ಬ್ರಾಹ್ಮಣ ಮತ್ತು ಚಂದ್ರ ಇವುಗಳು ಕ್ರಮವಾಗಿ ಶರೀರಗಳು'' ಎಂದು. ಹೀಗೆಯೇ ಇಂದ್ರ, ಬೃಹಸ್ಪತಿ ಮೊದಲಾದವರೂ ಕೂಡ ಸೂರ್ಯನಲ್ಲಿರುತ್ತಾರೆ. ಹಾಗಾಗಿ ಅವರೂ ಕೂಡ ಆನಂದಮಯಶಬ್ದವಾಚ್ಯರು ಎನ್ನಬಹುದು.

### ಸ್ಥಾನಭೇದದಿಂದ ಆನಂದಮಯನು ಭಿನ್ನನಾಗಲಾರ

भावदीपः – **यश्चासाविति** ।। आनन्दमयशब्दोक्तस्य 'यतो वाचः' इत्युत्तरत्रावाङ्मनसगोचरत्वेनानन्दानन्त्यं वक्तुं पूर्वत्र ब्रह्मादीनां तारतम्येन परिमितानन्दोक्तावानन्दमयस्यापि प्राक् 'तदेवानुप्राविशत्' इति सर्वत्र बहुरूपेण प्रविष्टस्य स्थानभेदकृतभेदशङ्कायां नेति वक्तुं 'स यश्चायं पुरुषे यश्चासावादित्ये स एकः' इत्यस्य प्रवृत्तेः 'असौ' इत्यानन्दमयपरामर्श इति भावः । 'एवमन्येषाम्' इत्येतद् व्यनक्ति – **एवमिन्द्रेति** ।। **सूर्येति** ।। तेषां सूर्यादुत्तमत्वेन तन्नियामकतयावस्थानमित्यर्थः । आदिपदेन 'स एक इन्द्रस्य आनन्दः । स एको बृहस्पतेरानन्दः' इति । इन्द्रबृहस्पत्यादिश्रुत्यादिकं ग्राह्यम् । आनन्दमयत्वेति ।। तस्यैव प्रकृतत्वात् स इति परामर्श इति भावः ।

"ಯಶ್ಚಾಸೌ" ಇತ್ಯಾದಿ ವಾಕ್ಯದಿಂದ ಆನಂದಮಯಶಬ್ದದಿಂದ ಹೇಳಲ್ಪಡುವ ವ್ಯಕ್ತಿಗೆ ಮುಂದಿನ ಭಾಗದಲ್ಲಿ 'ಯತೋ ವಾಚೋ' ಇತ್ಯಾದಿ ವಾಕ್ಯಗಳಿಂದ 'ಅವನು ವಾಙ್ಮನಸಗೋಚರನಾಗಿಲ್ಲದಿರುವುದರಿಂದ ಅನಂತ ಆನಂದವುಳ್ಳವನಾಗಿದ್ದಾನೆ' ಎಂದು ಹೇಳಲಾಗಿದೆ. ಇದನ್ನು ತಿಳಿಸುವುದಕ್ಕಾಗಿ ಹಿಂದೆ ಬ್ರಹ್ಮಾದಿಗಳಿಗೆ ತಾರತಮ್ಯದಿಂದ ಪರಿಮಿತ ಆನಂದವನ್ನು ತಿಳಿಸಲಾಗಿದೆ. ಈ ಸಂದರ್ಭದಲ್ಲಿ ಆನಂದಮಯನಿಗೂ ಕೂಡ ಹಿಂದಿನ ವಾಕ್ಯಗಳಲ್ಲಿ ಹೇಳಿದಂತೆ, "ತದೇವಾನುಪ್ರಾವಿಶತ್" ಇತ್ಯಾದಿ ವಾಕ್ಯಗಳಂತೆ ಅನೇಕ ಕಡೆಗಳಲ್ಲಿ ಅನೇಕರೂಪಗಳಿಂದ ಪ್ರವೇಶಿಸಿದ ಆನಂದಮಯನಿಗೆ ಸ್ಥಾನಭೇದದಿಂದ ಭೇದದ ಶಂಕೆ ಬರಬಹುದು. ಹೀಗೆ ಭೇದದ ಶಂಕೆ ಬಂದಾಗ ಈ ಭೇದವಿಲ್ಲ ಎಂದು ತಿಳಿಸಲು 'ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ' ಎಂಬ ವಾಕ್ಯ ಹೊರಟಿರುವುದರಿಂದ ಇಲ್ಲಿರುವ 'ಅಸೌ' ಎಂಬ ಶಬ್ದದಿಂದ ಆನಂದಮಯನನ್ನು ಸ್ವೀಕರಿಸಬೇಕಾಗುತ್ತದೆ. ಹೀಗೆ ಆದಿತ್ಯರಲ್ಲಿ ಸೇರಿದ ರುದ್ರನನ್ನು ಆನಂದಮಯಶಬ್ದವು ಹೇಳಬಹುದು ಎಂದು ಅಭಿಪ್ರಾಯ.

ಭಾಷ್ಯದಲ್ಲಿ ಹೇಳಿದ 'ಏವಮನ್ಯೇಷಾಮ್' ಎಂಬ ವಾಕ್ಯದ ಅರ್ಥವನ್ನು "ಏವಮಿಂದ್ರ" ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. "ಸೂರ್ಯ" ಇತ್ಯಾದಿ ವಾಕ್ಯಾಂಶಕ್ಕೆ ಇಂದ್ರಬೃಹಸ್ಪತ್ಯಾದಿಗಳು ಸೂರ್ಯನಿಗಿಂತ ಉತ್ತಮರಾದುದರಿಂದ ಸೂರ್ಯನಿಗೆ ನಿಯಾಮಕರಾಗಿ ಸೂರ್ಯನಲ್ಲಿ ಇದ್ದಾರೆ' ಎಂದು ಅರ್ಥ. 'ಆದಿ'ಪದದಿಂದ ' ಸ ಏಕ ಇಂದ್ರಸ್ಯ ಆನಂದಃ। ಸ ಏಕೋ ಬೃಹಸ್ಪತೇರಾನಂದಃ' ಎಂಬ ಬೃಹಸ್ಪತ್ಯಾದಿ ಶ್ರುತಿಗಳನ್ನು ಸ್ವೀಕರಿಸಬೇಕು. 'ಆನಂದಮಯತ್ವ' ಇತ್ಯಾದಿ ವಾಕ್ಯಾಂಶದಿಂದ ಇಲ್ಲಿ ಆನಂದಮಯನೇ ಪ್ರಕೃತನಾಗಿರುವುದರಿಂದ 'ಸಃ' ಎಂಬುದಾಗಿ ಭಾಷ್ಯದಲ್ಲಿ ಆನಂದಮಯನನ್ನು ಸ್ವೀಕರಿಸಿದ್ದಾರೆ ಎಂಬ ಅಭಿಪ್ರಾಯವನ್ನು ತಿಳಿಸಿದ್ದಾರೆ.

**वाक्यार्थमञ्जरी – सूर्याधिष्ठातृत्वादिनेति** ।। तेषां सूर्यादुत्तमत्वेन नियामकतया तदन्तर्गतत्वादिनेत्यर्थः । आदिशब्देन साधारणब्रह्मशब्दो विवक्षितः । अनेनैवमन्येषां इत्येतत् चतुर्मुखरुद्रव्यतिरिक्तसूर्याधिष्ठातृमात्रपरम् । अन्येषां सर्वजीवानामिति पृथगुक्तेरित्युक्तं भवति ।

'ಸೂರ್ಯಾಧಿಷ್ಠಾತೃತ್ವಾದಿನಾ' ಎಂದು ಇದೆ. ಸೂರ್ಯನಿಗಿಂತ ಉತ್ತಮವಾದ ದೇವತೆಗಳು ನಿಯಾಮಕರಾಗಿ ಸೂರ್ಯನಲ್ಲಿ ಅಂತರ್ಗತರಾಗಿರುತ್ತಾರೆಂದು ತಿಳಿಯಬೇಕು. 'ಆದಿ' ಶಬ್ದದಿಂದ ಎಲ್ಲರಲ್ಲಿ ಸಾಧಾರಣವಾದ ಬ್ರಹ್ಮಶಬ್ದವನ್ನು ವಿವಕ್ಷೆ ಮಾಡಿದ್ದಾರೆ. ಆದ್ದರಿಂದಲೇ 'ಏವಮನ್ಯೇಷಾಂ' ಎಂದು ಚತುರ್ಮುಖಬ್ರಹ್ಮ ರುದ್ರರಿಗಿಂತ ವ್ಯತಿರಿಕ್ತವಾದ ಸೂರ್ಯಾಧಿಷ್ಠಾನವನ್ನು ಮಾತ್ರ ವಿವಕ್ಷಿಸಬೇಕು. ಏಕೆಂದರೆ ಉಳಿದವರೆನ್ನೆಲ್ಲ ಪ್ರತ್ಯೇಕವಾಗಿ ಉಲ್ಲೇಖಿಸಿದ್ದರಿಂದ.

• • • • •

## ನಾಲ್ಕನೆಯ ಪೂರ್ವಪಕ್ಷ

**भाष्यम् – 'मम योनिर्महद् ब्रह्म' (भ. गी. १४-३.) इति ब्रह्मशब्दात्, बहुभावाच प्रकृतेः ।**

ನಾಲ್ಕನೆಯ ಪೂರ್ವಪಕ್ಷ - ಶ್ರೀಕೃಷ್ಣನು ಭಗವದ್ಗೀತೆಯಲ್ಲಿ 'ಮಮ ಯೋನಿರ್ಮಹದ್ ಬ್ರಹ್ಮ' ನನ್ನ ಪತ್ನಿಯಾದ ಲಕ್ಷ್ಮಿಯು ಬ್ರಹ್ಮಶಬ್ದವಾಚ್ಯಳು ಎಂದು ಹೇಳಿದ್ದಾನೆ. ಹೀಗೆ ಬ್ರಹ್ಮಶಬ್ದವು ಲಕ್ಷ್ಮೀದೇವಿಯಲ್ಲಿಯೂ ಪ್ರಸಿದ್ಧವಾದ್ದರಿಂದ ಆನಂದಮಯಳು ಲಕ್ಷ್ಮೀದೇವಿಯೇ ಆಗಬೇಕು. ಮತ್ತು 'ಬಹು ಸ್ಯಾಮ್ ಪ್ರಜಾಯೇಯ' ಇತ್ಯಾದಿಯಾಗಿ ಜಗತ್ತಿನ ಅನೇಕಪದಾರ್ಥರೂಪದಲ್ಲಿ ಆನಂದಮಯವು ರೂಪಗೊಂಡಿತು ಎಂದು ಹೇಳಿದ್ದರಿಂದ ಜಡಪ್ರಕೃತಿಯೇ ಅಂತಹ ಸ್ಥೂಲರೂಪವನ್ನು ಪಡೆಯಲು ಸಾಧ್ಯ. ಆ ಜಡಪ್ರಕೃತಿಗೆ ನಿಯಾಮಕಳಾದ್ದರಿಂದ ಲಕ್ಷ್ಮೀದೇವಿಯೂ ಕೂಡ ಬಹುರೂಪವನ್ನು ಹೊಂದುತ್ತಾಳೆ. ಆದ್ದರಿಂದ ಆನಂದಮಯಶಬ್ದಪ್ರತಿಪಾದ್ಯಳು ಲಕ್ಷ್ಮೀದೇವಿಯೇ ಆಗುತ್ತಾಳೆ.

ಪ್ರತಿಪದಾರ್ಥ – ಯುಕ್ತಿಬದ್ಧವಾದ ಮತ್ತೊಂದು ಬಗೆಯ ಪೂರ್ವಪಕ್ಷ ಹೀಗಿದೆ(೧) –

'ಮಮ ಯೋನಿರ್ಮಹದ್ ಬ್ರಹ್ಮ' ಇತಿ = 'ಮಮ ಯೋನಿರ್ಮಹದ್‌ಬ್ರಹ್ಮ ತಸ್ಮಿನ್ ಗರ್ಭಂ ದದಾಮ್ಯಹಮ್' ಎಂದು ಶ್ರೀಕೃಷ್ಣನು ಗೀತೆಯಲ್ಲಿ ತಿಳಿಸಿದಂತೆ, 'ಬ್ರಹ್ಮಶಬ್ದಾತ್' = ಬ್ರಹ್ಮಶಬ್ದವನ್ನು ಲಕ್ಷ್ಮೀದೇವಿಯಲ್ಲಿ ಹೇಳಿರುವುದರಿಂದ, ಚ = ಮತ್ತು, ಪ್ರಕೃತೇಃ = ಚಿತ್‌ಪ್ರಕೃತಿಯಾದ ಲಕ್ಷ್ಮಿಗೂ, ಬಹುಭಾವಾತ್= ಆನಂದ-ಮಯನಲ್ಲಿ ಹೇಳಿರುವ ಬಹುರೂಪತೆಯು ಇರುವುದರಿಂದ.

ಲಕ್ಷ್ಮೀದೇವಿಯು ಆನಂದಮಯ ಎನಿಸಬಹುದು. ಅಥವಾ ಪ್ರಕೃತೇಃ = ಜಡಪ್ರಕೃತಿಯಲ್ಲಿ ಬಹುಭಾವಾತ್ = ಬಹುಭವನವಿರುವುದರಿಂದ, ಜಡಪ್ರಕೃತಿಯು ಆನಂದಮಯ ಎನಿಸಬಹುದು.

---

(१) भाष्यदीपिका – सयुक्तिकं पूर्वपक्षान्तरमाह – ममेति ।। योजना तु चित्प्रकृतेर्वाऽनन्दमयत्वप्राप्तिः । कुतः ? ब्रह्मशब्दात् । आनन्दमये श्रुतस्य ब्रह्मशब्दस्य 'मम योनिर्महद् ब्रह्म तस्मिन् गर्भं दधाम्यहम्' इति गीतायां चित्प्रकृतौ प्रयोगादिति । स्मृतौ – महद् ब्रह्मेति भिन्ने पदे । तथा च महद्ब्रह्मशब्दवाच्या लक्ष्मीः मम योनिः गर्भाधानार्थं भार्या । तस्मिन् ब्रह्मणि प्रकृतावहं गर्भं दधामि दध इत्यर्थः । अर्जुनं प्रति कृष्णवाक्यमेतत् । कथं सावकाशेन ब्रह्मशब्देन प्रकृतेरानन्दमयत्वनिश्चय इत्यतो हेत्वन्तरमाह – 'बहुभावात्' बहुरूपत्वाच्चेति । चो हेतुसमुच्चये । तथा च 'सोऽकामयत । बहु स्याम्' (तै.उ.२-६-२) इत्यानन्दमयस्य 'बहुभावात्' बहुभावश्रवणात् तदभिमानित्वाच्चित्प्रकृतेः स्वाभिमन्यमान-विकारिजडद्वारा बहुभावसम्भवादित्यर्थः । एवं प्रकृतेरित्यस्य जडप्रकृतेरित्यर्थाश्रयेण पूर्वपक्षान्तरमपि द्रष्टव्यम् । योजना तु जडप्रकृतेर्वाऽनन्दमयत्वप्राप्तिः । कुतः? अभिमानित्वेन विना साक्षाद् बहुभावादेवेति ।

## ಚೇತನಪ್ರಕೃತಿಯೂ ಆನಂದಮಯವಾಗಬಹುದು

**तत्वप्रकाशिका – चित्प्रकृतेर्वा आनन्दमयत्वप्राप्तिः । आनन्दमयनिष्ठब्रह्मशब्दस्य 'मम योनिर्महद् ब्रह्म' इति चित्प्रकृतौ प्रयोगात् । कथं सावकाशब्रह्मशब्देनायं निर्णय इति चेत् । 'सोऽकामयत बहु स्याम्' इत्यानन्दमयस्य बहुभावश्रवणात् । तदभिमानित्वाच्चित्प्रकृतेः । अचित्प्रकृतेर्वाऽऽनन्दमयत्वप्राप्तिः । बहुभावादेव ।**

ಅಥವಾ ಚೇತನಪ್ರಕೃತಿಯು ಆನಂದಮಯಶಬ್ದವಾಚ್ಯ ಎನ್ನಬಹುದು. ಏಕೆಂದರೆ ಆನಂದಮಯನಲ್ಲಿ ಪ್ರಯೋಗಿಸುವ ಬ್ರಹ್ಮಶಬ್ದವನ್ನು 'ಮಮ ಯೋನಿರ್ಮಹದ್‌ಬ್ರಹ್ಮ' ಎಂದು ಚೇತನಪ್ರಕೃತಿಯಲ್ಲಿ ಪ್ರಯೋಗಿಸಿದ್ದಾರೆ. ''ಬ್ರಹ್ಮಶಬ್ದವನ್ನು ಅನೇಕಕಡೆ ಪ್ರಯೋಗಿಸುತ್ತಾರೆ. ಅದು ಸಾವಕಾಶವಾದ್ದರಿಂದ ಕೇವಲ ಬ್ರಹ್ಮಶಬ್ದಪ್ರಯೋಗವನ್ನಿಟ್ಟುಕೊಂಡು ಚೇತನಪ್ರಕೃತಿ ಎಂದು ಹೇಗೆ ನಿಶ್ಚಯ ಮಾಡುತ್ತೀರಿ?'' ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ — ಸೋಽಕಾಮಯತ (ಅದು ಬಹುರೂಪವಾಗುವೆನೆಂದು ಇಚ್ಛೆ ಪಟ್ಟಿತು) ಎಂದು ಆ ಬ್ರಹ್ಮನಿಗೆ ಬಹುಭವನವನ್ನು ಶ್ರುತಿಯು ತಿಳಿಸಿದೆ. ಈ ರೀತಿಯಾದ ಬಹುಭಾವವನ್ನು ಹೊಂದಿರುವ ಜಡಪ್ರಕೃತಿಯ ಅಭಿಮಾನಿಯಾದ್ದರಿಂದ ಚೇತನಪ್ರಕೃತಿಯು ಆನಂದಮಯವಾಗಿದೆಯೆಂದು ನಿಶ್ಚಯಿಸಬಹುದು. ಅಥವಾ ಬಹುಭಾವವನ್ನು ಹೊಂದಿರುವುದರಿಂದ ಅಚೇತನ(ಜಡ)ಪ್ರಕೃತಿಯನ್ನು ಆನಂದಮಯಶಬ್ದವಾಚ್ಯ ಎನ್ನಬಹುದು.

भावदीपः – 'प्रकृतेः' इत्यस्यार्थान्तरमाह – **अचिदिति** ।। **बहुभावादेवेति** ।। 'न त्वभिमानद्वारा' इत्येवार्थः ।

'ಅಚಿತ್' ಇತ್ಯಾದಿ ವಾಕ್ಯದಿಂದ ಪ್ರಕೃತೇಃ ಎಂಬ ಭಾಷ್ಯದ ಶಬ್ದಕ್ಕೆ ಇನ್ನೊಂದು ಅರ್ಥವನ್ನು ತಿಳಿಸುತ್ತಿದ್ದಾರೆ. ''ಬಹುಭಾವಾದೇವ'' ಇತ್ಯಾದಿ ವಾಕ್ಯದಿಂದ ಪ್ರಕೃತಿಗೆ ಅಭಿಮಾನಿದ್ವಾರಾ ಆನಂದಮಯತ್ವವು ಪ್ರಾಪ್ತವಾಗುವುದಿಲ್ಲ. ಪ್ರಕೃತಿಯು ಬಹುಭಾವವನ್ನು ಪಡೆಯುವುದರಿಂದ ಬ್ರಹ್ಮಶಬ್ದಕ್ಕೂ ಹಾಗೆಯೇ ಅರ್ಥವಿರುವುದರಿಂದ ಇಲ್ಲಿ ಪ್ರಕೃತಿಯನ್ನು ಸ್ವೀಕರಿಸಬಹುದು ಎಂದು ಅಭಿಪ್ರಾಯ.

**वाक्यार्थमञ्जरी** – बहुधा विकारित्वाख्यबहुभावः कथं निर्विकारचित्प्रकृतौ सम्भवतित्यत आह – **तदभिमानित्वादिति** । **बहुभावादेवेति** ।। नत्वभिमानित्वेनेत्येवार्थः ।।

ಬಹುಭಾವ ಎಂದರೆ ಬಹಳವಾಗಿ ವಿಕಾರವನ್ನು ಹೊಂದುವುದು ಎಂದರ್ಥ. ಚಿತ್ ಪ್ರಕೃತಿಯಾದರೂ ನಿರ್ವಿಕಾರರೂಪವಾಗಿದೆ. ಆದ್ದರಿಂದ ಚಿತ್‌ಪ್ರಕೃತಿಯಲ್ಲಿ ಆನಂದಮಯಶಬ್ದವು ಹೇಗೆ ಕೂಡುತ್ತದೆ? ಎಂಬ ಪ್ರಶ್ನೆಗೆ 'ತದಭಿಮಾನಿತ್ವಾತ್' ಎಂದು ಉತ್ತರ ಹೇಳುತ್ತಿದ್ದಾರೆ. ''ಬಹುಭಾವಾದೇವ'' ಎಂಬಲ್ಲಿ ಅಭಿಮಾನಿತ್ವದಿಂದಲ್ಲ ಎಂದರ್ಥ.

## ಐದನೆಯ ಪೂರ್ವಪಕ್ಷ

**भाष्यम् – 'बृह जातिजीवकमलासनशब्दराशिषु' इति ब्रह्मशब्दादेव सर्वजीवानाम् अन्नमयत्वादेश्च ।**

ಅಥವಾ ಬ್ರಹ್ಮಶಬ್ದವು ಬೃಹಧಾತುವಿನಿಂದ ನಿಷ್ಪನ್ನವಾಗಿದೆ. ಬೃಹಧಾತುವಿಗೆ ಜಾತಿ, ಜೀವ, ಚತುರ್ಮುಖಬ್ರಹ್ಮ, ಶಬ್ದರಾಶಿ(ವೇದ) ಇಷ್ಟು ಅರ್ಥಗಳಿವೆ. ಆದ್ದರಿಂದ ಪ್ರಕೃತ ಬ್ರಹ್ಮಶಬ್ದದಿಂದ ಸಕಲಜೀವರನ್ನು ವಿವಕ್ಷಿಸಬಹುದು. ಅನ್ನವಿಕಾರವಾದ ದೇಹವನ್ನು ಹೊಂದಿದ ಜೀವನಿಗೆ ಈ ಅರ್ಥವು ಸರಿಹೊಂದುತ್ತದೆ. ಆದ್ದರಿಂದಲೂ ಆನಂದಮಯನು ಜೀವನೇ ಆಗುತ್ತಾನೆ.

ಪ್ರತಿಪದಾರ್ಥ – (೧)ಯುಕ್ತಿಬದ್ಧವಾದ ಮತ್ತೊಂದು ಬಗೆಯ ಪೂರ್ವಪಕ್ಷ ಹೀಗಿದೆ —

'ಬೃಹ ಜಾತಿಜೀವಕಮಲಾಸನಶಬ್ದರಾಶಿಷು' ಇತಿ = ಬೃಹಧಾತುವಿಗೆ ಜಾತಿ ಜೀವ, ಕಮಲಾಸನ, ಶಬ್ದರಾಶಿ ಇಷ್ಟು ಅರ್ಥಗಳಿರುವುದರಿಂದ, ಬ್ರಹ್ಮಶಬ್ದಾದೇವ = ಬ್ರಹ್ಮಶಬ್ದದ ಬಲದಿಂದಲೇ, ಸರ್ವಜೀವಾನಾಮ್ = ಸಕಲಜೀವರುಗಳು (ಪ್ರಾಪ್ತಿಃ = ಪ್ರಸಕ್ತರಾಗುತ್ತಾರೆ.) ಚ = ಮತ್ತು, ಅನ್ನಮಯತ್ವಾದೇಃ = ಅನ್ನವಿಕಾರವಾದ ದೇಹವನ್ನು ಪಡೆದಿದ್ದರಿಂದಲೂ, ಆನಂದಮಯರು ಜೀವರೇ ಆಗುತ್ತಾರೆ.

---

(१) भाष्यदीपिका – सयुक्तिकं पूर्वपक्षान्तरमाह – बृह जातीति ।। तत्तद्देहगतसर्वजीवानां वाऽऽनन्दमयत्वप्राप्तिः । कुतः ? जीवानां ब्रह्मशब्दात् । जीववाचिब्रह्मशब्दादित्यर्थः । न तत्र पृथग्घेतुर्गवेषणीय इत्येवशब्दार्थः । कुतो ब्रह्मशब्दस्य जीववाचित्वमित्यत उक्तम् – बृह जातीति ।। बृहधातुः जात्यादिषु वर्तत इत्यर्थः । इतीत्यनन्तरं धातुव्याख्यानादिति शेषः । ब्रह्मशब्दस्य साधारणत्वादनिश्चायकत्वमित्यत आह – अन्नमयत्वादेश्चेति ।। इदं चाऽवर्तते, तत्र द्वितीयो विपरिणम्यते । आदिशब्दो भिन्नक्रमः । तेन प्राणादिकं गृह्यते । यथाक्रमश्च चशब्द उक्तानुक्तहेतुसमुच्चये । तथा च – न केवलं ब्रह्मशब्दात्, किन्तु, यतो जीवानाम् 'अन्नरसमयः' 'प्राणमयः' इत्युक्तान्नादिमयत्वाद् अन्नादिविकारदेहाद्यभिमानित्वादन्नमयत्वादि प्राप्तम् । अतस्तत्प्रायपठितत्वाच्चाऽऽनन्दमयत्वप्राप्तिरिति योजना । अत्र हिरण्यगर्भादीनां जीवत्वेऽपि देवत्वविवक्षया पृथगुक्तिः । अत एव तत्त्वप्रदीपे– 'ब्रह्मादिर्यस्य देवतासङ्घस्य' इत्यपि ब्रह्मादिरित्यस्य विग्रहो दर्शितः । तत्रापि हिरण्यगर्भरुद्रयोरतिप्रसिद्धत्वाद् वक्ष्यमाणक्रमेण पृथगुक्तिः । अथेन्द्रादीनां 'ब्रह्मा शिवः सुरेशाद्याः' इति वचनोक्तक्रमेण क्षरदेवोक्त्यनन्तरमक्षरायाः प्रकृतेरुक्तिः । अथात्यल्पप्रतिभानत्वाद् दृश्यमानदेहाभिमानिजीवानामिति ध्येयम् ।

## ಜೀವರುಗಳು ಆನಂದಮಯರಾಗುತ್ತಾರೆ

**तत्वप्रकाशिका – तत्तद्देहगतसर्वजीवानां वाऽऽनन्दमयत्वप्राप्तिः । 'बृहजातिजीवकमलसनशब्दराशिषु' इति धातोर्जीवेष्वपि ब्रह्मशब्दात् । न च वाच्यं ब्रह्मशब्दस्य साधारण्यान्न निश्चायकत्वमिति । 'अन्नरसमयः प्राणमयः' इत्युक्ताऽन्नमयादीनामन्नादिविकाराभिमानित्वेन जीवत्वात् । तत्प्रायपठितानन्दमयत्वेऽपि जीवानां प्राप्तेः ।**

**यद्यपि ब्रह्मशब्देन विष्णोरप्यस्ति प्राप्तिस्तथापि नासावानन्दमयः । विष्णोरानन्दमयावयवत्वोक्तेः । तस्य चाऽऽनन्दमयत्वे तदवयवत्वविरोधात् । तथा चाऽऽनन्दमयस्याब्रह्मत्वेन न तदवयवब्रह्मजिज्ञासा सम्भवतीत्याशयः ।**

ಅಥವಾ ಆಯಾಯ ದೇಹಗಳಲ್ಲಿರುವ ಜೀವರು ಆನಂದಮಯಶಬ್ದವಾಚ್ಯರು ಎನ್ನಬಹುದು. ಹೇಗೆಂದರೆ ಬ್ರಹ್ಮಶಬ್ದವು ಬೃಹಧಾತುವಿನಿಂದ ನಿಷ್ಪನ್ನವಾಗಿದೆ. ಆ ಬೃಹಧಾತುವಿಗೆ 'ಜಾತಿ,ಜೀವ, ಚತುರ್ಮುಖಬ್ರಹ್ಮ, ಶಬ್ದಸಮೂಹ' ಮೊದಲಾದ ಅರ್ಥಗಳಿವೆ. ಇವುಗಳಲ್ಲಿ ಜೀವ ಎಂಬರ್ಥವೂ ಇರುವುದರಿಂದ ಬ್ರಹ್ಮಶಬ್ದಪ್ರಯೋಗದಿಂದ ಜೀವರು ಆನಂದಮಯಶಬ್ದವಾಚ್ಯರು ಎನ್ನಬಹುದು. ಅನೇಕ ಕಡೆ ಇರುವ ಬ್ರಹ್ಮಶಬ್ದದಿಂದ ಜೀವನೇ ಪ್ರತಿಪಾದ್ಯನೆಂದು ಹೇಗೆ ನಿಶ್ಚಯಿಸುತ್ತೀರಿ? ಎಂದರೆ ಅನ್ನರಸಮಯಃ, ಪ್ರಾಣಮಯಃ ಎಂಬಲ್ಲಿ ಹೇಳಿದ ಅನ್ನಮಯಾದಿಗಳು ಅನ್ನಾದಿಗಳ ವಿಕಾರವಾದ್ದರಿಂದ ಅದಕ್ಕೆ ಅಭಿಮಾನಿಯಾದ ಜೀವನು ಅನ್ನಮಯಾದಿಶಬ್ದವಾಚ್ಯನೆಂದು ನಿಶ್ಚಯಿಸಬಹುದು. ಹಾಗಾಗಿ ಅದೇ ಸರಣಿಯಲ್ಲಿ ಹೇಳಿದ ಆನಂದಮಯ ಎಂಬ ಶಬ್ದವಾಚ್ಯರೂ ಸಹ ಜೀವರೇ ಎನ್ನಬಹುದು.

ವಸ್ತುತಃ ಬ್ರಹ್ಮಶಬ್ದಪ್ರಯೋಗವಿರುವುದರಿಂದ 'ವಿಷ್ಣುವು ಆನಂದಮಯಶಬ್ದವಾಚ್ಯ'ನೆಂದು ಹೇಳಿದರೂ, ಅವನು ಆನಂದಮಯನಲ್ಲ. ಏಕೆಂದರೆ ವಿಷ್ಣುವು ಆನಂದಮಯನ ಅವಯವ ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಒಂದು ವೇಳೆ ವಿಷ್ಣುವು ಆನಂದಮಯನಾದರೆ ಅವಯವ ಎಂದು ಹೇಳಿದ್ದು ಕೂಡುವುದಿಲ್ಲ. ಒಂದೇ ವಸ್ತುವು ಅವಯವ ಮತ್ತು ಅವಯವಿಯಾಗುವುದಿಲ್ಲ. ಆದ್ದರಿಂದ ಆನಂದಮಯನು ಬ್ರಹ್ಮನಲ್ಲವಾದ್ದರಿಂದ ಅವನ ಅವಯವವಾದ ಬ್ರಹ್ಮನ ಜಿಜ್ಞಾಸೆಯನ್ನು ಮಾಡುವುದು ಸರಿಯಲ್ಲ' ಎಂದು ಪೂರ್ವಪಕ್ಷ.

भावदीपः – एकस्य सर्वदेहस्थानन्दमयत्वाभावादाह – तत्तद्देहेति ।। एतेन 'अभिमानित्वेन' इत्यग्रेतनमुपपादितं ध्येयम् ।। ब्रह्मशब्दस्य हिरण्यगर्भनिष्ठताद्योतनाय 'बृहजाती'त्यादिसर्वांशोक्तिः । अन्नमयत्वादेश्चेत्यस्य व्यावर्त्यपूर्वमर्थमाह

**– न चेति ।। उक्तेरिति ।। 'ब्रह्मपुच्छं प्रतिष्ठा' इत्यनेन अवयवत्वविरोध इति न्यायविवरणोक्तमाह – तस्य चेति ।।**

ಒಬ್ಬ ವ್ಯಕ್ತಿಗೆ ಎಲ್ಲಾ ದೇಹಗಳಲ್ಲಿರುವ ಆನಂದಮಯತ್ವವು ಹೊಂದದಿರುವುದರಿಂದ ಆಯಾಯ ದೇಹಗಳಲ್ಲಿರುವ ಆಯಾಯಾ ಆನಂದಮಯತ್ವವು ಆ ಜೀವರಿಗೆ ಇದೆ ಎಂಬುದನ್ನು ತಿಳಿಸಲು "ತತ್ತದ್ದೇಹಗತ" ಇತ್ಯಾದಿವಾಕ್ಯವು ಪ್ರವೃತ್ತವಾಗಿದೆ. ಈ ವಾಕ್ಯದಿಂದಲೇ ಮುಂದೆ ಹೇಳಲಿರುವ 'ಅಭಿಮಾನಿತ್ವೇನ' ಎಂಬ ಅಂಶವು ಉಪಪಾದಿತವಾಗುತ್ತದೆ. ಬ್ರಹ್ಮಶಬ್ದಕ್ಕೆ ಹಿರಣ್ಯಗರ್ಭನಲ್ಲೂ ವ್ಯವಹಾರವಿದೆ. ಇದನ್ನು ತೋರಿಸಲು 'ಬೃಹಜಾತಿಜೀವ' ಇತ್ಯಾದಿ ವಾಕ್ಯವನ್ನು ಪೂರ್ಣವಾಗಿ ಉದಾಹರಿಸಿದ್ದಾರೆ. 'ಅನ್ನಮಯತ್ವಾದೇಶ್ಚ' ಇತ್ಯಾದಿ ವಾಕ್ಯಕ್ಕೆ ಜೀವಾದಿಗಳನ್ನು ವ್ಯಾವೃತ್ತಿಮಾಡುವ ಮೊದಲು ಸಿಗುವಂತಹ ಅರ್ಥವನ್ನು "ನಚ" ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ. "ಉಕ್ತೇಃ" ಎಂಬ ವಾಕ್ಯಭಾಗದಿಂದ 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂಬ ಶ್ರುತಿಯನ್ನು ಇಟ್ಟುಕೊಳ್ಳಬೇಕು. ನ್ಯಾಯವಿವರಣದಲ್ಲಿ ಹೇಳಿದ 'ಅವಯವತ್ವವಿರೋಧಃ' ಎಂಬ ಭಾಗದ ವಿವರಣೆಯನ್ನು "ತಸ್ಯ ಚ" ಇತ್ಯಾದಿ ವಾಕ್ಯದಿಂದ ನೀಡಿದ್ದಾರೆ.

**वाक्यार्थमञ्जरी – तत्तद्देहगतेति** ।। अनेन अन्नमयत्वादेश्चेत्युक्तो हेतुर्देहाभिमानित्वेन जीवे वर्तत इत्युपपादितम् भवति ॥ **प्रायपठितेति** ।। सहपठितेत्यर्थः ॥ **विरोधादिति** ।। अवयवावयविभावस्य भेदव्याप्तत्वादिति भावः ॥ **अब्रह्मत्वेनेति** ।। एतेनेदं निरस्तम् । अत्र चतुर्मुखादिष्वेक एवेति न पूर्वपक्षः । अनेकप्रापकसद्भावे निर्णयायोगात् । नापि सर्वेपीति विरोधात् न चेतेष्वन्यतम इति, अनिर्धारणे संशयविशेषप्रसङ्गादिति । विशिष्टनिर्णयायोगेपि ब्रह्मान्यत्वप्रकारेणान्य एवेति निर्णयोपपत्तेः ।

'ತತ್ತದ್ದೇಹಗತ' ಎಂದು ಹೇಳಿದ್ದರಿಂದ 'ಅನ್ನಮಯತ್ವಾದೇಶ್ಚ' ಎಂದು ಹೇಳಿದ ಕಾರಣವು ದೇಹಾಭಿಮಾನಿಯಾದ್ದರಿಂದ ಜೀವನಲ್ಲಿ ಬರುತ್ತದೆಂದು ಉಪಪಾದನೆ ಮಾಡಿದಂತಾಗುತ್ತದೆ. 'ಪ್ರಾಯಪಠಿತ' ಎಂದರೆ ಜೊತೆಯಲ್ಲಿಯೇ ಹೇಳಿರುವುದರಿಂದ ಎಂದರ್ಥ.

'ವಿರೋಧಾತ್' ಎಂದರೆ ಅವಯವ ಮತ್ತು ಅವಯವಿಗಳ ಭಾವಕ್ಕೆ ಭೇದವು ವ್ಯಾಪ್ತವಾಗಿರುವುದರಿಂದ ಎಂದು ಭಾವ. 'ಅಬ್ರಹ್ಮತ್ವೇನ' ಎಂದು ಹೇಳಿದ್ದರಿಂದಲೇ ಇದನ್ನು ನಿರಾಕರಣೆ ಮಾಡಿದಂತಾಯಿತು. ಈ ಅಧಿಕರಣದ ಪೂರ್ವಪಕ್ಷದವರ ಅಭಿಪ್ರಾಯ ಆನಂದಮಯನು ಚತುರ್ಮುಖನೇ ಮೊದಲಾದವರಲ್ಲಿ ಒಬ್ಬ ಮಾತ್ರ ಎಂದಲ್ಲ. ಅನೇಕರನ್ನು ಆನಂದಮಯರೆಂದು ಹೇಳಲು ಕಾರಣವಿರುವುದರಿಂದ ಒಬ್ಬರನ್ನೇ ಆನಂದಮಯರೆಂದು ನಿರ್ಣಯಿಸಲಾಗಿದೆ. ಇನ್ನು ಎಲ್ಲರನ್ನೂ ಆನಂದಮಯರೆನ್ನೋಣವೆಂದೂ ಪೂರ್ವಪಕ್ಷ ಮಾಡಲಾಗದು. ಹಾಗಾದಲ್ಲಿ ಪರಸ್ಪರ ವಿರೋಧ ಬರುವುದರಿಂದ ಎಲ್ಲರ ಮಧ್ಯದಲ್ಲಿ ಯಾರೊಬ್ಬರೂ ಆನಂದಮಯರಾಗುವುದಿಲ್ಲ. ಆದ್ದರಿಂದ ವಿಶಿಷ್ಟವಾಗಿ ನಿರ್ಣಯ ಮಾಡಲಾಗದ ಕಾರಣ ಬ್ರಹ್ಮಾನ್ಯತ್ವಪ್ರಕಾರವಾಗಿ ಅನ್ಯರೆಂದು ಪೂರ್ವಪಕ್ಷ ಮಾಡಬೇಕು. ಅಂದರೆ ಬ್ರಹ್ಮಾನ್ಯರನ್ನು ಆನಂದಮಯರೆಂದು ಪೂರ್ವಪಕ್ಷ ಮಾಡಬೇಕು.

## ಸಿದ್ಧಾಂತ

**भाष्यम् – तथाऽपि न त आनन्दमयशब्देनोच्यन्ते । किन्तु, विष्णुरेव (१)।**

ಇತರರು ಆನಂದಮಯಶಬ್ದಪ್ರತಿಪಾದ್ಯರೆನ್ನಲು ಅನೇಕ ಕಾರಣಗಳಿದ್ದರೂ, ಆನಂದಮಯಶಬ್ದದಿಂದ ಅವರು ವಾಚ್ಯರಾಗುವುದಿಲ್ಲ. ಹೊರತಾಗಿ ವಿಷ್ಣುವೇ ಆನಂದಮಯಶಬ್ದದಿಂದ ವಾಚ್ಯನಾಗುತ್ತಾನೆ.

ಪ್ರತಿಪದಾರ್ಥ - ಈ ಎಲ್ಲ ಪೂರ್ವಪಕ್ಷಗಳಿಗೆ ಸಿದ್ಧಾಂತವನ್ನು ಮಾಡುತ್ತಿದ್ದಾರೆ.

ತಥಾऽಪಿ = ಹೀಗೆ ಅನೇಕರಲ್ಲಿ ಆನಂದಮಯ ಪದಪ್ರತಿಪಾದ್ಯತ್ವವು ಬರಲು ಕಾರಣವಿದ್ದರೂ, ತೇ = ಅವರ್‍ಯಾರೂ, ಆನಂದಮಯಶಬ್ದೇನ = ಆನಂದಮಯಶಬ್ದದಿಂದ, ನ ಉಚ್ಯಂತೇ = ಪ್ರತಿಪಾದ್ಯರಲ್ಲ. ಕಿಂತು = ಹೊರತಾಗಿ, ವಿಷ್ಣುರೇವ = ವಿಷ್ಣುವೇ ಆನಂದಮಯಪದವಾಚ್ಯನಾಗುತ್ತಾನೆ.

## ಇತರರು ಆನಂದಮಯರಲ್ಲ

**तत्वप्रकाशिका – सिद्धान्तयति – तथापीति ।। यद्यप्येवमन्येषां प्राप्तिः तथापीत्यर्थः । कस्तर्हीत्याशङ्क्य सङ्गत्यर्थमुदाहृतसूत्रप्रतिज्ञाभागं व्याचष्टे – किंत्विति ।।**

ಸಿದ್ಧಾಂತ - ಹೀಗೆ ಪೂರ್ವಪಕ್ಷ ಬಂದರೆ 'ತಥಾಪಿ' ಎಂಬುದರಿಂದ ಸಿದ್ಧಾಂತವನ್ನು ಹೇಳುತ್ತಾರೆ. ವಸ್ತುತಃ ಬ್ರಹ್ಮಶಬ್ದಪ್ರಯೋಗದಿಂದ ಬೇರೆಯವರೂ ಆನಂದಮಯರಾಗುತ್ತಾರೆ. ಹಾಗಿದ್ದರೂ ಅವರು ಆನಂದಮಯಶಬ್ದವಾಚ್ಯರು ಅಲ್ಲ. ಹಾಗಿದ್ದರೆ ಆನಂದಮಯಶಬ್ದವಾಚ್ಯರು ಯಾರು? ಎಂದು ಪ್ರಶ್ನೆ ಬಂದರೆ ಆದಕ್ಕೆ ಉತ್ತರ ರೂಪವಾಗಿ ಸ್ಮೃತಿಯನ್ನು ತಿಳಿಸುವ ಉದ್ದೇಶದಿಂದ ತಾವು ಉದಾಹರಿಸಿದ ಸೂತ್ರದ ಪ್ರತಿಜ್ಞಾಭಾಗವನ್ನು "ಕಿಂತು" ಎಂಬಿತ್ಯಾದಿಯಾಗಿ ವ್ಯಾಖ್ಯಾನಮಾಡುತ್ತಿದ್ದಾರೆ.

**भावदीपः – सङ्गत्यर्थमुदाहृतेति ।। 'इत्यत आह' इत्येवोदाहृता इत्यर्थः ।**

"ಸಂಗತ್ಯರ್ಥಮುದಾಹೃತ" ಎಂಬ ವಾಕ್ಯಭಾಗಕ್ಕೆ 'ಇತ್ಯತ ಆಹ ಎಂಬಲ್ಲಿ ಉದಾಹರಿಸಿದ' ಎಂದು ಅರ್ಥ.

---

(१) सिद्धान्तयति – तथाऽपीति ।। यद्यप्येवमन्येषां प्राप्तिः, तथाऽपि अत्र ये आनन्दमयशब्देनोच्यन्ते न ते हिरण्यगर्भादय इत्यर्थः । कस्तर्हीत्याशङ्क्ते- किन्त्विति ।। उत्तरमाह – विष्णुरेवेति ।। य उच्यते स विष्णुरेवेत्यन्वयः । अनेनोदाहृतानन्दमय इति सूत्रप्रतिज्ञाभागस्य सङ्गत्यर्थमन्वयार्थं समन्वयसूत्रोदाहृतो विधेयसमर्पकः 'तत्तु' इति प्रतिज्ञाभागो व्याख्यातो भवति ।

**वाक्यार्थमञ्जरी** – सूत्रमनुपन्यस्य व्याख्याने न्यूनता स्यादित्यत उक्तम् – **उदाहृतेति** ।। तत्र व्याख्यानस्याकृतत्वादुदाहरणं व्यर्थ इत्यत उक्तम् – **सङ्गत्यर्थमिति** ।। श्रुत्यधिकरणसङ्गतिप्रदर्शनार्थमित्यर्थः ।।

ಸೂತ್ರವನ್ನು ಹೇಳದೆ ವ್ಯಾಖ್ಯಾನ ಮಾಡಿದರೆ ನ್ಯೂನತಾ ದೋಷ ಬರುತ್ತದೆಯಲ್ಲ? ಎಂಬ ಪ್ರಶ್ನೆಗೆ 'ಉದಾಹೃತ' ಎಂದು ಉತ್ತರಿಸಿದ್ದಾರೆ. ಭಾಷ್ಯದಲ್ಲಿ ಸೂತ್ರವನ್ನು ವ್ಯಾಖ್ಯಾನಮಾಡದೆ ಇರುವುದರಿಂದ ಉದಾಹರಣವು ವ್ಯರ್ಥವಲ್ಲವೇ? ಎಂದು ಪ್ರಶ್ನೆ ಮಾಡಿದರೆ 'ಸಂಗತ್ಯರ್ಥಂ' ಎಂದು ಉತ್ತರವನ್ನು ಹೇಳಿದ್ದಾರೆ. ಅಂದರೆ ಶ್ರುತಿ, ಅಧಿಕರಣಗಳ ಸಂಗತಿಯನ್ನು ತೋರಿಸುವ ಸಲುವಾಗಿ ಉದಾಹರಣೆ ಸಾರ್ಥಕ ಎಂದರ್ಥ.

**ॐ ।। आनन्दमयोऽभ्यासात् ।। ॐ** ।। आनन्मय इत्युपलक्षणम् । अन्नमयादयः पञ्च ब्रह्मैव अभ्यासात् ब्रह्मशब्दाभ्यासात् । अभ्यासशब्दार्थं चाग्रे विवेचयामः ।

॥ ಓಂ ಆನಂದಮಯೋऽಭ್ಯಾಸಾತ್ ಓಂ ॥

ಸೂತ್ರಾರ್ಥ - ಆನಂದಮಯ ಎಂಬುದು ಉಪಲಕ್ಷಣ. ಅನ್ನಮಯರೇ ಮೊದಲಾದ ಐವರೂ ಬ್ರಹ್ಮರೇ ಆಗಿದ್ದಾರೆ. ಅಭ್ಯಾಸಾತ್ - ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದ. ಅಭ್ಯಾಸಶಬ್ದದ ಅರ್ಥವನ್ನು ಮುಂದೆ ವಿಚಾರ ಮಾಡೋಣ.

**भाष्यम् – 'तदेव ब्रह्म परमं कवीनाम्' (महाना. १-६.)**
**'एतमेव ब्रह्मेत्याचक्षते' (ऐ.आ. ३-२-३-१२.)**

**'ब्रह्मशब्दः परे विष्णौ नान्यत्र क्वचिदिष्यते ।**
**असम्पूर्णाः परे यस्मादुपचारेण वा भवेत् ।।',**
**'ब्रह्मेति परमात्मेति भगवानिति शब्द्यते ।', (भागवते १-२-११)**
**'वासुदेवात्मकं ब्रह्म मूलमन्त्रेण वा यतिः ।' (व्यासस्मृति)**

**इत्यादिषु तस्मिन्नेव प्रसिद्धब्रह्मशब्दाभ्यासात् ।**

'ಹಿಂದೆ ಹೇಳಿದ ವಿಷ್ಣುವೇ ಜ್ಞಾನಿಗಳಿಗೆ ಪರಬ್ರಹ್ಮನು' ಎಂದು 'ತದೇವ ಬ್ರಹ್ಮ' ಎಂಬ ಮಹಾನಾರಾಯಣೋಪನಿಷತ್ತಿನಲ್ಲಿ ಹೇಳಲಾಗಿದೆ.

ಮತ್ತು 'ಏತಮೇವ' ಎಂದು ಐತರೇಯ ಆರಣ್ಯಕದಲ್ಲಿ 'ಈ ವಿಷ್ಣುವನ್ನೇ ಬ್ರಹ್ಮನೆಂದು ಕರೆಯುತ್ತಾರೆ' ಎಂದು ಕೇಳಿಸುತ್ತಿದೆ.

'ಬ್ರಹ್ಮಶಬ್ದವು ಸರ್ವೋತ್ತಮನಾದ ವಿಷ್ಣುವಿನಲ್ಲಿಯೇ ಇರುತ್ತದೆ ಹೊರತು ಇತರರ ವಿಷಯದಲ್ಲಿ ಎಂದಿಗೂ ಇರುವುದಿಲ್ಲ. ಏಕೆಂದರೆ ಯಾವ ಕಾರಣದಿಂದ ವಿಷ್ಣುವಿಗಿಂತ

ಅತಿರಿಕ್ತವಾದ ಪದಾರ್ಥವು ಗುಣಪೂರ್ಣವಲ್ಲವೋ ಆ ಕಾರಣದಿಂದ ಬ್ರಹ್ಮಶಬ್ದವಾಚ್ಯರು ಇತರರು ಆಗುವುದಿಲ್ಲ. ಆದರೂ ಸಹ ಔಪಚಾರಿಕವಾಗಿ ಕೆಲವೊಮ್ಮೆ ಬ್ರಹ್ಮಶಬ್ದ-ಪ್ರತಿಪಾದ್ಯರಾಗಬಹುದು' ಮತ್ತು 'ಬ್ರಹ್ಮನೆಂದೂ ಪರಮಾತ್ಮನೆಂದೂ ಭಗವಂತನೆಂದೂ ವಿಷ್ಣುವು ಪ್ರತಿಪಾದ್ಯನಾಗುತ್ತಾನೆ' ಇತ್ಯಾದಿಯಾಗಿ ಭಾಗವತದಲ್ಲಿ ಹೇಳಲ್ಪಟ್ಟಿದೆ.

ಸನ್ಯಾಸಿಗಳು 'ಓಂ ಓಂ ನಮೋ ನಾರಾಯಣಾಯ ಓಂ' ಎಂಬ ನಾರಾಯಣಾಷ್ಟಕರ ಮಂತ್ರದಿಂದ ಅಥವಾ ಪ್ರಣವದಿಂದ ಮೋಕ್ಷದಾತೃವಾದ ವಾಸುದೇವರೂಪವನ್ನು ಆರಾಧಿಸಬೇಕು' ಎಂದು ವ್ಯಾಸಸ್ಮೃತಿಯು ಹೇಳಿದೆ.

ಹೀಗೆ ಅನೇಕ ಪ್ರಮಾಣಗಳ ಬಲದಿಂದ ವಿಷ್ಣುವಿನಲ್ಲಿಯೇ ಬ್ರಹ್ಮಶಬ್ದದ ಆವರ್ತನೆಯು ಕೇಳಿಬರುತ್ತಿದೆ. ಆದ್ದರಿಂದ ವಿಷ್ಣುವೇ ಬ್ರಹ್ಮಶಬ್ದವಾಚ್ಯನಾಗುತ್ತಾನೆ ಹೊರತು ಇತರರಲ್ಲ.

ಪ್ರತಿಪದಾರ್ಥ – (१)ವಿಷ್ಣುವೇ ಬ್ರಹ್ಮಶಬ್ದವಾಚ್ಯನೆನ್ನಲು ಅನೇಕಪ್ರಮಾಣಗಳನ್ನು

---

(१) भाष्यदीपिका – कुत आनन्दमयो विष्णुरेवेत्यतः प्रवृत्तं सौत्रं हेतुं व्याचष्टे – तदेवेति ।। इत्यादिषु वाक्येषु तस्मिन् विष्णावेव प्रसिद्धस्य मुख्यार्थत्वेनोक्तस्य ब्रह्मशब्दस्य तस्मिन्नानन्दमये आनन्दमयं प्रत्युदाहृते 'असन्नेव' इति श्लोके 'अभ्यासात्' असकृच्छ्रवणादित्यर्थः । अभ्यासादित्यनन्तरं 'विष्णौ तात्पर्यावगमात्' इति शेषः । अप्रयोजकत्वशङ्कावारणाय ब्रह्मशब्दस्यान्यत्र निरवकाशत्वज्ञापनाय तस्मिन् प्रसिद्धेति एवेति चोक्तम् । आदिशब्देन 'परमं यो महद् ब्रह्म' 'वासुदेवात् परः को नु ब्रह्मशब्दोदितो भवेत्' इति वाक्यं गृह्यते । तदेवेति श्रुत्यर्थस्तु जिज्ञासानयेऽभिहितः । 'एतमेव' इति श्रुत्यर्थः सर्वत्राधिकरणे वक्ष्यते ।

'ब्रह्मशब्दः' इति स्मृतौ 'परे' पूर्णे इति हेतुगर्भविशेषणम् । वाशब्दोऽवधारणे । तथा च यतो विष्णुः परः, अतः 'परे' विष्णावेव ब्रह्मशब्दो मुख्यतया 'इष्यते' अङ्गीक्रियते प्रामाणिकैः । न तु विष्णोः 'अन्यत्र' हिरण्यगर्भादिष्वपीत्यर्थः । कुत इत्यतस्तेषां ब्रह्मशब्दमुख्यार्थत्वाभावे हेतुमाह – 'परे' अन्ये यस्मादसम्पूर्णा इति । तर्हि 'तस्मादेतद् ६९ ब्रह्म नाम रूपमन्नं च जायते' (मु.१-१-९) 'द्वे ब्रह्मणी वेदितव्ये' (मैत्रि.उ. ६-२२.) 'ब्रह्माणि जीवाः सर्वेऽपि' इत्यादौ ब्रह्मशब्दस्तेषु कथमिष्यत इत्यत आह - क्वचिदन्यत्रेष्टोऽपि ब्रह्मशब्दः 'उपचारेण' परममुख्यवृत्त्यन्यमुख्यवृत्त्यैव भवेदिति ।

'ब्रह्म' इति भागवतस्मृत्यर्थः प्रागेवोक्तः । मध्ये आत्मपदोपेतसाधारणस्मृत्युपादाननिमित्तं त्वभ्यासादित्यस्य 'अन्योऽन्तर आत्मा' (तै.उ.२.२.१) इत्यादौ ब्रह्मवाचकात्मशब्दा-भ्यासादित्यप्यर्थो वर्णनीय इति ज्ञापनमित्युक्तं चन्द्रिकायाम् ।

'वासुदेवात्मकम्' इति व्याससमृतिवाक्यं तु 'बुद्ध्याऽविहिंसन् पुष्पैर्वा प्रणवेन समर्चयेत्' इति पूर्ववाक्येन सह योजनीयम् । अत्र हि वासुदेवात्मकं ब्रह्मेत्यादेर्भगवान्

ಉಲ್ಲೇಖಿಸುತ್ತಿದ್ದಾರೆ. ಕವೀನಾಂ = ಜ್ಞಾನಿಗಳಿಗೆ, ತದೇವ = ಹಿಂದೆ ವರ್ಣಿಸಲ್ಪಟ್ಟ ವಿಷ್ಣುವೇ, ಬ್ರಹ್ಮ ಪರಮಮ್ = ಪರಬ್ರಹ್ಮನು ಎಂದು ಶ್ರುತಿಯು ಹೇಳಿದೆ.

'ಏತಮೇವ = ಈ ವಿಷ್ಣುವನ್ನೇ, ಬ್ರಹ್ಮ ಇತ್ಯಾಚಕ್ಷತೇ = ಬ್ರಹ್ಮನೆಂದು ಕರೆಯುತ್ತಾರೆ'.

ಬ್ರಹ್ಮಶಬ್ದಃ = ಬ್ರಹ್ಮಶಬ್ದವು, ಪರೇ = ಸರ್ವೋತ್ತಮನಾದ, ವಿಷ್ಣೌ = ವಿಷ್ಣುವಿನಲ್ಲಿ (ಪ್ರಸಿದ್ಧವಾಗಿದೆ), ಅನ್ಯತ್ರ = ಇತರರ ವಿಷಯದಲ್ಲಿ, ಕ್ವಚಿತ್ = ಎಂದೂ ಸಹ , ನ ಇಷ್ಯತೇ = ಅಂಗೀಕರಿಸಲ್ಪಟ್ಟಿಲ್ಲ. ಏಕೆಂದರೆ, ಯಸ್ಮಾತ್ = ಯಾವ ಕಾರಣದಿಂದ, ಪರೇ = ಇತರರು, ಅಸಂಪೂರ್ಣಾಃ = ಪರಿಪೂರ್ಣರಲ್ಲವೋ, (ತಸ್ಮಾತ್ = ಆ ಕಾರಣದಿಂದ, ಬ್ರಹ್ಮಶಬ್ದವಾಚ್ಯರಾಗುವುದಿಲ್ಲ), ಆದರೆ = ಉಪಚಾರೇಣ ವಾ = ಔಪಚಾರಿಕವಾಗಿ, ಭವೇತ್ = ಬ್ರಹ್ಮಶಬ್ದವಾಚ್ಯರಾಗಬಹುದು.'

'ಬ್ರಹ್ಮೇತಿ = ಬ್ರಹ್ಮನೆಂದು, ಪರಮಾತ್ಮೇತಿ = ಪರಮಾತ್ಮನೆಂದು, ಭಗವಾನ್ ಇತಿ = ಭಗವಂತನೆಂದು' ಶಬ್ದ್ಯತೇ = ಕರೆಸಿಕೊಳ್ಳುತ್ತಾನೆ'.

'ಯತಿಃ = ಸನ್ಯಾಸಿಯು, (ಪ್ರಣವೇನ = ಓಂಕಾರದಿಂದ), ವಾ = ಅಥವಾ, ಮೂಲಮಂತ್ರೇಣ = ನಾರಾಯಣಾಷ್ಟಾಕ್ಷರಮಂತ್ರದಿಂದ, ವಾಸುದೇವಾತ್ಮಕಂ = ಮೋಕ್ಷದಾತೃವಾದ ವಾಸುದೇವರೂಪವನ್ನು, ಬ್ರಹ್ಮ = ಗುಣಪೂರ್ಣನಾದ ಬ್ರಹ್ಮ-ನೆಂದು, (ಆರಾಧಿಸಬೇಕು).

ಇತ್ಯಾದಿಷು = ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ, ತಸ್ಮಿನ್ನೇವ = ಆ ವಿಷ್ಣುವಿನಲ್ಲಿಯೇ, ಪ್ರಸಿದ್ಧಬ್ರಹ್ಮಶಬ್ದಾಭ್ಯಾಸಾತ್ = ಬ್ರಹ್ಮಶಬ್ದದ ಅಭ್ಯಾಸವು (ಆವರ್ತನೆಯು) ಪ್ರಸಿದ್ಧವಾಗಿದೆ.

## ವಿಷ್ಣು ಒಬ್ಬನೇ ಆನಂದಮಯನು

**तत्वप्रकाशिका – कुतो विष्णुरेवानन्दमय इत्यतः सौत्रं हेतुं व्याचष्टे – तदेवेति ।। 'असन्नेव स भवति । असद् ब्रह्म इति वेद चेत् । अस्ति ब्रह्मेति चेद्वेद' । इत्यानन्दमये ब्रह्मशब्दाभ्यासाद् विष्णुरेवानन्दमयः ।**

**ब्रह्मशब्दस्य 'तदेव ब्रह्म' इत्यदिश्रुतिस्मृतिषु विष्ण्वेकनिष्ठत्वोक्तेः । न च**

---

ब्रह्मेति प्रतीयत इति न्यायदीपोक्तेः । 'यतिः' 'वासुदेवात्मकं' कृष्णाख्यं ब्रह्म 'बुद्ध्या' मनसा समर्चयेदित्यनेन यतीनां मानसपूजोच्यते पुष्पाद्यैर्वा समर्चयेद् इत्यनेन कायिक-पूजा । 'अविहिंसन्' कस्यापि हिंसां हानिमकुर्वन्निति तेषां सामान्यधर्मोक्तिः । अनेन यतीनां वैष्णवत्वप्रयुक्तात् तुलसीपुष्पाद्याहरणरूपाद् वैशेषिकाद् धर्मादहिंसालक्षणः सामान्यधर्म एव बलवानित्युक्तं भवति । यथोक्तं बृहद्भाष्ये – 'सामान्यधर्मो बलवान् धर्माद्वैशेषिकाद्यतः' इति । 'प्रणवेन' ओङ्कारेण 'मूलमन्त्रेण' अष्टाक्षरेण वा समर्चयेदित्यनेन वाचिकपूजोच्यत इति ज्ञातव्यम् ।

ततः एव हिरण्यगर्भादीनां प्राप्तिः शङ्क्या । तेषामपूर्णत्वेन ब्रह्मशब्दमुख्यार्थत्वाभावस्याप्युदाहृतश्रुत्यादिसिद्धत्वात् । मुख्यार्थत्यागेनामुख्यार्थग्रहणायोगादिति भावः ।।१२।।

ಏಕೆ ವಿಷ್ಣುವೇ ಆನಂದಮಯವಾಚ್ಯನೆಂದು ಹೇಳಬೇಕು? ಎಂದರೆ ಸೂತ್ರದಲ್ಲಿ ಹೇಳಿರುವ ಯುಕ್ತಿಯನ್ನು "ತದೇವ" ಎನ್ನುವುದರಿಂದ ವ್ಯಾಖ್ಯಾನಿಸುತ್ತಿದ್ದಾರೆ.

'ಅಸನ್ನೇವ ಸ ಭವತಿ । ಅಸದ್ ಬ್ರಹ್ಮ ಇತಿ ವೇದ ಚೇತ್ । ಅಸ್ತಿ ಬ್ರಹ್ಮೇತಿ ಚೇದ್ ವೇದ' ಎಂದು ಆನಂದಮಯನ ವಿಷಯದಲ್ಲಿ ಬ್ರಹ್ಮಶಬ್ದವನ್ನು ಅಭ್ಯಾಸಮಾಡಿದ್ದರಿಂದ ವಿಷ್ಣುವೇ ಆನಂದಮಯಶಬ್ದವಾಚ್ಯನು. (ಸಾವಕಾಶವಾದ ಬ್ರಹ್ಮಶಬ್ದಾಭ್ಯಾಸದಿಂದ ಇದನ್ನು ಹೇಗೆ ನಿರ್ಣಯಿಸುತ್ತೀರಿ? ಎಂದರೆ) "ತದೇವ ಬ್ರಹ್ಮ" ಇವೇ ಮೊದಲಾದ ಶ್ರುತಿಸ್ಮೃತಿಗಳಲ್ಲಿ ಬ್ರಹ್ಮಶಬ್ದವು ಮುಖ್ಯವಾಗಿ ವಿಷ್ಣುವನ್ನೇ ಹೇಳುತ್ತದೆಂದು ಹೇಳಿದೆ. ಹಾಗಾಗಿ ವಿಷ್ಣುವೇ ಆನಂದಮಯನೆಂದು ನಿಶ್ಚಯಿಸಬಹುದು. ಬ್ರಹ್ಮಶಬ್ದಪ್ರಯೋಗವಿರುವುದರಿಂದಲೇ ಚತುರ್ಮುಖಾದಿಗಳು ಆನಂದಮಯರು ಏಕಾಗಬಾರದು? ಎನ್ನಬಾರದು. ಅವರು ಅಪೂರ್ಣರಾಗಿದ್ದರಿಂದ, ಬ್ರಹ್ಮಶಬ್ದದ ಮುಖ್ಯಾರ್ಥವಾದ ಪೂರ್ಣತ್ವ ಅವರಲ್ಲಿಲ್ಲವೆಂಬುದು ಶ್ರುತಿಸ್ಮೃತಿಗಳಿಂದ ಸಿದ್ಧವಾಗಿದೆ. ಹೀಗೆ ಮುಖ್ಯಾರ್ಥವನ್ನೇ ಸ್ವೀಕರಿಸಲು ಬರುವಾಗ ಅಮುಖ್ಯಾರ್ಥವನ್ನು ಸ್ವೀಕರಿಸುವುದು ಸರಿಯಲ್ಲವಾದ್ದರಿಂದ ಮುಖ್ಯಾರ್ಥವುಳ್ಳಂತಹ ವಿಷ್ಣುವೇ ಆನಂದಮಯಶಬ್ದವಾಚ್ಯನಾಗಿದ್ದಾನೆ.

### ಹೇತ್ವಸಿದ್ಧಿಪರಿಹಾರ

भावदीपः – हेतोरसिद्धिनिरासायानन्दमयनिष्ठतां व्यञ्जयन् व्यवहितत्वात् प्रतिज्ञाहेत्वोरन्वयमाह – **असन्नेवेति** ।। 'तदप्येष श्लोको भवति' इत्यानन्दमयं प्रत्युदाहृते । 'अस्ति ब्रह्मेति चेद् वेद सन्तमेनं ततो विदुः' इति श्लोके जीवान्यत्वेन ब्रह्माभावाभावंज्ञानिनोस्तमोमुक्तिभाक्त्वरूपफलोक्तिपरे द्विर्ब्रह्मशब्दश्रवणेन एकप्रकारासकृदुक्तिरूपब्रह्मशब्दाभ्यासात् इत्यर्थः । 'तस्मिन्' इत्यस्यार्थ **आनन्दमय** इति । श्लोको 'ब्रह्मपुच्छं प्रतिष्ठा' इत्युक्तपुच्छं प्रत्येवोदाहृत इति तु अन्नमयादीन् प्रत्युदाहृतेषु पुच्छविषयत्वाभावेन प्रायपाठविरोधादयुक्त इति भावः ।

ಇಲ್ಲಿ ಹೇತುವಾಗಿಸಿದ ಸೂತ್ರಕ್ಕೆ ಅಸಿದ್ಧಿಯನ್ನು ನಿರಾಸಮಾಡುವುದಕ್ಕಾಗಿ ಈ ಹೇತುವು ಆನಂದಮಯನಲ್ಲಿ ಇದೆ ಎಂಬುದನ್ನು ವ್ಯಕ್ತಪಡಿಸುತ್ತಾ, ಈ ವಿಷಯವು ದೂರದಲ್ಲಿರುವುದರಿಂದ, "ಅಸನ್ನೇವ" ಇತ್ಯಾದಿ ವಾಕ್ಯದಿಂದ ಪ್ರತಿಜ್ಞಾ ಮತ್ತು ಹೇತುಗಳಿಗೆ ಅನ್ವಯವನ್ನು ಹೇಳುತ್ತಿದ್ದಾರೆ.

ಟೀಕೆಯಲ್ಲಿರುವ "ಆನಂದಮಯೇ" ಎಂಬ ಶಬ್ದಕ್ಕೆ ಎಂಬುದಾಗಿ ಆನಂದಮಯನನ್ನು ಕುರಿತು ಉದಾಹರಿಸಿದ ವಾಕ್ಯದಲ್ಲಿ ('ತದಪ್ಯೇಷಃ ಶ್ಲೋಕೋ ಭವತೀತ್ಯಾನಂದಮಯಂ ಪ್ರತ್ಯುದಾಹೃತೇ । ಅಸ್ತಿ ಬ್ರಹ್ಮೇತಿ ಚೇದ್ ವೇದ ಸಂತಮೇನಂ ತತೋ ವಿದುಃ') ಎಂದು ಅರ್ಥ. ಈ ಶ್ಲೋಕದಲ್ಲಿ ಬ್ರಹ್ಮನ ಅಭಾವವನ್ನು ತಿಳಿಯುವವರಿಗೆ ತಮಃಪ್ರಾಪ್ತಿಯನ್ನು, ಬ್ರಹ್ಮನು ಇದ್ದಾನೆ ಎಂದು ತಿಳಿಯುವವರಿಗೆ ಮುಕ್ತಿಪ್ರಾಪ್ತಿರೂಪವಾದ ಫಲವನ್ನು ಹೇಳುತ್ತಿದ್ದಾರೆ. ಇಲ್ಲಿ ಎರಡು ಬಾರಿ ಬ್ರಹ್ಮಶಬ್ದವನ್ನು ಹೇಳಿದ್ದು ಒಂದೇ ರೀತಿಯ ವಾಕ್ಯದಲ್ಲಿ ಎರಡು ಬಾರಿ ಬ್ರಹ್ಮಶಬ್ದವನ್ನು ಹೇಳುವ 'ಅಭ್ಯಾಸ' ಇರುವುದರಿಂದ ಎಂದು ಅರ್ಥ. ಭಾಷ್ಯದಲ್ಲಿರುವ ತಸ್ಮಿನ್ ಎಂಬ ಪದಕ್ಕೆ "ಆನಂದಮಯೇ" ಎಂಬುದಾಗಿ ಅರ್ಥವನ್ನು ಹೇಳಿದ್ದಾರೆ.

ಇಲ್ಲಿ ಕೆಲವರು 'ತದಪ್ಯೇಷಃ ಶ್ಲೋಕೋ ಭವತಿ' ಎಂಬ ವಾಕ್ಯದಲ್ಲಿರುವ ಶ್ಲೋಕಪದಕ್ಕೆ 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂಬಲ್ಲಿ ಹೇಳಿದ ಪುಚ್ಛವನ್ನು ಕುರಿತಾಗಿಯೇ ಉದಾಹರಿಸಿದ ಶ್ಲೋಕ ಎಂಬುದಾಗಿ ಅರ್ಥಮಾಡುತ್ತಾರೆ. ಆದರೆ ಇದು ಸರಿಯಲ್ಲ. ಅನ್ನಮಯಾದಿಗಳನ್ನು ಕುರಿತು ಉದಾಹರಿಸಿದ ಶ್ಲೋಕಗಳಲ್ಲಿ ಪುಚ್ಛದ ವಿಷಯವೇ ಬರದಿರುವುದರಿಂದ ಪ್ರಾಯಪಾಠವು ಇಲ್ಲಿ ಬ್ರಹ್ಮನನ್ನೇ ಹೇಳುತ್ತಿದೆ; ಹೊರತು ಪುಚ್ಛವನ್ನಲ್ಲ ಎಂದು ಅಭಿಪ್ರಾಯವನ್ನು ಗ್ರಹಿಸಬೇಕು.

### ಭಾಷ್ಯದ ಗಾಂಭೀರ್ಯ

भावदीपः – **श्रुतिस्मृतिष्विति** ।। भाष्ये द्वे श्रुती । तिस्रः स्मृतयः इति दर्शितम् । **विष्ण्वेकेति** ।। 'तदेव' इति श्रुतौ तच्छब्देन विष्णुपरामर्शस्यावधारणेन तदेकनिष्ठतायाः प्रागेवोक्तत्वात्, 'एतमेव' इति श्रुतौ सावधारणब्रह्मशब्दस्य विष्णोरन्यत्र मुख्यत्वायोगेन तदेकनिष्ठतायाः 'शब्दविशेषात्' इत्यत्र वक्ष्यमाणत्वात् स्मृतौ च नान्यत्रेति निषेधादिति भावः । 'ब्रह्मेति परमात्मेति' इति भागवते । "बुद्ध्याऽविहिंसन् पुष्पैर्वा प्रणवेन समर्चयेत् । वासुदेवात्मकम्....." इति व्याससमृतिः । सावधारणश्रुत्युक्तेः 'असम्पूर्णाः' इति स्मृतिशेषोक्तेश्चोपयोगं शङ्कापूर्वमाह – **न च तत एवेति** ।। 'ब्रह्मशब्दादेव' इत्यर्थः । **अयोगादिति** ।। 'असन्नेव इति श्लोके' इत्यर्थः । एतेन भाष्ये 'तस्मिन्नेव' इत्यवधारणं विवृतं ध्येयम् ।।१२।।

"ಶ್ರುತಿಸ್ಮೃತಿಷು" ಎಂಬ ಪದದಿಂದ ಭಾಷ್ಯದಲ್ಲಿ ಎರಡು ಶ್ರುತಿ ಮತ್ತು ಮೂರು ಸ್ಮೃತಿಗಳು ಎಂದು ತೋರಿಸಿದ್ದಾರೆ. "ವಿಷ್ಣ್ವೇಕ" ಇತ್ಯಾದಿ ವಾಕ್ಯಭಾಗದಿಂದ 'ತದೇವ' ಎಂಬ ಶ್ರುತಿಯಲ್ಲಿ 'ತತ್'ಶಬ್ದದಿಂದ ವಿಷ್ಣುವನ್ನು ಸ್ವೀಕರಿಸಬೇಕು. ಇಲ್ಲಿರುವ 'ಏವ'ಶಬ್ದದಿಂದ ಬ್ರಹ್ಮತ್ವವು ವಿಷ್ಣುವಿನಲ್ಲಿ ಮಾತ್ರ ಇದೆ ಎಂದು ಹಿಂದೆಯೇ ಹೇಳಲಾಗಿದೆ. 'ಏತಮೇವ' ಎಂಬ ಶ್ರುತಿಯಲ್ಲಿ ಅವಧಾರಣಾರೂಪವಾದ ಏವಶಬ್ದದಿಂದ ಕೂಡಿದ ಬ್ರಹ್ಮಶಬ್ದಕ್ಕೆ ವಿಷ್ಣುವಿಗಿಂತ ಬೇರೆಕಡೆ ಮುಖ್ಯತ್ವವು ಹೊಂದದಿರುವುದರಿಂದ ವಿಷ್ಣುವಿನಲ್ಲಿ ಮಾತ್ರ

ಈ ಬ್ರಹ್ಮಶಬ್ದ ಇದೆ ಎಂಬ ವಿಷಯವನ್ನು ಮುಂದೆ 'ಶಬ್ದವಿಶೇಷಾತ್' ಎಂಬಲ್ಲಿ ಹೇಳಲಿರುವುದರಿಂದ ತದೇಕನಿಷ್ಠತ್ವವನ್ನು ಒಪ್ಪಿಕೊಳ್ಳಬೇಕು. ಸ್ಮೃತಿಯಲ್ಲಿ 'ನಾನ್ಯತ್ರ' ಇತ್ಯಾದಿಯಾಗಿ 'ಬೇರೆ ಕಡೆ ಬ್ರಹ್ಮಶಬ್ದವು ಇಲ್ಲ' ಎಂಬ ಅರ್ಥವನ್ನು ತಿಳಿಸುತ್ತಿರುವುದರಿಂದ ಬ್ರಹ್ಮನೇ ಆನಂದಮಯ ಎಂದು ತಿಳಿಯಬೇಕು. ಭಾಷ್ಯದಲ್ಲಿರುವ 'ಬ್ರಹ್ಮೇತಿ ಪರಮಾತ್ಮೇತಿ' ಎಂಬ ಸ್ಮೃತಿಯು ಭಾಗವತದಲ್ಲಿ ಬಂದಿದೆ.

"ಬುಧ್ಯಾऽವಿಹಿಂಸನ್ ಪುಷ್ಪೈರ್ವಾ ಪ್ರಣವೇನ ಸಮರ್ಚಯೇತ್ ।
ವಾಸುದೇವಾತ್ಮಕಮ್ ......'

ಇದು ವ್ಯಾಸಸ್ಮೃತಿಯ ವಾಕ್ಯವಾಗಿದೆ. 'ಯತಿಯಾದವನು ಬುದ್ಧಿಪೂರ್ವಕವಾಗಿ ಯಾರನ್ನೂ ಹಿಂಸಿಸದೆ ಪುಷ್ಪಗಳಿಂದ ಪ್ರಣವಮಂತ್ರದಿಂದ ಅಥವಾ ಮೂಲಮಂತ್ರದಿಂದ ವಾಸುದೇವ ಸ್ವರೂಪನಾದ ಬ್ರಹ್ಮನನ್ನು ಚೆನ್ನಾಗಿ ಅರ್ಚಿಸಬೇಕು' ಎಂದಿದರ ಅರ್ಥ. ('ವಾಸುದೇವಾತ್ಮಕಂ ಬ್ರಹ್ಮ' ಎಂಬ ಅಂಶವು ಪ್ರಕೃತದಲ್ಲಿ ಉಪಯೋಗಿ).

"ನ ಚ ತತ ಏವ" ಇತ್ಯಾದಿ ವಾಕ್ಯದಿಂದ ಏವಕಾರದಿಂದ ಕೂಡಿದ ಶ್ರುತಿಯನ್ನು ಉದಾಹರಿಸುದುದಕ್ಕೆ ಉಪಯೋಗವನ್ನು ಹೇಳುತ್ತಿದ್ದಾರೆ. ಈ ಶ್ರುತಿಯು ಪೂರ್ಣವಾದ ಅರ್ಥವನ್ನು ಕೊಡದಿರುವುದರಿಂದ ಉಳಿದ ಸ್ಮೃತಿಗಳನ್ನು ಹೇಳಿರುವುದಕ್ಕೆ ಉಪಯೋಗವನ್ನು ಇಲ್ಲಿ ಬರುವ ಸಂದೇಹವನ್ನು ದೂಷಿಸುತ್ತಾ ಇದೇ ವಾಕ್ಯದಿಂದ ಉಪಯೋಗವನ್ನು ಹೇಳುತ್ತಿದ್ದಾರೆ. "ತತ ಏವ" ಎಂಬ ಪದಕ್ಕೆ 'ಬ್ರಹ್ಮಶಬ್ದ ಇರುವುದರಿಂದಲೇ' ಎಂದು ಅರ್ಥ. "ಅಯೋಗಾತ್" ಎಂಬ ಪದಕ್ಕೆ 'ಅಸನ್ನೇವ' ಎಂಬ ಶ್ಲೋಕದಲ್ಲಿ 'ಅಮುಖ್ಯಾರ್ಥ-ಗ್ರಹಣಮಾಡುವುದು ಸರಿಯಲ್ಲ' ಎಂದು ಅರ್ಥ. ಇದರಿಂದ ಭಾಷ್ಯದಲ್ಲಿ ಹೇಳಿದ 'ತಸ್ಮಿನ್ನೇವ' ಎಂಬಲ್ಲಿರುವ ಏವಕಾರವನ್ನು ವಿವರಿಸಿದಂತೆ ಆಯಿತು ॥೧೨॥

**वाक्यार्थमञ्जरी –**

भाष्ये इत्यादिषु ब्रह्मशब्दाभ्यासादित्यन्वयभ्रमं वारयंस्तदर्थमाह – **असन्नेवेत्यादिना** ।। ब्रह्म जीवादन्यं नास्तीति वेद जानाति चेत् सोधिकारी । असन् दुःख्येव भवति यदि ब्रह्म जीवातिरिक्तमस्तीति वेद तत एव एनमधिकारिणं सन्तं सुखिनं विदुरित्यर्थः । 'बुध्याविहिंसन् पुष्पैर्वा प्रणवेन समर्चयेत् । वासुदेवात्मकम्' इति व्यासस्मृतिः ॥

'ಭಾಷ್ಯೇ ಇತ್ಯಾದಿಷು ಬ್ರಹ್ಮಶಬ್ದಾಭ್ಯಾಸಾತ್' ಎಂಬ ಅನ್ವಯದ ಭ್ರಮವನ್ನು ನಿವಾರಣೆ ಮಾಡಲು ಅದರ ಅರ್ಥವನ್ನು 'ಅಸನ್ನೇವ' ಇತ್ಯಾದಿ ಶ್ರುತಿಗಳಿಂದ ಹೇಳುತ್ತಿದ್ದಾರೆ. ಬ್ರಹ್ಮನು ಜೀವನಿಂದ ಬೇರೆಯಲ್ಲ ಎಂದು ಯಾರು ತಿಳಿಯುತ್ತಾರೋ, ಅವರು 'ಅಸನ್' ದುಃಖಿಗಳಾಗುತ್ತಾರೆ. ಒಂದು ವೇಳೆ ಯಾರು ಬ್ರಹ್ಮನನ್ನು ಜೀವನಿಂದ ಅತಿರಿಕ್ತನಾಗಿದ್ದಾನೆಂದು ತಿಳಿಯುತ್ತಾನೋ ಅವನು 'ಸಂತಂ' ಸುಖೀ ಎಂದು ತಿಳಿಯಬೇಕು ಎಂದರ್ಥ.

* * *

# श्रीपद्मनाभतीर्थविरचितसत्तर्कदीपावळिः

ॐ आनन्दमयोऽभ्यासात् ॐ ।। १२ ।।

वृत्तवर्तिष्यमाणग्रन्थसङ्गतिमाह – **तमेवेत्यादिना** । सर्ववेदसमन्वयप्रतिपादके प्रथमाध्याये तदुपर्यपि बादरायण इत्यादिषु केषुचित्सूत्रेषु तत्प्रतिपादनाभावात् । ब्रह्मण्यर्थान्तरनिरूढशब्दसमन्वयप्रतिपादके प्रथमपादे आनन्दमयादिशब्दानां केषाञ्चिदर्थान्तरनिरूढानां समन्वयप्रतिपादनात् **प्रायेणेत्युक्तम्** । न च स्पष्टब्रह्मलिङ्गानामस्मिन्पादे उपरि चास्पष्टब्रह्मलिङ्गानां समन्वयोऽभिधीयत इति कथनीयम् । एतत्कथनस्याप्रामाणिकत्वात् । 'एतदमृतमभयमेतद्ब्रह्म' इत्यादीनाम् उपरितनपादाधिकरणोदाहृतवाक्यानामपि स्पष्टब्रह्मलिङ्गानामेवोपलम्भाच्चेत्याह – **नान्यथेति** ।

नन्वयं निर्दिष्टश्रुतिसमन्वयो जिज्ञास्यतया प्रतिज्ञाय आनन्दमय एव तस्मिन् अभिधातव्यः न तु ब्रह्मणि तस्य 'ब्रह्मपुच्छं प्रतिष्ठा' इति आनन्दमयावयवत्व-श्रवणात् कृत्स्नानन्दमयावयविनं विहाय न हि तत्पुच्छरूपं ब्रह्म जिज्ञासितुं शक्यते । आनन्दमयस्य तु कृत्स्नस्य जिज्ञासया तु पुच्छरूपं ब्रह्म जिज्ञासितं भवत्येवेत्याशङ्कायां सूत्रमवतार्य व्याचष्टे – **आनन्दमयोभ्यासादित्यादिना** ।।

अस्मिन्नधिकरणे विष्ण्वाख्यं ब्रह्मैवानन्दमय इति प्रतिपाद्यते । एकस्यैव अवयवावयविभावाभिप्रायेण आनन्दमयपुच्छत्वश्रवणं न विरुद्धमिति वक्ष्यति । अतो विष्णवाख्ये ब्रह्मणि निखिलश्रुतिसमन्वयप्रतिज्ञा नानुपपन्ना तैत्तरीयके 'विज्ञानमय अन्योन्तरात्माऽनन्दमयो ब्रह्म भवितुमर्हति आनन्दमयमधिकृत्यास्ति ब्रह्मेति चेद्वेद' इति श्रवणाद् ब्रह्मशब्दस्य हिरण्यगर्भे प्रसिद्धत्वात् मानुषाधिपादिषु शतोत्तरादिषु अन्त्यत्वेन हिरण्यगर्भस्य 'ते ये शतं प्रजापतेरानन्दाः स एको ब्रह्मण आनन्दः' इति श्रूयमाणत्वात्तस्यानन्दमयत्वं सिध्यति । 'पद्मभूश्च शतानन्दः' इत्यभिधानात् प्रकृतस्यानन्दमयस्य 'यश्चासावादित्ये' इत्यादित्यगत्वेन श्रवणात् स रुद्र एव स्यात् । आदित्यस्य रुद्रमूर्त्यष्टकप्रविष्टत्वात् । 'रुद्रसर्गं प्रवक्ष्यामि' इत्यारभ्य -

'सूर्यो जलं मही वह्निर्वायुराकाशमेव च ।
दीक्षितो ब्राह्मण सोम इत्येतास्तनवः क्रमात्' इत्युक्तं विष्णुपुराणे ।

एवमेव बृहस्पतिरन्यो वाऽनन्दमयः स्यात् शतोत्तरानन्दमयत्वेन श्रूयमाणत्वात् । 'मम योनिर्महद्ब्रह्म तस्मिन् गर्भं दधाम्यहम्' इति भगवता ब्रह्म शब्दस्यानन्दमयविषयत्वेन श्रुतस्यैव प्रकृतौ प्रयुक्तत्वात् सैवानन्दमयः स्यात् । 'सोऽकामयत बहु स्याम्' इत्यानन्दमयस्य बहुभावश्रवणाच्च प्रकृतिरेवासौ तस्या एव महदादिरूपेण बहुभावः श्रुतिप्रमाणसिद्धः ।

आनन्दमयविषयत्वेन श्रुतस्य ब्रह्मशब्दस्य जीवेष्वपि विद्यमानत्वात् तेषां वाऽऽनन्दमयत्वम् । 'जातिजीवकमलासनशब्दराशिषु ब्रह्मशब्दः' इत्यभिधानात् । 'एष पुरुषोऽन्नरसमयः प्राणमयो मनोमयः' इत्यादयो हि प्राणादिसम्बन्धित्वाज्जीव एव । अतस्तत्प्रायपठितानन्दमयोऽपि प्रियमोदादिसम्बन्धिजीवः स्यात् । इदमेव 'आनन्दमयो ब्रह्मादिः' इत्यादिनोक्त्वा तथापीत्यनेन प्रतिषेधति ।

विष्णुरेवायमानन्दमयः । विष्णुवाचिनो ब्रह्म शब्दस्य आनन्दमयेऽभ्यासात् । 'असन्नेव स भवति । असद्ब्रह्मेति वेद चेत् । अस्ति ब्रह्मेति चेद्वेद । सन्तमेनं ततो विदुः' इत्यानन्दमयं प्रक्रम्य श्रूयते । न चात्र ब्रह्मशब्दादेव हिरण्यगर्भादीनामानन्दमयत्वप्राप्तिरिति वाच्यम् । मुख्ये सम्भवत्यमुख्यकल्पनायोगात् विष्णावेव ब्रह्मशब्दो मुख्यो नान्यत्र मुख्य इति श्रुतिपुराणवाक्यैर्दर्शयति – **तदेवेत्यादिना** । 'बुद्ध्या विहितसत्पुष्पैः प्रणवेन समर्चयेत् । वासुदेवात्मकं ब्रह्म' इति एतद्वचनम् ।

ಇಲ್ಲಿಯವರೆಗೂ ಇರುವ ಮತ್ತು ಮುಂದೆ ಇರುವ ಗ್ರಂಥದ ಸಂಗತಿಯನ್ನು 'ತಮೇವ' ಎನ್ನುವುದರಿಂದ ಹೇಳುತ್ತಾರೆ. ಸಕಲವೇದಗಳ ಸಮನ್ವಯವನ್ನು ಹೇಳುವ ಪ್ರಥಮಾಧ್ಯಾಯದಲ್ಲಿ 'ತದುಪರ್ಯಪಿ ಬಾದರಾಯಣಃ' ಇದೇ ಮೊದಲಾದ ಕೆಲವು ಸೂತ್ರಗಳಲ್ಲಿ ಆ ಸಮನ್ವಯವನ್ನು ಹೇಳಿಲ್ಲ. ಮತ್ತು ಬೇರೆ ವಸ್ತುವಿನಲ್ಲಿ ಪ್ರಸಿದ್ಧಿಯಿರುವ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯವನ್ನು ಹೇಳುವ ಪ್ರಥಮಪಾದದಲ್ಲಿ ಬೇರೆ ಪದಾರ್ಥದಲ್ಲಿ ಪ್ರಸಿದ್ಧಿಯಿರುವ 'ಆನಂದಮಯ' ಮೊದಲಾದ ಶಬ್ದಗಳ ಸಮನ್ವಯವನ್ನು ಹೇಳುತ್ತಾರೆ. ಆದ್ದರಿಂದ 'ಪ್ರಾಯೇಣ' ಎಂದು ಹೇಳಿದ್ದು.

ಸ್ಪಷ್ಟಬ್ರಹ್ಮ ಲಿಂಗವುಳ್ಳಂತಹ ಶಬ್ದಗಳನ್ನು ಈ ಪಾದದಲ್ಲಿ ಮತ್ತು ಅಸ್ಪಷ್ಟಬ್ರಹ್ಮಲಿಂಗವುಳ್ಳಂತಹ ಶಬ್ದಗಳನ್ನು ಮುಂದಿನ ಪಾದದಲ್ಲಿ ಸಮನ್ವಯ ಮಾಡುತ್ತಾರೆ ಎಂದು (ಮಾಯಾವಾದಿಗಳು

ಹೇಳುತ್ತಾರೆ) ಹೇಳಬಾರದು. ಈ ರೀತಿ ಹೇಳುವುದಕ್ಕೆ ಏನೂ ಪ್ರಮಾಣವಿಲ್ಲ. ಮತ್ತು 'ಏತದಮೃತ-ಮಭಯಮೇತದ್ ಬ್ರಹ್ಮ' ಇದೇ ಮೊದಲಾದ ಮುಂದಿನ ಪಾದಗಳ ಅಧಿಕರಣಗಳಲ್ಲಿ ಉದಾಹರಿಸಿದ ವಾಕ್ಯಗಳೂ ಕೂಡ ಸ್ಪಷ್ಟ ಬ್ರಹ್ಮಲಿಂಗವುಳ್ಳಂಥವುಗಳೇ ಆಗಿವೆ ಎಂದು 'ನಾನ್ಯಥಾ' ಎಂದು ಹೇಳುತ್ತಾರೆ.

ನೀವು ಹೇಳಿದ ಶ್ರುತಿಯ ಸಮನ್ವಯವನ್ನು, ಜಿಜ್ಞಾಸ್ಯತಯಾ ಪ್ರತಿಜ್ಞೆ ಮಾಡಿದ ಆ ಆನಂದ-ಮಯನಲ್ಲೇ ಹೇಳಬೇಕು ಹೊರತು ಬ್ರಹ್ಮನಲ್ಲಿ ಅಲ್ಲ. ಏಕೆಂದರೆ ''ಬ್ರಹ್ಮಪುಚ್ಛಂ ಪ್ರತಿಷ್ಠಾ'' ಎಂದು ಶ್ರುತಿಯು ಬ್ರಹ್ಮನು ಆನಂದಮಯನ ಅವಯವ ಎಂದು ಹೇಳಿದೆ. ಸಂಪೂರ್ಣ ಅವಯವಿಯಾದ ಆನಂದಮಯನನ್ನು ಬಿಟ್ಟು ಒಂದು ಭಾಗವಾದ ಅವಯವರೂಪನಾದ ಬ್ರಹ್ಮನನ್ನು ಜಿಜ್ಞಾಸೆ ಮಾಡಿದಂತಾಗುತ್ತದೆ ಎಂದು ಪ್ರಶ್ನೆ ಬಂದರೆ, ಸೂತ್ರಕ್ಕೆ ಅವತರಣಿಕೆಯನ್ನು ಕೊಟ್ಟು ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ 'ಆನಂದಮಯೋಽಭ್ಯಾಸಾತ್' ಇದೇ ಮೊದಲಾದುದರಿಂದ.

ಈ ಅಧಿಕರಣದಲ್ಲಿ ವಿಷ್ಣುವೆಂಬ ಹೆಸರುಳ್ಳ ಬ್ರಹ್ಮನೇ ಆನಂದಮಯ ಎಂದು ಪ್ರತಿಪಾದನೆ ಮಾಡುತ್ತಾರೆ. ಒಬ್ಬನೇ, ತಾನೇ ಅವಯವಿಯಾಗಿದ್ದಾನೆ ಮತ್ತು ತಾನೇ ಅವಯವವಾಗಿದ್ದಾನೆ. ಆದ್ದರಿಂದ ಬ್ರಹ್ಮನು ಆನಂದಮಯನ ಅವಯವ ಎಂದು ಶ್ರುತಿ ಹೇಳಿದ್ದಕ್ಕೆ ವಿರೋಧವಿಲ್ಲ. ಆದ್ದರಿಂದ ವಿಷ್ಣುವೆಂಬ ಬ್ರಹ್ಮನಲ್ಲಿ ಸಕಲಶ್ರುತಿಗಳ ಸಮನ್ವಯ ಮಾಡುತ್ತೇವೆ ಎಂದು ಪ್ರತಿಜ್ಞೆಮಾಡಿದ್ದು ಅನುಚಿತವಾಗುವುದಿಲ್ಲ.

ಇಲ್ಲಿ ಹೇಳಿರುವ ಆನಂದಮಯನು ಚತುರ್ಮುಖ ಬ್ರಹ್ಮನೇ . ಏಕೆಂದರೆ ಆನಂದಮಯನನ್ನು ಕುರಿತು 'ಬ್ರಹ್ಮಚೇದ್ವೇದ ' ಎಂದು ಹೇಳಿದ್ದಾರೆ. ಆ ಬ್ರಹ್ಮಶಬ್ದ ಚತುರ್ಮುಖಬ್ರಹ್ಮನಲ್ಲಿ ಪ್ರಸಿದ್ಧವಾಗಿದೆ ಮತ್ತು ಮನುಷ್ಯೋತ್ತಮರಿಂದ ಆರಂಭಿಸಿ ನೂರು ಪಟ್ಟು ಹೆಚ್ಚು ಹೆಚ್ಚು ಆನಂದತಾರತಮ್ಯವನ್ನು ಹೇಳುವ ಸಂದರ್ಭದಲ್ಲಿ ಬ್ರಹ್ಮನಿಗೆ 'ತೇ ಯೆ ಶತಂ ಪ್ರಜಾಪತೇರಾನಂದಾಃ ಸ ಏಕೋ ಬ್ರಹ್ಮಣ ಆನಂದಃ' ಎಂದು ಕೊನೆಯಲ್ಲಿ ಹೇಳಿದ್ದಾರೆ. ಇಲ್ಲಿ ಶತಾನಂದ ಎಂದರೆ 'ಪದ್ಮಭೂಶ್ಚ ಶತಾನಂದಃ ' ಎಂದು ಕೋಶವಿರುವುದರಿಂದ ಬ್ರಹ್ಮನೇ. ಆದ್ದರಿಂದ ಅವನೇ ಆನಂದಮಯ ಎಂದು ಸಿದ್ಧವಾಗು-ತ್ತದೆ.

ಅಥವಾ ಪ್ರಕೃತನಾದ ಆನಂದಮಯನು 'ಯಶ್ಚಾಸಾವಾದಿತ್ಯೇ' ಎಂದು ಸೂರ್ಯನಲ್ಲಿದ್ದಾನೆ ಎಂದು ಹೇಳಿದ್ದರಿಂದ ಅವನು ರುದ್ರನೇ ಎಂದಾಗುತ್ತಾನೆ. ಏಕೆಂದರೆ ರುದ್ರನ ಎಂಟು ಮೂರ್ತಿ (ಪ್ರತಿಮಾಸ್ಥಾನ)ಗಳಲ್ಲಿ ಸೂರ್ಯನು ಒಬ್ಬನು. ವಿಷ್ಣುಪುರಾಣದಲ್ಲಿ 'ರುದ್ರನ ಸೃಷ್ಟಿಯನ್ನು ಹೇಳುತ್ತೇನೆ' ಎಂದು ಪ್ರಾರಂಭ ಮಾಡಿ ' ಸೂರ್ಯಂ ಜಲೋ ಮಹೀ ವಹ್ನಿರ್ವಾಯುರಾಕಾಶಮೇವ ಚ । ದೀಕ್ಷಿತೋ ಬ್ರಾಹ್ಮಣಃ ಸೋಮ ಇತ್ಯೇತಾಸ್ತನವಃ ಕ್ರಮಾತ್ ॥ (ಸೂರ್ಯ, ನೀರು, ಭೂಮಿ, ಅಗ್ನಿ, ವಾಯು,ಆಕಾಶ, ದೀಕ್ಷೆ ಸ್ವೀಕರಿಸಿದ ಬ್ರಾಹ್ಮಣ ಮತ್ತು ಚಂದ್ರ ಇವು ಕ್ರಮವಾಗಿ ಪ್ರತಿಮೆಗಳು) ಎಂದು ಹೇಳಿದ್ದಾರೆ.

ಹೀಗೆ ಬೃಹಸ್ಪತಿ ಅಥವಾ ಮತ್ತೊಬ್ಬನು ಆನಂದಮಯನಾಗಬಹುದು. ಏಕೆಂದರೆ ಅವರಿಗೆ ನೂರಕ್ಕಿಂತ ಹೆಚ್ಚು ಆನಂದವುಳ್ಳವರು ಎಂದು ಶ್ರುತಿ ಹೇಳಿದೆ ಅಥವಾ ''ಮಮ ಯೋನಿ ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್'' ಎಂದು ಭಗವಂತನು (ಕೃಷ್ಣನು) ಆನಂದಮಯನಲ್ಲಿ ಶ್ರುತವಾದ ಬ್ರಹ್ಮಶಬ್ದವನ್ನು ಪ್ರಕೃತಿಯಲ್ಲಿ ಪ್ರಯೋಗಿಸಿದ್ದಾನೆ. ಆದ್ದರಿಂದ ಪ್ರಕೃತಿಯು ಆನಂದಮಯ ಶಬ್ದವಾಚ್ಯವಾಗಬಹುದು.

''ಸೋಕಾಮಯತ ಬಹುಸ್ಯಾಂ'' ಎಂದು ಆನಂದಮಯನಿಗೆ ಬಹುಭಾವ (ಬಹಳವಾಗಿ ಆಗುವಿಕೆ)ವನ್ನು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದಲೂ ಪ್ರಕೃತಿಯೇ ಎಂದು ನಿಶ್ಚಯಿಸಬಹುದು. ಶ್ರುತಿ, ಮೊದಲಾದ ಪ್ರಮಾಣಗಳಲ್ಲಿ ಪ್ರಕೃತಿಯು ಮಹತತ್ವ ಮೊದಲಾದ ರೂಪದಿಂದ ಬಹುಭಾವವನ್ನು ಹೊಂದಿದೆ ಎಂದು ಹೇಳಿದೆ.

ಅಥವಾ ಆನಂದಮಯನಲ್ಲಿ ಪ್ರಯೋಗಿಸಿರುವ ಬ್ರಹ್ಮಶಬ್ದಕ್ಕೆ ಜೀವನೆಂದು ಅರ್ಥವಿದೆ. ''ಜಾತಿಜೀವಕಮಲಾಸನಶಬ್ದರಾಶಿಷು ಬ್ರಹ್ಮಶಬ್ದಃ'' ಎಂದು ಕೋಶವಿರುವುದರಿಂದ ಜೀವರೂ ಆನಂದಮಯರಾಗಬಹುದು. ಅಲ್ಲದೆ 'ಏಷ ಪುರುಷೋನ್ನರಸಮಯಃ ಪ್ರಾಣಮಯ ಮನೋ-ಮಯಃ'' ಎಂದು ಶ್ರುತಿಯಲ್ಲಿ ಹೇಳಿದ ಪ್ರಾಣ ಮನಸ್ಸು ಇವೇ ಮೊದಲಾದವುಗಳ ಸಂಬಂಧವಿರು-ವುದರಿಂದ ಜೀವನೇ(ಬ್ರಹ್ಮಶಬ್ದವಾಚ್ಯನಾಗಬಹುದು). ಆದ್ದರಿಂದ ಅದೇ ಸರಣಿಯಲ್ಲಿ ಪ್ರಯೋಗಿಸಿದ ಆನಂದಮಯನೂ ಪ್ರಿಯ,ಮೊದ ಮೊದಲಾದವುಗಳಿಂದ ಕೂಡಿದ ಜೀವನೇ.

ಇದನ್ನೇ ಭಾಷ್ಯದಲ್ಲಿ ''ಆನಂದಮಯಃ ಬ್ರಹ್ಮಾದಿ'' ಇತ್ಯಾದಿಯಾಗಿ ಹೇಳಿ, 'ತಥಾಪಿ' ಎನ್ನುವುದರಿಂದ ನಿಷೇಧ ಮಾಡುತ್ತಾರೆ. ವಿಷ್ಣುವನ್ನು ಹೇಳುವ ಬ್ರಹ್ಮಶಬ್ದದ 'ಅಭ್ಯಾಸ'ವಿರುವುದರಿಂದ ವಿಷ್ಣುವೇ ಆನಂದಮಯ. 'ಅಸನ್ನೇವ ಸ ಭವತಿ । ಅಸದ್ ಬ್ರಹ್ಮೇತಿ ವೇದ ಚೇತ್ । ಅಸ್ತಿ ಬ್ರಹ್ಮೇತಿ ವೇದ ಚೇತ್ । ಸಂತಮೇನಂ ತತೋ ವಿದುಃ' ಎಂದು ಆನಂದಮಯನ ವಿಷಯ ಪ್ರಾರಂಭವಾದಮೇಲೆ ಶ್ರುತಿಯಲ್ಲಿ ಇದೇ ಬ್ರಹ್ಮಶಬ್ದ ಇರುವುದರಿಂದಲೇ ಚತುರ್ಮುಖಾದಿಗಳೂ ಆನಂದಮಯ ಶಬ್ದವಾಚ್ಯರಾಗುತ್ತಾರೆ ಎನ್ನಬಾರದು. ಮುಖ್ಯಾರ್ಥ ಸ್ವೀಕರಿಸಲು ಬರುವಾಗ ಅಮುಖ್ಯಾರ್ಥವನ್ನು ಸ್ವೀಕರಿಸಬಾರದು. ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಮುಖ್ಯ; ಹೊರತು ಬೇರೆಕಡೆಯಲ್ಲ ಎಂದು ಶ್ರುತಿಪುರಾಣವಾಕ್ಯಗಳಿಂದ ತೋರಿಸುತ್ತಾರೆ 'ತದೇವ' ಎನ್ನುವುದರಿಂದ.

''ಬುದ್ಧ್ಯಾಽವಿಹಿಂಸನ್(ಬುದ್ಧ್ಯಾ ವಿಹಿತಸತ್) ಪುಷ್ಪೈಃ ಪ್ರಣವೇನ ಸಮರ್ಚಯೇತ್ ।
ವಾಸುದೇವಾತ್ಮಕಂ ಬ್ರಹ್ಮ ............. .......... ''

ಎಂದು ( ಬುದ್ಧಿಯಿಂದ ವಿಹಿತವಾದ ಒಳ್ಳೆಯ ಹೂಗಳಿಂದ ಪ್ರಣವಮಂತ್ರದಿಂದ ವಾಸುದೇವನಾದ ಬ್ರಹ್ಮನನ್ನು ಪೂಜಿಸಬೇಕು) ತದೇವ ಎಂಬ ವಾಕ್ಯದಿಂದ ಉಪಲಕ್ಷಿತವಾದ ಶ್ಲೋಕ.

ಆನಂದಮಯಶಬ್ದಾರ್ಥ

## ಬ್ರಹ್ಮಮೀಮಾಂಸಾಶಾಸ್ತ್ರ

**सू - ॐ ।। विकारशब्दान्नेति चेन्न प्राचुर्यात् ।। ॐ ।। १३ ।।**

ಅನುವಾದ - ನಿರ್ವಿಕಾರನಾದ ಬ್ರಹ್ಮನು ವಿಕಾರಾರ್ಥಕವಾದ ಮಯಟ್‌ಶಬ್ದವಿರುವ ಆನಂದಮಯಶಬ್ದದಿಂದ ಪ್ರತಿಪಾದ್ಯನಾಗಲಾರ ಎಂದು ಹೇಳಬಾರದು. ಏಕೆಂದರೆ ಆ ಮಯಟ್‌ಪ್ರತ್ಯಯಕ್ಕೆ ಪೂರ್ಣವೆಂಬ ಅರ್ಥವಿರುವಂತೆ ಪ್ರಾಚುರ್ಯ ಎಂಬರ್ಥವೂ ಇರುತ್ತದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕಾ

**सूत्रदीपिका –** विकारशब्दात् विकारार्थकमयट्शब्दाद् आनन्दमयादिर्विष्णुर्नेति चेन्न । कुतः? प्राचुर्यात् मयट्शब्दस्य प्राचुर्यपदोक्तपूर्णत्वाभिधायकत्वादित्यर्थः ।।

'ವಿಕಾರಶಬ್ದಾತ್' ವಿಕಾರಾರ್ಥದಲ್ಲಿರುವ ಮಯಟ್‌ಶಬ್ದವಿರುವುದರಿಂದ ಆನಂದಮಯಾದಿಪದಗಳಿಂದ ವಿಷ್ಣುವು ವಾಚ್ಯನಾಗಲಾರ; 'ಇತಿ ಚೇನ್ನ' ಇದು ತಪ್ಪು. ಏಕೆಂದರೆ 'ಪ್ರಾಚುರ್ಯಾತ್' ಪ್ರಾಚುರ್ಯಪದದಿಂದ ಪ್ರತಿಪಾದಿಸಲ್ಪಟ್ಟ ಪೂರ್ಣತ್ವ ಎಂಬರ್ಥವನ್ನೇ ಮಯಟ್‌ಶಬ್ದವು ಹೇಳುವುದರಿಂದ ಆನಂದಮಯಾದಿಶಬ್ದಗಳಿಂದ ವಿಷ್ಣುವು ವಾಚ್ಯನಾಗುತ್ತಾನೆ.

**भाष्यम् – ॐ ।। विकारशब्दान्नेति चेन्न प्राचुर्यात् ।। ॐ ।। १३ ।।**

**विकारात्मकत्वात् तदभिमानित्वाच्च युज्यते प्रकृत्यादीनां मयट्छब्दः । न तु परमात्मनः इति मा भूत् । प्रचुरानन्दत्वाद्ध्यानन्दमयः । न तु तद्विकारत्वात्[१] ।**

(१) भाष्यदीपिका – उक्तमाक्षिप्य समादधत् सूत्रं पठित्वाऽऽक्षेपांशं व्याचष्टे – विकारेति ।। अत्र चो हेतुसमुच्चये । प्रकृतिशब्देन चिदचित्प्रकृती गृह्येते । आदिशब्देन जीवा गृह्यन्ते । प्रकृत्यादय इति च विपरिणम्यते । नञ् आवर्तते । आनन्दमय इत्यस्ति, किं तु विष्णुरिति च । तुशब्दो विशेषार्थोऽवधारणार्थे च । तथा च – आनन्दमयो न विष्णुः, किन्तु, प्रकृत्यादय एव । कुतः? यतोऽत्र 'विकारशब्दो' विकारार्थकमयट्छब्दो 'युज्यते' प्रयुज्यते । स च यतो विकारतदभिमानित्वाभ्यामेव 'युज्यते' प्रवर्तते । अतः प्रकृत्यादीनामेव युज्यते । कुतः? जडप्रकृतेर्विकारात्मकत्वाच्चेतनप्रकृत्यादीनां च विकाराभिमानित्वात् । न तु परमात्मनः, तस्याविकारित्वादनभिमानित्वाच्चेति योजना ।

ವಿಕಾರಾರ್ಥದಲ್ಲಿ ಪ್ರಸಿದ್ಧವಾದ ಮಯಟ್‌ಪ್ರತ್ಯಯವು ಆನಂದಮಯಶಬ್ದದಲ್ಲಿ ಪ್ರಸಿದ್ಧವಾಗಿದೆ. ಜಡಪ್ರಕೃತಿಗೆ ವಿಕಾರವನ್ನು ಹೇಳಬಹುದು. ಅಥವಾ ಅದರ ಅಭಿಮಾನಿಯಾದ ಲಕ್ಷ್ಮೀದೇವಿಗೂ ವಿಕಾರವನ್ನು ಹೇಳಬಹುದು. ಆದ್ದರಿಂದ ಇವರಿಬ್ಬರನ್ನು ಮಾತ್ರ ಆನಂದಮಯ ಎಂದು ಕರೆಯಬಹುದೇ ಹೊರತು ನಿರ್ವಿಕಾರನಾದ ಪರಮಾತ್ಮನನ್ನು ಆನಂದಮಯನೆಂದು ಕರೆಯಲಾಗದು. ಹೀಗೆ ಆಕ್ಷೇಪಿಸುವುದು ತಪ್ಪು. ಏಕೆಂದರೆ, ವಿಷ್ಣುವು ಆನಂದಪೂರ್ಣನಾದ್ದರಿಂದ ಆನಂದಮಯನೆನಿಸುತ್ತಾನೆ. ಹೊರತು ಆನಂದವಿಕಾರನಾದ್ದರಿಂದ ಅಲ್ಲ.

ಪ್ರತಿಪದಾರ್ಥ -- ಹಿಂದಿನ ಸೂತ್ರದಲ್ಲಿ ಸಮರ್ಥಿಸಿದ ಪ್ರಮೇಯವನ್ನು ಆಕ್ಷೇಪಿಸಿ ಸಮಾಧಾನವನ್ನು ಹೇಳುತ್ತಿದ್ದಾರೆ.

---

'इति चेन्न' इत्यंशं व्याचष्टे – इति मा भूदिति ।। शङ्केति शेषः ।

कुत इत्यतः प्रवृत्तं सौत्रं हेतुं व्याचष्टे – प्रचुरेति ।। आनन्दमयः कथ्यत इति शेषः । हिशब्दो हेतौ । तुशब्दोऽवधारणार्थः । तथा च 'हि' यतः 'आनन्दमयः' पदार्थः 'प्रचुरानन्दत्वात्' पूर्णानन्दत्वाच्च निमित्तादेवाऽनन्दमयपदेन कथ्यते 'न तद्विकारत्वात्' आनन्दविकारत्वादत इति शङ्का मा भूदिति योजना । मयट्छब्दस्य प्राचुर्यरूपार्थान्तरमपेक्ष्य प्रवृत्तत्वेन तद्विरोधाभावादिति भावः । मयडित्याख्यप्रत्ययस्य प्राचुर्यार्थत्वं च 'तादात्म्यार्थे विकारार्थे प्राचुर्यार्थे मयट् त्रिधा' इति वचनात् सिद्धमित्यपि हेरर्थः । यद्यपि श्रुतिसूत्रगतानन्दमय इति व्याख्येयपदस्य तद्धितान्तस्यार्थकथनाय तदनुकूलतया आनन्दः प्रचुरो यस्मिन् स आनन्दप्रचुरः इति समासः कार्यो न तद्विपरीतः प्रचुर आनन्दोऽस्मिन् स प्रचुरानन्द इति । तथाऽप्यानन्दमय इति तद्धितवृत्त्यननुगुणानन्दप्रचुर इति समासवाक्याभिधाने ब्राह्मणप्रचुरो ग्राम इतिवद् अनानन्दस्यापि प्राप्तेस्तद्वारणाय प्रचुरानन्द इति विपरीतसमासः कृतः ।

केचित्तु - सूत्रे प्राचुर्यादित्युक्तत्वादानन्दस्येत्यर्थलब्धं, तथा चैतद्वाक्यानुसारेणाऽनन्दप्रचुरत्वादिति समासवाक्यप्रयोगः कार्यो यद्यपि, तथाऽपि उक्तप्रयोजनाभिप्रायेण प्रचुरानन्दत्वादिति सौत्रन्यासवाक्यविपरीतसमासः कृत इत्याहुः । तन्न, 'आनन्दप्रचुर इति यथास्थिताभिधाने' इत्यादिटीकाविरोधात् । यद्यप्यानन्दमय इति श्रुतिसूत्रानुसारेण प्राचुर्यस्य विशेष्यत्वेनोक्तावपि नानानन्दप्राप्तिः, प्रकाशप्रचुरो रविरित्युक्तेऽपि सवितर्यन्धकारलेशाप्रतीतेः । तथा चाऽनन्दप्रचुरत्वादित्येव व्याख्यातुमुचितम् । प्राचुर्यस्य व्यधिकरणसजातीयजैवानन्दाल्पत्वेनापि निरूपयितुं शक्यत्वात् । तथाऽपि प्राचुर्यस्य विशेषणतायामनानन्दाप्राप्तेः परैरपि स्वीकृतत्वाद् विशेष्यतायां तु तस्य समानाधिकरण-विजातीयाल्पत्वनिरूप्यत्वाद् ब्राह्मणप्रचुरो ग्राम इत्यादाविव तत्प्राप्तिरेवेत्यङ्गीकृतत्वादुभय-वादिसिद्ध्यनुसारेणैव व्याख्यातव्यत्वात् तदभिप्रायेण प्रचुरानन्दत्वादिति व्याख्यातं भाष्ये इत्युक्तं चन्द्रिकायाम् ।

ವಿಕಾರಾತ್ಮಕತ್ವಾತ್ = ವಿಕಾರಾರ್ಥದಲ್ಲಿ ಮಯಟ್‌ಪ್ರತ್ಯಯ ಇರುವುದರಿಂದ, ತದಭಿಮಾನಿತ್ವಾಚ್ಚ = ವಿಕಾರಕ್ಕೆ ಅಭಿಮಾನಿರೂಪ ಎಂಬರ್ಥವೂ ಇರುವುದರಿಂದ, ಪ್ರಕೃತ್ಯಾದೀನಾಂ = ಜಡಪ್ರಕೃತಿ ಮತ್ತು ಚೇತನಪ್ರಕೃತಿ(ಲಕ್ಷ್ಮೀ)ಗೆ, ಮಯಟ್‌ಶಬ್ದಃ = ಮಯಟ್ ಪ್ರತ್ಯಯವು, ಯುಜ್ಯತೇ = ಯುಕ್ತವಾಗುತ್ತದೆ. ನ ತು ಪರಮಾತ್ಮನಃ = ವಿಷ್ಣುವಿನಲ್ಲಿ ಯುಕ್ತವಾಗುವುದಿಲ್ಲ. ಇತಿ = ಹೀಗೆ ಹೇಳುವುದು, ಮಾ ಭೂತ್ = ಯುಕ್ತವಲ್ಲ. ಹಿ = ಏಕೆಂದರೆ, (ಮಯಟ್ ಪ್ರತ್ಯಯಕ್ಕೆ ಪರಿಪೂರ್ಣ ಎಂಬರ್ಥ ಇರುವುದರಿಂದ) ಪ್ರಚುರಾನಂದತ್ವಾತ್ = ಆನಂದಪೂರ್ಣನಾದ್ದರಿಂದಲೇ, ಆನಂದಮಯಃ = ಆನಂದಮಯಶಬ್ದದಿಂದ ಪ್ರತಿಪಾದ್ಯನು. ನ ತು ತದ್ವಿಕಾರಿತ್ವಾತ್ = ಆನಂದ ಅನ್ನಾದಿಗಳ ವಿಕಾರಭೂತನಾದ್ದರಿಂದ ಅಲ್ಲ.

## ಪ್ರಚುರಾನಂದನಾದ್ದರಿಂದ ಆನಂದಮಯನು

**तत्वप्रकाशिका – उक्तार्थमाक्षिप्य समादधत् सूत्रं पठित्वा, व्याचष्टे – विकारेति ।। नायमानन्दमयो विष्णुः किन्तु प्रागुक्तप्रकृत्यादय एव । विकाराभिधायकमयट्शब्दप्रयोगात् । विकारार्थशब्दवाच्यत्वं हि विकारत्वविकाराभिमानित्वाभ्यां सम्भवति । तथा च विकारात्मकत्वादचित्प्रकृतेश्चेतनप्रकृत्यादीनां विकाराभिमानित्वात् तेषु मयट्शब्दो युज्यते न विष्णोः, तस्याविकारित्वादतदभिमानित्वाच्चेति शङ्का माभूत् । यतः प्रचुरानन्दत्वादानन्दमयपदेनान्दमयः कथ्यते, न त्वानन्दविकारत्वात् । 'तादात्म्यार्थे विकारार्थे प्राचुर्यार्थे मयट् त्रिधा' इति प्राचुर्येऽपि मयट्प्रयोगादिति भावः ।**

ವಿಷ್ಣುವು ಆನಂದಮಯನೆಂದು ಹಿಂದಿನ ಸೂತ್ರದಲ್ಲಿ ಹೇಳಿತ್ತು. ಅದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರವನ್ನು ಹೇಳಿ; ಅದರ ವ್ಯಾಖ್ಯಾನವನ್ನು ''ವಿಕಾರ'' ಎನ್ನುವುದರಿಂದ ಮಾಡುತ್ತಿದ್ದಾರೆ.

ಈ ಶ್ರುತಿಯಲ್ಲಿ ಹೇಳಿದ ಆನಂದಮಯನು ವಿಷ್ಣುವಲ್ಲ; ಕಿಂತು ಹಿಂದೆ ಹೇಳಿದ ಪ್ರಕೃತಿ ಮೊದಲಾದವರೇ ಆನಂದಮಯಶಬ್ದವಾಚ್ಯರು. ಏಕೆಂದರೆ ಆನಂದಮಯ ಎಂಬಲ್ಲಿ ವಿಕಾರಾರ್ಥಕವಾದ 'ಮಯಟ್' ಪ್ರತ್ಯಯವನ್ನು ಪ್ರಯೋಗಿಸಿದ್ದಾರೆ. ಅಂತಹ ವಿಕಾರಾರ್ಥವುಳ್ಳಂತಹ ಶಬ್ದದಿಂದ ವಾಚ್ಯವಾಗಬೇಕಾದರೆ ವಿಕಾರಸ್ವರೂಪವಾಗಬೇಕು ಅಥವಾ ವಿಕಾರವುಳ್ಳದ್ದರ ಅಭಿಮಾನಿಯಾಗಿರಬೇಕು. ಹೀಗಾಗಿ ವಿಕಾರವುಳ್ಳದ್ದಾದ್ದರಿಂದ ಜಡಪ್ರಕೃತಿಯು, ಅದಕ್ಕೆ ಅಭಿಮಾನಿಯಾದ್ದರಿಂದ ಚೇತನಪ್ರಕೃತಿ ಮೊದಲಾದವರಲ್ಲಿ ಮಯಟ್‌ಶಬ್ದದ ಪ್ರಯೋಗವು ಕೂಡುತ್ತದೆ ಹೊರತು ವಿಷ್ಣುವಿನಲ್ಲಿ ಅಲ್ಲ. ಅವನು ವಿಕಾರಿಯೂ ಅಲ್ಲ; ವಿಕಾರವುಳ್ಳಂತಹ ವಸ್ತುವಿನ ಅಭಿಮಾನಿಯೂ ಅಲ್ಲ. -- ಈ ರೀತಿ ಪ್ರಶ್ನಿಸಬಾರದು.

ಏಕೆಂದರೆ, ಪ್ರಚುರಾನಂದ(ಬಹಳ ಆನಂದ)ವುಳ್ಳವನಾದ್ದರಿಂದ ಆನಂದಮಯನಾದ ವಿಷ್ಣುವೇ ಆನಂದಮಯಶಬ್ದವಾಚ್ಯನು ಹೊರತು ಆನಂದವಿಕಾರವುಳ್ಳವನಾದ್ದರಿಂದ ಅಲ್ಲ. ಮಯಟ್‌ಪ್ರತ್ಯಯದ ಪ್ರಯೋಗವಿರುವುದರಿಂದ 'ವಿಕಾರ' ಎಂಬರ್ಥವನ್ನು ಹೇಗೆ ಬಿಡುತ್ತೀರಿ? ಎಂದರೆ 'ತಾದಾತ್ಮ್ಯಾರ್ಥೇ ವಿಕಾರಾರ್ಥೇ ಪ್ರಾಚುರ್ಯಾರ್ಥೇ ಮಯಟ್ ತ್ರಿಧಾ' (ತಾದಾತ್ಮ್ಯ, ವಿಕಾರ, ಪ್ರಾಚುರ್ಯ ಎಂಬ ಮೂರು ಅರ್ಥದಲ್ಲೂ ಮಯಟ್ ಪ್ರತ್ಯಯದ ಪ್ರಯೋವಿದೆ) ಎಂಬ ವಾಕ್ಯದಿಂದ ಮಯಟ್ ಪ್ರತ್ಯಯವು ಪ್ರಾಚುರ್ಯಾರ್ಥದಲ್ಲಿಯೂ ಇದೆಯಾದ್ದರಿಂದ ಪ್ರಚುರಾನಂದವುಳ್ಳವನು ಆನಂದಮಯನಾಗಬಹುದು ಎಂದು ಭಾವ.

### ನಿರ್ವಿಕಾರನಲ್ಲಿ ಮಯಟ್‌ಪ್ರತ್ಯಯ ಕೂಡಲಾರದು

भावदीपः – **ॐ विकारशब्दान्नेति चेन्न प्राचुर्यात् ॐ** ।। उपलक्षितान्नमयादेर्ब्रह्मत्वप्रकारश्चाग्रे वक्ष्यते । भाष्ये उक्तार्थाक्षेपाप्रतीतेराह – **नायमिति** ।। पूर्वसूत्रादनुवृत्तस्य 'आनन्दमयो विष्णुः' इत्यस्य सौत्रनञाऽन्वय इति भावः ।

सूत्राक्षरार्थमुक्त्वा भाष्यं योजयति – **विकारार्थेति** ।। **'प्रकृत्यादीनाम्'** इत्यत्र यथायोगं हेत्वोरन्वयमाह – **तथा चेति** ।। **अविकारत्वादिति** ।। 'अविकारोऽक्षरः शुद्धः' इत्यादेरिति भावः ।

ಆನಂದಮಯಶಬ್ದದಿಂದ ಉಪಲಕ್ಷಣತಯಾ ಇಟ್ಟುಕೊಳ್ಳಬೇಕಾದ ಅನ್ನಮಯಾದಿಶಬ್ದಗಳಿಗೆ ಬ್ರಹ್ಮನೇ ಅರ್ಥ ಎಂಬ ವಿವರಣೆಯನ್ನು ಮುಂದೆ ಹೇಳಲಿದ್ದೇವೆ. ಭಾಷ್ಯದಲ್ಲಿ ಈ ಹಿಂದಿನ ಸೂತ್ರದಲ್ಲಿ ಹೇಳಿದ ಅರ್ಥಕ್ಕೆ ಆಕ್ಷೇಪವು ಸ್ಪಷ್ಟವಾಗಿ ಗೋಚರಿಸದೇ ಇರುವುದರಿಂದ "ನಾಯಮ್" ಇತ್ಯಾದಿ ವಾಕ್ಯದಿಂದ ಆ ಆಕ್ಷೇಪವನ್ನು ತೋರಿಸುತ್ತಿದ್ದಾರೆ. ಹಿಂದಿನ ಸೂತ್ರದಿಂದ 'ಆನಂದಮಯೋ ವಿಷ್ಣುಃ' ಎಂಬ ಅಂಶವನ್ನು ಅನುವೃತ್ತಿ ಮಾಡಿಕೊಂಡು, ಈ ಸೂತ್ರದಲ್ಲಿರುವ 'ನಞ' ಪದದೊಂದಿಗೆ ಅನ್ವಯವನ್ನು ಮಾಡಿಕೊಳ್ಳಬೇಕು.

"ವಿಕಾರಾರ್ಥ" ಇತ್ಯಾದಿವಾಕ್ಯದಿಂದ ಸೂತ್ರಪದಗಳಿಗೆ ಅರ್ಥವನ್ನು ಹೇಳಿದ ನಂತರ ಭಾಷ್ಯವನ್ನು ಯೋಜನೆ ಮಾಡುತ್ತಿದ್ದಾರೆ. 'ಪ್ರಕೃತ್ಯಾದೀನಾಮ್' ಎಂಬಲ್ಲಿ ಯಥಾಯೋಗವಾಗಿ ಹೇತುಗಳಿಗೆ ಅನ್ವಯವನ್ನು ಸೂಚಿಸುತ್ತಿದ್ದಾರೆ. -- "ತಥಾ ಚ" ಇತ್ಯಾದಿವಾಕ್ಯದಿಂದ. "ಅವಿಕಾರಿತ್ವಾತ್" ಎಂಬ ಪದದಿಂದ 'ಅವಿಕಾರೋಽಕ್ಷರಃ ಶುದ್ಧಃ' ಎಂಬ ಪ್ರಮಾಣವಾಕ್ಯದಿಂದ ಸಿಗುವ ಅವಿಕಾರಿತ್ವರೂಪವಾದ ಲಕ್ಷಣವನ್ನು ಇಟ್ಟುಕೊಳ್ಳಬೇಕು.

### ಮಯಟ್‌ಪ್ರತ್ಯಯಕ್ಕೆ ತಾದಾತ್ಮ್ಯಾರ್ಥ ಬಿಡೋಣ

भावदीपः – **अभिमानित्वं** = पराधीननियन्तृत्वम् । तच्च हरौ नेति प्रागुक्तहेत्वोर्विपर्ययेण 'न तु परमात्मनः' इत्यत्रान्वय इति भावः । 'इति चेन्न'

**इति सौत्रांशार्थः । इति शङ्का मा भूदिति ।। भाष्ये शङ्केति शेष इति भावः । भाषस्थ'हि'शब्दार्थो – यत इति ।। तेन 'प्राचुर्यात्' इति सूत्रांशः आनन्दप्रचुरादानन्दमय इति व्याख्यातः । मयटो वैयर्थ्यापत्तेस्तादात्म्यार्थो नेति भावः । गीताभाष्योक्तं वाक्यमाह – तादात्म्यार्थ इति ।।**

ಅಭಿಮಾನಿತ್ವ ಎಂದರೆ ಪರರಿಗೆ ಅಧೀನನಾಗಿ ನಿಯಮನ ಮಾಡುವವನು ಎಂದರ್ಥ. ಈ ರೀತಿಯ ಅಭಿಮಾನಿತ್ವವು ವಿಷ್ಣುವಿನಲ್ಲಿ ಇಲ್ಲದಿರುವುದರಿಂದ ಹಿಂದೆ ಹೇಳಿದ ವಿಕಾರಾತ್ಮಕತ್ವ ಮತ್ತು ವಿಕಾರಾಭಿಮಾನಿತ್ವರೂಪವಾದ ಎರಡು ಹೇತುಗಳಿಗೆ 'ನ ತು ಪರಮಾತ್ಮನಃ' ಎಂಬಲ್ಲಿ ವಿಪರೀತವಾಗಿ ಅನ್ವಯವನ್ನು ಇಟ್ಟುಕೊಳ್ಳಬೇಕು - ಎಂದು ಅಭಿಪ್ರಾಯ.

'ಇತಿ ಚೇನ್ನ' ಎಂಬುದಾಗಿ ಸೂತ್ರದಲ್ಲಿ ಹೇಳಿದ ಶಬ್ದಗಳ ಆಂಶಿಕ ಅರ್ಥವನ್ನು "ಇತಿ ಶಂಕಾ ಮಾಭೂತ್" ಎಂಬುದಾಗಿ ವಿವರಿಸಿದ್ದಾರೆ. ಇದರಿಂದ ಭಾಷ್ಯದಲ್ಲಿ ಶಂಕಾ ಎಂಬ ಶಬ್ದವನ್ನು ಶೇಷಪೂರಣೆ ಮಾಡಿಕೊಳ್ಳಬೇಕು ಎಂಬ ಅಭಿಪ್ರಾಯವು ಲಭಿಸುತ್ತದೆ. ಭಾಷ್ಯದಲ್ಲಿರುವ ಈ ಶಬ್ದಕ್ಕೆ "ಯತಃ" ಎಂಬುದಾಗಿ ಅರ್ಥ. ಆದ್ದರಿಂದ 'ಪ್ರಾಚುರ್ಯಾತ್' ಎಂಬ ಶಬ್ದದ ಆಂಶವನ್ನು 'ಆನಂದಪ್ರಾಚುರ್ಯವಿರುವುದರಿಂದ ಆನಂದಮಯನಾಗಿದ್ದಾನೆ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಆನಂದಮಯಶಬ್ದದಲ್ಲಿ ಮಯಟ್ ಪ್ರತ್ಯಯಕ್ಕೆ ತಾದಾತ್ಮ್ಯ ಎಂಬ ಅರ್ಥವನ್ನು ಹೇಳಿದರೆ ಮಯಟ್‌ಪ್ರತ್ಯಯದ ಪ್ರಯೋಗವು ವ್ಯರ್ಥವಾಗಬೇಕಾದೀತು? ಅದಕ್ಕಾಗಿ ತಾದಾತ್ಮ್ಯ ಎಂಬ ಅರ್ಥವನ್ನು ಬಿಟ್ಟಿದ್ದಾರೆ.

"ತಾದಾತ್ಮ್ಯಾರ್ಥೇ" ಇತ್ಯಾದಿವಾಕ್ಯವು ಗೀತಾಭಾಷ್ಯದಿಂದ ಉದ್ಧೃತವಾಗಿದೆ.

**वाक्यार्थमञ्जरी – ॐ ।। विकारशब्दान्नेति चेन्न प्राचुर्यात् ।। ॐ ।।** विकारार्थकमयट्शब्दान्नान्नमयं ब्रह्मेति चेन्न, प्राचुर्यात् प्राचुर्यार्थत्वादत्र मयट्शब्दजातस्येत्यर्थः । अविकारित्वादतदभिमानित्वाच्चेति । 'निर्विकारोऽक्षरः शुद्धः' इत्यादेर्विकारित्वं स्वतन्त्रे हरौ पराधीननियामकत्वरूपमभिमानित्वं च न सम्भवतीत्यर्थः । तत्र गीताभाष्योक्तप्रमाणमाह – **तादात्म्यार्थ इति ।।**

॥ ಓಂ ವಿಕಾರಶಬ್ದಾನ್ನೇತಿಚೇನ್ನ ಪ್ರಾಚುರ್ಯಾತ್ ಓಂ ॥

ಸೂತ್ರಾರ್ಥ - ಮಯಟ್‌ಶಬ್ದವು ವಿಕಾರಾರ್ಥಪರವಾಗಿರುವುದರಿಂದ ಅನ್ನಮಯನು ಬ್ರಹ್ಮನಾಗುವುದಿಲ್ಲ ಎಂದು ಆಕ್ಷೇಪ ಮಾಡಲು ಬರುವುದಿಲ್ಲ. ಏಕೆಂದರೆ 'ಪ್ರಾಚುರ್ಯಾತ್' ಅನ್ನಮಯವೇ ಮೊದಲಾದವುಗಳಲ್ಲಿರುವ ಮಯಟ್‌ಶಬ್ದವು ಪ್ರಾಚುಯಾರ್ಥದಲ್ಲಿದೆ.

'ಅವಿಕಾರಿತ್ವಾದತದಭಿಮಾನಿತ್ವಾಚ್ಚ' ಎಂದು ಇದೆ. ಎಂದರೆ 'ನಿರ್ವಿಕಾರೋऽಕ್ಷರಃ ಶುದ್ಧಃ' ಇತ್ಯಾದಿ ಪ್ರಮಾಣಗಳಲ್ಲಿ ಸ್ವತಂತ್ರನಾದ ಹರಿಯಲ್ಲಿ ವಿಕಾರವನ್ನು ನಿಷೇಧ ಮಾಡಲಾಗಿದೆ. ಅಲ್ಲದೆ ಪರಾಧೀನನಿಯಾಮಕರೂಪವಾದ ಅಭಿಮಾನಿತ್ವವೂ ಸಹ ಕೂಡುವುದಿಲ್ಲ ಎಂದರ್ಥ.

*ಪರಿಪೂರ್ಣಚಂದ್ರಿಕಾ*

ಮಯಟ್‌ಶಬ್ದಕ್ಕೆ ಪ್ರಾಚುರ್ಯಾರ್ಥ ಇದೆ ಎಂಬ ವಿಷಯದಲ್ಲಿ ಗೀತಾಭಾಷ್ಯದ 'ತಾದಾತ್ಮ್ಯಾರ್ಥೇ' ಎಂಬ ಪ್ರಮಾಣವಾಕ್ಯವನ್ನು ಹೇಳುತ್ತಿದ್ದಾರೆ.

## 'ಆನಂದಪ್ರಚುರಃ' ಎಂಬ ಸಮಾಸ ತಪ್ಪು

**तत्वप्रकाशिका – 'आनन्दप्रचुरः' इति यद्युच्यते (यथास्थिताभिधाने) 'ब्राह्मणप्रचुरो ग्रामः' इत्यादिवदनान्द(मय)स्यापि प्राप्तेः 'प्रचुरानन्दः' इति विपरीतसमासः कृतः । प्रचुरानन्द इत्यभिधाने पूर्णानन्द इत्येव प्रतीतेः ।**

**नायमानन्दमयशब्दः प्रचुरानन्दतामभिधत्ते किन्तु विकारार्थत्वमेव । अन्नादि-विकारार्थान्नमयादिशब्दैः सह पठितत्वात् इत्यत आह – अन्नादीनां चेति ।। भवेत्प्रायपाठविरोधो यद्यानन्दमयपदेनैवानन्दप्राचुर्यमुच्यत इत्यभ्युपगतिः । नासावस्ति । अन्नादीनां च प्राचुर्यमेवान्नमयादिशब्दार्थ इत्यभ्युपगमादिति भावः ।**

ಭಾಷ್ಯದಲ್ಲಿ 'ಆನಂದಪ್ರಚುರನಾದ್ದರಿಂದ' (ಆನಂದಪ್ರಚುರಃ) ಎಂದು ಹೇಳುವ ಬದಲು; 'ಪ್ರಚುರಾನಂದನಾದ್ದರಿಂದ' ಎಂದು ವಿಪರೀತಸಮಾಸವನ್ನು ಮಾಡಿ ಹೇಳಿದ್ದು ಏಕೆಂದರೆ, 'ಬ್ರಾಹ್ಮಣ-ಪ್ರಚುರೋ ಗ್ರಾಮಃ' ಎಂದು ಹೇಳಿದಾಗ ಅಬ್ರಾಹ್ಮಣರ (ಬ್ರಾಹ್ಮಣೇತರರ) ಅಪ್ರಾಚುರ್ಯವು (ಸ್ವಲ್ಪತ್ವ) ಹೇಗೆ ತಿಳಿಯುತ್ತದೋ, ಹಾಗೆ ವಿಷ್ಣುವಿನಲ್ಲಿ ಅಪ್ರಚುರವಾದ ಅನಾನಂದವೂ (ದುಃಖವೂ) ಕೂಡ ಇದೆಯೆಂದಾಗುತ್ತದೆ. ಇದನ್ನು ನಿರಾಸಮಾಡುವುದಕ್ಕಾಗಿ ಆನಂದಪ್ರಚುರ ಎನ್ನದೆ 'ಪ್ರಚುರಾನಂದ' ಎಂದು ವಿಪರೀತವಾಗಿ ಸಮಾಸ ಮಾಡಿದ್ದು. ಪ್ರಚುರಾನಂದ ಎಂದು ಹೇಳಿದರೆ 'ಪೂರ್ಣಾನಂದ' ಎಂದೇ ತಿಳಿಯುತ್ತದೆ.

ಈ ಶ್ರುತಿಯಲ್ಲಿರುವ ಆನಂದಮಯಶಬ್ದವು ಪ್ರಚುರಾನಂದವನ್ನು ಹೇಳುವುದಿಲ್ಲ. ಕಿಂತು ಆನಂದವಿಕಾರವನ್ನೇ ಹೇಳುತ್ತದೆ. ಏಕೆಂದರೆ ಅನ್ನಾದಿಗಳ ವಿಕಾರ ಎಂಬ ಅರ್ಥವುಳ್ಳ ಅನ್ನಮಯಾದಿಗಳ ಜೊತೆಗೆ ಹೇಳಿದ್ದರಿಂದ ಎಂಬ ಪ್ರಶ್ನೆ ಬಂದರೆ ಉತ್ತರರೂಪವಾಗಿ ''ಅನ್ನಾದೀನಾಂ ಚ'' ಎಂದು ಹೇಳುತ್ತಾರೆ. ಹೌದು ನೀವು ಹೇಳಿದ್ದು ಸತ್ಯ. ಆದರೆ ನಾವು ಅನ್ನಮಯಾದಿಗಳು ಅನ್ನಾದಿವಿಕಾರಾರ್ಥವನ್ನು ಹೇಳುತ್ತವೆ; ಆನಂದಮಯಶಬ್ದ ಮಾತ್ರ ಆನಂದಪ್ರಾಚುರ್ಯವನ್ನು ಹೇಳುತ್ತದೆ ಎಂದು ಹೇಳುವುದಿಲ್ಲ. ಮತ್ತೇನೆಂದರೆ ಅನ್ನಮಯಾದಿಗಳೂ ಕೂಡ ಅನ್ನಾದಿ ಪ್ರಾಚುರ್ಯಾರ್ಥವನ್ನೇ ಹೇಳುತ್ತವೆ ಎಂದು ಒಪ್ಪಿದ್ದೇವೆ. ಹೀಗಾಗಿ ಪ್ರಾಯಪಾಠವಿರೋಧವು ಬರುತ್ತದೆಂಬ ಶಂಕೆಗೆ ಅವಕಾಶವಿಲ್ಲ.

'ಪ್ರಚುರಾನಂದಃ' ಎಂಬ ವಿಪರೀತಸಮಾಸವೇ ಸರಿ

भावदीपः – **आनन्दप्रचुर इतीति** ।। ननु भाष्ये विपरीतसमासेन दुःखासम्भिन्नपूर्णानन्दप्रतीतावपि श्रुतिसूत्रयोरेवमभावाद् अनानन्दधीस्तत्र स्यादिति चेन्न । दृष्टान्तत्वेनैव भाष्यटीकयोरुक्तेः 'यथा प्रचुरानन्दः' इत्युक्तावनानन्दाप्राप्तिः परैरुच्यते तथा 'आनन्दप्रचुर' इत्युक्तावपि । 'नक्षत्रादिप्रकाशापेक्षया प्रचुरप्रकाशो रविः' इतिवत् जीवगतानन्दाल्पत्वापेक्षया दुःखास्पृष्टपूर्णानन्दस्यैव प्रतीतेः । अन्यथा सवितर्यन्धकारलेशधीः स्यादिति ।

तदुक्तं सुधायां 'प्राचुर्यार्थाश्च मयटः' इत्यादेर्व्याख्यानावसरे 'पदार्थान्तरगताल्पतद्धर्मापेक्षयोपपत्तेः' इति । 'आनन्दप्रचुर इति यदुच्यते' इत्येव पाठः । 'आनन्दप्रचुर इति यथास्थिताभिधाने' इत्यपि क्वचित्पाठः ।

"ಆನಂದಪ್ರಚುರಃ ಇತಿ" ಇತ್ಯಾದಿ ವಾಕ್ಯಗಳಿಂದ ಸಿಗುವ ಅಭಿಪ್ರಾಯವನ್ನು ಮುಂದೆ ಹೇಳುವಂತೆ ಇಟ್ಟುಕೊಳ್ಳಬೇಕು. ಭಾಷ್ಯದಲ್ಲಿ 'ಆನಂದಪ್ರಚುರಃ' ಎಂದು ಹೇಳಬೇಕಾದಲ್ಲಿ 'ಪ್ರಚುರಾನಂದಃ' ಎಂಬುದಾಗಿ ವಿಪರೀತಸಮಾಸವನ್ನು ಮಾಡಿರುವುದರಿಂದ ದುಃಖದ ಸಂಬಂಧವಿಲ್ಲದ ಪೂರ್ಣಾನಂದದ ಪ್ರತೀತಿಯು ಬರಬಹುದು. ಆದರೂ ಶ್ರುತಿ ಮತ್ತು ಸೂತ್ರಗಳಲ್ಲಿ ಈ ರೀತಿಯ ವಿಪರೀತಸಮಾಸವಿಲ್ಲದಿರುವುದರಿಂದ ಅಲ್ಲಿ ಅನಾನಂದದ ಪ್ರತೀತಿಯು ಬರಬಹುದಲ್ಲವೇ? ಎಂದರೆ ಭಾಷ್ಯ ಮತ್ತು ಟೀಕೆಗಳಲ್ಲಿ 'ಹೇಗೆ ಪ್ರಚುರಾನಂದ ಎಂದು ಹೇಳಿದಾಗ ಅನಾನಂದದ ಪ್ರಾಪ್ತಿಯು ಬರಲಾರದು ಎಂಬುದಾಗಿ ಪರರು ಹೇಳುತ್ತಾರೋ ಹಾಗೆಯೇ ಆನಂದಪ್ರಚುರಃ ಎಂದು ಹೇಳಿದಾಗಲೂ ಅನಾನಂದದ ಪ್ರಾಪ್ತಿಯು ಬರಲಾರದು' ಎಂಬ ರೀತಿಯಲ್ಲಿ ದೃಷ್ಟಾಂತರೂಪವಾಗಿ ಇದನ್ನು ವಿವರಿಸಿದ್ದಾರೆ. ಅದು ಹೇಗೆಂದರೆ 'ಪ್ರಚುರಪ್ರಕಾಶೋ ರವಿಃ' ಎಂದು ಹೇಳಿದಾಗ ನಕ್ಷತ್ರಾದಿಗಳ ಪ್ರಕಾಶಕ್ಕಿಂತ ಅತ್ಯಧಿಕವಾದ ಪೂರ್ಣಪ್ರಕಾಶವುಳ್ಳವನು ರವಿ ಎಂಬ ಅರ್ಥವು ಸಿಗುವಂತೆ ಜೀವಗತವಾದ ಅಲ್ಪಾನಂದದ ಅಪೇಕ್ಷೆಯಿಂದ ದುಃಖದ ಸಂಪರ್ಕವಿಲ್ಲದ ಪೂರ್ಣಾನಂದದ ಪ್ರತೀತಿಯೇ ಇಲ್ಲಿ ಬರುತ್ತದೆ. ಇದನ್ನು ಒಪ್ಪಿಕೊಳ್ಳದಿದ್ದರೆ 'ಪ್ರಚುರಪ್ರಕಾಶೋ ರವಿಃ' ಎಂದರೂ ಕೂಡ ಸೂರ್ಯನಲ್ಲಿ ಸ್ವಲ್ಪ ಅಂಧಕಾರವು ಇರಬಹುದು ಎಂಬ ಬುದ್ಧಿಯು ಬರಬೇಕಾದೀತು.

ಈ ವಿಷಯವನ್ನು ಸುಧಾದಲ್ಲಿ 'ಪ್ರಾಚುರ್ಯಾರ್ಥಾಶ್ಚ ಮಯಟಃ' ಇತ್ಯಾದಿ ಅನುವ್ಯಾಖ್ಯಾನಭಾಗದ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ 'ಪದಾರ್ಥಾಂತರಗತಾಲ್ಪತದ್ಧರ್ಮಾಪೇಕ್ಷಯೋಪಪತ್ತೇಃ' (ಪದಾರ್ಥಾಂತರಗತವಾದ ಅಲ್ಪವಾದ ಅದೇ ಧರ್ಮದ ಅಪೇಕ್ಷೆಯಿಂದ ಆಧಿಕ್ಯವನ್ನು ಪ್ರಾಚುರ್ಯ ಎಂಬ ಅರ್ಥವನ್ನು ಕೊಡುವ ಮಯಟ್‌ಪ್ರತ್ಯಯದಿಂದ ಅರ್ಥೈಸಿಕೊಳ್ಳಬೇಕು) ಎಂಬುದಾಗಿ ವಿವರಿಸಿದ್ದಾರೆ.

ಇಲ್ಲಿನ ಟೀಕಾಭಾಗದಲ್ಲಿ ಪಾಠಾಂತರವಿದ್ದು 'ಆನಂದಪ್ರಚುರಃ ಇತಿ ಯದುಚ್ಯತೇ' ಎಂಬುದೇ ಸರಿಯಾದ ಪಾಠ. ಕೆಲವು ಕಡೆ 'ಆನಂದಪ್ರಚುರಃ ಇತಿ ಯಥಾಸ್ಥಿತಾಭಿಧಾನೇ' ಎಂಬ ಪಾಠವೂ ಇದೆ.

ಪರಿಪೂರ್ಣಚಂದ್ರಿಕಾ

**भावदीपः – भाष्यस्थ'च'शब्दार्थं व्यनक्ति – यद्यानन्दमयपदेनैवेति ।। भाष्ये शेषोक्तिः 'अन्नमयादि' इति ।**

ಭಾಷ್ಯದಲ್ಲಿರುವ 'ಚ'ಶಬ್ದದ ಅರ್ಥವನ್ನು "ಯದಿ ಆನಂದಮಯಪದೇನೈವ" ಇತ್ಯಾದಿ ವಾಕ್ಯದಿಂದ ವಿವರಿಸಿದ್ದಾರೆ. "ಅನ್ನಮಯಾದಿ" ಎಂಬ ಪದದಿಂದ ಭಾಷ್ಯದಲ್ಲಿ ಈ ರೀತಿ ಶೇಷಪೂರಣೆ ಮಾಡಿಕೊಳ್ಳಬೇಕು ಎಂದು ವಿವರಿಸಿದ್ದಾರೆ.

**वाक्यार्थमञ्जरी –** ननु सूत्रे प्राचुर्यादित्युक्तेरानन्दस्येत्यर्थाल्लभ्यते । तथाच तद्व्याख्यानभाष्ये आनन्दप्रचुरत्वादित्येव वक्तव्ये कुतः प्रचुरानन्दत्वादिति विपरीतोक्तिरित्यत आह **– आनन्दप्रचुर इति** ।। **इत्यादिवदिति** ।। तत्र यथा प्राचुर्यस्य ब्राह्मणविशेषणत्वेन तद्विरोधिईषच्छूद्रप्रसक्तिरेवमत्र प्राचुर्यस्यानन्दविशेषणत्वे तद्विरोध्यनानन्दस्याप्यल्पस्य प्रसक्तिरित्यर्थः ॥ **इत्येव प्रतीतेरिति** ।। सूत्रे प्राचुर्यस्य विशेष्यतयोक्तावपि स्वयं विशेषणत्वेन तदभिदधता यथा प्रचुरप्रकाशो रविरित्युक्ते प्रकाशविरोध्यन्धकारलेशाप्राप्तिवत् प्रकाशप्रचुर इत्युक्तेपि तदप्राप्तिः प्रत्यक्षविरोधात् । तथा प्रचुरानन्द इत्युक्ते दुःखलेशाप्राप्तिवदानन्दप्रचुर इत्युक्तेपि तदप्राप्तिः श्रुत्यादिविरोधादिति सूचितं भवतीत्यर्थः । शङ्कते – **नायमिति** ।। **सहपठितत्वादिति** ।। तथाच प्रायपाठविरोध इति भावः ॥ **अल्पत्वादिति** ।। तस्य लोकसाधारण्यात् इति भावः ।

ಸೂತ್ರದಲ್ಲಿ 'ಪ್ರಾಚುರ್ಯಾತ್' ಎಂದು ಹೇಳಿದ್ದರಿಂದ ಆನಂದವು ಪ್ರಚುರವಾಗಿದೆ ಎಂಬರ್ಥವು ಅರ್ಥಾತ್ ಲಭ್ಯವಾಗುತ್ತದೆ. ಆದ್ದರಿಂದ ಸೂತ್ರವನ್ನು ವ್ಯಾಖ್ಯಾನ ಮಾಡುವ ಭಾಷ್ಯದಲ್ಲಿಯೂ ಸಹ ಆನಂದಪ್ರಚುರವೆಂದೇ ಹೇಳಬೇಕು. ಆದರೆ 'ಪ್ರಚುರಾನಂದ' ಎಂದು ವಿಪರೀತವಾಗಿ ಏಕೆ ಹೇಳಿದ್ದಾರೆ? ಈ ಆಕ್ಷೇಪಕ್ಕೆ 'ಆನಂದಪ್ರಚುರ' ಎಂಬ ವಾಕ್ಯದಿಂದ ಉತ್ತರ ಹೇಳಿದ್ದಾರೆ.

'ಇತ್ಯಾದಿವತ್' ಎಂದು ಇದೆ. ಎಂದರೆ ಯಾವ ರೀತಿಯಾಗಿ 'ಬ್ರಾಹ್ಮಣಪ್ರಚುರೋ ಗ್ರಾಮಃ' ಎಂಬಲ್ಲಿ ಪ್ರಾಚುರ್ಯವನ್ನು ಬ್ರಾಹ್ಮಣನಿಗೆ ವಿಶೇಷಣಮಾಡಲಾಗಿದೆ, ಆದರಿಂದ ಬ್ರಾಹ್ಮಣೇತರರಾದ ಶೂದ್ರರೂ ಇದ್ದಾರೆಂದು ಹೇಗೆ ಅರ್ಥವಾಗುತ್ತದೆಯೋ, ಅದೇ ರೀತಿ ಇಲ್ಲಿಯೂ ಕೂಡ ಪ್ರಾಚುರ್ಯವನ್ನು ಆನಂದಕ್ಕೆ ವಿಶೇಷಣವಾಗಿ ಹೇಳಿದರೆ ಆನಂದಕ್ಕೆ ವಿರೋಧಿಯಾದ ಅನಾನಂದವೂ ಸ್ವಲ್ಪ ಇರಬಹುದೆಂದು ಅರ್ಥವಾಗುತ್ತದೆ.

'ಇತ್ಯೇವ ಪ್ರತೀತೇಃ' ಎಂದು ಇದೆ. ಇದರ ಅಭಿಪ್ರಾಯ -- ಸೂತ್ರದಲ್ಲಿ ಪ್ರಾಚುರ್ಯವನ್ನು ವಿಶೇಷ್ಯವಾಗಿ ಹೇಳಿದ್ದರೂ ಸಹ, ಸ್ವಭಾವತಃ ಅದು ವಿಶೇಷಣವಾಗಿಯೇ ಇದೆ. ಯಾವ ರೀತಿಯಾಗಿ 'ಪ್ರಚುರಪ್ರಕಾಶೋ ರವಿಃ' ಎಂದು ಹೇಳಿದರೆ ಪ್ರಕಾಶಕ್ಕೆ ವಿರೋಧಿಯಾದ ಅಂಧಕಾರದ ಲೇಶವು ಪ್ರಾಪ್ತವಾಗುವುದಿಲ್ಲವೋ, ಅದೇ ರೀತಿ 'ಪ್ರಕಾಶಪ್ರಚುರಃ' ಎಂದು ಹೇಳಿದರೂ ಅಂಧಕಾರವು ಪ್ರಾಪ್ತವಾಗುವುದಿಲ್ಲ. ಏಕೆಂದರೆ ಅಂಧಕಾರವು ಪ್ರಾಪ್ತವಾಗದಿರುವುದು ಪ್ರತ್ಯಕ್ಷಸಿದ್ಧವಾಗಿದೆ. ಅದರಂತೆ 'ಪ್ರಚುರಾನಂದಃ' ಎಂದು ಹೇಳುವುದರಿಂದ ದುಃಖಲೇಶವು ಪ್ರಾಪ್ತವಾಗುವುದಿಲ್ಲ.

ಅದೇ ರೀತಿಯಾಗಿ 'ಆನಂದಪ್ರಚುರಃ' ಎಂದು ಹೇಳಿದರೂ ಅದು ಪ್ರಾಪ್ತವಾಗುವುದಿಲ್ಲ. ಏಕೆಂದರೆ ಶ್ರುತ್ಯಾದಿಗಳ ವಿರೋಧ ಬರುತ್ತದೆಂದು ಸೂಚಿತವಾಗುತ್ತದೆ.

'ನಾಯಂ' ಎಂದು ಶಂಕಾವನ್ನು ಮಾಡುತ್ತಿದ್ದಾರೆ. 'ಸಹಪಠಿತತ್ವಾತ್' ಎಂದು ಇದೆ. ಸಹಪಠಿತವಾದ್ದರಿಂದ ಪ್ರಾಯಪಾಠ ವಿರೋಧ ಎಂದು ಭಾವ.

'ಅಲ್ಪತ್ವಾತ್' ಎಂದು ಇದೆ. ಅನ್ನಮಯಶಬ್ದಕ್ಕೆ ಅನ್ನಪ್ರಾಚುರ್ಯ ಎಂದು ಹೇಳಿದರೆ ಲೋಕಸಾಧಾರಣಾರ್ಥವನ್ನು ಹೇಳಿದಂತಾಗುತ್ತದೆ ಎಂದು ಭಾವ.

● ● ● ● ●

## ಅನ್ನಮಯಶಬ್ದಾರ್ಥ

**भाष्यम् – अन्नादीनां च प्राचुर्यमेव । 'अद्यतेऽत्ति च' (तै. २-२.) इति व्याख्यानात् तत्प्राचुर्यं च युज्यते ।**

ಅನ್ನಮಯಶಬ್ದಕ್ಕೂ ಪೂರ್ಣವಾದ ಅನ್ನವುಳ್ಳವನು ಎಂದೇ ಅರ್ಥ. 'ಅದ್ಯತೇ ಅತ್ತಿ ಚ' ಎಂದು ಉಪನಿಷತ್ತಿನಲ್ಲಿ ಅನ್ನಶಬ್ದದ ಅರ್ಥವನ್ನು ವಿವರಿಸಿದ್ದರಿಂದ, ಪೂರ್ಣವಾದ ಅನ್ನವಿರುವಿಕೆಯು ವಿಷ್ಣುವಿನಲ್ಲಿ ಮಾತ್ರ ಹೇಳಲು ಸಾಧ್ಯ.

ಪ್ರತಿಪದಾರ್ಥ -- (೧)ಆನಂದಮಯಶಬ್ದವು ಪರಿಪೂರ್ಣವಾದ ಆನಂದವನ್ನು

---

(१) भाष्यदीपिका – ननु नायमानन्दमयशब्दः प्रचुरानन्दतामभिधत्ते । किन्तु विकारार्थत्वमेव । अन्नादिविकारार्थान्नमयादिशब्दैः सह पठितत्वादित्यत आह – अन्नादीनां चेति ।। इदं चाऽवर्तते । मयट्छब्द इति चानुवर्तते । तेन समुच्चयार्थचशब्दस्यान्वयः । वाच्यवाचकयोरभेदव्यपदेशः । तथा च न केवलमानन्दस्य मयट्छब्दः, किन्त्वन्नादीनां सम्बन्धिमयट्छब्दोऽप्यन्नादीनां प्राचुर्यमेव वक्तीत्यर्थः । एवशब्दो विकारार्थताव्यावृत्त्यर्थः । आदिशब्देन प्राणादयो गृह्यन्ते । पूर्वम् 'अन्नमयत्वादेश्च' इति, अत्र च 'अन्नादीनाम्' इति बहूनां ग्रहणात्, सौत्रानन्दमयशब्दोऽजहत्स्वार्थलक्षणया समानन्यायशब्दान्तरोपलक्षक इति सूचितम् ।

ननु कथमत्रान्नमयशब्दोऽन्नप्राचुर्यार्थः । औषधिजनितान्नप्राचुर्यस्यान्नोपजीविषु पार्थिवशरीरेषु सम्भवेऽपि अप्राकृतविग्रहे हरावसम्भवात् । अन्नप्राचुर्यकथनस्यात्यल्पत्वापादकत्वाच्चेत्यत आह - अद्यत इति ।। 'वाक्येन अन्नशब्दस्य' इति शेषः । 'युज्यते' इत्यनन्तरम् 'अन्नमयशब्दार्थः' इत्यध्याहारः । 'परमात्मनः' इत्यस्ति । न केवलं सहपाठविरोधाभाव इति चार्थः। तथा चेत्थं योजना - 'तत्प्राचुर्यम्' अन्नप्राचुर्यमन्नमयशब्दार्थो युज्यते । कथम्? यतस्तत्परमात्मनो युज्यते । न चाल्पार्थत्वेन माहात्म्यरूपत्वाभावात् स कथं हरौ युज्यत इति वाच्यम् । यतोऽत्रान्नशब्देन सुधोक्तरीत्या

ಹೇಳುವುದರಿಂದ ವಿಷ್ಣುವು ಆ ಶಬ್ದದಿಂದ ಪ್ರತಿಪಾದ್ಯನಾಗಬಹುದು. ಆದರೆ ಅನ್ನಮಯಶಬ್ದಕ್ಕೆ ಅಂತಹ ಅರ್ಥವನ್ನು ಹೇಳಲಾಗದ ಕಾರಣ ಸಹಪಾಠದ ವಿರೋಧವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅನ್ನಾದೀನಾಂ ಚ = ಅನ್ನ ಪ್ರಾಣ ಮೊದಲಾದವುಗಳಿಗೆ, ಪ್ರಾಚುರ್ಯಮೇವ = ಪರಿಪೂರ್ಣ ಎಂಬರ್ಥವನ್ನೇ, (ಮಯಟ್‌ಪ್ರತ್ಯಯವು ಹೇಳುತ್ತದೆ). ತತ್ = ಅದೇ ಉಪನಿಷತ್ತಿನಲ್ಲಿ ಮುಂದೆ, ಅದ್ಯತೇ ಅತ್ತಿ ಚ = ತಿನ್ನಲ್ಪಡುತ್ತದೆ, ಹಾಗೂ ತಿನ್ನುತ್ತದೆ ಎಂದು ವ್ಯಾಖ್ಯಾನವಿರುವುದರಿಂದ, ತತ್ = ಆ ಮಯಟ್ ಪ್ರತ್ಯಯಕ್ಕೆ, ಪ್ರಾಚುರ್ಯಂ ಚ = ಪರಿಪೂರ್ಣ ಎಂಬರ್ಥವು, ಯುಜ್ಯತೇ = ಯುಕ್ತವಾಗುತ್ತದೆ.

## ಆನಂದಶಬ್ದಾರ್ಥದಂತೆ ಅನ್ನಮಯಶಬ್ದಾರ್ಥ

**तत्वप्रकाशिका – ननु कथमत्रान्नमयशब्दोऽन्नप्राचुर्यार्थः । अन्नप्राचुर्यकथनस्यात्यल्पत्वादित्यत आह – अद्यत इति ।। अन्नप्राचुर्यं चान्नमयशब्दार्थो युज्यते । अत्रान्नशब्देन भूताद्यत्वतदत्तृत्वस्याभिधानेनाल्पार्थत्वाभावात् । प्रसिद्धान्नार्थत्व एव तत्प्राप्तेः । कुतोऽयमन्नशब्दार्थो न प्रसिद्धान्नं येनाल्पार्थत्वाभावः । 'अद्यतेऽत्ति च भूतानि तस्मादन्नं तदुच्यते' इत्यन्नशब्दव्याख्यानात् प्रसिद्धान्नस्य भूतात्तृत्वायोगादिति भावः ।**

ಅನ್ನಮಯಶಬ್ದಕ್ಕೆ ಅನ್ನಪ್ರಾಚುರ್ಯ ಎಂಬ ಅರ್ಥವನ್ನು ಹೇಳುವುದು ಸರಿಯಲ್ಲ. ಹಾಗೆ ಹೇಳಿದರೆ ಅನ್ನಪ್ರಾಚುರ್ಯವು ಭಗವಂತನಿಗೆ ಇದೆ ಎಂದಂತಾಯಿತು. (ಇದು ರಾಜನಲ್ಲಿ ಇರುವಂತಹದ್ದು). ಇದನ್ನು ಹೇಳಿದರೆ ಭಗವಂತನ ಮಹಿಮೆಯನ್ನು ಹೇಳಿದಂತಾಗುವುದಿಲ್ಲ. ಆದ್ದರಿಂದ ಇದು ಜಘನ್ಯವಾದುದು ಎಂದು ಪ್ರಶ್ನಿಸಿದರೆ ''ಅದ್ಯತೇ'' ಎಂದು ಉತ್ತರಿಸುತ್ತಾರೆ. ಅನ್ನಮಯಶಬ್ದಕ್ಕೆ ಅನ್ನಪ್ರಾಚುರ್ಯ ಎಂಬರ್ಥವೇ ಸರಿ. ಇಲ್ಲಿ ಅನ್ನಶಬ್ದಕ್ಕೆ ಭೂತಗಳಿಂದ ಅದ್ಯತ್ವ ಮತ್ತು ಭೂತಾತೃತ್ವವನ್ನು ಅರ್ಥವನ್ನಾಗಿ ಹೇಳುತ್ತೇವೆ ಹೊರತು ಪ್ರಸಿದ್ಧವಾದ ಅನ್ನವನ್ನು ಅರ್ಥವನ್ನಾಗಿ ಇಟ್ಟುಕೊಳ್ಳುವುದಿಲ್ಲ. ಹಾಗೆ ಹೇಳಿದರೆ ಮಾತ್ರ ಅಲ್ಪತೆ ಬರುತ್ತಿತ್ತು. ಹೀಗೆ ಅರ್ಥಮಾಡಲು ಏನು ಪ್ರಮಾಣ ಎಂದರೆ 'ಅದ್ಯತೇ ಅತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ' (ಭೂತಗಳಿಂದ

---

भावप्रधानेन तत्तद्भूताद्यत्वभूतात्तृत्वरूपार्थद्वयमेव युज्यते, उच्यते न प्रसिद्धान्नम् । कुत एतज्ज्ञायते । 'अद्यतेऽत्ति च भूतानि । तस्मादन्नं तदुच्यत इति' इति वाक्येनान्नशब्दस्य व्याख्यानात् । प्रसिद्धान्नस्य भूतात्तृत्वायोगेन तद्ग्रहणासम्भवादिति ।

श्रुत्यर्थस्तु- यतो भूतैः प्राणिभिः 'अद्यते' उपजीव्यते 'भूतान्यत्ति' संहरति च । तस्मात् तद्विष्ण्वाख्यं ब्रह्मान्नमुच्यते वेदेष्विति । एवं प्राणमनश्शब्दयोः प्रकृष्टचेष्टकत्वपूर्णावबोधार्थत्वेन श्वासवाय्वन्तःकरणबुद्धिप्राचुर्यार्थतायामल्पार्थता परिहरणीया ।।

ತಿನ್ನಲ್ಪಡುತ್ತದೆ ಮತ್ತು ಭೂತಗಳನ್ನು ತಿನ್ನುತ್ತದೆ. ಆದ್ದರಿಂದ ಅದು ಅನ್ನವೆಂದೆನಿಸುತ್ತದೆ.) ಎಂದು ಶ್ರುತಿಯೇ ಅನ್ನಶಬ್ದದ ವ್ಯಾಖ್ಯಾನಮಾಡಿದೆ. ಪ್ರಸಿದ್ಧಾನ್ನವನ್ನು ಇಟ್ಟುಕೊಂಡರೆ ಭೂತಗಳನ್ನು ತಿನ್ನುವಿಕೆ ಅದರಲ್ಲಿ ಬರುವುದಿಲ್ಲ. ಆದ್ದರಿಂದ ಅದನ್ನು ಸ್ವೀಕರಿಸಲು ಬರುವುದಿಲ್ಲ. (ಹಾಗಾಗಿ ಭಗವಂತನನ್ನೇ ಅನ್ನಶಬ್ದದ ಅರ್ಥವನ್ನಾಗಿ ಸ್ವೀಕರಿಸಬೇಕು).

### ಅನ್ನಮಯಶಬ್ದಕ್ಕೆ ಅನ್ನಪ್ರಾಚುರ್ಯ ಎಂದೇ ಅರ್ಥ

भावदीपः – 'तत्प्राचुर्यं च युज्यते' इत्यस्यार्थः – **अन्नेति** । व्याख्यानात् इत्यस्यार्थः 'अभिधानेन' इति । भूताद्यत्वतदत्तृत्वस्य इति समाहारद्वन्द्वः । तदेव वाक्यमन्यथापि व्याचष्टे – **'कुतोऽयम्'** इत्यादिना ।। **प्रसिद्धेति** ।। अन्नशब्दस्यौदने रूढत्वेऽपि श्रौतस्मार्तयोगापेक्षया अज्ञरूढेर्दौर्बल्यस्य 'कम्पनात्' इत्यत्र वक्ष्यमाणत्वाद् रूढिः प्रबलेति न शङ्क्यमिति भावः ।

''ಅನ್ನಪ್ರಾಚುರ್ಯಂ ಚ'' ಇತ್ಯಾದಿ ವಾಕ್ಯದಿಂದ 'ತತ್ಪ್ರಾಚುರ್ಯಂ ಚ ಯುಜ್ಯತೇ' ಎಂಬ ಭಾಷ್ಯವಾಕ್ಯವನ್ನು ವಿವರಿಸಿದ್ದಾರೆ. 'ವ್ಯಾಖ್ಯಾನಾತ್' ಎಂಬ ಭಾಷ್ಯದ ಶಬ್ದಕ್ಕೆ 'ಅಭಿಧಾನೇನ' ಎಂಬುದಾಗಿ ಅರ್ಥವನ್ನು ವಿವರಿಸಿದ್ದಾರೆ. ಟೀಕೆಯಲ್ಲಿ ''ಭೂತಾದ್ಯತ್ವತದತ್ತೃತ್ವಸ್ಯ'' ಎಂಬ ಶಬ್ದದಲ್ಲಿ ಸಮಾಹಾರದ್ವಂದ್ವ-ಸಮಾಸ ಎಂದು ತಿಳಿದುಕೊಳ್ಳಬೇಕು.

ಭಾಷ್ಯದ ಅದೇ ವಾಕ್ಯವನ್ನು (ತತ್ಪ್ರಾಚುರ್ಯಂ ಚ) ''ಕುತೋಽಯಂ'' ಇತ್ಯಾದಿ ಟೀಕಾಭಾಗದದಿಂದ ಇನ್ನೊಂದು ರೀತಿಯಾಗಿ ವ್ಯಾಖ್ಯಾನ ಮಾಡಿ ತೋರಿಸಿದ್ದಾರೆ. ''ಪ್ರಸಿದ್ಧ'' ಇತ್ಯಾದಿ ಟೀಕಾಭಾಗದಿಂದ ಅನ್ನಶಬ್ದವು ತಿನ್ನುವ ವಸ್ತುವಿನಲ್ಲಿ ರೂಢವಾಗಿದ್ದರೂ ಶ್ರೌತಸ್ಮಾರ್ತಯೋಗದ ಅಪೇಕ್ಷೆಯಿಂದ ಅಜ್ಞಜನ-ರೂಢಿಯು ದುರ್ಬಲವಾಗಿದೆ ಎಂಬ ಅಂಶವನ್ನು 'ಕಂಪನಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಮುಂದೆ ಹೇಳಲಿರುವುದರಿಂದ ಇಲ್ಲಿ ರೂಢಿಯು ಪ್ರಬಲವಲ್ಲವೇ ಎಂದು ಶಂಕೆ ಮಾಡಬಾರದು ಎಂಬ ಅಭಿಪ್ರಾಯವನ್ನು ಇಟ್ಟುಕೊಳ್ಳಬೇಕು.

**वाक्यार्थमञ्जरी** – कुत इति प्रश्नस्योत्तरमाह – **अद्यतेऽत्ति चेति** ।। स्वयम्प्राणिभि-र्भुज्यते प्राणिनो भुंक्ते च यस्मात् तस्मात् तद् ब्रह्मान्नमित्युच्यत इत्यर्थः । अभिसंहितं = अभिमतम् । नाशप्रसङ्गादिति भावः ।

ಅನ್ನಮಯಶಬ್ದಕ್ಕೆ ಅನ್ನಪ್ರಚುರವೆಂದು ಏಕೆ ಹೇಳಬೇಕು? ಎಂಬ ಪ್ರಶ್ನೆಗೆ ಉತ್ತರರೂಪವಾಗಿ 'ಅದ್ಯತೇಽತ್ತಿ ಚ' ಎಂಬ ಶ್ರುತಿಯನ್ನು ಹೇಳುತ್ತಿದ್ದಾರೆ. ಸರ್ವಭೂತಗಳಿಗೆ ಉಪಜೀವ್ಯನಾಗಿದ್ದಾನೆ ಮತ್ತು ಸಂಹಾರಕನಾಗಿರುವುದರಿಂದ ಬ್ರಹ್ಮನನ್ನು ಅನ್ನ ಎಂದು ಹೇಳುತ್ತಾರೆ. 'ಅಭಿಸಂಹಿತಮ್' ಎಂದರೆ ಅಭಿಮತ ಎಂದರ್ಥ.

## ವಿಕಾರಾರ್ಥದಲ್ಲಿ ಮಯಟ್‌ಪ್ರತ್ಯಯವಿಲ್ಲ

**भाष्यम् – उपजीव्यत्वमेवाद्यत्वम् ।**

**'स वा एषः' (तै. २-२.) इत्यन्यप्रारम्भात् ।**

ಉಪನಿಷತ್ತಿನಲ್ಲಿ ಹೇಳಿದ ಅದ್ಯತ್ವ ಎಂದರೆ ಅವಲಂಬಿಸಿರುವುದು ಎಂದರ್ಥ.

ಅದೇ ಉಪನಿಷತ್ತಿನಲ್ಲಿ 'ಸ ವಾ ಏಷ ಪುರುಷೋಽನ್ನರಸಮಯಃ' ಎಂದು ಪ್ರಾರಂಭಿಸಿ ಪ್ರಸ್ತುತನಾದ ಆತ್ಮನಿಗೆ ಪಂಚರೂಪಗಳನ್ನು ಹೇಳಲು ಮತ್ತೊಂದು ಪ್ರಕರಣವೇ ಹೊರಟಿದೆ. ಆದ್ದರಿಂದಲೂ ಮಯಟ್‌ಶಬ್ದವು ವಿಕಾರಾರ್ಥಕವಲ್ಲ.

ಪ್ರತಿಪದಾರ್ಥ -- [१]ಅನ್ನಮಯಶಬ್ದಕ್ಕೆ ಪರಿಪೂರ್ಣ ಅದ್ಯತ್ವ ಎಂಬ ಅರ್ಥವನ್ನು

(१) भाष्यदीपिका– ननु तथाऽपि प्रचुरभूताद्यत्वं कथमभिसंहितं ब्रह्मणः, भक्ष्यत्वरूपाद्यत्वस्य तत्रायोगादित्यतोऽद्यत्वशब्दार्थमाह – उपजीव्यत्वमिति ।। अत्र 'अतोऽद्यते' इत्यनुव्याख्यानानुसारेणाद्यत्वमिति छेदः । तथा च सुधोक्तरीत्या गौण्या वृत्त्या उपजीव्यत्वमेवाद्यत्वं विवक्षितं, न तु चर्व्यत्वम् । तच्च ब्रह्मण्यविरुद्धमिति भावः । तत्त्वप्रदीपे तु – 'न चान्यान्नं सर्वभूताद्यं, न च तत्कस्यापि मुख्याद्यम् । किन्तु तद्गतो विष्णुरेवादन फलभूततृप्तितुष्टिदातृत्वान्मुख्याद्यः, तस्मादुपजीव्यत्वमेवाद्यत्वम्, अत्तृत्वात् सर्वलोकानामन्नमित्युच्यते हरिः । उपजीव्यश्च भूतानामिति चान्नं जनार्दनः ।। इत्युक्तेः' इत्युपजीव्यत्वस्य मुख्यार्थतैवोक्ता । न च विरोधः, कम्पनाधिकरणोक्तरीत्या समन्वयतात्पर्येण तत्त्वप्रदीपप्रवृत्तेः । 'वज्रवत्' इत्यादाविव यथा कथञ्चिद् ब्रह्मपरत्वाभिप्रायेण सुधाप्रवृत्तेः ।

ननु कथमन्नमयशब्दः तत्प्राचुर्यार्थो युज्यते । 'ओषधीभ्योऽन्नम् । अन्नात् पुरुषः' (तै.उ.२.१.२) इति प्रसिद्धान्नविकारदेहमुक्त्वा 'स वा एष पुरुषोऽन्नरसमयः' (तै.उ.२.१.३) इति य एव पुरुषः सोऽन्नरसमय इत्यन्नविकारपुरुषपरामर्शादनुवादात् । अन्यथा तद्विरोधः स्यादित्यत आह – स इति ।। 'अविरोधः' इत्याकृष्यते । तथाचेति वाक्येन यस्मादात्मन आकाशादिकमुत्पन्नं स एष पुरुष इति 'अन्यस्य' देहादन्यस्याऽत्मनः 'प्रारम्भात्' परामर्शात् 'अविरोधः' न परामर्शविरोधः । किमर्थमसौ परामृश्यत इत्याशङ्कापनोदनाय परामर्शादिति वक्तव्ये प्रारम्भादित्याह । पूर्वमात्मन आकाशादिकारणत्वमुक्त्वा तस्यैव 'अन्यार्थम्' अन्यकार्यायान्नमयादिपञ्चरूपत्वप्रदर्शनाय पुनः 'प्रारम्भात्' प्रक्रान्तत्वादित्यर्थः । 'स वा' इति श्रुतौ वैशब्दोऽवधारणे प्रसिद्धौ वा । अन्नशब्दो भावप्रधानः । रसत्वमुत्तमत्वं, तच्चान्नत्वविशेषणम् । तथा च यस्मात् सत्यत्वादिलक्षणोपेतादात्मन आकाशादिकमुत्पन्नं 'सः' आत्मपदोदितो भूतादिस्रष्टा 'एषः'

ಬ್ರಹ್ಮನಲ್ಲಿ ಹೇಳಲಾಗದು. ತಿನ್ನುವಿಕೆಯು ಅವನಲ್ಲಿ ಕೂಡುವುದಿಲ್ಲವಲ್ಲ. ಎಂಬ ಪ್ರಶ್ನೆಗೆ ಉತ್ತರಿಸಲು ಅದ್ಯತ್ವಶಬ್ದದ ಅರ್ಥವನ್ನು ವಿವರಿಸುತ್ತಿದ್ದಾರೆ.

ಅದ್ಯತ್ವಂ = ಅದ್ಯತ್ವವೆಂದರೆ, ಉಪಜೀವ್ಯತ್ವಮೇವ = ಜೀವನಕ್ಕೆ ಆಧಾರನಾಗಿರುವಿಕೆ ಎಂದರ್ಥ. 'ಸ ವಾ ಏಷಃ' = 'ಸ ವಾ ಏಷ ಪುರುಷೋಽನ್ನರಸಮಯಃ' ಇತಿ = ಹೀಗೆ, ಅನ್ಯಪ್ರಾರಂಭಾತ್ = ಬೇರೆ ಪ್ರಕರಣವೇ ಪ್ರಾರಂಭವಾಗಿರುವುದರಿಂದ, ಮಯಟ್ ಶಬ್ದಕ್ಕೆ ವಿಕಾರ ಎಂಬರ್ಥವು ತಪ್ಪಾಗುತ್ತದೆ.

## ಉಪಜೀವ್ಯವಾದ್ದರಿಂದ ಅನ್ನಮಯ

**तत्वप्रकाशिका – ननु प्रचुरभूताद्यत्वं कथमभिसंहितं ब्रह्मणः? इत्यत आह – उपजीव्यत्वमेवेति ।।**

**'ओषधीभ्योऽन्नं अन्नात् पुरुषः' इति प्रसिद्धान्नविकारदेहमुक्त्वा, 'स वा एष पुरुषोऽन्नरसमयः' इति तत्परामर्शात् कथमन्नमयशब्दस्तत्प्राचुर्यार्थः? इत्यत आह – स इति ।। भवेदेतद्यदि प्रसिद्धान्नविकारपुरुषपरामर्शोऽयं भवेत् । न चैवं यस्मादात्मन आकाशादिकम् उत्पन्नं स एष इत्यात्मपरामर्शोपपत्तेरित्यर्थः । किमर्थमसौ परामृश्यते? इत्याशङ्कापनोदाय 'परामर्शात्' इति वक्तव्ये 'प्रारम्भात्' इत्याह ।**

**आत्मन आकाशादिकारणत्वमुक्त्वा तस्यैवान्नमयादिपञ्चरूपत्वप्रदर्शनाय पुनः प्रक्रान्तत्वान्न तत्परामर्शवैयर्थ्यमिति भावः । एवं प्राणमनश्शब्दयोश्चेष्टकत्वावबोधार्थत्वेन प्राचुर्यार्थतयाल्पार्थता परिहरणीयेति ।**

ಅರ್ಥ - ಅನ್ನಶಬ್ದಕ್ಕೆ ಭೂತಾತ್ತೃತ್ವ ಮತ್ತು ಭೂತಾದ್ಯತ್ವವುಳ್ಳಂತಹ ವಸ್ತುವನ್ನು ಅರ್ಥವನ್ನಾಗಿ ಹೇಳಿ, ಅಂತಹ ವಸ್ತುವನ್ನು ಭಗವಂತ ಎಂದು ಹೇಳಿದಿರಿ. ಇದು ಸರಿಯಲ್ಲ; ಭಗವಂತ ಭೂತಗಳನ್ನು ತಿನ್ನುತ್ತಾನೆ ಎಂದರೆ ಸಂಹಾರಕಾಲದಲ್ಲಿ ಎಂದಿಟ್ಟುಕೊಳ್ಳಬಹುದು. ಆದರೆ ಭೂತಾದ್ಯತ್ವವು (ಭೂತಗಳಿಂದ ತಿನ್ನಲ್ಪಡುವಿಕೆಯು) ಹೇಗೆ ಕೂಡುತ್ತದೆ? ಎಂದು ಸಂದೇಹ ಬಂದರೆ "ಉಪಜೀವ್ಯತ್ವಮೇವ" ಎಂಬುದಾಗಿ ಪರಿಹರಿಸುತ್ತಾರೆ.

---

जीवशरीरगः 'पुरुषः' पूर्णषड्गुणः देहाख्यपुरिशयः भगवान् 'अन्नरसमयः' उत्तमान्नत्वपूर्ण इत्यर्थः । तैत्तिरीयभाष्ये तु - 'अन्नस्यात्तृत्वादिरूपस्यान्नमयशरीरस्य यतः सारभूतो विष्णुः अतोऽन्नरसमयः' इति अन्नशब्दस्याऽवृत्त्या रसशब्दस्य क्रमव्यत्यासेन च व्याख्यातम् ।
परिपूर्णचंद्रिका

ಅನ್ನಮಯಶಬ್ದಕ್ಕೆ ಅನ್ನಪ್ರಾಚುರ್ಯ ಎಂದು ಅರ್ಥಮಾಡುವುದು ಸರಿಯಲ್ಲ. 'ಓಷಧೀಭ್ಯೋऽನ್ನಂ, ಅನ್ನಾತ್ ಪುರುಷಃ' ಎಂದು ಪ್ರಸಿದ್ಧವಾದ ಅನ್ನದ ವಿಕಾರವಾದಂತಹ ದೇಹವನ್ನು ಹೇಳಿ, 'ಸ ವಾ ಏಷ ಪುರುಷೋऽನ್ನರಸಮಯಃ' ಎಂದು ಅದನ್ನು ಪರಾಮರ್ಶೆ ಮಾಡಿದ್ದರಿಂದ ಅನ್ನದ ವಿಕಾರ ಎಂಬ ಅರ್ಥವನ್ನೇ ಹೇಳಬೇಕು. 'ಅನ್ನದ ಪ್ರಾಚುರ್ಯ' ಎಂಬರ್ಥವನ್ನು ಹೇಗೆ ಹೇಳುತ್ತೀರಿ? ಎಂದರೆ; ''ಸ ಇತಿ'' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಅನ್ನವಿಕಾರದ ದೇಹವನ್ನೇ ಪರಾಮರ್ಶೆ ಮಾಡಿದ್ದಾರೆ ಎಂದಾದರೆ ನೀವು ಹೇಳಿದ ಪ್ರಶ್ನೆ ಸರಿಯಾಗುತ್ತಿತ್ತು. ಆದರೆ ಹಾಗಲ್ಲ. 'ಆತ್ಮನಃ ಆಕಾಶಃ ಸಂಭೂತಃ' ಎಂದು ಹಿಂದೆ ಯಾವ ಆತ್ಮನಿಂದ ಆಕಾಶಾದಿಗಳು ಹುಟ್ಟಿದವು ಎಂದು ಹೇಳಿತ್ತೋ; ಆ ಆತ್ಮನನ್ನೇ 'ಸ ಏಷಃ' ಎಂದು ಪರಾಮರ್ಶೆ ಮಾಡುತ್ತೇವೆ. ಆತ್ಮನನ್ನೇ ಏಕೆ ಪರಾಮರ್ಶೆ ಮಾಡುತ್ತೀರಿ? ಎಂಬ ಪ್ರಶ್ನೆಗೆ ಉತ್ತರಿಸುವುದಕ್ಕೋಸ್ಕರ ಆಚಾರ್ಯರು ಭಾಷ್ಯದಲ್ಲಿ 'ಪರಾಮರ್ಶಾತ್' ಎಂದು ಹೇಳುವುದನ್ನು ಬಿಟ್ಟು, 'ಪ್ರಾರಂಭಾತ್' ಎಂದು ಹೇಳಿದ್ದಾರೆ.

ಆತ್ಮನು ಆಕಾಶಾದಿಗಳಿಗೆ ಕಾರಣನೆಂದು ಹೇಳಿ ಅವನೇ ಅನ್ನಮಯಾದಿಪಂಚರೂಪನಾಗಿದ್ದಾನೆಂದು ತಿಳಿಸಲು ಪುನಃ ಪ್ರಾರಂಭಿಸಿದುದರಿಂದ ಅವನನ್ನು ಪರಾಮರ್ಶೆ ಮಾಡಿದ್ದು ವ್ಯರ್ಥವಲ್ಲ. ಹೀಗೆಯೇ ಪ್ರಾಣಮಯ, ಮನೋಮಯ ಎಂಬಲ್ಲಿ ಪ್ರಾಣಃ ಶಬ್ದವು ಚೇಷ್ಟಕತ್ವ(ಪ್ರೇರಕ)ವೆಂಬ, ಮನಃ ಶಬ್ದವು ಅವಬೋಧ(ಜ್ಞಾನ) ಅರ್ಥವುಳ್ಳವುಗಳಾದ್ದರಿಂದ ಅವುಗಳಲ್ಲಿರುವ ಮಯಟ್ ಪ್ರತ್ಯಯವನ್ನು ಪ್ರಾಚುರ್ಯಾರ್ಥದಿಂದಲೇ ಸ್ವೀಕರಿಸಿ ಮಹಾಪ್ರಾಣ, ಮಹಾಬೋಧ ಎಂಬರ್ಥವನ್ನು ಹೇಳಿ ಭಗವನ್ಮಹಿಮಾಪರವಾಗಿ ಅರ್ಥೈಸುವುದರ ಮೂಲಕ ಅಲ್ಪತ್ವವನ್ನು ಪರಿಹರಿಸಬೇಕು.

भावदीपः – **पुरुषेति** ।। जीवच्छरीरेत्यर्थः । **यस्मादिति** ।।

**'य एष भगवान् विष्णुर्भूतस्रष्टागुणाधिकः ।**
**स एव..'**

इति तैत्तिरीयभाष्योक्तेरिति भावः । 'परामृशति तथैव पञ्चरूपत्ववित्तये' इत्यनुभाष्योक्तेराह – **पञ्चरूपत्वेति** ।। **चेष्टकत्वेति** ।।

**प्राणं देवा अनुप्राणन्ति मनुष्याः पशवश्च ये ।**
**आयुः प्राणो हि भूतानामिति यद्गतिजीवने ।।**

इत्यनुभाष्यदर्शितवाक्यशेषोक्तचेष्टकत्वतदुपलक्षितजीवनप्रदत्वेत्यपि ग्राह्यम् । **अवबोधेति** ।। अवबोधार्थो मनुधातुः प्रकीर्तितः' इत्युक्तदिशेति भावः । एतच्चाग्रे सर्वत्र रसपदविशेषणोक्त्या लभ्यत इति भावः ।

ಬ್ರಹ್ಮನಲ್ಲಿ ಹೇಳಲಾಗದು. ತಿನ್ನುವಿಕೆಯು ಅವನಲ್ಲಿ ಕೂಡುವುದಿಲ್ಲವಲ್ಲ. ಎಂಬ ಪ್ರಶ್ನೆಗೆ ಉತ್ತರಿಸಲು ಅದ್ಯತ್ವಶಬ್ದದ ಅರ್ಥವನ್ನು ವಿವರಿಸುತ್ತಿದ್ದಾರೆ.

ಅದ್ಯತ್ವಂ = ಅದ್ಯತ್ವವೆಂದರೆ, ಉಪಜೀವ್ಯತ್ವಮೇವ = ಜೀವನಕ್ಕೆ ಆಧಾರನಾಗಿರುವಿಕೆ ಎಂದರ್ಥ. 'ಸ ವಾ ಏಷಃ' = 'ಸ ವಾ ಏಷ ಪುರುಷೋಽನ್ನರಸಮಯಃ' ಇತಿ = ಹೀಗೆ, ಅನ್ಯಪ್ರಾರಂಭಾತ್ = ಬೇರೆ ಪ್ರಕರಣವೇ ಪ್ರಾರಂಭವಾಗಿರುವುದರಿಂದ, ಮಯಟ್ ಶಬ್ದಕ್ಕೆ ವಿಕಾರ ಎಂಬರ್ಥವು ತಪ್ಪಾಗುತ್ತದೆ.

## ಉಪಜೀವ್ಯವಾದ್ದರಿಂದ ಅನ್ನಮಯ

**तत्वप्रकाशिका – ननु प्रचुरभूताद्यत्वं कथमभिसंहितं ब्रह्मणः? इत्यत आह – उपजीव्यत्वमेवेति ।।**

**'ओषधीभ्योऽन्नं अन्नात् पुरुषः' इति प्रसिद्धान्नविकारदेहमुक्त्वा, 'स वा एष पुरुषोऽन्नरसमयः' इति तत्परामर्शात् कथमन्नमयशब्दस्तत्प्राचुर्यार्थः? इत्यत आह – स इति ।। भवेदेतद्यदि प्रसिद्धान्नविकारपुरुषपरामर्शोऽयं भवेत् । न चैवं यस्मादात्मन आकाशादिकम् उत्पन्नं स एष इत्यात्मपरामर्शोपपत्तेरित्यर्थः । किमर्थमसौ परामृश्यते? इत्याशङ्कापनोदाय 'परामर्शात्' इति वक्तव्ये 'प्रारम्भात्' इत्याह ।**

**आत्मन आकाशादिकारणत्वमुक्त्वा तस्यैवान्नमयादिपञ्चरूपत्वप्रदर्शनाय पुनः प्रक्रान्तत्वान्न तत्परामर्शवैयर्थ्यमिति भावः । एवं प्राणमनश्शब्दयोश्चेष्टकत्वावबोधार्थत्वेन प्राचुर्यार्थतयाल्पार्थता परिहरणीयेति ।**

ಅರ್ಥ - ಅನ್ನಶಬ್ದಕ್ಕೆ ಭೂತಾತ್ತೃತ್ವ ಮತ್ತು ಭೂತಾದ್ಯತ್ವವುಳ್ಳಂತಹ ವಸ್ತುವನ್ನು ಅರ್ಥವನ್ನಾಗಿ ಹೇಳಿ, ಅಂತಹ ವಸ್ತುವನ್ನು ಭಗವಂತ ಎಂದು ಹೇಳಿದಿರಿ. ಇದು ಸರಿಯಲ್ಲ; ಭಗವಂತ ಭೂತಗಳನ್ನು ತಿನ್ನುತ್ತಾನೆ ಎಂದರೆ ಸಂಹಾರಕಾಲದಲ್ಲಿ ಎಂದಿಟ್ಟುಕೊಳ್ಳಬಹುದು. ಆದರೆ ಭೂತಾದ್ಯತ್ವವು (ಭೂತಗಳಿಂದ ತಿನ್ನಲ್ಪಡುವಿಕೆಯು) ಹೇಗೆ ಕೂಡುತ್ತದೆ? ಎಂದು ಸಂದೇಹ ಬಂದರೆ "ಉಪಜೀವ್ಯತ್ವಮೇವ" ಎಂಬುದಾಗಿ ಪರಿಹರಿಸುತ್ತಾರೆ.

---

जीवशरीरगः 'पुरुषः' पूर्णषड्गुणः देहाख्यपुरिशयः भगवान् 'अन्नरसमयः' उत्तमान्नत्वपूर्ण इत्यर्थः । तैत्तिरीयभाष्ये तु - 'अन्नस्यात्तृत्वादिरूपस्यान्नमयशरीरस्य यतः सारभूतो विष्णुः अतोऽन्नरसमयः' इति अन्नशब्दस्याऽवृत्त्या रसशब्दस्य क्रमव्यत्यासेन च व्याख्यातम् ।

*ಪರಿಪೂರ್ಣಚಂದ್ರಿಕಾ*

ಅನ್ನಮಯಶಬ್ದಕ್ಕೆ ಅನ್ನಪ್ರಾಚುರ್ಯ ಎಂದು ಅರ್ಥಮಾಡುವುದು ಸರಿಯಲ್ಲ. 'ಓಷಧೀಭ್ಯೋಽನ್ನಂ, ಅನ್ನಾತ್ ಪುರುಷಃ' ಎಂದು ಪ್ರಸಿದ್ಧವಾದ ಅನ್ನದ ವಿಕಾರವಾದಂತಹ ದೇಹವನ್ನು ಹೇಳಿ, 'ಸ ವಾ ಏಷ ಪುರುಷೋಽನ್ನರಸಮಯಃ' ಎಂದು ಅದನ್ನು ಪರಾಮರ್ಶೆ ಮಾಡಿದ್ದರಿಂದ ಅನ್ನದ ವಿಕಾರ ಎಂಬ ಅರ್ಥವನ್ನೇ ಹೇಳಬೇಕು. 'ಅನ್ನದ ಪ್ರಾಚುರ್ಯ' ಎಂಬರ್ಥವನ್ನು ಹೇಗೆ ಹೇಳುತ್ತೀರಿ? ಎಂದರೆ; ''ಸ ಇತಿ'' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಅನ್ನವಿಕಾರದ ದೇಹವನ್ನೇ ಪರಾಮರ್ಶೆ ಮಾಡಿದ್ದಾರೆ ಎಂದಾದರೆ ನೀವು ಹೇಳಿದ ಪ್ರಶ್ನೆ ಸರಿಯಾಗುತ್ತಿತ್ತು. ಆದರೆ ಹಾಗಲ್ಲ. 'ಆತ್ಮನಃ ಆಕಾಶಃ ಸಂಭೂತಃ' ಎಂದು ಹಿಂದೆ ಯಾವ ಆತ್ಮನಿಂದ ಆಕಾಶಾದಿಗಳು ಹುಟ್ಟಿದವು ಎಂದು ಹೇಳಿತ್ತೋ; ಆ ಆತ್ಮನನ್ನೇ 'ಸ ಏಷಃ' ಎಂದು ಪರಾಮರ್ಶೆ ಮಾಡುತ್ತೇವೆ. ಆತ್ಮನನ್ನೇ ಏಕೆ ಪರಾಮರ್ಶೆ ಮಾಡುತ್ತೀರಿ? ಎಂಬ ಪ್ರಶ್ನೆಗೆ ಉತ್ತರಿಸುವುದಕ್ಕೋಸ್ಕರ ಆಚಾರ್ಯರು ಭಾಷ್ಯದಲ್ಲಿ 'ಪರಾಮರ್ಶಾತ್' ಎಂದು ಹೇಳುವುದನ್ನು ಬಿಟ್ಟು, 'ಪ್ರಾರಂಭಾತ್' ಎಂದು ಹೇಳಿದ್ದಾರೆ.

ಆತ್ಮನು ಆಕಾಶಾದಿಗಳಿಗೆ ಕಾರಣನೆಂದು ಹೇಳಿ ಅವನೇ ಅನ್ನಮಯಾದಿಪಂಚರೂಪನಾಗಿದ್ದಾನೆಂದು ತಿಳಿಸಲು ಪುನಃ ಪ್ರಾರಂಭಿಸಿದುದರಿಂದ ಅವನನ್ನು ಪರಾಮರ್ಶೆ ಮಾಡಿದ್ದು ವ್ಯರ್ಥವಲ್ಲ. ಹೀಗೆಯೇ ಪ್ರಾಣಮಯ, ಮನೋಮಯ ಎಂಬಲ್ಲಿ ಪ್ರಾಣಃ ಶಬ್ದವು ಚೇಷ್ಟಕತ್ವ(ಪ್ರೇರಕ)ವೆಂಬ, ಮನಃ ಶಬ್ದವು ಅವಬೋಧ(ಜ್ಞಾನ) ಅರ್ಥವುಳ್ಳವುಗಳಾದ್ದರಿಂದ ಅವುಗಳಲ್ಲಿರುವ ಮಯಟ್ ಪ್ರತ್ಯಯವನ್ನು ಪ್ರಾಚುರ್ಯಾರ್ಥದಿಂದಲೇ ಸ್ವೀಕರಿಸಿ ಮಹಾಪ್ರಾಣ, ಮಹಾಬೋಧ ಎಂಬರ್ಥವನ್ನು ಹೇಳಿ ಭಗವನ್ಮಹಿಮಾಪರವಾಗಿ ಅರ್ಥೈಸುವುದರ ಮೂಲಕ ಅಲ್ಪತ್ವವನ್ನು ಪರಿಹರಿಸಬೇಕು.

भावदीपः – **पुरुषेति ।। जीवच्छरीरेत्यर्थः । यस्मादिति ।।**

**'य एष भगवान् विष्णुर्भूतस्रष्टागुणाधिकः ।**
**स एव..'**

इति तैत्तिरीयभाष्योक्तेरिति भावः । 'परामृशति तथैव पञ्चरूपत्ववित्तये' इत्यनुभाष्योक्तेराह – **पञ्चरूपत्वेति ।। चेष्टकत्वेति ।।**

**प्राणं देवा अनुप्राणन्ति मनुष्याः पशवश्च ये ।**
**आयुः प्राणो हि भूतानामिति यद्गतिजीवने ।।**

इत्यनुभाष्यदर्शितवाक्यशेषोक्तचेष्टकत्वतदुपलक्षितजीवनप्रदत्वेत्यपि ग्राह्यम् । **अवबोधेति ।।** अवबोधार्थो मनुधातुः प्रकीर्तितः' इत्युक्तदिशेति भावः । एतच्चाग्रे सर्वत्र रसपदविशेषणोक्त्या लभ्यत इति भावः ।

'ಅನ್ನವಿಕಾರಪುರುಷಃ' ಎಂಬಲ್ಲಿ ಪುರುಷಶಬ್ದಕ್ಕೆ ಜೀವವುಳ್ಳ ಶರೀರ ಎಂಬುದಾಗಿ ಅರ್ಥ. ''ಯಸ್ಮಾತ್'' ಎಂಬ ವಾಕ್ಯಭಾಗದಿಂದ 'ಯ ಏಷ ಭಗವಾನ್ ವಿಷ್ಣುಃ ಭೂತಸ್ರಷ್ಟಾ ಗುಣಾಧಿಕಃ । ಸ ಏವ' (ಷಡ್ಗುಣೈಶ್ವರ್ಯಸಂಪನ್ನನಾದ ಯಾವ ವಿಷ್ಣುವು ಪ್ರಪಂಚವನ್ನು ಸೃಷ್ಟಿಮಾಡುವವನೋ, ಸಕಲಗುಣಪರಿಪೂರ್ಣನೋ, ಅವನೇ ಇಲ್ಲಿ ಹೇಳಲ್ಪಡುತ್ತಿದ್ದಾನೆ) ಎಂದು ತೈತ್ತಿರೀಯಭಾಷ್ಯದಲ್ಲಿ ಉಕ್ತಿ ಇರುವುದರಿಂದ ಇಲ್ಲಿ ವಿಷ್ಣುವನ್ನೇ ತೆಗೆದುಕೊಳ್ಳಬೇಕು. ಅನುವ್ಯಾಖ್ಯಾನದಲ್ಲಿ 'ಪರಾಮೃಶತಿ ತಸ್ಯೈವ ಪಂಚರೂಪತ್ವವಿತ್ತಯೇ' (ಜಗತ್ತನ್ನು ಸೃಷ್ಟಿಮಾಡಿದ ಅದೇ ಭಗವಂತನ ಐದು ವಿಶೇಷರೂಪಗಳನ್ನು ತಿಳಿಯುವುದಕ್ಕಾಗಿ ಅವನನ್ನು ಪರಾಮರ್ಶಮಾಡುತ್ತಿದ್ದಾರೆ) ಎಂಬ ವಾಕ್ಯಕ್ಕೆ ಸಂವಾದಿಯಾಗಿ ''ಪಂಚರೂಪತ್ವ'' ಎಂಬುದಾಗಿ ಹೇಳಿದ್ದಾರೆ.

''ಚೇಷ್ಟಕತ್ವ'' ಎಂಬ ವಾಕ್ಯಭಾಗದಲ್ಲಿ -

'ಪ್ರಾಣಂ ದೇವಾ ಅನುಪ್ರಾಣಂತಿ ಮನುಷ್ಯಾ ಪಶವಶ್ಚ ಯೇ ।
ಆಯುಃ ಪ್ರಾಣೋ ಹಿ ಭೂತಾನಾಮಿತಿ ಯದ್‌ಗತಿಜೀವನೇ'

ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ವಾಕ್ಯಶೇಷರೂಪವಾಗಿ ಅಲ್ಲಿ ಹೇಳಿದ ಚೇಷ್ಟಕತ್ವವನ್ನು ಮತ್ತು ಆದರಿಂದ ಉಪಲಕ್ಷಿತವಾದ ಜೀವನಪ್ರದತ್ವವನ್ನು ತೆಗೆದುಕೊಳ್ಳಬೇಕು. ''ಅವಬೋಧ'' ಎಂಬ ಗ್ರಂಥಭಾಗದಿಂದ 'ಅವಬೋಧಾರ್ಥೋ ಮನುಧಾತುಃ ಪ್ರಕೀರ್ತಿತಃ' ಎಂಬಲ್ಲಿ ಹೇಳಿದಂತೆ ಮನನಶಬ್ದಕ್ಕೆ ಜ್ಞಾನ ಎಂಬ ಅರ್ಥವನ್ನು ಇಟ್ಟುಕೊಳ್ಳಬೇಕು. 'ಈ ಎಲ್ಲಾ ಅಂಶವು ಮುಂದೆ ಎಲ್ಲಾ ಕಡೆಯೂ ಕೂಡ 'ರಸ'ಪದಕ್ಕೆ ವಿಶೇಷಣರೂಪವಾಗಿ ಅನ್ನಾದಿಪದಗಳನ್ನು ಹೇಳಿರುವುದರಿಂದ ಸಿಗುತ್ತದೆ' ಎಂಬ ಅಭಿಪ್ರಾಯವನ್ನು ಗ್ರಹಿಸಬೇಕು.

**वाक्यार्थमञ्जरी –** शङ्कते – **औषधीभ्य इति** ।। धान्येभ्योऽन्नं समुद्भूतं तस्मात् पुरुषदेहः समुद्भूत इत्यर्थः । उक्त्वा आत्मन आकाश इत्यादिना ।।

नन्वथापि प्राणमनःशब्दयोः श्वासवाय्वन्तःकरणपरत्वेन तदुभयप्राचुर्योक्तावल्पार्थत्वं स्यादित्यत आह – **एवमिति** ।। **चेष्टकत्वावबोधनार्थत्वेति** ।। 'अन चेष्टायां' 'मन्ववबोघने' इति धातुव्याख्यानादिति भावः । विज्ञानप्राचुर्यस्य सार्वज्ञतयाल्पताशङ्कानुदयाद् द्वयोरेवोक्तिः ।।

'ಓಷಧೀಭ್ಯೋ' ಎಂಬ ಶ್ರುತಿಯಿಂದ ಶಂಕೆ ಮಾಡುತ್ತಿದ್ದರೆ. ಧಾನ್ಯಗಳಿಂದ ಅನ್ನವು ಉತ್ಪನ್ನವಾಗುತ್ತದೆ. ಅನ್ನದಿಂದ ಪುರುಷದೇಹವು ಉತ್ಪನ್ನವಾಯಿತು ಎಂದು ಶ್ರುತಿಯ ಅರ್ಥ. 'ಉಕ್ತ್ವಾ' ಎಂದರೆ 'ಆತ್ಮನಃ ಆಕಾಶಃ' ಇತ್ಯಾದಿ ಶ್ರುತಿಗಳು ಎಂದರ್ಥ.

ಆಕ್ಷೇಪ - ಆದರೂ ಸಹ ಪ್ರಾಣ, ಮನಃ ಶಬ್ದಗಳಿಗೆ ಶ್ವಾಸವಾಯು, ಅಂತಃಕರಣ ಎಂಬರ್ಥ ಇರಬೇಕಾದರೆ ಅವುಗಳಿಗೆ ಪ್ರಾಚುರ್ಯಾರ್ಥವನ್ನು ಹೇಳಿದರೆ ಅಲ್ಪಾರ್ಥತ್ವವನ್ನು ಹೇಳಿದಂತಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಏವಂ' ಎಂಬ ವಾಕ್ಯದಿಂದ ಉತ್ತರವನ್ನು ಹೇಳುತ್ತಿದ್ದಾರೆ. 'ಚೇಷ್ಟಕತ್ವಾವಬೋಧನಾರ್ಥತ್ವೇನ' ಎಂದು ಇದೆ. ಇದರ ಅಭಿಪ್ರಾಯ 'ಅನ ಚೇಷ್ಟಾಯಾಂ' ಮತ್ತು 'ಮನು ಅವಬೋಧನೇ' ಎಂಬ ಧಾತುವನ್ನು ವ್ಯಾಖ್ಯಾನ ಮಾಡಿದಂತಾಯಿತು.

ವಿಜ್ಞಾನಪ್ರಾಚುರ್ಯವು ಸಾರ್ವಜ್ಞಪರವಾಗಿರುವುದರಿಂದ ಅಲ್ಪಾರ್ಥತ್ವ ಶಂಕೆಗೆ ಅವಕಾಶವಿಲ್ಲ. ಆದ್ದರಿಂದ ಎರಡನ್ನು (ಪ್ರಾಣಮಯ ಮತ್ತು ಮನೋಮಯ) ಮಾತ್ರ ಹೇಳಿದ್ದಾರೆ.

● ● ● ● ●

## ಪಂಚರೂಪಗಳು

**भाष्यम् – 'येऽन्नं ब्रह्मोपासते' (तै. २-२.) इत्यादिब्रह्मशब्दाद् बहुरूपत्वाच्च न विकारित्वमविरोधश्च[१] ।**

'ಯೇನ್ನಂ ಬ್ರಹ್ಮೋಪಾಸತೇ' ಎಂಬಲ್ಲಿ ಬ್ರಹ್ಮಶಬ್ದದ ಪ್ರಯೋಗವನ್ನು ಅನ್ನಮಯಾದಿಗಳಲ್ಲಿಯೂ ಮಾಡಲಾಗಿದೆ. ಆದ್ದರಿಂದ ಅನ್ನಮಯಾದಿಶಬ್ದಗಳಲ್ಲಿರುವ ಮಯಟ್ ಪ್ರತ್ಯಯಕ್ಕೆ ವಿಕಾರ ಎಂಬರ್ಥವನ್ನು ಹೇಳಬಾರದು. ವಿಷ್ಣುವಿಗೆ ಅನೇಕ ರೂಪಗಳಿರುವುದರಿಂದಲೂ ವಿಕಾರ ಎಂಬರ್ಥವನ್ನು ಮಯಟ್ಪ್ರತ್ಯಯಕ್ಕೆ ಹೇಳಬಾರದು. ಅನ್ನಮಯಾದಿ ಐದುರೂಪಗಳನ್ನು ಅವನೊಬ್ಬನಿಗೇ ಹೇಳಿದಾಗ ವಿರೋಧವು ಸಹ ಬರುವುದಿಲ್ಲ.

---

(१) भाष्यदीपिका – नन्वेवं मयट्छब्दस्योभयार्थे प्रयोगादत्राप्युभयपक्षे दोषदर्शनात् पञ्चानां मयटां प्राचुर्यमेवार्थो न विकारित्वमित्यत्र किं नियामकम्? किञ्चान्नमयादीनां पञ्चानां ब्रह्मताऽभ्युपगतौ 'एकमेव' (छा.उ. ६-२-१.) इत्यादिश्रुतिविरोधः स्याद् इत्यत आह – येऽन्नं ब्रह्मेति ।। अत्राऽऽदिशब्देन 'ये प्राणं ब्रह्मोपासते' (तै.उ. २-३-१.) । 'आनन्दं ब्रह्मणो विद्वान्' (तै.उ. २-४-१.) 'विज्ञानं ब्रह्म चेद् वेद' (तै.उ. २-५-१.) 'अस्ति ब्रह्मेति चेद्वेद' (तै.उ. २-६-१) इति वाक्यजातं गृह्यते । अस्ति आनन्दरूपं तद्वच्च । 'इत्यादि' इति लुप्तसप्तमीविभक्तिकम् । 'श्लोकेषु' इति शेषः । ब्रह्मशब्दपदं तच्छ्रवणोपलक्षकम् ।

एवं प्रदर्शिते हेतुद्वयेऽध्याहृतहेतुद्वाराऽन्वययोग्ये क्रमेण साध्ये आह – न विकारित्वमिति ।। 'मयटामर्थ इति निश्चीयते' इति शेषः । 'अविरोधः' विरोधाभावः । चशब्दोऽप्यर्थः । तथा चेत्थं योजना – 'येऽन्नं ब्रह्म' इत्यादिष्वन्नमयादीन् प्रत्युदाहृतश्लोकेष्वन्नमयादिविषयत्वेन 'ब्रह्मशब्दात्' ब्रह्मशब्दश्रवणादन्यथासिद्धतत्समभिव्याहाराद् उभयथाऽपि सम्भवतां मयटां प्राचुर्यमेवार्थः, न विकारित्वमिति निश्चीयते । अतो न नियामकाक्षेपो युक्तः । एवमेकस्यैव ब्रह्मणो 'बहुरूपत्वाच्च' शब्दादेकस्यैव बहुरूपत्ववचनोपपत्तेः 'एकमेव' इति श्रुतिविरोधोऽपि नेति । पूर्वं 'तस्मिन्नेव प्रसिद्धब्रह्मशब्दाभ्यासात्' इत्युक्त्वा अत्र ब्रह्मशब्दादित्येतावन्मात्रोक्तेः प्रयोजनं तु 'ब्रह्मशब्दस्याऽनन्दविज्ञानमययोरिवान्येष्वभ्यासाभावात् तेष्वसिद्धिपरिहारेण ब्रह्मशब्दश्रवणरूपसर्वसाधारणहेत्वर्थकथनमेव' इत्युक्तं चन्द्रिकायाम् ।

ಪ್ರತಿಪದಾರ್ಥ --ಮಯಟ್ ಶಬ್ದಕ್ಕೆ ಪ್ರಾಚುರ್ಯ ಹಾಗೂ ವಿಕಾರ ಎಂಬೆರಡರ್ಥ ಪ್ರಸಿದ್ಧವಾಗಿರುವುದರಿಂದ ಪ್ರಾಚುರ್ಯ ಎಂಬರ್ಥವನ್ನೇ ಸ್ವೀಕರಿಸಬೇಕೆನ್ನಲು ಏನು ನಿಯಾಮಕ? ಮತ್ತು ಅನ್ನಮಯಾದಿ ಐದನ್ನೂ ಬ್ರಹ್ಮನೆಂದು ಹೇಳಿದರೆ 'ಏಕಮೇವ' ಇತ್ಯಾದಿ ಶ್ರುತಿವಿರೋಧವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

'ಯೇನ್ನಂ ಬ್ರಹ್ಮೋಪಾಸತೇ' 'ಯೇ ಪ್ರಾಣಂ ಬ್ರಹ್ಮೋಪಾಸತೇ' ಇತ್ಯಾದಿ = ಇವೇ ಮೊದಲಾದ, ಬ್ರಹ್ಮಶಬ್ದಾತ್ = ಒಂದೇ ವಿಷಯದಲ್ಲಿ ಬ್ರಹ್ಮಶಬ್ದವಿರುವುದರಿಂದ, ಚ = ಮತ್ತು, ಬಹುರೂಪತ್ವ = ಬ್ರಹ್ಮನಿಗೆ ಅನೇಕರೂಪಗಳಿರುವುದರಿಂದಲೂ, ನ ವಿಕಾರಿತ್ವಮ್ = ವಿಕಾರ ಎಂಬರ್ಥವು ಕೂಡುವುದಿಲ್ಲ. ಚ = ಮತ್ತು, ಅವಿರೋಧಃ = ಅನೇಕರೂಪಗಳನ್ನು ಹೇಳಿದಾಗ 'ಏಕಮೇವ' ಎಂಬ ಶ್ರುತಿಯಿಂದ ವಿರೋಧವೂ ಬರುವುದಿಲ್ಲ.

## 'ವಿಕಾರ' 'ಪ್ರಾಚುರ್ಯ' ಎರಡೂ ಅರ್ಥಗಳನ್ನು ಒಪ್ಪಬಹುದೇ?

**तत्वप्रकाशिका – नन्वेवं मयट्शब्दस्योभयार्थे प्रयोगादत्राप्युभयपक्षे दोषादर्शनात् किं प्राचुर्यमेवार्थो न विकारित्वं पञ्चमयटामित्यत्र नियामकम् । अन्नमयादिपञ्चानां ब्रह्मताभ्युपगतौ 'एकमेवाद्वितीयम्' इत्यादिश्रुतिविरोधश्च स्यादित्यत आह – येऽन्नमिति ॥**

**'येऽन्नं ब्रह्मोपासते' 'ये प्राणं ब्रह्मोपासते' 'आनन्दं ब्रह्मणो विद्वान्' 'विज्ञानं ब्रह्म चेद्वेद' 'अस्ति ब्रह्मेति चेद्वेद' इत्यन्नमयादीन् प्रत्युदाहृतश्लोकेषु तद्विषयत्वेन ब्रह्मशब्दश्रवणादुभयथापि सम्भवतां मयटामनन्यथासिद्धतत्समभिव्याहारान्न विकारित्वमर्थोऽपि तु प्राचुर्यमेवेति निश्चीयते । न चान्नमयादीनां पञ्चानामपि ब्रह्मत्वाभ्युपगतौ 'अकमेवाद्वितीयम्' इत्यादिश्रुतिविरोधः । एकस्यैव ब्रह्मणो बहुरूपत्वेन पञ्चत्वोपपत्त्या श्रुत्यविरोधादिति भावः ।**

ಮಯಟ್‌ಪ್ರತ್ಯಯವು ವಿಕಾರ ಮತ್ತು ಪ್ರಾಚುರ್ಯ ಎಂಬೆರಡು ಅರ್ಥದಲ್ಲಿ ಪ್ರಯೋಗದಲ್ಲಿದೆ. ಪ್ರಕೃತದಲ್ಲಿ ಎರಡೂ ಅರ್ಥವನ್ನು ಸ್ವೀಕರಿಸಿದರೆ ದೋಷವಿಲ್ಲವಾದ್ದರಿಂದ ಈ ಪ್ರಕರಣದಲ್ಲಿ ಐದು ಮಯಟ್‌ಪ್ರತ್ಯಯಗಳಿಗೆ ಪ್ರಾಚುರ್ಯವೇ ಅರ್ಥ, ವಿಕಾರ ಎಂದರ್ಥವಲ್ಲ ಎನ್ನುವುದಕ್ಕೆ ಏನು ನಿಯಾಮಕ, ಮತ್ತು ಅನ್ನಮಯಾದಿ ಐದುವ್ಯಕ್ತಿಗಳಿಗೆ ಬ್ರಹ್ಮತ್ವವನ್ನು ಒಪ್ಪಿದರೆ 'ಏಕಮೇವಾದ್ವಿತೀಯಂ' ಇತ್ಯಾದಿ ಶ್ರುತಿಗಳ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆ ಬಂದರೆ ''ಯೇಽನ್ನಂ'' ಎಂಬಿತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

'ಯೇನ್ನಂ ಬ್ರಹ್ಮೋಪಾಸತೇ', 'ಆನಂದಂ ಬ್ರಹ್ಮಣೋ ವಿದ್ವಾನ್' 'ವಿಜ್ಞಾನಂ ಬ್ರಹ್ಮ ಚೇದ್ವೇದ',

'ಅಸ್ತಿ ಬ್ರಹ್ಮೇತಿ ಚೇದ್ವೇದ' ಎಂದು ಅನ್ನಮಯಾದಿಗಳನ್ನು ಕುರಿತು ಉದಾಹರಿಸಿದ ಶ್ಲೋಕಗಳಲ್ಲಿ ಅನ್ನಮಯಾದಿವಿಷಯಕವಾಗಿ ಬ್ರಹ್ಮಶಬ್ದವು ಶ್ರುತವಾಗಿದೆ. ಎರಡೂ ರೀತಿಯ ಅರ್ಥವುಳ್ಳಂತಹ 'ಮಯಟ್'ಪ್ರತ್ಯಯಕ್ಕೆ ಬೇರೆ ರೀತಿ ಕೂಡಿಸಲು ಬರದ ಬ್ರಹ್ಮಶಬ್ದದ ಸಮಭಿವ್ಯಾಹಾರವಿರುವುದರಿಂದ ವಿಕಾರಾರ್ಥವನ್ನು ಬಿಟ್ಟು ಪ್ರಾಚುರ್ಯಾರ್ಥವನ್ನೇ ಸ್ವೀಕರಿಸಬೇಕು ಎಂದು ನಿಶ್ಚಯ ಮಾಡುತ್ತೇವೆ. ಇನ್ನು ಅನ್ನಮಯಾದಿಪಂಚವ್ಯಕ್ತಿಗಳಿಗೆ ಬ್ರಹ್ಮತ್ವವನ್ನು ಹೇಳಿದರೂ ಒಬ್ಬನೇ ಬ್ರಹ್ಮನಿಗೆ ಬಹುರೂಪಗಳಿರುವುದರಿಂದ ಐದು ಬ್ರಹ್ಮನ ರೂಪಗಳು ಎಂದು ಕೂಡಿಸಲು ಬರುವುದರಿಂದ 'ಏಕಮೇವಾದ್ವಿತೀಯಂ' ಎಂಬ ಶ್ರುತಿಯ ವಿರೋಧ ಬರುವುದಿಲ್ಲ. ಹೀಗೆ ಅನ್ನಮಯಾದಿ ಐದೂ ಸಹ ಬ್ರಹ್ಮನೇ ಆಗಿದ್ದಾನೆ. ಅನ್ನಮಯಾದಿ ಶಬ್ದಗಳಲ್ಲಿರುವ 'ಮಯಟ್'ಪ್ರತ್ಯಯಕ್ಕೆ ಪ್ರಾಚುರ್ಯವೇ ಅರ್ಥವೆಂದು ನಿರವಕಾಶಬ್ರಹ್ಮಶಬ್ದದಿಂದ ನಿಶ್ಚಯಿಸಬಹುದು.

### ಭಾಷ್ಯಗಾಂಭೀರ್ಯ

भावदीपः – विज्ञानप्राचुर्यस्य सर्वज्ञतया अल्पताशङ्कानुदयात् श्वासवाय्वन्तःकरणभ्रान्तिनिरासाय द्वयोरेवोक्तिः । **प्राचुर्येति** ।।

**महाप्राणो महाबोधो महाविज्ञानवानपि ।**
**विशेषसामान्यतया विज्ञानमय इत्यपि ।'**

इत्यनुभाष्योक्तदिशेति भावः । **एकमेवेति** ।। 'एकमेवाद्वितीयम् स्वगतभेदविवर्जितम्' इत्यादिछान्दोग्यभाष्यदिशा एकं स्वगतभेदवर्जितम् । भेदाभेदवर्जितं समाधिकवर्जितमित्यर्थादेकपदेन न विरोध इत्यर्थः । एक एवाद्वितीयो भगवान् इत्यादिरादिपदार्थः ।

पञ्चसु प्रकरणेषु तैत्तिरीयभाष्यप्रदर्शितब्रह्मशब्दानाह – **येऽन्नमिति** ।। 'ब्रह्मशब्दात्' इत्यस्य 'ब्रह्मशब्दश्रवणात्' इत्यर्थमुक्त्वा, साध्यं सङ्गमयति – **उभयथेति** ।। **बहुरूपत्वेनेति** ।। 'गुहां प्रविष्टौ' इत्यत्र 'द्वित्वं चैकस्य युज्यते' इत्यनुभाष्योक्तदिशा एकस्यानेकरूपत्वेनानेकत्वं व्युत्पाद्यमपीह तदेव शिष्यहिताय भाष्यकृतोच्यत इति ज्ञेयम् । विवरिष्यते चैतत् 'उत्क्रान्तिगत्यागतीनाम्' इत्यधिकरणभाष्ये द्वितीये 'एकशब्दैर्द्विशब्दैश्च बहुशब्दैश्च केशव' इत्यादिना ।।

ವಿಜ್ಞಾನಪ್ರಾಚುರ್ಯವು ಸರ್ವಜ್ಞತ್ವವನ್ನೇ ತಿಳಿಸುವುದರಿಂದ ಅಲ್ಲಿ ಅಲ್ಪತ್ವದ ಶಂಕೆಯೇ ಬರದಿರುವುದರಿಂದ ಶ್ವಾಸವಾಯು ಮತ್ತು ಅಂತಃಕರಣ ಎಂಬ ಅರ್ಥದ ಭ್ರಾಂತಿಯನ್ನು ನಿರಾಸಮಾಡುವುದಕ್ಕಾಗಿ

'ಪ್ರಾಣ ಮನನ' ಎಂಬ ಎರಡೇ ಶಬ್ದಗಳನ್ನು ಇಲ್ಲಿ ಹೇಳಿದ್ದಾರೆ. ''ಪ್ರಾಚುರ್ಯ'' ಇತ್ಯಾದಿವಾಕ್ಯಭಾಗಕ್ಕೆ 'ಮಹಾಪ್ರಾಣೋ ಮಹಾಬೋಧೋ ಮಹಾ ವಿಜ್ಞಾನವಾನಪಿ । ವಿಶೇಷಸಾಮಾನ್ಯತಯಾ ವಿಜ್ಞಾನಮಯಃ ಇತ್ಯಪಿ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಇಲ್ಲಿ ಹೇಳಿದ ಪ್ರಾಣಮಯ ಮನೋಮಯ ವಿಜ್ಞಾನಮಯ ಮೊದಲಾದ ಶಬ್ದಗಳಿಗೆ ಮಹಾಪ್ರಾಣ, ಮಹಾಬೋದ್ಧಾ, ಮಹಾವಿಜ್ಞಾನವಾನ್' ಎಂಬ ರೀತಿಯಿಂದ ನಿರವಧಿಕವಾದ ಕರ್ತೃತ್ವಾದಿಗಳುಳ್ಳವನು ಎಂಬ ಅರ್ಥವನ್ನು ಗ್ರಹಿಸಬೇಕು.

''ಏಕಮೇವಾದ್ವಿತೀಯಂ'' ''ಸ್ವಗತಭೇದವಿವರ್ಜಿತಮ್'' ಇತ್ಯಾದಿಯಾಗಿ ಛಾಂದೋಗ್ಯಭಾಷ್ಯದಲ್ಲಿ ಹೇಳಿದಂತೆ 'ಏಕಂ' ಎಂಬ ಶಬ್ದಕ್ಕೆ ಸ್ವಗತಭೇದವಿವರ್ಜಿತ ಎಂಬುದಾಗಿ ಅರ್ಥ. 'ಅದ್ವಿತೀಯ'ಶಬ್ದಕ್ಕೆ ಭೇದಾಭೇದದಿಂದ ವರ್ಜಿತನಾದವನು, ಅಥವಾ ತನಗೆ ಸಮರಾಗಲೀ, ತನಗಿಂತ ಉತ್ತಮರಾಗಲೀ ಇಲ್ಲದವನು ಎಂಬ ಅರ್ಥವಿರುವುದರಿಂದ ಇಲ್ಲಿರುವ ಏಕಪದದಿಂದ ಅನ್ನಮಯಾದಿ ಐದು ವ್ಯಕ್ತಿಗಳಿಗೆ ಬ್ರಹ್ಮತ್ವವನ್ನು ಒಪ್ಪಿಕೊಂಡರೆ ವಿರೋಧ ಬರುತ್ತದೆ ಎಂದು ಅರ್ಥ. ಇಲ್ಲಿರುವ 'ಆದಿ'ಪದದಿಂದ 'ಏಕ ಏವಾದ್ವಿತೀಯೋ ಭಗವಾನ್' ಇವೇ ಮೊದಲಾದ ಶ್ರುತಿಗಳನ್ನು ಗ್ರಹಿಸಬೇಕು.

ತೈತ್ತಿರೀಯಭಾಷ್ಯದಲ್ಲಿ ಐದುಪ್ರಕರಣಗಳಲ್ಲಿ ತಿಳಿಸಿದ ಬ್ರಹ್ಮಶಬ್ದಗಳನ್ನು ''ಯೇನ್ನಮ್ ಬ್ರಹ್ಮೋ-ಪಾಸತೇ'' ಇತ್ಯಾದಿ ವಾಕ್ಯಗಳಿಂದ ತಿಳಿಸುತ್ತಿದ್ದಾರೆ. ಭಾಷ್ಯದಲ್ಲಿರುವ 'ಬ್ರಹ್ಮಶಬ್ದಾತ್' ಎಂಬ ಪದಕ್ಕೆ 'ಬ್ರಹ್ಮಶಬ್ದಶ್ರವಣಾತ್' ಎಂಬ ಅರ್ಥವನ್ನು ಹೇಳಿ, ''ಉಭಯಥಾ'' ಇತ್ಯಾದಿವಾಕ್ಯದಿಂದ ಸಾಧ್ಯವನ್ನು ಹೊಂದಿಸುತ್ತಿದ್ದಾರೆ.

''ಬಹುರೂಪತ್ವೇನ'' ಎಂಬ ವಾಕ್ಯಭಾಗದಿಂದ 'ಗುಹಾಂ ಪ್ರವಿಷ್ಟಾವಿತ್ಯತ್ರ ದ್ವಿತ್ವಂ ಚೈಕಸ್ಯ ಯುಜ್ಯತೇ' -(ಗುಹಾಧಿಕರಣ) ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಒಬ್ಬನೇ ವ್ಯಕ್ತಿಗೆ ಅನೇಕ ರೂಪಗಳು ಇರಬಹುದಾದ್ದರಿಂದ ಮುಂದೆ ಹೇಳಲಿರುವ ಅದೇ ಅಂಶವನ್ನು ಶಿಷ್ಯರ ಹಿತಕ್ಕಾಗಿ ಭಾಷ್ಯಕಾರರು ಇಲ್ಲಿ ಹೇಳುತ್ತಿದ್ದಾರೆ ಎಂದು ತಿಳಿಯಬೇಕು. ಇದರ ವಿವರಣೆಯನ್ನು ಮುಂದೆ 'ಉತ್ಕ್ರಾಂತಿಗತ್ಯಾಗತೀನಾಮ್' ಎಂಬ ಅಧಿಕರಣದಲ್ಲಿ ದ್ವಿತೀಯಾಧ್ಯಾಯದಲ್ಲಿ 'ಏಕಶಬ್ದೈರ್ದ್ವಿಶಬ್ದೈಶ್ಚ ಬಹುಶಬ್ದೈಶ್ಚ ಕೇಶವಃ'' ಇತ್ಯಾದಿ ವಾಕ್ಯಗಳಿಂದ ಭಾಷ್ಯದಲ್ಲಿಯೇ ವಿವರಿಸಲಿದ್ದಾರೆ.

**वाक्यार्थमञ्जरी – श्रुतिविरोध इति** ।। तस्य छान्दोग्यभाष्यदिशा स्वगतभेदनिषेधार्थकत्वादिति भावः । **येऽन्नमित्यादि** ।। एतेषां तेन्नमाप्नुवन्ति ते आयुर्यन्तीति पूर्ववाक्याभ्यां न बिभेति न प्रमाद्यति सन्तमेनं ततो विदुरित्युत्तरैः क्रमेणान्वयो बोध्यः ।। **अन्नमयादीनीति** ।। अन्नमयादिपञ्चकं निरूप्य तज्ज्ञातुः फलनिरूपणायोदाहृतेत्यर्थः ।। **अनन्यथासिद्धेति** ।। विष्णुमात्रनिष्ठेत्यर्थः ।

'ಶ್ರುತಿವಿರೋಧ' ಎಂದು ಇದೆ. 'ಏಕಮೇವ ಅದ್ವಿತೀಯಂ' ಎಂಬ ಶ್ರುತಿಯು ಛಾಂದೋಗ್ಯ-ಭಾಷ್ಯಾನುಸಾರಿಯಾಗಿ ಪರಮಾತ್ಮನಲ್ಲಿ ಸ್ವಗತಭೇದವನ್ನು ನಿಷೇಧ ಮಾಡುತ್ತಿದೆಯೆಂದು ಇದರ ಭಾವ. 'ಯೇಽನ್ನಂ' ಇತ್ಯಾದಿಯಾಗಿ ಶ್ರುತಿಗಳನ್ನು ಹೇಳಿದ್ದಾರೆ. ಅವುಗಳನ್ನು 'ತೇಽನ್ನಮಾಪ್ನುವಂತಿ' 'ತೇ ಆಯುರ್ಯಂತಿ' ಎಂಬ ಹಿಂದಿನ ವಾಕ್ಯಗಳಿಂದ ಮತ್ತು 'ನ ಬಿಭೇತಿ' 'ನ ಪ್ರಮಾದ್ಯತಿ'

'ಸಂತಮೇನಂ ತತೋ ವಿದುಃ' ಎಂಬ ಮುಂದಿನ ವಾಕ್ಯಗಳೊಂದಿಗೆ ಕ್ರಮವಾಗಿ ಅನ್ವಯವು ಬೋಧ್ಯವಾಗಿದೆ. 'ಅನ್ನಮಯಾದೀನಿ' ಎಂದರೆ ಅನ್ನಮಯಾದಿ ಪಂಚಕಗಳನ್ನು ನಿರೂಪಣೆ ಮಾಡಿ ಅವುಗಳನ್ನು ತಿಳಿದವರಿಗೆ ಫಲಗಳನ್ನು ನಿರೂಪಣೆ ಮಾಡಲು ಹೇಳಿದ್ದಾರೆ ಎಂದರ್ಥ. 'ಅನನ್ಯಥಾಸಿದ್ಧ' ಎಂದರೆ ಮಯಟ್‌ಶಬ್ದಕ್ಕೆ ವಿಕಾರಾರ್ಥವು ಇರಬೇಕಾದರೆ ಕೇವಲ ವಿಷ್ಣುವಿನಲ್ಲಿಯೇ ಇದೆಯೆಂದು ಅರ್ಥ.

• • • • •

## ಬ್ರಹ್ಮಪದ ಐದೂ ಕಡೆ ಸಮಾನ

**ಭಾಷ್ಯಮ್ – ನ ಚ ಪೃಥಕ್ ಕಲ್ಪನಾ ಯುಕ್ತಾ ।**
**ಸ್ವರೂಪೇ ಚ ಯುಜ್ಯತೇ 'ಪ್ರಚುರಪ್ರಕಾಶೋ ರವಿಃ' ಇತಿವತ್ ॥**

ಅನ್ನಮಯಾದಿ ಐದು ಪ್ರಕರಣಗಳಲ್ಲಿಯೂ ಬ್ರಹ್ಮಶಬ್ದವು ಸಮಾನವಾಗಿರುವಾಗ ಆನಂದಮಯನು ಮಾತ್ರ ಬ್ರಹ್ಮನೆಂದು ಕಲ್ಪಿಸುವುದು ತಪ್ಪಾಗುತ್ತದೆ.

ಬ್ರಹ್ಮನು ಆನಂದಸ್ವರೂಪನೇ ಆಗಿದ್ದರೂ ಆನಂದಪೂರ್ಣ ಎಂದು ಹೇಳುವುದೂ ಸಹ ತಪ್ಪಲ್ಲ. 'ಸೂರ್ಯನು ಪ್ರಕಾಶಮಯ' ಎಂದು ಹೇಳಿದಂತೆ.

ಪ್ರತಿಪದಾರ್ಥ -- ಆನಂದಶಬ್ದದಲ್ಲಿರುವ ಮಯಟ್ ಶಬ್ದಕ್ಕೆ ಮಾತ್ರ ಪ್ರಾಚುರ್ಯ ಎಂಬರ್ಥವನ್ನು ಸ್ವೀಕರಿಸಿ ವಿಷ್ಣುಪರತ್ವವನ್ನು ಒಪ್ಪೋಣ. ಆದರೆ ಅನ್ನಮಯಾದಿ ಶಬ್ದಗಳಲ್ಲಿರುವ ಮಯಟ್‌ಪ್ರತ್ಯಯಕ್ಕೆ ವಿಕಾರ ಎಂಬರ್ಥವಿರುವುದರಿಂದ ಕೋಶಾದಿಗಳೇ ಅನ್ನಮಯಾದಿ ನಾಲ್ಕು ಪದಗಳಿಂದ ಪ್ರತಿಪಾದ್ಯವಾಗಲಿ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಪೃಥಕ್ = ಆನಂದಮಯ ಎಂಬಲ್ಲಿರುವ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯ ಎಂಬರ್ಥವನ್ನು ಅಂಗೀಕರಿಸಿ, ಅನ್ನಮಯ ಇತ್ಯಾದಿಗಳಲ್ಲಿರುವ ಮಯಟ್ ಪ್ರತ್ಯಯಕ್ಕೆ ವಿಕಾರ ಎಂಬರ್ಥವನ್ನು ಕಲ್ಪಿಸುವುದು, ನ ಚ ಯುಕ್ತಾ = ಯೋಗ್ಯವಲ್ಲ.

ಸ್ವರೂಪೇ ಚ = ವಿಷ್ಣುವು ಆನಂದಸ್ವರೂಪನಾದರೂ, ಯುಜ್ಯತೇ = ಆನಂದ-ಪೂರ್ಣನೆಂಬ ಅರ್ಥವು ಯುಕ್ತವೇ ಆಗಿದೆ. ಹೇಗೆಂದರೆ 'ಪ್ರಚುರಪ್ರಕಾಶೋ ರವಿಃ' = 'ಸೂರ್ಯನು ಪ್ರಕಾಶಸ್ವರೂಪನೇ ಆದರೂ ಪ್ರಕಾಶಕ್ಕೆ ಆಶ್ರಯನೂ ಆಗಿದ್ದಾನೆ' ಇತಿವತ್ = ಅದರಂತೆ ಬ್ರಹ್ಮನು ಆನಂದಸ್ವರೂಪನೇ ಆದರೂ ಆನಂದಪೂರ್ಣನೇ ಆಗಬಹುದು.

## ರಾಮಾನುಜರ ವಾದ ತಪ್ಪು

**ತತ್ವಪ್ರಕಾಶಿಕಾ – ಏವಮನ್ನಮಯಾದಿಪಞ್ಚಕಮಪಿ ಬ್ರಹ್ಮ, ತದ್ಗತಮಯಟಾಂ ಪ್ರಾಚುರ್ಯಾರ್ಥತೈವ ಸಾವಕಾಶಸ್ಯ ನಿರವಕಾಶಬ್ರಹ್ಮಶಬ್ದಬಲಾದೇಕಾರ್ಥತ್ವೋಪಪತ್ತಿರಿತ್ಯುಕ್ತಮ್ । ಅನ್ಯೇ ತು 'ಆನನ್ದಮಯ ಏವ ಬ್ರಹ್ಮ, ತದ್ಗತಮಯಟ್ ಏವ ಪ್ರಾಚುರ್ಯಾರ್ಥತಾ' ಇತಿ ಕಲ್ಪಯನ್ತಿ**

**तदयुक्तमित्याह – न चेति ।। न चेयं कल्पना युक्ता । प्रायपठितमयटामर्थद्वैविध्यकल्पनस्य क्लिष्टत्वात् । ततश्चैकस्यैव ब्रह्मत्वं क्लिष्टमिति भावः ।**

ಬೇರೆಯವರು (ರಾಮಾನುಜರು) ಆನಂದಮಯನು ಮಾತ್ರ ಬ್ರಹ್ಮ, ಆನಂದಮಯಪದದಲ್ಲಿರುವ ಮಯಟ್‌ಪ್ರತ್ಯಯಕ್ಕೆ ಮಾತ್ರ ಪ್ರಾಚುರ್ಯ ಎಂಬರ್ಥವನ್ನು ಕಲ್ಪನೆ ಮಾಡುತ್ತಾರೆ. ಅದು ಸರಿಯಲ್ಲವೆಂದು "ನಚ" ಎಂಬುದರಿಂದ ಹೇಳುತ್ತಾರೆ. ಈ ರೀತಿ ಕಲ್ಪನೆ ಮಾಡುವುದು ಸರಿಯಲ್ಲ. ಒಂದೇ ಪ್ರಕರಣದ ಒಂದೇ ರೀತಿಯ ಶಬ್ದಗಳಲ್ಲಿರುವ ಮಯಟ್‌ಪ್ರತ್ಯಯಕ್ಕೆ ಎರಡು ರೀತಿಯ ಕಲ್ಪನೆಯು ಕಷ್ಟಸಾಧ್ಯ. ಆದ್ದರಿಂದ ಆನಂದಮಯನೊಬ್ಬನೇ ಬ್ರಹ್ಮನೆನ್ನುವುದು ಅಸಾಧ್ಯದ ಮಾತು.

## 'ಅನ್ನಮಯೋಽಭ್ಯಾಸಾತ್' ಎಂದೇಕೆ ಸೂತ್ರವಿಲ್ಲ?

**तत्वप्रकाशिका – न च सूत्रविरोधः । यदा खलु ब्रह्मशब्दादानन्दमयस्य ब्रह्मतामसाधयत्सूत्रकारस्दा ब्रह्मशब्दवतामन्नमयादीनां च ब्रह्मतामनुजज्ञे । तथैव द्वितीयं सूत्रं नेयम् । अन्यथाऽऽन्नमयादिषु सन्नपि ब्रह्मशब्दो ब्रह्मतामसाधयन् कथमानन्दमयस्यापि साधयेत् कथं चान्नमयादिषु स्थितो मयट्शब्दः प्राचुर्यार्थतामलभमान अनन्दमये श्रुतो लभेत । न चास्ति तत्र बाधकविशेषो येन द्वैविध्यं कल्प्येत ।**

**अन्नमयादीनामपि तर्हि ब्रह्मतां किं नासूत्रयदिति चेत् । सूत्रस्याल्पाक्षरत्वादेव । आदिमत्त्वेप्यन्नमयादीनामानन्दमयस्य सङ्गतत्वेन ग्रहणम् । यस्त्वन्नमयादीनां पञ्चानामप्यब्रह्मतां ब्रूते स तु सूत्रकारेणैव पूर्वपक्षीकृत इति न तत्पक्षं प्रत्याक्षिपद्भाष्यकारः ।**

ಹೀಗೆ ಹೇಳಿದರೆ ಸೂತ್ರವಿರೋಧ ಬರುವುದಿಲ್ಲವೇ? 'ಆನಂದಮಯೋಽಭ್ಯಾಸಾತ್' ಎಂದು ಸೂತ್ರವು ಆನಂದಮಯನಿಗೆ ಮಾತ್ರ ಬ್ರಹ್ಮತ್ವವನ್ನು ಹೇಳುತ್ತದೆ. ನೀವು ಐದನ್ನೂ ಬ್ರಹ್ಮನೆಂದರೆ ಹೇಗೆ? ಇಲ್ಲ, ಸೂತ್ರಕಾರರು ಆನಂದಮಯನಿಗೆ ಮಾತ್ರ ಬ್ರಹ್ಮತ್ವವನ್ನು ಹೇಳಿಲ್ಲ. ಏಕೆಂದರೆ ಬ್ರಹ್ಮಶಬ್ದವಿರುವುದರಿಂದ ಆನಂದಮಯನು ಬ್ರಹ್ಮ ಎಂದು ಸೂತ್ರಕಾರರು ಹೇಳಿದ್ದಾರೆಂದರೆ ಅದೇ ಬ್ರಹ್ಮಶಬ್ದವಿರುವುದರಿಂದ ಅನ್ನಮಯಾದಿಗಳೂ ಬ್ರಹ್ಮನೇ ಎಂದು ಸೂತ್ರಕಾರರು ಒಪ್ಪಿದಂತಾಗುತ್ತದೆ. ಮತ್ತು ಈ ಐದೂ ಬ್ರಹ್ಮನೇ ಎಂದು ಅಭಿಪ್ರಾಯವನ್ನಿಟ್ಟುಕೊಂಡೇ ದ್ವಿತೀಯಸೂತ್ರವು ಹೊರಟಿದೆ ಎಂದು ಹೇಳಬೇಕು. ಇಲ್ಲದಿದ್ದರೆ ಅನ್ನಮಯಾದಿಗಳಲ್ಲಿರುವ ಬ್ರಹ್ಮಶಬ್ದವು ಅವುಗಳಿಗೆ ಬ್ರಹ್ಮತ್ವವನ್ನು ಸಾಧಿಸುವುದಿಲ್ಲವೆಂದಾದರೆ ಆನಂದಮಯನಿಗೂ ಬ್ರಹ್ಮತ್ವವನ್ನು ಸಾಧಿಸುವುದಿಲ್ಲ. ಹಾಗೆಯೇ

ಅನ್ನಮಯಾದಿಗಳಲ್ಲಿರುವ ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯ ಎಂಬರ್ಥವನ್ನು ಹೇಗೆ ಸ್ವೀಕರಿಸಲು ಸಾಧ್ಯ ? ಏನಾದರೂ ಬಾಧಕವಿದ್ದರೆ ನೀವು ಹೇಳಿದಂತೆ ಎರಡು ರೀತಿ ಕಲ್ಪನೆ ಮಾಡಬಹುದಿತ್ತು.

ಹಾಗಾದರೆ ಸೂತ್ರಕಾರರು ಏಕೆ ಅನ್ನಮಯಾದಿಗಳನ್ನು ಸೂತ್ರದಲ್ಲಿ ಸೇರಿಸಿಲ್ಲ? ಎಂದರೆ ಸೂತ್ರವು ಅಲ್ಪಾಕ್ಷರವುಳ್ಳದ್ದು. ಅನ್ನಮಯಾದಿಗಳನ್ನು ಸೂತ್ರದಲ್ಲಿ ಸೇರಿಸಿ ಹೇಳಿದರೆ ಅಲ್ಪಾಕ್ಷರತ್ವಕ್ಕೆ ಭಂಗ ಬರುತ್ತದೆಂದು ಹಾಗೆ ಹೇಳಿಲ್ಲ. ನೀವು ಹೇಳಿದಂತೆ ಅಲ್ಪಾಕ್ಷರಕ್ಕೋಸ್ಕರವೇ ಅನ್ನಮಯಾದಿಗಳನ್ನು ಸೂತ್ರದಲ್ಲಿ ಸೇರಿಸಿಲ್ಲವೆನ್ನುವುದಾದರೆ, ಮೊದಲಿರುವುದರಿಂದ ಅನ್ನಮಯನನ್ನೇ ಸೂತ್ರದಲ್ಲಿ ಹೇಳಬೇಕಿತ್ತು. ಆನಂದಮಯನನ್ನು ಗ್ರಹಣಮಾಡಿದ್ದೇಕೆ? ಎಂಬ ಪ್ರಶ್ನೆ ಬರುತ್ತದೆ. (ಪ್ರಕೃತ ಬ್ರಹ್ಮನ ಜಿಜ್ಞಾಸೆ ಮಾಡಬೇಕು ಎಂದು ಹೇಳಿದೆ. ಆದರೆ ಆನಂದಮಯನನ್ನು ಕುರಿತು ಹೇಳಿದ ಶ್ಲೋಕದಲ್ಲಿ ಬ್ರಹ್ಮನನ್ನು ಆನಂದಮಯನ ಅವಯವ ಎಂದು ಹೇಳಿದೆ. ಹೀಗಾಗಿ ಅಮುಖ್ಯನಾದ್ದರಿಂದ ಬ್ರಹ್ಮನ ಜಿಜ್ಞಾಸೆ ಮಾಡಬೇಕೋ ಬೇಡವೋ? ಎಂದು ಸಂದೇಹ ಬರುತ್ತದೆ). ಪ್ರಕೃತಕ್ಕೆ ಸಂಬಂಧವಿರುವುದರಿಂದ ಆನಂದಮಯನನ್ನೇ ಸೂತ್ರದಲ್ಲಿ ಗ್ರಹಣಮಾಡಿದ್ದಾರೆಂದು ಉತ್ತರಿಸಬೇಕು.

## ಸೂತ್ರಕಾರರ ಆಂತರ್ಯ

भावदीपः – **न च सूत्रेति ।।** 'आनन्दमयोऽभ्यासात्' इत्येकस्यैव ब्रह्मताया द्वितीये तद्गतमयट एव व्याख्यानस्य तृतीये तस्यैव ब्रह्मत्वे जगच्चेष्टकत्वहेतूक्तेश्च इति भावः । पञ्चकस्यापि ब्रह्मत्वं सूत्रकृद्विवक्षितम् इत्येतत् ज्ञापकोक्त्याऽऽह – **यदेति ।। ब्रह्मशब्दादिति ।।** सूत्रे 'अभ्यासात्' इत्युक्तिस्तु 'एकविषयासकृदुक्तिरूपमुख्याभ्यासाभावेऽपि पञ्चप्रकरण्यामाहत्यासकृदुक्तिमात्रमस्ति इत्यानन्दमयादिविषयत्वेन ब्रह्मशब्दश्रवणात्' इत्यभिप्रायात् पूर्वोक्तदिशा आनन्दमये विज्ञानमये च सोऽस्तीत्यभिप्रायाच्चेति भावः ।

ಆನಂದಮಯೋಭ್ಯಾಸಾತ್ ಎಂಬಲ್ಲಿ ಆನಂದಮಯನಿಗೆ ಮಾತ್ರ ಬ್ರಹ್ಮತ್ವವನ್ನು ಸಮರ್ಥನೆ ಮಾಡಿ, ಎರಡನೇ ಸೂತ್ರದಲ್ಲಿ ಆನಂದಮಯಶಬ್ದದಲ್ಲಿರುವ ಮಯಟ್‌ಪ್ರತ್ಯಯವನ್ನು ವ್ಯಾಖ್ಯಾನಮಾಡಿ, ಮೂರನೆಯ ಸೂತ್ರದಿಂದ ಇದೇ ಆನಂದಮಯನಿಗೆ ಜಗಚ್ಚೇಷ್ಟಕತ್ವ ಇರುವುದರಿಂದ ಬ್ರಹ್ಮತ್ವವನ್ನು ಸಮರ್ಥನೆ ಮಾಡಿರುವುದರಿಂದ ಅನ್ನಮಯಾದಿ ಐದು ರೂಪಗಳಿಂದ ಬ್ರಹ್ಮನನ್ನು ಹೇಳಿದರೆ ಸೂತ್ರಕಾರರ ವಿರೋದ ಬರುವುದಿಲ್ಲವೇ? ಎಂಬ ಶಂಕೆಗೆ ಉತ್ತರವನ್ನು "ನ ಚ ಸೂತ್ರವಿರೋಧಃ" ಇತ್ಯಾದಿಯಾಗಿ ವಿವರಿಸುತ್ತಿದ್ದಾರೆ. 'ಅನ್ನಮಯಾದಿ ಐದು ರೂಪಗಳಿಗೂ ಬ್ರಹ್ಮನೇ ಅರ್ಥ ಎಂಬ ವಿಷಯವು ಸೂತ್ರಕಾರರಿಗೆ ವಿವಕ್ಷಿತವಾಗಿದೆ' ಎಂಬುದನ್ನು "ಯದಾ" ಇತ್ಯಾದಿವಾಕ್ಯದಿಂದ ಜ್ಞಾಪಕವಾದ ಅಂಶಗಳನ್ನು ತಿಳಿಸುವ ಮೂಲಕ ವಿವರಿಸುತ್ತಿದ್ದಾರೆ.

"ಬ್ರಹ್ಮಶಬ್ದಾತ್" ಎಂಬ ವಾಕ್ಯಭಾಗದಲ್ಲಿ ಸೂತ್ರದಲ್ಲಿ 'ಅಭ್ಯಾಸಾತ್' ಎಂದು ಹೇಳಿದ್ದರೂ ಒಂದೇ ವಿಷಯವನ್ನು ಅನೇಕಬಾರಿ ಹೇಳುವ ಮುಖ್ಯಅಭ್ಯಾಸವು ಪ್ರಕೃತಪ್ರಕರಣದಲ್ಲಿ ಕಾಣುವುದಿಲ್ಲ. ಆದರೆ ಐದೂ ಪ್ರಕರಣಗಳನ್ನು ಸೇರಿಸಿ ನೋಡಿದಾಗ ಅನೇಕಬಾರಿ ಹೇಳುವಿಕೆ ಎಂಬ ಅಭ್ಯಾಸವು ಇಲ್ಲಿದೆ. ಆನಂದಮಯಾದಿ ಪ್ರಕರಣಗಳಲ್ಲಿ ಎಲ್ಲಾ ಕಡೆ ಬ್ರಹ್ಮಶಬ್ದದ ಶ್ರವಣವಿರುವುದರಿಂದ ಬ್ರಹ್ಮಶಬ್ದದ ಅಭ್ಯಾಸವು ಇಲ್ಲಿ ಇದ್ದೇ ಇದೆ. ಆದ್ದರಿಂದ ಐದೂ ಪ್ರಕರಣಗಳಲ್ಲಿ ಬ್ರಹ್ಮಶಬ್ದವಿರುವುದರಿಂದಲೂ, ಆನಂದಮಯ ಮತ್ತು ವಿಜ್ಞಾನಮಯನಲ್ಲಿ ಸ್ಪಷ್ಟವಾದ ಅಭ್ಯಾಸವಿರುವುದರಿಂದಲೂ ಅನ್ನಮಯಾದಿ ಆನಂದಮಯಪರ್ಯಂತ ಹೇಳಿದ ಐದು ವ್ಯಕ್ತಿಗಳೂ ಬ್ರಹ್ಮನೇ ಎಂಬ ಅಭಿಪ್ರಾಯವನ್ನು ಇಲ್ಲಿ ಗ್ರಹಿಸಬೇಕು.

### ಸೂತ್ರೋಕ್ತಹೇತು ಆನಂದಮಯನಲ್ಲಷ್ಟೇ ಇರುವುದಿಲ್ಲ

**भावदीपः – नेयमिति ।।** सर्वमयट्परत्वेन नेयमित्यर्थः । **कथमिति ।।** व्यभिचारादिति भावः ।

ननु सूत्रोक्तो मुख्योऽभ्यास आनन्दमयस्थोऽन्यत्रावर्तमानः साधयिष्यतीति चेत्, न । 'विज्ञानं देवाः सर्वे ब्रह्मज्येष्ठमुपासते । विज्ञानं ब्रह्म चेद् वेद' इति विज्ञानमयेऽपि मुख्याभ्यासश्रवणेन तत्र ब्रह्मत्वावश्यम्भावाच्च । ब्रह्मवल्लीभृगुवल्ल्योः श्रुतस्यान्नमयादेश्चैकत्वेन 'येऽन्नं ब्रह्मोपासते । अन्नं ब्रह्मेति व्यजानात्' इति श्रवणेन मिलित्वा प्रतिप्रकरणं द्विर्ब्रह्मशब्दश्रवणस्य चन्द्रिकायां प्रदर्शितत्वेनान्नमयादावपि मुख्यस्य ब्रह्मशब्दाभ्यासस्य सत्वाच्च । एतेन 'उपलक्षणत्वं शब्दानामानन्दमयपूर्विणाम्' इत्यनुभाष्योक्तिरप्युक्तरीत्या सूत्रकृदनुमितिमूलेति सूचितम् । एतेनोपलक्षणत्वपक्षे सौत्राभ्यासादिति हेतुरस्वरस इति कस्यचिद् दूषणमलग्नं बोध्यम् ।

"ನೇಯಮ್" ಎಂಬ ಪದಕ್ಕೆ ಎಲ್ಲಾ ಮಯಟ್ ಪ್ರತ್ಯಯಗಳಿಗೂ ಸರಿಯಾಗುವಂತೆ ಹೊಂದಿಸಿಕೊಳ್ಳಬೇಕು ಎಂದು ಅರ್ಥ. "ಕಥಮ್" ಎಂಬ ವಾಕ್ಯಾಂಶದಿಂದ ಅನ್ನಮಯಾದಿಗಳಲ್ಲಿರುವ ಬ್ರಹ್ಮಶಬ್ದವು ಅನ್ನಮಯಾದಿಗಳಿಗೆ ಬ್ರಹ್ಮತ್ವವನ್ನು ಸಾಧನೆ ಮಾಡದಿದ್ದರೆ ವ್ಯಭಿಚಾರರೂಪ ದೋಷವಿರುವ ಪ್ರಯುಕ್ತ ಆನಂದಮಯನಿಗೂ ಕೂಡ ಬ್ರಹ್ಮತ್ವವನ್ನು ಸಾಧನೆ ಮಾಡದಿರಬೇಕಾದೀತು -- ಎಂದು ಅಭಿಪ್ರಾಯ.

ಸೂತ್ರದಲ್ಲಿ ಹೇಳಿದ ಮುಖ್ಯವಾದ ಅಭ್ಯಾಸವು ಆನಂದಮಯಶಬ್ದದ ಜೊತೆಗಿದ್ದು ಬೇರೆ ಕಡೆ ಇಲ್ಲದಿರುವುದರಿಂದ ಆನಂದಮಯಶಬ್ದಕ್ಕೆ ಮಾತ್ರ ಬ್ರಹ್ಮತ್ವವನ್ನು ಸಾಧಿಸುತ್ತದೆ ಎಂಬ ಶಂಕೆಯೂ ಸರಿಯಲ್ಲ. ಏಕೆಂದರೆ 'ವಿಜ್ಞಾನಂ ದೇವಾಃ ಸರ್ವೇ ಬ್ರಹ್ಮಜ್ಯೇಷ್ಠಮುಪಾಸತೇ । ವಿಜ್ಞಾನಂ ಬ್ರಹ್ಮ ಚೇದ್ ವೇದ' ಎಂಬ

ಶ್ರುತಿವಾಕ್ಯದಲ್ಲಿ ವಿಜ್ಞಾನಮಯನಲ್ಲೂ ಕೂಡ ಮುಖ್ಯಾಭ್ಯಾಸದ ಶ್ರವಣವಿರುವುದರಿಂದ ಅಲ್ಲೂ ಬ್ರಹ್ಮತ್ವವನ್ನು ಒಪ್ಪಿಕೊಳ್ಳಲೇಬೇಕು. ಬ್ರಹ್ಮವಲ್ಲಿ ಮತ್ತು ಭೃಗುವಲ್ಲಿಗಳಲ್ಲಿ ಶ್ರುತವಾದ ಅನ್ನಮಯಾದಿಗಳು ಮತ್ತು ಅನ್ನಾದಿಗಳು ಒಂದೇ ಆಗಿರುವುದರಿಂದ 'ಯೇಽನ್ನಂ ಬ್ರಹ್ಮೋಪಾಸತೇ' 'ಅನ್ನಂ ಬ್ರಹ್ಮೇತಿ ವ್ಯಜಾನಾತ್' ಎಂಬ ಶ್ರುತಿವಾಕ್ಯಗಳ ಶ್ರವಣವಿರುವುದರಿಂದ ಜೊತೆಯಾಗಿ ಪ್ರತಿಯೊಂದು ಪ್ರಕರಣದಲ್ಲೂ ಎರಡು ಬಾರಿ ಬ್ರಹ್ಮಶಬ್ದದ ಶ್ರವಣವಿದೆ. ಈ ಅಂಶವನ್ನು ಚಂದ್ರಿಕಾದಲ್ಲಿ ತೋರಿಸಿಕೊಟ್ಟಿರುವುದರಿಂದ ಅನ್ನಮಯಾದಿಗಳಲ್ಲೂ ಕೂಡ ಮುಖ್ಯವಾದ ಬ್ರಹ್ಮಶಬ್ದಾಭ್ಯಾಸವು ಇದ್ದೇ ಇದೆ. ಇದರಿಂದಾಗಿ'ಉಪಲಕ್ಷಣತ್ವಂ ಶಬ್ದಾನಾಮಾನಂದಮಯಪೂರ್ವಿಣಾ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಲಾದ ವಿಷಯವು ಈಗ ವಿವರಿಸಿದಂತೆ ಸೂತ್ರಕಾರರ ಅನುಮತಿಯಿಂದಲೇ ಹೊರಟಿದೆ ಎಂದು ಸೂಚಿತವಾಗುತ್ತದೆ. ಇದರಿಂದಾಗಿ 'ಉಪಲಕ್ಷಣತ್ವಪಕ್ಷೇ ಸೌತ್ರಾಭ್ಯಾಸಾದಿತಿ ಹೇತುರಸ್ವರಸಃ' (ಸೂತ್ರದಲ್ಲಿ ಹೇಳಿದ ಅಭ್ಯಾಸಾತ್ ಎಂಬ ಹೇತುವು ಅನ್ನಮಯಾದಿಗಳಲ್ಲಿ ಉಪಲಕ್ಷಣತಯಾ ಎಂದು ಒಪ್ಪಿಕೊಂಡರೆ ಹೇತುವೇ ಅಸ್ವರಸವಾಗುತ್ತದೆ) ಎಂದು ಬೇರೆ ಯಾರೋ ಹೇಳಿದ ದೂಷಣೆಯು ಇಲ್ಲಿ ತಗಲುವುದಿಲ್ಲ ಎಂದು ತಿಳಿಯಬೇಕು.

### ಅನುವ್ಯಾಖ್ಯಾನದ ಸಮ್ಮತಿ

भावदीपः – भाष्ये 'अन्नादीनां च' इत्यादिना द्वितीयसूत्रं सर्वमयट्परतया नीतम् । तत्र सूत्रकृद्विवक्षाज्ञापकमाह – **कथं चेति** ।। **न चास्ति तत्रेति** ।। विवृतमेतदुत्तरप्रस्थान इति भावः । अत्रापि किञ्चिद् बाधकमाशङ्क्य निराह – **अन्नमयेति** ।। 'सूत्रस्याल्पाक्षरत्वेन' इत्यनुभाष्योक्तेरिति भावः । **आदिमत्त्वेपीति** ।। 'अल्पाक्षरत्वेपि' इत्यपि ज्ञेयम् । **सङ्गतत्वेनेति** ।। 'ब्रह्मजिज्ञासा कर्तव्येत्युक्तम् इत्यादिना सङ्गतिमत्वेन' इत्यर्थः ।

**आनन्दमयरूपे तु ब्रह्मणः पुच्छतोक्तितः ।**
**समस्ताब्रह्मताप्राप्तेरानन्दमयनाम हि ।।'**

इत्यनुभाष्योक्तेरिति भावः ।

ಭಾಷ್ಯದಲ್ಲಿ ಅನ್ನಾದೀನಾಂ ಚ ಇತ್ಯಾದಿವಾಕ್ಯದಿಂದ ಈ ಎರಡನೇ ಸೂತ್ರವು ಎಲ್ಲಾ ಕಡೆಯಿರುವ ಮಯಟ್‌ಪ್ರತ್ಯಯಪರವಾಗಿ ಹೊಂದಿಸಲ್ಪಟ್ಟಿದೆ.

ಈ ವಿಷಯದಲ್ಲಿ ಸೂತ್ರಕಾರರ ವಿವಕ್ಷೆಯನ್ನು ತಿಳಿಸುವ ಜ್ಞಾಪಕವಿಷಯವನ್ನು "ಕಥಂ ಚ" ಇತ್ಯಾದಿ ವಾಕ್ಯಭಾಗದಿಂದ ತಿಳಿಸುತ್ತಿದ್ದಾರೆ. "ನ ಚಾಸ್ತಿ ತತ್ರ" ಇತ್ಯಾದಿವಾಕ್ಯದಿಂದ ಮುಂದೆ ಈ ವಿಷಯಕ್ಕೆ ಸ್ಪಷ್ಟವಾದ ವಿವರಣೆಯನ್ನು ನೀಡುತ್ತೇವೆ ಎಂಬ ಅಭಿಪ್ರಾಯವನ್ನು ಇಟ್ಟುಕೊಳ್ಳಬೇಕು. "ಅನ್ನಮಯ" ಇತ್ಯಾದಿ-ವಾಕ್ಯದಿಂದ ಇಲ್ಲೂ ಕೂಡ ಒಂದು ಬಾಧಕವನ್ನು ಪ್ರಶ್ನೆಮಾಡಿಕೊಂಡು ಅದನ್ನು ನಿರಾಕರಿಸುತ್ತಿದ್ದಾರೆ. 'ಸೂತ್ರಸ್ಯಾಲ್ಪಾಕ್ಷರತ್ವೇನ' ಎಂದು ಅನುಭಾಷ್ಯದಲ್ಲಿ ಹೇಳಿದಂತೆ ಅನ್ನಮಯಾದಿಗಳನ್ನೂ ಕೂಡ ಬ್ರಹ್ಮ

ಎಂಬುದಾಗಿ ಸಮರ್ಥಿಸಲು ಪ್ರತ್ಯೇಕ ಸೂತ್ರವನ್ನು ಹೇಳಿಲ್ಲ ಎಂದು ಅಭಿಪ್ರಾಯ. ''ಆದಿಮತ್ವೇಪಿ'' ಎಂಬ ಹೇತುವಿನ ಜೊತೆಗೆ 'ಅಲ್ಪಾಕ್ಷರತ್ವೇಪಿ' ಎಂಬ ಅಂಶವನ್ನು ಇಟ್ಟುಕೊಳ್ಳಬೇಕು. ''ಸಂಗತತ್ವೇನ'' ಇತ್ಯಾದಿ ವಾಕ್ಯಭಾಗದಿಂದ ಈ ಅಧಿಕರಣದ ಆರಂಭದಲ್ಲಿ ತಿಳಿಸಿದಂತೆ 'ಬ್ರಹ್ಮಜಿಜ್ಞಾಸಾ ಕರ್ತವ್ಯಾ ಇತ್ಯುಕ್ತಮ್' ಇತ್ಯಾದಿ ವಾಕ್ಯಗಳಿಂದ ಸಮರ್ಥಿತವಾದ ಸಂಗತಿ ಇರುವುದರಿಂದ -- ಎಂದು ಅರ್ಥ.

ಆನಂದಮಯರೂಪೇ ತು ಬ್ರಹ್ಮಣಃ ಪುಚ್ಛತೋಕ್ತಿತಃ।
ಸಮಸ್ತಾಬ್ರಹ್ಮತಾಪ್ರಾಪ್ತೇರಾನಂದಮಯನಾಮ ಹಿ॥

''ಆನಂದಮಯನನ್ನು ಹೇಳುವ ಪ್ರಕರಣದಲ್ಲಿ ಆನಂದಮಯನ ಪುಚ್ಛವನ್ನಾಗಿ ಬ್ರಹ್ಮನನ್ನು ಹೇಳಿರುವುದರಿಂದ ಆನಂದಮಯನೊಂದಿಗೆ ಅನ್ನಮಯಾದಿಗಳೂ ಬ್ರಹ್ಮರಲ್ಲ ಎಂದು ಪ್ರಾಪ್ತವಾಗುವ ಸಂದರ್ಭ ಇರುವುದರಿಂದ ಆನಂದಮಯನಾಮವನ್ನೇ ಮೊದಲಾಗಿ ಸೂತ್ರದಲ್ಲಿ ಸ್ವೀಕರಿಸಿ ಅಲ್ಲಿ ಬ್ರಹ್ಮತ್ವವನ್ನು ಸಮರ್ಥನೆ ಮಾಡುತ್ತಿದ್ದಾರೆ'' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಇಲ್ಲಿ ಸಂಗತಿಯನ್ನು ಇಟ್ಟುಕೊಳ್ಳಬೇಕು.

### ಮಂಗಲಮಯ ಆನಂದಶಬ್ದದಿಂದ ಸಮನ್ವಯಪ್ರಾರಂಭ

भावदीपः – यद्वा, 'तत्रानन्दादयो गुणाः' इत्युक्तदिशा माङ्गलिकतया आदौ वक्तव्यतया सङ्गतत्वेनेत्यर्थः । यद्वा, आप्तकामस्य ब्रह्मणो जन्मादिसूत्रोक्तजगत्-सृष्ट्यादिरयुक्त इति न शङ्क्यम् आनन्दोद्रेकादेव मत्तस्य नृत्तगानादिवदुपपत्तेरिति वक्तुं सङ्गतत्वेनेत्यर्थः ।

यद्वा, 'यतो वाचो निवर्तन्ते अप्राप्य मनसा सह । आनन्दं ब्रह्मणो विद्वान्' इत्यादिपूर्वनयशङ्कितश्रुतीनामपरिच्छिन्नत्वरूपप्राचुर्यादेवावाङ्मनसगोचरत्वम् आनन्दस्य न तु सर्वथेति पूर्वनयेन, तथा भाष्ये वक्ष्यमाणदिशा अन्तराकाशप्राणादिनयैश्च सङ्गतिमत्वेनेत्यर्थः । तथा अवयवत्वविरोधरूपपूर्वपक्ष-युक्तिविशेषेण तद्धेतुव्यपदेशरूपसिद्धान्तयुक्तिविशेषेण च सङ्गतत्वेनेत्यर्थः ।

ಅಥವಾ 'ತತ್ರಾನಂದಾದಯೋ ಗುಣಾಃ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಆನಂದಶಬ್ದವು ಮಾಂಗಲಿಕಶಬ್ದವಾಗಿರುವುದರಿಂದ ಸಮನ್ವಯಕ್ಕೆ ಮಂಗಳಾಚರಣೆಯ ರೂಪವಾಗಿ ಮೊದಲು ಆನಂದಮಯಶಬ್ದವನ್ನು ಸಮನ್ವಯ ಮಾಡಿದ್ದಾರೆ ಎಂಬುದಾಗಿಯೂ ಸಂಗತಿಯನ್ನು ಇಟ್ಟುಕೊಳ್ಳಬಹುದು.

ಅಥವಾ ಆಪ್ತಕಾಮನಾದ ಬ್ರಹ್ಮನಿಗೆ ಜನ್ಮಾದಿಸೂತ್ರದಲ್ಲಿ ಹೇಳಿದ ಜಗತ್ಸೃಷ್ಟ್ಯಾದಿಗಳು ಯಾವುದೇ ಫಲಾಪೇಕ್ಷೆಯಿಲ್ಲದ ಪ್ರಯುಕ್ತ ಹೊಂದಲಾರದು ಎಂಬುದಾಗಿ ಶಂಕಿಸಬಾರದು. ಏಕೆಂದರೆ ಮತ್ತಿನಲ್ಲಿರುವ ವ್ಯಕ್ತಿಯು ಯಾವುದೇ ಪ್ರಯೋಜನ ಇಲ್ಲದಿದ್ದರೂ ನೃತ್ಯಗಾನಾದಿಗಳನ್ನು ಮಾಡುವಂತೆ, ಅತಿಶಯವಾದ ಆನಂದದ ಉದ್ರೇಕವುಳ್ಳವನಾದ್ದರಿಂದಲೇ ಭಗವಂತನು ಜಗತ್ಸೃಷ್ಟ್ಯಾದಿಗಳನ್ನು ಮಾಡುವನು. ಈ

ವಿಷಯವನ್ನು ತಿಳಿಸುವ ಮೂಲಕ ಸಂಗತವಾದುದರಿಂದ ಆನಂದಮಯಶಬ್ದವನ್ನು ಮೊದಲು ಸಮರ್ಥನೆ ಮಾಡಿದ್ದಾರೆ.

ಅಥವಾ 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' 'ಆನಂದಂ ಬ್ರಹ್ಮಣೋ ವಿದ್ವಾನ್' ಇವೇ ಮೊದಲಾದ ಹಿಂದಿನ ಅಧಿಕರಣದಲ್ಲಿ ಶಂಕಿತವಾದ ಶ್ರುತಿಗಳಿಗೆ ಅಪರಿಚ್ಛಿನ್ನತ್ವರೂಪವಾದ ಪ್ರಾಚುರ್ಯ ಇರುವುದರಿಂದಲೇ ಆನಂದವು ವಾಙ್ಮನಸಗೋಚರವಲ್ಲ ಹೊರತು ನೀವು ಶಂಕಿಸುವಂತೆ ಸರ್ವಥಾ ವಾಙ್ಮನಸಗೋಚರನಲ್ಲ ಎಂಬುದು ಸರಿಯಲ್ಲ ಎಂಬುದಾಗಿ ಹಿಂದಿನ ಅಧಿಕರಣದ ಸಂಗತಿ ಇರುವುದರಿಂದ.

ಅಷ್ಟೇ ಅಲ್ಲದೆ ಭಾಷ್ಯದಲ್ಲಿ ಮುಂದೆ ಹೇಳಲಿರುವಂತೆ ಅಂತರಾಕಾಶಪ್ರಾಣಾದಿ ಅಧಿಕರಣಗಳಲ್ಲಿ ಸಂಗತಿ ಇರುವುದರಿಂದ ಆನಂದಮಯಶಬ್ದವನ್ನು ಮೊದಲು ಸಮರ್ಥಿಸಿದ್ದಾರೆ. ಅಷ್ಟೇ ಅಲ್ಲದೆ 'ಬ್ರಹ್ಮನು ಆನಂದಮಯನ ಅವಯವ' ಎಂದು ಸುಧೆಯಲ್ಲಿ ಯಥಾಶ್ರುತವಾಗಿ ಹೇಳಿದಂತೆ ಆನಂದಮಯನು ಬ್ರಹ್ಮನಲ್ಲ ಎಂಬುದಾಗಿ ಪೂರ್ವಪಕ್ಷದ ವಿಶೇಷಯುಕ್ತಿಯಿಂದ ವಿರೋಧವನ್ನು ಪರಿಹರಿಸಲು ಅದಕ್ಕೆ ಅನುಕೂಲವಾದ ಸಿದ್ಧಾಂತಯುಕ್ತಿಯನ್ನು ಹೇಳುವುದಕ್ಕೋಸ್ಕರ ಆನಂದಮಯನ ಶಬ್ದವನ್ನು ಮೊದಲು ಸಮನ್ವಯ ಮಾಡುವುದೇ ಸಂಗತವಾಗಿದೆ.

ಹಾಗೆಯೇ ಅವಯವತ್ವವಿರೋಧರೂಪವಾದ ಪೂರ್ವಪಕ್ಷದ ವಿಶೇಷಯುಕ್ತಿಯಿಂದ, ಹಾಗೂ ತದ್ಧೇತುವ್ಯಪದೇಶರೂಪವಾದ ಸಿದ್ಧಾಂತದ ವಿಶೇಷಯುಕ್ತಿಯಿಂದ ಸಂಗತವಾಗಿರುವುದರಿಂದ ಆನಂದಮಯನಾಮವನ್ನು ಮೊದಲು ಸಮನ್ವಯಮಾಡುತ್ತಿದ್ದಾರೆ ಎಂದು ಅರ್ಥ.

भावदीपः – ''भाष्यकारः'' इत्युक्त्या अनुव्याख्यानकारस्तु –

**'योगमन्नमयाद्यैर्यत् फलत्वेनास्य शंसति ।**
**स्थानद्वयेप्यतः कोशा एत इत्यतिसाहसम् ।।'**

इत्यादिना अन्यत्र प्रत्याक्षिपदिति सूचितम् । तद् विवृतं चन्द्रिकायाम् । तत्वप्रदीपे च ।

ಟೀಕೆಯಲ್ಲಿ ''ಭಾಷ್ಯಕಾರಃ'' ಎಂದು ಹೇಳಿರುವುದರಿಂದ ಅನುವ್ಯಾಖ್ಯಾನಕಾರರು

'ಯೋಗಮನ್ನಮಯಾದ್ಯೈರ್ಯತ್ ಫಲತ್ವೇನಾಸ್ಯ ಶಂಸತಿ ।
ಸ್ಥಾನದ್ವಯೇಪ್ಯತಃ ಕೋಶಾ ಏತ ಇತ್ಯತಿಸಾಹಸಮ್ ।।'

(ಬ್ರಹ್ಮಜ್ಞಾನಿಯಾದವನಿಗೆ ಅನ್ನಮಯಾದಿಗಳ ಪ್ರಾಪ್ತಿಯು ಫಲರೂಪವಾಗಿ ಸಿಗುತ್ತದೆ ಎಂಬುದಾಗಿ ಬ್ರಹ್ಮಾನಂದವಲ್ಲಿ ಮತ್ತು ಭೃಗುವಲ್ಲಿಗಳೆಂಬ ಎರಡೂ ಕಡೆಗಳಲ್ಲಿ ಶ್ರುತಿಯು ಹೇಳುತ್ತಿದೆ. ಹೀಗಿದ್ದರೂ ಕೂಡ ಅನ್ನಮಯಾದಿಗಳು ಕೋಶರೂಪವಾಗಿವೆ ಎಂಬ ವ್ಯಾಖ್ಯಾನವು ಅತ್ಯಂತಸಾಹಸರೂಪವಾಗಿದೆ) ಹೀಗೆ ಬೇರೆ ರೀತಿಯಾಗಿಯೇ ನಿರಾಕರಣೆ ಮಾಡಿದ್ದಾರೆ ಎಂಬುದನ್ನು ಸೂಚಿಸಿದ್ದಾರೆ. ಈ ವಿಷಯವನ್ನು ಚಂದ್ರಿಕಾ ಮತ್ತು ತತ್ವಪ್ರದೀಪದಲ್ಲಿ ವಿವರಿಸಿದ್ದಾರೆ.

**वाक्यार्थमञ्जरी –** समभिव्याहारात् = सहोच्चारात् । सावकाशस्य मयट्पदस्य । अन्ये = रामानुजाः ॥ **आनन्दमय एवेति** ॥ विज्ञानमयो जीवः अन्नमयादित्रयः कोशा इत्येव-शब्दार्थः ॥ **क्लिष्टत्वादिति** ॥ प्रायपाठविरोधादेवेति भावः ।

**सूत्रविरोध इति** ॥ तत्रानन्दमयमात्रस्य ब्रह्मत्वोक्तिविरोधः अनुजज्ञे । ज्ञापयामास। तथैवपञ्चचमयटाम्प्राचुर्यपरत्वेन । अन्यथा पञ्चानामब्रह्मत्वे ॥ **कथमिति** ॥ व्यभिचारादिति भावः । ननु सूत्रकारेणानन्दमयस्य ब्रह्मत्वे ब्रह्मशब्दाभ्यासस्यैव हेतूकृतत्वेन तस्यान्नमयादिष्वभावात् कथं व्यभिचार इति चेत् । ''विज्ञानं देवाः सर्वे ब्रह्मज्येष्ठमुपासते विज्ञानं ब्रह्म चेद्वा'' इति विज्ञानमये ब्रह्मशब्दाभ्याससद्भावात् । तथा ब्रह्मवल्लीभृगुवल्ल्योः श्रुतान्नमयादेश्चैकत्वेन 'येन्नं ब्रह्मोपासते अन्नं ब्रह्मेति व्यजानात्' इत्यादिश्रवणेन मिलित्वा प्रतिप्रकरणं द्विब्रह्मशब्दश्रवणस्य चन्द्रिकायां प्रदर्शितत्वेन अन्नमयादावपि ब्रह्मशब्दाभ्याससद्भावात् ।

यत्तु सुधायां अन्नमयादिषु असकृदुक्तिमातृरूपा मुख्याभ्यासप्रदर्शनं तदेकप्रकरण्या-मेवाभ्यासप्रदर्शनायेत्यदोषः ।

यद्वा सूत्रकृतोऽपि ब्रह्मशब्द एव हेतुत्वेनाभिमतः । तस्य विष्ण्वेकनिष्ठत्वेन व्यभिचारा-भावात् । अभ्यासोक्तिश्च यदा श्रुतित एव विष्णुत्वनिश्चयस्तदाभ्यासरूपतात्पर्यलिङ्गात् सुतरामित्यभिप्रायइति न कोपि दोषः । तत्र पञ्चानामपि ब्रह्मत्वे पञ्चमयटां प्राचुर्यार्थत्वेच बाधकं शङ्कते – **अन्नमयादीनामपीति** ॥ तर्हि अन्नमयोऽभ्यासादिति वाच्यं प्रथमाति-क्रमे कारणाभावादित्यत आह – **आदिमत्वेपीति** ॥ अल्पाक्षरत्वेपीत्यपि ज्ञातव्यम् ।

**सङ्गतत्वेनेति** ॥ जिज्ञास्यब्रह्मण आनन्दमयावयवत्वेनोक्तत्वान्न तस्य जिज्ञास्यत्वमिति शङ्कापराकरणायाऽनन्दमयस्य विष्णुत्वसमर्थनस्य पूर्वसङ्गतत्वमित्यर्थः । रामानुजमतवन्मायिमतं कुतो न निराक्रियते? इत्यत आह – **यस्त्विति** ॥ **पूर्वपक्षीकृतः** ॥ पूर्वपक्षित्वेन कृतः । निराकृत इति यावत् । आनन्दमयस्य ब्रह्मत्वं साधयता पञ्चानामब्रह्मत्वपक्षनिराकरणादिति भावः । प्रत्याक्षिपत् = निराचक्रे ।

'ಸಮಭಿವ್ಯಾಹಾರಾತ್' ಜೊತೆಯಲ್ಲಿಯೇ ಉಚ್ಚಾರ ಮಾಡಿರುವುದರಿಂದ ಎಂದರ್ಥ. 'ಸಾವಕಾಶಸ್ಯ' ಎಂದರೆ ಮಯಟ್‌ಶಬ್ದಕ್ಕೆ ಎಂದರ್ಥ. 'ಅನ್ಯೇ' ಎಂದರೆ ರಾಮಾನುಜರು ಎಂದು. 'ಆನಂದಮಯ ಏವ' ಎಂದರೆ ವಿಜ್ಞಾನಮಯನು ಜೀವ ಅನ್ನಮಯವೇ ಮೊದಲಾದ ಮೂರು ಕೋಶಗಳು ಎಂದು ಏವಕಾರದ ಅರ್ಥ. 'ಕ್ಲಿಷ್ಟತ್ವಾತ್' ಎಂದರೆ ಪ್ರಾಯಪಾಠದ ವಿರೋಧ-ವಿರುವುದರಿಂದಲೇ ಎಂದು ಭಾವ.

'ಸೂತ್ರವಿರೋಧಃ' ಎಂದರೆ ಸೂತ್ರದಲ್ಲಿ ಆನಂದಮಯನಿಗೆ ಮಾತ್ರ ಬ್ರಹ್ಮತ್ವವನ್ನು ಸೂತ್ರಕಾರರು ಹೇಳಿರುವುದರಿಂದ ವಿರೋಧ ಬರುತ್ತದಲ್ಲವೇ? 'ಅನುಜಜ್ಞೇ' ಎಂದರೆ ತಿಳಿಸಿಕೊಡಬೇಕು. 'ತಥೈವ' ಐದೂ ಮಯಟ್‌ಶಬ್ದಗಳು ಪ್ರಾಚುರ್ಯಾರ್ಥ ಪರವಾಗಿರುವುದರಿಂದ ಎಂದು ಭಾವ. 'ಅನ್ಯಥಾ' ಎಂದರೆ 'ಐದೂ ಮಯಟ್ ಶಬ್ದಗಳಿಂದ ವಾಚ್ಯನಾದವರು ಬ್ರಹ್ಮರಲ್ಲ ಎಂದು ಹೇಳಿದರೆ' ಎಂದು ಭಾವ. 'ಕಥಮ್' ಎಂದು ವ್ಯಭಿಚಾರವನ್ನು ಸೂಚಿಸಿದ್ದಾರೆ.

ಹಾಗಾದರೆ ಸೂತ್ರಕಾರರಿಂದ ಆನಂದಮಯನಿಗೆ ಬ್ರಹ್ಮತ್ವವನ್ನು ಸಾಧನೆ ಮಾಡಲು ಬ್ರಹ್ಮಶಬ್ದದ ಅಭ್ಯಾಸವನ್ನೇ ಕಾರಣವನ್ನಾಗಿ ಹೇಳಿದ್ದಾರೆ. ಆದರೆ ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದದ ಅಭ್ಯಾಸವಿಲ್ಲದಿರುವುದರಿಂದ ಹೇಗೆ ವ್ಯಭಿಚಾರ ಬರುತ್ತದೆ? ಎಂಬ ಪ್ರಶ್ನೆಗೆ 'ವಿಜ್ಞಾನಂ ದೇವಾಃ ಸರ್ವೇ ಬ್ರಹ್ಮಜ್ಯೇಷ್ಠಮುಪಾಸತೇ ವಿಜ್ಞಾನಂ ಬ್ರಹ್ಮ ಚೇದ್ವೇದ' ಎಂದು ವಿಜ್ಞಾನಮಯನಲ್ಲಿ ಬ್ರಹ್ಮಶಬ್ದದ ಅಭ್ಯಾಸ ಇದೆ. ಆದ್ದರಿಂದ ವ್ಯಭಿಚಾರ ಬರುತ್ತದೆ. ಅದರಂತೆ ಬ್ರಹ್ಮವಲ್ಲಿ ಭೃಗುವಲ್ಲಿಗಳಲ್ಲಿ ಅನ್ನಮಯಾದಿಗಳಲ್ಲಿ ಕೇಳಿಬರುವ 'ಯೇಽನ್ನಂ ಬ್ರಹ್ಮೋಪಾಸತೇ' 'ಅನ್ನಂ ಬ್ರಹ್ಮೇತಿ ವ್ಯಜಾನಾತ್' ಇತ್ಯಾದಿ ಮಂತ್ರಗಳಲ್ಲಿ ಅನೇಕಬಾರಿ ಬ್ರಹ್ಮಶಬ್ದಗಳ ಶ್ರವಣವನ್ನು ಚಂದ್ರಿಕೆಯಲ್ಲಿ ತೋರಿಸಿರುವುದರಿಂದ ಅನ್ನಮಯಾದಿಗಳಲ್ಲಿಯೂ ಸಹ ಬ್ರಹ್ಮಶಬ್ದದ ಅಭ್ಯಾಸವಿರುವುದು ಕಂಡುಬರುತ್ತದೆ. ಸುಧೆಯಲ್ಲಿ ಮತ್ತೊಂದು ರೀತಿಯಲ್ಲಿ ಪರಿಹಾರ ಹೇಳಿದ್ದಾರೆ. ಅನ್ನಮಯಾದಿಗಳಲ್ಲಿಯೂ ಅನೇಕ ಬಾರಿ ಕೇಳಿಬರುತ್ತದೆ. ಆದರೆ ಆನಂದಮಯಪ್ರಕರಣದಲ್ಲಿ ಮಾತ್ರ ಮುಖ್ಯಾಭ್ಯಾಸವನ್ನು ಪ್ರದರ್ಶನ ಇರುವುದರಿಂದ ತಪ್ಪಿಲ್ಲ. ಅಥವಾ ಸೂತ್ರಕಾರರಿಗೂ ಸಹ ಬ್ರಹ್ಮಶಬ್ದವೇ ಕಾರಣವೆಂಬುದು ಅಭಿಮತ. ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಮಾತ್ರ ಮುಖ್ಯವಾಗಿ ಇರುವುದರಿಂದ ಯಾವ ವ್ಯಭಿಚಾರವೂ ಇಲ್ಲ.

ಪ್ರಕರಣದಲ್ಲಿರುವ ಐವರೂ ಬ್ರಹ್ಮರಾದರೆ ಐದುಮಯಟ್‌ಪ್ರತ್ಯಯಗಳಿಗೆ ಪ್ರಾಚುರ್ಯಾರ್ಥವನ್ನು ಹೇಳಿದರೆ ಬಾಧಕವನ್ನು 'ಅನ್ನಮಯಾದೀನಾಮಪಿ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಮಾಡುತ್ತಿದ್ದಾರೆ. ಒಂದು ವೇಳೆ ಅನ್ನಮಯಾದಿಗಳು ಬ್ರಹ್ಮರಾದರೆ 'ಅನ್ನಮಯೋಽಭ್ಯಾಸಾತ್' ಎಂದು `ಹೇಳಬೇಕಾಗಿತ್ತು. ಮೊದಲನೆಯದಾದ ಅನ್ನಮಯನನ್ನು ಅತಿಕ್ರಮಿಸುವುದಕ್ಕೆ ಕಾರಣ-ವಿಲ್ಲವಲ್ಲ? ಎಂದು ಪ್ರಶ್ನೆ ಮಾಡಿದರೆ 'ಆದಿಮತ್ವೇಪಿ' ಎಂದು ಉತ್ತರ ಹೇಳಿದ್ದಾರೆ. ಅಲ್ಲದೆ ಸೂತ್ರಕ್ಕೆ ಅಲ್ಪಾಕ್ಷರತ್ವ ಇರುವುದರಿಂದ ಆ ಎಲ್ಲಾ ರೂಪಗಳನ್ನು ಇಲ್ಲಿ ಹೇಳಿಲ್ಲ ಎಂದು ತಿಳಿಯಬೇಕು. 'ಸಂಗತತ್ವೇನ' ಎಂದು ಇದೆ. ಇದರ ಅಭಿಪ್ರಾಯ ಜಿಜ್ಞಾಸ್ಯನಾದ ಬ್ರಹ್ಮನು ಆನಂದಮಯನ ಅವಯವವೆಂದು ಕೇಳಿಬಂದಿದೆ. ಆದ್ದರಿಂದ ಬ್ರಹ್ಮನು ಜಿಜ್ಞಾಸ್ಯನಲ್ಲ ಎಂಬ ಶಂಕಾವನ್ನು ನಿರಾಕರಣೆ ಮಾಡಲು ಆನಂದಮಯನಿಗೆ ವಿಷ್ಣುತ್ವ ಸಮರ್ಥನೆ ಮಾಡಲು ಆನಂದಮಯನನ್ನೇ ಮೊದಲು ಗ್ರಹಣ ಮಾಡಿದ್ದಾರೆ ಎಂದು ಅರ್ಥ.

ರಾಮಾನುಜರ ಮತದಂತೆ ಮಾಯಾವಾದಿಗಳ ಮತವನ್ನು ಭಾಷ್ಯಕಾರರು ಏಕೆ ನಿರಾಕರಣೆ ಮಾಡಿಲ್ಲ? ಎಂಬ ಪ್ರಶ್ನೆಗೆ 'ಯಸ್ತು' ಎಂಬ ವಾಕ್ಯದಿಂದ ಉತ್ತರ ಹೇಳಿದ್ದಾರೆ. 'ಪೂರ್ವಪಕ್ಷೀಕೃತಃ' ಎಂದರೆ ಮಾಯಾವಾದಿಗಳ ಮತವನ್ನೇ ಸೂತ್ರಕಾರರು ಪೂರ್ವಪಕ್ಷವನ್ನಾಗಿ ಮಾಡಿದ್ದಾರೆ ಎಂದರ್ಥ. ಅಂದರೆ ಸೂತ್ರಕಾರರಿಂದಲೇ ನಿರಾಕರಣೆ ಮಾಡಲ್ಪಟ್ಟಿದೆ ಎಂದು ತಿಳಿಯಬೇಕು. ಆನಂದಮಯನಿಗೆ ಬ್ರಹ್ಮತ್ವವನ್ನು ಸಾಧನೆ ಮಾಡುವುದರಿಂದಲೇ ಐದೂ ಪದಾರ್ಥಗಳು ಬ್ರಹ್ಮನಲ್ಲವೆಂಬ ಪಕ್ಷವನ್ನು ನಿರಾಕರಣೆ ಮಾಡಿದಂತಾಯಿತು ಎಂದು ಭಾವ. 'ಪ್ರತ್ಯಾಕ್ಷಿಪತ್' ಎಂದರೆ 'ನಿರಾಕರಣೆ ಮಾಡಿದ್ದಾರೆ' ಎಂದರ್ಥ.

## ಆನಂದಪ್ರಚುರ ಎಂದು ಒಪ್ಪದವರ ನಿರಾಕರಣೆ

**तत्वप्रकाशिका – नन्वानन्दादिस्वरूपस्य ब्रह्मणः कथं प्रचुरानन्दत्वादिकं 'घृतप्रचुर ओदनः' इत्यादौ भेद एव प्रयोगात् इत्यत आह – स्वरूपे चेति ।। यथा प्रकाशस्वरूपेऽपि रविबिम्बे विशेषेण 'प्रचुरप्रकाशो रविः' इति व्यपदेशः, तथाऽऽनन्दादिरूपेपि हरौ विशेषेण तद्व्यपदेशो युज्यत इत्यर्थः ।।१३।।**

ಮತ್ತೆ ಕೆಲವರು ಬ್ರಹ್ಮನು ಆನಂದಸ್ವರೂಪನೇ ಆಗಿದ್ದಾನೆ. ಆದ್ದರಿಂದ ಆನಂದಪ್ರಚುರ ಎನ್ನುವುದು ಸರಿಯಲ್ಲ. ಲೋಕದಲ್ಲಿ 'ಘೃತಪ್ರಚುರಃ ಓದನಃ' ಎಂದರೆ ಘೃತಕ್ಕೂ ಓದನಕ್ಕೂ(ಅನ್ನಕ್ಕೂ) ಭೇದವಿರುತ್ತದೆ. ಹೀಗೆ ಈ ರೀತಿ ಎಲ್ಲೇ ಪ್ರಯೋಗಿಸಿದರೂ ಆ ಎರಡು ವಸ್ತುಗಳಿಗೆ ಭೇದವಿರಲೇಬೇಕು. ಭೇದವಿದ್ದಲ್ಲಿ ಮಾತ್ರ ಹೀಗೆ ಪ್ರಯೋಗಿಸುತ್ತಾರೆ. ಇಲ್ಲಿ ಆನಂದಕ್ಕೂ ಬ್ರಹ್ಮನಿಗೂ ಭೇದವಿಲ್ಲದ್ದರಿಂದ ಹೇಗೆ ಹೇಳುತ್ತೀರಿ? ಎಂದರೆ "ಸ್ವರೂಪೇ ಚ" ಎನ್ನುವುದರಿಂದ ಉತ್ತರಿಸುತ್ತಿದ್ದಾರೆ. ಪ್ರಕಾಶಸ್ವರೂಪನಾದ ಸೂರ್ಯನಲ್ಲಿ ವಿಶೇಷಬಲದಿಂದ 'ಪ್ರಚುರಪ್ರಕಾಶೋ ರವಿಃ' (ಬಹಳ ಪ್ರಕಾಶವುಳ್ಳವನು ಸೂರ್ಯ) ಎಂದು ಹೇಗೆ ವ್ಯವಹರಿಸುತ್ತಾರೋ ಹಾಗೆ ಆನಂದಸ್ವರೂಪನಾದ ಬ್ರಹ್ಮನಲ್ಲಿಯೂ ವಿಶೇಷದ ಬಲದಿಂದ 'ಪ್ರಚುರಾನಂದವುಳ್ಳವನು' ಎಂದು ಹೇಳುವುದು ಕೂಡುತ್ತದೆ.

### ವಿಶೇಷದ ಬಗ್ಗೆ ಎಲ್ಲಿ ಹೇಳಿದ್ದಾರೆ

भावदीपः – **यथा प्रकाशेति** ।। एतत् तृतीये 'उभयव्यपदेशात्त्वहिकुण्डलवत्' इति नये प्रकाशाश्रयवद्वा तेजस्त्वादिति गुणसूत्रे व्युत्पादयिष्यमाणमिह शिष्यहितायोच्यत इति भावः । **विशेषेणेति** ।। 'विशिष्यते अयं गुणोऽयं गुणि' इत्यादिरूपेण वस्तु येन स विशेषो वस्तूनां तादृशस्वरूपसामर्थ्यं तेनेत्यर्थः । यथोक्तम् – 'अभिन्नेऽपि विशेषोऽयं बलादापतति ह्यतः' इति जन्मादिसूत्रानुव्याख्यानसुधायाम् । 'विशेषो नाम शक्तिविशेषोऽङ्गीकरणीयः' इति भेदहीनेऽपि वस्युन्यस्ति कश्चिद् विशेषः' इति च । तथा 'गुणक्रियादयो विष्णोः स्वरूपं नान्यदिष्यते' इत्यादितृतीयपरिच्छेदस्थतत्त्वनिर्णयवाक्यस्य टीकायामपि 'विशेषो नाम कश्चिद् वस्तुनः शक्तिः' इति । समर्थितश्चायं विशेषोऽनुव्याख्यानादौ तत्र तत्र । तद्विवरणं चोपाधिखण्डनभावप्रकाशिकायां व्यक्तम् ।।१३।।

"ಯಥಾಪ್ರಕಾಶ" ಇತ್ಯಾದಿವಾಕ್ಯದಿಂದ ಹೇಳುತ್ತಿರುವ ವಿಷಯವು ತೃತೀಯಾಧ್ಯಾಯದಲ್ಲಿ 'ಉಭಯವ್ಯಪದೇಶಾತ್ ಅಹಿಕುಂಡಲಾದಿವತ್' ಎಂಬ ಅಧಿಕರಣದಲ್ಲಿ 'ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್'

ಎಂಬ ಗುಣಸೂತ್ರದಲ್ಲಿ ಹೇಳಬೇಕಾದ ವಿಷಯವಾಗಿದ್ದರೂ ಶಿಷ್ಯರ ಹಿತಕ್ಕಾಗಿ ಇಲ್ಲಿ ಹೇಳುತ್ತಿದ್ದಾರೆ ಎಂದು ಅಭಿಪ್ರಾಯವು. ''ವಿಶೇಷೇಣ'' ಇತ್ಯಾದಿವಾಕ್ಯಭಾಗಕ್ಕೆ ''ಪ್ರತಿಯೊಂದು ವಸ್ತುವು ಯಾವುದರಿಂದ ಇದು ಗುಣ ಅಥವಾ ಇದು ಗುಣಿ ಎಂಬುದಾಗಿ ವಿಭಾಗವನ್ನು ಹೊಂದುತ್ತದೋ, ಅದನ್ನು ವಿಶೇಷವೆಂದು ಕರೆಯುತ್ತಾರೆ. ಅದು ವಸ್ತುಗಳ ಸ್ವಾಭಾವಿಕವಾದ ಸ್ವರೂಪಸಾಮರ್ಥ್ಯವೇ ಆಗಿದೆ''. ಅಂತಹ ವಿಶೇಷದಿಂದ -- ಎಂದು ಅರ್ಥ. ಈ ವಿಷಯವನ್ನು ಜನ್ಮಾದಿಸೂತ್ರ ಅನುವ್ಯಾಖ್ಯಾನ ಮತ್ತು ಸುಧಾಭಾಗದಲ್ಲಿ 'ಅಭಿನ್ನೇಪಿ ವಿಶೇಷೋಽಯಂ ಬಲಾದಾಪತತಿ ಹ್ಯತಃ' (ಬ್ರಹ್ಮನ ಸ್ವರೂಪಗಳಲ್ಲಿ ಪರಸ್ಪರ ಅಭೇದವಿದ್ದರೂ ಭೇದಕಾರ್ಯಕಾರಿಯಾದ ವಿಶೇಷವನ್ನು ವಾದಿಗಳೂ ಕೂಡ ಒಪ್ಪಲೇ ಬೇಕು.) ಎಂಬುದಾಗಿ ವಿವರಿಸಿದ್ದಾರೆ. ಅಲ್ಲದೆ 'ವಿಶೇಷವೆಂಬ ಶಕ್ತಿವಿಶೇಷವನ್ನು ಅಂಗೀಕರಿಸಬೇಕು' ಎಂಬುದಾಗಿಯೂ ಭೇದಹೀನವಾದ ವಸ್ತುವಿನಲ್ಲಿಯೂ ಭೇದಕಾರ್ಯಕಾರಿಯಾಗಿ ಒಂದು ವಿಶೇಷವಿದೆ ಎಂಬುದಾಗಿಯೂ ಸುಧಾದಲ್ಲಿ ವಿವರಿಸಿದ್ದಾರೆ. ಅಷ್ಟೇ ಅಲ್ಲದೆ ತತ್ತ್ವನಿರ್ಣಯ ತೃತೀಯಪರಿಚ್ಛೇದದಲ್ಲಿ 'ಗುಣಕ್ರಿಯಾದಯೋ ವಿಷ್ಣೋಃ ಸ್ವರೂಪಂ ನಾನ್ಯದಿಷ್ಯತೇ' ಎಂಬ ವಾಕ್ಯದ ಟೀಕಾಭಾಗದಲ್ಲಿ ವಿಶೇಷವೆಂದರೆ ವಸ್ತುವಿನ ಯಾವುದೋ ಒಂದು ಶಕ್ತಿ ಎಂಬ ರೀತಿಯಲ್ಲಿ ವಿವರಿಸಿದ್ದಾರೆ. ಈ ವಿಶೇಷವನ್ನು ಅನುವ್ಯಾಖ್ಯಾನಾದಿಗಳಲ್ಲಿ ಅಲ್ಲಲ್ಲಿ ಸಮರ್ಥನೆ ಮಾಡಿದ್ದಾರೆ. ಅದರ ವಿವರಣೆಯನ್ನು ಉಪಾಧಿಖಂಡನದ ಭಾವಪ್ರಕಾಶಿಕೆಯಲ್ಲಿ ಸ್ಪಷ್ಟವಾಗಿ ತೋರಿಸಲಾಗಿದೆ.

**वाक्यार्थमञ्जरी –** प्रयोगात् विशेषणविशेष्यभावव्यवहारात् । यद्वा भिन्ने विशेषणे प्रचुरशब्दप्रयोगादिति ॥ **विशेषणेति** ॥ विविच्यते अयं गुणः अयं गुणीत्यादिरूपेण वस्तु येन स विशेषः वस्तुनः स्वरूपसामर्थ्यं तेनेत्यर्थः । विशेषो नाम काचन वस्तुनः शक्तिरिति तत्वनिर्णयटीकोक्तेः ॥

'ಪ್ರಯೋಗಾತ್' ಎಂದರೆ ವಿಶೇಷಣವಿಶೇಷ್ಯಭಾವದಿಂದ ವ್ಯವಹಾರ ಇರುವುದರಿಂದ ಎಂದರ್ಥ. ಅಥವಾ ಭಿನ್ನವಾದ ವಿಶೇಷಣದಲ್ಲಿ ಪ್ರಚುರಶಬ್ದ ಪ್ರಯೋಗ ಕಂಡುಬಂದಿರುವುದರಿಂದ ಎಂದರ್ಥ.

ವಿಶೇಷ ಎಂದರೆ ಒಂದು ವಸ್ತುವಿನ ಶಕ್ತಿಯೆಂದು ತತ್ವನಿರ್ಣಯಟೀಕಾದಲ್ಲಿ ಹೇಳಿದ್ದಾರೆ. ಆದ್ದರಿಂದ ವಿಶೇಷಶಬ್ದಕ್ಕೆ ವಸ್ತುವಿನ ಸ್ವರೂಪಸಾಮರ್ಥ್ಯ ಅದರಿಂದ ಎಂಬರ್ಥವನ್ನು ತಿಳಿಯಬೇಕು.

## श्रीपद्मनाभतीर्थविरचितसत्तर्कदीपावळिः

### ॐ विकारशब्दान्नेति चेन्न प्राचुर्यात् ॐ ॥ १३ ॥

उक्तार्थमाक्षिप्य समादधत्सूत्रमवतार्य व्याचष्टे – **विकारशब्दादित्यादिना** । ननु मयटो विकारार्थत्वादानन्दमयशब्दो विकारात्मिकायां प्रकृतौ विकाराभिमानिषु ब्रह्मादिजीवेषु च युज्यते । नत्वविकारेण परमात्मनि इति चेत् मैवम् ।

आनन्दादिविकारित्वाभावेपि परमात्मन आनन्दप्रचुरत्वसद्भावात् तद्विषयतया आनन्दमयशब्दोपपत्तेः । 'अन्नमयो यज्ञः' इत्यादौ प्राचुर्येऽपि मयट्प्रयोग-दर्शनात् । न चान्नमयादिषु मयटो विकारार्थत्वेन तत्सन्निधिपठितानन्दमयशब्देपि तस्य विकारार्थमेवेति वाच्यम् । अन्नमयादिपदेष्वपि मयटः प्राचुर्यार्थत्वाद्युपगमेन विकारार्थत्वाभावत् । न चाप्रकृतविग्रहे परमात्मन्यन्नादिप्राचुर्यं विरुद्धमिति वाच्यम् । 'अद्यतेऽत्ति च भूतानि । तस्मादन्नं तदुच्यते' इति श्रुत्या अद्यत्वात्तृत्व-योस्तत्रान्नशब्दार्थत्वेनोक्तत्वात् प्राचुर्यस्य विष्णावविरोधात् । एवं प्राणादि-प्राचुर्यमपि तस्मिन् युज्यते । निखिलभूतात्तृत्वेन परमात्मन्यवगते तस्मिन्नद्यत्वं नाम न भक्ष्यत्वं किन्तूपजीव्यत्वमेवेत्यवगन्तव्यम् । तत्र 'ओषधीभ्योऽन्नम्' इति प्राकृतान्नपरित्यागेन परमात्मविषयत्वस्यावश्यम्भावित्वात् अन्नमयादीन् प्रत्यु-दाहृतश्लोकेषु तद्विषयत्वेन 'येऽन्नं ब्रह्मोपासते ये प्राणं ब्रह्मोपासते आनन्दं ब्रह्मणो विद्वान् । विज्ञानं ब्रह्म चेद्वेद । अस्ति ब्रह्मेति चेद्वेद' इति ब्रह्मशब्दश्रवणाच्च अन्नमयादीनां न विकारित्वम् । एकस्यैव ब्रह्मणो बहुभवनसामर्थ्यादन्नमयादिपञ्च-रूपत्वाविरोधः । यत्तु कल्पनम् 'अन्नमयादिषु चतुर्षु मयटो विकारार्थत्वमानन्दमय एव तु प्राचुर्यार्थकत्वम्' इति तद्युक्तिशून्यमित्युपेक्षणीयम् । प्रकाशरूपस्य रवेः प्रकाशप्राचुर्यवदानन्दादिरूपस्य हरेरानन्दप्राचुर्यं न विरुध्यते । इतोऽप्यत्रा-नन्दमयपदोक्तः आनन्दप्रचुर एव परमात्मा ।

ಹಿಂದಿನ ಸೂತ್ರದಲ್ಲಿ ಹೇಳಿದ ವಿಷಯವನ್ನು ಆಕ್ಷೇಪಮಾಡಿ ಸಮಾಧಾನವನ್ನು ಮಾಡುವ ಸೂತ್ರಕ್ಕೆ ಅವತರಣಿಕೆಯನ್ನು ಕೊಟ್ಟು ವ್ಯಾಖ್ಯಾನ ಮಾಡುತ್ತಾರೆ "ವಿಕಾರಶಬ್ದಾತ್" ಮುಂತಾದುದರಿಂದ. 'ಮಯಟ್'ಪ್ರತ್ಯಯಕ್ಕೆ ವಿಕಾರ ಎಂಬ ಅರ್ಥವಿರುವುದರಿಂದ ಮಯಟ್ ಪ್ರತ್ಯಯವುಳ್ಳ ಆನಂದಮಯಶಬ್ದವು ವಿಕಾರಾತ್ಮಕವಾದ ಜಡಪ್ರಕೃತಿಯನ್ನು ಹೇಳುತ್ತದೆ ಮತ್ತು ವಿಕಾರಾಭಿಮಾನಿಗಳಾದ ಬ್ರಹ್ಮಾದಿ ಜೀವರನ್ನು ಹೇಳುತ್ತದೆ ಎನ್ನುವುದು ಯುಕ್ತವಾಗುತ್ತದೆ; ಹೊರತು ಅವಿಕಾರಿಯಾದ್ದರಿಂದ ಪರಮಾತ್ಮನನ್ನು ಹೇಳುತ್ತದೆ ಎನ್ನುವುದು ಯುಕ್ತವಾಗುವುದಿಲ್ಲ ಎಂದರೆ, ಇದು ಸರಿಯಲ್ಲ. ಭಗವಂತನು ಆನಂದಾದಿ ವಿಕಾರರಹಿತನಾದರೂ ಆನಂದಪ್ರಚುರನಾದ್ದರಿಂದ ಆನಂದಮಯ ಶಬ್ದವಾಚ್ಯನಾಗಬಹುದು. 'ಅನ್ನಮಯಃ ಯಜ್ಞಃ' ಮುಂತಾದ ಕಡೆಗಳಲ್ಲಿ ಪ್ರಾಚುರ್ಯಾರ್ಥದಲ್ಲಿಯೂ 'ಮಯಟ್'ಪ್ರತ್ಯಯವನ್ನು ಬಳಸುವುದು ಕಂಡಿದೆ. ಅನ್ನಮಯಾದಿ ಶಬ್ದಗಳಲ್ಲಿರುವ 'ಮಯಟ್'ಪ್ರತ್ಯಯಕ್ಕೆ ವಿಕಾರ ಎಂದು ಅರ್ಥವಿರುವುದರಿಂದ ಆ ಶಬ್ದಗಳ

ಹತ್ತಿರದಲ್ಲಿ ಪ್ರಯೋಗಿಸಿರುವ ಆನಂದಮಯ ಶಬ್ದದಲ್ಲಿರುವ 'ಮಯಟ್'ಪ್ರತ್ಯಯಕ್ಕೂ ವಿಕಾರ ಎಂದೇ ಅರ್ಥವನ್ನು ಹೇಳಬೇಕಲ್ಲವೇ ಎಂದರೆ, ಹಾಗಲ್ಲ ನಾವು ಅನ್ನಮಯಾದಿ ಶಬ್ದದಲ್ಲಿರುವ 'ಮಯಟ್'ಪ್ರತ್ಯಯಕ್ಕೂ ಪ್ರಾಚುರ್ಯವೆಂದೇ ಅರ್ಥವನ್ನು ಒಪ್ಪಿದ್ದೇವೆಯಾದ್ದರಿಂದ 'ವಿಕಾರ' ಎಂಬ ಅರ್ಥವನ್ನು ಹೇಳುವುದಿಲ್ಲ. ಭಗವಂತ ಅಪ್ರಾಕೃತ ಶರೀರವುಳ್ಳವನು; ಹಾಗಾಗಿ ಅವನು ಅನ್ನಪ್ರಚುರ ಎಂದರೆ ವಿರೋಧ ಬರುತ್ತದೆ (ಅಪ್ರಾಕೃತನಿಗೆ ಪ್ರಾಕೃತ ಅನ್ನದ ಅಪೇಕ್ಷೆ ಇಲ್ಲವಾದ್ದರಿಂದ) ಎನ್ನಬಾರದು 'ಅದ್ಯತೇ ಅತ್ತಿಚ ಭೂತಾನಿ ತಸ್ಮಾದನ್ನಂ ತದುಚ್ಯತೇ'' ಎಂದು ಶ್ರುತಿಯಲ್ಲಿ ಅನ್ನಶಬ್ದಕ್ಕೆ ಅದ್ಯತ್ವ ಅತ್ತೃತ್ವವನ್ನು ಅರ್ಥವನ್ನಾಗಿ ಹೇಳಿದ್ದಾರೆ ಆದ್ದರಿಂದ ಆ ರೀತಿಯಾದ ಪ್ರಾಚುರ್ಯವನ್ನು ಹೇಳಿದರೆ ಯಾವ ವಿರೋಧವಿಲ್ಲ. ಇದರಂತೆ ಪ್ರಾಣಮಯಾದಿ ಪ್ರಾಚುರ್ಯವೂ ಯುಕ್ತವಾಗುತ್ತದೆ ಸಕಲಭೂತಾತ್ತೃವಾಗಿ (ಸಕಲಭೂತಸಂಹಾರಕನಾಗಿ) ಪರಮಾತ್ಮನು ತಿಳಿದಾಗ ಅವನಲ್ಲಿ 'ಅದ್ಯತ್ವವಿದೆ' ಎಂದರೆ ಪ್ರಾಣಿಗಳಿಂದ ತಿನ್ನಲ್ಪಡುತ್ತಾನೆ ಎಂದು ಅರ್ಥವಲ್ಲ ಮತ್ತೇನೆಂದರೆ 'ಉಪಜೀವ್ಯತ್ವ' (ಸಕಲಪ್ರಾಣಿಗಳೂ ಇವನನ್ನು ಆಶ್ರಯಿಸಿಕೊಂಡಿವೆ) ಎಂದೇ ತಿಳಿಯಬೇಕು.

ಹೀಗಾಗಿ ಆ ಪ್ರಕರಣದಲ್ಲಿ 'ಓಷಧೀಭ್ಯೋಽನ್ನಂ' ಎಂಬಲ್ಲಿ ಅನ್ನಶಬ್ದಕ್ಕೆ, ಪ್ರಕೃತವಾದ ಪ್ರಾಕೃತ ಅನ್ನವನ್ನು ಬಿಟ್ಟು ಪರಮಾತ್ಮ ಎಂದೇ ಅರ್ಥ ಸ್ವೀಕರಿಸಬೇಕು ಮತ್ತು ಅನ್ನಮಯಾದಿಗಳನ್ನು ಕುರಿತು ಉದಾಹರಿಸಿದ ಶ್ಲೋಕಗಳಲ್ಲಿ ಅನ್ನಮಯಾದಿ ವಿಷಯಕವಾಗಿ 'ಯೇನ್ನಂ ಬ್ರಹ್ಮೋಪಾಸತೇ, ಯೇ ಪ್ರಾಣಂ ಬ್ರಹ್ಮೋಪಾಸತೇ, ಆನಂದಂ ಬ್ರಹ್ಮಣೋ ವಿದ್ವಾನ್, ವಿಜ್ಞಾನಂ ಬ್ರಹ್ಮ ಚೇದ್ವೇದ, ಅಸ್ತಿ ಬ್ರಹ್ಮೇತಿ ಚೇದ್ವೇದ'' ಎಂದು ಬ್ರಹ್ಮಶಬ್ದ ಶ್ರುತವಾಗಿದೆ ಆದ್ದರಿಂದ ಅನ್ನಮಯಾದಿ ಶಬ್ದಗಳು ವಿಕಾರಾರ್ಥಗಳಲ್ಲ. ಒಬ್ಬನೇ ಬ್ರಹ್ಮನಿಗೆ ಬಹಳರೂಪ ಸ್ವೀಕರಿಸುವ ಸಾಮರ್ಥ್ಯವಿರುವುದರಿಂದ ಒಬ್ಬನೇ ಬ್ರಹ್ಮ ಅನ್ನಮಯಾದಿ ಐದುವ್ಯಕ್ತಿ ಹೇಗಾದಾನು? ಎಂಬ ವಿರೋಧಕ್ಕೆ ಅವಕಾಶವಿಲ್ಲ.

ಅನ್ನಮಯಾದಿ ನಾಲ್ಕುಸ್ಥಳಗಳಲ್ಲಿರುವ 'ಮಯಟ್'ಪ್ರತ್ಯಯ ವಿಕಾರಾರ್ಥವುಳ್ಳದ್ದು; ಆನಂದಮಯ ಎಂಬಲ್ಲಿ ಮಾತ್ರ ಪ್ರಾಚುರ್ಯ ಎಂಬ ಅರ್ಥವುಳ್ಳದ್ದು ಎನ್ನುವುದು ಯುಕ್ತಿವಿರುದ್ಧವಾದ್ದರಿಂದ ಅದನ್ನು ಉಪೇಕ್ಷಿಸಬೇಕು. ಪ್ರಕಾಶರೂಪನಾದ ಸೂರ್ಯನಿಗೆ (ಪ್ರಚುರಪ್ರಕಾಶಃ ರವಿಃ ಎಂದು ) ಪ್ರಕಾಶದ ಪ್ರಾಚುರ್ಯವನ್ನು ಒಪ್ಪುವಂತೆ, ಆನಂದಾದಿರೂಪನಾದ ವಿಷ್ಣುವಿಗೆ ಆನಂದ ಪ್ರಾಚುರ್ಯವೂ ಕೂಡುತ್ತದೆಯಾದ್ದರಿಂದ ಯಾವುದೇ ವಿರೋಧಕ್ಕೆ ಅವಕಾಶವಿಲ್ಲ. ಈ ಕಾರಣದಿಂದಲೂ ಈ ಪ್ರಕರಣದಲ್ಲಿ 'ಆನಂದಮಯ' ಎಂಬ ಪದದಿಂದ ಹೇಳಲ್ಪಟ್ಟವನು ಆನಂದ ಪ್ರಚುರನಾದ ಪರಮಾತ್ಮನೇ ಆಗಿದ್ದಾನೆ.

* * * *

# ಬ್ರಹ್ಮಮೀಮಾಂಸಾಶಾಸ್ತ್ರ

**सू - ॐ ।। तद्धेतुव्यपदेशाच्च ।।ॐ ।।१४।।**

ಅನುವಾದ- ಮತ್ತೊಂದು ಕಾರಣ- ಆನಂದಮಯಪ್ರಕರಣದಲ್ಲಿ ಜಗನ್ನಿಯಾಮಕತ್ವವೆಂಬ ಹೇತುವು ಕೇಳಿಸುತ್ತಿದೆ. ಆದ್ದರಿಂದಲೂ ಆನಂದಮಯನು ಬ್ರಹ್ಮನೇ ಆಗಿದ್ದಾನೆ.

## ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕಾ

**सूत्रदीपिका** – चः समुच्चये । तस्य आनन्दमयस्य विष्णुत्वे लोकचेष्टकत्वाख्यहेतोर्व्यपदेशात् । 'को ह्येवान्यात्' इति श्रुतौ उक्तत्वात् आनन्दमयो विष्णुरेवेत्यर्थः ।

'ಚಃ' ಸೂತ್ರದಲ್ಲಿರುವ ಚಶಬ್ದವು ಮತ್ತೊಂದು ಹೇತುವನ್ನು ಸಮುಚ್ಚಯ ಮಾಡುತ್ತಿದೆ. 'ತದ್ಧೇತುವ್ಯಪದೇಶಾತ್' 'ತಸ್ಯ' ಆನಂದಮಯನು ವಿಷ್ಣುವೇ ಆಗಿದ್ದಾನೆ ಏಕೆಂದರೆ ಆನಂದಮಯಪ್ರಕರಣದಲ್ಲಿ ಜಗನ್ನಿಯಾಮಕತ್ವವೆಂಬ ಹೇತುವು ಹೇಳಲ್ಪಟ್ಟಿರುವುದರಿಂದ. 'ಕೋ ಹ್ಯೇವಾನ್ಯಾತ್' (ತೈತ್ತಿರೀಯ ೨/೮) ಎಂಬ ಶ್ರುತಿಯಿಂದ ಈ ವಿಚಾರವು ಸ್ಪಷ್ಟವಾಗುತ್ತದೆ.

• • • • •

## ಬ್ರಹ್ಮನು ಆನಂದಮಯನೆನ್ನಲು ಮತ್ತೊಂದು ಹೇತು

**भाष्यम् – ॐ ।। तद्धेतुव्यपदेशाच्च ।। ॐ ।। १४ ।।**

**'को ह्येवान्यात् कः प्राण्यात् । यदेष आकाश आनन्दो न स्यात्' (तै. २-७) इति[१] ।।**

---

(१) भाष्यदीपिका – आनन्दमयमात्रस्य विष्णुत्वे, हेत्वन्तररूपं प्राचुर्यमेव मयडर्थ इत्यत्र च हेतुं प्रतिपादयत् सूत्रमुपन्यस्यति – तद्धेत्विति ।। आनन्दमय इति तत्त्विति चानुवर्तते । तदित्यस्याऽवृत्तिः । स चासौ हेतुश्चेत्यपि विग्रहः । तथा च न केवलं ब्रह्मशब्दाभ्यासात् । किन्तु 'तद्धेतुव्यपदेशात्' तस्मिन्नानन्दमयप्रकरणे तस्य विष्णोः तस्मिन् आनन्दपूर्णत्वेनाऽनन्दमयत्वे प्राचुर्यस्यैव मयडर्थत्वे च तद्धेतुव्यपदेशात् लोकचेष्टकत्वाख्यहेतूक्तेश्चाऽनन्दपूर्णत्वेनैवाऽनन्दमयशब्दवाच्यो विष्णुरेवेति सूत्रवृत्तिमभिप्रेत्य तमेव हेतुव्यपदेशं दर्शयति – को हीति ।। 'यत्' यदा यदि 'एष आकाशः' आ समन्तात् प्रकाशमानो विष्णुरानन्दः पूर्णानन्दो न स्यात् तदाऽसौ लोकं न प्रवर्तयेदिति शेषः । आनन्दोद्रेकमन्तरेण प्रवृत्तौ कारणान्तराभावादिति भावः । यद्यसौ न लोकं प्रवर्तयेत् । तदा 'को ह्येवान्यात्' को वा जनः लोकं चेष्टयेत् । 'कश्च प्राण्यात्' धर्मादौ च कः प्रवर्तयेत् । न कोऽपि । अन्यस्यास्वातन्त्र्यादिति तैत्तिरीयभाष्यटीकारीत्या श्रुत्यर्थः ।

ಬ್ರಹ್ಮನೇ ಆನಂದಮಯನಾಗಿದ್ದಾನೆನ್ನಲು ತೈತ್ತಿರೀಯೋಪನಿಷತ್ತಿನ 'ಕೋ ಹ್ಯೇವಾನ್ಯಾತ್' ಎಂಬ ವಚನವು ಕಾರಣವನ್ನು ನಿರೂಪಣೆ ಮಾಡುತ್ತಿದೆ. ಆದ್ದರಿಂದ ಬ್ರಹ್ಮನೇ ಆನಂದಮಯನು.

ಪ್ರತಿಪದಾರ್ಥ – ಆನಂದಮಯನು ವಿಷ್ಣುವೇ ಆಗಿದ್ದಾನೆನ್ನಲು ಮತ್ತೊಂದು ಕಾರಣವನ್ನು ನೀಡುವ ಮೂಲಕ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯವೆಂಬ ಅರ್ಥವನ್ನೇ ಸ್ವೀಕರಿಸಬೇಕು ಎನ್ನಲೂ ಸಹ ಕಾರಣವನ್ನು ನಿರೂಪಿಸುವುದಕ್ಕಾಗಿ ಸೂತ್ರವನ್ನು ಉಪನ್ಯಾಸಮಾಡುತ್ತಿದ್ದಾರೆ.

ಏಷಃ = ಈ ವಿಷ್ಣುವು, ಆಕಾಶಃ = ಎಲ್ಲಡೆ ಪ್ರಕಾಶಿಸುವವನು, ಆನಂದಃ = ಪೂರ್ಣಾನಂದನು, ನ ಸ್ಯಾತ್ = ಆಗದಿದ್ದಲ್ಲಿ, ಆವಾಗ ಈ ಲೋಕವನ್ನು ಕಃ = ಯಾವನು ತಾನೇ, ಅನ್ಯಾತ್ = ಚೇಷ್ಟನವನ್ನು ಮಾಡಿಯಾನು. ಕೋ ಹಿ = ಯಾವದು ತಾನೇ, ಪ್ರಾಣ್ಯಾತ್ = ಧರ್ಮಾಧರ್ಮಗಳಲ್ಲಿ ಪ್ರವೃತ್ತಿಯನ್ನು ಹುಟ್ಟಿಸಿಯಾನು?, ಇತಿ = ಈ ಕಾರಣದಿಂದ ವಿಷ್ಣುವೇ ಆನಂದಮಯನು.

## ಜಗಚ್ಚೇಷ್ಟಕತ್ವಹೇತುವಿನ ವಿವರಣೆ

**तत्वप्रकाशिका – एवं प्रचुरानन्दत्वेनानन्दमयपदवाच्यो विष्णुरेव, ब्रह्म-शब्दाभ्यासादित्युक्तम्; तदेव हेत्वन्तरेण प्रतिपादयत् सूत्रमुपन्यस्य तदुपात्त-श्रुतिमेवोदाहरति – तद्धेत्विति ।। आ समन्तात् काशमानो विष्णुर्यदि पूर्णानन्दो न स्यात् तदाऽसौ न लोकं प्रवर्तयेत् ।**

ಹೀಗೆ ಪ್ರಚುರಾನಂದವುಳ್ಳವನಾದ್ದರಿಂದ 'ಆನಂದಮಯ'ಶಬ್ದದಿಂದ ವಾಚ್ಯನಾದವನು ವಿಷ್ಣುವೇ; ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದ ಎಂದು ಹಿಂದಿನ ಸೂತ್ರದಲ್ಲಿ ಹೇಳಿತ್ತು. ಈಗ ಬೇರೆ ರೀತಿಯಿಂದ ಅದನ್ನು ಸಾಧಿಸುವ ಸೂತ್ರವನ್ನು ಹೇಳಿ, ಸೂತ್ರಸೂಚಿತವಾದ ಶ್ರುತಿಯನ್ನು ''ತದ್ಧೇತು'' ಎನ್ನುವುದರಿಂದ ಹೇಳುತ್ತಾರೆ. ಆ= ಚೆನ್ನಾಗಿ, ಕಾಶಮಾನೋ = ಬೆಳಗುವವನು; ಆದ್ದರಿಂದ ಆಕಾಶನಾಮಕನಾದ ವಿಷ್ಣುವು ಒಂದು ವೇಳೆ ಪೂರ್ಣಾನಂದವುಳ್ಳವನು ಆಗದಿದ್ದರೆ ಆಗ ಅವನು ಜಗತ್ತನ್ನು ಪ್ರವರ್ತಿಸಲಾರ.

**तत्वप्रकाशिका – आनन्दोद्रेकमन्तरेण तत्प्रवृत्तौ कारणाभावात् । तथा च को लोकं चेष्टयेद्धर्मादौ च कः प्रवर्तयेत् । अन्यस्यास्वातन्त्र्यात् । अतो लोकचेष्टाऽन्यथानुपपत्त्या तत्कर्ता विष्णुः पूर्णानन्दः स्यादित्यानन्दमयप्रकरणे**

---

सुधायां तु ण्यर्थानन्तर्भावेन न कोऽपि लोकिकीं वैदिकीं प्रवृत्तिं कुर्यादिति व्याख्यातम् । इतीत्यस्य इति तद्धेतुव्यपदेशादित्यन्वयः ।।

**विष्णोरेवाऽऽनन्दपूर्णत्व एव लोकचेष्टकत्वाख्यहेतुव्यपदेशाद् विष्णुरेव पूर्णानन्द-(वाऽनन्दपूर्ण)तयाऽऽनन्दमय इति भावः ।।१४।।**

ಜಗತ್ತಿನ ಪ್ರೇರಣೆಗೆ ಆನಂದೋದ್ರೇಕವನ್ನು ಬಿಟ್ಟು ಬೇರೆ ಕಾರಣವಿಲ್ಲವಾದ್ದರಿಂದ ಯಾರು ತಾನೇ ಈ ಜಗತ್ತನ್ನು ಪ್ರೇರಿಸುತ್ತಾರೆ? ಯಾರು ತಾನೆ ಧರ್ಮಾದಿಗಳನ್ನು ಪ್ರೇರಿಸುತ್ತಾರೆ? ಬೇರೆ ಯಾರೂ ಸ್ವತಂತ್ರರಲ್ಲ. ಹಾಗಾಗಿ ಲೋಕಚೇಷ್ಟೆಯು ಪ್ರತ್ಯಕ್ಷವಾಗಿರುವುದರಿಂದ ಅದನ್ನು ಕೂಡಿಸಬೇಕಾದರೆ ಅದನ್ನು ಮಾಡುವವನು ವಿಷ್ಣುವೇ ಆಗಿದ್ದಾನೆ. ಅವನು ಪೂರ್ಣಾನಂದವುಳ್ಳವನಾಗಿದ್ದಾನೆಂದು ಆನಂದಮಯಪ್ರಕರಣದಲ್ಲಿ ಹೇಳಲಾಗಿದೆ. ಆನಂದಪೂರ್ಣನಾದವನೇ ಜಗತ್ತನ್ನು ಪ್ರೇರಿಸುವವನಾದ್ದರಿಂದ' ಎಂದು ಯುಕ್ತಿಯನ್ನು ಹೇಳಿದ್ದಾರೆ. ವಿಷ್ಣುವು ಪೂರ್ಣಾನಂದವುಳ್ಳವನಾದ್ದರಿಂದ ಆನಂದಮಯಶಬ್ದವಾಚ್ಯನೂ ಅವನೇ ಆಗುತ್ತಾನೆಂದು ಅಭಿಪ್ರಾಯ.

ಅನುವ್ಯಾಖ್ಯಾನ ತೈತ್ತಿರೀಯಭಾಷ್ಯದಲ್ಲಿ ಹೇತುವಿನ ಸಮರ್ಥನೆ

भावदीपः – **ॐ तद्धेतुव्यपदेशाच्च ॐ** ।। **अभ्यासादिति** ।। एकविषयासकृदावर्तनरूपादित्यर्थः । उत्तरत्रैवात्रापि 'ब्रह्मशब्दात्' इत्येव वाच्ये 'अभ्यासात्' इत्युक्तिरानन्दमयाभिप्रायेति सूचयति – **इत्युक्तमिति** ।। 'साक्षात्' इति भावः । सूत्रे चशब्दादाह - **तदेव हेत्वन्तरेणेति** ।। 'आ समन्तात् काशते यदाकाशो मुख्यतो हरिः' इत्यनुभाष्योक्तेराह – **आ समन्तादिति** ।। **पूर्णानन्देति** ।। 'मुख्यस्य निर्विशेषेण शब्द' इत्युक्तदिशा निरुपपदानन्दपदस्य पूर्णानन्दत्ववाचित्वाद्वा, 'अल्पात् सुखात् अल्पकर्मा पूर्णानन्दाद्धि सर्वकृत्' इति तैत्तिरीयभाष्योक्त्या विश्वचेष्टकत्वबलाद्वा लभ्यत इति भावः ।।

'ಅಭ್ಯಾಸಾತ್' ಎಂಬ ಪದಕ್ಕೆ ಒಂದೇ ವಿಷಯವನ್ನು ಅನೇಕಬಾರಿ ಹೇಳುವ ಮೂಲಕ ಆವರ್ತನ ಮಾಡುವ ರೂಪವುಳ್ಳ ಅಭ್ಯಾಸದಿಂದ ಎಂದು ಅರ್ಥ. ''ಇತ್ಯುಕ್ತಮ್'' ಎಂಬ ಟೀಕಾಭಾಗದಿಂದ ಮುಂದೆ ಹೇಳದಿರುವಂತೆ ಬ್ರಹ್ಮಶಬ್ದಾತ್ ಎಂಬುದಾಗಿಯೇ ಹೇಳಬೇಕಾಗಿದ್ದರೂ ಅಭ್ಯಾಸಾತ್ ಎಂದು ಹೇಳಿರುವುದು ಆನಂದಮಯನ ಅಭಿಪ್ರಾಯವನ್ನು ಇಟ್ಟುಕೊಂಡು ಎಂಬ ಅಭಿಪ್ರಾಯವನ್ನು ಸೂಚಿಸುತ್ತಿದ್ದಾರೆ. ಇಲ್ಲಿ ಸಾಕ್ಷಾತ್ತಾಗಿಯೇ ಆನಂದಮಯನನ್ನು ಹೇಳಬೇಕು ಎಂದು ಅಭಿಪ್ರಾಯ. ಸೂತ್ರದಲ್ಲಿ ಚಶಬ್ದ ಇರುವುದರಿಂದ 'ತದೇವ ಹೇತ್ವಂತರೇಣ' ಎಂಬ ಅಂಶವನ್ನು ವಿವರಿಸಿದ್ದಾರೆ. ಅನುವ್ಯಾಖ್ಯಾನದಲ್ಲಿ 'ಆ ಸಮಂತಾತ್ ಕಾಶತೇ ಯದಾಕಾಶೋ ಮುಖ್ಯತೋ ಹರಿಃ' ಎಂದು ಆಕಾಶಶಬ್ದವನ್ನು ವ್ಯಾಖ್ಯಾನ ಮಾಡಿರುವುದರಿಂದ ಅದೇ ರೀತಿಯಾಗಿ ''ಆ ಸಮಂತಾತ್'' ಇತ್ಯಾದಿ ವಾಕ್ಯದಿಂದ ಇಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ''ಪೂರ್ಣಾನಂದ'' ಇತ್ಯಾದಿವಾಕ್ಯಭಾಗದಿಂದ ಅನುವ್ಯಾಖ್ಯಾನದಲ್ಲಿ 'ಮುಖ್ಯಸ್ಯ ನಿರ್ವಿಶೇಷೇಣ' ಇತ್ಯಾದಿಭಾಗದಲ್ಲಿ ಹೇಳಿರುವಂತೆ ಬೇರೆ ಪದಗಳ ಸಂಬಂಧವಿಲ್ಲದೆ (ಉಪಪದ) ಕೇವಲ ಆನಂದಪದವನ್ನು ಬಳಸಿದಾಗ ಆ ಪದವು

'ಪೂರ್ಣಾನಂದ' ಎಂಬ ಅರ್ಥವನ್ನು ಕೊಡುತ್ತದೆ. ಅಥವಾ 'ಅಲ್ಪಾತ್ ಸುಖಾದಲ್ಪಕರ್ಮಾ ಪೂರ್ಣಾನಂದಾದ್ಧಿ ಸರ್ವಕೃತ್' (ಅಲ್ಪಸುಖವುಳ್ಳ ಜೀವರುಗಳು ಅಲ್ಪಕರ್ಮವುಳ್ಳವರಾಗಿದ್ದಾರೆ; ಭಗವಂತನು ಸರ್ವವನ್ನೂ ಮಾಡುವವನಾದ್ದರಿಂದ ಅವನು ಪೂರ್ಣಾನಂದನೇ ಆಗಿದ್ದಾನೆ' ಎಂದು ತೈತ್ತಿರೀಯಭಾಷ್ಯದಲ್ಲಿ ಹೇಳಿರುವಂತೆ 'ಸರ್ವವನ್ನೂ ಮಾಡುವವನು' ಎಂಬ ಹೇತುವಿನ ಬಲದಿಂದ ಪೂರ್ಣಾನಂದ ಎಂಬ ಅಂಶವು ಸಿಗುತ್ತದೆ - - ಎಂದು ಅಭಿಪ್ರಾಯ.

## ವಿಷ್ಣುವಿನ ಪ್ರವೃತ್ತಿಗೆ ಪೂರ್ಣಸುಖವೇ ಕಾರಣ

भावदीपः – **श्रुतावापाद्यापादकयोरन्वयाय** शेषमाह – **तदासाविति** ।। **कारणाभावादिति** ।। **प्रवृत्तिश्च**[१] 'नृत्तगानादिका सुखात् । दुःखोद्रेकादिका च' इति अनुभाष्योक्तदिशा रागद्वेषदुःखसुखोद्रेकाणां चतुर्णामेव प्रवृत्तिहेतुत्वेन विष्णवाद्यत्रयस्य 'निरनिष्टो निरवद्यः' इत्यादिश्रुतिभिः बाधितत्वात् । 'सुखं लब्ध्वा करोति नासुखी करोति' इति छान्दोग्ये पूर्णसुखस्य स्पष्टं विष्णौ प्रवृत्ति-हेतुत्वेनोक्तेरिति भावः ।

ಭಾಷ್ಯದಲ್ಲಿ ಹೇಳಿದ ಶ್ರುತಿಯಲ್ಲಿ ಆಪಾದ್ಯ ಮತ್ತು ಆಪಾದಕಗಳಿಗೆ ಅನ್ವಯವನ್ನು ತೋರಿಸುವುದಕ್ಕಾಗಿ 'ತದಾ' 'ಅಸೌ'' ಎಂಬ ಶೇಷಪೂರಣೆ ಮಾಡಬೇಕಾದ ಪದಗಳನ್ನು ಟೀಕೆಯಲ್ಲಿ ಹೇಳಿದ್ದಾರೆ.

''ಕಾರಣಾಭಾವಾತ್'' ಎಂಬ ಟೀಕಾಭಾಗದಿಂದ 'ಪ್ರವೃತ್ತಿಶ್ಚ ನೃತ್ತಗಾನಾದಿಕಾ ಸುಖಾತ್ । ದುಃಖಾದ್ ರೋದಾದಿಕಾ ಚ'' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ರಾಗ, ದ್ವೇಷ, ದುಃಖ ಮತ್ತು ಸುಖಗಳ ಉದ್ರೇಕವೇ ಪ್ರವೃತ್ತಿಗೆ ಕಾರಣವಾಗಿದ್ದು, ರಾಗದ್ವೇಷದುಃಖಗಳಿಂದ ಮೊದಲ ಮೂರು ಕಾರಣಗಳು 'ನಿರನಿಷ್ಟೋ ನಿರವದ್ಯಃ' ಇತ್ಯಾದಿಯಾಗಿ ಸುಧೆಗಳಲ್ಲಿ ಹೇಳಿದಂತೆ ವಿಷ್ಣುವಿನಲ್ಲಿ ಇಲ್ಲದಿರುವುದರಿಂದ 'ಸುಖಂ ಲಬ್ಧ್ವಾ ಕರೋತಿ, ನಾಸುಖೀ ಕರೋತಿ' ಎಂದು ಛಾಂದೋಗ್ಯಭಾಷ್ಯದಲ್ಲಿ ಹೇಳಿದಂತೆ ವಿಷ್ಣುವಿನಲ್ಲಿ ಪ್ರವೃತ್ತಿಗೆ ಕಾರಣವಾಗಿ ಪೂರ್ಣಸುಖವೇ ಇದೆ ಎಂದು ಸ್ಪಷ್ಟವಾಗಿ ಹೇಳಿರುವುದನ್ನು ಸ್ವೀಕರಿಸಿಕೊಳ್ಳಬೇಕು.

भावदीपः – एवं भाष्योक्तश्रुतिं व्याख्याय भाष्यं सूत्रेण सङ्गमयन् सूत्रार्थमाह – **इत्यानन्दमयेति** ।। 'सूत्रे तदिति तन्त्रम् । **तत्र** = आनन्दमयप्रकरणे । तस्य विष्णोः तत्रानन्दप्राचुर्यशब्दितपूर्णानन्दत्वे' इति भावः ।

---

(१) प्रवृत्तिश्चतुर्विधा – सुखार्था दुःखपरिहारार्था सुखोद्रेकनिमित्ता दुःखोद्रेकनिमित्ता चेति । तत्रेश्वरस्य सुखार्था दुःखनिवृत्त्यर्था दुःखोद्रेकनिमित्ता च न युक्ता । आप्तव्याप्तेर्निर्दोषत्वाच्च । तस्मात् प्रचुरानन्दत्वेनैव प्रवर्तकत्वम् । अतश्च मयट्प्रत्ययोऽपि प्राचुर्यार्थ एव ।। – तत्वप्रदीपिका

आद्येनैवकारेण चतुर्मुखादिरन्त्येन तु विकारादित्यर्थः । आनन्दमयस्तत्त्विति प्रतिज्ञाभागोऽचानुवर्त्य इति मत्त्वाऽऽह – **विष्णुरेवेति** ।। 'पूर्णानन्दतया न तु विकारतया' इत्यर्थः । अत्र विष्णोरेवानन्दमय इति वाच्ये पूर्णेत्युक्तिर्महानन्दत्व एवास्य हेतुः कोऽन्यादिति स्फुटमित्यनुभाष्यसुधयोरुक्तदिशा 'विष्णुरानन्दमयः' इत्यत्रैव नायं हेतुव्यपदेशः किन्तु पूर्वोक्तमयट्प्राचुर्यार्थ इत्यपि साध्यं पूर्वसूत्रादनुवर्त्यमिति द्योतयितुम्(१) ।।१४।।

ಹೀಗೆ ಭಾಷ್ಯದಲ್ಲಿ ಹೇಳಿದ ಶ್ರುತಿಯನ್ನು ವ್ಯಾಖ್ಯಾನಮಾಡಿ ಭಾಷ್ಯವನ್ನು ಸೂತ್ರಕ್ಕೆ ಹೊಂದಿಸುತ್ತಾ, ''ಇತ್ಯಾನಂದಮಯ'' ಇತ್ಯಾದಿವಾಕ್ಯದಿಂದ ಸೂತ್ರಾರ್ಥವನ್ನು ಹೇಳುತ್ತಿದ್ದಾರೆ. ಸೂತ್ರದಲ್ಲಿ ''ತತ್'' ಎಂಬ ಪದವನ್ನು ಒಂದು ಬಾರಿ ಹೇಳಿದ್ದರೂ ಆ ಪದವನ್ನು ಮೂರು ಬಾರಿ ತಂತ್ರದಿಂದ ಇಟ್ಟುಕೊಳ್ಳಬೇಕು (ಸಕೃದುಚ್ಚರಿತಂ ಅನೇಕೋಪಕಾರಿಕಂ ತಂತ್ರಮ್). ಮೊದಲನೇ ತತ್ ಶಬ್ದವನ್ನು ತತ್ರ ಅಂದರೆ ಆನಂದಮಯಪ್ರಕರಣದಲ್ಲಿ ಎಂದು ಅರ್ಥೈಸಿಕೊಳ್ಳಬೇಕು. ಎರಡನೇ ತತ್ ಶಬ್ದವನ್ನು 'ತಸ್ಯ' ಎಂದರೆ ವಿಷ್ಣುವಿಗೆ ಎಂದು ಅರ್ಥೈಸಿಕೊಳ್ಳಬೇಕು. ಮೂರನೆಯ ತತ್‌ಶಬ್ದವನ್ನು ತತ್ರ ಅಂದರೆ ಆನಂದಪ್ರಾಚುರ್ಯ ಎಂದು ಹೇಳಲ್ಪಟ್ಟ ಪೂರ್ಣಾನಂದತ್ವದ ವಿಷಯದಲ್ಲಿ' ಎಂದು ಅರ್ಥೈಸಿಕೊಳ್ಳಬೇಕು.

ಟೀಕೆಯಲ್ಲಿ 'ವಿಷ್ಣೋರೇವ ಆನಂದಪೂರ್ಣತ್ವೇವ' ಎಂಬ ವಾಕ್ಯಭಾಗದಲ್ಲಿ ಮೊದಲ ಏವಕಾರದಿಂದ ಚತುರ್ಮುಖಾದಿಗಳನ್ನು ವ್ಯಾವೃತ್ತಿಮಾಡಿಕೊಳ್ಳಬೇಕು. ಎರಡನೇ ಏವಕಾರದಿಂದ ವಿಕಾರತಾದಾತ್ಮ್ಯಾದಿಗಳನ್ನು ವ್ಯಾವೃತ್ತಿ ಮಾಡಬೇಕು. ಈ ಅಧಿಕರಣದ ಪ್ರಾರಂಭದಲ್ಲಿ ತಿಳಿಸಿದಂತೆ 'ಆನಂದಮಯಃ ತತ್ತು' ಎಂಬ ಪ್ರತಿಜ್ಞಾಭಾಗವನ್ನು ಇಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು ಎಂಬ ಅಂಶವನ್ನು ''ವಿಷ್ಣುರೇವ'' ಎಂಬ ಟೀಕಾಭಾಗದಿಂದ ವಿವರಿಸಿದ್ದಾರೆ. ''ಪೂರ್ಣಾನಂದತಯಾ'' ಎಂಬ ಭಾಗದಿಂದ ಆನಂದವಿಕಾರದಿಂದ ಅಲ್ಲ ಎಂಬ ಅಂಶವನ್ನು ಬಿಡಿಸಿದ್ದಾರೆ. ಈ ಸಂದರ್ಭದಲ್ಲಿ 'ವಿಷ್ಣುರೇವ ಆನಂದಮಯಃ' ಎಂದಷ್ಟೇ ಹೇಳಬೇಕಾಗಿದ್ದರೂ 'ಪೂರ್ಣಾನಂದತಯಾ' ಎಂಬ ಅಂಶವನ್ನು 'ಮಹಾನಂದತ್ವ ಏವಾಸ್ಯ ಹೇತುಃ ಕೋಽನ್ಯಾದಿತಿ ಸ್ಫುಟಮ್' ಎಂದು ಅನುವ್ಯಾಖ್ಯಾನ ಮತ್ತು ಸುಧಾದಲ್ಲಿ ಹೇಳಿರುವಂತೆ 'ವಿಷ್ಣುವೇ ಆನಂದಮಯ' ಎಂಬ ವಿಷಯವನ್ನು ತಿಳಿಸಲು ಮಾತ್ರ ಇಲ್ಲಿ ಹೇತುವನ್ನು ಹೇಳದೆ, ಹಿಂದೆ ತಿಳಿಸಿದಂತೆ ಮಯಟ್‌ಶಬ್ದಕ್ಕೆ ಪ್ರಾಚುರ್ಯ ಎಂಬ ಅರ್ಥವನ್ನು ಹೇಳಬೇಕು ಎಂಬ ಅಂಶವನ್ನು ತಿಳಿಸಲೂ ಕೂಡ ಇಲ್ಲಿ ಹೇತುವನ್ನು ಹೇಳಿದ್ದಾರೆ. ಇದಕ್ಕಾಗಿ ಹಿಂದಿನ ಸೂತ್ರದಿಂದ 'ಪ್ರಾಚುರ್ಯಾತ್' ಎಂಬ ಅಂಶವನ್ನು ಇಲ್ಲಿ ಸಾಧ್ಯವನ್ನಾಗಿಸುವಂತೆ ಅನುವೃತ್ತಿ ಮಾಡಿಕೊಳ್ಳಬೇಕು. ಇದನ್ನು ಸ್ಪಷ್ಟಪಡಿಸುವುದಕ್ಕಾಗಿಯೇ 'ಪೂರ್ಣಾನಂದತಯಾ' ಎಂದು ವ್ಯಾಖ್ಯಾನಿಸಿದ್ದಾರೆ.

---

(१) तद्धेतुव्यपदेशात् इत्यत्र तन्त्रेणोपात्तस्य तच्छब्दस्य तस्मिन् आनन्दमयप्रकरणे, तस्य विष्णोः, तस्मिन् पूर्णानन्दत्वे इत्यर्थत्रयमभिप्रेत्य व्याचष्टे – आनन्दमयप्रकरण इत्यादिना ।। – तत्वसुखबोधिनी

**वाक्यार्थमञ्जरी –** ॥ **ॐ तद्धेतुव्यपदेशाच्च ॐ** ॥ आनन्दमयो ब्रह्मैव तस्य विष्णेस्तत्र पूर्णानन्दत्वे तत्रानन्दमयप्रकरणे ''को ह्येवान्यात्कः प्राण्यात्'' इति लोकचेष्टकत्वाख्य-हेत्वभिधानादित्यर्थः ॥

**कारणाभावदिति** ॥ सुखोद्रेकान्नृत्यगानादौ प्रवृत्तिः सुखार्थं भोजनादौ दुःखोद्रेकात् रोदनादौ दुःखनिवृत्तये कण्टकोद्धरणादौ वेति कारणचतुष्टयं प्रवृत्तौ कारणं दृष्टम् । तत्रोत्तरत्रयाणामभावादित्यर्थः । अन्यादित्यस्यार्थश्चेष्टयेदिति । प्राण्यादित्यस्यार्थः प्रवृत्तयेदिति । अन चेष्टायामिति धातोः । सूत्रे तदिति तन्त्रमित्याशयेन त्रेधाऽर्थमाह – **आनन्दमयप्रकरण इति** ॥

**आनन्दपूर्णत्व एवेति** ॥ अनेन न केवलमत्र सूत्रे आनन्दमयस्य विष्णुत्वं समर्थ्यते किन्तु मयटः प्राचुर्यार्थत्वमेव । आनन्दपूर्णत्वाभावे उक्तरीत्या लोकचेष्टकत्वानुपपत्तेरिति सूचयति । स्पष्टं चैतन्महानन्दत्व एवास्येत्याद्यनुव्याख्याने ।

॥ ಓಂ ತದ್ಧೇತು ವ್ಯಪದೇಶಾಚ್ಚ ಓಂ ॥

ಸೂತ್ರಾರ್ಥ - ಆನಂದಮಯನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ತಸ್ಯ= ವಿಷ್ಣುವಿಗೆ, ತತ್ರ= ಪೂರ್ಣಾನಂದತ್ವದ ವಿಷಯದಲ್ಲಿ ತತ್ರ= ಆನಂದಮಯಾಧಿಕರಣದಲ್ಲಿ 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್' ಎಂದು ಲೋಕಚೇಷ್ಟಕತ್ವ ಎಂಬ ಕಾರಣವನ್ನು ಹೇಳಿದ್ದಾರೆ ಎಂದರ್ಥ.

'ಕಾರಣಾಭಾವಾತ್' ಎಂದು ಇದೆ. ಇದರ ಅಭಿಪ್ರಾಯ ಯಾವುದೇ ಕಾರ್ಯದಲ್ಲಿ ಪ್ರವೃತ್ತವಾಗಬೇಕಾದರೆ ನಾಲ್ಕು ಕಾರಣಗಳಿರುತ್ತವೆ. ಅವುಗಳು ಯಾವುದೆಂದರೆ ಸುಖೋದ್ರೇಕದಿಂದ ನೃತ್ತಗಾನಾದಿಗಳಲ್ಲಿ ಪ್ರವೃತ್ತವಾಗುವುದು. ಸುಖಾರ್ಥ ಪ್ರವೃತ್ತಿ ಎಂದರೆ ಭೋಜನಾದಿಗಳಲ್ಲಿ ಪ್ರವೃತ್ತವಾಗುವುದು. ರೋದನಾದಿಗಳಲ್ಲಿ ಪ್ರವೃತ್ತವಾಗುವುದು ದುಃಖೋದ್ರೇಕವು. ಕಾಲಿಗೆ ಚುಚ್ಚಿದ ಮುಳ್ಳನ್ನು ತೆಗೆಯುವ ಪ್ರಯತ್ನ ದುಃಖನಿವೃತ್ತಿಯಿಂದ. ಇವುಗಳಲ್ಲಿ ಕೊನೆಯ ಮೂರು ಪರಮಾತ್ಮನ ವಿಷಯದಲ್ಲಿ ಹೇಳಲು ಬರುವುದಿಲ್ಲ ಎಂದರ್ಥ. ಶ್ರುತಿಯಲ್ಲಿರುವ 'ಅನ್ಯಾತ್' ಪದದ ಅರ್ಥ ಚೇಷ್ಟೆಯನ್ನು ಮಾಡಿಸಿಯಾನು, 'ಪ್ರಾಣ್ಯಾತ್' ಪದದ ಅರ್ಥ ಪ್ರವೃತ್ತಿಯನ್ನು ಮಾಡಿಸಿಯಾನು ಎಂದು. 'ಅನ ಚೇಷ್ಟಾಯಾಂ' ಎಂಬ ಧಾತು ಅನುಸಾರಿಯಾಗಿ ಈ ಅರ್ಥ ಲಭಿಸುತ್ತದೆ. ಸೂತ್ರದಲ್ಲಿ 'ತತ್' ಎಂಬುದಕ್ಕೆ 'ಆನಂದಮಯಪ್ರಕರಣ' ಎಂಬ ವಾಕ್ಯದಿಂದ ಮೂರು ರೀತಿಯಾಗಿ ಅರ್ಥವನ್ನು ಹೇಳುತ್ತಿದ್ದಾರೆ.

'ಆನಂದಪೂರ್ಣತ್ವ ಏವ' ಎಂದು ಇದೆ. ಹೀಗೆ ಹೇಳಿರುವುದರಿಂದ ಸೂತ್ರದಲ್ಲಿ ಕೇವಲ ಆನಂದಮಯನಿಗೆ ವಿಷ್ಣುತ್ವವನ್ನು ಸಮರ್ಥನೆ ಮಾಡುವುದೊಂದೇ ಉದ್ದೇಶವಲ್ಲ. ಮಯಟ್ ಶಬ್ದಕ್ಕೆ ಪ್ರಾಚುರ್ಯಾರ್ಥವನ್ನು ಸಮರ್ಥನೆ ಮಾಡುವುದೂ ಸಹ ಮತ್ತೊಂದು ಉದ್ದೇಶ. ಒಂದು ವೇಳೆ ಆನಂದಪೂರ್ಣನಲ್ಲವೆಂದು ಹೇಳಿದರೆ ಹಿಂದೆ ಹೇಳಿದ ಲೋಕಚೇಷ್ಟಕತ್ವವು ಅನುಪಪನ್ನವಾಗುತ್ತದೆಂದು ಸೂಚನೆ ಮಾಡುತ್ತಿದ್ದಾರೆ. ಇದರ ಸ್ಪಷ್ಟತೆಯನ್ನು 'ಏತನ್ಮಹಾನಂದತ್ವ

ಏವಾಸ್ಯ' ಇತ್ಯಾದಿ ಅನುವ್ಯಾಖ್ಯಾನದ ವಾಕ್ಯಗಳಿಂದ ತಿಳಿಯಬಹುದು. 'ಅಪರಬ್ರಹ್ಮಣ' ಎಂದರೆ ಪ್ರಕೃತ್ಯಾದಿಗಳೆಂದು ತಿಳಿಯಬೇಕು.

# श्रीपद्मनाभतीर्थविरचितसत्तर्कदीपावळिः

**ॐ तद्धेतुव्यपदेशाच्च ॐ ।। १४ ।।**

'को ह्येवान्यत्' इति वाक्यशेषादित्येतमर्थं प्रतिपादयत्सूत्रमुपन्यस्य व्याचष्टे – **तद्धेत्वित्यादिना** । आ समन्तात् प्रकाशमानत्वादाकाशशब्दोक्तः परमात्मा प्रचुरानन्दो यदि न स्यात् तर्ह्यसावशक्तः स्यात् । तथा सति सर्वं न चेष्टयेत् । तेनाप्रेरितो लोकः न लौकिकचेष्टां प्रकृष्टां च धर्मचेष्टां च कुर्यात् । ततो लोकचेष्टान्यथानुपपत्या तत्कारणस्य विष्णोः सर्वशक्तत्वम् अत एव बहुलानन्दत्वं स सिध्यति । न हि स्वानन्दस्य अल्पत्वं भवन्निवारयितुमसमर्थस्य सर्वशक्तित्वं सम्भवतीत्यर्थः ।

''ಕೋ ಹ್ಯೇವಾನ್ಯತ್'' ಎಂಬ ವಾಕ್ಯವಿಶೇಷದಿಂದ ವಿಷ್ಣುವೇ ಆನಂದಮಯ ಎಂಬ ಅರ್ಥವನ್ನು ಪ್ರತಿಪಾದಿಸುವ ಸೂತ್ರವನ್ನು ಹೇಳಿ ವ್ಯಾಖ್ಯಾನ ಮಾಡುತ್ತಾರೆ 'ತದ್ಧೇತು' ಮುಂತಾದುದರಿಂದ. ಆ ಎಲ್ಲಾ ಕಡೆಯಿಂದಲೂ ಪ್ರಕಾಶಮಾನನಾದ್ದರಿಂದ 'ಆಕಾಶ'ಶಬ್ದವಾಚ್ಯನಾದ ಪರಮಾತ್ಮನು ಪ್ರಚುರಾನಂದವುಳ್ಳವನಾಗದಿದ್ದರೆ ಅವನು ಅಶಕ್ತನಾಗಬೇಕು, ಹಾಗಾದಾಗ ಸಕಲರನ್ನು ಪ್ರೇರಿಸಬಾರದು ಹೀಗೆ ಅವನಿಂದ ಪ್ರೇರಿಸಲ್ಪಡುವ ಲೋಕವು (ಜನರು) ಲೌಕಿಕವ್ಯಾಪಾರವನ್ನಾಗಲಿ (ಗಮನ, ಭೋಜನ, ನಿದ್ರಾದಿಕ್ರಿಯೆಗಳು) ಅಥವಾ ಉತ್ತಮವಾದ ಧಾರ್ಮಿಕ ವ್ಯಾಪಾರವನ್ನಾಗಲಿ (ಯಜ್ಞ-ಯಾಗಾದಿಕ್ರಿಯೆಗಳು ) ಮಾಡದೇ ಇರಬೇಕಾದೀತು. ಆದರೆ ಲೋಕದ ಚೇಷ್ಟೆಯು ಕಾಣುತ್ತದೆ ಅದನ್ನು ಕೂಡಿಸಬೇಕಾದರೆ ಅದಕ್ಕೆ ಕಾರಣನಾದ ವಿಷ್ಣುವು ಸರ್ವಶಕ್ತನು. ಆದ್ದರಿಂದಲೇ ಪೂರ್ಣಾ-ನಂದವುಳ್ಳವನು ಎಂದು ಸಿದ್ಧವಾಗುತ್ತದೆ. ತನ್ನಲ್ಲಿರುವ ಆನಂದದಲ್ಲಿ ಅಲ್ಪತ್ವವನ್ನು ಪರಿಹರಿಸಲು ಸಾಮರ್ಥ್ಯವಿಲ್ಲದವನು ಸರ್ವಶಕ್ತಿವುಳ್ಳವನು ಹೇಗಾಗುತ್ತಾನೆ ಎಂದು ಅಭಿಪ್ರಾಯ.

# ಬ್ರಹ್ಮಮೀಮಾಂಸಾಶಾಸ್ತ್ರ

**सू - ॐ ।। ॐ।। मान्त्रवर्णिकमेव च गीयते ।।ॐ ।।१५।।**

ಉಪನಿಷತ್ತಿನ ಪ್ರಾರಂಭದಲ್ಲಿ 'ಸತ್ಯಂ ಜ್ಞಾನಮ್' ಎಂಬ ಮಂತ್ರವು ಶ್ರುತವಾಗಿದೆ. ಈ ಮಂತ್ರದಲ್ಲಿ ಹೇಳಿರುವ ಗುಣಗಳನ್ನೇ ಆನಂದಮಯಾದಿಪ್ರಕರಣದಲ್ಲಿ ವಿವರಿಸಲಾಗಿದೆ. ಆದ್ದರಿಂದಲೂ ಆನಂದಮಯಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ.

*ಪರಿಪೂರ್ಣಚಂದ್ರಿಕಾ*

## ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕಾ

**सूत्रदीपिका –** यतो मान्त्रवर्णिकं 'सत्यं ज्ञानमनन्तं ब्रह्म' ति मन्त्रवर्णोक्तं ब्रह्म गीयते आनन्दमयादिशब्दैः प्रतिपाद्यते । अत आनन्दमयादिशब्दवाच्यं ब्रह्मैवेत्यर्थः ।।

ಚ = ಮತ್ತು, 'ಮಾಂತ್ರವರ್ಣಿಕಮೇವ' 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಉಪನಿಷತ್ತಿನ ಪ್ರಾರಂಭದ ಮಂತ್ರದಲ್ಲಿ ಹೇಳಲ್ಪಟ್ಟಿರುವ ಬ್ರಹ್ಮನ ಗುಣಗಳನ್ನೇ 'ಗೀಯತೇ' = ಆನಂದಮಯಾದಿಶಬ್ದಗಳಿಂದ ಪ್ರತಿಪಾದಿಸಲ್ಪಟ್ಟಿದೆ. ಆದ್ದರಿಂದ ಆನಂದಮಯಾದಿಶಬ್ದಗಳಿಂದ ಬ್ರಹ್ಮನೇ ಪ್ರತಿಪಾದ್ಯನು.

• • • • •

## ಮಾಂತ್ರವರ್ಣಿಕಸೂತ್ರಾರ್ಥ

**भाष्यम् – ॐ ।। मान्त्रवर्णिकमेव च गीयते ।। ॐ ।।१५।।**

**'ब्रह्मविदाप्नोति परम्' (तै.२-१) इति सूचयित्वा 'सत्यं ज्ञानमनन्तं ब्रह्म'(तै.२-१) इति मन्त्रवर्णलक्षितं परमेव ब्रह्म शब्दानुसन्धानाद् गीयते[१] ।**

---

(१) भाष्यदीपिका – यदुक्तं ब्रह्मशब्दादानन्दमयादीनां विष्णुत्वमिति न तद्युक्तम् । ब्रह्मशब्दस्यापरब्रह्मणि जीवेऽप्युपपत्तेः। तस्य परब्रह्मणि मुख्यत्वेऽपि विष्णोरानन्दमयावयवत्वोक्त्यादिना बाधकेनामुख्यार्थस्यैव ग्रहणोपपत्तेरित्याशङ्कां परिहरद् आनन्दमयादिशब्दवाच्यस्य विष्णुत्वे युक्त्यन्तरं वदत् सूत्रं पठित्वा व्याचष्टे – मान्त्रवर्णिकमिति ।। यत इत्यादौ योज्यं, 'न ते' इति प्रतिज्ञाऽनुवर्तते । तथा च यतः 'सत्यं ज्ञानमनन्तं ब्रह्म' (तै.उ. २-१-१.) इति 'मन्त्रवर्णे' मन्त्राक्षरे तदात्मकवाक्यविशेषे 'लक्षितं' लक्षणवत्तया प्रोक्तमेव परमेव ब्रह्म नालक्षितं, नापरमित्येवार्थः । अन्नमयादिशब्दैः 'गीयते' प्रतिपाद्यतेऽतोऽप्यानन्दमयादयो नापरे । किन्तु परमेव ब्रह्मेति योजना । कुतोऽन्नमयादिशब्दैर्मन्त्रवर्णलक्षितस्यैव प्रतिपादनं ज्ञायत इत्यत उक्तम् – शब्दानुसन्धानादिति ।। 'शब्दानां' सत्यं ज्ञानमनन्तम् इत्येवंरूपाणाम् अन्नमयादिशब्दानां चार्थानुसन्धानाद् जातात् 'अनुसन्धानात्' एकार्थत्वज्ञानादित्यर्थः ।

मन्त्रवर्णेऽपि ब्रह्मेत्येवोक्तत्वात् कथं तदर्थानामप्यन्नमयादिशब्दानां परब्रह्मार्थताज्ञप्तिः? इत्यत आह – ब्रह्मविदिति ।। प्रवृत्त इति शेषः । अस्य बुद्ध्या विविक्तेन मन्त्रवर्णपदेनान्वयः । तथा च यतो 'ब्रह्मविदाप्नोति परम्' (तै.उ.२.१.१) इति परब्रह्मतज्ज्ञानतत्प्राप्तीः सूचयित्वा सङ्क्षेपेणोक्त्वा तत्र प्राप्तशङ्कापनोदाय प्रवृत्तो मन्त्रवर्णः । ततोऽत्र लक्षितं परं ब्रह्मैवेति ज्ञायत इत्यर्थः । सूत्रे आनन्दमयादिस्तत्त्विति चानुवर्तते ।

'ಬ್ರಹ್ಮ ವಿದಾಪ್ನೋತಿ ಪರಮ್' ಎಂಬುದಾಗಿ ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲಿಯ ಪ್ರಾರಂಭದಲ್ಲಿ ಬ್ರಹ್ಮಜ್ಞಾನಿಗೆ ಬ್ರಹ್ಮನ ಪ್ರಾಪ್ತಿಯನ್ನು ಪ್ರಸ್ತಾಪ ಮಾಡಿ, ಮುಂದೆ ಅಂತಹ ಬ್ರಹ್ಮನ ಲಕ್ಷಣವನ್ನು 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಹೇಳಲಾಗಿದೆ. ಈ ಲಕ್ಷಣಗಳನ್ನೇ ಮುಂದಿನ ಆನಂದಮಯಾದಿ ಪ್ರಕರಣಗಳಲ್ಲಿ ವಿವರಿಸಲಾಗಿದೆ. ಸತ್ಯಜ್ಞಾನಾದಿ ಪದಗಳಿಗೂ ಅನ್ನಮಯಾದಿ ಪದಗಳಿಗೂ ಅರ್ಥವನ್ನು ಸಮನ್ವಯ ಮಾಡಿದಾಗ ಬ್ರಹ್ಮನೇ ಆನಂದಮಯಾದಿ ಶಬ್ದಗಳಿಂದ ಪ್ರತಿಪಾದ್ಯನೆಂದು ಸ್ಪಷ್ಟವಾಗುತ್ತದೆ..

ಪ್ರತಿಪದಾರ್ಥ – ಬ್ರಹ್ಮಶಬ್ದದ ಬಲದಿಂದ ಆನಂದಮಯಾದಿಗಳು ವಿಷ್ಣುವೇ ಎಂದು ಸಮರ್ಥಿಸಲಾಗದು. ಅಪರಬ್ರಹ್ಮನಾದ ಜೀವನಲ್ಲಿಯೂ ಬ್ರಹ್ಮಶಬ್ದವು ಉಪಪನ್ನವಾಗುತ್ತದೆ. ವಸ್ತುತಃ ಪರಬ್ರಹ್ಮನು ಮುಖ್ಯಬ್ರಹ್ಮನೆನಿಸಬಹುದು. ಆದರೆ ಆನಂದಮಯನ ಅವಯವವೆಂದು ಹೇಳಿದ್ದರಿಂದ ಮುಖ್ಯಾರ್ಥವನ್ನು ಸ್ವೀಕರಿಸಲಾಗದು. ಈ ಆಕ್ಷೇಪವನ್ನು ಪರಿಹಾರಮಾಡುವುದಕ್ಕಾಗಿ ವಿಷ್ಣುವೇ ಆನಂದಮಯಾದಿಶಬ್ದಗಳಿಂದ ಪ್ರತಿಪಾದ್ಯನೆನ್ನಲು ಮತ್ತೊಂದು ಯುಕ್ತಿಯನ್ನು ಹೇಳುತ್ತಾ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ.

ಬ್ರಹ್ಮ = ಪರಬ್ರಹ್ಮನನ್ನು, ವಿತ್ = ತಿಳಿದವನು, ಪರಮ್ = ಮೋಕ್ಷವನ್ನು, ಆಪ್ನೋತಿ = ಹೊಂದುತ್ತಾನೆ. ಇತಿ = ಹೀಗೆ ತೈತ್ತಿರೀಯೋಪನಿಷತ್ತಿನಲ್ಲಿ, ಸೂಚಯಿತ್ವಾ = ಬ್ರಹ್ಮಜ್ಞಾನಿಗೆ ಬ್ರಹ್ಮಪ್ರಾಪ್ತಿಯನ್ನು ಪ್ರಸ್ತಾಪಿಸಿ, ಪ್ರಾಪ್ಯನಾದ ಬ್ರಹ್ಮನ ಲಕ್ಷಣವನ್ನು ಮುಂದೆ ತಿಳಿಸುತ್ತಾರೆ. ಸತ್ಯಮ್ = ಸತ್ಯಶಬ್ದವಾಚ್ಯನು, ಜ್ಞಾನಮ್ = ಜ್ಞಾನಸ್ವರೂಪನು, ಅನಂತಂ = ದೇಶಕಾಲಗುಣಗಳಿಂದ ಕೊನೆಯಿಲ್ಲದವನು, ಬ್ರಹ್ಮ = ಪರಿಪೂರ್ಣನು ಹೀಗೆ, ಮಂತ್ರವರ್ಣಲಕ್ಷಿತಂ = ಮಂತ್ರದಲ್ಲಿ ಪದಗಳಿಂದ ಜ್ಞಾತನಾಗುವ, ಪರಂ ಬ್ರಹ್ಮ = ಸರ್ವೋತ್ತಮನಾದ ಪರಬ್ರಹ್ಮನೇ, ಶಬ್ದಾನುಸಂಧಾನಾತ್ = ಅನ್ನಮಯಾದಿ ಶಬ್ದಗಳ

---

चशब्दो यत इत्यर्थे युक्तिसमुच्चये वा । तथा च न केवलं ब्रह्मशब्दादेवाऽनन्दमयादिविष्ण्वाख्यं परब्रह्मैव नापरब्रह्मेत्यवसीयते । किन्तु यतो मान्त्रवर्णिकं 'सत्यं ज्ञानम्' इति वेदवाक्येन लक्षणवत्तया प्रोक्तं परं ब्रह्मैवान्नमयादिशब्दैः 'गीयते' प्रतिपाद्यते च । अतस्तत्समाख्यानादार्थिकादपीति सूत्रार्थः ।

'ब्रह्मवित्' परब्रह्मज्ञानी 'परं' परमं ब्रह्माऽप्नोति । परब्रह्मप्राप्तिकामः परब्रह्म जानीयाद् इति श्रुतेः फलितोऽर्थः । किं तद् ब्रह्मेति शङ्कायां सत्यमित्यादि प्रवृत्तम् । तत्र सत्यशब्देनोक्तं यद् गतिजीवननाशप्रापकत्वं तदेवान्नमयप्राणमयशब्दाभ्यामुच्यते । ज्ञानपदोक्तं सकलपदार्थसामान्यविशेषविषयकज्ञानं मनोमयविज्ञानमयशब्दाभ्यामुच्यते । अनन्तशब्देनोक्तं देशतः कालतो वस्तुतश्चापरिच्छिन्नत्वम् । परमात्माऽनन्तः पूर्णानन्दत्वादित्यानन्दमयशब्देनोपपाद्यत इति सत्यादिशब्दानामन्नमयादिशब्दानां चैकार्थत्वम् अनुसन्धेयम् । अत्र देशानन्त्यं नामानवधिकपरिमाणत्वम् । कालानन्त्यं नामानवच्छिन्नसत्ताकत्वम् । वस्त्वानन्त्यं नामापरिच्छिन्नसङ्ख्यागुणकर्मविग्रहवत्त्वम् ॥

ಸಮನ್ವಯರೂಪ ಅನುಸಂಧಾನದಿಂದ, ಗೀಯತೇ = ಆನಂದಮಯಾದಿಶಬ್ದಗಳಿಂದ ಪ್ರತಿಪಾದ್ಯನೆಂದು ಸ್ತುತಿಸಲ್ಪಡುತ್ತಾನೆ.

## ಪರಬ್ರಹ್ಮನೇ ಮಂತ್ರವರ್ಣಪ್ರತಿಪಾದ್ಯ

**तत्वप्रकाशिका – यदुक्तं 'ब्रह्मशब्दादन्नमयादीनां विष्णुत्वम्' इति न तद्युक्तम् । ब्रह्मशब्दस्यापरब्रह्मण्युपपत्तेः । ब्रह्मशब्दस्य परब्रह्मणि मुख्यत्वेऽपि विष्णोरानन्दमयावयवत्वोक्त्यादिनाऽमुख्यस्यैव ग्रहणोपपत्तेरित्याशङ्कां परिहरत् सूत्रं पठित्वा व्याचष्टे – मान्त्रवर्णिकमेव चेति ।। नेदमानन्दमयादिपञ्चकम् अपरं ब्रह्म । यतः 'सत्यं ज्ञानमनन्तं ब्रह्म[१]' इति मन्त्रवर्णे लक्षण्वत्तयोक्तं परमेव ब्रह्मन्नमयादिशब्दपञ्चकेन गीयते । तत् कुतः? इत्यत उक्तम् – शब्दानुसन्धानादिति ।। सत्यज्ञानानन्तशब्दानामन्नमयादिशब्दानां चार्थानुसन्धाने सत्येकार्थत्वप्रतीतेः ।**

"ಬ್ರಹ್ಮಶಬ್ದಪ್ರಯೋಗವಿರುವುದರಿಂದ ಅನ್ನಮಯಾದಿಗಳು ವಿಷ್ಣುವೇ" ಎಂದು ಹಿಂದೆ ಹೇಳಲಾಗಿತ್ತು. ಅದು ಸರಿಯಲ್ಲ. ಬ್ರಹ್ಮಶಬ್ದಕ್ಕೆ ಅಪರಬ್ರಹ್ಮ (ಜೀವ, ಪ್ರಕೃತಿಮೊದಲಾದವರು) ಎಂದರ್ಥ ಮಾಡಲು ಬರುತ್ತದೆ. ವಾಸ್ತವಿಕವಾಗಿ ಬ್ರಹ್ಮಶಬ್ದವು ಪರಬ್ರಹ್ಮನಾದ ವಿಷ್ಣುವಿನಲ್ಲೇ ಮುಖ್ಯವಾಗಿದ್ದರೂ ಆನಂದಮಯನ ಅವಯವ ಬ್ರಹ್ಮನೆಂದು ಹೇಳಿದ್ದರಿಂದ ಅಮುಖ್ಯನಾಗುತ್ತಾನೆ. ಆದ್ದರಿಂದ ಅವನನ್ನು ಬಿಟ್ಟು ಅಮುಖ್ಯಾರ್ಥವಾದ ಅಪರಬ್ರಹ್ಮನನ್ನೇ ಸ್ವೀಕರಿಸಬೇಕು -- ಎಂಬ ಶಂಕೆಯನ್ನು ಪರಿಹರಿಸುವ ಸೂತ್ರವನ್ನು ಹೇಳಿ "ಮಾಂತ್ರವರ್ಣಿಕಮೇವ" ಎನ್ನುವುದರಿಂದ ವ್ಯಾಖ್ಯಾನ -ವನ್ನು ಮಾಡುತ್ತಿದ್ದಾರೆ.

---

(१) यतः 'सत्यं ज्ञानमनंतं ब्रह्म' इति मन्त्रवर्णे यल्लक्षणं ब्रह्मोक्तं तदेवान्नमयादिशब्दैर्गीयते इति गम्यते । कुतः? शब्दानुसन्धानात् । तथाहि – सत्त्वं यापयतीति सत्यम् । तच्च सत्त्वं त्रिविधम् उद्भवजीवनविनाशभेदेन । 'षद्लृ विशरणगत्यवसादनेषु' इति धातोर्विशीर्णतया अपि सत्त्वशब्दवाच्यत्वात् । सृष्टिपालनसंहाराः सत् तद्यापनात् सत्यत्वम् । तत् त्रिविधमप्यन्नप्राणयोः श्रूयते 'अन्नाद् भूतानि जायन्ते, जातान्यन्नेन वर्धन्ते, अद्यतेऽत्ति च भूतानि तस्मादन्नं तदुच्यते' इति; 'प्राणं देवा अनुप्राणन्ति मनुष्याः पशवश्च ये, प्राणो हि भूतानामायुः, तस्मात् सर्वायुषमुच्यते' 'यद्वा ऋते प्राणाद् रेतस्सिच्येत, पूयेन्न सम्भवेत्' इत्यादौ । तस्मादन्नप्राणयोः सत्यत्वम् । सामान्यविशेषमात्रभेदात् मनोविज्ञानयोर्ज्ञानत्वमेव । आनन्दस्तु भूमत्वादनन्तपदार्थो वेदितव्यः । लक्ष्यत्वेन निर्दिष्टस्य ब्रह्मशब्दस्य प्रतिश्लोकमनुसन्धानाच्चैवमवसीयते ।। – (तत्वप्रदीपिका)

ಆನಂದಮಯಾದಿ ಐದನ್ನೂ ಅಪರಬ್ರಹ್ಮ ಎನ್ನಬಾರದು. ಏಕೆಂದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಮಂತ್ರದಲ್ಲಿ (ಯಾವ) ಲಕ್ಷಣವುಳ್ಳವನನ್ನಾಗಿ ಪರಬ್ರಹ್ಮನನ್ನು ಹೇಳಿತ್ತೋ ಅದೇ ಬ್ರಹ್ಮನು ಅನ್ನಮಯಾದಿ ಐದು ಶಬ್ದಗಳಿಂದ ಹೇಳಲ್ಪಡುತ್ತಾನೆ. ಅದು ಹೇಗೆಂದರೆ 'ಶಬ್ದಾನು-ಸಂಧಾನಾತ್' ಎಂಬುದರಿಂದ ಹೇಳುತ್ತಾರೆ. ಸತ್ಯ, ಜ್ಞಾನ, ಅನಂತ ಶಬ್ದಗಳ ಮತ್ತು ಅನ್ನಮಯಾದಿ-ಶಬ್ದಗಳ ಅರ್ಥವನ್ನು ಪರಾಮರ್ಶಿಸಿದಾಗ ಅವುಗಳಿಗೆ ಪರಸ್ಪರ ಏಕಾರ್ಥವಿರುವುದು ತಿಳಿಯುತ್ತದೆ.

### ಸೂತ್ರ ಹಾಗೂ ಭಾಷ್ಯಗಳಲ್ಲಿರುವ ಏವಕಾರಾರ್ಥ

भावदीपः – ॐ मान्त्रवर्णिकमेव च गीयते ॐ ।। अत्र एवकारव्यावर्त्यमाह – **यदुक्तमित्यादिना** ।। **ब्रह्मशब्दादिति** ।। आनन्दमयाभिप्रायेण सूत्रे मुखतोऽ-भ्यासोक्तावपि उपात्तोपलक्षितसर्वाभिप्रायेण तु पञ्चस्वपि ब्रह्मशब्दसत्वेनासकृदा-वृत्तिमात्राभिप्रायाभ्यासोक्तिरिति भावेनैवमुक्तिः । **मुख्यत्वेपीति** ।। प्रागुक्तश्रुति -स्मृतिभिरिति भावः । न चावयवत्वेत्यादिभाष्यानुरोधादाह – **अवयवत्वोक्त्या-दिनेति** ।। आदिपदेन 'अन्योन्तर आत्मा' इत्यादिनोक्तन्यत्वादेर्ग्रहः ।

भाष्यस्थ'एव'कारव्यावर्त्यमाह – **नेदमिति** ।। **पञ्चकमिति** ।। एतेनेदं सूत्रमाद्य-सूत्रमिव पञ्चानामपि ब्रह्मत्वसाधकं न तु तद्धेतुसूत्रमिव आनन्दमयमात्रस्येति सूचितम् । तत्र हेतुत्वेन भाष्यं योजयति – **यत इति** ।। **एकार्थेति** ।। तत्र सत्यत्वं सृष्ट्याऽन्नप्राणयोरपि । उक्तम् –

**ज्ञानं तु मनसा विज्ञानेनाप्युदीरितम् ।**
**अनन्तत्वं तथाऽऽनन्दमयवाचाप्युदाहृतम् ।**

इत्यादिना अनुभाष्योक्तदिशेति भावः । विवरिष्यते चैतदग्रे । सूचनया = सङ्क्षिप्योक्तया ।

"ಯದುಕ್ತಂ" ಇತ್ಯಾದಿವಾಕ್ಯಗಳಿಂದ ಸೂತ್ರದಲ್ಲಿರುವ ಏವಕಾರದಿಂದ ವ್ಯಾವೃತ್ತಿ ಮಾಡಬೇಕಾದ ಅಂಶವನ್ನು ತಿಳಿಸುತ್ತಿದ್ದಾರೆ. "ಬ್ರಹ್ಮಶಬ್ದಾತ್" ಎಂಬ ಭಾಗದಿಂದ ಆನಂದಮಯನು ಬ್ರಹ್ಮ ಎಂಬ ಅಭಿಪ್ರಾಯದಿಂದ ಸೂತ್ರದಲ್ಲಿ ಸ್ಪಷ್ಟವಾಗಿ ಅಭ್ಯಾಸವನ್ನು ಹೇಳಿದ್ದರೂ ಆ ಆನಂದಮಯಶಬ್ದದಿಂದ ಉಪಲಕ್ಷಿತವಾದ ವಿಷಯಗಳ ಅಭಿಪ್ರಾಯದಿಂದ ಅನ್ನಮಯಾದಿ ಐದೂ ಶಬ್ದಗಳಲ್ಲಿ ಬ್ರಹ್ಮಶಬ್ದ ಇರುವುದರಿಂದ ಅನೇಕಬಾರಿ ಆವೃತ್ತಿ ಮಾಡುವ ರೂಪವುಳ್ಳ ಅಭ್ಯಾಸವನ್ನು ಇಲ್ಲಿ ಸ್ವೀಕರಿಸಬೇಕು. ಈ ಅಭಿಪ್ರಾಯದಿಂದಲೇ 'ಅನ್ನಮಯಾದೀನಾಮ್" ಎಂದು ಹೇಳಿದ್ದಾರೆ. "ಮುಖ್ಯತ್ವೇಪಿ" ಎಂಬ ವಾಕ್ಯಭಾಗಕ್ಕೆ

ಹಿಂದೆ ಹೇಳಿದ ಶ್ರುತಿಸ್ಮೃತಿಗಳಿಂದ ಬ್ರಹ್ಮಶಬ್ದವು ಪರಬ್ರಹ್ಮನಲ್ಲಿ ಮುಖ್ಯ ಎಂದು ಅರ್ಥ. 'ಅವಯವತ್ವೋಕ್ತ್ಯಾದಿನಾ'' ಈ ವಾಕ್ಯಭಾಗದಿಂದ 'ನ ಚ ಅವಯವತ್ವ' ಇತ್ಯಾದಿಯಾಗಿ ಭಾಷ್ಯದಲ್ಲಿ ಹೇಳಿದ್ದನ್ನು ಅನುಸರಿಸಿ ವಿವರಿಸಿದ್ದಾರೆ. ಆದಿ ಪದದಿಂದ 'ಅನ್ಯೋಽಂತರ ಆತ್ಮಾ' ಇತ್ಯಾದಿವಾಕ್ಯಗಳಿಂದ ಹೇಳಲ್ಪಟ್ಟ ಅನ್ಯತ್ವಾದಿಗಳನ್ನು ಸ್ವೀಕರಿಸಬೇಕು. ''ನೇದಮ್'' ಇತ್ಯಾದಿವಾಕ್ಯದಿಂದ ಭಾಷ್ಯದಲ್ಲಿರುವ ಏವಕಾರದಿಂದ ವ್ಯಾವೃತ್ತಿಮಾಡಬೇಕಾದ ಅಂಶವನ್ನು ತಿಳಿಸುತ್ತಿದ್ದಾರೆ. ''ಪಂಚಕಮ್'' ಎಂಬ ವಾಕ್ಯಭಾಗದಿಂದ ಈ ಸೂತ್ರವು ಮೊದಲನೆಯ ಸೂತ್ರದಂತೆ ಅನ್ನಮಯಾದಿ ಐದುರೂಪಗಳಿಗೂ ಬ್ರಹ್ಮತ್ವವನ್ನು ಸಾಧಿಸುತ್ತದೆ; ತದ್ಧೇತು ಸೂತ್ರದಂತೆ ಕೇವಲ ಆನಂದಮಯಶಬ್ದಕ್ಕೆ ಮಾತ್ರವಲ್ಲ ಎಂಬುದನ್ನು ಸೂಚಿಸಿದ್ದಾರೆ. ಅದಕ್ಕೆ ಕಾರಣವಾಗಿ ಭಾಷ್ಯವನ್ನು ''ಯತಃ'' ಇತ್ಯಾದಿವಾಕ್ಯದಿಂದ ಹೊಂದಿಸುತ್ತಾರೆ. ''ಏಕಾರ್ಥತ್ವ'' ಎಂಬ ಅಂಶದಿಂದ -

'ಜ್ಞಾನಂ ತು ಮನಸಾ ವಿಜ್ಞಾನೇನಾಪ್ಯುದೀರಿತಮ್ ।
ಅನಂತತ್ವಂ ತಥಾಽಽನಂದಮಯವಾಚಾಪ್ಯುದಾಹೃತಮ್ ॥'

ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ ಕ್ರಮಕ್ಕೆ ಅನುಸಾರಿಯಾಗಿ ಅರ್ಥವನ್ನು ಹೇಳಿದ್ದಾರೆ. ಈ ಅಂಶವನ್ನು ಮುಂದೆ ಸ್ಪಷ್ಟವಾಗಿ ವಿವರಿಸುತ್ತೇವೆ. ''ಸೂಚನಯಾ'' ಎಂಬ ಪದಕ್ಕೆ 'ಸಂಕ್ಷೇಪವಾಗಿ ಹೇಳುವ ಕ್ರಮದಿಂದ' ಎಂದು ಅರ್ಥ.

**वाक्यार्थमञ्जरी –** अपरब्रह्मणि प्रकृत्यादौ ॥ **ॐ मान्त्रवर्णिकमेव च गीयते ॐ** ॥ मन्त्रवर्णः ''सत्यं ज्ञानमनन्तम्ब्रह्म'' इति लक्षणवाक्यात्मको वेदः तेन प्रोक्तं मान्त्रवार्णिकं तथाच मन्त्रवर्णे सत्यत्वादिलक्षणवत्तया प्रोक्तं परंब्रह्मैव अन्नमयादिशब्दपञ्चकेन प्रतिपाद्यते यतोऽतश्च पञ्चापि ब्रह्मैवेत्यर्थः । अनुसन्धाने = आलोचने ॥

**एकार्थत्वप्रतीतेरिति** ॥ अस्तेः शत्रन्तस्य रूपं सदित्येतज्जीवनवाची । ''अस्ति देवदत्तः'' इत्युक्ते जीवतीतिप्रत्ययात् । तथा षदलृविशरणगत्यवसादनेष्विति स्मरणात् । क्विबन्तस्य सदेश्च रूपमेतच्छैथिल्यलक्षणविशीर्णत्वं वक्ति । भावप्रधानं चैतत् । तथाच सत् सत्वं जीवनं विशरणं वा भूतानां यापयति प्रापयतीति सत्यशब्दार्थः सर्वभूतानां जीवनविनाशहेतुत्वम् । अन्नशब्दस्योपजीव्यतालक्षणादद्यताविनाशकत्वलक्षणात्तत्वं चार्थेति सत्यान्नशब्दयोरेकार्थत्वम् । सदेर्गत्यर्थेपि पाठात् सतु भूतानां गतिं यापयति प्रापयतीति गतिप्रदत्वं सत्यशब्दार्थः । प्रपूर्वादनचेष्टाया-मित्यस्मान्निष्पन्न प्राणशब्दस्यापि स एवार्थ इति, तयोरेकार्थत्वम् । मन्ववबोधन इत्यस्मात् भावे असुन्प्रत्यये मनइति निष्पन्नत्वात् मनोज्ञानशब्दयोरेकार्थत्वं ज्ञानविज्ञानशब्दयोरेकार्थत्वं स्फुटमेव । अनन्तत्वञ्च गुणतोऽपरिछिन्नत्वम् । आनन्दमयत्वं तदेकदेशभूतमिति सत्यज्ञानानन्तपदानामन्न-मयादिपदानाञ्चैकार्थत्वप्रतीतेरित्यर्थः ॥

॥ ಓಂ ಮಾಂತ್ರವರ್ಣಿಕಮೇವ ಚ ಗೀಯತೇ ಓಂ ॥

ಸೂತ್ರಾರ್ಥ - 'ಮಂತ್ರವರ್ಣಃ' - 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬುದು ಲಕ್ಷಣಾಹೇಳುವ ವಾಕ್ಯ. ಮಂತ್ರವರ್ಣಗಳಾದ ಸತ್ಯಾದಿ ಪದಗಳಿಂದ ಲಕ್ಷಣಾರೂಪವಾಗಿ ಹೇಳಲ್ಪಟ್ಟವನು ಸರ್ವೋತ್ತಮನಾದ ಬ್ರಹ್ಮನೇ ಅನ್ನಮಯಾದಿ ಐದು ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಐದು ಪದಾರ್ಥಗಳೂ ಸಹ ಬ್ರಹ್ಮನೇ ಎಂದರ್ಥ.

'ಅನುಸಂಧಾನೇ' ಎಂದರೆ ಆಲೋಚನೇ ಎಂದರ್ಥ. 'ಏಕಾರ್ಥತ್ವಪ್ರತೀತೇಃ' ಎಂದು ಇದೆ. ಸತ್ಯಜ್ಞಾನಾನಂತಶಬ್ದಗಳ ಮತ್ತು ಅನ್ನಮಯಾದಿ ಶಬ್ದಗಳ ಅರ್ಥವನ್ನು ಆಲೋಚನೆ ಮಾಡಿದರೆ ಒಂದೇ ಅರ್ಥವು ತೋರುತ್ತದೆ. ಅದು ಹೇಗೆ ಎಂದರೆ - 'ಅಸ್ತೇಃ ಶತ್ರಂತಸ್ಯ ರೂಪಂ ಸತ್' ಇದು ಜೀವನವಾಚಿಯಾಗಿದೆ. ಯಾವರೀತಿಯಾಗಿ 'ಅಸ್ತಿ ದೇವದತ್ತಃ' ಎಂದು ಹೇಳಿದರೆ ಜೀವಂತನಾಗಿದ್ದಾನೆಂದು ಗೊತಾಗುತ್ತದೋ ಅದೇ ರೀತಿ 'ಷದಲೃವಿಶರಣಗತ್ಯವಸಾದನೇಷು' ಎಂದು ಇದೆ. ಆದ್ದರಿಂದ ಸತ್ ಎಂದರೆ ಸತ್ವಂ -ಜೀವನ ಅಥವಾ 'ವಿಶರಣಂ' ಭೂತಗಳನ್ನು ಹೊಂದುತ್ತಾನೆ ಎಂದು ಸತ್ಯಶಬ್ದದ ಅರ್ಥ. ಅಂದರೆ ಸಕಲಭೂತಗಳ ಜೀವನ ವಿನಾಶಗಳಿಗೆ ಕಾರಣನಾಗಿದ್ದಾನೆಂದು ತಿಳಿಯಬೇಕು. ಅನ್ನಶಬ್ದಕ್ಕೆ (ಅದ್ಯತೇ ಅತ್ತಿಚ ಇತಿ ಅನ್ನಂ) ಉಪಜೀವ್ಯ ಮತ್ತು ವಿನಾಶಕತ್ವ ಎಂದು ಅರ್ಥವಿದೆ. ಆದ್ದರಿಂದ ಸತ್ಯಶಬ್ದವು ಅನ್ನಶಬ್ದವು ಒಂದೇ ಅರ್ಥವನ್ನು ಹೇಳುತ್ತವೆ.

'ಸತ್ ಶಬ್ದಕ್ಕೆ' 'ಗತಿ' ಎಂದು ಅರ್ಥ ಇದೆ. ಸತ್ಯಂ ಎಂದರೆ ಭೂತಗಳನ್ನು ಗತಿಂ ಯಾಪಯತಿ ಎಂದು ಇದೆ. ಆದ್ದರಿಂದ ಸತ್ಯಶಬ್ದಕ್ಕೆ ಗತಿಯನ್ನು ಹೊಂದಿಸುವವನು ಎಂದರ್ಥ. ಪ್ರ ಪೂರ್ವಕ 'ಅನ' ಚೇಷ್ಟಾಯಾಂ ಎಂಬ ಧಾತುವಿನಿಂದ ನಿಷ್ಪನ್ನವಾದ ಪ್ರಾಣಶಬ್ದಕ್ಕೂ ಸಹ ಅದೇ ಅರ್ಥ ಇದೆ. ಆದ್ದರಿಂದ ಸತ್ಯ ಮತ್ತು ಪ್ರಾಣ ಶಬ್ದಗಳಿಗೆ ಸಮಾನವಾದ ಅರ್ಥವಿದೆ.

'ಮನು ಅವಬೋಧನೇ' ಎಂಬ ಧಾತುವಿಗೆ ಭಾವಾರ್ಥದಲ್ಲಿ ಅಸುನ್ ಪ್ರತ್ಯಯ ಬಂದರೆ ಮನ ಎಂದು ನಿಷ್ಪನ್ನವಾಗುತ್ತದೆ. ಮನು ಮತ್ತು ಜ್ಞಾನಶಬ್ದಗಳಿಗೆ ಒಂದೇ ಅರ್ಥ. ಜ್ಞಾನ ಮತ್ತು ವಿಜ್ಞಾನಗಳಿಗೆ ಒಂದೇ ಅರ್ಥ ಎಂಬುದು ನೇರವಾಗಿಯೇ ತಿಳಿಯುತ್ತದೆ.

ಅನಂತತ್ವ ಎಂದರೆ ಗುಣದಿಂದ ಅಪರಿಚ್ಛಿನ್ನ ಎಂದರ್ಥ. ಆನಂದಮಯತ್ವವೂ ಸಹ ಅದರ ಒಂದು ಭಾಗವೇ ಆಗಿರುವುದರಿಂದ ಸತ್ಯಜ್ಞಾನಾನಂತಪದಗಳು ಮತ್ತು ಅನ್ನಮಯಾದಿ ಪದಗಳು ಸಮಾನವಾದ ಅರ್ಥವನ್ನು ಹೊಂದಿವೆ.

## ಮಂತ್ರವರ್ಣದ ಬ್ರಹ್ಮಶಬ್ದಾರ್ಥ

**तत्वप्रकाशिका – मन्त्रवर्णेऽपि 'ब्रह्म' इत्यवोक्तत्वात् कथं तदर्थभूतनामप्यन्नमयादिशब्दानां परब्रह्मार्थ इत्यत उक्तम् – ब्रह्मविदिति ।। 'ब्रह्मविदाप्नोति परम्'(१) इति सूचनया परब्रह्मतज्ज्ञानतत्प्राप्तिकथने किं तत्परं ब्रह्म? कथं च**

---

(१) यद्यपि 'ब्रह्मविदाप्नोति परम्' इति श्रुतौ वेदनविषयतया ब्रह्मेत्येव श्रवणेन आप्तिविषयतया परम् इत्येव श्रवणेन च साक्षात् 'परं ब्रह्म' इति न श्रूयते । तथापि

**तद्वेदनम्? कीदृशी च तत्प्राप्तिः? इति शङ्कात्रयमुदेति । तत्रादिशङ्कापनोदय परब्रह्मणो लक्षणमुच्यते – सत्यमिति ।। 'यो वेद' इति वेदनम् । 'सोऽश्नुते' इति प्राप्तिः । अतो मन्त्रवर्णे परं ब्रह्मैवोच्यत इति तदुक्तं परमेव ब्रह्म शब्दानुसन्धानादन्नमयादि-शब्दैर्गीयते इति नापरब्रह्मशङ्काऽत्र कार्येति भावः । 'च'शब्दो विष्णोरानन्दमयत्वे युक्तिसमुच्चयार्थः ।**

ಮಂತ್ರವರ್ಣದಲ್ಲಿ ಬ್ರಹ್ಮ ಎಂದಿಷ್ಟೇ ಇದೆ. ಹಾಗಾಗಿ ಅದರ ಸಮಾನಾರ್ಥವುಳ್ಳವುಗಳಾಗಿದ್ದರೂ ಅನ್ನಮಯಾದಿಗಳನ್ನು ಪರಬ್ರಹ್ಮ ಎಂದು ನಿಶ್ಚಯಿಸುವುದು ಹೇಗೆ? ಎಂದರೆ ''ಬ್ರಹ್ಮವಿದಾಪ್ನೋತಿ ಪರಮ್'' ಎನ್ನುವುದರಿಂದ ಉತ್ತರಿಸುತ್ತಾರೆ. 'ಬ್ರಹ್ಮವಿದಾಪ್ನೋತಿ ಪರಮ್' (ಬ್ರಹ್ಮನನ್ನು ತಿಳಿದವನು ಬ್ರಹ್ಮನನ್ನು ಹೊಂದುತ್ತಾನೆ) ಎಂದು ಬ್ರಹ್ಮನ ಜ್ಞಾನದಿಂದ ಬ್ರಹ್ಮನ ಹೊಂದುವಿಕೆಯನ್ನು ಹೇಳಿದಾಗ ಬ್ರಹ್ಮನೆಂದರೆ ಯಾರು? ಅವನನ್ನು ತಿಳಿಯುವುದು ಹೇಗೆ? ಅವನ ಪ್ರಾಪ್ತಿಯು ಎಂಥದ್ದು? (ಅವನನ್ನು ಹೊಂದುವುದು ಎಂದರೆ ಯಾವರೀತಿಯಾಗಿ) ಎಂಬ ಮೂರು ಪ್ರಶ್ನೆಗಳು ಹುಟ್ಟುತ್ತವೆ. ಅವುಗಳಲ್ಲಿ ಮೊದಲನೆಯ ಪ್ರಶ್ನೆಯ ಪರಿಹಾರಕ್ಕಾಗಿ ಅವನ ಲಕ್ಷಣವನ್ನು 'ಸತ್ಯಂ' ಎಂಬುದರಿಂದ ಹೇಳುತ್ತಿದ್ದಾರೆ. 'ಸೋಶ್ನುತೇ' ಎಂಬುದರಿಂದ ಅವನ ಪ್ರಾಪ್ತಿಯನ್ನು ಹೇಳುತ್ತಾರೆ. ಹಾಗಾಗಿ ಮಂತ್ರವರ್ಣದಲ್ಲಿ ಪರಬ್ರಹ್ಮನನ್ನೇ ಹೇಳಿದೆ. ಅಲ್ಲಿ ಹೇಳಿದ ಪರಬ್ರಹ್ಮನೇ ಶಬ್ದಾನುಸಂಧಾನದಿಂದ ಅನ್ನಮಯಾದಿ ಶಬ್ದಗಳಿಂದ ಹೇಳಲ್ಪಡುತ್ತಾನೆ. ಆದ್ದರಿಂದ ಇಲ್ಲಿ ಅಪರಬ್ರಹ್ಮನು ವಾಚ್ಯನೇ? ಎಂಬುದಾಗಿ ಸಂದೇಹವನ್ನು ಪಡಬಾರದು. ಸೂತ್ರದಲ್ಲಿ ಚಶಬ್ದವನ್ನು ವಿಷ್ಣುವೇ ಆನಂದಮಯನೆನ್ನಲು ಯುಕ್ತಿಯನ್ನು ಸಮುಚ್ಚಯಮಾಡಲೋಸುಗ ಬಳಸಿದ್ದಾರೆ.

### ಸೂತ್ರದಲ್ಲಿ ಚಶಬ್ದವೇಕೆ?

भावदीपः – **परब्रह्मेति** ।। 'अन्यवेदनान्यप्रास्ययोगात् वेदनास्त्योर्विषयैक्या-वश्यम्भावेन परब्रह्मवित् परब्रह्माप्नोतीत्यभिमतत्वादिति भावः । **तदुक्तमिति** ।। 'तत्र मन्त्रवर्णे लक्षणवत्तयोक्तम्' इत्यर्थः ।

ननूक्तरीत्या अस्य सूत्रस्य आद्यसूत्रस्थहेतुभूतब्रह्मशब्दस्यान्यथासिद्धिनिरास-कत्वात् । 'तन्निष्ठस्य' इत्यादि सूत्र इव च शब्दो न स्यात् इत्यत आह – **चश**

---

अन्यविषयवेदनान्यस्य प्रास्ययोगात् वेदनविषयगमनविषययोरैक्ये अर्थात् परब्रह्मैव तत्स्यादिति भावेनाऽऽह भगवान् भाष्यकारः ब्रह्मविदाप्नोति परमिति सूचयित्वेति । परं ब्रह्म सूचयित्वेत्यर्थः । – (गुर्वर्थदीपिका)

**इति ।। एवकारेणैव तन्निरासादवशिष्टश्चशब्दो न केवलमभ्यासादनन्दमयो ब्रह्म किन्तु मान्त्रवर्णिकगानाच्चेति समुच्चयार्थ इत्यर्थः । प्राक् साक्षात् श्रुताभ्यासरूपहेतुसमुच्चय-लाभाय 'न चावयवत्वे'त्यादि भाष्यघटनाय चानन्दमयत्व इत्येवोक्तिः । 'अभिप्रेतब्रह्मशब्दात्' इति हेतुपक्षे तु आनन्दमयादित्वे इति व्याख्येयम् ।**

"ಪರಬ್ರಹ್ಮ" ಎಂಬ ವಾಕ್ಯಭಾಗದಿಂದ - ಬೇರೆಯವರ ಜ್ಞಾನದಿಂದ ಬೇರೆಯವರ ಪ್ರಾಪ್ತಿಯು ಹೊಂದಾಣಿಕೆಯಾಗದಿರುವುದರಿಂದ; ಜ್ಞಾನ ಮತ್ತು ಪ್ರಾಪ್ತಿಗಳಿಗೆ ವಿಷಯವು ಒಂದೇ ಆಗಿರಬೇಕಾಗಿ-ರುವುದರಿಂದ ಪರಬ್ರಹ್ಮನನ್ನು ಯಾರು ತಿಳಿಯುತ್ತಾನೋ ಅವನು ಪರಬ್ರಹ್ಮನನ್ನೇ ಹೊಂದುತ್ತಾನೆ ಎಂಬ ಅರ್ಥವೇ ಅಭಿಮತವಾಗಿದೆ - ಎಂಬ ಅಭಿಪ್ರಾಯವನ್ನು ತಿಳಿಸಿದ್ದಾರೆ.

"ತದುಕ್ತಮ್" ಎಂಬ ಪದಕ್ಕೆ 'ಆ ಮಂತ್ರವರ್ಣದಲ್ಲಿ ಲಕ್ಷಣರೂಪವಾಗಿ ಹೇಳಿದ ವಿಷಯ' ಎಂದು ಅರ್ಥ.

ಇಲ್ಲಿ ಹೀಗೊಂದು ಶಂಕೆ ಬರಬಹುದು -- ಈ ಹಿಂದೆ ಹೇಳಿದಂತೆ ಈ ಸೂತ್ರವು ಈ ಅಧಿಕರಣದ ಆರಂಭಸೂತ್ರದಲ್ಲಿ ಹೇತುವಾದ ಬ್ರಹ್ಮಶಬ್ದಕ್ಕೆ ಅನ್ಯಥಾಸಿದ್ಧಿಯನ್ನು ನಿರಾಕರಣೆ ಮಾಡುವುದಕ್ಕಾಗಿ ಇದೆ. ಆದ್ದರಿಂದ 'ತನ್ನಿಷ್ಠಸ್ಯ' ಇತ್ಯಾದಿಸೂತ್ರದಲ್ಲಿರುವಂತೆ ಇಲ್ಲೂ ಚಶಬ್ದದ ಅಗತ್ಯವಿಲ್ಲ - ಎಂದು. ಅದಕ್ಕೆ ಉತ್ತರವಾಗಿ "ಚಶಬ್ದಃ" ಇತ್ಯಾದಿವಾಕ್ಯವನ್ನು ಹೇಳಿದ್ದಾರೆ. ಸೂತ್ರದಲ್ಲಿರುವ 'ಏವ' ಕಾರದಿಂದಲೇ ಅನ್ಯಥಾಸಿದ್ಧಿಯನ್ನು ನಿರಾಸಮಾಡಿರುವುದರಿಂದ ಉಳಿದ ಚಶಬ್ದವು 'ಮೊದಲ ಸೂತ್ರದಲ್ಲಿ ಹೇಳಿದಂತೆ ಅಭ್ಯಾಸರೂಪ ಹೇತು ಇರುವುದರಿಂದ ಆನಂದಮಯನು ಬ್ರಹ್ಮ ಎಂಬುದು ಮಾತ್ರವಲ್ಲ ಮಂತ್ರವರ್ಣದಲ್ಲಿ ಹೇಳಿರುವುದರಿಂದಲೂ ಕೂಡ' ಎಂಬುದಾಗಿ ಸಮುಚ್ಚಯಾರ್ಥವನ್ನು ಕೊಡುತ್ತದೆ.

ಟೀಕೆಯಲ್ಲಿ ಈ ಹಿಂದೆ ಸಾಕ್ಷಾತ್ ಶ್ರುತವಾದ ಅಭ್ಯಾಸರೂಪ ಹೇತುವನ್ನು ಸಮುಚ್ಚಯ ಮಾಡುವ ಅಭಿಪ್ರಾಯದಿಂದ ಮತ್ತು 'ನ ಚ ಅವಯವತ್ವ' ಇತ್ಯಾದಿಭಾಷ್ಯವನ್ನು ಹೊಂದಿಸುವ ದೃಷ್ಟಿಯಿಂದ "ಆನಂದಮಯತ್ವೇ" ಎಂಬುದಾಗಿ ಹೇಳಿದ್ದಾರೆ. 'ಅಭಿಪ್ರೇತಬ್ರಹ್ಮಶಬ್ದಾತ್' ಎಂಬುದನ್ನೇ ಹೇತುವಾಗಿಸುವ ಅಭಿಪ್ರಾಯವಿದ್ದರೆ 'ಆನಂದಮಯಾದಿತ್ವೇ' ಎಂಬುದಾಗಿ ಟೀಕೆಯನ್ನು ಹೊಂದಿಸಿಕೊಳ್ಳಬೇಕು.

**वाक्यार्थमञ्जरी – परब्रह्मेति ।।** अन्यवेदनेनान्यप्राप्तेरयोगात् वेदनाप्त्योर्विषयैक्या-वश्यम्भावेन परम्ब्रह्मवित् परंबह्माप्नोतीत्यभिमतत्वादिति भावः ॥ **किन्तदिति ।।** किं लक्षणक-मित्यर्थः । नहि लक्षणेन विना वस्तु समस्तव्यावृत्ततया ज्ञातुं शक्यमित्यर्थः ॥ **कथं तद्वेदन-मिति ।।** नह्यपरिछिन्नपरिमाणस्य तस्य ज्ञानमस्माकं युज्यत इति भावः ॥ **कीदृशी च तत्प्राप्तिरिति ।।** तस्य सर्वगतत्वेन नित्यप्राप्तत्वादिति भावः ॥ **यो वेदेति वेदनमिति ।।** अपरिछिन्नपरिमाणस्यापि भक्तानुकम्पयाल्पपरिमाणप्रकटनसम्भवादित्याशयेन तत्र गुहा-निहितत्वोक्तेरिति भावः ॥ **सोऽश्नुत इति प्राप्तिरिति ।।** न तत्संयोगमात्रं तत्प्राप्तिः किन्तु

तद्व्यक्तिस्थाने सत्यकामत्वादितत्सारूप्याभिव्यक्तिरेवेत्याशयेन तत्र सर्वकामभोगोक्तेरिति भावः ॥ **युक्तिसमुच्चयार्थ इति** ॥ न केवलमभ्यासादेः किन्तु मान्त्रवर्णिकगानाच्चेति समुच्चयार्थ इत्यर्थः ।

'ಪರಬ್ರಹ್ಮ' ಎಂದು ಇದೆ. ಇದರ ಅಭಿಪ್ರಾಯ ಹೀಗಿದೆ - ಒಬ್ಬನ ಜ್ಞಾನದಿಂದ ಮತ್ತೊಬ್ಬನನ್ನು ಹೊಂದಲು ಸಾಧ್ಯವಿಲ್ಲ. ಯಾರನ್ನು ತಿಳಿಯುತ್ತೇವೋ ಅವನನ್ನೇ ಹೊಂದಬೇಕೆಂಬುದರಲ್ಲಿ ಸಂಶಯವಿಲ್ಲ. ಆದ್ದರಿಂದ ಪರಬ್ರಹ್ಮನನ್ನು ತಿಳಿದವನು ಪರಬ್ರಹ್ಮನನ್ನೇ ಹೊಂದುತ್ತಾನೆಂದು ಉಪನಿಷತ್ತಿಗೆ ಅರ್ಥೈಸಬೇಕು.

'ಕಿಂ ತತ್' ಎಂದರೆ ಯಾವ ಲಕ್ಷಣವುಳ್ಳವನು ಎಂದರ್ಥ. ಅಂದರೆ ಒಂದು ವಸ್ತುವನ್ನು ಲಕ್ಷಣವಿಲ್ಲದೆ ಸಕಲವಸ್ತುಗಳಿಂದ ಭಿನ್ನವಾಗಿ ತಿಳಿಯಲು ಶಕ್ಯವಿಲ್ಲ ಎಂದರ್ಥ.

'ಕಥಂ ತದ್ವೇದನಂ' ಎಂದು ಇದೆ. ಅಂದರೆ ಅಪರಿಚ್ಛಿನ್ನವಾದ ಪರಿಮಾಣವನ್ನು ಹೊಂದಿರುವ ಅವನ ಜ್ಞಾನವನ್ನು ಹೊಂದಲು ಸಾಧ್ಯವಿಲ್ಲ. 'ಕೀದೃಶೀ ಚ ತತ್ಪ್ರಾಪ್ತಿಃ' ಎಂದರೆ ಅವನು ಸರ್ವಗತನಾಗಿರುವುದರಿಂದ ನಿತ್ಯವಾಗಿ ಪ್ರಾಪ್ಯನಾಗಿದ್ದಾನೆಂದು ಭಾವ.

'ಯೋ ವೇದೇತಿ ವೇದನಂ' ಎಂದರೆ ಪರಮಾತ್ಮನು ಅಪರಿಚ್ಛಿನ್ನಪರಿಮಾಣನಾಗಿದ್ದರೂ ಭಕ್ತರ ಮೇಲಿನ ದಯೆಯಿಂದ ಅಲ್ಪಪರಿಮಾಣವನ್ನೂ ಸಹ ಪ್ರಕಟಮಾಡುತ್ತಾನೆ. ಈ ಅಭಿಪ್ರಾಯದಿಂದಲೇ ಹೃದಯಗುಹೆಯಲ್ಲಿ ಇರುವುದನ್ನು ಗುಹಾಧಿಕರಣದಲ್ಲಿ ತಿಳಿಸುತ್ತಾರೆಂದು ಭಾವ.

'ಸೋऽಶ್ನುತೇ ಇತಿ ಪ್ರಾಪ್ತಿಃ' ಎಂದು ಇದೆ. ಅಂದರೆ ಕೇವಲ ಪರಮಾತ್ಮನ ಸಂಯೋಗವೇ ಅವನ ಪ್ರಾಪ್ತಿ ಅಲ್ಲ. ಕಿಂತು ಪರಮಾತ್ಮನು ವ್ಯಕ್ತನಾದಾಗ ಸತ್ಯಕಾಮತ್ವ ಮೊದಲಾದವುಗಳ ಸಾರೂಪ್ಯದ ಅಭಿವ್ಯಕ್ತಿಯೇ ಅವನ ಪ್ರಾಪ್ತಿ. ಆದ್ದರಿಂದಲೇ 'ಸರ್ವಕಾಮಭೋಗ' ಎಂದು ಹೇಳಿದ್ದಾರೆ.

'ಯುಕ್ತಿಸಮುಚ್ಚಯಾರ್ಥಃ' ಎಂದು ಇದೆ. ಇದರ ಅಭಿಪ್ರಾಯ ಕೇವಲ ಬ್ರಹ್ಮಶಬ್ದದ ಅಭ್ಯಾಸದಿಂದ ಮಾತ್ರವಲ್ಲ ಕಿಂತು ಮಂತ್ರಗಳಿಂದ ಗಾನ ಮಾಡಿರುವುದರಿಂದಲೂ ಸಹ ಎಂದು ಸಮುಚ್ಚಯಾರ್ಥ ಎಂದು ಭಾವ.

• • • • •

## ಆನಂದಮಯನಿಗೆ ಅವಯವದಿಂದ ಭೇದವಿಲ್ಲ

**भाष्यम्– न चावयवत्वविरोधः । 'स शिरः, स दक्षिणः पक्षः, स उत्तरः पक्षः, स आत्मा, स पुच्छम्' इति तस्यैवावयवत्वोक्तेश्चतुर्वेदशिखायाम्[१] ।**

---

(१) भाष्यदीपिका – ननु विष्णोरानन्दमयत्वं न युक्तं, तस्य तदवयवत्वात् । न चासिद्धिः, ब्रह्मपुच्छमित्युक्तेः । अवयविनश्चावयवत्वविरोधादित्यत आह – न चेति ॥ तस्येत्याकृष्यते । 'तस्य' विष्णोरानन्दमयत्वे तदवयवत्वोक्तिविरोधो नेत्यर्थः । अवयवत्वे चावयवित्वस्य विरोधोऽपि नेति चशब्दार्थः । कुत इत्यतोऽवयविन एवावयवत्वस्यावयवित्वस्य

**ಆನಂದಮಯನ ಅವಯವನು ಬ್ರಹ್ಮನೆಂಬ ವಚನಕ್ಕೆ ವಿರೋಧವಿಲ್ಲ. ಏಕೆಂದರೆ ಚತುರ್ವೇದಶಿಖಾ ಎಂಬ ಗ್ರಂಥದಲ್ಲಿ ಪರಮಾತ್ಮನು ತಲೆ, ಬಲಭಾಗ, ಎಡಭಾಗ, ಮಧ್ಯದೇಹ, ಪಾದ ಎಲ್ಲವೂ ತಾನೇ ಆಗಿದ್ದಾನೆಂದು ಹೇಳಲಾಗಿದೆ.**

ಪ್ರತಿಪದಾರ್ಥ – ವಿಷ್ಣುವು ಆನಂದಮಯನೆಂದು ಹೇಳಲಾಗದು. ಹಾಗಾದಲ್ಲಿ ಅವಯವ-ಅವಯವಿಗಳಿಗೆ ಐಕ್ಯವನ್ನು ಹೇಳಿದಂತಾಗಿ ಪರಸ್ಪರವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ನ ಚ ಅವಯವತ್ವವಿರೋಧಃ = ಬ್ರಹ್ಮನು ಆನಂದಮಯನ ಅವಯವವೆಂಬುದರ ವಿರೋಧ ಬರುವುದಿಲ್ಲ. ಏಕೆಂದರೆ ಚತುರ್ವೇದಶಿಖಾಯಾಮ್ = ಚತುರ್ವೇದಶಿಖಾ ಎಂಬ ಗ್ರಂಥದಲ್ಲಿ, ಸಃ = ಆ ಬ್ರಹ್ಮನೇ, ಶಿರಃ = ತಲೆಯು, ಸಃ = ಅವನೇ, ದಕ್ಷಿಣಃ ಪಕ್ಷಃ = ಬಲಭಾಗವಾದವನು, ಸಃ = ಅವನೇ, ಉತ್ತರಃ ಪಕ್ಷಃ = ಎಡಭಾಗವಾದವನು, ಸಃ = ಅವನೇ, ಆತ್ಮಾ = ಮಧ್ಯದೇಹವು ಆದವನು, ಸಃ = ಅವನೇ, ಪುಚ್ಛಮ್ = ಪಾದಸ್ವರೂಪನು' ಇತಿ = ಹೀಗೆ, ತಸ್ಯೈವ = ಅವನಿಗೆ, ಅವಯವತ್ವೋಕ್ತೇಃ = ಅವಯವತ್ವರೂಪವನ್ನು ಹೇಳಿದ್ದರಿಂದ ವಿಷ್ಣುವು ಆನಂದಮಯನೆನ್ನಲು ಬಾಧಕವಿರುವುದಿಲ್ಲ.

## ಅವಯವಿಯೇ ಅವಯವ

**तत्वप्रकाशिका – ननु कथं विष्णोरानन्दमयत्वं तस्यानन्दमयावयवत्वादवयविनश्चावयवत्वविरोधात्? इत्यत आह – न चेति ।। न विष्णोरनन्दमयत्वे तदवयवत्वविरोधः । 'स शिरः' इत्यादि श्रुतावयविन एवावयवत्वोक्तेरवयवाद्यभेदादिति भावः ।**

'ವಿಷ್ಣುವು ಆನಂದಮಯನೆಂದು ಹೇಳಿದ್ದು ಸರಿಯಲ್ಲ. ವಿಷ್ಣುವು ಆನಂದಮಯನ ಅವಯವವಾದ್ದರಿಂದ. ಅವನೇ ಆನಂದಮಯನೆಂದರೆ 'ಅವಯವಿಯೇ ಅವಯವ' ಎಂದು ಹೇಳಿದಂತಾಗುತ್ತದೆ.

---

च श्रुत्युक्तत्वेनावयव्यादेरवयवाद्यभेदादित्याशयेन तां श्रुतिमुदाहरति – स इति ।। 'सः' नारायणः 'शिरः' शीर्षं, शिरः स इति वा । एवम् उत्तरत्रापि व्याख्येयम् । द्वितीयादितच्छब्दाः स्मृत्यनुसारात् प्रद्युम्नादिपराः । 'पक्षो' बाहुः 'उत्तरः' सव्यः 'आत्मा' मध्यदेहः 'पुच्छं' पादौ इतीत्यस्यैवंरूपायां चतुर्वेदशिखायां तस्यैवावयविभूतस्यैव विष्णोरवयवत्वोक्तेरित्यन्वयः । एवशब्देनावयवावयविभेदो निवारितः । एवम् अवयवस्यावयवित्वे न केवलमियं श्रुतिः, किन्तु – भाष्ये उपलक्षणया गृहीता 'पदं पुच्छं प्रतिष्ठा वै पुरुषः' इति तत्त्वप्रदीपोदाहृतश्रुतिरपि प्रमाणतया ग्राह्या । अस्मिन् पक्षे भाष्यगतावयवशब्दः अर्शआद्यजन्तोऽवयविपरः ।।

ವಿರೋಧ ಬರುವುದರಿಂದ ಹೇಗೆ ಹೇಳುತ್ತೀರಿ? ಎಂದರೆ "ನ ಚ" ಎನ್ನುವುದರಿಂದ ಉತ್ತರಿಸುತ್ತಾರೆ. ವಿಷ್ಣುವೇ ಆನಂದಮಯನೆಂದರೆ ಅವಯವಿಯಾದ ಆನಂದಮಯನೇ ಅವಯವ ಆಗಲಿಕ್ಕೆ ಹೇಗೆ ಸಾಧ್ಯ? ಎನ್ನುವ ವಿರೋಧಕ್ಕೆ ಅವಕಾಶವಿಲ್ಲ. 'ಸ ಶಿರಃ' ಇವೇ ಮೊದಲಾದ ಶ್ರುತಿಗಳಲ್ಲಿ ಅವಯವಿಯನ್ನೇ ಅವಯವ ಎಂದು ಹೇಳಿದ್ದಾರೆ. ಆದ್ದರಿಂದ ಅವಯವ ಅವಯವಿಭಾವವನ್ನು ಒಂದೇ ವಸ್ತುವಿಗೆ ಒಪ್ಪಿದ್ದಾರೆ.

### ನ್ಯಾಯವಿವರಣದಿಂದ ವಿರೋಧಪರಿಹಾರ

**भावदीपः – न चेति।। साध्यांशं व्याख्याय हेत्वंशं व्यनक्ति – स शिर इति ।। श्रुत्युक्तमात्रेण कथं विरोधनिरासः? इत्यतो न्यायविवरणोक्ततात्पर्यमाह – अवयवाद्यभेदादिति भावः इति ।। श्रुतौ पक्षो बाहुः । आत्मा मध्यदेहः । पुच्छं पादावित्यर्थः ।**

"ನ ಚ" ಇತ್ಯಾದಿವಾಕ್ಯದಿಂದ ಸಾಧ್ಯಾಂಶವನ್ನು ವ್ಯಾಖ್ಯಾನಮಾಡಿ, ಹೇತ್ವಂಶವನ್ನು 'ಸ ಶಿರಃ' ಇತ್ಯಾದಿವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. ಶ್ರುತಿಯಲ್ಲಿ ಹೇಳಿದ ಮಾತ್ರಕ್ಕೆ ವಿರೋಧಪರಿಹಾರವು ಹೇಗಾಗುತ್ತದೆ? ಎಂಬ ಶಂಕೆಗೆ ಉತ್ತರವಾಗಿ ನ್ಯಾಯವಿವರಣದಲ್ಲಿ ಹೇಳಿದುದಕ್ಕೆ ಅನುಸಾರಿಯಾಗಿ "ಅವಯವಾದ್ಯಭೇದಾದಿತಿ ಭಾವಃ" ಎಂಬುದಾಗಿ ಉತ್ತರವನ್ನು ನೀಡಿದ್ದಾರೆ.

ಶ್ರುತಿಯಲ್ಲಿ ಪಕ್ಷಶಬ್ದಕ್ಕೆ ಬಾಹು ಎಂಬರ್ಥವನ್ನು ಇಟ್ಟುಕೊಳ್ಳಬೇಕು. ಆತ್ಮಶಬ್ದಕ್ಕೆ ಮಧ್ಯದೇಹ ಎಂದು ಅರ್ಥ. ಪುಚ್ಛಶಬ್ದಕ್ಕೆ ಪಾದಗಳು ಎಂದರ್ಥ.

• • • • •

### ನಾರಾಯಣನ ಐದು ಅವಯವಗಳೇ ಪಂಚರೂಪಗಳು

**भाष्यम्– 'शिरो नारायणः पक्षो दक्षिणः सव्य एव च ।**
**प्रद्युम्नश्चानिरुद्धश्च सन्दोहो वासुदेवकः ।।**
**नारायणोऽथ सन्दोहो वासुदेवः शिरोऽपि वा ।**
**पुच्छं सङ्कर्षणः प्रोक्तः एक एव तु पञ्चधा ।**
**अङ्गाङ्गित्वेन भगवान् क्रीडते पुरुषोत्तमः ।।**
**ऐश्वर्यान्न विरोधश्च चिन्त्यस्तस्मिन् जनार्दने ।**
**अतर्क्ये हि कुतस्तर्कस्त्वप्रमेये कुतः प्रमा ।।'**

**इति बृहत्संहितायाम् ।।**

(೧)ನಾರಾಯಣನು ತಲೆಯು, ಪ್ರದ್ಯುಮ್ನನು ಬಲಭಾಗವು, ಅನಿರುದ್ಧನು ಎಡಭಾಗನು, ವಾಸುದೇವನು ಮಧ್ಯದೇಹನು, ಮತ್ತೊಂದು ಕ್ರಮದಲ್ಲಿ ನಾರಾಯಣನು ಮಧ್ಯದೇಹನು, ವಾಸುದೇವನು ತಲೆಯು, ಸಂಕರ್ಷಣನು ಕಾಲು, ಹೀಗೆ ಒಬ್ಬನೇ ಪರಮಾತ್ಮನು ಐದುರೂಪವನ್ನು ತಾಳಿ ಕರೆಸಿಕೊಳ್ಳುತ್ತಾನೆ. ಸರ್ವೋತ್ತಮನಾದ ಷಡ್ಗುಣ್ಯೈಶ್ವರ್ಯ-ಸಂಪನ್ನನಾದ ಪರಮಾತ್ಮನು ಅವಯವ ಅವಯವಿ ಭಾವದಿಂದ ವಿಹರಿಸುತ್ತಾನೆ.

ಆ ಪರಮಾತ್ಮನಲ್ಲಿ ಪೂರ್ಣತೆಯಿಂದ ವಿರೋಧವನ್ನು ಚಿಂತಿಸಬಾರದು. ಊಹೆಗೆ ನಿಲುಕದ ಪರಮಾತ್ಮನಲ್ಲಿ ಯುಕ್ತಿಗಳಿಗೆ ಸಾಮರ್ಥ್ಯವಿಲ್ಲ. ಸಂಪೂರ್ಣವಾಗಿ ಅವೇದ್ಯನಾದ ಪರಮಾತ್ಮನಲ್ಲಿ ಇಷ್ಟೇ ಎಂಬ ತಿಳುವಳಿಕೆಯು ಹೇಗೆ ತಾನೆ ಸಾಧ್ಯ? ಹೀಗೆ ಬೃಹತ್ಸಂಹಿತಾದಿ ಪ್ರಮಾಣಗಳಿಂದ ಅವಯವಅವಯವಿಭಾವದ ವಿರೋಧವನ್ನು ಪರಮಾತ್ಮನಲ್ಲಿ ಹೇಳಲು ಸಾಧ್ಯವಿಲ್ಲವೆಂದು ಸ್ಪಷ್ಟವಾಗುತ್ತದೆ.

ಪ್ರತಿಪದಾರ್ಥ – ಅವಯವಿಯೆನಿಸಿದ ಆನಂದಮಯನನ್ನು, ಅವಯವಸ್ವರೂಪನಾದ ಬ್ರಹ್ಮನೆಂದು ಹೇಳುವುದು ವಿರುದ್ಧವಲ್ಲವೇ? ಎಂಬ ಆಶಂಕೆಯನ್ನು ಶ್ರುತಿಯಿಂದ ಪರಿಹರಿಸಿ, ಸ್ಮೃತಿಯಿಂದ ಪರಿಹರಿಸುತ್ತಿದ್ದಾರೆ.

ನಾರಾಯಣಃ = ನಾರಾಯಣನು, ಶಿರಃ = ತಲೆಯು, ಪ್ರದ್ಯುಮ್ನಃ = ಪ್ರದ್ಯುಮ್ನನು, ದಕ್ಷಿಣಃ = ಬಲಭಾಗಸ್ವರೂಪನು, ಅನಿರುದ್ಧಃ = ಅನಿರುದ್ಧನು, ಸವ್ಯ ಏವ ಚ = ಎಡಭಾಗಸ್ವರೂಪನಷ್ಟೇ, ವಾಸುದೇವಕಃ = ವಾಸುದೇವನು, ಸಂದೋಹಃ = ಮಧ್ಯದೇಹಸ್ವರೂಪನು, ಅಥ = ಮತ್ತೊಂದು ಕ್ರಮದಲ್ಲಿ, ನಾರಾಯಣಃ = ನಾರಾಯಣನು, ಸಂದೋಹಃ = ಮಧ್ಯದೇಹಸ್ವರೂಪನು, ವಾಸುದೇವಃ = ವಾಸುದೇವನು, ಶಿರಃ = ತಲೆಯು, ಸಂಕರ್ಷಣಃ = ಸಂಕರ್ಷಣನು, ಪುಚ್ಛಂ =

---

(१) अवयविन अवयवत्वं विरुद्धमित्याशङ्कां श्रुत्या परिहृत्यात्र स्मृतिं चाऽह – शिर इति ।। अत्र चित्रादौ लिख्यमाननवनारीरूपे अवयविभूतानामनेकस्त्रीणामेकदेहावयवत्वं तथा नारायणादिपञ्चरूपाणामेकावयवत्वमुच्यते । आद्यश्चः पक्षसमुच्चये । रूपयोः परस्परसमुच्चये द्वौ । अवयविभूत एव नारायणः शिर इत्येवशब्दान्वयः । एवमवयविभूतः प्रद्युम्नो दक्षिणः पक्षो बाहुः । अनिरुद्धः सव्यः । वासुदेवः 'सन्दोहः' मध्यदेह इत्यन्वयः । अपि वेति निपातसमुदायः पक्षान्तरे । पूर्वस्मिन् पक्षे नारायणस्य शीर्षत्वम् । वासुदेवस्य मध्यदेहत्वम् । अस्मिन् पक्षे तु – तदंशे वैपरीत्यमित्युपासना-भेदेन पक्षभेदोक्तिः । सङ्कर्षणस्तूभयत्र 'पुच्छं' पादौ प्रोक्त इत्यन्वयः । तुशब्देन द्विरूपत्वं सुपर्णरूपत्वविशेषो वा ज्ञायते । ततः किमित्यत आह - एक इति ।। एवं 'पुरुषोत्तमः' क्षराक्षरपुरुषाभ्याम् उत्तमो भगवान् कृष्णः 'एक एव' पञ्चधा विभक्तः एक एवावयवैरभिन्न एव न तु भिन्नः । 'अङ्गत्वेन' अवयवत्वेन 'अङ्गित्वेन' अवयवित्वेन प्रकारेण तद्भावं प्राप्तः क्रीडत इत्यर्थः । इत्थम्भूतलक्षणे तृतीया ।

ಕಾಲು, ಹೀಗೆ ಏಕಮೇವ = ಒಬ್ಬನೇ ಪರಮಾತ್ಮನು, ಪಂಚಧಾ = ಐದು ರೂಪಗಳಿಂದ, ಪ್ರೋಕ್ತಃ = ಕರೆಸಿಕೊಂಡಿದ್ದಾನೆ. ಪುರುಷೋತ್ತಮಃ = ಕ್ಷರಾಕ್ಷರ-ಪುರುಷರಿಗಿಂತ ಶ್ರೇಷ್ಠನಾದ, ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನು, ಅಂಗಾಂಗಿತ್ವೇನ = ಅವಯವ ಅವಯವಿ ಭಾವದಿಂದ, ಕ್ರೀಡತೇ = ವಿಹರಿಸುತ್ತಾನೆ.

ಐಶ್ವರ್ಯಾತ್ = ಪರಿಪೂರ್ಣತೆಯಿಂದ ವಿರೋಧಃ = ವಿರೋಧವು, ತಸ್ಮಿನ್ ಜನಾರ್ದನೇ = ಆ ಪರಮಾತ್ಮನಲ್ಲಿ, ನ ಚಿಂತ್ಯಃ = ಊಹಿಸಬಾರದು, ಹಿ = ಏಕೆಂದರೆ, ಅತರ್ಕ್ಯೇ = ಊಹೆಗೆ ನಿಲುಕದ, ತಸ್ಮಿನ್ = ಪರಮಾತ್ಮನಲ್ಲಿ, ತರ್ಕಃ = ಯುಕ್ತಿಯು, ಕುತಃ = ಹೇಗೆ ತಾನೇ ಉಪಯುಕ್ತವಾಗುತ್ತದೆ. ಅಪ್ರಮೇಯೇ = ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲದ ಪರಮಾತ್ಮನಲ್ಲಿ, ಪ್ರಮಾ = ಇಷ್ಟೇ ಎಂಬ ತಿಳಿವಳಿಕೆಯು, ಕುತಃ = ಹೇಗೆ ತಾನೇ ಸರಿಯಾಗುತ್ತದೆ? ಇತಿ = ಈ ರೀತಿಯಾಗಿ, ಬೃಹತ್ಸಂಹಿತಾಯಾಮ್ = ಬೃಹತ್ಸಂಹಿತೆ ಎಂಬ ಗ್ರಂಥದಲ್ಲಿ ಹೇಳಿದ್ದರಿಂದ, ಪರಮಾತ್ಮನ ಅವಯವ ಅವಯವಿಗಳಿಗೆ, ವಿರೋಧವು ಬರುವುದಿಲ್ಲ. ಆದ್ದರಿಂದ ಆನಂದಮಯನು ವಿಷ್ಣುವೇ ಆಗಿದ್ದಾನೆ.

## ಅಘಟಿತಘಟನಾಪಟುವಿನಲ್ಲಿ ಹೇಗೆ ವಿರೋಧ?

**तत्वप्रकाशिका – अवयविनोऽव्यवत्वं विरुद्धमित्याशङ्कां परिहर्तुं स्मृतिं चाह – शिर इति ।। अघटितघटकेश्वरशक्त्या नावयविनोऽवयवत्वं विरुद्धमित्यर्थः ।**

ಅಲ್ಲೂ ವಿರೋಧ ಇದ್ದೇ ಇದೆಯಲ್ಲ? ಎಂದರೆ 'ಶಿರಃ' ಎನ್ನುವುದರಿಂದ ಹೇಳುತ್ತಾರೆ. ಭಗವಂತನಿಗೆ ಅಘಟಿತಘಟನಾಶಕ್ತಿ ಇರುವುದರಿಂದ ಅವಯವಿಗೆ ಅವಯವತ್ವವು ವಿರುದ್ಧವಲ್ಲ ಎಂದರ್ಥ.

**तत्वप्रकाशिका – किञ्च किं प्रमाणेनावयविनोऽवयवत्वं विरुद्धमुत 'अवयवी नावयवोऽवयवित्वाल्लोकवत्' इति तर्केण । नाद्यः । असिद्धत्वात् । द्वितीयं निराचष्टे । अतर्क्य इति ।। अतर्क्यत्वात् कुतस्तस्मिंस्तर्कः साधको बाधको वा भवेदित्यर्थः । अस्तु वा तस्य तर्क्यत्वं तथापि न तद्विरोधः । लोके परिमितशक्तित्वेन विरोधात् । विरोधोपयोगिपरिमितशक्तेरपरिमिते भगवत्यभावादिति भावेनाह – अप्रमेय इति ।।**

ಮತ್ತು ಅವಯವಿಗೆ ಅವಯವಭಾವವು ಕೂಡುವುದಿಲ್ಲವೆನ್ನಲು ಪ್ರಮಾಣವಿದೆಯೇ? ಅಥವಾ 'ಅವಯವಿಯು ಅವಯವವಲ್ಲ, ಅವಯವಿಯಾದ್ದರಿಂದ ಲೋಕದಲ್ಲಿ ಅವಯವ ಅವಯವಿಗಳಿಗೆ ಭೇದ ಕಂಡಿರುವಂತೆ' ಎಂಬ ತರ್ಕವನ್ನು ಪ್ರಮಾಣವನ್ನಾಗಿ ಹೇಳುತ್ತೀರೋ? ಪ್ರಥಮಪಕ್ಷ ತಪ್ಪು. ಆ

ರೀತಿಯ ಪ್ರಮಾಣವೇ ಇರುವುದಿಲ್ಲ. ತರ್ಕದಿಂದ ಹೇಳುತ್ತೇವೆ ಎಂದರೆ ''ಅತರ್ಕ್ಯ'' ಎನ್ನುವುದರಿಂದ ನಿರಾಕರಿಸುತ್ತಾರೆ. ಭಗವಂತನು 'ಅತರ್ಕ್ಯ' (ತರ್ಕಕ್ಕೆ ನಿಲುಕದವ)ನಾದ್ದರಿಂದ ಅವನ ವಿಷಯದಲ್ಲಿ ತರ್ಕವು ಸಾಧಕವಾಗಲಿ ಬಾಧಕವಾಗಲಿ ಆಗಲು ಸಾಧ್ಯವಿಲ್ಲ.

ಅಥವಾ ಭಗವಂತನು ತರ್ಕ್ಯನೆಂದು ಒಪ್ಪೋಣ. ಆದರೂ ನೀವು ಹೇಳಿದ ವಿರೋಧವಿಲ್ಲ. ಲೋಕದಲ್ಲಿ ಸೀಮಿತಶಕ್ತಿಯುಳ್ಳವನಾದ್ದರಿಂದ ಒಂದೇ ವ್ಯಕ್ತಿಯು ತಾನೇ ಅವಯವಿ ತಾನೇ ಅವಯವವೆಂದಾಗಲು ಸಾಧ್ಯವಿಲ್ಲ. ಆದರಿಂದ ವಿರೋಧ ಬರುತ್ತದೆ. ಈ ರೀತಿ ವಿರೋಧಕ್ಕೆ ಕಾರಣವಾದ ಪರಿಮಿತಶಕ್ತಿಯು ಅಪರಿಮಿತಶಕ್ತಿಯುಳ್ಳ ಭಗವಂತನಲ್ಲಿ ಇಲ್ಲವಾದ್ದರಿಂದ ವಿರೋಧ ಹೇಳಲು ಬರುವುದಿಲ್ಲ ಎಂಬಭಿಪ್ರಾಯದಿಂದ ''ಅಪ್ರಮೇಯ'' ಎಂಬುದಾಗಿ ಹೇಳುತ್ತಾರೆ.

ಅನೇಕಪ್ರಮಾಣಗಳಿಂದ ವಿರೋಧಪರಿಹಾರ

भावदीपः – 'ऐश्वर्यात् न विरोधः' इत्येतद् व्यनक्ति – **अघटितेति** ।। अनेन भाष्ये श्रुत्युक्तिः अवयवाद्यैक्याभिप्रायेण । स्मृत्युक्तिस्तु विरोधशामकाघटिताघटकशक्तिं वक्तुमिति सूचितम् । श्रुतावुपासकभेदेन 'नारायणोऽथ सन्दोहः मध्यदेहः' इति पक्षभेदोक्तिः । अत्र नारायणादिरूपाणामानन्दमयशब्दितानन्दमयकोशस्थनारायणाख्यमूर्त्यवयवत्वं च –

**अङ्गाङ्गित्वेन भगवान् स्वानन्दानुभवे स्थितः ।**
**स एव व्यूह चात्मानं पृथग्रूप इव स्थितः ।**

इत्यैतरेयभाष्यदिशा, तथा –

**'सर्वतः पाणिपादादिर्यतः पाण्यादिशक्तिमान् ।**
**केशादिष्वपि सर्वत्र कृष्णकेशो हि यादवः ।**
**अणोरणुतरै रूपैः पाणिपादादिसंयुतैः।**
**सर्वत्र संस्थितत्वाद्वा सर्वतः पाणिपादवान् ।।'**

इति त्रयोदशगीतातात्पर्योक्तदिशा चानेकमुक्तारत्ननिर्मितप्रतिमायां मुक्तादेरिव ज्ञातव्यम् । वचने 'सर्वत्र' इत्यस्य हस्तपादाद्यवयवस्थान इत्यप्यर्थ इत्याहुः । **अप्रमेये** = अपरिमिते । प्रमा परिमितिरित्यर्थं व्यञ्जयन् अवतारयति – **विरोधोपयोगीति** ।।

'ಐಶ್ವರ್ಯಾತ್ ನ ವಿರೋಧಃ' ಎಂಬ ಅಂಶವನ್ನು "ಅಘಟಿತಘಟಕಈಶ್ವರಶಕ್ತ್ಯಾ" ಎಂಬ ಭಾಗದಿಂದ ಸ್ಪಷ್ಟಪಡಿಸಿದ್ದಾರೆ. ಇದರಿಂದ ಭಾಷ್ಯದಲ್ಲಿ ಅವಯವಾದಿ ಐಕ್ಯಾಭಿಪ್ರಾಯದಿಂದ ಶ್ರುತಿಯನ್ನು ಹೇಳಿದ್ದಾರೆ. ವಿರೋಧವನ್ನು ಶಮನಮಾಡುವ ಅಘಟಿತಘಟಕವಾದ ಶಕ್ತಿಯು ಭಗವಂತನಲ್ಲಿ ಇದೆ ಎಂದು ತಿಳಿಸಲು ಸ್ಮೃತಿಯನ್ನು ಹೇಳಿದ್ದಾರೆ ಎಂದು ಸೂಚಿಸಿದ್ದಾರೆ.

'ನಾರಾಯಣೋಽಥ ಸಂದೋಹಃ' ಎಂಬ ಸ್ಮೃತಿವಾಕ್ಯದಿಂದ ಉಪಾಸಕಭೇದದಿಂದ ಶ್ರುತಿಯಲ್ಲಿ ಹೇಳಿದ ಪಕ್ಷಭೇದವನ್ನು ತಿಳಿಸಿದ್ದಾರೆ. ಇಲ್ಲಿ ನಾರಾಯಣಾದಿರೂಪಗಳಿಗೆ ಆನಂದಮಯಶಬ್ದಿತನಾದ ಆನಂದಮಯಕೋಶದಲ್ಲಿರುವ ನಾರಾಯಣನೆಂಬ ರೂಪವುಳ್ಳ ಭಗವಂತನ ಅವಯವತ್ವವು ಮುಂದಿನ ವಾಕ್ಯಗಳಲ್ಲಿ ಸ್ಪಷ್ಟವಾಗಿದೆ. ಐತರೇಯಭಾಷ್ಯದಲ್ಲಿ --

ಅಂಗಾಂಗಿತ್ವೇನ ಭಗವಾನ್ ಸ್ವಾನಂದಾನುಭವೇ ಸ್ಥಿತಃ।
ಸ ಏವ ವ್ಯೂಹ ಚಾತ್ಮಾನಂ ಪೃಥಗ್ರೂಪ ಇವ ಸ್ಥಿತಃ॥'

(ಸ್ವರೂಪಭೂತವಾದ ಆನಂದದಲ್ಲಿರುವ ಭಗವಂತನು ತನ್ನನ್ನು ತಾನು ಅಂಗಾಂಗಿರೂಪವಾಗಿ ವಿಭಾಗವನ್ನು ಮಾಡಿಕೊಂಡು ಪ್ರತ್ಯೇಕ ರೂಪವುಳ್ಳವನಂತೆ ತೋರಿಸಿಕೊಳ್ಳುತ್ತಾನೆ) ಎಂದು ವಿವರಿಸಲಾಗಿದೆ.

ಹಾಗೆಯೇ ಹದಿಮೂರನೇ ಅಧ್ಯಾಯದ ಗೀತಾತಾತ್ಪರ್ಯದಲ್ಲಿ -

'ಸರ್ವತಃ ಪಾಣಿಪಾದಾದಿರ್ಯತಃ ಪಾಣ್ಯಾದಿಶಕ್ತಿಮಾನ್।
ಕೇಶಾದಿಷ್ವಪಿ ಸರ್ವತ್ರ ಕೃಷ್ಣಕೇಶೋ ಹಿ ಯಾದವಃ।
ಅಣೋರಣುತರೈ ರೂಪೈಃ ಪಾಣಿಪಾದಾದಿಸಂಯುತೈಃ।
ಸರ್ವತ್ರ ಸಂಸ್ಥಿತತ್ವಾದ್ವಾ ಸರ್ವತಃ ಪಾಣಿಪಾದವಾನ್॥'

ಭಗವಂತನು ತನ್ನ ಎಲ್ಲಾ ಅವಯವಗಳಿಂದಲೂ ಪಾಣ್ಯಾದಿಗಳ ಕೆಲಸವನ್ನು ಮಾಡಲು ಸಮರ್ಥನಾಗಿರುವುದರಿಂದ 'ಸರ್ವತಃ ಪಾಣಿಪಾದಃ' ಎಂಬ ಹೆಸರಿನಿಂದ ಕರೆಸಿಕೊಳ್ಳಲ್ಪಟ್ಟಿದ್ದಾನೆ. ಕೇಶದಿಂದಲೂ ಕೂಡ ಪಾದಾದಿಗಳ ಕೆಲಸವನ್ನು ಮಾಡಬಲ್ಲವನಾದ್ದರಿಂದ ಕೃಷ್ಣನನ್ನು ಕೃಷ್ಣಕೇಶ ಎಂದೇ ಕರೆದಿದ್ದಾರೆ. ಅಥವಾ ಅಣುವಿಗಿಂತಲೂ ಅಣುವಾದ ಕೈಕಾಲುಗಳನ್ನು ಹೊಂದಿದ ರೂಪಗಳಿಂದ ಎಲ್ಲಾ ಕಡೆ ಅವನು ಇರುವುದರಿಂದ ಅವನನ್ನು ಸರ್ವತಃಪಾಣಿಪಾದನು ಎಂದು ಕರೆಯುತ್ತಾರೆ' ಎಂದು ವಿವರಿಸಿದ್ದಾರೆ. ಈ ರೀತಿಯಾಗಿ ಅನೇಕಮುತ್ತುರತ್ನಗಳಿಂದ ನಿರ್ಮಿತವಾದ ಪ್ರತಿಮೆಯಲ್ಲಿ ಹೇಗೆ ಮುತ್ತು ರತ್ನಗಳು ಎಲ್ಲಾ ಕಡೆಯೂ ಇವೆಯೋ ಹಾಗೆಯೇ ಭಗವಂತನು ತನ್ನದ್ದೇ ಆದ ಅನೇಕರೂಪಗಳಿಂದ ತನ್ನ ಮೂಲರೂಪದಲ್ಲಿರುವ ಸಾಮರ್ಥ್ಯವಿರುವುದರಿಂದ ಅವನೇ ಅವಯವವೂ ಆಗಬಹುದು. ಈ ಗೀತಾತಾತ್ಪರ್ಯವಚನದಲ್ಲಿ ಸರ್ವತ್ರ ಎಂಬುದಕ್ಕೆ 'ಹಸ್ತಪಾದಾದಿ ಅವಯವಸ್ಥಾನದಲ್ಲಿ' ಎಂಬುದೂ ಅರ್ಥವಾಗಿದೆ ಎಂದು ತಿಳಿದವರು ಹೇಳುತ್ತಾರೆ.

ಅಪ್ರಮೇಯೇ ಎಂಬ ಶಬ್ದಕ್ಕೆ ಅಪರಿಮಿತೇ ಎಂಬುದಾಗಿ ಅರ್ಥ. ಪ್ರಮಾಶಬ್ದಕ್ಕೆ ಪರಿಮಿತಿ ಎಂಬ ಅರ್ಥವನ್ನು ಹೇಳಿ ಅದನ್ನು ಸ್ಪಷ್ಟಪಡಿಸುವುದಕ್ಕಾಗಿ 'ವಿರೋಧೋಪಯೋಗಿ' ಇತ್ಯಾದಿ ವಾಕ್ಯಗಳಿಂದ ಅವತರಣಿಕೆಯನ್ನು ನೀಡುತ್ತಿದ್ದಾರೆ.

**वाक्यार्थमञ्जरी –** भाष्ये सन्दोहो मध्यभागः । प्रमाणेन आगमेन । असिद्धत्वात् अभावात् ।। **बाधको वेति** ।। प्रकृते तर्कस्य बाधकत्वेनानाशङ्कितत्वदिति भावः ।। **इति भावेनेति** ।। अनेनाप्रमेये अपरिमितशक्तिमति प्रमा परिमितशक्तिः ।

ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಲ್ಲಿರುವ 'ಸಂದೋಹ' ಶಬ್ದಕ್ಕೆ ಮಧ್ಯಭಾಗ ಎಂದರ್ಥ. 'ಪ್ರಮಾಣೇನ' ಎಂದರೆ ಆಗಮದಿಂದ ಎಂದರ್ಥ. 'ಅಸಿದ್ಧತ್ವಾತ್' ಎಂದರೆ 'ಅಭಾವಾತ್' ಎಂದರ್ಥ.

'ಭಾಧಕೋ ವಾ' ಎಂದು ಇದೆ. ಅಂದರೆ ಪ್ರಕೃತದಲ್ಲಿ ತರ್ಕವು ಬಾಧಕವಾಗಿರುವುದರಿಂದ ಶಂಕೆ ಮಾಡಿಲ್ಲ ಎಂದು ಭಾವ.

'ಇತಿ ಭಾವೇನ' ಎಂದು ಇದೆ. ಅಂದರೆ ಅಪ್ರಮೇಯನಾದ ಮತ್ತು ಅಪರಿಮತವಾದ ಶಕ್ತಿವುಳ್ಳವನಲ್ಲಿ ಪ್ರಮಾ ಮತ್ತು ಪರಿಮಿತವಾದ ಶಕ್ತಿಯು ಹೇಗೆ? ಎಂಬ ಭಾಷ್ಯಾರ್ಥವನ್ನು ಹೇಳಿದಂತಾಗುತ್ತದೆ.

• • • • •

## ರಸಶಬ್ದದ ಸ್ವಾರಸ್ಯ

**भाष्यम् – रसशब्देन विशेषणात् तत्तत्सारभूतं चिन्मात्रमेवोच्यते ।**

**इदमिति च दृश्यमानसन्निहितत्वात् ।**

'ಸ ವಾ ಏಷ ಪುರುಷೋऽನ್ನರಸಮಯಃ' ಎಂಬಲ್ಲಿ ರಸಶಬ್ದವನ್ನು ವಿಶೇಷಣವನ್ನಾಗಿ ಹೇಳಿದ ಕಾರಣ ಆಕಾಶಾದಿ ಪದಾರ್ಥಗಳಲ್ಲಿ ಶ್ರೇಷ್ಠವಾದ ಶುದ್ಧಚೇತನಸ್ವರೂಪನಾದ ಪರಮಾತ್ಮನನ್ನೇ ಸಃ ಎಂಬ ಪದದಿಂದ ಪರಾಮರ್ಶಿಸಬೇಕು.

'ಇದಮ್' ಎಂಬ ಉಪನಿಷತ್ತಿನ ಹೇಳಿಕೆಯನ್ನು 'ಕಣ್ಣಿಗೆ ಕಾಣಿಸುವ ಸಕಲಪದಾರ್ಥಗಳಲ್ಲಿ ಸನ್ನಿಹಿತನಾದ್ದರಿಂದ' ಎಂಬುದಾಗಿ ಅರ್ಥೈಸಬೇಕು.

೧.೩) [१]'ಸ ವಾ ಏಷಃ ಪುರುಷಃ' ಎಂಬ ಶ್ರುತಿಯಲ್ಲಿ ಪರಮಾತ್ಮನನ್ನೇ

---

(१) भाष्यदीपिका – ननु यदुक्तं 'स वै' इति वाक्येऽस्य परमात्मन एव परामर्शः, न 'अन्नात् पुरुषः' इत्युक्तदेहस्येति तदयुक्तम्; आत्मनो दूरस्थत्वाद् देहस्य च समीपस्थत्वात् समीपोक्तपरित्यागेन दूरस्थपरामर्शाङ्गीकारे कारणाभावात् । किञ्च– पुरुषपदेन प्रकृतस्यैव पुरुषपदेनोक्तत्वाद् आत्मनश्च तेनाप्रकृतत्वात् पुरुषपदेन परामर्शायोगः । न च –
'प्रकृतिं पुरुषं चैव विद्ध्यनादी उभावपि ।'
'पुरुषः प्रकृतिस्थो हि भुङ्क्ते प्रकृतिजान् गुणान् ।।'
इति वाक्यद्वयस्थपुरुषपदेनैकविधेनैव व्यवस्थया परमात्मजीवयोरुक्तिग्रहणवदिहाप्येकविधेनैव

द्विरुक्तेन पुरुषपदेन व्यवस्थयाऽर्थद्वयोक्त्यङ्गीकारोऽस्त्विति वाच्यम् । तत्र दुःखानुभवितृत्वरूपभेदकश्रुतिवत् प्रकृते भेदकाभावेन अन्नात् पुरुषः इत्यत्र देहः, 'स वै' इत्यत्र च परमात्मैवोच्यत इति व्यवस्थाङ्गीकारायोगादित्यत आह – रसेति ।। 'स वा एषः', इति वर्तते । तदित्यावर्तते । एवमुच्यत इति च । अन्यद् विहायेति शेषः ।

तथा च 'स वै' इति वाक्येन चिदेव चिन्मात्रं ब्रह्मचैतन्यमेव उच्यते परामृश्यते न देहः । न च तस्य दूरोक्तिविरोधः, पुरुषपदेनाप्रकृतत्वविरोधश्चेति वाच्यम् । यतस्तत् 'आत्मन आकाशः सम्भूतः'(तै.उ.२.१.२) इत्याकाशादिपुरुषान्तशब्दैरुक्तं 'तत्तत्सारभूतम्' आकाशादिपदार्थश्रेष्ठभूतं चिन्मात्रं ब्रह्मैव स वा इति परामर्शवाक्येनोच्यते । एवं तर्हि पुरुषपदेन द्वयोरपि प्रकृतत्वादुभय७६परामर्शोऽयमस्त्विति न च वाच्यम् । यतः तत्सारभूतं पुरुषसारभूतं चिन्मात्रं ब्रह्मैवान्यदेहादिकं विहाय 'सः' इति परामर्शवाक्येनोच्यते । कुत इत्यत आह – रसेति ।। रसशब्दघटितान्नरसमयशब्देन 'विशेषणात्' सारान्नमयत्वरूपपुरुषविशेषणाभिधानादित्यर्थः । जडामिश्रजीवविलक्षणब्रह्मबोधार्थं मात्रपदम् । 'रसशब्देन' रसशब्दार्थेन मुख्यत्वेन 'विशेषणात्' विशेषितत्वाद् अन्नत्वरूपविशेषणस्येति वा । ततश्चात्र 'अन्नरसोऽन्नसारोऽन्नशब्दार्थेषु मुख्यात्तृत्वादिलक्षणस्तत्प्रचुरः' इति सुधोक्तेः । टीकायां चैतन्यमात्रं ब्रह्मैवेत्यन्वयः ।

नन्वनुवाकान्तरे 'अन्नमयप्राणमयमनोमयविज्ञानमयानन्दमया मे शुद्ध्यन्ताम्' (याज्ञिकी. ६६.) इति प्रार्थितशुद्धीनामन्नमयादीनां कथं ब्रह्मतोच्यत इत्यतो वाऽऽह – रसेति ।। नात्र प्रार्थितशुद्धीनामन्नमयादिकोशानामभिधानम् । किन्तु, तत्तत्सारभूतं तत्तत्कोशनियामकं तद्गतं ब्रह्मचैतन्यमेव उच्यते । कुतः ? अत्र 'स वा एषः' (तै.उ. २-१-३.) इत्यादौ 'रसो वै सः' इत्यन्ते चान्नमयादीनां कोशव्यावृत्त्यर्थं तद्भेदार्थमेव 'रसशब्देन विशेषणात्' विशेषितत्वादित्यर्थः । आदौ विशेषितत्वं घटितत्वम् । तथा च शब्दान्तरन्यायेनान्नमयाद्यपेक्षयाऽन्नरसमयादीनां भेद इति भावः । उपलक्षणमेतत् । व्यवहिताकाशादिकारणात्मपरामर्शिना तच्छब्देन च विशेषणादित्यपि द्रष्टव्यम् । ननु यदि परिदृश्यमानदेह एव नान्नमयः, किन्तु ब्रह्मैव, तस्यैव च स इत्यादौ परामर्शः, तदा 'तस्येदमेव शिरः' (तै.उ. २-१-३.) इति प्रत्यक्षनिर्देशो नोपपद्यते । न च वाच्यम् उपनिषद्द्रष्टा मुनिर्ब्रह्मापरोक्षीकृत्य प्रत्यक्षतो निर्दिशतीति । तथा सति तेनापरोक्षीकृतप्राणमयादावपि तथा निर्देशप्रसङ्गात् ।

किञ्च – स्वस्यापरोक्षतो ज्ञातत्वेन शब्दानपेक्षणाद् उपदेश्यपुरुषाणां चापरोक्षायोग्यत्वान्निर्देशवैयर्थ्यमित्यत आह – इदमिति ।। चोऽप्यर्थः । निर्देशो युज्यत इति शेषः । इदमित्येतदस्येत्यपि व्याख्येयम् । तथा च 'अस्य' अन्नमयभगवच्छिरःपक्षादेः

ಪರಾಮರ್ಶಿಸಬೇಕೆಂದು ನಿರೂಪಿಸುತ್ತಿದ್ದಾರೆ. ರಸಶಬ್ದೇನ = ತೈತ್ತಿರೀಯೋಪನಿಷತ್ತಿನಲ್ಲಿರುವ 'ಸ ವಾ ಏಷಃ ಪುರುಷೋಽನ್ನರಸಮಯಃ' ಎಂಬಲ್ಲಿರುವ ರಸಶಬ್ದದಿಂದ, ವಿಶೇಷಣಾತ್ = ರಸವೆಂಬ ವಿಶೇಷಣವನ್ನು ನೀಡಿದ್ದರಿಂದ, ತತ್ಸಾರಭೂತಂ = ಆಯಾಯ ಪದಾರ್ಥಗಳ ಸಾರರೂಪನಾದ, ಚಿನ್ಮಾತ್ರಮೇವ = ಶುದ್ಧಜ್ಞಾನಸ್ವರೂಪನಾದ ಪರಮಾತ್ಮನೇ, ಉಚ್ಯತೇ = ಪ್ರತಿಪಾದ್ಯನಾಗುತ್ತಾನೆ.

ಇದಮಿತಿ ಚ = ಇದಮ್ ಎಂಬ ಉಪನಿಷತ್ತಿನ ಹೇಳಿಕೆಯಾದರೋ, ದೃಶ್ಯಮಾನಸನ್ನಿಹಿತತ್ವಾತ್ = 'ಕಣ್ಣಿಗೆ ಕಾಣಿಸುವ ಸಕಲಪದಾರ್ಥಗಳಲ್ಲಿ ಸನ್ನಿಹಿತನಾದ್ದರಿಂದ' ಎಂಬುದಾಗಿ ತಿಳಿಯಬೇಕು.

## ಮೊದಲಿನಿಂದ ಕೊನೆಯವರೆಗೂ ಬ್ರಹ್ಮಚೈತನ್ಯನೇ ವಿವಕ್ಷಿತ

**तत्वप्रकाशिका – यदवादि 'स वा एषः' इत्यन्यपरामर्शो 'अन्नात् पुरुषः' इत्युक्तपरामर्श इति तदयुक्तम् । आत्मनो दूरस्थत्वात् । देहस्य समीपस्थत्वात् समीपोक्तपरित्यागेन दूरस्थपरामर्शग्रहणे कारणाभावात् । प्रकृतस्यैव पुरुषशब्देनोक्तेरात्मनस्तदभावाच्च । एकेनैव शब्देन द्विरुक्तेन भेदश्रुतिं विना वस्तुद्वयोक्तिग्रहणायोगात् इत्यत आह – रसेति ।। 'स वा एष पुरुषः' इति वाक्येन ब्रह्मचैतन्यमेव परामृश्यते न देहः । न च तस्य दूरोक्तिविरोधः पुरुषपदेनाप्रकृतत्वविरोधश्च । यत आकाशादिपुरुषान्तशब्दैरुक्तमाकाशादिसारभूतं ब्रह्मचैतन्यमेव परामर्शवाक्येनोच्यते ।**

'ಸ ವಾ ಏಷ ಪುರುಷಃ' ಎಂಬಲ್ಲಿ ನಾವು ಹೇಳಿದ 'ಅನ್ನಾತ್ ಪುರುಷಃ' ಎಂಬಲ್ಲಿಂದ ಪುರುಷಶಬ್ದವಾಚ್ಯವಾದ ದೇಹವನ್ನು ಪರಾಮರ್ಶೆ ಮಾಡಬಾರದು. 'ಆತ್ಮನಃ ಆಕಾಶಃ ಸಂಭೂತಃ' ಎಂಬಲ್ಲಿಂದ ಆತ್ಮನ ಪರಾಮರ್ಶೆ ಮಾಡಬೇಕೆಂದು ನೀವು ಹೇಳಿದಿರಿ. ಅದು ಸರಿಯಲ್ಲ. ಆತ್ಮನನ್ನು ಹೇಳುವ ವಾಕ್ಯ ದೂರದಲ್ಲಿದೆ. ದೇಹವನ್ನು ಹೇಳುವ ವಾಕ್ಯ ಹತ್ತಿರದಲ್ಲಿದೆ. ಹಾಗಾಗಿ ಸಮೀಪದಲ್ಲಿರುವ ದೇಹವನ್ನು ಬಿಟ್ಟು ದೂರದಲ್ಲಿರುವ ಆತ್ಮನನ್ನು ಪರಾಮರ್ಶೆ ಮಾಡಿಕೊಳ್ಳುವುದಕ್ಕೆ ಏನೂ ಕಾರಣವಿಲ್ಲ. ಮತ್ತು 'ಅನ್ನಾತ್ ಪುರುಷಃ' ಎಂದು ಪ್ರಕೃತವಾದ ದೇಹವನ್ನೇ ಪರಾಮರ್ಶೆ

---

दृश्यमानप्रत्यक्षसिद्धदेहशिरःपक्षादौ वस्त्रवर्मान्तर्वर्तिजानुवीरावयववत् 'सन्निहितत्वात्' सम्यङ्नियामकत्वेन स्थितत्वात् लक्षणया ब्रह्मशिरसि इदमिति निर्देशो युज्यत इति योजना । लक्षणाबीजं शक्यसम्बन्धं दर्शयितुं – दृश्यमानेति ।। तथा च वस्त्रप्रावृते वर्मान्तर्गते वा जानुनीदं जान्विति व्यवहारवदयमपि व्यवहारो युज्यत एवेति न तद्विरोध इति भावः ।

ಮಾಡಿದ್ದಾರೆಂದು ಹೇಗೆ ಹೇಳುತ್ತೀರಿ? ಎನ್ನಬಹುದು. ಒಂದು ಪ್ರಕರಣದಲ್ಲಿ ಒಂದೇ ಶಬ್ದ ಎರಡುಕಡೆ ಇದ್ದಾಗ ಶ್ರುತಿಯ ಆಧಾರವಿಲ್ಲದೆ ಅರ್ಥಭೇದವನ್ನು ಆ ಶಬ್ದಕ್ಕೆ ಹೇಳುವುದು ಯುಕ್ತವಲ್ಲ ಎನ್ನುವುದನ್ನು ''ರಸಃ'' ಎನ್ನುವುದರಿಂದ ಹೇಳುತ್ತಾರೆ. 'ಸ ವಾ ಏಷಃ' ಎನ್ನುವ ವಾಕ್ಯದಿಂದ ಬ್ರಹ್ಮಚೇತನ(ಆತ್ಮ) ವನ್ನೇ ಪರಾಮರ್ಶೆ ಮಾಡಬೇಕು ಹೊರತು ದೇಹವನ್ನಲ್ಲ.

ಹಾಗೆ ಮಾಡಿದರೆ 'ದೂರದಲ್ಲಿರುವುದನ್ನು ಪರಾಮರ್ಶೆ ಮಾಡಿದಂತಾಗುವುದಿಲ್ಲವೇ? ಮತ್ತು ಪುರುಷಶಬ್ದದಿಂದ ಪ್ರಕೃತವಾಗದ ಕಾರಣ ವಿರೋಧ ಇದ್ದೇ ಇದೆ. ಹಾಗಾಗಿ ವಿರೋಧವಿರುವುದರಿಂದ ಹೇಗೆ ಹೇಳುತ್ತೀರಿ? ಎನ್ನಬಾರದು. ಶ್ರುತಿಯಲ್ಲಿ 'ಆಕಾಶದಿಂದ ವಾಯುವು' ಎಂದು ಪ್ರಾರಂಭಿಸಿ 'ಅನ್ನದಿಂದ ಪುರುಷ' ಎನ್ನುವವರೆಗೂ ಹೇಳಿದ ಆಕಾಶಾದಿಶಬ್ದಗಳಿಂದ ಆ ವಸ್ತುಗಳನ್ನಷ್ಟೇ ಅಲ್ಲದೆ ಅವುಗಳ ಸಾರಭೂತವಾದ ಆತ್ಮನು ಹೇಳಲ್ಪಡುತ್ತಾನೆ. ಆದ್ದರಿಂದ ಹಾಗೆ ಪ್ರಕೃತನಾದ ಆತ್ಮನನ್ನೇ ಪರಾಮರ್ಶೆ ಮಾಡುವುದಾದ್ದರಿಂದ ದೂರಪರಾಮರ್ಶೆಯೆಂಬ ದೋಷವಿಲ್ಲ. ಮತ್ತು ಪುರುಷಶಬ್ದದಿಂದಲೂ ಸಾರಭೂತನಾದ ಆತ್ಮನೇ ಮುಖ್ಯವಾಚ್ಯನಾದ್ದರಿಂದ ಪುರುಷಶಬ್ದದಿಂದ ಪ್ರಕೃತನಾಗಿಲ್ಲವೆಂಬ ದೋಷವೂ ಇಲ್ಲ.

भावदीपः – **प्रकृतस्येति** ।। 'अन्नात् पुरुषः' इति पुरुषपदेन प्रकृतस्यैव देहस्य 'स वा एष पुरुषः' इति पुरुषशब्दोक्तेः आत्मनः पुरुषशब्देन प्रकृतत्वाभावादित्यर्थः । **वस्तुद्वयेति** ।। देहपरमात्मरूपेत्यर्थः । 'अदृश्यत्वादिगुणकः' इत्येतद् विषयवाक्ये श्रुताक्षरशब्दयोरर्थभेदोऽङ्गीक्रियत इत्यतो वा वक्ष्यमाणपुरुषशब्दे व्यभिचारनिरासाय वा 'भेदश्रुतिं विना' इत्युक्तम् । 'सोपस्कराणि वाक्यानि' इति न्यायेन भाष्यमुपस्कृत्य व्याचष्टे – **स वा एष इति** ।। **आकाशादिति** ।। 'आकाशाद् वायुरित्यादिवाक्यस्थैः' इत्यर्थः । **सारेति** ।। नियामकभूतम्' इत्यर्थः ।

''ಪ್ರಕೃತಸ್ಯ'' ಎಂಬ ವಾಕ್ಯಭಾಗಕ್ಕೆ 'ಅನ್ನಾತ್ ಪುರುಷಃ' ಎಂಬ ವಾಕ್ಯದಲ್ಲಿ ಪುರುಷಪದದಿಂದ ಪ್ರಕೃತವಾದ ದೇಹವನ್ನೇ 'ಸ ವಾ ಏಷ ಪುರುಷಃ' ಎಂಬ ವಾಕ್ಯದಲ್ಲಿ ಪುರುಷಪದದಿಂದ ಹೇಳಿರುವುದರಿಂದ ಆತ್ಮನಿಗೆ ಪುರುಷಶಬ್ದದಿಂದ ಪ್ರಕೃತತ್ವ ಇಲ್ಲ ಎಂದು ಅರ್ಥ. ''ವಸ್ತುದ್ವಯ'' ಎಂಬ ಪದಕ್ಕೆ ದೇಹಪರಮಾತ್ಮರೂಪವಾದ ಎರಡು ವಸ್ತುಗಳು ಎಂದರ್ಥ. 'ಅದೃಶ್ಯತ್ವಾದಿಗುಣಕಃ' ಎಂಬ ವಿಷಯ-ವಾಕ್ಯದಲ್ಲಿ ಶ್ರುತವಾದ ಅಕ್ಷರಶಬ್ದದಲ್ಲಿ ಅರ್ಥಭೇದವನ್ನು ಅಂಗೀಕಾರಮಾಡುತ್ತೇವೆ ಎಂಬ ದೃಷ್ಟಿಯಿಂದ ಅಥವಾ ಮುಂದೆ ಹೇಳಲಿರುವ ಪುರುಷಶಬ್ದಕ್ಕೆ ವ್ಯಭಿಚಾರವನ್ನು ನಿರಾಸಮಾಡುವುದಕ್ಕಾಗಿ 'ಭೇದಶ್ರುತಿಂ ವಿನಾ' ಎಂದು ಹೇಳಿದ್ದಾರೆ.

'ಸೋಪಸ್ಕರಾಣಿ ವಾಕ್ಯಾನಿ' ಎಂಬ ನ್ಯಾಯದಿಂದ ಭಾಷ್ಯಕ್ಕೆ ಅನುಸಾರಿಯಾಗಿ ''ಸ ವಾ ಏಷಃ'' ಇತ್ಯಾದಿಯಾಗಿ ವ್ಯಾಖ್ಯಾನಮಾಡಿದ್ದಾರೆ. ''ಆಕಾಶಾದಿ'' ಇತ್ಯಾದಿಪದಕ್ಕೆ 'ಆಕಾಶಾದ್ವಾಯುಃ' ಇತ್ಯಾದಿವಾಕ್ಯ-

ಗಳಲ್ಲಿರುವ ಆಕಾಶ ಮೊದಲಾದವುಗಳಿಗೆ ಎಂದರ್ಥ. "ಸಾರ" ಎಂಬ ಪದದಿಂದ 'ನಿಯಾಮಕತ್ವೇನ ಇರುವಂತಹದ್ದು' ಎಂಬ ಅರ್ಥವನ್ನು ತಿಳಿದುಕೊಳ್ಳಬೇಕು.

**वाक्यार्थमञ्जरी –** कुत इति भाष्यार्थ उक्तो भवति । तदभावात् । पुरुषपदेनाप्रकृतत्वात् । द्विरुक्तेन द्विवारमुक्तत्वेन निमित्तेन । भेदश्रुतिं भेदबोधकशब्दम् ॥

**आकाशदीति** ॥ "आत्मन आकाशः सम्भूतः आकाशाद्वायुः वायोरग्निरग्नेरापः अभ्द्यः पृथिवी पृथिव्या औषधयः औषधीभ्योऽन्नं अन्नात् पुरुषः" इत्यत्रोक्तेरित्यर्थः ॥ **सारभूतमिति** ॥ आकाशादिशब्दार्थानां भूततदभिमानितद्देहतदर्नियामकहरिरूपाणां मध्ये श्रेष्टमित्यर्थः ।

'ತದಭಾವಾತ್' ಎಂದರೆ ಪುರುಷಪದದಿಂದ ಪ್ರಕೃತವಾಗದಿರುವುದರಿಂದ ಎಂದರ್ಥ. 'ದ್ವಿರುಕ್ತೇನ' ಎಂದರೆ ಎರಡು ಬಾರಿ ಹೇಳಿರುವ ನಿಮಿತ್ತದಿಂದ ಎಂದರ್ಥ. 'ಭೇದಶ್ರುತಿಂ' ಎಂದರೆ ಭೇದವನ್ನು ಬೋಧನೆ ಮಾಡುವ ಶಬ್ದವನ್ನು ಎಂದರ್ಥ.

'ಆಕಾಶಾತ್' ಎಂದರೆ 'ಆತ್ಮನಃ ಆಕಾಶಃ ಸಂಭೂತಃ ಆಕಾಶಾದ್ವಾಯುಃ ವಾಯೋರಗ್ನಿರಗ್ನೇರಾಪಃ ಅದ್ಭ್ಯಃ ಪೃಥಿವೀ ಪೃಥಿವ್ಯಾ ಓಷಧಯಃ ಓಷಧೀಭ್ಯೋಽನ್ನಮ್ ಅನ್ನಾತ್ಪುರುಷಃ' ಎಂಬ ಮಂತ್ರದಲ್ಲಿ ಕೇಳಿಬರುವ ರೀತಿಯಿಂದ ಎಂದರ್ಥ.

'ಸಾರಭೂತಂ' ಎಂದರೆ ಆಕಾಶಾದಿಶಬ್ದಗಳಿಗೆ ಭೂತ, ಭೂತಾಭಿಮಾನಿ, ತದ್ದೇಹ, ಇವುಗಳ ನಿಯಾಮಕನಾದ ಹರಿರೂಪಗಳ ಮಧ್ಯದಲ್ಲಿ ಶ್ರೇಷ್ಠ ಎಂದರ್ಥ.

## ಪರಮಾತ್ಮನೇ ಪುರುಷ

**तत्वप्रकाशिका – एवं तर्हि पुरुषपदेन द्वयोरप्युक्तत्वादुभयपरामर्शोऽयमस्त्विति न वाच्यं किं तु पुरुषसारभूतं ब्रह्मचैतन्यमात्रमेवान्यद्विहायोच्यते । कुत एतत्? रसशब्देन विशेषणात् । यथा 'प्रकृतिं पुरुषं च' इति पुरुषशब्देन द्वयोः प्रकृतत्वेऽपि दुःखानुभवितृत्वविशेषणेन 'पुरुषः प्रकृतिस्थो हि' इति जीव एवोच्यते । एवम् 'अन्नात् पुरुषः' इत्युभयोः प्रकृतत्वेऽपि 'स वा एष पुरुषोऽन्नरसमयः' इति सारान्नमयत्वविशेषणेन परमात्मंपरामर्श एवेति ज्ञायत इति भावः ।**

ಹೀಗೆ ಹೇಳುವುದಾದರೆ, ಪುರುಷಶಬ್ದದಿಂದ ದೇಹ ಮತ್ತು ಆತ್ಮ ಇಬ್ಬರೂ ಪ್ರಕೃತ ಎಂದು ಹೇಳಿದಂತಾಯಿತು. ಹಾಗಾಗಿ 'ಸ ವಾ ಏಷ ಪುರುಷಃ' ಎಂಬ ವಾಕ್ಯದಿಂದ ಆ ಇಬ್ಬರನ್ನೂ ಪರಾಮರ್ಶೆ ಮಾಡಿರಿ; ಆತ್ಮನನ್ನು ಮಾತ್ರ ಏಕೆ ಪರಾಮರ್ಶೆ ಮಾಡುತ್ತಿದ್ದೀರಿ ಎಂದು ಹೇಳಬಾರದು. ಪುರುಷಶಬ್ದದಿಂದ ದೇಹವನ್ನು ಬಿಟ್ಟು ಪುರುಷಶಬ್ದದ ಸಾರಭೂತವಾದ ಆತ್ಮನನ್ನೇ ಸ್ವೀಕರಿಸಬೇಕು.

ಏಕೆಂದರೆ 'ಅನ್ನಮಯ' ಎಂದು ಹೇಳದೆ 'ಅನ್ನರಸಮಯಃ' ಎಂದು 'ರಸ'ಶಬ್ದವನ್ನು ವಿಶೇಷಣವನ್ನಾಗಿ ಕೊಟ್ಟಿದ್ದಾರೆ. 'ಪ್ರಕೃತಿಂ ಪುರುಷಂ ಚ' ಎಂದು ಪುರುಷಶಬ್ದದಿಂದ ಪ್ರಕೃತಿ ಹಾಗು ಪುರುಷ ಇಬ್ಬರೂ ಪ್ರಕೃತರಾದರೂ ದುಃಖವನ್ನು ಅನುಭವಿಸುವವನಾದ್ದರಿಂದ 'ಪುರುಷಃ ಪ್ರಕೃತಿಸ್ಥೋ ಹಿ' ಎಂಬುದಾಗಿ ಜೀವನೇ ಗ್ರಹಿಸಲ್ಪಡುತ್ತಾನೆ. ಅದರಂತೆ 'ಅನ್ನಾತ್ ಪುರುಷಃ' ಎಂಬಲ್ಲಿ ದೇಹ ಮತ್ತುಆತ್ಮರು ಪ್ರಕೃತರಾದರೂ 'ಸ ವಾ ಏಷ ಪುರುಷೋಽನ್ನರಸಮಯಃ' ಎಂದು ಸಾರಾನ್ನವನ್ನು ವಿಶೇಷಣವನ್ನಾಗಿ ಕೊಟ್ಟಿದ್ದರಿಂದ ಪರಮಾತ್ಮನನ್ನೇ ಪರಾಮರ್ಶೆ ಮಾಡಬೇಕೆಂದು ತಿಳಿಯುತ್ತದೆ.

## ರಸೋ ವೈ ಸಃ

**तत्वप्रकाशिका – उक्तं च**

**'बहूनां सह निर्देश एकयाऽभिधयैव तु ।**
**तयैवाभिधया तेषां परमृश्यैकमुच्यते' इति ।**

**एतच्च सविस्तरमुक्तमुत्तरप्रस्थाने 'बह्मशब्दोदिते तस्मिन्' इत्यादिना ।**

**ननु 'अन्नमयप्राणमयमनोमयविज्ञानमयानन्दमया मे शुध्यन्ताम्' इति स्थानान्तरे प्रार्थितशुद्धीनामन्नमयादीनां कथं ब्रह्मतोच्यते? इत्यतो वाऽऽह – रसेति ।। भवेदेतद् यदि अन्नमयादयोप्यत्रोच्यन्ते । नैतदस्ति किन्तु तत्तत् कोशगतं तत्तन्नियामकं ब्रह्मचैतन्यमेवोच्यते । कुतः? 'अन्नरसमयः' इत्यादौ 'रसो वै सः' इत्यन्ते चैतेषां कोशव्यावृत्त्यर्थमेव रसशब्देन विशेषणादित्यर्थः ।**

'ಬಹೂನಾಂ ಸಹ ನಿರ್ದೇಶ ಏಕಯಾಽಭಿಧಯ್ಯೆವ ತು । ತಯ್ಯೆವಾಭಿಧಯಾ ತೇಷಾಂ ಪರಾಮೃಶ್ಯೈಕಮುಚ್ಯತೇ'' (ಭಾಗವತತಾತ್ಪರ್ಯ) (ಒಂದೇ ಪದಶಕ್ತಿ(ವೃತ್ತಿ)ಯಿಂದ ಅನೇಕಾರ್ಥ-ವುಳ್ಳಂತಹ ಒಂದು ಪದದಿಂದ ಅನೇಕಾರ್ಥಗಳು ನಿರ್ದೇಶಿಸಲ್ಪಟ್ಟಾಗ ಅದೇ ಪದಶಕ್ತಿಯಿಂದ ಪರಾಮರ್ಶಿಸಿ (ವಿಚಾರಮಾಡಿ) ಒಂದು ಅರ್ಥವನ್ನಿಟ್ಟುಕೊಳ್ಳಬೇಕು) ಎಂದು ಹೇಳಲ್ಪಟ್ಟಿದೆ. ಇದಾದರೋ 'ಬ್ರಹ್ಮಶಬ್ದೋದಿತೇ ತಸ್ಮಿನ್' ಇವೇ ಮೊದಲಾದ ವಾಕ್ಯಗಳಿಂದ ಅನುವ್ಯಾಖ್ಯಾನದಲ್ಲಿ ಸವಿಸ್ತರವಾಗಿ ಹೇಳಿದ್ದಾರೆ.

'ಅನ್ನಮಯಪ್ರಾಣಮಯಮನೋಮಯವಿಜ್ಞಾನಮಯಾನಂದಮಯಾ ಮೇ ಶುದ್ಧ್ಯಂತಾಮ್' (ನನ್ನ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಕೋಶಗಳು ಶುದ್ಧಿಯಾಗಲಿ) ಎಂದು ಶುದ್ಧಿಯನ್ನು ಪ್ರಾರ್ಥಿಸಿದ ಅನ್ನಮಯಾದಿಕೋಶಗಳನ್ನು ಬ್ರಹ್ಮನೆಂದು ಹೇಗೆ ಹೇಳುತ್ತೀರಿ? ಎಂದರೆ ''ರಸ'' ಎಂದು ಹೇಳುತ್ತಾರೆ. ಒಂದು ವೇಳೆ ಶುದ್ಧಿಯನ್ನು ಪ್ರಾರ್ಥಿಸಿದ

ಅನ್ನಮಯಾದಿಕೋಶಗಳನ್ನೇ ಇಲ್ಲಿ ಹೇಳಿದ್ದರೆ ನೀವು ಹೇಳಿದ್ದು ಸರಿಯಾಗುತ್ತಿತ್ತು. ಆದರೆ ಕೋಶಗಳನ್ನು ಇಲ್ಲಿ ಹೇಳಿಲ್ಲ. ಕಿಂತು ಕೋಶಗತವಾಗಿರುವ ಕೋಶನಿಯಾಮಕನಾದ ಭಗವಂತನನ್ನೇ ಇಲ್ಲಿ ಹೇಳಲಾಗಿದೆ. ಏಕೆಂದರೆ ಪ್ರಾರಂಭದಲ್ಲಿ 'ಅನ್ನರಸಮಯಃ' ಎಂದು ಹೇಳಿ ಕೊನೆಯಲ್ಲಿ 'ರಸೋ ವೈ ಸಃ' ಎಂದು ಕೋಶಗಳನ್ನು ವ್ಯಾವೃತ್ತಿಮಾಡುವುದಕ್ಕೋಸ್ಕರ ರಸಶಬ್ದವನ್ನು ವಿಶೇಷಣವನ್ನಾಗಿ ಕೊಟ್ಟಿರುವುದರಿಂದ ಹೀಗೆ ಅರ್ಥೈಸಬೇಕೆಂದು ಅಭಿಪ್ರಾಯ.

भावदीपः – (१)एवकारस्य व्यावर्त्यशङ्कापूर्वमर्थमाह – **एवं तर्हीति** ।। **प्रकृतिमिति** ।। 'प्रकृतिं पुरुषं चैव विद्ध्यनादी उभावपि' इति गीतायां त्रयोदशेऽध्याये पुरुषपदेन जीवपरयोः प्रकृतिपदेन चेतनाचेतनप्रकृत्योः स्वीकारायोभावपीत्युक्तमिति गीतातात्पर्योक्तेः द्वयोः प्रकृतत्वेऽपीत्युक्तम् । 'पुरुषः प्रकृतिस्थो हि भुङ्क्ते प्रकृतिजान् गुणान्' इत्युत्तरतृतीयश्लोके प्रकृतिजान् गुणान् दुःखादीन् भुङ्क्ते इति दुःखानुभवितृत्वविशेषणेन जीव एवोच्यत इत्यर्थः । 'पुरुषः प्रकृतिस्थः' इत्यत्र पुरुषशब्दो जीव इति तात्पर्योक्तेरिति भावः ।

**उभयोरिति** ।। 'देहपरमात्मनोः' इत्यर्थः । **सारान्नेति** ।। 'सारान्नमय एवासौ' इत्यनुभाष्यसुधोक्तदिशा सारान्नत्वं श्रेष्ठान्नत्वं भूताद्यत्वादिकं तत्प्रचुरत्वविशेषणेनेत्यर्थः । **उक्तं चेति** ।। एकादशस्कन्धतात्पर्ये । तेषां मध्य इत्यर्थः ।

एवं अनुव्याख्यानानुरोधेन भाष्यस्यैकमर्थमुक्त्वा –

**अन्नस्य सारभूतोऽयं शरीरस्य च केशवः ।**
**अन्ननामा चान्नसंस्थः शरीरेषु च संस्थितः ।।'**

इति तैत्तिरीयभाष्यानुरोधेन व्यावर्त्य पूर्वमर्थान्तरमाह – **नन्वन्नमयेति** ।। **स्थानान्तरेति** ।। 'नारायणेत्याध्यापकप्रसिद्धोपनिषदि' इत्यर्थः । विरजाहोमप्रकरणस्थमिदं वाक्यम् । **तेषामिति** ।। तेन पञ्चानामप्यन्नरसमयः प्राणरसमयो

---

(१) 'एवं च रसशब्दः सारवाची । 'रसः सारोवरश्चेति शब्दाः पर्यायवाचकाः' इत्यभिधानात् ।(तत्वसुखबोधिनी)

एवं च सारान्नमयपदेन प्राक्प्रस्तुतसारान्नस्य साररूपः अत एव भूतात्तृत्वेनान्न पदवाच्यः अन्नपदार्थ भूतभूतात्तृत्वे प्राचुर्यवांश्च परमात्मा लभ्यते । अतः पुरुषपदमपि सारभूतं पूर्णत्वात् पुरुषपदवाच्यं विष्णुमेव वक्ति । – (गुर्वर्थदीपिका)

**मनोरसमयो विज्ञानरसमय आनन्दरसमय इति विशेषणार्थमेवाद्यन्तयोः रस-पदोक्तिः । तथा च प्राणरसादिपदेन सारप्राणादिरूपचेष्टकत्वादिरेव लभ्यते । न तु प्रसिद्धवाय्वादिरिति भावः ।।**

'ಏವಂ ತರ್ಹಿ' ಇತ್ಯಾದಿ ವಾಕ್ಯದಿಂದ ಏವಕಾರಕ್ಕೆ ವ್ಯಾವರ್ತ್ಯವನ್ನು ಶಂಕೆ ಮಾಡಿಕೊಳ್ಳುವುದರ ಮೂಲಕ ಅರ್ಥವನ್ನು ವಿವರಿಸಿದ್ದಾರೆ.

''ಪ್ರಕೃತಿಂ'' ಇತ್ಯಾದಿ ವಾಕ್ಯಭಾಗದಿಂದ ''ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ'' ಎಂಬ ಗೀತೆಯ ಹದಿಮೂರನೆಯ ಅಧ್ಯಾಯದ ಶ್ಲೋಕದಲ್ಲಿ ಪುರುಷಪದದಿಂದ ಜೀವ ಮತ್ತು ಪರ ಇಬ್ಬರನ್ನೂ ಕೂಡ; ಪ್ರಕೃತಿಪದದಿಂದ ಚೇತನಪ್ರಕೃತಿ ಮತ್ತು ಅಚೇತನಪ್ರಕೃತಿ ಎರಡನ್ನೂ ಕೂಡ ಸ್ವೀಕಾರಮಾಡುವುದಕ್ಕಾಗಿ 'ಉಭಾವಪಿ' ಎಂಬ ಪದವನ್ನು ಬಳಸಿದ್ದಾರೆ ಎಂದು ಗೀತಾತಾತ್ಪರ್ಯದಲ್ಲಿ ಹೇಳಿರುವುದರಿಂದ 'ದ್ವಯೋಃ ಪ್ರಕೃತತ್ವೇಪಿ' ಎಂದು ಹೇಳಿದ್ದಾರೆ. ಅದರ ನಂತರದ ಮೂರನೆಯ ಶ್ಲೋಕವಾದ 'ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್' ಎಂಬಲ್ಲಿ ಪ್ರಕೃತಿಜಾನ್ ಗುಣಾನ್ ಎಂಬ ಪದಕ್ಕೆ 'ದುಃಖಾದಿಗಳನ್ನು ಅನುಭವಿಸುತ್ತಾನೆ' ಎಂಬುದಾಗಿ ದುಃಖಾನುಭವವುಳ್ಳವನು ಎಂಬ ವಿಶೇಷಣ ಇರುವುದರಿಂದ ಪುರುಷಶಬ್ದದಿಂದ ಜೀವನನ್ನೇ ಹೇಳಬೇಕು ಎಂದರ್ಥ. 'ಪುರುಷಃ ಪ್ರಕೃತಿಸ್ಥಃ' ಪುರುಷಶಬ್ದದಿಂದ ಪ್ರಕೃತನಾದವನು ಜೀವನಾಗಿದ್ದಾನೆ - ಎಂದು ಗೀತಾತಾತ್ಪರ್ಯದಲ್ಲಿ ಹೇಳಿರುವುದರಿಂದ ಈ ಅಭಿಪ್ರಾಯವನ್ನು ಗ್ರಹಿಸಿಕೊಳ್ಳಬೇಕು.

''ಉಭಯೋಃ'' ಎಂಬ ಪದಕ್ಕೆ 'ದೇಹ ಮತ್ತು ಪರಮಾತ್ಮರಿಗೆ' ಎಂದರ್ಥ. ''ಸಾರಾನ್ನ'' ಇತ್ಯಾದಿ ವಾಕ್ಯಭಾಗದಿಂದ 'ಸಾರಾನ್ನಮಯ ಏವಾಸೌ' ಇತ್ಯಾದಿಯಾಗಿ ಅನುವ್ಯಾಖ್ಯಾನ ಮತ್ತು ಸುಧಾದಲ್ಲಿ ಹೇಳಿರುವಂತೆ ಸಾರಾನ್ನತ್ವ ಎಂದರೆ ಭೂತಾದ್ಯತ್ವಾದಿರೂಪವಾದ ಶ್ರೇಷ್ಠಾನ್ನತ್ವ. ಅನ್ನಶಬ್ದಕ್ಕೆ ಪ್ರಚುರತ್ವ-ವಿಶೇಷಣವನ್ನು ಹೇಳಿರುವುದರಿಂದ ಹೀಗೆಯೇ ಅರ್ಥವನ್ನು ಗ್ರಹಿಸಬೇಕು ಎಂದು ಅಭಿಪ್ರಾಯ.

''ಉಕ್ತಂ ಚ'' ಎಂಬ ಪದಕ್ಕೆ ಏಕಾದಶಸ್ಕಂಧತಾತ್ಪರ್ಯದಲ್ಲಿ ಹೇಳಿದೆ ಎಂದರ್ಥ. ತಾತ್ಪರ್ಯವಾಕ್ಯದಲ್ಲಿ ತೇಷಾಂ ಎಂಬ ಪದಕ್ಕೆ ಅವುಗಳ ಮಧ್ಯದಲ್ಲಿ ಎಂದರ್ಥ. ಈ ರೀತಿಯಾಗಿ ಅನುವ್ಯಾಖ್ಯಾನಕ್ಕೆ ಅನುಸಾರಿಯಾಗಿ ಭಾಷ್ಯಕ್ಕೆ ಒಂದು ರೀತಿಯಾಗಿ ಅರ್ಥವನ್ನು ಹೇಳಿ;

ಅನ್ನಸ್ಯ ಸಾರಭೂತೋಽಯಂ ಶರೀರಸ್ಯ ಚ ಕೇಶವಃ।
ಅನ್ನನಾಮಾ ಚಾನ್ನಸಂಸ್ಥಃ ಶರೀರೇಷು ಚ ಸಂಸ್ಥಿತಃ ।।

ಎಂಬ ತೈತ್ತಿರೀಯಭಾಷ್ಯವಾಕ್ಯದಲ್ಲಿ ಹೇಳಿದಂತೆ ಅರ್ಥವನ್ನು ನಿರ್ಣಯಮಾಡುವುದಕ್ಕಿಂತ ಮೊದಲು ಬರಬಹುದಾದ ಶಂಕೆಯನ್ನು ''ನನು ಅನ್ನಮಯ'' ಇತ್ಯಾದಿವಾಕ್ಯಗಳಿಂದ ವಿವರಿಸುತ್ತಿದ್ದಾರೆ.

''ಸ್ಥಾನಾಂತರ'' ಎಂಬ ಪದಕ್ಕೆ 'ನಾರಾಯಣ ಎಂಬ ಪದದಿಂದ ಅಧ್ಯಾಪಕಪರಂಪರೆಯಿಂದ ಪ್ರಸಿದ್ಧವಾದ ಮಹಾನಾರಾಯಣೋಪನಿಷತ್ತಿನಲ್ಲಿ' ಎಂದರ್ಥ. ಟೀಕೆಯಲ್ಲಿ ಸ್ವೀಕರಿಸಿದ ವಾಕ್ಯವು ವಿರಜಾಹೋಮ ಪ್ರಕರಣದಲ್ಲಿ ಇದೆ.

''(ಏ)ತೇಷಾಂ'' ಎಂಬ ವಾಕ್ಯಭಾಗದಿಂದ ಅನ್ನರಸಮಯಃ, ಪ್ರಾಣರಸಮಯಃ, ಮನೋರಸಮಯಃ, ವಿಜ್ಞಾನರಸಮಯಃ, ಆನಂದರಸಮಯಃ ಎಂಬ ಐದೂ ಕಡೆಗಳಲ್ಲೂ ಕೂಡ ರಸಶಬ್ದವನ್ನು ವಿಶೇಷಣವಾಗಿ ಸ್ವೀಕರಿಸಬೇಕು ಎಂಬ ದೃಷ್ಟಿಯಿಂದ ಅನ್ನಮಯ ಮತ್ತು ಆನಂದಮಯ ಎಂಬ ಮೊದಲ ಮತ್ತು ಕೊನೆಯ ರೂಪಗಳಲ್ಲಿ ರಸಪದವನ್ನು ಬಳಸಿದ್ದಾರೆ. ಹೀಗಿರುವುದರಿಂದ ಪ್ರಾಣರಸಾದಿ ಪದಗಳಿಂದ ಸಾರಪ್ರಾಣಾದಿರೂಪವಾದ ಚೇಷ್ಟಕತ್ವಾದಿಗಳೇ ಸಿಗುತ್ತವೆ; ಹೊರತು ಪ್ರಸಿದ್ಧವಾಯ್ವಾದಿಗಳು ಅಲ್ಲ -- ಎಂಬ ಅಭಿಪ್ರಾಯ ಸಿಗುತ್ತದೆ.

## ಕಾಣಿಸುವ ದೇಹ ಅನ್ನಮಯವಲ್ಲ

**तत्वप्रकाशिका – ननु यदि परिदृश्यमानदेह एव नान्नमयः किन्तु ब्रह्मैव । कथं तर्हि तस्येदमेव शिरः? इति प्रत्यक्षनिर्देशो युज्यते । न च वाच्यमुपनिषद्द्रष्टा मुनिर्ब्रह्माऽपरोक्षीकृत्य प्रत्यक्षतो निर्दिशतीति । तथा सति तेनापरोक्षीकृतप्राणमयादौ तत्प्रसङ्गात् । निर्देशवैयर्थ्याच्चेत्यत आह – इदमिति ।। दृश्यमानशिरःपक्षादावन्नमयभगवच्छिरःपक्षादेः सन्निहितत्वाद् वस्त्रप्रावृतजानुवत् 'इदम्' इति च निर्देशो युज्यत इत्यर्थः ।**

ಕಣ್ಣಿಗೆ ಕಾಣಿಸುವ ದೇಹವೇ ಅನ್ನಮಯವಲ್ಲ; ಕಿಂತು ಬ್ರಹ್ಮನೇ ಎಂದು ಹೇಳುವುದಾದರೆ 'ತಸ್ಯ ಇದಮೇವ ಶಿರಃ' ಎಂದು ಪ್ರತ್ಯಕ್ಷವಾಗಿ ನಿರ್ದೇಶ ಮಾಡಿರುವುದು ಹೇಗೆ ಕೂಡುತ್ತದೆ? ಉಪನಿಷದ್ ದ್ರಷ್ಟಾರರಾದ ಋಷಿಗಳು ಬ್ರಹ್ಮನನ್ನು ಅಪರೋಕ್ಷ ಮಾಡಿಕೊಂಡು ಪ್ರತ್ಯಕ್ಷವಾಗಿ ನಿರ್ದೇಶ ಮಾಡುತ್ತಿದ್ದಾರೆ ಎಂದು ಹೇಳುವುದೂ ಸರಿಯಲ್ಲ. ಹಾಗಿದ್ದರೆ ಅವರಿಂದ ಅಪರೋಕ್ಷ ಮಾಡಿಕೊಂಡಂತಹ ಪ್ರಾಣಮಯಾದಿಗಳಲ್ಲಿಯೂ ಹಾಗೆ ಪ್ರತ್ಯಕ್ಷ ನಿರ್ದೇಶ ಮಾಡಬೇಕಿತ್ತು. ಮತ್ತು ಪ್ರತ್ಯಕ್ಷದಿಂದ ನೋಡಿದ ಮೇಲೆ ನಿರ್ದೇಶಮಾಡುವುದೇ ವ್ಯರ್ಥವಲ್ಲವೇ? ಈ ಪ್ರಶ್ನೆಗೆ ''ಇದಮ್'' ಎಂಬುದಾಗಿ ಉತ್ತರಿಸುತ್ತಾರೆ. ಕಣ್ಣಿಗೆ ಕಾಣಿಸುವ ತಲೆ ಮುಂತಾದವುಗಳಲ್ಲಿ ಅನ್ನಮಯನಾದ ಭಗವಂತನ ತಲೆ ಮೊದಲಾದವುಗಳು ಇರುವುದರಿಂದ ಬಟ್ಟೆಯಿಂದ ಮುಚ್ಚಲ್ಪಟ್ಟ ಮೊಣಕಾಲನ್ನು ತೋರಿಸಿ ಇದು ಮೊಣಕಾಲು ಎಂದು ಹೇಳುವಂತೆ 'ಇದು ಅವನ ತಲೆ' ಎಂದು ಹೇಳುವುದು ಕೂಡುತ್ತದೆ.

भावदीपः – **निर्देशेति** ।। तस्य परार्थत्वेन परस्यानपरोक्षत्वादिति भावः । **वस्त्रेति** ।। 'इदमित्येव निर्देशो वस्त्रप्रावृतवद् विभोः' इत्यनुभाष्योक्तेरिति भावः ।

''ನಿರ್ದೇಶ'' ಎಂಬ ವಾಕ್ಯಭಾಗದಿಂದ 'ವಾಕ್ಯದಿಂದ ನಿರ್ದೇಶ ಮಾಡುವುದು ಇನ್ನೊಬ್ಬರಿಗೆ ಉಪಕಾರವಾಗುವ ದೃಷ್ಟಿಯಿಂದಾಗಿರುವುದರಿಂದ ಪರರಿಗೆ ಅನ್ನಮಯಾದಿರೂಪಗಳು ಅಪರೋಕ್ಷವಾಗಿಲ್ಲದಿರುವುದರಿಂದ ನಿರ್ದೇಶವು ವ್ಯರ್ಥವಾಗಬೇಕಾದೀತು' ಎಂಬ ಅಭಿಪ್ರಾಯವನ್ನು ಸ್ವೀಕರಿಸಬೇಕು.

"ವಸ್ತ್ರ" ಇತ್ಯಾದಿ ವಾಕ್ಯಭಾಗದಿಂದ 'ಇದಮಿತ್ಯೇವ ನಿರ್ದೇಶೋ ವಸ್ತ್ರಪ್ರಾವೃತವದ್ ವಿಭೋಃ' ಎಂಬ ಅನುವ್ಯಾಖ್ಯಾನವಾಕ್ಯದ ಅಭಿಪ್ರಾಯವನ್ನು ಸ್ವೀಕರಿಸಬೇಕು.

**वाक्यार्थमञ्जरी** – चिन्मात्रमेवेत्येवशब्दार्थोऽन्यद्विहायेति । "प्रकृतिं पुरुषं चैव विध्यनादी उभावपि" इति गीतावाक्यं । द्वयोः जीवपरयोः ॥

**दुःखानुभवितृत्वविशेषणेनेति** ॥ "भुंक्ते प्रकृतिजान् गुणान्" इति वाक्यशेषादिति भावः॥ **सारान्नमयेति**॥ अन्नशब्दार्थेषु यत्सारं श्रेष्टं भतूाद्यत्वं तदत्तृत्वरूपं तत्प्रचुरत्व-विशेषणेनेत्यर्थः । "रससारवरश्रेष्टशब्दाःपर्यायवाचिनः" इत्युक्तेः । दृष्टान्तमात्रं न साधकमित्यतोत्र एकादशतात्पर्यसम्मतिमाह – **उक्तश्चेति** ॥ बहुपदार्थानामेकेन शब्देनोद्देशेपि तेषां मध्ये एकं तेनैव शब्देन परामृश्य तस्य किञ्चिद्विधीयत इत्यर्थः । नन्वाकाशादिपुरुषान्तपदैर्ब्रह्मग्रहणे सम्भूतशब्दोक्तसृष्ट्यनुपपत्तिरिति इत्यत आह – **एतच्चेति** ॥ उत्तरप्रस्थाने अनुव्याख्याने । तदेवाह – **ब्रह्मशब्देति** ॥

ब्रह्मशब्दोदितेतस्मिन्नात्म शब्दं प्रयुज्य च ।
तस्मादाकाशसृष्टिं च प्रोवाचात्र चतुर्विधाम् ॥
भूतं भूताभिमानी च तद्देहोन्तर्नियामकः ।
हरिश्चाकाशशब्दोक्त ..............॥

इत्यादिनाकाशपुरुषान्तशब्दवाच्यभगवद्रूपाणामपि प्रादुर्भावोक्तेर्नोक्तशङ्कावकाश इति भावः । स्थानान्तरे नारायणपन्ने ॥ **प्रार्थितशुद्धीनामिति** ॥ येऽन्नमयादयः कोशाः शुध्यन्ता-मिति जीवेन प्रार्थितपावित्र्यवतामित्यर्थः । अत्र ब्रह्मवल्याम् । तत्तत्कोशगतम् । अन्नमयादि-संज्ञकदेहगतम् । आदौ अन्नमयप्रकरणे । अन्ते आनन्दमयप्रकरणे ॥

'ಚಿನ್ಮಾತ್ರಮೇವ' ಎಂಬಲ್ಲಿರುವ ಏವಕಾರವು ಅನ್ಯರನ್ನು ವ್ಯಾವೃತ್ತಿ ಮಾಡುತ್ತದೆ. 'ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ' ಎಂದು ಗೀತಾವಾಕ್ಯ. 'ದ್ವಯೋಃ' ಎಂದರೆ ಜೀವಪರಯೋಃ ಎಂದರ್ಥ.

'ದುಃಖಾನುಭವಿತೃತ್ವವಿಶೇಷಣೇನ' ಎಂದು ಇದೆ. 'ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್' ಎಂಬ ವಾಕ್ಯದಲ್ಲಿ ಪುರುಷನಿಗೆ ದುಃಖಾನುಭವವನ್ನು ಹೇಳಿರುವುದು ಕಂಡುಬಂದಿದೆ ಎಂದು ಅಭಿಪ್ರಾಯ.

'ಸಾರಾನ್ನಮಯ' ಎಂದರೆ ಅನ್ನ ಶಬ್ದದ ಅರ್ಥಗಳಲ್ಲಿ ಯಾವುದು ಸಾರವೋ ಅಂದರೆ ಶ್ರೇಷ್ಠವೋ, ಮತ್ತು ಭೂತಾದಿಗಳಿಗೆ ಉಪಜೀವ್ಯವಾಗಿವೆಯೋ ಅದು ಪ್ರಚುರತ್ವವಿಶೇಷಣದಿಂದ ಕೂಡಿರುತ್ತದೆಂದರ್ಥ. 'ರಸ,ಸಾರ,ವರ,ಶ್ರೇಷ್ಠ' ಈ ಶಬ್ದಗಳು ಪರ್ಯಾಯ ಶಬ್ದಗಳಾಗಿವೆ.

ಕೇವಲ ದೃಷ್ಟಾಂತವು ಸಾಧಕವಾಗುವುದಿಲ್ಲ ಎಂಬ ಅಭಿಪ್ರಾಯದಿಂದ ಏಕಾದಶಸ್ಕಂಧ-ತಾತ್ಪರ್ಯದ ಸಮ್ಮತಿಯನ್ನು 'ಉಕ್ತಂ ಚ' ಎಂದು ಹೇಳಿದ್ದಾರೆ. ಅನೇಕಾರ್ಥಗಳನ್ನು ಒಂದು ಶಬ್ದದಿಂದ ಉದ್ದೇಶ ಮಾಡಿದರೂ, ಅವುಗಳ ಮಧ್ಯದಲ್ಲಿ ಒಂದನ್ನು ಅದೇ ಶಬ್ದದಿಂದ ಪರಾಮರ್ಶ ಮಾಡಿ ಅದಕ್ಕೆ ಏನಾದರೊಂದನ್ನು ವಿಧಾನ ಮಾಡಲ್ಪಡುತ್ತದೆಂದು ತಿಳಿಯಬೇಕು ಎಂದು ಅರ್ಥ.

ಒಂದು ವೇಳೆ ಆಕಾಶ ಪದದಿಂದ ಆರಂಭಿಸಿ ಪುರುಷ ಪದದ ತನಕ ಬ್ರಹ್ಮನನ್ನು ಗ್ರಹಣ ಮಾಡಿದರೆ ಸಂಭೂತ ಶಬ್ದದಿಂದ ಹೇಳಲ್ಪಟ್ಟ ಸೃಷ್ಟಿಯು ಹೇಗೆ ಉಪಪನ್ನವಾಗುತ್ತದೆ? ಎಂಬ ಆಕ್ಷೇಪಕ್ಕೆ 'ಏತಚ್ಚ' ಎಂಬ ವಾಕ್ಯದಿಂದ ಉತ್ತರ ಹೇಳುತ್ತಿದ್ದಾರೆ. 'ಉತ್ತರಪ್ರಸ್ಥಾನೇ' ಎಂದರೆ ಅನುವ್ಯಾಖ್ಯಾನದಲ್ಲಿ ಎಂದು ತಿಳಿಯಬೇಕು. ಈ ವಿಷಯವನ್ನು ಅನುವ್ಯಾಖ್ಯಾನದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ.

'ಬ್ರಹ್ಮಶಬ್ದೋಽದಿತೇ ತಸ್ಮಿನ್ನಾತ್ಮಶಬ್ದಂ ಪ್ರಯುಜ್ಯ ಚ ।
ತಸ್ಮಾದಾಕಾಶಸೃಷ್ಟಿಂ ಚ ಪ್ರೋವಾಚಾತ್ರ ಚತುರ್ವಿಧಾಮ್॥
ಭೂತಂ ಭೂತಾಭಿಮಾನೀ ಚ ತದ್ದೇಹೋಽಂತರ್ನಿಯಾಮಕಃ ॥
ಹರಿಶ್ಚಾಕಾಶಶಬ್ದೋಕ್ತಃ ...................... '।

ಇತ್ಯಾದಿ ವಾಕ್ಯಗಳಿಂದ ಆಕಾಶ ಇತ್ಯಾದಿ ಪುರುಷಾಂತ ಶಬ್ದಗಳಿಂದ ವಾಚ್ಯನಾದ ಭಗವಂತನ ರೂಪಗಳಿಗೆ ಪ್ರಾದುರ್ಭಾವವನ್ನು ಹೇಳಿದರೂ ಹಿಂದೆ ಹೇಳಿದ ಶಂಕೆಗೆ ಅವಕಾಶವಿಲ್ಲ ಎಂದು ಭಾವ. 'ಸ್ಥಾನಾಂತರೇ' ಎಂದರೆ ನಾರಾಯಣೋಪನಿಷತ್ತಿನಲ್ಲಿ ಎಂದರ್ಥ. 'ಪ್ರಾರ್ಥಿತಶುದ್ಧೀನಾಂ' ಎಂದು ಇದೆ. ಅಂದರೆ 'ಯಾವ ಅನ್ನಮಯವೇ ಮೊದಲಾದ ಕೋಶಗಳು ಶುದ್ಧಿಯಾಗಲಿ' ಎಂದು ಜೀವನಿಂದ ಕೋಶಗಳ ಪಾವಿತ್ರದ ಬಗ್ಗೆ ಪ್ರಾರ್ಥನೆ ಇದೆಯೋ ಎಂದರ್ಥ.

'ಅತ್ರ' ಎಂದರೆ ಬ್ರಹ್ಮವಲ್ಲಿಯಲ್ಲಿ ಎಂದರ್ಥ. 'ತತ್ತತ್ಕೋಶಗತಮ್' ಎಂದರೆ ಅನ್ನಮಯವೇ ಮೊದಲಾದ ಹೆಸರುಳ್ಳ ದೇಹದಲ್ಲಿರುವ ಎಂದರ್ಥ. 'ಆದೌ' ಎಂದರೆ ಅನ್ನಮಯಪ್ರಕರಣದಲ್ಲಿ ಎಂದರ್ಥ. 'ಅಂತೇ' ಎಂದರೆ ಆನಂದಮಯಪ್ರಕರಣದಲ್ಲಿ ಎಂದರ್ಥ.



## ಒಬ್ಬನಿಗೆ ಅನಂತರೂಪಗಳು

**भाष्यम्– 'अनन्योऽप्यन्यशब्देन तथैको बहुरूपवान् ।
प्रोच्यते भगवान् विष्णुरैश्वर्यात् पुरुषोत्तमः ।।' इति ब्रह्माण्डे ।।**

ಪರಮಾತ್ಮನು ಅನೇಕರೂಪಗಳನ್ನು ಸ್ವೀಕಾರ ಮಾಡಿದರೂ ಆ ಎಲ್ಲ ರೂಪಗಳಿಗೂ ಅಭೇದವೇ ಇರುತ್ತದೆ. ಆದರೂ ಸಹ ಭೇದವಾಚಕವಾದ ಅನ್ಯಶಬ್ದದಿಂದ ಕರೆಸಿಕೊಳ್ಳುತ್ತಾನೆ. ಅದರಂತೆ ಒಬ್ಬನೇ ಆಗಿದ್ದರೂ ಅನೇಕನೆಂದೂ ಕರೆಸಿಕೊಳ್ಳುತ್ತಾನೆ. ಈ ಎಲ್ಲ ವ್ಯವಹಾರವೂ ಅವನ ಅದ್ಭುತಸಾಮರ್ಥ್ಯದಿಂದಷ್ಟೇ ಕೂಡಲು ಸಾಧ್ಯ.' ಹೀಗೆ ಬ್ರಹ್ಮಾಂಡಪುರಾಣದಲ್ಲಿ ಹೇಳಿದ್ದರಿಂದ 'ಅನ್ಯೋಽಂತರ ಆತ್ಮಾ ಪ್ರಾಣಮಯಃ' ಇತ್ಯಾದಿ ಉಪನಿಷತ್ತಿನ ಪ್ರಯೋಗಗಳು ಬಾಧಕಗಳಾಗಲಾರವು.

*ಪರಿಪೂರ್ಣಚಂದ್ರಿಕಾ*

ಪ್ರತಿಪದಾರ್ಥ– [೧]ಅನ್ನಮಯಾದಿ ಐದನ್ನೂ ಬ್ರಹ್ಮನೆಂದು ಪ್ರತಿಪಾದಿಸಲಾಗದು. ಏಕೆಂದರೆ 'ಅನ್ಯೋಽಂತರ ಆತ್ಮಾ ಪ್ರಾಣಮಯಃ' ಇತ್ಯಾದಿಯಾಗಿ ಉಪನಿಷತ್ತು ಪರಸ್ಪರ ಭೇದವನ್ನು ಹೇಳುತ್ತಿದೆ. ಮತ್ತು ಒಬ್ಬನೇ ಬ್ರಹ್ಮನಿಗೆ ಅನೇಕರೂಪಗಳನ್ನು ಹೇಳಿದರೆ ಏಕಮೇವ ಎಂಬ ಶ್ರುತಿವಿರೋಧವು ತಪ್ಪಿದ್ದಲ್ಲ. ಈ ಆಕ್ಷೇಪವನ್ನು ಪರಿಹರಿಸಲು ಬ್ರಹ್ಮಾಂಡಪುರಾಣದ ಆಧಾರವನ್ನು ನೀಡುತ್ತಿದ್ದಾರೆ.

'ಅನನ್ಯೋಽಪಿ = ಭಗವಂತನ ರೂಪಗಳಲ್ಲಿ ಭೇದವಿಲ್ಲದಿದ್ದರೂ, ಅನ್ಯಶಬ್ದೇನ = ಭೇದಾರ್ಥಕವಾದ ಅನ್ಯ ಎಂಬ ಶಬ್ದದಿಂದ, ತಥಾ = ಅದರಂತೆ ಏಕೋಽಪಿ = ಒಬ್ಬನೇ ಆಗಿದ್ದರೂ, ಬಹುರೂಪವಾನ್ = ಅನಂತರೂಪವುಳ್ಳವನು, ಹೀಗೆ ಪುರುಷೋತ್ತಮಃ = ಕ್ಷರಾಕ್ಷರಪುರುಷರಿಗಿಂತ ಶ್ರೇಷ್ಠನಾದ, ಭಗವಾನ್ = ಷಡ್ಗುಣ್ಯೈಶ್ವರ್ಯಸಂಪನ್ನನಾದ, ವಿಷ್ಣುಃ = ವಿಷ್ಣುವು, ಐಶ್ವರ್ಯಾತ್ = ಅದ್ಭುತಸಾಮರ್ಥ್ಯದಿಂದ, ಪ್ರೋಚ್ಯತೇ = ಕರೆಸಿಕೊಳ್ಳುತ್ತಾನೆ. ಇತಿ = ಹೀಗೆ, ಬ್ರಹ್ಮಾಂಡಪುರಾಣೇ = ಬ್ರಹ್ಮಾಂಡಪುರಾಣದಲ್ಲಿ ಹೇಳಲಾಗಿದೆ.

## ಅನನ್ಯೋಽಪಿ ಅನ್ಯಶಬ್ದೇನ ಪ್ರೋಚ್ಯತೇ

**तत्वप्रकाशिका – ननु तथापि 'तस्माद्वा एतस्मादन्नरसमयादन्योऽन्तर आत्मा प्राणमयः' इत्यन्योन्यमन्यतयोक्तान्नमयादीनां कथं ब्रह्मता? इत्यत आह – अनन्योऽपीति ।। 'अन्यशब्देन प्रोच्यते' इत्यन्वयः । एको बहुरूपवान् भवतीत्यनेन बहुरुपत्वान्न विरोध इत्येतदपि प्रमापितं स्यात् ।।१५।।**

ಹಾಗಿದ್ದರೂ 'ತಸ್ಮಾದ್ ವಾ ಏತಸ್ಮಾದನ್ನರಸಮಯಾದ್ ಅನ್ಯೋಽಂತರ ಆತ್ಮಾ ಪ್ರಾಣಮಯಃ' ಎಂದು ಅನ್ನಮಯಾದಿಗಳಿಗೆ ಪರಸ್ಪರಭೇದವನ್ನು ಹೇಳಿದ್ದರಿಂದ ಅನ್ನಮಯಾದಿಗಳು ಒಬ್ಬನೇ ಬ್ರಹ್ಮ

(१) भाष्यदीपिका – नन्वन्नमयादीनां पञ्चानां ब्रह्मताऽनुपपन्ना 'तस्माद्वा एतस्मादन्नरसमयात् । अन्योऽन्तर आत्मा प्राणमयः' (तै.उ. २-२-२.) इति परस्परं भिन्नत्वेनोक्तत्वात् । एवमेकस्यैव ब्रह्मणो बहुरूपत्वान्न 'एकमेव' इति श्रुतिविरोध इत्यप्ययुक्तमप्रमितत्वादित्यत आह – अनन्य इति ।। अपिर्यद्यपीत्याद्यर्थे । तथाशब्दः समुच्चये । तथा च 'पुरुषोत्तमो भगवान् विष्णुः' 'अनन्योऽपि' अभिन्नोऽपि अन्यो भिन्न इति शब्देन प्रोच्यते । तथा यद्यप्येकस्तथाऽपि बहुरूपवान् भवतीत्यर्थः । कथमित्यत उभयघटकमाह – ऐश्वर्यादिति ।। अचिन्त्यशक्तेरित्यर्थः । उपलक्षणमेतत् । अन्नमयादिपञ्चकोशगतान्यत्वान्तरत्वादयो धर्मास्तद्गतभगवद्रूपेषूपचर्यन्त इत्यपि द्रष्टव्यम् । अत एव तृतीये 'स्थानभेदादैश्वर्याच्च' इति भाष्ये स्थानभेदाख्यं हेत्वन्तरमभिहितम् । तैत्तिरीयभाष्ये तु – भेदाभावेऽपि सङ्ख्याविशेषयुक्तत्वादन्यत्वोक्तिरित्युक्तम् । ब्रह्माण्डे पुराणे इत्यनन्तरम् उक्तत्वान्न विरोध इत्यन्वयः ।

ಎನ್ನುವುದು ಹೇಗೆ? ಎಂದರೆ ''ಅನನ್ಯೋಽಪಿ'' ಎಂದು ಹೇಳುತ್ತಾರೆ. 'ಅನ್ಯಶಬ್ದೇನ ಪ್ರೋಚ್ಯತೇ' ಎಂದು ಅನ್ವಯ. 'ಏಕಃ ಬಹುರೂಪವಾನ್ ಭವತಿ' ಎಂದು ಹೇಳಿದ್ದರಿಂದ ಬಹಳರೂಪವಿರುವುದರಿಂದ ವಿರೋಧವಿಲ್ಲ ಎಂದು ಪ್ರಮಾಣ ಕೊಟ್ಟಂತಾಯಿತು ॥೧೫॥

**भावदीपः – प्रमापितं** = प्रमाणेन स्थापितमित्यर्थः । तेन न पौनरुक्त्यमिति भावः । अत्र भाष्ये 'ऐश्वर्यात्' इत्युपलक्षणम् । तृतीये 'न स्थानतोपि परस्योभयलिङ्गं सर्वस्य हि' इत्यधिकरणभाष्ये 'अभेदेपि भेदव्यपदेशः स्थानभेदादैश्वर्ययोगाच्च युज्यते' इति वक्ष्यमाणदिशा कोशादिस्थानभेदादपीति ज्ञेयम् । तत एव प्राक् टीकायां तत्तत् कोशगतमित्युक्तम् ।

ननु विकारशब्दादिति सूत्रे मयड्विषयशङ्कासमाध्योरशेषबाधकशङ्कासमाध्युपलक्षणत्वेनानुव्याख्यानसुधयोर्व्याख्यानात् बहुरूपत्वान्न विरोधः । 'स्वरूपे च युज्यते' इत्यादिवदवयवान्यत्व इदमिति निर्देशादिविरोधा अपि तत्रैव शङ्कित्वा निरस्याः, नन्विह सूत्रे तन्निरासकस्य कस्याप्यदृष्टेरिति चेत्, सत्यम् । तथापि ब्रह्म शब्दस्यामुख्यार्थत्वशङ्काया अत्र सूत्रे निरासात् । तस्याश्च निर्बीजत्वव्युदासाय भाष्ये अवयवत्वादिविरोधोऽत्र निरस्त इत्यदोषः ।

केचित्तु अवयवत्वप्रत्यक्षनिर्देशौ आनन्दमयान्नमययोर्ब्रह्मत्वे असाधारण्येन बाधकाविति द्योतनाय व्यवधानेन तन्निरास इत्याहुः ।

''ಪ್ರಮಾಪಿತಂ'' ಎಂಬ ಶಬ್ದಕ್ಕೆ 'ಪ್ರಮಾಣದಿಂದ ಸ್ಥಾಪಿತವಾಗಿದೆ' ಎಂದರ್ಥ. ಹೀಗೆ ಹೇಳಿರುವುದರಿಂದ ಪುನರುಕ್ತಿದೋಷವು ಬರುವುದಿಲ್ಲ ಎಂದು ತಿಳಿಯಬೇಕು. ಈ ಸಂದರ್ಭದಲ್ಲಿ ಭಾಷ್ಯದಲ್ಲಿ 'ಐಶ್ವರ್ಯಾತ್' ಎಂಬ ಅಂಶವನ್ನು ಉಪಲಕ್ಷಣತಯಾ ಇಟ್ಟುಕೊಳ್ಳಬೇಕು.

ಮೂರನೇ ಅಧ್ಯಾಯದ 'ನ ಸ್ಥಾನತೋಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ' ಎಂಬ ಅಧಿಕರಣದ ಭಾಷ್ಯದಲ್ಲಿ 'ಅಭೇದ ಇದ್ದಲ್ಲೂ ಕೂಡ ಭೇದವಿರುವಂತೆ ವ್ಯವಹಾರವು ಸ್ಥಾನಭೇದದಿಂದ ಅಥವಾ ಐಶ್ವರ್ಯದಿಂದ ಭಗವಂತನಲ್ಲಿ ಹೊಂದುತ್ತದೆ' (ಅಭೇದೇಪಿ ಭೇದವ್ಯಪದೇಶಃ ಸ್ಥಾನಭೇದಾದೈಶ್ವರ್ಯಯೋಚ್ಚ ಯುಜ್ಯತೇ) ಎಂದು ಹೇಳಲಿರುವುದರಿಂದ ಕೋಶಾದಿಸ್ಥಾನಭೇದದಿಂದಲೂ ಕೂಡ ಭೇದವ್ಯವಹಾರವನ್ನು ಕೂಡಿಸಿಕೊಳ್ಳಬೇಕು. ಇದಕ್ಕಾಗಿಯೇ ಹಿಂದೆ ಟೀಕಾವಾಕ್ಯದಲ್ಲಿ ತತ್ತತ್ ಕೋಶಗತಂ ಎಂಬುದಾಗಿ ಹೇಳಿದ್ದಾರೆ.

ಇಲ್ಲಿ ಹೀಗೊಂದು ಪ್ರಶ್ನೆ ಬರಬಹುದು. 'ವಿಕಾರಶಬ್ದಾತ್' ಎಂಬ ಸೂತ್ರದಲ್ಲಿ ಮಯಟ್ ವಿಷಯಕವಾದ ಶಂಕೆ ಮತ್ತು ಸಮಾಧಾನ ಈ ಎರಡೂ ಕೂಡ ಎಲ್ಲಾ ರೀತಿಯ ಬಾಧಕಶಂಕೆ ಮತ್ತು ಸಮಾಧಾನಕ್ಕೆ ಉಪಲಕ್ಷಣ ಎಂಬ ರೀತಿಯಲ್ಲಿ ಅನುವ್ಯಾಖ್ಯಾನ ಮತ್ತು ಸುಧಾಗಳಲ್ಲಿ ವ್ಯಾಖ್ಯಾನ ಮಾಡಿರುವುದರಿಂದ

'ಬಹುರೂಪತ್ವಾತ್ ನ ವಿರೋಧಃ ಸ್ವರೂಪೇ ಚ ಯುಜ್ಯತೇ' ಇತ್ಯಾದಿ ವಿರೋಧಗಳನ್ನು ಪರಿಹಾರ ಮಾಡಿದಂತೆ ಅವಯವಾನ್ಯತ್ವ ಇದ್ದರೆ 'ಇದಮ್' ಎಂಬುದಾಗಿ ನಿರ್ದೇಶಮಾಡುವುದು ಸರಿಯಲ್ಲ ಎಂಬ ಇಲ್ಲಿ ಹೇಳಿದ ವಿರೋಧವನ್ನೂ ಕೂಡ ಅದೇ ಸೂತ್ರದಲ್ಲೇ ಶಂಕೆ ಮಾಡಿಕೊಂಡು ನಿರಾಸಮಾಡಬೇಕಾಗಿತ್ತು. ಈ ಸೂತ್ರದಲ್ಲಿ ಅದನ್ನು ನಿರಾಕರಣೆ ಮಾಡುವ ಯಾವುದೇ ಅಂಶವು ಗೋಚರಿಸದಿರುವುದರಿಂದ ಇಲ್ಲಿ ಸಮಾಧಾನವನ್ನು ಹೇಗೆ ಹೇಳಿದರು? -- ಎಂದು. ಈ ಪ್ರಶ್ನೆಯು ಸರಿಯಾದುದೇ. ಆದರೂ ಪ್ರಕೃತಸೂತ್ರದಲ್ಲಿ ಬ್ರಹ್ಮಶಬ್ದಕ್ಕೆ ಅಮುಖ್ಯಾರ್ಥತ್ವಶಂಕೆಯನ್ನು ಮಾಡಿಕೊಂಡು ಅದಕ್ಕೆ ಸಮಾಧಾನವನ್ನು ಹೇಳುತ್ತಿರುವುದರಿಂದ ಈ ಸಮಾಧಾನಕ್ಕೆ ಯಾವುದೇ ಹೇತುವನ್ನು ಇಲ್ಲಿ ಹೇಳದಿರುವುದರಿಂದ ಆ ಹೇತುವನ್ನು ಸ್ಪಷ್ಟಪಡಿಸುವುದಕ್ಕಾಗಿ ಅವಯತ್ವಾದಿವಿರೋಧವನ್ನು ಭಾಷ್ಯದಲ್ಲಿ ಇಲ್ಲಿಯೇ ನಿರಾಸಮಾಡಿದ್ದಾರೆ. ಹಾಗಾಗಿ ಯಾವುದೇ ದೋಷವಿಲ್ಲ.

''ಅವಯವತ್ವ ಮತ್ತು ಪ್ರತ್ಯಕ್ಷನಿರ್ದೇಶ ಎಂಬ ಎರಡು ವಿಷಯಗಳು ಆನಂದಮಯ ಮತ್ತು ಅನ್ನಮಯ ಈ ಎರಡು ರೂಪಗಳಿಗೆ ಬ್ರಹ್ಮತ್ವವನ್ನು ತಿಳಿಸಲು ಮುಖ್ಯವಾದ ಬಾಧಕವಿಷಯಗಳು ಎಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿ ಹಿಂದೆಯೇ ನಿರಾಸಮಾಡಬೇಕಾದ ವಿಷಯವನ್ನು ಮಧ್ಯದಲ್ಲಿ ವ್ಯವಧಾನವನ್ನು ಕೊಟ್ಟು ಇಲ್ಲಿ ನಿರಾಸಮಾಡುತ್ತಿದ್ದಾರೆ.'' ಎಂದೂ ಕೆಲವರು ವ್ಯಾಖ್ಯಾನಮಾಡುತ್ತಾರೆ.

**वाक्यार्थमञ्जरी – वैय्यर्थ्याच्चेति** ।। स्वस्यापरोक्षीकृतब्रह्मत्वेन शब्दानपेक्षणात् परस्यचापरोक्षशून्यत्वेन तं प्रति तथानिर्देशायोगादिति भावः ॥ **वस्त्रप्रावृतजानुवदिति** ।। वस्त्रेणावृतस्य जानोरप्रत्यक्षत्वेपि प्रत्यक्षीभूतवस्त्रांतर्गतत्वात् यथेदं जान्विविनिर्देशस्तथेत्यर्थः ।

'ವೈಯ್ಯರ್ಥ್ಯಾಚ್ಚ' ಎಂದರೆ ಬ್ರಹ್ಮನನ್ನು ಅಪರೋಕ್ಷಿಸಿಕೊಂಡ ಮುನಿಗಳಿಗೆ ಶಬ್ದಗಳ ಅಪೇಕ್ಷೆ ಬೇಕಾಗಿಲ್ಲ.

ಇನ್ನು ಅಪರೋಕ್ಷಶೂನ್ಯರಾದ ಅನ್ಯರನ್ನು ಕುರಿತು 'ಇದಮೇವ ಶಿರಃ' ಎಂದು ನಿರ್ದೇಶ ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲ ಎಂದರ್ಥ.

'ವಸ್ತ್ರಪ್ರಾವೃತಜಾನುವತ್' ಎಂದರೆ ಯಾವರೀತಿಯಾಗಿ ವಸ್ತ್ರದಿಂದ ಆಚ್ಛಾದಿತವಾದ ತೊಡೆಯು ಪ್ರತ್ಯಕ್ಷವಾಗಿ ಕಾಣಸದಿದ್ದರೂ ಸಹ ವಸ್ತ್ರವನ್ನು ತೋರಿಸಿ ತೊಡೆ ಎಂದು ಹೇಳುತ್ತೇವೆಯೋ ಅದೇ ರೀತಿಯಾಗಿ ಎಂದರ್ಥ.

* * * *

# श्रीपद्मनाभतीर्थविरचितसत्तर्कदीपावलिः

**ॐ मान्त्रवर्णिकमेव च गीयते ॐ ।। १५ ।।**

**एतदानन्दमयदिपञ्चकं ब्रह्मशब्देन निर्दिष्टं श्रुतौ न तदपरं ब्रह्मेति शङ्क्यम् । तदुपक्रमे ब्रह्मविदाप्नोति परम् । तदेषाऽभ्युक्ता । सत्यं ज्ञानमनन्तं ब्रह्मेति**

परब्रह्मनिर्देशादित्येतमर्थं साधयत् सूत्रमुपन्यस्य व्याचष्टे – **मान्त्रवर्णिकमेवे-त्यादिना** । नन्वानन्दमयवत् तत्पुच्छस्यापि ब्रह्मत्वं श्रुत्यैव अभ्युपगन्तव्यम् । न च तद्युज्यते । एकदेशरूपस्य पुच्छस्य ब्रह्मत्वविरोधादिति । तन्मैवम् । 'स शिरः' इत्यादिश्रुत्या पूर्णेन परमात्मना तच्छिरोहस्तमध्यदेहपुच्छशब्दाभिधेयपादानाम् अत्यन्ताभिन्नतया प्रतिपादितत्वेन ब्रह्मत्वाविरोधात् । करचरणादिसमग्रावयव-विभागसमर्थनाय प्रतिपादितत्वाच्च शिरो नारायण इत्यादिवचनेन नैतद्विरुद्धं भवति । तावष्टगुणमैश्वर्यं नाथं स्वाभाविकं परमित्यादिवचनसिद्धाणिमाद्यष्टैश्वर्य-योगादघटितघटकत्वेन अतर्क्यशक्तेः अपरिमेयप्रभावाच्च । तदाह **न चेत्यादिना** । उक्तन्यायेनान्नरसमयस्यापि ब्रह्मत्वात् । तत्रान्नमेव रसोन्नरस इति व्याख्येयम् । न त्वन्नस्य रस इति । ततश्च रसशब्देन सारवाचिना विशेषितत्वादत्तृत्त्वादिप्रचुरं सर्वसारभूतं चिन्मात्ररूपम् अन्नरसशब्देनोच्यते । न त्वन्नसारमेव भौतिकम् । एवं प्राणमयादिसर्वमपि चिन्मात्रमेवेत्यवगन्तव्यम् । 'रसो वै सः' इत्युत्तरत्र श्रवणात् । अन्नरसमयस्य ब्रह्मणोऽवयवयेष्वपि मनुष्यमस्तकादिसन्निहितेषु तस्येदमेव शिरः । अयं दक्षिणः पक्षः । इत्यादिव्यपदेशो वस्त्रप्रावृतदेवदत्तावयवेष्विव युज्यते । अन्नरसमयादन्योऽन्तर आत्मा प्राणमय इति व्यपदेशः स्वगतभेदवर्जितेऽपि ब्रह्माणि विशेषबलादघटितघटकैश्वर्याद्युज्यते । तदेतदाह – **रसशब्देनेत्यादिना** ।

ಹೀಗೆ ಆನಂದಮಯಾದಿ ಐದನ್ನು ಶ್ರುತಿಯಲ್ಲಿ ಬ್ರಹ್ಮಶಬ್ದದಿಂದ ನಿರ್ದೇಶಿಸಲ್ಪಟ್ಟಿದೆ (ಹೇಳಲ್ಪಟ್ಟಿದೆ). ಆ ಬ್ರಹ್ಮಶಬ್ದಕ್ಕೆ ಅಪರಬ್ರಹ್ಮರಾದ 'ಜೀವಾದಿಗಳು' ಎಂದರ್ಥವಿರುವುದರಿಂದ ಅನ್ನಮಯಾದಿಗಳೂ ಜೀವರೇ ಎಂದು ಸಂದೇಹಬಂದರೆ ಉಪಕ್ರಮದಲ್ಲಿ ''ಬ್ರಹ್ಮವಿದಾಪ್ನೋತಿ ಪರಂ। ತದೇಷಾಭ್ಯುಕ್ತಾ। ಸತ್ಯಂ ಜ್ಞಾನಮನಂತಂ ಬ್ರಹ್ಮ।' ಎಂದು ಪರಬ್ರಹ್ಮನನ್ನೇ ಹೇಳಿದ್ದರಿಂದ (ಪರಬ್ರಹ್ಮನೇ ಬ್ರಹ್ಮಶಬ್ದದ ಅರ್ಥ) ಎಂದು ಸಾಧನೆ ಮಾಡುವ ಸೂತ್ರವನ್ನು ಹೇಳಿ ವ್ಯಾಖ್ಯಾನ ಮಾಡುತ್ತಾರೆ 'ಮಾಂತ್ರ-ವರ್ಣಕಮೇವ' ಎನ್ನುವುದರಿಂದ .

ಆನಂದಮಯನು ಬ್ರಹ್ಮ ಎಂದು ಶ್ರುತಿ ಹೇಳಿದ್ದರಿಂದ ಆನಂದಮಯನಿಗೆ ಬ್ರಹ್ಮತ್ವವನ್ನು ಒಪ್ಪುವಂತೆ ಅವನ ಪುಚ್ಛವನ್ನು ಬ್ರಹ್ಮ ಎಂದು ಹೇಳಿದ್ದರಿಂದ ಅದಕ್ಕೂ ಬ್ರಹ್ಮತ್ವವನ್ನು ಒಪ್ಪಬೇಕು. ಆದರೆ ಅದು ಯುಕ್ತವಲ್ಲ; ಏಕೆಂದರೆ ಪುಚ್ಛವು ಏಕದೇಶರೂಪವಾದದ್ದು. ಅದು ಪೂರ್ಣನಾದ ಬ್ರಹ್ಮನಾಗಲಿಕ್ಕೆ ಸಾಧ್ಯವಿಲ್ಲ ಎಂದರೆ ಹಾಗೆ ಹೇಳುವುದು ಸರಿಯಲ್ಲ ''ಸಶಿರಃ'' ಇದೇ ಮೊದಲಾದ ಶ್ರುತಿಯಿಂದ ಪೂರ್ಣನಾದ ಪರಮಾತ್ಮನಿಂದ, ಅವನ ತಲೆ, ಕೈ, ಮಧ್ಯಭಾಗ, ಪುಚ್ಛ ಶಬ್ದಗಳಿಂದ

ಹೇಳುವ ಅವಯವಗಳು ಅಭಿನ್ನವಾಗಿವೆ ಎಂದು ಪ್ರತಿಪಾದನೆ ಮಾಡಿದ್ದರಿಂದ ಅವುಗಳು ಬ್ರಹ್ಮ ಎಂದರೆ ಏನೂ ವಿರೋಧವಿಲ್ಲ. ಹಾಗೆಯೇ ಭಗವಂತನಿಗೆ ಕೈಕಾಲು ಮೊದಲಾದ ಸಕಲ ಅವಯವಗಳ ವಿಭಾಗವನ್ನು ಸಮರ್ಥಿಸುವ 'ಶಿರೋ ನಾರಾಯಣ' ಎಂಬ ವಚನದಿಂದಲೂ ಇದಕ್ಕೆ ವಿರೋಧವಿಲ್ಲ.

'ತವಾಷ್ಟಗುಣಮೈಶ್ವರ್ಯಂ ನಾಥಂ ಸ್ವಾಭಾವಿಕಂ ಪರಂ' ಇದೇಮೊದಲಾದ ಪ್ರಮಾಣಗಳಿಂದ ಸಿದ್ಧವಾದ ಅಣಿಮಾದಿ ಅಷ್ಟೈಶ್ವರ್ಯವಿರುವುದರಿಂದ ಅಘಟಿತಘಟನಾಶಕ್ತಿಯುಳ್ಳವನಾದ್ದರಿಂದ ಅವನು ಅತರ್ಕ್ಯನಾಗಿದ್ದಾನೆ ಅಪರಿಮಿತ ಪ್ರಭಾವವುಳ್ಳವನಾಗಿದ್ದಾನೆ. ಅದನ್ನು 'ನ ಚ' ಇದೇ ಮೊದಲಾದವುಗಳಿಂದ ಹೇಳುತ್ತಾರೆ. ಹಿಂದೆ ಹೇಳಿದ ನ್ಯಾಯದಿಂದ (ಬ್ರಹ್ಮಶಬ್ದಪ್ರಯೋಗ) ಅನ್ನರಸ-ಮಯನೂ ಕೂಡ ಬ್ರಹ್ಮನೇ. ಆ ಶಬ್ದಕ್ಕೆ 'ಅನ್ನವೇ (ಅನ್ನಶಬ್ದವಾಚ್ಯನಾದ ಭಗವಂತನೇ) ರಸಃ (ಸಾರಭೂತನಾದವನು) ಅನ್ನರಸಃ' ಎಂದು ವ್ಯಾಖ್ಯಾನಮಾಡಬೇಕು; ಹೊರತು 'ಅನ್ನದ ರಸ ಅನ್ನರಸ' ಎಂದು ವ್ಯಾಖ್ಯಾನಿಸಬಾರದು. ಆದ್ದರಿಂದ ಸಾರವಾಚಿಯಾದ ರಸಶಬ್ದದಿಂದ ವಿಶೇಷಣ-ಮಾಡಿದ್ದರಿಂದ ವಿಶೇಷವಾಗಿ ಆತ್ಯತ್ವಾದಿಗಳಿಂದ ಕೂಡಿದ ಸರ್ವಸಾರಭೂತನಾದ, ಜ್ಞಾನರೂಪನಾದ, ಭಗವಂತನೇ ಅನ್ನರಸಶಬ್ದದಿಂದ ವಾಚ್ಯನಾಗಿದ್ದಾನೆ ಹೊರತು ಭೌತಿಕವಾದ ಅನ್ನದ ಸಾರವಲ್ಲ.

ಹೀಗೆ ಪ್ರಾಣಮಯಾದಿ ಎಲ್ಲವೂ ಕೂಡ ಜ್ಞಾನರೂಪನಾದ ಭಗವಂತನೇ ಎಂದು ತಿಳಿಯಬೇಕು ಏಕೆಂದರೆ 'ರಸೋ ವೈ ಸಃ' ಎಂದು ಮುಂದಿನ ಮಂತ್ರದಲ್ಲಿ ಶ್ರುತವಾಗಿದೆ. ಹಾಗಾಗಿ ಪ್ರಾಣ-ಮಯಾದಿಗಳೂ ಭಗವಂತನೇ. ಮನುಷ್ಯನ ತಲೆ ಮೊದಲಾದ ಅವಯವ ಮೊದಲಾದವುಗಳಲ್ಲಿ ಸನ್ನಿಹಿತನಾದ ಅನ್ನರಸಮಯನಾದ ಭಗವಂತನನ್ನು ಕುರಿತು 'ತಸ್ಯೇದಮೇವ ಶಿರಃ' 'ಅಯಂ ದಕ್ಷಿಣಃ ಪಕ್ಷಃ' ಮುಂತಾದ ವ್ಯವಹಾರಗಳು ಬಟ್ಟೆಯಿಂದ ಮುಚ್ಚಿದ ದೇವದತ್ತನ ಅವಯವಗಳ ವ್ಯವಹಾರದಂತೆ ಯುಕ್ತವಾಗುತ್ತವೆ. 'ಅನ್ನರಸಮಯಾದನ್ಯೋಽಂತರಾತ್ಮಾ ಪ್ರಾಣಮಯಃ' ಎಂದು ಭೇದವ್ಯಪದೇಶವು ಬ್ರಹ್ಮನು ಸ್ವಗತಭೇದವಿವರ್ಜಿತನಾಗಿದ್ದರೂ 'ವಿಶೇಷ' ಎಂಬ ಭೇದಪ್ರತಿನಿಧಿಯ ಬಲದಿಂದ ಮತ್ತು ಅಘಟಿತಘಟನಾಸಾಮರ್ಥ್ಯವಿರುವುದರಿಂದ ಕೂಡುತ್ತದೆ. ಇದನ್ನು 'ರಸಶಬ್ದೇನ' ಇದೇ ಮೊದಲಾದು-ದರಿಂದ ಹೇಳುತ್ತಾರೆ.

* * * * *

# ಬ್ರಹ್ಮಮೀಮಾಂಸಾಶಾಸ್ತ್ರ

## सू – ॐ।। नेतरोनुपपत्तेः ।।ॐ ।।१६।।

ಅನುವಾದ – ಚತುರ್ಮುಖಾದಿಗಳಲ್ಲಿ ಈ ಬ್ರಹ್ಮಶಬ್ದವು ಅನುಪಪನ್ನವಾಗುತ್ತದೆ. ಏಕೆಂದರೆ 'ಬ್ರಹ್ಮವಿದಾಪ್ನೋತಿ ಪರಮ್' ಎಂದು ಬ್ರಹ್ಮಜ್ಞಾನದಿಂದ ಮೋಕ್ಷಪ್ರಾಪ್ತಿಯನ್ನು ಹೇಳಿದ್ದರಿಂದ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕಾ

**सूत्रदीपिका –** इतरः चतुर्मुखादिः । न । कुतः? अनुपपत्तेः 'ब्रह्मविदाप्नोति परम्' इति मोक्षजनकज्ञानविषयत्वायोगात् इत्यर्थः ।

'ಇತರಃ' ಚತುರ್ಮುಖಾದಿಗಳು, ನ = ಆನಂದಮಯಾದಿಶಬ್ದಗಳಿಂದ ಪ್ರತಿಪಾದ್ಯರಲ್ಲ, ಅನುಪಪತ್ತೇಃ = 'ಬ್ರಹ್ಮವಿದಾಪ್ನೋತಿ ಪರಮ್' (ತೈ.ಉ.) ಎಂಬಲ್ಲಿ ಬ್ರಹ್ಮಜ್ಞಾನದಿಂದ ಮೋಕ್ಷಪ್ರಾಪ್ತಿಯನ್ನು ತಿಳಿಸಿದ್ದರಿಂದ.

## ವಿಷ್ಣ್ವಿತರರು ಆನಂದಮಯಶಬ್ದಪ್ರತಿಪಾದ್ಯರಲ್ಲ

**भाष्यम्– न चोक्तप्राप्त्या विरिश्चादिरुच्यते ।**

**सू – ॐ ।। नेतरोऽनुपपत्तेः ।। ॐ ।।१६।।**

**न ह्यन्यज्ञानान्मोक्ष उपपद्यते । 'तमेवं विद्वानमृत इह भवति नान्यः पन्था अयनाय विद्यते' (तै. आ. ३-१२-७.) इति ह्युक्तम्[(१)] ।**

---

(१) भाष्यदीपिका – ननु ब्रह्मशब्दस्य साधारणत्वात् तद्धेतुव्यपदेशस्य विष्णुनिष्ठतया स्पष्टमप्रतिभानान्मन्त्रवर्णसमाख्यायाश्चान्यलिङ्गादिभ्यो दुर्बलत्वेन सावकाशत्वाद् अनन्यथासिद्धहेत्वन्तरस्य चाभावादानन्दमयादयो विरिश्चादय एव सन्त्विति शङ्कां परिहरत् सूत्रमवतारयति – न चेति ।। चोऽवधारणे । विरिश्चादय इत्यनेनान्वेति । तथा च 'उक्तप्राप्त्या' ब्रह्मशब्दशतानन्दत्वाष्टमूर्तित्वबहुभावादिरूपोक्तप्रापकेनान्नमयादिशब्दै-र्विरिश्चादिरेवोच्यते । न विष्णुरिति न, किन्तु, विष्णुरेव तैरुच्यते । न विरिश्चादि-रित्यर्थः । कुतो नेति हेत्वाकाङ्क्षायां सूत्रमुपन्यस्य प्रतिज्ञांशस्य न चेत्यादिभाष्येणैव व्याख्यातत्वात् सौत्रमनन्यथासिद्धहेतुमेव व्याचष्टे – नेतर इति ।। हिशब्दो हेतौ । 'अन्यज्ञानात्' विष्ण्वन्यविरिश्चादिज्ञानात् ।

यद्यप्ययं नेतर इत्युक्तसाध्ये न हेतुः । तथाऽपि तस्यानन्यथासिद्धत्वोपपादकत्वा-द्धेतुत्वोक्तिः । अस्य हेतुवाक्यस्याध्याहृतहेतुवाक्यद्वारा न चेति प्रतिज्ञयाऽन्वयः । अनेनाऽनन्दमयादिः विष्णोरितरो विरिश्चादिर्न, कुतः? 'ब्रह्मविदाप्नोति परम् (तै.उ. २-१-१) ... सर्वं वै तेऽन्नमाप्नुवन्ति (तै.उ. २-२-१.).... सर्वमेव त आयुर्यन्ति' (तै.उ. २-३-१.) इत्यादिना आनन्दमयादेर्मुक्तिहेतुज्ञानविषयत्वोक्तेः, तस्य चेतरत्र 'अनुपपत्तेः' अयोगादिति सूत्रार्थ उक्तो भवति । विष्णुज्ञानादेव मोक्षो नेतरज्ञानादित्येतत् कुत इत्यत आह – तमिति ।। 'हि' यस्मात् 'तमेवम्' इति श्रुत्या मोक्षस्य विष्णुज्ञानादन्य उपायो नास्तीत्युक्तम् । तस्माद् विष्णोरन्यज्ञानान्मोक्षो नोपपद्यत इत्यर्थः । श्रुत्यर्थस्तु प्रागेवोक्तः ।।

ಹಿಂದೆ ನಿರೂಪಿಸಿದ ಯುಕ್ತಿಗಳಿಂದ ಅನ್ನಮಯಾದಿಶಬ್ದಗಳಿಂದ ಪ್ರತಿಪಾದ್ಯರಾದವರು ಚತುರ್ಮುಖಬ್ರಹ್ಮಾದಿಗಳು ಎಂದರೆ ಇದು ಸರಿಯಲ್ಲ. ಏಕೆಂದರೆ 'ಬ್ರಹ್ಮವಿದಾಪ್ನೋತಿ ಪರಮ್' ಎಂಬುದಾಗಿ ಬ್ರಹ್ಮಜ್ಞಾನದಿಂದ ಮೋಕ್ಷವೆಂಬ ಫಲವನ್ನು ಹೇಳಲಾಗಿದೆ. ಆದರೆ ಚತುರ್ಮುಖಾದಿಗಳ ಜ್ಞಾನದಿಂದ ಮೋಕ್ಷವು ದೊರೆಯಲಾರದು. ಏಕೆಂದರೆ, 'ತಮೇವಂ ವಿದ್ವಾನಮೃತ ಇಹ ಭವತಿ' ಇತ್ಯಾದಿಯಾಗಿ ತೈತ್ತಿರೀಯ ಆರಣ್ಯಕದಲ್ಲಿ ಪರಮಾತ್ಮನ ಜ್ಞಾನದಿಂದಲೇ ಮೋಕ್ಷವೆಂದು, ಇತರರ ಜ್ಞಾನದಿಂದ ಮೋಕ್ಷವಿಲ್ಲವೆಂದು ಅತ್ಯಂತ ನಿಖರವಾಗಿ ಹೇಳಲಾಗಿದೆ. ಹಾಗಾಗಿ ಚತುರ್ಮುಖಾದಿಗಳು ಅನ್ನಮಯಾದಿ-ಗಳಾಗಲಾರರು.

ಪ್ರತಿಪದಾರ್ಥ– ಇಲ್ಲಿಯ ತನಕ ಬ್ರಹ್ಮಶಬ್ದ, ತದ್ಧೇತುವ್ಯಪದೇಶ ಹಾಗೂ ಮಂತ್ರವರ್ಣಸಮಾಖ್ಯಾ ಇವುಗಳನ್ನು ಹೇತುವನ್ನಾಗಿ ನಿರೂಪಿಸಿದರು. ಬ್ರಹ್ಮಶಬ್ದವು ಸರ್ವಸಾಧಾರಣವಾದ ಹೇತುವಾಗಿದೆ. ತದ್ಧೇತುವ್ಯಪದೇಶವು ವಿಷ್ಣ್ವೇಕನಿಷ್ಠ ಎಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಮಂತ್ರವರ್ಣಸಮಾಖ್ಯೆಯು ಉಳಿದ ಲಿಂಗಾದಿಗಳಿಂತ ದುರ್ಬಲವಾಗಿದೆ. ಆದ್ದರಿಂದ ವಿಷ್ಣುವೇ ಆನಂದಮಯಾದಿಶಬ್ದಗಳಿಂದ ಪ್ರತಿಪಾದ್ಯ-ನೆನ್ನಲು ಅನನ್ಯಥಾ ಸಿದ್ಧವಾದ ಹೇತುವನ್ನು ಹೇಳಿದಂತಾಗಲಿಲ್ಲ. ಆದ್ದರಿಂದ ವಿರಿಂಚಾದಿಗಳೇ ಆನಂದಮಯರಾಗಲಿ ಎಂಬ ಆಕ್ಷೇಪವನ್ನು ಪರಿಹರಿಸುವುದಕ್ಕಾಗಿ ಸೂತ್ರಕ್ಕೆ ಅವತಾರಿಕೆಯನ್ನು ನೀಡುತ್ತಿದ್ದಾರೆ.

ಉಕ್ತಪ್ರಾಪ್ತ್ಯಾ = ಹಿಂದೆ ಹೇಳಿದ ಪ್ರಮಾಣದಿಂದ, ವಿರಿಂಚಾದಿಃ ಚತುರ್ಮುಖಾದಿಗಳೂ ಸಹ, ಉಚ್ಯತೇ = ಆನಂದಮಯಾದಿ ಶಬ್ದಗಳಿಂದ ಪ್ರತಿಪಾದ್ಯರಾಗುತ್ತಾರೆ ಎನ್ನುವುದು, ನ ಚ = ತಪ್ಪಾಗುತ್ತದೆ. ನೇತರೋಽನುಪಪತ್ತೇಃ = ಇತರಃ ವಿಷ್ಣುವಿನಿಂದ ಭಿನ್ನರಾದ ಚತುರ್ಮುಖಾದಿಗಳು, ನ = ಆನಂದಮಯಾದಿಶಬ್ದಗಳಿಂದ ವಾಚ್ಯರಲ್ಲ. ಏಕೆಂದರೆ ಅನುಪಪತ್ತೇಃ = ಕೂಡುವುದಿಲ್ಲವಾದ್ದರಿಂದ.

ಅನ್ಯಜ್ಞಾನಾತ್ = ವಿರಿಂಚಾದಿಗಳ ಜ್ಞಾನದಿಂದ ಮೋಕ್ಷಃ = ಮುಕ್ತಿಯು, ನ ಉಪಪದ್ಯತೇ = ದೊರೆಯುವುದಿಲ್ಲ. ಏಕೆಂದರೆ, ಇಹ = ಸಂಸಾರಕಾಲದಲ್ಲಿ, ತಂ = ಪರಮಾತ್ಮನನ್ನು, ಏವಂ = ಸರ್ವಶಬ್ದವಾಚ್ಯನೆಂದು, ವಿದ್ವಾನ್ = ತಿಳಿದವನೇ, ಅಮೃತಃ = ಮುಕ್ತನು, ಭವತಿ = ಆಗುತ್ತಾನೆ. ಅಯನಾಯ = ಮೋಕ್ಷಕ್ಕೋಸ್ಕರ, ಅನ್ಯಃ = ಭಗವಜ್ಜ್ಞಾನಕ್ಕಿಂತ ಅತಿರಿಕ್ತವಾದ, ಪಂಥಾ = ಮಾರ್ಗವು , ನ ವಿದ್ಯತೇ = ಇರುವುದಿಲ್ಲ. ಇತಿ = ಹೀಗೆ, ಉಕ್ತಮ್ = ವೇದಗಳಲ್ಲಿ ಹೇಳಲ್ಪಟ್ಟಿದೆ.

**तत्वप्रकाशिका – नन्वेवं मयटां प्राचुर्यार्थत्वमुक्त्वा, तथात्वे कथञ्चिदल्पार्थतां परिहृत्य, भूताद्यत्वस्यार्थान्तरमभिधाय, परामर्शस्यान्यपरत्वं समर्थ्य, बहुभावस्य स्वरूपविषयत्वं गृहीत्वा, पुच्छत्वोक्तेरविरोधमापाद्येदमिति निर्देशस्य लाक्षणिकत्वमङ्गीकृत्यापि किमन्नमयादीनां विष्णुत्वग्रहणेन । विरिञ्चादय एव आनन्दमयादयः सन्तु तत्प्रापकसद्भावात् ।**

**न चोक्तहेतुभ्यस्तद्ग्रहणम् । ब्रह्मशब्दस्यापरब्रह्मस्वपि सम्भवात् हेतुव्यपदेशस्य च विष्णुनिष्ठतया स्पष्टमप्रतिभानात् । मन्त्रवर्णाार्थिकसमाख्यायाश्च सूर्ये प्रोक्तत्वलिङ्गादि(प्रोक्तत्वादिलिङ्गे)भ्यो दुर्बलत्वेन सावकाशत्वात् अनन्यथासिद्ध-हेत्वन्तरस्य चाभावादित्यत आह – न चेति ॥**

ನೀವು ಆನಂದಮಯನು ವಿಷ್ಣುವೇ ಎನ್ನಲು ಮಯಟ್‌ಪ್ರತ್ಯಯಗಳಿಗೆ ಪ್ರಾಚುರ್ಯ ಎಂಬರ್ಥವನ್ನು ಮಾಡುತ್ತೀರಿ? ಹಾಗೆ ಅರ್ಥಮಾಡಿದಾಗ ಅನ್ನಮಯ ಎಂದರೆ 'ಅನ್ನಪ್ರಚುರ' ಎಂದು ಅರ್ಥವಾದಾಗ ಅಲ್ಪಾರ್ಥತ್ವವು ಬರುತ್ತದೆ. ಅಂದರೆ ಅನ್ನಶಬ್ದಕ್ಕೆ ವ್ಯುತ್ಪತ್ತಿ ತೋರಿಸಿ, ಬ್ರಹ್ಮ ಎಂದು ಅರ್ಥ ಮಾಡುತ್ತೀರಿ. ಅನ್ನಶಬ್ದಕ್ಕೆ ವ್ಯುತ್ಪತ್ತಿಯಾಗಿರುವ ಭೂತಾದ್ಯತ್ವವು ಬ್ರಹ್ಮನಿಗೆ ಕೂಡುವುದಿಲ್ಲವೆಂದಾಗ 'ಭೂತಾದ್ಯತ್ವವೆಂದರೆ 'ಭೂತೋಪಜೀವ್ಯತ್ವ' ಎಂದರ್ಥ ಹೇಳುತ್ತೀರಿ. ಅದರಂತೆ 'ಸ ವಾ ಏಷಃ' ಎಂಬಲ್ಲಿ ಪರಾಮರ್ಶೆಯು ದೇಹದ್ದಲ್ಲ, ಆತ್ಮನದ್ದು ಎನ್ನುತ್ತೀರಿ. ಒಬ್ಬನೇ ಭಗವಂತ ಅನ್ನಮಯಾದಿ ಐದು ವ್ಯಕ್ತಿಗಳು ಹೇಗಾಗುತ್ತಾನೆ? ಎಂದರೆ ಬ್ರಹ್ಮನಿಗೆ ಬಹಳರೂಪ-ಗಳಿರುವುದರಿಂದ ಕೂಡುತ್ತದೆ ಎನ್ನುತ್ತೀರಿ. ಮತ್ತೆ ಅವಯವಿ ಅವಯವ ಭಾವ ಕೂಡುವುದಿಲ್ಲವೆಂದರೆ ಅಚಿಂತ್ಯಶಕ್ತಿಯಿಂದ ಕೂಡಿಸುತ್ತೀರಿ. ಮತ್ತು 'ಇದಂ' ಎಂಬ ಲಾಕ್ಷಣಿಕ ಎನ್ನುತ್ತೀರಿ. ಹೀಗೆ ಇಷ್ಟೊಂದು ಉಪಪಾದನೆ ಮಾಡಿ ವಿಷ್ಣುವೇ ಅನ್ನಮಯಾದಿ ಶಬ್ದವಾಚ್ಯನು ಎಂದು ಏಕೆ ಹೇಳುತ್ತೀರಿ? ಬ್ರಹ್ಮಾದಿ ಜೀವರನ್ನು ಅರ್ಥವೆಂದು ಹೇಳಲು ಬೇಕಾದಷ್ಟು ಸಾಮಗ್ರಿಗಳು ಇರುವಾಗ ಅವರನ್ನೇ ಅರ್ಥವೆಂದು ಏಕೆ ಹೇಳಬಾರದು?

ಬ್ರಹ್ಮಶಬ್ದಾಭ್ಯಾಸ ಮೊದಲಾದ ಯುಕ್ತಿಗಳಿಂದ ಹಾಗೆ ಹೇಳುತ್ತೇವೆನ್ನುವುದೂ ಸರಿಯಲ್ಲ. ಬ್ರಹ್ಮನೆಂದರೆ ಅಪರಬ್ರಹ್ಮರಾದ ಜೀವಾದಿಗಳು ಆಗುತ್ತಾರೆ. 'ಹೇತುವ್ಯಪದೇಶ' ಎಂಬ ಯುಕ್ತಿಯೂ ಕೂಡ ಸ್ಪಷ್ಟವಾಗಿ ವಿಷ್ಣುವಿನಲ್ಲಿ ಮಾತ್ರವಿದೆ ಎಂದು ಹೇಳಲು ಬರುವುದಿಲ್ಲ. 'ಮಾಂತ್ರವರ್ಣಿಕದ ಸಮಾಖ್ಯೆಯೂ ಕೂಡ ಸೂರ್ಯಸ್ಥಿತತ್ವ ಲಿಂಗಕ್ಕಿಂತಲೂ ದುರ್ಬಲವಾಗಿದೆ., ಆದ್ದರಿಂದ ಸಾವಕಾಶ-ವಾಗಿದೆ. ಹೀಗಾಗಿ ನಿರವಕಾಶವಾದ ಹೇತುಗಳು ಇಲ್ಲದ್ದರಿಂದ ವಿಷ್ಣುತ್ವಸಮರ್ಥನೆಯು ಕೂಡು-ವುದಿಲ್ಲವೆಂದರೆ ''ನಚ'' ಇತ್ಯಾದಿಯಾಗಿ ಹೇಳುತ್ತಾರೆ.

भावदीपः – ॐ ॥ नेतरोऽनुपपत्तेः ॥ॐ । **कथञ्चिदिति** ॥ अन्नप्राणादिपदाना मत्तृत्वचेष्टकत्वाद्यर्थमुपेत्य' इत्यर्थः । **अर्थान्तरम्** = उपजीव्यत्वरूपम् । **बहुभावस्य** = पञ्चत्वलक्षणबहुत्वस्य । यद्वा 'बहु स्याम्' इत्युक्तबहुभावस्येत्यर्थः । तेन बहुरूपत्वाच्च 'न विकारित्वमिति पूर्वभाष्यस्थबहु स्यामिति बहुभवनं बहुरूपत्वान्न तु जगदात्मना विकारित्वादित्यपि योजना सूचिता । पुच्छत्वोक्तेः

अवयवत्वोक्तेरित्यर्थः । सूत्रे 'अनुपपत्तेः' इति हेत्वन्तरोक्तेश्चशब्दाभावाच्च तदनुरोधेन क्रमेण सूत्रत्रयोक्तहेतूनन्यथयति – **ब्रह्मशब्दस्येति** ।। **प्रोक्तत्वलिङ्गादिभ्य** इत्यादिपदेन बहुभावान्यत्वादेर्ग्रहः । सावकाशत्वादर्थान्तरपरत्वादित्यर्थः । अनुपपत्तेरिति सौत्रहेतुव्यावर्त्यमाह – **अनन्यथेति** ।।

"ಕಥಂಚಿತ್" ಎಂಬ ಪದಕ್ಕೆ ಅನ್ನಪ್ರಾಣಾದಿಪದಗಳಿಗೆ ಅತೃತ್ವ ಚೇಷ್ಟಕತ್ವ ಮೊದಲಾದ ಅರ್ಥವನ್ನು ಒಪ್ಪಿಕೊಂಡು ಬ್ರಹ್ಮತ್ವವನ್ನು ಸಾಧಿಸಲಾಗಿದೆ ಎಂದರ್ಥ. "ಅರ್ಥಾಂತರ" ಎಂಬ ಪದಕ್ಕೆ 'ಉಪಜೀವ್ಯತ್ವ-ರೂಪವಾದ ಅರ್ಥಾಂತರ' ಎಂದರ್ಥ. "ಬಹುಭಾವಸ್ಯ" ಎಂಬ ಪದಕ್ಕೆ ಅನ್ನಮಯಾದಿ ಐದುರೂಪಗಳು ಇರುವುದರಿಂದ ಹೇಳಬಹುದಾದ ಬಹುತ್ವಕ್ಕೆ ಎಂದರ್ಥ. ಅಥವಾ 'ಬಹುಸ್ಯಾಮ್' ಎಂದು ಶ್ರುತಿಯಲ್ಲಿ ಹೇಳಿದಂತೆ ಇರುವ ಬಹುಭಾವಕ್ಕೆ ಎಂದರ್ಥ. ಈ ರೀತಿ ಅರ್ಥಮಾಡುವುದರಿಂದ 'ಬಹುರೂಪತ್ವಾಚ್ಚ ನ ವಿಕಾರಿತ್ವಮ್' ಎಂಬುದಾಗಿ ಹಿಂದಿನ ಭಾಷ್ಯದ 'ಬಹುಸ್ಯಾಮ್' ಎಂಬಲ್ಲಿರುವ ಬಹುವಚನವನ್ನು ಬ್ರಹ್ಮನು ಬಹುರೂಪನಾಗಿರುವುದರಿಂದ ಬಹುಭಾವವನ್ನು ಅವನಿಗೆ ಹೇಳಲಾಗಿದೆಯೇ ವಿನಃ ಬ್ರಹ್ಮನು ಜಗತ್ತಾಗಿ ಪರಿಣಾಮವನ್ನು ಹೊಂದುವುದರಿಂದ ಅಲ್ಲ ಎಂದು. ಈ ರೀತಿಯಾಗಿಯೂ ಯೋಜನೆಯನ್ನು ಇಟ್ಟುಕೊಳ್ಳಬೇಕು ಎಂಬುದನ್ನು ಸೂಚಿಸಿದ್ದಾರೆ.

"ಮುಖ್ಯತ್ವೋಕ್ತೇಃ" ಎಂಬ ಪದಕ್ಕೆ ಅವಯವತ್ವವನ್ನು ಹೇಳಿರುವುದರಿಂದ ಎಂದರ್ಥ. ಸೂತ್ರದಲ್ಲಿ 'ಅನುಪಪತ್ತೇಃ' ಎಂಬುದಾಗಿ ಬೇರೆ ಹೇತುವನ್ನೇ ಹೇಳಿದ್ದು, ಚ ಶಬ್ದವನ್ನು ಇಲ್ಲಿ ಹೇಳದಿರುವುದರಿಂದ ಅದಕ್ಕೆ ಅನುಸಾರಿಯಾಗಿ ಹಿಂದಿನ ಮೂರು ಸೂತ್ರಗಳಲ್ಲಿ ಹೇಳಿದ ಹೇತುಗಳನ್ನು ಕ್ರಮವಾಗಿ ಬೇರೆ ಕಡೆಯಲ್ಲಿ "ಬ್ರಹ್ಮಶಬ್ದಸ್ಯ" ಇತ್ಯಾದಿವಾಕ್ಯದಿಂದ ಹೊಂದಿಸುತ್ತಿದ್ದಾರೆ. "ಪ್ರೋಕ್ತತ್ವಲಿಂಗಾದಿಭ್ಯಃ" ಎಂಬಲ್ಲಿ ಆದಿಪದದಿಂದ ಬಹುಭಾವವನ್ನು, ಅನ್ಯತ್ವವೇ ಮೊದಲಾದವುಗಳನ್ನು ಸ್ವೀಕರಿಸಬೇಕು. "ಸಾವಕಾಶತ್ವಾತ್" ಎಂಬ ಪದಕ್ಕೆ ಬೇರೊಂದು ಅರ್ಥವನ್ನು ತಿಳಿಸಲು ಬರುವುದರಿಂದ ಎಂದರ್ಥ. "ಅನುಪಪತ್ತೇಃ" ಎಂಬುದಾಗಿ ಸೂತ್ರದಲ್ಲಿ ಹೇಳಿದ ಹೇತುವಿನಿಂದ ವ್ಯಾವೃತ್ತಿಮಾಡಬೇಕಾದ ಅಂಶವನ್ನು "ಅನನ್ಯಥಾ" ಇತ್ಯಾದಿ ವಾಕ್ಯದಿಂದ ವಿವರಿಸಿದ್ದಾರೆ.

**तत्वप्रकाशिका** – तत्र हेत्वाकाङ्क्षायां सूत्रमुपन्यस्य प्रतिज्ञांशस्य प्राचीन-भाष्येणैव व्याख्यातत्वात् सौत्रमनन्यथासिद्धहेतुमेव व्याचष्टे – नेतर इति ।। न आनन्दमयादिर्विष्णोरितरः । 'ब्रह्मविदाप्नोति परम्' इत्यादावानन्दमयादिज्ञानेन मोक्षश्रवणात् । न चान्यज्ञानान्मोक्ष उपपद्यत इत्यर्थः । विष्णुज्ञानादेव मोक्षो नान्यज्ञानात् इति कुतः? इत्यत आह – तमेवमिति[१] ।। १६ ।।

---

(१) 'ब्रह्मविदाप्नोति परम्' इत्यादाविति ।। अत्र 'आदि'पदेन 'सर्वं वै तेऽन्नमाप्नुवन्ति । येऽन्नं ब्रह्मोपासते । सर्वमेव त आयुर्यन्ति । ते प्राणं ब्रह्मोपासते । आनन्दं ब्रह्मणो

'ಬ್ರಹ್ಮಾದಿದೇವತೆಗಳಲ್ಲ' ಎನ್ನುವುದಕ್ಕೆ ಯುಕ್ತಿಯ ಅಪೇಕ್ಷೆ ಬಂದಾಗ ಅದನ್ನು ಹೇಳುವ ಸೂತ್ರವನ್ನು ಹೇಳಿ, ಸೂತ್ರದಲ್ಲಿ 'ನೇತರಃ' ಎಂಬ ಪ್ರತಿಜ್ಞೆಯನ್ನು ಹೇಳುವ ಪದವನ್ನು ಹಿಂದಿನ ಸೂತ್ರದಲ್ಲಿ ವ್ಯಾಖ್ಯಾನಮಾಡಿದ್ದರಿಂದ ಸೂತ್ರದಲ್ಲಿ ನಿರವಕಾಶವಾದ ಯುಕ್ತಿಯನ್ನು ಹೇಳುವ ಪದವನ್ನು ವ್ಯಾಖ್ಯಾನ ಮಾಡುತ್ತಾರೆ ''ನೇತರಃ'' ಎಂಬುದಾಗಿ. ವಿಷ್ಣುವನ್ನು ಬಿಟ್ಟು ಬೇರೆಯವರು ಆನಂದಮಯಾದಿಗಳಲ್ಲ. 'ಬ್ರಹ್ಮವಿದಾಪ್ನೋತಿ ಪರಮ್' ಎಂಬ ಶ್ರುತಿಯಲ್ಲಿ ಆನಂದಮಯಾದಿಗಳ ಜ್ಞಾನದಿಂದ ಮೋಕ್ಷವನ್ನು ಹೇಳಿದ್ದಾರೆ. ಆದರೆ ಬೇರೆಯವರ ಜ್ಞಾನದಿಂದ ಮೋಕ್ಷವು ಬರುವುದಿಲ್ಲವಾದ್ದರಿಂದ ಬೇರೆಯವರು ಆನಂದಮಯಶಬ್ದವಾಚ್ಯರಾಗಲಿಕ್ಕೆ ಸಾಧ್ಯವಿಲ್ಲ. ವಿಷ್ಣುವಿನ ಜ್ಞಾನದಿಂದಲೇ ಮೋಕ್ಷ; ಬೇರೆಯವರ ಜ್ಞಾನದಿಂದಲ್ಲ. ಇದಕ್ಕೆ ಪ್ರಮಾಣವೇನೆಂದರೆ 'ತಮೇವಮ್'' ಎಂಬುದಾಗಿ ಉತ್ತರಿಸುತ್ತಿದ್ದಾರೆ.

भावदीपः – **प्राचीनेति** ।। 'न च इत्यादिना' इत्यर्थः । सूत्रे सोपलक्षितमानन्दमयपदं तत्पदं चानुवर्तते । तत् तस्माद् विष्णोरितर इत्यर्थ इति मत्वा सूत्राक्षराणि योजयति – **नाऽऽनन्दमयादिरिति** ।। भाष्यसङ्गत्यर्थमपेक्षितमाह – **ब्रह्मेति** ।। आदिपदेन 'येऽन्नं ब्रह्मोपासते सर्वमेव त आयुर्यन्ति' इत्यादिरूपेण सुधोक्तदिशा प्रतिप्रकरणस्थवाक्यानि गृह्यन्ते । **आनन्दमयादीति** ।। पूर्वोक्तदिशा अत्रोक्तस्यैव ब्रह्मणोऽन्नमयादिशब्दैर्गीयमानत्वादिति भावः ।।१६।।

''ಪ್ರಾಚೀನಭಾಷ್ಯ'' ಎಂಬ ಪದದಿಂದ ಹಿಂದಿನ ಸೂತ್ರದಲ್ಲಿ 'ನಚ' ಇತ್ಯಾದಿಗಳಿಂದ ಹೇಳಿದ ಭಾಷ್ಯಭಾಗವನ್ನು ಸ್ವೀಕರಿಸಬೇಕು. ಸೂತ್ರದಲ್ಲಿ ಆನಂದಮಯಪದವನ್ನು ಅದರಿಂದ ಉಪಲಕ್ಷಿತವಾದ ವಿಷಯಗಳನ್ನು ಮತ್ತು ತತ್‌ಪದವನ್ನು ಹಾಗೂ ಅದರಿಂದ ಉಪಲಕ್ಷಿತವಾದ ವಿಷಯಗಳನ್ನು ಅನುವೃತ್ತಿಮಾಡಿಕೊಳ್ಳಬೇಕು.

ಈ ತತ್ ಪದಕ್ಕೆ 'ತಸ್ಮಾತ್ ಅಂದರೆ ವಿಷ್ಣುವಿಗಿಂತ ಇತರ' ಎಂಬರ್ಥವನ್ನು ಅಭಿಪ್ರಾಯಮಾಡಿಕೊಂಡು ''ನ ಆನಂದಮಯಾದಿಃ'' ಇತ್ಯಾದಿಯಾಗಿ ಸೂತ್ರಾಕ್ಷರಗಳನ್ನು ಯೋಜನೆ ಮಾಡುತ್ತಿದ್ದಾರೆ. ಭಾಷ್ಯದಲ್ಲಿ ಸಂಗತಿಯನ್ನು ಸೂಚಿಸುವುದಕ್ಕಾಗಿ ಅಪೇಕ್ಷಿತವಾದ ವಿಷಯವನ್ನು ''ಬ್ರಹ್ಮ'' ಇತ್ಯಾದಿವಾಕ್ಯದಿಂದ ಸೂಚಿಸಿದ್ದಾರೆ. ಆದಿ ಪದದಿಂದ 'ಯೇನ್ನಂ ಬ್ರಹ್ಮೋಪಾಸತೇ' 'ಸರ್ವಮೇವ ತ ಆಯುರ್ಯಂತಿ' ಇತ್ಯಾದಿ ರೂಪದಿಂದ ಪ್ರತಿಪ್ರಕರಣಸ್ಥವಾಕ್ಯಗಳನ್ನು ಸುಧೆಯಲ್ಲಿ ಹೇಳಿದಂತೆ ಸ್ವೀಕರಿಸಬೇಕು. ಹಿಂದೆ ಹೇಳಿದಂತೆ

---

विद्वान् । न बिभेति कदाचन' इति; 'शरीरे पाप्मनो हित्वा । सर्वान् कामान् समश्नुते' इति; 'रसँ ह्येवायं लब्ध्वाऽऽनन्दी भवति । अथ सोऽभयं गतो भवति' इत्यादि तत्प्रकरणगतानाम् अन्नमयादिज्ञानात् मोक्षप्रतिपादकवाक्यानां ग्रहणम् – (भावबोधः)

ಆನಂದಮಯಪ್ರಕರಣದಲ್ಲಿ ಹೇಳಿದ ಬ್ರಹ್ಮನನ್ನೇ ಅನ್ನಮಯಾದಿಶಬ್ದಗಳಿಂದ ಶ್ರುತಿಯಲ್ಲಿ ಹೇಳಿರುವುದರಿಂದ ''ಆನಂದಮಯಾದಿಜ್ಞಾನೇನ'' ಎಂದು ಟೀಕೆಯಲ್ಲಿ ವಿವರಿಸಿದ್ದಾರೆ.

**वाक्यार्थमञ्जरी –** अन्नादिशब्दानां प्रसिद्धार्थत्यागात् कथंचिदित्युक्तम् । अर्थान्तरम् उपजीव्यत्वरूपम् ॥ **लाक्षणिकत्वमिति** ।। इदंशब्दस्य तदंतर्गते लक्षणांगीकारादिति भावः ॥ **स्पष्टमिति** ।। आकाशपदेन तल्लाभेपि स्फुटं तद्वाचक(शब्दा)पदाभावादितिभावः । दुर्बलत्वेन स्वभावात् ॥ **सावकाशत्वादिति** ।। विरिञ्चादावपि स्रष्टत्वादिसत्वादितिभावः ॥

ॐ **नेतरोनुपपत्तेः** ॐ ।। विण्ष्वितरश्चतुर्मुखादिर्नान्नमयादिशब्दवाच्यः । तस्य ब्रह्मविदाप्नोति परमित्युक्तमोक्षहेतुज्ञानविषयत्वानुपपत्तेरित्यर्थः । 'इत्यादौ' इत्यादिपदेनैतमन्नमय-मात्मानमुपसंक्रामतित्यादिग्रहणम् ॥

ಅನ್ನವೇ ಮೊದಲಾದ ಶಬ್ದಗಳಿಗೆ ಪ್ರಸಿದ್ಧವಾದ ಅರ್ಥವನ್ನು ತ್ಯಾಗ ಮಾಡಿದ್ದರಿಂದ ಹೇಗೆ 'ಕಥಂಚಿತ್' ಎಂದು ಹೇಳಿದರು.

'ಅರ್ಥಾಂತರಂ' ಎಂದರೆ ಉಪಜೀವ್ಯತ್ವ ಎಂದರ್ಥ. 'ಲಾಕ್ಷಣಿಕತ್ವಂ' ಎಂದರೆ 'ಇದಂ' ಶಬ್ದಕ್ಕೆ 'ತದಂತರ್ಗತ' ಎಂದು ಲಕ್ಷಣಾವನ್ನು ಅಂಗೀಕಾರ ಮಾಡಿರುವುದರಿಂದ ಎಂದು ಭಾವ. 'ಸ್ಪಷ್ಟಂ' ಎಂದರೆ ಆಕಾಶಪದದಿಂದ ವಿಷ್ಣುವೆಂಬ ಅರ್ಥವು ಪ್ರಾಪ್ತವಾದರೂ, ಸ್ಪಷ್ಟವಾಗಿ ವಿಷ್ಣುವೆಂದು ಹೇಳುವ ಪದವಿಲ್ಲ ಎಂದು ಭಾವ. 'ದುರ್ಬಲತ್ವೇನ' ಎಂದರೆ ಸ್ವಭಾವದಿಂದಲೇ ಎಂದು ಭಾವ. 'ಸಾವಕಾಶತ್ವಾತ್' ಎಂದರೆ ಚತುರ್ಮುಖಬ್ರಹ್ಮನಲ್ಲಿಯೂ ಸಹ ಸೃಷ್ಟ್ಯಾದಿಗಳು ಕಂಡು ಬಂದಿದೆ ಎಂದು ಭಾವ.

ಸೂತ್ರಾರ್ಥ - ವಿಷ್ಣುವಿಗಿಂತ ಇತರರಾದ ಚತುರ್ಮುಖಾದಿಗಳು ಅನ್ನಮಯಾದಿ ಶಬ್ದಗಳಿಂದ ವಾಚ್ಯರಲ್ಲ. ಏಕೆಂದರೆ ಅವರುಗಳು 'ಬ್ರಹ್ಮವಿದಾಪ್ನೋತಿ ಪರಂ' ಎಂದು ಮೋಕ್ಷಕ್ಕೆ ಕಾರಣವಾದ ಜ್ಞಾನಕ್ಕೆ ವಿಷಯರಾಗುವುದಿಲ್ಲ ಎಂದರ್ಥ.

'ಇತ್ಯಾದೌ' ಎಂಬಲ್ಲಿ ಆದಿ ಪದದಿಂದ 'ಏತಮನ್ನಮಯಮಾತ್ಮಾನಮುಪಸಂಕ್ರಾಮತಿ' ಇವೇ ಮುಂತಾದವುಗಳನ್ನು ಗ್ರಹಣ ಮಾಡಬೇಕು.

## श्रीपद्मनाभतीर्थविरचितसत्तर्कदीपावलिः

**ॐ नेतरोऽनुपपत्तेः ॐ ।। १६ ।।**

कस्यचिदानन्दमयत्वं न स्यात् । 'तमेवं विद्वानमृत इह भवति । नान्यः पन्था अयनाय विद्यते' इति श्रुत्या पुरुषोत्तमत्वेन मुख्यपुरुषाद्विष्णोरन्यज्ञानस्य मोक्षमार्गत्वनिषेधात् । अतोऽन्यथासिद्धेन मोक्षश्रवणेनान्यथासिद्धहिरण्यगर्भादि-प्रापकं बाध्यत इत्यर्थः ।

ಬೇರೆಯವರಿಗೆ ಆನಂದಮಯತ್ವವು ಕೂಡುವುದಿಲ್ಲ, ಏಕೆಂದರೆ 'ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಪಂಥಾ ಅಯನಾಯ ವಿದ್ಯತೇ' (ಯಾರು ಈರೀತಿ ಮಹಿಮೆಯುಳ್ಳವನನ್ನಾಗಿ ಭಗವಂತನನ್ನು ತಿಳಿಯುತ್ತಾನೋ ಅವನು ಮುಕ್ತನಾಗುತ್ತಾನೆ; ಇದನ್ನು ಬಿಟ್ಟು ಮೋಕ್ಷಕ್ಕೆ ಬೇರೆ ಮಾರ್ಗವಿಲ್ಲ) ಎಂದು ಶ್ರುತಿಯಿಂದ ಪುರುಷೋತ್ತಮನಾಗಿದ್ದಾನೆ ಎಂದು ಮುಖ್ಯಪುರುಷನಾದ ವಿಷ್ಣುವಿನ ಹೊರತಾಗಿ ಬೇರೆಯವರ ಜ್ಞಾನದಿಂದ ಮೋಕ್ಷಮಾರ್ಗವನ್ನು ನಿಷೇಧಮಾಡಿದ್ದಾರೆ. ಆದ್ದರಿಂದ ಬೇರೆಯವರಿಂದ ಸಾಧ್ಯವಿಲ್ಲದ ಮೋಕ್ಷವು ಆನಂದಮಯಾದಿಗಳ ಜ್ಞಾನದಿಂದ ಆಗುತ್ತದೆ ಎಂದು ಹೇಳಿದ್ದರಿಂದ ಮೋಕ್ಷವನ್ನು ಕೊಡಲು ಸಾಧ್ಯವಿಲ್ಲದ ಬ್ರಹ್ಮಾದಿಗಳನ್ನು ಆನಂದಮಯಾದಿ-ಶಬ್ದವಾಚ್ಯರು ಎನ್ನುವುದು ಬಾಧಿತವಾಗುತ್ತದೆ.

# ಬ್ರಹ್ಮಮೀಮಾಂಸಾಶಾಸ್ತ್ರ

**सू - ॐ ।। भेदव्यपदेशाच्च ।।ॐ ।।१७।।**

ಅನುವಾದ - ಮತ್ತೂ ಕೂಡ ಬ್ರಹ್ಮವಲ್ಲಿಯಲ್ಲಿ ಚತುರ್ಮುಖಾದಿಗಳಿಗೆ ಮತ್ತು ಬ್ರಹ್ಮನಿಗೆ ಭೇದವನ್ನು ಸಾಧಿಸುವ ಧರ್ಮಗಳನ್ನು ಹೇಳಿದ್ದರಿಂದ ಆನಂದಮಯನು ಬ್ರಹ್ಮಾದಿಗಳಾಗುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕಾ

**सूत्रदीपिका –** चतुर्मुखादेरानन्दमयस्य भेदकधर्मोक्तेश्च नाऽनन्दमय इतर इत्यर्थः ।।

ಚತುರ್ಮುಖಾದಿಗಳಿಗೆ ಮತ್ತು ಆನಂದಮಯನಿಗೆ ಭೇದವನ್ನು ಸಾಧಿಸುವ ಧರ್ಮಗಳನ್ನು ಬ್ರಹ್ಮವಲ್ಲಿಯಲ್ಲಿ ಹೇಳಲಾಗಿದೆ. ಆದ್ದರಿಂದಲೂ ಬ್ರಹ್ಮಾದಿಗಳು ಆನಂದಮಯರಲ್ಲ.

• • • • •

ಭೇದವ್ಯಪದೇಶವೆಂಬ ಮತ್ತೊಂದು ಹೇತು

**भाष्यम्– ॐ ।। भेदव्यपदेशाच्च ।। ॐ ।। १७ ।।**

**'ते ये शतं प्रजापतेरानन्दाः' (तै. २-८.),**
**'अदृश्येऽनात्म्येऽनिरुक्तेऽनिलयनेऽभयं प्रतिष्ठां विन्दते ।**
**अथ सोऽभयं गतो भवति' (तै. २-७.)**
**'स यश्चायं पुरुषे' (तै. २-८.) इत्यादिभेदव्यपदेशात् ।**

ಚತುರ್ಮುಖಾದಿಗಳು ಆನಂದಮಯರಲ್ಲ. ಏಕೆಂದರೆ, ರುದ್ರದೇವರ ಭೋಗಾನಂದಕ್ಕಿಂತ ನೂರು ಪಟ್ಟು ಚತುರ್ಮುಖ ಬ್ರಹ್ಮದೇವರ ಆನಂದ ಎಂದು ಉಪನಿಷತ್ತು ಹೇಳುತ್ತಿದೆ.

ಹೀಗೆ ಚತುರ್ಮುಖಬ್ರಹ್ಮದೇವರ ಆನಂದಕ್ಕೆ ಪರಿಮಿತಿಯನ್ನು ಹೇಳಿದ್ದರಿಂದ ಪ್ರಚುರವಾದ ಆನಂದವುಳ್ಳವರೆಂದು ಹೇಳಲಾಗದು.

ಯಾರು ಆನಂದಮಯನನ್ನು ತಿಳಿಯುತ್ತಾರೋ ಅವರು ಅದೃಶ್ಯನೂ, ಸ್ವತಂತ್ರನೂ, ಶಬ್ದಾಗೋಚರನೂ ಮತ್ತೊಬ್ಬನನ್ನು ಆಶ್ರಯನನ್ನಾಗಿ ಪಡೆಯದವನೂ ಆಗಿರುವ ಪರಮಾತ್ಮನಲ್ಲಿ ದೃಢವಾದ ಆಸಕ್ತಿಯನ್ನು ನಿರ್ಭೀತನಾಗಿ ಹೊಂದುತ್ತಾನೆಂದು ಶ್ರುತಿ ಹೇಳುತ್ತಿದೆ. ಈ ಶ್ರುತಿಯಲ್ಲಿ ಹೇಳಿದ ಆನಂದಮಯನ ಗುಣಗಳು ಪ್ರಕೃತಿ ಮತ್ತು ಚತುರ್ಮುಖಾದಿಗಳಲ್ಲಿ ಅಸಂಭಾವಿತವಾಗಿವೆ.

ಮತ್ತು ಅದೇ ತೈತ್ತಿರೀಯೋಪನಿಷತ್ತಿನಲ್ಲಿ 'ಸ ಯಶ್ಚಾಯಂ ಪುರುಷೇ' ಇತ್ಯಾದಿಯಾಗಿ ಸಕಲಪುರುಷರಲ್ಲಿ ಆನಂದಮಯನು ಸನ್ನಿಹಿತನಾಗಿದ್ದಾನೆಂದು ಹೇಳಲಾಗಿದೆ. ಚತುರ್ಮುಖಾದಿಗಳಲ್ಲಿ ಇದೂ ಸಹ ಅಸಂಭಾವಿತವಾಗಿದೆ.

ಪ್ರತಿಪದಾರ್ಥ– ಮತ್ತೊಂದು ಕಾರಣದಿಂದ ಬ್ರಹ್ಮಾದಿಗಳು ಆನಂದಮಯರೆನ್ನುವುದು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ.(೧)

---

(१) भाष्यदीपिका– हेत्वन्तरेण ब्रह्मादीनामानन्दमयत्वं पराकुर्वत् सूत्रं पठित्वा व्याचष्टे – भेदेति ।। अत्र पूर्वहेतुसमुच्चायकेन चशब्देनाऽनन्दमयादिर्नेतर इति प्रतिज्ञावाक्यानुवृत्तेरपि सूचनात् । तद्विहाय सूत्रोक्तं भेदव्यपदेशं दर्शयति – ते ये शतमिति ।। आदिशब्दः 'आनन्दाः' इत्यतः परोऽपि योज्यः । तत्राऽद्येन 'ते ये शतम्' इत्यस्य पूर्वोत्तरतैत्तिरीयवाक्यानि गृह्यन्ते । द्वितीयेन 'यतो वाचो निवर्तन्ते । अप्राप्य मनसा सह । आनन्दं ब्रह्मणो विद्वान्' (तै.उ.२.४.१) इत्यादि । यद्वा सकृच्छ्रुत एव सर्वसङ्ग्राहकः।

अनेन नाऽनन्दमय इतरो विरिञ्चः, कुतः ? भेदव्यपदेशात् । विरिञ्चस्य 'ते ये शतम्' (तै.उ.२.८.४) इत्यादिना रुद्राच्छतगुणानन्दत्वोक्तेः, आनन्दमयस्य च 'यतो वाचः' इत्यादिनाऽपरिमितानन्दत्वोक्तेः । एवं न रुद्रः, तस्य हिरण्यगर्भाच्छतांशोनानन्दत्वोक्तेः । नापि बृहस्पत्यादयः । तेषामुत्तरोत्तरापेक्षया शतांशोनानन्दत्वोक्तेः । नापि प्रकृत्यादयः, 'अदृश्येऽनात्म्ये' इत्यादौ प्रकृत्याद्ययोग्यस्वातन्त्र्यादिरूपभेदकधर्मश्रवणात् । नाप्यानन्दमयो ब्रह्मादिजीवसमुदायः, तस्य 'स यश्चायम्' इति अपकृष्टोत्कृष्टसर्वजीवस्थिति-रूपभेदकधर्मोक्तेः जीवसमुदायस्य चानेवंविधत्वादिति सूत्रार्थ उक्तो भवति । एते च सर्वे व्यपदेशाः तैत्तिरीयश्रुतिगताः । तत्र 'प्रजापतिः शिवः शेफो लिङ्गमित्यभिधीयते' इति शैवपुराणवचनात् 'प्रजापतेः' रुद्रस्य 'ये शतं' शतगुणिता आनन्दाः ते 'ब्रह्मणः' चतुर्मुखस्य एक आनन्द इति प्रथमवाक्यस्यार्थः ।

'अदृश्ये' साकल्येनाज्ञेये 'अनात्म्ये' आत्मन इमे आत्म्याः जीवगुणाः, न विद्यन्ते आत्म्याः यस्मिन् सोऽनात्म्यः तस्मिन् जीवगुणविधुरे । अथवा – आत्मनः

ಪ್ರಜಾಪತಿ, ಹಾಗೂ ರುದ್ರದೇವರ ಈ ಯಾವ ಭೋಗಾನಂದಗಳು ಇವೆಯೋ, ತೇ= ಅವುಗಳಿಗಿಂತಲೂ,ಶತಂ = ನೂರುಪಟ್ಟು, ಪ್ರಜಾಪತೇಃ = ಚತುರ್ಮುಖಬ್ರಹ್ಮದೇವರ, ಆನಂದಾಃ = ಆನಂದಗಳು ಇರುತ್ತವೆ.

ಅದೃಶ್ಯೇ = ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲದ, ಅನಾತ್ಮ್ಯೇ = ಸ್ವತಂತ್ರನಾದ, ಅನಿಲಯನೇ = ಮತ್ತೊಬ್ಬರು ಆಶ್ರಯನಿಲ್ಲದ, ಅನಿರುಕ್ತ್ಯೇ = ಶಬ್ದಾಗೋಚರನಾದನಲ್ಲಿ, ಪ್ರತಿಷ್ಠಾಂ = ದೃಢವಾದ ಆಸಕ್ತಿಯನ್ನು , ವಿಂದತೇ = ಹೊಂದುತ್ತಾನೋ, ಸಃ = ಆ ಜ್ಞಾನಿಯು, ಅಭಯಂ = ನಿರ್ಭೀತನಾಗುತ್ತಾನೆ, ಅಥ ಅನಂತರ ಅಭಯಂ = ಅಭಯರೂಪನಾದ ಪರಮಾತ್ಮನ ಬಳಿಗೆ ಸಹ ಆ ಜ್ಞಾನಿಯು, ಗತೋ ಭವತಿ = ಹೋಗುವವನಾಗುತ್ತಾನೆ.

'ಯ = ಯಾವ ಆನಂದಮಯನು, ಪುರುಷೇ = ಅಪಕೃಷ್ಟ ಜೀವರಲ್ಲಿ, ಆದಿತ್ಯೇ = ಉತ್ಕೃಷ್ಟಜೀವರಲ್ಲಿಯೂ ಇರುತ್ತಾನೋ, ಸಃ ಅಯಂ = ಆ ಎರಡೂ ಕಡೆಯಲ್ಲಿರುವ ವಿಷ್ಣುವು, ಏಕಃ = ಒಬ್ಬನೇ ಆಗಿದ್ದಾನೆ.

ಈ ಮೂರುವಿಧಕಾರಣಗಳು ಚತುರ್ಮುಖಾದಿಗಳಲ್ಲಿಲ್ಲದ ಕಾರಣ ವಿಷ್ಣುವೇ ಆನಂದಮಯನೆನಿಸುತ್ತಾನೆ.

## ಅಪರಿಮಿತ ಆನಂದವುಳ್ಳವನೇ ಆನಂದಮಯನು

**तत्वप्रकाशिका – हेत्वन्तरेण ब्रह्मादीनामानन्दमयत्वं निराकुर्वत्सूत्रं पठित्वा व्याचष्टे – भेदेति ।। 'नेतरः' इत्यनुषज्यते । 'ते ये शतं प्रजापतेरानन्दाः स एको ब्रह्मण आनन्दः' इति रुद्राच्छतगुणमात्रानन्दत्वोक्तेर्न तावदान्दमयो विरिञ्चः । 'यतो वाचो निवर्तन्ते अप्राप्य मनसा सह । आनन्दं ब्रह्मणो विद्वान्' इत्यानन्दमयस्यापरिमितानन्दत्वोक्तेः । अत एव रुद्रः तस्य हिरण्यगर्भाच्छतांशोनानन्दोत्वोक्तेः । एवं नेन्द्रबृहस्पत्यादयोऽपि ।**

---

स्वामिनोऽयमात्म्यः स्वामिसम्बन्धी स नेत्यनात्म्यः तस्मिन्, स्वामिरहित इति यावत् । 'अनिरुक्ते' साकल्येन निर्वचनागोचरे । 'अनिलयने' अनन्याश्रये आनन्दमयशब्दवाच्ये विष्णौ तद्विषये योऽधिकारी 'अभयं' यथा भवति तथा ध्यानरूपां 'प्रतिष्ठां' स्थितिं 'विन्दते' प्राप्नोति, करोतीति यावत् । 'अथ' अनन्तरं 'सः' उपासकः 'अभयं' भयरहितं भगवन्तं 'गतः' प्राप्तो भवतीति द्वितीयभेदव्यपदेशस्यार्थः । 'पुरुषे' पुरुषपदोपलक्षितापकृष्टजीवेषु 'यः' अयमानन्दमयो विष्णुरस्ति । 'यश्चाऽदित्ये' आदित्यपदोपलक्षितोत्कृष्टजीवेष्वस्ति 'सः' उभयत्र स्थितो विष्णुः 'एकः' अभिन्न इति तृतीयभेदव्यपदेशस्यार्थः । 'यतो वाचः' इत्यादिस्तु प्रागेव व्याख्यातः ।।

ಮತ್ತೊಂದು ಹೇತುವಿನಿಂದ ಬ್ರಹ್ಮಾದಿದೇವತೆಗಳು ಆನಂದಮಯಶಬ್ದವಾಚ್ಯರಲ್ಲ ಎಂದು ನಿರಾಕರಣೆಮಾಡುವ ಸೂತ್ರವನ್ನು ಹೇಳಿ ವ್ಯಾಖ್ಯಾನ ಮಾಡುತ್ತಾರೆ ''ಭೇದ'' ಎನ್ನುವುದರಿಂದ. ಹಿಂದಿನ ಸೂತ್ರದಿಂದ 'ನೇತರಃ'ಎನ್ನುವುದನ್ನು ಅನುವೃತ್ತಿಮಾಡಿಕೊಳ್ಳಬೇಕು.'ತೇ ಯೇ ಶತಂ ಪ್ರಜಾಪತೇರಾನಂದಾಃ ಸ ಏಕೋ ಬ್ರಹ್ಮಣ ಆನಂದಃ' ಎಂದು 'ರುದ್ರನಿಗಿಂತ ನೂರುಪಟ್ಟು ಮಾತ್ರ ಬ್ರಹ್ಮನ ಆನಂದ' ಎಂದು ಹೇಳಿದ್ದರಿಂದ ಆನಂದಮಯಶಬ್ದವಾಚ್ಯನು ಚತುರ್ಮುಖಬ್ರಹ್ಮನು ಆಗುವುದಿಲ್ಲ. ಏಕೆಂದರೆ 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್...' ಎಂದು ಆನಂದಮಯನ ಆನಂದವು ಅಪರಿಮಿತ ಎಂದು ಹೇಳಿದೆ. ಆ ಕಾರಣ ಪರಿಮಿತವಾದ ಆನಂದವುಳ್ಳ ಬ್ರಹ್ಮನು ಆನಂದಮಯನಲ್ಲ. ಬ್ರಹ್ಮದೇವರಿಗಿಂತ ನೂರುಪಟ್ಟು ಕಡಿಮೆ ಆನಂದವುಳ್ಳ ಶಿವನೂ ಪರಿಮಿತ ಆನಂದವುಳ್ಳವನಾದ್ದರಿಂದ ಆನಂದಮಯಶಬ್ದವಾಚ್ಯನು ಆಗಲಾರ. ಇದೇ ಕಾರಣದಿಂದಲೇ ಇಂದ್ರನಾಗಲೀ ಬೃಹಸ್ಪತಿಯಾಗಲೀ ಆನಂದಮಯಶಬ್ದವಾಚ್ಯರಾಗುವುದಿಲ್ಲ.

**भावदीपः – ॐ।। भेदव्यपदेशाच्च ।।ॐ ।** सूत्रे चशब्दश्रवणादाह – **हेत्वन्तरेणेति** ।। 'आनन्दमयत्वम्' इति भाष्ये ब्रह्मादिपूर्वपक्षकोटेरानन्दमयादेरभेदोक्तिपरश्रुतिवाक्यानामुक्तत्वेन पूर्वत्रानन्दमयादिरित्युक्तावपीह आनन्दमयत्वमित्येवोक्तम् । तथा चेदं तद्धेतुसूत्रमिव आनन्दमयमात्रपरमिति सूचितम् ।

**नेतर इतीति** ।। आनन्दमयो विष्णोरितरो न इत्यनुषज्यत इत्यर्थः । **रुद्रादिति** ।। 'तस्मात् प्रजापतिर्मुक्तो रुद्रः प्रजननेशिता' इति तद्भाष्योक्तेरिति भावः । 'इतर'शब्दार्थो विरिञ्च इति । एवमग्रेऽपि । भेदकोक्त्याभेदोऽर्थादुक्त इति भावः । **न रुद्र इति** ।। 'आनन्दमयः' इत्यत्रोत्तरत्र चानुवर्त्यम् । **एवमिति** ।। 'स एको बृहस्पतेरानन्दः । स एक इन्द्रस्यानन्दः' इति तेषामपि परिमितानन्दश्रुतेरिति भावः ।

ಸೂತ್ರದಲ್ಲಿ ಚಶಬ್ದ ಇರುವುದರಿಂದ ಅದಕ್ಕೆ ಅನುಸಾರಿಯಾಗಿ ಟೀಕೆಯಲ್ಲಿ ''ಹೇತ್ವಂತರೇಣ'' ಎಂದು ಹೇಳಿದ್ದಾರೆ. ಭಾಷ್ಯದಲ್ಲಿ ಬ್ರಹ್ಮಾದಿಪೂರ್ವಪಕ್ಷವ್ಯಕ್ತಿಗಳಿಗಿಂತ ಆನಂದಮಯಾದಿಗಳಿಗೆ ಅಭೇದವನ್ನು ತಿಳಿಸುವ ಶ್ರುತಿವಾಕ್ಯಗಳನ್ನು ಹೇಳಿರುವುದರಿಂದ ಹಿಂದೆ 'ಆನಂದಮಯಾದಿ' ಎಂದು ಹೇಳಿದ್ದರೂ ಇಲ್ಲಿ ಆದಿಪದವನ್ನು ಬಿಟ್ಟು ''ಆನಂದಮಯತ್ವಂ'' ಎಂದು ಮಾತ್ರ ಹೇಳಿದ್ದಾರೆ. ಹಾಗಾಗಿ ಈ ಸೂತ್ರವು ತದ್ಧೇತುಸೂತ್ರದಂತೆ ಆನಂದಮಯನನ್ನು ಮಾತ್ರ ಹೇಳುತ್ತದೆ ಎಂದು ಸೂಚಿಸಿದಂತಾಗುತ್ತದೆ.

''ನೇತರ ಇತಿ'' ಎಂಬ ವಾಕ್ಯದಿಂದ ಆನಂದಮಯನು ವಿಷ್ಣುವಿಗಿಂತ ಇತರನಲ್ಲ ಎಂಬ ಅಂಶವನ್ನು ಇಲ್ಲಿ ಅನುಷಂಗ ಮಾಡಿಕೊಳ್ಳಬೇಕು ಎಂಬ ಅಂಶವನ್ನು ಸೂಚಿಸಿದ್ದಾರೆ. ''ರುದ್ರಾತ್'' ಎಂಬ

ವಾಕ್ಯಭಾಗದಿಂದ 'ತಸ್ಮಾತ್ ಪ್ರಜಾಪತಿರ್ಮುಖ್ಯೋ ರುದ್ರಃ ಪ್ರಜನನೇಶಿತಾ' ಎಂಬುದಾಗಿ ತೈತ್ತರೀಯಭಾಷ್ಯದಲ್ಲಿ ಹೇಳಿದ ಅಂಶವನ್ನು ಇಟ್ಟುಕೊಳ್ಳಬೇಕು. ''ಇತರ''ಶಬ್ದಕ್ಕೆ ವಿರಿಂಚ ಎಂಬರ್ಥವನ್ನು ಹೇಳಿದ್ದಾರೆ. ಹೀಗೆಯೇ ಮುಂದೆಯೂ ಕೂಡ ಭೇದಕವನ್ನು ಹೇಳಿರುವುದರಿಂದ ಭೇದವನ್ನು ಅರ್ಥಾತ್ ಸ್ವೀಕರಿಸಿಕೊಳ್ಳಬೇಕು. ''ಅತ ಏವ ನ ರುದ್ರಃ'' ಎಂಬ ವಾಕ್ಯದಲ್ಲಿ 'ಆನಂದಮಯಃ' ಎಂಬ ಪದವನ್ನು ಅನುವೃತ್ತಿಮಾಡಿಕೊಳ್ಳಬೇಕು. ಹೀಗೆಯೇ ಮುಂದೂ ಕೂಡ ಅಗತ್ಯವಿದ್ದಲ್ಲಿ ಆನಂದಮಯಪದವನ್ನು ಇಟ್ಟುಕೊಳ್ಳಬೇಕು.

'ಸ ಏಕೋ ಬೃಹಸ್ಪತೇರಾನಂದಃ । ಸ ಏಕ ಇಂದ್ರಸ್ಯಾನಂದಃ' ಇತ್ಯಾದಿವಾಕ್ಯಗಳಿಂದ ಇಂದ್ರ, ಬೃಹಸ್ಪತಿ ಮೊದಲಾದವರಿಗೂ ಆನಂದದಲ್ಲಿ ಪರಿಮಿತಿ ಎಂದು ಹೇಳಿರುವುದರಿಂದ ಅವರನ್ನೂ ಆನಂದಮಯ ಎಂಬುದಾಗಿ ಹೇಳಬರುವುದಿಲ್ಲ ಎಂಬ ಅಂಶವನ್ನು ''ಏವಮ್'' ಇತ್ಯಾದಿವಾಕ್ಯದಿಂದ ಗ್ರಹಿಸಿಕೊಳ್ಳಬೇಕು.

**वाक्यार्थमञ्जरी– ॐ भेदव्यपदेशाच्च ॐ** ।। 'ते ये शतम्' 'यतो वाच'मित्यादिना परिमितापरिमितानंदत्वादिरूपविरुद्धधर्मोक्त्या आनंदमयादेर्विरिश्चादेर्भेदाभिधानाच्च नानंदमय– श्चतुर्मुखादिरित्यर्थः ।। **ते ये शतमिति** ।। प्रजापतेः रुद्रस्य ते प्रसिद्धाः ये शतमानंदाः तावान् ब्रह्मणश्चतुर्मुखस्यैकआनंदः । तथाविधशतानंदवत्वं तस्येत्यर्थः ।। **यतो वाच इति** ।। ब्रह्मणः आनंदं यो जानाति स कदाचन न बिभेति स आनंदः किं प्रकारो ज्ञातव्य इत्याकांक्षायां वागाद्यगोचरतया ज्ञातव्य इत्याशयेनोक्तम्– **यत इति** ।। वाचो वाक्यानि मनसा सह अप्राप्य अपरिमितत्वात् साकल्येनाविषयीकृत्य आनंदान्निवर्तंत इति योजना ।। **एवमिति** ।। ते ये शतं देवानामानंदाः । स एक इंद्रस्यानंदः । ते ये शतमिंद्रस्यानंदाः । स एको बृह्मस्पतेरानंद इत्यानंदत्वोक्तेरिति भावः ।

तेभ्यो दक्षश्चेन्द्रनामा सहींदुरापयत् पुरा ।
तस्माद् बृहस्पतिर्नाम महेंद्रत्वात् पुरंदरः ।।

इति तैत्तिरीयभाष्योक्तेरत्रेंद्रबृहस्पतिशब्दाभ्यां क्रमेण दक्षशचीपत्योर्ग्रहणम् ।

॥ ಓಂ ಭೇದವ್ಯಪದೇಶಾಚ್ಚ ಓಂ ॥

ಸೂತ್ರಾರ್ಥ - 'ತೇ ಯೇ ಶತಂ' 'ಯತೋ ವಾಚೋ' ಇತ್ಯಾದಿ ಶ್ರುತಿಗಳಿಂದ ಪರಿಮಿತಆನಂದ ಮತ್ತು ಅಪರಿಮಿತಆನಂದ ಮೊದಲಾದ ವಿರುದ್ಧಧರ್ಮಗಳನ್ನು ಹೇಳಿ, ಆನಂದಮಯನಿಗೆ ವಿರಿಂಚಿ ಮೊದಲಾದವರುಗಳಿಂದ ಭೇದವನ್ನು ಹೇಳಿರುವುದರಿಂದಲೂ ಆನಂದಮಯನು ಚತುರ್ಮುಖನೇ ಮೊದಲಾದವರುಗಳು ಆಗುವುದಿಲ್ಲ ಎಂದರ್ಥ.

'ತೇ ಯೇ ಶತಂ' ಎಂಬ ಶ್ರುತಿಯ ಅರ್ಥ - 'ಪ್ರಜಾಪತೇಃ' ರುದ್ರನ 'ತೇ' ಪ್ರಸಿದ್ಧವಾದ 'ಯೇ' ಯಾವ ನೂರರಷ್ಟು ಆನಂದವು 'ಬ್ರಹ್ಮಣಃ' ಚತುರ್ಮುಖನ ಒಂದು ಆನಂದ ಎಂದು. ಈ ರೀತಿಯಾದ ಆನಂದವು ಬ್ರಹ್ಮದೇವರಿಗೆ ನೂರು ಎಂದರ್ಥ. ಬ್ರಹ್ಮನ ಆನಂದವನ್ನು ಯಾರು ಹೀಗೆ

ತಿಳಿಯುತ್ತಾರೋ ಅವನಿಗೆ ಯಾವಕಾಲಕ್ಕೂ ಭಯಾದಿಗಳು ಇರುವುದಿಲ್ಲ. ಅವನ ಆನಂದವನ್ನು ಯಾವ ಪ್ರಕಾರದಿಂದ ತಿಳಿಯಬೇಕು ಎಂದು ಆಕಾಂಕ್ಷೆ ಬಂದರೆ ವಾಕ್ಯಗಳಿಂದ ತಿಳಿಯಲು ಸಾಧ್ಯವಿಲ್ಲವೆಂದು ತಿಳಿಸಲು 'ಯತೋ ವಾಚೋ' ಎಂಬ ಶ್ರುತಿಯು ಹೊರಟಿದೆ. 'ವಾಚಃ' ಎಂದರೆ ವಾಕ್ಯಗಳು 'ಮನಸಾ ಸಹ' ಮನಸ್ಸಿನ ಜೊತೆಗೆ 'ಅಪ್ರಾಪ್ಯ' ಅಪರಿಮಿತವಾದ್ದರಿಂದ ಸಂಪೂರ್ಣವಾಗಿ ತಿಳಿಯದೆ ನಿವೃತ್ತವಾಯಿತು ಎಂದು ಶ್ರುತಿಯನ್ನು ಯೋಜನೆ ಮಾಡಬೇಕು.

'ಏವಂ' ಎಂದರೆ 'ತೇ ಯೇ ಶತಂ ದೇವಾನಾಮಾನಂದಾಃ । ಸ ಏಕ ಇಂದ್ರಸ್ಯ ಆನಂದಃ । ತೇ ಯೇ ಶತಮಿಂದ್ರಸ್ಯಾನಂದಾಃ । ಸ ಏಕೋ ಬೃಹಸ್ಪತೇರಾನಂದಃ ।' ಎಂದು ಆನಂದತ್ವವು ಶ್ರುತಿಗಳಲ್ಲಿ ಕೇಳಿಬಂದಿದೆ ಎಂದು ಭಾವ.

'ತೇಭ್ಯೋ ದಕ್ಷಶ್ಚೇಂದ್ರನಾಮಾ ಸಹೀಂದುರಾಪಯತ್ಪುರಾ ।
ತಸ್ಮಾದ್ಬೃಹಸ್ಪತಿರ್ನಾಮ ಮಹೇಂದ್ರತ್ವಾತ್ಪುರಂದರಃ ॥

ಎಂದು ತೈತಿರೀಯಭಾಷ್ಯದಲ್ಲಿ ಹೇಳಿರುವುದರಿಂದ ಇಲ್ಲಿ ಇಂದ್ರ ಮತ್ತು ಬೃಹಸ್ಪತಿಶಬ್ದಗಳಿಂದ ಕ್ರಮವಾಗಿ ದಕ್ಷ ಮತ್ತು ಶಚೀಪತಿಯನ್ನು ಗ್ರಹಣ ಮಾಡಬೇಕು.

## ಅಸ್ವತಂತ್ರರು ಆನಂದಮಯರಲ್ಲ

**तत्वप्रकाशिका – अदृश्ये स्वामिरहिते जैवगुणविधुरे वा । साकल्येन निर्वचनागोचरे । अपराश्रये तस्मिन्नानन्दमये योऽभयतया ध्यानरूपां प्रतिष्ठां विन्दते अनन्तरं स उपासकोऽभयं भगवन्तं गतो भवतीति श्रुतौ प्रकृत्याद्ययोग्यस्वातन्त्र्यादिश्रवणान्न प्रकृत्यादीनामानन्दमयत्वम् । 'स यश्चायम्' इत्यानन्दमयस्यापकृष्टोत्कृष्टजीवेषु पुरुषादित्यपदोपलक्षितेषु स्थितिकथनान्नाऽऽनन्दमयो ब्रह्मादिजीवसमूह इत्याशयः ।**

"ಅದೃಶ್ಯೇ = ಅದೃಶ್ಯನಾದ, ಅನಾತ್ಮ್ಯೇ = ಸ್ವಾಮಿ ಇಲ್ಲದವನಾದ (ನಿಯಾಮಕನಿಲ್ಲದ), ಅಥವಾ ಜೀವನಲ್ಲಿರುವ ಗುಣಗಳಿಂದ ರಹಿತನಾದ, ಅನಿರುಕ್ತೇ = ಸಂಪೂರ್ಣವಾಗಿ ಹೇಳಲು ಸಾಧ್ಯವಿಲ್ಲದ, ಅನಿಲಯನೇ = ಇನ್ನೊಂದು ಆಶ್ರಯವಿಲ್ಲದ (ತನಗೆ ತಾನೇ ಆಶ್ರಯನಾದ ಮತ್ತೊಂದು ಆಶ್ರಯದ ಅಪೇಕ್ಷೆಯಿಲ್ಲದ) ಅಂತಹ ಆನಂದಮಯನಲ್ಲಿ ಭಯರಹಿತನಾಗಿ ಯಾರು ಧ್ಯಾನವೆಂಬ ಪ್ರತಿಷ್ಠಾವನ್ನು (ಸ್ಥಿತಿಯನ್ನು) ಹೊಂದುತ್ತಾನೋ, (ಆನಂತರ) ಆ ಉಪಾಸಕನು ಅಭಯನಾದ ಭಗವಂತನನ್ನು ಹೊಂದುತ್ತಾನೆ'' ಎಂದು ಶ್ರುತಿಯಲ್ಲಿ ಪ್ರಕೃತ್ಯಾದಿಗಳಲ್ಲಿ ಇಲ್ಲದ ಸ್ವಾತಂತ್ರ್ಯಾದಿಗುಣಗಳು ಶ್ರುತವಾದ್ದರಿಂದ, ಪ್ರಕೃತಿಮೊದಲಾದವುಗಳು ಆನಂದಮಯಶಬ್ದವಾಚ್ಯರಲ್ಲ.

ಹಾಗೆಯೇ 'ಸ ಯಶ್ಚಾಯಂ ಪುರುಷೇ' ಎಂಬ ಶ್ರುತಿಯಲ್ಲಿ ಪುರುಷಪದದಿಂದ ಉಪಲಕ್ಷಿತವಾದ ಸಾಮಾನ್ಯರು ಮತ್ತು ಆದಿತ್ಯಪದೋಪಲಕ್ಷಿತವಾದ ಉತ್ತಮರು ಇವರುಗಳಲ್ಲಿ ಆನಂದಮಯನು

ವಾಕ್ಯಭಾಗದಿಂದ 'ತಸ್ಮಾತ್ ಪ್ರಜಾಪತಿರ್ಮುಖ್ಯೋ ರುದ್ರಃ ಪ್ರಜನನೇಶಿತಾ' ಎಂಬುದಾಗಿ ತೈತ್ತರೀಯಭಾಷ್ಯದಲ್ಲಿ ಹೇಳಿದ ಅಂಶವನ್ನು ಇಟ್ಟುಕೊಳ್ಳಬೇಕು. ''ಇತರ''ಶಬ್ದಕ್ಕೆ ವಿರಿಂಚ ಎಂಬರ್ಥವನ್ನು ಹೇಳಿದ್ದಾರೆ. ಹೀಗೆಯೇ ಮುಂದೆಯೂ ಕೂಡ ಭೇದಕವನ್ನು ಹೇಳಿರುವುದರಿಂದ ಭೇದವನ್ನು ಅರ್ಥಾತ್ ಸ್ವೀಕರಿಸಿಕೊಳ್ಳಬೇಕು. ''ಅತ ಏವ ನ ರುದ್ರಃ'' ಎಂಬ ವಾಕ್ಯದಲ್ಲಿ 'ಆನಂದಮಯಃ' ಎಂಬ ಪದವನ್ನು ಅನುವೃತ್ತಿಮಾಡಿಕೊಳ್ಳಬೇಕು. ಹೀಗೆಯೇ ಮುಂದೂ ಕೂಡ ಅಗತ್ಯವಿದ್ದಲ್ಲಿ ಆನಂದಮಯಪದವನ್ನು ಇಟ್ಟುಕೊಳ್ಳಬೇಕು.

'ಸ ಏಕೋ ಬೃಹಸ್ಪತೇರಾನಂದಃ । ಸ ಏಕ ಇಂದ್ರಸ್ಯಾನಂದಃ' ಇತ್ಯಾದಿವಾಕ್ಯಗಳಿಂದ ಇಂದ್ರ, ಬೃಹಸ್ಪತಿ ಮೊದಲಾದವರಿಗೂ ಆನಂದದಲ್ಲಿ ಪರಿಮಿತಿ ಎಂದು ಹೇಳಿರುವುದರಿಂದ ಅವರನ್ನೂ ಆನಂದಮಯ ಎಂಬುದಾಗಿ ಹೇಳಬರುವುದಿಲ್ಲ ಎಂಬ ಅಂಶವನ್ನು ''ಏವಮ್'' ಇತ್ಯಾದಿವಾಕ್ಯದಿಂದ ಗ್ರಹಿಸಿಕೊಳ್ಳಬೇಕು.

**वाक्यार्थमञ्जरी– ॐ भेदव्यपदेशाच्च ॐ ।।** 'ते ये शतम्' 'यतो वाच'मित्यादिना परिमितापरिमितानंदत्वादिरूपविरुद्धधर्मोक्त्या आनंदमयादेर्विरिञ्चादेर्भेदाभिधानाच्च नानंदमय–श्चतुर्मुखादिरित्यर्थः ॥ **ते ये शतमिति ।।** प्रजापतेः रुद्रस्य ते प्रसिद्धाः ये शतमानंदाः तावान् ब्रह्मणश्चतुर्मुखस्यैकआनंदः । तथाविधशतानंदवत्वं तस्येत्यर्थः ॥ **यतो वाच इति ।।** ब्रह्मणः आनंदं यो जानाति स कदाचन न बिभेति स आनंदः किं प्रकारो ज्ञातव्य इत्याकांक्षायां वागाद्यगोचरतया ज्ञातव्य इत्याशयेनोक्तम्– **यत इति ।।** वाचो वाक्यानि मनसा सह अप्राप्य अपरिमितत्वात् साकल्येनाविषयीकृत्य आनंदान्निवर्तंत इति योजना ॥ **एवमिति ।।** ते ये शतं देवानामानंदाः । स एक इंद्रस्यानंदः । ते ये शतमिंद्रस्यानंदाः । स एको बृह्मस्पतेरानंद इत्यानंदत्वोक्तेरिति भावः ।

तेभ्यो दक्षश्चेन्द्रनामा सहींदुरापयत् पुरा ।
तस्माद् बृहस्पतिर्नाम महेंद्रत्वात् पुरंदरः ॥

इति तैत्तिरीयभाष्योक्तेरत्रेंद्रबृहस्पतिशब्दाभ्यां क्रमेण दक्षशचीपत्योर्ग्रहणम् ।

॥ ಓಂ ಭೇದವ್ಯಪದೇಶಾಚ್ಚ ಓಂ ॥

ಸೂತ್ರಾರ್ಥ - 'ತೇ ಯೇ ಶತಂ' 'ಯತೋ ವಾಚೋ' ಇತ್ಯಾದಿ ಶ್ರುತಿಗಳಿಂದ ಪರಿಮಿತಆನಂದ ಮತ್ತು ಅಪರಿಮಿತಆನಂದ ಮೊದಲಾದ ವಿರುದ್ಧಧರ್ಮಗಳನ್ನು ಹೇಳಿ, ಆನಂದಮಯನಿಗೆ ವಿರಿಂಚ ಮೊದಲಾದವರುಗಳಿಂದ ಭೇದವನ್ನು ಹೇಳಿರುವುದರಿಂದಲೂ ಆನಂದಮಯನು ಚತುರ್ಮುಖನೇ ಮೊದಲಾದವರುಗಳು ಆಗುವುದಿಲ್ಲ ಎಂದರ್ಥ.

'ತೇ ಯೇ ಶತಂ' ಎಂಬ ಶ್ರುತಿಯ ಅರ್ಥ - 'ಪ್ರಜಾಪತೇಃ' ರುದ್ರನ 'ತೇ' ಪ್ರಸಿದ್ಧವಾದ 'ಯೇ' ಯಾವ ನೂರರಷ್ಟು ಆನಂದವು 'ಬ್ರಹ್ಮಣಃ' ಚತುರ್ಮುಖನ ಒಂದು ಆನಂದ ಎಂದು. ಈ ರೀತಿಯಾದ ಆನಂದವು ಬ್ರಹ್ಮದೇವರಿಗೆ ನೂರು ಎಂದರ್ಥ. ಬ್ರಹ್ಮನ ಆನಂದವನ್ನು ಯಾರು ಹೀಗೆ

ತಿಳಿಯುತ್ತಾರೋ ಅವನಿಗೆ ಯಾವಕಾಲಕ್ಕೂ ಭಯಾದಿಗಳು ಇರುವುದಿಲ್ಲ. ಅವನ ಆನಂದವನ್ನು ಯಾವ ಪ್ರಕಾರದಿಂದ ತಿಳಿಯಬೇಕು ಎಂದು ಆಕಾಂಕ್ಷೆ ಬಂದರೆ ವಾಕ್ಯಗಳಿಂದ ತಿಳಿಯಲು ಸಾಧ್ಯವಿಲ್ಲವೆಂದು ತಿಳಿಸಲು 'ಯತೋ ವಾಚೋ' ಎಂಬ ಶ್ರುತಿಯು ಹೊರಟಿದೆ. 'ವಾಚಃ' ಎಂದರೆ ವಾಕ್ಯಗಳು 'ಮನಸಾ ಸಹ' ಮನಸ್ಸಿನ ಜೊತೆಗೆ 'ಅಪ್ರಾಪ್ಯ' ಅಪರಿಮಿತವಾದ್ದರಿಂದ ಸಂಪೂರ್ಣವಾಗಿ ತಿಳಿಯದೆ ನಿವೃತ್ತವಾಯಿತು ಎಂದು ಶ್ರುತಿಯನ್ನು ಯೋಜನೆ ಮಾಡಬೇಕು.

'ಏವಂ' ಎಂದರೆ 'ತೇ ಯೇ ಶತಂ ದೇವಾನಾಮಾನಂದಾಃ । ಸ ಏಕ ಇಂದ್ರಸ್ಯ ಆನಂದಃ । ತೇ ಯೇ ಶತಮಿಂದ್ರಸ್ಯಾನಂದಾಃ । ಸ ಏಕೋ ಬೃಹಸ್ಪತೇರಾನಂದಃ ।' ಎಂದು ಆನಂದತ್ವವು ಶ್ರುತಿಗಳಲ್ಲಿ ಕೇಳಿಬಂದಿದೆ ಎಂದು ಭಾವ.

'ತೇಭ್ಯೋ ದಕ್ಷಶ್ಚೇಂದ್ರನಾಮಾ ಸಹೀಂದುರಾಪಯತ್ಪುರಾ ।
ತಸ್ಮಾದ್ಬೃಹಸ್ಪತಿರ್ನಾಮ ಮಹೇಂದ್ರತ್ವಾತ್ಪುರಂದರಃ ॥

ಎಂದು ತೈತಿರೀಯಭಾಷ್ಯದಲ್ಲಿ ಹೇಳಿರುವುದರಿಂದ ಇಲ್ಲಿ ಇಂದ್ರ ಮತ್ತು ಬೃಹಸ್ಪತಿಶಬ್ದಗಳಿಂದ ಕ್ರಮವಾಗಿ ದಕ್ಷ ಮತ್ತು ಶಚೀಪತಿಯನ್ನು ಗ್ರಹಣ ಮಾಡಬೇಕು.

## ಅಸ್ವತಂತ್ರರು ಆನಂದಮಯರಲ್ಲ

**तत्वप्रकाशिका – अदृश्ये स्वामिरहिते जैवगुणविधुरे वा । साकल्येन निर्वचनागोचरे । अपराश्रये तस्मिन्नानन्दमये योऽभयतया ध्यानरूपां प्रतिष्ठां विन्दते अनन्तरं स उपासकोऽभयं भगवन्तं गतो भवतीति श्रुतौ प्रकृत्याद्ययोग्यस्वातन्त्र्यादिश्रवणान्न प्रकृत्यादीनामानन्दमयत्वम् । 'स यश्चायम्' इत्यानन्दमयस्यापकृष्टोत्कृष्टजीवेषु पुरुषादित्यपदोपलक्षितेषु स्थितिकथनान्नाऽऽनन्दमयो ब्रह्मादिजीवसमूह इत्याशयः ।**

"ಅದೃಶ್ಯೇ = ಅದೃಶ್ಯನಾದ, ಅನಾತ್ಮ್ಯೇ = ಸ್ವಾಮಿ ಇಲ್ಲದವನಾದ (ನಿಯಾಮಕನಿಲ್ಲದ), ಅಥವಾ ಜೀವನಲ್ಲಿರುವ ಗುಣಗಳಿಂದ ರಹಿತನಾದ, ಅನಿರುಕ್ತೇ = ಸಂಪೂರ್ಣವಾಗಿ ಹೇಳಲು ಸಾಧ್ಯವಿಲ್ಲದ, ಅನಿಲಯನೇ = ಇನ್ನೊಂದು ಆಶ್ರಯವಿಲ್ಲದ (ತನಗೆ ತಾನೇ ಆಶ್ರಯನಾದ ಮತ್ತೊಂದು ಆಶ್ರಯದ ಅಪೇಕ್ಷೆಯಿಲ್ಲದ) ಅಂತಹ ಆನಂದಮಯನಲ್ಲಿ ಭಯರಹಿತನಾಗಿ ಯಾರು ಧ್ಯಾನವೆಂಬ ಪ್ರತಿಷ್ಠಾವನ್ನು (ಸ್ಥಿತಿಯನ್ನು) ಹೊಂದುತ್ತಾನೋ, (ಆನಂತರ) ಆ ಉಪಾಸಕನು ಅಭಯನಾದ ಭಗವಂತನನ್ನು ಹೊಂದುತ್ತಾನೆ" ಎಂದು ಶ್ರುತಿಯಲ್ಲಿ ಪ್ರಕೃತ್ಯಾದಿಗಳಲ್ಲಿ ಇಲ್ಲದ ಸ್ವಾತಂತ್ರ್ಯಾದಿಗುಣಗಳು ಶ್ರುತವಾದ್ದರಿಂದ, ಪ್ರಕೃತಿಮೊದಲಾದವುಗಳು ಆನಂದಮಯಶಬ್ದವಾಚ್ಯರಲ್ಲ.

ಹಾಗೆಯೇ 'ಸ ಯಶ್ಚಾಯಂ ಪುರುಷೇ' ಎಂಬ ಶ್ರುತಿಯಲ್ಲಿ ಪುರುಷಪದದಿಂದ ಉಪಲಕ್ಷಿತವಾದ ಸಾಮಾನ್ಯರು ಮತ್ತು ಆದಿತ್ಯಪದೋಪಲಕ್ಷಿತವಾದ ಉತ್ತಮರು ಇವರುಗಳಲ್ಲಿ ಆನಂದಮಯನು

ಇದ್ದಾನೆ ಎಂದು ಹೇಳಿದ್ದರಿಂದ ಬ್ರಹ್ಮಾದಿಜೀವರುಗಳು ಹಾಗಿಲ್ಲವಾದ್ದರಿಂದ ಬ್ರಹ್ಮಾದಿಜೀವರುಗಳು ಆನಂದಮಯಶಬ್ದವಾಚ್ಯರಲ್ಲ ಎಂದು ಅಭಿಪ್ರಾಯ.

भावदीपः – 'तस्माददृश्ये जैवानां गुणानामप्यसङ्गतेः' इत्यादितैत्तिरीयभाष्यदिशा पदानामर्थं भेदकज्ञानायाह – **अदृश्य इति** ।। 'अनात्म्ये' इत्यस्यार्थद्वयं स्वामीत्यादि । आत्मनः स्वामिनः अयम् = आत्म्यः, स न इत्यनात्म्य इत्यस्य फलितार्थः स्वामिरहित इति । आत्मनो जीवस्येमे = आत्म्याः, जीवसम्बन्धिगुणाः । ते न सन्ति यस्य इति वा अनात्म्यशब्दार्थ इति भावः ।

अभयमिति क्रियाविशेषणं मत्वाऽऽह – **अभयतयेति** ।। 'अथ सोऽभयं गतो भवति' इति शेषस्यार्थमाह – **अनन्तरमिति** ।। **स्वातन्त्र्येति** ।। 'अनात्म्ये स्वामिरहितेत्युक्तत्वात्' इति भावः । **इत्याशय इति** ।। एतेन 'भेदव्यपदेशात्' इति पदम् भाष्ये प्रतिवाक्यमन्तेऽन्वेति 'आनन्दमयो नेतरः' इति च । तथा चाद्यं वाक्यं ब्रह्मरुद्रार्थं, द्वितीयं प्रकृत्याद्यर्थं, तृतीयं जीवसमूहव्यावृत्त्यर्थम् इति दर्शितम् ।।

'ತಸ್ಮಾದದೃಶ್ಯೇ ಜೈವಾನಾಂ ಗುಣಾನಾಮಪ್ಯಸಂಗತೇಃ' ಇತ್ಯಾದಿ ತೈತ್ತಿರೀಯಭಾಷ್ಯದಲ್ಲಿ ಹೇಳಿದಂತೆ ಭೇದಕಜ್ಞಾನಕ್ಕೋಸ್ಕರ ''ಅದೃಶ್ಯ'' ಇತ್ಯಾದಿವಾಕ್ಯದಿಂದ ಪದಗಳ ಅರ್ಥವನ್ನು ಬಿಡಿಸಿದ್ದಾರೆ. 'ಅನಾತ್ಮ್ಯೇ' ಎಂಬ ಪದಕ್ಕೆ 'ಸ್ವಾಮಿರಹಿತೇ' ಎಂಬುದಾಗಿ, 'ಜೈವಗುಣವಿದುರೇ' ಎಂಬುದಾಗಿ ಎರಡು ಅರ್ಥಗಳು. 'ಆತ್ಮನಃ ಅಯಂ ಆತ್ಮ್ಯಃ । 'ಸಃ ನ ಭವತಿ ಇತಿ ಅನಾತ್ಮ್ಯಃ' ಇಲ್ಲಿ ಆತ್ಮಶಬ್ದಕ್ಕೆ ಸ್ವಾಮಿ ಎಂಬರ್ಥವನ್ನು ಸ್ವೀಕರಿಸಿದಾಗ ಸ್ವಾಮಿರಹಿತ ಎಂಬ ಫಲಿತಾರ್ಥವು ಸಿಗುತ್ತದೆ. 'ಆತ್ಮನಃ ಇಮೇ ಆತ್ಮ್ಯಾಃ' ಇಲ್ಲಿ ಆತ್ಮಶಬ್ದಕ್ಕೆ ಜೀವ ಎಂದರ್ಥ. ಆತ್ಮ್ಯ ಎಂದರೆ ಜೀವಸಂಬಂಧಿಯಾದ ಗುಣಗಳು ಎಂದರ್ಥ. 'ಆತ್ಮ್ಯಾಃ ನ ಸಂತಿ ಯಸ್ಯ ಸಃ ಅನಾತ್ಮ್ಯಃ' ಎಂಬ ವಿಗ್ರಹದಂತೆ ಜೀವಸಂಬಂಧಿಯಾದ ಗುಣಗಳಿಂದ ದೂರನಾದವನು ಎಂಬ ಅರ್ಥವು ಸಿಗುತ್ತದೆ.

ಈ ಶ್ರುತಿಯಲ್ಲಿರುವ 'ಅಭಯ'ಶಬ್ದವು ಕ್ರಿಯಾವಿಶೇಷಣ ಎಂಬ ಅಭಿಪ್ರಾಯದಿಂದ ''ಅಭಯತಯಾ'' ಎಂದು ಅರ್ಥವನ್ನು ಬಿಡಿಸಿದ್ದಾರೆ. ''ಅನಂತರಂ'' ಇತ್ಯಾದಿ ವಾಕ್ಯಭಾಗದಿಂದ 'ಅಥ ಸೋಽಭಯಂ ಗತೋ ಭವತಿ' ಎಂಬ ನಂತರದ ಶ್ರುತಿವಾಕ್ಯದ ಅರ್ಥವನ್ನು ತಿಳಿಸಿದ್ದಾರೆ. 'ಅನಾತ್ಮ್ಯೇ' ಎಂಬ ಶಬ್ದಕ್ಕೆ 'ನಿಯಾಮಕರಿಲ್ಲದವನು' ಎಂಬರ್ಥವನ್ನು ತಿಳಿಸಿರುವುದರಿಂದ ಸ್ವಾತಂತ್ರ್ಯವನ್ನು ತಿಳಿಸಿದಂತೆ ಆಗುತ್ತದೆ.

''ಇತ್ಯಾಶಯಃ'' ಎಂಬ ವಾಕ್ಯಭಾಗದಿಂದ ಸೂತ್ರದಲ್ಲಿರುವ ಭೇದವ್ಯಪದೇಶಾತ್ ಎಂಬ ಪದವು ಮತ್ತು 'ಆನಂದಮಯಃ ನೇತರಃ' ಎಂಬ ಪದವು ಭಾಷ್ಯದಲ್ಲಿ ಪ್ರತಿಯೊಂದು ವಾಕ್ಯದ ಕೊನೆಗೆ ಅನ್ವಯವನ್ನು ಪಡೆಯುತ್ತದೆ. ಹಾಗಾಗಿ ಮೊದಲನೆಯ ವಾಕ್ಯವು ಬ್ರಹ್ಮರುದ್ರರನ್ನು ವ್ಯಾವೃತ್ತಿ ಮಾಡುವುದಕ್ಕಾಗಿ, ಎರಡನೆಯ

ವಾಕ್ಯವು ಪ್ರಕೃತ್ಯಾದಿಗಳನ್ನು ವ್ಯಾವೃತ್ತಿ ಮಾಡುವುದಕ್ಕಾಗಿ, ಮೂರನೆಯ ವಾಕ್ಯವು ಜೀವಸಮೂಹವನ್ನು ವ್ಯಾವೃತ್ತಿಮಾಡುವುದಕ್ಕಾಗಿ ಎಂದು ತೋರಿಸಿದಂತೆ ಆಗುತ್ತದೆ.

**वाक्यार्थमञ्जरी–** आत्मनः स्वामिनः अयं आत्म्यः स नेत्यनात्म्य इत्यस्य फलितोर्थः । **स्वमिरहित इति** ।। आत्मनो जीवस्ये आत्म्याः जीवसंबंधि गुणाः तेन संतियस्येतिभावेनोक्तं – **जैवगुणविधुर इति** ।। प्रतिष्ठां पूजां विंदते करोति । पुरुषपदोपलक्षितेष्वपकृष्टजीवेषु आदित्यपदोपलक्षितेषूत्कृष्टजीवेष्विति विवेकः ।।

'ಆತ್ಮನಃ' ಎಂದರೆ ಸ್ವಾಮಿ ಎಂದರ್ಥ. ಯಾವನಿಗೆ ಮತ್ತೊಬ್ಬ ನಿಯಾಮಕನಿಲ್ಲವೋ ಅವನು ಅನಾತ್ಮನು. ಇದನ್ನೇ 'ಸ್ವಾಮಿರಹಿತೇ' ಎಂದು ಹೇಳಿದ್ದಾರೆ. 'ಜೈವಗುಣವಿಧುರ' ಶಬ್ದಕ್ಕೆ ಜೀವನಿಗೆ ಸಂಬಂಧಿಸಿದ ಗುಣಗಳು ಯಾರಲ್ಲಿ ಇಲ್ಲವೋ ಅವನು ಎಂದರ್ಥ.

'ಪ್ರತಿಷ್ಠಾಂ' ಎಂದರೆ ಪ್ರಜೆಯನ್ನು 'ವಿಂದತೇ' ಎಂದರೆ 'ಮಾಡುತ್ತಾನೆ' ಎಂದರ್ಥ.

ಪುರುಷಪದದಿಂದ ಉಪಲಕ್ಷಿತರಾದ ಅಪಕೃಷ್ಟಜೀವರಗಳಲ್ಲಿ ಎಂದೂ, ಮತ್ತು ಆದಿತ್ಯ-ಪದದಿಂದ ಉಪಲಕ್ಷತರಾದ ಉತ್ಕೃಷ್ಟ ಜೀವರು ಎಂದು ತಿಳಿಯಬೇಕು.

• • • • •

## ಐಕ್ಯಶ್ರುತಿಗಳ ವಿರೋಧವಿಲ್ಲ

**भाष्यम्– न च 'तत्त्वमसि' (छा.६-८) 'अहं ब्रह्मास्मि' (बृ.३-४-१०) इत्यादिश्रुतिविरोधः ।**

**'नामानि सर्वाणि यमाविशन्ति' (भाल्लवेयश्रुतिः) इति तत्तच्छब्दवाच्यत्वोक्तेः ।**

ಛಾಂದೋಗ್ಯೋಪನಿಷತ್ತಿನಲ್ಲಿರುವ 'ತತ್ವಮಸಿ' ಎಂಬ ವಾಕ್ಯವು ಬೃಹದಾರಣ್ಯಕದ-ಲ್ಲಿರುವ 'ಅಹಂ ಬ್ರಹ್ಮಾಸ್ಮಿ' ಎಂಬ ವಾಕ್ಯವು ಎಲ್ಲ ಚೇತನರಿಗೂ ಐಕ್ಯವನ್ನು ಹೇಳುತ್ತಿದೆ. ಹೀಗಿರುವಾಗ ರುದ್ರಾದಿಗಳು ಆನಂದಮಯರಲ್ಲವೆಂದು ಹೇಳಿದರೆ ಬಹುಶ್ರುತಿಗಳ ವಿರೋಧ ಬರುತ್ತದಲ್ಲವೇ? ಈ ಆಕ್ಷೇಪವು ಸರಿಯಲ್ಲ. ಏಕೆಂದರೆ, ವೇದದಲ್ಲಿರುವ ಸಕಲಶಬ್ದಗಳು ವಿಷ್ಣುವಿನ ನಾಮಗಳೇ ಆಗಿವೆ ಎಂದು 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ– ಆನಂದಮಯನು ಪರಬ್ರಹ್ಮನಾಗಲಿ. ಆದರೆ ಬ್ರಹ್ಮಾದಿಗಳಿಗೆ ಆನಂದ-ಮಯನಿಂದ ಭೇದವನ್ನು ಹೇಳಿದರೆ ತತ್ವಮಸಿ ಇತ್ಯಾದಿಶ್ರುತಿಗಳ ವಿರೋಧ ಬರುತ್ತದಲ್ಲವೇ ಎಂಬ ಆಕ್ಷೇಪವನ್ನು ಪರಿಹರಿಸುತ್ತಿದ್ದಾರೆ(१).

---

(१) भाष्यदीपिका– नन्वस्त्वानन्दमयः परं ब्रह्म । तथाऽपि तेन कथं ब्रह्मादीनां भेदः सम्भवति । तद्भेदस्य 'तत्त्वमसि' इत्यादिश्रुतिविरुद्धत्वादित्यत आह – न चेति ।।

ತತ್ತ್ವಮಸಿ = ಅವನೇ ನೀನಾಗಿರುವಿ, ಅಹಂ ಬ್ರಹ್ಮಾಸ್ಮಿ = ನಾನೇ ಬ್ರಹ್ಮನಾಗಿರುವೆ ಇತ್ಯಾದಿಶ್ರುತಿವಿರೋಧಃ = ಇವೇ ಮೊದಲಾದ ಶ್ರುತಿಗಳ ವಿರೋಧವು ಬರುತ್ತದೆ ಎಂದರೆ, ನ ಚ = ಏಕೆಂದರೆ, ಭಾಲ್ಲವೇಯ ಶ್ರುತಿಯಲ್ಲಿ 'ನಾಮಾನಿ ಸರ್ವಾಣಿ = ಸಕಲಶಬ್ದಗಳು, ಯಮಾವಿಶಂತಿ = ಯಾರೊಬ್ಬನನ್ನೇ ಪ್ರತಿಪಾದಿಸುತ್ತವೋ, ಇತಿ = ಈ ರೀತಿಯಾಗಿ, ತತ್ತಚ್ಛಬ್ದವಾಚ್ಯೋಕ್ತೇಃ = ಎಲ್ಲ ಶಬ್ದಗಳ ವಾಚ್ಯತ್ವವನ್ನು ಹೇಳಲಾಗಿದೆ.

## ಬ್ರಹ್ಮಾದಿದೇವತೆಗಳಿಂದ ಭಿನ್ನನಾಗಿದ್ದಾನೆ

**तत्वप्रकाशिका – नन्वस्त्वानन्दमयः परं ब्रह्म । तथापि कथं तेन ब्रह्मादीनां भेदः सम्भवति? तद्भेदस्य 'तत्त्वमसि' इत्यादिश्रुतिविरोधादित्यत आह – न चेति ।। भवेदेतद् यद्येतच्छ्रुतीनामद्वैतार्थता स्यात् । न चैवम् । 'नामानि सर्वाणि' इति श्रुत्या तत्त्वमस्यादिशब्दैः विष्णोरेव वाच्यत्वोक्तेरित्यर्थः ।**

ಸರಿ, ನೀವು ಹೇಳಿದಂತೆ ಪರಬ್ರಹ್ಮನೇ ಆನಂದಮಯಶಬ್ದವಾಚ್ಯನಾಗಲಿ; ಆದರೂ 'ತತ್ತ್ವಮಸಿ' ಶ್ರುತಿಯ ವಿರೋಧವಿರುವುದರಿಂದ ಪರಬ್ರಹ್ಮನಿಗೂ ಬ್ರಹ್ಮಾದಿದೇವತೆಗಳಿಗೂ ಭೇದವಿದೆ ಎಂದು ಹಿಂದೆ ಹೇಳಿದ್ದು ಸರಿಯಲ್ಲ ಎಂದರೆ "ನ ಚ" ಎನ್ನುವುದರಿಂದ ಉತ್ತರಿಸುತ್ತಾರೆ. ತತ್ತ್ವಮಸಿಶ್ರುತಿಗೆ ನೀವು ಹೇಳಿದಂತೆ ಅದ್ವೈತವು (ಜೀವಬ್ರಹ್ಮರ ಅಭೇದವು) ಅರ್ಥವಾಗಿದ್ದರೆ ಹಾಗೆ ಹೇಳಬಹುದಿತ್ತು.

---

भेदव्यपदेशस्येति शेषः । चः समुच्चये । एतद्विरोधशङ्कापरिहारसमुचितस्यैव भेदव्यपदेशस्य विवक्षितार्थसाधकत्वात् । एवमन्यत्रापि । त्वं तद् ब्रह्मासीत्यद्वैतरीत्याऽद्यश्रुत्यर्थः । द्वितीयस्यास्तु अहं ब्रह्माभिन्नोऽस्मीति । आद्यम् उद्दालकेन श्वेतकेतुं प्रत्युपदिष्टं छन्दोग-वाक्यम् । द्वितीयं बृहदारण्यके वामदेवोक्तम् । अत्रोभयत्रापि विशिष्टयोरैक्यासम्भवात् तत्त्वमहंब्रह्मपदैर्लक्षितचैतन्ययोरैक्यमुच्यते । आदिशब्देन 'तद्योऽहं सोऽसौ योऽसौ सोऽहं' (ऐ.आ.२-२-४.) 'योसावसौ पुरुषः सोऽहमस्मि' (ई.१६.) इत्यादिश्रुतिर्गृह्यते ।

कुतो नेत्यतस्तत्रैतच्छ्रुतीनां परब्रह्मार्थकत्वेनाद्वैतार्थत्वाभावादिति हेतूपस्कारमभिप्रेत्य तेषां परब्रह्मार्थत्वे प्रमाणमाह – नामानीति ।। 'नामानि' इति श्रुत्या तस्य ब्रह्मणः 'तत्तच्छब्दैः' तत्त्वमादिपदैर्वाच्यत्वोक्तेरित्यर्थः । पदसमन्वयेनैतेषां ब्रह्मपरत्वान्नैतद्विरोध इति भावः । तत्प्रकारस्तु ततत्वात्तत् । त्वम्पदबोध्यजीवान्तर्यामित्वादभिमुखत्वाद्वा त्वम् । असनाद् जगत्संहरणादसिः। अहेयत्वाद् हंनामकजीवभिन्नत्वाद्वा अहम् । पूर्णत्वाद् ब्रह्म । असनान्मिनुतेरस्मि । यद्वा - सुमितत्वात् स्मीत्युक्तो जीवः, तद्भिन्नं पूर्णं ब्रह्म अस्मीत्युच्यत इति । ज्ञानरूपत्वान्नितरां यन्तृत्वाच्च यः । सरणात् सारत्वाच्च सः । अमुष्मिन् अमुष्मिन् स्थितत्वात् परोक्षत्वाच्च असावसौशब्दवाच्यः इत्यैतरेयश्रुत्यर्थः । 'असौ' प्राणे स्थितः 'पुरुषः' पूर्णषड्गुण इति ईशावास्यश्रुत्यर्थः ।

ಆದರೆ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಸಕಲಶಬ್ದಗಳಿಂದ ವಿಷ್ಣುವೇ ವಾಚ್ಯನೆಂದು ಹೇಳಿದೆ. ಆದ್ದರಿಂದ ತತ್, ತ್ವಂ, ಅಸಿ ಮುಂತಾದಪದಗಳಿಗೆ ವಿಷ್ಣುವೇ ಅರ್ಥ. ಹಾಗಾಗಿ ಯಾವುದೇ ವಿರೋಧವಿಲ್ಲ.

भावदीपः – **तत्त्वमसीत्यादिश्रुतिविरोधादिति** ।। ननु 'कामाच्च' इति सूत्रे अद्वैते प्रत्यक्षस्याप्रसक्तेरद्वैतश्रुतीनां 'तद्गुणसारत्वात्' इति द्वितीये व्याकरिष्यमाणत्वेनानुमानमात्रनिरासोपपत्तेः पुनरत्र भाष्येऽद्वैतश्रुतिविरोधशङ्कासमाधिर्व्यर्थ इति चेत्, उच्यते । तद्गुणसूत्रे अद्वैतश्रुतीनां सादृश्येनापि 'नामानि सर्वाणि' इत्यादिश्रुत्या पदसमन्वयरूपं तथा –

स्वातन्त्र्ये च विशिष्टत्वे स्थामत्यैक्ययोरपि ।
सादृश्ये चैक्यवाक्सम्यक् सावकाशा यथेष्टते ।।'

इत्युक्तदिशा स्वातन्त्र्याद् अर्थान्तरपरत्वरूपं च समाधिं वक्तुमिति । तथा च 'तद्गुणसारत्वात् तद् व्यपदेशः प्राज्ञवत्' इत्युक्त्युपलक्षित एव समाधिरत्र सूत्रकृत् निरस्यानुमानमूलभूतश्रुत्यभावद्योतनार्थमियं शङ्का कृता इत्यदोषः । **विष्णोरेवेति** ।। एतच्च 'ज्योतिरुपक्रमात्' इत्यत्र व्यक्तम् ।

"ತತ್ತ್ವಮಸಿ ಇತ್ಯಾದಿ ಶ್ರುತಿವಿರೋಧಾತ್" ಎಂಬಲ್ಲಿ ಹೀಗೊಂದು ಶಂಕೆ ಬರಬಹುದು. "ಕಾಮಾಚ್ಚ" ಎಂಬ ಸೂತ್ರದಲ್ಲಿ ಅದ್ವೈತದ ವಿಷಯದಲ್ಲಿ ಪ್ರತ್ಯಕ್ಷವು ಪ್ರಸಕ್ತವಾಗದಿರುವುದರಿಂದ ಅದ್ವೈತವನ್ನು ಹೇಳುವ ಶ್ರುತಿಗಳಿಗೆ 'ತದ್ಗುಣಸಾರತ್ವಾತ್' ಎಂಬ ಎರಡನೆಯ ಅಧ್ಯಾಯದ ಸೂತ್ರದಲ್ಲಿ ವಿಮರ್ಶೆ ಮಾಡಲಿರುವುದರಿಂದ ಇಲ್ಲಿ ಅನುಮಾನ ಮಾತ್ರ ನಿರಾಸಮಾಡುವುದಕ್ಕೆ ಅವಕಾಶವಿದ್ದು; ಭಾಷ್ಯದಲ್ಲಿ ಇಲ್ಲಿ ಅದ್ವೈತಶ್ರುತಿಯ ವಿರೋಧವನ್ನು ಶಂಕೆ ಮಾಡಿಕೊಂಡು ಅದಕ್ಕೆ ಸಮಾಧಾನವನ್ನು ಹೇಳಿದುದು ವ್ಯರ್ಥವಾಗಿದೆ -- ಎಂಬುದಾಗಿ. ಆದರೆ ತದ್ಗುಣಸೂತ್ರದಲ್ಲಿ ಅದ್ವೈತಶ್ರುತಿಗಳಿಗೆ ಸಾದೃಶ್ಯದಿಂದಲೂ ಕೂಡ, 'ನಾಮಾನಿ ಸರ್ವಾಣಿ' ಇತ್ಯಾದಿಶ್ರುತಿಗಳ ಬಲದಿಂದ ಪದಸಮನ್ವಯರೂಪವನ್ನು, ಹಾಗೆಯೇ

'ಸ್ವಾತಂತ್ರ್ಯೇ ಚ ವಿಶಿಷ್ಟತ್ವೇ ಸ್ಥಾನಮತ್ಯೈಕ್ಯಯೋರಪಿ।
ಸಾದೃಶ್ಯೇ ಚೈಕ್ಯವಾಕ್ಯಸಮ್ಯಕ್ ಸಾವಕಾಶಾ ಯಥೇಷ್ಟತೇ'

ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಸ್ವಾತಂತ್ರ್ಯಾದಿ ಅರ್ಥಾಂತರಪರತ್ವ ರೂಪವಾದ ಸಮಾಧಾನವನ್ನು ಹೇಳುವುದಕ್ಕಾಗಿ ಇಲ್ಲಿ ಅದ್ವೈತಶ್ರುತಿವಿರೋಧವನ್ನು ಶಂಕೆಮಾಡಿಕೊಂಡು ಸಮಾಧಾನ ಮಾಡಿದ್ದಾರೆ. ಹಾಗೆಯೇ 'ತದ್ಗುಣಸಾರತ್ವಾತ್ ತದ್ವ್ಯಪದೇಶಃ ಪ್ರಾಜ್ಞವತ್' ಎಂಬ ಸೂತ್ರದಲ್ಲಿ ಯುಕ್ತಿಯಿಂದ ಉಪಲಕ್ಷಿತವಾದುದಕ್ಕೆ ಮಾತ್ರ ಸಮಾಧಾನವನ್ನು ಹೇಳುತ್ತಿದ್ದು, ಇಲ್ಲಿ ಸೂತ್ರಕಾರರಿಂದ

ನಿರಾಕರಣೆ ಮಾಡಲ್ಪಡುವ ಅನುಮಾನಕ್ಕೆ ಮೂಲಭೂತವಾದ ಶ್ರುತಿಗಳು ಇಲ್ಲ ಎಂಬುದನ್ನು ತೋರಿಸುವುದಕ್ಕಾಗಿ ಈ ಶಂಕೆಯನ್ನು ಮಾಡಿಕೊಂಡಿದ್ದಾರೆ. ಆದುದರಿಂದ ಇಲ್ಲಿ ಯಾವುದೇ ದೋಷವಿಲ್ಲ.

"ವಿಷ್ಣೋರೇವ" ಎಂಬ ವಾಕ್ಯಭಾಗದಲ್ಲಿ ಹೇಳಿದ ಅಂಶವು 'ಜ್ಯೋತಿರುಪಕ್ರಮಾತ್' ಎಂಬ ಸೂತ್ರವಾಕ್ಯದಲ್ಲಿ ಸ್ಪಷ್ಟವಾಗುತ್ತದೆ.

• • • • •

## ನಿಯಮ್ಯ ನಿಯಾಮಕಗಳಿಗೆ ಅಭೇದವ್ಯವಹಾರ

**भाष्यम्– 'इदं हि विश्वं भगवानिवेतरो यतो जगत्स्थाननिरोध सम्भवः' (भाग), 'असर्वः सर्व इत्यपि' (तुरश्रुतिः)(१) ।**

'ಯಾವಾತನಿಂದ ಈ ಜಗತ್ತಿನ ಸ್ಥಿತಿ, ಸಂಹಾರ, ಉತ್ಪತ್ತಿ ಮೊದಲಾದವುಗಳು ಆಗುತ್ತವೋ ಅಂತಹ ಪರಮಾತ್ಮನು ಜಗತ್ತಿಗಿಂತ ಭಿನ್ನನೇ ಆಗಿದ್ದಾನೆ. ಆದರೂ ಸಹ ಸಮಸ್ತಜಗತ್ತೂ ಅವನ ಸ್ವರೂಪವೆಂದು ನಿಯಮ್ಯನಿಯಾಮಕಭಾವದಿಂದ ಅಭೇದವ್ಯವಹಾರಕ್ಕೆ ವಿಷಯನಾಗುತ್ತಾನೆ' ಎಂದು 'ಇದಂ ಹಿ ವಿಶ್ವಮ್' ಎಂಬ ಭಾಗವತವಾಕ್ಯವು ಹೇಳುತ್ತಿದೆ.

'ಸರ್ವಪದಾರ್ಥಗಳಿಗಿಂತ ಭಿನ್ನನಾಗಿದ್ದರೂ ಸರ್ವಪದಾರ್ಥಗಳೆಂದೇ ಕರೆಸಿಕೊಳ್ಳುತ್ತಾನೆ. ಅವುಗಳಿಗೆ ಸ್ವಾಮಿಯಾದ್ದರಿಂದ' ಎಂದು 'ಅಸರ್ವಃ ಸರ್ವ' ಎಂಬ ಶ್ರುತಿಯು ಹೇಳುತ್ತಿದೆ.

---

(१) भाष्यदीपिका– अस्तु वा एतच्छ्रुतीनाम् ऐक्यपरत्वं वाक्यान्वयरीत्या । तथाऽपि नैक्यश्रुतिविरोधो भेदश्रुतेः शङ्कनीयः, भगवतः सर्वैक्यश्रुतेः सर्वस्वामित्वनिमित्तैक्यपरत्वादित्याशयेन तत्र प्रमाणत्वेन भागवतस्मृतिं पठति – इदं हीति ।। 'भगवान्' स्वयम् 'इतरोऽपि' जगतो भिन्नोऽपि सन् 'इदं' प्रमितं विश्वमिवोच्यते 'तत्त्वमसि' 'अहं ब्रह्मास्मि' इत्यादिवचनेषु । यथोक्तं प्रथमतात्पर्ये – 'इतरोऽपि भगवान् विश्वमिव' इति । कुतः? 'यतः' कारणात् 'जगत्स्थाननिरोधसम्भवः' जगतः स्थानं स्थितिः, निरोधो नाशः, सम्भवः उत्पत्तिः, ते यस्माद् भवन्ति स तथोक्तः । यद्वा - स्थापयति निरोधयति सम्भावयतीति तथोक्तः ।

अथवा – तिष्ठत्यस्मान्निरुद्ध्यते प्रलीयतेऽस्मिन् सम्भवत्यस्मादिति तथोक्तः । तथा च जगत्सृष्ट्यादिकर्तेत्यर्थः । एवम्भूतस्य जगद्भेदः प्रमाणसिद्ध इति ज्ञापनाय हिशब्दः । तत्त्वप्रदीपे तु - बहुव्रीहिं विना इदं विश्वं भगवानिव; एतदधीनत्वात् । स त्वितरः । कः? 'यतो' यस्मात् 'जगत्स्थाननिरोधसम्भवः' जगत्सृष्ट्यादिकमित्युक्तम् । अत्र टीकायां च भगवानिदं विश्वमिवेत्यन्वयः । स्वामित्वेनैक्यव्यपदेश इत्येतदेवाऽह – असर्व इति ।। तुरश्रुतिः । भगवान् सर्वभिन्नोऽपि सर्वस्वामित्वात् सर्व इत्यभेदेन वेदादिषूच्यत इत्यर्थः । इत्यपीति श्रुतिस्थोऽपिः समुच्चये । यत इति शेषः । अस्यातोऽपि न विरोध इत्यन्वयः ।

ಪ್ರತಿಪದಾರ್ಥ– ಸ್ವಾಮಿ-ಸ್ವಾಮ್ಯಭಾವ ಇರುವುದರಿಂದಲೂ ಅಭೇದವ್ಯವಹಾರವು ತಪ್ಪಾಗುವುದಿಲ್ಲ. ಈ ವಿಷಯದಲ್ಲಿ ಭಾಗವತವೇ ಮೊದಲಾದವುಗಳು ಆಧಾರವಾಗಿವೆ. ಐಕ್ಯಶ್ರುತಿಗಳು ಬ್ರಹ್ಮನು ಪ್ರತಿಯೊಂದು ಪದಾರ್ಥಗಳಿಗೆ ಸ್ವಾಮಿಯಾಗಿರುವುದರಿಂದ ಅವು ಅವನ ಸ್ವರೂಪವೆಂದು ಹೇಳುತ್ತಿವೆ. ಹೊರತು ಅಭೇದಕಾರಣದಿಂದಲ್ಲ ಎಂಬುದನ್ನು ಅನೇಕ ಪ್ರಮಾಣಗಳಿಂದ ಸಮರ್ಥಿಸುತ್ತಿದ್ದಾರೆ.

'ಯತಃ = ಯಾವಾತನಿಂದ, ಜಗತ್‌ಸ್ಥಾನ = ಜಗತ್ತಿನ ಸ್ಥಿತಿಯು, ನಿರೋಧಃ = ಸಂಹಾರವು, ಸಂಭವಃ = ಜನ್ಮವು ಮೊದಲಾದವು ಆಗುತ್ತವೋ, ಸಃ = ಅಂತಹ, ಭಗವಾನ್ = ಪರಮಾತ್ಮನು, ಇತರಃ ಇವ = ಇತರೋಽಪಿ = ಭಿನ್ನನೇ ಆಗಿದ್ದರೂ, ಇದಂ ವಿಶ್ವಂ ಭಗವಾನ್ = ಸಮಸ್ತ ಜಗತ್ತೂ ಪರಮಾತ್ಮನೇ ಎಂದು (ನಿಯಮ್ಯ ನಿಯಾಮಕಭಾವದಿಂದ), ಅಭೇದವ್ಯವಹಾರಕ್ಕೆ ವಿಷಯನಾಗುತ್ತಾನೆ.

ಅಸರ್ವಃ = ಸರ್ವಭಿನ್ನನಾದನೂ, ಪರಮಾತ್ಮನು ಸರ್ವಃ ಇತ್ಯಪಿ = ಸರ್ವನೆಂದೂ (ಸರ್ವಸ್ವಾಮಿಯಾದ್ದರಿಂದ) ಕರೆಸಿಕೊಳ್ಳುತ್ತಾನೆ.

## ಅದ್ವೈತಿಗಳ ಅರ್ಥ ಒಪ್ಪಿದರೂ ಬಾಧಕವಿಲ್ಲ

**तत्वप्रकाशिका – 'सन्तु (चै)वैताः श्रुतयोऽद्वैतपराः । तथाऽपि नोक्तभेदस्य तद्विरोधः, भगवतः सकलस्वामित्वेनैक्यव्यपदेशोपपत्तेः' इत्येतत् प्रमाणेनाह – इदमिति ।। इदं विश्वं भगवानिवोच्यते स्वयामितरोऽपि सन् । यतः कारणात् जगत्स्थाननिरोधोत्पत्तिकर्तेत्यर्थः । एतदेवाह 'असर्वः' इति वाक्यं च ।**

ಮಾಯಾವಾದಿಗಳು ಹೇಳುವಂತೆ ತತ್ತ್ವಮಸಿ ಮುಂತಾದಶ್ರುತಿಗಳು ಅದ್ವೈತವನ್ನು ಹೇಳುತ್ತವೆಯೆಂದರೂ ಭೇದವನ್ನು ಹೇಳಿದರೆ ಯಾವ ವಿರೋಧವೂ ಇಲ್ಲ. ಏಕೆಂದರೆ ಭಗವಂತನು ಎಲ್ಲರಿಗೂ ಒಡೆಯನಾದ್ದರಿಂದ ಆ ರೀತಿಯ ಅಭೇದವ್ಯವಹಾರವು ಕೂಡುತ್ತದೆ. ಇದನ್ನು ಆಚಾರ್ಯರು ಪ್ರಮಾಣಪುರಃಸರವಾಗಿ "ಇದಂ" ಎಂಬುದರಿಂದ ತೋರಿಸುತ್ತಾರೆ. ಭಗವಂತನು ಈ ಜಗತ್ತಿಗಿಂತ ಭಿನ್ನನಾಗಿದ್ದರೂ ಈ ಜಗತ್ತಿಗೆ ಉತ್ಪತ್ತಿ, ಸ್ಥಿತಿ, ಲಯ ಇವುಗಳನ್ನು ಮಾಡುತ್ತಾನೆ. ಆದ್ದರಿಂದ ಈ ವಿಶ್ವವನ್ನು ಭಗವಂತನೆಂದೇ ಕರೆಯುತ್ತಾರೆ. ಇದೇ ಅಭಿಪ್ರಾಯವನ್ನು "ಅಸರ್ವ" ಎಂಬ ಪ್ರಮಾಣವು ಹೇಳುತ್ತಿದೆ.

भावदीपः – वाक्यान्वयपक्षमुपेत्याह – **सन्तु वेति** ।। स्वामित्वेन स्वातन्त्र्येण। भगवानिवोच्यते । उपचारेण भगवानुच्यते 'तत्त्वमसि' 'अहं ब्रह्म' 'पुरुष एवेदं सर्वम्' इत्यादिष्वित्यर्थः । मुख्यमेवैक्यं कुतो न? इत्यत आह – **इतरोऽपीति** ।। जगत्स्थाननिरोधसम्भवा यतो भवन्ति इति व्यधिकरणबहुव्रीहिमाश्रित्याऽऽह – **जगत्स्थानेति** ।। तत्वप्रदीपे तु 'यतो यस्मात् भगवतो जगत्स्थानादिः सत्वितरः'

**इत्युक्तम् । एतच्च प्रथमस्कन्धस्थं वाक्यम् । एतदेवेति ।। 'असर्वः सर्व इव' इति वक्ष्यमाणदिशा 'असर्वः सर्वभिन्नोऽपि सर्व इत्युच्यते स्वातन्त्र्यात्' इति श्रुत्यर्थः ।**

ಅದ್ವೈತಶ್ರುತಿಗಳಲ್ಲಿ ವಾಕ್ಯಗಳಿಗೆ ಪರಸ್ಪರ ಅನ್ವಯವನ್ನು ಹೇಳುವ ಪಕ್ಷವನ್ನು ಒಪ್ಪಿಕೊಂಡು "ಸಂತು ವಾ" ಇತ್ಯಾದಿಯಾದ ಸಮಾಧಾನವನ್ನು ಹೇಳಿದ್ದಾರೆ. 'ತತ್ತ್ವಮಸಿ' 'ಅಹಂ ಬ್ರಹ್ಮ' 'ಪುರುಷ ಏವೇದಂ ಸರ್ವಮ್' ಇತ್ಯಾದಿ ವಾಕ್ಯಗಳಲ್ಲಿ ಭಗವಂತನು ಸ್ವಾಮಿ ಎಂಬುದಾಗಿಯೂ, ಹಾಗೂ ಭಗವಂತನು ಸ್ವತಂತ್ರ ಎಂಬುದಾಗಿಯೂ ಅವನನ್ನೇ ವಿವರಿಸಲಾಗಿದೆ. ಹೀಗೆ ಉಪಚಾರದಿಂದ ಭಗವಂತನನ್ನು ಎಲ್ಲಾ ವಾಕ್ಯಗಳಲ್ಲೂ ಹೇಳಲಾಗಿದೆ.

ಇಲ್ಲಿ ಮುಖ್ಯವಾದ ಐಕ್ಯವು ಏಕಿಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ "ಇತರೋಽಪಿ" ಇತ್ಯಾದಿ ವಾಕ್ಯಗಳಿಂದ ವಿವರಣೆಯನ್ನು ನೀಡಿದ್ದಾರೆ. 'ಜಗತ್ಸ್ಥಾನನಿರೋಧಸಂಭವಾ' ಎಂಬ ಭಾಗವತದ ವಾಕ್ಯದಲ್ಲಿ ಜಗತ್ತಿನ ಸ್ಥಾನ, ನಿರೋಧ ಮತ್ತು ಸಂಭವಗಳು ಯಾರಿಂದ ಆಗುತ್ತವೋ ಅಂತಹ ಭಗವಂತನು ಎಂಬ ಅರ್ಥದಲ್ಲಿ ವ್ಯಧಿಕರಣಬಹುವ್ರೀಹಿಸಮಾಸವನ್ನು ಇಟ್ಟುಕೊಂಡು "ಜಗತ್ಸ್ಥಾನ" ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನ ಮಾಡಿದ್ದಾರೆ. ತತ್ತ್ವಪ್ರದೀಪದಲ್ಲಿ 'ಯತಃ ಅಂದರೆ ಯಾವ ಕಾರಣದಿಂದ ಭಗವಂತನಿಂದಲೇ ಜಗತ್ತಿನ ಸ್ಥಿತ್ಯಾದಿಗಳು ಸಂಭವಿಸುತ್ತವೆಯೋ ಅವನು ಜಗತ್ತಿಗಿಂತ ಬೇರೆ ಎಂದು ವಿವರಿಸಲಾಗಿದೆ. (ಮುದ್ರಿತಪುಸ್ತಕದಲ್ಲಿ - ತತ್ವಪ್ರದೀಪದಲ್ಲಿ - ಇದಂ ವಿಶ್ವಂ ಭಗವಾನಿವ ಈ ವಿಶ್ವವು ಭಗವಂತನಂತೆ. ತದಧೀನತ್ವಾತ್ ತತ್ - ಇದು ಭಗವಂತನ ಅಧೀನವಾಗಿರುವುದರಿಂದ; ಇದನ್ನು ಭಗವಂತನೇ ಎಂಬಂತೆ ಕರೆಯುತ್ತಾರೆ. ನ ತು ಇತರಃ = ಭಗವಂತನಿಗಿಂತ ಬೇರೆಯಾದ ವ್ಯಕ್ತಿಗಳು ಈ ರೀತಿ ಅಲ್ಲ; ಯಸ್ಮಾತ್ ಭಗವತಃ ಜಗತ್ಸೃಷ್ಟ್ಯಾದಿಕಂ = ಏಕೆಂದರೆ ಭಗವಂತನಿಂದಲೇ ಜಗತ್ತಿನ ಸೃಷ್ಟ್ಯಾದಿಗಳು ಸಂಭವಿಸುತ್ತವೆ; ಈ ರೀತಿಯಾಗಿ ವಾಕ್ಯಗಳಿದ್ದು ಇದನ್ನು ವಿದ್ವಾಂಸರು ವಿಮರ್ಶಿಸಬೇಕು.) ಇದು ಭಾಗವತದ ಪ್ರಥಮಸ್ಕಂಧದಲ್ಲಿ ಬರುವ ವಾಕ್ಯವಾಗಿದೆ.

'ಅಸರ್ವಃ ಸರ್ವ ಏವ' ಎಂಬ ವಾಕ್ಯವು ಮುಂದೆ ಹೇಳಲಿರುವಂತೆ ಇದೇ ಅಭಿಪ್ರಾಯವನ್ನೇ ತಿಳಿಸುತ್ತದೆ ಎಂಬುದನ್ನು "ಏತದೇವ" ಎಂಬ ವಾಕ್ಯದಿಂದ ಹೇಳಿದ್ದಾರೆ. ಈ ಶ್ರುತಿಗೆ ಅಸರ್ವಃ = ಸರ್ವವಸ್ತುಗಳಿಗಿಂತ ಭಿನ್ನನಾಗಿದ್ದರೂ, ಸರ್ವಃ ಇತಿ = ಸರ್ವರೂಪನನ್ನಾಗಿ (ಸರ್ವವಿಷಯಕಸ್ವಾತಂತ್ರ್ಯ ಇರುವುದರಿಂದ) ಭಗವಂತನನ್ನು ಹೇಳುತ್ತಿದ್ದಾರೆ ಎಂದು ಅರ್ಥ.

**वाक्यार्थमञ्जरी– सकलस्वामित्वेनेति** ।। 'यदधीना यस्य सत्ता तत्तदेवेति भण्यते' इत्युक्तेरिति भावः ।। **इदमिति** ।। भगवान् स्वयमितरोपि सन्निदं विश्वमिवोच्यते । 'पुरुष एवेदम्' इत्यादावित्यर्थः ।।

'ಸಕಲಸ್ವಾಮಿತ್ವೇನ' ಎಂದು ಇದೆ. ಇದರ ಅಭಿಪ್ರಾಯ 'ಯದಧೀನಾ ಯಸ್ಯ ಸತ್ತಾ ತತ್ತದೇವೇತಿ ಭಣ್ಯತೇ' ಎಂಬ ನ್ಯಾಯಾನುಸಾರಿಯಾಗಿ ಎಂದು ಭಾವ.

'ಇದಂ' ಎಂದರೆ 'ಭಗವಾನ್ ಸ್ವಯಮಿತರೋಪಿ ಸನ್ನಿದಂ ವಿಶ್ವಮಿವೋಚ್ಯತೇ । ಪುರುಷ ಏವೇದಂ' । ಎಂದು ಇತ್ಯಾದಿ ವಚನಗಳಲ್ಲಿ ಹೇಳಿದ ರೀತಿ ಎಂದರ್ಥ.

## ಭೇದಜ್ಞಾನವೇ ನಿಜವಾದ ವಿದ್ಯೆ

**भाष्यम् – 'विद्याऽऽत्मनि भिदाबोधः ।' (भाग.-स्क.-११) ; 'भेददृष्ट्याऽभिमानेन निस्सङ्गेनापि कर्मणा ।' (भा.स्क -३)**

'ಪರಮಾತ್ಮನಲ್ಲಿ ಜೀವಾದಿಗಳಿಂದ ಭೇದವನ್ನೇ ತಿಳಿಯಬೇಕು. ಇದೇ ನಿಜವಾದ ವಿದ್ಯೆ' ಎಂದು ಭಾಗವತವು ಹೇಳಿದೆ. 'ಜೀವ ಪರಮಾತ್ಮರ ಭೇದಜ್ಞಾನದಿಂದ, ನಿಷ್ಕಾಮವಾದ ಸೇವೆಯಿಂದ' ಪರಮಾತ್ಮನನ್ನು ಹೊಂದುತ್ತಾನೆಂದು 'ಭೇದದೃಷ್ಟ್ಯಾ' ಎಂಬ ಭಾಗವತವಾಕ್ಯವು ಹೇಳಿದೆ.

ಪ್ರತಿಪದಾರ್ಥ – ಭೇದಜ್ಞಾನವು ಮಿಥ್ಯಾಭೂತವಾದ್ದರಿಂದ ಅದಕ್ಕೆ ಅನುಸಾರಿಯಾಗಿ ಐಕ್ಯಶ್ರುತಿಯನ್ನು ಯೋಜಿಸುವುದು ತಪ್ಪಲ್ಲವೇ? ಎಂಬ ಆಶಂಕೆಯನ್ನು ಭಾಗವತದ ವಾಕ್ಯದಿಂದ ಪರಿಹರಿಸುತ್ತಿದ್ದಾರೆ.

'ಆತ್ಮನಿ = ಪರಮಾತ್ಮನಲ್ಲಿ, ಭಿದಾಬೋಧಃ = ಜೀವಾದಿಗಳ ಭೇದಜ್ಞಾನವು, ವಿದ್ಯಾ = ನಿಜವಾದ ವಿದ್ಯೆಯು. ಮತ್ತು;

ಭೇದದೃಷ್ಟ್ಯಾ = ಜೀವ ಪರಮಾತ್ಮರ ಭೇದಜ್ಞಾನದಿಂದ, ನಿಃಸಂಗೇನಾಪಿ ಕರ್ಮಣಾ = ನಿಷ್ಕಾಮವಾದ ಕರ್ಮದಿಂದಲೂ, ಅಭಿಮಾನೇನ = ಅತಿಶಯವಾದ ಭಕ್ತಿಯಿಂದಲೂ ಪರಮಾತ್ಮನನ್ನು ಪಡೆಯಬಹುದು[१].

---

(१) भाष्यदीपिका – ननु भेदज्ञानस्य मिथ्याज्ञानत्वात् कथं तदनुसारेणैक्यश्रुतयो योज्यन्त इत्याशङ्कां भागवतवाक्येन परिहरति – विद्येति ।। इदं च का विद्येत्युद्धवप्रश्नस्योत्तरत्वेन कृष्णेनोक्तं वचनमेकादशस्कन्धे । 'आत्मनि' परमात्मनि 'भिदाबोधो' जीवाद्भेदज्ञानं जीवे वा यदीश्वराद् भेदज्ञानम् । सैव विद्येत्यर्थः । न च भिदाया अबोध इति व्याख्येयम्, अज्ञानस्य विद्यात्वाभावात् । ननु भेदज्ञानस्य पुरुषार्थहेतुत्वात् कथं तस्य विद्यात्वमित्यत आह – भेदेति ।। इदं च भागवते तृतीयस्कन्धगतं वाक्यम् -

'आद्यः स्थिरचराणां यो वेदगर्भः सहर्षिभिः ।
योगेश्वरैः कुमाराद्यैः सिद्धैर्योगप्रवर्तकैः ।।'

इति पूर्ववाक्येन

'कर्तृत्वात् सगुणं ब्रह्म पुरुषं पुरुषर्षभम् ।
स सङ्गत्य पुनः काले कालेनेश्वरमूर्तिना ।।
जातेऽगुणव्यतिकरे यथापूर्वं प्रजायते ।।'

इत्युत्तरवाक्येन च सह योजनीयम् । तत्प्रकारस्तु – यः 'स्थिरचराणां' स्थावरजङ्गमानाम् 'आद्यः' हिरण्यगर्भः सः 'ऋषिभिः' मनुष्योत्तममारभ्य गरुडशेषान्तैः ज्ञानिभिर्योगसिद्धैः सनत्कुमाराद्यैः सह 'भेददृष्ट्या' जीवेश्वरादिभेदज्ञानेन 'अभिमानेन' अभितो हरेर्मानेन

**तत्वप्रकाशिका – ननु भेदज्ञानस्य मिथ्याज्ञानत्वात् कथं तदनुसारेणैक्यश्रुतयो योज्यन्ते? इत्यत आह – विद्येति ।। न च भिदाया अबोध इति व्याख्येयम्, अज्ञानस्य विद्यात्वाभावात् । ननु भेदज्ञानस्यापुरुषार्थहेतुत्वात् कथं तस्य विद्यात्वम्? इत्यत आह – भेददृष्ट्येति ।। वेदगर्भो जीवेश्वरभेदज्ञानेन परमेश्वरबहुमानेन चानन्दादिगुणपूर्णं ब्रह्म प्राप्त इति स्मृत्यर्थः ।**

ಭೇದಜ್ಞಾನವು ಮಿಥ್ಯಾಜ್ಞಾನವಾಗಿದೆ. ಅದನ್ನಿಟ್ಟುಕೊಂಡು ಅದಕ್ಕನುಸಾರಿಯಾಗಿ ಅಭೇದವನ್ನು ಹೇಳುವ ಶ್ರುತಿಯನ್ನು ಹೇಗೆ ಅರ್ಥೈಸುತ್ತೀರಿ? ಎಂದರೆ ''ವಿದ್ಯಾ'' ಎಂಬಿತ್ಯಾದಿಯಾಗಿ ಉತ್ತರಿಸುತ್ತಾರೆ. ಭೇದಜ್ಞಾನವನ್ನೇ ವಿದ್ಯೆ ಎಂದು 'ಭಿದಾ ಬೋಧಃ' ಎನ್ನುವುದಕ್ಕೆ ಏಕೆ ಅರ್ಥ ಹೇಳುತ್ತೀರಿ? 'ಭಿದಾಯಾಃ ಅಬೋಧಃ' ಎಂಬ ವ್ಯುತ್ಪತ್ತಿಯನ್ನು ಸ್ವೀಕರಿಸಿ ಭೇದಜ್ಞಾನವನ್ನು ತಿಳಿಯದಿರುವುದೇ (ಅಜ್ಞಾನ) ವಿದ್ಯೆ ಎಂದು ಹೇಳಬಹುದಲ್ಲವೇ? ಎಂದರೆ ಅಜ್ಞಾನವನ್ನು ವಿದ್ಯೆ ಎಂದು ಯಾರೂ ವ್ಯವಹರಿಸುವುದಿಲ್ಲ. ಭೇದಜ್ಞಾನವು ಪುರುಷಾರ್ಥಕ್ಕೆ (ಮೋಕ್ಷಕ್ಕೆ) ಕಾರಣವಲ್ಲವಾದ್ದರಿಂದ ಅದನ್ನು ವಿದ್ಯೆ ಎಂದು ಹೇಗೆ ಕರೆಯುತ್ತೀರಿ? ಎಂದರೆ ''ಭೇದದೃಷ್ಟ್ಯಾ'' ಎನ್ನುವುದರಿಂದ ಉತ್ತರಿಸುತ್ತಾರೆ.

---

परमेश्वरे बहुमानेन आग्रहेण च 'निःसङ्गेन कर्मणाऽपि' फलाभिसन्धिरहितनिवृत्तकर्मणा च मुक्तः सन् 'कर्तृत्वात्' जगत्कर्तृत्वान्निमित्तात् 'सगुणं' सार्वज्ञादिगुणसम्पूर्णं 'पुरुषर्षभं' क्षराक्षरेभ्यो वरं 'पुरुषं' परमपुरुषाख्यं ब्रह्म 'काले' प्रलयकाले 'सङ्गत्य' प्रविश्य पुनः 'कालेन' कालाख्येन 'ईश्वरमूर्तिना' मूर्त्या 'काले' सृष्टिकाले 'जाते' उत्पन्ने सति 'अगुणव्यतिकरे' सत्त्वादिगुणविक्रियाहीने विष्णुलोके 'यथापूर्वं' पूर्ववत् प्रजायते सर्वमुक्ताधिपतिर्जायते इति सुधायामुक्तः ।

कर्मनिर्णयटीकायां तु - न केवलं सगुणं, किन्तु, 'ब्रह्म' पुर्णं 'पुरुषमिति' भगवतो नामकीर्तनम् । पुरुषत्वोक्त्याऽस्मदादिसालक्षण्यं प्राप्तं, तत्परिहाराय पुरुषर्षभमिति ।। तदुपपादनाय कर्तृत्वात् सगुणं ब्रह्मेति विशेषार्थ उक्तः । तत्त्वप्रदीपे तु - अभिमानेनेति पदम् अभितो मानेन विशेषज्ञानेनेति व्याख्याय, 'गुणव्यतिकरे' इति पदं छित्वा 'सः' ब्रह्मादिजीवसङ्घः प्रलये ज्ञानैश्वर्याद्यनन्तगुणं ब्रह्म 'सङ्गत्य' प्राप्य 'पुनः काले' सृष्टिकाले 'कालेन' ज्ञानात्मना 'ईश्वरमूर्तिना' विष्णुरूपेण 'गुणव्यतिकरे' गुणानां सत्त्वादीनां व्यतिकरे वैषम्ये जाते सति यथापूर्वं ज्ञानादिगुणतारतम्यं परस्परभेदं चाविहाय तद्विशिष्ट एव 'प्रजायते' प्रकर्षेण मुक्तावभिव्यज्यते । न तु तदभिन्नो भवतीति व्याख्यातम् । अयं पदच्छेदष्टीकाकृतोऽपि सम्मतः । तत्पक्षे 'गुणव्यतिकरे काले' सृष्टिकाले इत्यर्थः । उभयत्रापि यथापूर्वमित्यस्य संसार इवेत्यर्थः । पूर्वकल्पे इवेति वा ।

'ಚತುರ್ಮುಖಬ್ರಹ್ಮನು ಜೀವೇಶ್ವರಭೇದಜ್ಞಾನದಿಂದ ಮತ್ತು ಭಗವಂತನಲ್ಲಿ ಮಹತ್ವಬುದ್ಧಿಯಿಂದ ಆನಂದ ಮೊದಲಾದ ಗುಣಗಳಿಂದ ತುಂಬಿದ ಭಗವಂತನನ್ನು ಹೊಂದಿದನು' ಎಂದು ಪುರಾಣವಾಕ್ಯದ ಅರ್ಥ.

भावदीपः – **विद्येति** ।। एकादशस्कन्धे 'का विद्या' इत्युद्धवप्रश्नं प्रत्युत्तरमिदम् । **अपुरुषार्थेति** ।। 'पुरुषार्थाहेतुत्वात् प्रति उतानर्थहेतुत्वाच्च' इत्यर्थः । तत्राद्यं 'भेददृष्ट्या' इति तृतीयस्कन्धस्थस्मृत्या, द्वितीयं तु श्रुतौ 'वीतशोकः' इत्युक्त्या निरसिष्यते इति ज्ञेयम् ।

**वेदगर्भ इति** ।। 'आद्यः स्थिरचरणां यो वेदगर्भः सहर्षिभिः' इति पूर्ववाक्योक्तेरिति भावः । **परमेश्वरबहुमानेन चेति** ।। तत्वप्रदीपे तु अभिमानेन पूर्णज्ञानेनेति तात्पर्यदिशा अभितो मानेन विशेषज्ञानेनेत्यर्थ उक्तः ।

**कर्तृत्वात् सगुणं ब्रह्म पुरुषं पुरुषर्षभम् ।**
**स सङ्गत्य पुनःकाले कालेनेश्वरमूर्तिना ।**
**जाते गुणव्यतिकरे यथापूर्वं प्रजायते ।।**

इत्युत्तरवाक्ये भेदज्ञानस्य ब्रह्मप्राप्तिफलमुक्तमिति मत्वा तेनान्वयमाह – **आनन्दादीति** ।। एतेन 'सगुणम्' इत्यनेन गुणपूर्णत्वमुक्तं, 'ब्रह्म' इति तु विशेष्यमिति सूचितम् । **प्राप्त इति** ।। यद्यपि कर्मनिर्णयटीकायां न केवलं सगुणं किन्तु ब्रह्म पूर्णं पुरुषमिति भगवतो नामसङ्कीर्तनम् । पुरुषत्वोक्त्या प्राप्तास्मदादिसाधारण्यव्युदासाय 'पुरुषर्षभम्' इति । तदुपपादनाय 'कर्तृत्वात् सगुणं ब्रह्म' इति । सङ्गत्येति द्वितीयान्वय इत्युक्त्या सुधातत्वप्रदीपयोरुक्त्यनुरोधेन च स प्रलये ब्रह्म सङ्गत्य पुनः सृष्टिकाले कालात्मना ज्ञानात्मनेश्वरमूर्तिना गुणव्यतिकरे जाते यथापूर्वं ज्ञानादिगुणतारतम्यविशिष्टः प्रजायते प्रकृष्टो जायते, मुक्तः सन् स्वरूपानन्दाद्यात्मनाऽभिव्यज्यत इत्येवोच्यते न तु प्राप्त इति । तथापि फलितार्थोक्तिरियं प्रकृतोपयोगित्वेन कृतेत्यदोषः । क्वचित् 'प्राप्त्या' इत्येव पाठः ।

"ವಿದ್ಯೇತಿ" ಭಾಗವತ ಏಕಾದಶಸ್ಕಂಧದಲ್ಲಿ 'ಕಾ ವಿದ್ಯಾ' ಎಂಬ ಉದ್ಧವನ ಪ್ರಶ್ನೆಗೆ ಉತ್ತರರೂಪವಾಗಿ ಹೊರಟಿದೆ. "ಅಪುರುಷಾರ್ಥ" ಇತ್ಯಾದಿ ವಾಕ್ಯದಿಂದ ಪುರುಷಾರ್ಥಕ್ಕೆ ಕಾರಣವಾಗಿಲ್ಲ ಮಾತ್ರವಲ್ಲ

ಅನರ್ಥಕ್ಕೂ ಕಾರಣವಾಗಿದೆ ಎಂಬ ಅರ್ಥವನ್ನು ಗ್ರಹಿಸಬೇಕು. ಇವುಗಳಲ್ಲಿ ಪುರುಷಾರ್ಥಕ್ಕೆ ಕಾರಣವಾಗಿಲ್ಲ ಎಂಬ ಮೊದಲನೆಯ ಅಂಶವನ್ನು 'ಭೇದದೃಷ್ಟ್ಯಾ' ಎಂಬ ತೃತೀಯಸ್ಕಂಧದ ವಾಕ್ಯದಿಂದ ಮತ್ತು ಅನರ್ಥಕ್ಕೆ ಹೇತುವಾಗಿದೆ ಎಂಬ ಎರಡನೆಯ ಅಂಶವನ್ನು ಶ್ರುತಿಯಲ್ಲಿ 'ವೀತಶೋಕಃ' ಎಂಬ ಭಾಗದಿಂದ ನಿರಾಸ ಮಾಡುತ್ತಿದ್ದಾರೆ ಎಂದು ತಿಳಿಯಬೇಕು.

'ಆದ್ಯಃ ಸ್ಥಿರಚರಾಣಾಂ ಯೋ ವೇದಗರ್ಭಃ ಸಹರ್ಷಿಭಿಃ' ಎಂಬ ಹಿಂದಿನ ವಾಕ್ಯಕ್ಕೆ ಅನುಸಾರಿಯಾಗಿ ''ವೇದಗರ್ಭಃ ಬ್ರಹ್ಮಪ್ರಾಪ್ತಃ'' ಎಂಬುದಾಗಿ ಹೇಳಿದ್ದಾರೆ. ''ಪರಮೇಶ್ವರಬಹುಮಾನೇನ ಚ'' ಎಂಬ ವಾಕ್ಯಭಾಗವು 'ಅಭಿಮಾನೇನ' ಎಂಬ ಶಬ್ದಕ್ಕೆ ಅನುವಾದರೂಪವಾಗಿದೆ. ತತ್ವಪ್ರದೀಪದಲ್ಲಿ ಅಭಿಮಾನೇನ = ಪೂರ್ಣಜ್ಞಾನೇನ ಎಂಬ ತಾತ್ಪರ್ಯವಾಕ್ಯಕ್ಕೆ ಅನುಸಾರಿಯಾಗಿ ಅಭಿತಃ ಮಾನೇನ ಅಂದರೆ ವಿಶೇಷಜ್ಞಾನದಿಂದ ಎಂಬರ್ಥವನ್ನು ಹೇಳಿದ್ದಾರೆ.

'ಕರ್ತೃತ್ವಾತ್ ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭಮ್ ।
ಸ ಸಂಗತ್ಯ ಪುನಃ ಕಾಲೇ ಕಾಲೇನೇಶ್ವರಮೂರ್ತಿನಾ ।
ಜಾತೇ ಗುಣವ್ಯತಿಕರೇ ಯಥಾಪೂರ್ವಂ ಪ್ರಜಾಯತೇ ॥'

ಎಂಬ ಉತ್ತರವಾಕ್ಯದಲ್ಲಿ ಭೇದಜ್ಞಾನಕ್ಕೆ ಬ್ರಹ್ಮಪ್ರಾಪ್ತಿಯು ಫಲ ಎಂದು ತಿಳಿಸಿದ್ದಾರೆ. ಇದನ್ನು ಅಭಿಪ್ರಾಯದಲ್ಲಿ ಇಟ್ಟುಕೊಂಡು ''ಆನಂದಾದಿ'' ಇತ್ಯಾದಿಯಾಗಿ ಅನ್ವಯವನ್ನು ಹೇಳಿದ್ದಾರೆ. ಹೀಗೆ ವ್ಯಾಖ್ಯಾನ ಮಾಡಿದ್ದರಿಂದ 'ಸಗುಣಂ' ಎಂಬ ಪದದಿಂದ ಗುಣಪೂರ್ಣತ್ವವನ್ನು ಹೇಳಿದ್ದಾರೆ. ಬ್ರಹ್ಮ ಎಂಬ ಪದವು ವಿಶೇಷ್ಯವಾಗಿದೆ ಎಂದು ಸೂಚಿತವಾಗುತ್ತದೆ.

ಈ ಭಾಗದಲ್ಲಿ ಕರ್ಮನಿರ್ಣಯ ಟೀಕೆಯಲ್ಲಿ 'ನ ಕೇವಲಂ ಸಗುಣಂ ಕಿಂತು ಬ್ರಹ್ಮ ಪೂರ್ಣಂ ಪುರುಷಮ್' (ಕೇವಲ ಸಗುಣ ಮಾತ್ರವಲ್ಲ; ಬ್ರಹ್ಮ ಅಂದರೆ ಪೂರ್ಣವಾದ ಪುರುಷನನ್ನು) ಎಂದು ವ್ಯಾಖ್ಯಾನ ಮಾಡಿ, ಪುರುಷಶಬ್ದದಿಂದ ಭಗವಂತನ ನಾಮಸಂಕೀರ್ತನೆ ಮಾಡಿದ್ದಾರೆ. ಪುರುಷತ್ವವನ್ನು ಹೇಳಿರುವುದರಿಂದ ಸಾಮಾನ್ಯಮನುಷ್ಯರ ಪ್ರಾಪ್ತಿಯೂ ಬರುವುದರಿಂದ ಅದನ್ನು ನಿರಾಸಮಾಡುವುದಕ್ಕಾಗಿ 'ಪುರುಷರ್ಷಭಮ್' ಎಂದು ಹೇಳಿದ್ದಾರೆ. ಹೀಗೆ ಪುರುಷಶ್ರೇಷ್ಠತ್ವವನ್ನು ಉಪಪಾದನೆ ಮಾಡುವುದಕ್ಕಾಗಿ 'ಕರ್ತೃತ್ವಾತ್ ಸಗುಣಂ ಬ್ರಹ್ಮ' ಈ ಪದಗಳನ್ನು ಬಳಸಿದ್ದಾರೆ.

'ಸಂಗತ್ಯ' ಎಂಬ ಪದಕ್ಕೆ ದ್ವಿತೀಯಾನ್ವಯಃ ಎಂಬ ಉಕ್ತಿ ಇರುವುದರಿಂದ ಸುಧಾ ಮತ್ತು ತತ್ವಪ್ರದೀಪಗಳ ಉಕ್ತಿಗೆ ಅನುಸಾರವಾಗಿ ಸಃ ಅಂದರೆ ವೇದಗರ್ಭನು ಪ್ರಳಯದಲ್ಲಿ ಬ್ರಹ್ಮನನ್ನು ಹೊಂದಿ ಮತ್ತೆ ಸೃಷ್ಟಿಕಾಲದಲ್ಲಿ ಕಾಲಾತ್ಮನಾದ ಅಂದರೆ ಜ್ಞಾನಾತ್ಮನಾದ ಈಶ್ವರಮೂರ್ತಿಯಿಂದ, ಗುಣಗಳ ಸೃಷ್ಟಿಯಾದಾಗ ಹಿಂದಿನಂತೆ ಜ್ಞಾನಾದಿಗುಣತಾರತಮ್ಯದಿಂದ ಕೂಡಿಕೊಂಡು, 'ಪ್ರಜಾಯತೇ' ಅಂದರೆ ಪ್ರಕೃಷ್ಟನಾಗುತ್ತಾನೆ, ಅಂದರೆ ಮುಕ್ತನಾಗಿ ಸ್ವರೂಪಾನಂದವನ್ನು ಹೊಂದುವವನಾಗಿ ಅಭಿವ್ಯಕ್ತನಾಗುತ್ತಾನೆ ಎಂದೇ ಹೇಳಲಾಗುತ್ತದೆ ಹೊರತು 'ಪ್ರಾಪ್ತ' ಎಂಬುದಾಗಿ ಅಲ್ಲ. ಹಾಗಿದ್ದರೂ ಇಲ್ಲಿ ಪ್ರಾಪ್ತಃ ಎಂದು ಹೇಳಿರುವುದು ಪ್ರಕೃತಕ್ಕೆ ಅನುಸಾರಿಯಾಗಿ ಫಲಿತಾರ್ಥರೂಪವಾಗಿದೆ. ಆದ್ದರಿಂದ ಯಾವುದೇ ದೋಷವಿಲ್ಲ ಎಂಬ ಅಂಶವನ್ನು ''ಪ್ರಾಪ್ತಃ'' ಎಂಬ ಭಾಗದಲ್ಲಿ ತಿಳಿದುಕೊಳ್ಳಬೇಕು.

ಪರಿಪೂರ್ಣಚಂದ್ರಿಕಾ

ಕೆಲವು ಕಡೆ 'ಪ್ರಾಪ್ಯಾ' ಎಂಬುದಾಗಿಯೇ ಪಾಠಾಂತರವಿದೆ.

**वाक्यार्थमञ्जरी– वेदगर्भइति** ।। आद्यः स्थिरचराणां यो वेदगर्भःसहर्षिभिरिति पूर्ववाक्यादितिभावः ।। **आनंदादीति** ।।

कर्तृत्वात् सगुणं ब्रह्म पुरुषं पुरषर्षभ ।
स संगत्यपुनःकालेकालेनेश्वरमूर्तिना ।
जाते गुणव्यतिकरे यथापूर्वंप्रजायत ।।
इत्युत्तरवाक्यादितिभावः ।।

ಆಚಾರ್ಯರು ಭಾಷ್ಯದಲ್ಲಿ ಉದಾಹರಿಸಿದ ಭಾಗವತವಚನದ 'ಆದ್ಯಃ ಸ್ಥಿರಚರಾಣಾಂ ಯೋ ವೇದಗರ್ಭಃ ಸಹರ್ಷಿಭಿಃ' ಎಂಬ ಹಿಂದಿನ ವಾಕ್ಯದಿಂದ ಭಾಗವತದ ಶ್ಲೋಕಾರ್ಥವನ್ನು ಹೇಳುತ್ತಿದ್ದಾರೆ.

'ಆನಂದಾದಿ' ಎಂದು ಇದೆ. ಇದರ ಉತ್ತರವಾಕ್ಯ ಹೀಗಿದೆ -

'ಕರ್ತೃತ್ವಾತ್ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭ ।
ಸ ಸಂಗತ್ಯ ಪುನಃ ಕಾಲೇಕಾಲೇನೇಶ್ವರಮೂರ್ತಿನಾ ।
ಜಾತೇ ಗುಣವ್ಯತಿಕರೇ ಯಥಾಪೂರ್ವಂ ಪ್ರಜಾಯತೇ ।।
ಎಂದು ಭಾಗವತದ ಉತ್ತರವಾಕ್ಯದಿಂದ ಎಂದು ಭಾವ.

• • • • •

## ಜೀವಭೇದಜ್ಞಾನದಿಂದ ಮುಕ್ತಿ

**भाष्यम्– 'जुष्टं यदा पश्यत्यन्यमीशमस्य महिमानमिति वीतशोकः'**

**(मु. ३-१-२.)**

**ಪರಮಾತ್ಮನನ್ನು ಯಾವಾಗ ಜೀವನಿಂದ ಭಿನ್ನನಾಗಿ ಮತ್ತು ಮಹಾಮಹಿಮೆಯುಳ್ಳವನನ್ನಾಗಿ ತಿಳಿಯುತ್ತಾನೋ ಅಂತಹ ಪರಮಾತ್ಮನನ್ನು ಯಾವಾಗ ನೋಡುತ್ತಾನೋ ಆವಾಗ ದುಃಖರಹಿತನಾಗುತ್ತಾನೆ' ಎಂದು ಮುಂಡಕಶ್ರುತಿಯು ಹೇಳುತ್ತಿದೆ.**

ಪ್ರತಿಪದಾರ್ಥ – ಭೇದವಿಷಯದಲ್ಲಿ ಅಥರ್ವಣವಾಕ್ಯವನ್ನು ಪ್ರಮಾಣವನ್ನಾಗಿ ಹೇಳುತ್ತಿದ್ದಾರೆ[१].

---

(१) भाष्यदीपिका – अत्रैवार्थे अथर्वणवाक्यं प्रमाणयति - जुष्टमिति ।। जुष्टं सर्वसेव्यम् ईशं स्वतन्त्रम् । अत एवान्यं जीवाद् भिन्नं विष्णुम् इति 'तदेतत्सत्यम्' (मु. २-१-१) इत्यादिना प्रागुक्तप्रकारेण अस्य महिमानं च यदा पश्यति । पश्यो जीवः तदा वीतशोको मुक्तो भवतीत्यर्थः । तत्त्वप्रदीपे तु – जुष्टं देवैरस्य जीवस्य ईशम् अन्यं यदा पश्यति महिमानं महिमगुणात्मकं तदा तदैव वीतशोको भवति न दुःखलेशमपि स्पृशति जीवः ।

'ಯದಾ = ಯಾವಾಗ, ಈಶಂ = ಪರಮಾತ್ಮನನ್ನು, ಅನ್ಯಂ = ಜೀವನಿಂದ ಭಿನ್ನನನ್ನಾಗಿ, ಮಹಿಮಾನಂ = ಮಹಾಮಹಿಮೆಯುಳ್ಳವನನ್ನಾಗಿ, ಅಸ್ಯ = ಪರಮಾತ್ಮನ ವೈಶಿಷ್ಟ್ಯವನ್ನು, ಪಶ್ಯತಿ = ನೋಡುತ್ತಾನೋ, ತದಾ = ಆವಾಗ, ವೀತಶೋಕಃ = ದುಃಖರಹಿತನಾಗುತ್ತಾನೆ.

## 'ಯದಾ ಪಶ್ಯತಿ' ಶ್ರುತ್ಯರ್ಥ

**तत्वप्रकाशिका – सर्वसेव्यमीशं जीवादन्यं 'तदेतत्सत्यम्' इत्यादिश्रुत्या प्रागुक्तप्रकारेणास्य महिमानं च यदा पश्यति तदा मुक्तो भवतीति श्रुत्यर्थः ।**

ಎಲ್ಲರಿಂದಲೂ ಪೂಜಿಸಲ್ಪಡುವಂತಹ ಜೀವನಿಗಿಂತಲೂ ಭಿನ್ನವಾದಂತಹ ಮತ್ತು 'ತದೇತತ್ ಸತ್ಯಂ' ಇವೇ ಮೊದಲಾದ ಶ್ರುತಿಗಳಿಂದ ಹಿಂದೆ ಹೇಳಿದಂತೆ ಭಗವಂತನ ಮಹಿಮೆಯನ್ನು ಯಾವಾಗ ತಿಳಿಯುತ್ತಾನೋ ಆಗ ಮುಕ್ತನಾಗುತ್ತಾನೆ' ಎಂದು 'ಯದಾ ಪಶ್ಯತಿ' ಎಂಬ ಶ್ರುತಿಯ ಅರ್ಥ.

भावदीपः – **सर्वसेव्यमिति** ।। 'जुषी प्रीतिसेवनयोः' इति धातोर्जुष्टमिति रूपात् । **जीवादन्यमिति** ।। 'पश्यति' इति प्रकृतो जीवः पदिन्यायेन प्रतियोगित्वेनान्वेति । तया मुह्यति जीवस्तमन्यं ज्ञात्वा विमुच्यते । जीवादन्यः स्वतन्त्रोऽयम्...' इत्याथर्वणभाष्योक्तेरिति भावः ।

**तदेतदिति** ।। 'तदेतत् सत्यं मन्त्रेषु कर्माणि कवयो यान्यपश्यन्' इत्यादिना अखिलकर्माराध्यत्वादेः तथा 'तदेतत् सत्यं यथा सुदीप्तात् पावकाद् विष्फुलिङ्गाः सहस्रशः प्रभवन्ते सरूपाः । तथाऽक्षराद् विविधाः सोम्य भावाः' इत्यादिना सृष्ट्यादेर्महिम्नः पूर्वमुक्तेः इतिशब्दः पूर्वोक्तप्रकारवाचीति भावः । तेन भेदकज्ञानस्यापि पुरुषार्थहेतुत्वं प्राप्तमिति 'ते ये शतम्' इत्यादिनोक्तभेदकज्ञानस्यापि विद्यात्वं सूचितम् । वीतशोको मुक्त इत्यर्थः ।

---

न तु महिमगुणविहीनम् अनन्यमनीशमसेवितं पश्यन् वीतशोको भवतीति व्याख्यातम् । यद्यपीयं श्रुतिः 'विशेषणभेदव्यपदेशाभ्याम्' (ब्र.सू. १-२-२२.) इत्यत्र अयमन्यो मार्ग इत्युक्ते प्रसिद्धमार्गादन्यत्वबोधवद् अन्यमीशमित्युक्ते ईशशब्दितस्य ब्रह्मणः प्रसिद्धेशाद् रुद्राद् अन्यत्वप्रतीतेर्ब्रह्मणो रुद्रादन्यत्वे प्रमाणत्वेनोक्ता । न तु ब्रह्मणो जीवादन्यत्वे, नापि ईशत्वमन्यत्वे हेतूकृतम् । तथाऽपि तद् व्याख्यानान्तरमभिप्रेत्येति न तद्विरोधः । अत एव द्युभ्वादिनये 'भेदव्यपदेशात्' (ब्र.सू. १-३-५.) इत्यत्र जीवेशभेदेऽपीयं प्रमाणतयोदाहृता ।

''ಸರ್ವಸೇವ್ಯಂ'' ಎಂಬ ವಾಕ್ಯಭಾಗವು ಜುಷ್ಟಂ ಎಂಬುದರ ವ್ಯಾಖ್ಯಾನರೂಪವಾಗಿದ್ದು, ಈ ಪದವು 'ಜುಷೀ ಪ್ರೀತಿಸೇವನಯೋಃ' ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ, ''ಸರ್ವಸೇವ್ಯಮ್'' ಎಂದು ಅರ್ಥ ಬರೆದಿದ್ದಾರೆ.

'ಪಶ್ಯತಿ' ಎಂಬುದಾಗಿ ಶ್ರುತಿಯಲ್ಲಿ ಪ್ರಕೃತನಾದ ಜೀವನು ಪ್ರತಿಯೋಗಿತ್ವರೂಪದಿಂದ ಅನ್ವಯವನ್ನು ಪಡೆಯುತ್ತಾನೆ. ಈ ಅಂಶವನ್ನು 'ತಯಾ ಮುಹ್ಯತಿ ಜೀವಸ್ತಮನ್ಯಂ ಜ್ಞಾತ್ವಾ ವಿಮುಚ್ಯತೇ । ಜೀವಾದನ್ಯಃ ಸ್ವತಂತ್ರೋಽಯಮ್'' (ತಡೆಯಲ್ಲಿದ ಭಗವಂತನ ಇಚ್ಛಾಶಕ್ತಿಯಿಂದ ಜೀವನು ಮೋಹವನ್ನು ಪಡೆಯುತ್ತಾನೆ. ಅಂತಹ ಜೀವನು ತನಗಿಂತ ಅನ್ಯನಾದ ಭಗವಂತನನ್ನು ಸರಿಯಾಗಿ ತಿಳಿದು ಈ ಬಂಧನದಿಂದ ಮೋಕ್ಷವನ್ನು ಪಡೆಯಬಲ್ಲ. ಸ್ವತಂತ್ರನಾದ ಭಗವಂತನು ಜೀವನಿಗಿಂತ ಅನ್ಯನಾಗಿದ್ದಾನೆ) ಎಂಬ ಆಥರ್ವಣಭಾಷ್ಯದ ವಾಕ್ಯದಿಂದ ಇದು ಸ್ಪಷ್ಟವಾಗುತ್ತದೆ.

'ತದೇತತ್ ಸತ್ಯಂ ಮಂತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯನ್' ಇತ್ಯಾದಿ ವಾಕ್ಯಗಳಿಂದ ಅಖಿಲಕರ್ಮಗಳಿಂದ ಆರಾಧ್ಯನಾದವನು ಭಗವಂತ; ಹಾಗೆಯೇ 'ತದೇತತ್ ಸತ್ಯಂ ಯಥಾ ಸುದೀಪ್ತಾತ್ ಪಾವಕಾದ್‌ವಿಷ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ । ತಥಾಽಕ್ಷರಾದ್ ವಿವಿಧಾಃ ಸೋಮ್ಯ ಭಾವಾಃ' ಇತ್ಯಾದಿ ವಾಕ್ಯಗಳಿಂದ ಸೃಷ್ಟ್ಯಾದಿ ಮಹಿಮೆಗಳನ್ನು ಈ ಹಿಂದಿನ ಭಾಗಗಳಲ್ಲಿ ತಿಳಿಸಿರುವುದರಿಂದ ಈ ಮಂತ್ರದಲ್ಲಿ ಹೇಳಿದ 'ಇತಿ'ಶಬ್ದವು ಹಿಂದೆ ಹೇಳಿದ ಸೃಷ್ಟ್ಯಾದಿ ಮಹಿಮೆಗಳ ಪ್ರಕಾರವನ್ನು ತಿಳಿಸುತ್ತದೆ ಎಂಬ ಅಭಿಪ್ರಾಯವನ್ನು ಗ್ರಹಿಸಬೇಕು.

ಇದರಿಂದಾಗಿ ಭೇದಕಜ್ಞಾನವೂ ಕೂಡ ಪುರುಷಾರ್ಥಹೇತುವಾಗಿದೆ ಎಂದು ತಿಳಿದುಬರುವುದರಿಂದ 'ತೇ ಯೇ ಶತಮ್' ಇತ್ಯಾದಿಗಳಿಂದ ಹೇಳಲ್ಪಟ್ಟ ಭೇದಕಜ್ಞಾನವೂ ಕೂಡ ವಿದ್ಯೆಯೇ ಆಗಿದೆ ಎಂದು ಸೂಚಿತವಾಗುತ್ತದೆ. 'ವೀತಶೋಕಃ' ಎಂಬ ಶಬ್ದಕ್ಕೆ 'ಮುಕ್ತ' ಎಂಬುದಾಗಿ ಅರ್ಥ.

**वाक्यार्थमञ्जरी– तदेतदिति** ।। 'तदेतत् सत्यं । मंत्रेषु कर्माणि कवयो यान्यपश्यन्' इत्यादिनोक्ताखिलकर्माराध्यत्वप्रकारेणेत्यर्थः ।।

'ತದೇತದ್' ಎಂದು ಇದೆ ಅಂದರೆ 'ತದೇತತ್ಸತ್ಯಂ' ಎಂಬ ಮಂತ್ರದಲ್ಲಿ 'ಕರ್ಮಾಣಿ ಕವಯೋ ಯಾನ್ಯಪಶ್ಯನ್' ಇತ್ಯಾದಿಯಾಗಿ ಅಖಿಲ ಕರ್ಮಗಳಿಗೂ ಆರಾಧ್ಯತ್ವ ಪ್ರಕಾರವಾಗಿ ಹೇಳಿದ ರೀತಿಯಾಗಿ ತಿಳಿಯಬೇಕೆಂದು ಅರ್ಥ.

• • • • •

## ಐಕ್ಯಶ್ರುತಿಗಳಿಗೆ ಎರಡನೇ ವ್ಯಾಖ್ಯಾನ

**भाष्यम् – 'असर्वः सर्व इवाऽत्मैव सन्ननात्मेव प्रत्यङ् पराङिवैक ईयते बहुधेयते स पुरुषः स ईश्वरः स ब्रह्म'**

ಪರಮಾತ್ಮನು ಸರ್ವಸ್ವರೂಪನಾಗದಿದ್ದರೂ ಸರ್ವಸ್ವರೂಪನೆಂದು, ಅಂತರ್ಯಾಮಿಯಾಗಿದ್ದರೂ ಅಂತರ್ಯಾಮಿ ಅಲ್ಲವೆಂದು, ದೇಹದ ಒಳಗಿದ್ದರೂ ಹೊರಗಿದ್ದಾನೆಂದು

ಹೇಗೆ ತಿಳಿಯುತ್ತಾನೋ ಅದರಂತೆ ಒಬ್ಬನೇ ಆಗಿದ್ದರೂ ಅನೇಕನೆಂದು ತಿಳಿಯಲ್ಪಡುತ್ತಾನೆ. ಅವನೇ ನಿಜವಾದ ಪುರುಷನು. ಸರ್ವಸಮರ್ಥನು ಮತ್ತು ಗುಣಪೂರ್ಣನಾಗಿದ್ದಾನೆ.

ಪ್ರತಿಪದಾರ್ಥ– ಅದ್ವೈತವಾಕ್ಯಗಳಿಗೆ ಸ್ವಾಮಿತ್ವವೆಂಬರ್ಥವನ್ನು ಅಂಗೀಕರಿಸಿ ವ್ಯಾಖ್ಯಾನಿಸಿದ್ದಾಯಿತು. ಪ್ರಕೃತ ಅಂತರ್ಯಾಮಿತ್ವವಿವಕ್ಷೆಯಿಂದ ಅವುಗಳನ್ನು ವ್ಯಾಖ್ಯಾನಿಸುತ್ತಿದ್ದಾರೆ(१).

---

(१) भाष्यदीपिका – एवं स्वामित्वार्थतया पराभिमताद्वैतश्रुतीर्व्याख्याय वाक्यसमन्वयाश्रयणेनान्तर्यामितयाऽपि ताः श्रुतिस्मृतिभ्यां व्याचष्टे – असर्व इति ।। यद्यपि 'असर्वः' इति वाक्यम् आत्मशब्दस्य स्वामित्वार्थत्वमुपेत्य स्वामित्वेन निमित्तेनैक्यश्रुतयः प्रवृत्ता इत्यत्र प्रमाणतयोदाहृतम् । तथाऽपि स्वामित्वेनेवान्तर्यामितयाऽप्यैक्यश्रुतयः प्रवृत्ता इत्युभयत्राप्यस्य प्रमाणत्वसम्भवादुभयत्रापि प्रमाणतयोदाहरणं युक्तम् । तत्त्वप्रदीपकृतामपि स्वामित्वेनेवान्तर्यामितयाऽप्यैक्यश्रुतयः प्रवृत्ता इत्युभयत्रापि 'असर्वः' इति श्रुतिः प्रमाणमित्यभिप्रायः ।

न चैवं 'तत्तदन्तर्यामित्वेनापि तत्तच्छब्दवाच्यत्वं विष्णोरस्तीत्याह – सर्वान्तर्यामिकः' इति तत्त्वप्रदीपविरोधः; अत्र पदसमन्वयाभिप्रायप्रतीतेरिति वाच्यम् । अन्तर्यामित्वेनापीत्युक्त्या न केवलं 'नामानि' इति श्रुतिबलात् तत्तच्छब्दप्रवृत्तिनिमित्तत्वेन तत्तच्छब्दवाच्यत्वं विष्णोः, अपि तु अन्तर्यामित्वेनापीत्येतावन्मात्रप्रतीतेरत्र पदसमन्वये तात्पर्यानवगमात् । महावाक्यगतस्यैतदादिशब्दस्यैकैकस्य 'सर्वान्तर्यामिकः' इति स्मृतिबलाद् अन्तर्यामित्वनिमित्तेन विष्णुवाचित्वेऽपि पदान्तराणामन्यपरत्वेन वाक्यसमन्वयस्यैव वक्तव्यत्वात् । यदा, नामानि, इति श्रुतिबलात् क्रियाकारकादिसर्वार्थवाचिसर्वपदस्य विष्णुवाचित्वाभ्युपगमः तदैव पदसमन्वयः । न त्वेकैकस्य विष्णुवाचित्व इति न विरोधः ।

तथा चान्तर्यामित्वनिमित्तेन तत्त्वमस्यादिवाक्यगतत्वमहमादिपदानां विष्णुवाचित्वे त्वं त्वदन्तर्यामी तद् ब्रह्म । अहं मदन्तर्यामी ब्रह्मेति वाक्यान्वयो द्रष्टव्यः । न चैवम् असि अस्मि, इति क्रियापदान्वयायोगः । जीवविशिष्टान्तर्यामिवाचकस्य त्वमादिशब्दस्य दग्धृशब्दस्यायसीवान्तर्यामिणि मुख्यवृत्तिः । जीवे त्वमुख्यवृत्तिरित्याश्रयणेनामुख्यार्थविवक्षयाऽसि अस्मीत्यादिपदप्रयोगोपपत्तेः। यद्यपि निमित्तकथनप्रकरणे 'विद्याऽत्मनि', 'भेददृष्ट्या', 'जुष्टं यदा' इति वाक्यत्रयस्यान्वयाभावः । तथाऽपि स्वामित्वनिमित्तेनैक्यव्यपदेश इत्यत्र श्रुतिस्मृत्योरुपन्यासे सति तत्र प्राप्तशङ्कापरिहारस्याऽवश्यकत्वेनावसरसङ्गत्या तद्वाक्यत्रयप्रवृत्तेः । 'इत्यादेः' इत्यस्यात्राऽकर्षणेन 'न विरोधः' इत्यस्यानुकर्षणेन चान्वयो द्रष्टव्यः ।

ಅಸರ್ವಃ = ಸಮಸ್ತಜಗತ್ತಿನ ಸ್ವರೂಪನಾಗದಿದ್ದರೂ, ಸರ್ವ ಇವ = ಸಮಸ್ತಜಗತ್ತಿನ ಸ್ವರೂಪದಂತೆ, ಆತ್ಮಾ ಏವ ಸನ್ = ಸಕಲ ಜೀವರಿಗೆ ಅಂತರ್ಯಾಮಿಯಾಗಿ ನಿಯಾಮಕನಾಗಿದ್ದರೂ, ಅನಾತ್ಮಾ ಇವ = ಆಯಾ ಜೀವರಂತೆ, ಪ್ರತ್ಯಙ್ = ದೇಹದ ಒಳಗಿದ್ದರೂ, ಪರಾಙ್ ಇವ= ಹೊರಗಿರುವವನಂತೆ, ಏಕಃ ಈಯತೇ = ಒಬ್ಬನೇ ಎನ್ನಿಸಿಕೊಳ್ಳುತ್ತಾನೆ. ಬಹುಧಾ ಈಯತೇ = ಬಹುರೂಪವನ್ನಿಸಿಕೊಳ್ಳುತ್ತಾನೆ. ಸಃ = ಅವನೇ, ಪುರುಷಃ = ಕ್ಷರಾಕ್ಷರಪುರುಷರಿಗಿಂತ ಉತ್ತಮನು, ಸಃ = ಅವನೇ, ಈಶ್ವರಃ = ಸ್ವಾಮಿಯು, ಸಃ = ಅವನೇ, ಬ್ರಹ್ಮ = ಗುಣಪರಿಪೂರ್ಣನು. ಇತ್ಯಾದಿಯಾಗಿ ಪ್ರಮಾಣಗಳು ಆಧಾರವಾಗಿವೆ.

**तत्वप्रकाशिका – एवं स्वामित्वार्थतयाऽद्वैतश्रुतीर्व्याख्यायान्तर्यामित्वार्थतयाऽपि ताः श्रुतिस्मृतिभ्यां व्याचष्टे – असर्व इति ।। असर्वात्मकोऽपि सर्वात्मकत्वेनान्तर्याम्यप्यनन्तर्यामित्वेन देहान्तर्गतोऽपि बहिर्मात्रवृत्तित्वेन ज्ञायते तथैक एव बहुधा ज्ञायत इत्यर्थः ।**

---

श्रुत्यर्थस्तु – विष्णुः असर्वोऽपि सर्वानात्मकोऽपि 'सर्व इव' सर्वात्मक इव सर्वात्मकत्वेन ईयते । कुत इत्यतस्तत्रान्तर्यामित्वं हेतुत्वेनाभिप्रेत्यानन्तर्यामित्वप्रतीत्या तस्यासिद्धिमाशङ्क्याऽह – आत्मैवेति ।। आत्मैव अन्तर्याम्येव सन् अनात्मेव अनन्तर्यामित्वेन ईयते ज्ञायते रामकृष्णादिरूपेषु । तथा च अज्ञानमूला अनन्तर्यामित्वप्रतीतिरिति भावः ।

ननु विष्णोरन्तर्यामित्वे प्रत्यक्त्वं स्यात् । तच्चानुपपन्नं, पराक्त्वेन प्रतीतेरित्यत आह – प्रत्यङिति ।। भगवान् प्रत्यङ् देहान्तर्गतोऽपि पराङिव बहिर्मात्रवृत्तित्वेनेयते । तथा च बहिर्मात्रवृत्तित्वप्रतीतिर्भ्रान्तिरिति भावः । ननु विष्णौ विरुद्धानेकधर्माभ्युपगमे भेदापत्त्या एकमेव' इति श्रुतिविरोध इत्यत आह - एक इति ।। एक एव बहुधा बहुरूपेणेयत इत्यर्थः । तथा चैकस्यैव रूपबाहुल्यात् सर्वधर्मोपपत्तिरिति भावः । द्विर्ग्रहणात् सर्वत्र क्रियासम्बन्धः सूचितः ।

तत्त्वप्रदीपे तु – प्रत्यङ् पराङिव अभिमुखोऽप्यनभिमुख इव एक एव बहुधेयते ज्ञायते प्राप्यते च इत्युक्तम् । अन्तर्यामित्वनिमित्तेन सर्वात्मकत्वेन व्यपदिश्यमानः किं सर्वज्ञः? क्व च व्यपदिश्यते? इत्यत आह – स पुरुष इति ।। अनेन 'पुरुष एवेदं सर्वम्' (तै.आ. ३-१२.) इति श्रुतिमुपादत्ते । सम्पूर्णषड्गुणत्वाद् देहाख्यपुरे शयनाद्वा पुरुषसञ्ज्ञ इत्यर्थः । स्थलान्तरमाह - स इति ।। अनेन 'सर्वं खल्विदं ब्रह्म' (छा. ३-१४-१.) इति श्रुतिमुपादत्ते । सः सर्वात्मकत्वेन व्यपदिश्यमानो भगवान् ब्रह्म सर्वत्र पूर्णत्वाद् ब्रह्मसञ्ज्ञ इत्यर्थः । नन्वन्यत्रादृष्टमन्तर्गतस्य बहिर्गतत्वादिकं कथं घटत इत्यत आह - स ईश्वर इति ।। सः हरिः यत ईश्वरः अचिन्त्यशक्त्युपेतः अतस्तस्मिन् अन्यत्राघटितमपि सर्वं घटत इति ।।

ಹೀಗೆ ಅದ್ವೈತವನ್ನು ಹೇಳುವ ಶ್ರುತಿಗಳಿಗೆ ಸ್ವಾಮಿತ್ವವನ್ನು ಇಟ್ಟುಕೊಂಡು ಅರ್ಥಮಾಡಿ ಈಗ ಭಗವಂತನು ಸರ್ವಾಂತರ್ಯಾಮಿಯಾಗಿದ್ದಾನೆ. ಅದನ್ನಿಟ್ಟುಕೊಂಡು ಶ್ರುತಿಗಳು ಅದ್ವೈತವನ್ನು ಹೇಳುತ್ತವೆಂದು ''ಅಸರ್ವಃ'' ಎನ್ನುವುದರಿಂದ ಹೇಳುತ್ತಾರೆ. ಭಗವಂತನು ಸರ್ವಾತ್ಮಕನಲ್ಲದಿದ್ದರೂ ಬೇರೆಯವರಿಂದ ತಿಳಿಯುತ್ತಾನೆ. ಅಂತರ್ಯಾಮಿಯಾಗಿದ್ದರೂ ಅಂತರ್ಯಾಮಿಯಲ್ಲವೆಂದು ತಿಳಿಯುತ್ತಾನೆ. ದೇಹದ ಒಳಗೆ ಇದ್ದರೂ ಹೊರಗೆ ಮಾತ್ರ ಇರುವವನೆಂದು ತಿಳಿಯುತ್ತಾನೆ. ಹೀಗೆ ಒಬ್ಬನೇ ಆಗಿದ್ದರೂ ಬಹುರೂಪವಾಗಿ ತಿಳಿಯುತ್ತಾನೆಂದರ್ಥ.

**भावदीपः – अन्तर्यामित्वार्थतयेति ।। तत्त्वमसीत्यत्र त्वं = त्वदन्तर्यामी । 'अहं ब्रह्म' इत्यत्र अहं = मदन्तर्यामितया इत्यर्थः । यथाक्रमं श्रुतिस्थपदानामर्थमाह – बहिर्मात्रवृत्तित्वेन ज्ञायत इति ।। अनेनैकशब्दात् परस्य ईयते इत्यस्यात्रान्वय उक्तो भवति । अत एव क्रियासमुच्चयार्थं तथा एक एवेति तथाशब्दः प्रयुक्तः ।**

''ಅಂತರ್ಯಾಮಿತ್ವಾರ್ಥತಯಾ'' ಎಂಬ ವಾಕ್ಯಭಾಗಕ್ಕೆ -- 'ತತ್ತ್ವಮಸಿ' ಎಂಬಲ್ಲಿ ತ್ವಂ ಶಬ್ದಕ್ಕೆ ನಿನ್ನ ಅಂತರ್ಯಾಮಿ ಎಂದು ಅರ್ಥ. 'ಅಹಂ ಬ್ರಹ್ಮ' ಎಂಬಲ್ಲಿ ಅಹಂಶಬ್ದಕ್ಕೆ ನನ್ನ ಅಂತರ್ಯಾಮಿ ಎಂದರ್ಥ -- ಎಂಬ ಅಭಿಪ್ರಾಯವನ್ನು ಹೇಳಬೇಕು.

''ಅಸರ್ವಾತ್ಮಕೋಽಪಿ'' ಎಂಬ ಟೀಕಾವಾಕ್ಯದಿಂದ ಭಾಷ್ಯದಲ್ಲಿ ಹೇಳಿದ ಶ್ರುತಿಯಲ್ಲಿರುವ ಪದಗಳಿಗೆ ಕ್ರಮವಾಗಿ ಅರ್ಥವನ್ನು ವಿವರಿಸಿದ್ದಾರೆ. ''ಬಹಿರ್ಮಾತ್ರವೃತ್ತಿತ್ವೇನ ಜ್ಞಾಯತೇ'' ಎಂಬ ವಾಕ್ಯಭಾಗದಿಂದ ಏಕಶಬ್ದದ ನಂತರದಲ್ಲಿರುವ 'ಈಯತೇ' ಎಂಬ ಪದಕ್ಕೆ ಇಲ್ಲಿ ಅನ್ವಯ ಎಂದು ತಿಳಿಸಿದಂತೆ ಆಗುತ್ತದೆ. ಆದ್ದರಿಂದಲೇ ಈ ಕ್ರಿಯೆಯನ್ನು ಸಮುಚ್ಚಯ ಮಾಡಿಕೊಳ್ಳುವುದಕ್ಕಾಗಿ 'ತಥಾ ಏಕ ಏವ' ಎಂಬುದಾಗಿ 'ತಥಾ'ಶಬ್ದವನ್ನು ಪ್ರಯೋಗ ಮಾಡಿದ್ದಾರೆ.

**वाक्यार्थमञ्जरी– अंतर्यामितयेति** ।। त्वमित्यस्य त्वदंतर्यामीत्यहमित्यस्यमदंत-र्यामीत्यर्थतयेत्यर्थः । असर्वोपिसर्वात्मकत्वेन प्रतीयत इत्यत्रहेत्वाकांक्षायामंतर्यामित्वं हेतुत्वेनाभिप्रेत्य सिद्धमंतर्यामित्वमनंतर्यामित्वेन प्रतीयतेरित्याशंकायां तत्परिहारार्थमात्मैवेत्या-द्युक्तमिति पूर्वपूर्वत्रोत्तरत्रोक्तानां हेतुत्वादिति भावः ।।

'ಅಂತರ್ಯಾಮಿತಯಾ' ಎಂದು ಇದೆ ಅಂದರೆ 'ತ್ವಂ'ಎಂದರೆ ನಿನ್ನ ಅಂತರ್ಯಾಮಿ ಎಂದರ್ಥ. 'ಅಹಂ' ಎಂದರೆ ಅವನು ನನ್ನ ಅಂತರ್ಯಾಮಿ ಎಂಬರ್ಥದಿಂದ ಎಂದರ್ಥ.

'ಅಸರ್ವೋಽಪಿ ಸರ್ವಾತ್ಮಕತ್ವೇನ ಪ್ರತೀಯತೇ' ಇಲ್ಲಿ ಈ ರೀತಿಯಾಗಿ ತೋರುವುದಕ್ಕೆ ಕಾರಣವೇನು? ಎಂಬ ಆಕಾಂಕ್ಷೆ ಬಂದರೆ, ಅದಕ್ಕೆ ಅಂತರ್ಯಾಮಿತ್ವವನ್ನು ಕಾರಣವಾಗಿ ಹೇಳಿದರು. ಆದರೆ ಸಿದ್ಧವಾದ ಅಂತರ್ಯಾಮಿತ್ವವನ್ನು ಮುಂದೆ 'ಅನಂತರ್ಯಾಮಿತ್ವೇನ ಪ್ರತೀಯತೇ' ಎಂದು ಹೇಳಿರುವುದರಿಂದ ಇದು ಕೂಡುತ್ತದೆ? ಎಂಬ ಶಂಕಾವನ್ನು ಪರಿಹಾರ ಮಾಡಲು 'ಆತ್ಮೈವ' ಇತ್ಯಾದಿಯಾಗಿ ಹೇಳಿದ್ದಾರೆಂದು ಹಿಂದೆ ಮುಂದೆ ಹೇಳಿದ್ದು ಕಾರಣ ಎಂದು ಅಭಿಪ್ರಾಯ.

## ನಾನು, ನೀನು, ಅವನು ಎಲ್ಲವೂ ದೇವರ ಶಬ್ದಗಳೇ

**भाष्यम्– 'सर्वान्तर्यामिको विष्णुः सर्वनाम्नाऽभिधीयते ।
एषोऽहं त्वमसौ चेति न तु सर्वस्वरूपतः ।।',**

'ವಿಷ್ಣುವು ಸರ್ವಾಂತರ್ಗತನಾದ್ದರಿಂದ ಸರ್ವಶಬ್ದಗಳಿಂದ ವಾಚ್ಯನಾಗಿದ್ದಾನೆ. ಏಷಃ, ಅಹಂ, ತ್ವಂ, ಅಸೌ ಇತ್ಯಾದಿ ಸರ್ವನಾಮಗಳಿಂದಲೂ ಪ್ರತಿಪಾದ್ಯನಾಗಿದ್ದಾನೆ. ಹೊರತು ಸಕಲವಸ್ತುಗಳ ಸ್ವರೂಪನಾಗಿ ಆಯಾ ಪದಗಳಿಂದ ವಾಚ್ಯನಾಗಿರುವುದಲ್ಲ' ಎಂದು

ಪ್ರತಿಪದಾರ್ಥ– (१)ಮೋಕ್ಷಧರ್ಮವಚನವು ಹೀಗಿದೆ -

ಸರ್ವಾಂತರ್ಯಾಮಿಕಃ = ಸರ್ವಾಂತರ್ಯಾಮಿಯಾದ, ವಿಷ್ಣುಃ = ಪರಮಾತ್ಮನು, ಸರ್ವನಾಮ್ನಾ = ಎಲ್ಲ ಶಬ್ದಗಳಿಂದ, ಅಭಿಧೀಯತೇ = ಕರೆಸಿಕೊಳ್ಳುತ್ತಾನೆ; ಏಷಃ = ಇವನು ಎಂದು, ಅಹಂ = ನಾನು ಎಂದು, ತ್ವಂ = ನೀನು ಎಂದು, ಅಸೌ = ಇವನು ಎಂದು, ಇತಿ = ಹೀಗೆ, ಎಲ್ಲ ಶಬ್ದಗಳಿಂದ, ಅಭಿಧೀಯತೇ = ಕರೆಸಿಕೊಳ್ಳುತ್ತಾನೆ, ನತು ಸರ್ವಸ್ವರೂಪತಃ = ಹೊರತಾಗಿ ಸರ್ವಸ್ವರೂಪನೆಂಬ ಕಾರಣದಿಂದಲ್ಲ.

**तत्वप्रकाशिका – अनेनान्तर्यामित्वादसर्वस्य सर्वत्वोक्तिरिति सिध्यति ।**

ಇದರಿಂದ ಭಗವಂತನು ಸರ್ವಾತ್ಮಕನಲ್ಲದಿದ್ದರೂ ಸರ್ವಾತ್ಮಕನೆಂದು ಹೇಳಲ್ಪಟ್ಟಿದ್ದಾನೆಂಬುದಾಗಿ ಸಿದ್ಧವಾಗುತ್ತದೆ.

भावदीपः – **अनेनान्तर्यामित्वादिति** ।। तथा च सर्व इति श्रुतिवाक्यमेवं योजितं भवति । असर्वोऽपि सर्वात्मकत्वेन प्रतीयत इत्यत्र हेत्वाकाङ्क्षायाम् अन्तर्यामित्वं हेतुत्वेनाभिप्रेत्यासिद्धमन्तर्यामित्वम् अन्तर्यामित्वेन प्रतीतेरित्याशङ्कायां तत्परिहारार्थमात्मैवेत्युक्तम् ।

नन्वन्तर्यामित्वे प्रत्युक्तं स्यात् । न च तद् युज्यते । बहिर्मात्रवृत्तित्वेन प्रतीयमानत्वात् इत्याशङ्कायां प्रत्यगित्यभिहितम् ।

---

(१) भाष्यदीपिका– स्मृतौ कप्रत्ययः सर्वदेहगतस्यापि विष्णोरज्ञाततत्वमाह । यद्वा - यामो नियमनं, तत्र भव इत्यर्थे ठक्, यतो विष्णुः सर्वान्तर्यामिकः सर्वान्तर्नियामकः अत एव 'एष आत्मेति होवाच' (छा.८-३-४) 'सोऽहमस्मि' (ई.१६) 'तत्त्वमसि' (छा. ६-८-७) 'योऽसावसौ पुरुषः' (ई.१६) इति वाक्यस्थेन एषोऽहन्त्वमसाविति सर्वनाम्ना सर्ववाचकसर्वनामसज्ज्ञकशब्देन सर्वमिति नाम्ना चाभिधीयते । न तु सर्व-स्वरूपत्वादित्यर्थः ।

"ಅನೇನ ಅಂತರ್ಯಾಮಿತ್ವಾತ್" ಎಂಬ ವಾಕ್ಯಭಾಗದಿಂದ 'ಅಸರ್ವಃ' ಇತ್ಯಾದಿಶ್ರುತಿವಾಕ್ಯವು ಮುಂದೆ ಹೇಳುವಂತೆ ಯೋಜಿತವಾಗುತ್ತದೆ ಎಂದು ತಿಳಿಸಿದ್ದಾರೆ. 'ಭಗವಂತನು ಅಸರ್ವನಾಗಿದ್ದರೂ ಸರ್ವಾತ್ಮಕ ಎಂಬುದಾಗಿ ಕಾಣುತ್ತಾನೆ' ಎಂಬಲ್ಲಿ ಇದಕ್ಕೆ ಕಾರಣದ ಆಕಾಂಕ್ಷೆ ಬಂದಾಗ ಅಂತರ್ಯಾಮಿತ್ವವನ್ನು ಇದಕ್ಕೆ ಕಾರಣ ಎಂಬುದಾಗಿ ತಿಳಿಯಬೇಕು. ಈ ಅಂತರ್ಯಾಮಿತ್ವವು ಸಿದ್ಧವಾಗಿಲ್ಲ ಏಕೆಂದರೆ ಅನಂತರ್ಯಾಮಿಯಾಗಿ ಭಗವಂತನು ಪ್ರತೀತನಾಗುತ್ತಾನೆ ಎಂಬ ಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ "ಆತ್ಮೈವ" ಎಂದು ಹೇಳಿದ್ದಾರೆ. ಇಲ್ಲಿ ಆತ್ಮಶಬ್ದಕ್ಕೆ ದೇಹಾಂತರ್ಗತ ಎಂಬುದಾಗಿ ಅರ್ಥ.

ಈ ಅಂತರ್ಯಾಮಿತ್ವವನ್ನು ಹೊಂದಿಸಲು 'ಆತ್ಮೈವ' ಎಂಬ ಅಂಶವು ಹೊಂದಬಲ್ಲುದಾದರೂ ಇಲ್ಲಿ ಅದು ಸರಿಯಾಗಿ ಹೊಂದುವುದಿಲ್ಲ. ಭಗವಂತನು ಬಹಿರ್ಮಾತ್ರವೃತ್ತಿಯಾಗಿ ಕಾಣುತ್ತಿದ್ದಾನಲ್ಲವೇ? ಎಂಬ ಈ ಶಂಕೆಗೆ ಪರಿಹಾರರೂಪವಾಗಿ 'ಪ್ರತ್ಯಕ್' ಎಂಬುದಾಗಿ ಹೇಳಿದ್ದಾರೆ.

● ● ● ● ●

## ಮೋಕ್ಷಧರ್ಮದಲ್ಲಿ ಭೇದ

**ಭಾಷ್ಯಮ್– 'नैतदिच्छन्ति पुरुषमेकं कुरुकुलोद्वह' (मोक्षधर्मे) इत्यादेश्च ।**

'ಎಲೈ ಜನಮೇಜಯನೇ! ಆತ್ಮನು ಒಬ್ಬನೇ ಎಂದು ಜ್ಞಾನಿಗಳು ತಿಳಿಯಲು ಬಯಸುವುದಿಲ್ಲ' ಎಂದು ಮೋಕ್ಷಧರ್ಮವು ಹೇಳಿದೆ. ಇವೇ ಮೊದಲಾದ ಶ್ರುತಿಸ್ಮೃತಿ ಪ್ರಮಾಣಗಳಿಂದ ಜೀವಪರಮಾತ್ಮರಿಗೆ ಭೇದವೇ ಸಿದ್ಧವಾಗುತ್ತದೆ.

ಪ್ರತಿಪದಾರ್ಥ– [(१)]ಕುರುಕುಲೋದ್ವಹ = ಕುರುಕುಲದಲ್ಲಿ ಹುಟ್ಟಿದ ಜನಮೇಜಯನೇ!, ಏಕಂ = ಒಬ್ಬನೇ ಆಗಿರುವ, ಪುರುಷಂ = ಪುರುಷನು ಎಂಬ,

---

(१) भाष्यदीपिका– श्रेष्ठवस्त्वैक्यार्थतयाऽपि ऐक्यश्रुतीः स्मृत्या व्याख्याति – नैतदिति ।। मोक्षधर्मे हि वैशम्पायनं प्रति हे ब्रह्मन् भेदवाक्याद् बहवः पुरुषाः प्रतिपत्तव्याः । ऐक्यवाक्यं तु प्रधानपुरुषपरमिति वा? उताहो ऐक्यवाक्याद् एक एव पुरुषः, द्वैतवाक्यं तु व्यावहारिकभेदपरमिति? तथा – पुरुषबाहुल्यमुपेत्यैक्यवाक्यस्य श्रेष्ठपरत्वपक्षेऽपि आत्मसु किं सर्वे समाः उतैकः श्रेष्ठः? द्वितीये कोऽसावत्र पुरुषेषु श्रेष्ठः? स कथं हि श्रेष्ठः? तं तथा च भवान् वक्तुमर्हतीत्याशयेन कृतस्य जनमेजयप्रश्नस्य वैशम्पायनेनोक्त-मुत्तरम् -

'नैतदिच्छन्ति पुरुषमेकं कुरुकुलोद्वह ।
बहूनां पुरुषाणां हि यथैका योनिरुच्यते ।।
तथा तं पुरुषं विश्वमाख्यास्यामि गुणाधिकम् ।।' इति ।

अस्यार्थः – एतन्मतं नेच्छन्ति विद्वांसः । एतदिति किमित्यतस्तद् विवृणोति – पुरुषमेकमिति ।। तथा च वेदाः एकमेव पुरुषं वदन्तीत्येतन्मतं ज्ञानिनो नेच्छन्ती-त्यर्थः । यद्वा – एतस्मिन् जगति एकं पुरुषं नेच्छन्ति, किन्तु बहवः पुरुषाः सन्तीति ।

ಏತತ್ = ಐಕ್ಯವನ್ನು, ನ ಇಚ್ಛಂತಿ = ಜ್ಞಾನಿಗಳು ಒಪ್ಪುವುದಿಲ್ಲ. ಇತ್ಯಾದೇಶ್ಚ = ಇವೇ ಮೊದಲಾದ ಪ್ರಮಾಣಗಳು ಭೇದವಿಷಯದಲ್ಲಿ ಆಧಾರವಾಗಿವೆ.

## ವಿಶಿಷ್ಟೈಕ್ಯಪರವಾಗಿ ವ್ಯಾಖ್ಯಾನ

**तत्वप्रकाशिका – विशिष्टैक्यार्थतया च ताः स्मृत्या व्याख्याति – नैतदिति ।। 'एतत्' इत्यस्य विवरणं 'पुरुषमेकम्' इति । अत्र पुरुषैक्यं निराकृत्याद्वैतश्रुतिविरोधपरिहाराय तदर्थत्वेन बहूनामिति विशिष्टैक्यमुच्यते ।**

ಐಕ್ಯವನ್ನು ಹೇಳುವ ಶ್ರುತಿಗಳಿಗೆ ವಿಶಿಷ್ಟೈಕ್ಯಪರವಾಗಿ ಅರ್ಥವನ್ನು "ನೈತತ್" ಎಂದು ವ್ಯಾಖ್ಯಾನಮಾಡುತ್ತಾರೆ. ಸ್ಮೃತಿಯಲ್ಲಿರುವ 'ಏತತ್' ಎಂಬುದರ ವಿವರಣೆಯನ್ನು "ಪುರುಷಮೇಕಂ" ಎಂಬುದಾಗಿ ನೀಡಿದ್ದಾರೆ. ಈ ರೀತಿಯಲ್ಲಿ ಒಬ್ಬನೇ ಪುರುಷ ಎನ್ನುವುದನ್ನು ನಿರಾಕರಣೆ ಮಾಡಿ ಅದ್ವೈತಶ್ರುತಿಯ ವಿರೋಧಪರಿಹಾರಕ್ಕಾಗಿ ಬಹಳಪುರುಷರ ಮಧ್ಯದಲ್ಲಿ ವಿಶಿಷ್ಟನಾದವನು ಒಬ್ಬನೇ ಎಂದು ಹೇಳುತ್ತಾರೆ.

भावदीपः – ननु देहान्तरित्युक्तरीत्याऽन्तर्बहिर्वर्तमानस्य हरेर्यदेकत्वमुक्तं तन्न सम्भवति । भिन्न भिन्नस्थानादित्वेन तस्य भिन्नत्वादित्यत उक्तम् – **एक इति** ।। अन्यत्रादृष्टमेतत् सर्वं कथम्? इत्यत उक्तम् – **स पुरुष सत्यादीति** ।। एवं सति असर्वात्मकस्य सर्वात्मकत्वोक्तौ कथमन्तर्यामित्वं हेतुर्न भवेदिति भावः ।

**विशिष्टेति** ।। 'विशिष्टमुत्तमं वस्तु एकमेवेत्यर्थकतया' इत्यर्थः । अत्र विशिष्टैक्यं न भाति इत्यतोऽस्योपयोगं वदन् उत्तरश्लोकेन तदुक्तं व्यनक्ति – **अत्रेत्यादिना** ।। मोक्षधर्मे हि –

---

तर्ह्यद्वैतश्रुतिविरोध इति न वाच्यम् । यतो बहूनां श्रेष्ठः एक एव, तत्परमैक्यवाक्यम् । बहूनां कः श्रेष्ठः? स कथं श्रेष्ठः? इत्यस्योत्तरमाह - बहूनामिति ।। हे कुरुकुलोद्वह ! एतेषां बहूनां पुरुषाणाम् आत्मनां मध्ये या योनिः यः कारणभूतः 'एका' श्रेष्ठः यथा च श्रेष्ठ उच्यते श्रुत्यादौ 'तथा' तेन प्रकारेण 'तं' विश्वं पूर्णं गुणाधिकं पुरुषम् आख्यास्यामि व्याख्यास्यामीति प्रमेयदीपिकाव्यासतीर्थीयदिशा स्मृत्यर्थः ।

अनेन पराभिमतैक्यवाक्यमुत्तमवस्त्वैक्यपरम् । तथा च सर्वोत्कृष्टं यदेकं ब्रह्म तत्त्वमसि तस्मादत्यवरोऽसि अत्यवरोऽस्मीति श्रुत्यर्थ उक्तो भवति । 'इत्यादेश्च' इत्यस्य 'न च तत्त्वमसीत्यादिविरोधः' इत्यनेनान्वयः ।

**बहवः पुरुषा ब्रह्मन् उताहो एक एव तु ।**
**को ह्यत्र पुरुषश्रेष्ठस्तं भवान् वक्तुमर्हति ।।**

इति जनमेजयेन पृष्टो वैशम्पायनः 'नैतदिच्छन्ति' इत्यर्धेन पुरुषैक्यमतं निरस्य, तत्त्वमसीत्याद्यद्वैतश्रुतीनां –

**बहूनां पुरुषाणां हि यथैका योनिरुच्यते ।**
**तथा तं पुरुषं विश्वमाख्यास्यामि गुणाधिकम् ।।**

इत्यादिना विशिष्टैक्यमर्थमुवाच । पुरुषाणां यथैका योनिर्विशिष्टं कारणमुच्यते श्रुत्यादौ । तथा विशिष्टं तं पुरुषं वक्ष्यामीत्यर्थप्रतीतेः । 'अस्मिन् ग्रामेऽयमेक एव विप्रः' इतिवत् 'एकमेवाद्वितीयम्' इत्याद्यैक्यव्यपदेश इति ।।

ಭಗವಂತನು ದೇಹಾಂತರ್ಗತನಾಗಿದ್ದಾನೆ ಎಂದು ಹಿಂದೆ ಹೇಳಿದಂತೆ ಒಳಗೂ ಹೊರಗೂ ಇರುವ ಶ್ರೀಹರಿಗೆ ಏಕತ್ವವನ್ನು ಹೇಳಿದ್ದು; ಈ ಏಕತ್ವವು ಹೊಂದಲಾರದು. ಏಕೆಂದರೆ, 'ಈ ಒಳಗೆ ಮತ್ತು ಹೊರಗೆ' ಎಂಬ ಅಂಶಗಳು ಭಿನ್ನ ಭಿನ್ನ ಸ್ಥಾನಗಳಾದುದರಿಂದ ಅಲ್ಲಿರುವ ಭಗವಂತನೂ ಕೂಡ ಭಿನ್ನನೇ ಆಗಿರುತ್ತಾನೆ. ಈ ಶಂಕೆಗೆ ಉತ್ತರವಾಗಿ 'ಏಕಃ' ಎಂದು ಹೇಳಿದ್ದಾರೆ. ಬೇರೆಲ್ಲಿಯೂ ಕಾಣಸಿಗದ ಈ ಎಲ್ಲ ಅಂಶಗಳು ಭಗವಂತನಲ್ಲಿ ಹೇಗೆ ಕೂಡುತ್ತವೆ? ಎಂಬ ಪ್ರಶ್ನೆಗೆ ಉತ್ತರವಾಗಿ ''ಸ ಪುರುಷಃ'' ಎಂದು ಹೇಳಿದ್ದಾರೆ. ಹೀಗಿದ್ದಾಗ ಅಸರ್ವಾತ್ಮಕನಾದ ಭಗವಂತನನ್ನು ಸರ್ವಾತ್ಮಕ ಎಂದು ಹೇಳಿದಾಗ ಅಂತರ್ಯಾಮಿತ್ವವು ಹೇಗೆ ಲಭಿಸಲಾರದು? ಅಂದರೆ, ಅಂತರ್ಯಾಮಿತ್ವವು ಕಾರಣವಾಗಿಯೇ ಆಗುತ್ತದೆ ಎಂದು ಅಭಿಪ್ರಾಯ.

''ವಿಶಿಷ್ಟೈಕ್ಯಾರ್ಥತಯಾ'' ಎಂಬಲ್ಲಿ ವಿಶಿಷ್ಟಂ ಅಂದರೆ ಉತ್ತಮವಾದ ವಸ್ತುವು ಒಂದೇ ಆಗಿದೆ ಎಂಬ ಅರ್ಥವುಳ್ಳದ್ದನ್ನಾಗಿ ಎಂದು ಅರ್ಥೈಸಿಕೊಳ್ಳಬೇಕು. ಇಲ್ಲಿ 'ವಿಶಿಷ್ಟವಾದುದಕ್ಕೆ ಐಕ್ಯವು ಕಾಣುವುದಿಲ್ಲ' ಎಂಬ ಕಾರಣದಿಂದ ಇದರ ಉಪಯೋಗವನ್ನು ಮುಂದಿನ ಶ್ಲೋಕದಿಂದ ಹೇಳುತ್ತಾ ಆ ಶ್ಲೋಕದಲ್ಲಿ ಹೇಳಿದ ಅಂಶವನ್ನು ''ಅತ್ರ'' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಮೋಕ್ಷಧರ್ಮಗ್ರಂಥದಲ್ಲಿ ಜನಮೇಜಯನು

''ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು ।
ಕೋ ಹ್ಯತ್ರ ಪುರುಷಶ್ರೇಷ್ಠಸ್ತಂ ಭವಾನ್ ವಕ್ತುಮರ್ಹತಿ ॥'

''ಪುರುಷರು ತುಂಬಾ ಮಂದಿ ಇದ್ದಾರೋ? ಅಥವಾ ಒಬ್ಬನೇ ಇರುವನೋ? ತುಂಬಾ ಮಂದಿ ಪುರುಷರಿದ್ದರೆ ಅಂತಹವರಲ್ಲಿ ಶ್ರೇಷ್ಠನಾದವನು ಯಾರು? ಈ ಅಂಶವನ್ನು ನೀವು ಹೇಳಬೇಕು'' ಎಂದು ವೈಶಂಪಾಯನರನ್ನು ಕೇಳಿದಾಗ; ವೈಶಂಪಾಯನರು ಈ ಶ್ಲೋಕಗಳನ್ನು ಉದಾಹರಿಸಿದ್ದಾರೆ. ಭಾಷ್ಯದಲ್ಲಿ ಹೇಳಿದ ಶ್ಲೋಕದಲ್ಲಿ ''ನೈತದಿಚ್ಛಂತಿ'' ಎಂಬ ಶ್ಲೋಕಾರ್ಧದಿಂದ ಪುರುಷೈಕ್ಯಮತವನ್ನು ನಿರಾಸ ಮಾಡಿ, ''ತತ್ತ್ವಮಸಿ'' ಇತ್ಯಾದಿ ಅದ್ವೈತಪರವಾದ ಶ್ರುತಿಗಳಿಗೆ

"ಬಹೂನಾಂ ಪುರುಷಾಣಾಂ ಹಿ ಯಥೈಕಾ ಯೋನಿರುಚ್ಯತೇ।
ತಥಾ ತಂ ಪುರುಷಂ ವಿಶ್ವಮಾಖ್ಯಾಸ್ಯಾಮಿ ಗುಣಾಧಿಕಮ್ ॥'

'ಅನೇಕಮಂದಿ ಪುರುಷರಿಗೆ ಉತ್ಪತ್ತಿಗೆ ಕಾರಣವಾಗಿ ಒಂದೇ ವಿಶಿಷ್ಟಕಾರಣವನ್ನು ಶ್ರುತ್ಯಾದಿಗಳಲ್ಲಿ ಹೇಳಿದ್ದಾರೋ ಅದೇ ರೀತಿ ವಿಶಿಷ್ಟನಾದ ಸಕಲಗುಣಪೂರ್ಣನಾದ ಆ ಪುರುಷನನ್ನು ನಿನಗೆ ತಿಳಿಸಿಕೊಡುತ್ತೇನೆ' ಇತ್ಯಾದಿಗಳಿಂದ ವಿಶಿಷ್ಟವಾದ ಐಕ್ಯಾರ್ಥವನ್ನು ಹೇಳಿದ್ದಾರೆ. 'ಈ ಗ್ರಾಮದಲ್ಲಿ ಇವನೊಬ್ಬನೇ ಬ್ರಾಹ್ಮಣ' ಎಂದು ಹೇಳಿದಂತೆ, 'ಏಕಮೇವಾದ್ವಿತೀಯಮ್' ಎಂಬಲ್ಲೂ ಐಕ್ಯವ್ಯವಹಾರವನ್ನು ಮಾಡಿದ್ದಾರೆ ಎಂದು ಅಭಿಪ್ರಾಯ.

**वाक्यार्थमञ्जरी– विशिष्टेति** ।। विशिष्टमुत्तमंवस्त्वेकमेवेत्यर्थतयेत्यर्थः । इदमेकमेवेत्याद्यपेक्षया। तत्वमसीत्यादौ विशिष्टैक्याप्रतिपादनादितिध्येयं । अत्र विशिष्टैक्यंनप्रतीयत इत्यत आह – **अत्रेति** ।। विवाक्षितार्थप्रतिपादकस्यादिपदेनोपात्तत्वादितिभावः । तर्हि बहूनामित्यत्रेवोदाहर्तव्यम् । किमनेनेत्यत उक्तं – **पुरुषैक्यं निराकृत्येति** ।। मोक्षधर्मे हि

बहवःपुरुषा ब्रह्मन् उताहो एक एव तु ।
को ह्यत्र पुरुषश्रेष्टस्तं भवान् वक्तुमर्हसि ।।

इति जनमेजयेन पृष्टे वैशंपायनेन "नैतदिच्छंति पुरुषमेकं कुरुकुलोद्भव" इति पुरषैक्यमतं निराकृतं । कथं तर्ह्यैकमेवाद्वितीयमित्यादौ पुरुषैक्यव्यपदेश इत्यत उक्तम् ।

बहूनां पुरुषाणां वै यथैका योनिरुच्यते ।
तथा तं पुरुषं विश्वमाख्यास्यामि गुणाधिकम् ।।

इति । कारणत्वेनाभिमतानां बहूनां सत्वेपि 'द्यावाभूमी जनयन् देव एकः' इतिश्रुतौ यथाविशिष्टकारणस्यैकत्वादेकं कारणमित्युच्यते तथैक्यश्रुत्यर्थत्वेन तं विश्वं पूर्णं गुणाधिकं पुरुषमाख्यास्यामीत्यर्थः ।।

'ವಿಶಿಷ್ಟ' ಎಂದು ಇದೆ. ಅಂದರೆ ವಿಶಿಷ್ಟಂ ಎಂದರೆ ಉತ್ತಮವಾದ ವಸ್ತು ಅವನೊಬ್ಬನೇ ಎಂದು ಅರ್ಥ ಎಂದು ತಿಳಿಯಬೇಕು. ಈ ಅರ್ಥವನ್ನು 'ಏಕಮೇವಾದ್ವಿತೀಯಂ' ಇತ್ಯಾದಿವಾಕ್ಯಗಳ ಅಪೇಕ್ಷೆಯಿಂದ ಎಂದು ತಿಳಿಯಬೇಕು. ಆದರೆ 'ತತ್ವಮಸಿ' ಮೊದಲಾದವುಗಳಲ್ಲಿ ವಿಶಿಷ್ಟಐಕ್ಯವು ಪ್ರತಿಪಾದ್ಯವಾಗಿಲ್ಲವೆಂದು ತಿಳಿಯಬೇಕು.

ಆದರೆ 'ನೈತದಿಚ್ಛಂತಿ' ಎಂಬ ಮೋಕ್ಷದರ್ಮದ ವಾಕ್ಯದಲ್ಲಿ ವಿಶಿಷ್ಟೈಕ್ಯವು ತೋರುವುದಿಲ್ಲವಲ್ಲ? ಎಂದು ಪ್ರಶ್ನೆ ಮಾಡಿದರೆ ಅದಕ್ಕೆ ಉತ್ತರರೂಪವಾಗಿ 'ಅತ್ರ' ಎಂಬ ವಾಕ್ಯ ಹೊರಟಿದೆ.

ಹಾಗಾದರೆ 'ಬಹುನಾಂ' ಎಂಬ ವಾಕ್ಯವನ್ನು ಮಾತ್ರ ಉದಾಹರಿಸಬೇಕಾಗಿತ್ತು. ಆದರೆ 'ಅನೇನ' ಎಂಬುದನ್ನು ಏತಕ್ಕಾಗಿ ಹೇಳಿದ್ದು? ಎಂಬ ಪ್ರಶ್ನೆಗೆ ಉತ್ತರ ರೂಪವಾಗಿ 'ಪುರುಷೈಕ್ಯಂ ನಿರಾಕೃತ್ಯ' ಎಂಬ ವಾಕ್ಯ ಹೊರಟಿದೆ.

ಮೋಕ್ಷಧರ್ಮವಚನವು ಈ ರೀತಿಯಾಗಿದೆ -

'ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು ।
ಕೋ ಹ್ಯತ್ರ ಪುರುಷಶ್ರೇಷ್ಠಸ್ತಂ ಭವಾನ್ ವಕ್ತುಮರ್ಹಸಿ ॥'

ಎಂದು ಜನಮೇಜಯರಾಜನು ವೈಶಂಪಾಯನರನ್ನು ಕುರಿತು ಪ್ರಶ್ನೆ ಮಾಡಿದನು. ಅದಕ್ಕೆ ಉತ್ತರ ರೂಪವಾಗಿ ವೈಶಂಪಾಯನರು 'ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ಭವ' ಎಂದು ಪುರುಷರ ಐಕ್ಯವನ್ನು ನಿರಾಕರಣೆ ಮಾಡಿದರು. ಹಾಗಾದರೆ 'ಏಕಮೇವ ಅದ್ವಿತೀಯಂ ಬ್ರಹ್ಮ' ಇತ್ಯಾದಿ ವಾಕ್ಯಗಳಲ್ಲಿ ಒಬ್ಬ ಪುರುಷನನ್ನೇ ಏಕೆ ನಿರ್ದೇಶವನ್ನು ಮಾಡಿದ್ದಾರೆ? ಎಂದು ಪ್ರಶ್ನೆ ಬಂದರೆ ಇದಕ್ಕೆ ಉತ್ತರ ರೂಪವಾಗಿ,

ಬಹೂನಾಂ ಪುರುಷಾಣಾಂ ವೈ ಯಥೈಕಾ ಯೋನಿರುಚ್ಯತೇ ।
ತಥಾ ತಂ ಪುರುಷಂ ವಿಶ್ವಮಾಖ್ಯಾಸ್ಯಾಮಿ ಗುಣಾಧಿಕಂ' ॥

ಎಂದು ಪದಾರ್ಥಗಳಿಗೆ ಕಾರಣಗಳು ಬಹಳವಾಗಿದ್ದರೂ ಯಾವರೀತಿಯಾಗಿ 'ದ್ಯಾವಾಭೂಮೀ ಜನಯನ್ ದೇವ ಏಕಃ' ಎಂದು ಶ್ರುತಿಯಲ್ಲಿ ವಿಶಿಷ್ಟಕಾರಣಕ್ಕೆ ಏಕತ್ವವಿರುವುದರಿಂದ 'ಏಕಂ ಕಾರಣಂ' ಎಂದು ಹೇಳುತ್ತಾರೆಯೋ ಅದೇ ರೀತಿಯಾಗಿ ಐಕ್ಯಶ್ರುತಿಯ ಅರ್ಥವನ್ನಾಗಿ ತಂ - ವಿಶ್ವವನ್ನು ಪೂರ್ಣಂ- ಸರ್ವಗುಣದಿಂದ ಗುಣಾಧಿಕಂ -ಪರಿಪೂರ್ಣನಾದ ಪುರುಷನನ್ನು ಹೇಳುತ್ತೇನೆ ಎಂದು ಅರ್ಥ.

● ● ● ● ●

## ವೇದಾರ್ಥವನ್ನು ಸರಿಯಾಗಿ ವಿಮರ್ಶಿಸಬೇಕು

**भाष्यम्– उक्ता च प्राप्तिः । 'ब्रह्मैव सन्' (बृ. ६-४.) इत्यपि जीव एव ब्रह्मशब्दः । उपपद्यते च विरोधे ॥**

'ತತ್ವಮಸಿ' ಮೊದಲಾದ ಶ್ರುತಿಗಳಿಂದ ಅಭೇದಜ್ಞಾನವು ವೇದಾರ್ಥಗಳನ್ನು ಸರಿಯಾಗಿ ವಿಮರ್ಶೆ ಮಾಡದಿದ್ದರೆ ಮಾತ್ರ ತೋರುತ್ತದೆ. ಎಂದು ಹೇಳಿದ್ದೇವೆ.

'ಬ್ರಹ್ಮೈವ ಸನ್' ಎಂಬಲ್ಲಿರುವ ಬ್ರಹ್ಮಶಬ್ದಕ್ಕೆ ಜೀವ ಎಂದರ್ಥ. ವಸ್ತುತಃ ಬ್ರಹ್ಮಶಬ್ದಕ್ಕೆ ಪರಬ್ರಹ್ಮನೆಂಬ ಅರ್ಥವೇ ಮುಖ್ಯವಾಗಿದ್ದರೂ ಬಾಧಕವಿದ್ದಾಗ ಜೀವ ಎಂಬ ಅಮುಖ್ಯಾರ್ಥವನ್ನು ಹೇಳಬಹುದು.

ಪ್ರತಿಪದಾರ್ಥ– ಅದ್ವೈತಶ್ರುತಿಯು ಇಲ್ಲದಿದ್ದರೆ ಭೇದಶ್ರುತಿಗಳು ಅದ್ವೈತವನ್ನು ಹೇಗೆ ನಿಷೇಧಿಸುತ್ತವೆ? ಅದ್ವೈತವಂತೂ ಕಣ್ಣಿಗೆ ಕಾಣದ ಪದಾರ್ಥವಾಗಿದೆ. ಆದ್ದರಿಂದ ಶ್ರುತಿಯಿಂದಲೇ ಅದ್ವೈತವನ್ನು ಸಮರ್ಥಿಸಬೇಕು. ಅಪ್ರಾಪ್ತವಾದ ಅದ್ವೈತವನ್ನು ನಿಷೇಧಮಾಡುವುದು ತಪ್ಪಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ[೧].

---

(१) भाष्यदीपिका– नन्वद्वैतश्रुत्यभावे कथमद्वैतं भेदश्रुत्यादिना निषिध्यते । तस्याप्रत्यक्षत्वेन श्रुतिं विना प्राप्त्यभावात् । अप्राप्तस्य च प्रतिषेधायोगाद् इत्यत आह – उक्ता चेति ॥ चः साध्यसमुच्चये । चो यतो न च 'तत्त्वमसि' इत्यादिना जीवेश्वरैक्यस्य

ಪ್ರಾಪ್ತಿಃ = ಶ್ರುತಿಯಿಂದ ಅಭೇದಜ್ಞಾನವು, ಉಕ್ತಾ ಚ = ವಿಮರ್ಶೆ ಮಾಡದಿದ್ದಾಗ ಮಾತ್ರ ತೋರುತ್ತದೆ ಎಂದು ಈ ಹಿಂದೆ ಹೇಳಿದ್ದೇವೆ. ಬ್ರಹ್ಮೈವ ಸನ್ ಇತ್ಯಪಿ = ಬ್ರಹ್ಮೈವ ಸನ್ ಎಂಬಲ್ಲಿರುವ, ಬ್ರಹ್ಮಶಬ್ದಃ = ಬ್ರಹ್ಮಶಬ್ದವು, ಜೀವ ಏವ = ಜೀವನನ್ನೇ ಹೇಳುತ್ತದೆ. ವಿರೋಧೇ = ಮುಖ್ಯಾರ್ಥಕ್ಕೆ ಬಾಧಕವಿದ್ದಾಗ ಮಾತ್ರ, ಉಪಪದ್ಯತೇ ಚ = ಅಮುಖ್ಯಾರ್ಥವಾದ ಜೀವನೆಂಬ ಅರ್ಥವು ಕೂಡುತ್ತದೆ.

## ಅಜ್ಞಾನದಿಂದ ಪ್ರಾಪ್ತವಾದ ಐಕ್ಯವನ್ನು ನಿರಾಕರಿಸಬೇಕು

**तत्वप्रकाशिका – नन्वेवमद्वैतश्रुत्यभावे कथमद्वैतं श्रुत्यादिना निषिध्यते? तस्याप्रत्यक्षत्वेन श्रुतिं विना प्राप्त्यभावात् । अप्राप्तस्य च निषेधायोगात् इत्यत आह – उक्ता चेति ।। 'न च तत्त्वमसि, अहं ब्रह्मास्मि इत्यादिश्रुतिविरोधः' इति**

---

'प्राप्तिः' श्रुत्यर्थापरिज्ञाननिमित्ता प्रसक्तिरुक्ता । अतो न तन्निषेधानुपपत्तिरित्यर्थः । नन्वेतच्छ्रुतीनामविरोधकत्वेऽपि भेदश्रुतेः 'ब्रह्मैव सन् ब्रह्माप्येति' इति श्रुतिविरोधस्तु भविष्यति । अत्र ब्रह्मैवेत्येवकारेण जीवस्याब्रह्मतानिषेधेन तदधीनत्वादिना निमित्तेनाब्रह्मभूते ब्रह्मत्वव्यवहार इत्युक्तगतेरसम्भवादित्यत आह – ब्रह्मैवेति ।। अपिः समुच्चये । न केवलं तत्त्वमसीत्यादिकमविरुद्धम् । किन्तु 'ब्रह्मैव सन्' इति बृहदारण्य-वाक्यमपीत्यर्थः । कुत इत्यत आह – जीव एवेति ।। सप्तमीयं विषयार्थे । तथा च यतो 'ब्रह्मैव सन्' इति वाक्ये श्रुतोऽयमाद्यो ब्रह्मशब्दः 'ब्रह्माणि जीवाः सर्वेऽपि' इति श्रुतेर्जीव एव, न परब्रह्मणि अत इत्यर्थः । यद्वा - जीव इति प्रथमान्तम् । तथा चेति वाक्ये श्रुताद्यब्रह्मशब्दोक्तो जीव एव, न परब्रह्मेत्यर्थः । तथा च सः मुक्तजीवो 'ब्रह्मैव सन्' जीव एव सन् जीवभावमविहायैव प्रलये परब्रह्माऽप्नोति । अपिहितः सन् प्रविशतीति श्रुत्यर्थोपपत्तेः नोक्तभेदव्यपदेशस्यैतच्छ्रुतिविरोध इति भावः ।

यथोक्तं बृहद्भाष्ये -

'जीवोऽपि ब्रह्मशब्दोक्तो जडाद् बहुगुणत्वतः ।
प्राप्नोति परमं ब्रह्म प्रलये प्रलये सदा ।।' इति ।

यद्यपि मुक्तावभेदे परेणेयं श्रुतिराशङ्किता । तथैव विष्णुतत्त्वविनिर्णयटीकोक्तेः। तथा च मुक्ताविति वाच्यं, न तु प्रलय इति । तथाऽपि सर्वजीवसाधारण्याय प्रलय इत्युक्तिः । ननु ब्रह्मशब्दस्य परब्रह्मण्येव मुख्यत्वान्न जीवेऽसौ युज्यत इत्यत आह - उपपद्यत इति ।। चोऽप्यर्थः । तथा च ब्रह्मशब्दो यद्यपि परब्रह्मणि मुख्यः, तथाऽपि 'विरोधे' स्वीयपूर्वोत्तरवाक्यविरोधे प्रमाणान्तरविरोधे वा सति जीवेऽप्युपपद्यत इत्यर्थः । प्रकृते च 'ब्रह्माप्येति ' इत्युत्तरभाविस्ववाक्येन 'परमं साम्यम्' इति पूर्ववाक्येन भेदग्राहिप्रत्यक्षादिना च विरोधोऽस्तीति भावः ।

**भाष्येऽद्वैतनिषेधाय श्रुत्यर्थापरिज्ञाननिमित्तप्राप्तेरुक्तत्वात् युज्यते तन्निषेध इत्यर्थः ।**

**नन्वेतच्छ्रुतीनामविरोधकत्वेऽपि 'ब्रह्मैव सन् ब्रह्माप्येति' इतिश्रुतिविरोधस्तु भविष्यति । अत्र ब्रह्मैवेत्यब्रह्मतानिषेधेन तदधीनत्वादिनाऽतद्भूते तद्व्यपदेश इत्युक्तगतेरम्भवादित्यत आह – बह्मैवेति ।। नात्र परब्रह्मत्वाभिप्रायोऽमाद्यो ब्रह्मशब्दः, किन्तु 'ब्रह्माणि जीवाः सर्वेऽपि' इति श्रुतेर्जीवपर एव । तथा च जीवभावमविहायैव 'ब्रह्माऽप्नोति' इत्यर्थोपपत्तेर्नोक्तभेदस्यैतच्छ्रुतिविरोध इत्यर्थः । ब्रह्मशब्दस्य परब्रह्मणि मुख्यत्वान्न जीवेऽसावुपपद्यत इत्यत आह – उपपद्यते चेति ।। परब्रह्मणि मुख्योऽपि ब्रह्मशब्दो जीवेऽप्युपपद्यते । जीवस्य परब्रह्मत्वार्थतास्वीकारे ब्रह्माप्येतीति श्रुतब्रह्माप्राप्तिविरोधात् प्रमाणान्तरविरोधाच्चेत्यर्थः ।।**

ಅದ್ವೈತಶ್ರುತಿಯೇ ಇಲ್ಲವಾದರೆ ಶ್ರುತಿಮೊದಲಾದ ಪ್ರಮಾಣಗಳನ್ನು ಉದಾಹರಿಸಿ ಅದ್ವೈತವನ್ನು ನಿರಾಕರಿಸುವುದು ಹೇಗೆ ಕೂಡುತ್ತದೆ? ಅದ್ವೈತವು ಪ್ರತ್ಯಕ್ಷವಲ್ಲವಾದ್ದರಿಂದ ಶ್ರುತಿಯಿಂದಲೇ ಪ್ರಾಪ್ತವಾಗಬೇಕು. ಅದೂ ಇಲ್ಲವಾದರೆ ಪ್ರಾಪ್ತವಲ್ಲದ್ದನ್ನು ನಿರಾಕರಿಸಲು ಬರುವುದಿಲ್ಲವಾದ್ದರಿಂದ ಹೇಗೆ ನಿರಾಕರಿಸುತ್ತೀರಿ ಎಂದರೆ "ಉಕ್ತಾ ಚ" ಎನ್ನುವುದರಿಂದ ಉತ್ತರಿಸುತ್ತಾರೆ.

ಭಾಷ್ಯದಲ್ಲಿ 'ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ' ಇತ್ಯಾದಿ ಶ್ರುತಿಗಳ ವಿರೋಧ ಬರುತ್ತದೆಂದು ಶಂಕಿಸಬಾರದು ಎಂದು ಹೇಳುವಾಗ ಆ ಶ್ರುತಿಗಳ ಅರ್ಥವನ್ನು ಸರಿಯಾಗಿ ತಿಳಿಯದಿದ್ದಾಗ ಅಜ್ಞಾನದ ಮೂಲಕವಾಗಿ ಅದ್ವೈತವು ಪ್ರಾಪ್ತವಾಗುತ್ತದೆಂದು ಹೇಳಿದ್ದಾರೆ. ಆದ್ದರಿಂದ ಅದರ ನಿಷೇಧವೂ ಕೂಡುತ್ತದೆ.

'ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ' ಎಂಬೀ ಶ್ರುತಿಗಳಿಗೆ ಬೇರ ಅರ್ಥವನ್ನು ಮಾಡಿ ಈ ಶ್ರುತಿಗಳ ವಿರೋಧವಿಲ್ಲವೆಂದರೂ 'ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' ಎಂಬ ಶ್ರುತಿಯ ವಿರೋಧವು ಬಂದೇ ಬರುತ್ತದೆ. ಈ ಶ್ರುತಿಯಲ್ಲಿ 'ಬ್ರಹ್ಮೈವ' ಎಂದು ಏವಕಾರದಿಂದ ಬ್ರಹ್ಮನಲ್ಲದ್ದನ್ನು ನಿಷೇಧಮಾಡಿದ್ದರಿಂದ ಎಲ್ಲವೂ ಅವನ ಅಧೀನವಾದ್ದರಿಂದ ಅವನದ್ದಲ್ಲದ್ದನ್ನು ಅವನೇ ಎಂದು ವ್ಯವಹಾರಮಾಡುತ್ತಾರೆ ಎಂದು ಹೇಳಿ ಕೂಡಿಸಲಿಕ್ಕೂ ಬರುವುದಿಲ್ಲ -- ಎಂದರೆ "ಬ್ರಹ್ಮೈವ" ಎನ್ನುವುದರಿಂದ ಉತ್ತರಿಸುತ್ತಾರೆ. ಈ ಶ್ರುತಿಯಲ್ಲಿ ಮೊದಲನೆಯ ಬ್ರಹ್ಮಶಬ್ದವು ಪರಬ್ರಹ್ಮನನ್ನು ಹೇಳುವುದಿಲ್ಲ. 'ಬ್ರಹ್ಮಾಣಿ ಜೀವಾಃ ಸರ್ವೇಽಪಿ' ಎಂದು ಶ್ರುತಿಯಿಂದ ಜೀವ ಎಂಬರ್ಥವನ್ನು ಹೇಳುತ್ತದೆ. ಹಾಗಾಗಿ 'ಬ್ರಹ್ಮೈವ ಸನ್' ಜೀವನಾಗಿದ್ದುಕೊಂಡೇ, ಬ್ರಹ್ಮಾಪ್ನೋತಿ = ಬ್ರಹ್ಮನನ್ನು ಹೊಂದುತ್ತಾನೆ ಎಂದರ್ಥಮಾಡುವುದರಿಂದ

ಹಿಂದೆ ಹೇಳಿದ ಜೀವಬ್ರಹ್ಮರ ವಿಷಯದಲ್ಲಿ ಈ ಶ್ರುತಿಯ ವಿರೋಧವು ಬರುವುದಿಲ್ಲ. ಬ್ರಹ್ಮಶಬ್ದವು ಪರಬ್ರಹ್ಮನಲ್ಲಿ ಮುಖ್ಯವಾದ್ದರಿಂದ ಅವನನ್ನೇ ಇಲ್ಲಿ ಸ್ವೀಕರಿಸಬೇಕು; ಆದ್ದರಿಂದ ನೀವು ಹೇಳಿದ ಅರ್ಥವು ಸರಿಯಾಗಿಲ್ಲವೆಂದರೆ "ಉಪಪದ್ಯತೇ ಚ" ಎನ್ನುವುದರಿಂದ ಉತ್ತರಿಸುತ್ತಾರೆ. ಪರಬ್ರಹ್ಮನನ್ನು ಬ್ರಹ್ಮಶಬ್ದವು ಮುಖ್ಯವಾಗಿ ಪ್ರತಿಪಾದಿಸಿದರೂ ಜೀವನನ್ನೂ ಹೇಳುತ್ತದೆ.

ಜೀವವಾಚಕವಾದ ಬ್ರಹ್ಮಶಬ್ದವನ್ನು ಪರಬ್ರಹ್ಮನೆಂಬ ಅರ್ಥದಲ್ಲಿ ಸ್ವೀಕರಿಸಿದರೆ 'ಬ್ರಹ್ಮಾಪ್ಯೇತಿ' ಎಂಬುದರಿಂದ ವಿರೋಧವು ಬರುತ್ತದೆ. ಪ್ರಾಪ್ಯಪ್ರಾಪಕಭಾವವಿರಬೇಕಾದರೆ ವಸ್ತುಗಳಲ್ಲಿ ಭೇದವಿರಬೇಕು. ಅದಿಲ್ಲವಾದರೆ ಪ್ರಾಪ್ತಿಯು ಕೂಡುವುದಿಲ್ಲ. ಮತ್ತು ಬೇರೆ ಪ್ರಮಾಣಗಳಿಂದ ವಿರೋಧವು ಬರುತ್ತದೆ. ಆದ್ದರಿಂದ ಬ್ರಹ್ಮಶಬ್ದಕ್ಕೆ ಪರಬ್ರಹ್ಮ ಎಂದು ಅರ್ಥೈಸಬಾರದು.

भावदीपः – **अप्रत्यक्षत्वेनेति** ।। यद्यपि –

> **प्रेरकः सर्वजीवानां प्राणधीचोदिता च सः ।**
> **विष्णुः संसारिणोऽन्यो यस्तमविज्ञाय मूढधीः ।**
> **देहेन्द्रियप्राणबुद्धिनेतृत्वं मन्यतेन्मनः ।।**

इति तत्वनिर्णयटीकायां देहादिप्रेरकत्वरूपभगवल्लक्षणस्याहङ्कारादिवशेन सर्वैरप्यात्मनो मन्यमानत्वाल्लक्षणाभिमानस्यैव ऐक्याभिमानत्वमित्याभिमानिकैक्यप्राप्तिरुक्ता । तथापि स्पष्टमात्मनि ब्रह्मतादात्म्याध्यासो नेति भावेनैवमुक्तिः ।

**श्रुत्यर्थेति** ।। 'स्वामित्वादिरूपार्थे'त्यर्थः । **श्रुतिविरोधस्त्विति** ।। 'तद्भेदस्य' इत्यनुकर्षः । **प्राप्तिविरोधादिति** ।। **प्राप्तृप्राप्यभावस्य** भेदव्याप्तत्वादिति भावः । **प्रमाणान्तरेति** ।। मुक्तौ भेदबोधकोदाहृतोदाहरिष्यमाणप्रमाणान्तरेत्यर्थः ।

> ಪ್ರೇರಕಃ ಸರ್ವಜೀವಾನಾಂ ಪ್ರಾಣಧೀಚೋದಿತಾ ಚ ಸಃ।
> ವಿಷ್ಣುಃ ಸಂಸಾರಿಣೋಽನ್ಯೋ ಯಸ್ತಮವಿಜ್ಞಾಯ ಮೂಢಧೀಃ।
> ದೇಹೇಂದ್ರಿಯಪ್ರಾಣಬುದ್ಧಿನೇತೃತ್ವಂ ಮನ್ಯತೇನ್ಮನಃ॥'

ಎಲ್ಲಾ ಜೀವಿಗಳಿಗೂ ಪ್ರೇರಕನಾಗಿದ್ದು, ಪ್ರಾಣ ಮತ್ತು ಬುದ್ಧಿಗಳನ್ನು ಪ್ರೇರಣೆ ಮಾಡುವ ಆ ವಿಷ್ಣುವು ಸಂಸಾರಿಗಿಂತ ಅನ್ಯನಾಗಿದ್ದಾನೆ. ಆದರೆ ಮೂಢಬುದ್ಧಿಯುಳ್ಳ ಜೀವನು ದೇಹ ಇಂದ್ರಿಯ ಪ್ರಾಣ ಹಾಗೂ ಬುದ್ಧಿಗಳ ಪ್ರೇರಕತ್ವವನ್ನು ತನ್ನಲ್ಲೇ ತಿಳಿಯುತ್ತಾನೆ. ಎಂಬ ರೀತಿಯಲ್ಲಿ ತತ್ವನಿರ್ಣಯಟೀಕೆಯಲ್ಲಿ ದೇಹಾದಿಪ್ರೇರಕತ್ವರೂಪವಾದ ಭಗವಂತನ ಲಕ್ಷಣವನ್ನು ಅಹಂಕಾರಾದಿಗಳಿಂದ ಎಲ್ಲರೂ ಕೂಡ ತನ್ನಲ್ಲಿಯೇ ತಿಳಿಯುವುದರಿಂದ ಭಗವಂತನ ಲಕ್ಷಣವಾದ ದೇಹೇಂದ್ರಿಯಪ್ರಾಣಬುದ್ಧಿನೇತೃತ್ವರೂಪವನ್ನು ತನ್ನಲ್ಲಿ

ತಿಳಿದುಕೊಳ್ಳುವ ಪ್ರಯುಕ್ತ ಐಕ್ಯಾಭಿಮಾನಿತ್ವ ಇರುವುದರಿಂದ ಅಭಿಮಾನಿಕವಾದ ಅದ್ವೈತಪ್ರಾಪ್ತಿಯು ಹೇಳಲ್ಪಟ್ಟಿದೆ. ಹಾಗಾಗಿ ಅದ್ವೈತವು ಅಪ್ರತ್ಯಕ್ಷ ಹೇಗೆ? ಎಂಬ ಶಂಕೆ ಬಂದರೂ ಸ್ಪಷ್ಟವಾಗಿ ಆತ್ಮನಲ್ಲಿ ಬ್ರಹ್ಮನ ತಾದಾತ್ಮ್ಯದ ಅಧ್ಯಾಸವು ಇಲ್ಲದೇ ಇರುವುದರಿಂದ ಅದ್ವೈತವು ಅಪ್ರತ್ಯಕ್ಷ ಎಂಬ ಅಭಿಪ್ರಾಯವನ್ನು ಸೂಚಿಸಲು ''ಅಪ್ರತ್ಯಕ್ಷತ್ವೇನ'' ಎಂದು ಹೇಳಿದ್ದಾರೆ.

''ಶ್ರುತ್ಯರ್ಥ'' ಎಂಬ ಪದಕ್ಕೆ 'ಸ್ವಾಮಿತ್ವಾದಿರೂಪವಾದ ಅರ್ಥ' ಎಂದು ಅರ್ಥ. 'ಶ್ರುತಿವಿರೋಧಿಸ್ತು' ಎಂಬ ಭಾಗದಿಂದ ಜೀವಪರಮಾತ್ಮರ ಭೇದಕ್ಕೆ 'ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' ಇತ್ಯಾದಿ ಶ್ರುತಿಯ ವಿರೋಧವು ಬರಬಹುದು ಎಂಬ ಅರ್ಥವನ್ನು ಇಟ್ಟುಕೊಳ್ಳಬೇಕು. ''ಪ್ರಾಪ್ತಿವಿರೋಧಾತ್'' ಎಂಬ ಟೀಕಾಭಾಗಕ್ಕೆ ಪ್ರಾಪ್ಯಪ್ರಾಪ್ಯಭಾವಕ್ಕೆ ಭೇದವೇ ನಿಯಾಮಕವಾಗಿರುವುದರಿಂದ ಈ ವಿರೋಧದಿಂದ ಭೇದವನ್ನು ಒಪ್ಪಿಕೊಳ್ಳಬೇಕು ಎಂದು ಅಭಿಪ್ರಾಯ. ''ಪ್ರಮಾಣಾಂತರ'' ಎಂಬ ಪದಕ್ಕೆ 'ಮುಕ್ತಿಯಲ್ಲಿ ಭೇದವನ್ನು ತಿಳಿಸುವ ಈ ಹಿಂದೆ ಉದಾಹರಿಸಿದ ಮತ್ತು ಮುಂದೆ ಉದಾಹರಿಸಲಿರುವ ಬೇರೆ ಪ್ರಮಾಣಗಳ ವಿರೋಧ' ಎಂದು ಅರ್ಥ.

**वाक्यार्थमञ्जरी– तस्याप्रत्यक्षत्वेनेति** ।। ईश्वरधर्मिकेश्वरप्रतियोगिकस्य चैक्यस्येश्वराप्रत्यक्षत्वेनाप्रत्यक्षत्वादित्यर्थः । अनुमानं तु न स्वातंत्र्येण प्रवर्तत इति भावः ॥ **श्रुत्यर्थेति** ।। ऐक्यश्रुतेर्योर्थः स्वामित्वादिरूपः तदपरिज्ञानेनेत्यर्थः ॥ **प्रप्तिविरोधादिति** ।। प्राप्तृप्राप्ययोर्भेदव्याप्तत्वादितिभावः ॥ **प्रमाणांतरेति** ।। भेदश्रुतीत्यर्थः ।

'ತಸ್ಯಾಪ್ರತ್ಯಕ್ಷತ್ವೇನ' ಎಂದರೆ ಈಶ್ವರಧರ್ಮಿಕವಾದ ಮತ್ತು ಈಶ್ವರಪ್ರತಿಯೋಗಿಕವಾದ ಐಕ್ಯವು ಈಶ್ವರನ ಪ್ರತ್ಯಕ್ಷಕ್ಕೆ ಅವಿಷಯವಾದ್ದರಿಂದ ಅಪ್ರತ್ಯಕ್ಷವಾಗಿದೆ. ಅನುಮಾನವಾದರೂ ಸ್ವತಂತ್ರವಾಗಿ ಪ್ರವೃತ್ತವಾಗುವುದಿಲ್ಲ ಎಂದು ಭಾವ. 'ಶ್ರುತ್ಯರ್ಥ' ಎಂದರೆ ಐಕ್ಯಶ್ರುತಿಗೆ ಸ್ವಾಮಿತ್ವವೇ ಮೊದಲಾದ ಯಾವ ಅರ್ಥವಿದೆಯೋ ಅದರ ಪರಿಜ್ಞಾನವಿಲ್ಲದಿರುವುದೆಂದರ್ಥ. 'ಪ್ರಾಪ್ತಿವಿರೋಧಾತ್' ಎಂದರೆ ಪ್ರಾಪ್ತೃ ಮತ್ತು ಪ್ರಾಪ್ಯಗಳು ಭೇದವ್ಯಾಪ್ತವಾಗಿವೆ ಎಂದು ಭಾವ. 'ಪ್ರಮಾಣಾಂತರಃ' ಎಂದರೆ ಭೇದಶ್ರುತಿ ಎಂದರ್ಥ.

• • • • •

### ಸಂಸಾರಬಂಧನ ಅಜ್ಞಾನಮೂಲಕ

**भाष्यम्– प्रमादात्मकत्वाद् बन्धस्य विमुक्तत्वं च युज्यते ।**
**'मुक्तिर्हित्वाऽन्यथा रूपं स्वरूपेण व्यवस्थितिः ।।'**
**इति हि भागवते ।**

ಸಂಸಾರಬಂಧನವು ಅಜ್ಞಾನಮೂಲಕವಾದ್ದರಿಂದ ಸ್ವಾಭಾವಿಕವಲ್ಲ. ಆದ್ದರಿಂದ ಸಂಸಾರವಿರುವಾಗಲೇ ಮೋಕ್ಷವನ್ನು ಜೀವನಿಗೆ ಹೇಳಬಹುದು.

'ಅಸ್ವಾಭಾವಿಕವಾದ ಸ್ವರೂಪವನ್ನು ಕಳಚಿ ಸ್ವಾಭಾವಿಕವಾದ ಸ್ವರೂಪವನ್ನು ಹೊಂದು

-ವುದೇ ಮೋಕ್ಷ' ಎಂದು ಭಾಗವತವು ಹೇಳಿದ್ದರಿಂದ ಜೀವರ ಸಂಸಾರ-ಬಂಧನವು ಅಸ್ವಾಭಾವಿಕವೆಂದು ತಿಳಿಯುತ್ತದೆ.

ಪ್ರತಿಪದಾರ್ಥ– ಇಷ್ಟು ಹೇಳಿದರೂ ಸಹ ಭೇದವ್ಯಪದೇಶಕ್ಕೆ 'ವಿಮುಕ್ತಶ್ಚ ವಿಮುಚ್ಯತೇ' ಎಂಬ ಕಠಶ್ರುತಿಯ ವಿರೋಧವು ಬರುತ್ತದೆ. ಏಕೆಂದರೆ ಈ ಶ್ರುತಿಯಲ್ಲಿ ಸಂಸಾರಕಾಲದಲ್ಲಿಯೂ ಜೀವನಿಗೆ ಮುಕ್ತಿಯೆಂದು ಹೇಳಲಾಗಿದೆ. ಜೀವನನ್ನು ಬ್ರಹ್ಮಸ್ವರೂಪವೆಂದು ಹೇಳದಿದ್ದಲ್ಲಿ ಇದು ಕೂಡುವುದಿಲ್ಲವೆಂಬ ಶಂಕೆಗೆ ಉತ್ತರಿಸುತ್ತಿದ್ದಾರೆ(೧).

ಬಂಧಸ್ಯ = ಸಂಸಾರಬಂಧನಕ್ಕೆ, ಪ್ರಮಾದಾತ್ಮಕತ್ವಾತ್ = ಅಜ್ಞಾನಸ್ವರೂಪವನ್ನು ಹೇಳಿದ್ದರಿಂದ, ವಿಮುಕ್ತತ್ವಂ ಚ = ಮೋಕ್ಷವಚನವು, ಯುಜ್ಯತೇ = ಕೂಡುತ್ತದೆ. ಅದ್ದರಿಂದಲೇ ಭಾಗವತದಲ್ಲಿ; ಮುಕ್ತಿಃ = ಮೋಕ್ಷವೆಂದರೆ, ಅನ್ಯಥಾ ರೂಪಂ = ಅಸ್ವಾಭಾವಿಕವಾದ ಸ್ವರೂಪವನ್ನು, ಹಿತ್ವಾ = ಕಳಚಿ, ಸ್ವರೂಪೇಣ = ಸ್ವಾಭಾವಿಕರೂಪದಿಂದ, ವ್ಯವಸ್ಥಿತಿಃ = ಇರುವಿಕೆ. ಇತಿ = ಹೀಗೆ, ಭಾಗವತೇ ಹಿ = ಭಾಗವತದಲ್ಲಿ ಹೇಳಲ್ಪಟ್ಟದೆಯಷ್ಟೆ.

---

(१) भावदीपिका– ननु तथाऽपि भेदव्यपदेशस्य 'विमुक्तश्च विमुच्यते' (कठ.२.५.१) इति कठश्रुतिविरोधः । अत्र संसारेऽपि जीवस्य मुक्तत्वोक्त्या तदन्यथाऽनुपपत्त्या पर-ब्रह्मत्वावगमाद् इत्यत आह - प्रमादेति ।। चशब्दोऽप्यर्थे समुच्चये च । तथा 'च' अपि - जीवस्य परब्रह्मत्वाभावेऽपि विमुक्तत्वं विमुक्तत्ववचनं युज्यते । न केवलं ब्रह्मशब्द उपपद्यत इति चार्थः । कथम्? 'बन्धस्य' स्वतःकर्तृत्वभोक्तृत्वाभिमानरूपस्य जीवगतसंसारस्य 'प्रमादात्मकत्वात्' प्रमादपदोक्ताज्ञानमूलत्वेन तन्निमित्तप्रतीतिकत्वेना-स्वाभाविकत्वाद् अस्वाभाविके चाविद्यमानपदप्रयोगदर्शनादित्यर्थः । अतो न तद्विरोध इति भावः । बन्धस्याज्ञानमूलत्वं च -

'उभे सत्ये क्षत्रियाद्य प्रवृत्ते मोहो मृत्युः सङ्गतो यं कवीनाम् ।
प्रमादं वै मृत्युमहं ब्रवीमि तथाऽप्रमादादमृतत्वं ब्रवीमि ।।' (महाभारते सनत्सुजातीयम्)

इति तत्त्वप्रदीपन्यायामृतोदाहृतभारतवचनसिद्धं धृतराष्ट्रं प्रति सनत्सुजातवाक्यमेतत् । हे क्षत्रियाद्य ! 'मृत्युः' संसारतदभावरूपामृतत्वं चेत्युभे अपि सत्ये एव प्रवृत्ते । तयोर्मध्ये 'मृत्युः' मोहः अज्ञानाधीनस्तन्मूलः । तर्हि मिथ्या स्यादित्यतो नेत्याह - प्रमादं वा इति ।। अहं 'मृत्युं' संसारं 'प्रमादं' अस्वाभाविकं ब्रवीमि । अमृतत्वं मुक्तत्वं त्वप्रमादात् प्रमादापायाद् ब्रवीमीत्यर्थः।

बन्धस्यास्वाभाविकत्वं कुतः सिद्धमित्यत आह – मुक्तिरिति ।। 'अन्यथारूपम्' अस्वाभाविकं रूपं 'हित्वा' त्यक्त्वा 'स्वरूपेण' निजरूपेणावस्थितिरेव मुक्तिरित्यर्थः । भागवत इत्यस्य प्रमादात्मकत्वोक्तेरित्यनेनान्वयः ।।१७।।

**तत्वप्रकाशिका – ननु विस्मृतकण्ठमणिरपि स्मृतकण्ठमणिरित्येवोच्यते, न तु प्राप्तमणिरिति, 'परमं साम्यमुपैति' इत्यादावप्राप्तभोगादेरपि प्राप्त्युक्तेः । ननु संसारिणोऽपि 'विमुक्तश्च विमुच्यते' इति विमुक्तत्वश्रवणात् तदन्यथानुपपत्त्या तस्य परब्रह्मत्वसिद्धेस्तद्विरोधो भेदाभिधानस्येत्यत आह – प्रमादेति ।। जीवस्य परब्रह्मत्वाभावेऽपि विमुक्तत्वोक्तिर्युज्यते, तद्गतबन्धस्याज्ञानमूलत्वेनास्वाभाविकत्वात् । अस्वाभाविके चाविद्यमानप्रयोगदर्शनादिति भावः । बन्धस्यास्वाभाविकत्वं कुतः? इत्यत आह – मुक्तिरिति[१] ।। १७ ।।**

ಲೋಕದಲ್ಲಿ ಕಂಡ ದೃಷ್ಟಾಂತದಂತೆ ಸ್ವತಃ ಸರವನ್ನು ಧರಿಸಿ, ತಾನು ಸರವನ್ನು ಧರಿಸಿದ್ದೇನೆ ಎಂಬುದನ್ನು ಮರೆತು ಹೋದಾಗ ಸರವಿಲ್ಲವೆಂದುಕೊಳ್ಳುತ್ತಾನೆ. ಸ್ವಲ್ಪ ಸಮಯವಾದ ನಂರ ತಾನು ಧರಿಸಿದ ಮಣಿಯ ನೆನಪು ಬಂದಾಗ ಮೊದಲೇ ಆ ಸರ ಕುತ್ತಿಗೆಯಲ್ಲಿ ಇದ್ದರೂ ಮರೆತಿದ್ದರಿಂದ ಈಗ ಸರವು ಪ್ರಾಪ್ತವಾಯಿತು ಎಂದು ವ್ಯವಹಾರ ಮಾಡುತ್ತಾನೆ. ಅದರಂತೆ ಬ್ರಹ್ಮನೇ ಆಗಿದ್ದರೂ ಅಜ್ಞಾನವಶಾತ್ ಬ್ರಹ್ಮಭಾವವನ್ನು ಮರೆತು ಅನಂತರ ಬ್ರಹ್ಮಭಾವವನ್ನು ಸ್ಮರಣೆಗೆ ತಂದುಕೊಳ್ಳುವುದೇ ಬ್ರಹ್ಮಪ್ರಾಪ್ತಿ ಎಂದಿಟ್ಟುಕೊಂಡಾಗ ಯಾವ ದೋಷವೂ ಇಲ್ಲವಲ್ಲ? ಇದು ತಪ್ಪು. ಸ್ಮೃತವಾದ ಸರವನ್ನು ಸ್ಮೃತಸರ ಎಂದೇ ವ್ಯವಹಾರ ಮಾಡುತ್ತಾರೆ ಹೊರತು ಪ್ರಾಪ್ತಸರ ಎಂದಲ್ಲ. ಹಾಗಾಗಿ ಆದರ ದೃಷ್ಟಾಂತಕೂಡುವುದಿಲ್ಲ. ಮತ್ತು 'ಪರಮಂ ಸಾಮ್ಯಮುಪೈತಿ' ಎಂಬಲ್ಲಿ ಮೊದಲೇ ಪ್ರಾಪ್ತವಲ್ಲದ ಭೋಗಗಳು ಪ್ರಾಪ್ತವಾಗುತ್ತವೆ ಎಂದು ಹೇಳಿದೆ.

'ವಿಮುಕ್ತಶ್ಚ ವಿಮುಚ್ಯತೇ' ಎಂಬ ಶ್ರುತಿಯಲ್ಲಿ ಸಂಸಾರಿಯನ್ನು (ವಿಮುಕ್ತ) ಎಂದು ಹೇಳಿದೆ. ಸಂಸಾರಿಯು ಮುಕ್ತನಾಗಬೇಕಾದರೆ ಪರಬ್ರಹ್ಮನೆಂದೇ ಹೇಳಬೇಕು. ಹಾಗಾಗಿ ಹಿಂದೆ ಹೇಳಿದ ವಿರೋಧವು ಇದ್ದೇ ಇದೆಯಲ್ಲವೆ? ಎಂದರೆ ''ಪ್ರಮಾದ'' ಎಂಬುದರಿಂದ ಉತ್ತರಿಸುತ್ತಾರೆ. ಜೀವನು ಪರಬ್ರಹ್ಮನಾಗಿದ್ದಾನೆಂದು ಹೇಳದಿದ್ದರೂ ವಿಮುಕ್ತತ್ವವೂ ಸಂಸಾರಿ ಜೀವರುಗಳಿಗೆ ಕೂಡುತ್ತದೆ. ಜೀವನಿಗಿರುವ ಬಂಧವು ಸ್ವಾಭಾವಿಕವಲ್ಲ. ಕಿಂತು ಅಸ್ವಾಭಾವಿಕವಾಗಿದೆ. ಅಸ್ವಾಭಾವಿಕವಾದದ್ದನ್ನು 'ಅವಿದ್ಯಮಾನ' ಎಂದು ಪ್ರಯೋಗಿಸುತ್ತಾರೆ. ಹಾಗಾಗಿ 'ವಿಮುಕ್ತ' ಎಂದು ಜೀವನನ್ನು ಕರೆಯಬಹುದು.

---

(१) सर्वथाऽनुपनीते शूद्रेऽब्राह्मणत्वोक्तिवत् कदाचिदनुपनीते ब्राह्मणकुमारेऽनुपनीतत्वोपाधिकतात्कालिकाब्राह्मणत्वसद्भावेऽपि अब्राह्मणत्वोक्तेरदर्शनादिति भावेनोक्तम् – अस्वाभाविके इति ।। (–गुर्वर्थदीपिका)

* अत्र भोगपदेन स्त्रीभिर्वा यानैर्वा इत्युक्तवनितादिविषयभोगः । आदिपदेन निर्दुःखत्वलिङ्गध्वंसयोर्ग्रहणम् । – (वाक्यार्थमुक्तावली)

ಆದರೆ ಬಂಧವು ಅಸ್ವಾಭಾವಿಕ ಎನ್ನಲು ಏನು ಪ್ರಮಾಣ? ಎಂದರೆ ''ಮುಕ್ತ'' ಎನ್ನುವುದರಿಂದ ಉತ್ತರಿಸುತ್ತಾರೆ.

भावदीपः – ननु प्राग् विद्यमानस्यैव ब्रह्मभावस्य विस्मृतस्य पश्चात् स्मृत्या तथात्वेन प्राप्तिव्यपदेशः' इत्यत आह – ननु विस्मृतेति ।। 'ननु' इत्यस्य 'इत्येवोच्यते ननु' इत्यन्वयः । ननु –

**यदा पश्यः पश्यते रुग्मवर्णं कर्तारमीशं पुरुषं ब्रह्मयोनिम् ।**
**तदा विद्वान् पुण्यपापे विधूय निरञ्जनः परमं साम्यमुपैति ।।**

इत्याथर्वणे पुंस्त्वादिवत्त्वस्य सतोऽभिव्यक्तियोगात् इति भाष्योक्तदिशा प्राक् सत एव ज्ञानानन्दादिरूपसाम्यस्य मुक्तावविद्यानिवृत्तिरूपाभिव्यक्त्या यथा साम्यमुपैति इत्युक्तिः तद्वदस्तु 'ब्रह्माप्येति' इत्युक्तिरित्यत आह – **परममिति** ।।

ಇಲ್ಲಿ ಹೀಗೊಂದು ಶಂಕೆ ಬರಬಹುದು. ಮೊದಲು ಇರುವ ಬ್ರಹ್ಮಭಾವವೇ ಕಾರಣಾಂತರದಿಂದ ಮರೆತು ಹೋಗಿದ್ದು ನಂತರ ಅದು ಸ್ಮರಣೆ ಬಂದಾಗ ಬ್ರಹ್ಮಭಾವವು ಪ್ರಾಪ್ತವಾಯಿತು ಎಂಬ ವ್ಯವಹಾರವನ್ನು ಶ್ರುತಿಯಲ್ಲಿ ಮಾಡಲಾಗಿದೆ. ಈ ಶಂಕೆಗೆ ಉತ್ತರವಾಗಿ ''ನನು ವಿಸ್ಮೃತ'' ಇತ್ಯಾದಿವಾಕ್ಯ ಹೊರಟಿದೆ. ಇಲ್ಲಿರುವ ನನು ಎಂಬ ಶಬ್ದಕ್ಕೆ 'ಇತ್ಯೇವ ಉಚ್ಯತೇ ನನು' ಎಂಬುದಾಗಿ ಅನ್ವಯ.

ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ।
ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥''

ಆಥರ್ವಣೋಪನಿಷತ್ತಿನಲ್ಲಿ 'ಯದಾ ಪಶ್ಯತಿ' ಇತ್ಯಾದಿಮಂತ್ರವ್ಯಾಖ್ಯಾನಸಂದರ್ಭದಲ್ಲಿ 'ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್' ಎಂಬುದಾಗಿ ಭಾಷ್ಯದಲ್ಲಿ ಹೇಳಿರುವಂತೆ ಜ್ಞಾನಾನಂದಾದಿರೂಪಸಾಮ್ಯವು ಮೊದಲೇ ಇದ್ದರೂ ಮುಕ್ತಿಯಲ್ಲಿ ಅವಿದ್ಯಾನಿವೃತ್ತಿರೂಪವಾದ ಅಭಿವ್ಯಕ್ತಿ ಉಂಟಾದಾಗ 'ಸಾಮ್ಯಮುಪೈತಿ' ಎಂಬುದಾಗಿ ಹೇಗೆ ಹೇಳಿದ್ದಾರೋ ಅದೇ ರೀತಿ 'ಬ್ರಹ್ಮಾಪ್ಯೇತಿ' ಎಂಬಲ್ಲೂ ಕೂಡ ಹೇಳಬಹುದಲ್ಲವೇ? ಎಂಬುದಕ್ಕೆ ಉತ್ತರವಾಗಿ ''ಪರಮಮ್'' ಇತ್ಯಾದಿ ವಾಕ್ಯವನ್ನು ಉದಾಹರಿಸಿದ್ದಾರೆ.

भावदीपः – **अप्राप्तभोगादेरिति** ।। 'सम्पद्याविहाय स्वेन शब्दात्' इत्यादिना चतुर्थे वक्ष्यमाणदिशा 'स तत्र पर्येति जक्षन् क्रीडन् रममाणः स्त्रीभिर्वा यानैर्वा' इत्युक्त्या वनितादिविषयभोगस्य तदभिव्यक्तानन्दानुभवस्य च प्रागप्राप्तस्यैव प्राप्त्युक्तेरित्यर्थः । विवृतमेतत् जिज्ञासाधिकरणे –

**'अज्ञानां ज्ञानदो विष्णुर्ज्ञानिनां मोक्षदश्च सः ।**
**आनन्ददश्च मुक्तानाम् .......... '** इत्यत्र सुधायाम् ।

"ಅಪ್ರಾಪ್ತಭೋಗಾದೇಃ'' ಎಂಬ ಟೀಕಾಭಾಗದಿಂದ 'ಸಂಪದ್ಯಾವಿಹಾಯ ಸ್ವೇನ ಶಬ್ದಾತ್' ಎಂಬ ನಾಲ್ಕನೇ ಅಧ್ಯಾಯದ ಸೂತ್ರದಲ್ಲಿ ಮುಂದೆ ವಿವರಿಸಲಿರುವಂತೆ 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ' ಎಂಬ ಶ್ರುತಿಯಲ್ಲಿ ವನಿತಾದಿವಿಷಯಭೋಗಕ್ಕೆ ಮತ್ತು ಅದರಿಂದ ಅಭಿವ್ಯಕ್ತವಾದ ಆನಂದಾನುಭವಕ್ಕೆ ಪ್ರಾಪ್ತಿಯನ್ನು ಹೇಳಿದ್ದು ಅದು ಹಿಂದೆ ಅಪ್ರಾಪ್ತವಾಗಿದ್ದರೂ ಪ್ರಾಪ್ತವಾಗುತ್ತದೆ ಎಂದು ಸ್ಪಷ್ಟಪಡಿಸುವುದಕ್ಕಾಗಿ 'ಪರಮಂ ಸಾಮ್ಯಮ್' ಎಂಬ ಶಬ್ದವನ್ನು ಬಳಸಿದ್ದಾರೆ ಎಂದು ಅರ್ಥ. ಈ ವಿಷಯವನ್ನು ಜಿಜ್ಞಾಸಾಧಿಕರಣದಲ್ಲಿ

'ಅಜ್ಞಾನಾಂ ಜ್ಞಾನದೋ ವಿಷ್ಣುರ್ಜ್ಞಾನಿನಾಂ ಮೋಕ್ಷದಶ್ಚ ಸಃ ।
ಆನಂದದಶ್ಚ ಮುಕ್ತಾನಾಮ್ .....'

ಎಂಬ ವಾಕ್ಯವ್ಯಾಖ್ಯಾನದ ಸಂದರ್ಭದಲ್ಲಿ ಸುಧಾದಲ್ಲಿ ವಿವರಿಸಿದ್ದಾರೆ.

**भावदीपः – ननु चानन्दः स्वरूपमेव । स चाविद्यानिवृत्तौ स्वतः सिद्ध एव । अनुभवोप्येवमेव । विषयत्वमप्यनुभवस्वरूपमेव नत्वागन्तुको धर्मः । अतो मोक्षदानात् कथं पृथगानन्ददानम्? इति । उच्यते । परमेश्वरशक्तिरेव जीवस्वरूपावरणं मुख्यम् अविद्या तु निमित्तमात्रम् । ततोऽविद्यायां निवृत्तायामपि नाशेषानन्दाभिव्यक्तिर्यावदीश्वर एव स्वकीयां बन्धकशक्तिं ततो न व्यावर्तयति । अत एवानन्दह्रासवृद्धी वक्ष्येते इति । तथा च तदपेक्षया 'परमं साम्यमुपैति' इत्युक्तिरिति भावः । 'मोहो मृत्युः सम्मतोऽयं कवीनां प्रमादं वै मृत्युमहं ब्रवीमीति तत्वप्रदीपोक्तभारतवाक्यात् प्रमादशब्दोऽज्ञानपर्याय इति भावेनोक्तम् – अज्ञानमूलत्वेनेति ।।**

ಇಲ್ಲಿ ಹೀಗೊಂದು ಶಂಕೆ ಬರಬಹುದು -- ಆನಂದವು ಜೀವನ ಸ್ವರೂಪವೇ ಆಗಿದೆ. ಆ ಸ್ವರೂಪವು ಆವರಣರೂಪವಾದ ಅವಿದ್ಯೆಯು ನಿವೃತ್ತವಾದಾಗ ಸ್ವಾಭಾವಿಕವಾಗಿಯೇ ಸಿದ್ಧವಾಗುತ್ತದೆ. ಅನುಭವವೂ ಕೂಡ ಹೀಗೆಯೇ ಇದೆ. ಆನಂದವಿಷಯತ್ವವೂ ಕೂಡ ಆನಂದಾನುಭವಸ್ವರೂಪವೇ ಆಗಿದ್ದು, ಅದು ಇನ್ನಾವುದರಿಂದಲೋ ಬರಬಹುದಾದ ಧರ್ಮವಲ್ಲ. ಆದ್ದರಿಂದ ಮೋಕ್ಷವನ್ನು ಕೊಡುವ ಭಗವಂತನು ಪ್ರತ್ಯೇಕವಾಗಿ ಆನಂದವನ್ನು ಕೊಡುವುದು ಹೇಗೆ? -- ಎಂದು. ಇದಕ್ಕೆ ಉತ್ತರವನ್ನು ಹೀಗೆ ಹೇಳಬಹುದು. ಜೀವಸ್ವರೂಪಕ್ಕೆ ಆವರಣವಾಗಿ ಇರುವಂತಹದ್ದು ಮುಖ್ಯವಾಗಿ ಭಗವಂತನ ಶಕ್ತಿಯೇ ಆಗಿದೆ. ಅಜ್ಞಾನವು ಕೇವಲ ನಿಮಿತ್ತಮಾತ್ರ. ಆದ್ದರಿಂದ ಅಜ್ಞಾನವು ನಿವೃತ್ತವಾದರೂ ಭಗವಂತನು ತನ್ನ ಬಂಧಕಶಕ್ತಿಯನ್ನು ಜೀವನಿಂದ ಹಿಂದೆಗೆದುಕೊಳ್ಳುವ ತನಕ ಜೀವನಲ್ಲಿರುವ ಆನಂದದ ಅಭಿವ್ಯಕ್ತಿಯು ಸಂಪೂರ್ಣವಾಗಿ ಆಗಲಾರದು. ಆದ್ದರಿಂದಲೇನೇ ಮೋಕ್ಷದಲ್ಲಿ ಆನಂದಹ್ರಾಸವನ್ನು ಆನಂದವೃದ್ಧಿಯನ್ನೂ ಹೇಳಿದ್ದಾರೆ. ಹಾಗಾಗಿ ಭಗವಂತನು ತನ್ನ ಬಂಧಕಶಕ್ತಿಯನ್ನು ಹಿಂತೆಗೆದುಕೊಳ್ಳುತ್ತಾನೆ ಎಂಬ ಅರ್ಥವನ್ನು ತಿಳಿಸಲು 'ಪರಮಂ ಸಾಮ್ಯಮುಪೈತಿ' ಎಂದು ಹೇಳಿದ್ದಾರೆ.

"ಪ್ರಮಾದಾತ್ಮಕತ್ವಾತ್ ಬಂಧಸ್ಯ" ಎಂಬಲ್ಲಿ 'ಮೋಹೋ ಮೃತ್ಯುಃ ಸಮ್ಮತೋಽಯಂ ಕವೀನಾಂ ಪ್ರಮಾದಂ ವೈ ಮೃತ್ಯುಮಹಂ ಬ್ರವೀಮಿ' ಎಂಬ ತತ್ವಪ್ರದೀಪದಲ್ಲಿ ಉದಾಹರಿಸಿದ ಮಹಾಭಾರತವಾಕ್ಯದಿಂದ ಪ್ರಮಾದಶಬ್ದಕ್ಕೆ ಅಜ್ಞಾನ ಎಂಬ ಅರ್ಥವನ್ನು ಗ್ರಹಿಸಿಕೊಂಡು "ಅಜ್ಞಾನಮೂಲತ್ವೇನ" ಎಂಬುದಾಗಿ ಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

**वाक्यार्थमञ्जरी–** ननु जीवस्य परब्रह्मत्वेऽपि न तत्प्राप्तिकथनं विरुद्धं । पूर्वमज्ञातब्रह्मत्वो जीवः स्वस्य विद्यमानं ब्रह्मत्वं जानातीत्यभिप्रायेण प्राप्तिकथनोपपत्तेः यथा कश्चिद्विस्मृतस्वकंठ-स्थितमणिः पूर्वमेव विद्यमानकंठमणिज्ञानाल्लब्धकंठमणिरित्युच्यते इत्यत आह – ननु विस्मृतकंठम णिरिति इत्येवोच्यते नन्विति संबंधः । तथा च ज्ञानाभिप्राये ब्रह्मजानातीत्येव निर्देशःस्यान्नप्राप्नोतीति भावः । ननु परमं साम्ययुपैतीत्यत्र यथा प्रागपि विद्यमानस्यैव साम्यस्य प्राप्तिरुच्यते तथा प्रागपिविद्यमानस्य ब्रह्मत्वस्य प्राप्तिरुच्यतामित्यत आह – **परमं साम्यमुपैतीति** ।। **विमुक्तश्चेति** । प्राङ्मुक्तएव मुक्तो भवतीत्यर्थः ॥ **तदन्यथानुपपत्त्येति** ।। जीवस्य परब्रह्मत्वे खलु अबद्धे तस्मिन्बंधस्य मिथ्यात्वात्प्रागपिमुक्तव्यवहारः संभवतीति भावः ॥ **बंधस्याज्ञान-मूलत्वेनेति** ।। अनादिबंधस्याज्ञानाधीनत्वं चाद्वैतानां अविद्याधीनजीवब्रह्मविभागवत्तार्किकानां च गुणवत्वाधीनद्रव्यत्ववदनादेरपीश्वराधीनत्वोपपत्तेरिति सुधोक्तरीत्या ध्येयम् ॥ **दर्शनादिति** ।। जपाकुसुमसन्निधिवशात्- स्फटिके प्रतीयमानस्यापि लौहित्यस्य तत्राविद्यमानत्व व्यवहार-दर्शनादित्यर्थः ॥ **आहेति** ।। तत्र बंधस्यान्यथारूपमित्यस्वाभाविकत्वस्मरणादिति भावः ॥

**विमतानीति** ।। यद्यप्यनेन जीवानामन्योन्याभेदः सिध्यति । न ब्रह्मैक्यं तथापि विशिष्ट-रूपस्यैक्यायोगेन शुद्धस्यैक्ये वाच्ये शुद्धस्यैव ब्रह्मत्वाद् ब्रह्मैक्यमपि सिध्यतीति भावः । भाष्ये तत्र भेदोक्तौ तदनुमानविरोधः ऐक्यानुमानविरोध इत्यर्थः ॥

ಜೀವನು ಪರಬ್ರಹ್ಮನಾಗಿದ್ದರೂ ಸಹ ಅವನು ಪರಬ್ರಹ್ಮನನ್ನು ಹೊಂದುತ್ತಾನೆಂದು ಹೇಳಿದರೆ ವಿರುದ್ಧವಾಗುವುದಿಲ್ಲ. ಏಕೆಂದರೆ ಪೂರ್ವದಲ್ಲಿ ಜೀವನು ತನ್ನಲ್ಲಿರುವ ಬ್ರಹ್ಮತ್ವವನ್ನು ತಿಳಿದಿರುವುದಿಲ್ಲ. ಬ್ರಹ್ಮನನ್ನು ಹೊಂದುತ್ತಾನೆಂದರೆ ತನ್ನಲ್ಲಿರುವ ಬ್ರಹ್ಮತ್ವವನ್ನು ತಿಳಿಯುತ್ತಾನೆಂದರ್ಥ. ಆದ್ದರಿಂದ ಯಾವ ವಿರೋಧವೂ ಇಲ್ಲ. ಯಾವರೀತಿಯಾಗಿ ಒಬ್ಬ ಪುರುಷನು ತನ್ನ ಕುತ್ತಿಗೆಯಲ್ಲಿ ಇದ್ದ ಸರವನ್ನು ಮರೆತು, ಪುನಃ ನೆನಪಾದಾಗ ನನಗೆ ನನ್ನ ಸರ ಸಿಕ್ಕಿತು ಎಂದು ಹೇಳುತ್ತಾನೆಯೋ ಅದೇ ರೀತಿಯಾಗಿ ತಿಳಿಯಬೇಕು. ಈ ಶಂಕೆಯ ಪರಿಹಾರವನ್ನು 'ನನು ವಿಸ್ಮೃತಕಂಠಮಣಿಃ ಇತ್ಯೇವೋಚ್ಯತೇ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಆದ್ದರಿಂದ ಬ್ರಹ್ಮಜ್ಞಾನದ ಅಭಿಪ್ರಾಯವಿದ್ದಲ್ಲಿ 'ಬ್ರಹ್ಮಜಾನಾತಿ' ಎಂದು ನಿರ್ದೇಶ ಮಾಡಬೇಕಿತ್ತು ಹೊರತಾಗಿ 'ಪ್ರಾಪ್ನೋತಿ' ಎಂದು ಹೇಳಬಾರದಾಗಿತ್ತು.

ಆಕ್ಷೇಪ - 'ಪರಮಂ ಸಾಮ್ಯಮುಪೈತಿ' ಎಂಬಲ್ಲಿ ಯಾವ ರೀತಿಯಾಗಿ ಹಿಂದೆ ಇರುವಂತಹ ಸಾಮ್ಯಕ್ಕೇನೇ ಪ್ರಾಪ್ತಿಯನ್ನು ಹೇಳುತ್ತಾರೋ, ಅದರಂತೆ ಪೂರ್ವದಲ್ಲಿಯೇ ಇದ್ದ ಬ್ರಹ್ಮತ್ವಕ್ಕೇನೆ

ಪ್ರಾಪ್ತಿಯನ್ನು ಹೇಳಿದ್ದಾರೆಂದು ಏಕೆ ಹೇಳಬಾರದು? ಎಂದರೆ ಉತ್ತರವನ್ನು 'ಪರಮಂ ಸಾಮ್ಯ-ಮುಪೈತಿ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

'ವಿಮುಕ್ತಶ್ಚ' ಎಂದರೆ ಪೂರ್ವದಲ್ಲಿಯೇ ಮುಕ್ತರಾದವರು ಮುಕ್ತರಾಗುತ್ತಾರೆ ಎಂದರ್ಥ.

'ತದನ್ಯಥಾನುಪಪತ್ತ್ಯಾ' ಎಂದರೆ ಜೀವನಿಗೆ ಪರಬ್ರಹ್ಮತ್ವವನ್ನು ಹೇಳಿದರಷ್ಟೇ ಅಬದ್ಧನಾದವನಲ್ಲಿ ಬಂಧವು ಮಿಥ್ಯಾಭೂತವಾಗಿರುವುದರಿಂದ ಪೂರ್ವದಲ್ಲಿಯೇ ಮುಕ್ತನಾಗಿದ್ದಾನೆಂಬ ವ್ಯವಹಾರವು ಕೂಡುತ್ತದೆಂದು ಭಾವ.

'ಬಂಧಸ್ಯಾಜ್ಞಾನಮೂಲತ್ವೇನ' ಎಂದು ಇದೆ. ಇದರ ಅಭಿಪ್ರಾಯ ಅನಾದಿಯಾದ ಬಂಧವು ಅಜ್ಞಾನದ ಅಧೀನ ಹೇಗಾಗುತ್ತದೆಂದರೆ ಅದ್ವೈತಿಗಳು ಹೇಳುವಂತೆ ಜೀವಬ್ರಹ್ಮರ ವಿಭಾಗವು ಅಜ್ಞಾನಾಧೀನವಾಗುವಂತೆ ತಾರ್ಕಿಕರು ಹೇಳುವಂತೆ ದ್ರವ್ಯತ್ವವು ಗುಣವತ್ವದ ಅಧೀನವಾಗುವಂತೆ ತಿಳಿಯಬೇಕು. ಇದನ್ನು ಸುಧೆಯಲ್ಲಿ ಹೇಳಿದ ರೀತಿಯಾಗಿ ತಿಳಿಯಬೇಕು.

'ದರ್ಶನಾತ್' ಎಂದರೆ ಸ್ಫಟಿಕಮಣಿಯಲ್ಲಿ ಇಲ್ಲದೆ ಇರುವ ಕೆಂಪು ಬಣ್ಣವು ಜಪಾಕುಸುಮದ (ದಾಸವಾಳದ ಹೂ) ಹತ್ತಿರವಿರುವುದರಿಂದ ತೋರುವಂತೆ ಎಂದರ್ಥ.

'ಆಹ' ಎಂದು ಇದೆ. ಇದರ ಅಭಿಪ್ರಾಯ ಮುಕ್ತರಾದವರಿಗೆ ಬಂಧವು ಅಸ್ವಾಭಾವಿಕವೆಂದು ಸ್ಮರಣೆ ಬರುತ್ತದೆ ಎಂದು ಭಾವ.

# श्रीपद्मनाभतीर्थविरचितसत्तर्कदीपावलिः

**ॐ भेदव्यपदेशात् ॐ ॥ १७ ॥**

अतोऽप्यत्र हिरण्यगर्भादिभ्योऽन्य एवानन्दमयः परमात्मा प्रतिपाद्यते तेभ्यस्तस्य भेदव्यपदेशादित्येतमर्थं प्रतिपादयत्सूत्रमुपन्यस्य व्याचष्टे – **भेदेत्यादिना** । अयमर्थः 'ते ये शतं प्रजापतेरानन्दाः स एको ब्रह्मणः आनन्दः' इति परिमितानन्दत्वेन निर्दिष्टेभ्यो हिरण्यगर्भादिभ्योऽपरिमितानन्दत्वेन आनन्दमयस्य भेदं व्यपदिशति । 'यतो वाचो निवर्तन्ते । अप्राप्य मनसा सह । आनन्दं ब्रह्मणो विद्वान्' इति श्रुतिः । 'यदा ह्येवैष एतस्मिन्नदृश्येऽनात्म्येऽनिरुक्तेऽनिलयनेऽभयं प्रतिष्ठां विन्दते' इत्यनेन । तत्राप्यानन्दमयोऽदृश्यत्वेन स्वामिरहित्वेनानिरुक्तत्वेन सामस्त्ये-नाश्रयरहितत्वेन प्रकृत्यादिप्रपञ्चाद्भिन्नः । जीवो ध्यानरूपां निष्ठां लब्ध्वा तमेव प्राप्नोतीति व्यपदिश्यते । अतो ब्रह्मादिजीवेभ्य आनन्दमयस्य भेदः सिध्यति । 'स यश्चायं पुरुषे यश्चासावादित्ये स एकः' इत्यादिना स एक इत्यनेन आनन्दमयस्य मनुष्यादित्वोपलक्षितोत्कृष्टापकृष्टजीवेभ्यो नियम्येभ्यस्तदन्तर्यामितया भेदोऽप्युप-दिश्यते । अत्र जीवपरमात्माभेदवाक्यविरोधशङ्कां प्रमाणेनैव परिहरति – न

चेत्यादिना । अयमर्थः । तत्वमस्याद्यभेदव्यपदेशमात्रेण दुःखिजीवस्य परमात्माभेदे पृथिव्यादेरपि जडस्य तेनाभेदः स्यात् । 'सर्वं खल्विदं ब्रह्म' इति वाक्यात् । ततश्च दुःखित्वजडत्वादि दोषः परमात्मनोपि स्यात् । 'नेति नेति' इत्यादिवाक्यवैय्यर्थ्यं च स्यात् अतो 'नामानि सर्वाणि यमाविशन्ति' इति श्रुत्या सर्वपदवाच्यो विष्णुरित्युक्तत्वात् तत्त्वमस्यादिवाक्यगतपदैस्तत्वागुणयोगाद्विष्णुरुच्यते। न तु तस्य जीवादिभिरभेद इत्यङ्गीकरणीयम् । अभेदव्यपदेशमात्रेणाभेदे ग्रामो नामायमिति ग्रामाधिपतेः ग्रामस्य सामानाधिकरण्ये ग्रामाभेदः स्यात् । 'इदं हि विश्वं भगवानिवेतरः असर्वः सर्व' इत्यनेनापि पुराणगतवचनेन सर्वपरमात्मव्यतिरिक्तमपि परमात्माधीनत्वात्परमात्माभिन्नमिव वक्तुं शक्यमित्युच्यते । जीवपरमात्मभेदस्य काल्पनिकत्वे 'विद्यात्मनि भिदा बोधः' इत्यनेन भागवतवचनेन विरोधः स्यात् । न च जीवेशभेदज्ञानस्यानर्थहेतुत्वादविद्यामयत्वमिति वाच्यम् ।

आद्यः स्थिरचराणां यो वेदगर्भः सहर्षिभिः ।
भेददृष्ट्याभिमानेन निःसङ्गेनापि कर्मणा ।

कर्तृत्वात्सगुणं ब्रह्म इत्यादिभागवतवचनविरोधात् । 'जुष्टं यदा पश्यत्यन्यमीशमस्य महिमानमिति वीतशोकः' इत्यादिश्रुतिविरोधाच्च । अत्र जीवेश्वरभेदज्ञानस्य परमपुरुषार्थसाधनत्वावगमात् । भारतेऽपि जीवपरमात्मैक्यं निषिद्धम् । 'बहवः पुरुषा ब्रह्मन्नुताहो एक एव तु' इतिप्रश्नस्य 'नैतदिच्छन्ति पुरुषमेकं कुरुकुलोद्वह' इति परिहारश्रवणात् । असर्वः सर्व इव सर्वान्तर्यामिक इत्येतद्वचनोक्तप्रकारेण जीवाद्यभेदवचनं योजयितव्यम् । 'ब्रह्मैव सन् बह्माप्येति' इत्येषा श्रुतिः न जीवेशभेदं निषेद्धुं शक्नोति । गौणवृत्त्या जीवे ब्रह्मशब्दसम्भवात् । मुख्यार्थे विरोधे गौण्या वृत्तेरुपपद्यमानत्वात् । न हि नित्यमुक्तत्वादिलक्षण-ब्रह्मभावः । संसारिणो जीवस्य न विरुध्यते । मुख्यतो ब्रह्मत्वे जीवस्य ब्रह्माप्येतीति ब्रह्मप्राप्तिश्रवणविरोधाश्च स्यात् । 'जीवो न मुक्तश्चेद्विमुक्तश्च विमुच्यते' इति श्रुतिः कथं युज्यते? इत्यत आह – **प्रमादकत्वादिति** । विमतो भेदो मिथ्या भेदत्वाच्चन्द्रभेदवत् ।

ಮತ್ತೊಂದು ಕಾರಣದಿಂದಲೂ ಆನಂದಮಯಶಬ್ದದಿಂದ ಚತುರ್ಮುಖಾದಿಗಳಿಗಿಂತಲೂ ಭಿನ್ನನಾದ ಪರಮಾತ್ಮನೇ ಪ್ರತಿಪಾದಿಸಲ್ಪಡುತ್ತಾನೆ. ಏಕೆಂದರೆ ಚತುರ್ಮುಖಾದಿಗಳಿಂದ ಪರಮಾತ್ಮನಿಗೆ ಭೇದವನ್ನು ಶ್ರುತಿಯಲ್ಲಿ ಹೇಳಿದೆ ಎಂಬ ವಿಷಯವನ್ನು ಪ್ರತಿಪಾದಿಸುವ ಸೂತ್ರವನ್ನು ಹೇಳಿ ವ್ಯಾಖ್ಯಾನಮಾಡುತ್ತಾರೆ 'ಭೇದ' ಎನ್ನುವುದರಿಂದ. ಇದರ ಅಭಿಪ್ರಾಯ ಹೀಗಿದೆ ? 'ತೇ ಯೇ ಶತಂ ಪ್ರಜಾಪತೇರಾನಂದಾಃ ಸ ಏಕೋ ಬ್ರಹ್ಮಣ ಆನಂದಃ' ಎಂದು ಪರಿಮಿತವಾದ ಆನಂದವುಳ್ಳವರು ಎಂದು ಹೇಳಿದ ಚತುರ್ಮುಖ ಬ್ರಹ್ಮಾದಿಗಳಿಗಿಂತ ಆನಂದಮಯನು ಅಪರಿಮಿತ ಆನಂದವುಳ್ಳವನು ಎಂದು 'ಶ್ರುತಿಯು ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್' ಎಂದು ಭೇದವನ್ನು ಹೇಳುತ್ತದೆ.

ಮತ್ತು "ಯದಾ ಹ್ಯೇವೈಷಃ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಅಭಯಂ ಪ್ರತಿಷ್ಠಾಂ ವಿಂದತೇ" ಎನ್ನುವುದರಿಂದ ಅದರಲ್ಲಿಯು ಆನಂದಮಯನು ಅದೃಶ್ಯನಾಗಿದ್ದಾನೆ, ಸ್ವಾಮಿರಹಿತನಾಗಿದ್ದಾನೆ, ಅನಿರುಕ್ತನಾಗಿದ್ದಾನೆ ಯಾವುದೇರೀತಿಯಾದ ಆಶ್ರಯರಹಿತನಾಗಿದ್ದಾನೆ. ಆದ್ದರಿಂದ ಅವೆಲ್ಲವುಳ್ಳ ಪ್ರಕೃತ್ಯಾದಿಗಳಿಗಿಂತ ಭಿನ್ನನಾಗಿದ್ದಾನೆ ಎಂದು ತಿಳಿಯುತ್ತದೆ. ಜೀವನು ಧ್ಯಾನರೂಪವಾದ ಸ್ಥಿತಿಯನ್ನು ಹೊಂದಿ ಆ ಭಗವಂತನನ್ನೇ ಹೊಂದುತ್ತಾನೆ ಎಂದು ವ್ಯವಹರಿಸುತ್ತಾರೆ ಆದ್ದರಿಂದ ಚತುರ್ಮುಖಾದಿ ಜೀವರಿಂದ ಆನಂದಮಯನಿಗೆ ಭೇದವು ಸಿದ್ಧವಾಗುತ್ತದೆ. 'ಸ ಯಶ್ಚಾಯಂ ಪುರುಷೇ' ಯಶ್ಚಾಸಾವಾದಿತ್ಯೇ' 'ಸ ಏಕಃ' ಇದೇಮೊದಲಾದುದರಿಂದ ನಿಯಮ್ಯರಾದ ಮನುಷ್ಯ ಮತ್ತು ಆದಿತ್ಯ ಈ ಪದಗಳಿಂದ ಉಪಲಕ್ಷಿತವಾದ ಉತ್ಕೃಷ್ಟ ಜೀವ ಮತ್ತು ಅಪಕೃಷ್ಟ ಜೀವರುಗಳು ಇವರುಗಳಿಂದ ಅವರಂತರ್ಯಾಮಿಯಾದ್ದರಿಂದ ಆನಂದಮಯನಿಗೆ ಭೇದವೂ ಕೂಡ ಹೇಳಿದಂತಾಗುತ್ತದೆ.

ಜೀವ ಪರಮಾತ್ಮನಿಗೆ ಅಭೇದವನ್ನು ಹೇಳುವ ಶ್ರುತಿಯ ವಿರೋಧ ಬರುತ್ತದೆ ಎಂಬ ಸಂದೇಹಬಂದರೆ ಪ್ರಮಾಣ ವಾಕ್ಯದಿಂದ ಪರಿಹಾರಮಾಡುತ್ತಾರೆ 'ನ ಚ ' ಎನ್ನುವುದರಿಂದ.

ಇದರ ಅಭಿಪ್ರಾಯ ಹೀಗಿದೆ? 'ತತ್ತ್ವಮಸಿ' ಎಂದು ಶ್ರುತಿಯಲ್ಲಿ ಅಭೇದದ ಉಪದೇಶವಿದೆ ಎನ್ನುವ ಮಾತ್ರದಿಂದ ದುಃಖಿಯಾದ ಜೀವನಿಗೆ ಪರಮಾತ್ಮನ ಅಭೇದವನ್ನು ಹೇಳುವುದಾದರೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಶ್ರುತಿ ಇರುವುದರಿಂದ ಪೃಥಿವ್ಯಾದಿ ಜಡಪದಾರ್ಥಗಳಿಂದಲೂ ಅಭೇದವನ್ನು ಹೇಳಬೇಕಾದೀತು. ಹಾಗಾದಾಗ ಪರಮಾತ್ಮನಿಗೆ ದುಃಖಿತ್ವ ಬರುವಂತೆ ಜಡತ್ವರೂಪ ದೋಷವೂ ಬರಬೇಕಾದೀತು. ಆದ್ದರಿಂದ 'ನಾಮಾನಿ ಸರ್ವಾಣಿ ಯಮಾ ವಿಶಂತಿ' ಎಂಬ ಶ್ರುತಿಯಲ್ಲಿ ವಿಷ್ಣುವು ಸಕಲಪದವಾಚ್ಯ ಎಂದು ಹೇಳಿದ್ದರಿಂದ 'ತತ್ತ್ವಮಸಿ' ಮುಂತಾದ ವಾಕ್ಯಗಳಲ್ಲಿರುವ 'ತತ್, ತ್ವಂ' ಮುಂತಾದ ಪದಗಳಿಂದ ತತ್ತ್ವಾದಿಗುಣಗಳಿಂದ ಕೂಡಿರುವುದರಿಂದ ವಿಷ್ಣುವೇ ಹೇಳಲ್ಪಡುತ್ತಾನೆ ಹೊರತು ಜೀವಾದಿಗಳಿಂದ ಅಭೇದವು ಹೇಳಲ್ಪಡುತ್ತದೆ ಎನ್ನಬಾರದು. ಕೇವಲ ಅಭೇದ ವ್ಯಪದೇಶ

ಮಾತ್ರದಿಂದ ಅಭೇದವನ್ನು ಹೇಳುವುದಾದರೆ ಹಳ್ಳಿಯ ಮುಖ್ಯಸ್ಥನನ್ನು ಕುರಿತು ಹೇಳುವಾಗ 'ಹಳ್ಳಿಯೆಂದರೆ ಇವನೇ' ಎಂದು ಹಳ್ಳಿಗೂ ಹಳ್ಳಿಯ ಮುಖ್ಯಸ್ಥನಿಗೂ ಅಭೇದವನ್ನು ಹೇಳುವ ಒಂದೇ ವಿಭಕ್ತ್ಯಂತಪದಗಳಿಂದ ಹೇಳಿದ್ದರಿಂದ ಹಳ್ಳಿಗೂ ಹಳ್ಳಿಯಮುಖ್ಯಸ್ಥನಿಗೂ ಅಭೇದವನ್ನು ಹೇಳಬೇಕಾದೀತು .

'ಇದಂ ಹಿ ವಿಶ್ವಂ ಭಗವಾನಿವೇತರಃ' 'ಅಸರ್ವಃ ಸರ್ವಃ' ಎಂಬ ಪುರಾಣವಾಕ್ಯಗಳಿಂದ ಸಕಲವಸ್ತುಗಳು ಪರಮಾತ್ಮನಿಗಿಂತ ಭಿನ್ನನಾಗಿದ್ದರೂ ಪರಮಾತ್ಮನ ಅಧೀನವಾದ್ದರಿಂದ ಪರಮಾತ್ಮನಿಂದ ಅಭಿನ್ನವಾಗಿದೆ ಎಂದು ಹೇಳಲು ಸಾಧ್ಯ ಎಂದು ಹೇಳುತ್ತೇವೆ. ಜೀವಪರಮಾತ್ಮನ ಭೇದ ಕಾಲ್ಪನಿಕ ಎಂದು ಹೇಳಿದರೆ 'ವಿದ್ಯಾऽऽತ್ಮನಿ ಭಿದಾ ಬೋಧಃ' ಎಂಬ ಭಾಗವತ ವಾಕ್ಯದ ವಿರೋಧ ಬರುತ್ತದೆ ಜೀವರ ಭೇದಜ್ಞಾನವು ಅನರ್ಥಕ್ಕೆ ಕಾರಣವಾಗಿದೆಯಾದ್ದರಿಂದ ಅವಿದ್ಯಾರೂಪ ಎಂದರೆ

'ಆದ್ಯ ಸ್ಥಿರಚರಾಣಾಂ ಯೋ ವೇದಗರ್ಭ ಸಹರ್ಷಿಭಿಃ ।
ಭೇದದೃಷ್ಟ್ಯಾಭಿಮಾನೇನ ನಿಸಂಗೇನಾಪಿ ಕರ್ಮಣಾ ॥
ಕತೃತ್ವಾತ್ ಸಗುಣಮ್ ಬ್ರಹ್ಮ ——।'

ಇದೇ ಮೊದಲಾದ ಭಾಗವತವಾಕ್ಯದ ವಿರೋಧ ಬರುತ್ತದೆ. ಮತ್ತು 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಸ್ಯ ಮಹಿಮಾನಮಿತಿ ವೀತಶೋಕಃ' ಇದೇ ಮೊದಲಾದ ಶ್ರುತಿವಿರೋಧವೂ ಬರುತ್ತದೆ. ಈ ಪ್ರಮಾಣಗಳಲ್ಲಿ ಜೀವೇಶ್ವರಭೇದಜ್ಞಾನವೂ ಪರಮಪುರುಷಾರ್ಥಸಾಧನ ಎಂದು ತಿಳಿಯುತ್ತದೆ. ಮಹಾಭಾರತದಲ್ಲಿಯೂ ಜೀವಪರಮಾತ್ಮನ ಐಕ್ಯವನ್ನು ನಿಷೇಧ ಮಾಡಿದ್ದಾರೆ. 'ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು' ಎಂಬ ಪ್ರಶ್ನೆಗೆ 'ನೈತದಿಚ್ಛಂತಿ ಪುರುಷಂ ಏಕಂ ಕುರುಕುಲೋದ್ಭವ' ಎಂದು ಪರಿಹಾರವನ್ನು ಹೇಳಿದ್ದಾರೆ 'ಅಸರ್ವಃ ಸರ್ವ ಇವ ಸರ್ವಾಂತರ್ಯಾಮಿಕ' ಇದೇ ಮೊದಲಾದ ವಾಕ್ಯಗಳಲ್ಲಿ ಹೇಳಿದಂತೆ ಜೀವಾಭೇದವನ್ನು ಹೇಳುವ ವಾಕ್ಯವನ್ನು ಅರ್ಥೈಸಬೇಕು. 'ಬ್ರಹ್ಮೈವ ಸನ್ ಬ್ರಹ್ಮಾಪ್ನೋತಿ' ಎಂಬ ಶ್ರುತಿಯೂ ಕೂಡ ಜೀವೇಶಭೇದವನ್ನು ನಿಷೇಧಮಾಡುವುದಕ್ಕೆ ಶಕ್ತವಾಗುವುದಿಲ್ಲ. ಏಕೆಂದರೆ ಗೌಣೀವೃತ್ತಿಯಿಂದ ಜೀವನಲ್ಲಿಯೂ ಬ್ರಹ್ಮಶಬ್ದವು ಪ್ರಯೋಗದಲ್ಲಿದೆ. ಮುಖ್ಯಾರ್ಥಕ್ಕೆ ವಿರೋಧವಿದ್ದಾಗ ಗೌಣೀವೃತ್ತಿಯು ಕೂಡುತ್ತದೆ. (ಪ್ರಕೃತ 'ಬ್ರಹ್ಮೈವಸನ್'ಎಂಬಲ್ಲಿ ಬ್ರಹ್ಮಶಬ್ದ ಮುಖ್ಯಾರ್ಥವಾದ ನಿತ್ಯಮುಕ್ತ ಸ್ವರೂಪನಾದ ಬ್ರಹ್ಮಭಾವವನ್ನು ಸ್ವೀಕರಿಸಿದರೆ ಸಂಸಾರಿಯಾದ ಜೀವರಿಗೆ ಹೇಳಲು ಬರುವುದಿಲ್ಲವಾದ್ದರಿಂದ ಅಮುಖ್ಯಾರ್ಥವನ್ನೇ ಸ್ವೀಕರಿಸಬೇಕು) ಮತ್ತು ಇಲ್ಲಿ ಮುಖ್ಯಾರ್ಥವಾದ ಬ್ರಹ್ಮನನ್ನು ಸ್ವೀಕರಿಸಿದರೆ 'ಬ್ರಹ್ಮಾಪ್ಯೇತಿ' ಎಂದು ಹೇಳಿದ ಬ್ರಹ್ಮಪ್ರಾಪ್ತಿಯ ವಿರೋಧಬರುತ್ತದೆ. (ಬ್ರಹ್ಮನು ತನ್ನನ್ನು ತಾನು ಹೊಂದುತ್ತಾನೆ ಎಂದು ಹೇಳಿದಂತಾಗುತ್ತದೆ ಅದು ವಿರುದ್ಧ.)

ಜೀವನು ಮುಕ್ತನಲ್ಲ ಎಂದಾದರೆ 'ವಿಮುಕ್ತಶ್ಚ ವಿಮುಚ್ಯತೇ' ಎನ್ನುವ ಶ್ರುತಿಯು ಹೇಗೆ ಕೂಡುತ್ತದೆ ಎಂದರೆ 'ಪ್ರಮಾದಾತ್ಮಕತ್ವಾತ್' ಎಂದು ಹೇಳುತ್ತಾರೆ.

# ಬ್ರಹ್ಮಮೀಮಾಂಸಾಶಾಸ್ತ್ರ

**ॐ।। कामाच्च नानुमानापेक्षा ।।ॐ।।१८।।**

ಅನುವಾದ - ಅತೀಂದ್ರಿಯವಸ್ತುವನ್ನು ಸಮರ್ಥಿಸುವಾಗ ಅನುಮಾನವನ್ನು ಅಪೇಕ್ಷಿಸ-ಬಾರದು. ಏಕೆಂದರೆ ನಮ್ಮ ಬುದ್ಧಿಕೌಶಲದಿಂದ ಹೇಗೆ ಬೇಕಾದರೂ ಅನುಮಾನವನ್ನು ಮಾಡಬಹುದಾದ್ದರಿಂದ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕಾ

**सूत्रदीपिका** – अद्वैतश्रुत्यनुकूलानुमानस्याभावात् केवलानुमानस्य च कामात् इच्छामनुसृत्य प्रवृत्तत्वान्नानुमानापेक्षा अतीन्द्रियार्थविषये शुष्कानुमानापेक्षा न कार्या इत्यर्थः ।

'ಕಾಮಾಚ್ಚ' ಅದ್ವೈತಶ್ರುತಿಗೆ ಅನುಕೂಲವಾದ ಅನುಮಾನವೇ ಇಲ್ಲ. ಅದ್ವೈತಶ್ರುತಿಗೆ ಅನುಕೂಲವಾಗದ ಅನುಮಾನವನ್ನು ಹೇಳಿದರೆ ಅಂತಹ ಅನುಮಾನವು ಇಚ್ಛಾನುಸಾರಿಯಾದ್ದರಿಂದ ಪ್ರಮಾಣವಾಗುವುದಿಲ್ಲ. ಆದ್ದರಿಂದ ಅತೀಂದ್ರಿಯವಿಷಯದಲ್ಲಿ ಶುಷ್ಕವಾದ ಅನುಮಾನವನ್ನು ಅಪೇಕ್ಷಿಸಬಾರದು.

• • • • •

ಅನುಮಾ ಕಾಮಚಾರಿಣೀ

**भाष्यम्– न च तत्तदनुमानविरोधः ।**

**सू – ॐ ।। कामाच्च नानुमानापेक्षा ।। ॐ ।।१८।।**

**यथाकामं ह्यनुमातुं शक्यते । अतो न तत्त्वे पृथगनुमानमपेक्ष्यते ।**

ಚೇತನಭೇದಕ್ಕೆ ಐಕ್ಯಸಾಧಕ ಅನುಮಾನದಿಂದ ವಿರೋಧ ಬರುವುದಿಲ್ಲ.

ಏಕೆಂದರೆ ಅನುಮಾನವು ಕಾಮಚಾರಿಯಾದ್ದರಿಂದ ಅತೀಂದ್ರಿಯ ವಿಷಯದಲ್ಲಿ ಅದಕ್ಕೆ ಸಾಮರ್ಥ್ಯವಿಲ್ಲ. ಮನಸ್ಸಿಗೆ ಬಂದಂತೆ ಅನುಮಾನವನ್ನು ಪ್ರಯೋಗಿಸಬಹುದಾದ್ದರಿಂದ, ಶ್ರುತಿವಿರುದ್ಧವಾದ ಅನುಮಾನವನ್ನು ಪ್ರತ್ಯೇಕ ಪ್ರಮಾಣವೆಂದು ಪರಿಗಣಿಸಬಾರದು[१].

---

(१) भाष्यदीपिका– ननु भेदोक्तेः श्रुतिविरोधाभावेऽपि जीवो ब्रह्माभिन्नः चेतनत्वाद् ब्रह्मवत् । भेदो मिथ्या भेदत्वाद् चन्द्रभेदवत् । विमतानि शरीराणि मद्भोगायतनानि शरीरत्वात् मच्छरीरवत् । इत्यनुमानविरोधस्तु भविष्यतीत्यत आह - न चेति ।। चोऽविरोधसमुच्चये । तथा च न केवलं श्रुतिविरोधाभावः, किन्तु तस्याः भेदोक्तेः तेनाद्वैतपरिकल्पितानुमानेन विरोधोऽपि नेत्यर्थः । अनेन सौत्रश्चशब्दो व्याख्यातः ।

तत्र हेत्वाकाङ्क्षायां सूत्रमुपन्यस्य व्याचष्टे – कामादिति ।। 'हि' यतोऽभेदसाधनाय परोपन्यस्तम् 'अनुमानम्' अनुमानत्वेन पराभिमतं 'पृथक्' प्रत्यक्षादिविरुद्धं श्रुति-

ಪ್ರತಿಪದಾರ್ಥ– ಭೇದವಚನಕ್ಕೆ ಶ್ರುತಿವಿರೋಧವಿಲ್ಲದಿದ್ದರೂ ಅನುಮಾನದ ವಿರೋಧವಿದೆ. 'ಜೀವೋ ಬ್ರಹ್ಮಾಭಿನ್ನಃ ಚೇತನತ್ವಾದ್ ಬ್ರಹ್ಮವತ್' 'ಭೇದೋ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್, 'ವಿಮತಾನಿ ಶರೀರಾಣಿ ಮದ್ಭೋಗಾಯತನಾನಿ ಶರೀರತ್ವಾತ್ ಮಚ್ಛರೀರವತ್' ಇವೇ ಮೊದಲಾದ ಅನುಮಾನಗಳು ಭೇದವನ್ನು ವಿರೋಧಿಸುತ್ತವಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ತತ್ತ್ವೇ = ಆಯಾಯ ಭೇದಶ್ರುತಿಗಳಿಗೆ, ಅನುಮಾನವಿರೋಧಃ = ಅಭೇದಸಾಧಕ ಅನುಮಾನಗಳಿಂದ ವಿರೋಧವು, ನ ಚ = ಬರುವುದಿಲ್ಲ. ಏಕೆಂದರೆ,

ಅನುಮಾನಾಪೇಕ್ಷಾ = ಅತೀಂದ್ರಿಯಪದಾರ್ಥವಿಷಯದಲ್ಲಿ, ಸ್ವತಂತ್ರಾನುಮಾನದ ಅಪೇಕ್ಷೆಯು, ನ = ಕೂಡುವುದಿಲ್ಲ. ಏಕೆಂದರೆ, ಕಾಮಾಚ್ಚ = ಅನುಮಾನವು ಕಾಮಚಾರಿಯಾದ್ದರಿಂದ. ಯಥಾ ಕಾಮಂ = ಮನಸ್ಸಿಗೆ ಬಂದಂತೆ, ಅನುಮಾತುಂ = ಅನುಮಾನಮಾಡಲು, ಶಕ್ಯತೇ ಹಿ = ಸಾಧ್ಯವಾಗುತ್ತದಷ್ಟೇ. ಅತಃ = ಆ ಕಾರಣದಿಂದ, ತತ್ತ್ವೇ = ಭೇದವಿಷಯದಲ್ಲಿ, ಅನುಮಾನಂ = ಅನುಮಾನವನ್ನು, ಪೃಥಕ್ = ಪ್ರತ್ಯೇಕಪ್ರಮಾಣವೆಂದು, ನ ಅಪೇಕ್ಷತೇ = ಅಪೇಕ್ಷಿಸುವುದಿಲ್ಲ.

---

साहाय्यरहितं च अतः 'तत्त्वे' विषये ज्ञानोपलक्षकमेतत् । तत्त्वज्ञानार्थं 'नापेक्ष्यते' तत्त्वज्ञानकारणं१ न भवतीत्यर्थः । न चाप्रयोजकता । 'हि' यतः 'यथाकामं' यथेच्छम् ईश्वरो न स्वतन्त्रः चेतनत्वाद् देवदत्तवत् । जड आत्मा वस्तुत्वादित्यादिरूपेण न तत्त्वेऽतत्त्वेऽप्यनुमातुं शक्यते । अतोऽनेन प्रत्यक्षादिविरुद्धस्यापि प्रमाणत्वे चेतनत्व-वस्तुत्वादेरपि प्रमाणत्वं स्याद् अविशेषादिति विपक्षे बाधकतर्क उक्तो भवति । सूत्रे 'कामात्' इत्येकदेशोत्कीर्तनेन यथाकामादिति समग्रशब्दो लक्ष्यते ज्योतिश्शब्देन ज्योतिष्टोमशब्दवद् इत्याशयेन यथाकाममित्युक्तम् । हीत्यनेन पञ्चमी व्याख्याता । 'तत्त्वे' इत्यनेनास्मिन्नित्यस्याऽकर्षोऽध्याहारो वा ज्ञापितः । 'अनुमानम्' इत्यनेन 'नानुमा' इति भिन्नपदत्वं 'पृथक्' इत्यनेन नञो विरुद्धार्थकत्वमाश्रित्य 'नानुमा' इत्यैकपद्यं च सूचितम् । 'नापेक्ष्यते' इत्यनेन नशब्दघटितसमासमङ्गीकृत्य 'नापेक्षा' इत्यंशो व्याख्यातः । स्मृत्यनुसारेण सूत्रे भाष्ये च तत्त्वज्ञानासाधनत्वप्रकटनाय पराभिमतानुमाने साधनगोचरेच्छाविषयत्वनिषेधः ।

तथा चायं सूत्रार्थः - 'अनुमा' अनुमानत्वेन पराभिमतमभेदसाधकमनुमानम् 'अस्मिन् तत्त्वे' तत्त्वज्ञानार्थं 'नापेक्षा' न अपेक्षा यस्यां सा तथोक्ता तत्त्वज्ञानकारणं न भवति । कुत एतत्? यतः इयमनुमा 'नानुमा' प्रत्यक्षादिविरुद्धानुमा । तद्विरुद्धाऽपि सदनुमा किं न स्यात्? न स्यात् । कुतः? 'यथा कामात्' अस्याः । काम इच्छा, तदनुसारिप्रवृत्ति-मत्त्वात् । तथा च प्रत्यक्षादिविरुद्धाया अपि प्रामाण्ये उक्तरीत्याऽतत्त्वविषये प्रवृत्ताया अनुमाया अपि प्रामाण्यं स्यात्, अविशेषादिति भावः । यत एवमतो न द्वैतश्रुतेरनुमान-विरोधोऽपीति ।

**तत्वप्रकाशिका – ननु भेदोक्तेः श्रुत्यविरोधेऽपि 'विमतानि शरीराणि मद्भोगायतनानि शरीरत्वात्' इत्याद्यनुमानविरोधस्तु भविष्यतीत्यत आह – न चेति ।।**

**तत्र हेत्वाकाङ्क्षायां सूत्रमुपन्यस्य व्याचष्टे – कामाच्चेति ।। किमद्वैतं श्रुत्याद्यनुकूलेनानुमानेन साध्यते पृथगनुमानेन वा? नाद्यः, अद्वैतश्रुत्यादेरभावस्योक्तत्वात् । न द्वितीयः, पृथगनुमानस्य कामगामित्वेनादृष्टार्थविषयेऽनपेक्षिततयोक्तबाधकत्वायोगादिति भावः ।**

ನೀವು ಹೇಳುವ ಜೀವಬ್ರಹ್ಮರ ಭೇದಕ್ಕೆ ಅದ್ವೈತಶ್ರುತಿಯ ವಿರೋಧವಿಲ್ಲದಿರಬಹುದು, ಆದರೆ 'ವಿಮತಾನಿ ಶರೀರಾಣಿ ಮದ್ಭೋಗಾಯತನಾನಿ ಶರೀರತ್ವಾತ್' (ವಿವಾದವಿಷಯಭೂತವಾದ ಎಲ್ಲ ಶರೀರಗಳು ನನ್ನ ಭೋಗಕ್ಕೆ ಸಾಧನಗಳು, ಶರೀರವಾಗಿರುವುದರಿಂದ ನನ್ನ ಶರೀರದಂತೆ' ಎಂಬ ಅನುಮಾನದ ವಿರೋಧ ಬರುತ್ತದಲ್ಲವೇ ಎಂದರೆ, ''ನಚ'' ಎಂಬುದಾಗಿ ಉತ್ತರಿಸುತ್ತಾರೆ.

ಅನುಮಾನದ ವಿರೋಧ ಬಾರದಿರುವುದಕ್ಕೆ ಕಾರಣವೇನು? ಎಂಬ ಪ್ರಶ್ನೆ ಬಂದರೆ ಸೂತ್ರವನ್ನು ಹೇಳಿ, ವ್ಯಾಖ್ಯಾನ ಮಾಡುತ್ತಾರೆ - 'ಕಾಮಾಚ್ಚ' ಎನ್ನುವುದರಿಂದ. ನೀವು ಅದ್ವೈತವನ್ನು ಶ್ರುತ್ಯನುಗುಣವಾದ ಅನುಮಾನದಿಂದ ಸಾಧನೆ ಮಾಡುತ್ತೀರೋ? ಅಥವಾ ಶ್ರುತಿಸಹಾಯವಿಲ್ಲದ ಅನುಮಾನದಿಂದ ಸಾಧನೆ ಮಾಡುತ್ತೀರೋ? ಶ್ರುತಿಯ ಸಹಾಯವುಳ್ಳಂತಹ ಅನುಮಾನದಿಂದ ಎಂದು ಹೇಳಲು ಬರುವುದಿಲ್ಲ. ಆ ರೀತಿಯ ಶ್ರುತಿಯೇ ಇಲ್ಲವೆಂದು ಹೇಳಿದ್ದೇವೆ. ಪ್ರತ್ಯೇಕಾನುಮಾನದಿಂದ ಸಾಧನೆ ಮಾಡಲು ಬರುವುದಿಲ್ಲ. ಯಾವ ವಿಷಯದಲ್ಲಿ ಬೇಕಾದರೂ ಸ್ವತಂತ್ರಾನುಮಾನ ಮಾಡಲು ಬರುತ್ತದೆಯಾದ್ದರಿಂದ ಅದು ಪ್ರತ್ಯಕ್ಷವಿಲ್ಲದ ವಿಷಯದಲ್ಲಿ ಸಾಧಕವಾಗಲಾರದು. ಆದ್ದರಿಂದ ಅದರ ವಿರೋಧ ಹೇಳುವುದು ಸರಿಯಲ್ಲ ಎಂದು ಅಭಿಪ್ರಾಯ.

भावदीपः – ॐ कामाच्च नानुमानापेक्षा ॐ ।। श्रुत्यविरोधेऽपीति ।। प्रत्यक्षस्याप्रसक्त्या प्रत्यक्षाविरोध इत्यपि ध्येयम् । विमतानीति ।। यद्यप्यनेन जीवानामन्योन्यमैक्यं सिद्ध्यति न तु ब्रह्मैक्यं तथापि विशिष्टरूपस्यैक्यायोगेन शुद्धस्य शुद्धेनैक्ये वाच्ये शुद्धस्यैव ब्रह्मत्वाद् ब्रह्मैक्यं सेत्स्यतीति भावः । साक्षात् तदैक्यसाधकं तु 'विमता आत्मनः परमात्मनो न भिद्यन्ते आत्मत्वात् परमात्ववत्' इत्यादिपदोपात्तं बोध्यम् । शरीरत्वोक्तिस्तु 'विमतानि शरीराणि मद्भोगायतनानि यत्' इत्यनुभाष्योक्तत्वात् । त एव तत्र सुधायामाक्षिप्येत्थं समाहितम् ।

आत्मत्वानुमानं चोक्तम् । भाष्ये तत्तदित्यस्य तत् तत्र भेदोक्तावद्वैतानुमानविरोध इत्यर्थः ।

ಓಂ ಕಾಮಾಚ್ಚ ನಾನುಮಾನಾಪೇಕ್ಷಾ ಓಂ ॥ 'ಶ್ರುತ್ಯವಿರೋಧೇಪಿ' ಎಂಬ ಭಾಗದಿಂದ ಪ್ರತ್ಯಕ್ಷವು ಅಪ್ರಸಕ್ತವಾಗಿರುವುದರಿಂದ ಪ್ರತ್ಯಕ್ಷದ ವಿರೋಧವೂ ಇಲ್ಲ ಎಂದು ತಿಳಿಯಬೇಕು. "ವಿಮತಾನಿ" ಎಂಬುದಾಗಿ ಈ ಅನುಮಾನದಿಂದ ವಾಸ್ತವಿಕವಾಗಿ ಈವರೆಗೆ ಪರಸ್ಪರವಾಗಿ ಐಕ್ಯವು ಸಿದ್ಧವಾಗುತ್ತದೆಯೇ ವಿನಹ ಬ್ರಹ್ಮನೊಂದಿಗೆ ಐಕ್ಯವು ಸಿದ್ಧವಾಗುವುದಿಲ್ಲ. ಹಾಗಿದ್ದರೂ ವಿಶಿಷ್ಟರೂಪಗಳಿಗೆ ಪರಸ್ಪರ ಐಕ್ಯವು ಕೂಡದಿರುವುದರಿಂದ ಶುದ್ಧನಾದ ಜೀವನಿಗೆ ಶುದ್ಧನಾದ ಜೀವನಿಂದ ಐಕ್ಯವನ್ನು ಹೇಳಬೇಕಾಗಿದ್ದು ಶುದ್ಧನೇ ಬ್ರಹ್ಮನಾದುದರಿಂದ ಬ್ರಹ್ಮೈಕ್ಯವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ. ಸಾಕ್ಷಾತ್ತಾಗಿ ಬ್ರಹ್ಮನೊಂದಿಗೆ ಐಕ್ಯಸಾಧನೆಯನ್ನು ಮಾಡುವುದು ವಿಮತರಾದ ಆತ್ಮರುಗಳು ಆತ್ಮತ್ವ ಇರುವುದರಿಂದ ಪರಮಾತ್ಮನೊಂದಿಗೆ ಭೇದವುಳ್ಳವರಲ್ಲ ಪರಮಾತ್ಮನಂತೆ ಎಂಬ ಈ ಅನುಮಾನದಿಂದ ಆಗುತ್ತದೆ. ಈ ಅನುಮಾನವನ್ನು ಆದಿಪದದಿಂದ ಸಂಗ್ರಹಿಸಬೇಕು. ಅನುವ್ಯಾಖ್ಯಾನದಲ್ಲಿ 'ವಿಮತಾನಿ ಶರೀರಾಣಿ ಮದ್ಭೋಗಾಯತನಾನಿ ಯತ್' ಎಂಬುದಾಗಿ ಹೇಳಿರುವುದರಿಂದ ಶರೀರತ್ವಾನುಮಾನವನ್ನೇ ಇಲ್ಲಿ ಹೇಳಿದ್ದಾರೆ. ಆದ್ದರಿಂದಲೇ ಸುಧೆಯಲ್ಲಿ ಅದಕ್ಕೆ ಅನುಗುಣವಾಗಿ ಆಕ್ಷೇಪವನ್ನು ಹಾಗೂ ಸಮಾಧಾನವನ್ನು ಹೇಳಿದ್ದಾರೆ. ಆತ್ಮತ್ವಾನುಮಾನವನ್ನು ಈಗ ಇಲ್ಲೇ ಹೇಳಿದ್ದೇವೆ. ಭಾಷ್ಯದಲ್ಲಿ 'ನ ತತ್ತದನುಮಾನವಿರೋಧಃ' ಎಂಬಲ್ಲಿ 'ತತ್'ಶಬ್ದಕ್ಕೆ ತತ್ರ ಅಂದರೆ ಭೇದೋಕ್ತಿಯಲ್ಲಿ ಅದ್ವೈತಾನುಮಾನವಿರೋಧಃ ಎಂಬರ್ಥವನ್ನು ಗ್ರಹಿಸಿಕೊಳ್ಳಬೇಕು.

• • • • •

## ಒಣತರ್ಕದಿಂದ ತತ್ವಜ್ಞಾನ ದೊರೆಯದು

**भाष्यम्– उक्तं च स्कान्दे –**

**'यथाकामाऽनुमा यस्मात् तस्मात् साऽनपगा श्रुतेः ।**
**पूर्वापराविरोधाय चेष्यते नान्यथा क्वचित् ॥' इति ।**

**'नैषा तर्केण मतिरापनेया' (कठ. २-९.) इति च[१] ॥**

---

(१) भाष्यदीपिका– अत्रैव स्मृतिसम्मतिमाह – उक्तं चेति ॥ चः समुच्चये । न केवलं सूत्रकृता, स्कान्देऽप्युक्तमिति । किमुक्तमित्यतस्तत् पठति – यथेति ॥ पदार्थानतिवृत्त्यर्थोऽयं यथाशब्दः । लिङ्गमार्षम् । यद्वा - नायमव्ययीभावः, किन्त्वनतिक्रान्तः कामो ययेति बहुव्रीहिसमासः । प्रवर्तत इति शेषः । अपवृत्तं विरुद्धं गं गमनं यस्याः सा अपगा, न अपगा अनपगा इति विग्रहः । तथा च यस्मात् 'अनुमा' श्रुत्यादिविरुद्धं पृथगनुमानं 'यथाकामा' काममनतिक्रम्य प्रवर्तते । पुरुषेच्छानुसारेण प्रवृत्तिमतीति यावत् । तस्मात् 'श्रुतेरनपगा' श्रुत्यनुकूला तदविरुद्धैव सा 'पूर्वापराविरोधाय' श्रुतेः

ಈ ವಿಷಯದಲ್ಲಿ ಸ್ಕಾಂದಪುರಾಣದಲ್ಲಿ ಹೀಗಿದೆ -- "ಅನುಮಾನವು ಕಾಮಚಾರಿಯಾದ್ದರಿಂದ ಶ್ರುತಿಗೆ ಅನುಕೂಲವಾಗಿದ್ದಾಗ ಮಾತ್ರ ಪರಸ್ಪರವಿರೋಧಪರಿಹಾರಕ್ಕಾಗಿ ಪ್ರಮಾಣವಾಗುತ್ತದೆ. ಶ್ರುತಿಗೆ ವಿರುದ್ಧವಾದಲ್ಲಿ ಎಂದೂ ಪ್ರಮಾಣವಾಗುವುದಿಲ್ಲ.

"ಪರಬ್ರಹ್ಮನ ತತ್ವಜ್ಞಾನವನ್ನು ಅನುಮಾನದಿಂದ ಹೊಂದಲು ಸಾಧ್ಯವಿಲ್ಲ. ನಿರಾಕರಿಸಲೂ ಸಹ ಸಾಧ್ಯವಿಲ್ಲ" ಎಂದು ಕಠೋಪನಿಷತ್ತು ಇದನ್ನೇ ಹೇಳಿದೆ.

ಪ್ರತಿಪದಾರ್ಥ– ಹಿಂದೆ ಹೇಳಿದ ಪ್ರಮೇಯವಿಚಾರದಲ್ಲಿ ಸ್ಮೃತಿ ಹಾಗೂ ಶ್ರುತಿಗಳನ್ನು ಪ್ರಮಾಣಗಳನ್ನಾಗಿ ಉಲ್ಲೇಖಿಸುತ್ತಿದ್ದಾರೆ.

ಯಸ್ಮಾತ್ = ಯಾವಕಾರಣದಿಂದ, ಯಥಾ ಕಾಮಂ = ಮನಸ್ಸಿಗೆ ಬಂದಂತೆ, ಅನುಮಾ = ಅನುಮಾನಮಾಡಲು ಸಾಧ್ಯವಿದೆಯೋ, ತಸ್ಮಾತ್ = ಆ ಕಾರಣದಿಂದ, ಸ = ಆ ಅನುಮಾನವು, ಶ್ರುತೇಃ = ವೇದಗಳಿಗೆ, ಅನಪಗಾ = ವಿರುದ್ಧವಾಗುವುದಿಲ್ಲ. ಪೂರ್ವಾಪರಾವಿರೋಧಾಯ = ಪರಸ್ಪರ ಶ್ರುತಿಗಳಿಗೆ ವಿರೋಧವು ತೋರಿದಾಗ ಅದನ್ನು ಪರಿಹರಿಸಲು, ಕ್ವಚಿತ್ = ಕೆಲವೊಮ್ಮೆ, ಇಷ್ಯತೇ ಚ = ಉಪಯುಕ್ತವಾಗುತ್ತದೆ. ನಾನ್ಯಥಾ = ಸ್ವತಂತ್ರವಾಗಿ ಎಂದೂ ಪ್ರಮಾಣವಾಗುವುದಿಲ್ಲ" ಇತಿ = ಹೀಗೆ, ಸ್ಕಾಂದೇ = ಸ್ಕಾಂದಪುರಾಣದಲ್ಲಿ, ಉಕ್ತಂ ಚ = ಹೇಳಲ್ಪಟ್ಟಿದೆಯಷ್ಟೇ.

'ಮತಿಃ = ಬುದ್ಧಿಯು, ತರ್ಕೇಣ = ಯುಕ್ತಿಯಿಂದ, ನ ಆನೇಯಾ = ಹೊಂದಲು

---

पूर्वोत्तरवाक्यविरोधपरिहारार्थम् 'इष्यते' अपेक्ष्यते । न केवलमतीन्द्रियार्थतत्त्वनिश्चयायेति चशब्दार्थः । क्वचिदन्यथा चेद् यत्र श्रुत्याद्यानुकूल्यं तदविरोधः, पूर्वोत्तराविरोधश्च नास्ति तत्र साऽनुमा न मानत्वेनेष्यते मूलाभावात् प्रमाणविरोधात् प्रयोजनाभावाच्चेति योजना । यद्वा, श्रुतेरनपगाऽनुमा पूर्वोत्तराविरोधाय तत्त्वनिश्चयाय च कारणतयेष्यते । नान्यथा नान्या पृथगनुमा क्वचिद्वाक्येऽपि । कुतः ? यत् साऽनुमा केवलानुमा यथाकामा तस्मादिति योज्यम् । यथाकामानुमेत्येकं पदं वा । यथाकामा च साऽनुमेति विग्रहः । तथात्वे – यस्मादेषाऽनपगा न तस्मात् सा नोक्तफलार्थमपेक्ष्यते । 'अन्यथा' युक्तिं विना नेत्यावृत्त्याऽन्वयः । अत एव सुधायां 'यथायोग्याखिलज्ञता' इत्येकं पदमित्युक्तम् । इतिशब्दस्य स्कान्द इत्यनेनान्वयः ।

स्पष्टोक्तित्वात् प्रथमं स्मृतिमुपन्यस्यात्रैवार्थे श्रुतिसम्मतिं चाऽह - नैषेति ।। आऽपनेयेत्यत्र आ अपेति विच्छेदः । विरुद्धार्थयोरुपसर्गयोः क्रमेण सम्बन्धः । तथा च 'एषा' परब्रह्मविषया 'मतिः' शुष्कतर्केण 'आनेया' उत्पाद्या 'अपनेया' निराकार्या च न भवतीत्यर्थः । 'प्रोक्ताऽन्येन सुज्ञानाय प्रेष्ठ' इति वाक्यशेषः । प्रेष्ठेति नचिकेतसं प्रति यमस्य सम्बुद्धिः । 'अन्येन' अन्यत्वज्ञानिना जीवेश्वरादिभेदज्ञानिना भगवद्भक्त्यादिमतेति यावत् । आचार्येण 'प्रोक्ता' तदुपदेशाज्जाता 'सुज्ञानाय' स्यादित्यर्थः । इति चेति चः समुच्चये । तथा च इति कठश्रुतौ चोक्तमिति सम्बन्धः ।

ಸಾಧ್ಯವಿಲ್ಲ, ನ ಅಪನೇಯಾ = ನಿರಾಕರಿಸಲೂ ಸಾಧ್ಯವಿಲ್ಲ', ಇತಿ ಚ = ಹೀಗೆ ಕಾಠಕೋಪನಿಷತ್ತಿನಲ್ಲಿ ಹೇಳಲಾಗಿದೆ.

**तत्वप्रकाशिका – अत्रैव स्मृत्यादिसम्मतिमाह – उक्तं चेति ।। श्रुतेरनपगा तदनुकूला । एषा परब्रह्मविषयामतिस्तर्केणाऽऽनेया आपाद्या अपनेया निराकार्या च न भवतीत्यर्थः ।। १८ ।।**

ಈ ವಿಷಯದಲ್ಲಿ ಸ್ಮೃತಿಶ್ರುತಿಗಳನ್ನು ಹೇಳುತ್ತಾರೆ "ಉಕ್ತಂ ಚ" ಎನ್ನುವುದರಿಂದ. ಶ್ರುತೇರನಪಗಾ = ಶ್ರುತಿಗೆ ಅನುಕೂಲವಾದದ್ದು, ಏಷಾ = ಬ್ರಹ್ಮವಿಷಯಕವಾದ ಬುದ್ಧಿಯು, ತರ್ಕೇಣ = ಅನುಮಾನದಿಂದ, ಆನೇಯಾ = ತರಲು (ಸಾಧಿಸಲು) ಅಪನೇಯಾ = ನಿರಾಕರಿಸಲೂ ಬರುವುದಿಲ್ಲವೆಂದು ಅಭಿಪ್ರಾಯ.

**भावदीपः – उक्तत्वादिति ।। एतेनाद्वैतश्रुतीनामनेकधा सावकाशत्वोक्तेरुपयोगो दर्शितः । 'अतः' इत्यस्यार्थः 'पृथगनुमानस्य कामचारित्वेन' इति । तच्च विवृतं 'जड आत्मैव वस्तुत्वात्' इत्यादिनाऽनुभाष्ये । 'आपनेया' इत्यत्र आ अपेति विच्छिद्यार्थमाह – आनेयेत्यादिना ।। असाधकत्वाबाधकत्वयोर्द्वयोरप्युक्तेः श्रुत्युक्तिः । स्पष्टत्वात् स्मृत्युक्तिः । भाष्ये पूर्वापराविरोधाय च । पूर्वापरविरोधायैव इत्यर्थः ।।१८।।**

'ಉಕ್ತತ್ವಾತ್'' ಎಂಬ ವಾಕ್ಯಭಾಗದಿಂದ ಅದ್ವೈತಶ್ರುತಿಗಳಿಗೆ ಅನೇಕರೀತಿಯಿಂದ ಸಾವಕಾಶತ್ವವನ್ನು ಉಪಪಾದನೆ ಮಾಡಿರುವುದಕ್ಕೆ ಉಪಯೋಗವನ್ನು ತೋರಿಸಿದಂತೆ ಆಗುತ್ತದೆ. ಭಾಷ್ಯದಲ್ಲಿರುವ 'ಅತಃ'' ಎಂಬ ಪದದ ಅರ್ಥವನ್ನು 'ಪ್ರತ್ಯೇಕವಾಗಿ ಅನುಮಾನವು ಕಾಮಚಾರಿಯಾಗಿರುವುದರಿಂದ' ಎಂದು ವಿವರಿಸಿದ್ದಾರೆ. ಈ ಕಾಮಚಾರಿತ್ವವನ್ನು ಅನುವ್ಯಾಖ್ಯಾನದಲ್ಲಿ 'ಜಡ ಆತ್ಮೈವ ವಸ್ತುತ್ವಾತ್' ಇತ್ಯಾದಿಭಾಗದಿಂದ ವಿವರಿಸಿದ್ದಾರೆ. 'ಅಪನೇಯಾ' ಎಂಬ ಶ್ರುತಿಯಲ್ಲಿ ಆ, ಅಪ ಎಂಬುದಾಗಿ ಎರಡು ಉಪಸರ್ಗಗಳನ್ನು ಬಿಡಿಸಿಕೊಂಡು ಅರ್ಥ ಹೇಳಬೇಕು ಎಂಬುದನ್ನು "ಆನೇಯಾ" ಇತ್ಯಾದಿ ವಾಕ್ಯದಿಂದ ವಿವರಿಸಿದ್ದಾರೆ. ಇಲ್ಲಿ ಅಸಾಧಕತ್ವ ಮತ್ತು ಅಬಾಧಕತ್ವವನ್ನು ಎರಡನ್ನೂ ಶ್ರುತಿಯು ಹೇಳಿರುವುದರಿಂದ ಶ್ರುತಿಯನ್ನು ಉದಾಹರಿಸಿದ್ದಾರೆ. ಹೇಳಬೇಕಾದ ವಿಷಯವನ್ನು ಸ್ಪಷ್ಟವಾಗಿ ಹೇಳಿರುವುದರಿಂದ ಸ್ಮೃತಿಯನ್ನು ಉದಾಹರಿಸಿದ್ದಾರೆ. ಭಾಷ್ಯದಲ್ಲಿ ಉದಾಹರಿಸಿದ ವಾಕ್ಯದಲ್ಲಿ 'ಪೂರ್ವಾಪರಾವಿರೋಧಾಯ ಚ' ಎಂಬ ಭಾಗದಲ್ಲಿ ಚಶಬ್ದಕ್ಕೆ ಏವ ಎಂದು ಅರ್ಥಮಾಡುವ ಮೂಲಕ 'ಪೂರ್ವಾಪರಾವಿರೋಧಾಯ ಏವ' ಎಂಬರ್ಥವನ್ನು ಇಟ್ಟುಕೊಳ್ಳಬೇಕು.

**वाक्यार्थमञ्जरी– ॐ कामाच्चनानुमानापेक्षा ॐ** ।। चोवधारणे । अदृष्टेर्थे शुष्कानुमानापेक्षा न कार्या कुतः कामात् कामचारित्वादेवेत्यर्थः । **पृथगिति** ।। केवलेत्यर्थः ।।

**उक्तत्वादिति** ।। अनेनैतदर्थमेव न चतत्वमसीत्याद्युदूग्रंथप्रदर्शनामिति सूचितम् । आ अपेत्युपसर्गद्वयमित्याशयेनाह – **आनेयेति** ।।

॥ ಓಂ ಕಾಮಾಚ್ಚ ನಾನುಮಾನಾಪೇಕ್ಷಾ ॥

'ವಿಮತಾನಿ' ಎಂದು ಇದೆ. ಇದರ ಅಭಿಪ್ರಾಯ ಈ ಅನುಮಾನದಿಂದ ಜೀವರುಗಳಿಗೆ ಪರಸ್ಪರ ಅಭೇದವು ಸಿದ್ಧವಾಗುತ್ತದೆ. ಆದರೆ ಬ್ರಹ್ಮನಿಂದ ಐಕ್ಯವಲ್ಲ. ಆದರೂ ಸಹ ವಿಶಿಷ್ಟರೂಪದಿಂದ ಐಕ್ಯವನ್ನು ಹೇಳಲು ಬಾರದಿದ್ದರೂ, ಶುದ್ಧ ಐಕ್ಯವನ್ನು ಹೇಳಬಹುದು. ಶುದ್ಧನು ಬ್ರಹ್ಮನಾಗಿರುವುದರಿಂದ ಬ್ರಹ್ಮೈಕ್ಯವು ಸಿದ್ಧವಾಗುತ್ತದೆಂದು ಭಾವ. ಭಾಷ್ಯದಲ್ಲಿ ಜೀವಬ್ರಹ್ಮರಿಗೆ ಭೇದವನ್ನು ಹೇಳಿದರೆ 'ತದನುಮಾನವಿರೋಧಃ' ಎಂದು ಇದೆ. ಅಂದರೆ ಐಕ್ಯಾನುಮಾನದ ವಿರೋಧ ಬರುತ್ತದೆಂದರ್ಥ.

ಸೂತ್ರಾರ್ಥ - 'ಚ' ಕಾರವು ಅವಧಾರಾಣರ್ಥಕವಾಗಿದೆ. ಅತೀಂದ್ರಿಯ ಪದಾರ್ಥಗಳ ವಿಷಯದಲ್ಲಿ ಶುಷ್ಕವಾದ ಅನುಮಾನವನ್ನು ಅಪೇಕ್ಷೆ ಮಾಡಬಾರದು, ಏಕೆಂದರೆ 'ಕಾಮಾತ್' ಅನುಮಾನಗಳು ಇಚ್ಛಾನುಸಾರವಾಗಿರುವುದರಿಂದ ಎಂದರ್ಥ.

'ಪೃಥಗ್' ಎಂದರೆ ಕೇವಲ ಎಂದರ್ಥ. 'ಆ' ಮತ್ತು 'ಅಪ' ಎಂಬ ಎರಡು ಉಪಸರ್ಗದಿಂದ ಕೂಡಿದೆ ಎಂದು ತಿಳಿಸಲು 'ಆನೇಯ' ಎಂದು ಹೇಳಿದ್ದಾರೆ.

## श्रीपद्मनाभतीर्थविरचितसत्तर्कदीपावलिः

**ॐ कामाच नानुमानापेक्षा ॐ ।।१८।।**

जीव ईशेनाभिन्नश्चेतनत्वादीशवदित्याद्यनुमानं जीवेशभेदविरोधीत्येतन्निषेधत् सूत्रमुपन्यस्य व्याचष्टे **कामादित्यादिना** । जीवस्येशत्वमनुभवविरुद्धम् । ईशस्य जीवत्वं श्रुतिविरुद्धम् । एवं प्रत्यक्षादिप्रमाणविरोधान्नानुमानं जीवेशभेदं निषद्धुं शक्नोति ।

प्रमाणविरुद्धानुमानस्य प्रामाण्ये अग्निरनुष्णः पदार्थत्वादित्येतदनुमानस्यापि प्रामाण्यं स्यात् । अतोऽतीन्द्रियार्थे श्रुत्यङ्गत्वेनैवानुमानमुपादेयम् । न श्रुतिमपहायेत्यर्थः ।

'ಜೀವಃ ಈಶೇನಾಭಿನ್ನಃ ಚೇತನತ್ವಾತ್ ಈಶವತ್' (ಜೀವನು ಈಶ್ವರನಿಂದ ಅಭಿನ್ನನಾಗಿದ್ದಾನೆ ಚೇತನನಾದ್ದರಿಂದ ಈಶ್ವರನಂತೆ ಎಂಬ ಅನುಮಾನವು ಜೀವೇಶ್ವರರ ಭೇದಕ್ಕೆ ವಿರೋಧಿಯಾಗುತ್ತದೆ ಎಂದರೆ ಅದನ್ನು ನಿಷೇಧಿಸುವ ಸೂತ್ರವನ್ನು ಹೇಳಿ ವ್ಯಾಖ್ಯಾನವನ್ನು ಮಾಡುತ್ತಾರೆ 'ಕಾಮಾತ್' ಎನ್ನುವುದರಿಂದ ಹೇಳುತ್ತಾರೆ.

ಜೀವನು ಈಶ್ವರ ಎನ್ನುವುದು ಅನುಭವವಿರುದ್ಧ, ಈಶ್ವರನು ಜೀವ ಎನ್ನುವುದು ಶ್ರುತಿವಿರುದ್ಧವಾಗಿದೆ. ಹೀಗಾಗಿ ಪ್ರತ್ಯಕ್ಷಾದಿ ಪ್ರಮಾಣ ವಿರೋಧವಿರುವುದರಿಂದ ಅನುಮಾನವು ಜೀವೇಶ್ವರಭೇದವನ್ನು ನಿಷೇಧಮಾಡಲಿಕ್ಕೆ ಸಾಧ್ಯವಿಲ್ಲ.

ಪ್ರಮಾಣವಿರುದ್ಧವಾದ ಅನುಮಾನವು ಪ್ರಮಾಣವೆನ್ನುವುದಾದರೆ 'ಅಗ್ನಿಃ ಅನುಷ್ಣಃ ಪದಾರ್ಥತ್ವಾತ್' (ಅಗ್ನಿಯು ತಂಪಾಗಿದೆ ಪದಾರ್ಥವಾದ್ದರಿಂದ) ಎಂಬ ಅನುಮಾನವೂ ಪ್ರಮಾಣವಾಗಬೇಕಾದೀತು ಎಂದರೆ ಆದ್ದರಿಂದ ಅತೀಂದ್ರಿಯವಸ್ತುವಿಷಯದಲ್ಲಿ ಶ್ರುತಿಸಹಕಾರಿಯಾದ ಅನುಮಾನವನ್ನೇ ಸ್ವೀಕರಿಸಬೇಕು.

* * * *

# ಬ್ರಹ್ಮಮೀಮಾಂಸಾಶಾಸ್ತ್ರ

## सू - ॐ।। अस्मिन्नस्य च तद्योगं शास्ति ।।ॐ।।१९।।

ಅನುವಾದ - ಈ ಪ್ರಕರಣದಲ್ಲಿ ಜೀವನಿಗೆ ಆನಂದಮಯನ ಸಂಬಂಧವನ್ನು ಹೇಳಿದ್ದರಿಂದಲೂ ಆನಂದಮಯನು ಜೀವಾತ್ಮನಾಗಲಾರ.

### ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕಾ

**सूत्रदीपिका** – युक्तिसमुच्चये चशब्दः । यतः अस्मिन् आनन्दमयप्रकरणे मोक्षेऽप्यस्य जीवस्य.। तद्योगम् आनन्दमयादिना योगं सम्बन्धम् । शास्ति श्रुतिः प्रतिपादयति । अतोऽपि आनन्दमयादिः ब्रह्मैव, न देहादिरित्यर्थः ।

ಮತ್ತೊಂದು ಯುಕ್ತಿಯನ್ನು ಸಮುಚ್ಚಯ ಮಾಡಲು ಸೂತ್ರದಲ್ಲಿ ಚಶಬ್ದವನ್ನು ಪ್ರಯೋಗಿಸಿದ್ದಾರೆ. ಯಾವ ಕಾರಣದಿಂದ ಆನಂದಮಯಪ್ರಕರಣದಲ್ಲಿ ಮೋಕ್ಷದಲ್ಲಿಯೂ, ಅಸ್ಯ = ಜೀವನಿಗೆ, ತದ್ಯೋಗಮ್' ಆನಂದಮಯನ ಸಂಬಂಧವನ್ನು 'ಶಾಸ್ತಿ' ಪ್ರತಿಪಾದಿಸುತ್ತಿದೆಯೋ ಆದ್ದರಿಂದಲೂ ಆನಂದಮಯಾದಿಗಳು ಬ್ರಹ್ಮನೇ ಹೊರತು ದೇಹಾದಿಗಳಲ್ಲ.

• • • • •

### ಮೋಕ್ಷದಲ್ಲಿಯೂ ಜೀವನು ಆನಂದಮಯನಿಗಿಂತ ಭಿನ್ನನು

**भाष्यम्– ॐ ।। अस्मिन्नस्य च तद्योगं शास्ति ।। ॐ ।।१९।।**

**अस्य जीवस्य । युक्तिसमुच्चये चशब्दः ।**

**'सोऽश्नुते सर्वान् कामान् सह ब्रह्मणा विपश्चिता' (तै. २-१.)**

'अनिलयनेऽभयं प्रतिष्ठां विन्दते' (तै. २-७.)
'एतमानन्दमयमात्मानमुपसङ्क्रामति'(तै.२-८) ।। इत्यादि ।।६।।

।। इति श्रीमदानन्दतीर्थभगवत्पादाचार्यविरचितब्रह्मसूत्रभाष्ये
आनन्दमयाधिकरणम् ।।

ಸೂತ್ರದಲ್ಲಿರುವ ಅಸ್ಯ ಎಂಬ ಪದಕ್ಕೆ ಜೀವನೆಂದರ್ಥ. ಚ ಶಬ್ದವು ಯುಕ್ತಿಯನ್ನು ಸಮುಚ್ಚಯ ಮಾಡುತ್ತಿದೆ.

'ಜ್ಞಾನಿಯಾದ ಚತುರ್ಮುಖಬ್ರಹ್ಮನ ಜೊತೆಗೆ ಬ್ರಹ್ಮನನ್ನು ತಿಳಿದವನು ಸಕಲಾಭೀಷ್ಟಗಳನ್ನು ಮೋಕ್ಷದಲ್ಲಿ ಹೊಂದುತ್ತಾನೆ'

'ಭಯರಹಿತನಾಗಿ ಬ್ರಹ್ಮಜ್ಞಾನಿಯು ಅನನ್ಯವಾಗಿ ರಕ್ಷಕನಾದ ಬ್ರಹ್ಮನ ಧ್ಯಾನದಲ್ಲಿ ಆಸಕ್ತನಾಗುತ್ತಾನೆ'

'ಇಂತಹ ಬ್ರಹ್ಮನ ಉಪಾಸಕನು ಆನಂದಮಯನೆನಿಸಿದ ಪರಮಾತ್ಮನ ಸಮೀಪವನ್ನು ಹೊಂದುತ್ತಾನೆ'

ಹೀಗೆ ತೈತ್ತಿರೀಯೋಪನಿಷತ್ತು ಹೇಳಿದೆ.

ಪ್ರತಿಪದಾರ್ಥ– ಆನಂದಮಯನೆನಿಸಿದ ಬ್ರಹ್ಮನಿಂದ ಸಕಲ ಜೀವರ ಭೇದವು ಸಿದ್ಧವಾಗಲಿ. ಆದರೂ ಸಹ ಅದು ಕೇವಲ ವ್ಯಾವಹಾರಿಕವಾದ ಭೇದ. ಪಾರಮಾರ್ಥಿಕವಾದ ಮೋಕ್ಷದಲ್ಲಿ ಅಂತಹ ಭೇದವು ಇರಲಾರದು. ಎಂಬ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸುತ್ತಿದ್ದಾರೆ(१).

---

(१) भाष्यदीपिका– नन्वस्त्वानन्दमयेन ब्रह्मणा हिरण्यगर्भादिजीवानां भेदः । तथाऽपि सः व्यावहारिकः संसार एवास्ति, न पारमार्थिको मुक्तावपि । उदाहृतश्रुतीनां सांसारिकभेदपरत्वोपपत्तेरित्याशङ्कां परिहरत् सूत्रं पठति – अस्मिन्निति ।। अत्रास्येति नाऽनन्दमयपरामर्शः । किन्तु नेतर इत्युक्तजीवस्येत्याह – अस्येति ।। अस्यान्यस्य चेति प्रतीतिनिरासाय चशब्दं व्याख्याति – युक्तीति ।। अस्तीति शेषः । किं तद्योगशासनमित्यत आह – सोऽश्नुत इति ।। क्रियाविशेषणमेतत् । लुप्तविभक्तिको वा निर्देशः । तथा च 'इत्यादि शास्ति' इत्यादिना शास्तीति वाऽन्वयः । अनेन न केवलं भेदव्यपदेशादानन्दमयेन जीवानां भेदः सिद्धः । किं नाम ? यतोऽस्मिन् प्रकरणेऽस्य जीवस्यानेनाऽनन्दमयेन सह 'अस्मिंश्च' मोक्षेऽपि 'योगं' सम्बन्धं श्रुतिः शास्ति अतोऽपि । अतो न तदैक्यं जीवानां, नापि सांसारिक एव भेदः । न चैतावता कथं भेदसिद्धिः । सम्बन्धस्य भेदसापेक्षत्वात् । यद्वा - यस्मात् 'अस्मिन्' प्रकरणद्वयेऽपि 'अस्य' जीवस्य 'तद्योगं' तैरानन्दमयाद्यैर्योगं सम्बन्धं 'शास्ति' प्रतिपादयति फलत्वेन श्रुतिरिति शेषः । तस्मादानन्दमयो न

ಅಸ್ಮಿನ್ = ಸೋಽಶ್ನುತೇ ಸರ್ವಾನ್ ಕಾಮಾನ್ ಇತ್ಯಾದಿ, ಅಸ್ಯ = ಜೀವನಿಗೆ, ತದ್ಯೋಗಂ = ಆನಂದಮಯನಿಂದ ಭೇದ ಹೇಳುವ ಮೋಕ್ಷದ ಸಂಬಂಧವನ್ನು, ಶಾಸ್ತಿ = ಶಾಸನಮಾಡುತ್ತಿದೆ, ಆದ್ದರಿಂದಲೂ ಆನಂದಮಯನು ಜೀವನಾಗುವುದಿಲ್ಲ.

ಅಸ್ಯ ಎಂಬ ಪದಕ್ಕೆ ಜೀವನಿಗೆ ಎಂದರ್ಥ. ಯುಕ್ತಿಸಮುಚ್ಚಯೇ = ಮತ್ತೊಂದು ಯುಕ್ತಿಯನ್ನು ತೋರಿಸುವುದಕ್ಕಾಗಿ, ಚಶಬ್ದಃ = ಸೂತ್ರದಲ್ಲಿ ಚ ಎಂಬ ಶಬ್ದವನ್ನು ಹೇಳಿದ್ದಾರೆ.

ಸಃ = ಆನಂದಮಯನನ್ನು ಉಪಾಸನೆ ಮಾಡುವ ಜ್ಞಾನಿಯು, ಸರ್ವಾನ್ = ತನಗೆ ಯೋಗ್ಯವಾದ, ಕಾಮಾನ್ = ಇಷ್ಟವಾದ ಅಪೇಕ್ಷೆಗಳನ್ನು, ವಿಪಶ್ಚಿತಾ = ಸರ್ವಜ್ಞನಾದ, ಬ್ರಹ್ಮಣಾ = ಪರಬ್ರಹ್ಮನಿಂದ, ಸಹ =ಕೂಡಿಕೊಂಡು, ಅಶ್ನುತೇ = ಭೋಗಿಸುತ್ತಾನೆ.

ಅನಿಲಯನೇ = ಮತ್ತೊಬ್ಬ ಆಶ್ರಯನಿಲ್ಲದ ಪರಬ್ರಹ್ಮನಲ್ಲಿ, ಅಭಯಂ = ಭಯರಹಿತನಾದ ಜೀವನು, ಪ್ರತಿಷ್ಠಾಂ ವಿಂದತೇ = ಬ್ರಹ್ಮನ ಜ್ಞಾನದಲ್ಲಿ ಆಸಕ್ತನಾಗುತ್ತಾನೆ.

ಏತಮ್ = ಈ, ಆನಂದಮಯಂ = ಪೂರ್ಣಾನಂದರೂಪನಾದ, ಆತ್ಮಾನಂ = ಪರಬ್ರಹ್ಮನನ್ನು, ಉಪಸಂಕ್ರಾಮತಿ = ಹೊಂದುತ್ತಾನೆ,

ಇತ್ಯಾದಿ = ಇವೇ ಮೊದಲಾಗಿ ತೈತ್ತಿರೀಯೋಪನಿಷತ್ತಿನ ಮಾತುಗಳು ಹೊರಟಿವೆ.

**तत्वप्रकाशिका – नन्वस्त्वेवमानन्दमयेन परब्रह्मणा हिरण्यगर्भादिजीवानां भेदः सोऽपि सांसारिको न पारमार्थिकोऽभिहितवाक्यानां सांसारिकभेदपरत्वेनोपपत्तेरित्याशङ्कां परिहर्तुं सूत्रं पठति –अस्मिन्निति ।। 'अस्य' इति नानन्दमयपरामर्शोऽपि तु 'नेतरः' इत्युक्तजीवस्यैवेत्याह – अस्येति ।। अस्यान्यस्य चेत्यन्यथाप्रतीतिनिरासायाह – युक्तीति ।। न केवलं भेदव्यपदेशादानन्दमयेन जीवानां भेदः, किं नामास्मिन्प्रकरणे 'अस्य' जीवस्यानन्दमयेन सह मुक्तावपि सम्बन्धमेव श्रुतिः शास्ति । ततश्च तयोर्भेद एव नत्वैक्यम् । नापि सांसारिक एव भेदः, सम्बन्धस्य भेदसापेक्षत्वादित्यर्थः ।**

---

जीवकोशादिरिति सूत्रार्थ उक्तो भवति । 'सः' ब्रह्मज्ञानी 'विपश्चिता' सर्वज्ञेन ज्ञातेनैव 'परब्रह्मणा' चतुर्मुखेन च सह 'सर्वान्' स्वयोग्यकामान् 'अश्नुते' मुक्तौ प्राप्नोतीति श्रुत्यर्थः । 'अदृश्येऽनात्म्ये' इति वाक्यं तु प्रागेव व्याख्यातम् । देहादुत्क्रान्तो जीवः 'एतम्' 'आनन्दमयं' पूर्णानन्दं परमात्मानं 'उपसङ्क्रमति' तत्समीपं प्राप्नोतीत्यनुवाकान्तरगततृतीयवाक्यस्यार्थः ।।

।। इति श्रीजगन्नाथतीर्थविरचितायां भाष्यदीपिकायाम् आनन्दमयाधिकरणम् ।।

ಆನಂದಮಯಾಧಿಕರಣ ಭಾಗ - ೧

ಪರಬ್ರಹ್ಮನಾದ ಆನಂದಮಯನಿಗೂ ಬ್ರಹ್ಮಾದಿದೇವತಾರೂಪನಾದ ಜೀವರಿಗೂ ಭೇದವನ್ನು ಒಪ್ಪೋಣ. ಅದು ಸಂಸಾರದಲ್ಲಿ ಮಾತ್ರ ಇರುವಂತಹದ್ದು; ಹೊರತು ಪಾರಮಾರ್ಥಿಕವಾದದ್ದಲ್ಲ (ಮೋಕ್ಷದಲ್ಲಿ ಇರುವಂಥದ್ದು ಅಲ್ಲ). ನೀವು ಹೇಳಿದ ಪ್ರಮಾಣಗಳು ಕೂಡ ಸಾಂಸಾರಿಕಭೇದವನ್ನೇ ಹೇಳುತ್ತವೆಂದು ಕೂಡಿಸಬಹುದು. ಈ ಸಂದೇಹವನ್ನು ಪರಿಹಾರಮಾಡಲು ಸೂತ್ರವನ್ನು ಹೇಳುತ್ತಾರೆ - 'ಅಸ್ಮಿನ್' ಎಂಬುದಾಗಿ. ಸೂತ್ರದಲ್ಲಿ ಅಸ್ಯ ಎಂದು ಹೇಳಿದ್ದು ಆನಂದಮಯನನ್ನು ಪರಾಮರ್ಶಿಸಲು ಅಲ್ಲ. ಕಿಂತು ಜೀವನನ್ನೇ ಪರಾಮರ್ಶಿಸಲು ಎಂದು ಹೇಳುತ್ತಾರೆ ''ಅಸ್ಯ'' ಎನ್ನುವುದರಿಂದ. ಸೂತ್ರದಲ್ಲಿ 'ಚ'ಶಬ್ದವು ಜೀವನು ಮತ್ತು ಮತ್ತೊಬ್ಬನು ಎಂದು ಸಮುಚ್ಚಯ ಮಾಡುತ್ತಿದೆ ಎಂಬ ಭ್ರಾಂತಿಯ ಪರಿಹಾರಕ್ಕಾಗಿ ''ಯುಕ್ತಿ'' ಎಂಬುದಾಗಿ ಹೇಳುತ್ತಾರೆ.

ಶ್ರುತಿಯಲ್ಲಿ ಭೇದವನ್ನು ಹೇಳಿದ್ದಾರೆ ಎನ್ನುವ ಸೂತ್ರಕ್ಕೆ(ವು) ಆನಂದಮಯನಿಗೂ ಜೀವನಿಗೂ ಭೇದವಿದೆ ಎಂದಷ್ಟೇ ಹೇಳುವುದಲ್ಲ; ಮತ್ತೇನೆಂದರೆ ಈ ಪ್ರಕರಣದಲ್ಲಿ ಜೀವನಿಗೂ, ಆನಂದ-ಮಯನಿಗೂ ಮುಕ್ತಿಯಲ್ಲಿಯೂ ಕೂಡ ಸಂಬಂಧವಿದೆ (ಎಂದು ಶ್ರುತಿಯು ಹೇಳುತ್ತಿದೆ)ಎಂಬುದರಲ್ಲಿ ತಾತ್ಪರ್ಯವಿದೆ. ಆದ್ದರಿಂದ ಅವರಿಬ್ಬರಿಗೂ ಭೇದವೇ ಇರಬೇಕು; ಐಕ್ಯವಲ್ಲ. ಭೇದವನ್ನು ಸಾಂಸಾರಿಕಭೇದವೆನ್ನಲು ಬರುವುದಿಲ್ಲ ಸಂಬಂಧವು ಭೇದವನ್ನು ಅಪೇಕ್ಷಿಸುವುದರಿಂದ.

**तत्वप्रकाशिका – किं तद्योगशासनमित्यत आह – सोऽश्नुत इति ।। 'इत्यादि' इत्यस्य 'शास्ति' इति सूत्रपदेनान्वयः । अथवा हेत्वन्तरेण देहादीनामन्नमयादित्व-निरासकमेतत्सूत्रम् । तदुक्तम् ।**

**योगमन्नमयाद्यैर्यत्फलत्वेनास्य शंसति ।**
**स्थानद्वयेऽप्यतः कोशा एत इत्यतिसाहसम् ।।**

**इति । तस्मात् सकलजीवादिभिन्नं परब्रह्मैवान्नमयादिपञ्चरूपमिति युक्ता तज्जिज्ञासेति सिद्धम् ।।१९।।**

**।। इति श्रीमज्जयतीर्थभिक्षुविरचितायां तत्वप्रकाशिकायाम्**
**आनन्दमयाधिकरणम् ।।**

ಮುಕ್ತಿಯಲ್ಲಿ ಸಂಬಂಧವನ್ನು ಹೇಳುವ ಶ್ರುತಿಯು ಯಾವುದೆಂಬುದನ್ನು ''ಸೋಶ್ನುತೇ'' ಎಂಬಿತ್ಯಾದಿಯಾಗಿ ಹೇಳಿದ್ದಾರೆ. ಭಾಷ್ಯದಲ್ಲಿ 'ಇತ್ಯಾದಿ' ಎಂಬ ಪದಕ್ಕೆ ಸೂತ್ರದಲ್ಲಿನ 'ಶಾಸ್ತಿ' ಎಂಬ ಪದದೊಂದಿಗೆ ಅನ್ವಯ.

ಅಥವಾ ಮತ್ತೊಂದು ಹೇತುವಿನಿಂದ ದೇಹ ಮೊದಲಾದವುಗಳು ಆನಂದಮಯಶಬ್ದವಾಚ್ಯರಲ್ಲ ಎಂದು ಈ ಸೂತ್ರವು ನಿರಾಕರಣೆ ಮಾಡುತ್ತಿದೆ. ಅದನ್ನು ಅನುವ್ಯಾಖ್ಯಾನದಲ್ಲಿ

ಯೋಗಮನ್ನಮಯಾದ್ಯೈರ್ಯತ್ಫಲತ್ವೇನಾಸ್ಯ ಶಂಸತಿ ।
ಸ್ಥಾನದ್ವಯೇಽಪ್ಯತಃ ಕೋಶಾ ಏತ ಇತ್ಯತಿಸಾಹಸಮ್ ।

'ಬ್ರಹ್ಮವಲ್ಲಿ ಮತ್ತು ಭೃಗುವಲ್ಲಿ ಈ ಎರಡೂ ಕಡೆಯಲ್ಲಿ ಕೂಡ ಅನ್ನಮಯಾದಿಗಳನ್ನು ಹೊಂದುವುದೇ ಫಲ ಎಂದು ಹೇಳಿದ್ದಾರೆ. ಹಾಗಾಗಿ ಅನ್ನಮಯಾದಿಗಳು ಕೋಶಗಳಾಗಿವೆ ಎನ್ನುವುದು ಸಾಹಸವೇ ಸರಿ' ಎಂದು ಹೇಳಿದ್ದಾರೆ. ಆದ್ದರಿಂದ ಎಲ್ಲಾ ಜೀವ ಜಡಗಳಿಗಿಂತ ಭಿನ್ನನಾದ ಪರಬ್ರಹ್ಮನಾದ ವಿಷ್ಣುವೇ ಅನ್ನಮಯಾದಿಪಂಚರೂಪನಾಗಿದ್ದಾನೆ. ಆದ್ದರಿಂದ ಅವನ ಜಿಜ್ಞಾಸೆ ಮಾಡುವುದು ಸೂಕ್ತವೇ ಆಗಿದೆ.

॥ ಇಲ್ಲಿಗೆ ಶ್ರೀಜಯತೀರ್ಥಭಿಕ್ಷುಗಳಿಂದ ವಿರಚಿತವಾದ
ತತ್ವಪ್ರಕಾಶಿಕೆಯಲ್ಲಿ
ಆನಂದಮಯಾಧಿಕರಣದ ಕನ್ನಡಾನುವಾದವು ಮುಗಿಯಿತು

भावदीपः – **ॐ अस्मिन्नस्य च तद्योगं शास्ति ॐ** ।। **अभिहितेति** ।। 'ते ये शतम्' इत्यादीनाम् इत्यर्थः । चशब्दार्थव्यक्तिपूर्वं सूत्रार्थमाह – **न केवलमिति** ।। 'श्रुतिः' इति भाष्योक्तश्रुतिरित्यर्थः । श्रुत्यर्थस्तु स ब्रह्मवित् स्वयोग्यसर्वकामान् सर्वज्ञब्रह्मणा सह अश्नुत इति । अस्यैव ब्रह्मणः आनन्दमयत्वोक्तेरिति भावः । 'अनिलयने' इति श्रुत्यर्थः प्रागुक्तः । 'एतम्' इति वाक्ये तु स एवंवित् अस्माल्लोकात् प्रेत्य इति पूर्ववाक्योक्तस्त्यक्तदेहो ब्रह्मज्ञानी उपसङ्क्रमणकर्ता बोध्यः ।

एवम् 'अनिलयने' इति, 'एतम्' इति चानन्दमयमात्रासाधारणश्रुत्यनुरोधेन 'सोऽश्नुते' इत्यादि वाक्यमपि तन्मात्रपरमित्युपेत्य, 'नेतरः' इत्यादिसूत्रान्वितत्वेनैकां व्याख्यां कृत्वा,

अधुना मान्त्रवर्णिकसूत्रोक्तदिशा अन्नमयादिपञ्चकसाधारणं 'सोऽश्नुते' इति वाक्यमनुरुद्ध्यानन्दमयमिति भाष्यमुपलक्षणम् । 'अन्नमयमात्मानमुपसङ्क्रामति' इत्यादिपञ्चवाक्यान्यपि ग्राह्याणीति भावेनार्थान्तरं सोपष्टम्भमाह – **अथवेति** ।।

ಓಂ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ಓಂ ॥ "ಅಭಿಹಿತವಾಕ್ಯಾನಾಂ" ಎಂಬ ವಾಕ್ಯಭಾಗದಲ್ಲಿ ಅಭಿಹಿತ ಎಂಬ ಪದಕ್ಕೆ 'ತೇ ಯೇ ಶತಮ್' ಇತ್ಯಾದಿವಾಕ್ಯಗಳಿಂದ ಹೇಳಲ್ಪಟ್ಟ ಎಂದರ್ಥ. "ನ ಕೇವಲಮ್" ಇತ್ಯಾದಿವಾಕ್ಯದಿಂದ ಸೂತ್ರದಲ್ಲಿರುವ ಚಶಬ್ದದ ಅರ್ಥವನ್ನು ಸ್ಪಷ್ಟಪಡಿಸುವ ಮೂಲಕ ಸೂತ್ರದ ಅರ್ಥವನ್ನು ವಿವರಿಸಿದ್ದಾರೆ. "ಶ್ರುತಿಃ" ಎಂಬ ಪದಕ್ಕೆ 'ಭಾಷ್ಯೋಕ್ತವಾದ ಶ್ರುತಿ' ಎಂದರ್ಥ. 'ಸೋಽಶ್ನುತೇ' ಎಂಬ

ಶ್ರುತಿಗೆ 'ಸಃ = ಆ ಬ್ರಹ್ಮಜ್ಞಾನಿಯು, ಸ್ವಯೋಗ್ಯಸರ್ವಾನ್ ಕಾಮಾನ್ = ತನಗೆ ಯೋಗ್ಯವಾದ ಎಲ್ಲಾ ಕಾಮಿತಫಲಗಳನ್ನು, ವಿಪಶ್ಚಿತಾ ಬ್ರಹ್ಮಣಾ ಸಹ = ಸರ್ವಜ್ಞನಾದ ಬ್ರಹ್ಮನೊಂದಿಗೆ, ಅಶ್ನುತೇ = ಅನುಭವಿಸುತ್ತಾನೆ -- ಎಂಬುದಾಗಿ ಅರ್ಥ. ಇಲ್ಲಿ ಹೇಳಿದ ಬ್ರಹ್ಮನನ್ನೇ ಆನಂದಮಯ ಎಂಬುದಾಗಿ ಹೇಳಿರುವುದರಿಂದ ಈ ರೀತಿಯಾಗಿಯೇ ಅರ್ಥವನ್ನು ಹೊಂದಿಸಬೇಕು. 'ಅನಿಲಯನೇ' ಎಂಬ ಶ್ರುತಿಯ ಅರ್ಥವನ್ನು ಈ ಹಿಂದೆಯೇ ಹೇಳಿದ್ದೇವೆ.

'ಏತಮ್' ಎಂಬ ಶ್ರುತಿವಾಕ್ಯದಲ್ಲಿ 'ಸ ಏವಂ ವಿತ್ ಅಸ್ಮಾತ್‌ಲೋಕಾತ್ ಪ್ರೇತ್ಯ' ಎಂದು ಹಿಂದಿನ ವಾಕ್ಯದಲ್ಲಿ ಹೇಳಿದ ದೇಹವನ್ನು ಬಿಟ್ಟು ಮೋಕ್ಷದ ಕಡೆಗೆ ನಡೆದು ಬರುತ್ತಿರುವ ಬ್ರಹ್ಮಜ್ಞಾನಿಯನ್ನು ಹೇಳುತ್ತಿದ್ದಾರೆ. ಇದೇ ರೀತಿಯಾಗಿ 'ಅನಿಲಯನೇ' ಎಂಬಲ್ಲಿಯೂ 'ಏತಮ್' ಎಂಬಲ್ಲಿಯೂ ಆನಂದಮಯನನ್ನೇ ಹೇಳುವ ಅಸಾಧಾರಣವಾದ ಶ್ರುತಿಗೆ ಅನುಸಾರವಾಗಿ 'ಸೋಽಶ್ನುತೇ' ಇತ್ಯಾದಿವಾಕ್ಯವೂ ಕೂಡ ಆನಂದಮಯನನ್ನೇ ಹೇಳುತ್ತದೆ ಎಂಬುದನ್ನು ಒಪ್ಪಿಕೊಂಡು 'ನೇತರೋಽನುಪಪತ್ತೇಃ' ಎಂಬ ಸೂತ್ರಕ್ಕೆ ಅನ್ವಯವಾಗುವಂತೆ ಒಂದು ರೀತಿಯಲ್ಲಿ ವ್ಯಾಖ್ಯಾನವನ್ನು ಮಾಡಿ, ಈಗ 'ಮಾಂತ್ರವರ್ಣಿಕ'ಸೂತ್ರದಲ್ಲಿ ಹೇಳಿದಂತೆ ಅನ್ನಮಯಾದಿ ಐದುರೂಪಗಳಿಗೂ ಸಾಧಾರಣವಾಗಿ 'ಸೋಽಶ್ನುತೇ' ಎಂಬ ವಾಕ್ಯವನ್ನು ಅನುಸರಿಸಿ 'ಏತಮಾನಂದಮಯಂ' ಎಂಬ ಭಾಷ್ಯವಾಕ್ಯವು ಉಪಲಕ್ಷಣವಾಗಿದ್ದು 'ಅನ್ನಮಯಮಾತ್ಮಾನ-ಮುಪಸಂಕ್ರಾಮತಿ' ಇತ್ಯಾದಿಯಾಗಿ ಐದುವಾಕ್ಯಗಳನ್ನೂ ಕೂಡ ಸ್ವೀಕರಿಸಿಕೊಳ್ಳಬೇಕು ಎಂಬ ಅಭಿಪ್ರಾಯದಿಂದ ಅರ್ಥಾಂತರವನ್ನು "ಅಥವಾ" ಇತ್ಯಾದಿವಾಕ್ಯದಿಂದ ಸಮರ್ಥನೆಯನ್ನು ನೀಡುವುದರ ಜೊತೆಗೆ ವಿವರಿಸುತ್ತಿದ್ದಾರೆ.

**भावदीपः – तदुक्तमिति ।।** 'अनुभाष्ये' इत्यर्थः । **स्थानद्वय इति ।।** ब्रह्मवल्ल्यां भृगुवल्ल्यां चेत्यर्थः । 'अन्नमयमुपसङ्क्रम्य' इत्यादिरूपेण भृगुवल्ल्यामपि श्रवणादिति भावः । **तस्मादिति ।।** साधकभावाद् बाधकभावात् प्रकृत्यादिपक्षे बाधकभावाच्चेत्य-भ्यासादिसर्वसौत्रहेत्वर्थस्य भिन्नमिति, 'नेतरः' इत्यादिसूत्रचतुष्टयप्रतिज्ञाभागार्थस्य 'परं ब्रह्म' इत्यादि तु आद्यचतुर्थाध्यमानां प्रतिज्ञाभागार्थस्योपसंहारः । 'युक्ता तज्जिज्ञासा' इति फलोक्तिः । अत्र स्वपक्षस्थापने परपक्षनिरासे च आनन्दमयसाधा रणयोस्तद्धेत्विति, भेदेति च हेतुविशेषयोरुक्तिः, आनन्दमयस्य पुच्छब्रह्मतया विशिष्याब्रह्मत्वशङ्कायां ब्रह्मत्वदार्ढ्याय(१) ।

---

(१) *अत्राद्ये सूत्रेऽन्नमयादिपञ्चकस्य विष्णुत्वे साध्ये इयं ब्रह्मशब्दरूपहेतूक्तिः ।

* द्वितीये, विकारार्थकमयट्प्रत्ययान्तान्नमयादिशब्दवाच्यत्वं कथं निर्विकारस्य विष्णोरित्याशङ्क्य मयटः प्राचुर्यार्थत्वोक्त्या तन्निरासः ।

* तृतीये, आनन्दमयस्य विष्णुत्वे लोकचेष्टकत्वरूपहेतुव्यपदेशलक्षणहेतूक्तिः । ननु तस्य 'विकारशब्दात्' इत्येतदानन्तर्यं कथम्? इत्थम् 'को ह्येव प्राण्यात्' इति

यदत्र केनचिद्दूषणमुत्प्रेक्षितं तत् तु सम्यक्भाष्यटीकारीत्या एतदधिकरणार्थावमर्शिनां सुपरिहरमिति तन्न प्रपञ्च्यते ।।१९।।

।। इति श्रीमद्राघवेन्द्रतीर्थविरचिते भावदीपे आनन्दमयाधिकरणम् ।।

"ತದುಕ್ತಮ್" ಎಂಬ ಪದದಿಂದ 'ಅನುವ್ಯಾಖ್ಯಾನದಲ್ಲಿ' ಎಂಬರ್ಥವನ್ನು ಸ್ವೀಕರಿಸಬೇಕು.

"ಸ್ಥಾನದ್ವಯೇ" ಎಂಬ ಪದಕ್ಕೆ 'ಬ್ರಹ್ಮವಲ್ಲಿ ಮತ್ತು ಭೃಗುವಲ್ಲಿಯಲ್ಲಿ' ಎಂದರ್ಥ. ಏಕೆಂದರೆ 'ಅನ್ನಮಯಮುಪಸಂಕ್ರಮ್ಯ' ಇತ್ಯಾದಿರೂಪದಿಂದ ಭೃಗುವಲ್ಲಿಯಲ್ಲೂ ಕೂಡ ಈ ರೀತಿಯ ವಾಕ್ಯಗಳು ಇವೆ. "ತಸ್ಮಾತ್" ಎಂಬ ವಾಕ್ಯಭಾಗದಿಂದ ಬಾಧಕ ಇರುವುದರಿಂದ, ಸಾಧಕವು ಇಲ್ಲದಿರುವುದರಿಂದ ಪ್ರಕೃತ್ಯಾದಿಗಳ ವಿಷಯದಲ್ಲಿ ಬಾಧಕವೇ ಇರುವುದರಿಂದ ಎಂಬ ರೀತಿಯಲ್ಲಿ ಅಭ್ಯಾಸವೇ ಮೊದಲಾದ ಸೂತ್ರಗಳಲ್ಲಿ ಹೇಳಿದ

---

हेतुव्यपदेशादाकाशाक्यानन्दमयस्य पूर्णानन्दत्वे तत्संवादेनानन्दमयशब्दगतमयटः प्राचुर्यार्थत्वे सिद्धे तत्प्रायपठितान्नमयादिशब्दगतमयटामपि प्राचुर्यार्थत्वमङ्गीकार्यमिति पूर्वोक्तमयटः प्राचुर्यार्थत्वेऽपि एतत्सूत्रोक्त हेतुव्यपदेशस्य हेतुत्वात् ।

* चतुर्थे, अन्नमयादिपञ्चकस्य विष्णुत्वेऽवयवत्वविरोधादिबाधकपरिहाराय मन्त्रवर्णसमाख्यारूपहेतूक्तिः । स्वपक्षसाधनानन्तरं परपक्षप्रतिक्षेप इति ।
* पञ्चमे, प्रतिज्ञापूर्वकं मान्त्रवर्णिकसूत्रसिद्धान्नमयादिपञ्चकनिष्ठमोक्षजनकज्ञानविषयत्वरूपहेतूक्तिः ।
* षष्ठे, तेषामेवानन्दमयत्वनिरासे तेषां ततो भेदरूपहेतूक्तिः । नन्वस्य 'नेतरोऽनुपपत्तेः' इत्येतदानन्तर्यं कथम्? इत्थम् – विरिञ्चादीनाम् आनन्दमयत्वाभावे तेषां ततो भेदव्यपदेशस्य हेतुत्वकथवत् पूर्वसूत्रोक्तमोक्षजनकज्ञानविषयत्वस्य जीवब्रह्मणोरभेदेन ब्रह्मस्वरूपाभेदस्य विरिञ्चादिजीवसमूहस्यापि सम्भव इत्याशङ्कानिरासहेतुत्वेन जीवब्रह्मणोर्भेदव्यपदेशस्य कथनात् । अत एव सुधायामुपनिषदर्थानवबोधादित्यादिना जीवब्रह्मणोरभेदेन स्वरूपापेक्षया मोक्षजनकज्ञानविषयस्यापि सम्भव इत्याशङ्कानिरासहेतुत्वेनैतत् सूत्रोक्तभेदव्यपदेशो व्याख्यातः ।
* सप्तमे, भेदव्यपदेशविरोधकाभेदसाधकानुमानस्याभासत्वोक्तिः ।
* अनुपपत्तिभेदव्यपदेशाभ्यां पूर्वपक्ष्यभिप्रेतानां विरिञ्चादीनां सर्वेषामन्नमयादिपञ्चरूपकामगामित्वोक्त्या अष्टमे अनुव्याख्यानोक्तरीत्यानुपपत्त्या दूषितस्यापि शरीरादिकोशा एवान्नमयादिशब्दवाच्या इति पक्षस्य विशेषदूषणाभिधानेन निराकरणम् । भाष्यदिशा तु भेदव्यपदेशस्यानुमानविरोधाभावेऽपि तस्य सांसारिकभेदपरत्वेन पारमार्थिकाभेदविरोधित्वाभावात्, विरिञ्चादीनामानन्दमयत्वनिरासे कथं सहेतुरित्याशङ्कापरिहारार्थं तद्भेदस्य पारमार्थिकत्वसिद्ध्यर्थं मोक्षेऽपि तदुक्तिरिति सूत्रक्रमः ।। – (भावबोधः)

ಎಲ್ಲಾ ಹೇತುಗಳ ಅರ್ಥವನ್ನು "ಭಿನ್ನಂ" ಎಂಬ ಪದದಿಂದ 'ನೇತರಃ' ಇತ್ಯಾದಿಯಾದ ನಾಲ್ಕು ಸೂತ್ರಗಳ ಪ್ರತಿಜ್ಞಾಭಾಗದ ಅರ್ಥವನ್ನು "ಪರಬ್ರಹ್ಮ" ಇತ್ಯಾದಿವಾಕ್ಯಭಾಗದಿಂದ ಮೊದಲನೆಯ, ನಾಲ್ಕನೆಯ ಮತ್ತು ಕೊನೆಯ ಸೂತ್ರಗಳ ಪ್ರತಿಜ್ಞಾಭಾಗದ ಅರ್ಥವನ್ನು ಉಪಸಂಹಾರ ಮಾಡಿದ್ದಾರೆ. "ಯುಕ್ತಾ ತಜ್ಜಿಜ್ಞಾಸಾ" ಎಂಬುದಾಗಿ ಫಲಿತಾರ್ಥವನ್ನು ವಿವರಿಸಿದ್ದಾರೆ.

ಈ ಅಧಿಕರಣದಲ್ಲಿ ಸ್ವಪಕ್ಷವನ್ನು ಸ್ಥಾಪನೆ ಮಾಡಲು ಮತ್ತು ಪರಪಕ್ಷವನ್ನು ನಿರಾಕರಣೆಮಾಡಲು ಆನಂದಮಯಸಾಧಾರಣವಾದ ತದ್ಧೇತು ಎಂಬ ಮತ್ತು ಭೇದ ಎಂಬ ಎರಡು ವಿಶೇಷಹೇತುಗಳನ್ನು ಸೂಚಿಸಿದ್ದಾರೆ. ಆನಂದಮಯನು ಬ್ರಹ್ಮನ ಪುಚ್ಛನಾದುದರಿಂದ ಅವನು ಬ್ರಹ್ಮನಲ್ಲ ಎಂಬ ಶಂಕೆ ಬಂದಾಗ ಪುಚ್ಛನಾದರೂ ಅವನು ಬ್ರಹ್ಮನೇ ಎಂಬುದಾಗಿ ಬ್ರಹ್ಮತ್ವವನ್ನು ದೃಢಗೊಳಿಸಲು ಉಳಿದ ಸೂತ್ರಗಳನ್ನು ಹೇಳಿದ್ದಾರೆ.

ಈ ಅಧಿಕರಣದಲ್ಲಿ ಅರ್ವಾಚೀನರಾದ ಯಾರೋ ಪರಪಕ್ಷದವರು ದೋಷವನ್ನು ಉತ್ಪ್ರೇಕ್ಷೆ ಮಾಡಿದ್ದಾರೆ. ಆ ಉತ್ಪ್ರೇಕ್ಷೆಯು ಭಾಷ್ಯ ಮತ್ತು ಟೀಕೆಗಳನ್ನು ಸರಿಯಾಗಿ ನೋಡಿ ಈ ಅಧಿಕರಣದ ಅರ್ಥವನ್ನು ವಿಮರ್ಶೆಮಾಡುವವರಿಗೆ ಸುಲಭವಾಗಿ ಪರಿಹರಿಸಲು ಸಾಧ್ಯವಾಗುತ್ತದೆ ಎಂಬ ಅಭಿಪ್ರಾಯದಿಂದ ಈ ಅಂಶವನ್ನು ವಿವರಿಸುತ್ತಿಲ್ಲ.

॥ಇಲ್ಲಿಗೆ ಶ್ರೀರಾಘವೇಂದ್ರಶ್ರೀಮಚ್ಚರಣರಿಂದ ವಿರಚಿತವಾದ ತತ್ವಪ್ರಕಾಶಿಕಾಭಾವದೀಪದ
ಕನ್ನಡಾನುವಾದದಲ್ಲಿ ಆನಂದಮಯಾಧಿಕರಣವು ಮುಗಿಯಿತು ॥

**वाक्यार्थमञ्जरी– ॐ अस्मिन्नस्य च तद्योगं शास्ति ॐ** ।। अस्मिन्प्रकरणे अस्य जीवस्य तेन आनंदमयादिरूपेण ब्रह्मणा सह योग संबंधं मुक्तावपि 'सोश्नुते' इति श्रुतिः शास्ति शंसति । यतो त ऐक्यायोगान्नानंदमयादिरितर इत्यर्थः । भेद एवेत्यत्र हेतुमाह – **संबंधस्येति** ।। **सोश्नुत इति** ।। स ब्रह्मवित् स्वयोग्यसर्वकामान् सर्वज्ञेन ब्रह्मणा सहैव भुङ्क्त इत्यर्थः । भाष्ये युक्तिसमुच्चय इति सामान्येनोक्तत्वादाह – **अथवेति** ।। तत्कथमित्यत एतत्सूत्र व्याख्यानरूपानुव्याख्यानमुदाहरति - **तदुक्तमिति** ।। यद्यस्मात् अस्य सयं एवंविदित्युक्तस्य ब्रह्मविदः फलत्वेनान्नमयादिभिर्योगं तत्प्राप्तिस्थानद्वये 'एतमन्नमयमात्मानमुपसंक्रमति' इत्यादौ 'एतमन्नमयमात्मानमुपसंक्रम्य' इत्यादौ चानुवाकद्वये शंसति कथयति श्रुतिः अत एतेऽन्नमयादयः कोशा इति व्याख्यानमतिसाहसं पूर्वेत्तरापरामर्शमूलमित्यर्थः । आद्य व्याख्यानं तु मुक्तेशभेद–समर्थनाय सोश्नुत इति श्रुत्युदाहरणं तत्स्वारस्यानुरोधेनेति ।।६।।

**।। इति श्रीशर्कराश्रीनिवासाचार्यविरचितायां वाक्यार्थमञ्जर्याम्**

**आनन्दमयाधिकरणम् ।।**

ಸೂತ್ರಾರ್ಥ - 'ಅಸ್ಮಿನ್' -ಪ್ರಕರಣದಲ್ಲಿ, 'ಅಸ್ಯ' ಜೀವನಿಗೆ ತೇನ= ಆನಂದಮಯವೇ ಮೊದಲಾದ ರೂಪಗಳಿಂದ ಬ್ರಹ್ಮನ ಜೊತೆಗೆ 'ಯೋಗಂ' ಸಂಬಂಧವನ್ನು ಮುಕ್ತಿಯಲ್ಲಿಯೂ 'ಸೋಽಶ್ನುತೇ' ಎಂಬ ಶ್ರುತಿಯು 'ಶಾಸ್ತಿ' ಶಾಸನ ಮಾಡುತ್ತದೆ. ಆದ್ದರಿಂದ ಜೀವಬ್ರಹ್ಮರಿಗೆ ಐಕ್ಯಇಲ್ಲದಿರುವುದರಿಂದ ಆನಂದಮಯಾದಿಗಳು ಅನ್ಯರಲ್ಲ ಎಂದು ಅರ್ಥ.

ಜೀವಬ್ರಹ್ಮರಿಗೆ ಭೇದವೇ ಇದೆ ಎಂಬ ವಿಷಯದಲ್ಲಿ ಕಾರಣವನ್ನು ತಿಳಿಸಲು 'ಸಂಬಂಧಸ್ಯ' ಎಂಬ ವಾಕ್ಯ ಹೊರಟಿದೆ.

'ಸೋಽಶ್ನುತೇ'ಎಂಬ ಶ್ರುತಿಯ ಅರ್ಥ - 'ಸಃ' ಜೀವನು, ಮೋಕ್ಷದಲ್ಲಿ ಸರ್ವಜ್ಞನಾದ ಬ್ರಹ್ಮನಿಂದ ಕೂಡಿಕೊಂಡು ತನ್ನ ಯೋಗ್ಯಾತಾನುಸಾರಿಯಾಗಿ ಸಕಲ ಕಾಮಗಳನ್ನು ಭೋಗ ಮಾಡುತ್ತಾನೆ ಎಂದರ್ಥ.

ಸೂತ್ರದಲ್ಲಿರುವ 'ಚ' ಶಬ್ದವು ಯುಕ್ತಿಸಮುಚ್ಚಯವೆಂದು ಭಾಷ್ಯದಲ್ಲಿ ಸಾಮಾನ್ಯವಾಗಿ ಹೇಳಿದ್ದರಿಂದ ಟೀಕಾದಲ್ಲಿ 'ಅಥವಾ' ಎಂದು ಹೇಳಿದ್ದಾರೆ. ಹೇಗೆಂಬುದನ್ನು ತೋರಿಸಲು ಈ ಸೂತ್ರದ ವ್ಯಾಖ್ಯಾನ ರೂಪವಾದ ಅನುವ್ಯಾಖ್ಯಾನದ ವಾಕ್ಯವನ್ನು ಉದಾಹರಿಸುತ್ತಿದ್ದಾರೆ.

ಯದಿ - ಯಾವ ಕಾರಣದಿಂದ 'ಸ ಯ ಏವಂ ವಿತ್' ಎಂಬ ಶ್ರುತಿಗಳಲ್ಲಿ ಹೇಳಿದ ಪ್ರಕಾರವಾಗಿ ಯಾರು ಬ್ರಹ್ಮನನ್ನು ತಿಳಿಯುತ್ತಾರೆಯೋ ಅವರಿಗೆ ಫಲರೂಪವಾಗಿ ಅನ್ನಮಯಾದಿಗಳಿಂದ ಯೋಗವನ್ನು ಮತ್ತು ಅವುಗಳ ಪ್ರಾಪ್ತಿಯನ್ನು ಹೇಳಲಾಗಿದೆ. ಇದನ್ನೇ 'ಏತಮನ್ನಮಯ-ಮಾತ್ಮಾನಮುಪಸಂಕ್ರಾಮತಿ' ಮತ್ತು 'ಏತಮನ್ನಮಯಮಾತ್ಮಾನಮುಪಸಂಕ್ರಮ್ಯ' ಇತ್ಯಾದಿ ಶ್ರುತಿ-ಗಳು 'ಶಂಸತಿ' ಹೇಳುತ್ತಿವೆ. ಆದ್ದರಿಂದ ಈ ಅನ್ನಮಯವೇ ಮೊದಲಾದವುಗಳು ಕೋಶ ಎಂದು ವ್ಯಾಖ್ಯಾನ ಮಾಡುವುದು ಅತಿಸಾಹಸವಾಗಿದೆ.

ಮೊದಲಿನ ವ್ಯಾಖ್ಯಾನವಾದರೂ ಮುಕ್ತರಿಗೂ ಮತ್ತು ಈಶ್ವರನಿಗೂ ಭೇದವನ್ನು ಸಮರ್ಥನೆ ಮಾಡಲು 'ಸೋಽಶ್ನುತೇ' ಎಂಬ ಶ್ರುತಿಯನ್ನು ಉದಾಹರಿಸಲಾಗಿದೆ.

॥ಇಲ್ಲಿಗೆ ವಾಕ್ಯಾರ್ಥಮಂಜರಿಯ ಕನ್ನಡಾನುವಾದದಲ್ಲಿ
ಶಾಸ್ತ್ರಯೋನಿತ್ವಾಧಿಕರಣವು ಸಮಾಪ್ತವಾಯಿತು ॥

## श्रीपद्मनाभतीर्थविरचितसत्तर्कदीपावळिः

**ॐ अस्मिन्नस्य च तद्योगं शास्ति ॐ ।।१९।।**

इतोऽप्यखिलजीवादिभ्यो अन्य एवानन्दमयः परमात्मा विष्णुरत्र प्रतिपाद्यते सोश्नुत इत्यादिना । मुक्तौ जीवप्राप्यतया व्यपदेशादित्येतमर्थं प्रतिपादयत्सूत्रमुपन्यस्य व्याचष्टे अस्मिन्नित्यादिना । (१।१।६)

।। इति श्रीपद्मनाभतीर्थविरचितदीपावळ्याम्
आनन्दमयाधिकरणम् ।।

ಈ ಕಾರಣದಿಂದಲೂ ಜೀವಾದಿಗಳಿಂದ ಭಿನ್ನನಾದ ಪರಮಾತ್ಮನಾದ ವಿಷ್ಣುವೇ ಆನಂದಮಯ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ ಎನ್ನುವುದನ್ನು 'ಸೋಽಶ್ನುತೇ' ಎನ್ನುವುದರಿಂದ ಹೇಳುತ್ತಾರೆ. ಮುಕ್ತಿಯಲ್ಲಿ ಜೀವನಿಂದ ಹೊಂದಲ್ಪಡುತ್ತಾನೆ ಎಂದು ಹೇಳಿದ್ದರಿಂದ ಎಂದು ಪ್ರತಿಪಾದನೆ ಮಾಡುವ ಸೂತ್ರವನ್ನು ಹೇಳಿ ವ್ಯಾಖ್ಯಾನಮಾಡುತ್ತಾರೆ 'ಅಸ್ಮಿನ್' ಮುಂತಾದುದರಿಂದ.

॥ ಶ್ರೀಪದ್ಮನಾಭತೀರ್ಥರಿಂದ ರಚಿತವಾದ ಸತ್ತರ್ಕದೀಪಾವಳಿಯ ಕನ್ನಡಾನುವಾದದಲ್ಲಿ
ಆನಂದಮಯಾಧಿಕರಣವು ಮುಗಿಯಿತು ॥

॥ ಶ್ರೀಗುರುಮಧ್ವೇಶಾರ್ಪಣಮಸ್ತು ॥

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,

### ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ,

### ಶ್ರೀಭಾಷ್ಯ ಇವುಗಳ ಆಯ್ದ ಭಾಗಗಳು

# ಆನಂದಮಯಾಧಿಕರಣ ಸಾರ

## ಅನ್ಯತ್ರೈವಪ್ರಸಿದ್ಧಶಬ್ದಗಳ ವಿಭಾಗ ಪ್ರತ್ಯೇಕ ಅನಾವಶ್ಯಕ

ಆನಂದಮಯಾಧಿಕರಣದಿಂದ ಸಮನ್ವಯವು ಪ್ರಾರಂಭವಾಗುತ್ತಿದೆ. ಸಮನ್ವಯಕ್ಕೆ ಅನುಕೂಲವಾಗಲು ಸಮಸ್ತ ಸಂಸ್ಕೃತಶಬ್ದಗಳನ್ನು ಒಟ್ಟು ನಾಲ್ಕು ಬಗೆಯಲ್ಲಿ ವಿಂಗಡಿಸುತ್ತಿದ್ದಾರೆ. ಆ ನಾಲ್ಕರ ಪೈಕಿ ತತ್ರಪ್ರಸಿದ್ಧಶಬ್ದಗಳು ವಿಷ್ಣುವಿನಲ್ಲಿ ಈಗಾಗಲೇ ಪ್ರಸಿದ್ಧವಾದ್ದರಿಂದ ಪ್ರತ್ಯೇಕವಾಗಿ ಸಮನ್ವಯ ಮಾಡಬೇಕಾಗಿಲ್ಲ. ೧) ಅನ್ಯತ್ರಪ್ರಸಿದ್ಧ, ೨) ಉಭಯತ್ರಪ್ರಸಿದ್ಧ, ೩) ಅನ್ಯತ್ರೈವಪ್ರಸಿದ್ಧ ಈ ಮೂರು ಬಗೆಯ ಶಬ್ದಗಳನ್ನು ಸಮನ್ವಯ ಮಾಡಲು ನಾಲ್ಕು ಪಾದಗಳು ಹೊರಟಿವೆ.

ಈ ಮೂರು ಬಗೆಯ ವಿಂಗಡನೆ ಸರಿಯಿಲ್ಲವೆಂದು ಮೊದಲು ಆಕ್ಷೇಪ ಮಾಡಲಾಗಿದೆ. ಏಕೆಂದರೆ ಅನ್ಯತ್ರೈವಪ್ರಸಿದ್ಧಿಯೆಂದರೆ ಅನ್ಯತ್ರೈವಪ್ರಸಿದ್ಧಿ ಎಂದೇ ಅರ್ಥ. ಪುನಃ ಅನ್ಯತ್ರೈವಪ್ರಸಿದ್ಧಿಯೆಂಬ ಪ್ರತ್ಯೇಕ ವಿಭಾಗ ಬೇಕಾಗಿಲ್ಲ ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾದದ್ದು ಅನ್ಯತ್ರೈವಪ್ರಸಿದ್ಧವೆನಿಸುತ್ತದೆ. ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾದ್ದು ಅನ್ಯತ್ರಪ್ರಸಿದ್ಧ ಎನಿಸುತ್ತದೆಂಬ ವೈಲಕ್ಷಣ್ಯವನ್ನೇನೋ ನೀವು ಹೇಳುತ್ತೀರಿ. ಆದರೆ ಇದು ಕೇವಲ ಮೇಲ್ನೋಟದ ಸಮಾಧಾನ. ಏಕೆಂದರೆ ಅನ್ಯತ್ರಪ್ರಸಿದ್ಧವಾದ ಇಂದ್ರ ಆಕಾಶಾದಿಶಬ್ದಗಳೂ ಸಹ ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾಗಿವೆ. ಸರ್ವಗತತ್ವ ಅಂತರ್ಯಾಮಿತ್ವ ಮೊದಲಾದ ಲಿಂಗಗಳೂ ಸಹ ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾಗಿವೆ. ಆದ್ದರಿಂದ ಅನ್ಯತ್ಯಪ್ರಸಿದ್ಧಶಬ್ದಗಳೆಲ್ಲವೂ ಅನ್ಯತ್ರೈವಪ್ರಸಿದ್ಧದಲ್ಲೇ ಸೇರುವಾಗ ಮೂರು ಬಗೆಯ ವಿಭಾಗ ಅನಾವಶ್ಯಕ.

## ಪಾದಭೇದಕ ಉಪಾಧಿ ಸಾಧುವೆ?

ಅವ್ಯಕ್ತ ಪ್ರಕೃತಿ ಮೊದಲಾದ ಶಬ್ದಗಳ ಸಮನ್ವಯವನ್ನು ನಾಲ್ಕನೆಯ ಪಾದದಲ್ಲಿ ಇಂದ್ರ ಆಕಾಶ ಮೊದಲಾದ ಶಬ್ದಗಳ ಸಮನ್ವಯವನ್ನು ಮೊದಲನೆಯ ಪಾದದಲ್ಲಿ ಮಾಡುತ್ತಿದ್ದೀರಿ. ಇದು ಸರಿಯಲ್ಲ. ಅವ್ಯಕ್ತ, ಪ್ರಕೃತಿ ಮೊದಲಾದ ಶಬ್ದಗಳು ಲೋಕರೂಢಿಯಿಂದಲೂ ಅನ್ಯತ್ರಪ್ರಸಿದ್ಧವಾದ್ದರಿಂದ ಪ್ರಥಮಪಾದದಲ್ಲೇ ಇವುಗಳ ಸಮನ್ವಯ ಮಾಡಬಹುದು. ಮತ್ತು ಇಂದ್ರ ಆಕಾಶಾದಿಶಬ್ದಗಳು ಶ್ರುತಿಯಿಂದಲೂ ಅನ್ಯತ್ರಪ್ರಸಿದ್ಧವಾದ್ದರಿಂದ ನಾಲ್ಕನೆಯ ಪಾದದಲ್ಲೇ ಸಮನ್ವಯ ಮಾಡಬಹುದು. ಆದ್ದರಿಂದ ನೀವು ಮಾಡಿದ ಪಾದಭೇದದ ಉಪಾಧಿಯು ಅಸಂಗತವಾಗಿದೆ.

## ಪ್ರಥಮ ದ್ವಿತೀಯ ಪಾದಗಳ ಉಪಾಧಿನಿರಾಕರಣೆ

ನಾಲ್ಕು ಪಾದಗಳಲ್ಲಿ ವಿಭಿನ್ನತೆಯನ್ನು ತೋರಿಸಲಾಗದೆಂದು ಸಾಮಾನ್ಯವಾಗಿ ಆಕ್ಷೇಪಿಸಿದ್ದಾಯಿತು. ಪ್ರಕೃತ ಪ್ರಥಮ ಹಾಗೂ ದ್ವಿತೀಯಪಾದಗಳನ್ನು ಪ್ರತ್ಯೇಕ ಮಾಡಲು ಕಾರಣವೇನೆಂದು ಆಕ್ಷೇಪಿಸಲಾಗಿದೆ. ಸಕಲಶಬ್ದಗಳ ಸಮನ್ವಯವನ್ನು ಮಹಾಯೋಗವೃತ್ತಿಯಿಂದ ವಿಷ್ಣುವಿನಲ್ಲಿ ಅಂಗೀಕರಿಸಿದ್ದೀರಿ. ಹೀಗಿರುವಾಗ ನಾಮ ಮತ್ತು ಲಿಂಗಗಳೆಂಬ ಭೇದವೇ ಕೂಡುವುದಿಲ್ಲ. ಏಕೆಂದರೆ ನಾಮ ಎಂದರೆ ರೂಢವೆಂದರ್ಥ. ಎಲ್ಲ ಶಬ್ದಗಳನ್ನು

ಭಗವಂತನಲ್ಲಿ ಯೌಗಿಕವೆಂದು ಒಪ್ಪಿದ ಮೇಲೆ ಪುನಃ ನಾಮಾತ್ಮಕ ಲಿಂಗಾತ್ಮಕವೆಂಬ ಪ್ರತ್ಯೇಕತೆಗೆ ಅರ್ಥವಿಲ್ಲ. ಹಾಗಾಗಿದ್ದಲ್ಲಿ ಪ್ರಥಮದ್ವಿತೀಯಪಾದಗಳಿಗೆ ಸಂಗತಿ ದೊರೆಯುತ್ತಿತ್ತು.

ಮತ್ತು ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನೇ ಎರಡೂ ಪಾದಗಳಲ್ಲಿ ಸಮನ್ವಯ ಮಾಡುತ್ತಿರುವುದರಿಂದ ಪಾದಭೇದಕ್ಕೆ ನಿಮಿತ್ತವಿಲ್ಲ. ಹಾಗಾದಲ್ಲಿ ಮೂರನೆಯ ಮತ್ತು ನಾಲ್ಕನೆಯ ಪಾದದಲ್ಲಿ ನಾಮಾತ್ಮಕ ಲಿಂಗಾತ್ಮಕ ಶಬ್ದಗಳ ಸಮನ್ವಯ ಇರುವುದರಿಂದ ಅವುಗಳಿಗಾಗಿ ಇನ್ನೂ ಎರಡೂ ಪಾದಗಳನ್ನು ಪ್ರತ್ಯೇಕವಾಗಿ ರಚಿಸಬೇಕಾಗುತ್ತದೆ.

## ತ್ರಿವಿಧ ಪಾದೋಪಾಧಿಗಳಲ್ಲಿ ತ್ರಿವಿಧ ಲಕ್ಷಣಗಳು

ಪರಮಾತ್ಮನಲ್ಲಿ ಹಾಗೂ ಬೇರೆ ಕಡೆ ಶ್ರುತಿಯಿಂದಲೇ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧಿ ಎನಿಸುತ್ತದೆ. ಶ್ರುತಿಯಿಂದಾಗಲೀ ಲೋಕರೂಢಿಯಿಂದಾಗಲಿ ಅನ್ಯತ್ರಪ್ರಸಿದ್ಧವಾಗಿದ್ದರೆ ಅನ್ಯತ್ರಪ್ರಸಿದ್ಧ ಎನಿಸುತ್ತದೆ. ಬಲಿಷ್ಠವಾದ ಶ್ರುತಿಲಿಂಗಾದಿಗಳಿಂದ ಶಬ್ದಗಳು ಬೇರೆ ಕಡೆಯೇ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧಿ ಎನಿಸುತ್ತದೆ. ಅಥವಾ ಶಬ್ದಗಳು ಪರಮಾತ್ಮನಲ್ಲಿ ಪ್ರಸಿದ್ಧವಾಗಿರುವಂತೆ ಬೇರೆ ಕಡೆಯೂ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧ ಎನಿಸುತ್ತದೆ. ಅನ್ಯತ್ರಪ್ರಸಿದ್ಧವಾಗಿರುವಿಕೆ ಮಾತ್ರ ಇಲ್ಲಿ ಸಮನ್ವಯಕ್ಕೆ ವಿರೋಧಿ ಆಗಿದೆ. ಬೇರೆ ಕಡೆ ಪ್ರಸಿದ್ಧವಾಗಿದ್ದು ಪರಮಾತ್ಮನಲ್ಲಿ ಪ್ರಸಿದ್ಧವಾಗದಿದ್ದರೆ ಅನ್ಯತ್ರಪ್ರಸಿದ್ಧ ಎನಿಸುತ್ತದೆ. ಬ್ರಹ್ಮನಲ್ಲಿ ಅಪ್ರಸಿದ್ಧಿ ಬೇರೆಡೆ ಪ್ರಸಿದ್ಧಿ ಎಂಬೆರಡು ಸಮನ್ವಯಕ್ಕೆ ವಿರೋಧಿಗಳಾಗಿವೆ.

ಅನ್ಯತ್ರೈವಪ್ರಸಿದ್ಧಿಯಲ್ಲಿ ಒಟ್ಟು ಮೂರು ವಿರೋಧಗಳು ೧) ಪರಮಾತ್ಮನಲ್ಲಿ ಪ್ರಸಿದ್ಧಿ ಇಲ್ಲದಿರುವಿಕೆ ೨) ಅನ್ಯತ್ರಪ್ರಸಿದ್ಧವಾಗಿರುವಿಕೆ ೩) ಪರಮಾತ್ಮನಲ್ಲಿ ಸಮನ್ವಯವು ಅತ್ಯಂತ ಅಶಕ್ಯವಾಗಿರುವಿಕೆ. ಉಭಯತ್ರಪ್ರಸಿದ್ಧಿಯ ಹೇತುಮುಖಲಕ್ಷಣ

## ಉಭಯತ್ರಪ್ರಸಿದ್ಧಿಯ ಹೇತುಮುಖಲಕ್ಷಣ

ಇಷ್ಟು ಕಾರಣಗಳಿಂದ ಉಭಯತ್ರಪ್ರಸಿದ್ಧಿಯನ್ನು ಹೇಳಬಹುದು

೧) ಶ್ರುತ್ಯಂತರಸಾಧಾರಣ್ಯದಿಂದ
೨) ಪ್ರವೃತ್ತಿನಿಮಿತ್ತಸಾಧಾರಣ್ಯದಿಂದ
೩) ವಿಷಯವಾಕ್ಯದಲ್ಲಿರುವ ಕಾರಣತ್ವಾದಿಧರ್ಮಸಾಧಾರಣ್ಯದಿಂದ
೪) ಪ್ರಯೋಗಸಾಧಾರಣ್ಯದಿಂದ

ಈ ನಾಲ್ಕು ಕಾರಣಗಳಿಂದಷ್ಟೇ ಉಭಯತ್ರಪ್ರಸಿದ್ಧಿಯನ್ನು ಹೇಳಬೇಕು. ಪೂರ್ವಪಕ್ಷಸಿದ್ಧಾಂತನ್ಯಾಯಗಳಿಂದ ಉಭಯತ್ರಪ್ರಸಿದ್ಧಿಯನ್ನು ಹೇಳಬಾರದು.

ಇನ್ನು ಆಕಾಶ ಮೊದಲಾದ ಒಂದೇ ಶಬ್ದಗಳನ್ನು ಮೂರೂ ಪಾದಗಳಲ್ಲಿಯೂ ಸಮನ್ವಯ ಮಾಡುವ ಅವಶ್ಯಕತೆ ಏನು? ಎಂದು ಪ್ರಶ್ನಿಸಲಾಗಿತ್ತು. ಆದರೆ 'ಆಕಾಶಸ್ತಲ್ಲಿಂಗಾತ್' ಎಂದು ವಿಷ್ಣುವಿನಲ್ಲಿ ಸಮನ್ವಯ ಮಾಡುವ ಮೊದಲು ಆಕಾಶಶಬ್ದವು ಲೋಕತಃ ಅನ್ಯತ್ರಪ್ರಸಿದ್ಧವಾಗಿರುತ್ತದೆ.ಆದ್ದರಿಂದ ಪ್ರಥಮಪಾದದಲ್ಲಿ ಸಮನ್ವಯ ಮಾಡಲೇ ಬೇಕು. ವಿಷ್ಣುವಿನಲ್ಲಿ ಸಮನ್ವಯ ಮಾಡಿದ ಮೇಲೆ ಲೋಕದಲ್ಲಿ ಮತ್ತು ವಿಷ್ಣುವಿನಲ್ಲಿ

ಪ್ರಸಿದ್ಧವಾಗುವುದರಿಂದ ಉಭಯತ್ರಪ್ರಸಿದ್ಧವಾಗುತ್ತದೆ. ಆದ್ದರಿಂದ ಮೂರನೆಯ ಪಾದದಲ್ಲಿಯೂ ಸಮನ್ವಯ ಮಾಡಬೇಕಾಗುತ್ತದೆ. ಪುನಃ 'ಆತ್ಮನಃ ಆಕಾಶಸ್ಸಂಭೂತಃ' ಇತ್ಯಾದಿ ವಾಕ್ಯಗಳನ್ನು ನೋಡಿದಾಗ ಬ್ರಹ್ಮಲಿಂಗಗಳು ಕಾಣುವುದಿಲ್ಲ. ಸಂಭೂತತ್ವ ಮೊದಲಾದ ವಿಪರೀತಲಿಂಗಗಳಿಂದ ಲೋಕಪ್ರಸಿದ್ಧವಾದ ಭೂತಾಕಾಶವನ್ನೇ ಇಟ್ಟುಕೊಳ್ಳಬೇಕಾಗುತ್ತದೆ. ಹೀಗೆ ಅನ್ಯತ್ರೈವಪ್ರಸಿದ್ಧವೂ ಆಗುವುದರಿಂದ ಅದೇ ಆಕಾಶಶಬ್ದವನ್ನು ನಾಲ್ಕನೆಯ ಪಾದದಲ್ಲಿಯೂ ಸಮನ್ವಯ ಮಾಡಬೇಕಾಗುತ್ತದೆ. ಆದ್ದರಿಂದ ಆಯಾ ಪಾದೋಪಾಧಿಗಳಿದ್ದಾಗ ಒಂದೇ ವಿಧವಾದ ಶಬ್ದಗಳನ್ನು ಮೂರು ಪಾದಗಳಲ್ಲಿಯೂ ಸಮನ್ವಯ ಮಾಡಬಹುದು.

## ಅನ್ಯತ್ರಪ್ರಸಿದ್ಧಿ ಮತ್ತು ಅನ್ಯತ್ರೈವಪ್ರಸಿದ್ಧಿಯ ಹೇತುಮುಖಲಕ್ಷಣ

'ಶ್ರುತ್ಯಾದಿತೋ ಲೋಕತೋ ವಾऽಪೀತರೇಷು ಪ್ರಸಿದ್ಧತಾ' ಎಂದು ಅನ್ಯತ್ರಪ್ರಸಿದ್ಧಿಯ ಹೇತುಮುಖ ಲಕ್ಷಣವನ್ನು ಹಿಂದೆ ಹೇಳಿದ್ದರು. ಅದನ್ನು ಈಗ ಲಕ್ಷ್ಯದಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಇಂದ್ರಾದಿಶಬ್ದಗಳು ಮತ್ತು ಸರ್ವಗತತ್ವಾದಿಲಿಂಗಗಳು ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿವೆ. ಕೆಲವೊಮ್ಮೆ ಲಿಂಗಗಳು ಶ್ರುತ್ಯಾದಿಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವಾಗುತ್ತವೆ. ಆದರೆ ಆ ಶ್ರುತಿಗಳು ನಾಲ್ಕನೇ ಪಾದದ ಶ್ರುತಿಗಳಂತೆ ಪ್ರಬಲವಾಗಿರುವುದಿಲ್ಲವೆಂಬುದು ಗಮನಾರ್ಹವಿಷಯ. ಆದ್ದರಿಂದ ಅನ್ಯತ್ರೈವಪ್ರಸಿದ್ಧಿಯಿಂದ ಸಾಂಕರ್ಯ ಬರುವುದಿಲ್ಲ. ಶ್ರುತ್ಯಂತರ ಸಾಧಾರಣ್ಯದಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳದ ಕಾರಣ ಉಭಯತ್ರಪ್ರಸಿದ್ಧಿಯಿಂದಲೂ ಸಾಂಕರ್ಯ ಬರುವುದಿಲ್ಲ.

''ಬಲವತ್‌ಶ್ರುತಿಲಿಂಗಾದ್ಯೈರನ್ಯೇಷ್ವೇವ ಪ್ರಸಿದ್ಧತಾ'' ಎಂದು ಅನ್ಯತ್ರೈವಪ್ರಸಿದ್ಧಿಯ ಹೇತುಮುಖ ಲಕ್ಷಣವನ್ನು ಲಕ್ಷ್ಯದಲ್ಲಿ ತೋರಿಸುವ ಬಗೆ ಹೀಗೆ - 'ಅವ್ಯಕ್ತಾತ್ ಪುರುಷಃ ಪರಃ' 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯಗಳು ಪ್ರಬಲವಾಗಿವೆ. ಶ್ರುತಿಗಳು ಪ್ರಬಲವಾದ್ದರಿಂದ ಅವ್ಯಕ್ತಾದಿಶಬ್ದಗಳು ಅನ್ಯತ್ರೈವಪ್ರಸಿದ್ಧಗಳೆನಿಸುತ್ತವೆ. ಇವುಗಳನ್ನು ಪರಮಮುಖ್ಯವೃತ್ತಿಯಿಂದ ವಿಷ್ಣುಪರವಾಗುತ್ತವೆಂದು ಸಮನ್ವಯ ಮಾಡಿದರೂ ಅಪರಮಮುಖ್ಯವೃತ್ತಿಯಿಂದ ಅನ್ಯಪರತ್ವವನ್ನು ಅಂಗೀಕರಿಸಲೇಬೇಕು.

## ಅನ್ಯತ್ರೈವಪ್ರಸಿದ್ಧಿಯ ಲಕ್ಷಣದಲ್ಲಿ ಬಲವತ್ ಪದಕ್ಕೆ ಎರಡು ಅರ್ಥ

ನಾಲ್ಕನೇ ಪಾದದ ಪ್ರತಿಯೊಂದು ಅಧಿಕರಣಗಳಲ್ಲಿಯೂ ಉದಾಹರಿಸುವ ಶ್ರುತಿವಾಕ್ಯಗಳು ಪರಮಮುಖ್ಯವೃತ್ತಿಯಿಂದ ಹರಿಪರವಾದರೂ ಅಪರಮಮುಖ್ಯವೃತ್ತಿಯಿಂದ ಅನ್ಯಪರವಾಗಿರುತ್ತವೆ. ಆದರೆ 'ಏತೇನ ಸರ್ವೇ' ಇತ್ಯಾದಿ ಕೊನೆಯ ಅಧಿಕರಣದಲ್ಲಿ ಮಾತ್ರ ಕಥಂಚಿದಪಿ ಅನ್ಯಪರವಾಗದ 'ಅಸದ್ವಾ ಇದಮಗ್ರ' ಎಂಬುದನ್ನು ವಿಷಯವಾಕ್ಯವನ್ನಾಗಿ ಉಲ್ಲೇಖಿಸಿದ್ದಾರಲ್ಲ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಎರಡು ಬಗೆಯಲ್ಲಿ ಉತ್ತರಿಸಬಹುದು - 'ಅಸದ್ವಾ ಇದಮಗ್ರ' ಎಂಬುದು ವಿಷಯವಾಕ್ಯವೇ ಅಲ್ಲ. ಬೇರೆ ವಾಕ್ಯಗಳೇ ವಿಷಯವಾಕ್ಯಗಳು. ಆ ವಿಷಯವಾಕ್ಯದಲ್ಲಿರುವ ಅಸತ್‌ಶಬ್ದವು ಬ್ರಹ್ಮಪರವಾಗದೆ ಶೂನ್ಯಪರವಾದರೆ 'ಅಸದ್ವಾ ಇದಮಗ್ರ' ಎಂಬ ವಾಕ್ಯದಲ್ಲಿರುವ ಅಸತ್ ಶಬ್ದವೂ ಶೂನ್ಯಪರವಾಗಬೇಕಾಗುತ್ತದೆ. ಆದರೆ ಶೂನ್ಯದಿಂದ ಜಗತ್ತು ಹುಟ್ಟಲಾರದು. ಈ ಯುಕ್ತಿಸೂಚನೆಗಾಗಿ ಮಾತ್ರ 'ಅಸದ್ವಾ' ಎಂಬ ವಾಕ್ಯವನ್ನು ಉದಾಹರಿಸಿದ್ದಾರೆ.

ಅಥವಾ 'ಅಸದ್ವಾ ಇದಮಗ್ರ' ಎಂಬುದನ್ನು ವಿಷಯವಾಕ್ಯವನ್ನಾಗಿಯೂ ಪರಿಗಣಿಸಬಹುದು. ಬಲವತ್ ಶ್ರುತಿಲಿಂಗಾದಿಗಳ ಸಮನ್ವಯ ನಾಲ್ಕನೆಯ ಪಾದದಲ್ಲಿ ಮಾಡುತ್ತಾರೆ. ಇಲ್ಲಿ 'ಬಲವತ್' ಎಂದರೆ

ಅಪರಮಮುಖ್ಯವೃತ್ತಿಯಿಂದ ಅನ್ಯಪರವಾಗಿರಬೇಕೆಂದು ಅರ್ಥವೇ ಅಲ್ಲ. ಹೊರತಾಗಿ 'ಬ್ರಹ್ಮಪರವಾದರೆ ಬಹುವಿಪ್ಲವವೆಂಬ ತರ್ಕದಿಂದ ಅನುಗ್ರಹವಾಗಿರುವಿಕೆ' ಎಂದು ಅರ್ಥ. ಪ್ರಕೃತ 'ಅಸತ್' ಶಬ್ದವು ನಿಷೇಧವಸ್ತುವಾಚಕ ಶಬ್ದವಾಗಿದೆ. ಇಂತಹ ಅಸತ್ ಶಬ್ದದಿಂದ ಭಗವಂತನು ವಾಚ್ಯನಾದರೆ ಭಾವತ್ವಕ್ಕೆ ಭಂಗ ಬರುತ್ತದೆಂಬ ಬಹುವಿಪ್ಲವ ದೋಷ ಬರುತ್ತದೆ. ಆದ್ದರಿಂದ ಬಹುವಿಪ್ಲವಾಪತ್ತಿಯೆಂಬ ತರ್ಕದಿಂದ ಅನುಗ್ರಹವಿರುವುದರಿಂದ ಬಲವತ್ವ ಬರುತ್ತದೆ. ಟೀಕೆಯಲ್ಲಿ ಹೇಳಿದಂತೆ 'ಅಸದ್ವಾ ಇದಮಗ್ರ ಆಸೀತ್' ಎಂಬುದೂ ವಿಷಯವಾಕ್ಯವಾಗುತ್ತದೆ.

ಆದ್ದರಿಂದ 'ಬಲವತ್ ಶ್ರುತಿಲಿಂಗಾದ್ಯೈರನ್ಯೇಷ್ವೇವಪ್ರಸಿದ್ಧತಾ' ಎಂಬ ಅನ್ಯತ್ರೈವಪ್ರಸಿದ್ಧಿಯ ಹೇತುಮುಖಲಕ್ಷಣಕ್ಕೆ ಅತಿವ್ಯಾಪ್ತಿ ಮೊದಲಾದ ದೋಷಗಳು ಬರುವುದಿಲ್ಲ. ಇಲ್ಲಿಗೆ ಹೇತುಮುಖಲಕ್ಷಣದ ಸಾಮಾನ್ಯ ಪರಿಚಯ ಮಾಡಿಕೊಟ್ಟಂತಾಯಿತು. ಇದು ಕೇವಲ ದಿಕ್‌ಪ್ರದರ್ಶನ. ಇನ್ನೂ ಹೆಚ್ಚಿನ ವಿಚಾರಗಳನ್ನು ಇದೇ ಮಾರ್ಗದಲ್ಲಿ ವಿಚಾರ ಮಾಡಿ ತಿಳಿದುಕೊಳ್ಳಬೇಕು.

## ನಾಮಲಿಂಗಶಬ್ದಗಳ ಪರಿಚಯ ಮತ್ತು ಪಾದಭೇದವಿಚಾರ

ಇಲ್ಲಿಯ ತನಕ ಅನ್ಯತ್ರಪ್ರಸಿದ್ಧಾದಿಗಳ ಲಕ್ಷಣವನ್ನು ವಿಮರ್ಶಿಸಿದ್ದಾಯಿತು. ಇನ್ನು ಅನ್ಯತ್ರಪ್ರಸಿದ್ಧಾದಿಗಳ ಅವಾಂತರಭೇದದ ಬಗ್ಗೆ ವಿಚಾರ ಮಾಡೋಣ. ಅನ್ಯತ್ರಪ್ರಸಿದ್ಧಾದಿಗಳು ನಾಮಾತ್ಮಕ ಹಾಗು ಲಿಂಗಾತ್ಮಕವೆಂದು ಎರಡೆರಡು ವಿಧಗಳಾಗಿವೆ. ನಾಮಾತ್ಮಕ ಲಿಂಗಾತ್ಮಕ ಶಬ್ದಗಳಲ್ಲಿ ವೈಲಕ್ಷಣ್ಯವನ್ನು ಒಟ್ಟು ಮೂರು ಬಗೆಯಲ್ಲಿ ತೋರಿಸಬಹುದು.

೧) ಆಪಾತತಃ ರೂಢವೇ ಆದದ್ದು ನಾಮಾತ್ಮಕ
ಆಪಾತತಃ ಯೌಗಿಕ ಅಥವಾ ಯೋಗರೂಢವಾದದ್ದು ಲಿಂಗಾತ್ಮಕ

೨) ಆಪಾತತಃ ರೂಢವಾದದ್ದು ನಾಮಾತ್ಮಕ
ಆಪಾತತಃ ಯೋಗಿಕವಾದದ್ದು ಅಥವಾ ಯೋಗರೂಢವಾದ್ದು ಲಿಂಗಾತ್ಮಕ

೩) ಧರ್ಮದ ಮೂಲಕ ಧರ್ಮಿಯ ಉಪಸ್ಥಾಪಕವಾದದ್ದು ಲಿಂಗಾತ್ಮಕ
ಧರ್ಮಿಯನ್ನೇ ನೇರವಾಗಿ ತಿಳಿಸುತ್ತಿದ್ದರೆ ನಾಮಾತ್ಮಕ ಎಂದು.

ಅನ್ಯತ್ರಪ್ರಸಿದ್ಧಿಯು ನಾಮ ಲಿಂಗವೆಂದು ಎರಡು ವಿಧವಾಗಿದೆ. ಆದ್ದರಿಂದ ನಾಮಾತ್ಮಕಶಬ್ದಗಳ ಸಮನ್ವಯಕ್ಕೆ ಪ್ರಥಮಪಾದವು, ಲಿಂಗಾತ್ಮಕ ಶಬ್ದಗಳ ಸಮನ್ವಯಕ್ಕೆ ದ್ವಿತೀಯಪಾದವು ಹೊರಟಿದೆ. ಹಾಗಾದರೆ ಉಭಯತ್ರಪ್ರಸಿದ್ಧಿಯಲ್ಲಿ ಮತ್ತು ಅನ್ಯತ್ರೈವಪ್ರಸಿದ್ಧಿಯಲ್ಲಿಯೂ ಪ್ರತ್ಯೇಕ ಪಾದಗಳಿಂದ ನಾಮ ಲಿಂಗಗಳ ಸಮನ್ವಯ ಮಾಡಬೇಕಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಮೂರು ಬಗೆಯಲ್ಲಿ ಉತ್ತರಿಸಬಹುದು -

೧) ಒಂದು ಅಧ್ಯಾಯದಲ್ಲಿ ನಾಲ್ಕೇ ಪಾದಗಳಿರಬೇಕು. ನಿಮ್ಮ ಪ್ರಕಾರ ಆರು ಪಾದಗಳಾಗಬೇಕಾಗುತ್ತವೆ.

೨) ನಾಮಾತ್ಮಕಶಬ್ದಗಳು ಪ್ರಧಾನವಾಗಿವೆ. ಲಿಂಗಾತ್ಮಕಶಬ್ದಗಳು ಬುದ್ಧಿಸ್ಥವಾಗಿವೆ. ಈಗ ಪ್ರಸಕ್ತವಾದ ಎರಡೂ ವಿಧ ಶಬ್ದಗಳನ್ನು ಮೂರನೆಯ ನಾಲ್ಕನೆಯ ಪಾದದಲ್ಲಿ ಒಟ್ಟಿಗೆ ಸಮನ್ವಯ ಮಾಡಿದ್ದಾರೆ.

೩) ಮೊದಲೆರಡು ಪಾದಗಳಲ್ಲಿ ನಾಮಲಿಂಗವೆಂಬ ಅವಾಂತರಭೇದವನ್ನು ವಿವಕ್ಷಿಸಿ ಪಾದಭೇದ ಮಾಡಿದ್ದಾರೆ. ಮೂರು ನಾಲ್ಕನೆಯ ಪಾದಗಳಲ್ಲಿ ನಾಮಲಿಂಗವೆಂಬ ಅವಾಂತರಭೇದವನ್ನು ವಿವಕ್ಷಿಸದೇ ಮಹಾಯೋಗ ವಿದ್ವದ್ರೂಢಿಗಳಿಂದ ಏಕೀಕರಿಸಿ ಒಟ್ಟಿಗೆ ಸಮನ್ವಯ ಮಾಡಿದ್ದಾರೆ. ಆದ್ದರಿಂದ ಸೂತ್ರಕಾರರು ವಿಭಾಗಿಸಿದ ಪಾದಭೇದವು ಅತ್ಯಂತ ಸಮಂಜಸವಾಗಿದೆ.

## ಪಾದಕ್ರಮ ನಿರೂಪಣೆ

ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯವನ್ನು ಕೊನೆಯಲ್ಲೇ ಮಾಡಬೇಕು. ಆ ಶಬ್ದಗಳು ಬ್ರಹ್ಮಾದಿಗಳಿಂದಷ್ಟೇ ಚಿಂತಿಸಲು ಅರ್ಹವಾದವುಗಳು. ಸಾತ್ವಿಕಜೀವಿಗಳಿಂದ ಚಿಂತಿಸಲು ಅರ್ಹವಾದ ಶಬ್ದಗಳನ್ನು ಮೊದಲು ಸಮನ್ವಯ ಮಾಡುವುದು ಅತ್ಯಂತ ಉಚಿತ. ಮತ್ತು ಮೂರು ಪಾದಗಳಲ್ಲಿ ಸಮರ್ಥಿಸಿದ ವಿಚಾರದ ಬಳಿಕ ಹೆಚ್ಚಿನ ವಿಚಾರವನ್ನು ಮಾಡಿದ್ದರಿಂದ ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯವನ್ನು ಕೊನೆಯದಾಗಿ ಹೇಳಿದ್ದಾರೆ. ಮತ್ತು ಮೊದಲ ಮೂರು ಪಾದಗಳ ಶಬ್ದಗಳೆಲ್ಲ ಜಗತ್ಕಾರಣತ್ವಾದಿ ಗುಣಗಳ ಸಮನ್ವಯದಲ್ಲಿ ಪರ್ಯವಸಾನವಾಗಿವೆ. ಆದರೆ ನಾಲ್ಕನೆಯ ಪಾದ ಹಾಗಿಲ್ಲದ ಕಾರಣ ಕೊನೆಯದಾಗಿ ಹೇಳುವ ಅನಿವಾರ್ಯತೆ ಬಹಳ ಇದೆ.

ಇನ್ನು ಉಭಯತ್ರಪ್ರಸಿದ್ಧವಾದ ಶಬ್ದಗಳನ್ನು ಮೊದಲು ಹೇಳಿ ಆಮೇಲೆ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯ ಮಾಡಬಹುದಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಉಭಯತ್ರಪ್ರಸಿದ್ಧಶಬ್ದಗಳು ಭಾಗಶಃ ವಿಷ್ಣುವಿನಲ್ಲಿ ಪ್ರಸಿದ್ಧಗಳಾದ್ದರಿಂದ ಅವುಗಳ ಸಮನ್ವಯ ಸುಲಭ. ಅನ್ಯತ್ರಪ್ರಸಿದ್ಧಶಬ್ದಗಳು ಹಾಗಲ್ಲದ ಕಾರಣ ಅವುಗಳ ಸಮನ್ವಯ ಕಷ್ಟಕರವಾಗಿದೆ. ಆದ್ದರಿಂದ ಯುದ್ಧದಲ್ಲಿ ಮಹಾಮಲ್ಲನನ್ನೇ ಮೊದಲು ಕೊಲ್ಲುವಂತೆ ಇಲ್ಲಿ ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವನ್ನು ಮೊದಲು ಮಾಡಿದ್ದಾರೆ. ಅನ್ಯತ್ರಪ್ರಸಿದ್ಧಶಬ್ದಗಳಲ್ಲಿಯೂ ನಾಮಾತ್ಮಕಶಬ್ದಗಳು ಪ್ರಬಲವಾದ್ದರಿಂದ ಮೊದಲು ನಾಮಸಮನ್ವಯ ಮಾಡಿ ಅನಂತರ ಲಿಂಗಸಮನ್ವಯ ಮಾಡಿದ್ದಾರೆ. ಮತ್ತು ನಾಮಸಮನ್ವಯ ಮಾಡುವಾಗ ಉಪಯೋಗಿಸಿದ ಲಿಂಗಗಳು ಹರಿಪರವೇ? ಅಲ್ಲವೇ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಸಮಾಧಾನವಾಗಿರುವುದಕ್ಕಾಗಿಯೂ ಲಿಂಗಸಮನ್ವಯವನ್ನು ಎರಡನೆಯದಾಗಿ ಹೇಳಿದ್ದಾರೆ. ಆದ್ದರಿಂದ ೧) ಅನ್ಯತ್ರಪ್ರಸಿದ್ಧನಾಮಸಮನ್ವಯ ೨) ಅನ್ಯತ್ರಪ್ರಸಿದ್ಧಲಿಂಗ- ಸಮನ್ವಯ ೩) ಉಭಯತ್ರಪ್ರಸಿದ್ಧಶಬ್ದಸಮನ್ವಯ ೪) ಅನ್ಯತ್ರೈವಪ್ರಸಿದ್ಧಶಬ್ದಸಮನ್ವಯ. ಈ ಕ್ರಮವು ಅತ್ಯಂತ ಸ್ವಾರಸ್ಯಮಯವೂ ಅರ್ಥಪೂರ್ಣವೂ ಆಗಿದೆ.

## ಅನ್ಯತ್ರ ಹಾಗೂ ಉಭಯತ್ರಪ್ರಸಿದ್ಧಿಶಬ್ದಗಳ ಸಮನ್ವಯವು ಅತ್ಯಾವಶ್ಯಕ

ಅನ್ಯತ್ರಪ್ರಸಿದ್ಧಶಬ್ದಗಳನ್ನು ಸಮನ್ವಯ ಮಾಡುವಾಗ ಅನ್ಯಪರತ್ವವನ್ನು ಅಂಗೀಕರಿಸದೆ ಕೇವಲ ಬ್ರಹ್ಮಪರತ್ವವನ್ನು ಹೇಳಬೇಕು. ಅನ್ಯತ್ರೈವಪ್ರಸಿದ್ಧಶಬ್ದಗಳನ್ನು ಸಮನ್ವಯ ಮಾಡುವಾಗ ಅನ್ಯಪರತ್ವವನ್ನು ಒಪ್ಪಿ ಬ್ರಹ್ಮಪರತ್ವವನ್ನು ಹೇಳಬೇಕು. ಹೀಗೆ ಎರಡು ವಿಧ ಶಬ್ದಗಳಲ್ಲಿರುವ ಸೂಕ್ಷ್ಮವ್ಯತ್ಯಾಸವನ್ನು ಗಮನಿಸಬೇಕು. ಈ ವ್ಯತ್ಯಾಸವಿಲ್ಲದಿದ್ದಲ್ಲಿ ಅತ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವು ಪ್ರಬಲವಾದ ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯದಿಂದಲೇ ಸಿದ್ಧವಾಗುತ್ತಿತ್ತು. ಪ್ರತ್ಯೇಕವಾಗಿ ಸಮನ್ವಯ ಮಾಡುವ ಅವಶ್ಯಕತೆ ಇರುತ್ತಿರಲಿಲ್ಲ.

ಮತ್ತು ಮೊದಲ ಮೂರು ಪಾದಗಳಲ್ಲಿ ನಿರ್ಣಯಿಸಿದ ವಿಚಾರವನ್ನು ಆಶ್ರಯಿಸಿ ನಾಲ್ಕನೆಯ ಪಾದ ಹೊರಟಿದೆ. ಹೀಗೆ ಒಪ್ಪದಿದ್ದರೂ ಮೂರು ಪಾದಗಳಿಗೆ ಸಾರ್ಥಕ್ಯ ಹೇಳುವುದು ಕಷ್ಟವಾಗುತ್ತದೆ. ಮೊದಲ

ಮೂರುಪಾದಗಳು ನಾಲ್ಕನೆಯ ಪಾದಕ್ಕೆ ಉಪಜೀವ್ಯವೆಂದು ಹೇಳಿದಾಗ ಮೊದಲ ಮೂರುಪಾದಗಳಿಲ್ಲದೆ ನಾಲ್ಕನೇ ಪಾದ ಹೊರಡಲು ಸಾಧ್ಯವಿಲ್ಲ. ಆದರೂ ನಾಲ್ಕನೇ ಪಾದದಿಂದ ಮೂರು ಪಾದಗಳಿಗೆ ವೈಯ್ಯರ್ಥ್ಯ ಹೇಳಿದರೆ ಪೂರ್ವಮೀಮಾಂಸೆಯಲ್ಲಿ ಸ್ವರ್ಗಕಾಮಾಧಿಕರಣವನ್ನು ಉಪಜೀವಿಸಿ ಹೊರಟ ಭಾವಾರ್ಥಾಧಿ ಕರಣದಿಂದ ಸ್ವರ್ಗಕಾಮಾಧಿಕರಣಕ್ಕೆ ವೈಯ್ಯರ್ಥ್ಯ ಹೇಳಬೇಕಾಗುತ್ತದೆ. ಆದ್ದರಿಂದ ಯಾವ ಅಧಿಕರಣದ ಸಿದ್ಧಾಂತವನ್ನು ಆಶ್ರಯಿಸಿ ಯಾವ ಅಧಿಕರಣ ಹೊರಟಿರುತ್ತದೋ ಅದೇ ಅಧಿಕರಣದ ಸಿದ್ಧಾಂತಕ್ಕೆ ಆ ಅಧಿಕರಣದ ಪೂರ್ವಪಕ್ಷದಿಂದ ವಿರೋಧ ಹೇಳಬಾರದು.

ಇನ್ನು 'ತತ್ರಪ್ರಸಿದ್ಧ' ಶಬ್ದಕ್ಕೆ 'ಅನ್ಯಪರತ್ವ ಶಂಕೆ ಇಲ್ಲದ್ದು' ಎಂದರ್ಥ. ಆದ್ದರಿಂದ ತತ್ರಪ್ರಸಿದ್ಧವಾದ 'ವಿಷ್ಣು' 'ನಾರಾಯಣ' ಮೊದಲಾದ ಶಬ್ದಗಳನ್ನೂ ಪ್ರತ್ಯೇಕ ಸಮನ್ವಯ ಮಾಡಬೇಕೆಂಬ ಆಕ್ಷೇಪ ಬರುವುದಿಲ್ಲ. 'ಜನಿತೋತ ವಿಷ್ಣೋಃ' ಎಂಬಲ್ಲಿರುವ 'ವಿಷ್ಣು' ಶಬ್ದವು ಅನ್ಯಪರತ್ವಶಂಕೆಯಿಂದ ಕೂಡಿದೆ; ಹಾಗಾಗಿ ಅನ್ಯತ್ರಪ್ರಸಿದ್ಧವೆನಿಸುತ್ತದೆ. ಇಂತಹ ಶಬ್ದಗಳ ಸಮನ್ವಯವು ಅತ್ಯಾವಶ್ಯಕ.

### ನಾಲ್ಕು ಪಾದಗಳಲ್ಲಿ ಏನೇನು? (ಅದ್ವೈತಮತ ವಿಮರ್ಶೆ)

ಅದ್ವೈತಿಗಳೂ ಕೂಡ ಪ್ರಥಮಾಧ್ಯಾಯವನ್ನು ಸಮನ್ವಯಾಧ್ಯಾಯವೆಂದು ಒಪ್ಪುತ್ತಾರೆ. ಆದರೆ 'ಅನ್ಯತ್ರಪ್ರಸಿದ್ಧ' ಇತ್ಯಾದಿಯಾಗಿ ನಾವು ಹೇಳುವಂತೆ ಪಾದೋಪಾಧಿಗಳನ್ನು ಹೇಳುವುದಿಲ್ಲ. ಅವರು ಹೇಳುವ ಪಾದಭೇದದ ವ್ಯವಸ್ಥೆ ಹೀಗಿದೆ -

ಪ್ರಥಮಪಾದ - ಸ್ಪಷ್ಟಬ್ರಹ್ಮಲಿಂಗಗಳ ಸಮನ್ವಯ
ದ್ವಿತೀಯಪಾದ - ಸವಿಶೇಷನಲ್ಲಿ ಅಸ್ಪಷ್ಟಲಿಂಗಗಳ ಸಮನ್ವಯ
ತೃತೀಯಪಾದ - ನಿರ್ವಿಶೇಷನಲ್ಲಿ ಅಸ್ಪಷ್ಟಲಿಂಗಗಳ ಸಮನ್ವಯ
ಚತುರ್ಥಪಾದ - ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವ ನಿರಾಕರಣೆ.

ಈ ಕ್ರಮದಲ್ಲಿ ಪಾದಭೇದದ ವ್ಯವಸ್ಥೆ ಮಾಡಿದ್ದಾರೆ. ಆದರೆ ವ್ಯವಸ್ಥೆಗೆ ವಿರುದ್ಧವಾಗಿ ವಿಷಯವಾಕ್ಯಗಳನ್ನು ಉಲ್ಲೇಖಿಸಿದ್ದಾರೆ. ಪ್ರಥಮಪಾದದಲ್ಲಷ್ಟೇ ಸ್ಪಷ್ಟಬ್ರಹ್ಮಲಿಂಗಗಳನ್ನು ಹೇಳಿ ಮುಗಿಸಬೇಕಿತ್ತು. ಆದರೆ ಎರಡನೆಯ ಪಾದದ ಅನೇಕ ಅಧಿಕರಣಗಳಲ್ಲಿ ಪುನಃ ಸ್ಪಷ್ಟಬ್ರಹ್ಮಲಿಂಗಗಳುಳ್ಳ ವಿಷಯವಾಕ್ಯಗಳನ್ನೇ ಹೇಳಿದ್ದಾರೆ. ಅಷ್ಟೇ ಅಲ್ಲದೇ ಮೂರನೆಯ ಪಾದದಲ್ಲಿಯೂ ಅನೇಕ ಕಡೆ ಸ್ಪಷ್ಟಬ್ರಹ್ಮಲಿಂಗಗಳೇ ಕಾಣಿಸುತ್ತಿವೆ.

ಇನ್ನು ಅದ್ವೈತಿಗಳು ಸ್ಪಷ್ಟತ್ವದ ಪರಿಷ್ಕಾರವನ್ನು ಮೂರು ಬಗೆಯಲ್ಲಿ ಮಾಡುತ್ತಾರೆ -

೧) ಸ್ವಾರಸ್ಯದಿಂದ ಅಥವಾ ಅಸ್ವಾರಸ್ಯದಿಂದ ಜೀವನಲ್ಲಿ ಆ ಧರ್ಮವು ಬರಬಾರದು.

೨) ವಿಷಯವಾಕ್ಯದಲ್ಲಿ ಬ್ರಹ್ಮನ ಧರ್ಮವಾಗಿ ನಿರ್ಣೀತವಾಗಿರಬೇಕು.

೩) ಜೀವಾದಿಗಳನ್ನು ತಿಳಿಸುವ ಲಿಂಗಗಳು ಇರಬಾರದು ಎಂದು.

ಆದರೆ ಈ ಮೂರರಲ್ಲಿ ಯಾವುದೇ ಒಂದನ್ನು ಇಟ್ಟುಕೊಂಡರೂ ಯಾವ ಅಧಿಕರಣದ ಪೂರ್ವಪಕ್ಷವೂ ಹುಟ್ಟುವುದಿಲ್ಲ. ಆದ್ದರಿಂದ ಸ್ಪಷ್ಟತ್ವದ ಪರಿಷ್ಕಾರವನ್ನು ಹೀಗೆ ಮಾಡಬೇಕು -

೧) ವಿಷಯವಾಕ್ಯ ಬಿಟ್ಟು ಬೇರೆ ವಾಕ್ಯಗಳಿಂದ ಬ್ರಹ್ಮನ ಧರ್ಮವೆಂದು ನಿರ್ಣಯವಾಗಿರಬೇಕು.

೨) ಜೀವಾದಿಗಳಲ್ಲಿ ಸ್ವಾರಸ್ಯವಾಗಿ ಕೂಡಬಾರದು ಎಂದು.

ಸವಿಶೇಷನನ್ನು ಎರಡನೆಯ ಪಾದವು ಸಮರ್ಥಿಸುತ್ತದೆಂದು ಹೇಳುತ್ತಾರೆ. ಆದರೆ ಸರ್ವಭ್ರಮಾಧಿಷ್ಠಾನತ್ವ, ಕಾಲತ್ರಯಾತೀತತ್ವ ಮೊದಲಾದವು ಸವಿಶೇಷನಲ್ಲ; ಬಾರದ ಧರ್ಮಗಳನ್ನೇ ಎರಡನೆಯ ಪಾದದಲ್ಲಿ ಹೇಳಿದ್ದಾರೆ. ನಿರ್ವಿಶೇಷನನ್ನು ಮೂರನೆಯ ಪಾದ ಸಮರ್ಥಿಸುತ್ತದೆಂದು ಹೇಳಿದ್ದಾರೆ. ಆದರೆ ದೃಶ್ಯತ್ವ, ರೂಪಿತ್ವ, ಸಪ್ರಕಾರಕಜ್ಞಾನವಿಷಯತ್ವವೇ ಮೊದಲಾದ ಧರ್ಮಗಳನ್ನು ಹೇಳಿದ್ದಾರೆ. ಇವು ಸವಿಶೇಷನಲ್ಲಿ ಬರುತ್ತವೆ ಹೊರತು ನಿರ್ವಿಶೇಷನಲ್ಲಿ ಬರುವುದಿಲ್ಲ.

ಹೀಗೆ ಅದ್ವೈತಿಗಳ ಪಾದೋಪಾಧಿಗಳು ಸಾಂಕರ್ಯದೋಷಗ್ರಸ್ತಗಳಾಗಿವೆ.

## ಅದ್ವೈತಿಗಳ ಪಾದೋಪಾದಿ ಪಾದಕ್ರಮಗಳ ನಿರಾಸ

ಅದ್ವೈತಿಗಳು ಅಧಿಕರಣಗಳ ಭೇದವನ್ನು ಮತ್ತೊಂದು ಬಗೆಯಲ್ಲಿ ನಿರೂಪಿಸುತ್ತಾರೆ - ಯೌಗಿಕಶಬ್ದಗಳ ಸಮನ್ವಯಕ್ಕೆ ಎರಡನೆಯ ಪಾದವು, ರೂಢಶಬ್ದಗಳ ಸಮನ್ವಯಕ್ಕೆ ಮೂರನೆಯ ಪಾದವು ಹೊರಟಿದೆ. ಇದೂ ಸಹ ತಪ್ಪು. ಏಕೆಂದರೆ ಮೂರನೆಯ ಪಾದದಲ್ಲಿ ದುಭ್ವಾದ್ಯಾಯತನತ್ವ ಅಭಿಧ್ಯಾತವ್ಯತ್ವ, ಅಂಗುಷ್ಠಮಾತ್ರತ್ವವೇ ಮೊದಲಾದ ಅನೇಕ ಯೌಗಿಕಶಬ್ದಗಳ ಸಮನ್ವಯವನ್ನು ಮಾಡಿದ್ದಾರೆ.

ನಾಲ್ಕನೆಯ ಪಾದವು ಪ್ರಧಾನವು ಶಬ್ದಪ್ರತಿಪಾದ್ಯವಲ್ಲವೆನ್ನಲು ಹೊರಟಿದೆ ಎನ್ನುತ್ತಾರೆ. ಇದೂ ತಪ್ಪು. ಏಕೆಂದರೆ ಪ್ರಕೃತ್ಯಾದಿ ಅಧಿಕರಣಗಳಲ್ಲಿ ಪ್ರಧಾನದ ಶಬ್ದಪ್ರತಿಪಾದ್ಯತ್ವ ವಿಚಾರವೇ ಪ್ರಸಕ್ತವಾಗಿಲ್ಲ. ಪ್ರಧಾನವೇ ಜಗತ್ಕಾರಣವಾದಾಗ ಬ್ರಹ್ಮನ ಜಗತ್ಕಾರಣತ್ವಲಕ್ಷಣಕ್ಕೆ ಅಸಂಭವದೋಷ ಬರುತ್ತದೆ. ಇದನ್ನು ಪರಿಹರಿಸಲು ಮೊದಲ ಮೂರು ಪಾದಗಳು ಹೊರಟಿವೆ. ಪ್ರಧಾನವೂ ಜಗತ್ಕಾರಣವಾಗಲಿಯೆಂಬ ಅತಿವ್ಯಾಪ್ತಿಯನ್ನು ಪರಿಹರಿಸಲು ನಾಲ್ಕನೆಯ ಪಾದ ಹೊರಟಿದೆಯೆಂದು ಮತ್ತೊಂದು ಬಗೆಯಲ್ಲಿ ಪಾದಭೇದವನ್ನು ಸಮರ್ಥಿಸುತ್ತಾರೆ. ಆದರೆ 'ಮಹತಃ ಪರಮವ್ಯಕ್ತಂ' ಇತ್ಯಾದಿ ವಾಕ್ಯಗಳಿಂದ ಪ್ರಧಾನ ಪ್ರತಿಪಾದ್ಯವಲ್ಲವೆಂದು ಸಮರ್ಥಿಸಿ ಬ್ರಹ್ಮಪರತ್ವವನ್ನು ಉಪಪಾದಿಸಬೇಕು. ಆದರೆ ಅದ್ವೈತಿಗಳು ಹಾಗೆ ಮಾಡದೆ ಅವಿದ್ಯಾಪರತ್ವವನ್ನು ಸಮರ್ಥಿಸುತ್ತಾರೆ. ಕುರಿಯನ್ನು ಹುಲಿ ತೆಗೆದುಕೊಂಡು ಹೋದರೆ ಏನು ಹಾನಿ? ತೋಳ ತೆಗೆದುಕೊಂಡು ಹೊದರೆ ಯಾವ ಲಾಭ? ಎಂಬಂತೆ ಪ್ರಧಾನಪರವಾದರೂ ಅವಿದ್ಯಾಪರವಾದರೂ ದೊಡ್ಡ ಅನರ್ಥವೇ ಉಂಟಾಗುತ್ತದೆ.

ಅದ್ವೈತಿಗಳ ಪಾದಕ್ರಮವೂ ಸರಿಯಿಲ್ಲ - ಸುಲಭವಾದದ್ದನ್ನು ಮೊದಲು ಹೇಳಿದ್ದೇವೆಂದರೆ ಆನಂದಮಯಾಧಿಕರಣದಲ್ಲೇ ಕಷ್ಟವಾದ ನಿರ್ವಿಶೇಷಬ್ರಹ್ಮನ ವಿಚಾರ ಮಾಡಿದ್ದು ತಪ್ಪಾಗುತ್ತದೆ. ಕಷ್ಟವಾದದ್ದನ್ನು ಮೊದಲು ಹೇಳಿದ್ದೇವೆಂದರೆ ಪ್ರಥಮಪಾದದಲ್ಲಿ ಸುಲಭವಾದ ಸ್ಪಷ್ಟಬ್ರಹ್ಮಲಿಂಗಗಳನ್ನು ಹೇಳಿದ್ದು ತಪ್ಪಾಗುತ್ತದೆ. ಆದ್ದರಿಂದ ಅದ್ವೈತಿಗಳ ಪಾದೋಪಾಧಿಗಳಾಗಲೀ ಪಾದಕ್ರಮಗಳಾಗಲೀ ಅತ್ಯಂತ ಅಸಮಂಜಸಗಳಾಗಿವೆ.

## ರಾಮಾನುಜರ ಪಾದಭೇದವ್ಯವಸ್ಥೆಯೂ ತಪ್ಪು

ರಾಮಾನುಜ ಮತದ ಪ್ರಕಾರ ಪಾದವ್ಯವಸ್ಥೆ ಹೀಗಿದೆ -

ಪ್ರಥಮಪಾದ - ಬ್ರಹ್ಮನ ಜಗತ್ಕಾರಣತ್ವಲಕ್ಷಣಕ್ಕೆ ಅಸಂಭವ ಪರಿಹಾರ

ದ್ವಿತೀಯಪಾದ - ಅಸ್ಪಷ್ಟಜೀವಲಿಂಗವಾಕ್ಯಗಳ ಸಮನ್ವಯ ಮತ್ತು ಅತಿವ್ಯಾಪ್ತಿ ಪರಿಹಾರ.

ತೃತೀಯಪಾದ - ಸ್ಪಷ್ಟಜೀವಲಿಂಗವಾಕ್ಯಗಳ ಸಮನ್ವಯ ಮತ್ತು ಅತಿವ್ಯಾಪ್ತಿ ಪರಿಹಾರ.
ಚತುರ್ಥಪಾದ - ಆಪಾತತಃ ಜೀವಾದಿಗಳನ್ನು ಪ್ರತಿಪಾದಿಸುವ ವಾಕ್ಯಗಳ ಸಮನ್ವಯ, ಮತ್ತು ಅತಿವ್ಯಾಪ್ತಿಪರಿಹಾರ.

ಇವರ ಪಾದಭೇದವ್ಯವಸ್ಥೆಯೂ ಸರಿಯಿಲ್ಲ. ಏಕೆಂದರೆ ಪ್ರಥಮಪಾದದಲ್ಲೇ ಅತಿವ್ಯಾಪ್ತಿಯ ಪರಿಹಾರವನ್ನು ಮಾಡಿದ್ದಾರೆ. ಈಕ್ಷತ್ಯಧಿಕರಣದಲ್ಲಿ 'ಸದೇವ ಸೌಮ್ಯ' ಎಂಬ ವಾಕ್ಯವು ಬ್ರಹ್ಮಪರವಾಗಿದೆ. ಇದಕ್ಕೆ ಸಮಾನಾರ್ಥವಾದ ಉಳಿದ ವಾಕ್ಯಗಳೂ ಬ್ರಹ್ಮಪರವೇ ಆಗಬೇಕು. ಪ್ರಧಾನಪರವಾಗುವುದಿಲ್ಲವೆಂದು ನೀವು ಸಿದ್ಧಾಂತ ಮಾಡಬೇಕು. ಆವಾಗ ಅತಿವ್ಯಾಪ್ತಿಯನ್ನು ಪರಿಹರಿಸಿದಂತಾಗುತ್ತದೆ ಹೊರತು ಅಸಂಭವವನ್ನು ಪರಿಹರಿಸಿದಂತಾಗುವುದಿಲ್ಲ. ಆದ್ದರಿಂದ ರಾಮಾನುಜರ ಅಭಿಪ್ರಾಯ ಸರಿಯಿಲ್ಲ.

ಅವರ ಮತ್ತೊಂದು ವಾದ ಪ್ರಥಮಪಾದವು ಚಿದಚಿದ್ವಿಲಕ್ಷಣನಾದ ಬ್ರಹ್ಮನನ್ನಷ್ಟೇ ಪ್ರತಿಪಾದಿಸುತ್ತದೆ. ಉಳಿದ ಮೂರು ಪಾದಗಳು ಬ್ರಹ್ಮನಲ್ಲಿ ಗುಣವಿಶೇಷಗಳನ್ನು ಪ್ರತಿಪಾದಿಸುತ್ತವೆ ಎಂದು.

ಆದರೆ ಇದೂ ಸಹ ಸರಿಯಲ್ಲ. ಚಿದಚಿದ್ವೈಲಕ್ಷಣ್ಯವನ್ನು ಜಗತ್ಕಾರಣತ್ವಧರ್ಮದಿಂದಲೇ ಹೇಳಬೇಕಾಗುತ್ತದೆ. ಆದರೆ ಅಂತಸ್ಥಾಧಿಕರಣದಲ್ಲಿ ಮತ್ತು 'ಜ್ಯೋತಿಶ್ಚರಣ' ಇತ್ಯಾದ್ಯಧಿಕರಣದಲ್ಲಿ ಜಗತ್ಕಾರಣತ್ವವನ್ನು ಹೇಳದೆ ಅಂತಸ್ಥಾದಿಗುಣಗಳನ್ನು ಹೇಳಿದ್ದಾರೆ. ಬ್ರಹ್ಮನಲ್ಲಿ ಈ ಧರ್ಮಗಳಿಂದಲೇ ವೈಲಕ್ಷಣ್ಯ ಹೇಳಿದಂತಾಗುತ್ತದೆ ಹೊರತು ಜಗತ್ಕಾರಣತ್ವದಿಂದ ಹೇಳಿದಂತಾಗಲಿಲ್ಲ.

ಇನ್ನು ಗುಣಾಂತರಗಳಿಂದಲೂ ಚಿದಚಿದ್ವೈಲಕ್ಷಣ್ಯವನ್ನು ಸಮರ್ಥಿಸಬಹುದೆಂದು ಹೇಳಿದರೆ ಮುಂದಿನ ಮೂರು ಪಾದಗಳಿಂದಲೂ ಇದು ಸಿದ್ಧವಾಗುತ್ತದೆ. ಪ್ರಥಮಪಾದದಲ್ಲಿ ಮಾತ್ರ ಚಿದಚಿದ್ವೈಲಕ್ಷಣ್ಯ ಹೇಳಿದ್ದೇವೆಂದು ಹೇಳಿದ್ದು ತಪ್ಪಾಗುತ್ತದೆ.

### ಅಸ್ಪಷ್ಟಜೀವಾದಿಲಿಂಗಗಳಿಂದ ಪಾದಭೇದವು ಕೂಡುವುದಿಲ್ಲ.

ಅದ್ವೈತಿಗಳಂತೆ ರಾಮಾನುಜರೂ ಸಹ ಅಸ್ಪಷ್ಟಜೀವಾದಿಲಿಂಗಗಳ ಸಮನ್ವಯವನ್ನು ಎರಡನೆಯ ಪಾದದಲ್ಲಿ ಹೇಳುತ್ತಾರೆ. ಆದರೆ ಮನೋಮಯತ್ವ ಅತೃತ್ವ ಮೊದಲಾದ ಧರ್ಮಗಳನ್ನು ಎರಡನೆಯ ಪಾದದಲ್ಲಿ ಅವರೇ ಹೇಳಿದ್ದರಿಂದ ಅವರ ನಿಯಮಕ್ಕೆ ಭಂಗ ಬರುತ್ತದೆ. ಮನೋಮಯತ್ವ ಎಂದರೆ ಮನಃಕರಣಕತ್ವಮ್ ಎಂದರ್ಥ. ಇದು ಜೀವನಲ್ಲಿ ಸ್ಪಷ್ಟವಾಗಿ ಇದೆ. ಮೂರನೆಯ ಪಾದದಲ್ಲಿ ಅಸ್ಪಷ್ಟಜೀವಲಿಂಗಗಳ ಸಮನ್ವಯವೆನ್ನುತ್ತಾರೆ. ಆದರೆ ಇದೂ ಸರಿಯಿಲ್ಲ. ಇನ್ನು ಯಾವುದೇ ಲಿಂಗಗಳಾದರೂ ಸ್ಪಷ್ಟದಲ್ಲಾಗಲೀ ಅಸ್ಪಷ್ಟದಲ್ಲಾಗಲೀ ಸೇರಲೇಬೇಕಾದ್ದರಿಂದ ನಾಲ್ಕನೆಯ ಪಾದ ಹೊರಟದ್ದೇ ವ್ಯರ್ಥ .

### ''ರಾಮಾನುಜರ ಮತ್ತೊಂದು ಪ್ರಕಾರದ ಪಾದೋಪಾಧಿ ನಿರಾಕರಣೆ''

ಯಾವ ವಿಷಯವಾಕ್ಯಗಳಲ್ಲಿ ಪೂರ್ವಪಕ್ಷದ ಹೇತು ಸ್ಪಷ್ಟವಾಗಿರುತ್ತದೋ. ಆ ವಿಷಯವಾಕ್ಯಗಳನ್ನು ನಾಲ್ಕನೇ ಪಾದ ಸಮರ್ಥಿಸುತ್ತದೆಂದು ರಾಮಾನುಜರು ತಮ್ಮ ಅಭಿಪ್ರಾಯವನ್ನು ವ್ಯತ್ಯಾಸ ಮಾಡಿಕೊಳ್ಳುತ್ತಾರೆ.

ಆದರೆ ಈ ಅಭಿಪ್ರಾಯಕ್ಕೂ ವಿರುದ್ಧವಾದ ನಡುವಳಿಕೆಯೇ ಅವರಲ್ಲಿ ಕಾಣಿಸುತ್ತಿದೆ.

ಆನುಮಾನಿಕಾಧಿಕರಣದಲ್ಲಿ ಜ್ಯೋತಿರುಪಕ್ರಮಾಧಿಕರಣದಲ್ಲಿ ನಸಂಖ್ಯೋಪಸಂಗ್ರಹಾಧಿಕರಣದಲ್ಲಿ ಪೂರ್ವಪಕ್ಷದ ಹೇತು ಸ್ಪಷ್ಟವಾಗಿ ಕಾಣಿಸುತ್ತಿಲ್ಲ. ಈಶ್ವರಾಧೀನವಾಗದ ಪ್ರಧಾನವು ಜಗತ್ಕಾರಣವಾಗಿದೆಯೆಂದು ಅಲ್ಲಿನ ವಿಷಯವಾಕ್ಯಗಳು ನಿಖರವಾಗಿ ಹೇಳುತ್ತಲೇ ಇಲ್ಲ.

ರಾಮಾನುಜರು ಮತ್ತೊಂದು ಬಗೆಯಲ್ಲಿಯೂ ಪಾದೋಪಾಧಿಗಳನ್ನು ನಿರೂಪಿಸಲು ಪ್ರಯತ್ನಿಸಿದ್ದಾರೆ. ಎರಡನೆಯ ಪಾದವು ಬ್ರಹ್ಮನಿಗೆ ಸರ್ವಶರೀರತ್ವವನ್ನು ಮೂರನೆಯ ಪಾದವು ಸರ್ವಾತ್ಮಕತ್ವವನ್ನು, ನಾಲ್ಕನೆಯ ಪಾದವು ಬ್ರಹ್ಮನ ಕಾರ್ಯವಾಗದ ಬ್ರಹ್ಮನ ಶರೀರವಾಗದ ವಸ್ತುವೇ ಇಲ್ಲವೆಂದು ಪ್ರತಿಪಾದಿಸುತ್ತಿದೆಯೆಂದು ಹೇಳುತ್ತಾರೆ. ಆದರೆ ಈ ವಿಷಯಗಳನ್ನೆಲ್ಲ ಪ್ರತಿಪಾದನೆ ಮಾಡಲು ಸಂಪೂರ್ಣ ಪಾದವೇನು ಬೇಕಾಗಿಲ್ಲ. ಒಂದೊಂದು ಅಧಿಕರಣಗಳಷ್ಟೇ ಸಾಕು. ಒಂದು ಅಧಿಕರಣದಿಂದ ಸರ್ವಶರೀರತ್ವಾದಿಗಳು ತಿಳಿದಾಗ ಉಳಿದ ಅಧಿಕರಣಗಳು ವ್ಯರ್ಥವಾಗುತ್ತವೆ. ಒಂದು ಪಾದದಲ್ಲಿ ಅನೇಕಗುಣಗಳನ್ನು ಸುಲಭವಾಗಿ ಸಮನ್ವಯ ಮಾಡಲು ಬರುವಾಗ ಒಂದೇ ಗುಣವನ್ನು ಸಮನ್ವಯ ಮಾಡುವುದು ಅತ್ಯಂತ ಅನುಚಿತ.

### ಸಮನ್ವಯ ಶ್ರುತಿಸಿದ್ಧವಾದರೂ ಪ್ರಥಮಾಧ್ಯಾಯ ಅನಿವಾರ್ಯ

ಸಮನ್ವಯಕ್ಕೋಸ್ಕರ ಈ ಅಧ್ಯಾಯ ಹೊರಟಿದೆ. ಆದರೆ 'ಸರ್ವೇ ವೇದಾಃ ಯತ್ಪದಮಾಮನಂತಿ' ಇತ್ಯಾದಿ ಶ್ರುತಿಯಲ್ಲಿಯೇ ಸರ್ವಸಮನ್ವಯವನ್ನು ಹೇಳಿರುವಾಗ ಈ ಅಧ್ಯಾಯ ವ್ಯರ್ಥವಲ್ಲವೇ? ಎಂದರೆ ಹಾಗೇನಿಲ್ಲ. ಸಮನ್ವಯ ವಿಷಯದಲ್ಲಿ ಬರುವ ಬಾಧಕಗಳನ್ನೆಲ್ಲ ಪರಿಹರಿಸಿ ಅನೇಕ ನ್ಯಾಯಗಳ ಮೂಲಕ ಸಮನ್ವಯದ ಸ್ಥಾಪನೆಗಾಗಿ ಈ ಅಧ್ಯಾಯವು ಸಾರ್ಥಕವಾಗಿದೆ.

### ಐದು ಸಂಗತಿಗಳ ನಿರೂಪಣೆ

ಒಟ್ಟು ಸಂಗತಿಯು ಐದುವಿಧವಾಗಿದೆ ೧) ಶಾಸ್ತ್ರಸಂಗತಿ ೨) ಅಧ್ಯಾಯಸಂಗತಿ ೩) ಪಾದಸಂಗತಿ ೪) ಶ್ರುತಿಸಂಗತಿ ೫) ಅಧಿಕರಣಸಂಗತಿ ಎಂದು, ಈ ಐದು ಸಂಗತಿಗಳನ್ನು ಮುಂದೆ ಪ್ರತಿಯೊಂದು ಅಧಿಕರಣಗಳ ಪ್ರಾರಂಭದಲ್ಲಿ ಸಮನ್ವಯ ಮಾಡಿ ತಿಳಿದುಕೊಳ್ಳಬೇಕು.

ವಸ್ತುತಃ ಸಂಗತಿಯು ಎರಡುವಿಧ - ೧) ಅಂತರ್ಭಾವ ೨) ಆನಂತರ್ಯ ಎಂದು. ಇವೆರಡರಲ್ಲಿ ಅಂತರ್ಭಾವಸಂಗತಿಯು ಪ್ರಧಾನವಾಗಿ ಮೂರುವಿಧ - ೧) ಶಾಸ್ತ್ರಾಂತರ್ಭಾವ ೨) ಅಧ್ಯಾಯಾಂತರ್ಭಾವ ೩) ಪಾದಾಂತರ್ಭಾವ ಎಂದು. ಇನ್ನು ಆನಂತರ್ಯಸಂಗತಿಯು ಪ್ರಧಾನವಾಗಿ ಎರಡುವಿಧ - ೧) ಶ್ರುತ್ಯಾನಂತರ್ಯ ೨) ಅಧಿಕರಣಾನಂತರ್ಯ ಎಂದು. ಆದರೆ ಅಂತರ್ಭಾವಸಂಗತಿಯಾಗಲೀ ಆನಂತರ್ಯಸಂಗತಿಯಾಗಲೀ ಇನ್ನೂ ಅನೇಕ ಬಗೆಯಲ್ಲಿವೆ. ಅವುಗಳಲ್ಲಿ ಕೆಲವನ್ನಷ್ಟೇ ಗ್ರಂಥಕಾರರು ಇಲ್ಲಿ ಹೇಳಿದ್ದಾರೆ. ೧) ಪೇಟಿಕಾಸಂಗತಿ ೨) ಅಧ್ಯಾಯದ್ವಿಕಸಂಗತಿ ೩) ಪಾದತ್ರಿಕಸಂಗತಿ ೪) ಪಾದದ್ವಯಸಂಗತಿ ಹೀಗೆ ಅಂತರ್ಭಾವಸಂಗತಿಯು ಹಲವು ಬಗೆಯಲ್ಲಿ ತಿಳಿಯಬಹುದು.

ಆನಂತರ್ಯಸಂಗತಿಯೂ ಸಹ ೧) ಆಕ್ಷೇಪಿಕೀ ೨) ಆತಿದೇಶಿಕೀ ೩) ಔಪೋದ್ಘಾತಕೀ ೪) ಆಪವಾದಿಕೀ ೫) ಪ್ರಾಸಂಗಿಕೀ ೬) ಪ್ರತ್ಯುದಾಹರಣ ೭) ಬುದ್ಧಿಸ್ಥಾನಾ ಹೀಗೆ ಹಲವು ಬಗೆಯಲ್ಲಿವೆ. ಆನಂತರ್ಯಸಂಗತಿಯು ಬಹುಬಗೆಯಲ್ಲಿದ್ದರೂ ೧) ಪ್ರಾಸಂಗಿಕೀ ೨) ಔಪೋದ್ಘಾತಕೀ ೩) ಅವಸರಪ್ರಾಪ್ತಿ ೪) ಕಾರಣತಾ ೫) ಕಾರ್ಯತಾ ೬) ಏಕಕಾರ್ಯತ್ವ ಎಂಬ ಆರುವಿಧಸಂಗತಿಗಳಲ್ಲೇ ಸೇರುತ್ತವೆ.

## ನಾಮಾತ್ಮಕವಾದ ಆನಂದಮಯಶಬ್ದಕ್ಕೆ ಪಾದಾಂತರ್ಭಾವ

ನಮ್ಮಲ್ಲೇ ಕೆಲವರು ಆನಂದಮಯಶಬ್ದವನ್ನು ಕೇವಲ ಯೌಗಿಕವೆನ್ನುತ್ತಾರೆ. ಕೆಲವರು ಕೇವಲ ರೂಢವೆನ್ನುತ್ತಾರೆ. ಇವರಿಬ್ಬರ ಅಭಿಪ್ರಾಯವೂ ಸಮಂಜಸವಲ್ಲ. ಆನಂದಮಯಶಬ್ದವನ್ನು ರೂಢವೆಂದು ನಾಮಪಾದದಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಯೌಗಿಕವೆಂದು ಹೇಳಿದರೆ ರೂಢಲಕ್ಷಣ ಬಾರದಕಾರಣ ಇಲ್ಲಿ ಮಾಡುವ ಸಮನ್ವಯವು ತಪ್ಪಾಗುತ್ತದೆ. ಕೇವಲ ರೂಢವೆನ್ನುವುದೂ ತಪ್ಪಾಗುತ್ತದೆ. ಪೂರ್ವಪಕ್ಷದಲ್ಲಿ ಹಾಗೂ ಸಿದ್ಧಾಂತದಲ್ಲಿ ಆನಂದವಿಕಾರಪ್ರಚುರವಾದ ಆನಂದ ಎಂದು ಅವಯವಾರ್ಥವನ್ನು ಸ್ವೀಕರಿಸಿದ್ದಾರೆ.

ಇನ್ನೂ ಕೆಲವರು ಆನಂದಮಯಶಬ್ದವು ಯೌಗಿಕವೂ ರೂಢವೂ ಆಗಿದೆ ಎನ್ನುತ್ತಾರೆ. ಆದರೆ ಇವರು ಹೇಳುವ ಪಾದಾಂತರ್ಭಾವಸಂಗತಿಯು ಅಸಾಧುವಾಗಿದೆ. ಆನಂದಮಯಶಬ್ದವು ನಾಮಾತ್ಮಕವೂ ಲಿಂಗಾತ್ಮಕವೂ ಆಗಿರುವುದರಿಂದ ಎರಡೂ ಪಾದಗಳಲ್ಲಿ ಸೇರುವುದಿಲ್ಲ. ಆದ್ದರಿಂದ ಎರಡು ಪಾದಗಳ ಮೊದಲು ಅಥವಾ ಕೊನೆಯಲ್ಲಿ ಹೇಳಬೇಕು. 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಮೊದಲೇ ಹೇಳಿದ್ದಾರೆಂದು ಇವರ ವಾದ. ಈ ವಿಷಯದಲ್ಲಿ ದೃಷ್ಟಾಂತವನ್ನೂ ಹೇಳುತ್ತಾರೆ. ಸ್ಮೃತ್ಯಧಿಕರಣದಲ್ಲಿ ಶ್ರುತಿ, ಸಮಯ ಮೊದಲಾದ ನಾಲ್ಕು ವಿಧವಾದ ವಿರೋಧಗಳನ್ನು ಪರಿಹರಿಸುವುದರಿಂದ ಎರಡನೆಯ ಅಧ್ಯಾಯದ ನಾಲ್ಕೂ ಪಾದಗಳಲ್ಲಿ ಹೇಗೆ ಸೇರುವುದಿಲ್ಲವೋ ಅದರಂತೆ ಎಂದು.

ಇವರ ವಾದದಲ್ಲಿ ಹುರುಳಿಲ್ಲ. ಸ್ಮೃತ್ಯಧಿಕರಣದ ದೃಷ್ಟಾಂತ ಅತ್ಯಂತ ವಿಷಮವಾಗಿದೆ. ಸ್ಮೃತ್ಯಧಿಕರಣದಲ್ಲಿ ನಾಲ್ಕುವಿಧವಾದ ವಿರೋಧಗಳನ್ನು ಪರಿಹರಿಸಿದ್ದರಿಂದ ಯಾವ ಪಾದದಲ್ಲಿ ಬೇಕಾದರೂ ಸೇರಿಸಬಹುದು. ಆದ್ದರಿಂದ ಮೊದಲೇ ಹೇಳಿದ್ದಾರೆ. ಇದರಂತೆ ಆನಂದಮಯಶಬ್ದವೂ ಸಹ ನಾಮಾತ್ಮಕ ಹಾಗೂ ಲಿಂಗಾತ್ಮಕ ಆಗಿದ್ದರಿಂದ ಎರಡು ಪಾದದಲ್ಲಿ ಎಲ್ಲಿ ಬೇಕಾದರೂ ಸೇರಿಸಬಹುದು. 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಮೊದಲೇ ಹೇಳಿದ್ದಾರೆಂದು ತಿಳಿಯಬೇಕು. ಅಥವಾ ಆನಂದಮಯಶಬ್ದವು ಆಪಾತತಃ ರೂಢವಾದ್ದರಿಂದ ಕೇವಲ ನಾಮಾತ್ಮಕವಾಗಿದೆಯೆಂದೂ ಹೇಳಬಹುದು.

## ಆನಂದಮಯಾಧಿಕರಣದಲ್ಲಿ ಮುಖತಃ ಲಿಂಗಸಮನ್ವಯ

ಆನಂದಮಯ ಶಬ್ದವು ನಾಮಾತ್ಮಕವೆಂದು ಈ ಹಿಂದೆ ಹೇಳಿದರು. ಆದರೆ ಈಗ ಲಿಂಗಾತ್ಮಕವೆಂದು ಹೇಳುತ್ತಿದ್ದಾರೆ. 'ಆನಂದ' ಎಂಬುದು ನಾಮಾತ್ಮಕ ಶಬ್ದ. ಆನಂದಮಯವೆಂಬ ಲಿಂಗದ ಸಮನ್ವಯದಿಂದ ಆನಂದಾದಿ ಅನೇಕನಾಮಗಳ ಸಮನ್ವಯವು ಫಲತಃ ಸಿದ್ಧವಾಗುತ್ತದೆ. ಯಾವ ರೀತಿಯಾಗಿ ನಾಮಪಾದದಲ್ಲಿ ಸೇರಿದೆಯೋ ಅದರಂತೆ ಆನಂದಮಯಾಧಿಕರಣವೂ ಸೇರಿದೆ. ಹಾಗಾದರೆ ನಾಮಪಾದದಿಂದ ಸಂಗತಿ ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಸುಲಭವಾಗಿ ಉತ್ತರಿಸಬಹುದು. ಮೇಲ್ನೋಟಕ್ಕೆ ಆನಂದಮಯ ಎಂಬ ಲಿಂಗಸಮನ್ವಯ ಮಾಡುತ್ತಿದ್ದರೂ ಅನೇಕ ನಾಮಗಳ ಸಮನ್ವಯವೇ ಫಲತಃ ಸಿದ್ಧವಾಗುತ್ತದೆ. ಫಲತಃ ಸಿದ್ಧವಾಗುವ ನಾಮಸಮನ್ವಯವನ್ನು ವಿವಕ್ಷಿಸಿ ನಾಮಪಾದದಲ್ಲಿ ಸೇರಿಸಿದ್ದು ಯುಕ್ತವಾಗಿದೆ. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ವಿದ್ವದ್ವಾಕ್ಯಾಧಿಕರಣವು ಬ್ರಹ್ಮಮೀಮಾಂಸೆಯಲ್ಲಿ ಅಸದಧಿಕರಣ ಅಂತರಧಿಕರಣಗಳು ಉದಾಹರಣೆಯಾಗಿವೆ. ಸೂತ್ರಕಾರರು ಆನಂದ ಎಂಬ ನಾಮಸಮನ್ವಯವನ್ನೇ ನೇರವಾಗಿ ಮಾಡಿದ್ದರೆ ನಾಮಪಾದದ ಸಂಗತಿ ಇನ್ನೂ ಹೆಚ್ಚು ಸ್ವರಸವಾಗುತ್ತಿತ್ತಲ್ಲವೇ? ಎಂದರೆ, ಹೌದು. ಆದರೆ ಕೇವಲ ಆನಂದ ಶಬ್ದದಿಂದ ಪೂರ್ವಪಕ್ಷಸಿದ್ಧಾಂತ ಬೀಜಗಳೇ ಸ್ಥಾಪನೆಯಾಗುತ್ತಿರಲಿಲ್ಲ. ಆನಂದಮಯ ಎಂಬಲ್ಲಿರುವ ಮಯಟ್ ಪ್ರತ್ಯಯ ಇರುವುದೇ ಈ ಅಧಿಕರಣ ರಚನೆಗೆ ಪ್ರಧಾನ ಕಾರಣವಾಗಿದೆ.

### ಈಕ್ಷತ್ಯಧಿಕರಣದಿಂದ ಆನಂತರ್ಯಸಂಗತಿ

ಈಕ್ಷತ್ಯಧಿಕರಣದ ಅನಂತರ ಬೇರೆ ಅಧಿಕರಣಗಳನ್ನು ಹೇಳಬಹುದಿತ್ತು. ಅಥವಾ ಈಕ್ಷತ್ಯಧಿಕರಣಕ್ಕಿಂತ ಮೊದಲೇ ಆನಂದಮಯಾದ್ಯಧಿಕರಣಗಳನ್ನು ಹೇಳಬಹುದಿತ್ತು? ಎಂಬ ಪ್ರಶ್ನೆಗೆ ಇಲ್ಲಿ ಸಮಂಜಸವಾಗಿ ಉತ್ತರ ನೀಡಿದ್ದಾರೆ. ಆನಂದಮಯಾಧಿಕರಣದಿಂದ ಆರಂಭಿಸಿ ಸಂಪೂರ್ಣ ಅಧ್ಯಾಯದಲ್ಲಿ ಸಕಲಶಬ್ದಗಳ ಸಮನ್ವಯ ಮಾಡಿದ್ದಾರೆ. ಇದನ್ನು ಸಮನ್ವಯಸೂತ್ರದ ಅನಂತರವೇ ಹೇಳಿದರೆ ಸಂಗತವೆಂದು ಮೇಲ್ನೋಟಕ್ಕೆ ತೋರುತ್ತದೆ. ಆದರೆ ಯಾವ ಶಬ್ದಗಳಿಂದಲೂ ವಾಚ್ಯನೇ ಆಗದ ಪರಮಾತ್ಮನಲ್ಲಿ ಸಕಲ ಶಬ್ದಗಳ ಸಮನ್ವಯವು ಅತ್ಯಂತ ಅಸಾಧ್ಯ ಎಂಬ ಗೊಂದಲವನ್ನು ಪರಿಹರಿಸಲು ಮಧ್ಯದಲ್ಲಿ ವಾಚ್ಯತ್ವಸಮರ್ಥನೆಗಾಗಿ ಈಕ್ಷತ್ಯಧಿಕರಣ ಹೊರಟಿದೆ. ಇನ್ನು ಈಕ್ಷತ್ಯಧಿಕರಣದ ಅನಂತರವೇ ಆನಂದಮಯಾಧಿಕರಣವನ್ನು ಉಲ್ಲೇಖಿಸಲು ಬಹಳ ಕಾರಣಗಳಿವೆ. ಮುಖ್ಯವಾಗಿ ಎಲ್ಲರಿಗೂ ಅಪೇಕ್ಷೆ ಇರುವುದು ಆನಂದದ ಪರಾಕಾಷ್ಠೆ. ಇದು ಲಭಿಸಬೇಕಾದರೆ ಭಗವಂತನ ಮಹಾಗುಣವೆನಿಸಿದ ಪೂರ್ಣಾನಂದತ್ವವನ್ನು ಉಪಾಸನೆ ಮಾಡಬೇಕು. ಮಹಾಗುಣವನ್ನೇ ಮೊದಲು ಉಪಾಸನೆ ಮಾಡಿದರೆ ನಾವೂ ಸಹ ಖಚಿತವಾಗಿ ಯೋಗ್ಯತಾನುಸಾರಿಯಾಗಿ ಆನಂದದ ಪರಾಕಾಷ್ಠೆಯನ್ನು ತಲುಪಬಹುದು.

ಅಷ್ಟೇ ಅಲ್ಲದೇ ಈಕ್ಷತ್ಯಧಿಕರಣದ ಅನೇಕ ಸೂತ್ರಗಳಿಂದ ಆನಂದಮಯಾಧಿಕರಣಕ್ಕೆ ಆನಂತರ್ಯ ಕೂಡುತ್ತದೆ. ಗೌಣಸೂತ್ರದಲ್ಲಿ ಹೇಳಿದ ಆತ್ಮಶಬ್ದ ತನ್ನಿಷ್ಠಸೂತ್ರದಲ್ಲಿ ಹೇಳಿದ ಮೋಕ್ಷೋಪದೇಶ, ಸ್ವಾಪ್ಯಯಸೂತ್ರದಲ್ಲಿ ಹೇಳಿದ ಪೂರ್ಣತ್ವ ಗತಿಸೂತ್ರದಲ್ಲಿ ಹೇಳಿದ ಗತಿಸಾಮಾನ್ಯ ಇವುಗಳು ಬ್ರಹ್ಮನಲ್ಲಿ ಬರುವುದೇ ಇಲ್ಲ. ಬ್ರಹ್ಮನು ಆನಂದಮಯನ ಅವಯವನಾಗಿದ್ದಾನೆ. ಅವಯವ ಅವಯವಿಗಳಿಗೆ ಭೇದವಿರುವುದರಿಂದ ಆನಂದಮಯನು ಮಾತ್ರ ಪೂರ್ಣತ್ವಾದಿಗುಣವುಳ್ಳವನಾಗುತ್ತಾನೆಂಬ ಆಕ್ಷೇಪ ಬರುತ್ತದೆ. ಈ ಆಕ್ಷೇಪವನ್ನು ಪರಿಹರಿಸಿ ಬ್ರಹ್ಮನಿಗೂ ಆನಂದಮಯನಿಗೂ ಅಭೇದವನ್ನು ಸ್ಥಾಪನೆ ಮಾಡಬೇಕೆಂದರೆ ಈಕ್ಷತ್ಯಧಿಕರಣದ ಅನಂತರವೇ ಆನಂದಮಯಾಧಿ ಕರಣ ಹೊರಡಬೇಕಾಗುತ್ತದೆ. ಹೀಗೆ ಈಕ್ಷತ್ಯಧಿಕರಣದದಿಂದ ಇರುವ ಆನಂತರ್ಯಸಂಗತಿಯನ್ನು ತಿಳಿಯಬೇಕು.

### ಅವ್ಯವಹಿತಪೂರ್ವಾಧಿಕರಣದ ಸಂಗತಿಯು ಆಚಾರ್ಯರಿಗೆ ಸಮ್ಮತವೇ?

ಈಕ್ಷತ್ಯಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾಯಿತು. ವಿಚಾರ ಮಾಡಿದರೆ ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ತೋರಿಸಬೇಕಾಗಿಲ್ಲ. ಮುಂದೆ ಅನೇಕ ಕಡೆ ವ್ಯವಹಿತವಾದ ಅಧಿ ಕರಣಗಳಿಂದಲೂ ಸಂಗತಿ ತೋರಿಸುತ್ತಾರೆ. ಆದ್ದರಿಂದ ಜಿಜ್ಞಾಸಾಧಿಕರಣದಿಂದಲೇ ಈ ಅಧಿಕರಣಕ್ಕೆ ನೇರವಾದ ಸಂಗತಿಯನ್ನು ಆಚಾರ್ಯರು ತೋರಿಸುತ್ತಾರೆ. ಅಷ್ಟೇ ಅಲ್ಲದೆ ಆಚಾರ್ಯರ ಮಾತುಗಳಲ್ಲಿ ಈಕ್ಷತ್ಯಧಿಕರಣದಿಂದ ಆನಂದಮಯಾಧಿಕರಣಕ್ಕೆ ಸಂಗತಿ ತೋರಿಸಿದ್ದು ಸ್ಪಷ್ಟವಾಗಿ ಕಾಣಿಸುತ್ತಿಲ್ಲ. ಹಾಗಂದಮಾತ್ರದಿಂದ ಹಿಂದಿನ ಅಧಿ ಕರಣದಿಂದ ಸಂಗತಿಯೇ ಇರುವುದಿಲ್ಲವೆಂದು ತಿಳಿಯಬಾರದು. ಅವ್ಯವಹಿತವಾದ ಹಿಂದಿನ ಅಧಿಕರಣದಿಂದ ಸಂಗತಿ ತೋರಿಸುವುದು ಬಹಳ ಸುಲಭ. ಅದನ್ನು ಶಿಷ್ಯರೇ ಊಹಿಸಿಕೊಳ್ಳಬಹುದೆಂದು ಆಚಾರ್ಯರು ಇಲ್ಲಿ ಹೇಳಿರಲಿಕ್ಕಿಲ್ಲ. ಅಥವಾ ಆತ್ಮಶಬ್ದಾದಿಗಳುಳ್ಳ ಆನಂದಮಯಶಬ್ದದಿಂದ ಕೂಡಿದ ವಿಷಯವಾಕ್ಯವನ್ನು ಆಚಾರ್ಯರು ಇಲ್ಲಿ ಉದಾಹರಿಸಿದ್ದರಿಂದಲೇ ನಾವು ಹಿಂದೆ ಹೇಳಿದ ಈಕ್ಷತ್ಯಧಿಕರಣದ ಸೂತ್ರಗಳಿಂದ ಆಕ್ಷೇಪಿಕೀ ಸಂಗತಿಯನ್ನು ಸೂಚಿಸಿದ್ದಾರೆಂದೂ ಊಹಿಸಬಹುದು.

### ಸಂಶಯ, ಪೂರ್ವಪಕ್ಷ, ಆನಂದಮಯಶಬ್ದಸ್ವಾರಸ್ಯ (ಪ್ರಥಮಸೂತ್ರ)

ಆನಂದಮಯಾಧಿಕರಣದ ರಚನೆಯು ಪ್ರಾರಂಭವಾಗಿದೆ. ಮಯಟ್ ಪ್ರತ್ಯಯಕ್ಕೆ ವಿಕಾರವೆಂಬರ್ಥವನ್ನು

ವಿವಕ್ಷಿಸಿದರೆ ಆನಂದಮಯನು ವಿಷ್ಣು ಆಗಲ್ಲ. ಪ್ರಾಚಾರ್ಯಾರ್ಥವನ್ನು ವಿವಕ್ಷಿಸಿದರೆ ವಿಷ್ಣುವೇ ಆನಂದ-ಮಯನಾಗುತ್ತಾನೆ. ಮೊದಲು ಆನಂದಮಯನು ಬ್ರಹ್ಮನಲ್ಲವೆಂದು ಪೂರ್ವಪಕ್ಷ.

ಪ್ರತಿಯೊಂದು ಅಧಿಕರಣಗಳಲ್ಲಿಯೂ ಗ್ರಂಥಕಾರರು ಅದ್ವೈತಿಗಳ ಪೂರ್ವಪಕ್ಷಸಿದ್ಧಾಂತಗಳನ್ನು ಮೊದಲು ತೋರಿಸಿ ಅನಂತರ ಅವುಗಳನ್ನು ನಿರಾಕರಿಸುತ್ತಾರೆ. ಅನಂತರ ನಮ್ಮ ಅಧಿಕರಣದ ಪೂರ್ವಪಕ್ಷ ಸಿದ್ಧಾಂತಗಳನ್ನು ಹೇಳುತ್ತಾರೆ. ಆದರೆ ಈ ಅಧಿಕರಣದಲ್ಲಿ ಮಾತ್ರ ನೇರವಾಗಿ ನಮ್ಮ ಸಿದ್ಧಾಂತದ ಪ್ರಕಾರವೇ ಅಧಿಕರಣವನ್ನು ರಚಿಸುತ್ತಿದ್ದಾರೆ. ಕಾರಣವೇನೆಂದರೆ ನಮ್ಮ ಸಿದ್ಧಾಂತದ ಪೂರ್ವಪಕ್ಷ ಅದ್ವೈತಮತವನ್ನೇ ಆಶ್ರಯಿಸಿ ಹೊರಟಿದೆ. ಪೂರ್ವಪಕ್ಷದ ನಿರಾಕರಣೆ ಮಾಡಿದರೆ ಅದ್ವೈತಮತ ನಿರಾಕರಣೆ ಮಾಡಿದಂತೆಯೇ ಆಗುತ್ತದೆ.

ಹಿಂದಿನ ಅಧಿಕರಣಗಳಲ್ಲಿ ಬ್ರಹ್ಮನು ವಿಷ್ಣುವೆಂದು ನಿರ್ಣಯವಾಗಿದ್ದರೂ ಆನಂದಮಯವಾಕ್ಯದಲ್ಲಿ ಶ್ರುತವಾದ ಬ್ರಹ್ಮಶಬ್ದವು ರೂಢ್ಯರ್ಥವನ್ನು ಹೇಳುವಂತೆ ತೋರುತ್ತದೆ. ಅದನ್ನು ನಿರಾಕರಿಸಿ ಯೌಗಿಕಾರ್ಥದ ಸಮರ್ಥನೆಗಾಗಿ ಈ ಅಧಿಕರಣ ಸಾರ್ಥಕವಾಗಿದೆ.

ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಐದು ಪ್ರಕರಣಗಳಲ್ಲಿರುವ ಶಬ್ದಗಳನ್ನು ಈ ಅಧಿಕರಣದಲ್ಲಿ ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಆದರೆ ಪ್ರಥಮ ಪ್ರಸಕ್ತವಾದ ಅನ್ನಮಯನನ್ನು ಸೂತ್ರದಲ್ಲಿ ಉಲ್ಲೇಖಿಸದೇ ಆನಂದಮಯನನ್ನೇ ಏಕೆ ಉಲ್ಲೇಖಿಸಿದರು? ಎಂಬ ಪ್ರಶ್ನೆ ಬರುತ್ತದೆ. ಆದರೆ ಆನಂದಮಯನ ಪ್ರಕರಣದಲ್ಲಿ ಪೂರ್ವಪಕ್ಷ ಪ್ರಾಪಕವಾದ ಹೇತು ಪ್ರಬಲವಾಗಿರುವುದರಿಂದ ಆನಂದಮಯನನ್ನೇ ಉಲ್ಲೇಖಿಸಿದ್ದಾರೆ.

### ಅಭ್ಯಾಸಾತ್ ಎಂಬುದಕ್ಕೆ ಮೂರು ಅರ್ಥ

'ಆನಂದಮಯೋಽಭ್ಯಾಸಾತ್' ಎಂಬ ಸೂತ್ರದಲ್ಲಿ 'ಅಭ್ಯಾಸಾತ್' ಎಂಬ ಹೇತುವಿಗೆ ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದ ಎಂದು ಪ್ರಸಿದ್ಧವಾದ ಅರ್ಥ. ಆದರೆ ಈ ಅರ್ಥದಲ್ಲಿರುವ ಕೆಲವು ತೊಡಕುಗಳು ಮೇಲ್ನೋಟಕ್ಕೆ ಕಾಣಿಸುತ್ತದೆ. ಅನ್ನಮಯ ಪ್ರಾಣಮಯ ಪ್ರತಿಯೊಂದು ಪ್ರಕರಣಗಳಲ್ಲಿಯೂ ಅನೇಕ ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದ್ದಲ್ಲಿ ಬ್ರಹ್ಮಶಬ್ದದ ಅಭ್ಯಾಸವನ್ನು ಹೇಳಬಹುದಿತ್ತು. ಆದರೆ ಆನಂದಮಯ ವಿಜ್ಞಾನಮಯ ಪ್ರಕರಣಗಳಲ್ಲಷ್ಟೇ ಬ್ರಹ್ಮಶಬ್ದವು ಅನೇಕ ಬಾರಿ ಕೇಳಿಸುತ್ತಿದೆ. ಈ ಪ್ರಶ್ನೆಗೆ ಮೂರು ಬಗೆಯಲ್ಲಿ ಗ್ರಂಥಕಾರರು ಉತ್ತರಿಸಿದ್ದಾರೆ.

೧) ಆನಂದಮಯ ವಿಜ್ಞಾನಮಯರಲ್ಲಿ ಬ್ರಹ್ಮತ್ವವನ್ನು ಸಾಧಿಸಲು ಬ್ರಹ್ಮಶಬ್ದದ ಅಭ್ಯಾಸವನ್ನು ಹೇತು ಮಾಡಿದರು. ಅದೇ ಬ್ರಹ್ಮಶಬ್ದ ಅನ್ನಮಯಾದಿಗಳಲ್ಲಿಯೂ ಶ್ರುತವಾದ್ದರಿಂದ ಪ್ರಾಯಪಾಠದ ವಿರೋಧ ಬರಬಾರದೆಂದು ಅನ್ನಮಯಾದಿಗಳಲ್ಲಿಯೂ ಶ್ರುತವಾದ್ದರಿಂದ ಪ್ರಾಯಪಾಠದ ವಿರೋಧ ಬರಬಾರದೆಂದು ಅನ್ನಮಯಾದಿಗಳೂ ಬ್ರಹ್ಮರಾಗುತ್ತಾರೆ. ಆದ್ದರಿಂದ ಸೂತ್ರದಲ್ಲಿ ಹೇಳಿದ ಬ್ರಹ್ಮಶಬ್ದಾಭ್ಯಾಸಾತ್ ಎಂಬುದು ಉಪಲಕ್ಷಣ; ಜೊತೆಗೆ ಬ್ರಹ್ಮಶಬ್ದಾತ್ ಎಂಬುದೂ ಹೇತುವಾಗಿದೆ. ಬ್ರಹ್ಮಶಬ್ದಾಭ್ಯಾಸವೆಂಬ ಹೇತು ಆನಂದಮಯ ವಿಜ್ಞಾನಮಯರಲ್ಲಿ ಇದೆ. ಬ್ರಹ್ಮಶಬ್ದವೆಂಬ ಹೇತು ಉಳಿದ ಮೂವರಲ್ಲಿ ಇದೆ.

೨) ಅಥವಾ ಬ್ರಹ್ಮಶಬ್ದಾಭ್ಯಾಸವೆಂಬುದು ಒಂದೇ ಹೇತು. ಅನ್ನಮಯಾದಿ ಒಂದೊಂದು ಪ್ರಕರಣದಲ್ಲಿಯೂ ಬ್ರಹ್ಮಶಬ್ದ ಅನೇಕ ಬಾರಿ ಕೇಳಿಸಬೇಕೆಂದು ಇದರ ಅರ್ಥವಲ್ಲ. ಒಟ್ಟು ಐದು ಪ್ರಕರಣದಲ್ಲಿ ಅನೇಕ ಬಾರಿ

ಕೇಳಿಸಬೇಕೆಂದು ಅರ್ಥ. ಐದು ಪ್ರಕರಣಗಳಲ್ಲಿ ಒಟ್ಟು ಏಳು ಬಾರಿ ಬ್ರಹ್ಮಶಬ್ದ ಇರುವುದರಿಂದ ಬ್ರಹ್ಮಶಬ್ದಾಭ್ಯಾಸವೆಂಬ ಹೇತು ಎಲ್ಲರಲ್ಲಿಯೂ ಬರುತ್ತದೆ.

೩) ಅಥವಾ ಪ್ರತಿಯೊಂದು ಪ್ರಕರಣಗಳಲ್ಲಿಯೂ ಅನೇಕ ಬಾರಿ ಕೇಳಿಸಬೇಕೆಂಬ ಮುಖ್ಯಾರ್ಥವನ್ನೇ ಸ್ವೀಕರಿಸಬೇಕೆಂದು ಆಗ್ರಹಿಸಿದರೆ ಸೂತ್ರದಲ್ಲಿರುವ 'ಅಭ್ಯಾಸಾತ್' ಎಂಬುದಕ್ಕೆ ಆತ್ಮಶಬ್ದದ ಅಭ್ಯಾಸವಿರುವುದರಿಂದ ಎಂದು ಅರ್ಥ. ಆತ್ಮಶಬ್ದವಂತೂ ಪ್ರತಿಯೊಂದು ಪ್ರಕರಣಗಳ ಉಪಕ್ರಮ ಉಪಸಂಹಾರಗಳಲ್ಲಿ ಅನೇಕ ಬಾರಿ ಕೇಳಿಸುತ್ತಿದೆ.

### ಆತ್ಮಾ ಬ್ರಹ್ಮ ಎರಡು ಶಬ್ದಗಳ ಅಭ್ಯಾಸವೂ ಸಮಂಜಸ

ಶ್ರೀಮದಾಚಾರ್ಯರು 'ಬ್ರಹ್ಮಶಬ್ದಾಭ್ಯಾಸಾತ್' ಎಂದು ಹೇಳಿದ್ದಾರೆ. ನೀವು 'ಆತ್ಮಶಬ್ದಾಭ್ಯಾಸಾತ್' ಎಂದು ವ್ಯಾಖ್ಯಾನಿಸುತ್ತಿದ್ದೀರಿ. ಇದು ತಪ್ಪಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಬ್ರಹ್ಮವಾಚಕವಾದ ಶಬ್ದದ ಅಭ್ಯಾಸದಿಂದ ಎಂದು ಆಚಾರ್ಯರ ಮಾತಿಗೆ ಅರ್ಥೈಸಬಹುದು. ಆವಾಗ ಆತ್ಮಶಬ್ದವು ಬ್ರಹ್ಮವಾಚಕವೇ ಆಗಿರುವುದರಿಂದ ಬ್ರಹ್ಮಶಬ್ದಾಭ್ಯಾಸವೆಂದರೆ ಆತ್ಮಶಬ್ದದ ಅಭ್ಯಾಸವೂ ಆಗುತ್ತದೆ. ಆಚಾರ್ಯರ ಮಾತಿಗೆ ವಿರೋಧ ಬರುವುದಿಲ್ಲ.

ಅಥವಾ ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದ ಎಂದೇ ಆಚಾರ್ಯರ ಅಭಿಪ್ರಾಯ. ಹಾಗಾದರೆ ಅನ್ನಮಯಾದಿಗಳಲ್ಲಿ ಭಾಗಾಸಿದ್ಧಿ ಬರುತ್ತದಲ್ಲ? ಎಂದರೆ ಬ್ರಹ್ಮವಲ್ಲಿಗೆ ಸಮಾಖ್ಯಾಶ್ರುತಿ ಎಂದರೆ ಭೃಗುವಲ್ಲಿ. ಎರಡೂ ವಲ್ಲಿಗಳು ಒಂದೇ ವಿಷಯವನ್ನು ಪ್ರತಿಪಾದಿಸುತ್ತಿರುವುದರಿಂದ ಬ್ರಹ್ಮವಲ್ಲಿಯ ಜೊತೆ ಭೃಗುವಲ್ಲಿಯನ್ನೂ ವಿವಕ್ಷಿಸಬೇಕು. ಆವಾಗ ಬ್ರಹ್ಮವಲ್ಲಿಯ ಅನ್ನಮಯಾದಿ ಪ್ರಕರಣಗಳಲ್ಲಿ ಬ್ರಹ್ಮಶಬ್ದ ಕೇಳಿಸುತ್ತಿದೆ. ಭೃಗುವಲ್ಲಿಯ ಅನ್ನಮಯಾದಿಪ್ರಕರಣಗಳಲ್ಲಿಯೂ ಮತ್ತೊಮ್ಮೆ ಬ್ರಹ್ಮಶಬ್ದ ಕೇಳಿಸುತ್ತಿದೆ. ಹೀಗೆ ಸುಲಭವಾಗಿಯೇ ಒಂದೇ ವಿಧವಾದ ಬ್ರಹ್ಮಶಬ್ದದ ಅಭ್ಯಾಸವನ್ನು ಅನ್ನಮಯಾದಿ ಐದು ಪ್ರಕರಣಗಳಲ್ಲಿಯೂ ಹೇಳಬಹುದು.

### 'ಅಭ್ಯಾಸಾತ್' ಎಂಬ ಹೇತುವಿಗೆ ಭಾಗಾಸಿದ್ಧಿ ವ್ಯಾಪ್ಯತ್ವಾಸಿದ್ಧಿಗಳಿಲ್ಲ

ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದಾಭ್ಯಾಸವನ್ನು ಇನ್ನೂ ಚೆನ್ನಾಗಿ ಹೇಳಬೇಕೆಂದರೆ ತೈತ್ತಿರೀಯ ಶಾಖೆಯಂತೆ ಬೇರೆ ಬೇರೆ ಶಾಖೆಗಳನ್ನೂ ವಿವಕ್ಷಿಸಬೇಕು. ಆವಾಗ ಅಲ್ಲಿಯೂ ಅನೇಕ ಅನ್ನಮಾಯಾದಿಗಳ ಜೊತೆ ಬ್ರಹ್ಮಶಬ್ದವು ಅನೇಕ ಬಾರಿ ಕೇಳಿಸುತ್ತದೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಆದರೆ ಇದು ಅಷ್ಟೊಂದು ಸಮಂಜಸವಾಗಿ ತೋರುವುದಿಲ್ಲ. ತೈತ್ತಿರೀಯ ಶಾಖೆಯಲ್ಲಷ್ಟೇ ಬ್ರಹ್ಮಶಬ್ದಾಭ್ಯಾಸ ತೋರಿಸಬೇಕು. ಅಥವಾ ಬೇರೆ ಶಾಖೆಗಳಲ್ಲಿ ತೈತ್ತಿರೀಯ ಶಾಖೆಯಂತೆ ಅಭ್ಯಾಸ ತೋರಿಸಬೇಕು. ಹೊರತು ಎಲ್ಲ ಶಾಖೆಗಳನ್ನು ಸೇರಿಸಿ ಒಟ್ಟಿಗೆ ಅಭ್ಯಾಸ ತೋರಿಸುವುದು ಆಚಾರ್ಯರಿಗೆ ಸಮ್ಮತವಲ್ಲ. ಆಚಾರ್ಯರ 'ಅನ್ಯಾಸು ಚೈತದ್ರೂಪಾಸು' ಎಂಬ ಮಾತನ್ನು ಗಮನಿಸಿದಾಗ ಈ ಸೂಕ್ಷ್ಮ ವಿಚಾರ ಮನದಟ್ಟಾಗುತ್ತದೆ.

ಇಲ್ಲಿಯ ತನಕ ಭಾಗಾಸಿದ್ಧಿಯನ್ನು ಪರಿಹರಿಸಿದ್ದಾಯಿತು. ಈಗ ವ್ಯಾಪ್ಯತ್ವಾಸಿದ್ಧಿಯೆಂಬ ಹೇತುದೋಷವನ್ನು ನಿರಾಕರಿಸುತ್ತಿದ್ದಾರೆ. ಕೇವಲ ಉಪಾಸನೆಗಾಗಿ ತೈತ್ತಿರೀಯವು ಬ್ರಹ್ಮಶಬ್ದವನ್ನು ಅನೇಕ ಬಾರಿ ಹೇಳುತ್ತಿದೆ. ಹೊರತು ಆನಂದಮಯಾದಿಗಳಲ್ಲಿ ಬ್ರಹ್ಮತ್ವವಿದೆಯೆಂಬ ಅಭಿಪ್ರಾಯದಿಂದಲ್ಲವೆಂದು ಅದ್ವೈತಮತದ ಪ್ರಕಾರ ಆಕ್ಷೇಪ ಬರುತ್ತದೆ. ಆದರೆ 'ನ ಪ್ರತೀಕೇ ನಹಿ ಸಃ' ಎಂಬಂತೆ ಪ್ರತಿಮೆಯೇ ದೇವರಲ್ಲ. ಪ್ರತಿಮೆಯಲ್ಲಿ ದೇವರಿದ್ದಾನೆಂದು ಸೂತ್ರಕಾರರೇ ಅಸದುಪಾಸನೆಯನ್ನು ನಿರಾಕರಿಸಿದ್ದಾರೆ. ಮತ್ತು ಬ್ರಹ್ಮಶಬ್ದದ ಪ್ರವೃತ್ತಿನಿಮಿತ್ತವು

ಪರಮಮುಖ್ಯವೃತ್ತಿಯೆನಿಸಿದ ವಿದ್ವದ್ರೂಢಿಯಿಂದ ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಆದ್ದರಿಂದ ವ್ಯಾಪ್ಯತ್ವಾಸಿದ್ಧಿದೋಷ ಬರುವುದಿಲ್ಲ.

ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದವು ಕೇಳಿಸುತ್ತದೆಂದು ಅನ್ನಮಯಾದಿಗಳನ್ನು ಬ್ರಹ್ಮನೆಂದು ಹೇಳಿದರೆ ತಪಸ್ಸಿನಲ್ಲೂ ಅನೇಕ ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದೆ. ಆದ್ದರಿಂದ ತಪಸ್ಸನ್ನೂ ಬ್ರಹ್ಮನೆಂದು ಹೇಳಬೇಕಲ್ಲವೇ? ಎಂಬ ಪ್ರಶ್ನೆಗೂ ಗ್ರಂಥಕಾರರು ಇಲ್ಲಿ ಉತ್ತರಿಸಿದ್ದಾರೆ. 'ತಪಸ್ಸು ಬ್ರಹ್ಮ' ಎಂಬ ಪ್ರಯೋಗವು ಶ್ರುತಿಯಲ್ಲಿರಬಹುದು. ಆದರೆ ಅದೇ ವಾಕ್ಯದ ಹಿಂದಿನ ಮತ್ತು ಮುಂದಿನ ವಾಕ್ಯಗಳನ್ನು ಗಮನಿಸಿದರೆ ತಪಸ್ಸಿನಿಂದ ಬ್ರಹ್ಮನು ಲಭಿಸುತ್ತಾನೆಂದು ತಿಳಿಯುತ್ತದೆ. ಆದ್ದರಿಂದ ತಪಸ್ಸಿನಲ್ಲಿ ಬ್ರಹ್ಮನನ್ನು ಕಾಣಬೇಕೆಂಬ ಅಭಿಪ್ರಾಯವನ್ನು ಶ್ರುತಿಯಲ್ಲಿ ತಿಳಿಯಬೇಕು. ಇಲ್ಲಿಗೆ 'ಆನಂದಮಯೋಭ್ಯಾಸಾತ್' ಎಂಬ ಸೂತ್ರ ಮುಗಿಯಿತು.

### ಮಯಟ್ ಪ್ರತ್ಯಯಕ್ಕೆ ತಾದಾತ್ಮ್ಯವು ಅರ್ಥವಲ್ಲ (ದ್ವಿತೀಯ ಸೂತ್ರ)

'ಆನಂದಮಯ' ಎಂದರೆ ಪ್ರಚುರವಾದ ಆನಂದವುಳ್ಳವನು ಎಂಬರ್ಥವನ್ನು ಹೇಳುತ್ತೀರಿ. ಹಾಗಾದಲ್ಲಿ ಸ್ವಲ್ಪ ದುಃಖವೂ ಇರಬೇಕಾಗುತ್ತದೆ. ಅದಕ್ಕೋಸ್ಕರ ಆನಂದಸ್ವರೂಪ ಎಂಬರ್ಥ ಹೇಳುವುದು ಅತ್ಯಂತ ಸೂಕ್ತ. ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯ ಎಂಬ ಅರ್ಥವಿದ್ದಂತೆ ತಾದಾತ್ಮ್ಯವೆಂಬ ಅರ್ಥವೂ ಇದೆ ಎಂಬ ಪ್ರಶ್ನೆ ಬರುತ್ತದೆ.

ಆದರೆ ಆನಂದಪೂರ್ಣತ್ವವನ್ನು ದೇವರಲ್ಲಿ ಸಮನ್ವಯ ಮಾಡಿದಾಗ ದೊರೆಯುವ ಲಾಭ ಆನಂದರೂಪತ್ವ ಹೇಳಿದಾಗ ದೊರೆಯುವುದಿಲ್ಲ. ಜೀವರೂ ಸಹ ಆನಂದರೂಪರಾಗಿದ್ದಾರೆ. ಅದರಂತೆ ದೇವರೂ ಆನಂದರೂಪನೆಂದು ಹೇಳುವುದರಿಂದ ಏನೂ ಲಾಭವಿಲ್ಲ. ಅದಕ್ಕಾಗಿ 'ವಿಕಾರಶಬ್ದಾನ್ನೇತಿ ಚೇನ್ನ' ಎಂಬ ಎರಡನೆಯ ಸೂತ್ರದಲ್ಲಿ ಸೂತ್ರಕಾರರು ವಿಕಾರಾರ್ಥದ ನಿರಾಕರಣೆ ಜೊತೆಗೆ ತಾದಾತ್ಮ್ಯಾರ್ಥವನ್ನೂ ನಿರಾಕರಿಸಿದ್ದಾರೆ. ಒಂದುವೇಳೆ ತಾದಾತ್ಮ್ಯಾರ್ಥ ಹೇಳಿದರೆ ಸ್ವಾರ್ಥದಲ್ಲಿ ಮಯಟ್‌ಪ್ರತ್ಯಯ ಹೇಳಿದಂತಾಗಿ ವೈಯ್ಯರ್ಥ್ಯವೂ ಬರುತ್ತದೆ. ಆದ್ದರಿಂದ ಆನಂದಮಯ ಎಂದರೆ ಪ್ರಚುರವಾದ ಆನಂದವುಳ್ಳವನು ಎಂದೇ ಅರ್ಥ. ದುಃಖದ ಲೇಶಕ್ಕೆ ಸ್ವಲ್ಪವೂ ಅವಕಾಶ ಬಾರದಂತೆ ಮುಂದೆ ಸಮರ್ಥಿಸುತ್ತೇವೆ.

### ಸೂತ್ರಕ್ರಮದಲ್ಲಿ ಸ್ವಾರಸ್ಯ

ಆನಂದಮಯಾಧಿಕರಣದಲ್ಲಿ ಒಟ್ಟು ಎಂಟು ಸೂತ್ರಗಳಿವೆ. ಈ ಎಂಟು ಸೂತ್ರಗಳ ಜೋಡಣೆಯು ಇದೇ ಕ್ರಮದಲ್ಲಿರಬೇಕೆನ್ನಲು ಬಹಳ ಸ್ವಾರಸ್ಯವಿದೆ. ಅನೇಕ ಪ್ರಯೋಜನವೂ ಇದೆಯೆಂದು ಪ್ರಕೃತ ಗ್ರಂಥಕಾರರು ವಿಮರ್ಶಿಸುತ್ತಿದ್ದಾರೆ.

ಸೂತ್ರಕಾರರು ಜೋಡಿಸಿದ ಸೂತ್ರಕ್ರಮ ಹೀಗಿದೆ -

೧) ಓಂ ಆನಂದಮಯೋಽಭ್ಯಾಸಾತ್ ಓಂ
೨) ಓಂ ವಿಕಾರಶಬ್ದಾನ್ನೇತಿ ಚೇನ್ನಪ್ರಾಚುರ್ಯಾತ್ ಓಂ
೩) ಓಂ ತದ್ಧೇತುವ್ಯಪದೇಶಾಚ್ಚ ಓಂ
೪) ಓಂ ಮಾಂತ್ರವರ್ಣಿಕಮೇವ ಚ ಗೀಯತೇ ಓಂ

೫) ಓಂ ನೇತರೋಽನುಪಪತ್ತೇಃ ಓಂ

೬) ಓಂ ಭೇದವ್ಯಪದೇಶಾಚ್ಚ ಓಂ

೭) ಓಂ ಕಾಮಾಚ್ಚ ನಾನುಮಾನಾಪೇಕ್ಷಾ ಓಂ

೮) ಓಂ ಅಸ್ಮಿನ್ನಸ್ಯ ಚ ಯದ್ಯೋಗಂ ಶಾಸ್ತಿ ಓಂ

ಈ ಎಂಟು ಸೂತ್ರಗಳಲ್ಲಿ 'ತದ್ಧೇತುವ್ಯಪದೇಶಾಚ್ಚ' ಎಂಬ ಸೂತ್ರವನ್ನು ಕೊನೆಯಲ್ಲಿ ಹೇಳಬೇಕಿತ್ತು. ಏಕೆಂದರೆ 'ಆನಂದಮಯೋಽಭ್ಯಾಸಾತ್' 'ಮಾಂತ್ರವರ್ಣಿಕಮೇವ ಚ ಗೀಯತೇ' 'ಅಸ್ಮಿನ್ನಸ್ಯ ಚ' ಎಂಬ ಸೂತ್ರಗಳು ಅನ್ನಮಯಾದಿ ಐವರಲ್ಲಿಯೂ ಬ್ರಹ್ಮತ್ವವನ್ನು ಸಾಧಿಸಲು ಹೊರಟಿವೆ. ಆದರೆ ತದ್ಧೇತುಸೂತ್ರವು ಕೇವಲ ಆನಂದಮಯನಲ್ಲಿ ಬ್ರಹ್ಮತ್ವವನ್ನು ಸಾಧಿಸುತ್ತಿದೆಯಲ್ಲವೇ? ಎಂಬ ಪ್ರಶ್ನೆ ಬರುತ್ತದೆ.

ಆದರೆ ಮಾಂತ್ರವರ್ಣಿಕಸೂತ್ರದಲ್ಲಿ ಮತ್ತು 'ಅಸ್ಮಿನ್ನಸ್ಯ' ಎಂಬ ಸೂತ್ರದಲ್ಲಿ ಸಮರ್ಥಿಸಿದ ವಿಚಾರಗಳಿಗೆ ತದ್ಧೇತುಸೂತ್ರವು ಸಾಧಕವಾಗಿದೆಯೆಂಬ ಸಂಶಯ ಬರುತ್ತಿತ್ತು. ಈ ಸಂಶಯ ಬರಬಾರದೆಂದು ಸೂತ್ರಕಾರರು ಈ ಎರಡು ಸೂತ್ರಗಳ ಮೊದಲೇ ತದ್ಧೇತುಸೂತ್ರವನ್ನು ಉಚ್ಚರಿಸಿದ್ದಾರೆ. ಮತ್ತು ತದ್ಧೇತುಸೂತ್ರವು ಆನಂದಮಯನಿಗೆ ವಿಷ್ಣುತ್ವವನ್ನಷ್ಟೇ ನಿಶ್ಚಯಿಸುತ್ತಿಲ್ಲ. ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯಾರ್ಥವನ್ನೂ ಮತ್ತೊಂದು ಕಾರಣದಿಂದ ಸಮರ್ಥಿಸುತ್ತಿದೆ. ಆದ್ದರಿಂದ ವಿಕಾರಶಬ್ದಾತ್ ಎಂಬ ಸೂತ್ರದ ಅನಂತರ ಈ ಸೂತ್ರ ಹೇಳಿದ್ದು ಅತ್ಯಂತ ಉಚಿತವಾಗಿದೆ. ಇನ್ನು ಅಸ್ಮಿನ್ನಸ್ಯ ಎಂಬ ಕೊನೆಯ ಸೂತ್ರವು ಸ್ವಪಕ್ಷಸಾಧಕವಾದ್ದರಿಂದ ಮಾಂತ್ರವರ್ಣಿಕಸೂತ್ರದ ಅನಂತರ ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಈ ಸೂತ್ರವು ಕೇವಲ ಸ್ವಪಕ್ಷಸಾಧಕವಾಗಿದ್ದಲ್ಲಿ ಪ್ರಶ್ನೆ ಸಮಂಜಸವಾಗುತ್ತಿತ್ತು. ಪರಪಕ್ಷನಿರಾಸಕವೂ ಆದ್ದರಿಂದ ಅಂತಿಮವಾಗಿ ಹೇಳಿದ್ದು ಅರ್ಥವತ್ತಾಗಿದೆ. 'ನೇತರಃ' 'ಭೇದವ್ಯಪದೇಶಾತ್' ಎಂಬ ಸೂತ್ರಗಳಲ್ಲಿ ಭೇದವು ಪ್ರತಿಪಾದಿಸಲ್ಪಟ್ಟಿದೆ. ಆ ಭೇದವು ಅಪಾರಮಾರ್ಥಿಕವೆಂಬ ಆಕ್ಷೇಪವನ್ನು ಪರಿಹರಿಸುವ ಮೂಲಕ ಪರಪಕ್ಷ ನಿರಾಸಕವಾಗಿದೆ.

ಹಾಗಾದರೆ ಭೇದವ್ಯಪದೇಶಸೂತ್ರದ ಅನಂತರವೇ 'ಅಸ್ಮಿನ್ನಸ್ಯ' ಎಂಬ ಸೂತ್ರ ಬರಬೇಕು. ಮಧ್ಯದಲ್ಲಿ 'ಕಾಮಾಚ್ಚ' ಎಂಬ ಸೂತ್ರವೇಕೆ? ಎಂದರೆ ಭೇದದಂತೆ ಅಭೇದವೂ ಪ್ರಾಮಾಣಿಕವೆಂಬ ಅವಾಂತರಶಂಕೆಯನ್ನು ನಿರಾಕರಿಸಲು ಕಾಮಾಚ್ಚಸೂತ್ರವು ಹೊರಟಿದೆ. ಅಭೇದವು ಅನುಮಾನಸಿದ್ಧವಾಗಿದೆ. ಭೇದವು ಶ್ರುತಿಸಿದ್ಧವಾಗಿದೆ. ಇವೆರಡಕ್ಕೆ ಪರಸ್ಪರ ವಿರೋಧವೇ ಇಲ್ಲವಲ್ಲ? ಎಂಬ ಪ್ರಶ್ನೆಯನ್ನು ಪರಿಹರಿಸಲು ಕಾಮಾಚ್ಚಸೂತ್ರದ ಅನಂತರವೇ ಅಸ್ಮಿನ್ನಸ್ಯ ಸೂತ್ರ ಹೊರಟಿದೆ. ಆದ್ದರಿಂದ ಸೂತ್ರಕಾರರು ಜೋಡಿಸಿದ ಸೂತ್ರಗಳ ಕ್ರಮವು ಸುವ್ಯವಸ್ಥಿತವಾಗಿವೆ. ಮತ್ತು ಅರ್ಥಪೂರ್ಣವಾಗಿವೆ.

ಭೇದವ್ಯಪದೇಶಸೂತ್ರವು ಜೀವನಿಗೆ ಆನಂದಮಯರಿಂದ ಭೇದವನ್ನು ಸಮರ್ಥಿಸುತ್ತದೆ. ಅದರಂತೆ ಜೀವಬ್ರಹ್ಮರ ಭೇದವನ್ನೂ ಸಮರ್ಥಿಸುತ್ತದೆ. ಜೀವಬ್ರಹ್ಮಸಾಧಕವಾಗದಿದ್ದಲ್ಲಿ ನೇತರಃ' ಎಂಬ ಒಂದೇ ಸೂತ್ರ ಸಾಕಾಗಿತ್ತು.

### ಪುಚ್ಛನೇ ಬ್ರಹ್ಮ, ಆನಂದಮಯನಲ್ಲ (ಅದ್ವೈತಿಗಳು)

ದ್ವೈತಿಗಳು ಪುಚ್ಛನನ್ನೇ ಬ್ರಹ್ಮನೆನ್ನಬೇಕೆಂದು ಅದ್ವೈತಿಗಳು ಆಗ್ರಹಿಸುತ್ತಾರೆ. ಪುಚ್ಛನನ್ನು ಬ್ರಹ್ಮನೆಂದು ಹೇಳಿದಾಗ ಪ್ರಾಯಪಾಠವಿರೋಧ ಮಾತ್ರ ಬರುತ್ತದೆ. ಆದರೆ ಆನಂದಮಯನನ್ನು ಬ್ರಹ್ಮನೆಂದು ಹೇಳಿದರೆ

ನಾಲ್ಕು ದೋಷಗಳು ಬರುತ್ತವೆ. ೧) ಪ್ರಾಯಪಾಠವಿರೋಧ ೨) ದುಃಖ ೩) ಬ್ರಹ್ಮಶಬ್ದಕ್ಕೆ ಗೌಣಾರ್ಥತ್ವ ೪) ಆನಂದಶಬ್ದಕ್ಕೆ ಆನಂದಮಯನಲ್ಲಿ ಲಕ್ಷಣಾಪ್ರಸಂಗ ಹೀಗೆ ನಾಲ್ಕು ದೋಷಗಳು ಬರುತ್ತವೆ. ಈ ನಾಲ್ಕು ದೋಷಗಳ ಜೊತೆ ಇನ್ನೂ ಕೆಲವು ದೋಷಗಳು ಬರುತ್ತವೆ - ಉಪನಿಷತ್ತಿನಲ್ಲಿ ವರ್ಣಿಸಿರುವ ಆನಂದಮಯನು ಸವಿಶೇಷ. ಬ್ರಹ್ಮನು ನಿರ್ವಿಶೇಷ. ಆನಂದಮಯನು ಉಪನಿಷತ್ತು ವರ್ಣಿಸುವಂತೆ ಪ್ರತಿಯೊಂದು ಶರೀರಗಳಲ್ಲಿ ಬೇರೆ ಬೇರೆಯಾಗಿದ್ದಾನೆ. ಬ್ರಹ್ಮನು ಅಭಿನ್ನನಾಗಿದ್ದಾನೆ. ಇದರಂತೆ ಇನ್ನೂ ಅನೇಕ ದೋಷಗಳನ್ನು ಸ್ವತಃ ಊಹಿಸಿಕೊಳ್ಳಬೇಕು. ಆನಂದಮಯನು ಅನ್ನಮಯಾದಿಕೋಶಗಳ ಒಳಗೆ ಇರುವುದರಿಂದ ಬ್ರಹ್ಮನೆಂದನಿಸುತ್ತದೆ. ಆದರೆ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂದು ಆನಂದಮಯನಿಗೆ ಪುಚ್ಛಬ್ರಹ್ಮನು ಆಧಾರನೆಂದು ಶ್ರುತಿಯೇ ಹೇಳಿದೆ. ಆದ್ದರಿಂದ ಆನಂದ ಬೇಕಾದರೆ ಬ್ರಹ್ಮನಾಗಬಹುದು. ಆನಂದಮಯನಂತೂ ಬ್ರಹ್ಮನಾಗಲಾರ. ಪುಚ್ಛನೇ ಬ್ರಹ್ಮನಾಗುತ್ತಾನೆಂದು ಶಂಕರಭಾಷ್ಯದಲ್ಲಿ ಸಿದ್ಧಾಂತ ಮಾಡಿದ್ದಾರೆ.

## ಪುಚ್ಛ ಎಂದರೆ ಆನಂದಮಯನೇ (ಅದ್ವೈತಮತನಿರಾಸ)

ಪುಚ್ಛನನ್ನು ಬ್ರಹ್ಮನೆಂದು ಉಪನಿಷತ್ತು ಹೇಳುತ್ತಿದೆ. ಆದ್ದರಿಂದ ಆನಂದಮಯನು ಬ್ರಹ್ಮನಾಗಲಾರನೆಂದು ಅದ್ವೈತಿಗಳು ಸಿದ್ಧಾಂತ ಮಾಡಿದ್ದರು. ಆದರೆ ಅದ್ವೈತಿಗಳ ಈ ವಾದವನ್ನು ಕೂಲಂಕಷವಾಗಿ ವಿಚಾರ ಮಾಡಬೇಕು. ಏಕೆಂದರೆ ನಮ್ಮ ಶರೀರದ ಅವಯವಗಳಿಗೆ ಭೇದವಿರುವಂತೆ ಭಗವಂತನಿಗೂ ಅವನ ಅವಯವಗಳಿಗೂ ಭೇದವಿರುವುದಿಲ್ಲ. ಹಾಗಾಗಿ ಆನಂದಮಯನಾಗಲೀ ಅವನ ಪುಚ್ಛವಾಗಲೀ ಬೇರೆಯಲ್ಲ. ಪುಚ್ಛನನ್ನು ಬ್ರಹ್ಮನೆನ್ನುವ ಉಪನಿಷತ್ತು ಆನಂದಮಯನನ್ನು ಬ್ರಹ್ಮನಲ್ಲವೆನ್ನಲು ಸಾಧ್ಯವಿಲ್ಲ. 'ಬ್ರಹ್ಮ' ಎಂದರೆ 'ಪೂರ್ಣ' ಎಂದರ್ಥ. ಆನಂದಮಯನು ಹೇಗೆ ಪರಿಪೂರ್ಣನೋ ಅವನಿಂದ ಅಭಿನ್ನವಾದ ಪುಚ್ಛವೂ ಸಹ ಪರಿಪೂರ್ಣವೇ ಆಗಿದೆ. ಅವಯವ ಮತ್ತು ಅವಯವಿಗಳಿಗೆ ಭೇದವು ಬೇರೆಲ್ಲೂ ಕಾಣಸದಿರಬಹುದು. ಮತ್ತು ಅವಯವಿಯಲ್ಲಿರುವಷ್ಟು ಶಕ್ತಿ ಅವಯವದಲ್ಲಿ ಕಾಣಿಸದಿರಬಹುದು. ಆದರೆ ಭಗವಂತನಲ್ಲಿರುವ ಅಚಿಂತ್ಯಾದ್ಭುತಶಕ್ತಿಯಿಂದ ಈ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಬಹುದು. ಭಗವಂತನಂತೆ ಭಗವಂತನ ಅವಯವಗಳೂ ಪರಿಪೂರ್ಣವೆಂದು ಅನೇಕ ಶ್ರುತಿಸ್ಮೃತಿಗಳು ಸಾರಿ ಘೋಷಿಸುತ್ತಿವೆ. ಶೇಷಶಾಯಿಯಾದ ನಾರಾಯಣನ ಕೃಷ್ಣಕೇಶವೇ ಕೃಷ್ಣಾವತಾರ ಮಾಡಿ ವಿಶ್ವರೂಪತೋರಿಸಿದ್ದೇ ಈ ವಿಷಯದಲ್ಲಿ ಜ್ವಲಂತ ದೃಷ್ಟಾಂತವಾಗಿದೆ. ಇಲ್ಲಿ ಗಮನಿಸಬೇಕಾದ ಸೂಕ್ಷ್ಮವ್ಯತ್ಯಾಸವಿಷ್ಟೇ - ಮೂಲರೂಪದಲ್ಲಿರುವ ಕೃಷ್ಣಕೇಶವು ಅವಯವರೂಪದಿಂದ ಇದೆ. ಅದೇ ಕೃಷ್ಣಕೇಶವು ಅವತಾರ ಮಾಡಿದಾಗ ಅವಯವರೂಪ ಬಿಟ್ಟು ಅವಯವಿರೂಪ ತಾಳಿದೆ. ಅಂದಮಾತ್ರಕ್ಕೆ ಕೃಷ್ಣಕೇಶದಲ್ಲಿ ಅವಯವಿತ್ವ ಇಲ್ಲವೆಂದಾಗಲೀ, ಕೃಷ್ಣಾವತಾರದಲ್ಲಿ ಅವಯವತ್ವ ಇಲ್ಲವೆಂದಾಗಲೀ ಹೇಳಬಾರದು. ಕೃಷ್ಣಕೇಶದಲ್ಲಿ ಅವಯವತ್ವವು ವ್ಯಕ್ತಿರೂಪದಿಂದ ಅವಯವಿತ್ವವು ಶಕ್ತಿರೂಪದಿಂದ ಇರುತ್ತದೆ. ಕೃಷ್ಣಾವತಾರದಲ್ಲಿ ಅವಯವತ್ವವು ಶಕ್ತಿರೂಪದಿಂದ ಇದ್ದು ಅವಯವಿತ್ವವು ವ್ಯಕ್ತಿರೂಪದಿಂದ ಇರುತ್ತದೆ. ವಿಶೇಷಪದಾರ್ಥವು ಈ ಶಕ್ತಿವ್ಯಕ್ತಿಭಾವವನ್ನು ನಿರ್ವಹಿಸುತ್ತದೆ. ಹೀಗೆ ಭಗವಂತನ ಅವಯವ ಅವಯವಿಗಳಿಗೆ ಅಭೇದವನ್ನು ಒಪ್ಪಿದಾಗ ಮಾತ್ರ 'ನೇಹ ನಾನಾಸ್ತಿ' ಶ್ರುತಿಯ ಪ್ರಾಮಾಣಿಕ ಘೋಷಣೆಯನ್ನು ಸ್ವಲ್ಪ ಮಟ್ಟಿಗಾದರೂ ಅರ್ಥ ಮಾಡಿಕೊಳ್ಳಲು ಸಾಧ್ಯ.

## ಅದ್ವೈತವಾದವನ್ನು ಪುಷ್ಟಿಗೊಳಿಸಲು ಕಲ್ಪತರುವಿಗೆ ಸಾಧ್ಯವಿಲ್ಲ

ಬ್ರಹ್ಮನು ಆನಂದಮಯನೆಂದರೆ ಪ್ರಚುರವಾದ ಆನಂದವುಳ್ಳವನು ಎಂದರ್ಥ. ಅಂದರೆ ಜೀವನ ಆನಂದವು ಅಲ್ಪವಾಗಿದೆ. ಬ್ರಹ್ಮನ ಆನಂದವು ಪ್ರಚುರವಾಗಿದೆ ಎಂದು ಅಭಿಪ್ರಾಯ. ಇಲ್ಲಿ ಅದ್ವೈತಿಗಳಿಗೆ ಬಂದ ಸಮಸ್ಯೆಯಿಷ್ಟೇ - ಈ ಊರಿನಲ್ಲಿ ಬ್ರಾಹ್ಮಣರು ಪ್ರಚುರವಾಗಿದ್ದಾರೆಂದರೆ ಸ್ವಲ್ಪ ಮಂದಿ ಶೂದ್ರರೂ ಇದ್ದಾರೆ

ಎಂಬಂತೆ ಪರಮಾತ್ಮನಲ್ಲಿ ಆನಂದವು ಪ್ರಚುರವಾಗಿದೆ ಎಂದರೆ ಸ್ವಲ್ಪ ದುಃಖವೂ ಇದೆ ಎಂದಂತಾಗುತ್ತದೆ. ಆದ್ದರಿಂದ ಪ್ರಾಚುರ್ಯಾರ್ಥ ಹೇಳಬಾರದು. ಹೇಗಿದ್ದರೂ ಅನ್ನಮಯಾದಿ ಶಬ್ದಗಳಲ್ಲಿ ವಿಕಾರಾರ್ಥ ಹೇಳುವುದು ಅನಿವಾರ್ಯ. ಆನಂದಮಯಶಬ್ದದಲ್ಲಿ ಮಾತ್ರ ಪ್ರಾಚುರ್ಯಾರ್ಥ ಹೇಳಿದರೆ ಪ್ರಾಯಪಾಠಪರಿತ್ಯಾಗ ದೋಷ ಬರುತ್ತದೆ' ಎಂದು. ಆದರೆ ಇವರ ವಾದದಲ್ಲಿ ಸ್ವಲ್ಪವೂ ಹುರುಳಿಲ್ಲ. ಸೂರ್ಯನು ಪ್ರಚುರವಾದ ಪ್ರಕಾಶವುಳ್ಳವನು ಎಂದಾಗ ಸೂರ್ಯನಲ್ಲಿ ಸ್ವಲ್ಪ ಅಂಧಕಾರವೂ ಇದೆಯೆಂಬ ಪ್ರತೀತಿ ಸರ್ವಥಾ ಬರಬಾರದು. ಆದ್ದರಿಂದ ಈ ಊರಿನಲ್ಲಿ ಬ್ರಾಹ್ಮಣರು ಪ್ರಚುರವಾಗಿದ್ದಾರೆಂದು ಹೇಳಿದರೆ ಬಹಳ ಮಂದಿ ಬ್ರಾಹ್ಮಣರೇ ಇದ್ದಾರೆಂಬ ಪ್ರತೀತಿಯೇ ಬರುತ್ತದೆ. ಸ್ವಲ್ಪ ಮಂದಿ ಶೂದ್ರರಿದ್ದಾರೆಂಬುದು ಬೇರೆ ಪ್ರಮಾಣದಿಂದ ತಿಳಿಯುವ ವಿಚಾರ. ಸೂರ್ಯನು ಪ್ರಚುರ ಪ್ರಕಾಶವುಳ್ಳವನು ಎಂದರೆ ಬೇರೆ ಕಡೆ ಇರುವ ಪ್ರಕಾಶವು ಅಲ್ಪವಾಗಿದೆಯೆಂದು ತಿಳಿಯುವಂತೆ ಬ್ರಹ್ಮ ಪ್ರಚುರವಾದ ಆನಂದವುಳ್ಳವನು ಎಂದರೆ ಬೇರೆ ಜೀವರಲ್ಲಿಯೂ ಆನಂದವು ಅಲ್ಪವಾಗಿದೆ ಎಂದೇ ಅಭಿಪ್ರಾಯ.

'ಪ್ರಚುರಪ್ರಕಾಶಃ' ಎಂಬಲ್ಲಿ ಪ್ರಾಚುರ್ಯವು ವಿಶೇಷಣವಾಗಿದೆ. 'ಬ್ರಾಹ್ಮಣಪ್ರಚುರಃ ಎಂಬಲ್ಲಿ ಪ್ರಾಚುರ್ಯವು ವಿಶೇಷ್ಯವಾಗಿದೆ. ಹೀಗೆ ಎರಡೂ ಪ್ರಯೋಗಗಳು ಭಿನ್ನಭಿನ್ನವಾದ್ದರಿಂದ ಅರ್ಥವ್ಯತ್ಯಾಸವೂ ಇದ್ದೇ ಇರುತ್ತದೆಂದು ಕಲ್ಪತರು ಅದ್ವೈತವಾದವನ್ನು ಪುಷ್ಟಿಗೊಳಿಸಿದೆ. ಆದರೆ ಪ್ರಚುರಪ್ರಕಾಶಃ' ಎಂಬ ಪ್ರಯೋಗದಂತೆ 'ಪ್ರಕಾಶಪ್ರಚುರಃ' ಎಂಬ ಪ್ರಯೋಗವೂ ಇದೆ. ಎರಡೂವಿಧ ಪ್ರಯೋಗಗಳನ್ನು ಒಂದೇ ಅರ್ಥದಲ್ಲಿ ಮಾಡುತ್ತಾರೆ. ಅದರಂತೆ 'ಆನಂದಪ್ರಚುರಃ' ಎಂಬಂತೆ 'ಪ್ರಚುರಾನಂದಃ' ಎಂಬ ಪ್ರಯೋಗವೂ ಇದೆ. ಈ ಎರಡೂ ಪ್ರಯೋಗಗಳಿಗೆ ಒಂದೇ ಅರ್ಥವನ್ನು ಹೇಳಬೇಕು. ಕೆಲವು ಶ್ರುತಿಗಳಲ್ಲಿರುವ 'ವಿಜ್ಞಾನಮಯ' ಮೊದಲಾದೆಡೆ ಅದ್ವೈತಿಗಳೇ ಪ್ರಾಚುರ್ಯಾರ್ಥ ಹೇಳಿದ್ದಾರೆ. 'ಸೈಷಾನಂದಸ್ಯ' ಇತ್ಯಾದಿ ಕಡೆಯಲ್ಲಿರುವ ಆನಂದಶಬ್ದಕ್ಕೆ ಆನಂದಮಯನಲ್ಲಿ ಲಕ್ಷಣಾ ಮಾಡಬೇಕಾಗುತ್ತದೆಂಬ ಅದ್ವೈತಿಗಳ ಆಕ್ಷೇಪಕ್ಕೂ ಈಗ ಅವಕಾಶವಿಲ್ಲ. ಏಕೆಂದರೆ ಸೂತ್ರದಲ್ಲಿ ನಾವು ಆನಂದಮಯ ಪದದ ಅಭ್ಯಾಸವನ್ನು ಹೇತು ಮಾಡಿಯೇ ಇಲ್ಲ. ಬ್ರಹ್ಮಪದದ ಅಭ್ಯಾಸವನ್ನೇ ಹೇತು ಮಾಡಿದ್ದೇವೆ.

### ಆನಂದಮಯಾದಿ ಐದು ಕೋಶಗಳಲ್ಲಿ ಬ್ರಹ್ಮ

ಆನಂದಮಯನು ಬ್ರಹ್ಮನಲ್ಲವೆನ್ನಲು ಸವಿಶೇಷತ್ವವನ್ನು ಪ್ರತಿಶರೀರಗಳಿಂದ ಭೇದವನ್ನು ಬಾಧಕವಾಗಿ ಅದ್ವೈತಿಗಳು ಹಿಂದೆ ಹೇಳಿದ್ದರು. ಆದರೆ ಸವಿಶೇಷತ್ವವು ಬ್ರಹ್ಮತ್ವಕ್ಕೆ ಸಾಧಕವೇ ಹೊರತು ಬಾಧಕವಲ್ಲ. ಇನ್ನು ಪ್ರತಿಶರೀರಗಳಿಂದ ಭಿನ್ನವಾದದ್ದನ್ನು ಬ್ರಹ್ಮನೆಂದು ನಾವು ಹೇಳಿಯೇ ಇಲ್ಲ.

ಮತ್ತು ಉಪನಿಷತ್ತಿನ ಆಂತರ್ಯ ಆನಂದಮಯನೇ ಬ್ರಹ್ಮನೆಂದು ಸ್ಪಷ್ಟವಾಗುತ್ತದೆ. ಏಕೆಂದರೆ 'ಸೋऽಕಾಮಯತ' ಎಂದು ಜಗತ್‌ಕಾರಣತ್ವವನ್ನು ಹೇಳುವಾಗ ಪುಲ್ಲಿಂಗಶಬ್ದವನ್ನೇ ಹೇಳಿದೆ. 'ಸಃ' ಎಂಬ ಈ ಪುಲ್ಲಿಂಗ ಶಬ್ದದಿಂದ ನಪುಂಸಕಲಿಂಗದಲ್ಲಿರುವ ಬ್ರಹ್ಮಪದವನ್ನಾಗಲೀ ಪುಚ್ಛಪದವನ್ನಾಗಲೀ ವಿವಕ್ಷಿಸಲು ಬರುವುದಿಲ್ಲ. ಆದ್ದರಿಂದ ಅದ್ವೈತಿಗಳಿಗೆ ಇಷ್ಟವಿರಲಿ ಬಿಡಲಿ ಆನಂದಮಯನನ್ನು ಬ್ರಹ್ಮನೆಂದು ಅನಿವಾರ್ಯವಾಗಿ ಒಪ್ಪಿಕೊಳ್ಳಲೇಬೇಕಾಗುತ್ತದೆ.

ಆನಂದಮಯನಷ್ಟೇ ಬ್ರಹ್ಮನೆಂದಲ್ಲ. ಮನೋಮಯನನ್ನೂ ಬ್ರಹ್ಮನೆಂದು ಒಪ್ಪಿಕೊಳ್ಳಬೇಕು. ಏಕೆಂದರೆ ನೀವು ಯಾವ ವಾಕ್ಯವನ್ನು ಬ್ರಹ್ಮ ಜಗತ್ಕಾರಣತ್ವಪ್ರತಿಪಾದಕವೆಂದು ಅಂಗೀಕರಿಸುತ್ತೀರೋ, ಅಂತಹ 'ಯತೋವಾ' ಎಂಬ ವಾಕ್ಯವು ಮನೋಮಯನಲ್ಲಿ ಶ್ರುತವಾಗಿದೆ. ಇಷ್ಟೇ ಅಲ್ಲ; ಅನ್ನಮಯಾದಿಗಳನ್ನು ಬ್ರಹ್ಮರೆಂದು ಅಂಗೀಕರಿಸಬೇಕು.

ಬ್ರಹ್ಮನನ್ನು ತಿಳಿಸಿರಿ ಎಂದು ಪ್ರಾರ್ಥಿಸಿದಾಗ ಅನ್ನಮಯಾದಿಗಳನ್ನು ಉಪನಿಷತ್ತು ವರ್ಣನೆಮಾಡಿದೆ. ಒಂದುವೇಳೆ ಅನ್ನಮಯಾದಿಗಳನ್ನು ನೀವು ಕೋಶವೆಂದು ಹೇಳಿದರೆ ಬ್ರಹ್ಮಜಿಜ್ಞಾಸುವಿಗೆ ಮಾಡಿದ ಈ ಉಪದೇಶವು ಅಸಂಗತವಾಗುವುದಿಲ್ಲವೇ?

ದ್ವಾರವಾಗಷ್ಟೇ ಅನ್ನಮಯಾದಿಕೋಶಗಳ ಉಪದೇಶವೆಂದೂ ಹೇಳಬಾರದು. ಬ್ರಹ್ಮನು ಮೊದಲೇ ಉಪದೇಶದಿಂದ ಸಿದ್ಧವಾಗಿದ್ದಾನೆ. ಅಸಿದ್ಧವಾದ ಚಂದ್ರಾದಿಗಳ ವಿಷಯದಲ್ಲಷ್ಟೇ ದ್ವಾರತ್ವೇನ ಉಪದೇಶವು ಲೋಕದಲ್ಲಿ ಕಂಡಿದೆ. ಆದ್ದರಿಂದ ಅನ್ನಮಯ ಪ್ರಾಣಮಯ, ಮನೋಮಯ, ವಿಜ್ಞಾನಮಯ ಆನಂದಮಯ ಐದನ್ನೂ ಬ್ರಹ್ಮವೆಂದು ಹೇಳಲೇಬೇಕು.

### ಅನ್ನಮಯಾದಿ ಪಂಚಕಗಳು ದ್ವಾರವಾದಲ್ಲಿ ಅನೇಕ ಬಾಧಕಗಳು

ಅನ್ನಮಯಾದಿಗಳನ್ನು ದ್ವಾರವೆಂದು ಹೇಳಿದರೆ ಐದು ಪ್ರಧಾನದೋಷಗಳನ್ನು ಹೇಳುತ್ತಿದ್ದಾರೆ.

ದೇಹದ ಒಳಗಿರುವ ಆತ್ಮನನ್ನು ತಿಳಿಯುವುದು ಅಷ್ಟು ಸುಲಭವಲ್ಲ. ಆದಕ್ಕೋಸ್ಕರ ಅನ್ನಮಯಾದಿಕೋಶಗಳ ಉಪದೇಶವೆಂದು ಅದ್ವೈತಿಗಳ ವಾದ. ಆದರೆ ಇದು ಅಸಂಗತ. ನಿಮ್ಮ ಪ್ರಕಾರ ಚೈತ್ಯವಂದನವನ್ನು ಧರ್ಮವೆಂದು ಮೊದಲು ಉಪದೇಶಿಸಿ ಅನಂತರ ಜ್ಯೋತಿಷ್ಟೋಮವನ್ನು ಧರ್ಮವೆಂದು ಉಪದೇಶಿಸಬೇಕಾಗುತ್ತದೆ. ವಸ್ತುತಸ್ತು ಬ್ರಹ್ಮನನ್ನು ಅಪರಿಚ್ಛಿನ್ನನೆಂದು ಅದ್ವೈತಿಗಳು ಒಪ್ಪಿದ್ದಾರೆ. ಆದ್ದರಿಂದ ಬ್ರಹ್ಮನು ದೇಹದೊಳಗಿದ್ದಾನೆಂದು ಸಮರ್ಥಿಸುವುದೇ ಕಷ್ಟವಿದೆ.

ಮತ್ತು ನಿರವಯವನಾಗಿರುವ ಬ್ರಹ್ಮನ ತಿಳಿವಳಿಕೆಗಾಗಿ ಸಾವಯವಬ್ರಹ್ಮನ ಉಪದೇಶವು ಅಸಂಗತವಾಗುತ್ತದೆ. ಮತ್ತು ಅನ್ನಮಯಾದಿ ಐದನ್ನೂ ದ್ವಾರವೆನ್ನುವುದರಲ್ಲಿ ಅರ್ಥವೇ ಇಲ್ಲ. ಲೋಕದಲ್ಲಿ ಚಂದ್ರನು ಕಾಣದಿದ್ದಾಗ ಒಂದು ಕೊಂಬೆಯನ್ನು ತೋರಿಸಿ ಚಂದ್ರನನ್ನು ಪರಿಚಯಿಸುತ್ತಾರೆ ಹೊರತು ಅನೇಕ ಕೊಂಬೆಗಳನ್ನು ತೋರಿಸುವುದಿಲ್ಲ. ಹಾಗೆಯೇ ಅನ್ನಮಯಾದಿಗಳಲ್ಲಿ ಒಂದನ್ನು ದ್ವಾರವೆಂದು ಹೇಳಿದರೆ ಸಾಕಲ್ಲವೆ? ಅಷ್ಟೇ ಅಲ್ಲದೇ ಅನ್ನಮಯದ್ವಾರದ ಉಪದೇಶವಾದ ಮೇಲೆ ಪ್ರಾಣಮಯಾದಿ ದ್ವಾರಗಳ ಉಪದೇಶವೇ ಏಕೆ ಮಾಡಬೇಕು? ಒಂದೇ ವಿಧವಾದ ಕ್ರಮದಲ್ಲಿ ಪ್ರಮಾಣವಿಲ್ಲ.

ಮತ್ತು ಅನ್ನಮಯಾದಿಗಳನ್ನು ಜಗತ್ಕಾರಣತ್ವಕ್ಕೆ ದ್ವಾರವೆನ್ನಬೇಕು. ಆದರೆ ಅದ್ವೈತಮತದಲ್ಲಿ ಜಗತ್ಕಾರಣತ್ವವೇ ದ್ವಾರವಾಗಿದೆ. ಒಂದು ದ್ವಾರಕ್ಕೆ ಮತ್ತೊಂದು ದ್ವಾರವನ್ನು ಹೇಳಿದಂತಾಯಿತು.

ಮತ್ತು ಅಪ್ಪನಿಂದ ಉಪದೇಶ ಪಡೆದಾಗ ಭೃಗುಋಷಿಗಳಿಗೆ ಅನ್ನಮಯಾದಿಗಳು ದ್ವಾರವೆಂದು ತಿಳಿಯುವುದಾದರೆ ಅನ್ನಾದಿಗಳನ್ನು ಬ್ರಹ್ಮನೆಂದು ತಿಳಿಯಲಿಲ್ಲವೆಂದಂತಾಯಿತು. ಆದರೆ ಉಪನಿಷತ್ತು ಅನ್ನನನ್ನು ಬ್ರಹ್ಮನೆಂದು ತಿಳಿದರೆಂದು ಹೇಳುತ್ತಿದೆ. ಇದು ತಪ್ಪಾಗುತ್ತದೆ.

### ಭಗವಂತನೇ ಅನ್ನಮಯಾದಿ ಶಬ್ದ ಪ್ರತಿಪಾದ್ಯ

'ಆತ್ಮನ ಆಕಾಶಃ ಸಂಭೂತಃ' ಎಂದು ಪರಮಾತ್ಮನಿಂದ ಆಕಾಶದ ಸೃಷ್ಟಿ ಎಂದು ಹೇಳಿದ್ದಾರೆ. ಎಲ್ಲ ಪದಾರ್ಥಗಳ ಹುಟ್ಟಿನಲ್ಲಿ. ಆ ಪದಾರ್ಥಗಳ ಒಳಗೆ ಪರಮಾತ್ಮನ ಆವಿರ್ಭಾವವೂ, ಅವುಗಳ ನಿಯಂತ್ರಣಕ್ಕಾಗಿ.

ಆದರಿಂದ 'ಪುರುಷ' ಎಂಬ ಪರಮಾತ್ಮನ ಹುಟ್ಟಿನ ಗುಟ್ಟನ್ನು ಹೇಳಿದಂತಾಯಿತು. ವರುಣ ಹೇಳಿದ, ಭೃಗು ಕೇಳಿ ಸಾಕ್ಷಾತ್ಕರಿಸಿಕೊಂಡ ಈ ವಿದ್ಯೆ ಬ್ರಹ್ಮನನ್ನು ಪ್ರತಿಪಾದಿಸುತ್ತದೆ ಎಂದು ಸ್ವಯಂ ವೇದವೇ ಹೇಳಿದೆ. 'ಅನ್ನಂ ಬ್ರಹ್ಮ' ಎಂದೂ ವೇದದ್ದೇ ಮಾತು. 'ಅನ್ನವೇ ಎಲ್ಲ ಜೀವಜಾತಗಳನ್ನು ಸೃಷ್ಟಿಸುತ್ತದೆ' ಎಂಬ ಮಾತು ಆಲಂಕಾರಿಕವಾಗಬೇಕಿಲ್ಲ. 'ಅನ್ನ ಎಂದರೆ ಬ್ರಹ್ಮ'ವೆಂದು ತಿಳಿಯಬೇಕು ಎಂದಿರುವುದರಿಂದ. 'ಏತಮನ್ನಮಯಮಾತ್ಮಾನಮುಪಸಂಕ್ರಾಮತಿ' 'ಮುಕ್ತನು ಅನ್ನಮಯನ ಬಳಿ ಸಾಗುತ್ತಾನೆ ಎಂದು ವೇದ ವಾಣಿ. 'ಉಪ' ಎನ್ನುವ ಶಬ್ದಕ್ಕೆ 'ದಾಟಿ' ಎನ್ನುವ ಅರ್ಥ ಸಾಹಿತ್ಯದ ಯಾವ ಪ್ರಕಾರದಲ್ಲಿಯೂ ಇಲ್ಲ.

### ಇಲ್ಲಿ ಮಾಡಿದ ಅದ್ವೈತನಿರಾಸ ಕೇವಲ ದಿಕ್‌ಪ್ರದರ್ಶನ

ಅನ್ನ ಎಂದರೆ ಅನ್ನಮಯ. ಜ್ಯೋತಿಷಾ ಎನ್ನುವುದು ಜ್ಯೋತಿಷ್ಟೋಮ ಎನ್ನುವುದರ ಸಂಕ್ಷೇಪ ಹೇಗೋ ಹಾಗೆ. ಅನ್ನ ಎಂಬ ಬ್ರಹ್ಮನನ್ನೂ ತಿಳಿದೂ ಮತ್ತೆ ತಂದೆ ಬಳಿ ಬಂದಿದ್ದು ಇನ್ನೊಂದು ರೂಪದ ಉಪಾಸನೆಗಾಗಿ. ಮಹಾನಾರಾಯಣಉಪನಿಷತ್ತಿನ 'ಅನ್ನಮಯ' ಮೊದಲಾದವುಗಳು ಬ್ರಹ್ಮವಲ್ಲ. ಮೊದಲನೆಯ ಕಾರಣ. ಅದನ್ನೊಳಗೊಂಡ ಸೂಕ್ತ ಶುದ್ಧಿಗಾಗಿ ಮಾಡುವ ಪ್ರಾರ್ಥನೆಯಾಗಿದೆ. ಎರಡನೆಯದಾಗಿ 'ಬ್ರಹ್ಮ' ಎಂದು ಹೇಳಿಲ್ಲ. ಆದರಿಂದ ಅವು ಕೋಶಗಳೇ.

ಅನ್ನಮಯನಿಗಿಂತ ಪ್ರಾಣಮಯ ಅನ್ಯ ಎಂದು ಹೇಳಿರುವುದು ವಿಶೇಷವನ್ನಾಧರಿಸಿ. ಕೃಷ್ಣನೇ ಗೀತೆಯಲ್ಲಿ ನಿರ್ಣಾಯಕ ಎಂದು ಕೊಂಡಾಡಿರುವ ಬ್ರಹ್ಮಸೂತ್ರಗಳನ್ನು ಉಪೇಕ್ಷಿಸುವುದು ತಪ್ಪು. ಸೂತ್ರಗಳು ಅಪರಬ್ರಹ್ಮವನ್ನು ಹೇಳುತ್ತದೆ, ಅಪರ ಮೋಕ್ಷವನ್ನು ಸಹ ಎನ್ನುವವರು ವ್ಯಾಖ್ಯಾನಿಸಲೇಬಾರದಿತ್ತು.

### ರಾಮಾನುಜರ ಅಧಿಕರಣದ ವಿಮರ್ಶೆ

ಕೆಲವರು 'ಅನ್ನಮಯ, ಪ್ರಾಣಮಯ, ಮನೋಮಯ ಎಂಬ ಮೊದಲ ಮೂರು ಶಬ್ದಗಳು ಜಡಶರೀರದ ಭಾಗವಾದ ಕೋಶಗಳನ್ನು ಹೇಳುತ್ತವೆ. ವಿಜ್ಞಾನಮಯನೆಂದರೆ ಜೀವ. ಆನಂದಮಯನೆಂದರೆ ಬ್ರಹ್ಮ' ಎಂದರು. ಕೆಲವರು 'ನಾಲ್ಕು ಕೋಶಗಳು. ಆನಂದಮಯನೆಂದರೆ ಬ್ರಹ್ಮ' ಎಂದರು. ವಿಜ್ಞಾನಮಯ ಎಂದರೆ ಜೀವನಲ್ಲ. ಜೀವನನ್ನು ವಿಜ್ಞಾನಪೂರ್ಣ ಎಂದು ದೇವತೆಗಳು ಉಪಾಸನೆ ಮಾಡುವುದಿಲ್ಲ. ಜೀವನನ್ನು ಉಪಾಸಿಸಿದವ ಪಾಪರಹಿತನಾಗಿ ಮುಕ್ತನಾಗುವುದಿಲ್ಲ. ವಸ್ತುವೊಂದನ್ನು ತಿಳಿಯಲು ಒಂದು ದ್ವಾರ ಸಾಕು. ಹಲವು ದ್ವಾರಗಳೇಕೆಬೇಕು? ತೈತ್ತಿರೀಯ ಉಪನಿಷತ್ತಿನಲ್ಲಿ ಮಾಡಿದ ತರ್ಕವನ್ನೇ ಛಾಂದೋಗ್ಯ ಉಪನಿಷತ್ತಿನಲ್ಲಿ ಮಾಡಿ. ಇಲ್ಲವೆಂದಾದರೆ ಛಾಂದೋಗ್ಯದಲ್ಲಿನ ಅರ್ಥದ ಸರಣಿಯನ್ನು ತೈತ್ತಿರೀಯಕ್ಕೆ ಅಳವಡಿಸಿ. 'ಅನ್ನಂ ಬ್ರಹ್ಮೇತಿ ವ್ಯಜಾನಾತ್' ಎಂಬ ಉಪನಿಷತ್ತಿನ ಮಾತಿನಿಂದಲೂ 'ಅನ್ನಮಯ' ಮೊದಲಾದವುಗಳು ಪರಮಾತ್ಮನ ರೂಪವಿಶೇಷಗಳೆಂದು ಗೊತ್ತಾಗುತ್ತದೆ.

### ರಾಮಾನುಜ ಮತ್ತು ಯಾದವಪ್ರಕಾಶಮತ ನಿರಾಕರಣೆ

'ಆನಂದಮಯೋಽಭ್ಯಾಸಾತ್' ಎನ್ನುವ ಸೂತ್ರದಲ್ಲಿ ಬ್ರಹ್ಮಶಬ್ದದ ಪುನರಾವೃತ್ತಿಯನ್ನು ಹೇಳಿದ್ದು. ಆನಂದ ಶಬ್ದದಲ್ಲಿ. ವೇದದಿಂದಲೇ ಇದು ಗೊತ್ತಾಗುತ್ತದೆ. 'ಮಯಟ್' ಎಂಬ ಪ್ರತ್ಯಯವುಳ್ಳ ಐದು ಶಬ್ದಗಳಿವೆ. ಅವುಗಳಲ್ಲಿ 'ಅನ್ನ, ಪ್ರಾಣ, ಮನಸ್' ಇವುಗಳ ಜೊತೆಗಿರುವ ಮಯಟ್ ಪ್ರತ್ಯಯ ವಿಕಾರ ಎಂಬರ್ಥನೀಡುತ್ತದೆ. 'ವಿಜ್ಞಾನಮಯ' ಎಂಬಲ್ಲಿ ಸಂಬಂಧ ಎನ್ನುವರ್ಥವನ್ನೂ, 'ಆನಂದಮಯ' ಎನ್ನುವಲ್ಲಿ ಪ್ರಾಚುರ್ಯ ಎನ್ನುವರ್ಥ

ನೀಡುತ್ತದೆ' ಎಂಬುದಕ್ಕೆ ಆಧಾರವೇ ಇಲ್ಲ. 'ನ, ಪ್ರಾಚುರ್ಯಾರ್ಥತ್ವಾತ್' ಎನ್ನುವ ಸೂತ್ರ ಸರ್ವತೋಮುಖವಲ್ಲ ಎಂದೊಪ್ಪಿದರೆ, ವ್ಯಾಖ್ಯಾನಿಸುವುದಕ್ಕೆ ಅಯೋಗ್ಯ ಎಂದೊಪ್ಪಿಕೊಳ್ಳಬೇಕು. 'ಸರ್ವತೋಮುಖ' ಎಂದೊಪ್ಪಿದರೆ ನಮ್ಮ ವ್ಯಾಖ್ಯಾನವನೇ ತಪ್ಪು ಎಂದೊಪ್ಪಬೇಕು.

### ಶ್ರುತಿಲಿಂಗಾದಿ ಆರು ಪ್ರಮಾಣಗಳಿಂದ ಸಿದ್ಧಾಂತದ ಅಧಿಕರಣವು ಬಲಿಷ್ಠವಾಗಿದೆ

ತೈತ್ತಿರೀಯಸಂಹಿತೆ ಯಜುರ್ವೇದದ ಸಂಹಿತೆಗಳಲ್ಲೊಂದು. ತೈತ್ತಿರೀಯ ಸಂಹಿತೆಯ ಸಾರ ತೈತ್ತಿರೀಯ ಉಪನಿಷತ್ತು. ಈ ಉಪನಿಷತ್ತಿನಲ್ಲಿ ಏನು ಹೇಳುತ್ತಾರೆಂದು ತಿಳಿದರೆ, ತನ್ಮೂಲಕ ಸಮಗ್ರ ಸಂಹಿತೆಯನ್ನೇ ತಿಳಿಯಬಹುದು. ಆರಣ್ಯಕಭಾಗವಾಗಿ ಕಾಣುವ ಉಪನಿಷತ್ತಿನಲ್ಲಿ ಐದು ಶಬ್ದಗಳು ಪ್ರಧಾನವಾಗಿವೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಎಂದು. ತೈತ್ತಿರೀಯ ಉಪನಿಷತ್ತು ಪರಮಾತ್ಮನ ಏಳುರೂಪಗಳನ್ನು ಹೇಳುತ್ತಿದೆ. ಅದರಲ್ಲಿ ಅನ್ನಮಯ ಮೊದಲಾದ ಐದು ಶಬ್ದಗಳು ಪರಮಾತ್ಮನ ಐದುರೂಪಗಳನ್ನು ಪ್ರತಿಪಾದಿಸುತ್ತಿವೆ.

೧. ಎಲ್ಲ ಶಬ್ದಗಳ ಜೊತೆಯಲ್ಲಿ 'ಬ್ರಹ್ಮ' ಎಂಬ ಶಬ್ದವಿರುವುದರಿಂದ.

೨. 'ಎಲ್ಲವನ್ನು ತಿನ್ನುವ ಅನ್ನಮಯ' ಎಂದಿರುವುದರಿಂದ. (ಅದ್ಯತೇ = ತಿನ್ನಲ್ಪಡುತ್ತಾನೆ, ಅತ್ತಿ ಚ = ತಿನ್ನುತ್ತಾನೆ ಕೂಡ ಎಂದು ಉಪನಿಷತ್ತು ಹೇಳುತ್ತದೆ. ನಾವು ತಿನ್ನುವ ಅನ್ನ ನಮ್ಮನ್ನು ತಿನ್ನುವುದಿಲ್ಲ. ಆದರಿಂದ ಎಲ್ಲರಿಗೂ ಅನ್ನ ಒದಗಿಸಿ ಸಲಹುವ ಪ್ರಳಯಕಾಲದಲ್ಲಿ ಎಲ್ಲರನ್ನು ತಿನ್ನುವವನೇ ಅನ್ನಮಯ)

೩. ಪ್ರಕರಣದಲ್ಲಿರುವ ವಾಕ್ಯಗಳಿಂದ.

೪. 'ಬ್ರಹ್ಮನನ್ನು ತಿಳಿದವನೇ ಮುಕ್ತನಾಗುತ್ತಾನೆಂದು' ಹೇಳಿ ಅವನ ಬಗೆಗೇ ಉಪನಿಷತ್ತು ಹೇಳಬೇಕಾಗಿರುವುದರಿಂದ ಮತ್ತು ಹೇಳಿದ್ದರಿಂದ.

೫. ಉಪನಿಷತ್ತಿನ ಕೊನೆಯ ಭಾಗವಾದ ಭೃಗುವಲ್ಲಿಯಲ್ಲಿ 'ಹಿಂದೆ ಹೇಳಿದ ವಿದ್ಯೆಗೆ' ಪರಮಾತ್ಮನೇ ಪ್ರತಿಪಾದ್ಯವೆಂದಿರುವುದರಿಂದ.

೬. 'ಅಹಮನ್ನಂ, ಅಹಮನ್ನಾದಂ' ಎಂದು ಮುಕ್ತ ಬ್ರಹ್ಮ ತನ್ನ ಬಗೆಗೆ ಹೇಳಿಕೊಂಡಿದ್ದರಿಂದ.

೭. ದೇವರ ಬಗೆಗೆ ಹೇಳಿ ಎಂದು ಮಗನಾದ ಭೃಗುವು ತಂದೆಯಾದ ವರುಣನ ಬಳಿ ಕೇಳಿದ್ದರಿಂದ.

೮. ಭೃಗುವು ವರುಣನಿಂದ ಬ್ರಹ್ಮನ ಗುಣಗಳನ್ನು ತಿಳಿದ ಎಂದು ಉಪನಿಷತ್ತು ಹೇಳಿದ್ದರಿಂದ.

೯. ಅನುವ್ಯಾಖ್ಯಾನದಲ್ಲಿ ಹೇಳಿದ ವಾಧೂಲಶಾಖಾ ಸಂವಾದದಿಂದ.

ಅನ್ನಮಯ ಮೊದಲಾದ ಶಬ್ದಗಳು ಕೋಶವನ್ನೇ ಹೇಳುವುದೇ ಇಲ್ಲ. ಪರಮಾತ್ಮನ ಗುಣಗರ್ಭಗಳಾದ ಐದುರೂಪಗಳನ್ನು ಹೇಳುತ್ತವೆ.

### ಬ್ರಹ್ಮನೇ ಅನೇಕ ಗುಣಗಳನ್ನು ಪ್ರತಿಪಾದಿಸಲು ಅನೇಕ ಶಬ್ದಗಳು

ಬೇರೆ ಬೇರೆ ಶಬ್ದಗಳಿಂದ ಹೇಳಿದ ಮಾತ್ರಕ್ಕೆ ಬೇರೆ ಬೇರೆ ವಿಷಯಗಳನ್ನೇ ಹೇಳಬೇಕೆಂಬ ನಿಯಮವಿಲ್ಲ. ಜೈಮಿನಿಮುನಿಗಳ ಸೂತ್ರವೂ ಸಾಕ್ಷಿ. ಬೇರೆ ಬೇರೆ ಆಯಾಮಗಳನ್ನು ಬೇರೆ ಬೇರೆ ಶಬ್ದಗಳು ಹೇಳಬಹುದು. ಬ್ರಹ್ಮಸೂತ್ರಗಳು 'ಸತ್ಯ' ಮೊದಲಾದ ಬೇರೆ ಬೇರೆ ಗುಣಗಳನ್ನು ಒಬ್ಬನೇ ಬ್ರಹ್ಮನಲ್ಲಿ ಸಮನ್ವಯಿಸುವುದು ಕಂಡಿದೆ.

**ಟೀಕೆಯಲ್ಲಿರುವ ಕಠಿಣ ಪದಾರ್ಥ**

ಆನಂದಮಯಾಧಿಕರಣದ ಭಾಷ್ಯ ಟೀಕೆಗೆ ಎರಡು ಆಯಾಮಗಳಿವೆ. ಆನಂದಮಯ ಬ್ರಹ್ಮ ಆಗದೇ ಹೋದರೆ ವಿಚಾರವೇ ಅಸಂಗತ. ಆನಂದಮಯಬ್ರಹ್ಮ ಆದರೆ ಬ್ರಹ್ಮ ಯಾರು? ನಾರಾಯಣನೋ? ಸೂರ್ಯನಿಗಿಂತ ಎತ್ತರದ ಸ್ತರದಲ್ಲಿರುವ ಬೇರೆಲ್ಲ ದೇವತೆಗಳೋ? ಎಂಬ ಪ್ರಶ್ನೆಗೆ ಭಾಷ್ಯದ ಉತ್ತರವನ್ನು ನಿರೂಪಿಸುವುದೇ ಆಗಿದೆ.

ಮಯಟ್ ಶಬ್ದಕ್ಕೆ ಬಹಳ ಎಂದರ್ಥವಾದರೆ ಆನಂದಮಯನೆಂದರೆ ಬಹಳ ಆನಂದವುಳ್ಳವ ಎಂದಾಗುತ್ತದೆ. ಸ್ವಲ್ಪದುಃಖವಿರುತ್ತದೆಎಂದುತಾನೆ? ಎಂಬಪ್ರಶ್ನೆಗೆಉತ್ತರ.'ಪ್ರಚುರಪ್ರಕಾಶೋರವಿಃ' ಎಂಬುದಾಗಿದೆ.ಸೂರ್ಯನಲ್ಲಿ ಸ್ವಲ್ಪವೂ ಕತ್ತಲಿಲ್ಲದಿರುವುದಾದರೂ, ಬೆಳಕೇ ಸೂರ್ಯನಾದರೂ, ಬೆಳಕಿನ ಮೊತ್ತವೇ ಸೂರ್ಯ ಎಂದಂತೆ. ದುಃಖವಿಲ್ಲದಿದ್ದರೂ, ಜ್ಞಾನಕ್ಕಾಗಿ 'ಆನಂದಮಯ' ಎಂಬುದು ಸಂಗತ.

* * * *

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ आनन्दमयाधिकरणम्

### ಅನ್ಯತ್ರೈವಪ್ರಸಿದ್ಧಶಬ್ದಗಳ ವಿಭಾಗ ಪ್ರತ್ಯೇಕ ಅನಾವಶ್ಯಕ

॥ ॐ आनन्दमयोऽभ्यासात् ॐ ॥

वैदिकाश्शब्दास्तावच्चतुर्विधाः, अन्यत्रैवप्रसिद्धा उभयत्रप्रसिद्धा अन्यत्रप्रसिद्धाः तत्रप्रसिद्धा इति ।

नन्वन्यत्रैवप्रसिद्धवत्तत्रैवप्रसिद्धा अपि पृथग्वाच्याः । नच 'तत्र' इत्यनेन तत्रैवेति विवक्षितम् । अन्यथा तत्रापीति विवक्षाऽऽपत्त्या उभयत्रप्रसिद्धेष्वन्तर्भावः स्यात् । अत एव तत्रप्रसिद्धास्सुधायां "ब्रह्मण्येव प्रसिद्धाः" इति निर्दिष्टा इति वाच्यम्, तथात्वे अन्यत्रैवप्रसिद्धानां पार्थक्यायोगात् ।

ननु लोकतोऽन्यत्रैवप्रसिद्धाः अन्यत्रप्रसिद्धाः, श्रुत्यादिभिरन्यत्रैवप्रसिद्धास्त्वन्यत्रैवप्रसिद्धा इति भेदः । अत एव —"श्रुतिलिङ्गादिभिरन्यत्रैवप्रसिद्धानां" इति चतुर्थपादे भाष्यम्,

अत्र च प्रत्यधिकरणं "लोकतोऽन्यत्रप्रसिद्धानां" इति टीका च । तत्रप्रसिद्धानां तत्रैवप्रसिद्धानां अव्युत्पाद्यसमन्वयत्वेन अभेदविवक्षेति चेत्, न,

अन्यत्रप्रसिद्धत्वेनाभिमतस्य आनन्दमयादिनाम्नोऽन्यस्मिन्नर्थविशेषे सर्वगतत्वान्तर्यामित्वादिलिङ्गात्मकशब्दजातस्याप्यन्यत्र आदित्यादाविन्द्राकाशादिशब्दानामिन्द्रादाविव लोकतोऽप्रसिद्ध्याऽन्यत्रप्रसिद्धत्वाभावापातात् । प्रत्युताऽऽ-

## ಟೀಕೆಯಲ್ಲಿರುವ ಕಠಿಣ ಪದಾರ್ಥ

ಆನಂದಮಯಾಧಿಕರಣದ ಭಾಷ್ಯ ಟೀಕೆಗೆ ಎರಡು ಆಯಾಮಗಳಿವೆ. ಆನಂದಮಯ ಬ್ರಹ್ಮ ಆಗದೇ ಹೋದರೆ ವಿಚಾರವೇ ಅಸಂಗತ. ಆನಂದಮಯಬ್ರಹ್ಮ ಆದರೆ ಬ್ರಹ್ಮ ಯಾರು? ನಾರಾಯಣನೋ? ಸೂರ್ಯನಿಗಿಂತ ಎತ್ತರದ ಸ್ತರದಲ್ಲಿರುವ ಬೇರೆಲ್ಲ ದೇವತೆಗಳೋ? ಎಂಬ ಪ್ರಶ್ನೆಗೆ ಭಾಷ್ಯದ ಉತ್ತರವನ್ನು ನಿರೂಪಿಸುವುದೇ ಆಗಿದೆ.

ಮಯಟ್ ಶಬ್ದಕ್ಕೆ ಬಹಳ ಎಂದರ್ಥವಾದರೆ ಆನಂದಮಯನೆಂದರೆ ಬಹಳ ಆನಂದವುಳ್ಳವ ಎಂದಾಗುತ್ತದೆ. ಸ್ವಲ್ಪದುಃಖವಿರುತ್ತದೆಎಂದುತಾನೆ? ಎಂಬಪ್ರಶ್ನೆಗೆಉತ್ತರ. 'ಪ್ರಚುರಪ್ರಕಾಶೋರವಿಃ' ಎಂಬುದಾಗಿದೆ. ಸೂರ್ಯನಲ್ಲಿ ಸ್ವಲ್ಪವೂ ಕತ್ತಲಿಲ್ಲದಿರುವುದಾದರೂ, ಬೆಳಕೇ ಸೂರ್ಯನಾದರೂ, ಬೆಳಕಿನ ಮೊತ್ತವೇ ಸೂರ್ಯ ಎಂದಂತೆ. ದುಃಖವಿಲ್ಲದಿದ್ದರೂ, ಜ್ಞಾನಕ್ಕಾಗಿ 'ಆನಂದಮಯ' ಎಂಬುದು ಸಂಗತ.

* * * *

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ आनन्दमयाधिकरणम्

### ಅನ್ಯತ್ರೈವಪ್ರಸಿದ್ಧಶಬ್ದಗಳ ವಿಭಾಗ ಪ್ರತ್ಯೇಕ ಅನಾವಶ್ಯಕ

।। ॐ आनन्दमयोऽभ्यासात् ॐ ।।

वैदिकाश्शब्दास्तावच्चतुर्विधाः, अन्यत्रैवप्रसिद्धा उभयत्रप्रसिद्धा अन्यत्रप्रसिद्धाः तत्रप्रसिद्धा इति ।

नन्वन्यत्रैवप्रसिद्धवत्तत्रैवप्रसिद्धा अपि पृथग्वाच्याः । नच 'तत्र' इत्यनेन तत्रैवेति विवक्षितम् । अन्यथा तत्रापीति विवक्षाऽऽपत्त्या उभयत्रप्रसिद्धेष्वन्तर्भावः स्यात् । अत एव तत्रप्रसिद्धास्सुधायां "ब्रह्मण्येव प्रसिद्धाः" इति निर्दिष्टा इति वाच्यम्, तथात्वे अन्यत्रैवप्रसिद्धानां पार्थक्यायोगात् ।

ननु लोकतोऽन्यत्रैवप्रसिद्धाः अन्यत्रप्रसिद्धाः, श्रुत्यादिभिरन्यत्रैवप्रसिद्धास्त्वन्यत्रैवप्रसिद्धा इति भेदः । अत एव —"श्रुतिलिङ्गादिभिरन्यत्रैवप्रसिद्धानां" इति चतुर्थपादे भाष्यम्,

अत्र च प्रत्यधिकरणं "लोकतोऽन्यत्रप्रसिद्धानां" इति टीका च । तत्रप्रसिद्धानां तत्रैवप्रसिद्धानां अव्युत्पाद्यसमन्वयत्वेन अभेदविवक्षेति चेत्, न,

अन्यत्रप्रसिद्धत्वेनाभिमतस्य आनन्दमयादिनाम्नोऽन्यस्मिन्नर्थविशेषे सर्वगतत्वान्तर्यामित्वादिलिङ्गात्मकशब्दजातस्याप्यन्यत्र आदित्यादाविन्द्राकाशादिशब्दानामिन्द्रादाविव लोकतोऽप्रसिद्ध्याऽन्यत्रप्रसिद्धत्वाभावापातात् । प्रत्युताऽऽ-

**दित्यादिश्रुत्यादिना सर्वगतत्वादेरन्यत्रप्रसिद्धेर्वक्ष्यमाणत्वेनावरत्वादिलिङ्गेनान्यत्रैव-प्रसिद्धाव्यक्तादिशब्दानामिवान्यत्रैवप्रसिद्धता स्यात् ।**

**यथा च सर्वगतत्वादेरन्यत्रप्रसिद्धिसाधकादित्याश्रुतिरन्तर्यामित्वादेरन्यत्र-प्रसिद्धिसाधकशरीरीरित्वादिलिङ्गं च लोकतोऽन्यत्रप्रसिद्धम्, तथाऽव्यक्तादि-शब्दस्यान्यत्रप्रसिद्धिसाधकमवरत्वादिलिङ्गमपि लोकतोऽन्यत्रप्रसिद्धमेव ।**

ಅನುವಾದ - ವೇದದಲ್ಲಿರುವ ಶಬ್ದಗಳು ಒಟ್ಟು ನಾಲ್ಕುವಿಧ - ೧) ಅನ್ಯತ್ರೈವಪ್ರಸಿದ್ಧ ೨) ಉಭಯತ್ರಪ್ರಸಿದ್ಧ ೩) ಅನ್ಯತ್ರಪ್ರಸಿದ್ಧ ೪) ತತ್ರಪ್ರಸಿದ್ಧ ಎಂದು.

ಆಕ್ಷೇಪ - ಅನ್ಯತ್ರಪ್ರಸಿದ್ಧವೆಂದರೆ ಅನ್ಯತ್ರೈವಪ್ರಸಿದ್ಧವೆಂದರ್ಥ. ಆದರೂ ಅನ್ಯತ್ರೈವಪ್ರಸಿದ್ಧವಾದದ್ದನ್ನು ಪ್ರತ್ಯೇಕವಾಗಿ ಪರಿಗಣಿಸುವುದಾದರೆ ತತ್ರಪ್ರಸಿದ್ಧಕ್ಕಿಂತ ಬೇರೆಯಾದ ತತ್ರೈವಪ್ರಸಿದ್ಧಿಯನ್ನೂ ಹೇಳ-ಬೇಕಲ್ಲವೇ?

ಸಮಾಧಾನ - ತತ್ರಪ್ರಸಿದ್ಧಿಯೆಂದರೆ ತತ್ರೈವಪ್ರಸಿದ್ಧಿಯೆಂದೇ ಅರ್ಥ. ಇಲ್ಲವಾದರೆ ತತ್ರಾಪಿಪ್ರಸಿದ್ಧಿ ಎಂದರ್ಥವಾಗುತ್ತದೆ. ಆವಾಗ ಉಭಯತ್ರಪ್ರಸಿದ್ಧಿಯಲ್ಲಿ ಸೇರಬೇಕಾಗುತ್ತದೆ. ಆದ್ದರಿಂದಲೇ ಸುಧೆಯಲ್ಲಿ ತತ್ರಪ್ರಸಿದ್ಧಶಬ್ದಕ್ಕೆ 'ಬ್ರಹ್ಮನಲ್ಲೇ ಪ್ರಸಿದ್ಧವಾದ' ಎಂದು ಅವಧಾರಣಪೂರ್ವಕವಾದ ಅರ್ಥವನ್ನು ಹೇಳಿದ್ದಾರೆ.

ಆಕ್ಷೇಪ - ಹಾಗಾದರೆ ಅನ್ಯತ್ರಪ್ರಸಿದ್ಧವೆಂದರೆ ಅನ್ಯತ್ರೈವಪ್ರಸಿದ್ಧ ಎಂದಂತಾಗುತ್ತದೆ. ಪುನಃ ಅನ್ಯತ್ರೈವಪ್ರಸಿದ್ಧದ ವಿಭಾಗ ಮಾಡಿದ್ದೇಕೆ?

ಸಮಾಧಾನ - ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿದ್ದರೆ ಅನ್ಯತ್ರಪ್ರಸಿದ್ಧಿ ಎನಿಸುತ್ತದೆ. ಶ್ರುತ್ಯಾದಿಗಳಿಂದ ಅನ್ಯತ್ರಪ್ರಸಿದ್ಧವಾಗಿದ್ದರೆ ಅನ್ಯತ್ರೈವಪ್ರಸಿದ್ಧ ಎಂದರ್ಥ. ಆದ್ದರಿಂದ ನಾಲ್ಕನೇ ಪಾದದ ಭಾಷ್ಯದಲ್ಲಿ 'ಶ್ರುತಿಲಿಂಗಾದಿಭಿರನ್ಯತ್ರೈವ ಪ್ರಸಿದ್ಧಾನಾಮ್' ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾಗಿದ್ದರೆ ಅನ್ಯತ್ರೈವಪ್ರಸಿದ್ಧವೆನಿಸುತ್ತದೆ' ಎಂದು. ಮತ್ತು ಪ್ರಥಮಪಾದದ ಪ್ರತಿಯೊಂದು ಅಧಿಕರಣಗಳಲ್ಲಿ ಅನ್ಯತ್ರಪ್ರಸಿದ್ಧಶಬ್ದಗಳೆಂದಷ್ಟೇ ಹೇಳದೆ ಲೋಕತಃ ಅನ್ಯತ್ರಪ್ರಸಿದ್ಧವಾದ ಶಬ್ದಗಳೆಂದು ಟೀಕೆಯಲ್ಲಿ ಹೇಳಿದ್ದಾರೆ.

ವಸ್ತುತಃ ಇದರಂತೆ ತತ್ರಪ್ರಸಿದ್ಧಿಯಲ್ಲೂ ಹೇಳಬಹುದು. ಲೋಕತಃ ಪರಮಾತ್ಮನಲ್ಲಿ ಪ್ರಸಿದ್ಧವಾದ ಶಬ್ದಗಳಿಗೆ ತತ್ರಪ್ರಸಿದ್ಧವೆಂದು. ಶ್ರುತಿಲಿಂಗಾದಿಗಳಿಂದ ಪರಮಾತ್ಮನಲ್ಲಿ ಪ್ರಸಿದ್ಧವಾದ ಶಬ್ದಗಳಿಗೆ ತತ್ರೈವಪ್ರಸಿದ್ಧ ಎಂದು ಹೇಳಬಹುದು. ಆದರೆ ಇವುಗಳಿಗೆ ಸಮನ್ವಯ ಮಾಡುವ ಅನಿವಾರ್ಯತೆ ಇಲ್ಲ. ಹಾಗಾಗಿ ಅಭೇದವಿವಕ್ಷೆ ಮಾಡಲಾಗಿದೆ.

ಆಕ್ಷೇಪ - ಅನ್ಯತ್ರಪ್ರಸಿದ್ಧಕ್ಕೂ ಅನ್ಯತ್ರೈವಪ್ರಸಿದ್ಧಕ್ಕೂ ನೀವು ಹೇಳಿದ ಭೇದ ಅಸಾಧುವಾಗಿದೆ. ಆನಂದಮಯಾದಿನಾಮಗಳನ್ನು ನೀವು ಅನ್ಯತ್ರಪ್ರಸಿದ್ಧವೆಂದು ಹೇಳುತ್ತೀರಿ. ಆದರೆ ಶ್ರುತಿಲಿಂಗಾದಿಗಳಿಂದಲೂ ಆನಂದಮಯಶಬ್ದವು ಭಗವಂತನನ್ನು ಬಿಟ್ಟು ಬೇರೆಯವರಲ್ಲಿ ಪ್ರಸಿದ್ಧವಾಗಿದೆ. ಆದ್ದರಿಂದ ಅದನ್ನು ಅನ್ಯತ್ರೈವಪ್ರಸಿದ್ಧವೆಂದು ಹೇಳಬೇಕು. ಅನ್ಯತ್ರಪ್ರಸಿದ್ಧವೆಂದು ಹೇಗೆ ಹೇಳಿದಿರಿ?

ಮತ್ತು ಸರ್ವಗತತ್ವ ಅಂತರ್ಯಾಮಿತ್ವ ಮೊದಲಾದ ಲಿಂಗಗಳು ಅನ್ಯತ್ರಪ್ರಸಿದ್ಧವೆಂದು ಹೇಳುತ್ತೀರಿ. ಆದರೆ ಇವುಗಳೂ ಸಹ ಶ್ರುತಿಲಿಂಗಾದಿಗಳಿಂದ ಬೇರೆಯವರಲ್ಲಿ ಪ್ರಸಿದ್ಧವಾಗಿದೆ. ಹೊರತು ಲೋಕತಃ ಅನ್ಯತ್ರಪ್ರಸಿದ್ಧವಾಗಿಲ್ಲ. ಇವುಗಳನ್ನೂ ಅನ್ಯತ್ರೈವಪ್ರಸಿದ್ಧವೆಂದೇ ಪರಿಗಣಿಸಬೇಕು. ಅನ್ಯತ್ರಪ್ರಸಿದ್ಧವೆಂದು ಹೇಳಿದ್ದು ಸರಿಯಲ್ಲ. ಯಾವ ರೀತಿಯಾಗಿ ಇಂದ್ರ ಆಕಾಶ ಮೊದಲಾದ ಶಬ್ದಗಳು ಇಂದ್ರಾಕಾಶಾದಿಗಳಲ್ಲಿ ಲೋಕತಃ ಅನ್ಯತ್ರಪ್ರಸಿದ್ಧಗಳಾಗಿವೆಯೋ, ಅದರಂತೆ ಇವುಗಳು ಲೋಕತಃ ಅನ್ಯತ್ರಪ್ರಸಿದ್ಧಗಳಾಗಿಲ್ಲ. ಹೊರತಾಗಿ ಆದಿತ್ಯಾದಿಶ್ರುತಿಗಳಿಂದ ಸರ್ವಗತತ್ವಾದಿಗಳು ಅನ್ಯತ್ರಪ್ರಸಿದ್ಧ-ವಾಗಿವೆ. ಅವುಗಳನ್ನು ಸಮನ್ವಯ ಮಾಡಲಾಗುತ್ತದೆಂದು ಟೀಕೆಯಲ್ಲಿ ಹೇಳಿದ್ದಾರೆ.ಇದನ್ನು ಮುಂದೆ ಹೇಳುತ್ತೇವೆ. ಆದ್ದರಿಂದ ಅವ್ಯಕ್ತಾದಿಶಬ್ದಗಳು ಅವರತ್ವಾದಿಲಿಂಗಗಳಿಂದ ಅನ್ಯತ್ರಪ್ರಸಿದ್ಧವಾದ್ದರಿಂದ ಅನ್ಯತ್ರೈವಪ್ರಸಿದ್ಧವೆಂದು ಪರಿಗಣಿಸಿದಂತೆ ಸರ್ವಗತತ್ವಾದಿಗಳನ್ನೂ ಅನ್ಯತ್ರೈವಪ್ರಸಿದ್ಧವೆಂದೇ ಹೇಳಬೇಕು.

ಮತ್ತು ಸರ್ವಗತತ್ವಾದಿಗಳಿಗೆ ಅನ್ಯತ್ರಪ್ರಸಿದ್ಧತ್ವವನ್ನು ಸಂಪಾದನೆ ಮಾಡುವುದು ಆದಿತ್ಯಾದಿಶ್ರುತಿ. ಅಂತರ್ಯಾಮಿತ್ವಾದಿಗಳಿಗೆ ಅತ್ಯತ್ರಪ್ರಸಿದ್ಧಿಯನ್ನು ಸಂಪಾದನೆ ಮಾಡಿದ್ದು ಶರೀರತ್ವಾದಿಲಿಂಗ. ಈ ಆದಿತ್ಯಶ್ರುತಿಯಾಗಲೀ ಶರೀರತ್ವಾದಿಲಿಂಗವಾಗಲೀ ಲೋಕತಃ ಅನ್ಯತ್ರಪ್ರಸಿದ್ಧವಾಗಿದೆ. ಇವರಂತೆ ಅವ್ಯಕ್ತಾದಿಶಬ್ದಗಳಿಗೆ ಅತ್ಯತ್ರಪ್ರಸಿದ್ಧಿಯನ್ನು ಸಂಪಾದನೆ ಮಾಡುವ ಅವರತ್ವಾದಿಲಿಂಗಗಳೂ ಸಹ ಲೋಕತಃ ಅತ್ಯತ್ರಪ್ರಸಿದ್ಧವೇ ಆಗಿವೆ. ಆದ್ದರಿಂದ ಅವರತ್ವಾದಿಲಿಂಗಗಳನ್ನೆಲ್ಲ ಅನ್ಯತ್ರೈವಪ್ರಸಿದ್ಧವೆಂದೇ ಹೇಳಬೇಕು.

### ಕಠಿಣಪದಾರ್ಥ

ವೈದಿಕಾಃ = ವೇದದಲ್ಲಿರುವ, ಅನ್ಯಥಾ = ತತ್ರ ಎಂಬುದಕ್ಕೆ ತತ್ರೈವ ಎಂದು ವಿವಕ್ಷಿಸದಿದ್ದರೆ, ಅತ ಏವ = ತತ್ರಪ್ರಸಿದ್ಧ ಎಂದರೆ ತತ್ರೈವಪ್ರಸಿದ್ಧವೆಂದು ವಿವಕ್ಷಿಸುವುದರಿಂದಲೇ, ಲೋಕತಃ = ಶ್ರುತ್ಯಾದಿಯಿಂದ ಪ್ರಸಿದ್ಧರೂಢಿಯಿಂದ, ಅವ್ಯುತ್ಪಾದ್ಯಸಮನ್ವಯೇನ = "ನ ವ್ಯುತ್ಪಾದ್ಯಃ ಅವ್ಯುತ್ಪಾದ್ಯಃ, ಅವ್ಯುತ್ಪಾದ್ಯಃ ಸಮನ್ವಯಃ ಯೇಷಾಂ ತೇ, ಅವ್ಯುತ್ಪಾದ್ಯಸಮನ್ವಯಾಃ, ಅವ್ಯುತ್ಪಾದ್ಯಸಮನ್ವಯಾನಾಂ ಭಾವಃ ಅವ್ಯುತ್ಪಾದ್ಯಸಮನ್ವಯತ್ವಂ ತೇನ ಅವ್ಯುತ್ಪಾದ್ಯಸಮನ್ವಯೇನ । (ಸಮನ್ವಯ ಮಾಡಬೇಕಾಗಿಲ್ಲದ ಕಾರಣ.)

**प्रकाशः – ॐ आनन्दमयोऽभ्यासात् ॐ ।।** एतदध्यायसाफल्योक्तिपरां "अथ ब्रह्मस्वरूपनिरूपणे" इत्यादिटीकां "समन्वयसूत्रप्रतिज्ञातसमन्वयहेतौ" इत्यादिनाऽग्रे विवरिष्यन्, तर्ह्यध्यायस्य समन्वयरूपैकार्थत्वात् पादभेदः किंनिबन्धन इत्यतः, समन्वयेऽप्यवान्तरभेदेनेति भावेन पादोपाधीन् वक्तुं प्रवृत्तां, "शब्दाः तावच्चतुर्विधाः" इत्यादिटीकां प्रतीतानुपपत्तिनिरासेन समर्थयिष्यमाणोऽनुवदति – **वैदिका इति ।।** वेदगता इत्यर्थः ।

"वैदिकाश्शब्दाः" इति सुधोक्त्या टीकास्थशब्दपदस्य वैदिकशब्दपरत्वमुक्तं भवति । लोकवेदाधिकरणन्यायेन वैदिकानामेव लौकिकत्वान्न ततो भेदः, भाषाशब्दा एवात्र व्यावर्त्यन्त इति भावः । समन्वयस्तु त्रिविधानामेवेति तावच्छब्दः । टीकारीत्या व्युत्क्रमेण निर्देशः । "नन्विन्द्रादिशब्दानामन्यत्रैवप्रसिद्धानां विष्णौ समन्वयस्य प्रथमपाद एव सिद्धत्वाद्व्यर्थ एवायं पादः प्रतिभाति ।

नच तेषामन्यत्रैवप्रसिद्धताऽभावः, तथा सति तृतीयवैय्यर्थ्यात्, अन्यत्रैवान्यत्रापीत्यतः प्रकारान्तराभावात्" इति चतुर्थपादीयशङ्काटीकां विवरितुं चातुर्विध्यमाक्षिपति – **नन्विति ।।** "ब्रह्मण्येव" इति सुधानुरोधात् टीकास्थत्रेत्यस्य तत्रैवेत्यर्थ इति शङ्काव्याजेनोपपत्तिं वदन्नाह – **नच तत्रेति ।। तथात्व इति ।।** 'तत्र' 'तत्रैव' इत्यनयोरभेदे अन्यत्रप्रसिद्धानामन्यत्रैवप्रसिद्धानां च भेदो न स्यात् । अन्यथाऽन्यत्रापीति विवक्षापत्त्योभयत्रप्रसिद्धेष्वन्तर्भावस्स्यादित्यर्थः । चतुर्थपादीयपरिहारटीकोक्तसमाधिविशेषविवक्षया समर्थयिष्यमाणो यथाश्रुतमाशङ्क्य निषेधति – **नन्विति ।।**

इन्द्राकाशादिशब्दानामिन्द्रादिष्वेवलोकतोऽवगतेरव्यक्तादिशब्दानामवरत्वादिलिङ्गादिनाऽन्यगतत्वस्यैव प्रतीतेश्चेति भावः ।। **सर्वगतत्वेति ।।** द्वितीयपादीयस्येत्यर्थः ।। **इन्द्रेति ।।** अन्तराद्यधिकरणोदाहरणानामित्यर्थः ।। **अन्यत्रप्रसिद्धत्वाभावेति ।।** तथा चान्यत्रप्रसिद्धलक्षणं तत्राव्याप्तमिति भावः ।

अन्यत्रैवप्रसिद्धानां लक्षणमतिव्याप्तमित्याह – **प्रत्युतेति ।।** आदिपदेनादितिश्रुत्यादिनाऽत्तृत्वादेरिति गृह्यते ।

ननु लिङ्गपादे अन्यत्रैवप्रसिद्धिसम्पादकश्रुत्यादेर्लोकतोऽन्यत्रप्रसिद्धत्वं विवक्षितम्, अत एव टीकायां ''लोकतोऽन्यत्रप्रसिद्धादित्याश्रुतिसहपठितसर्वगतत्वाि लङ्गस्य'' इत्याद्युक्तमित्यत आह – **यथा चेति** ।।

**गुरुराजीयम्** – ॐ **आनन्दमयोऽभ्यासात्** ॐ ।। **नन्वस्मिन्नध्याये** समन्वयरूपस्यैकस्यैवार्थस्य प्रतिपादनान्न पादभेदः सम्भवतीत्याशङ्कानिरासार्थं टीकोक्तमवान्तरार्थमाक्षिप्य समाधातुमवान्तरार्थभेदमादावाह – **वैदिका इति** । तत्तु समन्वयादित् इत्यत्र संशब्दद्योत्यसकलशब्दसमन्वयो वैदिकानामेव शब्दानां नान्येषामिति वैदिका इत्युक्तम् । न केवलं शब्दानां चातुर्विध्यमेव कथ्यते किन्तु तत्समर्थनमपीति दर्शयितुं तावदित्युक्तम् ।। **नन्विति** ।।

तथा च पञ्चविधा इति वक्तव्यम् । चातुर्विध्योक्तिरनुपपन्नेति भावः । चातुर्विध्योपपत्तिमाशङ्क्य परिहरति ।। **नचेति** ।। **अन्यथेति** ।। तत्रेत्यनेन तत्रैवेत्यविवक्षायाम् । तत्रेत्यस्य तत्रैव तत्रापीति प्रकारद्वयातिरिक्तप्रकारा-भावादिति भावः । तत्रेत्यनेन तत्रैवेति विवक्षायां ज्ञापकमाह – **अत एवेति** ।। तत्रप्रसिद्धा इत्यनेन तत्रैवप्रसिद्धानां विवक्षितत्वादेवेत्यर्थः । एकं सन्धित्सतोऽपरं प्रच्यवत इत्याह – **तथात्व इति** । अन्यत्रप्रसिद्धा इत्यनेनान्यत्रैवप्रसिद्धा इति विवक्षितम् । अन्यथाऽन्यत्रापीति पक्षापत्त्यो-भयत्रप्रसिद्धेष्वन्तर्भावः स्यादित्यन्यत्रैवप्रसिद्धानां ग्रहणे पौनरुक्त्यापत्त्या तत्परित्यागे त्रैविध्यमेव स्यादिति भावः । नन्वन्यत्रान्यत्रैवप्रसिद्धौ शब्दौ न यौगिकौ । किन्तु पारिभाषिकौ । अतो न साङ्कर्यमित्याशयेन शङ्कते – **नन्विति** । लोकतः लोकप्रसिद्धरूढ्याऽन्यत्रप्रसिद्धा इत्यर्थः । श्रुत्यादिभिः श्रुत्यादिप्रसिद्धरूढ्या इत्यर्थः । अस्मिन्नर्थे ज्ञापकमाह – **अत एवेति** ।। यद्यप्यत्र कस्मिन्नर्थे न भाष्यटीकयोः संमतित्वं तथाप्युक्तार्थे संमतित्वान्न समुच्चयार्थकशब्दानुपपत्तिः । नन्वेवं शब्दानां चातुर्विध्यं न स्यात् । अन्यत्र प्रसिद्धान्यत्रैवप्रसिद्धवत् लोकतस्तत्र प्राप्तास्तत्रप्रसिद्धाः श्रुतिलिङ्गादिभिस्तत्र प्राप्तास्तत्रैवप्रसिद्धा इति तत्रैवप्रसिद्धानां तत्रप्रसिद्धेभ्योऽन्यत्वेन तत्रप्रसिद्धेभ्योन्येषां तत्रैवप्रसिद्धानामपि पृथक् सत्वादित्यत आह – **तत्र प्रसिद्धानामिति** ।।

अभेदविवक्षायां निमित्तमाह – **अव्युत्पाद्येति** ।। न व्युत्पाद्योऽव्युत्पाद्यः समन्वयो येषामिति बहुव्रीहिस्तेषां भावस्तत्वमिति । एवं तर्हि लोकप्रसिद्ध-रूढ्याऽन्यत्रप्रसिद्धत्वं श्रुत्यादिप्रसिद्धरूढ्याऽन्यत्रैवप्रसिद्धत्वमित्यन्यत्रान्यत्रैवप्रसिद्ध-शब्दलक्षणार्थः पर्यवसन्नः । स न युक्तः । अव्याप्त्यतिव्याप्तिग्रस्तत्वादित्याशयेन प्रथममव्याप्त्या दूषयति – **अन्यत्रेति** ।। अन्यत्रप्रसिद्धत्वेनाभिमतानन्दमयनाम्नोऽ-न्यस्मिन्नर्थविशेषे लोकतोऽप्रसिद्ध्येत्यन्वयः । सर्वगतत्वादिलिङ्गजातस्यान्यत्रादित्यादौ लोकतोऽप्रसिद्ध्येत्यन्वयः । इन्द्राकाशादीनामिवेति व्यतिरेकदृष्टान्तः । इन्द्राकाशादि-शब्दानामिन्द्रे लोकतःप्रसिद्धत्ववदानन्दमयादिशब्दानां लोकतोऽन्यत्रप्रसिद्धत्वा-भावादिति भावः । अन्यत्रैवप्रसिद्धलक्षणस्यान्यत्र प्रसिद्धेष्वतिव्याप्तिश्चेत्याह – **प्रत्युतेति** ।। तथाचान्यत्रैवप्रसिद्धलक्षणस्यातिव्याप्तिरिति भावः ।

ननु सर्वगतत्वादिलिङ्गानां स्वत एवान्यत्र प्रसिद्धेर्वक्ष्यमाणत्वेन कथमत्रा-दित्यादिश्रुतिसाहित्येनान्यत्रप्रसिद्धत्वमुक्तमिति चेन्न । तत्रोक्तप्रथमद्वितीयपक्षा-नुसारेणास्योक्तत्वादिति भावः । ननु सर्वगतत्वादेरन्यत्रप्रसिद्धत्वं सम्भवत्येव । नच लोकतोऽन्यत्राप्रसिद्धत्वात्कथमन्यत्रप्रसिद्धतेति वाच्यम् । सर्वगतत्वादेरन्यत्र प्रसिद्धि साधकादित्यादिश्रुतेरन्यत्र लोकप्रसिद्धत्वेन तस्याप्यन्यत्रप्रसिद्धतोपपत्तेः । तथा च नाव्याप्तिरित्यत आह – **यथाचेत्यादि** ।। तथा च लोकतोऽन्यत्रप्रसिद्धश्रुत्याद्य-नुसारेणाऽन्यत्रप्रसिद्धत्वरूपान्यत्रप्रसिद्धलक्षणस्यान्यत्रैवप्रसिद्धेष्वतिव्याप्तिः स्यादिति भावः । तथाचाव्यक्तादिशब्दानामपि लोकतोऽन्यत्रप्रसिद्धत्वेनान्यत्रप्रसिद्धत्वा-पत्त्याऽन्यत्रैवप्रसिद्धत्वं न स्यादिति भावः ।

ವಿವರಣೆ - ಆನಂದಮಯಾಧಿಕರಣವು ಪ್ರಾರಂಭವಾಗುತ್ತಿದೆ. ಪ್ರಥಮಾಧ್ಯಾಯದ ಸಾಫಲ್ಯವನ್ನು 'ಅಥ ಬ್ರಹ್ಮಸ್ವರೂಪನಿರೂಪಣೇ ಅನವಶೇಷಾತ್' ಇತ್ಯಾದಿ ಟೀಕೆಯು ಸಮರ್ಥಿಸುತ್ತಿದೆ. ಇದನ್ನು ಗ್ರಂಥಕಾರರು 'ಸಮನ್ವಯಸೂತ್ರಪ್ರತಿಜ್ಞಾತಸಮನ್ವಯಹೇತೌ' ಇತ್ಯಾದಿಯಾಗಿ ಪ್ರಕೃತ ಸಂಪೂರ್ಣ ಅಧ್ಯಾಯವು ಸಮನ್ವಯವೆಂಬ ಒಂದೇ ಅರ್ಥವನ್ನು ಹೊಂದಿರುವುದರಿಂದ ಪಾದಭೇದಕ್ಕೆ ಏನು ನಿಮಿತ್ತ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಸಮನ್ವಯದಲ್ಲಿಯೂ ಅವಾಂತರಭೇದವಿರುವುದರಿಂದ ಪಾದಭೇದವು ಸಮಂಜಸವಾಗಿದೆ. ಪ್ರತಿಯೊಂದು ಪಾದಗಳ ಉಪಾಧಿಯೇ ಭಿನ್ನ ಭಿನ್ನವಾಗಿದೆಯೆಂದು ಸಮರ್ಥಿಸಲು 'ಶಬ್ದಾಸ್ತಾವಚ್ಚತುರ್ವಿಧಾಃ' ಇತ್ಯಾದಿ ಟೀಕೆಯು ಹೊರಟಿದೆ. ಇದರ ಮೇಲೆ ಬರುವ ಅನುಪಪತ್ತಿಯನ್ನು ಪರಿಹರಿಸುವ ಮೂಲಕ ಪಾದಭೇದಕ್ಕೆ ನಿಮಿತ್ತವಾದ ಉಪಾಧಿಯನ್ನು ಸಮರ್ಥಿಸಬೇಕಾಗಿದೆ, ಅದಕ್ಕೋಸ್ಕರ ಟೀಕೆಯಲ್ಲಿ ಹೇಳಿದ್ದನ್ನೇ 'ವೈದಿಕಾಃ' ಇತ್ಯಾದಿಯಗಿ ಅನುವಾದ ಮಾಡಿದ್ದಾರೆ.

ಟೀಕೆಯಲ್ಲಿ 'ಶಬ್ದಾಸ್ತಾವತ್' ಎಂದಷ್ಟೇ ಇದೆ. ವೈದಿಕವೆಂದು ಹೇಳಿಲ್ಲ. ಆದರೆ ಸುಧೆಯಲ್ಲಿ 'ವೈದಿಕಾಃ ಶಬ್ದಾಃ' ಎಂದಿರುವುದರಿಂದ 'ವೈದಿಕಾಃ ಶಬ್ದಾಃ' ಎಂದು ಗ್ರಂಥಕಾರರು ಅನುವಾದ ಮಾಡಿದ್ದಾರೆ.

ಗ್ರಂಥದಲ್ಲಿ 'ವೈದಿಕಾಃ' ಎಂಬ ವಿಶೇಷಣದಿಂದ ಲೌಕಿಕಶಬ್ದಗಳನ್ನು ವ್ಯಾವೃತ್ತಿಗೊಳಿಸಿದ್ದಾರೆಂಬ ಭ್ರಾಂತಿ ಬರುತ್ತದೆ. ಆದರೆ ವೈದಿಕ ಹಾಗು ಲೌಕಿಕಸಕಲಶಬ್ದಗಳ ಸಮನ್ವಯವನ್ನು ವಿವಕ್ಷಿಸಬೇಕು. ಪೂರ್ವಮೀಮಾಂಸೆಯ ಲೋಕವೇದಾಧಿಕರಣನ್ಯಾಯದಿಂದ ವೇದದಲ್ಲಿರುವ ಶಬ್ದಗಳೇ ಲೋಕದಲ್ಲಿ ಪ್ರಸಿದ್ಧವಾಗಿವೆಯೆಂದು ನಿರ್ಣೀತವಾಗಿದೆ. ವೇದದಲ್ಲಿಲ್ಲದ ಸಂಸ್ಕೃತಶಬ್ದಗಳು ವ್ಯವಹಾರದಲ್ಲಿ ಪ್ರಸಿದ್ಧವಾಗಲು ಸಾಧ್ಯವಿಲ್ಲ. ಆದ್ದರಿಂದ ಇಲ್ಲಿ ವೈದಿಕಶಬ್ದದಿಂದ ಕನ್ನಡ ಮೊದಲಾದ ಭಾಷೆಗಳನ್ನಷ್ಟೇ (ಸಂಸ್ಕೃತೇತರ) ವ್ಯಾವೃತ್ತಿಗೊಳಿಸಿದ್ದಾರೆಂದು ತಿಳಿಯಬೇಕು.

ಸಂಸ್ಕೃತಶಬ್ದಗಳು ಒಟ್ಟು ನಾಲ್ಕುವಿಧ. ಅವುಗಳಲ್ಲಿ ಮೂರುವಿಧ ಶಬ್ದಗಳನ್ನಷ್ಟೇ ಇಲ್ಲಿ ಸಮನ್ವಯ ಮಾಡಲಾಗಿದೆ. ವಸ್ತುತಸ್ತು ೧) ತತ್ರಪ್ರಸಿದ್ಧ, ೨) ಅನ್ಯತ್ರಪ್ರಸಿದ್ಧ, ೩) ಉಭಯತ್ರಪ್ರಸಿದ್ಧ, ೪) ಅನ್ಯತ್ರೈವಪ್ರಸಿದ್ಧ, ಈ ಕ್ರಮದಲ್ಲಿ ಶಬ್ದಗಳ ಸಮನ್ವಯ ಮಾಡುವುದರಿಂದ ಹೀಗೆಯೇ ಗ್ರಂಥಕಾರರು ಹೇಳಬೇಕಿತ್ತು. ಆದರೆ ಮಹಾಮಲ್ಲಭಂಗನ್ಯಾಯವನ್ನು ಅನುಸರಿಸಿ ಗ್ರಂಥಕಾರರು ವಿಪರೀತಕ್ರಮದಿಂದ ಉಲ್ಲೇಖಿಸಿದ್ದಾರೆ.

ಆಕ್ಷೇಪ - ಅನ್ಯತ್ರೈವಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ನಾಲ್ಕನೆಯ ಪಾದದಲ್ಲಿ ಮಾಡಬೇಕಾಗಿಲ್ಲ. ಪ್ರಥಮಪಾದದಲ್ಲಿ ಸಮನ್ವಯ ಮಾಡುವ ಇಂದ್ರಾದಿಶಬ್ದಗಳು ಅನ್ಯತ್ರೈವಪ್ರಸಿದ್ಧವಾಗಿವೆ. ಹೀಗೆ ಪ್ರಥಮಪಾದದಲ್ಲೇ ಅನ್ಯತ್ರೈವಪ್ರಸಿದ್ಧವಾದ ಶಬ್ದಗಳ ಸಮನ್ವಯ ಸಿದ್ಧವಾಗಿರುವಾಗ ಪುನಃ ನಾಲ್ಕನೆಯ ಪಾದ ಹೊರಟಿದ್ದೆ ವ್ಯರ್ಥ.

ಸಮಾಧಾನ - ಪ್ರಥಮಪಾದದ ಇಂದ್ರಾದಿಶಬ್ದಗಳು ಅನ್ಯತ್ರಪ್ರಸಿದ್ಧವಾಗಿವೆ. ಹೊರತು ಅನ್ಯತ್ರೈವಪ್ರಸಿದ್ಧವಾಗಿಲ್ಲ. ಆದ್ದರಿಂದ ನಾಲ್ಕನೆಯ ಪಾದವು ಸಾರ್ಥಕ.

ಆಕ್ಷೇಪ - ಹಾಗಾದರೆ ಅನ್ಯತ್ರಪ್ರಸಿದ್ಧವೆಂದರೆ ಉಭಯತ್ರಪ್ರಸಿದ್ಧವೆಂದಂತಾಯಿತು. ಪ್ರಥಮಪಾದದಲ್ಲಿ ಉಭಯತ್ರಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡಿದ ಮೇಲೆ ಪುನಃ ಮೂರನೆಯ ಪಾದ ಹೊರಡುವುದು ವ್ಯರ್ಥ. ಆದ್ದರಿಂದ ಶಬ್ದಗಳು ನಾಲ್ಕುವಿಧವಲ್ಲ. ಕೇವಲ ಎರಡೇ ವಿಧ. ೧) ಅನ್ಯತ್ರೈವಪ್ರಸಿದ್ಧ,
೨) ಅನ್ಯತ್ರಾಪಿಪ್ರಸಿದ್ಧ ಎಂದು. ಅನ್ಯತ್ರಪ್ರಸಿದ್ಧಶಬ್ದಕ್ಕೆ ಅನ್ಯತ್ರೈವಪ್ರಸಿದ್ಧವೆಂದು ಅರ್ಥೈಸಿದ್ದರೆ ನಾಲ್ಕನೆಯ ಪಾದ ವ್ಯರ್ಥ. ಅನ್ಯತ್ರಾಪಿಪ್ರಸಿದ್ಧವೆಂದು ಹೇಳಿದರೆ ಮೂರನೆಯ ಪಾದ ವ್ಯರ್ಥವಾಗುತ್ತದಲ್ಲವೇ?

ಈ ಆಕ್ಷೇಪ ನಾಲ್ಕನೆಯ ಪಾದದ ಟೀಕೆಯಲ್ಲಿದೆ. ಅದನ್ನು ಇಲ್ಲಿ 'ನನು' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

ಸುಧೆಯಲ್ಲಿ 'ಬ್ರಹ್ಮಣ್ಯೇವ' ಎಂದಿದೆ. ಅದಕ್ಕೆ ಅನುಸಾರಿಯಾಗಿ ಟೀಕೆಯಲ್ಲಿರುವ 'ತತ್ರ' ಎಂಬ ಶಬ್ದಕ್ಕೂ 'ತತ್ರೈವ' ಎಂದೇ ಅರ್ಥೈಸಬೇಕು. ಇಲ್ಲದಿದ್ದರೆ 'ತತ್ರಾಪಿ' ಎಂಬ ಉಭಯತ್ರಪ್ರಸಿದ್ಧಿಯಲ್ಲಿ ಸೇರಬೇಕಾದೀತು.

ಈ ಉಪಪತ್ತಿಯನ್ನು ತೋರಿಸುತ್ತಾ 'ನಚ ತತ್ರ' ಇತ್ಯಾದಿಯಾಗಿ ಸಮಾಧಾನ ಹೇಳುತ್ತಿದ್ದಾರೆ. 'ತತ್ರ' ಮತ್ತು 'ತತ್ರೈವ' ಶಬ್ದಗಳಿಗೆ ಅಭೇದ ಹೇಳಿದರೆ 'ಅನ್ಯತ್ರ' ಮತ್ತು 'ಅನ್ಯತ್ರೈವ' ಶಬ್ದಗಳಿಗೂ ಅಭೇದ ಹೇಳಬೇಕಾದೀತು. ಇಲ್ಲದಿದ್ದರೆ 'ಅನ್ಯತ್ರಾಪಿ' ಎಂದಂತಾಗಿ ಉಭಯತ್ರಪ್ರಸಿದ್ಧಿಯಲ್ಲಿ ಸೇರಬೇಕಾದೀತು. ಈ ಎಲ್ಲಾ ಆಕ್ಷೇಪಗಳಿಗೆ ಮುಂದೆ ಚತುರ್ಥಪಾದದ ಟೀಕೆಯಲ್ಲಿ ಹೇಳಿದ ಸಮಾಧಾನವನ್ನೇ ಸಮರ್ಥಿಸುವವರಿದ್ದಾರೆ. ಅದಕ್ಕೆ ಅನುಕೂಲವಾಗುವ ಆಕ್ಷೇಪವನ್ನು ಪುನಃ 'ನನು ಲೋಕತಃ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ.

ಇಂದ್ರ ಆಕಾಶಾದಿ ಶಬ್ದಗಳು ಬೇರೆಯವರಲ್ಲಿ ಲೋಕತಃ ತಿಳಿದಿದೆ. ಆದರೆ ಅವ್ಯಕ್ತಾದಿಶಬ್ದಗಳು ಬೇರೆ ಪದಾರ್ಥಗಳಲ್ಲಿ ಲೋಕತಃ ಅವರತ್ವಾದಿಲಿಂಗಗಳಿಂದಲೇ ಸಿದ್ಧವಾಗುತ್ತದೆ. ಆದ್ದರಿಂದ ಅವರತ್ವಾದಿಲಿಂಗಗಳನ್ನು ಅನ್ಯತ್ರೈವಪ್ರಸಿದ್ಧವೆಂದು ಹೇಳುತ್ತೇವೆಂದು ಅಭಿಪ್ರಾಯ.

ಎರಡನೆಯ ಲಿಂಗಪಾದದಲ್ಲಿ ಸರ್ವಗತತ್ವಾದಿಗಳಿಗೆ ಅನ್ಯತ್ರೈವಪ್ರಸಿದ್ಧಿಯನ್ನು ಸಂಪಾದನೆ ಮಾಡಿಕೊಡುವ ಆದಿತ್ಯಾದಿಶ್ರುತಿಯು ಲೋಕತಃ ಅನ್ಯತ್ರಪ್ರಸಿದ್ಧವಾಗಿದೆ. ಆದ್ದರಿಂದ ಸರ್ವಗತತ್ವಾದಿಗಳು ಸ್ವಯಂ ಅನ್ಯತ್ರಪ್ರಸಿದ್ಧವಾಗದಿದ್ದರೂ ಶ್ರುತಿಯ ಬಲದಿಂದ ಅನ್ಯತ್ರಪ್ರಸಿದ್ಧವಾಗಿದೆಯೆಂದು 'ಯಥಾ ಚ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.



## ಸಾರ

ಆನಂದಮಯಾಧಿಕರಣದಿಂದ ಸಮನ್ವಯವು ಪ್ರಾರಂಭವಾಗುತ್ತಿದೆ. ಸಮನ್ವಯಕ್ಕೆ ಅನುಕೂಲವಾಗಲು ಸಮಸ್ತ ಸಂಸ್ಕೃತಶಬ್ದಗಳನ್ನು ಒಟ್ಟು ನಾಲ್ಕು ಬಗೆಯಲ್ಲಿ ವಿಂಗಡಿಸುತ್ತಿದ್ದಾರೆ. ಆ ನಾಲ್ಕರ ಪೈಕಿ ತತ್ರಪ್ರಸಿದ್ಧಶಬ್ದಗಳು ವಿಷ್ಣುವಿನಲ್ಲಿ ಈಗಾಗಲೇ ಪ್ರಸಿದ್ಧವಾದ್ದರಿಂದ ಪ್ರತ್ಯೇಕವಾಗಿ ಸಮನ್ವಯ ಮಾಡಬೇಕಾಗಿಲ್ಲ. ೧) ಅನ್ಯತ್ರಪ್ರಸಿದ್ಧ, ೨) ಉಭಯತ್ರಪ್ರಸಿದ್ಧ, ೩) ಅನ್ಯತ್ರೈವಪ್ರಸಿದ್ಧ ಈ ಮೂರು ಬಗೆಯ ಶಬ್ದಗಳನ್ನು ಸಮನ್ವಯ ಮಾಡಲು ನಾಲ್ಕು ಪಾದಗಳು ಹೊರಟಿವೆ.

ಈ ಮೂರು ಬಗೆಯ ವಿಂಗಡನೆ ಸರಿಯಿಲ್ಲವೆಂದು ಮೊದಲು ಆಕ್ಷೇಪ ಮಾಡಲಾಗಿದೆ. ಏಕೆಂದರೆ ಅನ್ಯತ್ರೈವಪ್ರಸಿದ್ಧಿಯೆಂದರೆ ಅನ್ಯತ್ರೈವಪ್ರಸಿದ್ಧಿ ಎಂದೇ ಅರ್ಥ. ಪುನಃ ಅನ್ಯತ್ರೈವಪ್ರಸಿದ್ಧಿಯೆಂಬ ಪ್ರತ್ಯೇಕ ವಿಭಾಗ ಬೇಕಾಗಿಲ್ಲ. ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾದದ್ದು ಅನ್ಯತ್ರೈವಪ್ರಸಿದ್ಧವೆನಿಸುತ್ತದೆ. ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾದ್ದು ಅನ್ಯತ್ರಪ್ರಸಿದ್ಧ ಎನಿಸುತ್ತದೆಂಬ ವೈಲಕ್ಷಣ್ಯವನ್ನೇನೋ ನೀವು ಹೇಳುತ್ತೀರಿ. ಆದರೆ ಇದು ಕೇವಲ ಮೇಲ್ನೋಟದ ಸಮಾಧಾನ. ಏಕೆಂದರೆ ಅನ್ಯತ್ರಪ್ರಸಿದ್ಧವಾದ ಇಂದ್ರ ಆಕಾಶಾದಿಶಬ್ದಗಳೂ ಸಹ ಶ್ರುತಿಲಿಂಗಾದ್ಗಿಗಳಿಂದ ಅನ್ಯತ್ರಪ್ರಸಿದ್ಧವಾಗಿವೆ. ಸರ್ವಗತತ್ವ ಅಂತರ್ಯಾಮಿತ್ವ ಮೊದಲಾದ ಲಿಂಗಗಳೂ ಸಹ ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾಗಿವೆ. ಆದ್ದರಿಂದ ಅನ್ಯತ್ರಪ್ರಸಿದ್ಧ-ಶಬ್ದಗಳೆಲ್ಲವೂ ಅನ್ಯತ್ರೈವಪ್ರಸಿದ್ಧದಲ್ಲೇ ಸೇರುವಾಗ ಮೂರು ಬಗೆಯ ವಿಭಾಗ ಅನಾವಶ್ಯಕ.



## ಪಾದಭೇದಕ ಉಪಾಧಿ ಸಾಧುವೆ?

**तात्पर्यचन्द्रिका –**

**किञ्चान्यत्रैवप्रसिद्धाव्यक्तप्रकृत्यादिशब्देष्वपि लोकतोऽन्यत्रप्रसिद्धेः सत्त्वादन्यत्रप्रसिद्धेन्द्राकाशादिशब्देषु च श्रुत्यादिनाऽप्यन्यत्रप्रसिद्धेः सत्त्वात्साङ्कर्यं स्यात् ।**

**नच प्रबलश्रुतिलिङ्गादिभिरन्यत्रप्रसिद्धा अन्यत्रैवप्रसिद्धाः, श्रुत्यादिमात्रेणान्यत्रप्रसिद्धास्त्वन्यत्रप्रसिद्धा इति भेदः, अव्यक्तादिशब्दानामन्यत्र- प्रसिद्धिसाधकावरत्वादीनामिव गुहाप्रविष्टत्वादन्यत्रप्रसिद्धिसाधकद्वित्वादीनामप्येकस्मिन् ब्रह्मण्यसम्भवेन बलवत्त्वात् । तस्मान्नान्यत्रप्रसिद्धानामन्यत्रैवप्रसिद्धेभ्यो भेदः ।**

**किञ्चोभयत्रप्रसिद्धे द्युभ्वाद्यायतनत्वादिलिङ्गे ज्योतिरादिनाम्नि च न तावल्लोकत उभयत्रप्रसिद्धिः, प्रकृत्यादौ लोकतोऽप्राप्तेः । नापि श्रुत्यादितः, तथैव टीकादौ वक्ष्यमाणत्वादिति युक्तम् । आनन्दमयेन्द्राव्यक्तादिशब्देष्वपि पूर्वोत्तरपक्षश्रुत्यादिनोभयत्रप्रसिद्धेर्वक्तुं शक्यत्वात् । तस्मादुभयत्रप्रसिद्धानामपि नान्यत्रप्रसिद्धादिभ्यो भेदः ।**

**किञ्चाऽऽकाशादिशब्दानां ''आकाशस्तल्लिङ्गात्'' इति प्रथमे, ''आकाशोऽर्थान्तरत्वादिव्यपदेशात्'' इति तृतीये, ''कारणत्वेन चाकाशादिषु'' इति चतुर्थे च पादे समन्वयोक्तेरन्यत्रोभयत्रान्यत्रैव च प्रसिद्धता स्यात् ।**

ಅನುವಾದ - ಮತ್ತೊಂದು ದೋಷ - ಅವ್ಯಕ್ತ ಪ್ರಕೃತಿ ಮೊದಲಾದ ಶಬ್ದಗಳನ್ನು ಅನ್ಯತ್ರೈವಪ್ರಸಿದ್ಧವೆನ್ನುತ್ತೀರಿ. ಆದರೆ ಇವುಗಳು ಲೋಕರೂಢಿಯಿಂದಲೂ ಅನ್ಯತ್ರಪ್ರಸಿದ್ಧವಾಗಿವೆ. ಇದರಂತೆ ಅನ್ಯತ್ರಪ್ರಸಿದ್ಧವಾದ ಇಂದ್ರ ಆಕಾಶಾದಿಶಬ್ದಗಳು ಶ್ರುತ್ಯಾದಿಗಳಿಂದಲೂ ಅನ್ಯತ್ರಪ್ರಸಿದ್ಧವಾಗಿವೆ. ಹೀಗೆ ಅನ್ಯತ್ರೈವಪ್ರಸಿದ್ಧ ಶಬ್ದಗಳಲ್ಲಿ ಅನ್ಯತ್ರಪ್ರಸಿದ್ಧಿಯ ಲಕ್ಷಣ ಬರುತ್ತದೆ. ಅನ್ಯತ್ರಪ್ರಸಿದ್ಧಶಬ್ದಗಳಲ್ಲಿ ಅನ್ಯತ್ರೈವಪ್ರಸಿದ್ಧಿಯ ಲಕ್ಷಣ ಬರುವುದರಿಂದ ಸಾಂಕರ್ಯದೋಷ ಬರುತ್ತದೆ.

ಇನ್ನು ಪ್ರಬಲವಾದ ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾದದ್ದು ಅನ್ಯತ್ರೈವಪ್ರಸಿದ್ಧ ಎನಿಸುತ್ತದೆ. ಪ್ರಬಲವಲ್ಲದ ಶ್ರುತ್ಯಾದಿಗಳಿಂದ ಅನ್ಯತ್ರಪ್ರಸಿದ್ಧವಾದದ್ದು ಅನ್ಯತ್ರಪ್ರಸಿದ್ಧವಾಗುತ್ತದೆ ಎಂಬ ವೈಲಕ್ಷಣ್ಯವನ್ನೂ ಹೇಳಲಾಗದು. ಏಕೆಂದರೆ ಅವ್ಯಕ್ತಾದಿಶಬ್ದಗಳಿಗೆ ಅನ್ಯತ್ರಪ್ರಸಿದ್ಧಿಸಾಧಕವಾದ ಅವರತ್ವಾದಿಗಳು ಹೇಗೆ ಬಲಿಷ್ಠವಾಗಿವೆಯೋ, ಆದರಂತೆ ಲಿಂಗಪಾದದಲ್ಲಿರುವ ಗುಹಾ-

ಪ್ರವಿಷ್ಟತ್ವಾದಿಗಳಿಗೆ ಅನ್ಯತ್ರಪ್ರಸಿದ್ಧಿಸಾಧಕವಾದ ದೃಶ್ಯತ್ವಾದಿಗಳೂ ಸಹ ಒಬ್ಬನೇ ಬ್ರಹ್ಮನಲ್ಲಿ ಬರುವುದಿಲ್ಲ. ಹೀಗಿರುವಾಗ ಅನ್ಯತ್ರಪ್ರಸಿದ್ಧಿಶಬ್ದಗಳಿಗಿಂತ ಅನ್ಯತ್ರೈವಪ್ರಸಿದ್ಧಿಶಬ್ದಗಳಿಗೆ ವೈಲಕ್ಷಣ್ಯವನ್ನು ಹೇಗೆ ಹೇಳುತ್ತೀರಿ?

ಮತ್ತು ದುಭ್ವಾದ್ಯಾಯತನತ್ವಾದಿಲಿಂಗಗಳು ಮತ್ತು ಜ್ಯೋತಿರಾದಿನಾಮಗಳಲ್ಲಿ ಉಭಯತ್ರ-ಪ್ರಸಿದ್ಧಿಯನ್ನು ಲೋಕರೂಢಿಯಿಂದ ಹೇಳಲಾಗದು. ಏಕೆಂದರೆ ಪೂರ್ವಪಕ್ಷ ಮಾಡುವಾಗ ಪ್ರಕೃತ್ಯಾದಿ-ಗಳಲ್ಲಿ ದುಭ್ವಾದ್ಯಾಯತನತ್ವಾದಿಗಳು ಪ್ರಾಪ್ತವೇ ಆಗಿಲ್ಲ. ಇನ್ನು 'ಶ್ರುತಿಲಿಂಗಾದಿಗಳಿಂದ ಉಭಯತ್ರ-ಪ್ರಸಿದ್ಧಿಯನ್ನು ಹೇಳುತ್ತೇವೆ. ಮುಂದೆ ಟೀಕೆಯಲ್ಲಿ ಅದನ್ನೇ ಹೇಳುತ್ತಾರೆ' ಎಂದೂ ಹೇಳಲು ಬರುವುದಿಲ್ಲ. ಹಾಗಾದಲ್ಲಿ ಪ್ರಥಮಪಾದದಲ್ಲಿ ಹೇಳಿದ ಆನಂದಮಯ ಇಂದ್ರ ಮೊದಲಾದ ಶಬ್ದಗಳಿಗೆ ನಾಲ್ಕನೆಯ ಪಾದದಲ್ಲಿ ಹೇಳಿದ ಅವ್ಯಕ್ತಾದಿಶಬ್ದಗಳಿಗೂ ಉಭಯತ್ರಪ್ರಸಿದ್ಧಿಯನ್ನು ಹೇಳಬಹುದು. ಪೂರ್ವಪಕ್ಷಶ್ರುತ್ಯಾದಿಗಳಿಂದ ಬೇರೆಕಡೆ, ಸಿದ್ಧಾಂತದ ಶ್ರುತ್ಯಾದಿಗಳಿಂದ ವಿಷ್ಣುವಿನಲ್ಲಿ ಪ್ರಸಿದ್ಧಿಯನ್ನು ಹೇಳಬಹುದಾದ್ದರಿಂದ ಇವುಗಳಲ್ಲಿಯೂ ಉಭಯತ್ರಪ್ರಸಿದ್ಧಿ ಬರುತ್ತದೆ. ಆದ್ದರಿಂದ ಉಭಯತ್ರಪ್ರಸಿದ್ಧಶಬ್ದಗಳಿಗೂ ಅನ್ಯತ್ರಪ್ರಸಿದ್ಧಶಬ್ದಗಳಿಂದ ವೈಲಕ್ಷಣ್ಯ ಇರುವುದಿಲ್ಲ.

ಮತ್ತು ಒಂದೇ ಆಕಾಶಶಬ್ದವನ್ನು ಮೂರು ಪಾದದಲ್ಲಿ ಸಮನ್ವಯ ಮಾಡಿದ್ದೀರಿ. 'ಆಕಾಶಸ್ತಲ್ಲಿಂಗಾತ್' ಎಂದು ಪ್ರಥಮಪಾದದಲ್ಲಿ 'ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್' ಎಂದು ಮೂರನೆಯ ಪಾದದಲ್ಲಿ 'ಕಾರಣತ್ವೇನ ಚಾಕಾಶಾತ್' ಎಂದು ನಾಲ್ಕನೆಯ ಪಾದದಲ್ಲಿ ಸಮನ್ವಯ ಮಾಡುತ್ತೀರಿ. ಆದ್ದರಿಂದ ಒಂದೇ ಆಕಾಶಶಬ್ದವು ಅನ್ಯತ್ರಪ್ರಸಿದ್ಧ, ಉಭಯತ್ರಪ್ರಸಿದ್ಧ, ಅನ್ಯತ್ರೈವಪ್ರಸಿದ್ಧವೂ ಆಗಬೇಕಾದೀತು.

### ಕಠಿಣಪದಾರ್ಥ

ಸಾಂಕರ್ಯಂ ಸ್ಯಾತ್ = ಎರಡರ ಲಕ್ಷಣ ಪರಸ್ಪರ ಎರಡರಲ್ಲಿಯೂ ಬರುತ್ತದೆ, ಶ್ರುತ್ಯಾದಿಮಾತ್ರೇಣ = ಪ್ರಾಬಲ್ಯವಿಲ್ಲದ ಶ್ರುತಿಯಿಂದ, ಏಕಸ್ಮಿನ್ ಬ್ರಹ್ಮಣಿ = ಒಬ್ಬನೇ ಬ್ರಹ್ಮನಲ್ಲಿ, ತತ್ರೈವ ಟೀಕಾದೌ = ದುಭ್ವಾದ್ಯಧಿಕರಣಾದಿಗಳ ಟೀಕೆಯಲ್ಲಿ, ಪೂರ್ವೋತ್ತರಪಕ್ಷಶ್ರುತ್ಯಾದಿನಾ = ಪೂರ್ವಪಕ್ಷಶ್ರುತಿ ಹಾಗೂ ಸಿದ್ಧಾಂತಪ್ರಾಪಕಶ್ರುತಿ-ಲಿಂಗಗಳಿಂದ, ಉಭಯತ್ರ = ಭಗವಂತನಲ್ಲಿ ಮತ್ತು ಭಗವಂತನಿಗಿಂತ ಭಿನ್ನರಾದವರಲ್ಲಿ

**प्रकाशः – प्रकारान्तरेणोभयलक्षणस्याप्यतिव्याप्तिमाह – किञ्चेति ।।**

यद्वा – पूर्वमन्यत्रैवप्रसिद्धानां लक्षणं लिङ्गपादीयशब्देष्वतिव्याप्तमित्युक्तम् । इदानीमाद्यपादीयशब्दैः साङ्कर्यमाह – किञ्चेति ।। श्रुत्यादिनेति ।। ''ब्रह्मेन्द्रमग्निं'' इत्यग्निश्रुत्येन्द्रशब्दस्याग्नौ ''सर्वाणि हवा इमानि भूतानि'' इत्युक्तभूतोपादानत्व-लिङ्गेनाकाशशब्दस्याकाशे प्रसिद्धेः सम्भवादिति भावः । ''पूर्वं क्वचिच्छ्रुत्यादि-

नैवान्यत्रप्रसिद्धसमन्वयोक्तावप्येतत्पादीयश्रुत्यादीनांप्राबल्यात्'' इति चतुर्थपादीय-टीकोक्तमाशङ्क्य निरस्यति – **न चेति** ।। **अव्यक्तेति** ।। चतुर्थपादीयानामित्यर्थः । 'अव्यक्तात्' इति पञ्चम्युक्तोत्कर्षावधित्वाक्षिप्तावरत्वस्योत्तमे विष्णावयोगादिति भावः ।। **गुहेति** ।। ''गुहां प्रविष्टौ परमे परार्धे'' इत्यादिवाक्योक्तस्य द्वितीय-पादीयस्येत्यर्थः । सूत्रोपात्तलिङ्गाभिप्रायेणेयमुक्तिः, ऋतपातृत्वस्यैव तत्र समन्वयात् ।

तृतीयपादोपाधिमपि निरसितुमाह – **किञ्चेति** ।। लोकतस्तथात्वं वा श्रुत्यादि-भिर्वेति विकल्प्य क्रमेण प्रत्याह – **न तावदित्यादिना** ।।

न हि द्युभ्वाद्यायतनपदेन प्रकृतरुद्रादिर्विष्णुर्वा, ''ज्योतिर्दर्शनात्'' इत्यादौ वक्ष्यमाणज्योतिश्शब्देन च जीवो विष्णुर्वा लोकतः प्रतीयत इति भावः ।। **पूर्वेति** ।। पूर्वपक्षप्रापकश्रुतिलिङ्गादिनाऽन्यत्रप्रसिद्धिः, सिद्धान्तप्रापकश्रुत्यादिना च भगवतीति, सर्वेऽप्युभयत्रप्रसिद्धास्स्युरित्यर्थः । आनन्दमयेन्द्रादयः आदिपदोक्त-सर्वगतत्वादिलिङ्गवाचिनश्चाद्यद्वितीयपादीयाः, अव्यक्तज्योतिर्जीवपञ्चजनादयः चतुर्थ-पादीया इति ध्येयम् । सामान्यतः पादोपाधीन्निरस्य विशिष्य निराह – **किञ्चेति** ।।

आदिपदेन ''ज्योतिश्चरणाभिधानात्'' इति प्रथमे, ''ज्योतिर्दर्शनात्'' इति तृतीये, ''ज्योतिरुपक्रमात्'' इति चतुर्थे च ज्योतिश्शब्दस्य समन्वयोक्तेः तथा ''अदृश्यत्वादिगुणकः'' इति द्वितीये, ''अक्षरमम्बरान्तधृतेः'' इति तृतीये अक्षरपदस्य समन्वयोक्तेरिति ग्राह्यम् ।

गुरुराजीयम् – ननु लोकतोन्यत्रप्रसिद्धा श्रुत्यादिनाऽन्यत्रप्रसिद्धा अन्यत्रैवप्रसिद्धा इत्येव लक्षणम् । न चाद्यस्यानन्दमयादिनाम्नि सर्व-गतत्वादिलिङ्गेषु चाव्याप्तिः । अव्यक्तादिशब्देषु चातिव्याप्तिः । द्वितीयस्यापि सर्वगतत्वादिष्वतिव्याप्तिरिति वाच्यम् । ''विकारशब्दात्'' इति न्यायेना-नन्दमयनाम्नः ''अर्भकौकस्त्वात्'' इत्यादिवक्ष्यमाणन्यायेन सर्वगतत्वादि-लिङ्गानामपि स्वत एवान्यत्रप्रसिद्धेर्वक्ष्यमाणत्वात् । अव्यक्तादिशब्दानां च न स्वतोऽन्यत्रप्रसिद्धिरिति नाव्याप्त्यतिव्याप्ती इत्यरुचेराह – किञ्चेति ।। तथा-

चान्याप्त्यतिव्याप्ती अपरिहार्ये इति भावः । रीत्यन्तरेणासाङ्कर्यमाशङ्क्य परिहरति ।। नचेति ।। अन्यत्रप्रसिद्धिसाधकश्रुत्यादीनां प्राबल्यं हि विष्णावसम्भाव्यमानत्वं वाऽन्यद्वा । नान्त्योऽनिर्वचनात् । नाद्यः । प्रकृतेऽपि साम्यादित्याह – अव्यक्तादीति ।। तथा च न तन्निबन्धनः पादभेदो युक्त इति भावः । एवमन्यत्रान्यत्रैवप्रसिद्धानां साङ्कर्यमुपपाद्योभयत्र-प्रसिद्धानामपि तैः साङ्कर्यमुपपादयितुमाह – किञ्चेति ।। प्रकृत्यादाविति ।। न हि लोकाः प्रकृत्यादिद्युभ्वायतनमिति व्यवहरन्तीति भावः ।

ವಿವರಣೆ - ಮತ್ತೊಂದು ಪ್ರಕಾರದಲ್ಲಿ ಅನ್ಯತ್ರಪ್ರಸಿದ್ಧಿಲಕ್ಷಣಕ್ಕೆ ಮತ್ತು ಅನ್ಯತ್ರೈವಪ್ರಸಿದ್ಧಿಲಕ್ಷಣಕ್ಕೆ ಅತಿವ್ಯಾಪ್ತಿದೋಷವನ್ನು ಹೇಳುತ್ತಿದ್ದಾರೆ.

ಅಥವಾ ಹಿಂದೆ ಅನ್ಯತ್ರೈವಪ್ರಸಿದ್ಧವಾದ ಲಕ್ಷಣಕ್ಕೆ ಲಿಂಗಪಾದದ ಶಬ್ದಗಳಲ್ಲಿ ಅತಿವ್ಯಾಪ್ತಿ ಹೇಳಿದರು. ಈಗ ಪ್ರಥಮಪಾದದ ಶಬ್ದಗಳಿಂದಲೇ ಸಾಂಕರ್ಯದೋಷವನ್ನು ಹೇಳುತ್ತಿದ್ದಾರೆ.

ಇಂದ್ರಾದಿಶಬ್ದಗಳು ಶ್ರುತ್ಯಾದಿಗಳಿಂದ ಅನ್ಯತ್ರಪ್ರಸಿದ್ಧವಾಗುವ ಬಗೆ ಹೀಗಿದೆ - 'ಬ್ರಹ್ಮೇಂದ್ರಮಗ್ನಿಮ್' ಎಂಬ ಅಗ್ನಿಶ್ರುತಿಯಿಂದ ಇಂದ್ರಶಬ್ದವು ಅಗ್ನಿಯಲ್ಲಿ ಪ್ರಸಿದ್ಧವಾಗಿದೆ. 'ಸರ್ವಾಣಿ ಹ ವಾ ಇಮಾನಿ ಭೂತಾನಿ' ಎಂಬ ಶ್ರುತಿಯಲ್ಲಿ ಹೇಳಿರುವ ಉಪಾದಾನತ್ವಲಿಂಗದಿಂದ ಆಕಾಶಶಬ್ದವು ಆಕಾಶದಲ್ಲಿ ಪ್ರಸಿದ್ಧವಾಗಿದೆಯೆಂದು.

ಇಲ್ಲಿಯ ತನಕ ಲೋಕತಃ ಅನ್ಯತ್ರಪ್ರಸಿದ್ಧವಾಗಿದ್ದರೆ ಅನ್ಯತ್ರಪ್ರಸಿದ್ಧ, ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾದರೆ ಅನ್ಯತ್ರೈವಪ್ರಸಿದ್ಧ ಎಂಬುದನ್ನು ನಿರಾಕರಿಸಿದ್ದಾಯಿತು. ಮುಂದೆ ಪ್ರಬಲವಾದ ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾದರೆ ಅನ್ಯತ್ರೈವಪ್ರಸಿದ್ಧವೆಂದು, ಸಾಮಾನ್ಯವಾದ ಶ್ರುತಿಯಿಂದಷ್ಟೇ ಅನ್ಯತ್ರಪ್ರಸಿದ್ಧವಾಗಿದ್ದರೆ ಅನ್ಯತ್ರಪ್ರಸಿದ್ಧವೆನ್ನುತ್ತೇವೆ ಎಂಬುದನ್ನು ನಿರಾಕರಿಸುತ್ತಿದ್ದಾರೆ. ಇದನ್ನು ಚತುರ್ಥಪಾದದ ಟೀಕೆಯಲ್ಲಿ ಹೀಗೆ ಆಶಂಕಿಸಿದ್ದಾರೆ. 'ಪೂರ್ವಂ ಕ್ವಚಿತ್ ಶ್ರುತ್ಯಾದಿನ್ಯೈವ ಅನ್ಯತ್ರಪ್ರಸಿದ್ಧಸಮನ್ವಯೋಕ್ತಾವ-ಪ್ಯೇತತ್ಪಾದೀಯಶ್ರುತ್ಯಾದೀನಾಮ್ ಪ್ರಾಬಲ್ಯಾತ್' 'ಹಿಂದಿನ ಪಾದಗಳಲ್ಲಿ ಸಾಮಾನ್ಯವಾದ ಶ್ರುತಿಯಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡಿದ್ದಾಯಿತು. ಈ ಪಾದದಲ್ಲಿ ಪ್ರಬಲವಾದ ಶ್ರುತ್ಯಾದಿಗಳಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ, ಎಂದು.

'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿರುವ ಪಂಚಮೀ ವಿಭಕ್ತಿಯಿಂದ ಉತ್ಕರ್ಷಾವಧಿತ್ವವು ತಿಳಿಯುತ್ತದೆ. ಇದರಿಂದ ಆಕ್ಷಿಪ್ತವಾದದ್ದು ಅವರತ್ವ. ಈ ಅವರತ್ವವನ್ನು ವಿಷ್ಣುವಿನಲ್ಲಿ ಯಾವಕಾರಣದಿಂದಲೂ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅವರತ್ವಾದಿಲಿಂಗಗಳು ಅವ್ಯಕ್ತಾದಿಶಬ್ದಗಳಿಗೆ ಅನ್ಯತ್ರಪ್ರಸಿದ್ಧಿಯನ್ನು ಸಾಧಿಸಲು ಪ್ರಬಲಲಿಂಗಗಳಾಗಿವೆ. ಹೀಗೆ ಚತುರ್ಥಪಾದದಲ್ಲಿ ಹೇಳಿದ್ದೀರಿ. ಇದರಂತೆ ದ್ವಿತೀಯಪಾದದಲ್ಲಿರುವ ಗುಹಾಪ್ರವಿಷ್ಟತ್ವಾದಿಗಳನ್ನೂ ಹೇಳಬಹುದು. ಗುಹಾಪ್ರವಿಷ್ಟತ್ವಕ್ಕೆ ಅನ್ಯತ್ರಸಾಧಕವಾದದ್ದು ದ್ವಿತ್ವಾದಿಲಿಂಗಗಳು. ಈ ಲಿಂಗವನ್ನು ಅದ್ವಿತೀಯವಾದ ವಿಷ್ಣುವಿನಲ್ಲಿ ಯಾವ ಕಾರಣದಿಂದಲೂ ಹೇಳಲಾಗದು.

ವಸ್ತುತಸ್ತು ಗುಹಾಧಿಕರಣದಲ್ಲಿ ಋತಪಾತೃತ್ವ(ಕರ್ಮಫಲಭೋಕ್ತೃತ್ವ) ಎಂಬ ಲಿಂಗವನ್ನು ಹೇಳಿದ್ದಾರೆ ಹೊರತು ಗುಹಾಪ್ರವಿಷ್ಟತ್ವವನ್ನು ಹೇಳಿಯೇ ಇಲ್ಲ. ಆದರೂ ಸಹ ಸೂತ್ರದಲ್ಲಿ ಉಲ್ಲೇಖಿಸಿದ ಲಿಂಗವನ್ನು ವಿವಕ್ಷಿಸಿ ಗ್ರಂಥಕಾರರು ಗುಹಾಪ್ರವಿಷ್ಟತ್ವವನ್ನು ಹೇಳಿದ್ದಾರೆ. ಈ ಗುಹಾಪ್ರವಿಷ್ಟತ್ವವು ಋತಪಾತೃತ್ವವನ್ನು ಸಮರ್ಥಿಸುತ್ತದೆ. ಆದ್ದರಿಂದ ಋತಪಾತೃತ್ವವು ಮುಖ್ಯಲಿಂಗವಾಗಿದೆ. ಗುಹಾಪ್ರವಿಷ್ಟತ್ವವು ಅಮುಖ್ಯ-ಲಿಂಗವಾಗಿದೆ. ಇಲ್ಲಿ ಮುಖ್ಯಲಿಂಗವನ್ನೇ ಹೇಳಿದ್ದಾರೆ.

ಮೂರನೆಯ ಪಾದದ ಉಪಾಧಿಯನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ನಿರಾಸ ಮಾಡುತ್ತಿದ್ದಾರೆ. ಉಭಯತ್ರಪ್ರಸಿದ್ಧಿಯನ್ನು ಲೋಕರೂಢಿಯಿಂದ ಹೇಳುತ್ತೀರೋ, ಅಥವಾ ಶ್ರುತ್ಯಾದಿಗಳಿಂದ ಹೇಳುತ್ತೀರೋ? ಎಂದು ವಿಕಲ್ಪಮಾಡಿ ಕ್ರಮವಾಗಿ 'ನ ತಾವತ್' ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ದ್ಯುಭ್ವಾದ್ಯಾಯತನ-ಪದವನ್ನು ಕೇಳಿದಾಗ ಲೋಕರೂಢಿಯಿಂದ ಪ್ರಕೃತಿ, ರುದ್ರ, ವಿಷ್ಣು ಯಾರೂ ಸಹ ತಿಳಿಯುವುದಿಲ್ಲ. 'ಜ್ಯೋತಿರ್ದರ್ಶನಾತ್' ಇತ್ಯಾದಿ ಸೂತ್ರದಲ್ಲಿ ಜ್ಯೋತಿಶಬ್ದದಿಂದ ಜೀವನಾಗಲೀ ವಿಷ್ಣುವಾಗಲೀ ಲೋಕರೂಢಿಯಿಂದ ತಿಳಿಯುವುದಿಲ್ಲ.

'ಪೂರ್ವೋತ್ತರಪಕ್ಷ' ಇತ್ಯಾದಿವಾಕ್ಯದ ಅಭಿಪ್ರಾಯ ಹೀಗಿದೆ - ಪೂರ್ವಪಕ್ಷಪ್ರಾಪಕಶ್ರುತಿಲಿಂಗಾದಿಗಳಿಂದ ಶಬ್ದಗಳು ಅನ್ಯತ್ರಪ್ರಸಿದ್ಧವಾಗುತ್ತವೆ. ಸಿದ್ಧಾಂತಪ್ರಾಪಕವಾದ ಶ್ರುತಿಲಿಂಗಾದಿಗಳಿಂದ ಭಗವಂತನಲ್ಲಿ ಪ್ರಸಿದ್ಧವಾಗಿವೆ. ಹೀಗೆ ಸಕಲಶಬ್ದಗಳೂ ಉಭಯತ್ರಪ್ರಸಿದ್ಧಗಳಾಗುತ್ತವೆಂದು ಅರ್ಥ. ಆನಂದಮಯಾಧಿ-ಕರಣದಲ್ಲಿ ಇಂದ್ರಾದಿಶಬ್ದಗಳು ಆದಿಪದದಿಂದ ಸರ್ವಗತತ್ವಾದಿಲಿಂಗಗಳನ್ನು ವಿವಕ್ಷಿಸಬೇಕು. ಇದರಂತೆ ನಾಲ್ಕನೆಯ ಪಾದದಲ್ಲಿ ಹೇಳಿದ ಜೀವ, ಪಂಚಜನ ಮೊದಲಾದ ಶಬ್ದಗಳನ್ನು ವಿವಕ್ಷಿಸಬೇಕು. ಇವೆಲ್ಲ ಉಭಯತ್ರಪ್ರಸಿದ್ಧವಾಗಲಿಯೆಂದು ಆಕ್ಷೇಪ.

ಪಾದಗಳ ಉಪಾಧಿಯನ್ನು ಸಾಮಾನ್ಯವಾಗಿ ನಿರಾಸ ಮಾಡಿದ್ದಾಯಿತು. ಈಗ ವಿಶೇಷವಾಗಿ 'ಕಿಂಚ' ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಿದ್ದಾರೆ. 'ಆಕಾಶಾದಿ' ಎಂಬಲ್ಲಿರುವ ಆದಿಪದದಿಂದ ಜ್ಯೋತಿಶಬ್ದವನ್ನು ತೆಗೆದುಕೊಳ್ಳಬೇಕು. 'ಜ್ಯೋತಿಶ್ಚರಣಾಭಿಧಾನಾತ್' ಎಂದು ಪ್ರಥಮಪಾದದಲ್ಲಿ 'ಜ್ಯೋತಿರ್ದರ್ಶನಾತ್' ಎಂದು ಮೂರನೆಯ ಪಾದದಲ್ಲಿ 'ಜ್ಯೋತಿರುಪಕ್ರಮಾತ್' ಎಂದು ನಾಲ್ಕನೆಯ ಪಾದದಲ್ಲಿ ಒಂದೇ ಜ್ಯೋತಿಶಬ್ದವನ್ನು ಸಮನ್ವಯ ಮಾಡಿದ್ದಾರೆ. ಇದರಂತೆ 'ಅದೃಶ್ಯತ್ವಾದಿಗುಣಕಃ' ಎಂದು ಎರಡನೆಯ ಪಾದದಲ್ಲಿ 'ಅಕ್ಷರಾಮಂಬರಾಂತಧೃತೇಃ' ಎಂದು ಮೂರನೆಯ ಪಾದದಲ್ಲಿ ಅಕ್ಷರಪದದ ಸಮನ್ವಯ ಹೇಳಿದ್ದಾರೆ. ಆದ್ದರಿಂದ ಆಕಾಶ ಮೊದಲಾದ ಒಂದೊಂದೇ ಶಬ್ದಗಳು ಅನ್ಯತ್ರ ಉಭಯತ್ರ ಅನ್ಯತ್ರೈವ-ಪ್ರಸಿದ್ಧಗಳಾಗಬೇಕಾದೀತೆಂಬ ಆಕ್ಷೇಪ ಇದ್ದೇ ಇದೆ.




ಅವ್ಯಕ್ತ ಪ್ರಕೃತಿ ಮೊದಲಾದ ಶಬ್ದಗಳ ಸಮನ್ವಯವನ್ನು ನಾಲ್ಕನೆಯ ಪಾದದಲ್ಲಿ ಇಂದ್ರ ಆಕಾಶ ಮೊದಲಾದ ಶಬ್ದಗಳ ಸಮನ್ವಯವನ್ನು ಮೊದಲನೆಯ ಪಾದದಲ್ಲಿ ಮಾಡುತ್ತಿದ್ದೀರಿ. ಇದು ಸರಿಯಲ್ಲ. ಅವ್ಯಕ್ತ, ಪ್ರಕೃತಿ ಮೊದಲಾದ ಶಬ್ದಗಳು ಲೋಕರೂಢಿಯಿಂದಲೂ ಅನ್ಯತ್ರಪ್ರಸಿದ್ಧವಾದ್ದರಿಂದ

ಪ್ರಥಮಪಾದದಲ್ಲೇ ಇವುಗಳ ಸಮನ್ವಯ ಮಾಡಬಹುದು. ಮತ್ತು ಇಂದ್ರ ಆಕಾಶಾದಿಶಬ್ದಗಳು ಶ್ರುತಿಯಿಂದಲೂ ಅನ್ಯತ್ರಪ್ರಸಿದ್ಧವಾದ್ದರಿಂದ ನಾಲ್ಕನೆಯ ಪಾದದಲ್ಲೇ ಸಮನ್ವಯ ಮಾಡಬಹುದು. ಆದ್ದರಿಂದ ನೀವು ಮಾಡಿದ ಪಾದಭೇದದ ಉಪಾಧಿಯು ಅಸಂಗತವಾಗಿದೆ.

---

## ಪ್ರಥಮ ದ್ವಿತೀಯ ಪಾದಗಳ ಉಪಾಧಿನಿರಾಕರಣೆ

**तात्पर्यचन्द्रिका –**

**किञ्च रूढत्वयौगिकत्वाभ्यां हि नामलिङ्गभेदः, सुधायां तथैवोक्तेः । "धर्मविशिष्टधर्मिवाचिनाम्" इति द्वितीयपादीयटीकायामपि यौगिकत्वं लिङ्गत्वमित्यभिप्रेतत्वाच्च ।**

**अत्रापि टीकायां धर्मधर्मिवाचिपदाभ्यां ते एव विवक्षिते । अन्यथा धर्मिवाचिनामन्तर्याम्यादि शब्दानां नामता, धर्मवाचिनामानन्दादिशब्दानां लिङ्गता च स्यात् । स च भेदो न युक्तः, सर्वेषामपि ब्रह्मणि महायोगाङ्गीकारात् ।**

**न चापातप्रतीत्या रूढता, अन्नमयादिषु तदसम्भवात् । नच योगरूढियुक्तानि नामानि, केवलयौगिकानि लिङ्गानीति भेदः, सर्वेषां ब्रह्मणि विद्वद्रूढेः ।**

**किञ्चान्यत्रप्रसिद्धानां नाम्नां लिङ्गानां चान्यत्रप्रसिद्धत्वाविशेषात्पादभेदो न स्यात् । अन्यथा तृतीये उभयत्रप्रसिद्धानां चतुर्थे चान्यत्रैवप्रसिद्धानां नाम्नां लिङ्गानाञ्च समन्वयोक्तिर्न स्यात् । तस्मान्न पादभेदो युक्तः ।**

**नापि तत्क्रमः, महामल्लभङ्गन्यायेनातिप्रयत्नसाध्यस्य प्राथम्ये त्वन्यत्रैवप्रसिद्धानां प्राथम्यं स्यात् ।**

**सोपानारोहणन्यायेनानतिप्रयत्नसाध्यस्य प्राथम्ये तु उभयत्रप्रसिद्धानां प्राथम्यं स्यादिति, अन्यत्रप्रसिद्धानां पूर्वं समन्वयः, तत्रापि नाम्नां पूर्वम्, अनन्तरं लिङ्गानाम्, तदनन्तरमुभयत्रप्रसिद्धानाम्, अन्तेऽन्यत्रैवप्रसिद्धानामिति क्रमस्य सर्वथाऽप्ययोगादिति ।।**

ಅನುವಾದ - ಮತ್ತು ನೀವು ಮಾಡಿದ ನಾಮಾತ್ಮಕ ಲಿಂಗಾತ್ಮಕವೆಂಬ ಭೇದವೂ ಸಹ ಯುಕ್ತವಲ್ಲ. ರೂಢವಾದ ಶಬ್ದಗಳು ನಾಮಾತ್ಮಕವೆಂದು ಯೋಗಿಕವಾದ ಶಬ್ದಗಳು ಲಿಂಗಾತ್ಮಕವೆಂದು ಹೇಳುತ್ತೀರಿ.

ಸುಧೆಯಲ್ಲಿ ಹೀಗೆಯೇ ಹೇಳಿದ್ದಾರೆ. 'ಧರ್ಮವಿಶಿಷ್ಟಧರ್ಮಿವಾಚಿನಾಮ್' 'ಧರ್ಮವಿಶಿಷ್ಟವಾದ ಧರ್ಮಿಯನ್ನು ಹೇಳುವ' ಎಂದು ಎರಡನೆಯ ಪಾದದ ಟೀಕೆಯಲ್ಲಿಯೂ ಕೂಡ ಯೌಗಿಕವಾದದ್ದೇ ಲಿಂಗಾತ್ಮಕವೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಅಧಿಕರಣದ ಟೀಕೆಯಲ್ಲಿಯೂ 'ಧರ್ಮಧರ್ಮಿ-ವಾಚಕಪದಗಳಿಂದ ನಾಮಲಿಂಗಗಳ ಭೇದವೇ ವಿವಕ್ಷಿತವಾಗಿದೆ. ಇಲ್ಲದಿದ್ದರೆ ದ್ವಿತೀಯಪಾದದಲ್ಲಿರುವ ಧರ್ಮಿವಾಚಿಯಾದ ಅಂತರ್ಯಾಮಿಶಬ್ದಗಳು ನಾಮಾತ್ಮಕವೆಂದು ಪ್ರಥಮಪಾದದಲ್ಲಿರುವ ಧರ್ಮವಾಚಿಯಾದ ಆನಂದಾದಿಶಬ್ದಗಳು ಲಿಂಗಾತ್ಮಕಗಳಾಗಬೇಕಾದೀತು. ಆದ್ದರಿಂದ ರೂಢವಾದ ಶಬ್ದಗಳು ನಾಮಾತ್ಮಕವೆಂದು ಯೋಗಿಕವಾದ ಶಬ್ದಗಳು ಲಿಂಗಾತ್ಮಕಗಳೆಂದು ಹೇಳುತ್ತೀರಿ. ಈ ಭೇದವು ಯುಕ್ತವಲ್ಲ. ಸಕಲಶಬ್ದಗಳಿಗೆ ಬ್ರಹ್ಮನಲ್ಲಿ ಮಹಾಯೋಗವನ್ನು ಅಂಗೀಕರಿಸಿದ್ದೀರಿ. ಇನ್ನು ಆಪಾತ-ಪ್ರತೀತಿಯಿಂದಲೂ ರೂಢವೆಂದು ಹೇಳಲಾಗದು. ಅನ್ನಮಯ ಪ್ರಾಣಮಯಾದಿಶಬ್ದಗಳಿಗೆ ಆಪಾತ-ಪ್ರತೀತಿಯಿಂದಲೂ ರೂಢಿಯು ಕೂಡುವುದಿಲ್ಲ. (ಅನ್ನಮಯ ಎಂಬುದು ಯಾರ ಹೆಸರೂ ಅಲ್ಲ).

ಇನ್ನು ಯೋಗ ಹಾಗು ರೂಢಿಯಿಂದ ಕೂಡಿದ್ದು ನಾಮಾತ್ಮಕಶಬ್ದಗಳು ಕೇವಲ ಯೋಗದಿಂದ ಕೂಡಿದ್ದು ಲಿಂಗಾತ್ಮಕಶಬ್ದಗಳೆಂಬ ಭೇದವನ್ನು ಹೇಳಲಾಗದು. ಏಕೆಂದರೆ ಸಕಲಶಬ್ದಗಳು ಬ್ರಹ್ಮನಲ್ಲಿ ವಿದ್ವದ್ರೂಢಿಯಿಂದ ಪ್ರಸಿದ್ಧವಾಗಿವೆ.

ಮತ್ತು ಪ್ರಥಮಪಾದದಲ್ಲಿ ಹಾಗು ದಿತ್ವೀಯಪಾದದಲ್ಲಿ ಅನ್ಯತ್ರ ಪ್ರಸಿದ್ಧವಾದ ಶಬ್ದಗಳನ್ನೇ ಸಮನ್ವಯ ಮಾಡುವಾಗ ಪಾದಭೇದವು ಯುಕ್ತವಲ್ಲ. ನಾಮ ಲಿಂಗವೆಂಬ ಶಬ್ದಭೇದವು ಪಾದಭೇದಕ್ಕೆ ಕಾರಣವಾಗುವುದಿಲ್ಲ. ನಾಮಾತ್ಮಕ ಲಿಂಗಾತ್ಮಕಗಳೆಂಬ ಶಬ್ದಭೇದವೇ ಪಾದಭೇದಕ್ಕೆ ಕಾರಣವಾಗು-ವುದಾದರೆ ಮೂರನೆಯ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಒಟ್ಟಿಗೆ ಮಾಡುವುದು ತಪ್ಪಾಗುತ್ತದೆ. ಮತ್ತು ನಾಲ್ಕನೆಯ ಪಾದದಲ್ಲಿ ಅನ್ಯತ್ರೈವಪ್ರಸಿದ್ಧವಾದ ನಾಮ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಒಟ್ಟಿಗೆ ಮಾಡಿದ್ದು ತಪ್ಪಾಗುತ್ತದೆ. ಆದ್ದರಿಂದ ಕೇವಲ ನಾಮಲಿಂಗವೆಂಬ ಭೇದವು ಪಾದಭೇದಕ್ಕೆ ಕಾರಣವಾಗುವುದಿಲ್ಲ.

ಪಾದಕ್ರಮವೂ ಸರಿಯಿಲ್ಲ. ಮಹಾಮಲ್ಲಭಂಗನ್ಯಾಯದಂತೆ ಕಷ್ಟಸಾಧ್ಯವನ್ನು ಮೊದಲು ಹೇಳಬೇಕು. ಆವಾಗ ಅನ್ಯತ್ರೈವಪ್ರಸಿದ್ಧವಾದ ಶಬ್ದಸಮನ್ವಯವನ್ನೇ ಮೊದಲು ಮಾಡಬೇಕಾಗುತ್ತದೆ. ಸೋಪಾನಾರೋಹಣನ್ಯಾಯವನ್ನು ವಿವಕ್ಷಿಸಿದರೆ ಸುಲಭಸಾಧ್ಯವನ್ನು ಮೊದಲು ಹೇಳಬೇಕಾಗುತ್ತದೆ. ಆವಾಗ ಉಭಯತ್ರಪ್ರಸಿದ್ಧವಾದ ಶಬ್ದಸಮನ್ವಯವೇ ಮೊದಲು ಪ್ರಸಕ್ತವಾಗುತ್ತದೆ. ಅನ್ಯತ್ರಪ್ರಸಿದ್ಧಿಶಬ್ದಕ್ಕೆ ಪ್ರಸಕ್ತಿ ಇರುವುದಿಲ್ಲ.

ಅಷ್ಟೇ ಅಲ್ಲದೇ ನಾಮಾತ್ಮಕಶಬ್ದಗಳ ಸಮನ್ವಯವನ್ನು ಮೊದಲು ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಅನಂತರ ಉಭಯತ್ರಪ್ರಸಿದ್ಧಶಬ್ದಗಳ ಸಮನ್ವಯ ಮಾಡಿ ಕೊನೆಯಲ್ಲಿ ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯ ಮಾಡುವ ಕ್ರಮವು ಸರ್ವಥಾ ಕೂಡುವುದಿಲ್ಲ.

ಕಠಿಣಪದಾರ್ಥ -

ರೂಢತ್ವಯೌಗಿಕತ್ವಾಭ್ಯಾಮ್ = ರೂಢತ್ವ ಯೋಗಿಕತ್ವಗಳೆಂಬ ಉಪಾಧಿ-ಪ್ರಯುಕ್ತವಾಗಿ, ತೇ ಏವ = ಯೋಗಿಕತ್ವ ಹಾಗೂ ರೂಢತ್ವಗಳೇ, ಅನ್ಯಥಾ = ಟೀಕೆಯಲ್ಲಿ ಹಾಗೆ ವಿವಕ್ಷಿಸದಿದ್ದರೆ, ಸ ಚ ಭೇದಃ = ರೂಢತ್ವ ಯೌಗಿಕತ್ವಪ್ರಯುಕ್ತವಾದ ಭೇದವು, ಸರ್ವೇಷಾಮಪಿ = ನಾಮಾತ್ಮಕಲಿಂಗಾತ್ಮಕಶಬ್ದಗಳಿಗೆಲ್ಲ, ತದಸಂಭವಾತ್ = ಅವಯವಾರ್ಥದ ಪ್ರತೀತಿ ಇಲ್ಲದೇ ಅನ್ಯಾರ್ಥದ ಪ್ರತೀತಿಯು ಬರುವುದಿಲ್ಲ, ಕೇವಲಯೌಗಿಕಾನಿ = ರೂಢಿ ಇಲ್ಲದ ಯೋಗಿಕಶಬ್ದಗಳು, ತತ್ಕ್ರಮಃ = ಪಾದಗಳ ಆನುಪೂರ್ವಿಯು, ಅನತಿಪ್ರಯತ್ನಸಾಧ್ಯಸ್ಯ = ಸುಲಭಸಾಧ್ಯವಾದದ್ದಕ್ಕೆ

**प्रकाशः** – आद्यद्वितीयपादोपाधिविभागं च निराह – **किञ्चेति** ।। **सुधाया-मिति** ।। ''साक्षाद्धर्मिवाचिनो नामात्मकाः, धर्मद्वारा धर्मिणि वर्तमाना लिङ्गात्मकाः,'' इत्येतदधिकरणे, तथा लिङ्गपादस्यादौ ''नन्वतीतपादे समन्विता अपि लिङ्गात्मका एव, यौगिकत्वात्'' इति च स्पष्टमुक्तेरित्यर्थः । **अत्रापीति** ।। ''लिङ्गात्मकानां धर्मवाचित्वान्नामात्मकेभ्यो धर्मिवाचिभ्यः'' इत्येतदधिकरणटीकाया मपीत्यर्थः ।। **त इति** ।। यौगिकत्वरूढत्वे इत्यर्थः ।। **अन्तर्यामीति** ।। द्वितीय-पादस्थानामन्तर्याम्यत्तृगुहाप्रविष्टादिशब्दानां लिङ्गतया अभिमतत्वादिति भावः ।।

**आनन्देति** ।। अत्र नये समन्वीयमानानां आनन्दविज्ञानादिशब्दानां नामत्वादिति भावः । एतेन टीकावाक्ययोर्विरोधोऽपि निरस्तो बोध्यः । एतेन ''लिङ्गात्मकाश्च धर्मवचनाः व्यवधानेनान्यबुद्धिं जनयन्ति, नामात्मकास्तु सत्त्ववचनाः साक्षादेव'' इत्युपासनापादीयसुधावाक्यमपि व्याख्यातं बोध्यम् । ततः किमित्यत आह – **स चेति** ।। अत एव सुधायां लिङ्गपादे ''नन्वतीतपादे समन्विता अपि लिङ्गात्मका एव, यौगिकत्वादन्यथा गुणपूर्त्यलाभेन समन्वयसमर्थनवैयर्थ्यात्'' इत्यादिना तथैवोक्तेः, ''यच्छब्दा योगवृत्तयः'' इत्यणुभाष्योक्तिश्चेति भावः । ''तथाप्यन्यत्र-प्रसिद्धत्वादिवदापातप्रतीत्यनुरोधेनेयमुक्तिरित्यदोषः'' इति सुधोक्तं परिहारमग्रे परिष्कर्तुकामो यथाश्रुतमनूद्य प्रत्याह – **नचेति** ।।

**तदिति** ।। योगार्थस्यैव तत्र प्रतीतेरिति भावः ।। **सर्वेषामिति** ।। ''सा योगादेव लभ्यते'' इत्युक्तेः । तथाच केवलयौगिकान्यसम्भावितानीति भावः । अभ्युपेत्यापि नामलिङ्गभेदं पादभेदं निराह – **किञ्चेति** ।।

ननु ''समन्वयेऽप्यवान्तरभेदेन पादभेदः'' इति टीकोक्तदिशा भेदः स्यादित्यत आह – **अन्यथेति** ।। एतेन टीकोक्तमप्याक्षिप्तं बोध्यम् । ननु –

''तत्र प्रथमतोऽन्यत्रप्रसिद्धानां समन्वयः ।
शब्दानां वाच्य एवात्र महामल्लेशभङ्गवत् ।।''

इत्युपासनापादीयानुव्याख्यानोक्तेः कथं क्रमाक्षेपः? इत्यतस्तदनूद्य प्रत्याह – **महामल्लेति** ।।

दुर्गमत्वाच्च नैवात्र प्राथम्ये चोदिताञ्जसा ।

इत्यनुव्याख्यानानुरोधेनाह – **सोपानेति** ।। **उभयत्रेति** ।। तेषामन्यत्रप्रसिद्धिनिरासमात्रस्य अन्यत्रप्रसिद्धानां तत्प्रसिद्धिनिरासपूर्वकं भगवत्परत्वप्रतिपादनाल्लघुत्वादिति भावः । आद्य इतिशब्दो हेतौ, अन्त्यः शङ्कासमाप्तौ ।

गुरुराजीयम् – एवं चतुर्विधशब्दानामपि साङ्कर्यमुपपाद्य नामात्मकत्वलिङ्गात्मकत्वाभ्यामपि तेषां भेदकथनमयुक्तमिति वक्तुमाह – **किञ्चेति** ।। टीकायां धर्मिवाचित्वं नामत्वमित्यभिप्रेतत्वादित्यतष्टीकावाक्यद्वयमन्यथा योजयति – **धर्मं विशिष्टेत्यादि** ।।

ननु तथाप्येतत्पादीयटीकायां रूढत्वयौगिकत्वरूपनामत्वलिङ्गत्वयोः कथमभिसंहितत्वमित्यत आह – **अत्रापीति** ।। एतत्पादीयटीकायामित्यर्थः । ते एव रूढत्वयौगिकत्वे एव । टीकाया यथास्थितार्थपरत्वे बाधकाभावादन्यत्र तात्पर्यकल्पनमनुचितमित्यत आह – **अन्यथेति** ।।

न च धर्मविशिष्टेत्यनेन यौगिकत्वरूपलिङ्गत्वलाभः कथम् । घटशब्दस्य घटत्वविशिष्टघटवाचकत्वे यौगिकत्वाभावादिति वाच्यम् । अत्रहि धर्मशब्देनावयवव्युत्पत्तिलभ्यो गुणो विवक्षितः । गुणविशिष्टगुणिवाचकत्वं च न यौगिकत्वं विना लभ्यमिति यौगिकत्वरूपलिङ्गत्वमभिप्रेतमिति भावः । अस्त्वेवं सुधादिग्रन्थपर्यालोचनया नामलिङ्गभेदः ततः किमित्यत आह – **सचेति** ।। रूढत्वयौगिकत्वाभ्यां भेद इत्यर्थः ।।

सर्वेषामपीति ।। अन्यथा गुणपूर्णत्वसिद्धिर्न स्यादिति भावः । ननु योगराहित्ये सति रूढत्वं नामत्वमिति न विवक्षितम् । किंत्वापातप्रतीत्या रूढत्वमित्याशङ्क्य निषेधति – नचेति ।। तदसम्भवादिति ।। अवयवार्था-प्रतीतिपूर्वकान्यार्थप्रतीत्यसम्भवादित्यर्थः ।। नचेति ।। न चान्नमयादि-शब्देष्वतिव्याप्तिः । तेषां यौगिकत्वेन रूढ्यभावादिति वाच्यम् । तेषामपि कोशेषु रूढेः सत्वादिति भावः ।।

केवलेति ।। रूढिरहितेत्यर्थः ।। सर्वेषामिति ।। तथा च द्वितीय-मसम्भवीति भावः । ननु केवलशब्देन रूढिमात्रराहित्यं न विविक्षितम् । किन्तु लौकिकरूढिराहित्यम् । तथाच सर्वेषां शब्दानां ब्रह्मणि विद्वद्रूढौ विद्यमानायामपि लौकिकरूढिराहित्यस्य सत्त्वान्नासम्भवो लक्षणस्येति चेन्न । तथाप्यन्नमयादिशब्देष्वतिव्याप्त्यवारणात् । तेषां कोशेषु रूढेर्लोकसिद्धत्वा-भावादिति भावः । अस्तु वा नामलिङ्गभेदः तथापि पादभेदो न युक्त इत्याह – किञ्चेति ।। अन्यथेति ।। नामलिङ्गत्वरूपविरुद्धधर्मवत्त्वेन पादभेदाङ्गीकार इत्यर्थः ।। नापि तत्क्रम इति ।। अन्यत्रप्रसिद्धनामात्मकानां प्रथमपादे लिङ्गात्मकानां तेषामेव द्वितीये तृतीये नामलिङ्गात्मकानामुभयत्रप्रसिद्धानां चतुर्थ उभयात्मकानामन्यत्रैवप्रसिद्धानामिति पादक्रमो नेत्यर्थः । महामल्लभङ्गेन वा स्यात्सोपानारोहणक्रमेण वा स्यात् । नाद्य इत्याह – महामल्लेति ।। न द्वितीय इत्याह – सोपानेति ।। फलितमाह – अन्यत्रेति ।। सर्वथेति ।। उक्त-न्याययोरन्यतरन्यायाश्रयणेनापीत्यर्थः ।

ವಿವರಣೆ - ಹಿಂದೆ ನಾಲ್ಕೂ ಪಾದಗಳ ಉಪಾಧಿವಿಭಾಗವನ್ನು ನಿರಾಕರಿಸಿದ್ದಾಯಿತು. ಈಗ ಪ್ರಥಮ ದ್ವಿತೀಯಪಾದಗಳ ಉಪಾಧಿವಿಭಾಗವನ್ನು 'ಕಿಂಚ' ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ನಾಮಾತ್ಮಕ ಲಿಂಗಾತ್ಮಕಶಬ್ದಗಳ ಬಗ್ಗೆ ಸುಧೆಯಲ್ಲಿ ಹೀಗೆ ಹೇಳಿದ್ದಾರೆ - "ಸಾಕ್ಷಾದ್‌ಧರ್ಮಿವಾಚಿನೋ ನಾಮಾತ್ಮಕಾಃ, ಧರ್ಮದ್ವಾರಾ ಧರ್ಮಿಣಿ ವರ್ತಮಾನಾಃ ಲಿಂಗಾತ್ಮಕಾಃ'' "ಸಾಕ್ಷಾತ್ತಾಗಿ ಧರ್ಮಿವಾಚಿಯಾದದ್ದು ನಾಮಾತ್ಮಕಶಬ್ದಗಳು, ಧರ್ಮದ್ವಾರಾ ಧರ್ಮಿವಾಚಕಶಬ್ದಗಳು ಲಿಂಗಾತ್ಮಕಶಬ್ದಗಳು' ಎಂದು. ಈ ಅಧಿಕರಣದಲ್ಲಿ ಮತ್ತು ಲಿಂಗಪಾದದ ಪ್ರಾರಂಭದಲ್ಲಿ "ನನ್ವತೀತಪಾದೇ ಸಮನ್ವಿತಾ ಅಪಿ ಲಿಂಗಾತ್ಮಕಾ ಏವ ಯೌಗಿಕತ್ವಾತ್'' "ಹಿಂದಿನ ಪಾದದಲ್ಲಿ ಸಮನ್ವಯ ಮಾಡಿದ ಶಬ್ದಗಳು ಯೌಗಿಕವಾದ್ದರಿಂದ ಲಿಂಗಾತ್ಮಕಗಳೇ ಆಗಿವೆ'' ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಮತ್ತು ಈ ಅಧಿಕರಣದ ಟೀಕೆಯಲ್ಲಿಯೂ 'ಲಿಂಗಾತ್ಮಕಾನಾಂ ಧರ್ಮವಾಚಿತ್ವಾನ್ನಾಮಾತ್ಮಕೇಭ್ಯೋ ಧರ್ಮಿವಾಚಿಭ್ಯಃ'' "ಲಿಂಗಾತ್ಮಕಶಬ್ದಗಳು ಧರ್ಮವಾಚಿಯಾದ್ದರಿಂದ

ಧರ್ಮಿವಾಚಿಯಾದ ನಾಮಾತ್ಮಕಶಬ್ದಗಳಿಂದ ಭಿನ್ನವಾಗಿದೆ'' ಎಂದು ಹೇಳಿದ್ದಾರೆ. ಈ ಟೀಕೆಯ ಮಾತಿನಿಂದಲೂ ಯೋಗಿಕತ್ವರೂಢತ್ವಗಳೇ ವಿವಕ್ಷಿತವಾಗಿವೆ.

ಎರಡನೆಯ ಪಾದದಲ್ಲಿರುವ ಅಂತರ್ಯಾಮಿತ್ವ ಅತೃತ್ವ, ಗುಹಾಪ್ರವಿಷ್ಟತ್ವಾದಿಶಬ್ದಗಳು ಲಿಂಗಾತ್ಮಕಗಳೆಂದು ಅಭಿಮತವಾಗಿವೆ. ಹಾಗಾಗಿ ಇವುಗಳು ಧರ್ಮಿವಾಚಕಗಳಾಗಲಿ. ಮತ್ತು ಇದೇ ಅಧಿಕರಣದಲ್ಲಿ ಆನಂದಮಯಾದಿ ಶಬ್ದಗಳ ಜೊತೆ ಆನಂದ ವಿಜ್ಞಾನ ಮೊದಲಾದ ಧರ್ಮವಾಚಕಶಬ್ದಗಳನ್ನೂ ಸಮನ್ವಯ ಮಾಡಲಾಗಿದೆ. ಸುಧಾದಲ್ಲಿ ಹಾಗೂ ಟೀಕೆಯಲ್ಲಿ ರೂಢಯೋಗ ಎಂದೇ ಇಟ್ಟುಕೊಳ್ಳಬೇಕು. ಸಾಕ್ಷಾತ್ತಾಗಿ ಧರ್ಮಿವಾಚಿಯಾಗಿದ್ದರೆ ನಾಮಾತ್ಮಕವೆಂದು ಧರ್ಮದ್ವಾರಾ ಧರ್ಮಿವಾಚಿಯಾಗಿದ್ದರೆ ಲಿಂಗಾತ್ಮಕವೆಂದು ವಿವಕ್ಷಿಸಬೇಕು. ಇದರಿಂದ ಟೀಕಾವಾಕ್ಯಗಳ ವಿರೋಧವೂ ಪರಿಹಾರವಾಗುತ್ತದೆ. ಹೀಗೆ ಹೇಳಿದ್ದರಿಂದ 'ಲಿಂಗಾತ್ಮಕಾಶ್ಚ ಧರ್ಮವಚನಾಃ ವ್ಯವಧಾನೇನಾನ್ಯಬುದ್ಧಿಂ ಜನಯಂತಿ ನಾಮಾತ್ಮಕಾಸ್ತು ಸತ್ವವಚನಾಃ ಸಾಕ್ಷಾದೇವ' ಲಿಂಗಾತ್ಮಕವಾದ ಶಬ್ದಗಳು ಧರ್ಮವಾಚಿಯಾದ್ದರಿಂದ ವ್ಯವಧಾನದಿಂದ ಅನ್ಯಬುದ್ಧಿಯನ್ನು ಹುಟ್ಟಿಸುತ್ತವೆ. ನಾಮಾತ್ಮಕವಾದ ಶಬ್ದಗಳು ಧರ್ಮಿವಾಚಿಯಾದ್ದರಿಂದ ಸಾಕ್ಷಾತ್ತಾಗಿಯೇ ಪದಾರ್ಥಜ್ಞಾನವನ್ನು ಹುಟ್ಟಿಸುತ್ತವೆ' ಎಂದು ಮೂರನೇ ಅಧ್ಯಾಯದ ಮೂರನೇ ಪಾದವಾದ ಉಪಾಸನಾಪಾದದಲ್ಲಿ ಈ ವಿಷಯ ಹೇಳಿದ್ದಾರೆ. ಹೀಗೆ ಹೇಳಿದರ ಲಾಭವನ್ನು 'ಸ ಚ ಭೇದಃ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಸುಧೆಯ ಲಿಂಗಪಾದದಲ್ಲಿ 'ನನ್ವತೀತಪಾದೇ ಸಮನ್ವಿತಾಃ ಅಪಿ ಲಿಂಗಾತ್ಮಕಾಃ ಏವ ಯೋಗಿಕತ್ವಾತ್ ಅನ್ಯಥಾ ಗುಣಪೂರ್ತ್ಯಲಾಭೇನ ಸಮನ್ವಯಸಮರ್ಥನವೈಯ್ಯರ್ಥ್ಯಾತ್' ಪ್ರಥಮಪಾದದಲ್ಲಿ ಸಮನ್ವಯ ಮಾಡಿದ ಶಬ್ದಗಳೂ ಸಹ ಯೋಗಿಕವಾದ್ದರಿಂದ ಲಿಂಗಾತ್ಮಕಗಳೇ ಆಗಿವೆ. ಇಲ್ಲದಿದ್ದರೆ ಗುಣಪೂರ್ಣತ್ವವು ಸಿದ್ಧಿಸದೇ ಸಮನ್ವಯ ಸಮರ್ಥನವೇ ವ್ಯರ್ಥವಾಗುತ್ತದೆ' ಎಂದು ಹೇಳಿದ್ದಾರೆ. 'ಯಚ್ಛಬ್ದಾಃ ಯೋಗವೃತ್ತಯಃ' ಎಂಬ ಅಣುಭಾಷ್ಯದ ಸಮ್ಮತಿಯೂ ಇದಕ್ಕಿದೆ.

'ತಥಾಪ್ಯನ್ಯತ್ರಪ್ರಸಿದ್ಧತ್ವಾದಿವದಾಪಾತಪ್ರತೀತ್ಯನುರೋಧೇನೇಯಮುಕ್ತಿರಿತ್ಯದೋಷಃ' 'ಆದರೂ ಸಹ ಅನ್ಯತ್ರಪ್ರಸಿದ್ಧತ್ವಾದಿಗಳಂತೆ ಕೇವಲ ಆಪಾತಪ್ರತೀತಿಯಿಂದ ಈ ಮಾತನ್ನು ಕೂಡಿಸಬಹುದೆಂಬ ಪರಿಹಾರವನ್ನು ಸುಧೆಯಲ್ಲಿ ಹೇಳಿದ್ದಾರೆ. ಅದನ್ನೇ ಇಲ್ಲಿ 'ನಚ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ.

ವಸ್ತುತಃ ನಾಮಾತ್ಮಕ ಲಿಂಗಾತ್ಮಕವೆಂಬ ಭೇದವೇ ಕೂಡುವುದಿಲ್ಲ. ಆದರೂ ನಾಮಲಿಂಗಗಳೆಂಬ ಭೇದವನ್ನು ಒಪ್ಪಿಕೊಳ್ಳೋಣ. ತನ್‌ಮಾತ್ರದಿಂದ ಪಾದಭೇದವು ಕೂಡುವುದಿಲ್ಲವೆಂದು 'ಕಿಂಚ' ಇತ್ಯಾದಿವಾಕ್ಯದಿಂದ ವಿವರಿಸುತ್ತಿದ್ದಾರೆ. ಪ್ರಥಮ ಹಾಗು ದ್ವಿತೀಯಪಾದಗಳಲ್ಲಿ ಅನ್ಯತ್ರ ಪ್ರಸಿದ್ಧವಾದ ಶಬ್ದವನ್ನು ಸಮನ್ವಯ ಮಾಡಿದರೂ ಅವಾಂತರಭೇದವಿರುವುದರಿಂದ ಪಾದಭೇದವು ಕೂಡುತ್ತದೆಂದು ಶಂಕಿಸಿದರೆ 'ಅನ್ಯಥಾ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಪಾದಕ್ರಮವೂ ಸಹ ಕೂಡುವುದಿಲ್ಲವೆಂದದ್ದು ಸರಿಯಲ್ಲ. ಏಕೆಂದರೆ ಉಪಾಸನಾಪಾದದ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ.

ತತ್ರ ಪ್ರಥಮತೋಽನ್ಯತ್ರಪ್ರಸಿದ್ಧಾನಾಂ ಸಮನ್ವಯಃ ।
ಶಬ್ದಾನಾಂ ವಾಚ್ಯ ಏವಾತ್ರ ಮಹಾಮಲ್ಲೇಶಭಂಗವತ್ ॥

ಮಹಾಮಲ್ಲಭಂಗನ್ಯಾಯದಂತೆ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನೇ ಮೊದಲು ಸಮನ್ವಯ ಮಾಡಬೇಕು. ಈ ಶಂಕೆಗೆ ಸಮಾಧಾನವನ್ನು 'ಮಹಾಮಲ್ಲ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಮಹಾಮಲ್ಲಭಂಗನ್ಯಾಯವನ್ನು ವಿವಕ್ಷಿಸಿ ಅನ್ಯತ್ರೈವಪ್ರಸಿದ್ಧಶಬ್ದಗಳನ್ನು ಮೊದಲು ಸಮನ್ವಯ ಮಾಡಿದರೆ ಸ್ಪಷ್ಟವಾಗಿ ಅರ್ಥವಾಗುವುದಿಲ್ಲ ಕಷ್ಟವಾಗುತ್ತದೆ. ಅದಕ್ಕೋಸ್ಕರ ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವನ್ನು ಮೊದಲು ಮಾಡಿದ್ದಾರೆಂದು ಪ್ರಶ್ನಿಸಿದರೆ; ಹಾಗಾದರೆ ಅದಕ್ಕಿಂತ ಸುಲಭವಾದ ಉಭಯತ್ರಪ್ರಸಿದ್ಧಿಶಬ್ದ ಸಮನ್ವಯವನ್ನು ಮೊದಲು ಮಾಡಿದರೆ ಇನ್ನೂ ಸುಲಭವಾಗುತ್ತದೆಂದು 'ಸೋಪಾನ' ಇತ್ಯಾದಿವಾಕ್ಯದಿಂದ ವಿವರಿಸುತ್ತಿದ್ದಾರೆ. 'ದುರ್ಗಮತ್ವಾಚ್ಚ ನೈವಾತ್ರ ಪ್ರಾಥಮ್ಯೇ ಚೋದಿತೇಂಜಸಾ' ಎಂಬ ಅನುವ್ಯಾಖ್ಯಾನವನ್ನೂ ವ್ಯಾಖ್ಯಾನಿಸಿದಂತಾಗುತ್ತದೆ.

ಅನ್ಯತ್ರಪ್ರಸಿದ್ಧಶಬ್ದಸಮನ್ವಯದಿಂದ ಅನ್ಯತ್ರಪ್ರಸಿದ್ಧಿಯನ್ನಷ್ಟೇ ನಿರಾಕರಿಸಲಾಗುತ್ತದೆ. ಆದರೆ ಉಭಯತ್ರ-ಪ್ರಸಿದ್ಧಿಶಬ್ದಸಮನ್ವಯದಿಂದ ಅನ್ಯತ್ರಪ್ರಸಿದ್ಧಿಯನ್ನು ನಿರಾಕರಿಸಿ ಭಗವತ್‌ಪರತ್ವವನ್ನು ಪ್ರತಿಪಾದನೆ ಮಾಡುವುದರಿಂದ ಅತಿಸುಲಭವಾಗಿದೆ. ಇದನ್ನೇ ಮೊದಲು ಹೇಳುವುದು ಹೆಚ್ಚು ಸೂಕ್ತ.




ನಾಲ್ಕು ಪಾದಗಳಲ್ಲಿ ವಿಭಿನ್ನತೆಯನ್ನು ತೋರಿಸಲಾಗದೆಂದು ಸಾಮಾನ್ಯವಾಗಿ ಆಕ್ಷೇಪಿಸಿದ್ದಾಯಿತು. ಪ್ರಕೃತ ಪ್ರಥಮ ಹಾಗೂ ದ್ವಿತೀಯಪಾದಗಳನ್ನು ಪ್ರತ್ಯೇಕ ಮಾಡಲು ಕಾರಣವೇನೆಂದು ಆಕ್ಷೇಪಿಸಲಾಗಿದೆ. ಸಕಲಶಬ್ದಗಳ ಸಮನ್ವಯವನ್ನು ಮಹಾಯೋಗವೃತ್ತಿಯಿಂದ ವಿಷ್ಣುವಿನಲ್ಲಿ ಅಂಗೀಕರಿಸಿದ್ದೀರಿ. ಹೀಗಿರುವಾಗ ನಾಮ ಮತ್ತು ಲಿಂಗಗಳೆಂಬ ಭೇದವೇ ಕೂಡುವುದಿಲ್ಲ. ಏಕೆಂದರೆ ನಾಮ ಎಂದರೆ ರೂಢವೆಂದರ್ಥ. ಎಲ್ಲ ಶಬ್ದಗಳನ್ನು ಭಗವಂತನಲ್ಲಿ ಯೌಗಿಕವೆಂದು ಒಪ್ಪಿದ ಮೇಲೆ ಪುನಃ ನಾಮಾತ್ಮಕ ಲಿಂಗಾತ್ಮಕವೆಂಬ ಪ್ರತ್ಯೇಕತೆಗೆ ಅರ್ಥವಿಲ್ಲ. ಹಾಗಾಗಿದ್ದಲ್ಲಿ ಪ್ರಥಮದ್ವಿತೀಯಪಾದಗಳಿಗೆ ಸಂಗತಿ ದೊರೆಯುತ್ತಿತ್ತು.

ಮತ್ತು ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನೇ ಎರಡೂ ಪಾದಗಳಲ್ಲಿ ಸಮನ್ವಯ ಮಾಡುತ್ತಿರುವುದರಿಂದ ಪಾದಭೇದಕ್ಕೆ ನಿಮಿತ್ತವಿಲ್ಲ. ಹಾಗಾದಲ್ಲಿ ಮೂರನೆಯ ಮತ್ತು ನಾಲ್ಕನೆಯ ಪಾದದಲ್ಲಿ ನಾಮಾತ್ಮಕ ಲಿಂಗಾತ್ಮಕ ಶಬ್ದಗಳ ಸಮನ್ವಯ ಇರುವುದರಿಂದ ಅವುಗಳಿಗಾಗಿ ಇನ್ನೂ ಎರಡೂ ಪಾದಗಳನ್ನು ಪ್ರತ್ಯೇಕವಾಗಿ ರಚಿಸಬೇಕಾಗುತ್ತದೆ.



## ತ್ರಿವಿಧ ಪಾದೋಪಾಧಿಗಳಲ್ಲಿ ತ್ರಿವಿಧ ಲಕ್ಷಣಗಳು

**तात्पर्यचन्द्रिका –**

**उच्यते –**

**श्रुत्यन्तरादिभिस्तुल्या ह्युभयस्मिन् प्रसिद्धता ।**
**श्रुत्यादितो लोकतो वाऽपीतरेषु प्रसिद्धता ॥**

ಪರಿಪೂರ್ಣಚಂದ್ರಿಕಾ

बलवच्छ्रुतिलिङ्गाद्यैरन्येष्वेव प्रसिद्धता ।
उभयत्र प्रसिद्धादेः क्रमाल्लक्षणमुच्यते ॥

यद्वा –

येषां प्रसिद्धिरन्यत्र केवलैव विरोधिनी ।
समन्वयस्योभयत्रप्रसिद्धास्ते हि कीर्तिताः ॥

येषां ब्रह्मण्यप्रसिद्धिः प्रसिद्धिश्चान्यवस्तुषु ।
विरोधिन्यौ हि तेऽन्यत्रप्रसिद्धाः कथिता इह ॥

येषामुक्तद्वयं ब्रह्मपरत्वस्यात्यशक्यता ।
इति तिस्रो विरोधिन्यस्तेऽन्यत्रैवप्रसिद्धकाः ॥

येषां शब्दानां लोके ब्रह्मणीवान्यत्राप्यप्रयोगात् व्यक्तिविशेषनिर्णयाय श्रुत्यन्तरान्वेषणे श्रुत्यन्तरेऽन्यत्रेव ब्रह्मण्यपि प्रयोगात् श्रुत्यन्तरसाधारण्यं प्रवृत्तिनिमित्तादिसाधारण्यं वा पूर्वपक्षिणोऽपि सम्मतम्, अत एव येषां विषयवाक्ये आपाततोऽन्योपस्थापनसमये तत्तुल्यतया च ब्रह्मोपस्थापकत्वम्, अत एव च येषां ब्रह्मणि समन्वयस्यान्योपस्थितिमात्रेण प्रतिबन्धस्ता उभयत्रप्रसिद्धाः ।

येषां तु वस्त्वन्तरे लोकप्रसिद्ध्यादेः सत्त्वात् तद्विरोधेन क्वापि ब्रह्मणि वृत्त्यादिकं पूर्वपक्षिणो न सम्मतम्,

अत एव येषां विषयवाक्ये आपाततोऽन्यमात्रोपस्थापकत्वम्,

अत एव च येषां समन्वयस्यान्योपस्थितिब्रह्मानुपस्थितिभ्यामेव प्रतिबन्धस्तेऽन्यत्रप्रासिद्धाः ।

येषां पुनर्वस्त्वन्तरे लोकप्रसिद्धिस्तत्परत्वे प्रबलश्रुत्यादिकमप्यस्ति,

अत एव येषां विषयवाक्ये आपाततोऽत्यन्तमन्यमात्रोपस्थापकत्वम्,

अत एव च येषां समन्वयस्यान्योपस्थितिब्रह्मानुपस्थितिभ्यां ब्रह्मपरत्वस्यात्यशक्यकल्पनत्वशङ्कया चातितरां प्रतिबन्धस्तेऽन्यत्रैवप्रसिद्धाः ।

अत्र च सर्वत्र प्रत्येकं हेतुस्वरूपफलमुखत्वेन लक्षणत्रयं विवक्षितम् । तत्र चाद्येन 'येषां' इत्यादिना 'अत एव' इत्यतः पूर्वेण हेतुमुखं लक्षणमुक्तम् ।

द्वितीयेन 'येषां' इत्यादिना 'अत एव' इत्यतः पूर्वेण स्वरूपमुखम् । अवशिष्टेन फलमुखम् । तत्र स्वरूपमुखानि द्वितीयानि लक्षणानि उभयत्रान्यत्रान्यत्रैवप्रसिद्धेति शब्दावयवार्थरूपाणि, भाष्ये इहापि सङ्ग्रहश्लोके तत्तच्छब्दप्रयोगादेव सूचितानि ।

प्रथमानि तु टीकायामाद्यादिपादेषु लोकतोऽद्युभ्वाद्यायतनत्वादीनां "रुद्रोऽन्यत्रप्रसिद्ध" इत्यादिना त्रिविधप्रसिद्धिकारणकीर्तनात् सूचितानि ।

तृयीयान्यपि टीकाकृतोभयत्रप्रसिद्धेषु साधारण्यस्य सन्देहबीजतां, तथाऽन्यत्रप्रसिद्धेष्वन्यकोटेरन्यत्रप्रसिद्धितः प्राप्तिं, तथाऽन्यत्रैवप्रसिद्धेष्वन्यत्रैवप्रसिद्धितः । प्राप्तिं च वदता समन्वयप्रतिबन्धतारतम्यसूचनात्सूचितानि । उक्तं हि –

"यस्तानि प्रविभक्तानि हेतुरूपफलैः पृथक्" इति ।

ಅನುವಾದ - ಹೀಗೆ ಉತ್ತರಿಸುತ್ತೇವೆ -

ಶ್ರುತ್ಯಂತರಾದಿಭಿಸ್ತುಲ್ಯಾಹ್ಯುಭಯಸ್ಮಿನ್‌ಪ್ರಸಿದ್ಧತಾ ।
ಶ್ರುತ್ಯಾದಿತೋ ಲೋಕತೋ ವಾಪೀತರೇಷು ಪ್ರಸಿದ್ಧತಾ ॥

ಪರಮಾತ್ಮನಲ್ಲಿ ಹಾಗೂ ಬೇರೆ ಕಡೆ ಶ್ರುತಿಯಿಂದಲೇ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧಿ ಎನಿಸುತ್ತದೆ. ಶ್ರುತಿಯಿಂದಾಗಲೀ ಲೋಕರೂಢಿಯಿಂದಾಗಲಿ ಅನ್ಯತ್ರಪ್ರಸಿದ್ಧವಾಗಿದ್ದರೆ ಅನ್ಯತ್ರಪ್ರಸಿದ್ಧ ಎನಿಸುತ್ತದೆ.

ಬಲವತ್ ಶ್ರುತಿಲಿಂಗಾದ್ಯೈರನ್ಯೇಷ್ವೇವ ಪ್ರಸಿದ್ಧತಾ ।
ಉಭಯತ್ರಪ್ರಸಿದ್ಧಾದೇಃ ಕ್ರಮಾಲ್ಲಕ್ಷಣಮುಚ್ಯತೇ ॥

ಬಲಿಷ್ಠವಾದ ಶ್ರುತಿಲಿಂಗಾದಿಗಳಿಂದ ಶಬ್ದಗಳು ಬೇರೆ ಕಡೆಯೇ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧಿ ಎನಿಸುತ್ತದೆ.

ಅಥವಾ

ಯೇಷಾಂ ಪ್ರಸಿದ್ಧಿರನ್ಯತ್ರ, ಕೇವಲ್ಯೈವ ವಿರೋಧಿನೀ ।
ಸಮನ್ವಯಸ್ಯೋಭಯತ್ರಪ್ರಸಿದ್ಧಾಸ್ತೇಹಿ ಕೀರ್ತಿತಾಃ ॥

ಶಬ್ದಗಳು ಪರಮಾತ್ಮನಲ್ಲಿ ಪ್ರಸಿದ್ಧವಾಗಿರುವಂತೆ ಬೇರೆ ಕಡೆಯೂ ಪ್ರಸಿದ್ಧವಾಗಿದ್ದರೆ ಉಭಯತ್ರ-ಪ್ರಸಿದ್ಧ ಎನಿಸುತ್ತದೆ. ಅನ್ಯತ್ರಪ್ರಸಿದ್ಧವಾಗಿರುವಿಕೆ ಮಾತ್ರ ಇಲ್ಲಿ ಸಮನ್ವಯಕ್ಕೆ ವಿರೋಧಿ ಆಗಿದೆ.

ಯೇಷಾಂ ಬ್ರಹ್ಮಣ್ಯಪ್ರಸಿದ್ಧಿಃ ಪ್ರಸಿದ್ಧಿಶ್ಚಾನ್ಯವಸ್ತುಷು ।
ವಿರೋಧಿನ್ಯೌ ಹಿ ತೇಽನ್ಯತ್ರಪ್ರಸಿದ್ಧಾಃ ಕಥಿತಾ ಇಹ ॥

ಬೇರೆ ಕಡೆ ಪ್ರಸಿದ್ಧವಾಗಿದ್ದು ಪರಮಾತ್ಮನಲ್ಲಿ ಪ್ರಸಿದ್ಧವಾಗದಿದ್ದರೆ ಅನ್ಯತ್ರಪ್ರಸಿದ್ಧ ಎನಿಸುತ್ತದೆ. ಬ್ರಹ್ಮನಲ್ಲಿ ಅಪ್ರಸಿದ್ಧಿ ಬೇರೆಡೆ ಪ್ರಸಿದ್ಧಿ ಎಂಬೆರಡು ಸಮನ್ವಯಕ್ಕೆ ವಿರೋಧಿಗಳಾಗಿವೆ.

ಯೇಷಾಮುಕ್ತದ್ವಯಂ ಬ್ರಹ್ಮಪರತ್ವಸ್ಯಾತ್ಯಶಕ್ಯತಾ ।
ಇತಿ ತಿಸ್ರೋ ವಿರೋಧಿನ್ಯಸ್ತೇಽನ್ಯತ್ರೈವಪ್ರಸಿದ್ಧಕಾಃ ॥

ಅನ್ಯತ್ರೈವಪ್ರಸಿದ್ಧಿಯಲ್ಲಿ ಒಟ್ಟು ಮೂರು ವಿರೋಧಗಳು ೧) ಪರಮಾತ್ಮನಲ್ಲಿ ಪ್ರಸಿದ್ಧಿ ಇಲ್ಲದಿರುವಿಕೆ ೨) ಅನ್ಯತ್ರಪ್ರಸಿದ್ಧವಾಗಿರುವಿಕೆ ೩) ಪರಮಾತ್ಮನಲ್ಲಿ ಸಮನ್ವಯವು ಅತ್ಯಂತ ಅಶಕ್ಯವಾಗಿರುವಿಕೆ.

ದ್ಯುಭ್ವಾದ್ಯಾಯತನ ಮೊದಲಾದ ಶಬ್ದಗಳು ಬ್ರಹ್ಮನಲ್ಲಿ ಹೇಗೆ ಪ್ರಸಿದ್ಧವಾಗಿರುವುದಿಲ್ಲವೋ ಆದರಂತೆ ಲೋಕದಲ್ಲಿಯೂ ಪ್ರಸಿದ್ಧವಾಗಿರುವುದಿಲ್ಲ. ಇಂತಹ ಸ್ಥಳದಲ್ಲಿ ವ್ಯಕ್ತಿವಿಶೇಷ-ನಿರ್ಣಯಕ್ಕೋಸ್ಕರ ಲೋಕವ್ಯವಹಾರವು ಉಪಯೋಗವಾಗುವುದಿಲ್ಲ; ಮತ್ತೊಂದು ಶ್ರುತಿಯನ್ನೇ ಹುಡುಕಬೇಕು. ಶ್ರುತ್ಯಂತರವಾದರೂ ಅನ್ಯತ್ರಪ್ರಸಿದ್ಧವಾಗಿರುವಂತೆ ಬ್ರಹ್ಮನಲ್ಲಿಯೂ ಪ್ರಸಿದ್ಧವಾಗಿ-ರುತ್ತದೆ. ಹೀಗೆ ಶ್ರುತ್ಯಂತರವು ಉಭಯಸಾಧಾರಣವಾಗುತ್ತದೆ. ಅಥವಾ ಪ್ರವೃತ್ತಿನಿಮಿತ್ತವು ಉಭಯ-ಸಾಧಾರಣವಾಗಿರುತ್ತದೆ. (ನಾಶರಾಹಿತ್ಯವೆಂಬ ಅಕ್ಷರಶಬ್ದದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಮತ್ತು ಪ್ರಕೃತಿಯಲ್ಲಿ ಸಾಧಾರಣವಾಗಿದೆ) ಹೀಗೆ ಲೋಕದಲ್ಲಿ ಪ್ರಸಿದ್ಧಿ ಇಲ್ಲದ ಕಾರಣ ಶ್ರುತ್ಯಂತರ ಗವೇಷಣವು ಅನಿವಾರ್ಯ. ಶ್ರುತ್ಯಂತರವಾದರೂ ಉಭಯಸಾಧಾರಣವಾದ್ದರಿಂದ ಉಭಯತ್ರಪ್ರಸಿದ್ಧಿಯನ್ನು ಪೂರ್ವಪಕ್ಷಿಯೂ ಒಪ್ಪಬೇಕು. ಆದ್ದರಿಂದಲೇ ಯಾವುದೇ ಒಂದು ವಿಷಯವಾಕ್ಯವನ್ನು ಕೇಳುವ ಸಂದರ್ಭದಲ್ಲಿ ಆಪಾತತಃ ಬೇರೆ ಪದಾರ್ಥದ ಉಪಸ್ಥಿತಿ ಬರುತ್ತದೆ. ಅದೇ ಸಮಯದಲ್ಲಿಯೇ ಅದಕ್ಕೆ ಸಮಾನವಾಗಿ ಬ್ರಹ್ಮನ ಉಪಸ್ಥಿತಿಯೂ ಬರುತ್ತದೆ. ಈ ಕಾರಣದಿಂದಲೇ ಬ್ರಹ್ಮನಲ್ಲಿ ಸಮನ್ವಯ ಮಾಡಬೇಕಾದರೆ ಕೇವಲ ಅನ್ಯೋಪಸ್ಥಿತಿಯು ಪ್ರತಿಬಂಧಕವಾಗುತ್ತದೆ. ಈ ಶಬ್ದಗಳೇ ಉಭಯತ್ರ-ಪ್ರಸಿದ್ಧಗಳಾಗುತ್ತವೆ. (ಇದು ಯೇಷಾಂ ಪ್ರಸಿದ್ಧಿಃ ಇತ್ಯಾದಿ ಶ್ಲೋಕದ ಅಭಿಪ್ರಾಯ )

ಕೆಲವು ಶಬ್ದಗಳು ಲೋಕಪ್ರಸಿದ್ಧಿಯಿಂದ ಅಥವಾ ಶ್ರುತಿಲಿಂಗಾದಿಗಳಿಂದ ಬೇರೆ ವಸ್ತುವಿನಲ್ಲಿ ಪ್ರಸಿದ್ಧವಾಗಿರುತ್ತವೆ. ಇವುಗಳ ವಿರೋಧ ಬರುವುದರಿಂದ ಆ ಶಬ್ದಗಳು ವೇದದಲ್ಲಿ ಎಲ್ಲಿಯೇ ಇದ್ದರೂ ಯಾವುದೇ ವೃತ್ತಿಯಿಂದಲೂ ಬ್ರಹ್ಮನಲ್ಲಿ ಆ ಶಬ್ದದ ಸಮನ್ವಯವನ್ನು ಪೂರ್ವಪಕ್ಷಿಯು ಒಪ್ಪುವುದಿಲ್ಲ.

ವಸ್ತ್ವಂತರದಲ್ಲಿ ಲೋಕಪ್ರಸಿದ್ಧ್ಯಾದಿಗಳು ಇರುವುದೆಂಬ ಕಾರಣದಿಂದಲೇ ಕೆಲವು ವಿಷಯ-

ವಾಕ್ಯಗಳು ಆಪಾತತಃ ಬೇರೆ ವಸ್ತುಗಳ ಉಪಸ್ಥಿತಿಯನ್ನಷ್ಟೇ ಉಂಟುಮಾಡುತ್ತವೆ; ಬ್ರಹ್ಮನ ಉಪಸ್ಥಿತಿಯನ್ನು ತಂದು ಕೊಡುವುದೇ ಇಲ್ಲ. ಆದ್ದರಿಂದ ಇಂತಹ ಶಬ್ದಗಳನ್ನು ಸಮನ್ವಯ ಮಾಡಲು ಅನ್ಯೋಪಸ್ಥಿತಿ ಹಾಗೂ ಬ್ರಹ್ಮನ ಅನುಪಸ್ಥಿತಿ ಎಂಬೆರಡು ಪ್ರತಿಬಂಧಕಗಳು. ಇವುಗಳು ಅನ್ಯತ್ರಪ್ರಸಿದ್ಧಶಬ್ದಗಳು. (ಯೇಷಾಂ ಬ್ರಹ್ಮಣ್ಯಪ್ರಸಿದ್ಧಿಃ ಎಂಬ ಶ್ಲೋಕದ ವ್ಯಾಖ್ಯಾನ)

ಕೆಲವು ಶಬ್ದಗಳು ಬೇರೆ ವಸ್ತುವಿನಲ್ಲಿ ಲೋಕಪ್ರಸಿದ್ಧಿಯನ್ನು ಹೊಂದಿರುತ್ತವೆ ಮತ್ತು ಪ್ರಬಲವಾದ ಶ್ರುತ್ಯಾದಿಗಳನ್ನು ಹೊಂದಿರುತ್ತವೆ. ಆದ್ದರಿಂದ ಅಂತಹ ವಿಷಯವಾಕ್ಯಗಳು ಆಪಾತತಃ ಬೇರೆ ವಸ್ತುವಿನ ಉಪಸ್ಥಿತಿಯನ್ನೇ ಸ್ಥಿರವಾಗಿ ತಂದುಕೊಡುತ್ತವೆ. ಆದ್ದರಿಂದಲೇ ಇಂತಹ ಶಬ್ದಗಳ ಸಮನ್ವಯಕ್ಕೆ ೧) ಅನ್ಯವಸ್ತುವಿನ ಉಪಸ್ಥಿತಿ ೨) ಬ್ರಹ್ಮನ ಅನುಪಸ್ಥಿತಿ ೩) ಬ್ರಹ್ಮಪರವೆಂದು ಕಲ್ಪಿಸಲು ಅತ್ಯಂತ ಅಶಕ್ಯವಾಗಿರುವಿಕೆ ಇವು ಮೂರು ಪ್ರಬಲವಾಗಿ ಪ್ರತಿಬಂಧಕಗಳಾಗುತ್ತವೆ. ಇವುಗಳು ಅನ್ಯತ್ರೈವ-ಪ್ರಸಿದ್ಧವಾದ ಶಬ್ದಗಳು.

ಅನ್ಯತ್ರಪ್ರಸಿದ್ಧ, ಉಭಯತ್ರಪ್ರಸಿದ್ಧ, ಅನ್ಯತ್ರೈವಪ್ರಸಿದ್ಧವಾದ ಶಬ್ದಗಳಲ್ಲಿ ಪ್ರತ್ಯೇಕಪ್ರತ್ಯೇಕವಾಗಿ ಹೇತು, ಸ್ವರೂಪ, ಫಲಮುಖಲಕ್ಷಣಗಳನ್ನು ವಿವಕ್ಷಿಸಲಾಗಿದೆ. ಅದು ಹೀಗೆ - ಮೊದಲನೆಯ 'ಯೇಷಾಮ್' ಎಂಬುದರಿಂದ 'ಪೂರ್ವಪಕ್ಷಿಣೋಽಪಿ ಸಮ್ಮತಮ್' ಎಂಬಲ್ಲಿಯ ತನಕ ಹೇತುಮುಖ-ಲಕ್ಷಣವನ್ನು ಹೇಳಿದ್ದಾರೆ. ಎರಡನೆಯ 'ಯೇಷಾಮ್' ಎಂಬುದರಿಂದ 'ಬ್ರಹ್ಮೋಪಸ್ಥಾಪಕತ್ವಮ್' ಎಂಬಲ್ಲಿಯ ತನಕ ಸ್ವರೂಪಮುಖಲಕ್ಷಣವನ್ನು ಹೇಳಲಾಗಿದೆ. ಉಳಿದ 'ಅತ ಏವ ಚ' ಇತ್ಯಾದಿ ವಾಕ್ಯದಿಂದ ಫಲಮುಖಲಕ್ಷಣವನ್ನು ಹೇಳಲಾಗಿದೆ. ಎರಡನೆಯ ಸ್ವರೂಪಮುಖಲಕ್ಷಣವಾದರೂ ಉಭಯತ್ರ, ಅನ್ಯತ್ರ, ಅನ್ಯತ್ರೈವಪ್ರಸಿದ್ಧ' ಎಂಬ ಶಬ್ದಗಳ ಅವಯವಾರ್ಥದಿಂದಲೇ ತಿಳಿಯುತ್ತದೆಂದು ಭಾಷ್ಯದಲ್ಲಿ ಹೇಳಿದ್ದಾರೆ. ಇಲ್ಲಿಯೂ ಸಂಗ್ರಹಶ್ಲೋಕಗಳಲ್ಲಿ ಆಯಾ ಶಬ್ದಗಳ ಪ್ರಯೋಗದಿಂದಲೇ ಸೂಚಿಸಿದ್ದಾರೆ.

ಮೊದಲನೆಯ ಹೇತುಮುಖಲಕ್ಷಣವನ್ನು ಟೀಕೆಯ ನಾಲ್ಕು ಪಾದಗಳಲ್ಲಿ 'ಲೋಕತಃ ಅನ್ಯತ್ರ-ಪ್ರಸಿದ್ಧ' ಇತ್ಯಾದಿಯಾಗಿ ಮೂರುವಿಧ ಕಾರಣಗಳನ್ನು ಹೇಳಿದ್ದಾರೆ. ಇದರಿಂದ ಹೇತುಮುಖಲಕ್ಷಣ-ವಿದೆಯೆಂದು ಸೂಚಿತವಾಗುತ್ತದೆ.

ಇನ್ನು ಫಲಮುಖಲಕ್ಷಣಗಳನ್ನೂ ಸೂಚಿಸಿದ್ದಾರೆ. ಟೀಕಾಕಾರರು ಉಭಯತ್ರಪ್ರಸಿದ್ಧವಾದ ಶಬ್ದಗಳಲ್ಲಿ ಉಭಯಸಾಧಾರಣ್ಯವನ್ನು ಸಂದೇಹಬೀಜವೆಂದು ಹೇಳುತ್ತಾರೆ. ಅದರಂತೆ ಅನ್ಯತ್ರಪ್ರಸಿದ್ಧವಾದ ಶಬ್ದಗಳಲ್ಲಿ ಸಂಶಯ ತೋರಿಸಬೇಕಾದರೆ ಎರಡು ಕೋಟಿ ತೋರಿಸುತ್ತಾರೆ. ಆವಾಗ ಅನ್ಯ ಎಂಬ ಕೋಟಿಗೆ ಪ್ರಾಪ್ತಿ ಹೇಗೆ ಎಂದರೆ ಅನ್ಯತ್ರಪ್ರಸಿದ್ಧಿಯಿಂದ ಎಂದು ಹೇಳುತ್ತಾರೆ. ಅದರಂತೆ ಅನ್ಯತ್ರೈವಪ್ರಸಿದ್ಧವಾದ ಶಬ್ದಗಳಲ್ಲಿಯೂ ಅನ್ಯಕೋಟಿಯನ್ನು ಹೇಳುವಾಗ ಅನ್ಯತ್ರೈವ-ಪ್ರಸಿದ್ಧಿಯಿಂದ ಪ್ರಾಪ್ತಿಯನ್ನು ಹೇಳುತ್ತಾರೆ. ಹೀಗೆ ಹೇಳುವುದರಿಂದ ಸಮನ್ವಯಪ್ರತಿಬಂಧದಲ್ಲಿಯೂ

ತಾರತಮ್ಯವಿದೆಯೆಂದು ಸೂಚಿಸಿದಂತಾಯಿತು. 'ಯಸ್ಮಾನಿ ಪ್ರವಿಭಕ್ತಾನಿ ಹೇತುರೂಪಫಲೈಃ ಪೃಥಕ್' ಎಂಬ ಅನುವ್ಯಾಖ್ಯಾನದಲ್ಲಿ ಇದನ್ನೇ ಹೇಳಿದ್ದಾರೆ.

**ಕಠಿಣಪದಾರ್ಥ -**

ವಿರೋಧಿನ್ಯೌ = ಸಮನ್ವಯಕ್ಕೆ ವಿರೋಧಿಗಳಾದ, ಇಹ = ಸಮನ್ವಯ ಮಾಡಬೇಕಾದ ಶಬ್ದಗಳಲ್ಲಿ, ಉಕ್ತದ್ವಯಮ್ = ಬ್ರಹ್ಮನಲ್ಲಿ ಪ್ರಸಿದ್ಧವಾಗದಿರುವಿಕೆ, ಬೇರೆ ಕಡೆ ಪ್ರಸಿದ್ಧಿ ಇರುವಿಕೆ, ಅನ್ಯತ್ರೈವಪ್ರಸಿದ್ಧಕಾಃ = ಬೇರೆ ಕಡೆಯಷ್ಟೇ ಪ್ರಸಿದ್ಧವಾಗಿರುವಿಕೆ (ಸ್ವಾರ್ಥದಲ್ಲಿ 'ಕ' ಪ್ರತ್ಯಯ ಬಂದಿದೆ), ಅತ ಏವ = ಉಭಯಸಾಧಾರಣವಾದ್ದರಿಂದಲೇ, ಅತ ಏವ ಚ = ೧) ಬ್ರಹ್ಮನ ಹಾಗು ಬ್ರಹ್ಮಾನ್ಯವಸ್ತುವಿನ ಉಪಸ್ಥಿತಿಯನ್ನು ತಂದು ಕೊಡುವುದರಿಂದಲೇ ೨) ಉಭಯಸಾಧಾರಣವಾದ್ದರಿಂದಲೇ, ಲೋಕಪ್ರಸಿದ್ಧಾದೇಃ = ಇಂದ್ರ ಆಕಾಶಾದಿಶಬ್ದಗಳು ಲೋಕತಃ ಬೇರೆ ಕಡೆ ಪ್ರಸಿದ್ಧವಾಗಿವೆ. ಶ್ರುತ್ಯಂತರ-ಸಾಹಚರ್ಯದಿಂದ ಸರ್ವಗತತ್ವಾದಿಗಳು ಬೇರೆ ವಸ್ತುವಿನಲ್ಲಿ ಪ್ರಸಿದ್ಧವಾಗಿವೆ. ವೃತ್ತ್ಯಾದಿಕಮ್ = ಶಕ್ತಿತಾತ್ಪರ್ಯದಲ್ಲಿ, ಅತ ಏವ = ಬ್ರಹ್ಮನಲ್ಲಿ ವೃತ್ತಿ ಇಲ್ಲದಿರುವುದರಿಂದಲೇ, ಅತ ಏವ ಚ = ಅನ್ಯ ವಸ್ತುವನ್ನಷ್ಟೇ ಸ್ಮರಣೆಗೆ ತಂದುಕೊಡುವುದರಿಂದ, ತತ್‌ಪರತ್ವೇ = ಬೇರೆ ವಸ್ತುವನ್ನು ಪ್ರತಿಪಾದಿಸುವುದಾದರೆ, ಅತ ಏವ = ಅನ್ಯಪರವೆನ್ನಲು ಪ್ರಬಲಶ್ರುತ್ಯಾದಿಗಳು ಇರುವುದರಿಂದ, ಅತ ಏವ = ಆತ್ಯಂತಿಕವಾದ ಅನ್ಯಮಾತ್ರ ಉಪಸ್ಥಾಪಕವಾದ್ದರಿಂದ, ಸರ್ವತ್ರ = ಮೂರುವಿಧವಾದ ಉಪಾಧಿ ಲಕ್ಷಣಗಳಲ್ಲಿ, ಹೇತುಸ್ವರೂಪಫಲಮುಖೇನ = ಹೇತುಮುಖ, ಸ್ವರೂಪಮುಖ, ಫಲಮುಖದಿಂದ, ಅವಶಿಷ್ಟೇನ = 'ಅತ ಏವ ಚ ಯೇಷಾಮ್'' ಇತ್ಯಾದಿ ವಾಕ್ಯದಿಂದ, ಪ್ರಥಮಾನಿ ತು = ಹೇತುಮುಖಗಳಾದ, ಆದ್ಯಾದಿಪಾದೇಷು = ಪ್ರಥಮ, ದ್ವಿತೀಯ, ತೃತೀಯ, ಚತುರ್ಥಪಾದಗಳಲ್ಲಿ, ಅನ್ಯತ್ರಪ್ರಸಿದ್ಧೇಷು = ಪ್ರಥಮ ದ್ವಿತೀಯಪಾದಗಳಲ್ಲಿ ಹೇಳುವ ಅನ್ಯತ್ರಪ್ರಸಿದ್ಧಿಗಳಲ್ಲಿ, ಅನ್ಯತ್ರೈವಪ್ರಸಿದ್ಧೇಷು = ನಾಲ್ಕನೆಯ ಪಾದದಲ್ಲಿ ಹೇಳುವ ಅನ್ಯತ್ರೈವಪ್ರಸಿದ್ಧಿಗಳಲ್ಲಿ

**प्रकाशः** – असङ्कीर्णलक्षणैरेव पादोपाधयोऽसङ्कीर्णा इति भावेन लक्षणानि सङ्गृह्णाति – **श्रुत्यन्तरेति** ।। सोपानारोहणन्यायेनायं निर्देशः । एकैकार्थेनैकैकस्य लक्षणमिति ध्येयम् । हेतुमुखलक्षणान्यभिधाय स्वरूपमुखानि फलमुखानि च तान्याह – **यद्वेति** ।। एकैकेन श्लोकेनेकैकस्य लक्षणमुच्यत इति विवेकः । 'विरोधिन्यौ समन्वयस्य' इत्यनुषङ्गः । एवमग्रेऽपि ।।

**इहेति** ।। समन्वीयमानशब्देषु ।। **उक्तद्वयमिति** ।। ब्रह्मण्यप्रसिद्धिरन्यत्र-प्रसिद्धिश्चेत्युक्त-द्वयमत्यशक्यता चेत्यर्थः । कः स्वार्थे । 'श्रुत्यन्तर' इति श्लोकोक्तलक्षणानां हेतुमुखत्वं विशदयन्नुत्तरश्लोकोक्तलक्षणानां स्वरूपमुखत्वं फलमुखत्वं च व्यञ्जयन् श्लोकान् व्याचष्टे – **येषां शब्दानामिति** ।।

'श्रुत्यन्तर' इति द्युभ्वाद्यायतनत्वाद्यभिप्रायेण । 'प्रवृत्ति' इति अक्षरादिशब्दाकूतेन । आदिपदादाकाशादिशब्दप्रयोगादिसाधारण्यं चेति ग्राह्यम् । एतेन ''श्रुत्यन्तरादिभिः'' इत्यर्थं विवृतम् । हेतुमुखलक्षणमुक्त्वा स्वरूपमुखलक्षणमाह – **अत एवेति** ।। साधारण्यादेवेत्यर्थः ।

यद्यपीदं न श्लोके कण्ठत उक्तं, तथाऽपि 'उभयत्रप्रसिद्धाः' इति शब्दप्रयोगात् सूचितमित्यग्रे व्यक्तम् । कण्ठोक्तमेव फलमुखलक्षणं विवृणोति – **अत एवेति** ।। उभयोपस्थापकत्वादेवेत्यर्थः ।

यद्वा साधारण्यादेवेत्येर्थः । यद्वक्ष्यति ''इतरयोर्हेतुमूलत्वात्'' इति । 'समन्वयस्य' ब्रह्मैव शक्तितात्पर्यविषय इत्येवंरूपस्य । एतेन ''येषां प्रसिद्धिः'' इति श्लोको विवृतः । अन्यत्रप्रसिद्धानां त्रिविधान्यपि लक्षणानि व्यनक्ति – **येषां त्विति** ।। 'लोक' इति इन्द्राकाशादिशब्दाशयेन । आदिपदस्य सर्वगतत्वादेः श्रुत्यादिसाहचर्येण वस्त्वन्तरे प्रसिद्धेस्सत्त्वादित्यर्थः ।।

**वृत्त्यादिकमिति** ।। वृत्तितात्पर्ये इत्यर्थः । एतेन ''श्रुत्यादितो लोकतो वा'' इत्यर्थं विवृतम् । अन्यत्रप्रसिद्धपदप्रयोगसूचितं स्वरूपमुखलक्षणं विवृणोति – **अत एवेति** ।। ब्रह्मणि वृत्त्यभावादेवेत्यर्थः ।

फलमुखं तदाह – **अत एव चेति** ।। अन्यमात्रोपस्थापकत्वादेवेत्यर्थः न तु ब्रह्मपरत्वस्यात्यशक्यत्वेनापीत्येवकारार्थः । अनेन ''येषां ब्रह्मणि'' इति श्लोको व्याख्यातः । अन्यत्रैवप्रसिद्धानां त्रिविधान्यपि लक्षणानि स्पष्टयति – **येषां पुनरिति** ।। ''तत्परत्वे'' वस्त्वन्तरपरत्वे । एतच्चाव्यक्तादिशब्दाभिप्रायेण । एतेन ''बलवत्'' इत्यर्धं विवृतम् ।

स्वरूपमुखं तदाह – **अत एवेति** ।। अन्यपरत्वे प्रबलश्रुत्याद्युपेतत्वादेवेत्यर्थः ।। **आपातत इति** ।। विमर्शे सति विष्णुमात्रोपस्थापकत्वादिति सर्वत्र बोध्यम् ।

फलमुखं तदाह – **अत एवेति** ।। अत्यन्तमन्यमात्रोपस्थापकत्वादेवेत्यर्थः । पूर्ववद्वाऽर्थः । एतेन ''येषामुक्तद्वयं'' इति श्लोको व्याख्यातः । नन्वत्र व्याख्याने

साधारण्ये सत्यन्योपस्थापकत्वे सति ब्रह्मसमन्वयप्रतिबन्धवत्त्वादिरूपं विशिष्टमेकैकस्योपाधेर्लक्षणं भाति । तदयुक्तं, व्यावर्त्याभावादित्यत आह – **अत्र चेति** ।। **सर्वत्रेति** ।। त्रिविधोपाधिलक्षणजात इत्यर्थः । मुखशब्दः प्रत्येकमन्वेति । तद्विविच्याह – **तत्र चेति** ।। 'आद्येन' त्रयेणेत्यर्थः ।। **अत एवेत्यत इति** ।। आद्येभ्यः 'अत एव' इत्येतेभ्य इत्यर्थः ।।

**हेतुमुखमिति** ।। उभयत्रप्रसिद्ध्यादौ ये हेतवः श्रुत्यन्तरादिसाधारण्यं, लौकिकप्रयोगादि, बलवच्छ्रुत्यादिकं च, त एव मुखमुपजीव्यं येषां तानि हेतुमुखानि त्रिविधोपाधिलक्षणानीत्यर्थः । एवमग्रेऽपि । एकवचनं समुदायाभिप्रायम् ।। **अवशिष्टेनेति** ।। द्वितीयात एव चेत्येतैरित्यर्थः । त्रिविधलक्षणत्रये ज्ञापकं वदन् श्लोके स्वरूपसुखस्यानुक्तिशङ्कां च प्रत्याह – **तत्रेति** ।। **प्रथमानि त्विति** ।। हेतुमुखानीत्यर्थः ।।

**आद्यादीति** ।। आद्यद्वये तृतीयचतुर्थपादयोश्चेत्यर्थः । आद्ये "लोकतोऽन्यत्र-प्रसिद्धाकाशनाम्नः" इत्यादिना, द्वितीये "लोकतोऽन्यत्र प्रसिद्धादित्यश्रुति-सहपठितसर्वगतत्वलिङ्गात्मकशब्दस्य" इत्यादिना, तृतीये "रुद्रो वा व लोकाधारः ...... लोकाश्च लोकिनश्चालोकाश्चालोकिनश्च विष्णावेवोताश्चेत्यादिनोभयत्रप्रसिद्ध-द्युभ्वाद्यायतनत्वलिङ्गस्य" इत्यादिनां चतुर्थे "अवरत्वादिलिङ्गैर्भगवति विरुद्धतया-ऽन्यत्रैवप्रसिद्धाव्यक्तादिशब्दानां" इत्यादिना त्रिविधप्रसिद्धिषु कारणभूतलोक-प्रसिद्ध्यादीनां कीर्तनादित्यर्थः ।। **साधारण्यस्येति** ।। तृतीये पाद इति भावः ।। **अन्यत्रेति** ।। आद्यद्वितीयपादयोः ।। **अन्यत्रैवेति** ।। चतुर्थपादे ।

गुरुराजीयम् – लक्षणासम्भवमुक्तं परिहरति – **उच्यत इत्यादिना** ।। नन्वन्यत्रप्रसिद्धानां समन्वयस्य प्रथमपाद उक्तत्वात्तत्क्रमेणैव लक्षणानि वक्तव्यानि । एवं चादावुभयत्रप्रसिद्धानामन्यत्रान्यत्रैवप्रसिद्धानामिति क्रमोल्लङ्घने को हेतुरिति चेन्न । उभयत्रप्रसिद्धानामन्यत्रप्रसिद्धिसाङ्कर्यस्य पश्चादुक्तत्वेन बुद्धिस्थत्वात्तल्लक्षणस्य प्रथमत उक्तिः । यद्वा उभयत्रप्रसिद्धानामन्यत्रप्रसिद्धत्वस्य सत्त्वात्तेषां साङ्कर्यं दुष्परिहरमिति प्रथमं शिष्यजिज्ञासाविषयत्वात् प्रथमतस्तदुक्तिरिति । हेतुमुखानि लक्षणान्युक्त्वा फलमुखान्याह – **यद्वेति** ।।

ननु नोभयत्रप्रसिद्धानामन्यत्रप्रसिद्धेः साङ्कर्यपरिहारः । अन्यत्रप्रसिद्धानामपि पूर्वोत्तरपक्षश्रुत्यादिनोभयत्रप्रसिद्धत्वात् । किं चाव्यक्तादिशब्दानामप्यन्यत्र-प्रसिद्धिसाधकश्रुत्यादेरुक्तस्य विष्णावसम्भाव्यमानत्वरूपबलवत्त्वस्यान्यत्रप्रसिद्धेष्वपि पूर्वपक्ष्युक्तरीत्या सत्त्वेन न तेषामप्यन्योन्यमसाङ्कर्यम् । श्रुत्यन्तरादिभिरित्यत्रादिपदश्च व्यर्थ इत्यतः कारिकां व्याचष्टे ।। **येषामिति** ।।

**व्यक्तिविशेषनिर्णयायेति** ।। अस्य शब्दस्य वाच्यो व्यक्तिविशेषोऽयमिति निर्णयायेत्यर्थः । आदिपदेन प्रयोगकारणत्वादिपरिग्रहः ।। **अत एवेति** ।। उभयत्र प्रयोगादेवेत्यर्थः ।। **अत एवेति** ।। अन्यमात्रोपस्थितेर्विरोधित्वादेवेत्यर्थः । तथा चोभयत्रप्रसिद्धेषु श्रुत्या तौल्यस्योभयसिद्धत्वात्तेषु संमत्यभावान्न साङ्कर्यमिति भावः ।। **अत एवेति** ।। ब्रह्मणि वृत्तेरसंमतत्वादेवेत्यर्थः ।।

**अत एव चेति** ।। अन्यमात्रोपस्थापकत्वादेवेत्यर्थः ।। **अत एवेति** ।। अन्यत्र प्रबलश्रुतेः सत्त्वादेवेत्यर्थः ।। **अत एवेति** ।। अत्यन्तमन्यमात्रोपस्थापकत्वादेवे-त्यर्थः । नन्वेतेषामेकैकमेव लक्षणीयमिति प्रतीयते । तथैवेति चेन्न । व्यर्थ-विशेषणत्वापत्तेरित्यत आह – **अत्र चेति** ।। सङ्ग्रहव्याख्यान इत्यर्थः । प्रवृत्ति-निमित्तादिसाधारण्यमित्यनेन सङ्ग्रहश्लोकस्थश्रुत्यन्तरादिभिस्तुल्येत्यादिशब्दस्यार्थ उक्तो भवति । हेतुरूपफलमुखानि कियता ग्रन्थेनोक्तानीत्यत आह – **तत्र चेति** ।।

ननु भाष्यटीकासङ्ग्रहेष्वनुक्तानि कथमेतान्युच्यन्त इत्यत आह – **तत्रेति** ।। अत्राभियुक्तसंमतिमाह – **उक्तं हीति** ।। **य इति** ।। हेतुस्वरूपफलप्रविभक्तानि तानि लक्षणानि यो वेदेति पूर्वेण वाक्यशेषगतेन वेदेत्यनेनान्वयः ।

ವಿವರಣೆ - ಇಲ್ಲಿಯ ತನಕ ಮಾಡಿದ ಆಕ್ಷೇಪಕ್ಕೆ ಗ್ರಂಥಕಾರರು ಉತ್ತರಿಸುತ್ತಿದ್ದಾರೆ. ಅನ್ಯತ್ರ-ಪ್ರಸಿದ್ಧಶಬ್ದಗಳಿಗೂ ಉಭಯತ್ರಪ್ರಸಿದ್ಧಶಬ್ದಗಳಿಗೂ ಅನ್ಯತ್ರೈವಪ್ರಸಿದ್ಧಶಬ್ದಗಳಿಗೂ ಪರಸ್ಪರ ಸಾಂಕರ್ಯದೋಷ ಬಂದಿದೆ. ಇದನ್ನು ಪರಿಹರಿಸಬೇಕೆಂದರೆ ಮೊದಲು ಈ ಮೂರರ ಅಸಂಕೀರ್ಣಲಕ್ಷಣವನ್ನು ತಿಳಿಯಬೇಕು. ಇದರಿಂದ ಪಾದೋಪಾಧಿಗಳೂ ಅಸಂಕೀರ್ಣಗಳೆಂದು ಸ್ಪಷ್ಟವಾಗುತ್ತದೆ. 'ಸೋಪಾನಾರೋಹಣನ್ಯಾಯದಿಂದ ಮೊದಲು ಸುಲಭವಾದದ್ದರ ಲಕ್ಷಣವನ್ನು ಹೇಳುತ್ತಿದ್ದಾರೆ. ಶ್ಲೋಕದಲ್ಲಿರುವ ಎರಡು ಪಾದಗಳು ಒಂದೊಂದರ ಲಕ್ಷಣವನ್ನು ಹೇಳುತ್ತಿವೆ.

ಉಭಯತ್ರಪ್ರಸಿದ್ಧಿಯ ಲಕ್ಷಣ -

ಶ್ರುತ್ಯಂತರಾದಿಭಿಸ್ತುಲ್ಯಾಹ್ಯುಭಯಸ್ಮಿನ್ ಪ್ರಸಿದ್ಧತಾ ।

ಪೂರ್ವಪಕ್ಷದ ವಿಷಯ ಹಾಗು ಸಿದ್ಧಾಂತದ ವಿಷಯ ಶ್ರುತಿಯಿಂದಲೇ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧ ಆಗುತ್ತದೆ. ಪೂರ್ವಪಕ್ಷ ಸಿದ್ಧಾಂತಗಳ ನಡುವೆ ಒಂದು ಲೋಕದಿಂದ ಪ್ರಸಿದ್ಧವಾಗಿ ಮತ್ತೊಂದು ಶ್ರುತಿಯಿಂದ ಪ್ರತಿಸಿದ್ಧವಾಗಿರಬಾರದೆಂದು ಅಭಿಪ್ರಾಯ.

ಅನ್ಯತ್ರಪ್ರಸಿದ್ಧಿಯ ಲಕ್ಷಣ -

ಶ್ರುತ್ಯಾದಿತೋ ಲೋಕತೋ ವಾಪೀತರೇಷು ಪ್ರಸಿದ್ಧತಾ ।

ಶ್ರುತಿಯಿಂದಾಗಲೀ ಲೋಕರೂಢಿಯಿಂದಾಗಲೀ ಅನ್ಯತ್ರಪ್ರಸಿದ್ಧವಾಗಿದ್ದರೆ ಅನ್ಯತ್ರಪ್ರಸಿದ್ಧ ಆಗುತ್ತದೆ. ಇಂದ್ರ ಆಕಾಶಾದಿಶಬ್ದಗಳು ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿವೆ.

ಅನ್ಯತ್ರೈವಪ್ರಸಿದ್ಧಿಯ ಲಕ್ಷಣ -

ಬಲವತ್ ಶ್ರುತಿಲಿಂಗಾದ್ಯೈರನ್ಯೇಷ್ವೇವ ಪ್ರಸಿದ್ಧತಾ ।

ಬಲಿಷ್ಠವಾದ ಶ್ರುತಿಲಿಂಗಾದಿಗಳಿಂದ ಶಬ್ದವು ಬೇರೆ ಕಡೆಯೇ ಪ್ರಸಿದ್ಧವಾಗಿದ್ದರೆ ಅನ್ಯತ್ರೈವಪ್ರಸಿದ್ಧ ಆಗುತ್ತದೆ.

ಇಲ್ಲಿ ಗ್ರಂಥಕಾರರು ಒಟ್ಟು ಐದು ಶ್ಲೋಕಗಳನ್ನು ಹೇಳಿದ್ದಾರೆ. ಇವುಗಳಲ್ಲಿ ಮೊದಲೆರಡು ಶ್ಲೋಕಗಳು ಹೇತುಮುಖವಾದ ಲಕ್ಷಣಗಳನ್ನು ಹೇಳುತ್ತಿವೆ. ಮುಂದಿನ ಮೂರು ಶ್ಲೋಕಗಳು ಸ್ವರೂಪಮುಖವಾದ ಲಕ್ಷಣದ ಜೊತೆ ಫಲಮುಖಲಕ್ಷಣವನ್ನೂ ಹೇಳುತ್ತಿವೆಯೆಂದು 'ಯೇಷಾಂ ಶಬ್ದಾನಾಮ್' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

ದುಭ್ವಾದ್ಯಾಯತನತ್ವವು ಶ್ರುತಿಯಿಂದ ಭಗವಂತನಲ್ಲಿ ಪ್ರಸಿದ್ಧವಾಗಿರುವಂತೆ ಬೇರೆ ಕಡೆಯೂ ಪ್ರಸಿದ್ಧವಾಗಿದೆ. ಹೀಗೆ ಶ್ರುತ್ಯಂತರಸಾಧಾರಣ್ಯಕ್ಕೆ ದುಭ್ವಾದ್ಯಾಯತನತ್ವವು ಉದಾಹರಣೆಯಾಗಿದೆ. ನಾಶರಾಹಿತ್ಯವೆಂಬ ಅಕ್ಷರಶಬ್ದದ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಮತ್ತು ಪ್ರಕೃತ್ಯಾದಿಗಳಲ್ಲಿ ಪ್ರಸಿದ್ಧವಾಗಿದೆ. ಆದ್ದರಿಂದ ಪ್ರವೃತ್ತಿನಿಮಿತ್ತಸಾಧಾರಣ್ಯಕ್ಕೆ ಅಕ್ಷರಶಬ್ದವು ಉದಾಹರಣೆಯಾಗಿದೆ. 'ಪ್ರವೃತ್ತಿನಿಮಿತ್ತಾದಿ-ಸಾಧಾರಣ್ಯಮ್' ಎಂಬಲ್ಲಿ ಆದಿಪದದಿಂದ ಪ್ರಯೋಗಸಾಧಾರಣ್ಯವನ್ನು ಸ್ವೀಕರಿಸಬೇಕು. ಆಕಾಶಶಬ್ದದ ಪ್ರಯೋಗವು ಉಭಯಸಾಧಾರಣವಾಗಿದೆ. ಹೀಗೆ ಶ್ರುತ್ಯಂತರಸಾಧಾರಣ್ಯ, ಪ್ರವೃತ್ತಿನಿಮಿತ್ತಸಾಧಾರಣ್ಯ, ಪ್ರಯೋಗಸಾಧಾರಣ್ಯವು ಪೂರ್ವಪಕ್ಷಿಗೂ ಸಮ್ಮತವಾಗಿದೆ.

ಹೇತುಮುಖಲಕ್ಷಣ ಹೇಳಿ ಸ್ವರೂಪಮುಖಲಕ್ಷಣವನ್ನು 'ಅತ ಏವ' ಇತ್ಯಾದಿವಾಕ್ಯದಿಂದ ಹೇಳುತ್ತಿದ್ದಾರೆ. ವಸ್ತುತಃ ಶ್ಲೋಕದಲ್ಲಿ ಹೇತುಮುಖಲಕ್ಷಣ ಹಾಗೂ ಫಲಮುಖಲಕ್ಷಣಗಳನ್ನು ಹೇಳಿದ್ದಾರೆ. ಸ್ವರೂಪಮುಖಲಕ್ಷಣ ಹೇಳಿಲ್ಲ. ಆದರೂ ಸಹ 'ಉಭಯತ್ರಪ್ರಸಿದ್ಧಾಃ' ಎಂಬ ಶಬ್ದಪ್ರಯೋಗದಿಂದಲೇ ಸೂಚಿಸಿದ್ದಾರೆ. ಇನ್ನು ಶ್ಲೋಕದಲ್ಲಿ ಕಂಠತಃ ಹೇಳಿದ ಫಲಮುಖಲಕ್ಷಣವನ್ನು 'ಅತ ಏವ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಸ್ವರೂಪಮುಖಲಕ್ಷಣ ಹಾಗು ಫಲಮುಖಲಕ್ಷಣಗಳು ಹೇತುಮೂಲಕಗಳಾಗಿವೆಯೆಂದು 'ಇತರಯೋಃ ಹೇತುಮೂಲತ್ವಾತ್' ಇತ್ಯಾದಿ ವಾಕ್ಯದಿಂದ ಗ್ರಂಥಕಾರರೇ ಮುಂದೆ ಹೇಳುವವರಿದ್ದಾರೆ.

ಅನ್ಯತ್ರಪ್ರಸಿದ್ಧವಾದ ಶಬ್ದಗಳಿಗೆ ಸ್ವರೂಪ, ಫಲ, ಹೇತುಮುಖಲಕ್ಷಣಗಳನ್ನು 'ಯೇಷಾಂ ತು' ಇತ್ಯಾದಿವಾಕ್ಯದಿಂದ ವಿವರಿಸುತ್ತಿದ್ದಾರೆ. 'ಲೋಕಪ್ರಸಿದ್ಧಾದೇಃ' ಎಂಬಲ್ಲಿರುವ ಆದಿಪದದಿಂದ ಸರ್ವಗತತ್ವಾದಿಗಳು ಶ್ರುತ್ಯಾದಿಸಾಹಚರ್ಯದಿಂದ ಬೇರೆ ವಸ್ತುವಿನಲ್ಲೂ ಪ್ರಸಿದ್ಧಗಳಾಗಿರುವುದನ್ನು ಇಟ್ಟುಕೊಳ್ಳಬೇಕು. 'ವೃತ್ಯಾದಿಕಮ್' ಎಂದರೆ ವೃತ್ತಿ ಮತ್ತು ತಾತ್ಪರ್ಯಗಳೆಂದು ಅರ್ಥ. ಏಕೆಂದರೆ ವಿಪ್ರತಿಪನ್ನವಾಕ್ಯವು ಅನ್ಯಪರವೆಂದು ನಿರ್ಣಯವಾಗಿರುವುದರಿಂದ ವಿಷಯವಾಕ್ಯದ ವೃತ್ತಿ ಅಥವಾ ತಾತ್ಪರ್ಯವನ್ನು ಬ್ರಹ್ಮನಲ್ಲಿ ಹೇಳಲಾಗುವುದಿಲ್ಲ. ''ಅನ್ಯತ್ರಪ್ರಸಿದ್ಧ'' ಎಂಬುದನ್ನು ಶ್ಲೋಕದಲ್ಲಿ ಪ್ರಯೋಗಿಸಿರುವುದರಿಂದ ಸ್ವರೂಪಮುಖಲಕ್ಷಣವೆಂದು ಸೂಚಿಸಿದಂತಾಯಿತು. ಇದನ್ನು 'ಅತ ಏವ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಅನ್ಯೋಪಸ್ಥಾಪಕವಲ್ಲ, ಅನ್ಯ ಮಾತ್ರ ಉಪಸ್ಥಾಪಕವೆಂಬುದೇ ಇದರ ಸ್ವರೂಪ. ಫಲಮುಖವನ್ನು 'ಅತ ಏವ ಚ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಅನ್ಯಮಾತ್ರ ಉಪಸ್ಥಾಪಕವಾಗಿರುವುದರಿಂದಲೇ ಎಂದರ್ಥ. ಹೊರತು ಬ್ರಹ್ಮಪರತ್ವಕ್ಕೆ ಅತ್ಯಶಕ್ಯತ್ವಾಭಿಪ್ರಾಯದಿಂದ ಅಲ್ಲ. ('ಯೇಷಾಂ ಬ್ರಹ್ಮಣಿ' ಎಂಬ ಶ್ಲೋಕವನ್ನು ಇದರಿಂದ ವ್ಯಾಖ್ಯಾನಿಸಿದಂತಾಯಿತು.)

ಅನ್ಯತ್ರೈವಪ್ರಸಿದ್ಧವಾದ ಶಬ್ದಗಳಲ್ಲಿ ಸ್ವರೂಪ, ಫಲ, ಹೇತುಮುಖಲಕ್ಷಣಗಳನ್ನು 'ಯೇಷಾಂ ಪುನಃ' ಇತ್ಯಾದಿ ಶ್ಲೋಕದಿಂದ ವಿವರಿಸುತ್ತಿದ್ದಾರೆ. 'ಬಲವತ್ ಶ್ರುತಿಲಿಂಗಾದೇಃ' ಎಂಬ ಅರ್ಧ ಶ್ಲೋಕವನ್ನು ವಿವರಿಸಿದಂತಾಯಿತು. ಸ್ವರೂಪಮುಖಲಕ್ಷಣವನ್ನು 'ಅತ ಏವ' ಎಂದು ಹೇಳಿದ್ದಾರೆ. 'ಆಪಾತತಃ' ಎಂಬ ಪದವು ಅನೇಕ ಕಡೆ ಇದೆ. ವಿಮರ್ಶೆ ಮಾಡಿದರೆ ಕೇವಲ ವಿಷ್ಣು ಒಬ್ಬನೇ ಉಪಸ್ಥಿತನಾಗುತ್ತಾನೆಂದು ತಿಳಿಯಬೇಕು. ಫಲಮುಖಲಕ್ಷಣವನ್ನು 'ಅತ ಏವ' ಎಂದು ಹೇಳುತ್ತಿದ್ದಾರೆ. ಇದರಿಂದ ಎರಡು ಶ್ಲೋಕಗಳನ್ನು ವ್ಯಾಖ್ಯಾನಿಸಿದಂತಾಯಿತು.

ಪ್ರಶ್ನೆ - ಗ್ರಂಥಕಾರರು ಶ್ಲೋಕವನ್ನು ರಚಿಸಿ ವ್ಯಾಖ್ಯಾನ ಮಾಡಿದ್ದಾರೆ. ಇದನ್ನು ನೋಡಿದಾಗ ಅನ್ಯತ್ರಪ್ರಸಿದ್ಧ ಮೊದಲಾದವುಗಳ ಲಕ್ಷಣ ಒಂದೇ ಎಂದು ತೋರುತ್ತದೆ - 'ಸಾಧಾರಣ್ಯೇ ಸತಿ ಅನ್ಯೋಪಸ್ಥಾಪಕತ್ವೇ ಸತಿ ಬ್ರಹ್ಮಸಮನ್ವಯಪ್ರತಿಬಂಧವತ್ವಾತ್' 'ಉಭಯಸಾಧಾರಣವಾಗಿರುತ್ತದೆ' ಮತ್ತು ಅನ್ಯಪದಾರ್ಥವನ್ನು ಉಪಸ್ಥಾಪನೆ ಮಾಡುತ್ತದೆ. ಬ್ರಹ್ಮನಲ್ಲಿ ಮಾಡುವ ಸಮನ್ವಯಕ್ಕೆ ಪ್ರತಿಬಂಧಕವಾಗಿರುತ್ತದೆ ಎಂದು. ಹೀಗೆ ಎಲ್ಲದರ ಲಕ್ಷಣವನ್ನು ಒಂದೇ ಎಂದು ಹೇಳಲು ಬರುವಾಗ ಹೇತು, ಸ್ವರೂಪ, ಫಲವೆಂದು ಮೂರುವಿಧ ಲಕ್ಷಣಗಳನ್ನು ಹೇಳಿದಂತೆ ತೋರುವುದಿಲ್ಲವಲ್ಲ?

ಉತ್ತರ - ಹೀಗೆ ಒಂದೇ ಲಕ್ಷಣವನ್ನು ಹೇಳುವುದಾದರೆ ವಿಶೇಷಣಗಳಿಂದ ವ್ಯಾವರ್ತ್ಯವಾದ್ದನ್ನು ಹೇಳಬೇಕು. ಆದರೆ ಹಾಗೆ ದಲಕೃತ್ಯ ತೋರಿಸಲು ಬರುವುದಿಲ್ಲವೆಂದರೆ ಗ್ರಂಥಕಾರರು 'ಅತ್ರ ಚ ಸರ್ವತ್ರ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಸೃಷ್ಟಿಕರ್ತೃತ್ವ ಪಾಲನಕರ್ತೃತ್ವಾದಿಗಳು ಭಗವಂತನಲ್ಲಿ ಹೇಗೆ ಪ್ರತ್ಯೇಕ ಪ್ರತ್ಯೇಕವಾದ ಲಕ್ಷಣಗಳಾಗುತ್ತವೋ ಅದರಂತೆ ಇಲ್ಲಿಯೂ ಹೇತುಮುಖ, ಸ್ವರೂಪಮುಖ ಫಲಮುಖಲಕ್ಷಣಗಳನ್ನು ಪ್ರತ್ಯೇಕವಾಗಿ ತಿಳಿಯಬೇಕು. ತಮ್ಮ ವ್ಯಾಖ್ಯಾನದಲ್ಲಿ ಇದನ್ನು ಹೇಗೆ ಉಪಪಾದಿಸಿದ್ದೇವೆಂದು ತಾವೇ ವಿವರಿಸುತ್ತಿದ್ದಾರೆ.

ಹೇತುಮುಖಶಬ್ದದ ಅರ್ಥ ಹೀಗಿದೆ - ಉಭಯತ್ರಪ್ರಸಿದ್ಧಿಯಲ್ಲಿ ಶ್ರುತ್ಯಂತರಸಾಧಾರಣ್ಯವು ಹೇತು,

ಅನ್ಯತ್ರಪ್ರಸಿದ್ಧಿಯಲ್ಲಿ ಲೌಕಿಕಪ್ರಯೋಗಾದಿಗಳು ಹೇತು, ಅನ್ಯತ್ರೈವಪ್ರಸಿದ್ಧಿಯಲ್ಲಿ ಬಲವತ್ ಶ್ರುತ್ಯಾದಿಗಳು ಹೇತುಗಳು. ಇವುಗಳನ್ನೇ ಮುಖ = ಉಪಜೀವಿಸಿಕೊಂಡು ಇರುವಂತಹವು ಹೇತುಮುಖಲಕ್ಷಣಗಳು ಎಂದು.

ಮೂರುವಿಧವಾದ ಲಕ್ಷಣಗಳ ಮಧ್ಯದಲ್ಲಿ ಸ್ವರೂಪಮುಖಲಕ್ಷಣವನ್ನು ಶ್ಲೋಕದಲ್ಲಿ ಹೇಳಿಲ್ಲವಲ್ಲವೆಂಬ ಪ್ರಶ್ನೆಗೆ 'ತತ್ರ ಸ್ವರೂಪಮುಖಾನಿ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಹೇತುಮುಖವಾದ ಲಕ್ಷಣವು ಟೀಕೆಯ ನಾಲ್ಕೂ ಪಾದಗಳಲ್ಲಿ ಸೂಚಿಸಲ್ಪಟ್ಟಿದೆಯೆಂದು ಗ್ರಂಥಕಾರರು ಹೇಳಿದ್ದಾರೆ. ಆದನ್ನು ಹೀಗೆ ತಿಳಿಯಬೇಕು.

ಪ್ರಥಮಪಾದ - 'ಲೋಕತೋಽನ್ಯತ್ರಪ್ರಸಿದ್ಧಾಕಾಶನಾಮ್ನಃ'

ದ್ವಿತಿಯಪಾದ - ಲೋಕತೋಽನ್ಯತ್ರಪ್ರಸಿದ್ಧಾದಿತ್ಯಶ್ರುತಿಸಹಪಠಿತಸರ್ವಗತತ್ವಲಿಂಗಾತ್ಮಕಶಬ್ದಸ್ಯ

ತೃತೀಯಪಾದ - ರುದ್ರೋ ವಾವ ಲೋಕಾಧಾರಃ ಲೋಕಾಶ್ಚ ಲೋಕಿನಶ್ಚಾಲೋಕಾಶ್ಚಾಲೋಕಿನಶ್ಚ ವಿಷ್ಣಾವೇವೋತಾಶ್ಚೇತ್ಯಾದಿನೋಭಯತ್ರಪ್ರಸಿದ್ಧ ದ್ಯುಭ್ವಾದ್ಯಾಯತನತ್ವಲಿಂಗಸ್ಯ

ಚತುರ್ಥಪಾದ - ಅವರತ್ವಾದಿಲಿಂಗೈಃ ಭಗವತಿ ವಿರುದ್ಧತಯಾ ಅನ್ಯತ್ರೈವಪ್ರಸಿದ್ಧಾವ್ಯಕ್ತಾದಿಶಬ್ದಾನಾಮ್

ಹೀಗೆ ಮೂರು ಬಗೆಯ ಪ್ರಸಿದ್ಧಶಬ್ದಗಳಲ್ಲಿ ಕಾರಣಭೂತವಾದ ಲೋಕಪ್ರಸಿದ್ಧಾದಿಗಳನ್ನು ಸ್ಪಷ್ಟವಾಗಿ ಟೀಕಾಕಾರರು ಹೇಳಿದ್ದಾರೆ.




ಪರಮಾತ್ಮನಲ್ಲಿ ಹಾಗೂ ಬೇರೆ ಕಡೆ ಶ್ರುತಿಯಿಂದಲೇ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧಿ ಎನಿಸುತ್ತದೆ. ಶ್ರುತಿಯಿಂದಾಗಲೀ ಲೋಕರೂಢಿಯಿಂದಾಗಲಿ ಅನ್ಯತ್ರಪ್ರಸಿದ್ಧವಾಗಿದ್ದರೆ ಅನ್ಯತ್ರಪ್ರಸಿದ್ಧ ಎನಿಸುತ್ತದೆ. ಬಲಿಷ್ಠವಾದ ಶ್ರುತಿಲಿಂಗಾದಿಗಳಿಂದ ಶಬ್ದಗಳು ಬೇರೆ ಕಡೆಯೇ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧಿ ಎನಿಸುತ್ತದೆ. ಅಥವಾ ಶಬ್ದಗಳು ಪರಮಾತ್ಮನಲ್ಲಿ ಪ್ರಸಿದ್ಧವಾಗಿರುವಂತೆ ಬೇರೆ ಕಡೆಯೂ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧ ಎನಿಸುತ್ತದೆ. ಅನ್ಯತ್ರಪ್ರಸಿದ್ಧವಾಗಿರುವಿಕೆ ಮಾತ್ರ ಇಲ್ಲಿ ಸಮನ್ವಯಕ್ಕೆ ವಿರೋಧಿ ಆಗಿದೆ. ಬೇರೆ ಕಡೆ ಪ್ರಸಿದ್ಧವಾಗಿದ್ದು ಪರಮಾತ್ಮನಲ್ಲಿ ಪ್ರಸಿದ್ಧವಾಗದಿದ್ದರೆ ಅನ್ಯತ್ರಪ್ರಸಿದ್ಧ ಎನಿಸುತ್ತದೆ. ಬ್ರಹ್ಮನಲ್ಲಿ ಅಪ್ರಸಿದ್ಧಿ ಬೇರೆಡೆ ಪ್ರಸಿದ್ಧಿ ಎಂಬೆರಡು ಸಮನ್ವಯಕ್ಕೆ ವಿರೋಧಿಗಳಾಗಿವೆ.

ಅನ್ಯತ್ರೈವಪ್ರಸಿದ್ಧಿಯಲ್ಲಿ ಒಟ್ಟು ಮೂರು ವಿರೋಧಗಳು ೧) ಪರಮಾತ್ಮನಲ್ಲಿ ಪ್ರಸಿದ್ಧಿ ಇಲ್ಲದಿರುವಿಕೆ ೨) ಅನ್ಯತ್ರಪ್ರಸಿದ್ಧವಾಗಿರುವಿಕೆ ೩) ಪರಮಾತ್ಮನಲ್ಲಿ ಸಮನ್ವಯವು ಅತ್ಯಂತ ಅಶಕ್ಯವಾಗಿರುವಿಕೆ. ಉಭಯತ್ರಪ್ರಸಿದ್ಧಿಯ ಹೇತುಮುಖಲಕ್ಷಣ



## ಉಭಯತ್ರಪ್ರಸಿದ್ಧಿಯ ಹೇತುಮುಖಲಕ್ಷಣ

### तात्पर्यचन्द्रिका

अत्र चेतरयोर्हेतुमूलत्वाद्धेतुः प्रदर्श्यते । उभयत्रप्रसिद्धानां हि "रुद्रो वाव लोकाधारः" "विष्णावेवोताश्च प्रोताश्च" इत्यादिश्रुत्यन्तरसाधारण्येन, अक्षरादि-शब्दानां प्रवृत्तिनिमित्तसाधारण्येन, सदादिशब्दानां विषयवाक्यस्थकारणत्वादि-धर्मसाधारण्येन, "आकाशोऽर्थान्तरत्वादिव्यपदेशात्" इति सूत्रविषये "आकाशो ह वै नाम नामरूपयोर्निर्वहिता" इति वाक्यस्थाकाशशब्दे "आकाशस्तल्लिङ्गात्" इत्यत्र ब्रह्मण्यपि प्रयोगस्योक्तत्वात् प्रयोगसाधारण्येनोभयत्रप्रसिद्धिः । न तु पूर्व-पक्षसिद्धान्तन्यायाभ्याम् । येन साङ्कर्यं स्यात् ।

तदुक्तेस्तु प्राक् "आकाशस्तल्लिङ्गात्" इति सूत्रविषयवाक्ये "अस्य लोकस्य का गतिरित्याकाश इति होवाच" इत्यत्रान्यत्रप्रसिद्धिः, "कारणत्वेन चाकाशादिषु" इति सूत्रविषयवाक्ये "आत्मन आकाशस्सम्भूतः" इत्यत्र तु ब्रह्मलिङ्गाभावेन लोकतोऽन्यत्रप्रसिद्धेरबाधात् सम्भूतत्वादिविपरीतलिङ्गाच्च अन्यत्रैवप्रसिद्धि-रित्येकस्यैव प्रयोगभेदेन दशाभेदात् त्रितयं युक्तम् ।

यद्वा – "कारणत्वेन" इत्यत्रावान्तरकारणत्वस्यैव समन्वय इति वक्ष्यते । एवं ज्योतिश्शब्दस्यापि "ज्योतिश्चरण" इत्यत्रान्यत्रप्रसिद्धता "ज्योतिर्दर्शनात्" इत्यत्रोभयत्रप्रसिद्धता "ज्योतिरुपक्रमात्" इत्यत्रान्यत्रैवप्रसिद्धतोह्या ।

ಅನುವಾದ - ಈ ಮೂರು ಲಕ್ಷಣಗಳ ಮಧ್ಯದಲ್ಲಿ ಸ್ವರೂಪಮುಖ ಫಲಮುಖಲಕ್ಷಣಗಳಿಗೆ ಹೇತುಮುಖಲಕ್ಷಣವು ಕಾರಣವಾಗಿದೆ. ಆದ್ದರಿಂದ ಈಗ ಹೇತುಮುಖಲಕ್ಷಣವನ್ನೇ ದೃಷ್ಟಾಂತ-ಪುರಸ್ಸರವಾಗಿ ತೋರಿಸುತ್ತೇವೆ.

ದುಭ್ವಾದ್ಯಾಯತನತ್ವಾದಿಗಳು ಉಭಯತ್ರಪ್ರಸಿದ್ಧವಾದ ಲಿಂಗಗಳು. 'ರುದ್ರೋ ವಾವ ಲೋಕಾಧಾರಃ' ಎಂಬ ಶ್ರುತಿಯಿಂದ ರುದ್ರನಲ್ಲಿ; 'ವಿಷ್ಣಾವೇವ ಓತಾಶ್ಚ ಪ್ರೋತಾಶ್ಚ' ಎಂಬ ಶ್ರುತಿಯಿಂದ ವಿಷ್ಣುವಿನಲ್ಲಿ ದುಭ್ವಾದ್ಯಾಯತನತ್ವವು ಪ್ರಸಿದ್ಧವಾಗಿದೆ. ಹೀಗೆ ಶ್ರುತ್ಯಂತರಸಾಧಾರಣ್ಯದಿಂದ ದುಭ್ವಾದ್ಯಾಯತನತ್ವಲಿಂಗವು ಉಭಯತ್ರ ಪ್ರಸಿದ್ಧವಾಗಿದೆ. ಇದರಂತೆ ನಾಶರಾಹಿತ್ಯವೆಂಬ

ಅಕ್ಷರಶಬ್ದಪ್ರವೃತ್ತಿನಿಮಿತ್ತವು ಪ್ರಕೃತಿಯಲ್ಲಿ ಮತ್ತು ಬ್ರಹ್ಮನಲ್ಲಿ ಸಾಧಾರಣವಾಗಿದೆ. ಹೀಗೆ ಅಕ್ಷರಾದಿಶಬ್ದಗಳ ಪ್ರವೃತ್ತಿನಿಮಿತ್ತಸಾಧಾರಣ್ಯದಿಂದ ಉಭಯತ್ರಪ್ರಸಿದ್ಧಗಳಾಗಿವೆ.

ಮತ್ತು 'ಈಕ್ಷತಿಕರ್ಮವ್ಯಪದೇಶಾತ್ ಸಃ' ಎಂಬ ಸೂತ್ರದಲ್ಲಿ 'ಸದೇವ ಸೌಮ್ಯೇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿರುವ 'ಸತ್' ಶಬ್ದದ ಸಮನ್ವಯ ಮಾಡುತ್ತಾರೆ. ಈ ವಿಷಯವಾಕ್ಯದಲ್ಲಿ ಜಗತ್ ಕಾರಣತ್ವವು ಹೇಳಲ್ಪಟ್ಟಿದೆ. ಈ ಜಗತ್‌ಕಾರಣತ್ವಧರ್ಮವು ಬ್ರಹ್ಮನಲ್ಲಿ ಮತ್ತು ಪ್ರಕೃತಿಯಲ್ಲಿ ಸಾಧಾರಣವಾಗಿದೆ. ಹೀಗೆ ಕೆಲವು ಶಬ್ದಗಳು ಕಾರಣತ್ವಾದಿಧರ್ಮಸಾಧಾರಣ್ಯದಿಂದ ಉಭಯತ್ರ-ಪ್ರಸಿದ್ಧಗಳಾಗಿವೆ.

'ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್' ಎಂಬ ಸೂತ್ರದಲ್ಲಿ 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ' ಎಂಬ ವಿಷಯವಾಕ್ಯದಲ್ಲಿರುವ ಆಕಾಶಶಬ್ದದ ಸಮನ್ವಯ ಮಾಡಲಾಗಿದೆ. ಈ ಆಕಾಶಶಬ್ದದ ಪ್ರಯೋಗವು ಭೂತಾಕಾಶದಲ್ಲಿ ಪ್ರಸಿದ್ಧವಾಗಿದೆ. 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ಬ್ರಹ್ಮನಲ್ಲಿಯೂ ಆಕಾಶಶಬ್ದದ ಪ್ರಯೋಗವನ್ನು ಹೇಳಿದ್ದಾರೆ. ಹೀಗೆ ಪ್ರಯೋಗ-ಸಾಧಾರಣ್ಯದಿಂದ ಆಕಾಶಾದಿಶಬ್ದಗಳು ಉಭಯತ್ರಪ್ರಸಿದ್ಧಗಳಾಗಿವೆ. ಹೊರತು ಪೂರ್ವಪಕ್ಷಸಿದ್ಧಾಂತ-ನ್ಯಾಯಗಳಿಂದ ಉಭಯತ್ರಪ್ರಸಿದ್ಧಗಳಾಗಿಲ್ಲ. ಹಾಗಾಗಿದ್ದಲ್ಲಿ ಸಾಂಕರ್ಯದೋಷ ಬರುತ್ತಿತ್ತು.

'ಆಕಾಶಸ್ತಲ್ಲಿಂಗಾತ್' ಎಂದು ಬ್ರಹ್ಮನಲ್ಲಿ ಸಮನ್ವಯ ಮಾಡುವ ಮೊದಲು ಬ್ರಹ್ಮನಲ್ಲಿ ಪ್ರಸಿದ್ಧವಾಗಿರುವುದಿಲ್ಲ. ಆವಾಗ 'ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ' ಎಂಬ ಶ್ರುತಿಯಲ್ಲಿರುವ ಆಕಾಶಶಬ್ದವು ಅನ್ಯತ್ರಪ್ರಸಿದ್ಧವೇ ಆಗಿರುತ್ತದೆ.

ಇನ್ನು 'ಕಾರಣತ್ವೇನ ಚಾಕಾಶಾದಿಷು' ಎಂಬ ನಾಲ್ಕನೇ ಪಾದದ ಸೂತ್ರದ ವಿಷಯವಾಕ್ಯದಲ್ಲಿ 'ಆತ್ಮನಃ ಆಕಾಶಃ ಸಂಭೂತಃ' ಎಂದು ಉತ್ಪತ್ತಿಯು ಕೇಳಿ ಬಂದಿದೆ. ಬ್ರಹ್ಮನ ಲಿಂಗಗಳು ಕೇಳಿಸುತ್ತಿಲ್ಲ. ಲೋಕತಃ ಅನ್ಯತ್ರಪ್ರಸಿದ್ಧಿಗೆ ಬಾಧಕವೂ ಇಲ್ಲ. ಹೊರತಾಗಿ ಸಂಭೂತತ್ವವೆಂಬ ವಿಪರೀತಲಿಂಗವೇ ಇದೆ. ಆದ್ದರಿಂದ ಇಲ್ಲಿರುವ ಆಕಾಶಶಬ್ದವು ಅನ್ಯತ್ರೈವಪ್ರಸಿದ್ಧವಾಗುತ್ತದೆ.

ಹೀಗೆ ಒಂದೇ ಆಕಾಶಶಬ್ದವು ದಶಾಭೇದದಿಂದ ಅನ್ಯತ್ರ. ಉಭಯತ್ರ, ಅನ್ಯತ್ರೈವಪ್ರಸಿದ್ಧವಾಗುತ್ತದೆ. ಈ ದಶಾಭೇದವಾದರೂ ಬೇರೆ ಬೇರೆ ವಾಕ್ಯಗಳಲ್ಲಿ ಮಾಡಿದ ಪ್ರಯೋಗಭೇದದಿಂದ ಕೂಡುತ್ತದೆ.

ಅಥವಾ ನಾಲ್ಕನೆಯ ಪಾದದಲ್ಲಿರುವ 'ಕಾರಣತ್ವೇನ ಚಾಕಾಶಾದಿಷು' ಇತ್ಯಾದಿ ಸೂತ್ರದಲ್ಲಿ ಆಕಾಶಶಬ್ದವನ್ನು ಸಮನ್ವಯ ಮಾಡುತ್ತಲೇ ಇಲ್ಲ. ಕೇವಲ ಅವಾಂತರಕಾರಣತ್ವವೆಂಬ ಲಿಂಗವನ್ನಷ್ಟೇ ಸಮನ್ವಯ ಮಾಡುತ್ತಿದ್ದಾರೆ. ಈ ವಿಷಯವನ್ನು ಮುಂದೆ ವಿವರಿಸುವವರಿದ್ದೇವೆ.

ಆಕಾಶಶಬ್ದದಂತೆ ಜ್ಯೋತಿಶಬ್ದದ ಬಗ್ಗೆಯೂ ತಿಳಿಯಬೇಕು. ಪ್ರಥಮಪಾದದಲ್ಲಿರುವ 'ಜ್ಯೋತಿ-ಶ್ಚರಣಾಭಿಧಾನಾತ್' ಎಂಬ ಸೂತ್ರದಲ್ಲಿ ಅನ್ಯತ್ರಪ್ರಸಿದ್ಧವಾದ 'ಜ್ಯೋತಿಃ' ಶಬ್ದವನ್ನು ಸಮನ್ವಯ

ಮಾಡಲಾಗಿದೆ. 'ಜ್ಯೋತಿರ್ದರ್ಶನಾತ್' ಎಂಬ ಮೂರನೆಯ ಪಾದದಲ್ಲಿ ಉಭಯತ್ರಪ್ರಸಿದ್ಧವಾದ 'ಜ್ಯೋತಿಃಶಬ್ದವನ್ನು ಸಮನ್ವಯ ಮಾಡಿದ್ದಾರೆ. 'ಜ್ಯೋತಿರುಪಕ್ರಮಾತ್' ಇತ್ಯಾದಿ ನಾಲ್ಕನೆಯ ಪಾದದಲ್ಲಿ ಅನ್ಯತ್ರೈವಪ್ರಸಿದ್ಧವಾದ 'ಜ್ಯೋತಿಃ' ಶಬ್ದದ ಸಮನ್ವಯವನ್ನು ಮಾಡಿದ್ದಾರೆಂದು ಊಹಿಸಿಕೊಳ್ಳಬೇಕು.

**ಕಠಿಣಪದಾರ್ಥ**

ಅತ್ರಚ = ಮೂರು ಲಕ್ಷಣಗಳ ಮಧ್ಯದಲ್ಲಿ, ಇತರಯೋಃ = ಸ್ವರೂಪಮುಖ ಫಲಮುಖಲಕ್ಷಣಗಳಿಗೆ ಪ್ರವೃತ್ತಿನಿಮಿತ್ತವು ಉಭಯ ಸಾಧಾರಣವಾದ್ದರಿಂದ, ತದುಕ್ತೇಸ್ತು ಪ್ರಾಕ್ = ಆಕಾಶಾಧಿಕರಣದಲ್ಲಿ ಆಕಾಶಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವ ಮೊದಲು, ಸಂಭೂತತ್ವಾದಿ = ಉತ್ಪತ್ತಿಮತ್ತ್ವ, ಸ್ವಜನ್ಯತ್ವ ಮೊದಲಾದ ಪ್ರಯೋಗಭೇದೇನ = ವಿಷಯವಾಕ್ಯದ ಭೇದದಿಂದ

**प्रकाशः – ।। अत्र चेति ।।** त्रिविधोपाधीनां प्रत्येकं त्रिविधलक्षणत्रिकमध्ये, उत्तरद्विकत्रयस्याद्यत्रिकमूलकत्वस्य ''अत एव'' इत्यादिना प्राग्विवृतत्वात् आद्यत्रिकं तत्तत्पादीयोदाहरणनिष्ठतया प्रदर्श्यत इत्यर्थः । तत्प्रदर्शने च पश्चात्तनद्विकत्रयस्यापि तज्ज्ञानं सुशकमिति भावः ।। **विष्णाविति ।।** ''लोकाश्च लोकिनश्चालोकाश्चालोकिनश्च'' इति पूर्वशेषः । 'साधारण्येन' इत्यस्य सर्वस्य ''उभयत्रप्रसिद्धिः'' इति वक्ष्यमाणेनान्वयः ।। **प्रवृत्तीति ।।** अविनाशित्वरूपप्रवृत्तीत्यर्थः । अक्षरनये तथोक्तेरिति भावः ।। **सदिति ।।** ''ईक्षतिकर्मव्यपदेशात् सः'' इत्यत्र ''तत्तेजोऽसृजत'' इत्यादिकारणत्वसाधारण्येनेत्युक्तेरित्यर्थः । आदिपदादबाधितत्वाख्यसत्त्वरूपधर्मग्रहः । ब्रह्मप्रधानयोः साधारण्येनेत्यर्थः । आकाशनये आकाशब्रह्मणोः प्रयोगसाधारण्येनेत्यर्थः ।

पूर्वोक्तं निराह – **नत्विति ।।** ''कम्पनात्'' इत्यत्र टीकायामेवमुक्तिं तु विवरिष्याम इति भावः । **येनेति ।** उक्तरीत्या तथा सर्वत्रोभयत्रप्रसिद्धेः वक्तुं शक्यत्वादिति भावः । आकाशशब्दस्य अन्यत्रप्रसिद्धत्वमप्युपपादयति – **उक्तेरिति ।।** आकाशनयसिद्धान्तन्यायेन ब्रह्मण्याकाशपदप्रयोगोक्तेः पूर्वमन्यत्रप्रसिद्धेरेव सत्त्वादिति भावः ।

अन्यत्रैवप्रसिद्धत्वं चाह – **कारणत्वेनेति ।। सम्भूतत्वेति ।।** उत्पत्तिमत्त्वस्वजन्यत्वादिरूपेत्यर्थः । एतेन यदि प्रयोगसाधारण्येनोभयत्रप्रसिद्धिस्तर्हि

पूर्वमाकाशशब्दस्य ब्रह्मण्यपि प्रयोगस्योक्तत्वाच्चतुर्थपादीयस्य तथात्वं स्यादिति निरस्तम् । ''अन्यत्रप्रसिद्धेरबाधात् विपरीतलिङ्गाच्च'' इत्युक्तेः । एतेन ''उत्पत्तिमत्त्वलिङ्गेनान्यत्रैवप्रसिद्धानामाकाशादिशब्दानां'' इति तत्रत्यं टीकावाक्यं समर्थितं ध्येयम् ।

''अवान्तरं कारणं च'' इत्यणुभाष्यानुरोधेन पक्षान्तरमाह – **यद्वेति** ।। तथा चाकाशपदस्य ब्रह्मणि प्रयोगसाधनात् पूर्वमन्यत्रप्रसिद्धता, तदनन्तरमुभयत्रप्रसिद्धतेति द्वैविध्यमेवेति भावः । ज्योतिश्शब्देऽपि त्रैविध्यं प्रयोगभेदेन दशाभेदाद्युक्तमित्याह – **एवमिति** ।। ''उक्तेः प्राक्'' इत्याद्युक्तरीतिरेवंशब्देन परामृश्यते ।

ननु ''ज्योतिश्चरण'' इत्यतः पूर्वं ज्योतिश्शब्दस्य विष्णौ प्रयोगासिद्धेः ''इदं ज्योतिर्हृदय आहितं यत्'' इत्यग्निसूक्तस्थज्योतिःशब्दस्यान्यत्रप्रसिद्धत्वेऽपि ''ज्योतिर्दर्शनात्'' इत्यत्र ''प्राणेषु हृद्यन्तर्ज्योतिः'' इति काण्वश्रुतिस्थज्योतिश्शब्दस्य नोभयत्रप्रसिद्धता, तत्पूर्वपक्षे ''ज्योतिश्चरण'' इत्यत्रोक्तज्योतिषो विष्णुत्वाक्षेपेण विष्णौ प्रयोगस्य पूर्वपक्षिणोऽसम्मतेः । ''आकाशोऽर्थान्तरत्वादि'' इत्यत्र तु पूर्वपक्षे ''तल्लिङ्गात्'' इत्यत्रोक्तस्याकाशशब्दस्य विष्णुत्वानाक्षेपेण तत्राकाशशब्दस्योभयत्रप्रसिद्धत्वोपपत्तेरिति चेन्न, प्रयोगसाधारण्येनोभयत्रप्रसिद्धत्वाभावेऽपि तत्साधारण्येनेव प्रवृत्तिनिमित्तसाधारण्येनाप्युभयत्रप्रसिद्ध्युपगमात् । जीवेशयोर्ज्ञानत्वरूपप्रवृत्तिहेतुसाधारण्येन तथात्वस्य च तत्रैव वक्ष्यमाणत्वात् ।

नन्वथापि ''ज्योतिरुपक्रमात्'' इत्यत्र पूर्वं विष्णौ प्रयोगस्योक्तत्वात्तस्य च तत्पूर्वपक्षेऽनाक्षेपात्तत्रत्यज्योतिःशब्दस्य पूर्वं विष्णौ प्रयोगस्य पूर्वपक्षिणोऽपि सम्मतेरुभयत्रप्रसिद्धता स्यादिति चेन्न, ''वसन्ते वसन्ते ज्योतिषा'' इत्यत्र ब्रह्मलिङ्गाभावेन लोकतोऽन्यत्रप्रसिद्धेरबाधात्, कर्मक्रमादिलोपप्रसङ्गरूपप्रबलबाधकाच्चान्यत्रैवप्रसिद्धिरित्युक्तप्रायत्वात् । ज्योतिष्टोमवसन्तादिशब्दानामपि तत्र समन्वयेन ज्योतिश्शब्दमात्रसमन्वयानुक्तेरिति भावः । वक्ष्यते चैतत् पादान्तप्राणनये । एवमक्षरशब्दस्याक्षरनय एव समन्वयः, अदृश्यत्वनये तु तत्साहित्येनान्यत्रप्रसिद्धलिङ्गानामेव समन्वय इति बोध्यम् । ''अदृश्यत्वादिगुणकमक्षरं'' इति

चन्द्रिकायां धर्मित्वेनाकरोपादानं तु विशेष्यप्रदर्शनार्थम् । तात्पर्यं तु गुणजात एव । अक्षरनये तस्य विष्णौ समन्वयेऽपीह "अक्षरात्सम्भवति" इत्युक्तविश्वोपादानत्वरूपबाधकेन प्रकृतौ "कूटस्थोऽक्षर उच्यते" इत्यादिस्मृतिसिद्धिबाधो न युक्त इत्यादियुक्तिं वक्तुं वेति ।

**गुरुराजीयम्** – हेतुमूलमेव लक्षणं प्रदर्श्यते । तत्र किं निमित्तमित्यत आह – **अत्र चेति** ।। इतरयोः स्वरूपफलमुखलक्षणयोरित्यर्थः । नन्वेवमेकस्यैवाकाशशब्दस्यान्यत्रोभयत्रान्यत्रैवप्रसिद्धता स्यादित्युक्तबाधकं परिहरन्नेवोभयत्रप्रसिद्धानामन्यत्रप्रसिद्धेभ्यो भेदमुपपादयितुं श्रुत्यन्तरसाधारण्यादेरुभयत्रप्रसिद्धिसाधकत्वं तावद्दर्शयति ।। **उभयत्रप्रसिद्धानां इत्यादि** ।। अत्र लक्षणकथनक्रमेणोपपादनान्न विरोधः । यद्वा नन्वेवमुभयत्रप्रसिद्धानां लक्षणानि । तथाप्युभयत्रप्रसिद्धानां नान्यत्रप्रसिद्धेभ्यो भेदः । पूर्वपक्षसिद्धान्तोक्तरीत्योभयत्रप्रसिद्धेस्तुल्यत्वादित्यत उभयवादिसंमतश्रुत्यन्तरसाधारण्यादिनैवोभयत्रप्रसिद्धिरित्याह – **उभयत्रप्रसिद्धानां इत्यादि** ।। श्रुत्यन्तरसाधारण्येनोभयत्रप्रसिद्धिरित्यन्वयः । एवमुत्तरत्रापि । न चाकाशशब्दस्य कथमुभयत्रप्रसिद्धिरिति वाच्यम् । लोकतोन्यत्रप्रसिद्धेस्तल्लिङ्गादिति न्यायेन ब्रह्मण्यपि प्रयोगादित्याह – **आकाश इति** ।। एवमाकाशशब्दस्योभयत्रप्रसिद्धिमुपपाद्य कथं तर्हि तस्यान्यत्रप्रसिद्धत्वं तल्लिङ्गादिति न्यायेन ब्रह्मण्यपि प्रसिद्धत्वेनोभयत्रप्रसिद्धत्वादित्यत आह – **तदुक्तेरिति** ।। तथाचैतदधिकरणप्रवृत्त्यनन्तरं ब्रह्मण्यप्याकाशशब्दस्य प्रसिद्धत्वेप्याकाशस्तल्लिङ्गादिति न्यायप्रवृत्तेः पूर्वं तत्सूत्रपूर्वपक्षदशायामन्यत्रप्रसिद्धत्वेन ब्रह्मण्यप्रसिद्धत्वेनान्यत्रप्रसिद्धत्वोपपत्तेरिति भावः । कथं तर्ह्यन्यत्रैवप्रसिद्धत्वं पूर्वोक्तन्यायेन ब्रह्मण्यपि प्रसिद्धत्वेन येषामुक्तद्वयमित्यादिनोक्तस्यान्यत्रप्रसिद्धलक्षणानाक्रान्तत्वात्तस्यान्यत्रप्रसिद्धत्वेऽपि ब्रह्मण्यप्रसिद्धत्वाभावादित्यत आह – **कारणत्वेनेत्यादि** ।।

अयं भावः । आकाशशब्दोप्यन्यत्रैवप्रसिद्धः । नच ब्रह्मण्यप्रसिद्धिर्नास्तीति वाच्यम् । तस्यापि ब्रह्मण्यप्रसिद्धत्वात् । नच तल्लिङ्गादिति न्यायेन ब्रह्मणि प्रसिद्धिरुक्तेति वाच्यम् । सति हि ब्रह्मलिङ्गे ब्रह्मपरत्वमिति हि तन्न्यायः । अत एव 'आकाशो वै नामरूपे' इत्यादौ नामरूपनिर्वाहकत्वरूपब्रह्मलिङ्गसद्भावेनाकाशशब्दस्य ब्रह्मपरत्वमाश्रितम् । न चात्र ब्रह्मलिङ्गमस्ति । किन्तु तल्लिङ्गादिति

न्यायात्प्रागिवात्राप्यबाधितान्यत्रप्रसिद्धेः सम्भूत-त्वादिलिङ्गसाहित्येन बलवत्त्वादन्यत्रैवप्रसिद्धत्वमिति । एवमन्यत्रैवप्रसिद्धिसम्पादिके तत्राप्रसिद्ध्यन्यत्रप्रसिद्धी उपपाद्य ब्रह्मपरत्वेऽन्यशक्यत्वमप्याह – **सम्भूतत्वादीति** ।। **प्रयोगभेदेनेति** ।। विषयवाक्यभेदेनेत्यर्थः ।

ननूभयत्रप्रसिद्धिप्रयोजकीभूतप्रयोगसाधारण्यस्योक्तन्यायेनात्रापि सत्त्वादुभयत्रप्रसिद्धत्वं स्यादेव । अन्यथा विषयवाक्यगताकाशशब्दस्य ब्रह्मणि प्रयोगाभावस्य च सिद्धान्ते क्वाप्यसम्भवात्, ब्रह्मलिङ्गाभावस्य च सिद्धान्ते क्वाप्यभावात् पूर्वपक्षे तु सर्वत्र सत्वात्पूर्वपक्षसिद्धान्तानुदयात् । अत एव विपरीतलिङ्गानां पूर्वपक्षे सर्वसाधारण्यात्सिद्धान्ते तदभावस्यापि साधारण्यात्पूर्वत्राप्युत्तरत्रप्रसिद्ध्योपपत्तेरिति चेन्न । श्रुत्यादेः प्राबल्यं हीत्यादिवक्ष्यमाणन्यायेन तृतीयपादे भूताकाशप्रापकवैनामेतिनिपातद्योतितलोकप्रसिद्ध्यापन्नाकाशश्रुतेः सिद्धान्तेऽमुख्ययापि वृत्त्याऽन्यपरत्वाभावेऽनुपपत्त्यभावेन दुर्बलत्वात् । चतुर्थे तु तस्याप्राबल्यादुभयत्र प्रयोगाविशेषेऽतिव्याप्त्यभावात् । एतदेवाभिप्रेत्य विपरीतलिङ्गाच्चेति प्रोक्तमिति ज्ञातव्यम् ।

नन्वेवमन्यत्रैवप्रसिद्धलक्षणाक्रान्तत्वेनान्यत्रैवप्रसिद्धत्वेऽपि ब्रह्मण्यपि प्रसिद्धत्वादुभयत्रप्रसिद्धता स्यादेवेत्यत आह – **यद्वेति** ।। यद्वा एवं पूर्वोत्तरपक्षयोः श्रुत्यादीनां प्राबल्यतदभावविवक्षया परस्परमतिव्याप्तिपरिहारेपि पक्षान्तरमाह – **यद्वेति** ।। भूतपराकाशशब्दस्येव ज्ञानवाचकज्योतिश्शब्दस्य प्राक् समन्वयाप्रतिपादनात्कथं तस्य तृतीय उभयत्रप्रसिद्धत्वं कथं च विरुद्धमन्यत्रान्यत्रैवप्रसिद्धत्वं चेत्यभ्यधिकाशङ्कायामुक्तमेवातिदिशति – **एवमिति** ।। ज्योतिश्शब्दस्य पूर्वं समन्वयापादितप्रयोगाभावे ज्ञानरूपप्रवृत्तिनिमित्तसाधारण्येनोभयत्र प्रसिद्धेर्वक्ष्यमाणत्वात्साधारण्यमात्रांशेऽतिदेशः । एवं कर्मवाचकस्य पूर्वमसमन्वितस्यैव ज्योतिश्शब्दस्यावान्तरकारणस्येव प्रतिपादनात्सिद्धान्तेऽप्यन्यपरत्वाद्वाऽतिदेशः ।

**ವಿವರಣೆ** - 'ಅತ್ರ ಚ' ಎಂದರೆ ಮೂರುವಿಧವಾದ ಉಪಾಧಿಗಳು ಪ್ರತ್ಯೇಕವಾಗಿ ಮೂರು ಲಕ್ಷಣಗಳನ್ನು ಹೊಂದಿವೆ. ಅವುಗಳ ಮಧ್ಯದಲ್ಲಿ ಎಂದರ್ಥ. ಮುಂದಿನ ಮೂರರ ಎರಡು ಗುಂಪು (ತ್ರಿತದ್ವಯಗಳು) ಮೊದಲಿನ ಮೂರರ ಒಂದು ಗುಂಪಿನ ಅಧೀನವಾಗಿದೆ. ಈ ವಿಷಯವನ್ನು ಈ ಹಿಂದೆ 'ಅತ ಏವ' ಇತ್ಯಾದಿ ಗ್ರಂಥದಿಂದ ವಿವರಿಸಿದ್ದಾಗಿದೆ. ಆದ್ದರಿಂದ ಮೊದಲಿನ ಮೂರರ ಗುಂಪನ್ನು ಆಯಾ ಪಾದಗಳ ದೃಷ್ಟಾಂತದಿಂದ

ನಿರೂಪಿಸುತ್ತಿದ್ದಾರೆ. ಇದನ್ನು ತಿಳಿದ ಮೇಲೆ ಮುಂದಿನ ಮೂರರ ಎರಡು ಗುಂಪು ಸುಲಭವಾಗಿ ಅರ್ಥವಾಗುತ್ತದೆ.

'ಸಾಧಾರಣ್ಯೇನ' ಎಂಬುದಕ್ಕೆಲ್ಲ 'ಉಭಯತ್ರಪ್ರಸಿದ್ಧಿಃ' ಎಂಬಲ್ಲಿ ಅನ್ವಯ ಮಾಡಬೇಕು. ಅವಿನಾಶಿತ್ವವೆಂಬ ಪ್ರವೃತ್ತಿನಿಮಿತ್ತವನ್ನು ಅಕ್ಷರಾಧಿಕರಣದಲ್ಲಿ ಹೇಳಿದ್ದಾರೆ. ಅದನ್ನು ಇಲ್ಲಿ ಅಕ್ಷರಾದಿಶಬ್ದಗಳ ಪ್ರವೃತ್ತಿನಿಮಿತ್ತವೆಂದು ತಿಳಿಯಬೇಕು. 'ಈಕ್ಷತಿ ಕರ್ಮವ್ಯಪದೇಶಾತ್ಸಃ' ಎಂಬಲ್ಲಿ 'ತತ್ತೇಜೋಽಸೃಜತ' ಇತ್ಯಾದಿಯಾಗಿ ಕಾರಣತ್ವವನ್ನು ನಿರೂಪಣೆ ಮಾಡಿದ್ದಾರೆ. ಅದನ್ನು ಇಲ್ಲಿ ಸದಾದಿಶಬ್ದಗಳ ಪ್ರವೃತ್ತಿನಿಮಿತ್ತ ಸಾಧಾರಣವಾಗಿದೆಯೆಂದು ತಿಳಿಯಬೇಕು.

ಉಭಯತ್ರಪ್ರಸಿದ್ಧಿಯನ್ನು ಶ್ರುತ್ಯಂತರಸಾಧಾರಣ್ಯದಿಂದ ಹೇಳಬಹುದು. ಅಥವಾ ವಿಷಯವಾಕ್ಯ-ಸಾಧಾರಣ್ಯದಿಂದ ಹಾಗೆಯೇ ಪ್ರಯೋಗಸಾಧಾರಣ್ಯದಿಂದ ಪ್ರವೃತ್ತಿನಿಮಿತ್ತಸಾಧಾರಣ್ಯದಿಂದಲೂ ಹೇಳಬಹುದು. ಆದರೆ ಪೂರ್ವಪಕ್ಷಸಿದ್ಧಾಂತನ್ಯಾಯದಿಂದ ಹೇಳಬಾರದು. ಒಂದು ವೇಳೆ ಪೂರ್ವಪಕ್ಷ-ಸಿದ್ಧಾಂತನ್ಯಾಯಗಳಿಂದ ಉಭಯತ್ರಪ್ರಸಿದ್ಧಿ ಹೇಳಿದರೆ ಸಕಲಶಬ್ದಗಳೂ ಉಭಯತ್ರಪ್ರಸಿದ್ಧಗಳೇ ಆಗಬೇಕಾದೀತು. ವಸ್ತುತಃ 'ಕಂಪನಾತ್' ಎಂಬ ಸೂತ್ರದ ಟೀಕೆಯಲ್ಲಿ ಪೂರ್ವಪಕ್ಷಸಿದ್ಧಾಂತನ್ಯಾಯಗಳಿಂದಲೇ ಉಭಯತ್ರಪ್ರಸಿದ್ಧಿಯನ್ನು ಹೇಳಿದ್ದಾರೆ. 'ಮಹದ್‌ಭಯಮ್ ವಜ್ರಮುದ್ಯತಮ್' ಎಂಬ ಕಾಠಕೋಪ-ನಿಷತ್ತಿನಲ್ಲಿರುವ ವಜ್ರಶಬ್ದವು ಉದ್ಯತತ್ವವೆಂಬ ಪೂರ್ವಪಕ್ಷನ್ಯಾಯದಂತೆ ಲೋಕದಲ್ಲಿ ಪ್ರಸಿದ್ಧವಾಗಿದೆ. ಜಗಚ್ಚೇಷ್ಟಕತ್ವವೆಂಬ ಸಿದ್ಧಾಂತನ್ಯಾಯದಂತೆ ವಿಷ್ಣುವಿನಲ್ಲಿ ಪ್ರಸಿದ್ಧವಾದ್ದರಿಂದ ಉಭಯತ್ರಪ್ರಸಿದ್ಧವಾಗಿದೆ. ಹೀಗೆ ಪೂರ್ವಪಕ್ಷಸಿದ್ಧಾಂತನ್ಯಾಯಗಳ ಪ್ರಕಾರ ಉಭಯತ್ರಪ್ರಸಿದ್ಧಿಗೆ ಕಾರಣವನ್ನು ಮುಂದೆ ವಿವರಿಸುತ್ತೇವೆ. ಕಂಪನಾಧಿಕರಣದಲ್ಲಿ ಹಾಗೆ ಹೇಳಿದ್ದಾರೆಂದು ಪ್ರತಿಯೊಂದು ಅಧಿಕರಣಗಳಲ್ಲಿ ಹಾಗೆ ಹೇಳಲು ಬರುವುದಿಲ್ಲ.

ಆಕಾಶಶಬ್ದವು ಅನ್ಯತ್ರಪ್ರಸಿದ್ಧವಾಗಿದೆಯೆಂದು 'ತದುಕ್ತೇಃ' ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ. ಅನ್ಯತ್ರೈವಪ್ರಸಿದ್ಧವಾದ ಬಗೆಯನ್ನು 'ಕಾರಣತ್ವೇನ' ಇತ್ಯಾದಿವಾಕ್ಯದಿಂದ ವಿವರಿಸುತ್ತಿದ್ದಾರೆ. ಅನ್ಯತ್ರೈವಪ್ರಸಿದ್ಧಿಗೆ ಪ್ರಬಲವಾದ ಲಿಂಗ ಸಂಭೂತತ್ವ. ಏಕೆಂದರೆ 'ಆತ್ಮನಃ ಆಕಾಶಃ ಸಂಭೂತಃ' ಎಂದು ಪರಮಾತ್ಮನಿಂದ ಆಕಾಶವು ಹುಟ್ಟಿದೆಯೆಂದು ಶ್ರುತಿ ಹೇಳುತ್ತಿದೆ. ಈಗ ಆಕಾಶ ಎಂದರೆ ವಿಷ್ಣು ಎಂದು ಅರ್ಥೈಸುವುದಾದರೆ ತನ್ನಿಂದ ತಾನೇ ಹುಟ್ಟಿದನೆಂದಂತಾಗುತ್ತದೆ.

ಇದರಿಂದ ಮತ್ತೊಂದು ಆಕ್ಷೇಪ ನಿರಸ್ತವಾಯಿತು. ಒಂದು ವೇಳೆ ಪ್ರಯೋಗಸಾಧಾರಣ್ಯದಿಂದ ಉಭಯತ್ರಪ್ರಸಿದ್ಧಿಯನ್ನು ಹೇಳುವುದಾದರೆ ನಾಲ್ಕನೆಯ ಪಾದದ ಆಕಾಶಶಬ್ದವೂ ಉಭಯತ್ರಪ್ರಸಿದ್ಧ ಆಗಬೇಕಾದೀತು. ಏಕೆಂದರೆ ಯಾವಕಾರಣದಿಂದ ಮೂರನೆಯ ಪಾದದ ಆಕಾಶಶಬ್ದವು ಉಭಯ-ಸಾಧಾರಣವಾಯಿತೋ ಅದೇ ಕಾರಣವನ್ನು ನಾಲ್ಕನೆಯ ಪಾದದ ಆಕಾಶಶಬ್ದಕ್ಕೂ ಹೇಳಬಹುದು. ಅನ್ಯತ್ರೈವಪ್ರಸಿದ್ಧಿಯೆಂದು ಹೇಳಲಾಗದು.' ಈ ಆಕ್ಷೇಪಕ್ಕೆ ಈಗ ಅವಕಾಶವಿಲ್ಲ. ಏಕೆಂದರೆ ಬ್ರಹ್ಮನ ಲಿಂಗಗಳಿಲ್ಲ. ಹೊರತಾಗಿ ಪ್ರಯೋಗಸಾಧಾರಣ್ಯವನ್ನು ಬಾಧಿಸಿ ವಿಪರೀತಲಿಂಗವೇ ಇರುವುದರಿಂದ ಅನ್ಯತ್ರೈವಪ್ರಸಿದ್ಧವಾಗುತ್ತದೆ. ನಾಲ್ಕನೆಯ ಪಾದದ ಟೀಕೆಯಲ್ಲಿ 'ಉತ್ಪತ್ತಿಮತ್ವಲಿಂಗೇನಾನ್ಯತ್ರೈವಪ್ರಸಿದ್ಧಾನಾ-

ಮಾಕಾಶಾದಿಶಬ್ದಾನಾಮ್' (ಉತ್ಪತ್ತಿಮತ್ವಲಿಂಗದಿಂದ ಆಕಾಶಾದಿಶಬ್ದಗಳು ಅನ್ಯತ್ರೈವಪ್ರಸಿದ್ಧಗಳಾಗಿವೆ) ಎಂದು ಹೇಳಿದ್ದಾರೆ. ಇದನ್ನೂ ಈಗ ವ್ಯಾಖ್ಯಾನಿಸಿದಂತಾಯಿತು.

ಅಥವಾ ನಾಲ್ಕನೆಯ ಪಾದದ 'ಕಾರಣತ್ವೇನ ಚಾಕಾಶಾದಿಷು' ಎಂಬ ಸೂತ್ರದಲ್ಲಿ ಆಕಾಶಶಬ್ದದ ಸಮನ್ವಯವೆಂದು ಹೇಳುವುದೇ ಬೇಡ. ಹಾಗೆ ಹೇಳಿದರೆ ಮೂರನೆಯ ಪಾದದಂತೆ ಉಭಯತ್ರಪ್ರಸಿದ್ಧವಾಗಲಿ ಎಂದು ಆಕ್ಷೇಪ ಮಾಡಬಹುದಿತ್ತು. ಹೊರತಾಗಿ ಅವಾಂತರಕಾರಣತ್ವವೆಂಬ ಲಿಂಗವನ್ನು ಸಮನ್ವಯ ಮಾಡಲಾಗಿದೆ. ಈ ಲಿಂಗದ ಸಮನ್ವಯವಂತೂ ಮೊದಲು ಎಲ್ಲಿಯೂ ಮಾಡಿಲ್ಲ. 'ಅವಾಂತರಂ ಕಾರಣಂ ಚ' ಎಂಬ ಅಣುಭಾಷ್ಯದ ಸಮ್ಮತಿಯನ್ನೂ ಇಲ್ಲಿ ಉಲ್ಲೇಖಿಸಬಹುದು. ಈಗ ಆಕಾಶಶಬ್ದವು ಕೇವಲ ಎರಡೇ ವಿಧವಾಗುತ್ತದೆ. ಮೂರುವಿಧವಾಗುವುದಿಲ್ಲ. 'ಆಕಾಶಸ್ತಲ್ಲಿಂಗಾತ್' ಎಂಬಲ್ಲಿ ಆಕಾಶಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುವ ಮೊದಲು ಅನ್ಯತ್ರಪ್ರಸಿದ್ಧವಾಗಿರುತ್ತದೆ. ಬ್ರಹ್ಮನಲ್ಲಿ ಸಮನ್ವಯ ಮಾಡಿದ ಮೇಲೆ ಉಭಯತ್ರಪ್ರಸಿದ್ಧವಾಗುತ್ತದೆ.

ಇದೇ ಪ್ರಕಾರ 'ಜ್ಯೋತಿಃ' ಎಂಬ ಶಬ್ದದ ವಿಷಯದಲ್ಲಿಯೂ ತಿಳಿಯಬೇಕು. ಪ್ರಯೋಗಭೇದದಿಂದ ದಶಾಭೇದವನ್ನು ಆಕಾಶಶಬ್ದದಂತೆ ಊಹಿಸಿಕೊಳ್ಳಬೇಕು.

ಆಕ್ಷೇಪ - ಆಕಾಶಶಬ್ದಕ್ಕೆ ಹೇಳಿದ ನ್ಯಾಯವನ್ನು ಜ್ಯೋತಿಶಬ್ದಕ್ಕೆ ಹೇಳಲಾಗದು. ಏಕೆಂದರೆ 'ಜ್ಯೋತಿಶ್ಚರಣಾಭಿಧಾನಾತ್' ಎಂಬಲ್ಲಿ ಜ್ಯೋತಿಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುವ ಮೊದಲು ಅನ್ಯತ್ರಪ್ರಸಿದ್ಧವಾಗಿರುತ್ತದೆ ಮತ್ತು 'ಜ್ಯೋತಿರ್ಹೃದಯ ಆಹಿತಂ ಯತ್' ಎಂದು ಅಗ್ನಿಸೂಕ್ತದಲ್ಲಿರುವ ಜ್ಯೋತಿಃಶಬ್ದವನ್ನು ಸಮನ್ವಯ ಮಾಡುವ ಮೊದಲು ಅನ್ಯತ್ರಪ್ರಸಿದ್ಧವಾಗಿರುತ್ತದೆ, ಸಮನ್ವಯ ಮಾಡಿದ ಮೇಲೆ ಉಭಯತ್ರಪ್ರಸಿದ್ಧವೆಂದು ಹೇಳಬೇಕು. ಆದರೆ ಹಾಗೆ ಹೇಳಲು ಬರುವುದಿಲ್ಲ. ಏಕೆಂದರೆ 'ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂಬ ಕಾಣ್ವಶ್ರುತಿಯಲ್ಲಿರುವ ಜ್ಯೋತಿಃಶಬ್ದವನ್ನು ಉಭಯತ್ರಪ್ರಸಿದ್ಧವೆಂದು ಹೇಳಲು ಬರುವುದಿಲ್ಲ. ಆ ಅಧಿಕರಣದ ಪೂರ್ವಪಕ್ಷದಲ್ಲಿ ಜ್ಯೋತಿಃಶಬ್ದಪ್ರತಿಪಾದ್ಯನಾದವನು ವಿಷ್ಣು ಎಂದು ಹೇಳಿದ್ದೇ ತಪ್ಪು ಎಂದು ಆಕ್ಷೇಪಿಸಲಾಗಿದೆ. ಹೀಗಿರುವಾಗ ಉಭಯತ್ರಪ್ರಸಿದ್ಧಿಯೆಂಬುದನ್ನು ಪೂರ್ವಪಕ್ಷಿಯೂ ಒಪ್ಪಿದ್ದಾನೆಂದು ಹೇಳಲು ಬರುವುದಿಲ್ಲ. ಆದ್ದರಿಂದ ಮೂರನೆಯ ಪಾದದಲ್ಲಿ ಉಭಯತ್ರಪ್ರಸಿದ್ಧವೆಂದು ಇಟ್ಟುಕೊಳ್ಳಲಾಗದು. ಆಕಾಶಶಬ್ದದಲ್ಲಿ ಈ ಗೊಂದಲವಿಲ್ಲ. 'ಆಕಾಶೋಽರ್ಥಾಂತರತ್ವಾತ್' ಎಂಬ ಸೂತ್ರದ ಪೂರ್ವಪಕ್ಷದಲ್ಲಿ 'ಆಕಾಶಸ್ತಲ್ಲಿಂಗಾತ್' ಎಂಬಲ್ಲಿ ಸಮರ್ಥಿಸಿದ ಆಕಾಶಶಬ್ದಪ್ರತಿಪಾದ್ಯನಾದವನು ವಿಷ್ಣು ಎಂಬುದನ್ನು ಆಕ್ಷೇಪ ಮಾಡಿಕೊಂಡೇ ಇಲ್ಲ. ಆದ್ದರಿಂದ ಮೂರನೆಯ ಪಾದದಲ್ಲಿ ಪ್ರಸಕ್ತವಾಗುವ ಆಕಾಶಶಬ್ದಕ್ಕೆ ಉಭಯತ್ರಪ್ರಸಿದ್ಧಿಯನ್ನು ಹೇಳಬಹುದು.

ಸಮಾಧಾನ - ಪ್ರಯೋಗಸಾಧಾರಣ್ಯೇನ ಉಭಯತ್ರಪ್ರಸಿದ್ಧಿಯನ್ನು ಹೇಳಲು ಆಗದಿದ್ದರೂ ಪ್ರವೃತ್ತಿನಿಮಿತ್ತಸಾಧಾರಣ್ಯದಿಂದ ಉಭಯತ್ರಪ್ರಸಿದ್ಧಿಯನ್ನು ಹೇಳಬಹುದು. ಏಕೆಂದರೆ ಮೂರನೆಯ ಪಾದದ ಪೂರ್ವಪಕ್ಷದಲ್ಲಿ ಅಗ್ನಿಶಬ್ದಪ್ರತಿಪಾದ್ಯನಾದವನು ಜೀವನೆಂದು ಹೇಳಿದ್ದಾರೆ, ಹೊರತು ಅಗ್ನಿದೇವತೆಯನ್ನು ಹೇಳಿಲ್ಲ. ಅಗ್ನಿದೇವತೆಯನ್ನು ಹೇಳಿದ್ದರೆ ಲೋಕತಃ ಅನ್ಯತ್ರಪ್ರಸಿದ್ಧಿಯನ್ನು ಹೇಳಬಹುದಿತ್ತು. ಜೀವನಲ್ಲಂತೂ ಲೋಕತಃ ಅನ್ಯತ್ರಪ್ರಸಿದ್ಧಿಯನ್ನು ಹೇಳಲಾಗದು. ಆದ್ದರಿಂದ ಪ್ರಯೋಗಸಾಧಾರಣ್ಯದಿಂದ ಉಭಯತ್ರ-ಪ್ರಸಿದ್ಧಿಯನ್ನು ಹೇಳಲು ಬರುವುದಿಲ್ಲ. ಪ್ರವೃತ್ತಿನಿಮಿತ್ತಸಾಧಾರಣ್ಯದಿಂದ ಉಭಯತ್ರಪ್ರಸಿದ್ಧಿಯನ್ನು

ಹೇಳಬಹುದು. 'ಜ್ಞಾನರೂಪತ್ವ'ವೆಂಬ ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತವು ಜೀವೇಶರಲ್ಲಿ ಸಾಧಾರಣವಾಗಿದೆ. ಆದ್ದರಿಂದ ಜ್ಯೋತಿಃಶಬ್ದವು ಉಭಯತ್ರಪ್ರಸಿದ್ಧವಾಗಿಲ್ಲವೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

ಆಕ್ಷೇಪ - ಹಾಗಾದರೆ ಅನ್ಯತ್ರೈವಪ್ರಸಿದ್ಧವೆಂದು ಹೇಳುವುದು ಕಷ್ಟವಾಗುತ್ತದೆ. ಪೂರ್ವಪಕ್ಷಿ ಆಕ್ಷೇಪ ಮಾಡುವುದೇ ಮುಖ್ಯವೆಂದು ಹೇಳಿದಿರಿ. ಆದರೆ 'ಜ್ಯೋತಿರುಪಕ್ರಮಾತ್' ಇತ್ಯಾದಿ ನಾಲ್ಕನೆಯ ಪಾದದ ಸೂತ್ರದಲ್ಲಿ ಪೂರ್ವಪಕ್ಷಿಯು ಪ್ರಥಮಪಾದದಲ್ಲಿ ಸಮನ್ವಯ ಮಾಡಿದ್ದನ್ನು ತಪ್ಪೆಂದು ಆಕ್ಷೇಪ ಮಾಡಿಯೇ ಇಲ್ಲ. ಹೀಗಿರುವಾಗ ಇಲ್ಲಿರುವ ಜ್ಯೋತಿಶಬ್ದವು ವಿಷ್ಣುವಿನಲ್ಲಿ ಬರುತ್ತದೆಂಬುದು ಪೂರ್ವಪಕ್ಷಿಗೂ ಸಮ್ಮತವೇ ಆಗಿದೆ. ಪೂರ್ವಪಕ್ಷಿಗೆ ಸಮ್ಮತವಾದ ಮೇಲೆ ಉಭಯತ್ರಪ್ರಸಿದ್ಧಿಯೇ ಆಗುತ್ತದೆ. ಅನ್ಯತ್ರೈವಪ್ರಸಿದ್ಧವಾಗುವುದಿಲ್ಲ.

ಸಮಾಧಾನ - ಈ ಆಕ್ಷೇಪಕ್ಕೆ ಈಗಾಗಲೇ ಸಮಾಧಾನ ನೀಡಿದ್ದೇವೆ. ಏಕೆಂದರೆ ಈ ಅಧಿಕರಣದ ವಿಷಯವಾಕ್ಯ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬುದು. ಇಲ್ಲಿ ಯಾವುದೇ ಬ್ರಹ್ಮಲಿಂಗವೂ ಕೇಳಿಸುತ್ತಿಲ್ಲ. ಬ್ರಹ್ಮಲಿಂಗ ಇಲ್ಲದ್ದರಿಂದ ಲೋಕತಃ ಅನ್ಯತ್ರಪ್ರಸಿದ್ಧಿಗೆ ಬಾಧಕವಿಲ್ಲ. ಮತ್ತು ಕರ್ಮವು ಲೋಪವಾಗಬೇಕಾದೀತೆಂಬ ಬಾಧಕವೂ ಇದೆ. ಹೀಗಿರುವಾಗ ಅನ್ಯತ್ರೈವಪ್ರಸಿದ್ಧವಾಗುತ್ತದೆ. ಹೊರತು ಉಭಯತ್ರಪ್ರಸಿದ್ಧವಾಗುವುದಿಲ್ಲ. ಅಷ್ಟೇ ಅಲ್ಲದೇ ಆ ಅಧಿಕರಣದಲ್ಲಿ ಕೇವಲ ಜ್ಯೋತಿಶಬ್ದವನ್ನು ಸಮನ್ವಯ ಮಾಡುತ್ತಿಲ್ಲ. 'ಜ್ಯೋತಿಷ್ಟೋಮ' 'ವಸಂತ' ಮೊದಲಾದ ಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ. ಹೀಗಿರುವಾಗ 'ಜ್ಯೋತಿಃ' ಶಬ್ದವನ್ನಷ್ಟೇ ಉಭಯತ್ರಪ್ರಸಿದ್ಧಿಯೆಂದು ಹೇಳಲಾಗದು. ಇದರ ಬಗ್ಗೆ ಹೇಳುವ ವಿಷಯ ಇನ್ನೂ ಬಹಳವಿದೆ. ಪಾದಾಂತ್ಯಪ್ರಾಣಾಧಿಕರಣದಲ್ಲಿ ವಿವರಿಸುವವರಿದ್ದೇವೆ.

ಇದರಂತೆ ಅಕ್ಷರಾಧಿಕರಣದಲ್ಲಿರುವ ಅಕ್ಷರಶಬ್ದ ಸಮನ್ವಯವನ್ನೂ ಆದಿಪದದಿಂದ ಇಟ್ಟುಕೊಳ್ಳಬೇಕು. 'ಅಕ್ಷರಮಂಬರಾಂತಧೃತೇಃ' ಎಂಬ ಮೂರನೆಯ ಪಾದದಲ್ಲಿ ಸಮನ್ವಯ ಮಾಡುತ್ತಿರುವ ಅಕ್ಷರಶಬ್ದವು ಉಭಯತ್ರಪ್ರಸಿದ್ಧವಾಗಿದೆ. ನಾಶರಾಹಿತ್ಯವೆಂಬ ಪ್ರವೃತ್ತಿನಿಮಿತ್ತವು ವಿಷ್ಣುವಿನಲ್ಲಿ ಮತ್ತು ಪ್ರಕೃತಿ ಮೊದಲಾದವುಗಳಲ್ಲಿ ಸಾಧಾರಣವಾಗಿದೆ. ಆದರೆ ಎರಡನೆಯ ಪಾದದ ಅದೃಶ್ಯತ್ವಾಧಿಕರಣದಲ್ಲಿಯೂ ಅಕ್ಷರಶಬ್ದ ಸಮನ್ವಯ ಮಾಡಲಾಗಿದೆ. ಉಭಯತ್ರಪ್ರಸಿದ್ಧವಾದ ಅಕ್ಷರವನ್ನು ಎರಡನೆಯ ಪಾದದಲ್ಲಿ ಸಮನ್ವಯ ಮಾಡುವುದು ಹೇಗೆ? ಎಂಬ ಆಕ್ಷೇಪ ಬರುತ್ತದೆ. ಇದಕ್ಕೆ ಇಷ್ಟು ಸಮಾಧಾನ - ಮೂರನೆಯ ಪಾದದ ಅಕ್ಷರಾಧಿಕರಣದಲ್ಲಿ ಅಕ್ಷರಶಬ್ದವನ್ನು ಸಮನ್ವಯ ಮಾಡಿದ್ದು ನಿಜ. ಆದರೆ ಎರಡನೆಯ ಪಾದದ ಅದೃಶ್ಯತ್ವಾಧಿಕರಣದಲ್ಲಿ ಅಕ್ಷರಶಬ್ದದ ಸಮನ್ವಯ ಮಾಡಿಯೇ ಇಲ್ಲ. ಹೊರತಾಗಿ ಅಕ್ಷರಶಬ್ದದ ಸಾಹಿತ್ಯದಿಂದ ಅನ್ಯತ್ರೈವಪ್ರಸಿದ್ಧವಾದ ಅದೃಶ್ಯತ್ವಾದಿಲಿಂಗಗಳ ಸಮನ್ವಯವನ್ನಷ್ಟೇ ಮಾಡಿದ್ದಾರೆ. ಚಂದ್ರಿಕೆಯಲ್ಲಿ ಅದೃಶ್ಯತ್ವಾದಿಗುಣವುಳ್ಳ ಅಕ್ಷರಾದಿಗಳೆಂದು ಅದೃಶ್ಯತ್ವಾಧಿಕರಣದಲ್ಲಿ ಹೇಳಿದ್ದಾರಲ್ಲ? ಎಂಬ ಪ್ರಶ್ನೆ ಬರುತ್ತದೆ. ಆದರೆ ಅದೃಶ್ಯತ್ವಾದಿಧರ್ಮ ಹೊಂದಿರುವ ವಸ್ತು ಯಾವುದು? ಎಂಬ ಪ್ರಶ್ನೆಗೆ ಅಕ್ಷರವೆಂದು ವಿಶೇಷ್ಯವನ್ನಷ್ಟೇ ಸೂಚಿಸಿದ್ದಾರೆ. ಅಂದ ಮಾತ್ರಕ್ಕೆ ಅಕ್ಷರಶಬ್ದಸಮನ್ವಯವೆಂದು ತಿಳಿಯಬಾರದು. ಅದೃಶ್ಯತ್ವಾದಿಧರ್ಮಗಳ ಸಮನ್ವಯದಲ್ಲೇ ತಾತ್ಪರ್ಯವೆಂದು ತಿಳಿಯಬೇಕು. ಹೀಗೆ ಚಂದ್ರಿಕೆಯಲ್ಲಿ 'ಅದೃಶ್ಯತ್ವಾದಿಗುಣಾಃ' ಎಂದು ಹೇಳದೆ 'ಅದೃಶ್ಯತ್ವಾದಿಗುಣಕಮ್' ಎಂದು ಹೇಳಲು ವಿಶೇಷ್ಯ ತೋರಿಸುವಿಕೆಯೇ ಪ್ರಯೋಜನ, ಮತ್ತೊಂದು ಪ್ರಯೋಜನ ಯುಕ್ತಿಪ್ರದರ್ಶನ. ಅದೃಶ್ಯತ್ವಾದಿಧರ್ಮಗಳು ಏಕೆ ಅನ್ಯತ್ರಪ್ರಸಿದ್ಧವೆಂದರೆ ಅಕ್ಷರಶಬ್ದ ಸಾಹಿತ್ಯದಿಂದ. ಅಕ್ಷರಶಬ್ದವು ಹೇಗೆ ಅನ್ಯತ್ರಪ್ರಸಿದ್ಧ? ಎಂದರೆ 'ಅಕ್ಷರಾತ್ ಸಂಭವತೀಹ ವಿಶ್ವಮ್'

ಎಂಬಲ್ಲಿ ವಿಶ್ವೋಪಾದನತ್ವವು ಕೇಳಿಸುತ್ತದೆ. ಇದು ಪ್ರಕೃತಿಯಲ್ಲಿ ಬರುತ್ತದೆ, ವಿಷ್ಣುವಿನಲ್ಲಿ ಬರುವುದಿಲ್ಲ. ಆದ್ದರಿಂದ ಅನ್ಯತ್ರಪ್ರಸಿದ್ಧವಾಯಿತು. ಇಂತಹ ಅಕ್ಷರಶಬ್ದದ ಸಾಹಚರ್ಯದಿಂದ ಅದೃಶ್ಯತ್ವಾದಿಗುಣಗಳೂ ಸಹ ಅನ್ಯತ್ರಪ್ರಸಿದ್ಧವೇ ಆಗುತ್ತವೆ. ಈ ಯುಕ್ತಿಸೂಚನೆಗಾಗಿ ಚಂದ್ರಿಕೆಯಲ್ಲಿ 'ಅದೃಶ್ಯತ್ವಾದಿಗುಣಕಮಕ್ಷರಮ್' ಎಂದು ಹೇಳಿದ್ದು ಅತ್ಯಂತ ಸಮಂಜಸವಾಗಿದೆ.




ಇಷ್ಟು ಕಾರಣಗಳಿಂದ ಉಭಯತ್ರಪ್ರಸಿದ್ಧಿಯನ್ನು ಹೇಳಬಹುದು

೧) ಶ್ರುತ್ಯಂತರಸಾಧಾರಣ್ಯದಿಂದ

೨) ಪ್ರವೃತ್ತಿನಿಮಿತ್ತಸಾಧಾರಣ್ಯದಿಂದ

೩) ವಿಷಯವಾಕ್ಯದಲ್ಲಿರುವ ಕಾರಣತ್ವಾದಿಧರ್ಮಸಾಧಾರಣ್ಯದಿಂದ

೪) ಪ್ರಯೋಗಸಾಧಾರಣ್ಯದಿಂದ

ಈ ನಾಲ್ಕು ಕಾರಣಗಳಿಂದಷ್ಟೇ ಉಭಯತ್ರಪ್ರಸಿದ್ಧಿಯನ್ನು ಹೇಳಬೇಕು. ಪೂರ್ವಪಕ್ಷಸಿದ್ಧಾಂತನ್ಯಾಯಗಳಿಂದ ಉಭಯತ್ರಪ್ರಸಿದ್ಧಿಯನ್ನು ಹೇಳಬಾರದು.

ಇನ್ನು ಆಕಾಶ ಮೊದಲಾದ ಒಂದೇ ಶಬ್ದಗಳನ್ನು ಮೂರೂ ಪಾದಗಳಲ್ಲಿಯೂ ಸಮನ್ವಯ ಮಾಡುವ ಅವಶ್ಯಕತೆ ಏನು? ಎಂದು ಪ್ರಶ್ನಿಸಲಾಗಿತ್ತು. ಆದರೆ 'ಆಕಾಶಸ್ತಲ್ಲಿಂಗಾತ್' ಎಂದು ವಿಷ್ಣುವಿನಲ್ಲಿ ಸಮನ್ವಯ ಮಾಡುವ ಮೊದಲು ಆಕಾಶಶಬ್ದವು ಲೋಕತಃ ಅನ್ಯತ್ರಪ್ರಸಿದ್ಧವಾಗಿರುತ್ತದೆ. ಆದ್ದರಿಂದ ಪ್ರಥಮಪಾದದಲ್ಲಿ ಸಮನ್ವಯ ಮಾಡಲೇ ಬೇಕು. ವಿಷ್ಣುವಿನಲ್ಲಿ ಸಮನ್ವಯ ಮಾಡಿದ ಮೇಲೆ ಲೋಕದಲ್ಲಿ ಮತ್ತು ವಿಷ್ಣುವಿನಲ್ಲಿ ಪ್ರಸಿದ್ಧವಾಗುವುದರಿಂದ ಉಭಯತ್ರಪ್ರಸಿದ್ಧವಾಗುತ್ತದೆ. ಆದ್ದರಿಂದ ಮೂರನೆಯ ಪಾದದಲ್ಲಿಯೂ ಸಮನ್ವಯ ಮಾಡಬೇಕಾಗುತ್ತದೆ. ಪುನಃ 'ಆತ್ಮನಃ ಆಕಾಶಸ್ಸಂಭೂತಃ' ಇತ್ಯಾದಿ ವಾಕ್ಯಗಳನ್ನು ನೋಡಿದಾಗ ಬ್ರಹ್ಮಲಿಂಗಗಳು ಕಾಣುವುದಿಲ್ಲ. ಸಂಭೂತತ್ವ ಮೊದಲಾದ ವಿಪರೀತಲಿಂಗಗಳಿಂದ ಲೋಕಪ್ರಸಿದ್ಧವಾದ ಭೂತಾಕಾಶವನ್ನೇ ಇಟ್ಟುಕೊಳ್ಳಬೇಕಾಗುತ್ತದೆ. ಹೀಗೆ ಅನ್ಯತ್ರೈವಪ್ರಸಿದ್ಧವೂ ಆಗುವುದರಿಂದ ಅದೇ ಆಕಾಶಶಬ್ದವನ್ನು ನಾಲ್ಕನೆಯ ಪಾದದಲ್ಲಿಯೂ ಸಮನ್ವಯ ಮಾಡಬೇಕಾಗುತ್ತದೆ. ಆದ್ದರಿಂದ ಆಯಾ ಪಾದೋಪಾಧಿಗಳಿದ್ದಾಗ ಒಂದೇ ವಿಧವಾದ ಶಬ್ದಗಳನ್ನು ಮೂರು ಪಾದಗಳಲ್ಲಿಯೂ ಸಮನ್ವಯ ಮಾಡಬಹುದು.



## ಅನ್ಯತ್ರಪ್ರಸಿದ್ಧಿ ಮತ್ತು ಅನ್ಯತ್ರೈವಪ್ರಸಿದ್ಧಿಯ ಹೇತುಮುಖಲಕ್ಷಣ

**तात्पर्यचन्द्रिका –**

**अन्यत्रप्रसिद्धानां त्विन्द्रादिशब्दानां लोकतः, सर्वगतत्वादिलिङ्गानां च लोकतोऽन्यत्रप्रसिद्धादित्यादिश्रुत्यादिसाहचर्येणान्यत्रप्रसिद्धिः । न तूभयत्रप्रसिद्धाना-**

मिव ब्रह्मसाधारणश्रुत्यन्तरादिना अन्यत्रप्रसिद्धिः । तच्च श्रुत्यादिकं चतुर्थपादीय-श्रुत्यादिवन्न प्रबलम् । श्रुत्यादेः प्राबल्यं हि प्रवृत्तिनिमित्तस्य तदधीनत्वादिना ब्रह्मणि शब्दस्य परममुख्यत्वेऽपि तस्य शब्दस्य तद्युक्तवाक्यस्य वाऽपरममुख्य-वृत्त्याऽन्यपरत्वं विनाऽनुपपद्यमानत्वं, न त्वापाततो ब्रह्मण्यसम्भवमात्रम्, येन द्वित्वादिकमपि बलवत्स्यात् ।

नापि सर्वथाऽसम्भवः, येन सिद्धान्तानुदयः स्यात् । न हि "गुहां प्रविष्टौ" इत्यादिषु द्विवचनं तद्युक्तवाक्यं वाऽपरममुख्यवृत्त्याऽप्यन्यपरम् । अन्यत्रैवप्रसिद्धेषु च "अव्यक्तात् पुरुषः परः" "वसन्ते वसन्ते ज्योतिषा यजेत" इत्यादिषु अव्यक्तादिशब्दस्तद्युक्तवाक्यं वाऽपरममुख्यवृत्त्याऽन्यपरमेव । अन्यथा देवता-तारतम्यकर्मादि न सिद्ध्येत्, वाक्यान्तरस्याप्येतत्तुल्यत्वात् ।

अत एव "कामादितरत्र तत्र चायतनादिभ्यः" इत्यधिकरणे अपरममुख्यवृत्त्या श्रीतत्त्वपरत्वेन भाष्योदाहृतं "सैषा प्रकृतिरविकृतिः" इति वाक्यमेव प्रकृत्यधिकरणे टीकायामुदाहृतम् ।

एवं च "एतेन सर्वे व्याख्याताः" इत्यत्राप्यपरममुख्यवृत्त्याऽन्यपरवाक्यस्था एवासदादिशब्दा उदाहार्याः, प्रकरणात् । भाष्ये वाक्यविशेषानुपादानाच्च ।

ಅನುವಾದ - ಅನ್ಯತ್ರಪ್ರಸಿದ್ಧವೆನಿಸಿದ ಇಂದ್ರಾದಿಶಬ್ದಗಳು ಲೋಕರೂಢಿಯಿಂದಷ್ಟೇ ಅನ್ಯತ್ರಪ್ರಸಿದ್ಧವೆನಿಸಿವೆ. ಅದರಂತೆ ಸರ್ವಗತತ್ವಾದಿಲಿಂಗಗಳೂ ಸಹ ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವೆನಿಸಿದ ಆದಿತ್ಯಾದಿಶ್ರುತ್ಯಾದಿ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವೆನಿಸಿವೆ. ಹೊರತು ಉಭಯತ್ರಪ್ರಸಿದ್ಧಗಳಂತೆ ಬ್ರಹ್ಮನಲ್ಲಿ ಸಾಧಾರಣವಾದ ಶ್ರುತ್ಯಂತರಸಾಧಾರಣ್ಯದಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳಬಾರದು. ಲೋಕತಃ ಅನ್ಯತ್ರಪ್ರಸಿದ್ಧವಾದ ಆದಿತ್ಯಾದಿಶ್ರುತಿಗಳಾದರೂ ಚತುರ್ಥಪಾದದಲ್ಲಿರುವ ಶ್ರುತ್ಯಾದಿಗಳಂತೆ ಪ್ರಬಲವಾಗಿರುವುದಿಲ್ಲ. ಶ್ರುತಿಯ ಪ್ರಾಬಲ್ಯವೆಂದರೆ - 'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ಸ್ಥಳದಲ್ಲಿ ಪಂಚಮಿಯಿಂದ ತಿಳಿಯುವ ಅವರತ್ವವು ಪರಮಾತ್ಮನಲ್ಲಿ ಬರುವುದಿಲ್ಲ. ಆದರೆ ಬೇರೆಡೆ ಇರುವ ಅವರತ್ವವು ಪರಮಾತ್ಮನ ಅಧೀನವಾಗಿದೆ. ಹಾಗಾಗಿ ಪರಮಮುಖ್ಯವೃತ್ತಿಯಿಂದ ಪರಮಾತ್ಮನಲ್ಲಿ ಅವರತ್ವಾದಿಗಳನ್ನು ಹೇಳಬಹುದು. ಆದರೆ ಅವರತ್ವ ತಿಳಿಸುವ ಪಂಚಮಿಯಾಗಲೀ 'ಅವ್ಯಕ್ತಾತ್ ಪುರುಷಃ ಪರಃ' ಎಂಬ ವಾಕ್ಯವಾಗಲೀ ಅಪರಮಮುಖ್ಯವೃತ್ತಿಯಿಂದ ಪ್ರಕೃತ್ಯಾದಿಗಳನ್ನು ಹೇಳಲೇಬೇಕು. ಆವಾಗ ಮಾತ್ರ ಶ್ರುತಿಗೆ ಪ್ರಾಬಲ್ಯ

ಹೇಳಲು ಸಾಧ್ಯ. ಹೊರತು ಆಪಾತತಃ ಬ್ರಹ್ಮನಲ್ಲಿ ಶ್ರುತಿ ಕೂಡುವುದಿಲ್ಲವೆಂಬ ಮಾತ್ರದಿಂದ ಶ್ರುತಿಗೆ ಪ್ರಾಬಲ್ಯ ಬರುವುದಿಲ್ಲ. ಹಾಗಾಗಿದ್ದಲ್ಲಿ 'ಋತಂ ಪಿಬಂತೌ' ಎಂಬಲ್ಲಿರುವ ದ್ವಿತ್ವಾದಿಗಳೂ ಪರಮಾತ್ಮನಲ್ಲಿ ಆಪಾತತಃ ಬಾರದ ಕಾರಣ ಬಲಿಷ್ಠವಾಗುತ್ತಿದ್ದವು. ಇದರಂತೆ ಬ್ರಹ್ಮನಲ್ಲಿ ಸರ್ವಥಾ ಬಾರದಿರುವಿಕೆಯನ್ನು ಶ್ರುತಿಪ್ರಾಬಲ್ಯ ಎನ್ನಬಾರದು. ಹಾಗೆ ಬ್ರಹ್ಮನಲ್ಲಿ ಸರ್ವಾತ್ಮನಾ ಬರುವುದಿಲ್ಲವೆಂದು ಹೇಳಿದರೆ ಸಿದ್ಧಾಂತದ ಉದಯವೇ ಅಸಾಧ್ಯವಾಗುತ್ತದೆ.

ಆದ್ದರಿಂದ ಶಬ್ದಗಳು ಪರಮಾತ್ಮಪರವಾದರೂ ಅಪರಮಮುಖ್ಯವೃತ್ತಿಯಿಂದ ಅನ್ಯಪರವೆಂದು ಹೇಳಬೇಕು. ಆವಾಗಷ್ಟೇ ಶ್ರುತಿಯು ಪ್ರಬಲವಾಗುತ್ತದೆಂದು ಹೇಳಬೇಕು. ಆದ್ದರಿಂದಲೇ ಅನ್ಯತ್ರೈವಪ್ರಸಿದ್ಧಿ ಎನಿಸಿದ ''ಅವ್ಯಕ್ತಾತ್ ಪುರುಷಃ ಪರಃ'', ''ವಸಂತೇ ವಸಂತೇ ಜ್ಯೋತಿಷಾ ಯಜೇತ'' ಇತ್ಯಾದಿ ಸ್ಥಳದಲ್ಲಿರುವ ಅವ್ಯಕ್ತಾದಿಶಬ್ದಗಳು ಅವ್ಯಕ್ತಾದಿಶಬ್ದಗಳಿಂದ ಕೂಡಿದ ವಾಕ್ಯಗಳು ಅಪರಮಮುಖ್ಯವೃತ್ತಿಯಿಂದ ಅನ್ಯಪರವೆನಿಸಿವೆ. ಹೀಗೆ ಒಪ್ಪದಿದ್ದರೆ ದೇವತಾತಾರತಮ್ಯ ಕರ್ಮ ಮೊದಲಾದವುಗಳು ಸಿದ್ಧವೇ ಆಗದಿರಬೇಕಾದೀತು. ಬೇರೆ ವಾಕ್ಯಗಳಿಂದಲೂ ದೇವತಾತಾರತಮ್ಯ ಕರ್ಮ ಮೊದಲಾದವುಗಳು ಸಿದ್ಧವಾಗುವುದಿಲ್ಲ. ಈ ವಾಕ್ಯದಂತೆ ಬೇರೆ ವಾಕ್ಯಗಳನ್ನೂ ಪರಮಾತ್ಮನಲ್ಲಿ ಸಮನ್ವಯ ಮಾಡಲೇಬೇಕು. ಆದ್ದರಿಂದ ಅಪರಮಮುಖ್ಯವೃತ್ತಿಯಿಂದ ಅವ್ಯಕ್ತಪರತ್ವವನ್ನೊಪ್ಪುವುದು ಅನಿವಾರ್ಯ.

ಆದ್ದರಿಂದಲೇ 'ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ' ಎಂಬ ಅಧಿಕರಣದಲ್ಲಿ 'ಸೈಷಾ ಪ್ರಕೃತಿವಿಕೃತಿಃ' ಎಂಬ ಶ್ರುತಿಯನ್ನು ಶ್ರೀತತ್ವಪರವಾಗಿ ಹೇಳಿದ್ದಾರೆ. ಅದೇ ಶ್ರುತಿವಾಕ್ಯವನ್ನು ಪ್ರಕೃತ್ಯಧಿಕರಣದ ಟೀಕೆಯಲ್ಲಿ ಭಗವತ್‌ಪರವಾಗಿ ಹೇಳಿದ್ದಾರೆ. ಇದರಿಂದ ಪರಮಮುಖ್ಯವೃತ್ತಿಯಿಂದ ಭಗವತ್‌ಪರವಾದರೂ ಅಪರಮಮುಖ್ಯವೃತ್ತಿಯಿಂದ ಅನ್ಯಪರತ್ವವನ್ನು ಹೇಳಲೇಬೇಕೆಂದು ತಿಳಿಯುತ್ತದೆ.

ಆದ್ದರಿಂದ 'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಕೊನೆಯ ಸೂತ್ರದಲ್ಲಿ 'ಅಸತ್' ಮೊದಲಾದ ಶಬ್ದಗಳನ್ನು ಸಮನ್ವಯ ಮಾಡುತ್ತಾರೆ. ಯಾವ ಶ್ರುತಿವಾಕ್ಯದಲ್ಲಿ ಪರಮಾತ್ಮಪರತ್ವವನ್ನೂ ಹೇಳಿ ಅಪರಮಮುಖ್ಯವೃತ್ತಿಯಿಂದ ಅನ್ಯಪರತ್ವವನ್ನೂ ಒಪ್ಪುವ ಪ್ರಸಕ್ತಿ ಬರುತ್ತದೋ ಅಂತಹ ಶ್ರುತಿವಾಕ್ಯವನ್ನೇ ವಿಷಯವಾಕ್ಯವನ್ನಾಗಿ ಸ್ವೀಕರಿಸಬೇಕು. ಏಕೆಂದರೆ ನಾಲ್ಕನೆಯ ಪಾದದಲ್ಲಿ ಎಲ್ಲೆಡೆ ಇಂತಹ ವಾಕ್ಯಗಳನ್ನೇ ಸ್ವೀಕರಿಸಿದ್ದರಿಂದ. ಆದ್ದರಿಂದಲೇ ಆಚಾರ್ಯರೂ ಸಹ ಭಾಷ್ಯದಲ್ಲಿ 'ಅಸತಃ ಸದಜಾಯತ' ಇತ್ಯಾದಿ ವಿಶೇಷವಾಕ್ಯಗಳನ್ನು ಉಲ್ಲೇಖಿಸಿಲ್ಲ.

### ಕಠಿಣಪದಾರ್ಥ

ಬಲವತ್‌ಸ್ಯಾತ್ = 'ಋತಂ ಪಿಬಂತೌ' ಇತ್ಯಾದಿ ಸಾಂಕರ್ಯ ಬಾರದೆ ಅನ್ಯತ್ರಪ್ರಸಿದ್ಧತ್ವ ಸಿದ್ಧವಾಗುತ್ತದೆ, ಸರ್ವಥಾ ಅಸಂಭವಃ = ಬ್ರಹ್ಮನಲ್ಲಿ ಸರ್ವಥಾ ಕೂಡುವುದಿಲ್ಲ,

ಅತಏವ = ಪರಮಮುಖ್ಯವೃತ್ತಿಯಿಂದ ಬ್ರಹ್ಮಪರವಾದರೂ ಅಪರಮಮುಖ್ಯವೃತ್ತಿಯಿಂದ ಅನ್ಯಪರತ್ವವನ್ನು ಒಪ್ಪಿದ್ದರಿಂದಲೇ, ಏವಂ ಚ = ಅಪರಮಮುಖ್ಯವೃತ್ತಿಯಿಂದ ಅನ್ಯಪರವಾದದ್ದನ್ನೇ ಸ್ವೀಕರಿಸಬೇಕಾದ್ದರಿಂದ, ಪ್ರಕರಣಾತ್ = ಹಿಂದಿನ ಅಧಿಕರಣಗಳಲ್ಲಿ ಅಪರಮಮುಖ್ಯವೃತ್ತಿಯಿಂದ ಅನ್ಯಪರವಾದದ್ದನ್ನೇ ಸ್ವೀಕರಿಸಿರುವುದರಿಂದ.

**प्रकाशः** – एवमुभयत्रप्रसिद्धानां श्रुत्यन्तरादिसाधारण्यरूपहेतुमुखपलक्षणं लक्ष्यनिष्ठतया प्रदर्श्यान्यत्रप्रसिद्धानामपि तद्दर्शयति – **अन्यत्रेति** ।। **लोकत इति** ।। 'अन्यत्रप्रसिद्धिः' इत्यन्वयः । श्रुत्यादिसाहचर्येणान्यत्रप्रसिद्धत्वे उभयत्रप्रसिद्धसाङ्कर्यं स्यादित्यतो विशेषणव्यावर्त्यमाह – **न त्विति** ।।

अन्यत्रैवप्रसिद्धसाङ्कर्यमपि नेत्याह – **तच्चेति** ।। ननु प्राबल्यसाङ्कर्यमपि प्रागुक्तमित्यत आह – **प्राबल्यं हीति** ।। **द्वित्वादिकमपीति** ।। तथा च ''ऋतं पिबन्तौ'' इत्यादीनामन्यत्रप्रसिद्धत्वसिद्धिरिति भावः ।। **नापीति** ।। 'ब्रह्मणि' इत्यनुषङ्गः । विवक्षितं प्राबल्यं द्वित्वादियुक्तवाक्ये नास्ति, वसन्तादिवाक्येष्व-स्तीत्युपपादयति – **न हीति, अन्यत्रैवेति** च ।। एतेन अन्यत्रैवप्रसिद्धानां ''बलवच्छ्रुतिः'' इत्यादिनोक्तं हेतुमुखलक्षणं लक्ष्यनिष्ठत्वेनोपदर्शितं भवति ।।

**अन्यथेति** ।। अव्यक्तनयोदाहरणे ''इन्द्रियेभ्यः परा ह्यर्थाः'' इत्यादिश्रुता-विन्द्रियादिपदानां केवलब्रह्मपरत्वे इन्द्रियार्थादिदेवतातारतम्यं न सिध्येत्, एवं वसन्तादिवाक्येऽपि कर्मक्रमादिसिद्धिर्न स्यात्, देवतातारतम्यकर्मादिबोधक-वाक्यान्तरस्यापि ब्रह्मपरत्वावश्यम्भावादित्यर्थः ।।

**अत एवेति** ।। मुख्यामुख्यवृत्त्याऽर्थद्वयस्यावश्यकत्वादेवेत्यर्थः । उपासनापादे ''कामात्'' इति चतुर्विंशतितमेऽधिकरणे श्रीरुपासनायामधिकारिणी न वेति सन्देहे, सीतारुक्मिण्यादिरूपेण श्रियोऽपि जन्ममरणादिदृष्ट्या संसारित्वेन साधुत्वे सति संसारित्वादधिकारिणीति प्राप्ते, ''सर्वायतना सर्वकाला सर्वेच्छा न बद्धा बन्धिका सैषा'' इति श्रुतौ सर्वगतत्वनित्यत्वाद्यभिधानेन जननादेरवतारादित्वेन संसारित्वाभावान्न श्रीरधिकारिणीति तत्परतयोदाहृतं वाक्यं प्रकृत्यधिकरणे उदाहृत्य विष्णुपरत्वं समर्थितमित्यर्थः ।

नन्वेवं चतुर्थपादान्त्याधिकरणे कथं चिदप्यन्यपरत्वशून्यवाक्यस्य टीकाया-मुदाहृतेः कथमेवमित्यत आह – **एवं चेति** ।। **प्रकरणादिति** ।। पूर्वाधिकरणेषु तादृशानामेवोदाहरणादिति भावः ।। **अन्यपरत्वरहितस्येति** ।। तथा च पूर्वपक्षिणं प्रति युक्तिसूचनार्थं तदित्युक्तं भवति ।

**गुरुराजीयम्** – नन्वेवमप्युभयत्रप्रसिद्धवत्साधारणश्रुत्यादिना प्रसिद्धे-रन्यत्रप्रसिद्धेष्वपि सत्त्वेन साङ्कर्यं स्यादेवेत्यत आह – **अन्यत्र प्रसिद्धानां त्विति** ।। ननु तथाप्यन्यत्रप्रसिद्धानां नान्यत्रैवप्रसिद्धेभ्यो भेदः । तेषामन्यत्रप्रसिद्धिसाधक-श्रुत्यादेरुभयत्र तुल्यत्वादित्यतोऽन्यत्रैवप्रसिद्धिसम्पादकश्रुत्यादिप्राबल्यवन्नान्यत्र-प्रसिद्धिसम्पादकश्रुत्यादेः प्राबल्यमित्याह – **तच्चेति** ।। अन्यत्रप्रसिद्धिसम्पादक-श्रुत्यादिकमित्यर्थः । ननु श्रुत्यादेः प्रबलत्वं किमापाततो ब्रह्मण्यसम्भवमात्रं सर्वथाऽसम्भवो वा । नाद्यः । द्वित्वादीनां प्रबलत्वापातात् । नान्त्यः । सिद्धान्ता-नुदयापातादित्यत आह – **श्रुत्यादेः प्राबल्यं हीति** ।। तथा च यथाकथंचिदन्यपरत्वं विनाऽनुपपद्यमानत्वमेव श्रुत्यादेः प्राबल्यं विवक्षितम् । न तूभयविधमिति नातिप्रसङ्ग इति भावः । ननु विवक्षितं प्राबल्यं द्वित्वादावप्यस्त्येवेत्यत आह – **नहीति** ।। ननु यथाकथंचिदन्यपरत्वं विनानुपपद्यमानत्वमन्यत्रप्रसिद्धेषु नास्तीत्यसम्भव इत्यत आह – **अन्यत्रैव प्रसिद्धेष्विति** ।। **अन्यथेति** ।। 'अव्यक्तात् पुरुषः परः' 'वसन्ते वसन्ते ज्योतिषा यजेते' इत्यादेरमुख्यवृत्त्याऽन्यपरत्वा-नङ्गीकार इत्यर्थः । 'तत्राव्यक्तात्पुरुषः पर' इत्यस्य वाक्यस्याऽमुख्यवृत्त्याऽन्य-परत्वाभावे तारतम्यं न सिध्येत् । 'वसन्त' इत्यादेरमुख्यवृत्त्याऽन्यपरत्वाभावे कर्मादिर्न सिध्येदिति सम्बन्धो बोद्धव्यः ।

ननु 'अवव्यक्तात्पुरुषः परः' 'वसन्ते वसन्ते ज्योतिषा यजेत' इत्यादे-रमुख्यवृत्त्याऽन्यपरत्वाभावेऽपि न देवतातारतम्याद्यसिद्धिः । वाक्यान्तरेण तत्सिद्ध्युपपत्तेरित्यत आह – **वाक्यान्तरस्येति** ।। तथाच 'अव्यक्तात्पुरुषः' पर इत्यादिवद्वाक्यान्तरस्यापि ब्रह्मपरत्वेनाऽव्यक्तादिवाक्यानामन्यपरत्वाभावे वाक्या-न्तरस्याप्यन्यपरत्वाभावापातेन तेनाऽपि सिद्धेरसम्भवात्तस्याप्यमुख्यवृत्त्याऽन्य-परत्वमाश्रीयते चेदव्यक्तादेरपि तदस्तु लाघवादिति भावः ।। **अत एवेति** ।। परमुख्यया वृत्त्या ब्रह्मपरत्वेप्यमुख्यया वृत्त्याऽन्यपरत्वस्य विद्यमानत्वादेवेत्यर्थः ।

**ननु तस्यान्यपरत्वाभावादेव तदुदाहरणमित्यत आह – कामादितरत्रेति ।।**

**नन्वेवमन्यत्रैवप्रसिद्धनामलिङ्गात्मकशब्दानां समन्वयप्रतिपादके चतुर्थपादे 'एतेन सर्वे व्याख्याता' इत्यधिकरणप्रवेशो न स्यात् । तद्विषयवाक्यस्थासदादिशब्दानां परममुख्यया वृत्त्या ब्रह्मपरत्वे सत्यन्यपरत्वरूपबलवत्त्वाभावेन बलवत् श्रुति-लिङ्गादिभिरन्यत्रप्रसिद्धत्वरूपान्यत्रैवप्रसिद्धत्वाभावादित्यत आह – एवं चेति ।। ननु तर्ह्यसद्वा इत्यादिवाक्योदाहरणं न स्यादित्यतः किं भाष्ये न स्याट्टीकायां वा । नाद्य इत्याह – भाष्य इति ।।**

ಪ್ರಕಾಶಿಕಾ - ಇಲ್ಲಿಯ ತನಕ ಉಭಯತ್ರಪ್ರಸಿದ್ಧಿಯಲ್ಲಿ ಶ್ರುತ್ಯಂತರಸಾಧಾರಣ್ಯವೆಂಬ ಹೇತುಮುಖ-ಲಕ್ಷಣವನ್ನು ಆಕಾಶಾದಿಶಬ್ದಗಳಲ್ಲಿ ತೋರಿಸಿದ್ದಾಯಿತು. ಈಗ ಅನ್ಯತ್ರಪ್ರಸಿದ್ಧಿಯಲ್ಲಿ ಹೇತುಮುಖಲಕ್ಷಣವನ್ನು ದೃಷ್ಟಾಂತಪುರಸ್ಸರವಾಗಿ ತೋರಿಸುತ್ತಿದ್ದಾರೆ.

ಶ್ರುತ್ಯಂತರಸಾಧಾರಣ್ಯದಿಂದ ಉಭಯತ್ರಪ್ರಸಿದ್ಧಿಯನ್ನು ಹೇಳಿದಂತೆ ಅನ್ಯತ್ರಪ್ರಸಿದ್ಧಿಯನ್ನು ಹೇಳಬಾರದು. ಒಂದು ವೇಳೆ ಶ್ರುತ್ಯಾದಿಸಾಧಾರಣ್ಯದಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳಿದರೆ ಉಭಯತ್ರಪ್ರಸಿದ್ಧಿಯಿಂದ ಸಾಂಕರ್ಯ ಬರಬೇಕಾದೀತು.

ಆಕ್ಷೇಪ - ಉಭಯತ್ರಪ್ರಸಿದ್ಧಿಯ ಜೊತೆ ಸಾಂಕರ್ಯ ಬಾರದಿದ್ದರೂ ಅನ್ಯತ್ರೈವಪ್ರಸಿದ್ಧಿಯ ಜೊತೆ ಸಾಂಕರ್ಯ ಬರಲಿ, ಏಕೆಂದರೆ ಆದಿತ್ಯಾದಿ ಶ್ರುತ್ಯಾದಿಸಾಹಚರ್ಯದಿಂದ ಸರ್ವಗತತ್ವಾದಿಗಳು ಅನ್ಯತ್ರ-ಪ್ರಸಿದ್ಧವಾದಂತೆ ಅವರತ್ವಾದಿಲಿಂಗಸಾಹಚರ್ಯದಿಂದ ಅವ್ಯಕ್ತಾದಿಶಬ್ದಗಳಿಗೂ ಅನ್ಯತ್ರಪ್ರಸಿದ್ಧಿ ಹೇಳಿದ್ದೇವೆ. ಆದ್ದರಿಂದ ಅನ್ಯತ್ರೈವಪ್ರಸಿದ್ಧಿಯಿಂದ ಸಾಂಕರ್ಯದೋಷ ಬರಲಿ?

ಸಮಾಧಾನ - ಯಾವ ಶ್ರುತ್ಯಾದಿಗಳಿಂದ ಅನ್ಯತ್ರಪ್ರಸಿದ್ಧಿ ಹೇಳುತ್ತಿದ್ದೇವೋ ಆ ಶ್ರುತ್ಯಾದಿಗಳು ಪ್ರಬಲವಾಗಿಲ್ಲ. ಪ್ರಬಲವಾಗಿದ್ದರೆ ಅದರ ಸಾಹಚರ್ಯದಿಂದ ಅನ್ಯತ್ರೈವಪ್ರಸಿದ್ಧಿಯ ಜೊತೆ ಸಾಂಕರ್ಯವನ್ನು ಹೇಳಬಹುದಿತ್ತು. ಪ್ರಬಲವಾದ ಶ್ರುತಿವಿರೋಧವನ್ನಷ್ಟೇ ನಾಲ್ಕನೆಯ ಪಾದವು ಪರಿಹರಿಸುತ್ತದೆ.

ಶ್ರುತಿಗಳಲ್ಲಿ ವಿವಕ್ಷಿತವಾದ ಪ್ರಾಬಲ್ಯ 'ಋತಂ ಪಿಬಂತೌ' ಇತ್ಯಾದಿವಾಕ್ಯದಲ್ಲಿ ಇರುವುದಿಲ್ಲ; 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯದಲ್ಲಿ ಇರುತ್ತದೆಂದು 'ನಹಿ ಗುಹಾಂ ಪ್ರವಿಷ್ಟೌ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

'ಬಲವತ್ ಶ್ರುತಿಲಿಂಗಾದ್ಯೈಃ' ಇತ್ಯಾದಿ ಶ್ಲೋಕಗಳಿಂದ ಹಿಂದೆ ಹೇತುಮುಖಲಕ್ಷಣವನ್ನು ಹೇಳಿದ್ದರು ಆ ಲಕ್ಷಣವನ್ನು ಈಗ ಲಕ್ಷ್ಯದಲ್ಲಿ ತೋರಿಸಿದಂತಾಯಿತು.

'ವಸಂತೇ ವಸಂತೇ' ಇತ್ಯಾದಿ ವಾಕ್ಯಗಳಲ್ಲಿ ಅಪರಮಮುಖ್ಯವೃತ್ತಿಯಿಂದ ಅನ್ಯಪರತ್ವವನ್ನು ಒಪ್ಪದಿದ್ದರೆ ದೇವತಾತಾರತಮ್ಯ ಮತ್ತು ಕರ್ಮಾದಿಗಳು ಸಿದ್ಧವಾಗದಿರಬೇಕಾದೀತು. ಅವ್ಯಕ್ತಾಧಿಕರಣದಲ್ಲಿ 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಇತ್ಯಾದಿಶ್ರುತಿಯಲ್ಲಿ ಇಂದ್ರಿಯಾದಿಪದಗಳು ಕೇವಲ ಬ್ರಹ್ಮಪರವಾದರೆ ಇಂದ್ರಿಯಾದಿ-

ಪದಪ್ರತಿಪಾದ್ಯರಾದ ದೇವತೆಗಳ ತಾರತಮ್ಯವು ಸಿದ್ಧವಾಗದೇ ಇರಬೇಕಾದೀತು. ಇದೇ ರೀತಿಯಾಗಿ ವಸಂತಾದಿವಾಕ್ಯಗಳಿಂದ ಕರ್ಮಗಳ ಸಿದ್ಧಿಯೂ ಆಗದಿರಬೇಕಾದೀತು. ಇಂತಹ ದೇವತಾತಾರತಮ್ಯ ಕರ್ಮಾದಿಬೋಧಕವಾಕ್ಯಾಂತರಗಳೂ ಬ್ರಹ್ಮಪರವಾಗಿವೆಯೆಂದು ಅವಶ್ಯ ಅಂಗೀಕರಿಸಬೇಕು.

'ಸೈಷಾ ಪ್ರಕೃತಿರವಿಕೃತಿಃ' ಎಂಬ ವಾಕ್ಯವನ್ನು ಲಕ್ಷ್ಮೀಪರವಾಗಿ ಕಾಮಾಧಿಕರಣದಲ್ಲಿ ಹೇಳಿದ್ದರೂ ಅದೇ ವಾಕ್ಯವನ್ನು ಪ್ರಕೃತ್ಯಧಿಕರಣದಲ್ಲಿ ವಿಷ್ಣುಪರವಾಗಿ ಅರ್ಥೈಸಿದ್ದಾರೆ. ಕಾಮಾಧಿಕರಣದ ಸೂತ್ರ ಹೀಗಿದೆ-

ಓಂ ಕಾಮಾದಿತರತ್ರ ತತ್ರ ಚಾऽಯತನಾದಿಭ್ಯಃ ಓಂ (೩-೩-೪೦)

ಕಾಮಾತ್ = ಈಶ್ವರನ ಇಚ್ಛೆಯಿಂದ ಲಕ್ಷ್ಮೀದೇವಿಯು, ತತ್ರ = ಪರಮಾತ್ಮನ ಸಮೀಪದಲ್ಲಿ ಮೂಲರೂಪದಿಂದ ಇರುವವಳಾಗಿಯೇ, ಇತರತ್ರ ಚ = ಭೂಮ್ಯಾದಿಗಳಲ್ಲಿಯೂ ಅವತರಿಸುತ್ತಾಳೆ. ಪ್ರಮಾಣವೇನೆಂದರೆ, ಆಯತನಾದಿಭ್ಯಃ = ಸರ್ವಗತತ್ವವನ್ನು ಬೋಧಿಸುವ ಶ್ರುತಿ ಇರುವುದರಿಂದ, ಚ = ಬದ್ಧಳೂ ಮುಕ್ತಳೂ ಆಗದಿರುವುದರಿಂದ.

ಸಂದೇಹ - ಲಕ್ಷ್ಮೀದೇವಿಯು ಉಪಾಸನಾಧಿಕಾರ ಹೊಂದಿದ್ದಾಳೋ? ಇಲ್ಲವೋ?

ಪೂರ್ವಪಕ್ಷ - ಲಕ್ಷ್ಮಿಯು ಉಪಸನಾಧಿಕಾರವನ್ನು ಹೊಂದಿದ್ದಾಳೆ. ಸೀತಾ ರುಕ್ಮಿಣ್ಯಾದಿರೂಪಗಳನ್ನು ಹೊಂದಿದ್ದಾಳಾದ್ದರಿಂವ ಸಂಸಾರಿಯಾಗಿದ್ದಾಳೆ. ಸಂಸಾರಿಯಾಗಿರುವುದರಿಂದ ನಾಮಾದಿ ಉಪಾಸನಾಧಿಕಾರ-ವರ್ಗದಲ್ಲಿ ಅವಳ ಹೆಸರನ್ನು ಹೇಳದಿದ್ದರೂ ಅಧ್ಯಾಹಾರ ಮಾಡಿಕೊಳ್ಳಬೇಕು.

ಸಿದ್ಧಾಂತ - ಲಕ್ಷ್ಮೀದೇವಿಗೆ ಸಂಸಾರಬಂಧನವಿಲ್ಲ. ಆದ್ದರಿಂದ ಅವಳು ಉಪಾಸನಾಧಿಕಾರಿಯಲ್ಲ. ಸೀತಾ ರುಕ್ಮಿಣೀ ಮೊದಲಾದವು ಕೇವಲ ಅವಳ ಅವತಾರ ರೂಪಗಳೇ ಹೊರತು ಜನ್ಮಗಳಲ್ಲ. ಭೂಮಿಯಲ್ಲಿ ಅವತಾರ ಮಾಡಿದರೂ ಮೂಲರೂಪದಿಂದ ಭಗವಂತನ ಸಮೀಪದಲ್ಲಿ ಇದ್ದೇ ಇರುತ್ತಾಳೆ. ಅವಳ ಅವತಾರವು ಕರ್ಮನಿಮಿತ್ತವಲ್ಲ. ಈಶ್ವರೇಚ್ಛೆಗೆ ಅನುಗುಣವಾಗಿ ಸ್ವೇಚ್ಛೆಯಿಂದ ಸ್ವೀಕರಿಸುವ ರೂಪಗಳು. ಏಕೆಂದರೆ ಲಕ್ಷ್ಮೀದೇವಿಯು ಸರ್ವಗತಳೂ ನಿತ್ಯಳೂ ಎಂದು ಶ್ರುತಿಯು ಸಾರಿ ಹೇಳುತ್ತಿದೆ. 'ಸರ್ವಾಯತನಾ ಸರ್ವಕಾಲಾ ಸರ್ವಸ್ಥಾನಬದ್ಧಾ ಬಂಧಿಕಾ ಸೈಷಾ ಪ್ರಕೃತಿರವಿಕೃತಿಃ' ಎಂಬ ಈ ಶ್ರುತಿಯಿಂದ ಲಕ್ಷ್ಮೀದೇವಿಯು ನಿತ್ಯಮುಕ್ತಳೆಂದು ಲಕ್ಷ್ಮೀದೇವಿಯ ಗುಣಗಳನ್ನು ಹೊಗಳುತ್ತಿದೆ.

ಹೀಗೆ ಕಾಮಾಧಿಕರಣದಲ್ಲಿ ಯಾವ ಶ್ರುತಿಯು ಲಕ್ಷ್ಮೀದೇವಿಯನ್ನು ಪ್ರತಿಪಾದಿಸುತ್ತದೆಂದು ಹೇಳಿದ್ದಾರೋ ಅದೇ ಶ್ರುತಿಯೇ ವಿಷ್ಣುವನ್ನು ಪ್ರತಿಪಾದಿಸುತ್ತದೆಂದು ಪ್ರಕೃತ್ಯಧಿಕರಣದಲ್ಲಿ ಪ್ರತಿಪಾದಿಸಿದ್ದಾರೆ. ಇದರಿಂದ ಅಪರಮಮುಖ್ಯವೃತ್ತಿಯಿಂದ ಅನ್ಯಪರವಾದರೂ ಪರಮಮುಖ್ಯವೃತ್ತಿಯಿಂದ ವಿಷ್ಣುಪರವಾಗುತ್ತದೆಂದು ಸೂತ್ರಕಾರರು ಒಪ್ಪಿದ್ದಾರೆಂದು ತಿಳಿಯುತ್ತದೆ.

ಪ್ರಶ್ನೆ - ನಾಲ್ಕನೆಯ ಪಾದದ ಕೊನೆಯ ಅಧಿಕರಣದಲ್ಲಿ ಕಥಂಚಿದಪಿ ಅನ್ಯಪರವಾಗದ ವಾಕ್ಯಗಳನ್ನು ಟೀಕೆಯಲ್ಲಿ ಉದಾಹರಿಸಿದ್ದಾರಲ್ಲ?

ಉತ್ತರ - ಹಾಗೇನಿಲ್ಲ. ಅಪರಮಮುಖ್ಯವೃತ್ತಿಯಿಂದ ಅನ್ಯಪರವಾದ ವಾಕ್ಯಗಳನ್ನಷ್ಟೇ 'ಏತೇನ ಸರ್ವೇ' ಇತ್ಯಾದಿ ಸೂತ್ರದಲ್ಲಿ ಉದಾಹರಿಸಿದ್ದಾರೆ.

*ಆನಂದಮಯಾಧಿಕರಣ*



'ಶ್ರುತ್ಯಾದಿತೋ ಲೋಕತೋ ವಾಽಪೀತರೇಷು ಪ್ರಸಿದ್ಧತಾ' ಎಂದು ಅನ್ಯತ್ರಪ್ರಸಿದ್ಧಿಯ ಹೇತುಮುಖ ಲಕ್ಷಣವನ್ನು ಹಿಂದೆ ಹೇಳಿದ್ದರು. ಅದನ್ನು ಈಗ ಲಕ್ಷ್ಯದಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಇಂದ್ರಾದಿಶಬ್ದಗಳು ಮತ್ತು ಸರ್ವಗತತ್ವಾದಿಲಿಂಗಗಳು ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿವೆ. ಕೆಲವೊಮ್ಮೆ ಲಿಂಗಗಳು ಶ್ರುತ್ಯಾದಿಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವಾಗುತ್ತವೆ. ಆದರೆ ಆ ಶ್ರುತಿಗಳು ನಾಲ್ಕನೇ ಪಾದದ ಶ್ರುತಿಗಳಂತೆ ಪ್ರಬಲವಾಗಿರುವುದಿಲ್ಲವೆಂಬುದು ಗಮನಾರ್ಹವಿಷಯ. ಆದ್ದರಿಂದ ಅನ್ಯತ್ರೈವಪ್ರಸಿದ್ಧಿಯಿಂದ ಸಾಂಕರ್ಯ ಬರುವುದಿಲ್ಲ. ಶ್ರುತ್ಯಂತರ ಸಾಧಾರಣ್ಯದಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳದ ಕಾರಣ ಉಭಯತ್ರಪ್ರಸಿದ್ಧಿಯಿಂದಲೂ ಸಾಂಕರ್ಯ ಬರುವುದಿಲ್ಲ.

''ಬಲವತ್‌ಶ್ರುತಿಲಿಂಗಾದ್ಯೈರನ್ಯೇಷ್ವೇವ ಪ್ರಸಿದ್ಧತಾ'' ಎಂದು ಅನ್ಯತ್ರೈವಪ್ರಸಿದ್ಧಿಯ ಹೇತುಮುಖ ಲಕ್ಷಣವನ್ನು ಲಕ್ಷ್ಯದಲ್ಲಿ ತೋರಿಸುವ ಬಗೆ ಹೀಗೆ - 'ಅವ್ಯಕ್ತಾತ್ ಪುರುಷಃ ಪರಃ' 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯಗಳು ಪ್ರಬಲವಾಗಿವೆ. ಶ್ರುತಿಗಳು ಪ್ರಬಲವಾದ್ದರಿಂದ ಅವ್ಯಕ್ತಾದಿಶಬ್ದಗಳು ಅನ್ಯತ್ರೈವಪ್ರಸಿದ್ಧಗಳೆನಿಸುತ್ತವೆ. ಇವುಗಳನ್ನು ಪರಮಮುಖ್ಯವೃತ್ತಿಯಿಂದ ವಿಷ್ಣುಪರವಾಗುತ್ತವೆಂದು ಸಮನ್ವಯ ಮಾಡಿದರೂ ಅಪರಮಮುಖ್ಯವೃತ್ತಿಯಿಂದ ಅನ್ಯಪರತ್ವವನ್ನು ಅಂಗೀಕರಿಸಲೇಬೇಕು.



## ಅನ್ಯತ್ರೈವಪ್ರಸಿದ್ಧಿಯ ಲಕ್ಷಣದಲ್ಲಿ ಬಲವತ್ ಪದಕ್ಕೆ ಎರಡು ಅರ್ಥ

**तात्पर्यचन्द्रिका—**

**टीकायां ''असद्वा इदमग्र आसीत्'' इत्यस्यापरममुख्यवृत्त्याऽप्यन्य-परत्वरहितस्योदाहरणं तु क्वचिच्छ्रुतावसच्छब्दस्य शून्ये मुख्यत्वे ब्रह्मणि चामुख्यत्वे ''असद्वा इदमग्रे'' इत्यत्रापि मुख्यार्थत्वाय शून्यमेव गृह्येत इति दर्शयितुम् ।**

**अथवा ब्रह्मपरत्वे बहुविप्लवापत्तिरूपतर्कानुगृहीतत्वं बलवत्त्वम् । बहुविप्लवा-पत्तिश्च चतुर्थपादीयाधिकरणेषु तत्र तत्र टीकायां वक्ष्यते ।**

**'श्रुत्यादिभिरन्यत्रैवप्रसिद्धानां' इति चतुर्थपादीयभाष्ये तु ब्रह्मणि वृत्तेरत्यन्ता सम्भावितत्वरूपस्योक्तद्विविधबलवत्त्वकार्यस्यावधारणेन विवक्षिततयाऽतिव्याप्ते-रभावेन तत्परिहारार्थं बलवत्पदं न प्रयुक्तम् ।**

**चतुर्थपादीयटीकायां तु भाष्योक्तावधारणनिर्वाहकेन बलवत्त्वेनैवातिव्याप्तिः परिहृतेति दिक् ॥**

ಪರಿಪೂರ್ಣಚಂದ್ರಿಕಾ

ಅನುವಾದ - ಹಾಗಾದರೆ ಟೀಕೆಯಲ್ಲಿ ಅಪರಮಮುಖ್ಯವೃತ್ತಿಯಿಂದ ಅನ್ಯಪರವಾಗದ 'ಅಸದ್ವಾ ಇದಮಗ್ರ ಆಸೀತ್' ಎಂಬ ವಾಕ್ಯವನ್ನು ಉದಾಹರಿಸಿದ್ದಾರಲ್ಲ? ಎಂದರೆ ಸಿದ್ಧಾಂತದಲ್ಲಿ ಯುಕ್ತಿಸೂಚಿಸುವುದಕ್ಕಾಗಿ ಹೀಗೆ ಹೇಳಿದ್ದಾರೆ. ಒಂದು ವೇಳೆ ಯಾವುದಾದರೂ ಶ್ರುತಿಯಲ್ಲಿ ಅಸತ್ ಶಬ್ದವು ಬ್ರಹ್ಮನಲ್ಲಿ ಮುಖ್ಯವಾಗದೆ ಶೂನ್ಯದಲ್ಲಿ ಮುಖ್ಯವಾಗುವುದಾದರೆ 'ಅಸದ್ವಾ ಇದಮಗ್ರ ಆಸೀತ್' ಎಂಬಲ್ಲಿಯೂ ಮುಖ್ಯಾರ್ಥವಾದ ಶೂನ್ಯವನ್ನೇ ಸ್ವೀಕರಿಸಬೇಕಾಗುತ್ತದೆ. ಶೂನ್ಯದಿಂದ ಜಗತ್ತು ಹುಟ್ಟುವುದು ಅಸಂಭಾವಿತವಾದ್ದರಿಂದ ಶೂನ್ಯವೆಂಬ ಅರ್ಥವನ್ನು ಇಟ್ಟುಕೊಳ್ಳಬಾರದು. ಈ ಯುಕ್ತಿಯನ್ನು ಸೂಚಿಸುವುದಕ್ಕಾಗಿ 'ಅಸದ್ವಾ ಇದಮಗ್ರ' ಎಂಬ ವಾಕ್ಯವನ್ನು ಉದಾಹರಿಸಿದ್ದಾರೆ.

ಅಥವಾ 'ಅಸದ್ವಾ ಇದಮಗ್ರ' ಎಂಬುದನ್ನು ವಿಷಯವಾಕ್ಯವನ್ನಾಗಿಯೂ ಹೇಳಬಹುದು. ಅದು ಹೀಗೆ - ಬಲವತ್ ಆಗಿರುವ ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ನಾಲ್ಕನೆಯ ಪಾದದಲ್ಲಿ ಸಮನ್ವಯ ಮಾಡಲಾಗಿದೆ - ಇಲ್ಲಿ ಬಲವತ್ ಎಂದರೆ ಬ್ರಹ್ಮಪರವಾದರೆ ಬಹುವಿಪ್ಲವಾಪತ್ತಿಯೆಂಬ ತರ್ಕದಿಂದ ಅನುಗ್ರಹವಾಗುವಿಕೆ ಎಂದು. ಈ ಬಹುವಿಪ್ಲವವನ್ನು ಚತುರ್ಥಪಾದದ ಅಧಿಕರಣಗಳ ಟೀಕೆಯಲ್ಲಿ ವಿವರಿಸುವವರಿದ್ದಾರೆ. ಹಾಗಾದರೆ ಆಚಾರ್ಯರು ಚತುರ್ಥಪಾದದ ಭಾಷ್ಯದಲ್ಲಿ 'ಶ್ರುತ್ಯಾದಿಭಿರನ್ಯತ್ರೈವ ಪ್ರಸಿದ್ಧಾನಾಮ್' ಎಂದು ಹೇಗೆ ಹೇಳಿದರು? 'ಬಲವತ್ ಶ್ರುತ್ಯಾದಿಭಿಃ' ಎಂದು ಹೇಳಬೇಕಿತ್ತಲ್ಲವೇ? ಎಂದರೆ 'ಬಲವತ್' ಎಂಬ ಪದವನ್ನು ಪ್ರಯೋಗಿಸದಿದ್ದರೂ 'ಏವ' ಕಾರವನ್ನು ಪ್ರಯೋಗಿಸಿದ್ದಾರೆ. ಶ್ರುತಿಲಿಂಗಾದಿಗಳು 'ಬಲವತ್' ಆದರೆ ಅನ್ಯತ್ರೈವಪ್ರಸಿದ್ಧವಾಗುತ್ತವೆ. ಅಥವಾ ಬ್ರಹ್ಮನಲ್ಲಿ ಅತ್ಯಂತ ಅಸಂಭಾವಿತಗಳಾಗುತ್ತವೆ. ಹೀಗೆ ಇಲ್ಲಿ 'ಬಲವತ್' ಎಂಬುದರ ಕಾರ್ಯವನ್ನೇ ಆಚಾರ್ಯರು ಹೇಳಿದ್ದಾರೆ. ಹೀಗೆ ಏವಕಾರವನ್ನು ಪ್ರಯೋಗಿಸಿದ್ದರಿಂದ ಉಭಯತ್ರಪ್ರಸಿದ್ಧಿಯಲ್ಲಿ ಮತ್ತು ಅನ್ಯತ್ರಪ್ರಸಿದ್ಧಿಯಲ್ಲಿ ಅತಿವ್ಯಾಪ್ತಿದೋಷ ಬರುವುದಿಲ್ಲ. ಈ ಅತಿವ್ಯಾಪ್ತಿಯ ಪರಿಹಾರಕ್ಕಾಗಿಯೇ ಆಚಾರ್ಯರು ಬಲವತ್‌ಪದವನ್ನು ಪ್ರಯೋಗಿಸಿಲ್ಲ. ಚತುರ್ಥಪಾದದ ಟೀಕೆಯಲ್ಲಾದರೂ ಭಾಷ್ಯದಲ್ಲಿರುವ ಅವಧಾರಣವನ್ನೇ ವ್ಯಾಖ್ಯಾನಿಸಿದ್ದಾರೆ. ಅವಧಾರಣದಿಂದ ತಿಳಿಯುವ ಬಲವತ್ವದಿಂದಲೇ ಅತಿವ್ಯಾಪ್ತಿಯನ್ನು ಪರಿಹರಿಸಿದ್ದಾರೆ.

ಇಲ್ಲಿಯ ತನಕ ಹೇಳಿದ ವಿಚಾರಗಳು ಕೇವಲ ದಿಕ್‌ಪ್ರದರ್ಶನ.

**प्रकाशः** – ननु युक्तिपादे ''असदिति चेन्न प्रतिषेधमात्रत्वात्'' इत्यत्र ''असद्वै'' इत्यस्यान्यपरत्वमुपेत्य पूर्वपक्षकरणात्कथं 'अन्यपरत्वरहितस्य' इत्युक्तिः । वक्ष्यते च तत्र ''श्रुत्युपसर्जनप्रागभावकर्तृकत्वसाधक'' इत्यादि ।

न चान्यपरत्वं नाम न यत्किञ्चिदर्थान्तरपरत्वम्, । किन्तु पूर्वपक्ष्यभिमतार्थान्तरपरत्वम्, तथैव प्रक्रमात् । तथा च ''असद्वै'' इत्यादिवाक्यस्य

प्रागभावपरत्वमुपेत्यैव तत्र पूर्वपक्षः, न तु ''एतेन'' इत्यत्र पूर्वपक्ष्यभिमत-तुच्छपरत्वमुपेत्य अतो न दोष इति वाच्यं, ''एतेन'' इत्यत्राप्यसच्छब्दस्या-भावार्थत्वेनापि पूर्वपक्षसम्भवात् । अतएव टीकायां ''तेषां निषेधमुखवेद्यवस्तु-वाचित्वात्'' इति साधारणो हेतुरुक्तः । ''स्वरूपशून्यस्य'' इत्यग्रिमटीकावाक्यं तु तुच्छे विशेषयुक्त्युक्तिपरत्वेनोपपद्यते । अभावो निर्धर्म इति पक्षे धर्मशून्यस्येत्यर्थ-परत्वेनाप्युपपद्यते । अन्यथा तत्र भाष्ये ''नैष भावयितुं योग्यः'' इत्यादिनाऽ-भावशब्दनिर्वचनेन तत्र पूर्वपक्षेऽभावशब्दस्य प्रसिद्धाभावार्थत्वमुपेत्य तादृशाभाव-पदोपेतश्रुतेरुदाहर्तव्यत्वेन तत्साधारण्यं न स्यात् । न चायमस्ति नियमः, यत्पूर्वपक्ष्यभिप्रेतार्थान्तरपरत्वमेवेति, नियामकाभावात् ।

किञ्च ''असम्भवस्तु सतोऽनुपपत्तेः'' इत्यत्र ''असद्वै'' इत्यादेरसत्परत्वमुपेत्यैव पूर्वपक्षो भाष्यादौ स्पष्टः । तथा च ''असद्वै'' इत्यादेरपरममुख्यवृत्त्याऽप्यन्य-परत्वाभावे तत्रोभयत्र पूर्वपक्षोदयो न स्यात् । वक्ष्यते चैतद्भाष्यकृतैव ''सर्वशब्दानां ब्रह्मणि समन्वयेऽपि ''तदधीनत्वादर्थवत्'' इत्यादिनाऽमुख्यत्वेनान्यस्यापि वाच्यत्वेनाङ्गीकारादसतः प्राप्तिरिति'' इति । एवं च ''सैषा प्रकृतिः'' इत्यादे-रिवास्यापि वाक्यस्यान्यत्र पूर्वपक्षेऽन्यप्रापकत्वेनोदाहरणादन्यपरत्वमभ्युपेयमिति चेन्मैवम्, ''सैषा प्रकृतिः'' इत्यस्येव ''असद्वै'' इत्यादेर्वाक्यस्य सिद्धान्तेऽन्यपरत्वेन क्वाप्यनुदाहरणात् । आनुमानिकपादे सुधायां –

तथाऽप्येतद्विरोधे तु तद्वाचित्वमपोद्यते ।।

इत्यनुव्याख्यानव्याख्यावसरे ''यदि सर्वशब्दानामुभयार्थत्वं तर्हि ''विश्वस्मादिन्द्र उत्तरः'' ''असदेवेदमग्र आसीत्'' इत्यादौ कथम् । उभयोस्सर्वोत्तमत्वादे-र्विरुद्धत्वात्'' इत्यादिना भगवन्मात्रपरत्वस्य स्पष्टमभिधानाच्च ।

न च तत्र ''असदेव'' इति सावधारणस्य तथात्वमुक्तं, न तु ''असद्वै'' इत्यस्येति वाच्यं, अस्यापि तत्तुल्यार्थत्वात् । ''असदेव'' इत्यस्यैव ''असदिति चेत्'' इत्यत्र भाष्याद्युदाहृतत्वेन ''एतेन'' इत्यत्र तस्याप्युदाहरणत्वेनोप-लभ्यत्वात् ।

ಪರಿಪೂರ್ಣಚಂದ್ರಿಕಾ

कथं तर्हि पूर्वपक्षे वाऽन्यपरत्वेनोदाहरणं, भाष्ये चान्यवाचित्वोक्तिरिति चेत्, उच्यते – सर्वशब्दानां चतुर्थपादोक्तन्यायैरुभयार्थत्वमित्येतदुत्सर्गतः, बाधके सति क्वचिद्भगवन्मात्र-परत्वमुपेयते बादरायणीयैरित्येतदजानानः "असद्वै" इत्यादावन्यार्थत्वं मन्वानः पूर्वपक्षं करोतीत्येतावता नान्यपरत्वसिद्धिः । भाष्यं चैतदभिप्रायम् ।

न चैवं पूर्वपक्षो भ्रान्तिमूलः स्यादिति चेत्, सर्वत्र तस्य तथात्वेन इष्टत्वात् । यथा "तद्धैक आहुरसदेवेदमग्र आसीत्" इति श्रुतिः "असद्वै" इत्यादिश्रुतितात्पर्यापरिज्ञानप्राप्तमनूद्य निषेधति, तथा सूत्रकारोऽपि स्वोक्तापरिज्ञानप्राप्तं निषेधतीत्युपपत्तेः ।

नचैवमपि "असदिति चेत्" इत्यत्रान्यपरत्वे निरस्ते पुनस्तद्भ्रान्त्या "असम्भवस्तु" इत्यत्र पूर्वपक्षो न युक्त इति वाच्यम्, अभावपक्ष एव बाधकोक्त्याऽभावपरत्वस्य निरासेऽपि तदन्यपरत्वभ्रान्तेरनिरासात् ।

न च "असद्वै" इत्यादेरनुव्याख्यानाद्युक्तदिशाऽन्यपरत्वं नेत्युक्त्यैव भ्रान्तिनिरासादधिकरणानारम्भः स्यादिति वाच्यं, अन्यपरत्वनिरासकाधिकरणारम्भादेवास्यार्थस्य निरासादिति ।

टीकास्वारस्यमनुरुध्याह – **अथवेति** ।। **वक्ष्यत इति** ।। तारतम्यकर्मक्रमाद्याकाशाद्युत्पत्तिपरिलोपाद्यापत्तिर्वक्ष्यत इत्यर्थः। तथा च ब्रह्मणो निषेधमुखवेद्यासत्पदवाच्यत्वे भावत्वभङ्ग इत्यादितर्कानुगृहीतत्वाद्युक्तं टीकोक्तमुदाहरणमन्त्याधिकरण इति भावः ।। श्रुत्यादिभिरिति ।। "श्रुतिलिङ्गादिभिः" इति भाष्यस्यार्थतोऽनुवादः ।। उक्तेति ।। अपरममुख्यवृत्त्याऽन्यपरत्वं विनाऽनुपपद्यमानत्वं बहुविप्लवापत्तिरूपतर्कानुगृहीतत्वं चेत्युक्तद्विविधेत्यर्थः । 'अवधारणेन' "अन्यत्रैव" इत्येवकारेण ।। अतिव्याप्तेरिति ।। उभयत्रप्रसिद्धादाविति भावः ।। चतुर्थेति ।। तथा च टीकोक्तं बलवत्त्वं भाष्यमूलकमेवेति भावः ।

ननु यद्यन्यत्रप्रसिद्धश्रुतिलिङ्गादिसाहचर्येणान्यत्रप्रसिद्धता, तर्हि द्युभ्वाद्यायतनत्वमप्यन्यत्रप्रसिद्धजायमानत्वसाहचर्यादन्यत्रप्रसिद्धं स्यात् ।

न च लिङ्गपादन्यायेन जायमानत्वं विष्णौ प्रसिद्धं नान्यत्रेति वाच्यं, तथात्वे आदित्यश्रुतेर्नामपादन्यायैर्विष्णौ प्रसिद्धत्वेन अन्यत्रप्रसिद्ध्यभावात् तत्साहचर्येण सर्वगतत्वस्यान्यत्रप्रसिद्ध्युक्तिर्न स्यात् ।

किञ्चैवमादित्यश्रुतेः लोकतोऽन्यत्र पूर्वन्यायेन विष्णौ च प्रसिद्ध्या तार्तीयाकाशशब्दस्येवोभयत्रप्रसिद्ध्यापत्त्या तत्साहचर्येण सर्वगतत्वमुभयत्रप्रसिद्धं स्यात् ।

अपि च वज्रशब्दस्य लोकतोऽन्यत्रप्रसिद्धत्वेन इन्द्रादिनाम्न इवान्यत्रप्रसिद्धत्वापत्त्या उभयत्रप्रसिद्धशब्दसमन्वयपर''कम्पनात्'' इत्यधिकरणोदाहरणे वज्रशब्देऽन्यत्रप्रसिद्धलक्षणस्यातिव्याप्तिश्चेत्यादि हृदि निधायाह – **दिगिति** ।।

अयं भावः – समाख्याश्रुत्यादितौल्याभावोऽप्यन्यत्रप्रसिद्धलक्षणे विशेषणम् । अतो द्युभ्वाद्यायतनत्वे तत्तौल्योपेते नातिव्याप्तिः । उभयत्रप्रसिद्धसाहचर्यस्योभयत्रप्रसिद्धलक्षणान्तभावेण सर्वगतत्वस्योभयत्रप्रसिद्धत्वप्रसक्त्यभावात् । संवत्सरसारत्वादिलिङ्गेनादित्यश्रुतेरन्यत्रप्रसिद्धेर्वक्ष्यमाणत्वाच्च । वज्रशब्दस्य प्राणशब्दसाहित्येनोभयत्रप्रसिद्धिरित्यादिपरिहारस्य वक्ष्यमाणत्वाच्चेति ।

**गुरुराजीयम्** – द्वितीये त्वन्यथासिद्धमित्याह – **टीकायामिति** ।। नन्वेतेन सर्व इत्यत्रापरमुख्यवृत्त्यान्यपरासदादिशब्दयुक्तवाक्यमेवोदाहार्यमित्युक्तम् । तदयुक्तम् । तादृशवाक्यस्यानुपलभ्यमानत्वात् । तथा चैतादृशबलवत्त्वमित्ययुक्तमित्यस्वरसादाह – **अथवेति** ।। नन्वन्यत्रैवप्रसिद्धानां ब्रह्मपरत्वे कथं बहुविप्लवापत्तिरित्यत आह – **बहुविप्लवापत्तिरिति** ।। ननु बलवत् श्रुतिलिङ्गादिभिरन्यत्रप्रसिद्धा अन्यत्रैवप्रसिद्धाश्चेत् श्रुतिलिङ्गादिभिरिति भाष्येऽपि तर्हि बलवत्पदं प्रयोक्तव्यम् । अवधारणेन लब्धत्वात्तत्रानुक्तिश्चेत्तर्हि टीकायामपि पृथक् न वाच्यमित्यत आह – **श्रुत्यादिभिरिति** ।। तथा चातिव्याप्तिपरिहारार्थं वक्तव्यस्य तस्यावधारणेनैव कृतकार्यत्वान्न प्रयोग इति भावः । ननु तर्हि टीकायामवधारणपदाप्रयोगादतिव्याप्तिपरिहारो न स्यादित्यत आह – **चतुर्थपादीयेति** ।।

ವಿವರಣೆ - ಸಮಗ್ರ, ನಾಲ್ಕನೆಯ ಪಾದದಲ್ಲಿ ಯಾವುದೇ ವಿಷಯವಾಕ್ಯಗಳಿದ್ದರೂ, ಆ ವಿಷಯವಾಕ್ಯಗಳು ಮತ್ತು ವಿಷಯವಾಕ್ಯಗಳಲ್ಲಿರುವ ಪದಗಳು ಪರಮಮುಖ್ಯವೃತ್ತಿಯಿಂದ ಬ್ರಹ್ಮನನ್ನು ಪ್ರತಿಪಾದಿಸುತ್ತವೆ. ಆದರೂ ಸಹ ಅಪರಮಮುಖ್ಯವೃತ್ತಿಯಿಂದ ಅನ್ಯಪದಾರ್ಥಗಳನ್ನು ಪ್ರತಿಪಾದಿಸುತ್ತವೆಂದು

ಅಂಗೀಕರಿಸಲೇಬೇಕು. ಆದ್ದರಿಂದಲೇ 'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಕೊನೆಯ ಅಧಿಕರಣದಲ್ಲಿಯೂ ಪರಮಮುಖ್ಯವೃತ್ತಿಯಿಂದ ಭಗವತ್‌ಪರವಾಗಿ ಅಪರಮಮುಖ್ಯವೃತ್ತಿಯಿಂದ ಅನ್ಯಪರವಾಗುವ ವಾಕ್ಯಗಳನ್ನೇ ವಿಷಯವಾಕ್ಯಗಳನ್ನಾಗಿ ಹೇಳಬೇಕು. ಕೇವಲ ಬ್ರಹ್ಮಪರವಾಗುವ ವಾಕ್ಯಗಳನ್ನು ವಿಷಯವಾಕ್ಯಗಳನ್ನಾಗಿ ಹೇಳಬಾರದೆಂದು ಇಲ್ಲಿಯ ತನಕ ಸಮರ್ಥಿಸಿದ್ದಾಯಿತು.

ಈಗ 'ಅಸದ್ವಾ ಇದಮಗ್ರ' ಎಂಬ ಶ್ರುತಿಯನ್ನು ಉದಾಹರಿಸಿದ್ದೇಕೆ? ಎಂಬುದಕ್ಕೆ 'ಟೀಕಾಯಾಮ್' ಇತ್ಯಾದಿವಾಕ್ಯದಿಂದ ಉತ್ತರಿಸುತ್ತಿದ್ದಾರೆ. ವಸ್ತುತಃ ಅಪರಮಮುಖ್ಯವೃತ್ತಿಯಿಂದ ಅನ್ಯಪರವಾಗಿ ಪರಮ-ಮುಖ್ಯವೃತ್ತಿಯಿಂದ ವಿಷ್ಣುಪರವಾಗುವ ಶ್ರುತಿಗಳನ್ನಷ್ಟೇ ನಾಲ್ಕನೆಯ ಪಾದದಲ್ಲಿ ಉದಾಹರಿಸಬೇಕು. ಆದರೆ 'ಅಸದ್ವಾ' ಎಂಬ ವಾಕ್ಯವು ಅಪರಮಮುಖ್ಯವೃತ್ತಿಯಿಂದ ಅನ್ಯಪರವಾಗಿಲ್ಲವಲ್ಲ? ಎಂದರೆ ಸಿದ್ಧಾಂತದಲ್ಲಿ ಯುಕ್ತಿಸೂಚನೆಗಾಗಿ ಇದನ್ನು ಸ್ವೀಕರಿಸಿದ್ದಾರೆ.

ಆಕ್ಷೇಪ - 'ಅಸದ್ವಾ ಇದಮಗ್ರ ಆಸೀತ್' ಎಂಬ ವಾಕ್ಯವು ಅನ್ಯಪರವಲ್ಲವೆಂದದ್ದು ತಪ್ಪು. ಯುಕ್ತಿಪಾದದ 'ಅಸದಿತಿಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ಸೂತ್ರದಲ್ಲಿ 'ಅಸದ್ವಾ' ಇತ್ಯಾದಿ ಶ್ರುತಿಯನ್ನು ಅನ್ಯಪರವೆಂದು ಅಂಗೀಕರಿಸಿ ಪೂರ್ವಪಕ್ಷ ಮಾಡಿದ್ದಾರೆ. ಹೀಗಿರುವಾಗ ಅನ್ಯಪರವಲ್ಲವೆಂದದ್ದು ಹೇಗೆ ಸರಿ? ಅದೇ ಅಧಿಕರಣದಲ್ಲಿ ''ಶ್ರುತ್ಯುಪಸರ್ಜನಪ್ರಾಗಭಾವಕರ್ತತ್ವಸಾಧಕ'' ಇತ್ಯಾದಿಯಾಗಿ ಹೇಳಿದ್ದು ಈ ವಿಷಯದಲ್ಲಿ ಸಂವಾದಿಯಾಗಿದೆ.

ಅನ್ಯಪರವೆಂದರೆ ಯಾವುದೋ ಒಂದು ಅರ್ಥವನ್ನು ಹೇಳುವುದೆಂದು ಅರ್ಥವಲ್ಲ. ಕಿಂತು ಪೂರ್ವಪಕ್ಷಿಗೆ ಅಭಿಮತವಾದ ಅರ್ಥಾಂತರವನ್ನೇ ಹೇಳಬೇಕು. ಎಲ್ಲಾ ಅಧಿಕರಣಗಳಲ್ಲಿಯೂ ಹಾಗೆಯೇ ಪ್ರಸಕ್ತವಾಗಿದೆ. ಆದ್ದರಿಂದ 'ಅಸದ್ವಾ' ಇತ್ಯಾದಿವಾಕ್ಯದಲ್ಲಿಯೂ ಪ್ರಾಗಭಾವಪರತ್ವವನ್ನು ಅಂಗೀಕರಿಸಿಯೇ ಪೂರ್ವಪಕ್ಷ ಮಾಡಬೇಕು. ಹೊರತು 'ಏತೇನ' ಎಂಬಲ್ಲಿ ಪೂರ್ವಪಕ್ಷಿಗೆ ಅಭಿಮತವಾದ ಶೂನ್ಯಪರತ್ವವನ್ನು ಅಂಗೀಕರಿಸಿ ಪೂರ್ವಪಕ್ಷ ಮಾಡಬೇಕಾಗಿಲ್ಲವೆಂದು ಹೇಳಬಾರದು. 'ಏತೇನ' ಎಂಬಲ್ಲಿಯೂ 'ಅಸತ್' ಶಬ್ದಕ್ಕೆ ಅಭಾವವೆಂಬರ್ಥವನ್ನು ಅಂಗೀಕರಿಸಿಯೂ ಪೂರ್ವಪಕ್ಷ ಮಾಡಬಹುದು. ಆದ್ದರಿಂದಲೇ ಟೀಕೆಯಲ್ಲಿ 'ತೇಷಾಂ ನಿಷೇಧಮುಖವೇದ್ಯವಸ್ತುವಾಚಿತ್ವಾತ್' ಎಂದು ಹೇಳಿದ್ದು ಸಮಂಜಸವಾಗುತ್ತದೆ. ಏಕೆಂದರೆ ನಿಷೇಧಮುಖವೇದ್ಯವಸ್ತುವಾಚಿತ್ವವೆಂಬುದು ಅಸತ್‌ನಲ್ಲಿ ಮತ್ತು ಪ್ರಾಗಭಾವದಲ್ಲಿ ಸಾಧಾರಣವಾಗಿ ಇದೆ.

'ತೇಷಾಂನಿಷೇಧಮುಖವೇದ್ಯವಸ್ತುವಾಚಿತ್ವಾತ್' ಎಂಬ ಟೀಕಾವಾಕ್ಯವು ಸಮಂಜಸವಾಗಬಹುದು. ಆದರೆ 'ಸ್ವರೂಪಶೂನ್ಯಸ್ಯ' ಇತ್ಯಾದಿ ಅಗ್ರಿಮ ಟೀಕಾವಾಕ್ಯವನ್ನು ಹೇಗೆ ಕೂಡಿಸುವುದು? ಎಂದರೆ ತುಚ್ಛದಲ್ಲಿ ವಿಶೇಷಯುಕ್ತಿಯನ್ನು ಹೇಳುವುದಕ್ಕಾಗಿಯೆಂದು ಉಪಪಾದಿಸಬಹುದು. ಅಭಾವವು ನಿರ್ಧರ್ಮಿಕವೆಂದು ಹೇಳುವ ಪಕ್ಷದಲ್ಲಿ 'ಧರ್ಮಶೂನ್ಯವಾದ' ಎಂಬ ಅರ್ಥವನ್ನು ಒಪ್ಪಿಯೂ ಕೂಡಿಸಬಹುದು. ಇಲ್ಲದಿದ್ದರೆ ಭಾಷ್ಯದಲ್ಲಿ 'ನೈಷ ಭಾವಯಿತುಂ ಯೋಗ್ಯಃ' ಇತ್ಯಾದಿಯಾಗಿ ಅಭಾವಶಬ್ದವನ್ನೂ ನಿರ್ವಚನ ಮಾಡುತ್ತಾ ಪೂರ್ವಪಕ್ಷದಲ್ಲಿ ಅಭಾವಶಬ್ದಕ್ಕೆ ಪ್ರಸಿದ್ಧವಾದ 'ಅಭಾವ' ಎಂಬರ್ಥವನ್ನು ಅಂಗೀಕರಿಸಿ ಅಂತಹ ಅಭಾವಪದದಿಂದ ಕೂಡಿರುವ ಶ್ರುತಿಯನ್ನು ಉದಾಹರಿಸಬೇಕಾದ್ದರಿಂದ ಅದರ ಸಾಧಾರಣ್ಯವು ಬಾರದಿರಬೇಕಾದೀತು.

ಪ್ರಶ್ನೆ - 'ಅಸದ್ವಾ ಇದಮಗ್ರ ಆಸೀತ್' ಎಂಬ ವಾಕ್ಯವು ಪರಮಮುಖ್ಯವೃತ್ತಿಯಿಂದ ಅನ್ಯಪರವಲ್ಲ ಪರಮಾತ್ಮಪರವೆಂದು ಹೇಳಿದಿರಿ. ಆದರೆ ದ್ವಿತೀಯಾಧ್ಯಾಯದ ಅಸದಧಿಕರಣದಲ್ಲಿ ಈ ಶ್ರುತಿಯನ್ನು ಪ್ರಾಗಭಾವಪರವಾಗಿ 'ಅಸಂಭವಸ್ತು ಸತೋಽನುಪಪತ್ತೇಃ' ಎಂಬ ಸೂತ್ರದಲ್ಲಿ ಶೂನ್ಯಪರವಾಗಿ ಅರ್ಥೈಸಿದ್ದೀರಿ. ಹೀಗಿರುವಾಗ ಈಗ ಅನ್ಯಪರವಲ್ಲವೆಂದು ಹೇಗೆ ಹೇಳಿದಿರಿ?

ಒಂದು ವೇಳೆ 'ಅಸದ್ವಾ ಇದಮಗ್ರ' ಇತ್ಯಾದಿ ಶ್ರುತಿಯಲ್ಲಿ ಅಪರಮಮುಖ್ಯವೃತ್ತಿಯಿಂದ ಅನ್ಯಪರತ್ವವನ್ನು ಹೇಳದಿದ್ದರೆ 'ಅಸದಿತಿ ಚೇನ್ನ' ಇತ್ಯಾದಿ ಸೂತ್ರದಲ್ಲಾಗಲೀ 'ಅಸಂಭವಸ್ತು ಸತೋಽನುಪಪತ್ತೇಃ' ಎಂಬ ಸೂತ್ರದಲ್ಲಾಗಲೀ ಪೂರ್ವಪಕ್ಷವೇ ಹುಟ್ಟದಿರಬೇಕಾದೀತು. ಅಸದಾದಿಶಬ್ದಗಳು ಭಗವದನ್ಯಪರವೂ ಆಗಿರುತ್ತವೆಂಬುದು ಆಚಾರ್ಯರಿಗೂ ಸಮ್ಮತವಾಗಿದೆ. ಆದ್ದರಿಂದಲೇ 'ಸರ್ವಶಬ್ದಾನಾಂ ಬ್ರಹ್ಮಣಿ ಸಮನ್ವಯೇಪಿ ತದಧೀನತ್ವಾದರ್ಥವದಿತ್ಯಾದಿನಾ ಅಮುಖ್ಯತ್ವೇನಾನ್ಯಸ್ಯಾಪಿ ವಾಚ್ಯತ್ವೇನಾಂಗೀ-ಕಾರಾದಸತಃ ಪ್ರಾಪ್ತಿರಿತಿ' ಎಲ್ಲಾ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿದರೂ ತದಧೀನತ್ವನ್ಯಾಯದಂತೆ ಅಮುಖ್ಯವೃತ್ತಿಯಿಂದ ಅನ್ಯಪದಾರ್ಥವೂ ವಾಚ್ಯವಾಗಿರುತ್ತದೆ. ಆದ್ದರಿಂದ ಶೂನ್ಯವೂ ಅಸತ್ ಶಬ್ದದಿಂದ ವಾಚ್ಯವಾಗುತ್ತದೆಂದು ಭಾಷ್ಯದಲ್ಲಿ ಹೇಳಿದ್ದಾರೆ. ಆದ್ದರಿಂದ 'ಕಾಮಾದಿತರತ್ರ' ಇತ್ಯಾದಿ ಸೂತ್ರದ ಸಿದ್ಧಾಂತದಲ್ಲಿ ಪ್ರಕೃತಿಶಬ್ದಕ್ಕೆ ಲಕ್ಷ್ಮೀಪರವಾಗಿಯೇ ಅರ್ಥಮಾಡಲಾಗಿದೆ. ಅದರಂತೆ ಅಸತ್ ಶಬ್ದಕ್ಕೂ ಪೂರ್ವಪಕ್ಷದ ಸಂದರ್ಭದಲ್ಲಿ ಅನ್ಯಪರವಾಗಿ ಅರ್ಥೈಸಿದ್ದರಿಂದ ಅನ್ಯಪರತ್ವವನ್ನು ಒಪ್ಪಿಕೊಳ್ಳಬೇಕು.

ಉತ್ತರ - 'ಸೈಷಾ ಪ್ರಕೃತಿಃ' ಇತ್ಯಾದಿ ವಾಕ್ಯವನ್ನು ಸಿದ್ಧಾಂತದ ಸಂದರ್ಭದಲ್ಲಿಯೂ ಲಕ್ಷ್ಮೀಪರವಾಗಿಯೇ ಉದಾಹರಿಸಲಾಗಿದೆ. ಆದರಂತೆ 'ಅಸದ್ವಾ ಇದಮಗ್ರ' ಇತ್ಯಾದಿ ವಾಕ್ಯವನ್ನು ಎಲ್ಲಿಯೂ ಸಹ ಸಿದ್ಧಾಂತದ ಸಂದರ್ಭದಲ್ಲಿ ಅನ್ಯಪರವಾಗಿ ಉದಾಹರಿಸಿಲ್ಲ. ಪೂರ್ವಪಕ್ಷ ಮಾಡುವಾಗ ಶೂನ್ಯಪರವೆಂದಾಗಲೀ ಪ್ರಾಗಭಾವಪರವೆಂದಾಗಲೀ ಹೇಳಿರಬಹುದು. ಆದರೆ ಸಿದ್ಧಾಂತದಲ್ಲಿ ಹಾಗೆ ಹೇಳಿಲ್ಲ. ಅಷ್ಟೇ ಅಲ್ಲದೇ ಆನುಮಾನಿಕಾಧಿಕರಣದ ಸುಧೆಯಲ್ಲಿ 'ತಥಾಪ್ಯೇತದ್ವಿರೋಧೇ ತು ತದ್‌ವಾಚಿತ್ವಮಪೋದ್ಯತೇ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವಾಗ ಹೀಗೆ ಹೇಳಿದ್ದಾರೆ. ಒಂದು ವೇಳೆ ಪ್ರತಿಯೊಂದು ಶಬ್ದಗಳೂ ಸಹ ಭಗವತ್‌ಪರವಾಗುವುದಾದರೆ 'ವಿಶ್ವಸ್ಮಾದಿಂದ್ರ ಉತ್ತರಃ' ಎಂಬಲ್ಲಿ ಇಂದ್ರಶಬ್ದದಿಂದ ಶ್ರೀಹರಿಯು ಪ್ರತಿಪಾದ್ಯನಾದಂತೆ ಪುರಂದರನೂ ಪ್ರತಿಪಾದ್ಯನಾಗಿ ಇಬ್ಬರು ಸರ್ವೋತ್ತಮರಾಗಬೇಕಾದೀತು. ಅದರಂತೆ 'ಅಸದೇವೇದಮಗ್ರ ಆಸೀತ್' ಎಂಬಲ್ಲಿ ಅಸತ್‌ಶಬ್ದದಿಂದ ಭಗವಂತ ಪ್ರತಿಪಾದ್ಯನಾದಂತೆ ಶೂನ್ಯವೂ ಪ್ರತಿಪಾದ್ಯವಾದರೆ ಶೂನ್ಯ ಹಾಗು ಭಗವಂತ ಇಬ್ಬರೂ ಸೃಷ್ಟಿ ಕಾರಣರಾಗಬೇಕಾದೀತು. ಆದ್ದರಿಂದ 'ಇಂದ್ರ' 'ಅಸತ್' ಮೊದಲಾದ ಶಬ್ದಗಳಿಂದ ಇಂದ್ರ ಅಸದಾದಿಗಳು ಪ್ರತಿಪಾದ್ಯರಾಗುವುದಿಲ್ಲ. ಭಗವಂತನಷ್ಟೇ ಪ್ರತಿಪಾದ್ಯನಾಗುತ್ತಾನೆಂದು ಸ್ಪಷ್ಟವಾಗಿ ಹೇಳಿದ್ದಾರೆ.

ಪ್ರಶ್ನೆ - 'ಅಸದೇವ' ಎಂಬಲ್ಲಿ ಅವಧಾರಣಪೂರ್ವಕವಾಗಿ ಹೇಳಿರುವುದರಿಂದ ಇಬ್ಬರನ್ನು ಜಗತ್ಕಾರಣರೆಂದು ಹೇಳಲಾಗುವುದಿಲ್ಲ. ಆದರೆ 'ಅಸದ್ವಾ ಇದಮಗ್ರ' ಎಂಬಲ್ಲಿ ಹಾಗೆ ಅವಧಾರಣೆ ಇರುವುದಿಲ್ಲ. ಆದ್ದರಿಂದ 'ಅಸದ್ವಾ' ಎಂಬಲ್ಲಿ ಭಗವಂತನಂತೆ ಅಸತ್ ಕೂಡ ಪ್ರತಿಪಾದ್ಯವಾಗಲಿ?

ಉತ್ತರ - 'ಅಸದ್ವಾ' ಎಂಬಲ್ಲಿರುವ 'ವಾ' ಶಬ್ದಕ್ಕೆ 'ಏವ' ಎಂದೇ ಅರ್ಥ. ಆದ್ದರಿಂದ 'ಅಸದೇವ' ಎಂಬ ಶ್ರುತಿ ಸಮಾನವಾದ ಅರ್ಥವುಳ್ಳದ್ದೇ ಆಗಿದೆ. ಮತ್ತು 'ಅಸದಿತಿ ಚೇನ್ನ' ಎಂಬ ಸೂತ್ರದಲ್ಲಿ 'ಅಸದೇವ'

ಎಂಬ ಶ್ರುತಿಯನ್ನು ಭಾಷ್ಯಕಾರರು ಉದಾಹರಿಸಿದ್ದಾರೆ. ಆದರೆ 'ಏತೇನ' ಎಂಬಲ್ಲಿಯೂ ಆ ಶ್ರುತಿಯನ್ನು ಉದಾಹರಿಸಬೇಕಾಗುತ್ತದೆ.

ಪ್ರಶ್ನೆ - ಕಥಂಚಿದಪಿ ಶಬ್ದಗಳು ಬೇರೆ ಕಡೆ ಬರುವುದಿಲ್ಲವೆಂದರೆ ಪೂರ್ವಪಕ್ಷದಲ್ಲಿ ಆಚಾರ್ಯರು ಅನ್ಯಪರತ್ವೇನ ಹೇಗೆ ಉದಾಹರಿಸಿದರು?

ಉತ್ತರ - ಸಕಲಶಬ್ದಗಳು ಉಭಯಾರ್ಥಗಳನ್ನು ಹೊಂದಿವೆಯೆಂಬುದು ಚತುರ್ಥಪಾದದಲ್ಲಿ ಹೇಳಿದ ಪ್ರಮೇಯ. ಆದರೆ ಇದು ಸಾಪವಾದನಿಯಮ. ಬಾಧಕವಿದ್ದರೆ ಕೆಲವೆಡೆ ಭಗವನ್‌ಮಾತ್ರಪರತ್ವವನ್ನಷ್ಟೆ ಬಾದರಾಯಣೀಯರು ಹೇಳುತ್ತಾರೆ. ಈ ಪ್ರಮೇಯವನ್ನು ತಿಳಿಯದ ಪೂರ್ವಪಕ್ಷಿಯು 'ಅಸದ್ವಾ' ಎಂಬಲ್ಲಿಯೂ ಉಭಯಾರ್ಥವನ್ನು ಆಕ್ಷೇಪಿಸುತ್ತಿದ್ದಾನೆ. ಆದರೆ ಹೀಗೆ ಪೂರ್ವಪಕ್ಷ ಮಾಡಿದ ಮಾತ್ರದಿಂದ ಉಭಯಾರ್ಥತ್ವವು ಬರುವುದಿಲ್ಲ. ಭಾಷ್ಯಕಾರರ ಅಭಿಪ್ರಾಯವೂ ಇದೇ ಆಗಿದೆ.

ಪ್ರಶ್ನೆ - ಹಾಗಾದರೆ ಅಸದಾದಿ ಅಧಿಕರಣಗಳಲ್ಲಿ ಮಾಡಿದ ಪೂರ್ವಪಕ್ಷವು ಭ್ರಾಂತಿಮೂಲವಾಗಬೇಕಾದೀತು?

ಉತ್ತರ - ಪ್ರತಿಯೊಂದು ಅಧಿಕರಣಗಳ ಪೂರ್ವಪಕ್ಷವು ಭ್ರಾಂತಿಮೂಲಕವೇ ಆಗಿರುತ್ತದೆ; ಇದು ನಮಗೆ ಇಷ್ಟಾಪತ್ತಿ. ಉದಾಹರಣೆ - 'ಸದ್ಧ್ವೈಕೇ ಆಹುರಸದೇವೇದಮಗ್ರ ಆಸೀತ್' ಎಂಬ ಶ್ರುತಿಯು 'ಅಸದ್ವಾ ಇದಮಗ್ರ' ಎಂಬ ಶ್ರುತಿಯು ಭ್ರಾಂತಿಯಿಂದ ತಿಳಿಯುವ ಶೂನ್ಯವೆಂಬ ಅರ್ಥವನ್ನು ಅನುವಾದ ಮಾಡಿಕೊಂಡು ನಿಷೇಧ ಮಾಡುತ್ತಿದೆ. ಅದೇ ರೀತಿಯಾಗಿ ಸೂತ್ರಕಾರರ ನಿಜವಾದ ಪ್ರಮೇಯ ಸಮಾಕರ್ಷಾದ್ಯಧಿಕರಣದಲ್ಲಿ ಸಕಲಶಬ್ದಗಳು ಉಭಯಾರ್ಥವುಳ್ಳವುಗಳು ಬಾಧಕವಿದ್ದಾಗ ಭಗವನ್ ಮಾತ್ರಪರತ್ವವನ್ನು ಒಪ್ಪಬೇಕೆಂದು. ಈ ಪ್ರಮೇಯವನ್ನು ತಿಳಿಯದೆ ಎಲ್ಲೆಡೆಯೂ ಉಭಯಾರ್ಥವನ್ನೇ ಹೇಳಬೇಕೆಂದು ಯಾರು ಮಾತನಾಡುತ್ತಾನೋ, ಅವನ ಅಭಿಪ್ರಾಯವನ್ನು ಆಯಾ ಅಧಿಕರಣಗಳಲ್ಲಿ ಪೂರ್ವಪಕ್ಷರೂಪದಲ್ಲಿ ಅನುವಾದ ಮಾಡಿ ನಿರಾಸ ಮಾಡುವುದು ತಪ್ಪಲ್ಲ.

ಪ್ರಶ್ನೆ - ಹಾಗಾದರೆ ಅಸಂಭವಾಧಿಕರಣ ಹೊರಡಲು ಸಾಧ್ಯವಿಲ್ಲ. ಏಕೆಂದರೆ ಇದು ಮೂರನೆಯ ಪಾದ. ಅಸದಧಿಕರಣ ಪ್ರಥಮಪಾದ. ಈ ಅಸದಧಿಕರಣದಲ್ಲಿಯೇ 'ಅಸತ್' ಶಬ್ದಕ್ಕೆ ಅನ್ಯಪರತ್ವವನ್ನು ಆಕ್ಷೇಪಿಸಿ ನಿರಾಸ ಮಾಡಿದ್ದಾಗಿದೆ. ಪುನಃ ಅಸಂಭವಾಧಿಕರಣದಲ್ಲಿ ಅದೇ ಭ್ರಾಂತಿಯಿಂದ ಪೂರ್ವಪಕ್ಷ ಮಾಡಲು ಸಾಧ್ಯವಿಲ್ಲವಲ್ಲ?

ಉತ್ತರ - ಅಸದಧಿಕರಣದಲ್ಲಿ 'ಅಸತ್' ಶಬ್ದವನ್ನು ಪ್ರಾಗಭಾವಪರವಾಗಿ ಅರ್ಥೈಸಿ ಪೂರ್ವಪಕ್ಷ ಮಾಡಲಾಗಿತ್ತು. ಇದನ್ನು ನಿರಾಸ ಮಾಡಿದ ಮೇಲೆ, ಪುನಃ ಅಸತ್ ಶಬ್ದವು ಪ್ರಾಗಭಾವಪರವಾಗದಿದ್ದರೂ ಶೂನ್ಯಪರವಾಗಬಹುದಲ್ಲವೆ? ಎಂಬ ಶಂಕೆ ಬಂದೇ ಬರುತ್ತದೆ. ಇದನ್ನು ನಿರಾಸ ಮಾಡುವುದಕ್ಕಾಗಿ ಅಸಂಭವಾಧಿಕರಣ ಹೊರಡಲೇ ಬೇಕಾಗುತ್ತದೆ.

ಪ್ರಶ್ನೆ - ಅಸದಧಿಕರಣದಲ್ಲಿ ಅಸತ್ ಶಬ್ದಕ್ಕೆ ಪ್ರಾಗಭಾವಪರತ್ವವನ್ನು ನಿರಾಸ ಮಾಡಿದ್ದರೂ ಶೂನ್ಯಪರತ್ವವನ್ನು ನಿರಾಸ ಮಾಡಿಲ್ಲ. ಅದಕ್ಕಾಗಿ ಅಸಂಭವಾಧಿಕರಣ ಸಾರ್ಥಕವೆಂದು ಹೇಳುತ್ತಿದ್ದೀರಿ.

ಆದರೆ ಅಸದಧಿಕರಣದ ಅನುವ್ಯಾಖ್ಯಾನದಲ್ಲಿ ಅಸತ್ ಶಬ್ದವು ಅನ್ಯಪರವಲ್ಲವೆಂದು ಸಾಮಾನ್ಯವಾಗಿ ಹೇಳಿದ್ದಾರೆ. ಇದರಿಂದ ಶೂನ್ಯಪರವೂ ಆಗುವುದಿಲ್ಲವೆಂಬ ಭ್ರಾಂತಿಯೂ ನಿರಾಸವಾಗುತ್ತದೆ. ಹಾಗಾಗಿ ಅಸದಧಿಕರಣ ಮಾತ್ರ ಸಾಕು. ಅಸಂಭವಾಧಿಕರಣ ಬೇಕಾಗಿಲ್ಲವೆಂಬ ಆಕ್ಷೇಪವು ಹಾಗೆ ಉಳಿಯುತ್ತದೆ.

ಉತ್ತರ - ಅನುವ್ಯಾಖ್ಯಾನದಲ್ಲಿ ಅನ್ಯಪರವಲ್ಲವೆಂದು ಹೇಳಿರಬಹುದು. ಆದರೆ ಅಸಂಭವಾಧಿಕರಣ ಹೊರಟಿರುವುದರಿಂದಲೇ 'ಅನ್ಯಪರವಲ್ಲ'ವೆಂಬ ಮಾತಿಗೆ ಪ್ರಾಗಭಾವಪರವಲ್ಲವೆಂಬರ್ಥ ತಿಳಿಯುತ್ತದೆ. ಅಸದಧಿಕರಣದಲ್ಲಿ ಪ್ರಾಗಭಾವಪರತ್ವದ ಆಕ್ಷೇಪ ಬಂದಾಗ ಆಚಾರ್ಯರು ಅನ್ಯಪರವಲ್ಲವೆಂದು ಹೇಳಿದ್ದಾರೆ. ಆವಾಗ ಈ ಮಾತಿಗೆ ಪ್ರಾಗಭಾವಪರವಲ್ಲವೆಂದೇ ಅರ್ಥವಾಗುತ್ತದೆ. ಒಂದು ವೇಳೆ ಈ ಅರ್ಥವು ಆಚಾರ್ಯರಿಗೆ ಸಮ್ಮತವಾಗದಿದ್ದಲ್ಲಿ ಪುನಃ ಅಸಂಭವಾಧಿಕರಣಕ್ಕೆ ಶೂನ್ಯನಿರಾಸಪರವಾಗಿ ಏಕೆ ವ್ಯಾಖ್ಯಾನಿಸುತ್ತಿದ್ದರು? ಆದ್ದರಿಂದ ಅಸದಧಿಕರಣವೂ ಸಾರ್ಥಕ. ಅಸಂಭವಾಧಿಕರಣವೂ ಸಾರ್ಥಕವಾಗುತ್ತದೆ.

ಇಲ್ಲಿಯ ತನಕ ಹೇಳಿದ ವಿಷಯ ಇಷ್ಟು - ಪ್ರತಿಯೊಂದು ಅಧಿಕರಣಗಳಲ್ಲಿ ಉದಾಹರಿಸಿದ ವಿಷಯವಾಕ್ಯಗಳು ಪರಮಮುಖ್ಯವೃತ್ತಿಯಿಂದ ಹರಿಯನ್ನು ಅಪರಮಮುಖ್ಯವೃತ್ತಿಯಿಂದ ಅನ್ಯಪದಾರ್ಥವನ್ನು ಪ್ರತಿಪಾದಿಸುತ್ತವೆ. ಆದರೆ ಕೊನೆಯ 'ಏತೇನ ಸರ್ವೇ' ಇತ್ಯಾದಿ ಅಧಿಕರಣದಲ್ಲಿ ಮಾತ್ರ ಟೀಕಾರಾಯರು ಕೇವಲ ಪರಮಾತ್ಮಪರವಾದ ವಾಕ್ಯವನ್ನು ಉದಾಹರಿಸಿದ್ದಾರೆ. ಅನ್ಯಪರವಾಗದ 'ಅಸದ್ವಾ ಇದಮಗ್ರ' ಎಂಬ ವಾಕ್ಯವನ್ನು ಟೀಕೆಯಲ್ಲಿ ಉದಾಹರಿಸಬಾರದಿತ್ತು ಎಂಬ ಆಕ್ಷೇಪಕ್ಕೆ ಯುಕ್ತಿಸೂಚಿಸುವುದಕ್ಕಾಗಿ 'ಅಸದ್ವಾ ಇದಮಗ್ರ' ಎಂಬ ವಾಕ್ಯವನ್ನು ಉದಾಹರಿಸಿದ್ದಾರೆಂದು ಉತ್ತರ. ಅಂದರೆ ಕೊನೆಯ ಅಧಿಕರಣದಲ್ಲಿ ವಿಷಯವಾಕ್ಯಗಳು ಬೇರೆನೇ ಇವೆ. ಯಾವ ವಾಕ್ಯಗಳಲ್ಲಿ ಪ್ರಸಿದ್ಧಶೂನ್ಯಪರತ್ವವನ್ನು ಒಪ್ಪುತ್ತೇವೋ, ಅಂತಹ ವಾಕ್ಯಗಳನ್ನೇ ಉದಾಹರಿಸಬೇಕು. ಅಲ್ಲಿ ಪೂರ್ವಪಕ್ಷಿಯೂ ಶೂನ್ಯವನ್ನೇ ವಿವಕ್ಷಿಸಬೇಕೆಂದು ಆಕ್ಷೇಪಿಸಿದಾಗ ಪರಮಾತ್ಮನು ಶೂನ್ಯಕ್ಕೂ ನಿಯಾಮಕನಾಗಿದ್ದಾನೆ. ಆದ್ದರಿಂದ ಶೂನ್ಯವಾಚಕಶಬ್ದಗಳು ಪರಮಾತ್ಮನಲ್ಲೇ ಮುಖ್ಯವಾಗಿವೆ. ಶೂನ್ಯವನ್ನು ಅಮುಖ್ಯವಾಗಿ ಹೇಳುತ್ತವೆ. ಒಂದು ವೇಳೆ ಶೂನ್ಯವೇ ಮುಖ್ಯ. ಪರಮಾತ್ಮನು ಅಮುಖ್ಯವೆಂದು ಹೇಳಿದರೆ 'ಅಸದ್ವಾ ಇದಮಗ್ರ' ಇತ್ಯಾದಿ ಸ್ಥಳದಲ್ಲಿಯೂ ಮುಖ್ಯಾರ್ಥವನ್ನೇ ತೆಗೆದುಕೊಳ್ಳಬೇಕಾದೀತು. ಇದು ತಪ್ಪಾಗುತ್ತದೆಂಬ ಯುಕ್ತಿಯನ್ನು ಸೂಚನೆ ಮಾಡುವುದಕ್ಕಾಗಿ ಟೀಕಾರಾಯರು 'ಅಸದ್ವಾ' ಇತ್ಯಾದಿ ವಾಕ್ಯವನ್ನು ಉದಾಹರಿಸಿದ್ದಾರೆ. ಹೊರತು ವಿಷಯವಾಕ್ಯವನ್ನಾಗಿ ಉದಾಹರಿಸಿಲ್ಲ. ಆದರೆ ಈ ಪಕ್ಷದಲ್ಲಿ ಟೀಕೆಗೆ ಸ್ವಾರಸ್ಯಾರ್ಥ ಹೇಳಿದಂತಾಗುವುದಿಲ್ಲ. 'ಅಸದ್ವಾ' ಇತ್ಯಾದಿ ವಾಕ್ಯವನ್ನು ವಿಷಯವಾಕ್ಯವನ್ನಾಗಿಯೇ ವಿವಕ್ಷಿಸಬಹುದೆಂದು ಪಕ್ಷಾಂತರವನ್ನು 'ಅಥವಾ' ಇತ್ಯಾದಿಯಾಗಿ ವಿವರಿಸುತ್ತಿದ್ದಾರೆ.

ಲೋಕತಃ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಪ್ರಥಮಪಾದದಲ್ಲಿ, ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ದ್ವಿತೀಯಪಾದದಲ್ಲಿ, ಉಭಯತ್ರಪ್ರಸಿದ್ಧವಾದ ಶಬ್ದಗಳನ್ನು ಮೂರನೆಯ ಪಾದದಲ್ಲಿ ಬಲಿಷ್ಠವಾದ ಶ್ರುತ್ಯಾದಿಗಳಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ನಾಲ್ಕನೆಯ ಪಾದದಲ್ಲಿ ಸಮನ್ವಯ ಮಾಡಲಾಗಿದೆ. ಇಲ್ಲಿ ಬಲವತ್ವ ಎಂದರೆ 'ಭಗವತ್ಪರತ್ವವನ್ನು ಅಂಗೀಕರಿಸಿದರೂ ಅಪರಮಮುಖ್ಯವೃತ್ತಿಯಿಂದ ಅನ್ಯಪರತ್ವವನ್ನು ಒಪ್ಪದೆ ಕೊಡುವುದಿಲ್ಲ' ಎಂದು. ಅಂದರೆ ಶ್ರುತಿಲಿಂಗಗಳು ಭಗವಂತನನ್ನು ಪ್ರತಿಪಾದಿಸಿದರೂ ಅಪರಮಮುಖ್ಯವೃತ್ತಿಯಿಂದ ಅನ್ಯಪರವೂ ಆಗಬೇಕೆಂದು. ಹೀಗೆ

ಹೇಳಿದರೆ 'ಅಸದ್ವಾ ಇದಮಗ್ರ' ಎಂಬ ವಿಷಯವಾಕ್ಯದಲ್ಲಿ ಅವ್ಯಾಪ್ತಿ ಬರುತ್ತದೆ. ಇದು ಅಪರಮ-ಮುಖ್ಯವೃತ್ತಿಯಿಂದಲೂ ಅನ್ಯಪರವಾಗಿಲ್ಲ.

ಆದ್ದರಿಂದ ಬಲವತ್ವ ಎಂದರೆ ಹೀಗರ್ಥ ಹೇಳಬೇಕು - 'ಬ್ರಹ್ಮಪರತ್ವೇ ಬಹುವಿಪ್ಲವಾಪತ್ತಿರೂಪತರ್ಕಾನುಗೃಹೀತತ್ವಮ್' ಎಂದು. ಒಂದು ವೇಳೆ ವಾಕ್ಯವು ಬ್ರಹ್ಮಪರವಾದರೆ ಅನೇಕ ಸಮಸ್ಯೆಗಳು ಬರುತ್ತವೆ. ಉದಾಹರಣೆ - 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಅವ್ಯಕ್ತಶಬ್ದವು ಬ್ರಹ್ಮಪರವಾದರೆ ಪರಮಾತ್ಮನಿಗಿಂತ ಮತ್ತೊಬ್ಬ ಉತ್ತಮನಿದ್ದಾನೆಂದು ವಿಷ್ಣುಸರ್ವೋತ್ತಮತ್ವಕ್ಕೆ ಹಾನಿ ಬರುತ್ತದೆ. ಮತ್ತು 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬುದು ಪರಮಾತ್ಮಪರವಾದರೆ ಕರ್ಮಕ್ರಮಾದಿಗಳು ಲೋಪವಾಗಬೇಕಾಗುತ್ತವೆ. ಮತ್ತು 'ಆಕಾಶಃ ಸಂಭೂತಃ' ಎಂಬಲ್ಲಿ ಆಕಾಶಶಬ್ದ ವಾಚ್ಯವಾದವನು ಪರಮಾತ್ಮನಾದರೆ ಪರಮಾತ್ಮನಿಗೂ ಹುಟ್ಟುವಿಕೆ ಬರಬೇಕಾಗುತ್ತದೆ. ಹೀಗೆ ಬಹುವಿಪ್ಲವವೆಂಬ ದೋಷವನ್ನು ಚತುರ್ಥಪಾದದಲ್ಲಿ ಅನೇಕ ಕಡೆ ತೋರಿಸಲಾಗಿದೆ. ಇಲ್ಲಿಯೂ ಸಹ 'ಅಸದ್ವಾ ಇದಮಗ್ರ ಆಸೀತ್' ಎಂಬಲ್ಲಿ ಅಸತ್ ಶಬ್ದವು ನಿಷೇಧಮುಖವೇದ್ಯವಾದ ವಸ್ತುವನ್ನು ಹೇಳುತ್ತದೆ. ಇಂತಹ ಅಸತ್ ಶಬ್ದದಿಂದ ಭಗವಂತನು ವಾಚ್ಯನಾದರೆ ಭಾವತ್ವಕ್ಕೆ ಭಂಗ ಬರುತ್ತದೆ. ಹೀಗೆ ಬಹುವಿಪ್ಲವಾಪತ್ತಿಯೆಂಬ ತರ್ಕದ ಅನುಗ್ರಹವಿರುವುದರಿಂದ ಟೀಕೆಯಲ್ಲಿ 'ಅಸದ್ವಾ' ಎಂದು ಉದಾಹರಿಸಿದ್ದು ಯುಕ್ತವೇ ಆಗಿದೆ.

ಶಂಕೆ - ನಾಲ್ಕನೇ ಪಾದದ ಪ್ರಾರಂಭದಲ್ಲಿ 'ಶ್ರುತಿಲಿಂಗಾದಿಭಿಃ ಅನ್ಯತ್ರೈವಪ್ರಸಿದ್ಧಾನಾಮ್' ಎಂದು ಆಚಾರ್ಯರು ಹೇಳಿದ್ದಾರೆ. ಇದು ಎರಡನೆಯ ಪಾದದಲ್ಲೂ ಸಾಧಾರಣವಾಗಿದೆ. ಹಾಗಾಗಿ 'ಬಲವತ್' ಎಂದು ಹೇಳಬೇಕಿತ್ತಲ್ಲವೇ?

ಸಮಾಧಾನ - 'ಬಲವತ್' ಎಂದು ಹೇಳದಿದ್ದರೂ 'ಅನ್ಯತ್ರೈವ' ಎಂದು ಏವಕಾರವನ್ನು ಹೇಳಿದ್ದಾರೆ. ಶ್ರುತಿಲಿಂಗಾದಿಗಳು 'ಬಲವತ್' ಆದರೆ ಅನ್ಯತ್ರೈವಪ್ರಸಿದ್ಧವಾಗುತ್ತವೆ. ಮತ್ತು ಬ್ರಹ್ಮನಲ್ಲಿ ಅತ್ಯಂತ ಅಸಂಭಾವಿತಗಳಾಗುತ್ತವೆ. ಬಲಿಷ್ಠವಾದ ಶ್ರುತಿಲಿಂಗಗಳು ಇದ್ದರೆ ಅದರ ಕಾರ್ಯವಾದ ಸಮನ್ವೋತ್ಪನ್ನ ಶಬ್ದಗಳಲ್ಲಿ ಅವಧಾರಣ ಬರುತ್ತದೆ. ಆಚಾರ್ಯರು ಇಲ್ಲಿ 'ಬಲವತ್' ಎಂಬುದರ ಕಾರ್ಯವನ್ನು ಹೇಳಿದ್ದಾರೆ. ಹಾಗಾಗಿ 'ಬಲವತ್' ಎಂಬ ಪದವನ್ನು ಬಳಸುವ ಅವಶ್ಯಕತೆ ಇಲ್ಲ. ಹೀಗೆ 'ಏವ'ಕಾರ ಹೇಳಿದ್ದರಿಂದ ಉಭಯತ್ರಪ್ರಸಿದ್ಧಿಯಲ್ಲಿ ಮತ್ತು ಅನ್ಯತ್ರಪ್ರಸಿದ್ಧಿಯಲ್ಲಿ ಅತಿವ್ಯಾಪ್ತಿದೋಷ ಬರುವುದಿಲ್ಲ. ಟೀಕೆಯಲ್ಲಿ ಹೇಳಿರುವ ಬಲವತ್ವವೂ ಸಹ ಭಾಷ್ಯಮೂಲವೇ ಆಗಿದೆಯೆಂದು ಇದರಿಂದ ಸ್ಪಷ್ಟವಾಯಿತು.

ಶಂಕೆ - ಪ್ರಥಮ ಹಾಗು ದ್ವಿತೀಯಪಾದಗಳಲ್ಲಿ ಅನ್ಯತ್ರಪ್ರಸಿದ್ಧವಾದ ಶ್ರುತಿಲಿಂಗಾದಿಸಾಹಚರ್ಯದಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳುತ್ತಿದ್ದೀರಿ; ಹಾಗಾದರೆ ದ್ಯುಭ್ವಾದ್ಯಾಯತನತ್ವವೂ ಸಹ ಅನ್ಯತ್ರಪ್ರಸಿದ್ಧವಾದ ಜಾಯಮಾನತ್ವ ಲಿಂಗದಿಂದ ಸಹಚರಿತವಾಗಿದೆ. ಆದ್ದರಿಂದ ದ್ಯುಭ್ವಾದ್ಯಾಯತನತ್ವವು ಅನ್ಯತ್ರಪ್ರಸಿದ್ಧವಾಗಲಿ? ಎರಡನೆಯ ಲಿಂಗಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಸಕಲಲಿಂಗಗಳನ್ನು ದೇವರಲ್ಲಿ ಸಮನ್ವಯ ಮಾಡಿದ ಮೇಲೆ ಜಾಯಮಾನತ್ವಲಿಂಗವನ್ನೂ ಸಮನ್ವಯ ಮಾಡಿದಂತಾಯಿತು. ಪುನಃ ಈ ಜಾಯಮಾನತ್ವ-ಲಿಂಗವನ್ನಿಟ್ಟುಕೊಂಡು ದ್ಯುಭ್ವಾದ್ಯಾಯತನತ್ವವನ್ನು ಅನ್ಯತ್ರಪ್ರಸಿದ್ಧವೆಂದು ಹೇಳಲು ಬರುವುದಿಲ್ಲವೆಂದು ಪ್ರಶ್ನಿಸಬಾರದು. ಹಾಗಾದಲ್ಲಿ ಸರ್ವಗತತ್ವಾದಿ ಸಕಲಲಿಂಗಗಳ ಸಮನ್ವಯವೂ ಸಿದ್ಧವಾಗದಿರಬೇಕಾದೀತು.

ಏಕೆಂದರೆ ನಾಮಪಾದದಲ್ಲಿ ಆದಿತ್ಯಾದಿ ಸಕಲನಾಮಗಳ ಸಮನ್ವಯವು ವಿಷ್ಣುವಿನಲ್ಲಿ ಸಿದ್ಧವಾಗಿದೆ. ಅಂತಹ ಆದಿತ್ಯಾದಿಶ್ರುತಿಯ ಸಾಹಚರ್ಯದಿಂದ ಸರ್ವಗತತ್ವಾದಿಗಳನ್ನು ಅನ್ಯತ್ರಪ್ರಸಿದ್ಧವೆಂದು ಪುನಃ ಹೇಗೆ ಆಕ್ಷೇಪಿಸಿಲು ಸಾಧ್ಯ? ಹೀಗೆ ಸರ್ವಗತತ್ವಾದಿ ಸಕಲ ಲಿಂಗಗಳ ಸಮನ್ವಯವೇ ಅಶಕ್ಯವಾಗುತ್ತದೆ.

ಮತ್ತು ಆದಿತ್ಯಶ್ರುತಿಯು ಲೋಕತಃ ಅನ್ಯತ್ರಪ್ರಸಿದ್ಧವಾಗಿದೆ. ನಾಮಪಾದನ್ಯಾಯದಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ. ಹೀಗೆ ಶ್ರುತಿಯು ಲೌಕಿಕನ್ಯಾಯದಿಂದ ಸೂರ್ಯನಲ್ಲಿ ಪ್ರಥಮಪಾದದ ನ್ಯಾಯದಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾದ್ದರಿಂದ ಉಭಯತ್ರಪ್ರಸಿದ್ಧವಾಯಿತು. ಈ ಉಭಯತ್ರಪ್ರಸಿದ್ಧವಾದ ಆದಿತ್ಯಶಬ್ದದ ಸಾಹಚರ್ಯದಿಂದ ಸರ್ವಗತತ್ವವೂ ಉಭಯತ್ರಪ್ರಸಿದ್ಧವಾಗಬೇಕಾದೀತು.

ಇದರಂತೆ ವಜ್ರಶಬ್ದವು ಲೋಕತಃ ಅನ್ಯತ್ರಪ್ರಸಿದ್ಧವಾಗಿದೆ. ಇಂದ್ರಾದಿಶಬ್ದಗಳಂತೆ ಇದೂ ಅನ್ಯತ್ರಪ್ರಸಿದ್ಧವೇ ಆಗುತ್ತದೆ. ಹೀಗಿರುವಾಗ ಉಭಯತ್ರಪ್ರಸಿದ್ಧವಾದ ಶಬ್ದವನ್ನು ಸಮನ್ವಯ ಮಾಡುವ ಕಂಪನಾಧಿಕರಣದಲ್ಲಿ ವಜ್ರಶಬ್ದಸಮನ್ವಯ ಮಾಡುವುದು ತಪ್ಪಾಗುತ್ತದೆ. ಅಂದರೆ ಅನ್ಯತ್ರಪ್ರಸಿದ್ಧಲಕ್ಷಣಕ್ಕೆ ವಜ್ರಶಬ್ದದಲ್ಲಿ ಅತಿವ್ಯಾಪ್ತಿದೋಷ ಬರುತ್ತದಲ್ಲವೇ?

ಸಮಾಧಾನ - ಅನ್ಯತ್ರಪ್ರಸಿದ್ಧಿಯ ಲಕ್ಷಣದಲ್ಲಿ ಸಮಾಖ್ಯಾಶ್ರುತ್ಯಾದಿತೌಲ್ಯಾಭಾವವನ್ನು ಸೇರಿಸಿದ್ದೇವೆ. ಅಂದರೆ ಸಮಾಖ್ಯಾಶ್ರುತಿಯು ಎರಡೂ ಕಡೆ ಸಮಾನವಾಗಿ ಇರಬಾರದು. 'ಆಕಾಶಶಬ್ದವನ್ನು ಪ್ರಥಮಪಾದದಲ್ಲಿ ಸಮನ್ವಯ ಮಾಡುವಾಗ ಆಕಾಶಶಬ್ದವು ಶ್ರುತಿಯಿಂದ ಪರಮಾತ್ಮನಲ್ಲಿ ಪ್ರಸಿದ್ಧವಾಗಿದೆ. ಭೂತಾಕಾಶದಲ್ಲಿಯೂ ಪ್ರಸಿದ್ಧವಾಗಿದೆಯೆಂದು ಹೇಳಿದರೆ ಸಮಾಖ್ಯಾಶ್ರುತಿಯ ತೌಲ್ಯ ಬರುತ್ತದೆ. ಆದರೆ ಈ ತೌಲ್ಯವು ಪೂರ್ವಪಕ್ಷಿಗೆ ಸಮ್ಮತವಲ್ಲದ ಕಾರಣ ಸಮಾಖ್ಯಾಶ್ರುತಿಯ ತೌಲ್ಯಾಭಾವವನ್ನು ಅನ್ಯತ್ರಪ್ರಸಿದ್ಧಿಯ ಲಕ್ಷಣದಲ್ಲಿ ಹಾಕಿದ್ದೇವೆ. ಆದರೆ ದುಭ್ವಾದ್ಯಾಯತನತ್ವಾದಿಗಳು ವಿಷ್ಣುವಿನಲ್ಲಿ ಮತ್ತು ರುದ್ರಾದಿಗಳಲ್ಲಿ ಶ್ರುತಿಯಿಂದ ಪ್ರಸಿದ್ಧವಾದ್ದರಿಂದ ಸಮಾಖ್ಯಾಶ್ರುತಿಯು ಅನೇಕಕಡೆ ಸಾಧಾರಣವಾಗಿದೆ. ಹಾಗಾಗಿ ದುಭ್ವಾದ್ಯಾಯತನತ್ವಾದಿಗಳು ಉಭಯತ್ರಪ್ರಸಿದ್ಧವಾಗುತ್ತವೆ ಹೊರತು ಅನ್ಯತ್ರಪ್ರಸಿದ್ಧವಾಗುವುದಿಲ್ಲ. ಅನ್ಯತ್ರಪ್ರಸಿದ್ಧಿಯ ಲಕ್ಷಣಕ್ಕೆ ಅತಿವ್ಯಾಪ್ತಿದೋಷ ಬರುವುದಿಲ್ಲ.

ಆದಿತ್ಯಶಬ್ದವು ವಿಷ್ಣುವಿನಲ್ಲಿ ಮತ್ತು ಬೇರೆಯವರಲ್ಲಿ ಪ್ರಸಿದ್ಧವಾದ್ದರಿಂದ ಆದಿತ್ಯಶ್ರುತಿಯ ಸಾಹಚರ್ಯದಿಂದ ಸರ್ವಗತತ್ವವು ಉಭಯತ್ರಪ್ರಸಿದ್ಧವಾಗಬೇಕಾದೀತೆಂಬ ಹಿಂದಿನ ಆಕ್ಷೇಪಕ್ಕೆ ಏನು ಉತ್ತರ? ಎಂದರೆ ಉಭಯತ್ರಪ್ರಸಿದ್ಧಸಾಹಚರ್ಯವನ್ನು ಉಭಯತ್ರಪ್ರಸಿದ್ಧಿಲಕ್ಷಣದಲ್ಲಿ ಸೇರಿಸಿದ್ದೇವೆ. ಸರ್ವಗತತ್ವವು ಉಭಯತ್ರಪ್ರಸಿದ್ಧವಾಗಲು ಪ್ರಸಕ್ತಿಯೇ ಇಲ್ಲ. ಏಕೆಂದರೆ ಆದಿತ್ಯಶ್ರುತಿಯ ಸಮೀಪದಲ್ಲಿ ಸಂವತ್ಸರಸಾರತ್ವಾದಿಲಿಂಗಗಳೂ ಕೇಳಿಸುತ್ತಿವೆ. ಮಾಸ ಸಂವತ್ಸರಾದಿಗಳನ್ನು ನಿಯಮನ ಮಾಡುವಂತಹದ್ದು ಸೂರ್ಯನ ಲಿಂಗ. ಹೀಗೆಯೇ ಪ್ರತಿಪುರುಷಾಭಿಮುಖ್ಯಾದಿ ಅನೇಕ ಲಿಂಗಗಳನ್ನು ಅಲ್ಲಿ ಹೇಳಿದ್ದಾರೆ. ಇವು ಪರಮಾತ್ಮನಲ್ಲಿ ಬರಲು ಸಾಧ್ಯವಿಲ್ಲ. ಆದ್ದರಿಂದ ಆದಿತ್ಯಶ್ರುತಿಯು ಅನ್ಯತ್ರಪ್ರಸಿದ್ಧವಾಗಿದೆ. ಈ ವಿಷಯವನ್ನು ಇನ್ನೂ ಸ್ಪಷ್ಟವಾಗಿ ಮುಂದೆ ಹೇಳುತ್ತೇವೆ.

ಇದರಂತೆ ಪ್ರಾಣಶಬ್ದದ ಬಲದಿಂದ ವಜ್ರಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆ. ಪ್ರಾಣಶಬ್ದವು ಪರಮಾತ್ಮನಲ್ಲಿ ಮತ್ತು ಪ್ರಾಣದೇವರಲ್ಲಿ ಪ್ರಸಿದ್ಧವಾದ್ದರಿಂದ ಉಭಯತ್ರಪ್ರಸಿದ್ಧವಾಯಿತು. ಇದರ

ಸಾಹಚರ್ಯದಿಂದ ವಜ್ರಶಬ್ದವೂ ಉಭಯತ್ರಪ್ರಸಿದ್ಧವಾಗುತ್ತದೆ. ಇದನ್ನು ಸಹ ಮುಂದೆ ಆಯಾ ಅಧಿಕರಣಗಳಲ್ಲಿ ಗ್ರಂಥಕಾರರು ಹೇಳುವವರಿದ್ದಾರೆ.



ನಾಲ್ಕನೇ ಪಾದದ ಪ್ರತಿಯೊಂದು ಅಧಿಕರಣಗಳಲ್ಲಿಯೂ ಉದಾಹರಿಸುವ ಶ್ರುತಿವಾಕ್ಯಗಳು ಪರಮಮುಖ್ಯವೃತ್ತಿಯಿಂದ ಹರಿಪರವಾದರೂ ಅಪರಮಮುಖ್ಯವೃತ್ತಿಯಿಂದ ಅನ್ಯಪರವಾಗಿರುತ್ತವೆ. ಆದರೆ 'ಏತೇನ ಸರ್ವೇ' ಇತ್ಯಾದಿ ಕೊನೆಯ ಅಧಿಕರಣದಲ್ಲಿ ಮಾತ್ರ ಕಥಂಚಿದಪಿ ಅನ್ಯಪರವಾಗದ 'ಅಸದ್ವಾ ಇದಮಗ್ರ' ಎಂಬುದನ್ನು ವಿಷಯವಾಕ್ಯವನ್ನಾಗಿ ಉಲ್ಲೇಖಿಸಿದ್ದಾರಲ್ಲ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಎರಡು ಬಗೆಯಲ್ಲಿ ಉತ್ತರಿಸಬಹುದು - 'ಅಸದ್ವಾ ಇದಮಗ್ರ' ಎಂಬುದು ವಿಷಯವಾಕ್ಯವೇ ಅಲ್ಲ. ಬೇರೆ ವಾಕ್ಯಗಳೇ ವಿಷಯವಾಕ್ಯಗಳು. ಆ ವಿಷಯವಾಕ್ಯದಲ್ಲಿರುವ ಅಸತ್‌ಶಬ್ದವು ಬ್ರಹ್ಮಪರವಾಗದೆ ಶೂನ್ಯಪರವಾದರೆ 'ಅಸದ್ವಾ ಇದಮಗ್ರ' ಎಂಬ ವಾಕ್ಯದಲ್ಲಿರುವ ಅಸತ್ ಶಬ್ದವೂ ಶೂನ್ಯಪರವಾಗಬೇಕಾಗುತ್ತದೆ. ಆದರೆ ಶೂನ್ಯದಿಂದ ಜಗತ್ತು ಹುಟ್ಟಲಾರದು. ಈ ಯುಕ್ತಿಸೂಚನೆಗಾಗಿ ಮಾತ್ರ 'ಅಸದ್ವಾ' ಎಂಬ ವಾಕ್ಯವನ್ನು ಉದಾಹರಿಸಿದ್ದಾರೆ.

ಅಥವಾ 'ಅಸದ್ವಾ ಇದಮಗ್ರ' ಎಂಬುದನ್ನು ವಿಷಯವಾಕ್ಯವನ್ನಾಗಿಯೂ ಪರಿಗಣಿಸಬಹುದು. ಬಲವತ್ ಶ್ರುತಿಲಿಂಗಾದಿಗಳ ಸಮನ್ವಯ ನಾಲ್ಕನೆಯ ಪಾದದಲ್ಲಿ ಮಾಡುತ್ತಾರೆ. ಇಲ್ಲಿ 'ಬಲವತ್' ಎಂದರೆ ಅಪರಮಮುಖ್ಯವೃತ್ತಿಯಿಂದ ಅನ್ಯಪರವಾಗಿರಬೇಕೆಂದು ಅರ್ಥವೇ ಅಲ್ಲ. ಹೊರತಾಗಿ 'ಬ್ರಹ್ಮಪರವಾದರೆ ಬಹುವಿಪ್ಲವವೆಂಬ ತರ್ಕದಿಂದ ಅನುಗ್ರಹವಾಗಿರುವಿಕೆ' ಎಂದು ಅರ್ಥ. ಪ್ರಕೃತ 'ಅಸತ್' ಶಬ್ದವು ನಿಷೇಧವಸ್ತುವಾಚಕ ಶಬ್ದವಾಗಿದೆ. ಇಂತಹ ಅಸತ್ ಶಬ್ದದಿಂದ ಭಗವಂತನು ವಾಚ್ಯನಾದರೆ ಭಾವತ್ವಕ್ಕೆ ಭಂಗ ಬರುತ್ತದೆಂಬ ಬಹುವಿಪ್ಲವ ದೋಷ ಬರುತ್ತದೆ. ಆದ್ದರಿಂದ ಬಹುವಿಪ್ಲವಾಪತ್ತಿಯೆಂಬ ತರ್ಕದಿಂದ ಅನುಗ್ರಹವಿರುವುದರಿಂದ ಬಲವತ್ವ ಬರುತ್ತದೆ. ಟೀಕೆಯಲ್ಲಿ ಹೇಳಿದಂತೆ 'ಅಸದ್ವಾ ಇದಮಗ್ರ ಆಸೀತ್' ಎಂಬುದೂ ವಿಷಯವಾಕ್ಯವಾಗುತ್ತದೆ.

ಆದ್ದರಿಂದ 'ಬಲವತ್ ಶ್ರುತಿಲಿಂಗಾದ್ಯೈರನ್ಯೇಷ್ವೇವಪ್ರಸಿದ್ಧತಾ' ಎಂಬ ಅನ್ಯತ್ರೈವಪ್ರಸಿದ್ಧಿಯ ಹೇತು-ಮುಖಲಕ್ಷಣಕ್ಕೆ ಅತಿವ್ಯಾಪ್ತಿ ಮೊದಲಾದ ದೋಷಗಳು ಬರುವುದಿಲ್ಲ. ಇಲ್ಲಿಗೆ ಹೇತುಮುಖಲಕ್ಷಣದ ಸಾಮಾನ್ಯ ಪರಿಚಯ ಮಾಡಿಕೊಟ್ಟಂತಾಯಿತು. ಇದು ಕೇವಲ ದಿಕ್‌ಪ್ರದರ್ಶನ. ಇನ್ನೂ ಹೆಚ್ಚಿನ ವಿಚಾರಗಳನ್ನು ಇದೇ ಮಾರ್ಗದಲ್ಲಿ ವಿಚಾರ ಮಾಡಿ ತಿಳಿದುಕೊಳ್ಳಬೇಕು.



## ನಾಮಲಿಂಗಶಬ್ದಗಳ ಪರಿಚಯ ಮತ್ತು ಪಾದಭೇದವಿಚಾರ

**तात्पर्यचन्द्रिका –**

**नामलिङ्गभेदस्तु – यान्यापाततो रूढान्येव तानि नामानि, तद्विपरीतानि तु लिङ्गानि । अथवा – यान्यापाततो रूढानि तानि नामानि, यान्यापाततो यौगिकानि तानि लिङ्गानि ।**

अत्राद्यपक्षे योगरूढानि लिङ्गानि । द्वितीये तु नामलिङ्गोभयात्मकानि ।

वस्तुतस्तु – यान्यापाततो रूढिरहितान्यन्तर्यामीत्यादीनि एकप्रातिपदिकमात्ररूपाणि वा, "सर्वेषु भूतेष्वेतम्" "यस्मिन् द्यौः" इत्याद्यनेकपदसमभिव्याहाररूपाणि वा, 'सर्वेषु' 'यस्मिन्' इति सप्तमीविभक्तिसहितप्रातिपदिकरूपाणि वा धर्मद्वारा धर्म्युपस्थापकानि, तानि लिङ्गानि ।

यानि तु तद्विपरीतान्यापाततो रूढानि योगरूढियुक्तानि वा तानि नामानि । अत एव पूर्वपक्षदशायामपि देवतासु योगरूढियुक्तानामिन्द्रादिशब्दानां नामता । अत एव च रूढानां नामत्वे यौगिकानां च लिङ्गत्वे योगरूढानां तृतीयप्रकारताऽऽपत्तिरिति शङ्काऽनवकाशः ।

नाम्नां लिङ्गानां च अन्यत्रप्रसिद्धत्वाविशेषेऽप्यवान्तरभेदात् पादभेदः । अध्याये पादचतुष्टयादिनियमादवान्तरभेदविवक्षया तृतीयादौ न पादभेद आश्रितः ।

यद्वा – नाम्नां प्राधान्यात् लिङ्गानां च द्वितीये समन्वयोक्त्या बुद्धिस्थत्वादुभयानुसरणाय न तत्र भेद आश्रितः ।

अथवाऽऽपातसिद्धं नामलिङ्गयोर्भेदमाश्रित्याऽऽद्यद्वितीययोर्भेदः कृतः । इदानीमापातप्रसिद्धितिरस्कारेण तत्रोक्तमहायोगविद्वद्रूढिभ्यामेकीकृतत्वात् न भिन्नपादनिवेशार्हतेति दर्शयितुं न तत्र भेद आश्रितः । तस्माद्यथाग्रन्थं पादभेदो युक्तः ।

ಅನುವಾದ - ನಾಮಾತ್ಮಕಶಬ್ದಗಳಿಗೂ ಲಿಂಗಾತ್ಮಕಕಶಬ್ದಗಳಿಗೂ ವೈಲಕ್ಷಣ್ಯ ಹೀಗಿದೆ - ಯಾವ ಪದಗಳು (ಆಕಾಶ, ಪ್ರಾಣ) ಆಪಾತತಃ ಕೇವಲ ರೂಢವೇ ಆಗಿರುತ್ತವೋ ಆ ಪದಗಳು ನಾಮಾತ್ಮಕಶಬ್ದಗಳು. ಯಾವ ಪದಗಳು ಆಪಾತತಃ ಯೌಗಿಕವೂ ಯೋಗರೂಢವೂ ಆಗಿರುತ್ತವೋ ಆ ಪದಗಳು ಲಿಂಗಾತ್ಮಕಶಬ್ದಗಳು.

ಅಥವಾ ಯಾವ ಪದಗಳು ಆಪಾತತಃ ರೂಢವೋ ಆ ಪದಗಳು ನಾಮಾತ್ಮಕಶಬ್ದಗಳು. ಯಾವ ಪದಗಳು ಆಪಾತತಃ ಯೌಗಿಕವೋ ಆ ಪದಗಳು ಲಿಂಗಾತ್ಮಕಶಬ್ದಗಳು.

ಮೊದಲನೆಯ ಪಕ್ಷದ ಪ್ರಕಾರ ಯೋಗರೂಢವಾದ ಶಬ್ದಗಳೆಲ್ಲ ಲಿಂಗಾತ್ಮಕಗಳಾಗುತ್ತವೆ. (ರೂಢಾನ್ಯೇವ ಎಂದು ಏವಕಾರ ಹೇಳಿದ್ದರಿಂದ 'ತದ್ವಿಪರೀತಾನಿ' ಎಂಬಲ್ಲಿ ಯೋಗವೂ

ಆಗಿರಬಹುದು ರೂಢವೂ ಆಗಿರಬಹುದೆಂದು ತಿಳಿಯುತ್ತದೆ.) ಅಥವಾ ಎಂಬ ಎರಡನೆಯ ಪಕ್ಷದ ಪ್ರಕಾರ ಯೋಗರೂಢವಾದ ಶಬ್ದಗಳು ನಾಮಾತ್ಮಕಗಳೂ ಆಗುತ್ತವೆ, ಲಿಂಗಾತ್ಮಕಗಳೂ ಆಗುತ್ತವೆ. (ಏವಕಾರ ಹಾಕದೇ ಹೇಳಿದ್ದರಿಂದ ಯೋಗರೂಢವಾದ ಶಬ್ದಗಳು ಆಪಾತತಃ ರೂಢವೂ ಯೌಗಿಕವೂ ಆಗಿವೆ. ಆದ್ದರಿಂದ ನಾಮಲಿಂಗ ಉಭಯಾತ್ಮಕಗಳಾಗುತ್ತವೆ)

ವಸ್ತುತಸ್ತು ಲಿಂಗಾತ್ಮಕ ಶಬ್ದಗಳ ಲಕ್ಷಣ ಹೀಗಿದೆ - ಯಾವ ಪದಗಳಿಗೆ ಆಪಾತತಃ ರೂಢಿ ಇರುವುದಿಲ್ಲವೋ ಆವಾಗಲೇ 'ಅಂತರ್ಯಾಮೀ' ಇತ್ಯಾದಿಯಾಗಿ ಏಕಪ್ರಾತಿಪಾದಿಕರೂಪವಾಗಿರುತ್ತದೆ. ಅಥವಾ 'ಸರ್ವೇಷು ಭೂತೇಷ್ವೇತಮ್ ಯಸ್ಮಿನ್ ದ್ಯೌಃ' ಇತ್ಯಾದಿಯಾಗಿ ಅನೇಕ ಪದಸಮಭಿವ್ಯಾಹಾರ ರೂಪವಾಗಿರಬಹುದು. ಅಥವಾ 'ಸರ್ವೇಷು' 'ಭೂತೇಷು' ಇತ್ಯಾದಿಯಾಗಿ ಸಪ್ತಮೀ ವಿಭಕ್ತಿಯಿಂದ ಸಹಿತವಾದ 'ಏತಂ' 'ದ್ಯೌಃ' ಇತ್ಯಾದಿ ಪ್ರಾತಿಪದಿಕರೂಪವೂ ಆಗಿರಬಹುದು. ಅಂತೂ ಧರ್ಮದ್ವಾರಾ ಧರ್ಮಿಯ ಉಪಸ್ಥಾಪಕಗಳಾದರೆ ಸಾಕು ಲಿಂಗಾತ್ಮಕಗಳೆನಿಸುತ್ತವೆ.

ಇನ್ನು ಧರ್ಮಿಯನ್ನೇ ಸಾಕ್ಷಾತ್ತಾಗಿ ಉಪಸ್ಥಾಪನ ಮಾಡುತ್ತಿದ್ದರೆ, (ಆಪಾತತಃ ರೂಢವಾಗಿದ್ದರೆ) ಅಥವಾ ಯೋಗರೂಢಿಯಿಂದ ಯುಕ್ತವಾಗಿದ್ದರೆ ಆ ಶಬ್ದಗಳು ನಾಮಾತ್ಮಕಗಳೆನಿಸುತ್ತವೆ.

ಸಾಕ್ಷಾತ್ ಧರ್ಮಿಯ ಉಪಸ್ಥಾಪಕವಾದದ್ದನ್ನು ನಾಮವೆಂದು ಹೇಳಿದ್ದರಿಂದಲೇ ಇಂದ್ರಾದಿಶಬ್ದಗಳು ನಾಮಾತ್ಮಕಗಳಾಗುತ್ತವೆ. ದೇವತೆಗಳಲ್ಲಿ ಯೋಗರೂಢಯುಕ್ತವಾದ ಇಂದ್ರಾದಿಶಬ್ದಗಳು ನಾಮಾತ್ಮಕಗಳಾಗಿವೆಯೆಂಬುದು ಪೂರ್ವಪಕ್ಷಿಗೂ ಸಮ್ಮತವಾಗಿದೆ. ಆದ್ದರಿಂದ ರೂಢವಾದ ಶಬ್ದಗಳು ನಾಮಾತ್ಮಕವಾದರೆ ಯೌಗಿಕಶಬ್ದಗಳು, ಲಿಂಗಾತ್ಮಕವಾದರೆ ಯೋಗರೂಢವಾದ ಶಬ್ದಗಳು ಮತ್ತೊಂದು ಪ್ರಕಾರವನ್ನು ಹೊಂದಲಿಯೆಂಬ ಆಶಂಕೆಗೆ ಅವಕಾಶವಿಲ್ಲ. (ನಾಮಾತ್ಮಕಶಬ್ದಗಳಲ್ಲಿ ಯೋಗ ಹಾಗೂ ರೂಢಿ ಎರಡೂ ಇರುತ್ತವೆ)

ಪಾದಭೇದ ವಿಚಾರ - ನಾಮಾತ್ಮಕ ಲಿಂಗಾತ್ಮಕ ಶಬ್ದಗಳೆರಡೂ ಅನ್ಯತ್ರಪ್ರಸಿದ್ಧವಾಗಿವೆ. ಈ ವಿಷಯದಲ್ಲೇನು ವ್ಯತ್ಯಾಸವಿಲ್ಲ. ಆದರೆ ಅನ್ಯತ್ರಪ್ರಸಿದ್ಧಿಯಲ್ಲೂ ನಾಮ ಲಿಂಗವೆಂಬ ಅವಾಂತರ ಭೇದ ಇರುವದರಿಂದ ಪಾದಭೇದವು ಯುಕ್ತವಾಗಿದೆ. ಹಾಗಾದರೆ ಉಭಯತ್ರಪ್ರಸಿದ್ಧಿ ಶಬ್ದಗಳಲ್ಲಿ ಅನ್ಯತ್ರೈವಪ್ರಸಿದ್ಧಿಶಬ್ದಗಳಲ್ಲಿಯೂ ಉಭಯತ್ರಪ್ರಸಿದ್ಧಿಶಬ್ದಗಳಲ್ಲಿಯೂ ನಾಮಲಿಂಗವೆಂಬ ಅವಾಂತರಭೇದವಿರುವುದರಿಂದ ಆರು ಪಾದಗಳನ್ನಾಗಿ ವಿಭಾಗಿಸಿರಿ? ಎಂದರೆ ಹಾಗೆ ಆಗಲ್ಲ. ಒಂದು ಅಧ್ಯಾಯದಲ್ಲಿ ನಾಲ್ಕೇ ಪಾದಗಳಿರಬೇಕೆಂಬ ನಿಯಮವಿದೆ. ಹಾಗಾಗಿ ಅವಾಂತರಭೇದವಿವಕ್ಷೆಯಿಂದ ಇನ್ನೂ ಹೆಚ್ಚಿನ ಪಾದಗಳನ್ನು ಮಾಡಿಲ್ಲ.

ಅಥವಾ ಉಭಯತ್ರಪ್ರಸಿದ್ಧಶಬ್ದಗಳಲ್ಲಿ ನಾಮಾತ್ಮಕ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಪ್ರತ್ಯೇಕ ಪಾದಗಳಲ್ಲಿ ಮಾಡದಿರಲು ಕಾರಣ ಹೀಗಿದೆ - ನಾಮಾತ್ಮಕಶಬ್ದಗಳನ್ನು ಮೊದಲು ಮಾಡೋಣ ಎಂದರೆ ಎರಡನೆಯ ಪಾದದಲ್ಲಿ ಸಮನ್ವಯ ಮಾಡಿದ ಲಿಂಗಾತ್ಮಕಶಬ್ದವು ಬುದ್ಧಿಸ್ಥವಾಗಿದೆ.

ಬುದ್ಧಿಸ್ಥವಾದ ಲಿಂಗಾತ್ಮಕಶಬ್ದಗಳನ್ನೇ ಮೊದಲು ಸಮನ್ವಯ ಮಾಡೋಣ ಎಂದರೆ ನಾಮಾತ್ಮಕ-ಶಬ್ದಗಳು ಪ್ರಧಾನವಾಗಿವೆ. ಆದ್ದರಿಂದ ಮೂರನೆಯ ಪಾದದಲ್ಲಿ ಪ್ರಧಾನವಾದ ನಾಮಗಳನ್ನು ಮತ್ತು ಬುದ್ಧಿಸ್ಥವಾದ ಲಿಂಗಗಳನ್ನು ಒಟ್ಟಿಗೆ ಸೇರಿಸಿ ಸಮನ್ವಯ ಮಾಡಿದ್ದಾರೆ. ಪಾದಭೇದವನ್ನು ಆಶ್ರಯಿಸಿಲ್ಲ.

ಅಥವಾ ಆಪಾತಪ್ರತೀತಿಸಿದ್ಧವಾದ ನಾಮಲಿಂಗಗಳಲ್ಲಿನ ಭೇದವನ್ನು ಆಶ್ರಯಿಸಿ ಪ್ರಥಮ ಹಾಗು ದ್ವಿತೀಯಪಾದಗಳಲ್ಲಿ ಭೇದವನ್ನು ಆಶ್ರಯಿಸಲಾಗಿದೆ. ಮುಂದೆ ತೃತೀಯಪಾದದಲ್ಲಿ ಆಪಾತಪ್ರತೀತಿ-ಸಿದ್ಧವಾದ ನಾಮಲಿಂಗಭೇದವನ್ನು ತಿರಸ್ಕರಿಸಲಾಗಿದೆ. ಸಕಲಶಬ್ದಗಳು ಮಹಾಯೋಗ ಮತ್ತು ವಿದ್ವದ್ರೂಢಿಗಳಿಂದ ಭಗವಂತನನ್ನೇ ಪ್ರತಿಪಾದಿಸುವುದರಿಂದ ಬೇರೆ ಬೇರೆ ಪಾದಗಳಲ್ಲಿ ಉಭಯತ್ರ-ಪ್ರಸಿದ್ಧಿಶಬ್ದಗಳನ್ನು ಸಮನ್ವಯ ಮಾಡಬೇಕಾಗಿಲ್ಲ. ಆದ್ದರಿಂದ ಗ್ರಂಥದಲ್ಲಿರುವ ಪಾದಭೇದವು ಅತ್ಯಂತ ಸಮಂಜಸವಾಗಿದೆ.

### ಕಠಿಣಪದಾರ್ಥ

ಯಾನಿ = ಯಾವ ಪದಗಳು, ತದ್‌ವಿಪರೀತಾನಿ = ಯೌಗಿಕವಾದದ್ದು ಅಥವಾ ಯೋಗರೂಢವಾದದ್ದು, ಧರ್ಮದ್ವಾರಾ = ವ್ಯಾಪ್ಯವಾದ ಸಖಂಡಧರ್ಮದ ಮೂಲಕ, ಅತ ಏವ = ಆಪಾತತಃ ರೂಢವಾದ ಶಬ್ದಗಳು ಅಥವಾ ಯೋಗರೂಢಿಯುಕ್ತವಾದ ಶಬ್ದಗಳು ನಾಮಾತ್ಮಕಗಳಾದ್ದರಿಂದಲೇ, ಉಭಯಾನುಸರಣಾಯ = ಪ್ರಾಧಾನ್ಯ ಹಾಗು ಬುದ್ಧಿಸ್ಥತ್ವವೆಂಬ ಎರಡನ್ನು ಅನುಸರಿಸುವುದಕ್ಕಾಗಿ, ಯಥಾಗ್ರಂಥಮ್ = ಸೂತ್ರಕಾರರು ವಿಂಗಡಿಸಿದ ಪಾದಭೇದದಂತೆ.

**प्रकाशः –** ''तथाप्यन्यत्रप्रसिद्धत्वादिवदापातप्रतीत्यनुरोधेनेयमुक्तिरित्यदोषः'' इति नामलिङ्गभेदोक्तिपरलिङ्गपादीयसुधावाक्यं विवृण्वानः प्रागाक्षिप्तनामलिङ्गभेदं साधयति – **नामलिङ्गेति** ।। यानि 'पदानि' इति शेषः ।। **आपातत इति** ।। अन्यथा असम्भवस्स्यात् । सर्वशब्दानां ब्रह्मणि ''यच्छब्दा योगवृत्तयः'' इत्युक्त्वा यौगिकत्वादिति भावः । 'रूढान्येव' न तु यौगिकानि योगरूढानि वेत्यर्थः । 'तद्विपरीतानि' यौगिकानि योगरूढानि वेत्यर्थः । नन्वेवं तर्ह्यक्षरशब्दस्य आनन्दमयादेश्चाक्षरादिनये टीकोक्तं नामत्वं न स्यादित्यत आह – **अथवेति** ।।

सर्वशब्दानां ब्रह्मणि योगरूढिभ्यां प्रवृत्तेः साङ्कर्यवारणाय 'आपाततः' इत्युक्तम् ।। **अत्राद्येति** ।। तथा चानन्दमयपदस्य तत्वप्रदीपे, वैश्वानरपदस्य च ''विश्वजीवान्तरत्वाद्यैर्लिङ्गैः'' इत्यणुभाष्ये लिङ्गत्वोक्तिर्युक्तेति भावः ।। **द्वितीय इति** ।। तथा च वैश्वानरपदस्य टीकोक्तं नामत्वमणुभाष्योक्तं लिङ्गत्वं च न विरुद्धं, आनन्दमयस्य लिङ्गत्वं टीकोक्तं नामत्वं च युक्तमिति भावः ।

### ಪರಿಪೂರ್ಣಚಂದ್ರಿಕಾ

ननु यथा रूढानां नामता यौगिकानां लिङ्गता, तथा योगरूढानां तृतीयप्रकारता स्यात् । किं चेन्द्रादिशब्दानां योगरूढानामक्षरादिशब्दस्य च केवलनामता न स्यात् । अपि च ''तद्विपरीतानि'' इत्यत्रापाततो यौगिकानि योगरूढानि वा यानि पदानि, तानि लिङ्गानीति विवक्ष्यते न वा । नेतिपक्षे वाक्यप्रकरणादेरपि लिङ्गताऽऽपत्तिः । आद्ये ''तल्लिङ्गात्'' इत्युक्तानन्तोद्गीथादिपदानां लिङ्गत्वेऽपि ''अत एव प्राणः'' इत्यादावुक्तस्य ''श्रीश्च ते लक्ष्मीश्च पत्न्यौ'' इत्यादेर्वाक्योपात्तस्य लिङ्गतानापत्तिः ।

अत एव 'अथवा' इत्युक्तपक्षेऽपि न साधीयानित्यत आह – **वस्तुतस्त्विति** ।। वाक्यप्रकरणादावतिव्याप्तिवारणाय 'धर्मद्वारा' इति । व्याप्यरूपसखण्डधर्म-द्वारेत्यर्थः । तेन पद्मत्वादिजातिनिमित्तके रूढे नातिव्याप्तिः । एतेन ''आपात-प्रतीत्यनुरोधेन'' इति सुधा त्रेधा योज्येत्युक्तं भवति । एतेन ''सर्वेऽपि नामलिङ्गात्मकतया प्रत्येकं द्विविधाः'' इति टीका विवृता । प्रागाक्षिप्तं पादभेदं च साधयति – **नाम्नामिति** ।। एवं तर्हि तृतीयादिपादभेदोऽपि स्यादित्याक्षेपं समाधत्ते – **अध्याय इति** ।। समन्वीयमानानां त्रित्वनियम आदिपदार्थः । अविवक्षा चेदादावेवास्त्वित्यत आह – **यद्वेति** ।।

**उभयेति** ।। प्राधान्यबुद्धिस्थत्वोभयेत्यर्थः । निमित्तान्तरमाह – **अथवेति** ।। **यथाग्रन्थमिति** ।। सूत्रकृदादिभिर्यथा पादभेदः कृतस्तथैव युक्त इत्यर्थः । एतेन ''अवान्तरभेदेन पादभेदः'' इति टीका विवृता ।

गुरुराजीयम् – नन्वस्त्वेवं शब्दानामसाङ्कर्यं तथाऽपि नामलिङ्गभेदो न युक्त इत्यत आह – **नामलिङ्गभेदस्त्विति** ।। एवकारेणापाततो यौगिकत्व-व्यावृत्तिः । तथा चापाततो यौगिकत्वरहितत्वे सत्यापाततो रूढत्वं नामत्व-मित्यर्थः । एवं च पङ्कजादीनां लिङ्गत्वमेवेति भावः ।। **तद्विपरीतानीति** ।। आपाततो रूढानि न भवन्ति यानि तानीत्यर्थः ।

ननु तर्हि योगरूढानामिन्द्रादिशब्दानां नामत्वं न स्यात् । यौगिकत्व-राहित्याभावात् । अन्यथाऽभियुक्तानां पूर्वपक्षिणश्च योगरूढियुक्तानामपि

नामत्वस्वीकारो न स्यादित्यरुचेराह – अथवेति ।। प्रथमद्वितीयलक्षणयोर्विरोधं परिहरति – अत्रेति ।। नन्वेवं योगरूढानामापाततो रूढत्वस्य विद्यमानत्वेनाऽपाततो यौगिकत्वस्यापि विद्यमानत्वेन नामलिङ्गात्मकत्वेन नामात्मकत्वं न स्यात् । तथाचेन्द्रादिनाम्न इति विशेषतो नामत्वोक्तिरयुक्तेत्यपरितोषादाह – वस्तुतस्त्विति ।। आनन्दमयेन्द्रादिशब्दानां नामत्वस्यैव सिध्यर्थं चाह – वस्तुत इति ।।

अत एवेति ।। आपाततो रूढानां योगरूढियुक्तानां च नामत्वादेवेत्यर्थः । एवं नामलिङ्गभेदमुपपाद्य तर्ह्यन्यत्रप्रसिद्धानां लिङ्गानां नाम्नां चान्यत्रप्रसिद्धत्वाविशेषात्पादभेदो न स्यादित्याशङ्कां परिहरति – नाम्नामिति ।। नन्वेवं तृतीय उभयत्रप्रसिद्धानां चतुर्थे चान्यत्रैवप्रसिद्धानां नाम्नां लिङ्गानां च समन्वयोक्तिर्न स्यात् । तत्रापि पादभेद एव स्यादित्यत आह – अध्याय इति ।। आदिपदेन पादाष्टत्वसङ्ग्रहः । अध्याये पादचतुष्टयनियमेप्यन्यत्रप्रसिद्धनामलिङ्गात्मकेष्वेव भेदः किमर्थं कल्पनीयः । उभयत्रप्रसिद्धेष्वन्यत्रैवप्रसिद्धेषु नामलिङ्गात्मकेषु शब्देषु द्वैविध्यकल्पनेऽप्यध्यायपादचतुष्टयादिनियमसम्भवादित्यस्वरसादाह – यद्वेति ।। नन्वध्यायपादनियम एवाक्षिप्यत इत्यतो वाह – यद्वेति ।। नन्वस्तु प्राधान्यं नाम्नां लिङ्गानां च द्वितीये समन्वयोक्त्या बुद्धिस्थत्वम् । तथापि तृतीय उभयत्रप्रसिद्धनामलिङ्गात्मकशब्दसमन्वयोपपादनं कुतः । तृतीय उभयत्रप्रसिद्धनामात्मकशब्दसमन्वयस्य चतुर्थे चोभयत्रप्रसिद्धलिङ्गात्मकशब्दसमन्वयस्य चोपपादनेप्युभयानुसरणसम्भवादित्यत आह – अथवेति ।। यद्वा लिङ्गात्मकानामन्यत्रप्रसिद्धेरन्यत्रप्रसिद्धनामसाहित्येनोक्तत्वान्नाम्नामपि बुद्धिस्थत्वात् वैश्वानराधिकरणे चानेकलिङ्गसमन्वयार्थमेकनामसमन्वयस्योक्तत्वेन बुद्धिस्थत्वप्राधान्ययोर्द्वयोरपि सत्त्वेन नामान्वय एव वक्तव्य इत्यरुचेराह – अथवेति ।। तथा च सर्वेषामपि नामलिङ्गात्मकत्वान्न पादभेदाश्रयणमिति भावः ।

ವಿವರಣೆ - ಅನ್ಯತ್ರಪ್ರಸಿದ್ಧಾದಿಗಳನ್ನು ಪರಿಚಯಿಸುವಾಗ ಆಪಾತಪ್ರತೀತಿಯನ್ನು ಅನುಸರಿಸಿ ಹೇಳಿದಂತೆ ನಾಮಾತ್ಮಕ ಲಿಂಗಾತ್ಮಕಶಬ್ದಗಳ ಬಗ್ಗೆ ಪರಿಚಯಿಸುವಾಗಲೂ ಆಪಾತಪ್ರತೀತಿಯನ್ನು ಅನುಸರಿಸಿಯೇ ಹೇಳುತ್ತಿದ್ದಾರೆ. ಪ್ರಕೃತ ನಾಮಾತ್ಮಕ ಲಿಂಗಾತ್ಮಕಶಬ್ದಗಳಲ್ಲಿ ವೈಲಕ್ಷಣ್ಯ ತೋರಿಸುವ ಸುಧೆಯ ವಾಕ್ಯವನ್ನು

ವ್ಯಾಖ್ಯಾನಿಸುತ್ತಿದ್ದಾರೆ. ಮತ್ತು ಹಿಂದೆ ನಾಮಲಿಂಗಾತ್ಮಕ ಶಬ್ದಗಳಲ್ಲಿ ವೈಲಕ್ಷಣ್ಯವೇ ಇಲ್ಲವೆಂದು ಆಕ್ಷೇಪಿಸಲಾಗಿತ್ತು. ಅದಕ್ಕೂ ಸಹ ಈಗ ಉತ್ತರಿಸುತ್ತಿದ್ದಾರೆ.

ಆಪಾತತಃ ರೂಢಮಾತ್ರ ಶಬ್ದಗಳು ನಾಮತ್ಮಕಶಬ್ದಗಳೆಂದು ಗ್ರಂಥಕಾರರು ಹೇಳಿದ್ದಾರೆ. ಇಲ್ಲಿ ಆಪಾತತಃ ಎಂದು ಹೇಳದೇ ಇದ್ದರೆ ಅಸಂಭವದೋಷ ಬರುತ್ತದೆ. ಏಕೆಂದರೆ ನಾವು ಆಕಾಶಾದಿಶಬ್ದಗಳನ್ನು ಆಕಾಶಾದಿಗಳಲ್ಲಿ ಆಪಾತತಃ ರೂಢವೆನ್ನುತ್ತೇವೆ ಹೊರತು ನಿಜವಾಗಿಯೂ ರೂಢವೆನ್ನುವುದಿಲ್ಲ. 'ಯಚ್ಛಬ್ದಾಃ ಯೋಗವೃತ್ತಯಃ' ಎಂಬ ಆಚಾರ್ಯರ ಮಾತಿನಂತೆ ಸಕಲಶಬ್ದಗಳನ್ನು ಬ್ರಹ್ಮನಲ್ಲಿ ಯೌಗಿಕಗಳೆಂದು ಅಂಗೀಕರಿಸಿದ್ದೇವೆ.

ನಾಮಾತ್ಮಕ ಲಿಂಗಾತ್ಮಕಶಬ್ದಗಳ ಲಕ್ಷಣವನ್ನು 'ನಾಮಲಿಂಗಭೇದಸ್ತು' ಇತ್ಯಾದಿಯಾಗಿ ಒಂದುವಿಧವಾಗಿ ನಿರೂಪಿಸಿ ಅಥವಾ ಎಂದು ಮತ್ತೊಂದು ವಿಧವಾಗಿ ನಿರೂಪಿಸುತ್ತಿದ್ದಾರೆ. ಮೊದಲನೆಯ ಪಕ್ಷಕ್ಕೂ ಅಥವಾ ಎಂಬ ಎರಡನೆಯ ಪಕ್ಷಕ್ಕೂ ವ್ಯತ್ಯಾಸವನ್ನು 'ಏವ'ಕಾರ ತೋರಿಸುತ್ತಿದೆ.

ಆಪಾತತಃ ರೂಢವಾಗಿದ್ದರೆ ಮಾತ್ರ ನಾಮಾತ್ಮಕವೆನ್ನುವುದಾದರೆ ಅಕ್ಷರಶಬ್ದವನ್ನು ಆನಂದಮಯಶಬ್ದವನ್ನು ನಾಮಾತ್ಮಕವೆಂದದ್ದು ತಪ್ಪಾಗುತ್ತದೆ. ಏಕೆಂದರೆ ಆಪಾತತಃ ರೂಢವಾಗಿದ್ದರೆ ನಾಮಾತ್ಮಕ ಎನ್ನುತ್ತಿದ್ದೀರಿ. ಆದರೆ ಅಕ್ಷರಶಬ್ದವು ಆಪಾತತಃ ಯೋಗರೂಢವೇ ಹೊರತು ಕೇವಲ ಆಪಾತತಃ ರೂಢವಲ್ಲ. ಇದರಂತೆ ಆನಂದಮಯಶಬ್ದವು ಆಪಾತತಃ ಯೋಗರೂಢ. ಈ ಆಕ್ಷೇಪದ ಪರಿಹಾರಕ್ಕಾಗಿ 'ಅಥವಾ' ಎಂದು ಮತ್ತೊಂದು ಪಕ್ಷವನ್ನು ಹೇಳುತ್ತಿದ್ದಾರೆ.

ಅಥವಾ ಪಕ್ಷದಲ್ಲಿ 'ಆಪಾತತಃ' ಎಂದು ಹೇಳಿದ್ದೇಕೆ? ಎಂದರೆ ಬ್ರಹ್ಮನಲ್ಲಿ ಸಕಲಶಬ್ದಗಳು ಯೋಗ ಹಾಗೂ ರೂಢಿಯಿಂದ ಪ್ರವೃತ್ತವಾಗುತ್ತವೆ. ಆದ್ದರಿಂದ ಸಾಂಕರ್ಯ ಬರುತ್ತಿತ್ತು. ಅದರ ಪರಿಹಾಕ್ಕಾಗಿ ಆಪಾತತಃ ಎಂದು ಹೇಳಿದರು. ಆನಂದಮಯ ಮೊದಲಾದ ಶಬ್ದಗಳು ಯೋಗರೂಢವಾಗಿರಬಹುದು. ಆದರೆ ಆಪಾತತಃ ರೂಢವಾದ್ದರಿಂದ ನಾಮಾತ್ಮಕಗಳೆನಿಸುತ್ತವೆ.

ಪ್ರಶ್ನೆ - ಹಾಗಾದರೆ 'ಅಥವಾ' ಎಂಬ ಎರಡನೆಯ ಪಕ್ಷ ಮಾತ್ರ ಸಾಕು. ಮೊದನೆಯ ಪಕ್ಷವನ್ನು ಏಕೆ ಹೇಳಿದರು? ಏಕೆಂದರೆ ಆನಂದಮಯಾದಿಶಬ್ದಗಳನ್ನು ನಾಮಾತ್ಮಕವೆಂದು ಟೀಕೆಯಲ್ಲಿ ಹೇಳಿದ್ದಾರೆ. ಆದರೆ ಇದು ಕೂಡುವುದಿಲ್ಲವೆಂಬ ಹೆಚ್ಚಿನ ಆಕ್ಷೇಪದ ಪರಿಹಾರಕ್ಕಾಗಿ ಅಥವಾ ಪಕ್ಷ ಹೇಳಿದ್ದಾರೆ. ಆಪಾತತಃ ರೂಢವಾದರೆ ನಾಮಾತ್ಮಕವೆಂದು ಹೇಳಿದ್ದರಿಂದ ಆನಂದಮಯಾದಿಶಬ್ದಗಳು ಯೋಗರೂಢವಾಗಿದ್ದರೂ ಆಪಾತತಃ ರೂಢವಾದ್ದರಿಂದ ನಾಮಾತ್ಮಕಗಳಾಗುತ್ತವೆ. ಹೀಗಿರುವಾಗ ಮೊದಲನೆಯ ಪಕ್ಷಕ್ಕೆ ಪ್ರಯೋಜನವೇ ಇಲ್ಲವಲ್ಲ?

ಉತ್ತರ - ಮೊದಲನೆಯ ಪಕ್ಷಕ್ಕೂ ಪ್ರಯೋಜನವಿದೆ. ತ್ರಿವಿಕ್ರಮಪಂಡಿತರು ತತ್ವಪ್ರದೀಪದಲ್ಲಿ ಆನಂದಮಯಶಬ್ದವನ್ನು ಲಿಂಗಾತ್ಮಕವೆಂದು ಹೇಳಿದ್ದಾರೆ. ಅದನ್ನು ಈಗ ಕೂಡಿಸಿದಂತಾಯಿತು. ಏಕೆಂದರೆ ಲಕ್ಷಣದಲ್ಲಿ 'ಆಪಾತತಃ ರೂಢಾನ್ಯೇವ' ಎಂದು 'ಏವ' ಕಾರವನ್ನು ಹಾಕಿದ್ದಾರೆ. ಆನಂದಮಯಶಬ್ದವು ಆಪಾತತಃ ಕೇವಲ ರೂಢವೇ ಆಗಿಲ್ಲ. ಆಪಾತತಃ ಯೌಗಿಕವೂ ಆಗಿದೆ. ವೈಶ್ವಾನರಶಬ್ದಕ್ಕೆ ವಿಶ್ವಜೀವಾಂತರತ್ವಾದಿಗಳನ್ನು ಲಿಂಗವೆಂದು ಹೇಳಿದ್ದಾರೆ. ಇದನ್ನೂ ಕೂಡಿಸಿದಂತಾಯಿತು. ವಸ್ತುತಃ

ವೈಶ್ವಾನರಾಧಿಕರಣದಲ್ಲಿ ನಾಮಸಮನ್ವಯವೆಂದು ಟೀಕೆಯಲ್ಲಿ ಹೇಳಿದ್ದಾರೆ. ಆದರೆ ಅಣುಭಾಷ್ಯದಲ್ಲಿ ಶ್ರೀಮದಾಚಾರ್ಯರು 'ವಿಶ್ವಜೀವಾಂತರತ್ವಾದ್ಯೈರ್ಲಿಂಗೈಃ' ಎಂದು ಲಿಂಗಸಮನ್ವಯ ಹೇಳಿದ್ದಾರೆ. ವೈಶ್ವನರಾದಿಶಬ್ದಗಳು ರೂಢವಾದ್ದರಿಂದ ನಾಮಾತ್ಮಕಗಳೂ ಆಪಾತತಃ ಯೌಗಿಕಗಳಾದ್ದರಿಂದ ಲಿಂಗಾತ್ಮಕಗಳೂ ಆಗುತ್ತವೆ. ಈಗ ಟೀಕೆಯಲ್ಲಿ ಹೇಳಿದ್ದಕ್ಕೂ ಅಣುಭಾಷ್ಯದಲ್ಲಿ ಹೇಳಿದ್ದಕ್ಕೂ ಪರಸ್ಪರ ವಿರೋಧ ಬರುವುದಿಲ್ಲ.

ಆಕ್ಷೇಪ - ರೂಢವಾಗಿದ್ದರೆ ನಾಮಾತ್ಮಕವೆಂದು ಯೌಗಿಕವಾಗಿದ್ದರೆ ಲಿಂಗಾತ್ಮಕವೆಂದು ಹೇಳಿದಿರಿ. ಹಾಗಾದರೆ ಯೋಗರೂಢವಾಗಿದ್ದರೆ ಮೂರನೆಯ ಪ್ರಕಾರವನ್ನು ಅಂಗೀಕರಿಸಿರಿ? ಮತ್ತು ಇಂದ್ರಾದಿಶಬ್ದಗಳು ಅಕ್ಷರಾದಿಶಬ್ದಗಳು ಯೋಗರೂಢವಾಗಿವೆ. ಇವುಗಳಿಗೆ ಕೇವಲ ನಾಮಾತ್ಮಕತ್ವ ಬರುವುದೇ ಇಲ್ಲ. ಅಷ್ಟೇ ಅಲ್ಲದೇ ಪ್ರಥಮಪಕ್ಷದಲ್ಲಿ 'ತದ್‌ವಿಪರೀತಾನಿ' ಎಂಬುದಕ್ಕೆ ಏನು ಅರ್ಥ? ಆಪಾತತಃ ಯೌಗಿಕವಾದ ಅಥವಾ ಯೋಗರೂಢವಾದ ಯಾವ ಪದಗಳಿವೆಯೋ. ಅಂತಹ ಪದಗಳು ಲಿಂಗಾತ್ಮಕಗಳೆಂದು ವಿವಕ್ಷಿಸುತ್ತೀರೋ ಅಥವಾ ಇಲ್ಲವೋ? ಪದಗಳೆಂದು ವಿವಕ್ಷಿಸದಿದ್ದಲ್ಲಿ ವಾಕ್ಯ ಪ್ರಕರಣಾದಿಗಳೂ ಲಿಂಗಾತ್ಮಕಗಳಾಗಲಿ; ಆಪಾತತಃ ಯಾವುದು ರೂಢವಲ್ಲವೋ ಅದು ಲಿಂಗವೆಂದು ಕರೆಸಿಕೊಳ್ಳುತ್ತದೆ. ವಾಕ್ಯ ಪ್ರಕರಣಾದಿಗಳಲ್ಲಿ ಇಂತಹ ಲಿಂಗದ ಲಕ್ಷಣ ಬರುವುದರಿಂದ ಲಿಂಗಾತ್ಮಕಗಳಾಗಬೇಕಾದೀತು. ಇನ್ನು ಪದಗಳೆಂದು ವಿವಕ್ಷೆ ಮಾಡಿದರೂ ಬಾಧಕವಿದೆ - 'ಆಕಾಶಸ್ತಲ್ಲಿಂಗಾತ್' ಎಂಬಲ್ಲಿ ಹೇಳಿದ ಅನಂತ ಉದ್ಗೀಥ ಮೊದಲಾದವು ಪದರೂಪವಾಗಿವೆ. ಆಪಾತತಃ ಯೋಗರೂಪವೂ ಆಗಿರುವುದರಿಂದ ಲಿಂಗವಾಗುತ್ತದೆ. ಆದರೆ 'ಅತ ಏವ ಪ್ರಾಣಃ' ಎಂಬಲ್ಲಿ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂದು ಲಕ್ಷ್ಮೀಪತಿತ್ವ ಲಿಂಗವನ್ನು ಹೇಳಿದ್ದಾರೆ. ಇಲ್ಲಿ ಲಕ್ಷ್ಮೀಪತಿತ್ವಲಿಂಗವನ್ನು ವಾಕ್ಯದಿಂದ ಹೇಳಿದ್ದಾರೆ ಹೊರತು ಪದದಿಂದ ಹೇಳಿಲ್ಲ. ಆದ್ದರಿಂದ ಲಕ್ಷ್ಮೀಪತಿತ್ವವೂ ಲಿಂಗ ಆಗದೇ ಇರಬೇಕಾದೀತು. ಈ ದೋಷ ಕೇವಲ ಪ್ರಥಮಪಕ್ಷದಲ್ಲಿ ಮಾತ್ರವಲ್ಲ. ಅಥವಾ ಎಂಬ ಎರಡನೆಯ ಪಕ್ಷದಲ್ಲಿಯೂ ಸಮಾನವಾಗಿದೆ. ಏಕೆಂದರೆ ಅಲ್ಲಿಯೂ ನೀವು ಪದಗಳೆಂದು ವಿವಕ್ಷಿಸಿದ್ದೀರಿ.

ಉತ್ತರ - ಆಪಾತತಃ ರೂಢಿ ಇಲ್ಲದ್ದು ಲಿಂಗಾತ್ಮಕಶಬ್ದವೆನಿಸುತ್ತದೆ. ಅದು 'ಅನಂತಃ' 'ಅಂತರ್ಯಾಮೀ' ಇತ್ಯಾದಿಯಾಗಿ ಏಕಪ್ರಾತಿಪದಿಕರೂಪವೂ ಆಗಿರಬಹುದು. ಅಥವಾ ಅನೇಕಪದಸಮಭಿವ್ಯಾಹಾರರೂಪವೂ ಆಗಿರಬಹುದು. ಅಥವಾ 'ಸರ್ವೇಷು' 'ಯಸ್ಮಿನ್' ಇತ್ಯಾದಿಯಾಗಿ ಸಪ್ತಮೀವಿಭಕ್ತಿಪ್ರಾತಿಪದಿಕರೂಪವೂ ಆಗಿರಬಹುದು. ಒಟ್ಟು - ಧರ್ಮದ್ವಾರಾ ಧರ್ಮಿಯ ಉಪಸ್ಥಾಪಕವಾದದ್ದು ಲಿಂಗಾತ್ಮಕಶಬ್ದಗಳೆಂದು ಹೇಳಬಹುದು. ಯಾವುದು ನೇರವಾಗಿ ಧರ್ಮಿಯ ಉಪಸ್ಥಾಪಕವಾಗಿರುತ್ತದೋ ಅವು ನಾಮಾತ್ಮಕಶಬ್ದಗಳು.

ಹಿಂದೆ ಲಿಂಗಾತ್ಮಕಶಬ್ದದ ಲಕ್ಷಣದಲ್ಲಿ ಪದಗಳೆಂದು ವಿವಕ್ಷಿಸದಿದ್ದರೆ ವಾಕ್ಯಪ್ರಕರಣಾದಿಗಳಲ್ಲಿ ಅತಿವ್ಯಾಪ್ತಿದೋಷ ಹೇಳಲಾಗಿತ್ತು. ಆದರೆ ಈಗ ಧರ್ಮದ್ವಾರಾ ಧರ್ಮಿಯ ಉಪಸ್ಥಿತಿ ಇರಬೇಕೆಂದು ಹೇಳಿದ್ದಾರೆ. ವಾಕ್ಯಪ್ರಕರಣಾದಿಗಳು ಧರ್ಮದ್ವಾರಾ ಧರ್ಮಿಯ ಉಪಸ್ಥಾಪಕವಾಗಿಲ್ಲದ ಕಾರಣ ಅತಿವ್ಯಾಪ್ತಿ ಬರುವುದಿಲ್ಲ. ಇಲ್ಲಿ 'ಧರ್ಮದ್ವಾರಾ' ಎಂಬ ಶಬ್ದಕ್ಕೆ ವ್ಯಾಪ್ಯರೂಪವಾಗಿ ಸಖಂಡವಾದದ್ದೆಂದು ಅರ್ಥ. ಅಂದರೆ ಧರ್ಮವು ಧರ್ಮತಾವಚ್ಛೇದಕಕ್ಕೆ ವ್ಯಾಪ್ಯರೂಪವಾಗಿ ಇರಬೇಕು. ಮತ್ತು ಸಖಂಡವಾಗಿ ಇರಬೇಕು. ಹೀಗೆ ಹೇಳಿದ್ದರಿಂದ ಅಖಂಡಜಾತಿ ಉಪಸ್ಥಾಪಕವಾದ ಪದ್ಮ ಘಟ ಪಟಾದಿಶಬ್ದಗಳಲ್ಲಿ ಅತಿವ್ಯಾಪ್ತಿದೋಷ

ಬರುವುದಿಲ್ಲ. ಪದ್ಮಶಬ್ದವನ್ನು ಕೇಳಿದಾಗ ಪದ್ಮತ್ವೇನ ಪದ್ಮದ ಬೋಧ ಬರುತ್ತದೆ. ಆದರೆ ಪದ್ಮವು ಸಖಂಡವಾಗಿಲ್ಲ. 'ಧರ್ಮದ್ವಾರಾ' ಎಂಬ ಶಬ್ದಕ್ಕೆ ವ್ಯಾಪ್ಯರೂಪವಾಗಿರಬೇಕು, ಸಖಂಡವಾಗಿರಬೇಕೆಂದು ಅರ್ಥೈಸಿದ್ದರಿಂದ ಪರೋವರೀಯಸ್ತ್ವ ಉದ್ಗೀತತ್ವಗಳು ಲಿಂಗಾತ್ಮಕಶಬ್ದಗಳಾಗುತ್ತವೆ. 'ಯತ್ರ ಪರೋವರೀಯಸ್ತ್ವಮ್ ತತ್ರ ವಿಷ್ಣುತ್ವಮ್' ಎಂದು ವಿಷ್ಣುತ್ವಕ್ಕೆ ಪರೋವರೀಯಸ್ತ್ವವು ವ್ಯಾಪ್ಯವಾಗಿದೆ, ಮತ್ತು ಸಖಂಡವಾಗಿದೆ.

ಟೀಕಾರಾಯರು 'ಅನ್ಯತ್ರಪ್ರಸಿದ್ಧ್ಯಾದಿಗಳಂತೆ ಆಪಾತಪ್ರತೀತಿಯನ್ನು ಅನುಸರಿಸಿ ನಾಮಲಿಂಗಭೇದವನ್ನು ಹೇಳಬೇಕು' ಎಂದು ಹೇಳಿದ್ದಾರೆ. ಇಲ್ಲಿ 'ಆಪಾತಪ್ರತೀತ್ಯನುರೋಧೇನ' ಎಂಬದನ್ನು ಮೂರು ಬಗೆಯಲ್ಲಿ ವಿವರಿಸಿದಂತಾಯಿತು. ೧) ಆಪಾತತಃ ರೂಢಾನ್ಯೇವ ತಾನಿ ನಾಮಾನಿ, ತದ್‌ವಿಪರೀತಾನಿ ತು ಲಿಂಗಾನಿ ೨) ಆಪಾತತಃ ರೂಢಾನಿ ನಾಮಾನಿ, ಆಪಾತತಃ, ಯೌಗಿಕಾನಿ ಲಿಂಗಾನಿ ೩) ಧರ್ಮದ್ವಾರಾ ಧರ್ಮ್ಯುಪಸ್ಥಾಪಕಾನಿ ಲಿಂಗಾನಿ, ತದ್‌ವಿಪರೀತಾನಿ ಆಪಾತತಃ ರೂಢಾನಿ ಯೋಗರೂಢಯುಕ್ತಾನಿ ವಾ ತಾನಿ ನಾಮಾನಿ, ಹೀಗೆ ಗ್ರಂಥಕಾರರು ಟೀಕೆಯ ಮಾತಿಗೆ ಮೂರು ಬಗೆಯಲ್ಲಿ ವ್ಯಾಖ್ಯಾನಿಸಿದ್ದಾರೆ.

ಹೀಗೆ ಹೇಳಿದ್ದರಿಂದ ಸಕಲಶಬ್ದಗಳೂ ಸಹ ನಾಮ ಲಿಂಗಭೇದದಿಂದ ಎರಡವಿಧವಾಗಿದೆಯೆಂಬ 'ಸರ್ವೇಽಪಿ ನಾಮಲಿಂಗಾತ್ಮಕಯಾ ಪ್ರತ್ಯೇಕಂ ದ್ವಿವಿಧಾಃ' ಎಂಬ ಟೀಕೆಯನ್ನೂ ವ್ಯಾಖ್ಯಾನಿಸಿದಂತಾಯಿತು.

ಹಾಗಾದರೆ ನಾಮಾತ್ಮಕಶಬ್ದಗಳಿಗೆ ಒಂದು ಪಾದ; ಲಿಂಗಾತ್ಮಕಶಬ್ದಗಳಿಗೆ ಮತ್ತೊಂದು ಪಾದವೆಂಬ ಪಾದಭೇದ ಏಕೆ? ಈ ಹಿಂದೆಯೇ ಇದನ್ನು ಆಕ್ಷೇಪಿಸಲಾಗಿತ್ತು. ಇದಕ್ಕೆ 'ನಾಮ್ನಾಮ್' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಅನ್ಯತ್ರಪ್ರಸಿದ್ಧಿಯಲ್ಲಿ ನಾಮಲಿಂಗವೆಂಬ ಅವಾಂತರಭೇದವನ್ನು ವಿವಕ್ಷಿಸಿ ಪಾದಭೇದ ಮಾಡುವುದಾದರೆ ಉಭಯತ್ರಪ್ರಸಿದ್ಧಿಯಲ್ಲಿ ಮತ್ತು ಅನ್ಯತ್ರೈವಪ್ರಸಿದ್ಧಿಯಲ್ಲಿಯೂ ನಾಮಲಿಂಗವೆಂಬ ಅವಾಂತರಭೇದವನ್ನು ವಿವಕ್ಷಿಸಿ ಪಾದಭೇದ ಮಾಡಿರಿ; ಅಂದರೆ ಇನ್ನೂ ಎರಡು ಪಾದಗಳನ್ನು ರಚಿಸಿ ಆರು ಪಾದಗಳನ್ನಾಗಿ ವಿಭಾಗಿಸಿರಿ. ಈ ಆಕ್ಷೇಪಕ್ಕೆ 'ಅಧ್ಯಾಯೇ ಪಾದೇ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಒಂದು ಅಧ್ಯಾಯದಲ್ಲಿ ನಾಲ್ಕೇ ಪಾದಗಳಿರಬೇಕೆಂಬ ನಿಯಮವಿದೆ. ಯಾರೇ ಸೂತ್ರಕಾರರಾದರೂ ಒಂದು ಅಧ್ಯಾಯದಲ್ಲಿ ನಾಲ್ಕು ಪಾದಗಳಿಗಿಂತ ಹೆಚ್ಚಿನ ಪಾದಗಳನ್ನು ವಿಂಗಡಿಸಿಲ್ಲ. ಆದ್ದರಿಂದ ಉಭಯತ್ರಪ್ರಸಿದ್ಧಿಯಲ್ಲಾಗಲೀ ಅನ್ಯತ್ರೈವಪ್ರಸಿದ್ಧಿಯಲ್ಲಾಗಲೀ ಅವಾಂತರಭೇದವನ್ನು ವಿವಕ್ಷಿಸಿಲ್ಲ. ಒಂದು ಅಧ್ಯಾಯದಲ್ಲಿ ನಾಲ್ಕು ಪಾದಗಳು ಇರಲೇಬೇಕು. ಆದರೆ ಸಮನ್ವಯ ಮಾಡಬೇಕಾದ ಶಬ್ದಗಳು ಮಾತ್ರ ಮೂರುವಿಧ. ಮೂರುವಿಧಶಬ್ದಗಳನ್ನು ನಾಲ್ಕು ಪಾದಗಳಲ್ಲಿ ಹೇಗೆ ಸಮನ್ವಯ ಮಾಡುವುದು? ಆದ್ದರಿಂದ ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು ಬೇರೆ ಬೇರೆ ಪಾದಗಳಲ್ಲಿ ಮಾಡಲಾಗಿದೆ. ಇದನ್ನು ಗ್ರಂಥಕಾರರು 'ಪಾದಚತುಷ್ಟಯಾದಿ' ಎಂಬಲ್ಲಿರುವ ಆದಿಪದದಿಂದ ಸೂಚಿಸಿದ್ದಾರೆ.

ಅನ್ಯತ್ರಪ್ರಸಿದ್ಧಿಯಲ್ಲಿ ಅವಾಂತರಭೇದವನ್ನು ವಿವಕ್ಷಿಸಿದ್ದೀರಿ ಆದರೆ ಅನ್ಯತ್ರಪ್ರಸಿದ್ಧಿಯಲ್ಲಿ ಅವಾಂತರಭೇದವನ್ನು ವಿವಕ್ಷಿಸುವುದು ಬೇಡ. ಅವಿವಕ್ಷಿತವಾದ ಅನ್ಯತ್ರಪ್ರಸಿದ್ಧಿಯನ್ನೇ ಮೊದಲು ಹೇಳಿರಿ ಎಂಬ ಪ್ರಶ್ನೆ ಬಂದರೆ 'ಯದ್ವಾ' ಎಂಬ ಪಕ್ಷಾಂತರವನ್ನು ಹೇಳುತ್ತಿದ್ದಾರೆ.

ಅಥವಾ ಎಂಬುದರಿಂದ ಮತ್ತೊಂದು ನಿಮಿತ್ತವನ್ನು ವಿವರಿಸುತ್ತಿದ್ದಾರೆ. 'ಅವಾಂತರಭೇದೇನ ಪಾದಭೇದಃ' ಎಂಬ ಟೀಕೆಯನ್ನು ಇದರಿಂದ ವ್ಯಾಖ್ಯಾನ ಮಾಡಿದಂತಾಯಿತು.




ಇಲ್ಲಿಯ ತನಕ ಅನ್ಯತ್ರಪ್ರಸಿದ್ಧಾದಿಗಳ ಲಕ್ಷಣವನ್ನು ವಿಮರ್ಶಿಸಿದ್ದಾಯಿತು. ಇನ್ನು ಅನ್ಯತ್ರಪ್ರಸಿದ್ಧಾದಿಗಳ ಅವಾಂತರಭೇದದ ಬಗ್ಗೆ ವಿಚಾರ ಮಾಡೋಣ. ಅನ್ಯತ್ರಪ್ರಸಿದ್ಧಾದಿಗಳು ನಾಮಾತ್ಮಕ ಹಾಗು ಲಿಂಗಾತ್ಮಕವೆಂದು ಎರಡೆರಡು ವಿಧಗಳಾಗಿವೆ. ನಾಮಾತ್ಮಕ ಲಿಂಗಾತ್ಮಕ ಶಬ್ದಗಳಲ್ಲಿ ವೈಲಕ್ಷಣ್ಯವನ್ನು ಒಟ್ಟು ಮೂರು ಬಗೆಯಲ್ಲಿ ತೋರಿಸಬಹುದು.

೧) ಆಪಾತತಃ ರೂಢವೇ ಆದದ್ದು ನಾಮಾತ್ಮಕ
ಆಪಾತತಃ ಯೌಗಿಕ ಅಥವಾ ಯೋಗರೂಢವಾದದ್ದು ಲಿಂಗಾತ್ಮಕ

೨) ಆಪಾತತಃ ರೂಢವಾದದ್ದು ನಾಮಾತ್ಮಕ
ಆಪಾತತಃ ಯೋಗಿಕವಾದದ್ದು ಅಥವಾ ಯೋಗರೂಢವಾದ್ದು ಲಿಂಗಾತ್ಮಕ

೩) ಧರ್ಮದ ಮೂಲಕ ಧರ್ಮಿಯ ಉಪಸ್ಥಾಪಕವಾದದ್ದು ಲಿಂಗಾತ್ಮಕ
ಧರ್ಮಿಯನ್ನೇ ನೇರವಾಗಿ ತಿಳಿಸುತ್ತಿದ್ದರೆ ನಾಮಾತ್ಮಕ ಎಂದು.

ಅನ್ಯತ್ರಪ್ರಸಿದ್ಧಿಯು ನಾಮ, ಲಿಂಗವೆಂದು ಎರಡು ವಿಧವಾಗಿದೆ. ಆದ್ದರಿಂದ ನಾಮಾತ್ಮಕಶಬ್ದಗಳ ಸಮನ್ವಯಕ್ಕೆ ಪ್ರಥಮಪಾದವು, ಲಿಂಗಾತ್ಮಕ ಶಬ್ದಗಳ ಸಮನ್ವಯಕ್ಕೆ ದ್ವಿತೀಯಪಾದವು ಹೊರಟಿದೆ. ಹಾಗಾದರೆ ಉಭಯತ್ರಪ್ರಸಿದ್ಧಿಯಲ್ಲಿ ಮತ್ತು ಅನ್ಯತ್ರೈವಪ್ರಸಿದ್ಧಿಯಲ್ಲಿಯೂ ಪ್ರತ್ಯೇಕ ಪಾದಗಳಿಂದ ನಾಮ ಲಿಂಗಗಳ ಸಮನ್ವಯ ಮಾಡಬೇಕಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಮೂರು ಬಗೆಯಲ್ಲಿ ಉತ್ತರಿಸಬಹುದು -

೧) ಒಂದು ಅಧ್ಯಾಯದಲ್ಲಿ ನಾಲ್ಕೇ ಪಾದಗಳಿರಬೇಕು. ನಿಮ್ಮ ಪ್ರಕಾರ ಆರು ಪಾದಗಳಾಗಬೇಕಾಗುತ್ತವೆ.

೨) ನಾಮಾತ್ಮಕಶಬ್ದಗಳು ಪ್ರಧಾನವಾಗಿವೆ. ಲಿಂಗಾತ್ಮಕಶಬ್ದಗಳು ಬುದ್ಧಿಸ್ಥವಾಗಿವೆ. ಈಗ ಪ್ರಸಕ್ತವಾದ ಎರಡೂ ವಿಧ ಶಬ್ದಗಳನ್ನು ಮೂರನೆಯ ನಾಲ್ಕನೆಯ ಪಾದದಲ್ಲಿ ಒಟ್ಟಿಗೆ ಸಮನ್ವಯ ಮಾಡಿದ್ದಾರೆ.

೩) ಮೊದಲೆರಡು ಪಾದಗಳಲ್ಲಿ ನಾಮಲಿಂಗವೆಂಬ ಅವಾಂತರಭೇದವನ್ನು ವಿವಕ್ಷಿಸಿ ಪಾದಭೇದ ಮಾಡಿದ್ದಾರೆ. ಮೂರು ನಾಲ್ಕನೆಯ ಪಾದಗಳಲ್ಲಿ ನಾಮಲಿಂಗವೆಂಬ ಅವಾಂತರಭೇದವನ್ನು ವಿವಕ್ಷಿಸದೇ ಮಹಾಯೋಗ ವಿದ್ವದ್ರೂಢಿಗಳಿಂದ ಏಕೀಕರಿಸಿ ಒಟ್ಟಿಗೆ ಸಮನ್ವಯ ಮಾಡಿದ್ದಾರೆ. ಆದ್ದರಿಂದ ಸೂತ್ರಕಾರರು ವಿಭಾಗಿಸಿದ ಪಾದಭೇದವು ಅತ್ಯಂತ ಸಮಂಜಸವಾಗಿದೆ.



● ● ● ● ●

## ಪಾದಕ್ರಮ ನಿರೂಪಣೆ

**तात्पर्यचन्द्रिका –**

पादक्रमस्तु – चतुर्थपादीयसमन्वयस्यासर्वाधिकारिकत्वात् । तथा पादत्रयेण श्रुतिलिङ्गादिभिर्ब्रह्मणि समन्वये उक्ते तर्हि तैरेव श्रुतिलिङ्गादिभिरन्यपरताऽस्त्विति शङ्कायास्त्रितयानन्तरमेवोदयात्, तत्तच्छब्दप्रवृत्तिनिमित्तगुणमात्रसिद्धफलकत्वेन कारणत्वादिसिद्धिफलकत्वाभावाच्चान्त्यता । इतरयोरपि महामल्लभङ्गन्यायेनान्यत्रप्रसिद्धसमन्वयस्य प्राथम्यम् ।

तदुक्तम् अनुव्याख्याने –

तत्र प्रथमतोऽन्यत्रप्रसिद्धानां समन्वयः ।
शब्दानां वाच्य एवात्र महामल्लेशभङ्गवत् ।। इत्यादि ।

यद्वा – अन्यत्रप्रसिद्धेष्वन्यपरत्वस्य प्रसिद्धिमात्रमूलत्वेन स्थूलत्वात् उभयत्रप्रसिद्धेषु "रुद्रो वाव लोकाधारः" इत्यादिश्रुत्यादिमूलत्वेन सूक्ष्मत्वात् अन्यत्रैवप्रसिद्धेषु पुनः प्रसिद्धिः श्रुतिलिङ्गादिकं चेत्युभयमूलत्वात्तन्निरासकपादक्रमः। अयं च पक्षो भाष्येऽन्यत्रप्रसिद्धादिशब्दप्रयोगादेव सूचितः ।

केचित्तु उभयत्रप्रसिद्धेरन्यत्रप्रसिद्धनिरूप्यत्वादन्यत्रैवप्रसिद्धेश्चैवकारव्यावर्त्यतया तदुभयनिरूप्यत्वात् पादक्रम इत्याहुः ।

तन्न, उभयत्रप्रसिद्ध्यादेरुक्तरीत्या अन्यत्रप्रसिद्धिनिरूप्यत्वात् । अन्यत्रप्रसिद्धेष्वपि नाम्नां प्रधानभूतधर्मिणि साक्षाद्धीजनकत्वात् यौगिकस्यावयवार्थे रूढ्यपेक्षावत् रूढस्य योगापेक्षाया अभावाच्च प्राथम्यम् ।

यद्वा – लिङ्गैर्नामसमन्वये उक्ते सन्दिग्धब्रह्मपरत्वेषु हेतूकृतलिङ्गेष्वेव वा तज्जातीयत्वेन बुद्धिस्थेषु लिङ्गान्तरेषु वा कथं ब्रह्मपरत्वमिति शङ्कायां तन्निरासात् लिङ्गानामानन्तर्यम् ।

लिङ्गसमन्वयस्तु प्रायेण निर्णीतलिङ्गान्तराधीनो न तु नामाधीन इति वैषम्यम् । तस्माद्युक्तः पादक्रमः ।

ಅನುವಾದ - ಪಾದಕ್ರಮ ಹೀಗಿದೆ - ಅನ್ಯತ್ರೈವಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಕೊನೆಗೇಕೆ ಹೇಳಿದರು ಮೊದಲೇಕೆ ಹೇಳಲಿಲ್ಲ? ಎಂಬ ಪ್ರಶ್ನೆ ಬರುತ್ತದೆ. ಆದರೆ ನಾಲ್ಕನೆಯ ಪಾದದಲ್ಲಿ ಸಮನ್ವಯ ಮಾಡುವ ಶಬ್ದಗಳು ಸರ್ವಾಧಿಕಾರಿಕವಲ್ಲ ಬ್ರಹ್ಮಾದಿದೇವತೆಗಳಿಂದಷ್ಟೇ ತಿಳಿಯಲು ಸಾಧ್ಯವಾದವುಗಳು. ಆದ್ದರಿಂದ ಕೊನೆಯಲ್ಲಿ ಹೇಳಲಾಗಿದೆ.

ಮತ್ತು ಮೊದಲ ಮೂರು ಪಾದಗಳಿಂದ ಶ್ರುತಿ ಲಿಂಗಾದಿಗಳಿಂದ ಬ್ರಹ್ಮನಲ್ಲಿ ಸಮನ್ವಯ ಮಾಡಿದ ಮೇಲೆ ಅದೇ ಶ್ರುತಿಲಿಂಗಾದಿಗಳಿಂದಲೇ ಅವ್ಯಕ್ತಾದಿಶಬ್ದಗಳೂ ಅನ್ಯಪರವಾಗಲಿ ಎಂಬ ಆಶಂಕೆ ಬರುತ್ತದೆ. ಈ ಆಶಂಕೆಯು ಮೂರು ಪಾದಗಳು ಮುಗಿದ ಮೇಲೆ ಬರುತ್ತದೆ ಹೊರತು ಅದರ ಮೊದಲು ಬರುವುದಿಲ್ಲ. ಅದನ್ನು ಪರಿಹರಿಸುವ ನಾಲ್ಕನೆಯ ಪಾದವು ಕೊನೆಯಲ್ಲಿ ಇರುವುದು ಅತ್ಯಂತ ಸೂಕ್ತವಾಗಿದೆ.

ಮತ್ತು ಮೊದಲು ಮೂರು ಪಾದದಲ್ಲಿ ಮಾಡಿದ ಸಮನ್ವಯವು ಜಗತ್‌ಕಾರಣತ್ವ ಮೊದಲಾದ ಗುಣಗಳ ಸಿದ್ಧಿಯೇ ಫಲವಾಗಿ ಉಳ್ಳದ್ದು. ಆದರೆ ನಾಲ್ಕನೆಯ ಪಾದದಲ್ಲಿ ಮಾಡಿದ ಸಮನ್ವಯವು ಎಲ್ಲ ವೈದಿಕಶಬ್ದಗಳಿಗೆ ಪ್ರವೃತ್ತಿನಿಮಿತ್ತವಾದ ಗುಣಗಳ ಸಿದ್ಧಿಯೇ ಫಲವಾಗಿವುಳ್ಳದ್ದು. ಆದ್ದರಿಂದ ನಾಲ್ಕನೆಯ ಪಾದವು ಕೊನೆಯಲ್ಲಿರುವುದೇ ಸೂಕ್ತವಾಗಿದೆ.

ಇನ್ನು ಉಭಯತ್ರಪ್ರಸಿದ್ಧಶಬ್ದಗಳಲ್ಲಿ ಮತ್ತು ಅನ್ಯತ್ರಪ್ರಸಿದ್ಧಶಬ್ದಗಳಲ್ಲಿ ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವನ್ನೇ ಮೊದಲೇಕೆ ಮಾಡಿದ್ದಾರೆ? ಎಂದರೆ ಮಹಾಮಲ್ಲಭಂಗನ್ಯಾಯದಂತೆ ಬಲಿಷ್ಠವಾದ ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವನ್ನು ಮೊದಲು ಮಾಡುವುದೇ ಹೆಚ್ಚು ಸೂಕ್ತ. ಇದನ್ನು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

ತತ್ರ ಪ್ರಥಮತೋಽನ್ಯತ್ರಪ್ರಸಿದ್ಧಾನಾಂ ಸಮನ್ವಯಃ ।
ಶಬ್ದಾನಾಂ ವಾಚ್ಯ ಏವಾತ್ರ ಮಹಾಮಲ್ಲೇಭಭಂಗವತ್ ॥

ಮಹಾಮಲ್ಲಭಂಗನ್ಯಾಯದಂತೆ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯನ್ನೇ ಮೊದಲು ಮಾಡಬೇಕು, ಎಂದು.

ಅಥವಾ ಅನ್ಯತ್ರಪ್ರಸಿದ್ಧಶಬ್ದಗಳಲ್ಲಿ ಅನ್ಯಪರತ್ವವು ಪ್ರಸಿದ್ಧಮಾತ್ರಮೂಲಕವಾಗಿದೆ. ಆದ್ದರಿಂದ ಇದು ಸ್ಥೂಲವಾಗಿದೆ. ಆದರೆ ಉಭಯತ್ರಪ್ರಸಿದ್ಧಶಬ್ದಗಳಲ್ಲಿ ಅನ್ಯಪರತ್ವವು ಪ್ರಸಿದ್ಧಿಮೂಲಕವಲ್ಲ. 'ರುದ್ರೋ ವಾವ ಲೋಕಾಧಾರಃ' ಇತ್ಯಾದಿ ಶ್ರುತಿಮೂಲಕವಾಗಿದೆ. ಆದ್ದರಿಂದ ಇದು ಸೂಕ್ಷ್ಮ. ಇನ್ನು ಅನ್ಯತ್ರೈವಪ್ರಸಿದ್ಧ ಶಬ್ದಗಳಲ್ಲಿ ಅನ್ಯಪರತ್ವವು ಪ್ರಸಿದ್ಧಿಮೂಲಕವೂ ಶ್ರುತ್ಯಾದಿಮೂಲಕವೂ ಆಗಿದೆ. ಆದ್ದರಿಂದ ಇದು ಸೂಕ್ಷ್ಮತಮ. ಮೊದಲು ಸ್ಥೂಲವಾದ ಶಬ್ದಗಳ ಸಮನ್ವಯ ಮಾಡಿ ತದನಂತರ ಸೂಕ್ಷ್ಮವಾದ ಮತ್ತು ಸೂಕ್ಷ್ಮತಮವಾದ ಶಬ್ದಗಳ ಸಮನ್ವಯ ಮಾಡುವುದು ಸಮಂಜಸವೆಂದು ಈ ಪಾದಗಳ ವಿಭಾಗ ಅತ್ಯಂತ ಅರ್ಥಪೂರ್ಣವಾಗಿದೆ. ಈ ವಿಷಯವನ್ನು 'ಅನ್ಯತ್ರಪ್ರಸಿದ್ಧ' ಇತ್ಯಾದಿ

ಶಬ್ದಪ್ರಯೋಗಗಳಿಂದಲೇ ಭಾಷ್ಯದಲ್ಲಿ ಸೂಚಿಸಿದ್ದಾರೆ. ಕೆಲವರು ಹೀಗೆ ಹೇಳುತ್ತಾರೆ - ಉಭಯತ್ರ-ಪ್ರಸಿದ್ಧಿಗೆ ಅನ್ಯತ್ರಪ್ರಸಿದ್ಧಿಯು ನಿರೂಪಕ (ಜ್ಞಾಪಕ)ಗಳಾದ್ದರಿಂದ ಅನ್ಯತ್ರಪ್ರಸಿದ್ಧಿಯನ್ನು ಮೊದಲು ಹೇಳಿದ್ದಾರೆ. ಇನ್ನು ಅನ್ಯತ್ರೈವಪ್ರಸಿದ್ಧಿಯು ಉಭಯತ್ರಪ್ರಸಿದ್ಧಿಯಿಂದ ನಿರೂಪ್ಯವಾಗಿದೆ. ಏಕೆಂದರೆ ಅನ್ಯತ್ರೈವ ಎಂಬಲ್ಲಿರುವ ಏವಕಾರದಿಂದ ವ್ಯಾವರ್ತ್ಯವಾದದ್ದು ಉಭಯತ್ರಪ್ರಸಿದ್ಧಿಯೇ ಆಗಿದೆ. ಆದ್ದರಿಂದ ಪಾದಕ್ರಮವು ಯುಕ್ತವಾಗಿದೆಯೆಂದು.

ಇದು ತಪ್ಪು - ಉಭಯತ್ರಪ್ರಸಿದ್ಧಿಯು ಶ್ರುತ್ಯಂತರಮೂಲಕವಾಗಿರುತ್ತದೆ ಹೊರತು ಅನ್ಯತ್ರಪ್ರಸಿದ್ಧಿ ಮೂಲಕವಾಗಿರುವುದಿಲ್ಲ. ಆದ್ದರಿಂದ ಅನ್ಯತ್ರಪ್ರಸಿದ್ಧಿಯು ನಿರೂಪಕವಲ್ಲ. ಅದರಂತೆ ಅನ್ಯತ್ರೈವಪ್ರಸಿದ್ಧಿಗೆ ಉಭಯತ್ರಪ್ರಸಿದ್ಧಿಯೂ ನಿರೂಪಕವಾಗಿಲ್ಲ.

ಇನ್ನು ಅನ್ಯತ್ರಪ್ರಸಿದ್ಧಿಯಲ್ಲಿ ಮೊದಲು ನಾಮ ಆಮೇಲೆ ಲಿಂಗ ಎಂಬ ಕ್ರಮವೇಕೆ? ಎಂದರೆ ನಾಮಾತ್ಮಕಶಬ್ದಗಳು ಸಾಕ್ಷಾತ್ತಾಗಿಯೇ ಧರ್ಮಿಯ ಉಪಸ್ಥಾಪಕಗಳಾಗಿವೆ. ಆದರೆ ಯೌಗಿಕಶಬ್ದಗಳು ಅವಯವಾರ್ಥವನ್ನು ಅಪೇಕ್ಷಿಸುತ್ತವೆ. ಆದರೆ ರೂಢಶಬ್ದವು ಅವಯವಾರ್ಥವನ್ನು ಅಪೇಕ್ಷಿಸದ ಕಾರಣ ಪ್ರಬಲವಾಗಿದೆ. ಆದ್ದರಿಂದ ಸಾಕ್ಷಾತ್ತಾಗಿ ಧರ್ಮಿಯ ಉಪಸ್ಥಾಪಕವಾದದ್ದರಿಂದ ನಾಮಾತ್ಮಕಶಬ್ದಗಳಿಗೆ ಪ್ರಾಥಮ್ಯವು ಯುಕ್ತವಾಗಿದೆ.

ಅಥವಾ ಲಿಂಗಗಳಿಂದಲೇ ಎಲ್ಲೆಡೆ ನಾಮಸಮನ್ವಯ ಮಾಡಿದ್ದಾರೆ. ಹಾಗಾದರೆ ಹೇತುಭೂತವಾದ ಲಿಂಗಾತ್ಮಕಶಬ್ದಗಳು ಹೇಗೆ ಬ್ರಹ್ಮಪರಗಳಾಗುತ್ತವೆ? ಅಥವಾ ನಾಮಸಮನ್ವಯಕ್ಕೆ ಹೇತುಭೂತವಾದ ಲಿಂಗಗಳಿಗೆ ಸಮಾನಜಾತೀಯವಾಗಿ ಬುದ್ಧಿಸ್ಥವಾದ ಲಿಂಗಾಂತರಗಳು ಹೇಗೆ ಬ್ರಹ್ಮಪರವಾಗುತ್ತವೆ? ಎಂಬ ಶಂಕೆ ಬರುತ್ತದೆ. ಇದರ ನಿರಾಸಕ್ಕಾಗಿ ಎರಡನೆಯ ಪಾದ ಹೊರಟಿದ್ದರಿಂದ ನಾಮಸಮನ್ವಯದ ಆನಂತರ್ಯ ಲಿಂಗಸಮನ್ವಯಕ್ಕೆ ಉಚಿತವಾಗಿದೆ.

ಹಾಗಾದರೆ ನಾಮಸಮನ್ವಯವು ಲಿಂಗಾಧೀನವಾಯಿತು. ಲಿಂಗಸಮನ್ವಯವು ನಾಮಾಧೀನವೆಂದು ಅನ್ಯೋನ್ಯಾಶ್ರಯ ಬರುತ್ತದಲ್ಲ? ಎಂದರೆ ಹಾಗೇನಿಲ್ಲ. ಸಾಮಾನ್ಯವಾಗಿ ನಿರ್ಣೀತವಾದ ಮತ್ತೊಂದು ಲಿಂಗವನ್ನು ಇಟ್ಟುಕೊಂಡೇ ಲಿಂಗಸಮನ್ವಯವನ್ನು ಮಾಡುತ್ತಾರೆ. ಹೊರತು ನಾಮಾಧೀನವಾಗಿ ಮಾಡುವುದಿಲ್ಲ. ಹೀಗೆ ವೈಷಮ್ಯವಿರುವದರಿಂದ ಅನ್ಯೋನ್ಯಾಶ್ರಯ ಬರುವುದಿಲ್ಲ. ಆದ್ದರಿಂದ ನಾಲ್ಕೂ ಪಾದಗಳ ಕ್ರಮವು ಅತ್ಯಂತ ಯುಕ್ತಿಯುಕ್ತವಾಗಿದೆ.

### ಕಠಿಣಪದಾರ್ಥ

ಇತರಯೋರಪಿ = ಅನ್ಯತ್ರ ಉಭಯತ್ರಪ್ರಸಿದ್ಧಶಬ್ದಗಳಲ್ಲಿಯೂ, ತದುಕ್ತಮ್ = ಉಪಾಸನಾಪಾದದಲ್ಲಿ ಹೇಳಿದ್ದಾರೆ, ತತ್ರ = ಪ್ರಥಮಾಧ್ಯಾಯದಲ್ಲಿ, ಪ್ರಥಮತಃ = ಉಭಯತ್ರಪ್ರಸಿದ್ಧಶಬ್ದಗಳ ಸಮನ್ವಯಕ್ಕಿಂತ ಮೊದಲು, ಶಬ್ದಾನಾಮ್ = ನಾಮಾತ್ಮಕ ಲಿಂಗಾತ್ಮಕಶಬ್ದಗಳನ್ನು, ಅತ್ರ = ವಿಷ್ಣುವಿನಲ್ಲಿ, ಸೂಕ್ತತ್ವಾತ್ = ಶ್ರುತಿಯು

ಪ್ರಬಲವಾದ್ದರಿಂದ ಶ್ರುತಿನಿರಾಸವು ಕಠಿಣವಾಗಿದೆ. ಹಾಗಾಗಿ ಉಭಯತ್ರಪ್ರಸಿದ್ಧವು ಪ್ರಬಲವಾದ್ದರಿಂದ, ಉಭಯಮೂಲತ್ವಾತ್ = ಪ್ರಸಿದ್ಧಿ ಹಾಗು ಶ್ರುತಿಲಿಂಗಾದಿಮೂಲವಾದ್ದರಿಂದ, ಯೌಗಿಕಸ್ಯ = ಲಿಂಗಾತ್ಮಕ ಶಬ್ದಕ್ಕೆ

**प्रकाशः – प्रागाक्षिप्तं पादक्रमं च साधयति – पादक्रमस्त्विति ।। असर्वेति ।।** 'महासमन्वये तस्मिन्नाधिकारोऽखिलस्य हि ।' इत्युक्तेरिति भावः । हेत्वन्तरमाह – **तथेति ।।** निमित्तान्तरं चाह – **तत्तदिति ।।** एतच्च निमित्तद्वयं ''इन्द्रादिशब्दानां श्रुतिलिङ्गादिबलाद्विष्णौ समन्वयः प्राक् प्रतिपादितः, इदानीं श्रुतिलिङ्गादिभिरेवान्यत्रप्रसिद्धानां'' इत्यादिकया ''पूर्वं स्रष्टृत्वादिगुणाभिधायकानाम्'' इत्यादिकया चतुर्थपादीयटीकया लब्धमिति बोध्यम् ।। **इतरयोरिति ।।** अन्यत्रोभयत्रप्रसिद्धशब्दसमन्वययोरित्यर्थः ।

**तदुक्तम् इति ।** उपासनापाद इत्यर्थः । 'तत्र' प्रथमेऽध्याये, 'प्रथमतः' उभयत्रप्रसिद्धशब्दसमन्वयात्पूर्वं, 'शब्दानां' नामलिङ्गात्मकानां, 'अत्र' विष्णौ ।। **महामल्लेति ।।** यथा अनेकेषु मल्लेषु प्रत्यर्थितयाऽवस्थितेष्वपि कृष्णेन प्रधानत्वाच्चाणूरादिमल्लानामेवादौ भङ्गो विहितस्तथेत्यर्थः । उभयत्रप्रसिद्धानां हि समन्वयेऽन्यत्रप्रसिद्धिनिरासमात्रे यत्नः, अन्यत्रप्रसिद्धानां तु विष्णौ प्रसिद्धिरप्युपपादनीयेति, तत एषां प्राथम्यमित्यर्थः । आदिपदेन –

> इतोऽप्यभ्यधिकत्वेऽपि तुर्यपादोदितस्य तु ।
> महासमन्वये तस्मिन्नाधिकारोऽखिलस्य हि ।।

इति गृह्यते ।

एतेन – ''तेष्वन्यत्रैवप्रसिद्धसमन्वयस्य'' इत्यादिटीकाऽनुव्याख्यानमूलेति व्याख्याता । एवमनुव्याख्यानोक्तक्रममुक्त्वाऽधुनैकरूप्याय समन्वयत्रयस्यापि सोपानारोहणन्यायेन भाष्यसूचितं क्रममाह – **यद्वेति ।। स्थूलत्वादिति ।।** प्रसिद्धेर्भ्रमत्वेऽप्युपपत्त्या दुर्बलत्वादिति भावः ।। **सूक्ष्मत्वादिति ।।** श्रुतेः प्राबल्येन तन्निरासस्य क्लेशसाध्यत्वेनोभयत्रप्रसिद्धेः प्राबल्यादित्यर्थः ।। **उभयेति ।।** प्रसिद्धिमूलत्वात् श्रुतिलिङ्गादिमूलत्वाच्चेत्यर्थः । ऋजूनां मतमनूद्य निराह – **केचित्त्विति ।। उक्तरीत्येति ।।** ''श्रुत्यन्तरादिभिः'' इत्यादिनेति भावः । पूर्वं ''तत्र''

इत्यनुव्याख्यानं "ग्रन्थोऽयमपि बह्वर्थः" इत्युक्त्वा स्वयमर्थान्तरमभिप्रेत्यान्यत्रोभयत्रप्रसिद्धसमन्वययोः क्रमे सम्मतित्वेनोदाहृतम् । इदानीं तस्यैव 'तत्र' प्रथमेऽध्याये, 'प्रथमतः' प्रथमे पादे, 'शब्दानां' नामात्मकानां, इति सुधोक्तमेवार्थमभिप्रेत्य "अन्यपराणां मध्ये लिङ्गात्मकानाम्" इत्यादिटीकां विवृण्वान आद्यद्वयस्यापि महामल्लभङ्गन्यायेन क्रममाह – **अन्यत्रप्रसिद्धेष्वपीति** ॥

'यौगिकस्य' लिङ्गस्य । तथा च सुधोक्तदिशा नाम्नामन्यबुद्धिजनकत्वं साक्षादेव, लिङ्गानां तु व्यवधानेनेति नामसमन्वये यत्नगौरवमिति महामल्लभङ्गन्यायेन नाम्नां प्राथम्यमित्यर्थः ।

तेषामन्यगतत्वे तु न स्यात्सम्यक् समन्वयः ।
इत्येवाशेषलिङ्गानां ब्रह्मण्येव समन्वयम् ॥

इत्यनुव्याख्यानं हृदि कृत्वा सङ्गत्यन्तरमाह – **यद्वेति** ॥ 'सन्दिग्ध' इति बहुव्रीहिः। "ज्योतिश्चरण" इत्यादौ हेतूकृतानामदृश्यत्वादीनां च द्वितीये समन्वयोक्तेरिति भावः । ननु प्राग्घेतूकृतलिङ्गानामेव लिङ्गपादे समन्वयानुक्तेः कथमेवमित्यत आह – **तज्जातीयत्वेनेति** ॥ तल्लिङ्गोपेतवाक्यगततयैकवाक्यस्थत्वादिना तज्जातीयत्वं ध्येयम् । नामपादे हि सर्वश्रुतिगतान्यत्रप्रसिद्धनामानि सर्वाण्यपि तत्र तत्र स्थितैः सर्वैर्लिङ्गैर्ब्रह्मनिष्ठानीति प्राक् साधिते सति, तत्रासन्दिग्धलिङ्गग्रहाणेनेतरेषां लोकतोन्यत्रप्रसिद्धश्रुत्यादिसाहित्येन सन्दिग्धब्रह्मपरत्वेष्वब्रह्मपरत्वशङ्कानिरासादानन्तर्यमित्यर्थः ।

ननु लिङ्गसमन्वयस्य नामाधीनत्वे लिङ्गानामेव प्राथम्यं स्यादित्यत आह – **लिङ्गसमन्वयस्त्विति** ॥ क्वचिद्ब्रह्मादिनामाधीनोऽप्यस्तीति 'प्रायेण' इत्युक्तम् । एतेनानवस्था च प्रत्युक्ता ।

**गुरुराजीयम्** – ननु तथाप्यादावन्यत्रप्रसिद्धनामात्मकानां तदनन्तरमन्यत्रप्रसिद्धलिङ्गात्मकशब्दानां तत उभयत्रप्रसिद्धनामलिङ्गात्मकानां ततोन्यत्रैवप्रसिद्धानामिति क्रमः कुत इत्यतः "तत्र प्रथमतोऽन्यत्र" इत्याद्यनुव्याख्यानानुसारेण पादक्रममाह – **पादक्रमस्त्विति** ॥

ಪ್ರಬಲವಾದ್ದರಿಂದ ಶ್ರುತಿನಿರಾಸವು ಕಠಿಣವಾಗಿದೆ. ಹಾಗಾಗಿ ಉಭಯತ್ರಪ್ರಸಿದ್ಧವು ಪ್ರಬಲವಾದ್ದರಿಂದ, ಉಭಯಮೂಲತ್ವಾತ್ = ಪ್ರಸಿದ್ಧಿ ಹಾಗು ಶ್ರುತಿಲಿಂಗಾದಿಮೂಲವಾದ್ದರಿಂದ, ಯೌಗಿಕಸ್ಯ = ಲಿಂಗಾತ್ಮಕ ಶಬ್ದಕ್ಕೆ

**प्रकाशः** – प्रागाक्षिप्तं पादक्रमं च साधयति – **पादक्रमस्त्विति** ।। **असर्वेति** ।। 'महासमन्वये तस्मिन्नाधिकारोऽखिलस्य हि ।' इत्युक्तेरिति भावः । हेत्वन्तरमाह – **तथेति** ।। निमित्तान्तरं चाह – **तत्तदिति** ।। एतच्च निमित्तद्वयं ''इन्द्रादिशब्दानां श्रुतिलिङ्गादिबलाद्विष्णौ समन्वयः प्राक् प्रतिपादितः, इदानीं श्रुतिलिङ्गादिभिरेवान्यत्रप्रसिद्धानां'' इत्यादिकया ''पूर्वं स्रष्टृत्वादिगुणाभिधायकानाम्'' इत्यादिकया चतुर्थपादीयटीकया लब्धमिति बोध्यम् ।। **इतरयोरिति** ।। अन्यत्रोभयत्रप्रसिद्धशब्दसमन्वययोरित्यर्थः ।

**तदुक्तम्** इति । उपासनापाद इत्यर्थः । 'तत्र' प्रथमेऽध्याये, 'प्रथमतः' उभयत्रप्रसिद्धशब्दसमन्वयात्पूर्वं, 'शब्दानां' नामलिङ्गात्मकानां, 'अत्र' विष्णौ ।। **महामल्लेति** ।। यथा अनेकेषु मल्लेषु प्रत्यर्थितयाऽवस्थितेष्वपि कृष्णेन प्रधानत्वाच्चाणूरादिमल्लानामेवादौ भङ्गो विहितस्तथेत्यर्थः । उभयत्रप्रसिद्धानां हि समन्वयेऽन्यत्रप्रसिद्धिनिरासमात्रे यत्नः, अन्यत्रप्रसिद्धानां तु विष्णौ प्रसिद्धिरप्युपपादनीयेति, तत एषां प्राथम्यमित्यर्थः । आदिपदेन –

इतोऽप्यभ्यधिकत्वेऽपि तुर्यपादोदितस्य तु ।
महासमन्वये तस्मिन्नाधिकारोऽखिलस्य हि ।।

इति गृह्यते ।

एतेन – ''तेष्वन्यत्रैवप्रसिद्धसमन्वयस्य'' इत्यादिटीकाऽनुव्याख्यानमूलेति व्याख्याता । एवमनुव्याख्यानोक्तक्रममुक्त्वाऽधुनैकरूप्याय समन्वयत्रयस्यापि सोपानारोहणन्यायेन भाष्यसूचितं क्रममाह – **यद्वेति** ।। **स्थूलत्वादिति** ।। प्रसिद्धेर्भ्रमत्वेऽप्युपपत्त्या दुर्बलत्वादिति भावः ।। **सूक्ष्मत्वादिति** ।। श्रुतेः प्राबल्येन तन्निरासस्य क्लेशसाध्यत्वेनोभयत्रप्रसिद्धेः प्राबल्यादित्यर्थः ।। **उभयेति** ।। प्रसिद्धिमूलत्वात् श्रुतिलिङ्गादिमूलत्वाच्चेत्यर्थः । ऋजूनां मतमनूद्य निराह – **केचित्त्विति** ।। **उक्तरीत्येति** ।। ''श्रुत्यन्तरादिभिः'' इत्यादिनेति भावः । पूर्वं ''तत्र''

इत्यनुव्याख्यानं ''ग्रन्थोऽयमपि बह्वर्थः'' इत्युक्त्वा स्वयमर्थान्तरमभिप्रेत्यान्यत्रोभयत्रप्रसिद्धसमन्वययोः क्रमे सम्मतित्वेनोदाहृतम् । इदानीं तस्यैव 'तत्र' प्रथमेऽध्याये, 'प्रथमतः' प्रथमे पादे, 'शब्दानां' नामात्मकानां, इति सुधोक्तमेवार्थमभिप्रेत्य ''अन्यपराणां मध्ये लिङ्गात्मकानाम्'' इत्यादिटीकां विवृण्वान आद्यद्वयस्यापि महामल्लभङ्गन्यायेन क्रममाह – **अन्यत्रप्रसिद्धेष्वपीति** ।।

'यौगिकस्य' लिङ्गस्य । तथा च सुधोक्तदिशा नाम्नामन्यबुद्धिजनकत्वं साक्षादेव, लिङ्गानां तु व्यवधानेनेति नामसमन्वये यत्नगौरवमिति महामल्लभङ्गन्यायेन नाम्नां प्राथम्यमित्यर्थः ।

तेषामन्यगतत्वे तु न स्यात्सम्यक् समन्वयः ।
इत्येवाशेषलिङ्गानां ब्रह्मण्येव समन्वयम् ।।

इत्यनुव्याख्यानं हृदि कृत्वा सङ्गत्यन्तरमाह – **यद्वेति** ।। 'सन्दिग्ध' इति बहुव्रीहिः। ''ज्योतिश्चरण'' इत्यादौ हेतूकृतानामदृश्यत्वादीनां च द्वितीये समन्वयोक्तेरिति भावः । ननु प्राग्घेतूकृतलिङ्गानामेव लिङ्गपादे समन्वयानुक्तेः कथमेवमित्यत आह – **तज्जातीयत्वेनेति** ।। तल्लिङ्गोपेतवाक्यगततयैकवाक्यस्थत्वादिना तज्जातीयत्वं ध्येयम् । नामपादे हि सर्वश्रुतिगतान्यत्रप्रसिद्धनामानि सर्वाण्यपि तत्र तत्र स्थितैः सर्वैर्लिङ्गैर्ब्रह्मनिष्ठानीति प्राक् साधिते सति, तत्रासन्दिग्धलिङ्गग्रहाणेनेतरेषां लोकतोन्यत्रप्रसिद्धश्रुत्यादिसाहित्येन सन्दिग्धब्रह्मपरत्वेष्वब्रह्मपरत्वशङ्कानिरासादानन्तर्यमित्यर्थः ।

ननु लिङ्गसमन्वयस्य नामाधीनत्वे लिङ्गानामेव प्राथम्यं स्यादित्यत आह – **लिङ्गसमन्वयस्त्विति** ।। क्वचिद्ब्रह्मादिनामाधीनोऽप्यस्तीति 'प्रायेण' इत्युक्तम् । एतेनानवस्था च प्रत्युक्ता ।

**गुरुराजीयम्** – ननु तथाप्यादावन्यत्रप्रसिद्धनामात्मकानां तदनन्तरमन्यत्रप्रसिद्धलिङ्गात्मकशब्दानां तत उभयत्रप्रसिद्धनामलिङ्गात्मकानां ततोन्यत्रैवप्रसिद्धानामिति क्रमः कुत इत्यतः ''तत्र प्रथमतोऽन्यत्र'' इत्याद्यनुव्याख्यानानुसारेण पादक्रममाह – **पादक्रमस्त्विति** ।।

ಪ್ರಬಲವಾದ್ದರಿಂದ ಶ್ರುತಿನಿರಾಸವು ಕಠಿಣವಾಗಿದೆ. ಹಾಗಾಗಿ ಉಭಯತ್ರಪ್ರಸಿದ್ಧವು ಪ್ರಬಲವಾದ್ದರಿಂದ, ಉಭಯಮೂಲತ್ವಾತ್ = ಪ್ರಸಿದ್ಧಿ ಹಾಗು ಶ್ರುತಿಲಿಂಗಾದಿಮೂಲವಾದ್ದರಿಂದ, ಯೌಗಿಕಸ್ಯ = ಲಿಂಗಾತ್ಮಕ ಶಬ್ದಕ್ಕೆ

**प्रकाशः** – प्रागाक्षिप्तं पादक्रमं च साधयति – **पादक्रमस्त्विति** ।। **असर्वेति** ।। 'महासमन्वये तस्मिन्नाधिकारोऽखिलस्य हि ।' इत्युक्तेरिति भावः । हेत्वन्तरमाह – **तथेति** ।। निमित्तान्तरं चाह – **तत्तदिति** ।। एतच्च निमित्तद्वयं ''इन्द्रादिशब्दानां श्रुतिलिङ्गादिबलाद्विष्णौ समन्वयः प्राक् प्रतिपादितः, इदानीं श्रुतिलिङ्गादिभिरेवाऽन्यत्रप्रसिद्धानां'' इत्यादिकया ''पूर्वं स्रष्टृत्वादिगुणाभिधायकानाम्'' इत्यादिकया चतुर्थपादीयटीकया लब्धमिति बोध्यम् ।। **इतरयोरिति** ।। अन्यत्रोभयत्रप्रसिद्धशब्दसमन्वययोरित्यर्थः ।

**तदुक्तम्** इति । उपासनापाद इत्यर्थः । 'तत्र' प्रथमेऽध्याये, 'प्रथमतः' उभयत्रप्रसिद्धशब्दसमन्वयात्पूर्वं, 'शब्दानां' नामलिङ्गात्मकानां, 'अत्र' विष्णौ ।। **महामल्लेति** ।। यथा अनेकेषु मल्लेषु प्रत्यर्थितयाऽवस्थितेष्वपि कृष्णेन प्रधानत्वाच्चाणूरादिमल्लानामेवादौ भङ्गो विहितस्तथेत्यर्थः । उभयत्रप्रसिद्धानां हि समन्वयेऽन्यत्रप्रसिद्धिनिरासमात्रे यत्नः, अन्यत्रप्रसिद्धानां तु विष्णौ प्रसिद्धिरप्युपपादनीयेति, तत एषां प्राथम्यमित्यर्थः । आदिपदेन –

इतोऽप्यभ्यधिकत्वेऽपि तुर्यपादोदितस्य तु ।
महासमन्वये तस्मिन्नाधिकारोऽखिलस्य हि ।।

इति गृह्यते ।

एतेन – ''तेष्वन्यत्रैवप्रसिद्धसमन्वयस्य'' इत्यादिटीकाऽनुव्याख्यानमूलेति व्याख्याता । एवमनुव्याख्यानोक्तक्रममुक्त्वाऽधुनैकरूप्याय समन्वयत्रयस्यापि सोपानारोहणन्यायेन भाष्यसूचितं क्रममाह – **यद्वेति** ।। **स्थूलत्वादिति** ।। प्रसिद्धेर्भ्रमत्वेऽप्युपपत्त्या दुर्बलत्वादिति भावः ।। **सूक्ष्मत्वादिति** ।। श्रुतेः प्राबल्येन तन्निरासस्य क्लेशसाध्यत्वेनोभयत्रप्रसिद्धेः प्राबल्यादित्यर्थः ।। **उभयेति** ।। प्रसिद्धिमूलत्वात् श्रुतिलिङ्गादिमूलत्वाच्चेत्यर्थः । ऋजूनां मतमनूद्य निराह – **केचित्त्विति** ।। **उक्तरीत्येति** ।। ''श्रुत्यन्तरादिभिः'' इत्यादिनेति भावः । पूर्वं ''तत्र''

इत्यनुव्याख्यानं "ग्रन्थोऽयमपि बह्वर्थः" इत्युक्त्या स्वयमर्थान्तरमभिप्रेत्यान्यत्रोभयत्रप्रसिद्धसमन्वययोः क्रमे सम्मतित्वेनोदाहृतम् । इदानीं तस्यैव 'तत्र' प्रथमेऽध्याये, 'प्रथमतः' प्रथमे पादे, 'शब्दानां' नामात्मकानां, इति सुधोक्तमेवार्थमभिप्रेत्य "अन्यपराणां मध्ये लिङ्गात्मकानाम्" इत्यादिटीकां विवृण्वान आद्यद्वयस्यापि महामल्लभङ्गन्यायेन क्रममाह – **अन्यत्रप्रसिद्धेष्वपीति** ॥

'यौगिकस्य' लिङ्गस्य । तथा च सुधोक्तदिशा नाम्नामन्यबुद्धिजनकत्वं साक्षादेव, लिङ्गानां तु व्यवधानेनेति नामसमन्वये यत्नगौरवमिति महामल्लभङ्गन्यायेन नाम्नां प्राथम्यमित्यर्थः ।

तेषामन्यगतत्वे तु न स्यात्सम्यक् समन्वयः ।
इत्येवाशेषलिङ्गानां ब्रह्मण्येव समन्वयम् ॥

इत्यनुव्याख्यानं हृदि कृत्वा सङ्गत्यन्तरमाह – **यद्वेति** ॥ 'सन्दिग्ध' इति बहुव्रीहिः। "ज्योतिश्चरण" इत्यादौ हेतूकृतानामदृश्यत्वादीनां च द्वितीये समन्वयोक्तेरिति भावः । ननु प्राग्घेतूकृतलिङ्गानामेव लिङ्गपादे समन्वयानुक्तेः कथमेवमित्यत आह – **तज्जातीयत्वेनेति** ॥ तल्लिङ्गोपेतवाक्यगततयैकवाक्यस्थत्वादिना तज्जातीयत्वं ध्येयम् । नामपादे हि सर्वश्रुतिगतान्यत्रप्रसिद्धनामानि सर्वाण्यपि तत्र तत्र स्थितैः सर्वैर्लिङ्गैर्ब्रह्मनिष्ठानीति प्राक् साधिते सति, तत्रासन्दिग्धलिङ्गग्रहाणेनेतरेषां लोकतोन्यत्रप्रसिद्धश्रुत्यादिसाहित्येन सन्दिग्धब्रह्मपरत्वेष्वब्रह्मपरत्वशङ्कानिरासादानन्तर्यमित्यर्थः ।

ननु लिङ्गसमन्वयस्य नामाधीनत्वे लिङ्गानामेव प्राथम्यं स्यादित्यत आह – **लिङ्गसमन्वयस्त्विति** ॥ क्वचिद्ब्रह्मादिनामाधीनोऽप्यस्तीति 'प्रायेण' इत्युक्तम् । एतेनानवस्था च प्रत्युक्ता ।

**गुरुराजीयम्** – ननु तथाप्यादावन्यत्रप्रसिद्धनामात्मकानां तदनन्तरमन्यत्रप्रसिद्धलिङ्गात्मकशब्दानां तत उभयत्रप्रसिद्धनामलिङ्गात्मकानां ततोन्यत्रैवप्रसिद्धानामिति क्रमः कुत इत्यतः "तत्र प्रथमतोऽन्यत्र" इत्याद्यनुव्याख्यानानुसारेण पादक्रममाह – **पादक्रमस्त्विति** ॥

ननु चतुर्थपादीयसमन्वयस्य कारणत्वादिसिद्धिफलकत्वाभाव आनर्थक्यं स्यादित्यत उक्तं **तत्तच्छब्देति** ।। ब्रह्मशब्दोक्तगुणपूर्तिसम्भावककारणत्वाप्रतिपादनेऽसम्भावनाग्रस्तत्वात् स्वरवर्णपदात्मकाशेषशब्दसमन्वयेन गुणपूर्णत्वरूपफलासिद्धेः कारणत्वोक्त्या कतिपयगुणसिद्धावपेक्षित-गुणपूर्त्यसिद्धेरित्यर्थः । तर्ह्यन्यत्रोभयत्रप्रसिद्धयोरुभयत्रप्रसिद्धानामेव सोपानारोहणन्यायेन प्राथम्यमस्त्वित्यत आह – **इतरयोरपीति** ।।

ननु "कारणत्वेन चाकाशादिष" इत्यादेः कारणत्वादिसिद्धिफलकत्वेन तत्र प्रवृत्तिनिमित्तगुणमात्रसिद्धिफलकत्वाभावात् कथं चतुर्थपादीसमन्वयः स्यादित्यस्वरसादाह – **यद्वेति** ।। यद्वा पूर्वमनुव्याख्यानानुसारेण पादक्रममुपपाद्य भाष्यानुसारेण पादक्रममाह – **यद्वेति** ।। तथा च स्थूलत्वसूक्ष्मत्वातिसूक्ष्मत्वैः पादक्रम इति भावः ।।

**केचित्त्विति** ।। स्वयूथ्या इत्यर्थः । विशिष्टप्रतीतौ विशेषणज्ञानस्य कारणत्वादित्यर्थः । तदुभयनिरूप्यत्वात् अन्यत्रोभयत्रप्रसिद्धिनिरूप्यत्वादित्यर्थः । किमुभयत्रप्रसिद्ध्यादेरन्यत्रप्रसिद्ध्यादिनिरूप्यत्वं नियतमनियतं वा । नाद्यः । अन्यत्रप्रसिद्धत्वे सति तत्रप्रसिद्धत्वमुभयत्रप्रसिद्धत्वमित्येवंरूपेण तन्निरूप्यत्वेपि विष्णुतदितरयोः प्रसिद्धत्वमुभयत्रप्रसिद्धत्वमित्यादिरूपेण तन्निरूप्यत्वाभावादित्याह – **तन्नेति** ।। **उक्तरीत्येति** ।। उभयोपस्थापकत्वमुभयत्रप्रसिद्धत्वमित्याद्युक्तरीत्या इत्यर्थः । नेतरः । अनियतनिमित्तेन नियतपादभेदे विनिगमकाभावेन वैपरीत्यस्यापि सुवचत्वादिति भावः । नन्वन्यत्रप्रसिद्धानामुभयात्मकानामविशेषान्नामात्मकानां प्राथम्ये किं निमित्तमित्यत आह – **अन्यत्रप्रसिद्धेष्विति** ।।

ननु नाम्नां धर्मिणि साक्षाद्धीजनकत्ववल्लिङ्गानामपि धर्मे साक्षाद्धीजनकत्वात् कथं तेषां विशेष इत्यत उक्तं **प्रधानेति** ।। प्रायेण धर्मिद्वारेणैव धर्मस्य क्रियान्वयित्वेन साक्षाद्धर्मिण एव तदन्वयित्वेन तस्यैव प्राधान्यं लिङ्गस्य तु तदभावेनाप्राधान्यमिति भावः । निरपेक्षत्वमुपपादयति – **यौगिकस्येति** ।। नन्वेवं धर्मिवाचकानामन्तर्याम्यादिशब्दानां नामता स्यात् । धर्मिवाचिनां चानन्दमयादिशब्दानां लिङ्गता च स्यादित्यस्वरसादाह – **यद्वेति** ।। स्वरूपप्राधान्यादि

कथं पादक्रमे निमित्तमित्यतो वाह – **यद्वेति** ।। सन्दिग्धं ब्रह्मपरत्वं येषामिति बहुव्रीहिः ।

ननु नामसमन्वयस्य लिङ्गाधीनत्वाल्लिङ्गसमन्वयस्यापि नामसमन्वयाधीनत्वान्नामसमन्वयसिद्धौ लिङ्गसमन्वयसिद्धिस्तत्सिद्धौ तत्सिद्धिरित्यन्योन्याश्रयः स्यादित्यत आह – **लिङ्गसमन्वयास्त्विति** ।। सर्वगतत्वाधिकरणे ब्रह्मश्रुत्या सर्वगतत्वलिङ्गसमन्वयस्य प्रतिपादितत्वात्कथं लिङ्गसमन्वयो लिङ्गेनैवेत्युच्यत इत्यत उक्तं **प्रायेणेति** ।। न चैवं तदंश एव पौनरुक्त्यं स्यादित्याशङ्क्यम् । येनैव लिङ्गेन यस्य नाम्नः समन्वयो न तेनैवाम्नातस्यैव लिङ्गस्य समन्वयः । किन्तु लिङ्गान्तरेण नामान्तरेणेति न दोष इति भावः ।

ವಿವರಣೆ - ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯ ಪ್ರಥಮ ಪಾದದಲ್ಲೇಕೆ? ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯ ಕೊನೆಯಲ್ಲೇಕೆ? ಇತ್ಯಾದಿ ಆಕ್ಷೇಪಗಳನ್ನು ಈ ಹಿಂದೆ ಮಾಡಲಾಗಿತ್ತು; ಆ ಆಕ್ಷೇಪಗಳನ್ನು ಈಗ 'ಪಾದಕ್ರಮಸ್ತು' ಇತ್ಯಾದಿಯಾಗಿ ಪರಿಹರಿಸುತ್ತಿದ್ದಾರೆ.

'ಮಹಾಸಮನ್ವಯೇ ತಸ್ಮಿನ್ನಾಧಿಕಾರೋಽಖಿಲಸ್ಯ ಹಿ' ಎಂಬ ಅನುವ್ಯಾಖ್ಯಾನವು ಚತುರ್ಥಪಾದದಲ್ಲಿರುವ ಶಬ್ದಸಮನ್ವಯದಲ್ಲಿ ಎಲ್ಲರಿಗೂ ಅಧಿಕಾರವಿಲ್ಲವೆಂದು ಹೇಳುತ್ತಿದೆ. ಆದ್ದರಿಂದ ಅನ್ಯತ್ರೈವಪ್ರಸಿದ್ಧಶಬ್ದ ಸಮನ್ವಯವನ್ನು ಕೊನೆಯಲ್ಲಿ ಮಾಡಿದ್ದಾರೆ. ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯವನ್ನು ಕೊನೆಯಲ್ಲೇ ಮಾಡಲು ಎರಡನೆಯ ಕಾರಣವನ್ನು 'ತಥಾ' ಇತ್ಯಾದಿವಾಕ್ಯದಿಂದ ಹೇಳುತ್ತಿದ್ದಾರೆ. ಮೂರನೆಯ ಕಾರಣವನ್ನು 'ತತ್ತಚ್ಛಬ್ದ' ಇತ್ಯಾದಿವಾಕ್ಯದಿಂದ ಹೇಳುತ್ತಿದ್ದಾರೆ. ಈ ಎರಡು ಕಾರಣಗಳನ್ನು ಟೀಕೆಯಲ್ಲಿ 'ಇಂದ್ರಾದಿಶಬ್ದಾನಾಮ್ ಶ್ರುತಿಲಿಂಗಾದಿಬಲಾದ್ ವಿಷ್ಣೌ ಸಮನ್ವಯಃ ಪ್ರಾಕ್ ಪ್ರತಿಪಾದಿತಃ ಇದಾನೀಂ ಶ್ರುತಿಲಿಂಗಾದಿಭಿರೇವಾನ್ಯತ್ರಪ್ರಸಿದ್ಧಾನಾಮ್' ಇಂದ್ರಾದಿಶಬ್ದಗಳನ್ನು ಶ್ರುತಿಲಿಂಗಾದಿಬಲದಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾಯಿತು. ಈಗ ಶ್ರುತಿಲಿಂಗಾದಿಗಳ ಬಲದಿಂದಲೇ ಶಬ್ದಗಳು ಬೇರೆಡೆ ಪ್ರಸಿದ್ಧವಾಗಿವೆಯೆಂಬ ಆಕ್ಷೇಪವನ್ನು ಪರಿಹರಿಸುತ್ತಿದ್ದಾರೆ' ಎಂದು ಹೇಳಿದ್ದಾರೆ. ಮತ್ತು ಚತುರ್ಥಪಾದದ ಟೀಕೆಯಲ್ಲಿ 'ಪೂರ್ವಂ ಸ್ರಷ್ಟೃತ್ವಾದಿಗುಣಾಭಿಧಾಯಕಾನಾಮ್' ಹಿಂದೆ ಸ್ರಷ್ಟೃತ್ವಾದಿ ಗುಣಗಳನ್ನು ಹೇಳಿದ್ದಾಯಿತು' ಎಂದು ಹೇಳಿದ್ದಾರೆ. ಹೀಗೆ ಟೀಕೆಯ ಈ ಎರಡು ವಾಕ್ಯಗಳಿಂದ ಎರಡು ನಿಮಿತ್ತಗಳನ್ನು ವಿವರಿಸಿದಂತಾಯಿತು.

ಮಹಾಮಲ್ಲಭಂಗನ್ಯಾಯ - ಅನೇಕ ಮಲ್ಲರು ಶ್ರೀಕೃಷ್ಣನಿಗೆ ಎದುರಾದಾಗ ಬಲಿಷ್ಠರಾದ ಚಾಣೂರ ಮುಷ್ಟಿಕರನ್ನೇ ಮೊದಲು ಸಂಹಾರ ಮಾಡುತ್ತಾನೆ. ಅದರಂತೆ ಇಲ್ಲಿಯೂ ಅನ್ಯತ್ರಪ್ರಸಿದ್ಧಶಬ್ದಗಳೇ ಬಲಿಷ್ಠವಾದ್ದರಿಂದ ಮೊದಲು ಇದರ ಸಮನ್ವಯವನ್ನೇ ಮಾಡುತ್ತಿದ್ದಾರೆ. ಉಭಯತ್ರಪ್ರಸಿದ್ಧಶಬ್ದಗಳಲ್ಲಿ ಅನ್ಯತ್ರಪ್ರಸಿದ್ಧಿಯನ್ನು ನಿರಾಸ ಮಾಡಿದರೆ ಸಾಕು. ಆದರೆ ಅನ್ಯತ್ರಪ್ರಸಿದ್ಧಶಬ್ದಗಳಲ್ಲಿ ವಿಷ್ಣುವಿನಲ್ಲಿ ಪ್ರಸಿದ್ಧಿಯನ್ನು ಪ್ರತ್ಯೇಕವಾಗಿ ಸಾಧಿಸಬೇಕು. ಹೀಗೆ ಉಭಯತ್ರಪ್ರಸಿದ್ಧಿಗಿಂತ ಅನ್ಯತ್ರಪ್ರಸಿದ್ಧಿಯು ಕಠಿಣವಾದ್ದರಿಂದ ಬಲಿಷ್ಠವಾಗಿದೆ. ಆದಿಪದದಿಂದ ಮತ್ತೊಂದು ಅನುವ್ಯಾಖ್ಯಾನದ ಮಾತನ್ನು ನೆನಪು ಮಾಡಿಕೊಳ್ಳಬೇಕು.-

ಇತೋಽಪ್ಯಭ್ಯಧಿಕತ್ವೇನ ತುರ್ಯಪಾದೋದಿತಸ್ಯ ತು ।
ಮಹಾಸಮನ್ವಯೇ ತಸ್ಮಿನ್ನಾಧಿಕಾರೋಽಖಿಲಸ್ಯ ಹಿ ॥

ಅನ್ಯತ್ರಪ್ರಸಿದ್ಧಿಗಿಂತಲೂ ಕಠಿಣವಾದದು ಅನ್ಯತ್ರೈವಪ್ರಸಿದ್ಧಶಬ್ದಗಳು. ಆದರೆ ಆ ಶಬ್ದಗಳ ಸಮನ್ವಯದಲ್ಲಿ ಎಲ್ಲರಿಗೂ ಅಧಿಕಾರವಿಲ್ಲದ ಕಾರಣ ಕೊನೆಯಲ್ಲಿ ಸಮನ್ವಯ ಮಾಡಲಾಗಿದೆ. ಹೀಗೆಲ್ಲ ಹೇಳಿದ್ದರಿಂದ 'ತೇಷ್ವನ್ಯತ್ರೈವ ಪ್ರಸಿದ್ಧಸಮನ್ವಯೇ' ಇತ್ಯಾದಿ ಟೀಕೆಯು ಅನುವ್ಯಾಖ್ಯಾನದ ವ್ಯಾಖ್ಯಾನವೆಂದು ತಿಳಿಯುತ್ತದೆ.

ವಸ್ತುತಃ ಮಹಾಮಲ್ಲಭಂಗನ್ಯಾಯವನ್ನು ಅನುಸರಿಸಿದರೆ ಅನ್ಯತ್ರೈವಪ್ರಸಿದ್ಧವಾದ ಶಬ್ದಗಳನ್ನು ಮೊದಲು ಸಮನ್ವಯ ಮಾಡಬೇಕಾಗುತ್ತದೆ. ಆದ್ದರಿಂದ ಐಕ್ಯರೂಪಕ್ಕಾಗಿ 'ಯದ್ವಾ' ಎಂದು ಮತ್ತೊಂದು ಪಕ್ಷ ಸೋಪಾನಾರೋಹಣನ್ಯಾಯವನ್ನು ಅನುಸರಿಸಿ ಹೊರಟಿದೆ. ಅಂದರೆ ಸ್ಥೂಲ ಸೂಕ್ಷ್ಮ ಸೂಕ್ಷ್ಮತಮ ಎಂಬ ಕ್ರಮದಲ್ಲಿ ಶಬ್ದಗಳ ಸಮನ್ವಯ ಮಾಡಲಾಗಿದೆ. ಲೋಕಪ್ರಸಿದ್ಧಿಯಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳಬೇಕು. ಆದರೆ ಆ ಅನ್ಯತ್ರಪ್ರಸಿದ್ಧವು ಭ್ರಮಮೂಲಕವಾಗಿರಬಹುದಾದ್ದರಿಂದ ದುರ್ಬಲವಾಗಿದೆ. ಉಭಯತ್ರಪ್ರಸಿದ್ಧಿಗಳು ಶ್ರುತ್ಯಾದಿಮೂಲಕವಾದ್ದರಿಂದ ಭ್ರಮಮೂಲಕವೆನ್ನಲಾಗದು. ಆದ್ದರಿಂದ ಪ್ರಬಲಗಳಾಗಿವೆ. ಇನ್ನು ನಾಲ್ಕನೆಯ ಪಾದದ ಶಬ್ದಗಳು ಪ್ರಸಿದ್ಧಿಮೂಲಕ ಮತ್ತು ಶ್ರುತಿಲಿಂಗಾದಿಮೂಲವಾದ್ದರಿಂದ ಇನ್ನೂ ಪ್ರಬಲವಾಗಿವೆ. ಆದ್ದರಿಂದ ಸ್ಥೂಲವಾದ ಅನ್ಯತ್ರಪ್ರಸಿದ್ಧಶಬ್ದದ ಸಮನ್ವಯವನ್ನೇ ಮೊದಲು ಮಾಡಿದ್ದಾರೆ.

ಕೆಲವರ ಅಭಿಪ್ರಾಯವನ್ನು 'ಕೇಚಿತ್ತು' ಎಂದು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ. (ಇಲ್ಲಿ ರಾಯರು 'ಋಜೂನಾಮ್ ಮತಮನೂದ್ಯ ನಿರಾಹ' ಎಂದಿದ್ದಾರೆ. ಯಾರನ್ನು ಋಜುಗಳೆಂದು ಹೇಳಿದ್ದಾರೆಂದು. ತಿಳಿಯುವುದಿಲ್ಲ. ಬಹುಶಃ ಆ ಕಾಲದಲ್ಲಿನ ನೇರವಾದಿಗಳಾದ ಮಾಧ್ವರನ್ನು ವಿವಕ್ಷಿಸಿರಬಹುದು. ಅಥವಾ ಕೆಲವು ಮೇಲ್ನೋಟದ ವಿದ್ವಾಂಸರುಗಳು ಆಗಿನ ಕಾಲದಲ್ಲಿ ಪಾಠ ಮಾಡುವಾಗ ತಮ್ಮ ಶಿಷ್ಯಂದಿರಿಗೆಲ್ಲ ಅಪಾರ್ಥವಾಗುವಂತೆ ಆಚಾರ್ಯರ ಗ್ರಂಥವನ್ನು ಪಾಠ ಮಾಡುತ್ತಿರಬಹುದು. ಅದನ್ನು ಸಹಿಸದೆ ಗ್ರಂಥಕಾರರು ಚಂದ್ರಿಕೆಯಲ್ಲಿ ಅವರನ್ನೆಲ್ಲ ಖಂಡಿಸಿರಬಹುದು. ಅಥವಾ ಕೆಲವೊಮ್ಮೆ ತಾವೇ ಊಹಿಸಿಕೊಂಡು ಆಕ್ಷೇಪವನ್ನು 'ಕೇಚಿತ್ತು' ಎಂದು ಅನುವಾದಮಾಡಿ ಖಂಡಿಸಿರಬಹುದು.)

ಅನ್ಯತ್ರಪ್ರಸಿದ್ಧಶಬ್ದಗಳಲ್ಲಿ ಮೊದಲು ನಾಮಾತ್ಮಕಶಬ್ದಗಳ ಸಮನ್ವಯ ಅನಂತರ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಮಾಡಿದ್ದಾರೆ. ಈ ಕ್ರಮವನ್ನೇ ಏಕೆ ಅನುಸರಿಸಬೇಕು. ಮೊದಲೇ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಏಕೆ ಮಾಡಬಾರದು? ಎಂಬ ಪ್ರಶ್ನೆ ಬರುತ್ತದೆ. ಈ ಪ್ರಶ್ನೆಗೆ ಹಿಂದೆ ಒಂದು ಬಗೆಯಲ್ಲಿ ಉತ್ತರಿಸಿದ್ದರು. ಆದರೆ ಹಿಂದೆ 'ತತ್ರ' ಇತ್ಯಾದಿ ಅನುವ್ಯಾಖ್ಯಾನವನ್ನು 'ಗ್ರಂಥೋಽಯಮಪಿ ಬಹ್ವರ್ಥಃ' ಎಂಬ ಆಧಾರದಲ್ಲಿ ತಾವೇ ಊಹಿಸಿದ ಪಕ್ಷವನ್ನು ಆಚಾರ್ಯರಿಗೆ ಸಮ್ಮತವೆಂದು ತೋರಿಸಿದರು. ಈಗ ಟೀಕೆಯಲ್ಲಿ ಹೇಳಿದ್ದನ್ನೇ ಹೇಳುತ್ತಿದ್ದಾರೆ. 'ತತ್ರ ಪ್ರಥಮೇಽಧ್ಯಾಯೇ ಪ್ರಥಮತಃ ಪ್ರಥಮೇ ಪಾದೇ ಶಬ್ದಾನಾಮ್ ನಾಮಾತ್ಮಕಾನಾಮ್' 'ಇವುಗಳಲ್ಲಿ ಪ್ರಥಮಾಧ್ಯಾಯದ ಪ್ರಥಮಪಾದದಲ್ಲಿ ನಾಮಾತ್ಮಕಶಬ್ದಗಳ ಸಮನ್ವಯ' ಎಂಬ ಸುಧೆಯಲ್ಲಿ ಹೇಳಿದ ಅರ್ಥವನ್ನೇ 'ಅನ್ಯಪರಾಣಾಮ್ ಮಧ್ಯೇ ಲಿಂಗಾತ್ಮಕಾನಾಮ್' ಎಂಬ ಟೀಕಾವಾಕ್ಯವೂ ಹೇಳುತ್ತಿದೆ. ಅದನ್ನೇ ಪ್ರಕೃತ ಗ್ರಂಥಕಾರರು 'ಅನ್ಯತ್ರಪ್ರಸಿದ್ಧೇಷ್ವಪಿ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಮತ್ತು ಮಹಾಮಲ್ಲಭಂಗನ್ಯಾಯದಿಂದ ನಾಮಾತ್ಮಕಶಬ್ದದ ಸಮನ್ವಯದ ಆದ್ಯತೆಯನ್ನು

ಸಮರ್ಥಿಸುತ್ತಿದ್ದಾರೆ. ಸುಧೆಯಲ್ಲಿ ಹೇಳಿದ ಪ್ರಕಾರ ನಾಮಾತ್ಮಕಶಬ್ದಗಳು ಸಾಕ್ಷಾತ್ತಾಗಿ ಅನ್ಯಬುದ್ಧಿಜನಕಗಳಾಗಿವೆ. ಲಿಂಗಾತ್ಮಕಶಬ್ದಗಳು ವ್ಯವಹಿತವಾಗಿ ಅನ್ಯಬುದ್ಧಿಜನಕಗಳಾಗಿವೆ. ಆದ್ದರಿಂದ ನಾಮಸಮನ್ವಯವು ಕಷ್ಟಸಾಧ್ಯವಾದ್ದರಿಂದ ಮಹಾಮಲ್ಲಭಂಗನ್ಯಾಯದಿಂದ ಮೊದಲೇ ಹೇಳಿದ್ದಾರೆ.

ತೇಷಾಮನ್ಯಗತತ್ವೇ ತು ನ ಸ್ಯಾತ್ ಸಮ್ಯಕ್ ಸಮನ್ವಯಃ ।
ಇತ್ಯೇವಾಶೇಷಲಿಂಗಾನಾಮ್ ಬ್ರಹ್ಮಣ್ಯೇವ ಸಮನ್ವಯಮ್ ॥

ಶಬ್ದಗಳು ಅನ್ಯಪರವಾದರೆ ಬ್ರಹ್ಮನಲ್ಲೇ ಸಮನ್ವಯ ಮಾಡುವುದು ಕಷ್ಟವಾಗುತ್ತದೆ. ಆದ್ದರಿಂದಲೇ ಎಲ್ಲ ಲಿಂಗಗಳನ್ನು ಬ್ರಹ್ಮನಲ್ಲಿಯೇ ಸಮನ್ವಯ ಮಾಡಿದ್ದಾರೆ. ಈ ಅನುವ್ಯಾಖ್ಯಾನದ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಮತ್ತೊಂದು ಸಂಗತಿಯನ್ನು 'ಯದ್ವಾ' ಇತ್ಯಾದಿಯಾಗಿ ಹೇಳಿದ್ದಾರೆ.

ನಾಮಾತ್ಮಕಶಬ್ದಗಳನ್ನು ಸಮನ್ವಯ ಮಾಡುವಾಗ 'ಜ್ಯೋತಿಶ್ಚರಣಾಭಿಧಾನಾತ್' ಇತ್ಯಾದಿ ಸೂತ್ರಗಳಲ್ಲಿ ಅದೃಶ್ಯತ್ವಾದಿಲಿಂಗಗಳನ್ನು ಹೇಳಿದ್ದಾರೆ. ಆ ಲಿಂಗಗಳು ಭಗವಂತನಲ್ಲಿ ಹೇಗೆ ಇವೆ? ಎಂಬ ಪ್ರಶ್ನೆ ಬಂದರೆ ಲಿಂಗಪಾದದಲ್ಲಿ ಅವುಗಳ ಸಮನ್ವಯ ಮಾಡುತ್ತಿದ್ದಾರೆ.

ಪ್ರಶ್ನೆ - ನಾಮಪದದಲ್ಲಿ ಹೇಳಿದ ಲಿಂಗಗಳ ಸಮನ್ವಯವನ್ನೂ ಲಿಂಗಪಾದದಲ್ಲಿ ಮಾಡಿದ್ದಾರಲ್ಲ?

ಉತ್ತರ - ಕೆಲವು ಲಿಂಗಗಳು ಹಾಗಿರಬಹುದು. ಆದರೆ ನಾಮಪಾದದಲ್ಲಿ ಹೇಳಿದ ಲಿಂಗಗಳಿಗೆ ಸಜಾತೀಯಗಳಾಗಿವೆ. ಆದ್ದರಿಂದ ನಾಮಪಾದದ ಲಿಂಗಗಳು ಭಗವತ್ಪರವಲ್ಲ ಎಂಬ ಸಂಶಯ ಬಂದರೆ ಆ ಲಿಂಗಗಳಿಗೆ ಸದೃಶವಾದ ಲಿಂಗಗಳೂ ಭಗವತ್ಪರವಲ್ಲ ಎಂಬ ಸಂಶಯ ಬಂದೇ ಬರುತ್ತದೆ. ಅವುಗಳ ಸಮನ್ವಯದಿಂದಲೇ ಲಿಂಗಪಾದದಲ್ಲಿನ ಸಮನ್ವಯವೆಲ್ಲವೂ ಸಾರ್ಥಕವಾಗಿದೆ.

ಗ್ರಂಥಕಾರರು ಅನ್ಯೋನ್ಯಾಶ್ರಯವನ್ನಷ್ಟೇ ಪರಿಹರಿಸಿದ್ದಾರೆ. ಅನವಸ್ಥಾದೋಷವನ್ನೂ ಹೀಗೆಯೇ ಪರಿಹರಿಸಬೇಕು.




ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯವನ್ನು ಕೊನೆಯಲ್ಲೇ ಮಾಡಬೇಕು. ಆ ಶಬ್ದಗಳು ಬ್ರಹ್ಮಾದಿಗಳಿಂದಷ್ಟೇ ಚಿಂತಿಸಲು ಅರ್ಹವಾದವುಗಳು. ಸಾತ್ವಿಕಜೀವಿಗಳಿಂದ ಚಿಂತಿಸಲು ಅರ್ಹವಾದ ಶಬ್ದಗಳನ್ನು ಮೊದಲು ಸಮನ್ವಯ ಮಾಡುವುದು ಅತ್ಯಂತ ಉಚಿತ. ಮತ್ತು ಮೂರು ಪಾದಗಳಲ್ಲಿ ಸಮರ್ಥಿಸಿದ ವಿಚಾರದ ಬಳಿಕ ಹೆಚ್ಚಿನ ವಿಚಾರವನ್ನು ಮಾಡಿದ್ದರಿಂದ ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯವನ್ನು ಕೊನೆಯದಾಗಿ ಹೇಳಿದ್ದಾರೆ. ಮತ್ತು ಮೊದಲ ಮೂರು ಪಾದಗಳ ಶಬ್ದಗಳೆಲ್ಲ ಜಗತ್ಕಾರಣತ್ವಾದಿ ಗುಣಗಳ ಸಮನ್ವಯದಲ್ಲಿ ಪರ್ಯವಸಾನವಾಗಿವೆ. ಆದರೆ ನಾಲ್ಕನೆಯ ಪಾದ ಹಾಗಿಲ್ಲದ ಕಾರಣ ಕೊನೆಯದಾಗಿ ಹೇಳುವ ಅನಿವಾರ್ಯತೆ ಬಹಳ ಇದೆ.

ಇನ್ನು ಉಭಯತ್ರಪ್ರಸಿದ್ಧವಾದ ಶಬ್ದಗಳನ್ನು ಮೊದಲು ಹೇಳಿ ಆಮೇಲೆ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯ ಮಾಡಬಹುದಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಉಭಯತ್ರಪ್ರಸಿದ್ಧಶಬ್ದಗಳು ಭಾಗಶಃ

ವಿಷ್ಣುವಿನಲ್ಲಿ ಪ್ರಸಿದ್ಧಗಳಾದ್ದರಿಂದ ಅವುಗಳ ಸಮನ್ವಯ ಸುಲಭ. ಅನ್ಯತ್ರಪ್ರಸಿದ್ಧಶಬ್ದಗಳು ಹಾಗಲ್ಲದ ಕಾರಣ ಅವುಗಳ ಸಮನ್ವಯ ಕಷ್ಟಕರವಾಗಿದೆ. ಆದ್ದರಿಂದ ಯುದ್ಧದಲ್ಲಿ ಮಹಾಮಲ್ಲನನ್ನೇ ಮೊದಲು ಕೊಲ್ಲುವಂತೆ ಇಲ್ಲಿ ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವನ್ನು ಮೊದಲು ಮಾಡಿದ್ದಾರೆ. ಅನ್ಯತ್ರಪ್ರಸಿದ್ಧಶಬ್ದಗಳಲ್ಲಿಯೂ ನಾಮಾತ್ಮಕಶಬ್ದಗಳು ಪ್ರಬಲವಾದ್ದರಿಂದ ಮೊದಲು ನಾಮಸಮನ್ವಯ ಮಾಡಿ ಅನಂತರ ಲಿಂಗಸಮನ್ವಯ ಮಾಡಿದ್ದಾರೆ. ಮತ್ತು ನಾಮಸಮನ್ವಯ ಮಾಡುವಾಗ ಉಪಯೋಗಿಸಿದ ಲಿಂಗಗಳು ಹರಿಪರವೇ? ಅಲ್ಲವೇ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಸಮಾಧಾನವಾಗಿರುವುದಕ್ಕಾಗಿಯೂ ಲಿಂಗಸಮನ್ವಯವನ್ನು ಎರಡನೆಯದಾಗಿ ಹೇಳಿದ್ದಾರೆ. ಆದ್ದರಿಂದ ೧) ಅನ್ಯತ್ರಪ್ರಸಿದ್ಧನಾಮಸಮನ್ವಯ ೨) ಅನ್ಯತ್ರಪ್ರಸಿದ್ಧಲಿಂಗ-ಸಮನ್ವಯ ೩) ಉಭಯತ್ರಪ್ರಸಿದ್ಧಶಬ್ದಸಮನ್ವಯ ೪) ಅನ್ಯತ್ರೈವಪ್ರಸಿದ್ಧಶಬ್ದಸಮನ್ವಯ. ಈ ಕ್ರಮವು ಅತ್ಯಂತ ಸ್ವಾರಸ್ಯಮಯವೂ ಅರ್ಥಪೂರ್ಣವೂ ಆಗಿದೆ.



• • • • •

## ಅನ್ಯತ್ರ ಹಾಗೂ ಉಭಯತ್ರಪ್ರಸಿದ್ಧಿಶಬ್ದಗಳ ಸಮನ್ವಯವು ಅತ್ಯಾವಶ್ಯಕ

**तात्पर्यचन्द्रिका –**

**न चैवमन्यत्रैवप्रसिद्धानां समन्वयेनैव कैमुत्यन्यायेनान्यत्रप्रसिद्धादि-समन्वयसिद्धेस्तदुक्तिवैयर्थ्यम्, ''आत्मन आकाशस्संभूतः'' इत्यादौ भूताकाशस्य संभूतत्ववत् 'अस्य लोकस्य'' इत्यादावाकाशस्य लोकगतित्वादिप्रसङ्गात् ।**

**पादत्रयसिद्धान्तमुपेत्य चतुर्थपादे विशेषहेतुभिः पूर्वपक्षोदयेन पादत्रय-पूर्वपक्षदशायां चतुर्थपादीयसिद्धान्तानुन्मेषाच्च ।**

**अन्यथा स्वर्गकामाधिकरणसिद्धफलान्वयमुपेत्य किं भावार्थस्य फलकरणता किं वा नामार्थस्येति विचारात्मकभावार्थाधिकरणसिद्धान्तेन फलाभावशङ्कारूप-स्वर्गकामाधिकरणपूर्वपक्षानुदयः स्यात् ।**

**ननु यथाऽन्यत्रैवप्रसिद्धानां ब्रह्मपरता, तथा तत्रैवप्रसिद्धानामपि ''जनितोत विष्णोः'' इत्यादाविव अन्यपरत्वाशङ्कायां समन्वयो व्युत्पाद्य एवेति चेत् ।**

**न 'तत्रप्रसिद्धाः' इत्यनेन अन्यपरत्वशङ्काराहित्यस्य विवक्षितत्वात् । अन्यत्तु स्वस्वस्थाने वक्ष्यते ।।**

ಅನುವಾದ - ಪ್ರಶ್ನೆ - ಎಲ್ಲದಕ್ಕಿಂತ ಶ್ರೇಷ್ಠವಾದ ಅನ್ಯತ್ರೈವಪ್ರಸಿದ್ಧಶಬ್ದದ ಸಮನ್ವಯ ಮಾಡಿದರೆ ಸಾಕು. ಕೈಮುತ್ಯನ್ಯಾಯದಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯ ಹಾಗು ಉಭಯತ್ರಪ್ರಸಿದ್ಧವಾದ

ಶಬ್ದಗಳ ಸಮನ್ವಯವೂ ಸಿದ್ಧವಾಗುತ್ತದೆ. ಪುನಃ ಅವುಗಳ ಸಮನ್ವಯಕ್ಕಾಗಿ ಪ್ರತ್ಯೇಕ ಪಾದಗಳು ಬೇಕಾಗಿಲ್ಲವಲ್ಲವೇ?

ಉತ್ತರ - ಹಾಗಾದಲ್ಲಿ ಅನ್ಯತ್ರೈವಪ್ರಸಿದ್ಧರಾದ ಸಮನ್ವಯಕ್ಕಾಗಿ ಇರುವ ನಾಲ್ಕನೇ ಪಾದದಲ್ಲಿ ಅನ್ಯತ್ರಪರತ್ವವನ್ನು ಬಿಡದೆ ಮಾಡುವ ಸಮನ್ವಯ ಪ್ರಥಮಪಾದದಲ್ಲಿಯೂ, ಮಾಡಬೇಕಾದೀತು. 'ಆತ್ಮನಃ ಆಕಾಶಸ್ಸಂಭೂತಃ' ಎಂಬಲ್ಲಿ ಆಕಾಶಶಬ್ದವು ಪರಮಮುಖ್ಯವೃತ್ತಿಯಿಂದ ವಿಷ್ಣುಪರವಾದರೂ ಅಮುಖ್ಯವೃತ್ತಿಯಿಂದ ಭೂತಾಕಾಶಪರವೂ ಆಗಿದೆ; ಆದ್ದರಿಂದ ಸಂಭೂತತ್ವ ಭೂತಾಕಾಶದಲ್ಲಿ ಬರುತ್ತದೆ. ಇದರಂತೆ ಪ್ರಥಮಪಾದದಲ್ಲಿರುವ 'ಅಸ್ಯ ಲೋಕಸ್ಯ ಕಾ ಗತಿಃ' ಎಂಬಲ್ಲಿರುವ ಲೋಕಗತಿತ್ವವನ್ನು ಭೂತಾಕಾಶದಲ್ಲಿ ಹೇಳಲಾಗದು. ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವು ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯದಿಂದ ಸಿದ್ಧವಾಗುವುದಾದರೆ ಭೂತಾಕಾಶದಲ್ಲಿಯೂ ಲೋಕಗತಿತ್ವವನ್ನು ಹೇಳಬೇಕಾದ ಪ್ರಸಂಗ ಬರುತ್ತದೆ.

ಅಷ್ಟೇ ಅಲ್ಲದೇ ನಾಲ್ಕನೆಯ ಪಾದದಲ್ಲಿ ಮೊದಲ ಮೂರು ಪಾದಗಳಲ್ಲಿ ಮಾಡಿದ ಸಿದ್ಧಾಂತವನ್ನಿಟ್ಟುಕೊಂಡು ವಿಶೇಷ ಕಾರಣಗಳಿಂದ ಪೂರ್ವಪಕ್ಷವನ್ನು ರಚಿಸಲಾಗಿದೆ. ಹೀಗಿರಬೇಕಾದರೆ ಪಾದತ್ರಯಗಳ ಪೂರ್ವಪಕ್ಷಸಂದರ್ಭದಲ್ಲಿ ನಾಲ್ಕನೇ ಪಾದದ ಸಿದ್ಧಾಂತವನ್ನು ಆಶ್ರಯಿಸಲು ಸಾಧ್ಯವೇ ಇಲ್ಲ.

ಹೀಗೆ ಒಪ್ಪದಿದ್ದರೆ ಪೂರ್ವಮೀಮಾಂಸೆಯಲ್ಲಿ ಸ್ವರ್ಗಕಾಮಾಧಿಕರಣದ ಪೂರ್ವಪಕ್ಷವೂ ಹುಟ್ಟದಿರಬೇಕಾದೀತು. ಸ್ವರ್ಗಕಾಮಾಧಿಕರಣದಲ್ಲಿ ಯಾವ ಶ್ರುತಿಯಲ್ಲಿ ಫಲವನ್ನು ಹೇಳದೆ ಯಾಗವನ್ನು ವಿಧಿಸಿರುತ್ತಾರೋ ಆ ವಾಕ್ಯದಲ್ಲಿ ಸ್ವರ್ಗಕಾಮಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸಿದ್ಧಾಂತ ಮಾಡಿದ್ದಾರೆ. ಸ್ವರ್ಗಕಾಮಾಧಿಕರಣದ ಸಿದ್ಧಾಂತವನ್ನು ಆಶ್ರಯಿಸಿ ಭಾವಾರ್ಥಾಧಿಕರಣ ಹೊರಟಿದೆ. ಭಾವಾರ್ಥವು ಸ್ವರ್ಗಫಲಕ್ಕೆ ಕಾರಣವೋ ನಾಮಾರ್ಥವಾದ ಸೋಮವು ಸ್ವರ್ಗಕ್ಕೆ ಕಾರಣವೋ? ಎಂದು ಭಾವಾರ್ಥಾಧಿಕರಣದಲ್ಲಿ ವಿಚಾರ ಮಾಡಿ ಭಾವಾರ್ಥವೇ ಸ್ವರ್ಗಸಾಧನವೆಂದು ನಿರ್ಣಯಿಸಲಾಗಿದೆ. ಸ್ವರ್ಗಕಾಮಾಧಿಕರಣವನ್ನು ಉಪಜೀವಿಸಿರುವ ಭಾವಾರ್ಥಾಧಿಕರಣದ ಸಿದ್ಧಾಂತವನ್ನು ಅನುಸರಿಸಿ ''ಫಲವೇ ಇಲ್ಲ''ವೆಂಬ ಪೂರ್ವಪಕ್ಷವನ್ನು ಸ್ವರ್ಗಕಾಮಾಧಿಕರಣದಲ್ಲಿ ಮಾಡಲಾಗದು ಎಂದು ಶಂಕಿಸಬಾರದು. ಉಪಜೀವಕವಾದ ಭಾವಾರ್ಥಾಧಿಕರಣದಿಂದ ಉಪಜೀವ್ಯವಾದ ಸ್ವರ್ಗಕಾಮಾಧಿಕರಣಕ್ಕೆ ವೈಯ್ಯರ್ಥ್ಯ ಹೇಳುವುದು ತಪ್ಪಲ್ಲವೇ?

ಆಕ್ಷೇಪ - ಹೇಗೆ ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳಿಗೆ ಬ್ರಹ್ಮಪರತ್ವವನ್ನು ಹೇಳಿದಿರೋ, ಅದರಂತೆ ತತ್ರೈವ ಪ್ರಸಿದ್ಧವಾದ 'ವಿಷ್ಣು' 'ನಾರಾಯಣ' ಮೊದಲಾದ ಶಬ್ದಗಳ ಸಮನ್ವಯವನ್ನೂ ಮಾಡಬೇಕು. ಏಕೆಂದರೆ 'ಜನಿತೋತ ವಿಷ್ಣೋಃ' ಎಂಬಲ್ಲಿ ವಿಷ್ಣುವಿಗೂ ಜನಕನಿದ್ದಾನೆಂದು ಹೇಳಲಾಗಿದೆ. ಆದ್ದರಿಂದ

ವಿಷ್ಣುವಿನಲ್ಲಿ ಪ್ರಸಿದ್ಧಗಳಾದ್ದರಿಂದ ಅವುಗಳ ಸಮನ್ವಯ ಸುಲಭ. ಅನ್ಯತ್ರಪ್ರಸಿದ್ಧಶಬ್ದಗಳು ಹಾಗಲ್ಲದ ಕಾರಣ ಅವುಗಳ ಸಮನ್ವಯ ಕಷ್ಟಕರವಾಗಿದೆ. ಆದ್ದರಿಂದ ಯುದ್ಧದಲ್ಲಿ ಮಹಾಮಲ್ಲನನ್ನೇ ಮೊದಲು ಕೊಲ್ಲುವಂತೆ ಇಲ್ಲಿ ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವನ್ನು ಮೊದಲು ಮಾಡಿದ್ದಾರೆ. ಅನ್ಯತ್ರಪ್ರಸಿದ್ಧಶಬ್ದಗಳಲ್ಲಿಯೂ ನಾಮಾತ್ಮಕಶಬ್ದಗಳು ಪ್ರಬಲವಾದ್ದರಿಂದ ಮೊದಲು ನಾಮಸಮನ್ವಯ ಮಾಡಿ ಅನಂತರ ಲಿಂಗಸಮನ್ವಯ ಮಾಡಿದ್ದಾರೆ. ಮತ್ತು ನಾಮಸಮನ್ವಯ ಮಾಡುವಾಗ ಉಪಯೋಗಿಸಿದ ಲಿಂಗಗಳು ಹರಿಪರವೇ? ಅಲ್ಲವೇ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಸಮಾಧಾನವಾಗಿರುವುದಕ್ಕಾಗಿಯೂ ಲಿಂಗಸಮನ್ವಯವನ್ನು ಎರಡನೆಯದಾಗಿ ಹೇಳಿದ್ದಾರೆ. ಆದ್ದರಿಂದ ೧) ಅನ್ಯತ್ರಪ್ರಸಿದ್ಧನಾಮಸಮನ್ವಯ ೨) ಅನ್ಯತ್ರಪ್ರಸಿದ್ಧಲಿಂಗ-ಸಮನ್ವಯ ೩) ಉಭಯತ್ರಪ್ರಸಿದ್ಧಶಬ್ದಸಮನ್ವಯ ೪) ಅನ್ಯತ್ರೈವಪ್ರಸಿದ್ಧಶಬ್ದಸಮನ್ವಯ. ಈ ಕ್ರಮವು ಅತ್ಯಂತ ಸ್ವಾರಸ್ಯಮಯವೂ ಅರ್ಥಪೂರ್ಣವೂ ಆಗಿದೆ.



## ಅನ್ಯತ್ರ ಹಾಗೂ ಉಭಯತ್ರಪ್ರಸಿದ್ಧಿಶಬ್ದಗಳ ಸಮನ್ವಯವು ಅತ್ಯಾವಶ್ಯಕ

**तात्पर्यचन्द्रिका –**

**न चैवमन्यत्रैवप्रसिद्धानां समन्वयेनैव कैमुत्यन्यायेनान्यत्रप्रसिद्धादि-समन्वयसिद्धेस्तदुक्तिवैयर्थ्यम्, ''आत्मन आकाशस्संभूतः'' इत्यादौ भूताकाशस्य संभूतत्ववत् 'अस्य लोकस्य'' इत्यादावाकाशस्य लोकगतित्वादिप्रसङ्गात् ।**

**पादत्रयसिद्धान्तमुपेत्य चतुर्थपादे विशेषहेतुभिः पूर्वपक्षोदयेन पादत्रय-पूर्वपक्षदशायां चतुर्थपादीयसिद्धान्तानुन्मेषाच्च ।**

**अन्यथा स्वर्गकामाधिकरणसिद्धफलान्वयमुपेत्य किं भावार्थस्य फलकरणता किं वा नामार्थस्येति विचारात्मकभावार्थाधिकरणसिद्धान्तेन फलाभावशङ्कारूप-स्वर्गकामाधिकरणपूर्वपक्षानुदयः स्यात् ।**

**ननु यथाऽन्यत्रैवप्रसिद्धानां ब्रह्मपरता, तथा तत्रैवप्रसिद्धानामपि ''जनितोत विष्णोः'' इत्यादाविव अन्यपरत्वाशङ्कायां समन्वयो व्युत्पाद्य एवेति चेत् ।**

**न 'तत्रप्रसिद्धाः' इत्यनेन अन्यपरत्वशङ्काराहित्यस्य विवक्षितत्वात् । अन्यत्तु स्वस्वस्थाने वक्ष्यते ।।**

ಅನುವಾದ - ಪ್ರಶ್ನೆ - ಎಲ್ಲದಕ್ಕಿಂತ ಶ್ರೇಷ್ಠವಾದ ಅನ್ಯತ್ರೈವಪ್ರಸಿದ್ಧಶಬ್ದದ ಸಮನ್ವಯ ಮಾಡಿದರೆ ಸಾಕು. ಕೈಮುತ್ಯನ್ಯಾಯದಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯ ಹಾಗು ಉಭಯತ್ರಪ್ರಸಿದ್ಧವಾದ

ಶಬ್ದಗಳ ಸಮನ್ವಯವೂ ಸಿದ್ಧವಾಗುತ್ತದೆ. ಪುನಃ ಅವುಗಳ ಸಮನ್ವಯಕ್ಕಾಗಿ ಪ್ರತ್ಯೇಕ ಪಾದಗಳು ಬೇಕಾಗಿಲ್ಲವಲ್ಲವೇ?

ಉತ್ತರ - ಹಾಗಾದಲ್ಲಿ ಅನ್ಯತ್ರೈವಪ್ರಸಿದ್ಧರಾದ ಸಮನ್ವಯಕ್ಕಾಗಿ ಇರುವ ನಾಲ್ಕನೇ ಪಾದದಲ್ಲಿ ಅನ್ಯತ್ರಪರತ್ವವನ್ನು ಬಿಡದೆ ಮಾಡುವ ಸಮನ್ವಯ ಪ್ರಥಮಪಾದದಲ್ಲಿಯೂ, ಮಾಡಬೇಕಾದೀತು. 'ಆತ್ಮನಃ ಆಕಾಶಸ್ಸಂಭೂತಃ' ಎಂಬಲ್ಲಿ ಆಕಾಶಶಬ್ದವು ಪರಮಮುಖ್ಯವೃತ್ತಿಯಿಂದ ವಿಷ್ಣುಪರವಾದರೂ ಅಮುಖ್ಯವೃತ್ತಿಯಿಂದ ಭೂತಾಕಾಶಪರವೂ ಆಗಿದೆ; ಆದ್ದರಿಂದ ಸಂಭೂತತ್ವ ಭೂತಾಕಾಶದಲ್ಲಿ ಬರುತ್ತದೆ. ಇದರಂತೆ ಪ್ರಥಮಪಾದದಲ್ಲಿರುವ 'ಅಸ್ಯ ಲೋಕಸ್ಯ ಕಾ ಗತಿಃ' ಎಂಬಲ್ಲಿರುವ ಲೋಕಗತಿತ್ವವನ್ನು ಭೂತಾಕಾಶದಲ್ಲಿ ಹೇಳಲಾಗದು. ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವು ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯದಿಂದ ಸಿದ್ಧವಾಗುವುದಾದರೆ ಭೂತಾಕಾಶದಲ್ಲಿಯೂ ಲೋಕಗತಿತ್ವವನ್ನು ಹೇಳಬೇಕಾದ ಪ್ರಸಂಗ ಬರುತ್ತದೆ.

ಅಷ್ಟೇ ಅಲ್ಲದೇ ನಾಲ್ಕನೆಯ ಪಾದದಲ್ಲಿ ಮೊದಲ ಮೂರು ಪಾದಗಳಲ್ಲಿ ಮಾಡಿದ ಸಿದ್ಧಾಂತವನ್ನಿಟ್ಟುಕೊಂಡು ವಿಶೇಷ ಕಾರಣಗಳಿಂದ ಪೂರ್ವಪಕ್ಷವನ್ನು ರಚಿಸಲಾಗಿದೆ. ಹೀಗಿರಬೇಕಾದರೆ ಪಾದತ್ರಯಗಳ ಪೂರ್ವಪಕ್ಷಸಂದರ್ಭದಲ್ಲಿ ನಾಲ್ಕನೇ ಪಾದದ ಸಿದ್ಧಾಂತವನ್ನು ಆಶ್ರಯಿಸಲು ಸಾಧ್ಯವೇ ಇಲ್ಲ.

ಹೀಗೆ ಒಪ್ಪದಿದ್ದರೆ ಪೂರ್ವಮೀಮಾಂಸೆಯಲ್ಲಿ ಸ್ವರ್ಗಕಾಮಾಧಿಕರಣದ ಪೂರ್ವಪಕ್ಷವೂ ಹುಟ್ಟದಿರಬೇಕಾದೀತು. ಸ್ವರ್ಗಕಾಮಾಧಿಕರಣದಲ್ಲಿ ಯಾವ ಶ್ರುತಿಯಲ್ಲಿ ಫಲವನ್ನು ಹೇಳದೆ ಯಾಗವನ್ನು ವಿಧಿಸಿರುತ್ತಾರೋ ಆ ವಾಕ್ಯದಲ್ಲಿ ಸ್ವರ್ಗಕಾಮಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸಿದ್ಧಾಂತ ಮಾಡಿದ್ದಾರೆ. ಸ್ವರ್ಗಕಾಮಾಧಿಕರಣದ ಸಿದ್ಧಾಂತವನ್ನು ಆಶ್ರಯಿಸಿ ಭಾವಾರ್ಥಾಧಿಕರಣ ಹೊರಟಿದೆ. ಭಾವಾರ್ಥವು ಸ್ವರ್ಗಫಲಕ್ಕೆ ಕಾರಣವೋ ನಾಮಾರ್ಥವಾದ ಸೋಮವು ಸ್ವರ್ಗಕ್ಕೆ ಕಾರಣವೋ? ಎಂದು ಭಾವಾರ್ಥಾಧಿಕರಣದಲ್ಲಿ ವಿಚಾರ ಮಾಡಿ ಭಾವಾರ್ಥವೇ ಸ್ವರ್ಗಸಾಧನವೆಂದು ನಿರ್ಣಯಿಸಲಾಗಿದೆ. ಸ್ವರ್ಗಕಾಮಾಧಿಕರಣವನ್ನು ಉಪ-ಜೀವಿಸಿರುವ ಭಾವಾರ್ಥಾಧಿಕರಣದ ಸಿದ್ಧಾಂತವನ್ನು ಅನುಸರಿಸಿ ''ಫಲವೇ ಇಲ್ಲ''ವೆಂಬ ಪೂರ್ವಪಕ್ಷ-ವನ್ನು ಸ್ವರ್ಗಕಾಮಾಧಿಕರಣದಲ್ಲಿ ಮಾಡಲಾಗದು ಎಂದು ಶಂಕಿಸಬಾರದು. ಉಪಜೀವಕವಾದ ಭಾವಾರ್ಥಾಧಿಕರಣದಿಂದ ಉಪಜೀವ್ಯವಾದ ಸ್ವರ್ಗಕಾಮಾಧಿಕರಣಕ್ಕೆ ವೈಯ್ಯರ್ಥ್ಯ ಹೇಳುವುದು ತಪ್ಪಲ್ಲವೇ?

ಆಕ್ಷೇಪ - ಹೇಗೆ ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳಿಗೆ ಬ್ರಹ್ಮಪರತ್ವವನ್ನು ಹೇಳಿದಿರೋ, ಅದರಂತೆ ತತ್ರೈವ ಪ್ರಸಿದ್ಧವಾದ 'ವಿಷ್ಣು' 'ನಾರಾಯಣ' ಮೊದಲಾದ ಶಬ್ದಗಳ ಸಮನ್ವಯವನ್ನೂ ಮಾಡಬೇಕು. ಏಕೆಂದರೆ 'ಜನಿತೋತ ವಿಷ್ಣೋಃ' ಎಂಬಲ್ಲಿ ವಿಷ್ಣುವಿಗೂ ಜನಕನಿದ್ದಾನೆಂದು ಹೇಳಲಾಗಿದೆ. ಆದ್ದರಿಂದ

ವಿಷ್ಣುಶಬ್ದಕ್ಕೆ ಯಜಮಾನನೆಂದು ಅರ್ಥೈಸಲಾಗಿದೆ. ಅದರಂತೆ ಬೇರೆಡೆ ಇರುವ ವಿಷ್ಣು ಮೊದಲಾದ ಶಬ್ದಗಳಿಗೆ ಅನ್ಯಪರತ್ವ ಶಂಕೆ ಬರುತ್ತದೆ. ಇದನ್ನು ಪರಿಹರಿಸಿ ಭಗವಂತನಲ್ಲಿ ಸಮನ್ವಯ ಮಾಡಲೇ ಬೇಕಾಗುತ್ತದಲ್ಲವೇ?

ಸಮಾಧಾನ - 'ತತ್ರಪ್ರಸಿದ್ಧ' ಎಂಬ ಶಬ್ದಕ್ಕೆ ''ಅನ್ಯಪರತ್ವಶಂಕೆ ಇಲ್ಲದ್ದು'' ಎಂದೇ ಅರ್ಥ. 'ಜನಿತೋತ ವಿಷ್ಣೋಃ' ಇತ್ಯಾದಿವಾಕ್ಯಗಳು ತತ್ರಪ್ರಸಿದ್ಧಶಬ್ದಗಳಲ್ಲಿ ಸೇರುವುದೇ ಇಲ್ಲ. ಹಾಗಾಗಿ ಆಕ್ಷೇಪಕ್ಕೆ ಅವಕಾಶವಿಲ್ಲ.

ಇನ್ನೂ ಹೇಳಬೇಕಾದ ವಿಚಾರ ಬಹಳಷ್ಟು ಇದೆ. ಅದನ್ನೆಲ್ಲ ಆಯಾ ಸಂದರ್ಭದಲ್ಲಿ ಮುಂದೆ ವಿವರಿಸುತ್ತೇವೆ.

### ಕಠಿಣಪದಾರ್ಥ

ಏವಮ್ = ಉಭಯತ್ರ, ಅನ್ಯತ್ರ, ಅನ್ಯತ್ರೈವಪ್ರಸಿದ್ಧಶಬ್ದಗಳಿಗೆ ಉತ್ತರೋತ್ತರಪ್ರಾಬಲ್ಯ ಹೇಳಿದರೆ, ತದುಕ್ತಿವೈಯ್ಯರ್ಥ್ಯಮ್ = ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯ ಹಾಗೂ ಉಭಯತ್ರಪ್ರಸಿದ್ಧಶಬ್ದಗಳ ಸಮನ್ವಯವು ವ್ಯರ್ಥ, ಅನ್ಯಥಾ = ಯಾವ ಅಧಿಕರಣದ ಸಿದ್ಧಾಂತವನ್ನು ಆಶ್ರಯಿಸಿ ಯಾವ ಅಧಿಕರಣವು ಹೊರಟಿರುತ್ತದೋ, ಅದೇ ಅಧಿಕರಣದ ಸಿದ್ಧಾಂತಕ್ಕೆ ಆ ಅಧಿಕರಣದ ಪೂರ್ವಪಕ್ಷದಿಂದ ವಿರೋಧ ಹೇಳುವುದಾದರೆ, ಭಾವಾರ್ಥಸ್ಯ = ಧಾತ್ವರ್ಥವಾದ ಯಾಗಕ್ಕೆ, ನಾಮಾರ್ಥಸ್ಯ = ಸೋಮರಸ ಮೊದಲಾದ ದ್ರವ್ಯಕ್ಕೆ, ಜನಿತಾ = ಜನಕನು, ತತ್ರಪ್ರಸಿದ್ಧಾಃ = ತತ್ರೈವ ಪ್ರಸಿದ್ಧವಾದ, ಅನ್ಯಪರತ್ವಶಂಕಾರಹಿತಸ್ಯ = ಅನ್ಯಪರತ್ವಶಂಕೆ ಇಲ್ಲದ ವಾಕ್ಯ (ಜನಿತೋತ ವಿಷ್ಣೋಃ' ಎಂಬುದು ಅನ್ಯಪರತ್ವ ಶಂಕಾರಹಿತವಾಗಿಲ್ಲ)

**प्रकाशः – न चैवमिति ।।** उभयत्रान्यत्रान्यत्रैवप्रसिद्धानामुत्तरोत्तरप्राबल्ये सतीत्यर्थः । अन्यत्रैवप्रसिद्धानां तत्रोक्तप्रबलहेतुभिः समन्वये, ततोऽपि दुर्बलानामन्यत्रप्रसिद्धानां च ब्रह्मणि समन्वयसिद्धेराद्यपादद्वये तेषां तदुक्तिवैयर्थ्यम्, तथाऽन्यत्रप्रसिद्धानां पादद्वयोक्तहेतुभिर्ब्रह्मणि समन्वये सति, तैरेव ततोऽपि दुर्बलोभयत्रप्रसिद्धानां समन्वयसिद्धेस्तृतीये तेषां तदुक्तिवैयर्थ्यमित्यर्थः ।।

**आत्मन इति ।।** चतुर्थपादीयन्यायानुसरणे हि ''कल्पनोपदेशात्'' इति सूत्रोक्तन्यायेनान्य-परत्वमुपेत्य तदधीनत्वादिन्यायैः शब्दानां तत्र ब्रह्मपरत्वोक्ते-राद्यादिपादोदाहरणेष्वपि तथात्वापत्त्या भूताकाशेन्द्रादेरपि तत्तद्वाक्यबोध्यत्वं स्यात्, तच्चानिष्टं, ब्रह्मलक्षणस्यातिव्याप्त्यापत्तेः । अतस्तन्निरासेन ब्रह्मैकपरत्वं व्युत्पादयितुं त्रिपादी सार्थिकेति भावः । तर्ह्याद्यपादद्वयेनैव सिद्धत्वात्तृतीयवैय्यर्थ्यमिति चेन्न,

पादद्वयापादितोभयत्रप्रसिद्धिकानां शब्दानामन्यनिष्ठत्वनिरासेन तस्य सार्थक्यात् । उक्तं च –

आहोभयगतत्वं च स्यादतो लिङ्गशब्दयोः ।
इति संशयनुत्त्यर्थमुभयत्र प्रतीतितः ॥

शब्दानां वर्तमानानां सलिङ्गानां विशेषतः ।
समन्वयो हरावेव ........... ............॥

इत्याचार्यैः ॥

**पादत्रयेति** ॥ त्रिपाद्यां जन्मादिसूत्रे कण्ठोक्तकारणत्वतत्सङ्गतानन्दमयत्वादि-गुणान्तरप्रतिपादकत्ववाक्यस्थशब्दानां श्रुतिलिङ्गादिभिरुक्तं ब्रह्मपरत्वं स्वीकृत्य, तर्हि तैरेव तारतम्यकर्मक्रमादिपरिलोपापत्तिरूपैर्बलवत्तर्कानुगृहीतैः बलवद्भिः अन्यपरत्वं स्यात्, एवं च समन्वयसूत्रोक्तसर्वशब्दसमन्वयो न युक्त इति शङ्कायां कृतायां, ततोऽपि प्रबलहेतुभिस्तन्निरासाय चतुर्थपादप्रवृत्तेः ततः पूर्वं तत्सिद्धान्त-न्यायानुपस्थितेर्न तेन वैयर्थ्यमित्यर्थः ॥

**अन्यथेति** ॥ स्वर्गकामाधिकरणमुक्तमाद्यसूत्रे । 'भावार्थस्य' 'धात्वर्थस्य' 'नामार्थस्य' उपपादार्थस्य द्रव्यादेरित्यर्थः ।

''द्वितीयाध्यायाद्यपादे'' भावार्थाः कर्मशब्दाः तेभ्यः क्रिया प्रतीयेतैष ह्यर्थो विधीयते'' इति द्वितीयेऽधिकरणे ''उद्भिदा यजेत'' ''सोमेन यजेत'' इत्यादौ किं सोमादिरूपद्रव्यादेः फलसाधनत्वं यजिरूपधात्वर्थस्य वेति संशये, साध्यमानस्य फलस्य सिद्धरूपसाधनापेक्षत्वात् द्रव्यादेश्च तादृशत्वेनापेक्षापूरणशक्तत्वात्, धात्वर्थस्य तु स्वयं साध्यत्वेनातादृशत्वाद्द्रव्यादिरेव फलसाधनमिति प्राप्ते, द्रव्यादेः फलहेतुत्वे तत्रैकमपूर्वं कल्प्यम्, धात्वर्थस्य द्रव्यादिशेषत्वावश्यम्भावात्, तत्र दृष्टासम्भवेनापूर्वान्तरं कल्प्यमिति गौरवात्फलसाधनस्य भावनाकरणत्वात्, तस्यां च प्रत्ययोपात्तायां पदान्तरोपात्तद्रव्यापेक्षया प्रकृत्युक्तधात्वर्थस्य सन्निहितत्वेन करणत्वात्, साध्यमानस्यापि स्वसाधनसाधितस्य करणत्वोपपत्तेः स एव फलसाधनमिति सिद्धान्तितत्वादिति भावः ।

"तेषु न तत्रप्रसिद्धानां समन्वयो वाच्यः" इति टीकामाक्षिप्य समाधत्ते – **नन्विति** ।। **तत्रैवेति** ।। 'तत्रप्रसिद्धानां' इत्यस्य तत्रैवेति विवक्षायाः प्रागेवोक्तेरेवमनुवादः । अत एवाग्रे 'तत्रप्रसिद्धाः' इत्येवाह – **अन्यपरत्वेति** ।। "जनितोत विष्णोः" इत्यत्र तु विष्णुशब्दस्यान्यपरत्वादिति भावः । उक्तं च सुधायां – 'अदोषवचनाच्चैव नियमेन हरेः श्रुतौ ।' इति जन्माधिकरणस्थानुव्याख्यानव्याख्यावसरे "विष्णुरिति यजमानस्य यज्ञस्य वा नाम, तौ सोमाद् भवत इति 'सोमो जनितोत विष्णोः' इत्युच्यते इत्यादि व्याख्येयम्" इति । नन्वेवमप्याद्यपादे अन्तस्थत्वलिङ्गस्य, द्वितीये वैश्वानरनाम्नः, तृतीये वज्रशब्दस्य स्वप्रद्रष्टृत्वलिङ्गस्य चान्यत्रप्रसिद्धस्य समन्वयेन साङ्कर्यम् । किञ्चान्तरधिकरणोक्तन्यायस्यैवाकाशादिनयेषूक्तेर्गतार्थता । तथा "गुहां प्रविष्टौ" इत्यादेः "न सङ्ख्योपसङ्ग्रहात्" इति नयेन गतार्थत्वम् । तथा पूर्वोत्तरप्रस्थानयोः तत्र तत्र विरोधश्चोपलभ्यते । अधिकरणानां सङ्गतिश्च नान्योन्यमुपलभ्यत इत्यादि चोद्यानि हृदि कृत्वाऽऽह – **अन्यत्त्विति** ।।

**गुरुराजीयम्** – ननु तत्रप्रसिद्धानामिवान्यत्रप्रसिद्धानां समन्वयो न वक्तव्यः । नच तर्हि कथं तत्सिद्धिरिति वाच्यम् । अन्यत्रैवप्रसिद्धसमन्वयेनैव कैमुत्यन्यायेनान्यत्रप्रसिद्धसमन्वयसिद्धौ पुनस्तत्समन्वयकथने वैयर्थ्यापत्तेरित्याशङ्क्य निषेधति – **नचैवमिति** ।। किं तन्न्यायविषयविषयत्वेन त्रिपाद्या वैय्यर्थ्यं कैमुत्यमात्रेण वा ।

नाद्य इत्याह – **आत्मन इति** ।। तत्करणानन्तरमन्यत्रैवप्रसिद्धशब्दसमन्वयन्यायेनान्यत्रप्रसिद्धशब्दसमन्वयश्चेदिति शेषः । तथाचान्यत्रप्रसिद्धानां पृथगवचने बाधकसद्भावात् तत्समन्वयप्रतिपादनमिति भावः । नेतरः । यो दुष्करमेकं करोति सोन्यत्सुकरमपीति व्याप्तेरभावात् ।

अथ तदविशिष्टमिति विशेषणमुपादीयते तत्राह – **आत्मन इति** ।। ननु नवियदश्रुतेरित्यत्र सूत्रकृतैवाकाशस्योत्पत्तेः समर्थितत्वात्सम्भूतत्वस्य तत्र सम्भवात् प्रकृतेतु लोकगतित्वादेराकाशादेराकाशे प्रमाणबाधितत्वेनासम्भवात् तथा च बाधकसद्भावात्तन्न्यायेन समन्वयकथनमयुक्तमित्याह – **पादत्रयेति** ।। यद्वा अङ्गीकृत्य

चतुर्थीयसमन्वयस्य प्राचीनत्वमेतदुक्तमित्याशयेनाह – **पादेति** ।। एवं च चतुर्थपादसमन्वेतव्यस्य शब्दप्रवृत्त्यर्थमुपोद्घातत्वेन पादत्रयमावश्यकमेव । अन्यथा चतुर्थपादीयसिद्धान्तारम्भ एव न स्यात् । तथा च यत्सिद्धान्तमुपजीव्ययस्य प्रवृत्तिस्तत्सिद्धान्तेन तस्य नान्यथासिद्धिरिति भावः ।।

**अन्यथेति** ।। यदधिकरणसिद्धान्तसिद्धार्थमभ्युपगम्य प्रवृत्तं यदधिकरणं तदधिकरणसिद्धान्तस्य तदधिकरणपूर्वपक्षविरोधित्वे । न च दृष्टान्तदार्ष्टान्तिकयो-र्वैषम्यम् । चतुर्थपादीयसिद्धान्ते पादत्रयसिद्धान्तस्योपजीव्यत्ववद्दृष्टान्ते भावार्थाधि-करणसिद्धान्तस्य स्वर्गकामाधिकरणसिद्धान्त उपजीव्यभावादिति वाच्यम् । उक्तसामान्यन्यायस्य तत्रापि सत्त्वेन वैषम्याभावात् । तथाऽहि । सफलत्वरूप-स्वर्गकामाधिकरणसिद्धान्तमुपजीव्य भावार्थाधिकरणसिद्धान्तप्रवृत्तिरिति न तेन तस्यान्यथासिद्धिरिति । तथा च स्वर्गकामाधिकरणपूर्वपक्षे भावार्थाधिकरण-सिद्धान्तस्यानुन्मेषवत्प्रकृतेपि पादत्रयपूर्वपक्षदशायां चतुर्थपादीयसिद्धान्तस्याप्रवृत्तेर्न तेन तस्यान्यथासिद्धिरिति भावः ।।

**नन्विति** ।। अन्यत्रैवप्रसिद्धानामित्यनन्तरं अन्यपरत्वशङ्कायामिति शेषः । ब्रह्मपरतेत्यनन्तरं व्युत्पाद्यत इति शेषः । ननु तत्रैवप्रसिद्धानामन्यपरत्वशङ्काया एवाभावान्न तत्समन्वयो व्युत्पाद्य इत्यत उक्तम् ।। **जनितोतेत्यादि** ।। **तत्रेति** ।। जनितोतेत्यत्र तु बाधकेनान्यपरत्वमिति भावः । नन्वत्रैतदध्यायगताधिकरणानां सङ्गत्यादिकं कुतो न कथ्यत इत्यत आह – **अन्यत्त्विति** ।। ननु तत्रैवप्रसिद्धानां कथमन्यपरत्वशङ्काराहित्यमित्यतो वाह – **अन्यत्त्विति** ।।

ವಿವರಣೆ - ಆಶಂಕೆ - ಮೂರುವಿಧವಾದ ಶಬ್ದಗಳಲ್ಲಿ ಉಭಯತ್ರಪ್ರಸಿದ್ಧಿಗಿಂತ ಅನ್ಯತ್ರಪ್ರಸಿದ್ಧಶಬ್ದಗಳು ಪ್ರಬಲ. ಅನ್ಯತ್ರಪ್ರಸಿದ್ಧಶಬ್ದಗಳಿಗಿಂತಲೂ ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳು ಮತ್ತಷ್ಟು ಪ್ರಬಲವೆಂದು ಇದುವರೆಗೂ ಸಮರ್ಥಿಸಿದ್ದಾಯಿತು. ಹಾಗಾದರೆ ಪ್ರಬಲವಾದ ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯದಿಂದಲೇ ಕೈಮುತ್ಯನ್ಯಾಯದಂತೆ ಅನ್ಯತ್ರಉಭಯತ್ರಪ್ರಸಿದ್ಧಶಬ್ದಗಳ ಸಮನ್ವಯವೂ ಸಿದ್ಧವಾಗುತ್ತದೆ. ಪುನಃ ಪ್ರತ್ಯೇಕ ಪಾದಗಳಿಂದ ಅವುಗಳ ಸಮನ್ವಯವು ಅನಾವಶ್ಯಕ. ಅದು ಹೀಗೆ - ಅನ್ಯತ್ರೈವಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡುವಾಗ ಪ್ರಬಲವಾದ ಅನೇಕ ಹೇತುಗಳನ್ನು ಹೇಳಿದ್ದಾರೆ. ಇಂತಹ ಪ್ರಬಲವಾದ ಹೇತುಗಳಿಂದ ಬ್ರಹ್ಮನಲ್ಲಿ ಸಮನ್ವಯ ಸಿದ್ಧವಾದರೆ ಇವುಗಳಿಗಿಂತ ದುರ್ಬಲವಾದ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವು ಸುಲಭವಾಗಿ ಸಿದ್ಧವಾಗುತ್ತದೆ. ಆದ್ದರಿಂದ ಮೊದಲೆರಡು ಪಾದಗಳು ವ್ಯರ್ಥ.

ಆದರಂತೆ ಮೊದಲೆರಡು ಪಾದಗಳಲ್ಲಿ ಹೇಳಿದ ಯುಕ್ತಿಗಳಿಂದಲೇ ಅನ್ಯತ್ರಪ್ರಸಿದ್ಧಿಗಿಂತ ದುರ್ಬಲವಾದ ಉಭಯತ್ರಪ್ರಸಿದ್ಧಶಬ್ದಗಳ ಸಮನ್ವಯವೂ ಸಿದ್ಧವಾಗುತ್ತದೆ. ಪುನಃ ಅವುಗಳ ಸಮನ್ವಯಕ್ಕಾಗಿ ಮೂರನೆಯ ಪಾದ ಹೊರಟಿದ್ದು ವ್ಯರ್ಥವಲ್ಲವೇ?

ಸಮಾಧಾನ - ಇದು ಸರಿಯಲ್ಲ. ಏಕೆಂದರೆ ನಾಲ್ಕನೇ ಪಾದದಲ್ಲಿ 'ಕಲ್ಪನೋಪದೇಶಾಚ್ಚ' ಎಂಬ ಸೂತ್ರದ ನ್ಯಾಯದಂತೆ ಅನ್ಯಪರತ್ವವನ್ನು ಅಂಗೀಕರಿಸಿ ತದಧೀನತ್ವನ್ಯಾಯದಿಂದ ಶಬ್ದಗಳಿಗೆ ಬ್ರಹ್ಮಪರತ್ವವನ್ನು ಒಪ್ಪಲಾಗಿದೆ. ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯಸಾಧಕವಾದ ಯುಕ್ತಿಗಳಿಂದಲೇ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನೂ ಮಾಡುವುದಾದರೆ ಅನ್ಯತ್ರಪ್ರಸಿದ್ಧಶಬ್ದಗಳಾದ ಭೂತಾಕಾಶ ಇಂದ್ರಾದಿಗಳೂ ಆಯಾ ವಾಕ್ಯಗಳಿಂದ ಪ್ರತಿಪಾದ್ಯಗಳಾಗಬೇಕಾಗುತ್ತವೆ. ಆದರೆ ಇದು ಅನಿಷ್ಟ. ಒಂದು ವೇಳೆ ಹಾಗೇನಾದರೂ ಒಪ್ಪಿದರೆ ಬ್ರಹ್ಮನ ಲಕ್ಷಣಕ್ಕೆ ಅತಿವ್ಯಾಪ್ತಿದೋಷ ಬರುತ್ತದೆ. ಈ ಅತಿವ್ಯಾಪ್ತಿ ಪರಿಹಾರವಾಗಬೇಕೆಂದರೆ ಆಯಾ ಶಬ್ದಗಳಿಗೆ? ಬ್ರಹ್ಮಪರತ್ವವನ್ನು ಒಪ್ಪಬೇಕು. ಈ ಕಾರಣದಿಂದ ಮೂರು ಪಾದಗಳು ಸಾರ್ಥಕಗಳಾಗುತ್ತವೆ.

ಆಶಂಕೆ - ಹಾಗಾದರೆ ಅತಿವ್ಯಾಪ್ತಿನಿರಾಸಕ್ಕೆ ಮೊದಲೆರಡು ಪಾದಗಳು ಸಾಕು. ಮೂರನೆಯ ಪಾದ ಏಕೆ? ಮತ್ತು ಅನ್ಯತ್ರಪ್ರಸಿದ್ಧಿಶಬ್ದಗಳನ್ನು ಸಮನ್ವಯ ಮಾಡಿದ್ದರಿಂದಲೇ ಅದಕ್ಕಿಂತ ದುರ್ಬಲವಾದ ಉಭಯತ್ರಪ್ರಸಿದ್ಧಿಶಬ್ದಗಳನ್ನು ಸಮನ್ವಯ ಮಾಡಿದಂತಾಯಿತಲ್ಲವೆ?

ಸಮಾಧಾನ - ಸ್ವತಃ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಮೊದಲೆರೆಡು ಪಾದಗಳಲ್ಲಿ ವಿಷ್ಣುವಿನಲ್ಲಿ ಸಮನ್ವಯ ಮಾಡಿದರು. ಆವಾಗ ಅದೇ ಶಬ್ದಗಳು ಉಭಯತ್ರಪ್ರಸಿದ್ಧಗಳಾಗುತ್ತವೆ. ವಿಷ್ಣುಪರವಾಗುವುದರ ಜೊತೆಗೆ ಅನ್ಯಪರವೂ ಆಗಲಿ ಎಂಬ ಆಕ್ಷೇಪವನ್ನೂ ಪರಿಹರಿಸುವುದಕ್ಕಾಗಿ ಮೂರನೆಯ ಪಾದವು ಹೊರಡಲೇಬೇಕಾಗುತ್ತದೆ. ಇದನ್ನೇ ಅನುವ್ಯಾಖ್ಯಾನದಲ್ಲಿ ಆಚಾರ್ಯರು ಹೀಗೆ ಹೇಳಿದ್ದಾರೆ. -

ಆಹೋಭಯಗತತ್ವಂ ಚ ಸ್ಯಾದತೋ ಲಿಂಗಶಬ್ದಯೋಃ।
ಇತಿ ಸಂಶಯನುತ್ಯರ್ಥಮುಭಯತ್ರಪ್ರತೀತಿತಃ।
ಶಬ್ದಾನಾಂ ವರ್ತಮಾನಾನಾಮ್ ಸಲಿಂಗಾನಾಂ ವಿಶೇಷತಃ।
ಸಮನ್ವಯೋ ಹರಾವೇವ॥

ನಾಮಾತ್ಮಕ ಹಾಗು ಲಿಂಗಾತ್ಮಕಶಬ್ದಗಳು ಅನ್ಯತ್ರಪ್ರಸಿದ್ಧವಾಗುವುದು ಬೇಡ ಉಭಯತ್ರಪ್ರಸಿದ್ಧವಾಗಲಿ? ಎಂಬ ಸಂಶಯ ಬರುತ್ತದೆ. ಆದರೆ ಆಪಾತಪ್ರತೀತಿಯಿಂದಷ್ಟೇ ಹೀಗೆ ಉಭಯತ್ರಪ್ರಸಿದ್ಧಗಳಾಗುತ್ತವೆ. ಇಂತಹ ನಾಮಲಿಂಗಾತ್ಮಕಶಬ್ದಗಳನ್ನು ವಿಶೇಷವಾಗಿ ಮೂರನೆಯ ಪಾದದಲ್ಲಿ ಹರಿಯಲ್ಲಿಯೇ ಸಮನ್ವಯ ಮಾಡುತ್ತಾರೆ ಎಂದು.

ಮತ್ತು ಮೊದಲ ಮೂರು ಪಾದಗಳಲ್ಲಿ ನಾಲ್ಕನೇ ಪಾದದ ಸಿದ್ಧಾಂತವು ಉಪಸ್ಥಿತವಾಗಲು ಸಾಧ್ಯವೇ ಇಲ್ಲ. ಏಕೆಂದರೆ ಜನ್ಮಾದಿಸೂತ್ರದಲ್ಲಿ ಜನ್ಮಾದಿಕಾರಣತ್ವವನ್ನು ಕಂಠತಃ ಹೇಳಿದ್ದಾರೆ. ಈ ಗುಣಕ್ಕೆ ಸಂಗತವಾದ ಗುಣಗಳೆಂದರೆ ಆನಂದಮಯತ್ವಾದಿಗುಣಗಳು. ಈ ಗುಣಗಳನ್ನು ಪ್ರತಿಪಾದಿಸುವ ಶಬ್ದಗಳೆಲ್ಲವೂ ಶ್ರುತಿಲಿಂಗಾದಿಗಳಿಂದ ಬ್ರಹ್ಮಪರವಾಗುತ್ತವೆಯೆಂದು ಮೂರು ಪಾದಗಳಲ್ಲಿ ಪ್ರತಿಪಾದಿಸಲಾಗಿದೆ. ಇದರ ಮೇಲೆ ಪುನಃ ಆಶಂಕೆ ಬರುತ್ತದೆ - ತಾರತಮ್ಯ ಕರ್ಮಕ್ರಮಾದಿಪರಿಲೋಪಾಪತ್ತಿಯೆಂಬ ಬಲವತ್

ತರ್ಕದಿಂದ ಅನುಗೃಹೀತವಾದ ಬಲಿಷ್ಠವಾದ ಆ ಶ್ರುತಿಲಿಂಗಾದಿಗಳಿಂದಲೇ ಶಬ್ದಗಳು ಅನ್ಯಪರವಾಗಲಿ. ಆದ್ದರಿಂದ ಸಮನ್ವಯಸೂತ್ರದಲ್ಲಿ ಹೇಳಿದ ಸರ್ವಶಬ್ದಸಮನ್ವಯವು ಕೂಡುವುದಿಲ್ಲವೆಂಬ ಶಂಕೆ ಬರುತ್ತದೆ. ಹೀಗೆ ಪ್ರಬಲವಾದ ಹೇತುಗಳಿಂದ ಬಂದಿರುವ ಆಶಂಕೆಯನ್ನು ಪರಿಹರಿಸಲು ನಾಲ್ಕನೆಯ ಪಾದ ಹೊರಟಿದೆ ಮೊದಲನೆ ಮೂರು ಪಾದಗಳ ಮೇಲೆ ಬರುವ ಈ ಆಶಂಕೆಯನ್ನು ಪರಿಹರಿಸಲು ನಾಲ್ಕನೆಯ ಪಾದ ಹೊರಟಿರುವುದರಿಂದ ನಾಲ್ಕನೆಯ ಪಾದದ ಸಿದ್ಧಾಂತವನ್ನು ಆಶ್ರಯಿಸಿ ಮೊದಲ ಮೂರು ಪಾದಗಳು ಹೊರಡಲು ಸಾಧ್ಯವಿಲ್ಲ. ಆದ್ದರಿಂದ ನಾಲ್ಕನೆಯ ಪಾದದಿಂದ ಮೊದಲ ಮೂರು ಪಾದಗಳಿಗೆ ವೈಯ್ಯರ್ಥ್ಯ ಹೇಳಲು ಸಾಧ್ಯವಿಲ್ಲ.

## ಭಾವಾರ್ಥಾಧಿಕರಣ

ಭಾವಾರ್ಥಾಃ ಕರ್ಮಶಬ್ದಾಸ್ತೇಭ್ಯಃ ಕ್ರಿಯಾ ಪ್ರತೀಯೇತೈಷ ಹ್ಯರ್ಥೋ ವಿಧೀಯತೇ[1] (೨-೧-೨)

"ಉದ್ಭಿದಾ ಯಜೇತ ಸೋಮೇನ ಯಜೇತ" ಎಂಬ ವಾಕ್ಯದಲ್ಲಿ ಸ್ವರ್ಗಕ್ಕಾಗಿ ಸೋಮರಸವೆಂಬ ದ್ರವ್ಯದಿಂದ ಯಾಗ ಮಾಡಬೇಕೆಂದು ವಿಧಿಸಲಾಗಿದೆ. ಶ್ರುತಿಯಲ್ಲಿ ಸ್ವರ್ಗಕ್ಕೋಸ್ಕರ ಎಂಬ ಪದ ಇಲ್ಲದೇ ಇದ್ದರೂ ಸ್ವರ್ಗಕಾಮಾಧಿಕರಣನ್ಯಾಯದಂತೆ ಅನುವೃತ್ತಿ ಮಾಡಿಕೊಳ್ಳಬೇಕು. ಇಲ್ಲಿ ಸೋಮರಸಾದಿದ್ರವ್ಯಗಳು ಸ್ವರ್ಗಸಾಧನವೋ? ಅಥವಾ 'ಯಜ್' ಧಾತ್ವರ್ಥವಾದ ಯಾಗವು ಸ್ವರ್ಗಸಾಧನವೋ? ಎಂದು ಸಂಶಯ.

---

(१) भाट्टसङ्ग्रहः –

**भावार्थाः कर्मशब्दाः, तेभ्यः क्रिया प्रतीयेत, एष ह्यर्थो विधीयते ।।१।।**
**(सर्वेषां भावोऽर्थ इति चेत् ।।२।। येषामुत्पत्तौ स्वे प्रयोगे रूपोपलब्धिस्तानि नामानि, तस्मात्तेभ्यः पराकाङ्क्षा भूतत्वात्स्वे प्रयोगे ।।३।। येषां तत्पूत्तावर्थे स्वे प्रयोगो न विद्यते तान्याख्यातानि, तस्मात्तेभ्यः प्रतीयेताऽऽश्रितत्वात् प्रयोगस्य ।।४।।**
इति भावार्थाधिकरणमारभ्यते । 'सोमेन यजेत' इत्यादौ धात्वर्थापरपर्यायभावार्थादपूर्वं उत उपपदार्थादिति **सन्देहे** द्रव्यादेरुपपदार्थस्य सिद्धत्वेन फलं प्रति साधनत्वसम्भवात् भावार्थस्य तु स्वयं फलवत्साध्यतया साधनत्वायोगात् उपपदार्थात्सोमादिद्रव्यादिति एवापूर्वमिति **प्राप्ते** सोमादेर्द्रव्यस्य सिद्धत्वेऽपि साक्षात्फलसाधनत्वायोगेन आख्यातोपात्त-फलभावनारूपक्रियानिर्वृत्तिद्वारैवेति वाच्यम् तत्र चैकपदोपात्तधात्वर्थस्यैव प्रत्यासन्नत्वात् पदश्रुत्या करणत्वं प्राप्नोति । तस्यासिद्धरूपत्वेऽपि सोमादिना साधितस्य कारणत्व-सम्भवात् । एवं हि सोमादेर्यागनिष्पत्तिर्दृष्टं फलं लभ्यते । अन्यथा सोमादित एकमपूर्वं, योगनासिद्धरूपेण सोमनिष्पत्तेरयोगेन ततोप्यपूर्वान्तरमिति गौरवम् । अतो भावार्थादेवापूर्वमिति **सिद्धान्तः** । तथा च **सूत्रम्, भावार्थाः** प्रत्ययवाच्यभावनाप्रयोजनकाः **कर्मशब्दाः** धातवः **तेभ्यः क्रिया** अपूर्वं **प्रतीयेत** । कुतः? **एष ह्यर्थः** कर्मशब्दार्थो यागादिर्हि प्रत्यासत्त्यादिभिः भावनाकरणतया **विधीयत** इति **फलन्तु** द्रव्यादीनां फलभावनाकरणत्वा-भावेनादृष्टार्थत्वाभावात् प्रतिनिध्युपादानम् । ।।इति द्वितीयं भावार्थाधिकरणम्।।

ಪೂರ್ವಪಕ್ಷ - ಸೋಮರಸಾದಿದ್ರವ್ಯಗಳೇ ಸ್ವರ್ಗಸಾಧನ. ಏಕೆಂದರೆ ಫಲವು ಸಾಧ್ಯಮಾನವಾಗಿದೆ. ಇದು ಸಿದ್ಧರೂಪವಾದ ಸಾಧನವನ್ನು ಅಪೇಕ್ಷಿಸುತ್ತದೆ. ಅಂದರೆ ಫಲವು ಸಾಧ್ಯಮಾನವಾದರೂ ಸಾಧನವು ಮೊದಲೇ ಸಿದ್ಧವಾಗಿರಬೇಕು. ಸೋಮಾದಿದ್ರವ್ಯಗಳು ಮೊದಲೇ ಸಿದ್ಧವಾಗಿವೆ. ಆದ್ದರಿಂದ ಸ್ವರ್ಗಾದಿಫಲದ ಅಪೇಕ್ಷೆಯನ್ನು ಪೂರೈಸಲು ಸಮರ್ಥವಾಗಿವೆ. ಆದರೆ 'ಯಜ್' ಧಾತ್ವರ್ಥವಾದ ಯಾಗವು ಸ್ವಯಂ ಸಾಧ್ಯವಾಗಿರುವುದರಿಂದ ಸಿದ್ಧರೂಪವಾಗಿಲ್ಲ. ಸಿದ್ಧರೂಪವಾಗದ ಕಾರಣ ಸ್ವರ್ಗಾದಿಫಲಾಪೇಕ್ಷೆಯನ್ನು ಪೂರೈಸಲು ಸಮರ್ಥವಾಗುವುದಿಲ್ಲ. ಆದ್ದರಿಂದ ಸೋಮರಸಾದಿದ್ರವ್ಯಗಳೇ ಫಲಸಾಧನ ಹೊರತು ಯಾಗವು ಫಲಸಾಧನವಾಗುವುದಿಲ್ಲ.

ಸಿದ್ಧಾಂತ - ದ್ರವ್ಯಾದಿಗಳನ್ನು ಸ್ವರ್ಗಸಾಧನವೆಂದು ಒಪ್ಪಿದರೆ ಮಧ್ಯದಲ್ಲೊಂದು ಅಪೂರ್ವವನ್ನು ಕಲ್ಪಿಸಬೇಕು. ಏಕೆಂದರೆ ಸೋಮರಸಾದಿದ್ರವ್ಯಗಳು ಈಗ ಇರತಕ್ಕವುಗಳು. ಸ್ವರ್ಗ ಯಾವತ್ತೋ ಬರುವಂತಹದ್ದು. ವ್ಯಧಿಕರಣವಾದ ಇವುಗಳಿಗೆ ಪರಸ್ಪರ ಕಾರ್ಯಕಾರಣಭಾವ ಹೇಳುವುದು ಸಾಧ್ಯವಿಲ್ಲದ ಕಾರಣ ಮಧ್ಯದಲ್ಲಿ ಅಪೂರ್ವವನ್ನು ಅಂಗೀಕರಿಸಬೇಕು. ಮತ್ತು ಯಜ್‌ಧಾತ್ವರ್ಥವಾದ ಯಾಗವು ಸ್ವರ್ಗಸಾಧನವಲ್ಲದ ಕಾರಣ ದ್ರವ್ಯಾದಿಗಳಿಗೆ ಅಂಗವೆಂದು ಒಪ್ಪಬೇಕಾಗುತ್ತದೆ. ಅಂಗವಾದ್ದರಿಂದ ಅದಕ್ಕೆ ದೃಷ್ಟಫಲವನ್ನು ಒಪ್ಪಲಾಗದ ಕಾರಣ ಅದೃಷ್ಟವಾದ ಮತ್ತೊಂದು ಅಪೂರ್ವವನ್ನು ಅಂಗೀಕರಿಸಬೇಕು. ಹೀಗೆ ಎರಡು ಅಪೂರ್ವಗಳನ್ನು ಅಂಗೀಕರಿಸಬೇಕಾದ್ದರಿಂದ ಗೌರವ ಬರುತ್ತದೆ. ಆದರೆ 'ಯಜ್' ಧಾತ್ವರ್ಥವಾದ ಯಾಗವನ್ನು ಸ್ವರ್ಗಸಾಧನವೆಂದು ಅಂಗೀಕರಿಸಿದರೆ ಯಾಗಜನ್ಯವಾದ ಅಪೂರ್ವಮಾತ್ರ ಸ್ವರ್ಗಸಾಧನವಾಗುತ್ತದೆ. ಎರಡು ಅಪೂರ್ವಗಳನ್ನು ಅಂಗೀಕರಿಸಬೇಕಾಗಿಲ್ಲ.

'ಯಜೇತ' ಎಂಬಲ್ಲಿ 'ಯಜ್' ಧಾತುವು ಯಾಗವನ್ನು ಹೇಳುತ್ತಿದೆ. ಪ್ರತ್ಯಯವು ಭಾವನಾವನ್ನು ಹೇಳುತ್ತಿದೆ. (ಭಾವನಾ ಎಂದರೆ ಪ್ರಯತ್ನವೆಂದು ಕೆಲವರ ವಾದ, ಅಪೂರ್ವವೆಂದು ಕೆಲವರ ವಾದ) ಯಾವುದು ಫಲಸಾಧನವಾಗಿರುತ್ತದೋ ಅದು ಭಾವನಾಕ್ಕೆ ಕರಣವಾಗಿರುತ್ತದೆ. 'ಯತ್ರ ಫಲಸಾಧನತ್ವಮ್ ತತ್ರ ಭಾವನಾಕರಣತ್ವಮ್' ಎಂಬ ವ್ಯಾಪ್ತಿಯು ಸಿದ್ಧವಾಗಿದೆ. ಸೋಮವು ಫಲಸಾಧನವಾದರೆ 'ಸೋಮೇನ ಸ್ವರ್ಗಂ ಭಾವಯೇತ್' ಎಂದು ಹೇಳಬೇಕು. ಯಾಗವು ಫಲಸಾಧನವಾದರೆ 'ಯಾಗೇನ ಸ್ವರ್ಗಂ ಭಾವಯೇತ್' ಎಂದು ಹೇಳಬೇಕು. ಈಗ ಭಾವನಾದಲ್ಲಿ ಯಾಗವು ಕರಣವಾಗಬೇಕೋ? ಸೋಮಾದಿದ್ರವ್ಯವು ಕರಣವಾಗಬೇಕೋ? ಎಂದು ಸಂಶಯ ಬಂದರೆ ಯಾಗವೇ ಕರಣವಾಗುತ್ತದೆ. ಏಕೆಂದರೆ 'ಯಜೇತ' ಎಂಬಲ್ಲಿರುವ ಪ್ರತ್ಯಯದಿಂದ ತಿಳಿಯುವ ಭಾವನಾದಲ್ಲಿ ಪ್ರಕೃತಿಯ ಅರ್ಥವಾದ ಯಾಗವೇ ಕರಣವಾಗುತ್ತದೆ, ಹೊರತು ಪದಾಂತರದಿಂದ ತಿಳಿಯುವ ಸೋಮವು ಕರಣವಾಗುವುದಿಲ್ಲ. ಆದ್ದರಿಂದ 'ಯಾಗೇನ ಸ್ವರ್ಗಂ ಭಾವಯೇತ್' ಎಂದೇ ಹೇಳಬೇಕು. ಇಲ್ಲಿ ಹೀಗೆ ಅನುಮಾನ ಮಾಡಬೇಕು - 'ಯಾಗಃ ಫಲಸಾಧನಮ್ ಭಾವನಾಕರಣತ್ವಾತ್' ಎಂದು. ಆದ್ದರಿಂದ ಯಾಗವೇ ಸ್ವರ್ಗಸಾಧನವಾಗುತ್ತದೆ.

ಹಾಗಾದರೆ ಯಾಗವು ಸಾಧ್ಯವೇ ಹೊರತು ಸಿದ್ಧವಲ್ಲ. ಇದು ಫಲಸಾಧನವಾಗುವುದಿಲ್ಲವೆಂಬ ಪ್ರಶ್ನೆ ಬರುತ್ತದಲ್ಲ? ಎಂದರೆ ಹಾಗೇನಿಲ್ಲ. ಸ್ವಯಂಸಾಧ್ಯರೂಪವಾದರೂ ಫಲಸಾಧನವಾಗುವುದು ಲೋಕದಲ್ಲಿ ಕಂಡಿದೆ. ಸಾಧ್ಯವಾದದ್ದು ತನ್ನ ಸಾಧನಗಳಿಂದ ಸಾಧಿತವಾದ ಮೇಲೆ ಅದು ಮತ್ತೊಂದಕ್ಕೆ ಸಾಧನವಾಗಬಹುದು. ಎಲ್ಲವೂ ಸ್ವಾಭಾವಿಕವಾಗಿ ಸಾಧ್ಯರೂಪವೇ ಆಗಿರುವುದಿಲ್ಲ. ಹೇತುವಿನಿಂದ ಸಾಧ್ಯವು

ಸಾಧಿತವಾದ ಮೇಲೆ ಅದೇ ಸಾಧ್ಯವು ಮತ್ತೊಂದಕ್ಕೆ ಹೇತುವಾಗಿರುವುದು ಅನೇಕ ಕಡೆ ಕಂಡಿದೆ. ಆದ್ದರಿಂದ ಭಾವಾರ್ಥವೇ ಫಲಕರಣವೆಂದು ಸಿದ್ಧಾಂತ.

'ವಿಶ್ವಜಿದಾ ಯಜೇತ' ಎಂಬುದು ಸ್ವರ್ಗಕಾಮಾಧಿಕರಣದ ವಿಷಯವಾಕ್ಯ. ಇಲ್ಲಿ ಫಲವು ಕೇಳಿಸುತ್ತಿಲ್ಲ. ಫಲವೇ ಇಲ್ಲವಾದರೆ ವೇದಕ್ಕೆ ಅಪ್ರಾಮಾಣ್ಯ ಬರುವುದರಿಂದ ಫಲವಾಚಕಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅಷ್ಟೇ ಅಲ್ಲದೇ 'ಸ್ವರ್ಗಕಾಮಃ' ಎಂಬ ಪದವನ್ನೇ ಅಧ್ಯಾಹಾರ ಮಾಡಬೇಕು. 'ಪಶುಕಾಮಃ' 'ಯಶಸ್ಕಾಮಃ' ಇತ್ಯಾದಿ ಪದಗಳನ್ನು ಅಧ್ಯಾಹಾರ ಮಾಡಬಾರದು. ಪಶುಕಾಮನೆ ಮೊದಲಾದವು ಎಲ್ಲರಿಗೂ ಇರುವುದಿಲ್ಲ. ಆದರೆ ಸ್ವರ್ಗಕಾಮನೆಯು ಪ್ರತಿಯೊಬ್ಬರಿಗೂ ಇದ್ದೇ ಇರುತ್ತದೆ. ಹೀಗೆ ಸ್ವರ್ಗಕಾಮಾಧಿಕರಣದಲ್ಲಿ ಸಾಧಿಸಲಾಗಿದೆ. ಅಲ್ಲಿ ಸಿದ್ಧವಾದ ಫಲಾನ್ವಯವನ್ನು ಅಂಗೀಕರಿಸಿಯೇ ಈ ಭಾವಾರ್ಥಾಧಿಕರಣ ಹೊರಟಿದೆ. ಸ್ವರ್ಗಕಾಮಾಧಿಕರಣದ ಸಿದ್ಧಾಂತವನ್ನು ಆಶ್ರಯಿಸಿ ಹೊರಟಿರುವ ಭಾವಾರ್ಥಾಧಿಕರಣದಲ್ಲಿ ಯಾಗವೇ ಫಲಸಾಧನವೆಂದು ಸಿದ್ಧಾಂತ ಮಾಡಲಾಗಿದೆ. ಭಾವಾರ್ಥಾಧಿಕರಣದಲ್ಲಿ ಹೀಗೆ ಸಿದ್ಧಾಂತ ಮಾಡಿರುವುದರಿಂದ ಸ್ವರ್ಗಕಾಮಾಧಿಕರಣದಲ್ಲಿ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಏಕೆಂದರೆ ಸ್ವರ್ಗಕಾಮಾಧಿಕರಣದಲ್ಲಿ ವಿಶ್ವಜಿದಾದಿಗಳಿಗೆ ಫಲವೇ ಇಲ್ಲವೆಂದು ಪೂರ್ವಪಕ್ಷ ಮಾಡಲಾಗಿದೆ. ಈಗ ಭಾವಾರ್ಥಾಧಿಕರಣದಲ್ಲಿ ಯಾಗವೇ ಸ್ವರ್ಗಸಾಧನವೆಂದು ನಿರ್ಣಯಿಸಿದ ಮೇಲೆ ಫಲವೇ ಇಲ್ಲವೆಂಬ ಪೂರ್ವಪಕ್ಷ ಹುಟ್ಟಲಾರದು. ಆದ್ದರಿಂದ ಸ್ವರ್ಗಕಾಮಾಧಿಕರಣವೇ ಅನಾರಂಭಣೀಯವಾಗಬೇಕಾದೀತು? ಈ ಆಶಂಕೆಯನ್ನು ಪರಿಹರಿಸಬೇಕೆಂದರೆ ನೀವು ಹೀಗೆ ಉತ್ತರಿಸಬೇಕು. ಸ್ವರ್ಗಕಾಮಾಧಿಕರಣದಲ್ಲಿ ಫಲವಾಚಕಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂಬ ಸಿದ್ಧಾಂತವನ್ನು ಆಶ್ರಯಿಸಿಯೇ ಭಾವಾರ್ಥಾಧಿಕರಣ ಹೊರಟಿದೆ. ಹೀಗಿರುವಾಗ ಉಪಜೀವಕವಾದ ಭಾವಾರ್ಥಾಧಿಕರಣದ ಸಿದ್ಧಾಂತವನ್ನು ಆಶ್ರಯಿಸಿ ಉಪಜೀವ್ಯವಾದ ಸ್ವರ್ಗಕಾಮಾಧಿಕರಣದ ಪೂರ್ವಪಕ್ಷ ಹುಟ್ಟುವುದಿಲ್ಲವೆಂದು.

ಇದೇ ರೀತಿಯಾಗಿ ನಾಲ್ಕನೇ ಪಾದದ ಸಿದ್ಧಾಂತವನ್ನಿಟ್ಟುಕೊಂಡು ಮೊದಲ ಮೂರು ಪಾದಗಳು ವ್ಯರ್ಥವೆಂದು ಶಂಕಿಸಬಾದರು. ಏಕೆಂದರೆ ಮೊದಲ ಮೂರು ಪಾದಗಳ ಸಿದ್ಧಾಂತವನ್ನು ಅಪೇಕ್ಷಿಸಿಯೇ ಹೊರಟಿರುತ್ತದೆ. ಹೀಗಿರುವಾಗ ಉಪಜೀವಕವಾದ ನಾಲ್ಕನೇ ಪಾದದಿಂದ ಉಪಜೀವ್ಯವಾದ ಮೊದಲ ಮೂರು ಪಾದಗಳಿಗೆ ವೈಯ್ಯರ್ಥ್ಯವನ್ನು ಹೇಳಬಾರದು.

ಟೀಕೆಯಲ್ಲಿ 'ತೇಷು ನ ತತ್ರಪ್ರಸಿದ್ಧಾನಾಮ್ ಸಮನ್ವಯೋ ವಾಚ್ಯಃ' ಎಂದು ಹೇಳಿದ್ದಾರೆ. ಅದನ್ನು 'ನನು' ಇತ್ಯಾದಿ ವಾಕ್ಯದಿಂದ ಆಕ್ಷೇಪಿಸಿ ಉತ್ತರ ನೀಡುತ್ತಿದ್ದಾರೆ.

ಗ್ರಂಥಕಾರರು 'ತತ್ರಪ್ರಸಿದ್ಧಾನಾಮ್' ಎಂದು ಹೇಳಬೇಕಿತ್ತು. 'ತತ್ರೈವಪ್ರಸಿದ್ಧಾನಾಮ್' ಎಂದು ಏಕೆ ಹೇಳಿದರೆಂದರೆ ಈ ಹಿಂದೆ 'ತತ್ರಪ್ರಸಿದ್ಧ' ಎಂದರೆ ತತ್ರೈವಪ್ರಸಿದ್ಧವೆಂಬ ಅರ್ಥವನ್ನು ಹೇಳಿದ್ದರು. ಆದ್ದರಿಂದಲೇ ಮುಂದಿನ ವಾಕ್ಯದಲ್ಲಿ 'ತತ್ರಪ್ರಸಿದ್ಧಾಃ' ಎಂದು ಹೇಳಿದ್ದಾರೆ.

'ಜನಿತೋತ ವಿಷ್ಣೋಃ' ಎಂಬಲ್ಲಿರುವ ವಿಷ್ಣುಶಬ್ದವು ಅನ್ಯತ್ರಪ್ರಸಿದ್ಧವೇ ಹೊರತು ತತ್ರಪ್ರಸಿದ್ಧವಲ್ಲವೆಂದು ತಿಳಿಯಬೇಕು.

ಇದನ್ನು ಸುಧೆಯಲ್ಲಿ 'ಅದೋಷವಚನಾಚ್ಚೈವ ನಿಯಮೇನ ಹರೇಃ ಶ್ರುತೌ' ಎಂಬ

ಜನ್ಮಾಧಿಕರಣದಲ್ಲಿರುವ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ 'ವಿಷ್ಣುರಿತಿ ಯಜಮಾನಸ್ಯ ಯಜ್ಞಸ್ಯವಾ ನಾಮ, ತೌ ಸೋಮಾದ್ ಭವತಃ ಇತಿ ಸೋಮೋ ಜನಿತೋತ ವಿಷ್ಣೋರಿತ್ಯುಚ್ಯತೇ ಇತ್ಯಾದಿ ವ್ಯಾಖ್ಯೇಯಮ್' ವಿಷ್ಣು ಎಂಬುದು ಯಜಮಾನ ಅಥವಾ ಯಜ್ಞದ ಹೆಸರು. ಅವರಿಬ್ಬರು ಸೋಮನಿಂದ ಹುಟ್ಟಿದರೆಂದು 'ಜನಿತೋತ ವಿಷ್ಣೋಃ' ಎಂಬ ವಾಕ್ಯ ಹೇಳುತ್ತದೆಂದು ಹೇಳಿದ್ದಾರೆ.

ಆಕ್ಷೇಪ - ಮೊದಲನೆಯದ್ದು ನಾಮಪಾದವೆಂದು ಹೇಳಿ ಅಂತಸ್ಸತ್ವವೆಂಬ ಲಿಂಗವನ್ನು ಸಮನ್ವಯ ಮಾಡಿದ್ದೀರಿ. ಎರಡನೆಯದ್ದು ಲಿಂಗಪಾದವೆಂದು ಹೇಳಿ ವೈಶ್ವಾನರವೆಂಬ ನಾಮವನ್ನು ಸಮನ್ವಯ ಮಾಡಿದ್ದೀರಿ. ಮೂರನೆಯದ್ದು ಉಭಯತ್ರಪ್ರಸಿದ್ಧ ಸಮನ್ವಯವೆಂದು ಹೇಳಿ ಅನ್ಯತ್ರಪ್ರಸಿದ್ಧವಾದ ವಜ್ರಶಬ್ದವನ್ನು ಸ್ವಪ್ನದ್ರಷ್ಟೃತ್ವವೆಂಬ ಲಿಂಗವನ್ನು ಸಮನ್ವಯ ಮಾಡಿದ್ದೀರಿ. ಹೀಗೆ ಮಾಡಿರುವುದರಿಂದ ಸಾಂಕರ್ಯದೋಷ ಬರುವುದಿಲ್ಲವೇ?

ಮತ್ತು ಅಂತರಾಧಿಕರಣದಲ್ಲಿ ಹೇಳಿದ ನ್ಯಾಯವನ್ನೇ ಆಕಾಶಾದ್ಯಾಧಿಕರಣಗಳಲ್ಲಿ ಹೇಳಿದ್ದರಿಂದ ಗತಾರ್ಥತ್ವ ಬರುತ್ತದೆ. ಅದೇ ರೀತಿಯಾಗಿ 'ಗುಹಾಂ ಪ್ರವಿಷ್ಟೌ' ಇತ್ಯಾದಿ ಸೂತ್ರದಲ್ಲಿ ಒಬ್ಬನೇ ಪರಮಾತ್ಮನಲ್ಲಿ ಅನೇಕತ್ವಸಂಖ್ಯೆಯನ್ನು ಸಮನ್ವಯ ಮಾಡಿದ್ದಾಗಿದೆ. ಪುನಃ 'ನ ಸಂಖ್ಯೋಪಸಂಗ್ರಹಾತ್' ಎಂಬಲ್ಲಿಯೂ ಅನೇಕತ್ವಸಂಖ್ಯೆಯನ್ನು ಸಮನ್ವಯ ಮಾಡಿದ್ದರಿಂದ ಗತಾರ್ಥತ್ವ ಬರುತ್ತದೆ. ಅಷ್ಟೇ ಅಲ್ಲದೇ ಅನುವ್ಯಾಖ್ಯಾನ ಸುಧಾ, ಭಾಷ್ಯ, ಟೀಕೆಗಳಿಗೆ ಪರಸ್ಪರ ವಿರೋಧವು ಸ್ಪಷ್ಟವಾಗಿ ಕಾಣುತ್ತದೆ. ಮತ್ತು ಅನೇಕ ಅಧಿಕರಣಗಳಿಗೆ ಪರಸ್ಪರ ಸಂಗತಿಯೂ ಸ್ಪಷ್ಟವಾಗಿ ಕಾಣುತ್ತಿಲ್ಲ ಇತ್ಯಾದಿ ಅನೇಕ ಆಕ್ಷೇಪಗಳು ಬರುತ್ತವೆ. ಇವುಗಳನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡು ಗ್ರಂಥಕಾರರು 'ಅನ್ಯತ್ತು' ಇತ್ಯಾದಿಯಾಗಿ ಹೇಳಿದ್ದಾರೆ. ಈ ಎಲ್ಲ ಆಕ್ಷೇಪಗಳಿಗೆ ಆಯಾ ಅಧಿಕರಣಗಳ ನಿರೂಪಣೆಯ ಸಂದರ್ಭದಲ್ಲಿಯೇ ಸಮಂಜಸವಾಗಿ ಉತ್ತರಿಸುತ್ತೇವೆ.




ಅನ್ಯತ್ರಪ್ರಸಿದ್ಧಶಬ್ದಗಳನ್ನು ಸಮನ್ವಯ ಮಾಡುವಾಗ ಅನ್ಯಪರತ್ವವನ್ನು ಅಂಗೀಕರಿಸದೆ ಕೇವಲ ಬ್ರಹ್ಮಪರತ್ವವನ್ನು ಹೇಳಬೇಕು. ಅನ್ಯತ್ರೈವಪ್ರಸಿದ್ಧಶಬ್ದಗಳನ್ನು ಸಮನ್ವಯ ಮಾಡುವಾಗ ಅನ್ಯಪರತ್ವವನ್ನು ಒಪ್ಪಿ ಬ್ರಹ್ಮಪರತ್ವವನ್ನು ಹೇಳಬೇಕು. ಹೀಗೆ ಎರಡು ವಿಧ ಶಬ್ದಗಳಲ್ಲಿರುವ ಸೂಕ್ಷ್ಮವ್ಯತ್ಯಾಸವನ್ನು ಗಮನಿಸಬೇಕು. ಈ ವ್ಯತ್ಯಾಸವಿಲ್ಲದಿದ್ದಲ್ಲಿ ಅತ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವು ಪ್ರಬಲವಾದ ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯದಿಂದಲೇ ಸಿದ್ಧವಾಗುತ್ತಿತ್ತು. ಪ್ರತ್ಯೇಕವಾಗಿ ಸಮನ್ವಯ ಮಾಡುವ ಅವಶ್ಯಕತೆ ಇರುತ್ತಿರಲಿಲ್ಲ.

ಮತ್ತು ಮೊದಲ ಮೂರು ಪಾದಗಳಲ್ಲಿ ನಿರ್ಣಯಿಸಿದ ವಿಚಾರವನ್ನು ಆಶ್ರಯಿಸಿ ನಾಲ್ಕನೆಯ ಪಾದ ಹೊರಟಿದೆ. ಹೀಗೆ ಒಪ್ಪದಿದ್ದರೂ ಮೂರು ಪಾದಗಳಿಗೆ ಸಾರ್ಥಕ್ಯ ಹೇಳುವುದು ಕಷ್ಟವಾಗುತ್ತದೆ. ಮೊದಲ ಮೂರುಪಾದಗಳು ನಾಲ್ಕನೆಯ ಪಾದಕ್ಕೆ ಉಪಜೀವ್ಯವೆಂದು ಹೇಳಿದಾಗ ಮೊದಲ ಮೂರುಪಾದಗಳಿಲ್ಲದೆ ನಾಲ್ಕನೇ ಪಾದ ಹೊರಡಲು ಸಾಧ್ಯವಿಲ್ಲ. ಆದರೂ ನಾಲ್ಕನೇ ಪಾದದಿಂದ ಮೂರು ಪಾದಗಳಿಗೆ ವೈಯ್ಯರ್ಥ್ಯ ಹೇಳಿದರೆ ಪೂರ್ವಮೀಮಾಂಸೆಯಲ್ಲಿ ಸ್ವರ್ಗಕಾಮಾಧಿಕರಣವನ್ನು ಉಪಜೀವಿಸಿ ಹೊರಟ ಭಾವಾರ್ಥಾಧಿಕರಣದಿಂದ ಸ್ವರ್ಗಕಾಮಾಧಿಕರಣಕ್ಕೆ ವೈಯ್ಯರ್ಥ್ಯ ಹೇಳಬೇಕಾಗುತ್ತದೆ. ಆದ್ದರಿಂದ ಯಾವ ಅಧಿಕರಣದ ಸಿದ್ಧಾಂತವನ್ನು ಆಶ್ರಯಿಸಿ

ಯಾವ ಅಧಿಕರಣ ಹೊರಟಿರುತ್ತದೋ ಅದೇ ಅಧಿಕರಣದ ಸಿದ್ಧಾಂತಕ್ಕೆ ಆ ಅಧಿಕರಣದ ಪೂರ್ವಪಕ್ಷದಿಂದ ವಿರೋಧ ಹೇಳಬಾರದು.

ಇನ್ನು 'ತತ್ರಪ್ರಸಿದ್ಧ' ಶಬ್ದಕ್ಕೆ 'ಅನ್ಯಪರತ್ವ ಶಂಕೆ ಇಲ್ಲದ್ದು' ಎಂದರ್ಥ. ಆದ್ದರಿಂದ ತತ್ರಪ್ರಸಿದ್ಧವಾದ 'ವಿಷ್ಣು' 'ನಾರಾಯಣ' ಮೊದಲಾದ ಶಬ್ದಗಳನ್ನೂ ಪ್ರತ್ಯೇಕ ಸಮನ್ವಯ ಮಾಡಬೇಕೆಂಬ ಆಕ್ಷೇಪ ಬರುವುದಿಲ್ಲ. 'ಜನಿತೋತ ವಿಷ್ಣೋಃ' ಎಂಬಲ್ಲಿರುವ 'ವಿಷ್ಣು' ಶಬ್ದವು ಅನ್ಯಪರತ್ವಶಂಕೆಯಿಂದ ಕೂಡಿದೆ; ಹಾಗಾಗಿ ಅನ್ಯತ್ರಪ್ರಸಿದ್ಧವೆನಿಸುತ್ತದೆ. ಇಂತಹ ಶಬ್ದಗಳ ಸಮನ್ವಯವು ಅತ್ಯಾವಶ್ಯಕ.



## ನಾಲ್ಕು ಪಾದಗಳಲ್ಲಿ ಏನೇನು?
## (ಅದ್ವೈತಮತ ವಿಮರ್ಶೆ)

### तात्पर्यचन्द्रिका

**अन्ये तु – प्रथमे स्पष्टब्रह्मलिङ्गान्युदाहरणानि । द्वितीयतृतीययोस्त्व-स्पष्टब्रह्मलिङ्गानि । तयोस्तु सविशेषनिर्विशेषविषयतया भेदः । चतुर्थे प्रधानस्याशब्दत्वोक्तिरिति पादार्थानाहुः ।**

**तन्न, यथा प्रथमे ''अन्तस्तद्धर्मोपदेशात्'' इत्यादौ ''सैवर्क् साम तदुक्थम् तद्यजुः'' इति सर्वात्मकत्वस्य ''सर्वेभ्यः पाप्मभ्य उदितः'' इति सर्वपापराहित्यस्य च ब्रह्मलिङ्गस्य स्पष्टता,**

**तथा द्वितीये ''सर्वत्रप्रसिद्धोपदेशात्'' इत्यत्र ''सर्वं खल्विदं ब्रह्म'' इति जीवेष्वयुक्तस्य सार्वात्म्यादेः, ''अत्ता चराचर'' इत्यत्र ''अन्यत्र धर्मादन्यत्रा-धर्मात्'' इति पुण्यपापराहित्यादेः, ''अन्तरः'' इत्यत्र ''एतदमृतमभयमेतद्ब्रह्म'' इत्यमृतत्वादेः, ''अन्तर्यामी'' इत्यत्र ''एष त आत्माऽन्तर्याम्यमृतः'' इत्यमृतत्वादेः ''अदृश्यत्वादिगुणकः'' इत्यादौ ''यस्सर्वज्ञः'' इति सार्वज्ञादेः ब्रह्मलिङ्गस्य स्पष्टत्वात् ।**

**एवं तृतीये ''द्युभ्वादि'' इत्यत्र ''अमृतस्यैष सेतुः'' ''यस्सर्वज्ञः'' इति अमृतसेतुत्वसार्वज्ञादेः, ''भूमा'' इत्यत्र ''यत्रनान्यत्पश्यति'' इत्यद्वितीयत्वादेः, ''अक्षरमम्बर'' इत्यत्र ''अदृष्टं द्रष्टृश्रुतं श्रोतृ अस्थूलमनणु'' इत्य-**

दृश्यत्वास्थूलत्वानणुत्वादेः, ''ईक्षतिकर्म'' इत्यादौ ''परात्परम्'' इति परात्परत्वादेः ब्रह्मलिङ्गस्य स्पष्टत्वाच्च ।

वाक्यान्तरे ब्रह्मधर्मतया निर्णीतत्वं वा, जीवादौ स्वारस्येनानुपपद्यमानत्वं वा स्पष्टत्वम्, नत्वस्वारस्येनापि जीवादावनुपपद्यमानत्वं, विषयवाक्ये ब्रह्मधर्मतया निर्णीतत्वं वा, जीवादिप्रापकलिङ्गराहित्यं वा, पूर्वपक्षानुदयापातात् तच्च ''सर्वं खल्विदम्'' इत्यादावप्यस्ति । न च ''सर्वत्रप्रसिद्ध'' इत्यादेः ''मनोमयः प्राणशरीरो भारूपः'' इत्यादिकमुदाहरणम् । तत्र च न ब्रह्मलिङ्गं स्पष्टम् । किन्तु ''सर्वं खल्विदम्'' इत्युपक्रम इति वाच्यम्,

प्रथमेऽपि ''अन्तः'' इत्यस्योदाहरणे ''य एषोऽन्तः'' इत्यत्र सार्वात्म्यस्य, ''ज्योतिश्चरण'' इत्यस्योदाहरणे ''यदतः परो दिवो ज्योतिः'' इत्यत्र अमृतत्वादेः, ''प्राणस्तथा'' इत्यस्योदाहरणे ''प्राणोऽस्मि प्रज्ञात्मा'' इत्यत्र हिततमत्वादेः ब्रह्मलिङ्गस्याभावात् ।

द्वितीयादावपि ''य एषोऽन्तरक्षिणि पुरुषो दृश्यते एतदमृतमभयमेतद्ब्रह्म'' ''एष त आत्माऽन्तर्याम्यमृतः'' इत्याद्युदाहरणवाक्य एव अमृतत्वादेः स्पष्टत्वाच्च ।

यथा च द्वितीये तृतीये च समन्वेतव्यं मनोमयत्वादिकं न ब्रह्मणि स्पष्टम्, तथा प्रथमे समन्वेतव्यमादित्यस्थत्वाकाशप्राणशब्दादिकं न ब्रह्मणि स्पष्टम् ।

यच्च द्वितीये सविशेषं, तृतीये निर्विशेषमित्युक्तम्,

तदपि न, द्वितीयेऽपि ''सर्वत्र'' इत्यत्र ''सर्वं खल्विदं ब्रह्म'' इत्यविद्यादि-सर्वभ्रमाधिष्ठानत्वरूपसार्वात्म्यादेः, ''अत्ता'' इत्यत्र ''अन्यत्र भूताच्च भव्याच्च'' ''महतो महीयान्'' इति कालत्रयातीतत्वादेः ''अन्तरः'' इत्यत्र ''कं ब्रह्म खं ब्रह्म'' इति पूर्णसुखत्वादेः, ''अन्तर्यामी'' इत्यत्र ''एष त आत्मा'' इति जीवतादात्म्यादेः, ''अदृश्यत्वादि'' इत्यादौ ''यत्तदद्रेश्यम्'' इत्यदृश्यत्वादेः सविशेषेऽनुपपत्तेः ।

तृतीयेऽपि ''द्युभ्वादि'' इत्यत्र ''तमेवैकं जानथ'' ''यदा पश्यः पश्यते रुक्मवर्णम्'' इति दृश्यत्वरूपित्वादेः ''भूमा'' इत्यत्र ''एवं पश्यन्'' इति सप्रकारकज्ञानविषयत्वादेः, ''अक्षरम्'' इत्यत्र ''अदृष्टं द्रष्टृ अश्रुतं श्रोतृ'' इति द्रष्टृत्वादेः ''ईक्षतिकर्म'' इत्यत्र ''पुरुषमीक्षते'' इति दृश्यत्वादेः, ''दहरः'' इत्यादौ ''सत्यकामस्सत्यसङ्कल्पः'' इति कामादेः निर्विशेषे अनुपपत्तेश्च ।

यदि चिन्मात्रस्यैव निर्विशेषत्वेन भ्रमाधिष्ठानत्वादिविशिष्टस्य सविशेषत्वं, तर्हि द्युभ्वाद्यायतनत्वविशिष्टमपि सविशेषमेव स्यात् ।

''यस्मिन् द्यौः'' इत्यादेश्च लक्षणया चिन्मात्रपरत्वे ''सर्वं खल्विदम्'' इत्यादेरपि प्रामाण्याय तन्मात्रपरत्वं स्यात् । सविशेषे वस्तुतो निर्विशेषत्वस्य निर्विशेषे चारोपितविशेषस्याविरोधेऽप्युभयत्राप्युभयोक्तौ वाक्यव्यवस्थाऽयोगेन तन्निबन्धनपादव्यवस्था न युक्ता ।

एतेन – प्रायिकत्वात्पादव्यवस्थेति निरस्तम् । सर्वसाङ्कर्यस्योक्तत्वात् ।

ಅನುವಾದ - ಅದ್ವೈತಿಗಳ ಪಾದಭೇದ ಹೀಗಿದೆ - ಯಾವ ವಾಕ್ಯಗಳಲ್ಲಿ ಸ್ಪಷ್ಟವಾದ ಬ್ರಹ್ಮಲಿಂಗಗಳು ತೋರುತ್ತಿವೆಯೋ ಆ ವಾಕ್ಯಗಳು ಪ್ರಥಮಪಾದದ ವಿಷಯವಾಕ್ಯಗಳು.

ಅಸ್ಪಷ್ಟವಾದ ಬ್ರಹ್ಮನ ಲಿಂಗಗಳುಳ್ಳ ವಾಕ್ಯಗಳು ದ್ವಿತೀಯ ತೃತೀಯ ಪಾದಗಳ ವಿಷಯವಾಕ್ಯಗಳು ಸವಿಶೇಷಬ್ರಹ್ಮನನ್ನು ಎರಡನೆಯ ಪಾದವು ನಿರ್ವಿಶೇಷಬ್ರಹ್ಮನನ್ನು ಮೂರನೆಯ ಪಾದವು ಪ್ರತಿಪಾದಿಸುವುದರಿಂದ ಎರಡು ಪಾದಗಳು ಭಿನ್ನವಾಗಿವೆ. ನಾಲ್ಕನೆಯ ಪಾದದಲ್ಲಿ ಪ್ರಧಾನವು ಯಾವ ಶಬ್ದದಿಂದಲೂ ವಾಚ್ಯವಾಗುವುದಿಲ್ಲವೆಂದು ಹೇಳಲಾಗಿದೆಯೆಂದು ಹೇಳುತ್ತಾರೆ.

ಇದು ತಪ್ಪು - ಪ್ರಥಮಪಾದದಲ್ಲಿ 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದ ವಿಷಯವಾಕ್ಯದಲ್ಲಿ 'ಸೈವ ಋಕ್ ಸಾಮ ತದುಕ್ತಮ್ ತದ್ಯಜುಃ' 'ಅವನೇ ಋಕ್, ಅವನೇ ಸಾಮ, ಅವನೇ ಯಜುರ್' ಎಂದು ಸರ್ವಾತ್ಮಕತ್ವವು ಕೇಳಿಸುತ್ತಿದೆ. ಇದು ಬ್ರಹ್ಮನಲ್ಲಿರುವ ಸ್ಪಷ್ಟಲಿಂಗ. ಇದರ ಸಮೀಪದಲ್ಲೇ 'ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ' ಎಂದು ಸರ್ವಪಾಪರಾಹಿತ್ಯವು ಕೇಳಿಸುತ್ತಿದೆ. ಇದೂ ಸಹ ಬ್ರಹ್ಮನ ಸ್ಪಷ್ಟಲಿಂಗ. ಇದರಂತೆ ಎರಡನೇ ಪಾದದ ವಿಷಯವಾಕ್ಯಗಳಲ್ಲಿಯೂ ಅನೇಕ ಕಡೆ ಸ್ಪಷ್ಟಲಿಂಗಗಳು ಶ್ರುತವಾಗಿವೆ. 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಿಷಯವಾಕ್ಯದಲ್ಲಿ ಸರ್ವಾತ್ಮಕತ್ವವು ಕೇಳಿಸುತ್ತಿದೆ. ಇದು ಸ್ಪಷ್ಟಲಿಂಗವೇ ಆಗಿದೆ.

'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದಲ್ಲಿ 'ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್' ಎಂಬುದು ವಿಷಯವಾಕ್ಯ. ಇದರಲ್ಲಿ ಪುಣ್ಯಪಾಪರಾಹಿತ್ಯವೆಂಬ ಸ್ಪಷ್ಟಬ್ರಹ್ಮಲಿಂಗವೇ ಕೇಳಿಸುತ್ತಿದೆ.

'ಅಂತರ ಉಪಪತ್ತೇಃ' ಎಂಬಲ್ಲಿ 'ಏತದಮೃತಮಭಯಮೇತದ್‌ಬ್ರಹ್ಮ' ಎಂದು ಅಮೃತತ್ವ ಅಭಯತ್ವಗಳೆಂಬ ಸ್ಪಷ್ಟಬ್ರಹ್ಮಲಿಂಗಗಳು ಕೇಳಿಸುತ್ತಿವೆ.

'ಅಂತರ್ಯಾಮ್ಯಧಿದೈವಾದಿಷು ತದ್ಧರ್ಮೋಪದೇಶಾತ್' ಎಂಬಲ್ಲಿ 'ಏಷ ತೇ ಆತ್ಮಾಂತರ್ಯಾಮ್ಯಮೃತಃ' ಎಂಬುದು ವಿಷಯವಾಕ್ಯ. ಇಲ್ಲಿಯೂ ಅಮೃತತ್ವವೆಂಬ ಸ್ಪಷ್ಟಬ್ರಹ್ಮಲಿಂಗವು ಕೇಳಿಸುತ್ತಿದೆ.

'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' ಎಂಬಲ್ಲಿ 'ಯಃ ಸರ್ವಜ್ಞಃ' ಎಂಬುದು ವಿಷಯವಾಕ್ಯ. ಇದರಲ್ಲಿ ಸರ್ವಜ್ಞತ್ವ ಎಂಬ ಸ್ಪಷ್ಟಬ್ರಹ್ಮಲಿಂಗವು ಕೇಳಿಸುತ್ತಿದೆ.

ಮೂರನೆಯ ಪಾದದಲ್ಲಿಯೂ ಅನೇಕ ಕಡೆ ಸ್ಪಷ್ಟಬ್ರಹ್ಮಲಿಂಗಗಳು ಕೇಳಿಸುತ್ತಿವೆ -

'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬಲ್ಲಿ 'ಅಮೃತಸ್ಯೈಷ ಸೇತುಃ' 'ಯ ಸರ್ವಜ್ಞಃ' ಎಂಬುದು ವಿಷಯವಾಕ್ಯ. ಇಲ್ಲಿ 'ಅಮೃತಸೇತುತ್ವ' 'ಸಾರ್ವಜ್ಞ್ಯಗಳು ಕೇಳಿಸುತ್ತಿವೆ. ಇವೂ ಸಹ ಸ್ಪಷ್ಟವಾದ ಬ್ರಹ್ಮಲಿಂಗಗಳು.

'ಭೂಮಾ ಸಂಪ್ರಸಾದಾದಧ್ಯುಪದೇಶಾತ್'. ಎಂಬಲ್ಲಿ 'ಯತ್ರ ನಾನ್ಯತ್ ಪಶ್ಯತಿ' ಎಂಬುದು ವಿಷಯವಾಕ್ಯ. ಇಲ್ಲಿ ಅದ್ವಿತೀಯತ್ವವು ಸ್ಪಷ್ಟಬ್ರಹ್ಮಲಿಂಗವಾಗಿದೆ.

'ಅಕ್ಷರಮಂಬರಾಂತಧೃತೇಃ' ಎಂಬಲ್ಲಿ 'ಅದೃಷ್ಟಂ ದ್ರಷ್ಟೃ ಅಶ್ರುತಮ್ ಶ್ರೋತೃ ಅಸ್ಥೂಲಮ್ ಅನುಣು' ಎಂಬುದು ವಿಷಯವಾಕ್ಯ. ಇಲ್ಲಿ ಅಸ್ಥೂಲತ್ವ ಅನಣುತ್ವಗಳು ಸ್ಪಷ್ಟಬ್ರಹ್ಮಲಿಂಗಗಳು.

'ಈಕ್ಷತಿಕರ್ಮವ್ಯಪದೇಶಾತ್‌ಸಃ' ಎಂಬ ಸೂತ್ರದಲ್ಲಿ 'ಪರಾತ್ಪರಮ್ ಪುರಿಶಯಮ್ ಪುರುಷಮೀಕ್ಷತೇ' ಎಂಬುದು ವಿಷಯವಾಕ್ಯ. ಇಲ್ಲಿ ಕೇಳಿಸುತ್ತಿರುವ ಪರಾತ್ಪರತ್ವಾದಿಗಳು ಬ್ರಹ್ಮನ ಸ್ಪಷ್ಟಲಿಂಗಗಳು. (ಹೀಗೆ ಅಸ್ಪಷ್ಟ ಬ್ರಹ್ಮಲಿಂಗಗಳನ್ನು ಹೇಳುತ್ತವೆಯೆಂದು ಒಪ್ಪಿದ ಎರಡನೆಯ ಮತ್ತು ಮೂರನೆಯ ಪಾದಗಳಲ್ಲಿ ಅನೇಕ ಕಡೆ ಸ್ಪಷ್ಟಬ್ರಹ್ಮಲಿಂಗಗಳು ಕೇಳಿಸುತ್ತಿವೆ.)

ಮತ್ತು 'ಸ್ಪಷ್ಟತ್ವ' ಎಂದರೆ ಏನು? ''ವಿಷಯವಾಕ್ಯ ಬಿಟ್ಟು ಬೇರೆ ವಾಕ್ಯಗಳಲ್ಲಿ ಬ್ರಹ್ಮಧರ್ಮತಯಾ ನಿರ್ಣೀತವಾಗಿರಬೇಕು' ಅಥವಾ ''ಜೀವಾದಿಗಳಲ್ಲಿ ಸ್ವಾರಸ್ಯವಾಗಿ ಕೂಡಬಾರದು'' ಹೀಗೆ ಹೇಳಬೇಕು. ಹೊರತು ''ಸ್ವಾರಸ್ಯದಿಂದಾಗಲೀ ಅಸ್ವಾರಸ್ಯದಿಂದಾಗಲೀ ಜೀವನಲ್ಲಿ ಕೂಡುವುದೇ ಇಲ್ಲ'' ಎಂದು ಅಥವಾ 'ವಿಷಯವಾಕ್ಯದಲ್ಲಿ ಬ್ರಹ್ಮಧರ್ಮವಾಗಿ ನಿರ್ಣೀತವಾಗಿದೆಯೆಂದು' ಜೀವಾದಿಪ್ರಾಪಕವಾದ ಲಿಂಗಗಳು ಇಲ್ಲ'ವೆಂದಾಗಲೀ ಹೇಳಬಾರದು. ಹೀಗೆ ಹೇಳಿದರೆ ಪೂರ್ವಪಕ್ಷವೇ ಹುಟ್ಟಲಾರದು. ನಾವು ಹೇಳಿದಂತೆ ಹೇಳಿದರೆ 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ಕಡೆಯಲ್ಲಿ ಸ್ಪಷ್ಟತ್ವವು ಬರುತ್ತದೆ.

ಆಕ್ಷೇಪ - 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬಲ್ಲಿ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದು ವಿಷಯವಾಕ್ಯವೇ ಅಲ್ಲ. 'ಮನೋಮಯಃ ಪ್ರಾಣಶರೀರಃ ಭಾರೂಪಃ' ಎಂಬುದು ವಿಷಯವಾಕ್ಯ. 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದು ಉಪಕ್ರಮವಾಕ್ಯ. ಇದರಲ್ಲಿ ಸ್ಪಷ್ಟಬ್ರಹ್ಮಲಿಂಗಗಳು ಕೇಳಿಸುತ್ತಿ-ರಬಹುದು. ಈ ವಾಕ್ಯದಲ್ಲಿ ಸ್ಪಷ್ಟಬ್ರಹ್ಮಲಿಂಗಗಳು ಯಾವುದೂ ಕೇಳಿಸುತ್ತಿಲ್ಲ.

ಸಮಾಧಾನ - ಹೀಗೆ ಹೇಳಿದರೆ ಪ್ರಥಮಪಾದದಲ್ಲಿಯೂ ನಿಮಗೆ ಸ್ಪಷ್ಟಬ್ರಹ್ಮಲಿಂಗಗಳನ್ನು ತೋರಿಸಲಾಗದು. 'ಅಂತಸ್ತದ್ಧರ್ಮೋಪದೇಶಾತ್' ಎಂಬಲ್ಲಿ 'ಸೈವ ಋಕ್ ಸಾಮ' ಎಂಬುದು ವಿಷಯವಾಕ್ಯ. ಇಲ್ಲಿ ಸರ್ವಾತ್ಮಕತ್ವವೆಂಬ ಸ್ಪಷ್ಟ ಬ್ರಹ್ಮಲಿಂಗ ಕೇಳಿಸುತ್ತಿದೆಯೆಂದು ಹೇಳಿದಿರಿ. ಆದರೆ ಇದು ವಿಷಯವಾಕ್ಯವೇ ಅಲ್ಲ. ಇದು ವಿಷಯವಾಕ್ಯದ ಮುಂದಿನ ವಾಕ್ಯ. 'ಯ ಏಷೋಽಂತರಕ್ಷಿಣಿ' ಎಂಬುದು ವಿಷಯವಾಕ್ಯ. ಇಲ್ಲಿ ಸ್ಪಷ್ಟಬ್ರಹ್ಮಲಿಂಗವು ಕೇಳಿಸುತ್ತಿಲ್ಲ.

'ಜ್ಯೋತಿಶ್ಚರಣಾಭಿಧಾನಾತ್' ಎಂಬ ಸೂತ್ರಕ್ಕೆ 'ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ' ಎಂಬುದು ವಿಷಯವಾಕ್ಯ. ಈ ವಿಷಯವಾಕ್ಯದಲ್ಲಿಯೂ ಅಮೃತತ್ವ ಕೇಳಿಸುತ್ತಿಲ್ಲ.

'ಪ್ರಾಣಸ್ತಥಾನುಗಮಾತ್' ಎಂಬಲ್ಲಿ 'ಪ್ರಾಣೋಸ್ಮಿ ಪ್ರಜ್ಞಾತ್ಮಾ' ಎಂಬುದು ವಿಷಯವಾಕ್ಯ. ಇಲ್ಲಿಯೂ ಹಿತತಮತ್ವವೆಂಬ ಸ್ಪಷ್ಟಲಿಂಗವು ಕೇಳಿಸುತ್ತಿಲ್ಲ. ಹೀಗೆ ವಿಷಯವಾಕ್ಯದಲ್ಲಿಯೇ ಸ್ಪಷ್ಟಬ್ರಹ್ಮಲಿಂಗಗಳಿರಬೇಕೆಂದು ಹೇಳಿದರೆ ಅನೇಕ ಅನುಪಪತ್ತಿಗಳು ಬರುತ್ತವೆ. ಆದ್ದರಿಂದ ವಿಷಯವಾಕ್ಯದಲ್ಲಿಯೇ ಇರಬೇಕಾಗಿಲ್ಲ. ವಿಷಯವಾಕ್ಯದ ಹಿಂದೆಯೋ ಅಥವಾ ಮುಂದೆಯೋ ಇದ್ದರೆ ಸಾಕೆಂದು ಹೇಳಬೇಕು. ಆವಾಗ 'ಸರ್ವತ್ರ ಪ್ರಸಿದ್ಧೋಪದೇಶಾತ್ ಎಂಬಲ್ಲಿಯೂ ಸ್ಪಷ್ಟಬ್ರಹ್ಮಲಿಂಗ ಕೇಳಿಸುತ್ತಿದೆಯೆಂಬ ಆಕ್ಷೇಪವು ನಿಮಗೆ ಬಂದೇ ಬರುತ್ತದೆ.

ಒಂದು ವೇಳೆ ಅದೇ ವಿಷಯವಾಕ್ಯದಲ್ಲಿ ಸ್ಪಷ್ಟಬ್ರಹ್ಮಲಿಂಗಗಳು ಕೇಳಿಸುತ್ತಿರಬೇಕೆಂದು ನೀವು ಹೇಳಿದರೆ ಎರಡನೆಯ ಪಾದದಲ್ಲಿಯೂ ಕೆಲವೆಡೆ ಇದನ್ನು ತೋರಿಸಬಹುದು. ಅಂತರ್ಯಾಮ್ಯಧಿಕರಣದಲ್ಲಿ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏತದಮೃತಮ-ಭಯಮೇತದ್ ಬ್ರಹ್ಮ, ಏಷ ತೇ ಆತ್ಮಾಂತರ್ಯಾಮ್ಯಮೃತಃ' ಎಂಬುದು ವಿಷಯವಾಕ್ಯ. ಈ ವಿಷಯವಾಕ್ಯದಲ್ಲೇ ಅಮೃತತ್ವಾದಿ ಸ್ಪಷ್ಟಬ್ರಹ್ಮಲಿಂಗಗಳು ಕೇಳಿಸುತ್ತಿವೆ.

ಆಕ್ಷೇಪ - ಪ್ರಥಮಪಾದದಲ್ಲಿ ಸಮನ್ವಯ ಮಾಡುವ ಲಿಂಗಗಳೇ ಸ್ಪಷ್ಟವಾಗಿರಬೇಕು. ಎರಡು ಮೂರನೆಯ ಪಾದಗಳಲ್ಲಿ ಅಸ್ಪಷ್ಟವಾಗಿರಬೇಕೆಂದು ನಮ್ಮ ಅಭಿಪ್ರಾಯ. ಎರಡನೆಯ ಮೂರನೆಯ ಪಾದಗಳಲ್ಲಿ ಸಮನ್ವಯ ಮಾಡುತ್ತಿರುವ ಮನೋಮಯತ್ವಾದಿಗಳು ಸ್ಪಷ್ಟವಾಗಿ ಬ್ರಹ್ಮಲಿಂಗ-ಗಳಾಗಿಲ್ಲವಲ್ಲ?

ಸಮಾಧಾನ - ಹಾಗಾದರೆ ಪ್ರಥಮಪಾದದಲ್ಲಿ ಸಮನ್ವಯ ಮಾಡುತ್ತಿರುವ ಆದಿತ್ಯಸ್ಥತ್ವ ಆಕಾಶಪ್ರಾಣಾದಿಶಬ್ದಗಳು ಸ್ಪಷ್ಟವಾಗಿ ಇರುವುದಿಲ್ಲ.

*ಆನಂದಮಯಾಧಿಕರಣ*

ಇನ್ನು ಎರಡನೆಯ ಪಾದದಲ್ಲಿ ಸವಿಶೇಷಬ್ರಹ್ಮನನ್ನು ಮೂರನೆಯ ಪಾದದಲ್ಲಿ ನಿರ್ವಿಶೇಷಬ್ರಹ್ಮನನ್ನು ಪ್ರತಿಪಾದಿಸುವುದರಿಂದ ಪಾದಭೇದವು ಯುಕ್ತವಾಗಿದೆಯೆಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಎರಡನೆಯ ಪಾದದಲ್ಲಿ ಅನೇಕ ಕಡೆ ನಿರ್ವಿಶೇಷಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ. 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದು ವಿಷಯವಾಕ್ಯ. ಇದು ಅವಿದ್ಯಾದಿಸಕಲಭ್ರಮೆಗಳಿಗೆ ಅಧಿಷ್ಠಾನವೆಂಬ ಸಾರ್ವಾತ್ಮ್ಯವನ್ನು ಹೇಳುತ್ತಿದೆ. ಇದು ಸವಿಶೇಷನಲ್ಲಿ ಬರುವುದಿಲ್ಲ.

'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದ ವಿಷಯವಾಕ್ಯ 'ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಮಹತೋ ಮಹೀಯಾನ್' ಎಂಬುದು. ಇದರಲ್ಲಿ ಕಾಲತ್ರಯಾತೀತತ್ವವನ್ನು ಹೇಳಿದ್ದಾರೆ. ಸವಿಶೇಷನು ಜ್ಞಾನಬಾಧ್ಯನಾದ್ದರಿಂದ ಕಾಲತ್ರಯಾತೀತತ್ವವು ಅವನಲ್ಲಿ ಬರುವುದಿಲ್ಲ.

'ಅಂತರ ಉಪಪತ್ತೇಃ' ಎಂಬಲ್ಲಿ 'ಕಂ ಬ್ರಹ್ಮ ಖಂ ಬ್ರಹ್ಮ' ಎಂದು ಪೂರ್ಣಸುಖತ್ವವನ್ನು ಹೇಳಿದ್ದಾರೆ. ಇದನ್ನೂ ಸಹ ನಿರ್ವಿಶೇಷಬ್ರಹ್ಮನಲ್ಲಷ್ಟೇ ಒಪ್ಪಿದ್ದಾರೆ (ಪೂರ್ಣಸುಖತ್ವ ಎಂದರೆ ಪೂರ್ಣಸುಖರೂಪನೆಂದರ್ಥ)

'ಅಂತರ್ಯಾಮ್ಯಧಿದೈವಾದಿಷು' ಎಂಬಲ್ಲಿ 'ಏಷ ತೇ ಆತ್ಮಾ' ಎಂದು ಜೀವತಾದಾತ್ಮ್ಯ ಹೇಳಿದ್ದಾರೆ. ಸವಿಶೇಷನಿಗೆ ಜೀವತಾದಾತ್ಮ್ಯವನ್ನು ಅವರೇ ಒಪ್ಪಿಲ್ಲ.

'ಅದೃಶ್ಯತ್ವಾದಿಧರ್ಮೋಕ್ತೇಃ' ಎಂಬಲ್ಲಿ 'ಯತ್ತದದ್ರೇಶ್ಯಮ್' ಎಂದು ಅದೃಶ್ಯತ್ವಾದಿಗಳನ್ನು ಹೇಳಿದ್ದಾರೆ. ಇದು ಸವಿಶೇಷನಲ್ಲಿ ಬರಲು ಸಾಧ್ಯವಿಲ್ಲ.

ಇನ್ನು ತೃತೀಯಪಾದದಲ್ಲಿ ನಿರ್ವಿಶೇಷನನ್ನಷ್ಟೆ ಪ್ರತಿಪಾದಿಸಲಾಗಿದೆಯೆಂದು ಹೇಳಿದ್ದೂ ಸರಿಯಲ್ಲ. ಏಕೆಂದರೆ 'ದ್ಯುಭ್ವಾದ್ಯಾಯತನಮ್ ಸ್ವಶಬ್ದಾತ್' ಎಂಬಲ್ಲಿ 'ತಮೇವೈಕಂ ಜಾನಥ' ಎಂಬುದು ವಿಷಯವಾಕ್ಯ. ಇದರಲ್ಲಿ ಜ್ಞಾನಕರ್ಮತ್ವವೆಂಬ ದೃಶ್ಯತ್ವವು ಕೇಳಿಸುತ್ತಿದೆ. ಇದು ಕೇವಲ ಸವಿಶೇಷನಲ್ಲಷ್ಟೇ ಬರುತ್ತದೆ. ಮತ್ತು 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಮ್' ಎಂದು ರೂಪಿತ್ವವು ಕೇಳಿಸುತ್ತಿದೆ. ಇದೂ ನಿರ್ವಿಶೇಷನಲ್ಲಿ ಬರುವುದಿಲ್ಲ. 'ಭೂಮಾ ಸಂಪ್ರಸಾದಾತ್' ಎಂಬಲ್ಲಿ 'ಏವಂ ಪಶ್ಯನ್' ಎಂದು ಸಪ್ರಕಾರಕಜ್ಞಾನವಿಷಯತ್ವವನ್ನು ಹೇಳಿದ್ದಾರೆ. ಇದೂ ಸಹ ನಿರ್ವಿಶೇಷನಲ್ಲಿ ಬರುವುದಿಲ್ಲ.

'ಅಕ್ಷರಮಂಬರಾಂತಧೃತೇಃ' ಎಂಬಲ್ಲಿ 'ಅದೃಷ್ಟಮ್ ದ್ರಷ್ಟೃಶ್ರುತಂ ಶ್ರೋತೃ' ಎಂದು ಹೇಳಿದ್ದಾರೆ. ಇಲ್ಲಿ ಶ್ರುತವಾದ ದ್ರಷ್ಟೃತ್ವಶ್ರೋತೃತ್ವಗಳು ನಿರ್ವಿಶೇಷನಲ್ಲಿ ಬರುವುದಿಲ್ಲ.

'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬಲ್ಲಿ 'ಪುರುಷಮೀಕ್ಷತೇ' ಎಂದು ದೃಶ್ಯತ್ವ ಕೇಳಿಸುತ್ತಿದೆ. ಇದೂ ನಿರ್ವಿಶೇಷನಲ್ಲಿ ಇಲ್ಲ.

'ದಹರ ಉತ್ತರೇಭ್ಯಃ' ಎಂಬಲ್ಲಿ 'ಸತ್ಯಕಾಮಃ ಸತ್ಯಸಂಕಲ್ಪಃ' ಎಂದು ಸತ್ಯಕಾಮಾದಿಗಳು ಶ್ರುತ-ವಾಗಿವೆ. ಇದೂ ಸಹ ನಿರ್ವಿಶೇಷನಲ್ಲಿ ಕೂಡುವುದಿಲ್ಲ. ಆದ್ದರಿಂದ ದ್ವಿತೀಯ ತೃತೀಯ ಪಾದಭೇದ-ವ್ಯವಸ್ಥೆಯು ಕೂಡುವುದಿಲ್ಲ.

ಆಕ್ಷೇಪ - ಶುದ್ಧಚಿನ್ಮಾತ್ರನು ನಿರ್ವಿಶೇಷನಾಗಲಿ ಆದರೆ ಭ್ರಮಾಧಿಷ್ಠಾನತ್ವಾದಿವಿಶಿಷ್ಟನಾದವನು ಮಾತ್ರ ಸವಿಶೇಷನಾಗುತ್ತಾನೆ. ಆದ್ದರಿಂದ 'ಸರ್ವತ್ರ ಪ್ರಸಿದ್ಧೋಪದೇಶಾತ್' ಇತ್ಯಾದಿ ಸೂತ್ರದಲ್ಲಿ ಸವಿಶೇಷನೇ ಪ್ರತಿಪಾದ್ಯನಾಗುತ್ತಾನೆ?

ಸಮಾಧಾನ - ಹಾಗಾದರೆ ದುಭ್ವಾದ್ಯಾಯತನತ್ವಾದಿವಿಶಿಷ್ಟನಾದವನೂ ಸವಿಶೇಷನೇ ಆಗುತ್ತಾನೆ. ಆದ್ದರಿಂದ ತೃತೀಯಪಾದದಲ್ಲಿಯೂ ಸವಿಶೇಷನು ಪ್ರತಿಪಾದ್ಯನಾದ.

ಆಕ್ಷೇಪ - 'ಯಸ್ಮಿನ್ ದ್ಯೌಃ' ಇತ್ಯಾದಿ ವಾಕ್ಯಗಳು ಸವಿಶೇಷನನ್ನು ಹೇಳಿದಂತೆ ಕಾಣಬಹುದು. ಆದರೆ ಲಕ್ಷಣಯಾ ಶುದ್ಧಚಿನ್ಮಾತ್ರನನ್ನೇ ಹೇಳುತ್ತವೆ?

ಸಮಾಧಾನ - ಹಾಗಾದರೆ ಎರಡನೆಯ ಪಾದದ 'ಸರ್ವಂ ಖಲ್ವಿದಂ' ಎಂಬುದೂ ಲಕ್ಷಣಯಾ ಚಿನ್ಮಾತ್ರಪರವಾಗಲಿ ಲಕ್ಷಣಯಾ ಚಿನ್ಮಾತ್ರಪರವಾದರೆ ಮಾತ್ರ ಪ್ರಾಮಾಣ್ಯ ಬರುತ್ತದೆ.

ಆಕ್ಷೇಪ - ಸವಿಶೇಷಬ್ರಹ್ಮನು ಪಾರಮಾರ್ಥಿಕವಾಗಿ ನಿರ್ವಿಶೇಷನೇ ಆಗಿದ್ದಾನೆ. ನಿರ್ವಿಶೇಷನು ಆರೋಪಿತರೂಪದಿಂದ ಸವಿಶೇಷನಾಗುತ್ತಾನೆ. ಹೀಗೆ ನಿರ್ವಿಶೇಷನು ಸವಿಶೇಷನಾಗುತ್ತಾನೆ. ಸವಿಶೇಷನು ನಿರ್ವಿಶೇಷನಾಗುತ್ತಾನೆ. ಆದ್ದರಿಂದ ಯಾವ ಸಮಸ್ಯೆಯಿಲ್ಲ?

ಸಮಾಧಾನ - ಹಾಗಾದರೆ ಎರಡೂ ಪಾದಗಳಲ್ಲಿ ಒಬ್ಬರೇ ಪ್ರತಿಪಾದ್ಯರಾಗಿದ್ದಾರೆಂದು ಹೇಳಿದಿರಿ. ಆವಾಗ ವಾಕ್ಯವ್ಯವಸ್ಥೆಯೇ ಕೂಡುವುದಿಲ್ಲ. ವಾಕ್ಯವ್ಯವಸ್ಥೆಯೇ ಕೂಡದಿದ್ದಾಗ ಪಾದವ್ಯವಸ್ಥೆಯೂ ಕೂಡುವುದಿಲ್ಲ. ಇಷ್ಟೆಲ್ಲಾ ಹೇಳಿದ್ದರಿಂದ ಪ್ರಾಯಿಕವಾದ್ದರಿಂದ ಪಾದವ್ಯವಸ್ಥೆಯು ಕೂಡುತ್ತದೆಂಬುದೂ ನಿರಸ್ತವಾಯಿತು. ಹಾಗೆ ಹೇಳಿದರೆ ಎಲ್ಲ ಪಾದಗಳಿಗೆ ಪರಸ್ಪರ ಸಾಂಕರ್ಯ ಬರುತ್ತದೆಂದು ಈಗಾಗಲೇ ಉತ್ತರಿಸಿದ್ದೇವೆ.

ಕಠಿಣಪದಾರ್ಥ

ಅನ್ಯೇ = ಅದ್ವೈತಿಗಳು, ಸ್ಪಷ್ಟಬ್ರಹ್ಮಲಿಂಗಾನಿ = ಬ್ರಹ್ಮನನ್ನು ಹೇಳುವ ಸ್ಪಷ್ಟಲಿಂಗಗಳು, ತಯೋಸ್ತು = ಎರಡನೆಯ ಮೂರನೆಯ ಪಾದಗಳಲ್ಲಿ, ತಚ್ಚ = ನಾವು ಹೇಳಿದ ಸ್ಪಷ್ಟತ್ವದ ಲಕ್ಷಣ, ಪ್ರಾಣಶಬ್ದಾದಿಕಮ್ = ಅತ್ರತ್ಯ ದುಭ್ವಾದ್ಯಾಯತನತ್ವಾದಿಗಳು, ಪ್ರಾಯಿಕತ್ವಾತ್ = ಬಹುಲವಾದ್ದರಿಂದ.

**प्रकाशः** – ''नान्यथा तददृष्टेः'' इति भाष्यं विवरितुं परोक्तं निराह – अन्ये त्विति ।। स्पष्टत्वं चाग्रे स्वयमेव निर्वक्ष्यति । एकोपाध्याक्रान्तत्वे कथं भेद इत्यत

उक्तं – **तयोस्त्विति** ।। सैवर्क् साम'' इत्यादि पररीत्यैव सर्वं ध्येयम् । अधिकरणशरीराणि विषयवाक्यानि चाग्रे स्पष्टानि । अनेकाधिकरणविषयवाक्यान्युदाहरता ''एतदमृतमभयमेतद्ब्रह्मेत्युत्तराधिकरणोदाहृतवाक्येष्वपि'' इति टीकास्थं बहुवचनं विवृतं ध्येयम् । टीकायामाद्यातिक्रमेण ''एतदमृतभयम्'' इत्यस्योपादानं तु तस्य स्वपरसम्मतत्वात्, उदाहरणवाक्य एव स्पष्टलिङ्गसत्वाद्वा, न त्वनेकत्र नियमभङ्गो नेति । अत एव सुधायां –''द्वितीयतृतीयपादोदाहरणवाक्यानामपि बहुलं स्पष्टब्रह्मलिङ्गत्वात्'' इत्येवोक्तमिति भावः ।

**नत्विति** ।। येनोक्तानामतथाविधत्वेन स्पष्टत्वं न स्यादिति भावः ।। **तच्चेति** ।। 'वाक्यान्तरे' इत्यादिनोक्तमित्यर्थः ।

ननूपक्रमे स्पष्टलिङ्गश्रवणेऽपि नोदाहरणवाक्ये, अतो न दोष इत्याशङ्क्य, तर्हि प्रथमेऽपि स्पष्टलिङ्गसमन्वयो न स्यादित्याह – **न चेति** ।। विषयवाक्ये न श्रूयत इत्यपि नेत्याह – **द्वितीयादाविति** ।।

ननूदाहरणवाक्येषु स्पष्टलिङ्गान्तरसत्त्वेऽपि न समन्वेतव्यलिङ्गं स्पष्टमित्यत आह – **यथा चेति** ।। **न ब्रह्मणि स्पष्टमिति** ।। अकरणस्य ब्रह्मणो मनोरूपकरणसम्बन्धायोगादिति भावः । आदिपदेनात्तृत्वद्युभ्वाद्यायतनत्वादिकं समन्वेतव्यं गृह्यते ।। **आदित्यस्थत्वेति** ।। एतेषां ब्रह्मलिङ्गतया वाक्यान्तरे निर्णीतत्वेन समन्वयो न वाच्यः स्यादिति भावः । यदपि ''तयोस्तु'' इत्यादिनोक्तं, तदपि नेत्याह – **यच्चेति** ।।

एतेन भाष्यस्थान्यथाशब्दस्य न केवलं टीकारीत्या स्पष्टलिङ्गादिसमन्वयार्थत्वं, सविशेषनिर्विशेषपरत्वमप्यर्थ इत्युक्तं भवति । ''सगुणनिर्गुणप्राचुर्येण तद्भेद इति कश्चित्'' इत्यादिना सुधायां तयोरपि भेदनिरासात् । **भ्रमाधिष्ठानत्वेति** ।। मुख्यसर्वाभेदाभावादेवमुक्तम् ।।

**कालत्रयेति** ।। सविशेषस्य कालयोगित्वादित्यादि ध्येयम् । ननु भवन्मते यथा अन्तराद्यधिकरणे क्वचिल्लिङ्गादिसमन्वयेऽपि बाहुल्येन पादव्यवस्था, तथा किं न स्यादित्यत आह – **एतेनेति** ।।

**गुरुराजीयम्** – नन्विदमपूर्वपादार्थकथनमयुक्तम् । परोक्तपादार्थस्यैव सम्यक्त्वादित्यतः परोक्तं दूषयितुमनुवदति – **अन्ये त्विति** ।। अत्र वाक्यानीति शेषः । स्पष्टानि ब्रह्मलिङ्गानि येषु तानीत्यर्थः । एवमुत्तरत्रापि । नन्वेवं द्वितीय-तृतीययोर्भेदो न स्यात् । उभयोरप्यस्पष्ट- ब्रह्मलिङ्गप्रतिपादकत्वादित्यत आह – **तयोस्त्विति** ।। **अशब्दत्वोक्तिरितीति** ।। शब्दोस्यास्तीति शब्दम् । न शब्द-मशब्दम् । तस्य भावस्तत्त्वमिति विग्रहः । शब्दप्रतिपाद्यत्वाभावोक्तिरिति यावत् । स्पष्टास्पष्टलिङ्गशब्दाभ्यां किं साधकलिङ्गान्युच्यन्ते समन्वेतव्यानि वा । आद्येपि तेषां स्पष्टत्वं पूर्वोत्तरवाक्यप्रतीयमानत्वं वाऽस्वारस्येनापि जीवादावनुपपद्यमानत्वं वा विषयवाक्ये ब्रह्मधर्मतया निर्णीतत्वं वा वाक्यान्तरे ब्रह्मधर्मतया निर्णीतत्वं वा जीवादौ स्वारस्येनानुपपद्यमानत्वं वा साक्षाद्विप्रतिपन्नार्थनिष्ठतया श्रुतत्वं वा तद्विपरीतं चास्पष्टत्वमिति विकल्पान्हृदि कृत्वाऽऽह – **तन्नेत्यादि** ।। अन्तरित्यत्र य एषोन्तरादित्ये हिरण्मयः पुरुषो दृश्यत इत्युदाहरणमिति भावः । सर्वत्रेत्यत्र तु मनोमयःप्राणशरीरो भारूप इत्येतत् अत्तेत्यत्र तु 'यस्य च ब्रह्म च क्षत्रं चोभे भवत ओदनः' इत्युदाहरणम् । ईक्षतिकर्मेत्यत्र च यः पुनरेतं त्रिमात्रेणोमित्यनेनाक्षरेण परमं पुरुषमभिध्यायीतेत्युदाहरणम् । तथा च साङ्कर्यान्नैवं पादभेदो युक्त इति भावः।

**तच्चेति** ।। वाक्यान्तरे ब्रह्मपरतया निर्णीतत्वादिकमित्यर्थः । एवं प्रथमपादस्य द्वितीयतृतीयपादाभ्यां साङ्कर्यमुपपाद्याधुना द्वितीयतृतीययोरपि तदुपपादयितुमाह – **यच्चेति** ।। अत्रापि सविशेषत्वनिर्विशेषत्वे परस्परविरुद्धे उताविरुद्धे इति विकल्पेन दूषयति ।। **द्वितीयेऽपीति** ।। तथा च निर्विशेषप्रतिपादकेन तृतीयेनास्य साङ्कर्यमिति भावः ।। **तृतीयेपीति** ।। तथा च सविशेषप्रतिपादकेन द्वितीयेनास्य साङ्कर्यमिति भावः । ननु द्वितीयपादे भ्रमाधिष्ठानत्वादिविशिष्टप्रतिपादनेन सविशेषपरत्वमेवेत्यत आह – **यदिचेति** ।। ननु तृतीयस्य न सविशेषविषयत्वम् । तत्रोदाहृतस्य यस्मिन्द्यौरित्यादेर्लक्षणया निर्विशेषपरत्वादित्यत आह – **यस्मिन्निति** ।। ननु द्वितीये सविशेषमेव प्रतिपाद्यम् । न चैवमविद्यादिसर्वभ्रमाधिष्ठानत्वरूप-सार्वात्म्यायोगः । वास्तवरूपाभिप्रायेण तदुपपत्तेः । एवं तृतीयेऽपि निर्विशेषमेव प्रतिपाद्यम् । न चैवं तमेवैकं जानथेत्यादिवाक्योक्तदृश्यत्वाद्यनुपपत्तिः । विशिष्टाभि-प्रायेण तदुपपत्तेरित्यत आह – **सविशेष इत्यादि** ।। **एतेनेति** ।।

ವಿವರಣೆ - ಇಲ್ಲಿಯ ತನಕ ಸ್ವಮತದ ಪ್ರಕಾರ ಪಾದಗಳ ಉಪಾಧಿಯನ್ನು ಮತ್ತು ಅವುಗಳ ಸಾರ್ಥಕ್ಯವನ್ನು ಸಮರ್ಥಿಸಿದ್ದಾಯಿತು. ಈಗ ಅದ್ವೈತಿಗಳು ಹೇಳುವ ಪಾದಗಳ ಉಪಾಧಿಯನ್ನು ಮತ್ತು ಅವುಗಳ ಸಾರ್ಥಕ್ಯವನ್ನು ನಿರಾಕರಿಸುತ್ತಿದ್ದಾರೆ. ಅದ್ವೈತಿಗಳ ಈ ಅಭಿಪ್ರಾಯವನ್ನೆಲ್ಲ ಶ್ರೀಮದಾಚಾರ್ಯರು 'ನಾನ್ಯಥಾ ತದದೃಷ್ಟೇಃ' ಎಂಬ ಒಂದೇ ಮಾತಿನಿಂದ ನಿರಾಕರಿಸಿದ್ದಾರೆ. ಅದನ್ನೂ ಸಹ ಈಗ ವಿವರವಾಗಿ ವ್ಯಾಖ್ಯಾನಿಸುತ್ತಿದ್ದಾರೆ.

ಗ್ರಂಥಕಾರರು ಉದಾಹರಿಸುತ್ತಿರುವ ಈ ವಿಷಯವಾಕ್ಯಗಳೆಲ್ಲ ಸಾಮಾನ್ಯವಾಗಿ ಅದ್ವೈತಿಗಳ ಪ್ರಕಾರವೇ ಆಗಿರುತ್ತವೆ. ಅದ್ವೈತಿಗಳ ಅಧಿಕರಣಶರೀರವನ್ನು, ವಿಷಯವಾಕ್ಯಗಳನ್ನು ಅರ್ಥೈಸುವ ಬಗೆಯನ್ನು ಮುಂದೆ ಆಯಾ ಅಧಿಕರಣಗಳಲ್ಲಿಯೇ ಗ್ರಂಥಕಾರರು ಹೇಳುತ್ತಾರೆ.

'ಏತದಮೃತಮಭಯಮೇತದ್ ಬ್ರಹ್ಮ ಇತ್ಯುತ್ತರಾಧಿಕರಣೋದಾಹೃತವಾಕ್ಯೇಷ್ವಪಿ' ಎಂಬ ಟೀಕೆಯಲ್ಲಿ ಬಹುವಚನ ಕೇಳಿಸುತ್ತಿದೆ. ಇಲ್ಲಿ ಗ್ರಂಥಕಾರರು ಅನೇಕ ಅಧಿಕರಣಗಳ ವಿಷಯವಾಕ್ಯಗಳನ್ನು ಉದಾಹರಿಸಿದ್ದರಿಂದ ಟೀಕೆಯ ಬಹುವಚನಪ್ರಯೋಗವನ್ನು ವ್ಯಾಖ್ಯಾನಿಸಿದಂತಾಯಿತು. ಟೀಕೆಯಲ್ಲಿ ಅಂತರಧಿಕರಣದ ವಿಷಯವಾಕ್ಯವನ್ನೇ ನೇರವಾಗಿ ಹೇಳಿದ್ದಾರೆ. ಏಕೆಂದರೆ 'ಏತದಮೃತಮ್' ಎಂಬ ಶ್ರುತಿಯು ಅಂತರಧಿಕರಣದ ವಿಷಯವಾಕ್ಯವೆಂದು ನಾವು ಮತ್ತು ಅದ್ವೈತಿಗಳು ಇಬ್ಬರೂ ಒಪ್ಪಿದ್ದೇವೆ. ಮತ್ತು ವಿಷಯವಾಕ್ಯದಲ್ಲಿಯೇ ಸ್ಪಷ್ಟಬ್ರಹ್ಮಲಿಂಗವು ಶ್ರುತವಾಗಿದೆ. ಹೀಗೆ ಯಾವುದೇ ಪ್ರಕಾರವು ವಿಪ್ರತಿಪತ್ತಿಯಿಲ್ಲದ ಕಾರಣ ಇದನ್ನೇ ಉಲ್ಲೇಖಿಸಿದ್ದಾರೆ. ಹೊರತು ಅನೇಕ ಕಡೆ ನಿಯಮಭಂಗವಿಲ್ಲವೆಂಬ ಕಾರಣದಿಂದಲ್ಲ. ಉಪಲಕ್ಷಣತಯಾ ಬೇರೆಯದ್ದನ್ನೂ ಸ್ವೀಕರಿಸಬೇಕೆಂದು ಇದರಿಂದ ತಿಳಿಯಬೇಕು. ಆದ್ದರಿಂದಲೇ ಸುಧೆಯಲ್ಲಿ 'ದ್ವಿತೀಯ ತೃತೀಯ ಪಾದೋದಾಹರಣವಾಕ್ಯಾನಾಮಪಿ ಬಹುಲಂ ಸ್ಪಷ್ಟಬ್ರಹ್ಮಲಿಂಗತ್ವಾತ್' ಎಂದು ಬಹುಲಂ ಎಂದಷ್ಟೇ ಹೇಳಿದ್ದಾರೆ.

'ನಾನ್ಯಥಾ ತದದೃಷ್ಟೇಃ' ಎಂಬ ಭಾಷ್ಯದಲ್ಲಿರುವ 'ಅನ್ಯಥಾ' ಶಬ್ದಕ್ಕೆ ಟೀಕೆಯಲ್ಲಿ ಹೇಳಿದಂತೆ ಸ್ಪಷ್ಟಲಿಂಗಾದಿಸಮನ್ವಯವೆಂದಷ್ಟೇ ಅರ್ಥವಲ್ಲ. ಸವಿಶೇಷನಿರ್ವಿಶೇಷತ್ವಪರವಾಗಿಯೂ ಅರ್ಥೈಸಬೇಕು. ಆದ್ದರಿಂದ ಸ್ಪಷ್ಟಲಿಂಗಾದಿಸಮನ್ವಯಪರವಾದ್ದರಿಂದ ಅಥವಾ ಸವಿಶೇಷನಿರ್ವಿಶೇಷಪರವಾದ್ದರಿಂದಲೂ ಪಾದಭೇದವನ್ನು ಹೇಳಲಾಗದೆಂದು ಭಾಷ್ಯದ ಅಭಿಪ್ರಾಯ.

ನಮ್ಮ ಮತದಲ್ಲಿ ಪ್ರಥಮಪಾದವು ನಾಮಸಮನ್ವಯ ರೂಪವಾಗಿದ್ದರೂ ಲಿಂಗಸಮನ್ವಯವನ್ನು ಅಂತರಾಧಿಕರಣದಲ್ಲಿ ಮಾಡಲಾಗಿದೆ. ಹಾಗೆಯೇ ಲಿಂಗಪಾದದಲ್ಲಿ 'ವೈಶ್ವಾನರ' ಎಂಬ ನಾಮಸಮನ್ವಯವನ್ನು ಮಾಡಲಾಗಿದೆ. ಆದರೂ ಪ್ರಚುರವಾಗಿ ನಾಮಸಮನ್ವಯ ಇರುವುದರಿಂದ ನಾಮಪಾದವೆಂದು; ಪ್ರಚುರವಾಗಿ ಲಿಂಗಸಮನ್ವಯ ಇರುವುದರಿಂದ ಲಿಂಗಪಾದವೆಂಬ ವ್ಯವಸ್ಥೆಯನ್ನು ಆಶ್ರಯಿಸಿದ್ದೇವೆ. ಇದರಂತೆ ಅದ್ವೈತಿಗಳಿಗೆ ಹೇಳಲು ಬರುವುದಿಲ್ಲ. ಏಕೆಂದರೆ ಅವರು ಯಾವ ಪಾದವನ್ನು ಸವಿಶೇಷಪರವೆನ್ನುತ್ತಾರೋ ಆ ಪಾದದ ಎಲ್ಲ ಅಧಿಕರಣಗಳು ನಿರ್ವಿಶೇಷಪರವಾಗಿವೆ. ಯಾವ ಪಾದವನ್ನು ನಿರ್ವಿಶೇಷಪರವೆನ್ನುತ್ತಾರೋ ಆ ಪಾದದ ಎಲ್ಲ ಅಧಿಕರಣಗಳು ಸವಿಶೇಷಪರವಾಗುತ್ತವೆಂಬ ದೋಷವನ್ನು ಈಗಾಗಲೇ ಹೇಳಿದ್ದೇವೆ. ಆದ್ದರಿಂದ ನಮ್ಮಂತೆ ಅವರಿಗೆ ಹೇಳಲಾಗದು.




ಅದ್ವೈತಿಗಳೂ ಕೂಡ ಪ್ರಥಮಾಧ್ಯಾಯವನ್ನು ಸಮನ್ವಯಾಧ್ಯಾಯವೆಂದು ಒಪ್ಪುತ್ತಾರೆ. ಆದರೆ 'ಅನ್ಯತ್ರಪ್ರಸಿದ್ಧ' ಇತ್ಯಾದಿಯಾಗಿ ನಾವು ಹೇಳುವಂತೆ ಪಾದೋಪಾಧಿಗಳನ್ನು ಹೇಳುವುದಿಲ್ಲ. ಅವರು ಹೇಳುವ ಪಾದಭೇದದ ವ್ಯವಸ್ಥೆ ಹೀಗಿದೆ -

ಪ್ರಥಮಪಾದ - ಸ್ಪಷ್ಟಬ್ರಹ್ಮಲಿಂಗಗಳ ಸಮನ್ವಯ
ದ್ವಿತೀಯಪಾದ - ಸವಿಶೇಷನಲ್ಲಿ ಅಸ್ಪಷ್ಟಲಿಂಗಗಳ ಸಮನ್ವಯ
ತೃತೀಯಪಾದ - ನಿರ್ವಿಶೇಷನಲ್ಲಿ ಅಸ್ಪಷ್ಟಲಿಂಗಗಳ ಸಮನ್ವಯ
ಚತುರ್ಥಪಾದ - ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವ ನಿರಾಕರಣೆ.

ಈ ಕ್ರಮದಲ್ಲಿ ಪಾದಭೇದದ ವ್ಯವಸ್ಥೆ ಮಾಡಿದ್ದಾರೆ. ಆದರೆ ವ್ಯವಸ್ಥೆಗೆ ವಿರುದ್ಧವಾಗಿ ವಿಷಯವಾಕ್ಯಗಳನ್ನು ಉಲ್ಲೇಖಿಸಿದ್ದಾರೆ. ಪ್ರಥಮಪಾದದಲ್ಲಷ್ಟೇ ಸ್ಪಷ್ಟಬ್ರಹ್ಮಲಿಂಗಗಳನ್ನು ಹೇಳಿ ಮುಗಿಸಬೇಕಿತ್ತು. ಆದರೆ ಎರಡನೆಯ ಪಾದದ ಅನೇಕ ಅಧಿಕರಣಗಳಲ್ಲಿ ಪುನಃ ಸ್ಪಷ್ಟಬ್ರಹ್ಮಲಿಂಗಗಳುಳ್ಳ ವಿಷಯವಾಕ್ಯಗಳನ್ನೇ ಹೇಳಿದ್ದಾರೆ. ಅಷ್ಟೇ ಅಲ್ಲದೇ ಮೂರನೆಯ ಪಾದದಲ್ಲಿಯೂ ಅನೇಕ ಕಡೆ ಸ್ಪಷ್ಟಬ್ರಹ್ಮಲಿಂಗಗಳೇ ಕಾಣಿಸುತ್ತಿವೆ.

ಇನ್ನು ಅದ್ವೈತಿಗಳು ಸ್ಪಷ್ಟತ್ವದ ಪರಿಷ್ಕಾರವನ್ನು ಮೂರು ಬಗೆಯಲ್ಲಿ ಮಾಡುತ್ತಾರೆ -

೧) ಸ್ವಾರಸ್ಯದಿಂದ ಅಥವಾ ಅಸ್ವಾರಸ್ಯದಿಂದ ಜೀವನಲ್ಲಿ ಆ ಧರ್ಮವು ಬರಬಾರದು.
೨) ವಿಷಯವಾಕ್ಯದಲ್ಲಿ ಬ್ರಹ್ಮನ ಧರ್ಮವಾಗಿ ನಿರ್ಣೀತವಾಗಿರಬೇಕು.
೩) ಜೀವಾದಿಗಳನ್ನು ತಿಳಿಸುವ ಲಿಂಗಗಳು ಇರಬಾರದು ಎಂದು.

ಆದರೆ ಈ ಮೂರರಲ್ಲಿ ಯಾವುದೇ ಒಂದನ್ನು ಇಟ್ಟುಕೊಂಡರೂ ಯಾವ ಅಧಿಕರಣದ ಪೂರ್ವಪಕ್ಷವೂ ಹುಟ್ಟುವುದಿಲ್ಲ. ಆದ್ದರಿಂದ ಸ್ಪಷ್ಟತ್ವದ ಪರಿಷ್ಕಾರವನ್ನು ಹೀಗೆ ಮಾಡಬೇಕು -

೧) ವಿಷಯವಾಕ್ಯ ಬಿಟ್ಟು ಬೇರೆ ವಾಕ್ಯಗಳಿಂದ ಬ್ರಹ್ಮನ ಧರ್ಮವೆಂದು ನಿರ್ಣಯವಾಗಿರಬೇಕು.
೨) ಜೀವಾದಿಗಳಲ್ಲಿ ಸ್ವಾರಸ್ಯವಾಗಿ ಕೂಡಬಾರದು ಎಂದು.

ಸವಿಶೇಷನನ್ನು ಎರಡನೆಯ ಪಾದವು ಸಮರ್ಥಿಸುತ್ತದೆಂದು ಹೇಳುತ್ತಾರೆ. ಆದರೆ ಸರ್ವಭ್ರಮಾಧಿಷ್ಠಾನತ್ವ, ಕಾಲತ್ರಯಾತೀತತ್ವ ಮೊದಲಾದವು ಸವಿಶೇಷನಲ್ಲ; ಬಾರದ ಧರ್ಮಗಳನ್ನೇ ಎರಡನೆಯ ಪಾದದಲ್ಲಿ ಹೇಳಿದ್ದಾರೆ. ನಿರ್ವಿಶೇಷನನ್ನು ಮೂರನೆಯ ಪಾದ ಸಮರ್ಥಿಸುತ್ತದೆಂದು ಹೇಳಿದ್ದಾರೆ. ಆದರೆ ದೃಶ್ಯತ್ವ, ರೂಪಿತ್ವ, ಸಪ್ರಕಾರಕಜ್ಞಾನವಿಷಯತ್ವವೇ ಮೊದಲಾದ ಧರ್ಮಗಳನ್ನು ಹೇಳಿದ್ದಾರೆ. ಇವು ಸವಿಶೇಷನಲ್ಲಿ ಬರುತ್ತವೆ ಹೊರತು ನಿರ್ವಿಶೇಷನಲ್ಲಿ ಬರುವುದಿಲ್ಲ.

ಹೀಗೆ ಅದ್ವೈತಿಗಳ ಪಾದೋಪಾಧಿಗಳು ಸಾಂಕರ್ಯದೋಷಗ್ರಸ್ತಗಳಾಗಿವೆ.



*ಆನಂದಮಯಾಧಿಕರಣ*

## ಅದ್ವೈತಿಗಳ ಪಾದೋಪಾಧಿ ಪಾದಕ್ರಮಗಳ ನಿರಾಸ

**तात्पर्यचन्द्रिका–**

अस्माकं नामपादे "अन्तस्तद्धर्म" इत्यत्र लिङ्गसमन्वय इन्द्राद्यनेकनाम-समन्वयार्थः, तथा लिङ्गपादे वैश्वानरनामसमन्वयः पाचकत्वाद्यनेकलिङ्गसमन्वयार्थ इति टीकायामेव वक्ष्यते ।

यत्तु यौगिकरूढविषयतया द्वितीयतृतीययोर्भेद इति परमतम्, तन्न, तृतीयेऽपि द्युभ्वाद्यायतनत्वस्य, "ईक्षतिकर्म" इत्यत्र अभिध्यातव्यत्वस्य, "शब्दादेव प्रमितः" इत्यादौ चाङ्गुष्ठमात्रत्वादेश्च यौगिकत्वात् ।

एवं चतुर्थेऽपि पादे त्वया "आनुमानिकम्" इति "ज्योतिः" इति "न सङ्ख्या" इत्यधिकरणत्रय एव प्रधानस्य शाब्दतायाः निरस्तत्वात् अन्यत्र "कारणत्वेन चाकाशादिषु" इत्यत्र सृष्टिवाक्यविगानस्य, "जगद्वाचित्वात्" इत्यत्र "यस्य चैतत्कर्म स वेदितव्यः" इत्यादिवाक्यानां जीवादिपरत्वस्य, "वाक्यान्वयात्" इत्यत्र "आत्मा वा अरे द्रष्टव्यः" इत्यादिवाक्यानां जीवपरत्वस्य च, "प्रकृतिश्च" इत्यत्र निमित्तोपादानभेदस्य च निरस्तत्वात्, प्रधानाशब्दता न चतुर्थपादव्यापिनी ।

यच्चोक्तं परैः – प्रधानाद्येव कारणतया सर्ववेदान्तार्थ इति लक्षणासम्भवा-शङ्कायास्त्रिपाद्यां निरासः । चतुर्थपादे तु प्रधानमपि कारणतया वेदान्तैकदेशार्थ इत्यतिव्याप्तिशङ्कायाः । अत एव "अनुमानिकमप्येकेषां" इति सूत्रे अपिशब्द एकशब्दश्चेति,

तन्न, "आनुमानिकम्" इत्यादौ पूर्वपक्षिणा यस्य "महतः परमव्यक्तम्" "अजामेकाम्" इत्यादेः प्रधानपरत्वं शङ्कितं, तस्यैकदेशस्य सिद्धान्तेऽपि ब्रह्मपरत्वाभावात् । अविद्यादिपरत्वे च ब्रह्मलक्षणस्य प्रधाने अनतिव्याप्तावपि अविद्यायामतिव्याप्त्यपरिहारात् । तस्मान्न परमते पादभेदो युक्तः।

नापि तत्क्रमः, सुबोधस्य प्राथम्ये आनन्दमयादौ निर्विशेषविचारायोगात् ।

**दुर्बोधस्य प्राथम्ये तु स्पष्टब्रह्मलिङ्गानां प्राथम्यायोगात् । निर्विशेषस्य तृतीये निरूपणायोगाच्च । ईक्षत्यधिकरणोक्ताशब्दत्वस्य विक्षिप्य चतुर्थपादे व्युत्पादने हेत्वभावात् । चतुर्थस्य तु समन्वयासङ्गतिः परैरेवाङ्गीकृतेति ।**

ಅನುವಾದ - ನಮ್ಮ ಸಿದ್ಧಾಂತದಲ್ಲಿ ನಾಮಪಾದದಲ್ಲಿರುವ 'ಅಂತಸ್ಥದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ ಲಿಂಗಸಮನ್ವಯ ಮಾಡಲಾಗಿದೆ. ಅಂತಸ್ಥತ್ವವೆಂಬುದು ಆಪಾತತಃ ಲಿಂಗರೂಪವಾದರೂ ಇದರ ಪರ್ಯವಸಾನ ಇಂದ್ರಾದಿ ಅನೇಕ ನಾಮಗಳ ಸಮನ್ವಯರೂಪವೇ ಆಗಿದೆ. ಇದರಂತೆ ಲಿಂಗಪಾದದಲ್ಲಿ ವೈಶ್ವಾನರ ಎಂಬ ನಾಮಸಮನ್ವಯವನ್ನು ಮಾಡಲಾಗಿದೆ. ಇದೂ ಕೂಡ ಆಪಾತತಃ ನಾಮರೂಪವಾಗಿದ್ದರೂ ಪಾಚಕತ್ವಾದಿ ಅನೇಕ ಲಿಂಗಗಳಸಮನ್ವಯದಲ್ಲೇ ಪರ್ಯವಸಾನವಾಗುತ್ತದೆ. ಈ ವಿಷಯವು ಟೀಕೆಯಲ್ಲೇ ಹೇಳಲ್ಪಟ್ಟಿದೆ.

ಅದ್ವೈತಿಗಳು ಎರಡನೆಯ ಮತ್ತು ಮೂರನೆಯ ಪಾದಗಳಿಗೆ ಮತ್ತೊಂದು ಬಗೆಯಲ್ಲಿ ವೈಲಕ್ಷಣ್ಯ ತೋರಿಸಲು ಪ್ರಯತ್ನಿಸಿದ್ದಾರೆ. - 'ಎರಡನೆಯ ಪಾದದಲ್ಲಿ ಯೌಗಿಕಶಬ್ದಗಳನ್ನು ಸಮನ್ವಯ ಮಾಡುವುದರಿಂದ ಎರಡೂ ಪಾದಗಳು ಸಾರ್ಥಕವಾಗಿವೆ' ಎಂದು. ಆದರೆ ರೂಢಶಬ್ದಗಳನ್ನಷ್ಟೇ ಹೇಳಬೇಕಾದ ಮೂರನೆಯ ಪಾದದಲ್ಲಿ ದುಭ್ವಾದ್ಯಾಯತನತ್ವೆಂಬ ಯೌಗಿಕಶಬ್ದವು ಕೇಳಿಸುತ್ತಿದೆ. 'ಈಕ್ಷತಿಕರ್ಮವ್ಯಪದೇಶಾತ್ಸಃ' ಎಂಬಲ್ಲಿ ಅಭಿಧ್ಯಾತವ್ಯತ್ವವು 'ಶಬ್ದಾದೇವ ಪ್ರಮಿತಃ' ಎಂಬಲ್ಲಿ ಅಂಗುಷ್ಠಮಾತ್ರತ್ವವು ಕೇಳಿಸುತ್ತಿದೆ. ಇವೆಲ್ಲವೂ ಯೌಗಿಕವೇ ಆಗಿವೆ.

ನಾಲ್ಕನೆಯ ಪಾದವು ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಿಸಲು ಹೊರಟಿದೆಯೆಂದು ಹೇಳುತ್ತಾರೆ. ಇದೂ ಸಹ ತಪ್ಪು. ಏಕೆಂದರೆ 'ಆನುಮಾನಿಕಮಪ್ಯೇಕೇಷಾಮ್' 'ಜ್ಯೋತಿಶ್ಚರಣಾಭಿಧಾನಾತ್' 'ನ ಸಂಖ್ಯೋಪಸಂಗ್ರಹಾತ್' ಎಂಬ ಮೂರು ಅಧಿಕರಣಗಳಲ್ಲಿ ಮಾತ್ರ ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಿಸಲಾಗಿದೆ. ಆದರೆ 'ಕಾರಣತ್ವೇನ ಚಾಕಾಶಾದಿಷು' ಎಂಬ ಅಧಿಕರಣದಲ್ಲಿ ಸೃಷ್ಟಿವಾಕ್ಯದ ವಿಗಾನ ಹೇಳಿದ್ದಾರೆ. 'ಜಗದ್‌ವಾಚಿತ್ವಾತ್' ಎಂಬ ಅಧಿಕರಣದಲ್ಲಿ 'ಯಸ್ಯ ಚೈತತ್‌ಕರ್ಮ ಸವೇದತವ್ಯಃ' ಇತ್ಯಾದಿವಾಕ್ಯವು ಜೀವಪರವೆಂದು ಸಾಧಿಸಲಾಗಿದೆ. ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಸೂತ್ರದಲ್ಲಿ ನಿಮಿತ್ತ ಉಪಾದಾನಕಾರಣಗಳಿಗೆ ಅಭೇದವನ್ನು ಸಮರ್ಥಿಸಲಾಗಿದೆ ಹೀಗೆ ಚತುರ್ಥಪಾದದ ಪ್ರತಿಯೊಂದು ಸಮರ್ಥಿಸಲಾಗಿದೆ. ಹೀಗೆ ಚತುರ್ಥಪಾದದ ಪ್ರತಿಯೊಂದು ಅಧಿಕರಣಗಳೂ ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಿಸುತ್ತಿಲ್ಲ.

ಅದ್ವೈತಿಗಳು - ಜಗತ್ಕಾರಣತ್ವವೆಂಬ ಲಕ್ಷಣವು ಪ್ರಧಾನದಲ್ಲಿ ಬರುವುದರಿಂದ ಪ್ರಧಾನವೇ ಸರ್ವವೇದಾಂತಗಳ ಮುಖ್ಯಾರ್ಥವಾಗಿದೆ. ಆದ್ದರಿಂದ ಬ್ರಹ್ಮನ ಲಕ್ಷಣಕ್ಕೆ ಅಸಂಭವದೋಷ ಬರುತ್ತದೆ. ಈ ಆಶಂಕೆಯನ್ನು ಪರಿಹರಿಸಲು ಮೊದಲ ಮೂರು ಪಾದಗಳು ಹೊರಟಿವೆ. ಬ್ರಹ್ಮ ಜಗತ್ಕಾರಣನಾಗಲಿ

ವೇದಾಂತದ ಏಕದೇಶದಲ್ಲಿ ಪ್ರಧಾನವೂ ಪ್ರತಿಪಾದ್ಯವಾದ್ದರಿಂದ ಪ್ರಧಾನವೂ ಜಗತ್ಕಾರಣ-ವಾಗಲಿಯೆಂಬ ಅತಿವ್ಯಾಪ್ತಿಯನ್ನು ನಾಲ್ಕನೆಯ ಪಾದದಲ್ಲಿ ನಿರಾಕರಿಸಲಾಗಿದೆ. ಈ ಅತಿವ್ಯಾಪ್ತಿಯನ್ನು ತೋರಿಸುವುದಕ್ಕಾಗಿಯೇ 'ಆನುಮಾನಿಕಮಪಿ' ಎಂದು 'ಅಪಿ' ಶಬ್ದವನ್ನು 'ಏಕ' ಶಬ್ದವನ್ನು ಸೂತ್ರಕಾರರು ಹೇಳಿದ್ದಾರೆ. ಹೀಗೆ ನಾಲ್ಕು ಪಾದಗಳು ಸಾರ್ಥಕಗಳಾಗಿವೆ.

ದ್ವೈತಿಗಳು - ಇದು ತಪ್ಪು. ಆನುಮಾನಿಕಸೂತ್ರದಲ್ಲಿ ಪೂರ್ವಪಕ್ಷಿಯು 'ಮಹತಃ ಪರಮವ್ಯಕ್ತಂ ಅಜಾಮೇಕಾಮ್' ಎಂಬ ವಾಕ್ಯವು ಪ್ರಧಾನಪರವೆಂದು ಆಕ್ಷೇಪ ಮಾಡುತ್ತಾನೆ. ಆವಾಗ ನೀವು ಆ ವಾಕ್ಯವು ಪ್ರಧಾನಪರವಲ್ಲ. ಅವಿದ್ಯಾಪರವೆಂದು ಸಿದ್ಧಾಂತ ಮಾಡುತ್ತೀರಿ. ಹೀಗೆ ನೀವು ಸಿದ್ಧಾಂತ ಮಾಡುವುದರಿಂದ ಏನು ಲಾಭವಾಯಿತು. ಶ್ರುತಿಗೆ ಬ್ರಹ್ಮಪರತ್ವವನ್ನು ಒಪ್ಪದೇ ಇದ್ದರಿಂದ ಬ್ರಹ್ಮನ ಲಕ್ಷಣಕ್ಕೆ ಪ್ರಧಾನದಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸಿ ಅವಿದ್ಯೆಯಲ್ಲಿ ಅತಿವ್ಯಾಪ್ತಿ ಹೇಳಿದಂತಾಯಿತು. ಆದ್ದರಿಂದ ಅದ್ವೈತಿಗಳಿಗೆ ಪಾದಭೇದವನ್ನು ಯಾವುದೇ ರೀತಿಯಿಂದಲೇ ಸಮರ್ಥಿಸಲು ಸಾಧ್ಯವಿಲ್ಲ.

ಮತ್ತು ಪಾದಕ್ರಮವೂ ಕೂಡುವುದಿಲ್ಲ. ಸೋಪಾನಾರೋಹಣಕ್ರಮದಿಂದ ಮೊದಲು ಸುಲಭ-ವಾದದ್ದನ್ನು ಹೇಳಿ ಆನಂತರ ಕಷ್ಟವಾದದ್ದನ್ನು ಹೇಳುತ್ತಿರೋ? ಅಥವಾ ಮಹಾಮಲ್ಲಭಂಗನ್ಯಾಯದಂತೆ ಮೊದಲು ಕಷ್ಟವಾದದ್ದನ್ನು ಹೇಳಿ ಆಮೇಲೆ ಸುಲಭವಾದದ್ದನ್ನು ಹೇಳುತ್ತೀರೋ? ಸುಲಭವಾದದ್ದನ್ನೇ ಮೊದಲು ಹೇಳುತ್ತೇವೆ ಎಂದರೆ ಆನಂದಮಯಾಧಿಕರಣದಲ್ಲಿ ಕಷ್ಟಕರವಾದ ನಿರ್ವಿಶೇಷಬ್ರಹ್ಮನ ವಿಚಾರ ಮಾಡಿದ್ದು ತಪ್ಪಾಗುತ್ತದೆ. ಇನ್ನು ಕಷ್ಟವಾದದ್ದನ್ನೇ ಮೊದಲು ಹೇಳುತ್ತೇವೆಂದರೆ ಸ್ಪಷ್ಟಬ್ರಹ್ಮಲಿಂಗಗಳನ್ನು ಪ್ರಥಮಪಾದದಲ್ಲಿ ಸಮನ್ವಯ ಮಾಡಿದ್ದೇ ಕೂಡುವುದಿಲ್ಲ. ಮತ್ತು ನಿರ್ವಿಶೇಷನ ಬಗ್ಗೆ ಮೂರನೆಯ ಪಾದದಲ್ಲಿ ನಿರೂಪಣೆ ಮಾಡುವುದೂ ಬೇಡ ಪ್ರಥಮಪಾದದಲ್ಲಿಯೇ ನಿರೂಪಣೆ ಮಾಡಬೇಕಾಗುತ್ತದೆ. ಮತ್ತು ಈಕ್ಷತ್ಯಧಿಕರಣದಲ್ಲಿ ಪ್ರಧಾನಕ್ಕೆ ಅಶಾಬ್ದತ್ವವನ್ನು ಹೇಳಿದ್ದೀರಿ. ಆವಾಗಲೇ ಅದನ್ನು ಸಮರ್ಥಿಸಬೇಕು. ಅದನ್ನು ಬಿಟ್ಟು ನಾಲ್ಕನೆಯ ಪಾದದಲ್ಲಿ ಸಮರ್ಥಿಸಲು ಕಾರಣವಿಲ್ಲ. ಮತ್ತು ಸಮನ್ವಯಾಧ್ಯಾಯವಾದ್ದರಿಂದ ನಾಲ್ಕನೆಯ ಪಾದದಲ್ಲಿಯೂ ಸಮನ್ವಯವನ್ನೇ ಮಾಡಬೇಕು. ಅದನ್ನು ಬಿಟ್ಟು ಪ್ರಧಾನಕ್ಕೆ ಅಶಾಬ್ದತ್ವ ಹೇಳುವುದು ಅಸಂಗತವಾಗುತ್ತವೆ. ಈ ಅಸಂಗತಿಯನ್ನು ಅದ್ವೈತಿಗಳೇ ಒಪ್ಪಿದ್ದಾರೆ.

### ಕಠಿಣಪದಾರ್ಥ

ಅಭಿಧ್ಯಾತವ್ಯತ್ವಸ್ಯ = 'ಯಃ ಪುರೇ ತಂ ತ್ರಿಮಾತ್ರೇಣೋಮಿತ್ಯನೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ' ಎಂಬ ವಾಕ್ಯದಿಂದ ಹೇಳಲ್ಪಟ್ಟ, ಇತ್ಯಾದೌ = 'ಸುಷುಪ್ತ್ಯುತ್ಕ್ರಾಂತ್ಯೋಃ' ಎಂಬಲ್ಲಿ ಸಮನ್ವಯ ಮಾಡಿದ 'ಯೋಽಯಂ ವಿಜ್ಞಾನಮಯಃ' ಎಂಬ ಕಾಣ್ವವಾಕ್ಯದಲ್ಲಿಯೂ, ಅತಿವ್ಯಾಪ್ತಿಶಂಕಾಯಾಃ = ಅತಿವ್ಯಾಪ್ತಿಶಂಕೆಯನ್ನು ನಿರಾಸ ಮಾಡಲಾಗಿದೆ, ಚತುರ್ಥಸ್ಯ ತು = ನಾಲ್ಕನೆಯ ಪಾದಕ್ಕಾದರೂ.

### ಪರಿಪೂರ್ಣಚಂದ್ರಿಕಾ

**प्रकाशः – यत्त्विति** ।। एतेनान्यथाशब्दस्यैवंरूपार्थान्तरत्वमुक्तं ध्येयम् ।। **अभिध्यातव्यत्वस्येति** ।। ''यः पुनरेतं त्रिमात्रेणोमित्यनेनैवाक्षरेण परं पुरुषमभिध्यायीत'' इति वाक्योक्तस्येत्यर्थः । ''इत्यादौ च'' इत्यादिपदेन ''सुषुप्त्युत्क्रान्त्योः'' इत्यत्र समन्वीयमानं काण्वश्रुतिस्थं ''योऽयं विज्ञानमयः'' इत्यादि ग्राह्यम् । प्रागनूदितचतुर्थपादोपाधिं निराह – **चतुर्थेऽपीति** ।। **ज्योतिरिति** ।।

यद्यपि परमते ''चमसवत्'' इत्यारभ्यैवाधिकरणम्, तथाऽपि तथाऽनुवादार्हताऽपि नेतीति वा, प्रधानप्रापकस्य ''अजामेकां'' इति मन्त्रस्य ज्योतिस्सूत्र एव तेजोबन्नरूपार्थकत्ववर्णनाद्वा 'ज्योतिः' इत्यनुवादः । **अन्यत्रेति** ।। एतत्सर्वं तत्रैव स्पष्टीभविष्यति । अन्यथाशब्दस्यापरमप्यर्थमभिप्रेत्य परोक्तमन्यदपि निराह – **यच्चेति** ।। **शङ्काया इति** ।। 'निरासः' इत्यनुषङ्गः ।। **अपिशब्द इति** ।। न केवलं ब्रह्म किं त्वानुमानिकपदोक्तं प्रधानमपि कारणमित्यर्थप्रतीतेरेकशब्देनैकेषां कठानां शाखायामित्यर्थप्रतीत्या वेदैकदेशार्थत्वावगमादिति भावः ।। **अविद्यायामिति** ।।

ननु तत्र वाक्ये परशब्दस्योत्कर्षार्थत्वादिह कारणत्वधीरेव नेति सिद्धान्त्यते, अतोऽविद्यादिपरत्वेऽपि न दोष इति चेत्तर्हि प्रधानपरत्वेऽपि न दोष इति तत्परत्वनिरासस्तत्र व्यर्थ इति भावः ।। **निर्विशेषेति** ।। तस्य सूक्ष्मत्वेन प्रथमं दुर्गमत्वादिति भावः ।। **चतुर्थस्य त्विति** ।। पादस्येत्यर्थः ।

**गुरुराजीयम्** – ननु सविशेषनिर्विशेषतया द्वितीयतृतीययोर्भेदासम्भवेपि योगरूढि-विषयत्वाभ्यां भेदः स्यादेव । तथा च कथं तयोः साङ्कर्योपपादनम् । नच तथाऽपि कथं प्रथमपादस्य द्वितीयतृतीयाभ्यां भेद इति वाच्यम् । द्वितीयस्य केवलयौगिकत्वविषयत्वेन तृतीयस्य केवलरूढिविषयत्वेन प्रथमस्य योगरूढि-विषयत्वेन ताभ्यां तस्य साङ्कर्याभावादित्येतत्परोक्तं दूषयितुमनुवदति – **यत्त्विति** ।। किमत्र तृतीये समन्वेतव्यसर्वशब्दानां रूढत्वं कतिपयानां वा । नाद्य इत्याह – **तृतीयेऽपीति** ।। न द्वितीयः । द्वितीयेऽपि कतिपयानां वैश्वानरादिशब्दानां रूढत्वस्य सत्त्वेन साङ्कर्यापरिहारात् । यच्च प्रथमस्यासाङ्कर्यकथनं तदप्ययुक्तम् । सर्वेषामपि समन्वेतव्यशब्दानां योगरूढत्वस्य श्रुत्युक्तत्वात् ।

ननु तृतीये समन्वेतव्यशब्देषु रूढानां बाहुल्याद्यौगिकानां चाल्पत्वात् प्रायिकत्वेन पादभेदः स्यादिति चेन्न । तृतीये समन्वेतव्यानां हि रूढत्वं नाम विद्वद्रूढत्वं वाऽज्ञरूढत्वं वा । नाद्यः । तादृशरूढिमत्त्वस्य सर्वेष्वपि सत्वात् । न द्वितीयः । तस्य भूमाक्षरादिशब्देष्वप्यभावादिति भावः । चतुर्थपादार्थं दूषयति – **चतुर्थेऽपीति** ।। अत्र ह्यशब्दत्वोक्तेः पादार्थत्वं क्वचिदशब्दत्वोक्तिमात्रेण वा सर्वत्राशब्दत्वोक्तया वा । नाद्यः । ईक्षत्यधिकरणेऽपि प्रधानाशब्दत्वस्योक्तत्वेन तत्राप्यस्य पादार्थत्वापत्तेः । न द्वितीयः । प्रकृतेपि तदभावादित्याह – **त्वयेति** ।। प्रकारान्तरेण पादार्थं दूषयितुमनुवदति – **यच्चोक्तमिति** ।। प्रधानस्य वेदान्तैकदेशार्थत्वे ज्ञापकमाह – **अत एवेति** ।। प्रधानस्यापि वेदान्तैकदेशार्थत्वं यतोऽत एवेत्यर्थः । किमत्र कारणत्वस्यातिव्याप्तिमात्रं परिह्रियते प्रधानातिव्याप्तिर्वा । नाद्य इत्याह – **आनुमानिकमिति** ।। ब्रह्मपरत्वाभावेनान्यपरत्वस्यापि स्वीकृतत्वेनातिव्याप्तिः स्यादेवेति भावः ।

न द्वितीयो निष्फलत्वादित्याह – **अविद्यापरत्वे चेति** ।। **अविद्यायामिति** ।। नन्वविद्यायाः कारणत्वेऽपि नातिव्याप्तिः । तत्सम्बन्धेन ब्रह्मण्येव तदापत्तेरिति चेन्न । साङ्ख्येनापि केवलप्रकृतेः केवलब्रह्मणो वा कारणत्वानङ्गीकारात् । अन्योन्यसचिवकारणत्वस्य तूभाभ्यामङ्गीकारात् । ब्रह्माविद्यापुरुषप्रकृतिनाममात्रभेदे विवादापर्यवसानप्रसङ्गेन पक्षपातबीजाभावादिति भावः ।। **नापि तत्क्रम इति** ।। नन्वेतदस्माकं दूषणं स्यात् । सुबोधस्य प्राथम्ये तृतीयस्य दुर्बोधस्य तत्वे च चतुर्थस्य प्रथमत्वापात इति चेन्न । निरस्य क्रमादेर्नियामकस्योक्तत्वात् । परस्य च नियामकान्तराभावादिति भावः । ननु चतुर्थेऽशब्दत्वप्रतिपादनमसङ्गतम् । न चेक्षतिसूत्रोक्ताशब्दत्वप्रतिपादकत्वान्नासङ्गतिरिति वाच्यम् । तथा विशेषे कारणाभावादयुक्तमेतदित्याह – **ईक्षत्यधिकरणोक्तेति** ।।

ವಿವರಣೆ - 'ನಾನ್ಯಥಾ ತದದೃಷ್ಟೇಃ' ಎಂಬ ಭಾಷ್ಯದಲ್ಲಿರುವ 'ಅನ್ಯಥಾ' ಶಬ್ದಕ್ಕೆ ಹಿಂದೆ ಎರಡು ಅರ್ಥಗಳನ್ನು ಹೇಳಿದರು. ಈಗ ಮತ್ತೊಂದು ಅರ್ಥವನ್ನು ಹೇಳುತ್ತಿದ್ದಾರೆ. ಯೌಗಿಕ ಹಾಗೂ ರೂಢಪರವಾದ್ದರಿಂದ ಎರಡನೆಯ ಮೂರನೆಯ ಪಾದಗಳಿಗೆ ಭೇದವು ಯುಕ್ತವಾಗಿದೆ ಎಂಬ ವ್ಯಾಖ್ಯಾನವೂ ತಪ್ಪೆಂದು ಭಾಷ್ಯದ ಮಾತಿನ ಅರ್ಥ. ಅದನ್ನು 'ಯತ್ತು' ಇತ್ಯಾದಿಯಾಗಿ ವಿವರಿಸುತ್ತಿದ್ದಾರೆ.

ಹಿಂದೆ ಅನುವಾದ ಮಾಡಿದ ಚತುರ್ಥಪಾದದ ಉಪಾಧಿಯನ್ನು 'ಚತುರ್ಥೇಽಪಿ' ಎಂಬುದರಿಂದ ನಿರಾಕರಿಸುತ್ತಿದ್ದಾರೆ.

ಗ್ರಂಥಕಾರರು 'ಆನುಮಾನಿಕಮಿತಿಜ್ಯೋತಿರಿತಿ ನ ಸಂಖ್ಯೇತ್ಯಧಿಕರಣತ್ರಯೇ ಏವ' ಎಂದು ಹೇಳಿದ್ದಾರೆ. ಇಲ್ಲಿ ಪ್ರಧಾನಸೂತ್ರಗಳಾದ್ದರಿಂದ 'ಆನುಮಾನಿಕಮಿತಿ' 'ನ ಸಂಖ್ಯೇತಿ' ಎಂದು ಹೇಳಿದ್ದು ಸಮಂಜಸವಾಗಿದೆ. ಆದರೆ 'ಜ್ಯೋತಿರಿತಿ' ಎಂದು ಹೇಳಿದ್ದು ಸರಿಯಲ್ಲ. 'ಚಮಸವದಿತಿ' ಎಂದು ಹೇಳಬೇಕಿತ್ತು. ಏಕೆಂದರೆ ಅವರ ಪ್ರಕಾರ 'ಚಮಸವತ್' ಎಂಬುದರಿಂದ ಅಧಿಕರಣ ಪ್ರಾರಂಭವಾಗುತ್ತದೆಂದರೆ ಹೌದು; ಆದರೆ ಗ್ರಂಥಕಾರರು ಹಾಗೆ ಅನುವಾದ ಮಾಡದಿರಲು ಪ್ರಧಾನವಾಗಿ ಎರಡು ಕಾರಣಗಳಿವೆ. ಅದ್ವೈತಿಗಳು ಅಧಿಕರಣವಿಭಾಗ ಮಾಡಿದ್ದೇ ತಪ್ಪು. ಆದ್ದರಿಂದ ಹಾಗೆ ಅನುವಾದ ಮಾಡುವುದೇ ತಪ್ಪು. ಮತ್ತು 'ಅಜಾಮೇಕಾಮ್' ಎಂಬ ಶ್ರುತಿಯು ತೇಜೋಬನ್ನರೂಪವೆಂದು 'ಜ್ಯೋತಿಃ' ಎಂಬ ಸೂತ್ರದಲ್ಲೇ ಹೇಳುತ್ತಿದ್ದಾರೆ. ಆದ್ದರಿಂದ ಅದರ ಉಲ್ಲೇಖವನ್ನೇ ಮಾಡಿದ್ದಾರೆ.

'ಮಹತಃ ಪರಮವ್ಯಕ್ತಮ್' ಎಂಬ ವಾಕ್ಯವು ಪ್ರಧಾನಪರವೆಂದು ಪೂರ್ವಪಕ್ಷಿ ಹೇಳುತ್ತಾನೆ. ಆವಾಗ ಅದ್ವೈತಿಗಳು ಅವಿದ್ಯಾಪರವೆಂದು ಹೇಳಿದರೆ ಏನು ಪ್ರಯೋಜನ? ಎಂದು ಗ್ರಂಥಕಾರರು ಹೇಳಿದರು. ಇಲ್ಲಿ ಅದ್ವೈತಿಗಳು ಹೀಗೆ ಆಕ್ಷೇಪಿಸುತ್ತಾರೆ. 'ಮಹತಃ ಪರಮವ್ಯಕ್ತಮ್' ಎಂಬಲ್ಲಿ ಪರಶಬ್ದಕ್ಕೆ ಕಾರಣವೆಂದು ಅರ್ಥವೇ ಅಲ್ಲ. ಉತ್ಕರ್ಷ ಎಂದರ್ಥ. ಆವಾಗ ಕಾರಣತ್ವಜ್ಞಾನವೇ ಬರುವುದಿಲ್ಲ. ಈ ಸಂದರ್ಭದಲ್ಲಿ ಅವಿದ್ಯಾಪರವೆಂದು ಹೇಳಿದರೆ ಏನು ತಪ್ಪು? ಎಂದು.

ಹಾಗಾದರೆ ಪ್ರಧಾನಪರವಾದರೂ ಏನೂ ಸಮಸ್ಯೆಯಿಲ್ಲ. ಪ್ರಧಾನದ ನಿರಾಸಕ್ಕಾಗಿ ಅದ್ವೈತಿಗಳು ಮಾಡಿದ ಪ್ರಯತ್ನ ವ್ಯರ್ಥ. ಇಲ್ಲಿಗೆ ಅದ್ವೈತಿಗಳ ಪಾದೋಪಾಧಿ ಹಾಗೂ ಪಾದಕ್ರಮಗಳ ನಿರಾಸವು ಮುಗಿಯಿತು.




ಅದ್ವೈತಿಗಳು ಅಧಿಕರಣಗಳ ಭೇದವನ್ನು ಮತ್ತೊಂದು ಬಗೆಯಲ್ಲಿ ನಿರೂಪಿಸುತ್ತಾರೆ - ಯೌಗಿಕಶಬ್ದಗಳ ಸಮನ್ವಯಕ್ಕೆ ಎರಡನೆಯ ಪಾದವು, ರೂಢಶಬ್ದಗಳ ಸಮನ್ವಯಕ್ಕೆ ಮೂರನೆಯ ಪಾದವು ಹೊರಟಿದೆ. ಇದೂ ಸಹ ತಪ್ಪು. ಏಕೆಂದರೆ ಮೂರನೆಯ ಪಾದದಲ್ಲಿ ದ್ಯುಭ್ವಾದ್ಯಾಯತನತ್ವ ಅಭಿಧ್ಯಾತವ್ಯತ್ವ, ಅಂಗುಷ್ಠಮಾತ್ರತ್ವವೇ ಮೊದಲಾದ ಅನೇಕ ಯೌಗಿಕಶಬ್ದಗಳ ಸಮನ್ವಯವನ್ನು ಮಾಡಿದ್ದಾರೆ.

ನಾಲ್ಕನೆಯ ಪಾದವು ಪ್ರಧಾನವು ಶಬ್ದಪ್ರತಿಪಾದ್ಯವಲ್ಲವೆನ್ನಲು ಹೊರಟಿದೆ ಎನ್ನುತ್ತಾರೆ. ಇದೂ ತಪ್ಪು. ಏಕೆಂದರೆ ಪ್ರಕೃತ್ಯಾದಿ ಅಧಿಕರಣಗಳಲ್ಲಿ ಪ್ರಧಾನದ ಶಬ್ದಪ್ರತಿಪಾದ್ಯತ್ವ ವಿಚಾರವೇ ಪ್ರಸಕ್ತವಾಗಿಲ್ಲ. ಪ್ರಧಾನವೇ ಜಗತ್ಕಾರಣವಾದಾಗ ಬ್ರಹ್ಮನ ಜಗತ್ಕಾರಣತ್ವಲಕ್ಷಣಕ್ಕೆ ಅಸಂಭವದೋಷ ಬರುತ್ತದೆ. ಇದನ್ನು ಪರಿಹರಿಸಲು ಮೊದಲ ಮೂರು ಪಾದಗಳು ಹೊರಟಿವೆ. ಪ್ರಧಾನವೂ ಜಗತ್ಕಾರಣವಾಗಲಿಯೆಂಬ ಅತಿವ್ಯಾಪ್ತಿಯನ್ನು ಪರಿಹರಿಸಲು ನಾಲ್ಕನೆಯ ಪಾದ ಹೊರಟಿದೆಯೆಂದು ಮತ್ತೊಂದು ಬಗೆಯಲ್ಲಿ ಪಾದಭೇದವನ್ನು ಸಮರ್ಥಿಸುತ್ತಾರೆ. ಆದರೆ 'ಮಹತಃ ಪರಮವ್ಯಕ್ತಂ' ಇತ್ಯಾದಿ ವಾಕ್ಯಗಳಿಂದ ಪ್ರಧಾನ ಪ್ರತಿಪಾದ್ಯವಲ್ಲವೆಂದು ಸಮರ್ಥಿಸಿ ಬ್ರಹ್ಮಪರತ್ವವನ್ನು ಉಪಪಾದಿಸಬೇಕು. ಆದರೆ ಅದ್ವೈತಿಗಳು ಹಾಗೆ ಮಾಡದೆ ಅವಿದ್ಯಾಪರತ್ವವನ್ನು ಸಮರ್ಥಿಸುತ್ತಾರೆ. ಕುರಿಯನ್ನು ಹುಲಿ ತೆಗೆದುಕೊಂಡು ಹೋದರೆ ಏನು ಹಾನಿ? ತೋಳ ತೆಗೆದುಕೊಂಡು ಹೊದರೆ ಯಾವ ಲಾಭ? ಎಂಬಂತೆ ಪ್ರಧಾನಪರವಾದರೂ ಅವಿದ್ಯಾಪರವಾದರೂ ದೊಡ್ಡ ಅನರ್ಥವೇ ಉಂಟಾಗುತ್ತದೆ.

*ಆನಂದಮಯಾಧಿಕರಣ*

ಅದ್ವೈತಿಗಳ ಪಾದಕ್ರಮವೂ ಸರಿಯಿಲ್ಲ - ಸುಲಭವಾದದ್ದನ್ನು ಮೊದಲು ಹೇಳಿದ್ದೇವೆಂದರೆ ಆನಂದಮಯಾಧಿಕರಣದಲ್ಲೇ ಕಷ್ಟವಾದ ನಿರ್ವಿಶೇಷಬ್ರಹ್ಮನ ವಿಚಾರ ಮಾಡಿದ್ದು ತಪ್ಪಾಗುತ್ತದೆ. ಕಷ್ಟವಾದದ್ದನ್ನು ಮೊದಲು ಹೇಳಿದ್ದೇವೆಂದರೆ ಪ್ರಥಮಪಾದದಲ್ಲಿ ಸುಲಭವಾದ ಸ್ಪಷ್ಟಬ್ರಹ್ಮಲಿಂಗಗಳನ್ನು ಹೇಳಿದ್ದು ತಪ್ಪಾಗುತ್ತದೆ. ಆದ್ದರಿಂದ ಅದ್ವೈತಿಗಳ ಪಾದೋಪಾಧಿಗಳಾಗಲೀ ಪಾದಕ್ರಮಗಳಾಗಲೀ ಅತ್ಯಂತ ಅಸಮಂಜಸಗಳಾಗಿವೆ.

• • • • •

## ರಾಮಾನುಜರ ಪಾದಭೇದವ್ಯವಸ್ಥೆಯೂ ತಪ್ಪು

**तात्पर्यचन्द्रिका –**

**केचित्तु ''जन्मादिसूत्रे ब्रह्म कारणमेव, ब्रह्मैव कारणमित्यवधारणद्वयं विवक्षितम् । तत्र लक्षणे असम्भवरूपायोगव्यवच्छेदः प्रथमपादे, अतिव्याप्तिरूपान्ययोगव्यवच्छेदस्त्रिपाद्याम् । तत्रापि अस्पष्टजीवादिलिङ्गकानि वाक्यानि द्वितीये, स्पष्टजीवादिलिङ्गकानि तृतीये, तत्तत्प्रतिपादनच्छायानुसारीणि चतुर्थे विचार्यन्ते'' इत्याहुः ।**

तन्न, आद्यपादेऽपि त्वन्मते ''ईक्षतेर्नाशब्दम्'' इत्यत्र प्रधानकारणतायाः, ''कामाच्च नानुमानापेक्षा'' इत्यादौ जीवादिकारणतायाश्च निषिद्धत्वेनातिव्याप्तिपरिहारस्य तत्राऽपि सत्त्वात् । नन्वीक्षत्यधिकरणादौ ''सदेव'' इत्यादिवाक्यानां प्रधानपरत्वे तदैकार्थ्यात्सर्वाणि कारणवाक्यानि तथा । एवञ्च न ब्रह्म कारणमित्यादिः पूर्वपक्षः । स चासम्भवपर्यन्त इति चेत्, ''सदेव' इत्यादिवाक्यानां ब्रह्मपरत्वे तदैकार्थ्यात्सर्वाणि वाक्यानि तथा । एवञ्च न प्रधानादि कारणमिति सिद्धान्तः । स चातिव्याप्तिपरिहारपर्यन्त इत्यपि सम्भवात् । द्वितीयतृतीययोरपि पादयोः पूर्वपक्षे एवमसम्भवपर्यन्ततायाः वक्तुं शक्यत्वाच्च ।

यच्चोक्तं चिदचिद्विलक्षणं मूलकारणभूतं वस्तु प्रथमे प्रतिपाद्यते, अथ तस्य गुणविशेषास्त्रिपाद्यामिति, तत्र चिदचिद्विलक्षणत्वं यदि कारणत्वेनैव, तदा ''अन्तः, ज्योतिः'' इत्यादौ कारणत्वादन्यस्यादित्यान्तस्थत्वज्योतिष्ट्वादेरुक्तेः ''अन्तः''

**इत्यादेः आद्यपादान्तर्गतिर्न स्यात् । यदि तु गुणान्तरेणापि, तदा त्रिपाद्या अपि आद्यपादान्तर्गतिः स्यात् ।**

ಅನುವಾದ - ರಾಮಾನುಜರ ಪಾದಭೇದವ್ಯವಸ್ಥೆ - ಜನ್ಮಾದಿಸೂತ್ರದಲ್ಲಿ ಬ್ರಹ್ಮನು ಜಗತ್ಕಾರಣ ಆಗಿಯೇ ಇದ್ದಾನೆ (ಜಗತ್ಕಾರಣನಾಗಲ್ಲ ಎಂದಿಲ್ಲ) ಎಂದು, ಬ್ರಹ್ಮನೇ ಜಗತ್ಕಾರಣನಾಗಿದ್ದಾನೆಂದು ಎರಡು ಬಗೆಯ ಅವಧಾರಣವು ವಿವಕ್ಷಿತವಾಗಿದೆ. ಇವೆರಡರಲ್ಲಿ ಮೊದಲನೆಯದ್ದು ಅಯೋಗವ್ಯವಚ್ಛೇದ, ಎರಡನೆಯದ್ದು ಅನ್ಯಯೋಗವ್ಯವಚ್ಛೇದ. ಅಯೋಗವ್ಯವಚ್ಛೇದದಿಂದ ಬ್ರಹ್ಮನ ಲಕ್ಷಣಕ್ಕೆ ಅಸಂಭವ ಬರುವುದಿಲ್ಲ. ಇದನ್ನು ಪ್ರಥಮಪಾದ ಸಮರ್ಥಿಸಿದೆ. ಅನ್ಯಯೋಗವ್ಯವಚ್ಛೇದದಿಂದ ಅತಿವ್ಯಾಪ್ತಿಯ ಪರಿಹಾರವಾಗುತ್ತದೆ. ಇದನ್ನು ಮುಂದಿನ ಮೂರು ಪಾದಗಳು ಸಮರ್ಥಿಸಿವೆ. ಅದರಲ್ಲೂ ಸಹ ಯಾವ ವಾಕ್ಯಗಳಲ್ಲಿ ಜೀವಲಿಂಗಗಳು ಅಸ್ಪಷ್ಟವಾಗಿ ಇವೆಯೋ ಆ ವಾಕ್ಯಗಳನ್ನು ಎರಡನೆಯ ಪಾದದಲ್ಲಿ ಸ್ಪಷ್ಟವಾದ ಜೀವಲಿಂಗವಿರುವ ವಾಕ್ಯಗಳನ್ನು ಮೂರನೆಯ ಪಾದದಲ್ಲಿ ಪ್ರತಿಪಾದಿಸಲಾಗಿದೆ. ಜೀವ, ಪ್ರಾಣ, ಇತ್ಯಾದಿಗಳನ್ನು ಆಪಾತತಃ ಪ್ರತಿಪಾದನೆ ಮಾಡುವಂತೆ ತೋರುವ ವಾಕ್ಯಗಳನ್ನು ನಾಲ್ಕನೆಯ ಪಾದದಲ್ಲಿ ವಿಚಾರ ಮಾಡಲಾಗಿದೆ ಎಂದು ಹೇಳುತ್ತಾರೆ.

ಇದು ತಪ್ಪು. ನಿಮ್ಮ ಪ್ರಕಾರ ಪ್ರಥಮಪಾದದಲ್ಲಿ ಅಸಂಭವದೋಷವನ್ನಷ್ಟೇ ಪರಿಹಾರ ಮಾಡಬೇಕು. ಆದರೆ ನೀವೇ 'ಈಕ್ಷತೇರ್ನಾಶಬ್ದಮ್' ಎಂಬ ಸೂತ್ರದಲ್ಲಿ ಪ್ರಧಾನವು ಜಗತ್ಕಾರಣವಲ್ಲ ಎಂದು ಸಮರ್ಥಿಸಿದ್ದೀರಿ. ಮತ್ತು 'ಕಾಮಾಚ್ಚ ನಾನುಮಾನಾಪೇಕ್ಷಾ' ಎಂಬಲ್ಲಿ ಜೀವಾದಿಕಾರಣತ್ವವನ್ನು ನಿರಾಕರಿಸಿದ್ದೀರಿ. ಇದರಿಂದೆಲ್ಲ ಅತಿವ್ಯಾಪ್ತಿಯನ್ನು ಪರಿಹರಿಸಿದಂತಾಗುತ್ತದೆ ಹೊರತು ಅಸಂಭವವನ್ನು ಪರಿಹರಿಸಿದಂತಾಗುವುದಿಲ್ಲ.

ಆಕ್ಷೇಪ - ಈಕ್ಷತ್ಯಧಿಕರಣ ಮೊದಲಾದವುಗಳಲ್ಲಿ ನಾವು ಮಾಡುವ ಪೂರ್ವಪಕ್ಷ ಹೇಗೆಂದರೆ - 'ಸದೇವ' ಇತ್ಯಾದಿ ವಾಕ್ಯವು ಪ್ರಧಾನಪರವಾದರೆ ಈ ವಾಕ್ಯಕ್ಕೆ ಸಮಾನ ಅರ್ಥವುಳ್ಳ ಉಳಿದ ಸಕಲಕಾರಣವಾಕ್ಯಗಳೂ ಸಹ ಪ್ರಧಾನಪರವಾಗುತ್ತವೆ. ಆದ್ದರಿಂದ ಬ್ರಹ್ಮನು ಜಗತ್ಕಾರಣನಾಗುವುದಿಲ್ಲವೆಂದು ಪೂರ್ವಪಕ್ಷ ಮಾಡುತ್ತೇವೆ. ಇದಕ್ಕೆ ಅನುಗುಣವಾಗಿ ಸಕಲಕಾರಣವಾಕ್ಯಗಳು ಪ್ರಧಾನಪರವಲ್ಲ, ಬ್ರಹ್ಮಪರವೇ ಆಗಿವೆಯೆಂದು ಸಿದ್ಧಾಂತ ಮಾಡಬೇಕು. ಆವಾಗ ಅಸಂಭವದೋಷವನ್ನೇ ಪರಿಹರಿಸಿದಂತಾಗುತ್ತದೆ.

ಸಮಾಧಾನ - ನೀವು ಮಾಡಿದ ಪೂರ್ವಪಕ್ಷಕ್ಕೆ ವಿರುದ್ಧವಾದ ಸಿದ್ಧಾಂತವನ್ನು ಹೀಗೆ ಮಾಡಬೇಕು. - 'ಸದೇವ ಸೌಮ್ಯ' ಇತ್ಯಾದಿ ವಾಕ್ಯವು ಬ್ರಹ್ಮಪರವಾಗಿದೆ. ಇದಕ್ಕೆ ಸಮಾನಾರ್ಥವಾದ ಉಳಿದ ವಾಕ್ಯಗಳೆಲ್ಲವೂ ಬ್ರಹ್ಮಪರವೇ ಆಗುತ್ತವೆ. ಆದ್ದರಿಂದ ಪ್ರಧಾನವು ಜಗತ್ಕಾರಣವಾಗಲ್ಲವೆಂದು; ಹೀಗೆ ಸಿದ್ಧಾಂತ ಮಾಡಿದ್ದರಿಂದ ಅತಿವ್ಯಾಪ್ತಿಪರಿಹಾರರೂಪವೂ ಆಗುತ್ತದೆ ಹೊರತು ಅಸಂಭವಪರಿಹಾರರೂಪ

ಮಾತ್ರವಲ್ಲ. ಹೀಗೆ ನೀವು ಈಕ್ಷತ್ಯಧಿಕರಣದಲ್ಲಿ ಅಸಂಭವಪರ್ಯಂತ ಪೂರ್ವಪಕ್ಷವೆಂದು ಹೇಳುವುದಾದರೆ ಎರಡನೆಯ ಮೂರನೆಯ ಪಾದಗಳಲ್ಲಿಯೂ ಅಸಂಭವಪರ್ಯಂತ ಪೂರ್ವಪಕ್ಷ ಮಾಡಬಹುದು.

ರಾಮಾನುಜರು - ಪ್ರಥಮಪಾದದಲ್ಲಿ ಚಿದಚಿದ್ವಿಲಕ್ಷಣನಾದ ಮೂಲಕಾರಣಭೂತನಾದ ಬ್ರಹ್ಮನನ್ನು ಪ್ರತಿಪಾದಿಸುತ್ತೇವೆ. ಮುಂದಿನ ಮೂರು ಪಾದಗಳಲ್ಲಿ ಬ್ರಹ್ಮನಿಗೆ ಗುಣವಿಶೇಷಗಳನ್ನು ಪ್ರತಿಪಾದಿಸುತ್ತೇವೆ.

ದ್ವೈತಿಗಳು - ನೀವು ಚಿದಚಿದ್ವಿಲಕ್ಷಣತ್ವವನ್ನು ಕಾರಣತ್ವೇನ ಹೇಳುತ್ತೀರೋ? ಅಥವಾ ಗುಣಾಂತರೇಣ ಹೇಳುತ್ತೀರೋ? ಜಗತ್ಕಾರಣತ್ವೇನ ಹೇಳುವುದಾದರೆ 'ಅಂತಸ್ತದ್ಧರ್ಮೋಪದೇಶಾತ್' ಎಂಬಲ್ಲಿ 'ಜ್ಯೋತಿಶ್ಚರಣಾಭಿಧಾನಾತ್' ಎಂಬಲ್ಲಿ ಗುಣಾಂತರವನ್ನು ಹೇಳಿದ್ದೀರಿ. 'ಅಂತಸ್ತದ್ಧರ್ಮೋಪದೇಶಾತ್' ಎಂಬಲ್ಲಿ ಆದಿತ್ಯಾಂತಸ್ಥತ್ವವನ್ನು 'ಜ್ಯೋತಿಶ್ಚರಣಾಭಿಧಾನಾತ್' ಎಂಬಲ್ಲಿ ಜ್ಯೋತಿಷ್ಟತ್ವವನ್ನು ಹೇಳಿದ್ದರಿಂದ ಜಗತ್ಕಾರಣತ್ವದಿಂದ ಬ್ರಹ್ಮನಿಗೆ ಚಿದಚಿದ್ವೈಲಕ್ಷಣ್ಯವನ್ನು ತೋರಿಸಿದಂತಾಗಲಿಲ್ಲ. ಆದ್ದರಿಂದ ಅಂತಸ್ಥತ್ವಾಧಿಕರಣ ಜ್ಯೋತಿರಾದ್ಯಧಿಕರಣಗಳಿಗೆ ಪ್ರಥಮಪಾದದಲ್ಲಿ ಅಂತರ್ಭಾವವು ಕೂಡದಿರಬೇಕಾದೀತು. ಇನ್ನು ಗುಣಾಂತರದಿಂದ ಚಿದಚಿದ್ವೈಲಕ್ಷಣ್ಯವನ್ನು ಬ್ರಹ್ಮನಿಗೆ ಹೇಳುವುದಾದರೆ ಮೂರು ಪಾದಗಳಲ್ಲಿಯೂ ಗುಣಾಂತರಗಳನ್ನು ಹೇಳಿದ್ದರಿಂದ ಮೂರು ಪಾದದ ಅಧಿಕರಣಗಳೆಲ್ಲ ಪ್ರಥಮಪಾದದಲ್ಲೇ ಅಂತರ್ಭಾವ ಹೊಂದಬೇಕಾದೀತು.

**ಕಠಿಣಪದಾರ್ಥ**

ಕೇಚಿತ್ತು = ರಾಮಾನುಜರು, ತತ್ರಾಪಿ = ತ್ರಿಪಾದದಲ್ಲಿಯೂ ಕೂಡ, ಜೀವಾದಿಲಿಂಗಕಾನಿ = ಜೀವ, ಪ್ರಾಣ, ಬುದ್ಧಿ ಇವುಗಳ ಲಿಂಗಗಳನ್ನು, ಅಸ್ಪಷ್ಟತ್ವಮ್ = ಜೀವಾದಿಗಳಲ್ಲಿ ಸ್ವಾರಸ್ಯದಿಂದ ಕೂಡದಿರುವುದು, ವಾಕ್ಯಾಂತರದಲ್ಲಿ ಬ್ರಹ್ಮಲಿಂಗತಯಾ ನಿರ್ಣೀತವಾದದ್ದು, ತತ್ತತ್ಪ್ರತಿಪಾದನೇಚ್ಛಾನುಸಾರಿಣೀ = ಜೀವ, ಪ್ರಾಣಾದಿಗಳ ಲಿಂಗಗಳನ್ನು ಪ್ರತಿಪಾದನೆ ಮಾಡುವಂತೆ ತೋರುವ, ತಥಾ = ಪ್ರಧಾನಪರವಾಗುತ್ತವೆ. ಅಂತರಿತ್ಯಾದೇಃ = 'ಅಂತಸ್ತದ್ಧರ್ಮೋಪದೇಶಾತ್' 'ಜ್ಯೋತಿಶ್ಚರಣಾಭಿಧಾನಾತ್' ಇತ್ಯಾದಿ ಸೂತ್ರಗಳು.

**प्रकाशः –** एवं भाष्यस्थान्यथाशब्दस्य चतुर्धाऽर्थमुपेत्याद्वैतिमतं निरस्य ''भाष्यं चात्यर्थविस्तरम्'' इत्युक्तेरर्थान्तरपरत्वमप्युपेत्य रामानुजमतनिरासपरत्वेनापि व्याख्यातुमाह – **केचित्त्विति** ।।

एकार्थत्वे पादभेदः कुत इत्यत आह – **तत्रापीति** ।। त्रिपाद्यामपीत्यर्थः ।। **जीवादीति** ।। जीवप्राणबुद्धिलिङ्गकानीत्यर्थः । अस्पष्टत्वं च जीवादौ स्वारस्येना-

नुपपद्यमानत्वं, वाक्यान्तरे ब्रह्मलिङ्गतया निर्णीतत्वं वा । तद्विपरीतं स्पष्टत्वम् ।। तत्तदिति ।। जीवप्राणादिलिङ्गप्रतिपादनेत्यर्थः ।। **ईक्षतेरिति** ।। अधिकरणशरीरं तु प्रागुक्तम् ।।

**कामाच्चेति** ।। "सोऽकामयत" इत्यारभ्य "इदं सर्वमसृजत" इति कामादेव सर्गश्रवणादस्यानन्दमयस्य सृष्टौ जीववन्नानुमानगम्यप्रकृत्यपेक्षाऽस्तीति प्रकृति-निरपेक्षजगत्स्रष्टाऽऽनन्दमयः परमात्मा न जीव इत्युक्तेरिति भावः ।। **तथेति** ।। प्रधानपराणीत्यर्थः ।

अन्यथाशब्दस्यार्थान्तरमुपेत्य तदुक्त प्रमेयान्तरमपि निराह – **यच्चेति** ।। चेतना चेतनविलक्षणमित्यर्थः । कारणत्वेनैवोभयविलक्षणं वस्तूच्यते, धर्मान्तरेण वा । आद्य आह – **तत्रेति** ।। **अन्तरिति** ।। "अन्तस्तद्धर्म" इति सूत्रे "ज्योतिश्चरण" इत्यादावित्यर्थः । द्वितीय आह – **यदि त्विति** ।। त्रिपाद्यामप्युभयविध-धर्माणामेवोक्तेरिति भावः ।

**गुरुराजीयम् – जन्मादिसूत्र इति** ।। सर्वं वाक्यं सावधारणमिति न्यायेनैतत् सूत्रस्य सावधारणत्वम् । एवं चैकस्यावधारणस्योभयत्रान्वय इति भावेनावधारण-द्वयमित्युक्तम् । न त्ववधारणद्वयं कल्प्यमिति भावः । अस्त्वेवं ततः किमित्यत आह – **तत्रेति** ।।

ननु तर्हि त्रिपाद्या भेदो न स्यादित्यत आह – **तत्रापीति** ।। **तत्तत्प्रति-पादनच्छायानुसारीणीति** ।। स्पष्टतरपूर्वपक्षहेतुकानीत्यर्थः । एवं ह्यसम्भवपरिहारः प्रथमपादे अतिव्याप्तिपरिहारस्त्रिपाद्यामित्युक्तं स्यात् । तच्चायुक्तम् । अतिव्याप्ति-परिहारस्य प्रथमपादेऽपि सत्त्वादित्याह – **तन्नेत्यादिना** ।। अतिव्याप्तिपरिहारस्या-प्यसम्भव एव पर्यवसानमित्याशङ्कते – **नन्विति** ।। **तदैकार्थ्यादिति** ।। सदैवेत्यादेः प्रधानवाक्यत्वादिति भावः ।। **तथेति** ।। प्रधानकारणत्वप्रतिपादकानीत्यर्थः । अतिव्याप्तिपर्यन्तत्वासम्भवे ह्यसम्भवपर्यन्तत्वं वक्तव्यम् । न चैवम् । उक्तरीत्या तत्सम्भवस्य समर्थितत्वादित्याह – **सदेवेत्यादीति** ।। **तथेति** ।। सर्वाणि कारणवाक्यानि ब्रह्मणः कारणतापराणीत्यर्थः ।

ननु प्रथमपादेऽतिव्याप्तिपरिहारस्याल्पत्वात् प्रायेणासम्भवपरिहारस्य कृतत्वेन प्रायिकत्वात्पादव्यवस्था स्यादेवेत्यत आह – **द्वितीयतृतीययोरिति** ।। तथा च तयोरतिव्याप्तिपरिहारकत्वं न स्यात् । वैपरीत्यमेव स्यादिति भावः ।। **एवमसम्भवपर्यन्ताया इति** ।। अस्पष्टजीवादिवाक्यानां प्रधानपरत्वे सर्वेषामपि वाक्यानां प्रधानपरत्वमेव स्यान्न ब्रह्मपरत्वमित्यसम्भवपर्यन्ताया इत्यर्थः । नन्वसम्भवपरिहारः प्रथमेऽतिव्याप्तिपरिहारस्त्रिपाद्यामित्यस्यायमर्थः ।

असम्भवे परिहृते हि मूलकारणं सिध्यतीति तदेव प्रथमप्रतिपाद्यम् । अतिव्याप्तिपरिहारे सति गुणविशेषे सति सिद्धिर्भवतीति गुणविशेषप्रतिपादनं त्रिपाद्यामिति न साङ्कर्यमित्येतत्पराभिप्रेतं दूषयितुमनुवदति – **यच्चोक्तमिति** ।। **चिदचिद्विलक्षणमिति** ।। जडजीवविलक्षणमित्यर्थः । अत्र चिदचिद्विलक्षणत्वं कारणत्वेनैव वा गुणान्तरेण वा । नाद्य इत्याह – **तदेति** ।। द्वितीयं दूषयति – **यदि त्विति** ।। **त्रिपाद्या अपीति** ।। त्रिपाद्यामवान्तरपादभेदवदाद्यपादस्यापि भेदो भविष्यतीति चेन्न । अनुपदमेव दूष्यत्वादिति भावः ।

ವಿವರಣೆ - 'ನಾನ್ಯಥಾ ತದದೃಷ್ಟೇಃ' ಎಂಬ ಭಾಷ್ಯಕ್ಕೆ ನಾಲ್ಕು ಬಗೆಯಲ್ಲಿ ವ್ಯಾಖ್ಯಾನಿಸಿ ಅದ್ವೈತಮತವನ್ನು ನಿರಾಕರಿಸಿದ್ದಾಯಿತು. ಈಗ ಅದೇ ಭಾಷ್ಯಕ್ಕೆ ಮತ್ತೊಂದು ಅರ್ಥವನ್ನು ಸ್ವೀಕರಿಸಿ ವ್ಯಾಖ್ಯಾನಿಸುತ್ತಿದ್ದಾರೆ. 'ಭಾಷ್ಯಮ್ ಚಾತ್ಯರ್ಥವಿಸ್ತರಮ್' ಎಂಬ ಮಾತಿನ ಗಾಂಭೀರ್ಯವನ್ನು ಇಲ್ಲಿ ಅರ್ಥಮಾಡಿಕೊಳ್ಳಬಹುದು.

'ಕಾಮಾಚ್ಚ ನಾನುಮಾನಾಪೇಕ್ಷಾ' ಎಂಬ ವಾಕ್ಯದ ಅರ್ಥ ಹೀಗಿದೆ- 'ಸೋಽಕಾಮಯತ' ಎಂಬುದರಿಂದ ಆರಂಭಿಸಿ 'ಇದಂ ಸರ್ವಮಸೃಜತ' ಎಂದು ಸ್ವೇಚ್ಛೆಯಿಂದಲೇ ಸೃಷ್ಟಿಯನ್ನು ಹೇಳಲಾಗಿದೆ. ಜೀವನಿಗೆ ಪ್ರಕೃತಿಯ ಅಪೇಕ್ಷೆ ಇರುವಂತೆ ಪರಮಾತ್ಮನಿಗೆ ಪ್ರಕೃತಿಯ ಅಪೇಕ್ಷೆ ಇರುವುದಿಲ್ಲ.




ರಾಮಾನುಜ ಮತದ ಪ್ರಕಾರ ಪಾದವ್ಯವಸ್ಥೆ ಹೀಗಿದೆ -

ಪ್ರಥಮಪಾದ - ಬ್ರಹ್ಮನ ಜಗತ್‌ಕಾರಣತ್ವಲಕ್ಷಣಕ್ಕೆ ಅಸಂಭವ ಪರಿಹಾರ

ದ್ವಿತೀಯಪಾದ - ಅಸ್ಪಷ್ಟಜೀವಲಿಂಗವಾಕ್ಯಗಳ ಸಮನ್ವಯ ಮತ್ತು ಅತಿವ್ಯಾಪ್ತಿ ಪರಿಹಾರ.

ತೃತೀಯಪಾದ - ಸ್ಪಷ್ಟಜೀವಲಿಂಗವಾಕ್ಯಗಳ ಸಮನ್ವಯ ಮತ್ತು ಅತಿವ್ಯಾಪ್ತಿ ಪರಿಹಾರ.

ಚತುರ್ಥಪಾದ - ಆಪಾತತಃ ಜೀವಾದಿಗಳನ್ನು ಪ್ರತಿಪಾದಿಸುವ ವಾಕ್ಯಗಳ ಸಮನ್ವಯ, ಮತ್ತು ಅತಿವ್ಯಾಪ್ತಿಪರಿಹಾರ.

*ಪರಿಪೂರ್ಣಚಂದ್ರಿಕಾ*

ಇವರ ಪಾದಭೇದವ್ಯವಸ್ಥೆಯೂ ಸರಿಯಿಲ್ಲ. ಏಕೆಂದರೆ ಪ್ರಥಮಪಾದದಲ್ಲೇ ಅತಿವ್ಯಾಪ್ತಿಯ ಪರಿಹಾರವನ್ನು ಮಾಡಿದ್ದಾರೆ. ಈಕ್ಷತ್ಯಧಿಕರಣದಲ್ಲಿ 'ಸದೇವ ಸೌಮ್ಯ' ಎಂಬ ವಾಕ್ಯವು ಬ್ರಹ್ಮಪರವಾಗಿದೆ. ಇದಕ್ಕೆ ಸಮಾನಾರ್ಥವಾದ ಉಳಿದ ವಾಕ್ಯಗಳೂ ಬ್ರಹ್ಮಪರವೇ ಆಗಬೇಕು. ಪ್ರಧಾನಪರವಾಗುವುದಿಲ್ಲವೆಂದು ನೀವು ಸಿದ್ಧಾಂತ ಮಾಡಬೇಕು. ಆವಾಗ ಅತಿವ್ಯಾಪ್ತಿಯನ್ನು ಪರಿಹರಿಸಿದಂತಾಗುತ್ತದೆ ಹೊರತು ಅಸಂಭವವನ್ನು ಪರಿಹರಿಸಿದಂತಾಗುವುದಿಲ್ಲ. ಆದ್ದರಿಂದ ರಾಮಾನುಜರ ಅಭಿಪ್ರಾಯ ಸರಿಯಿಲ್ಲ.

ಅವರ ಮತ್ತೊಂದು ವಾದ ಪ್ರಥಮಪಾದವು ಚಿದಚಿದ್‌ವಿಲಕ್ಷಣನಾದ ಬ್ರಹ್ಮನನ್ನಷ್ಟೇ ಪ್ರತಿಪಾದಿಸುತ್ತದೆ. ಉಳಿದ ಮೂರು ಪಾದಗಳು ಬ್ರಹ್ಮನಲ್ಲಿ ಗುಣವಿಶೇಷಗಳನ್ನು ಪ್ರತಿಪಾದಿಸುತ್ತವೆ ಎಂದು.

ಆದರೆ ಇದೂ ಸಹ ಸರಿಯಲ್ಲ. ಚಿದಚಿದ್‌ವೈಲಕ್ಷಣ್ಯವನ್ನು ಜಗತ್‌ಕಾರಣತ್ವಧರ್ಮದಿಂದಲೇ ಹೇಳಬೇಕಾಗುತ್ತದೆ. ಆದರೆ ಅಂತಸ್ಥತ್ವಾಧಿಕರಣದಲ್ಲಿ ಮತ್ತು 'ಜ್ಯೋತಿಶ್ಚರಣ' ಇತ್ಯಾದ್ಯಧಿಕರಣದಲ್ಲಿ ಜಗತ್ಕಾರಣತ್ವವನ್ನು ಹೇಳದೆ ಅಂತಸ್ಥತ್ವಾದಿಗುಣಗಳನ್ನು ಹೇಳಿದ್ದಾರೆ. ಬ್ರಹ್ಮನಲ್ಲಿ ಈ ಧರ್ಮಗಳಿಂದಲೇ ವೈಲಕ್ಷಣ್ಯ ಹೇಳಿದಂತಾಗುತ್ತದೆ ಹೊರತು ಜಗತ್‌ಕಾರಣತ್ವದಿಂದ ಹೇಳಿದಂತಾಗಲಿಲ್ಲ.

ಇನ್ನು ಗುಣಾಂತರಗಳಿಂದಲೂ ಚಿದಚಿದ್‌ವೈಲಕ್ಷಣ್ಯವನ್ನು ಸಮರ್ಥಿಸಬಹುದೆಂದು ಹೇಳಿದರೆ ಮುಂದಿನ ಮೂರು ಪಾದಗಳಿಂದಲೂ ಇದು ಸಿದ್ಧವಾಗುತ್ತದೆ. ಪ್ರಥಮಪಾದದಲ್ಲಿ ಮಾತ್ರ ಚಿದಚಿದ್ ವೈಲಕ್ಷಣ್ಯ ಹೇಳಿದ್ದೇವೆಂದು ಹೇಳಿದ್ದು ತಪ್ಪಾಗುತ್ತದೆ.



## ಅಸ್ಪಷ್ಟಜೀವಾದಿಲಿಂಗಗಳಿಂದ ಪಾದಭೇದವು ಕೂಡುವುದಿಲ್ಲ.

### तात्पर्यचन्द्रिका–

**यच्चोक्तम् – 'अस्पष्टजीवादिलिङ्गकानि वाक्यानि द्वितीये' इत्यादि, तच्चायुक्तम्, द्वितीयेऽपि मनोमयत्वप्राणशरीरत्वादेरत्तृत्वस्य च मनः प्राणादियुक्ते भोक्तरि च जीवे, तथा कर्मफलभोक्तृत्वस्य भोक्तृजीवसाहित्येन ब्रह्मणीव बुद्धौ प्राणे वा, तया ''यस्य पृथिवी शरीरम्'' इति शरीरित्वसाहित्येन श्रुतान्तर्यामित्वादेश्च जीवे स्पष्टत्वात् ।**

**ननु मनोमयत्वादिकं शुद्धेन मनसा ग्राह्यत्वादिकम् । अत्तृत्वं च संहर्तृत्वम् । तच्च जीवे अनुपपन्नत्वात् अस्पष्टमिति चेत्, न । मनोमयत्वादेरेवंरूपत्वस्य पूर्वपक्षिणा अनङ्गीकृतत्वेन आपाततो जीवादावेव स्पष्टत्वात् । सिद्धान्तदशायां च जीवेऽनुपपत्तेः सर्वसाधारण्यात् ।**

ननु मनोमयत्वं न मनस्सम्बन्धमात्रम्, तस्य जीवत्वासाधकत्वात् । किन्तु मनःकरणकत्वम् । तच्च तस्मिन् वाक्ये न स्पष्टमिति चेत्, न, मनस्सम्बन्धमात्रोक्तावपि तस्य करणत्वप्रसिद्ध्या तथैव सम्बन्धसिद्धेः । न हि चक्षुष्मच्छब्देन तत्संयुक्तस्याकाशादेः प्रतीतिः ।

ननु "मनोमयः प्राणशरीरनेता" इत्यादौ वाक्यान्तरे मनोमयत्वादिकं ब्रह्मणि प्रसिद्धमिति जीवादावस्पष्टमिति चेत्, न ।

तृतीयेऽपि द्युभ्वाद्यायतनत्वस्यापि "एको दाधार भुवनानि विश्वा" इत्यादौ वाक्यान्तरे ब्रह्मणि प्रसिद्धेः ।

तत्र जायमानत्वादिलिङ्गं जीवे प्रसिद्धं चेत्, अत्रापि "एष स आत्माऽन्तर्हृदये" इत्यर्भकौकस्त्वमपि जीवे प्रसिद्धम् । प्रत्युत तृतीये द्युभ्वाद्यायतनत्वं स्वरूपेण "अमृतस्यैष सेतुः" इत्यादिब्रह्मलिङ्गसन्निधानेन च, तथा पूर्णत्वरूपभूमत्वमपि स्वरूपेण "यत्र नान्यत्पश्यति" इत्यादिब्रह्मलिङ्गसन्निधानेन च, तथा अक्षरत्वमपि "अक्षरस्य प्रशासने गार्गि सूर्याचन्द्रमसौ विधृतौ तिष्ठतः" इत्यादिब्रह्मलिङ्गसन्निधानात् न जीवादौ स्पष्टम् । तत्तत्प्रतिपादनच्छायानुसारिणोऽपि न परस्परविरुद्ध-स्पष्टास्पष्टजीवादिलिङ्गकवाक्यबहिर्भावः ।

ಅನುವಾದ - ರಾಮಾನುಜರು ಅಸ್ಪಷ್ಟಜೀವಾದಿಲಿಂಗವುಳ್ಳ ವಾಕ್ಯಗಳನ್ನು ಎರಡನೆಯ ಪಾದದಲ್ಲಿ ಸಮನ್ವಯ ಮಾಡಲಾಗಿದೆಯೆಂದು ಹಿಂದೆ ಹೇಳಿದ್ದರು. ಇದೂ ಕೂಡ ತಪ್ಪು. ಏಕೆಂದರೆ 'ಮನೋಮಯಃ ಪ್ರಾಣಶರೀರಃ ಭಾರೂಪಃ' ಎಂಬ ವಾಕ್ಯದಲ್ಲಿ ಮನೋಮಯತ್ವಪ್ರಾಣಶರೀರತ್ವಾದಿ ಜೀವನ ಲಿಂಗಗಳು ಸ್ಪಷ್ಟವಾಗಿಯೇ ಇವೆ. ಮತ್ತು 'ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ' ಎಂದು ಭೋಕ್ತೃತ್ವವು ಸ್ಪಷ್ಟವಾಗಿದೆ. ಇದರಂತೆ ಕರ್ಮಫಲಭೋಕ್ತೃತ್ವವು ಭೋಕ್ತನಾದ ಜೀವನಲ್ಲಿ ಹೇಗೆ ಇದೆಯೋ ಅದರಂತೆ ಜೀವನ ಜೊತೆ ಇರುವ ಬ್ರಹ್ಮನಲ್ಲಿ ಬರುವಂತೆ ಬುದ್ಧಿ ಮತ್ತು ಪ್ರಾಣರಲ್ಲಿಯೂ ಸ್ಪಷ್ಟವಾಗಿ ಬರುತ್ತದೆ. 'ಪೃಥಿವೀಶರೀರಮ್' ಎಂದು ಶರೀರತ್ವದ ಸಾಹಿತ್ಯದಿಂದ ಶ್ರುತವಾದ ಅಂತರ್ಯಾಮಿತ್ವವೂ ಕೂಡ ಜೀವನಲ್ಲಿ ಸ್ಪಷ್ಟವಾಗಿ ಬರುತ್ತದೆ.

ಆಕ್ಷೇಪ - 'ಮನೋಮಯತ್ವ' ಎಂದರೆ ಶುದ್ಧವಾದ ಮನಸ್ಸಿನಿಂದ ಧ್ಯಾನ ಮಾಡುವಿಕೆ ಎಂದರ್ಥ. ಅತ್ತೃತ್ವ ಎಂದರೆ ಸಂಹರ್ತೃತ್ವ ಎಂದರ್ಥ. ಇವೆರಡೂ ಜೀವನಲ್ಲಿ ಅನುಪಪನ್ನವಾದ್ದರಿಂದ ಅಸ್ಪಷ್ಟವಾಗಿವೆಯಲ್ಲವೆ?

ಸಮಾಧಾನ - ಇದು ತಪ್ಪು. ನೀವು ಹೇಳುವಂತೆ ಪೂರ್ವಪಕ್ಷಿಯು ಒಪ್ಪುವುದಿಲ್ಲ. ಪೂರ್ವಪಕ್ಷಿಗೂ ಸಮ್ಮತವಾಗುವ ಹಾಗೆ ನೀವು ಹೇಳಬೇಕೆಂದರೆ ಶ್ರುತಿಯಲ್ಲಿ ಉಕ್ತವಾದ ಲಿಂಗಗಳು ಜೀವನಲ್ಲಿ ಸ್ಪಷ್ಟವೆಂದು ಒಪ್ಪಲೇಬೇಕಾಗುತ್ತದೆ. ಸಿದ್ಧಾಂತದೆಶೆಯಲ್ಲಾದರೂ ಜೀವನಲ್ಲಿ ಕೂಡದಿರುವಿಕೆಯು ಸಕಲಲಿಂಗಸಾಧಾರಣವಾಗಿದೆ.

ಆಕ್ಷೇಪ - ಮನೋಮಯತ್ವ ಎಂದರೆ ಕೇವಲ ಮನಃಸಂಬಂಧ ಎಂದಷ್ಟೇ ಹೇಳಬೇಕು. ಅದು ಜೀವನಿಗೆ ಸಾಧಕ ಆಗಿಲ್ಲ. ಕಿಂತು ಮನಸ್ಸು ಕಾರಣವಾಗಿರುವಿಕೆ ಎಂದರ್ಥ. ಇದು ವಾಕ್ಯದಲ್ಲಿ ಸ್ಪಷ್ಟವಾಗಿ ಇರುವುದಿಲ್ಲ.

ಸಮಾಧಾನ - ಮನೋಮಯತ್ವ ಎಂದರೆ 'ಮನಃಸಂಬಂಧಮಾತ್ರಮ್' ಎಂದು ಹೇಳಿದರೂ ಸಾಕು. ಆ ಸಂಬಂಧವು ಕರಣತ್ವರೂಪದಿಂದಲೇ ಸಿದ್ಧವಾಗುತ್ತದೆ. 'ಚಕ್ಷುಷ್ಮಾನ್' (ಕಣ್ಣುಳ್ಳವನು) ಎಂದು ಹೇಳಿದಾಗ ಚಕ್ಷುಸ್ಸಿನಿಂದ ಸಂಯುಕ್ತವಾದದ್ದು ಆಕಾಶ ಎಂಬ ಪ್ರತೀತಿಯು ಯಾರಿಗೂ ಬರುವುದಿಲ್ಲ. ಆದ್ದರಿಂದ 'ಚಕ್ಷುಷ್ಮಾನ್' ಎಂದರೆ ಚಕ್ಷುಸ್ಸು ಕರಣ ಎಂದೇ ಹೇಳಬೇಕು. ಹಾಗೆ ಮನೋಮಯ ಎಂದರೆ ಮನಸ್ಸು ಕರಣ ಎಂದೇ ಪ್ರತೀತಿ ಬರುತ್ತದೆ. ಆವಾಗ ಈ ವಾಕ್ಯವು ಜೀವತ್ವಕ್ಕೆ ಸಾಧಕವಾದ ಸ್ಪಷ್ಟಲಿಂಗವನ್ನೇ ಹೇಳಿದಂತಾಯಿತು.

ಆಕ್ಷೇಪ - ಹಾಗಾದರೆ ಈ ವಾಕ್ಯ ಬೇಡ. 'ಮನೋಮಯಃ ಪ್ರಾಣ ಶರೀರನೇತಾ' ಎಂಬ ಮತ್ತೊಂದು ವಾಕ್ಯದಲ್ಲಿಯೂ ಮನೋಮಯತ್ವವು ಕೇಳಿಸುತ್ತಿದೆ. ಇದು ಬ್ರಹ್ಮನಲ್ಲಿ ಪ್ರಸಿದ್ಧವಾಗಿದೆ. ಬ್ರಹ್ಮನಲ್ಲಿ ಸ್ಪಷ್ಟವಾದ್ದರಿಂದ ಜೀವನಲ್ಲಿ ಅಸ್ಪಷ್ಟವಾಗಿದೆ.

ಸಮಾಧಾನ - ದುಭ್ವಾದ್ಯಾಯತನತ್ವವೂ ಸಹ 'ಏಕೋ ದಾಧಾರ ಭುವನಾನಿ ವಿಶ್ವಾ' ಎಂಬ ಮತ್ತೊಂದು ವಾಕ್ಯದಲ್ಲಿ ಬ್ರಹ್ಮನಲ್ಲಿ ಪ್ರಸಿದ್ಧವಾಗಿದೆ. ಆದ್ದರಿಂದ ಜೀವನಲ್ಲಿ ಅಸ್ಪಷ್ಟವಾಗುತ್ತದೆ. ಆವಾಗ ದುಭ್ವಾದ್ಯಾಯತನತ್ವವೂ ಅಸ್ಪಷ್ಟ ಬ್ರಹ್ಮಲಿಂಗವಾಗಬೇಕಾಗುತ್ತದೆ.

ಆಕ್ಷೇಪ - ದುಭ್ವಾದ್ಯಾಯತನತ್ವವು ಬ್ರಹ್ಮನಲ್ಲಿ ವಾಕ್ಯಾಂತರದಿಂದ ಪ್ರಸಿದ್ಧವಾದ್ದರಿಂದ ಜೀವನಲ್ಲಿ ಅಸ್ಪಷ್ಟವಾಗಿರಬಹುದು. ಆದರೆ 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ಜಾಯಮಾನತ್ವ ಲಿಂಗವು ಜೀವನಲ್ಲಿ ಸ್ಪಷ್ಟವಾಗಿ ಕೇಳಿಸುತ್ತಿದೆ. ಇದು ಬ್ರಹ್ಮನಲ್ಲಿ ಸ್ಪಷ್ಟವಾಗಿಲ್ಲ.

ಸಮಾಧಾನ - ಹಾಗಾದರೆ ಇಲ್ಲಿಯೂ 'ಏಷ ಮೇ ಆತ್ಮಾ ಅಂತರ್ಹೃದಯೇ' ಎಂದು ಅಲ್ಪಸ್ಥಾನಸ್ಥಿತತ್ವವು ಶ್ರುತವಾಗಿದೆ. ಇದೂಸಹ ಬ್ರಹ್ಮನಲ್ಲಿ ಪ್ರಸಿದ್ಧವಾಗದೆ ಜೀವನಲ್ಲಷ್ಟೇ ಪ್ರಸಿದ್ಧವಾಗಿದೆ.

ಅಷ್ಟೇ ಅಲ್ಲದೇ ದುಭ್ವಾದ್ಯಾಯತನತ್ವವು ಸ್ವರೂಪದಿಂದಲೂ ಜೀವಾದಿಗಳಲ್ಲಿ ಸ್ಪಷ್ಟವಾಗಿಲ್ಲ. ಮತ್ತು ಸಮೀಪದಲ್ಲಿ 'ಅಮೃತಸ್ಯೈಷ ಸೇತುಃ' ಎಂದು ಬ್ರಹ್ಮಲಿಂಗವಾದ ಮುಕ್ತಾಶ್ರಯತ್ವವು ಕೇಳಿಬರುತ್ತಿದೆ. ಇದರ ಸನ್ನಿಧಾನವಿರುವುದರಿಂದಲೂ ಜೀವನಲ್ಲಿ ಸ್ಪಷ್ಟವಾಗಿಲ್ಲ. ಮೂರನೆಯ

ಪಾದದಲ್ಲಿ ಹೇಳಿದ ಪೂರ್ಣತ್ವರೂಪವಾದ ಭೂಮತ್ವವೂ ಸ್ವರೂಪತಃ ಬರುವುದಿಲ್ಲ. 'ಯತ್ರ ನಾನ್ಯತ್ ಪಶ್ಯತಿ' ಇತ್ಯಾದಿಯಾಗಿ ಸಾಕಲ್ಯೇನ ದರ್ಶನಾದ್ಯವಿಷಯತ್ವವು ಕೇಳಿ ಬರುತ್ತಿದೆ. ಇದು ಬ್ರಹ್ಮನ ಲಿಂಗ. ಇದರ ಸನ್ನಿಧಾನವಿರುವುದರಿಂದಲೂ ಜೀವನಲ್ಲಿ ಸ್ಪಷ್ಟವಾಗಿ ಇರುವುದಿಲ್ಲ. ಅಕ್ಷರತ್ವವೂ ಸಹ ಜೀವನಲ್ಲಿ ಸ್ಪಷ್ಟವಾಗಿ ಬರುವುದಿಲ್ಲ. 'ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಇತ್ಯಾದಿಯಾಗಿ ಸೂರ್ಯಚಂದ್ರಾದಿಧಾರಕತ್ವವು ಬ್ರಹ್ಮನ ಲಿಂಗವಾಗಿದೆ. ಇದರ ಸನ್ನಿಧಾನ ಇರುವುದರಿಂದ ಜೀವಾದಿಗಳಲ್ಲಿ ಸ್ಪಷ್ಟವಲ್ಲ.

ಮತ್ತು ನಾಲ್ಕನೆಯ ಪಾದದಲ್ಲಿ ಆಪಾತತಃ ಜೀವಾದಿಗಳನ್ನು ಪ್ರತಿಪಾದಿಸುವ ವಾಕ್ಯಗಳ ಸಮನ್ವಯವೆಂದು ಹೇಳಿದಿರಲ್ಲ? ಆದರೆ ಇದೂ ಸಹ ಪರಸ್ಪರವಿರುದ್ಧವಾದ ಸ್ಪಷ್ಟಾಸ್ಪಷ್ಟಜೀವಾದಿ-ಲಿಂಗಕವಾಕ್ಯದಿಂದ ಬಹಿರ್ಭೂತವಾಗಿಲ್ಲ. ಸ್ಪಷ್ಟಜೀವಲಿಂಗಕವಾಗಿಲ್ಲವೆಂದರೆ ಅಸ್ಪಷ್ಟವಾಗಬೇಕು. ಅಸ್ಪಷ್ಟಜೀವಲಿಂಗಕವಾಗಿಲ್ಲವೆಂದರೆ ಸ್ಪಷ್ಟವಾಗಬೇಕು. ಹೀಗೆ ಸ್ಪಷ್ಟಾಸ್ಪಷ್ಟಗಳಲ್ಲಿಯೇ ಸೇರುವುದರಿಂದ ನಾಲ್ಕನೆಯ ಪಾದ ಬೇಕಾಗಿಲ್ಲ.

### ಕಠಿಣಪದಾರ್ಥ

ಬುದ್ಧೌ ಪ್ರಾಣೇ ಚ = ಬುದ್ಧಿಯಲ್ಲಿ ಮತ್ತು ಪ್ರಾಣರಲ್ಲಿ ಸ್ಪಷ್ಟವಾಗಿದೆ, ತತ್ರ = 'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಎಂಬಲ್ಲಿ. ಅರ್ಭಕೌಕಸ್ತ್ವಮಪಿ = ಅಲ್ಪದೇಶಸ್ಥಿತತ್ವವೂ ಸಹ.

**प्रकाशः** – त्रिपाद्यामप्यवान्तरपादोपाधिं प्रागुक्तं निराह – **यच्चेति** ।। ''सर्वत्र प्रसिद्ध'' इति नये ''मनोमयः प्राणशरीरो भारूपः'' इति वाक्ये, ''अत्ता'' इति नये ''यस्य ब्रह्म च क्षत्रं च'' इति भावः ।। **प्राणे वेति** ।। 'स्पष्टत्वात्' इत्यन्वयः । अत्र दृष्टान्तोक्तिस्तु साहित्येन स्पष्टत्वं नाभिप्रेतमिति शङ्काव्युदासाय, ब्रह्मणि स्पष्टत्वस्य तथैव भाषितत्वादिति वक्तुम् ।। **यस्येति** ।। अन्तर्यामिनयवाक्य इत्यर्थः ।

उक्तदोषमध्ये कचिदुद्धारमाशङ्कते – **नन्विति** ।। मनोमयत्वादेरेवमर्थोक्त्या जीवे अस्पष्टत्वोक्तिः । किं पूर्वपक्षरीत्या, अथ आपातदृष्ट्योत सिद्धान्तदिशेति विकल्प्याद्यस्यायोगेन द्वितीये वाच्ये, तत्र स्पष्टत्वमेवेत्याह – **मनोमयत्वादेरिति** ।। **अनङ्गीकृतत्वेनेति** ।। अन्यथा पूर्वपक्षानुदयादित्यर्थः ।

तृतीयं निराह – **सिद्धान्तेति** ।। सर्वलिङ्गसाधारण्यादस्पष्टान्येव सर्वाणि स्युरित्यर्थः ।। **जीवत्वेति** ।। गगनादावपि भावादिति भावः ।

ननु द्युभ्वाद्यायतनत्वस्य स्वरूपेण जीवेऽस्पष्टत्वेऽपि जीवे प्रसिद्धलिङ्गसाहित्यात् तत्र स्पष्टमेवेत्याशङ्क्याह – **तत्रेति** ।। "स एषोऽन्तश्चरते बहुधा जायमानः" इत्युक्तमित्यर्थः ।। **अर्भकौकस्त्वमिति** ।। तथा च तत्साहित्यान्मनोमयत्वमपि जीवे स्पष्टं स्यादिति भावः । तृतीयपादोपाधिमपि निराह – **प्रत्युतेति** ।। जीवलिङ्ग-साहित्येन जीवे स्पष्टत्वोक्तौ द्वितीयपादसाङ्कर्यमात्रमित्येवं नेत्यर्थः ।

चतुर्थपादोपाधिमप्यपाकरोति – **तत्तत्प्रतिपादनेति** ।। च्छायानुसारिणोऽपि 'वाक्यस्य' इति शेषः ।। **परस्परेति** ।। स्पष्टलिङ्गप्रतिपादकत्वं वा अस्पष्टलिङ्ग-प्रतिपादकत्वं वा भवेत्, विरोधेन तृतीयप्रकाराभावात् । तथा च तदुभयवाक्यविचारः प्रागेव कृत इति भावः ।

**गुरुराजीयम्** – प्रथमस्य द्वितीयतृतीयपादाभ्यां साङ्कर्यमुक्त्वा द्वितीयतृतीययो-रपीदानीमन्योन्यसाङ्कर्यमाह – **यच्चोक्तमिति** ।। **बुद्धौ प्राणे वेति** ।। भोक्तृप्राणसाहित्येन बुद्धौ भोक्तृत्वस्य सम्भवादिति भावः ।

नन्वत्र मनोमयत्वं न मनोविकारत्वम् । येन स्पष्टत्वं स्यात् । किन्तु शुद्धेन मनसा ग्राह्यत्वम् । तथा अत्तृत्वमपि न क्षुन्निवारकभक्षयितृत्वम्, किन्तु संहर्तृत्वम् । तथा कर्मफलभोक्तृत्वमपि न कर्मफलभोगमात्रम्, किन्तु तन्नियामकत्वम् । एवं शरीरित्वमपि न शरीराधिष्ठातृत्वम्, किन्तु नियामकत्वम् । तथा च निरुक्तानां जीवेऽस्पष्टत्वान्न तृतीयेन साङ्कर्यमस्येत्याशयेन शङ्कते – **नन्विति** ।। **मनोमयत्वादे-रिति** ।। तथाचैतादृशनिर्वचने पूर्वपक्षानुत्पादनमेव स्यादिति भावः । सिद्धान्तरीति-मनुसृत्यैवमस्पष्टत्वमुक्तमिति न पूर्वपक्षानुदय इत्यत आह – **सिद्धान्तदशाया-मिति** ।। मनस्सम्बन्धमात्रोक्तावपीति ।। सामान्यतः सम्बन्धमात्र उक्तेपि सम्बन्धा-न्तरस्यासम्भवात् करणत्वपर्यवसानमिति भावः ।

ननु सामान्यतो मनःसम्बन्धवानित्युक्ते करणत्व एव पर्यवसानं क्व दृष्टमित्यत आह – **न हीति** ।। किन्तु चक्षूरूपकरणत्वमेव प्रतीयत इति भावः। ननु विषयवाक्ये स्पष्टत्वास्पष्टत्वे न विवक्षिते । किन्तु वाक्यान्तरे ब्रह्मपरतयाऽनिर्णीतत्वमेवास्पष्टत्वं विवक्षितम् । मनोमयत्वादिकं च तादृशमित्याशयेन शङ्कते – **नन्विति** ।। **तृतीयेऽपीति** ।। तथा च तत्र समन्वेतव्यद्युभ्वाद्यायतनत्वस्यास्पष्टत्वेन द्वितीये समन्वेतव्यत्वापत्तेरिति भावः ।

ननु तृतीये समन्वेतव्यं द्युभ्वाद्यायतनत्वं नास्पष्टम् । जायमानत्वादिलिङ्गसाहित्येन स्पष्टत्वादित्यत आह – **तत्रेति** ।। **अत्रापीति** ।। अर्भकौकस्त्वादिलिङ्गसाहित्येन सर्वगतत्वस्यापि जीवादौ स्पष्टत्वं स्यादिति भावः । किञ्च द्युभ्वाद्यायतनत्वापेक्षया मनोमयत्वादेरस्पष्टत्वाभावेन तस्य तृतीय एव समन्वेतव्यत्वम् । न तु द्वितीये । नच तस्य कथं स्पष्टत्वमिति वाच्यम् । स्वरूपेण ब्रह्मलिङ्गसाहित्येन वान्यत्रास्पष्टत्वादित्याह – **प्रत्युतेति** ।।

चतुर्थपादार्थमपि दूषयति – **तत्तदिति** ।। तत्प्रतिपादनच्छायानुसारिणा न स्पष्टत्वलिङ्गत्वम् । येन स्पष्टलिङ्गसमन्वयप्रतिपादकद्वितीयेन्तर्भावः । नाप्यस्पष्टलिङ्गानि । येन तृतीयेन्तर्भावः । किन्तूभयविलक्षणानि । तथा च न कोपि दोष इत्यत उक्तं – **परस्परेति** ।। परस्परविरुद्धयोरन्यतरनिषेधस्यान्यतरविधिनान्तरीयकत्वेनोभयवैलक्षण्यस्य व्याहतत्वादिति भावः ।

ವಿವರಣೆ - ಪ್ರಥಮಪಾದವು ಅಸಂಭವದೋಷಪರಿಹಾರಕ್ಕಾಗಿ ಮುಂದಿನ ಮೂರು ಪಾದಗಳು ಅತಿವ್ಯಾಪ್ತಿದೋಷಪರಿಹಾರಕ್ಕಾಗಿ ಎಂದು ರಾಮಾನುಜರು ಹೇಳುತ್ತಾರೆ. ಹಾಗಾದರೆ ಮೂರು ಪಾದಗಳ ವಿಭಾಗ ಏಕೆ? ಎಂಬ ಪ್ರಶ್ನೆಗೆ ಅವಾಂತರವಾದ ಅಸ್ಪಷ್ಟಜೀವಾದಿಲಿಂಗಗಳೆಂಬ ಪಾದೋಪಾಧಿಗಳಿರುವುದರಿಂದ ಪಾದವಿಭಾಗವು ಆವಶ್ಯಕ ಎನ್ನುತ್ತಾರೆ.

ಇದು ತಪ್ಪು. ರಾಮಾನುಜರ ಪ್ರಕಾರ ಎರಡನೆಯ ಪಾದದಲ್ಲಿ ಅಸ್ಪಷ್ಟಜೀವಲಿಂಗಗಳಿರಬೇಕು. ಆದರೆ 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದ 'ಮನೋಮಯಃ ಪ್ರಾಣಶರೀರಃ ಭಾರೂಪಃ' ಎಂಬ ವಾಕ್ಯದಲ್ಲಿ ಮನೋಮಯತ್ವಾದಿಜೀವಲಿಂಗಗಳು ಸ್ಪಷ್ಟವಾಗಿಯೇ ಶ್ರುತವಾಗಿವೆ. 'ಅತ್ತಾ ಚರಾಚರಗ್ರಹಣಾತ್' ಎಂಬ ಸೂತ್ರದ 'ಯಸ್ಯ ಬ್ರಹ್ಮ ಚ ಕ್ಷತ್ರಮ್' ಎಂಬ ವಿಷಯವಾಕ್ಯದಲ್ಲಿಯೂ ಅತೃತ್ವವೆಂಬ ಜೀವಲಿಂಗವು ಸ್ಪಷ್ಟವಾಗಿ ಕೇಳಿಸುತ್ತಿದೆ.

ಕರ್ಮಫಲಭೋಕ್ತೃತ್ವವು ಬುದ್ಧಿ ಮತ್ತು ಪ್ರಾಣರಲ್ಲಿ ಭೋಕ್ತೃಜೀವನ ಜೊತೆ ಹೇಳಿದ್ದರಿಂದ ಸ್ಪಷ್ಟವಾಗಿದೆ. ಸಾಹಿತ್ಯದಿಂದ ಸ್ಪಷ್ಟತ್ವ ಹೇಳುವುದನ್ನು ನಾವು ಒಪ್ಪಿಲ್ಲವೆಂದು ಆಕ್ಷೇಪಿಸಿದರೆ ನೀವೇ ಭೋಕ್ತೃಜೀವನ ಸಾಹಿತ್ಯದಿಂದ ಬ್ರಹ್ಮನಲ್ಲಿ ಕರ್ಮಫಲಭೋಕ್ತೃತ್ವವನ್ನು ಆಶಂಕಿಸಿದ್ದೀರಿ. ಅದರಂತೆ ಬುದ್ಧಿ ಪ್ರಾಣರಲ್ಲಿ ಕರ್ಮಫಲಭೋಕ್ತೃತ್ವ ಸ್ಪಷ್ಟವಾಗಿದೆ. ಮನೋಮಯತ್ವಾದಿಗಳನ್ನು ಜೀವನಲ್ಲಿ ಅಸ್ಪಷ್ಟವೆಂದು ಯಾವ ಕಾರಣದಿಂದ ಹೇಳುತ್ತೀರಿ? ಪೂರ್ವಪಕ್ಷದ ಪ್ರಕಾರ ಹೇಳುತ್ತೀರೋ? ಆಪಾತದೃಷ್ಟಿಯಿಂದ ಹೇಳುತ್ತೀರೋ? ಅಥವಾ ಸಿದ್ಧಾಂತದ ಪ್ರಕಾರ ಹೇಳುತ್ತೀರೋ? ಪೂರ್ವಪಕ್ಷದ ಪ್ರಕಾರ ಹೇಳುವುದು ತಪ್ಪಾಗುತ್ತದೆ. ಆಪಾತದೃಷ್ಟಿಯಿಂದ ಹೇಳಿದರೆ ಸ್ಪಷ್ಟತ್ವವನ್ನೇ ಹೇಳಿದಂತಾಗುತ್ತದೆಂದು 'ಮನೋಮಯತ್ವಾದೇರೇವಂರೂಪತ್ವಸ್ಯ' ಎಂದು ಹೇಳುತ್ತಿದ್ದಾರೆ. ಸಿದ್ಧಾಂತದ ಪ್ರಕಾರ ಅಸ್ಪಷ್ಟತ್ವವನ್ನು ಹೇಳುತ್ತೇವೆ ಎಂದರೆ 'ಸಿದ್ಧಾಂತದಶಾಯಾಂ' ಎಂಬುದರಿಂದ ನಿರಾಕರಿಸುತ್ತಿದ್ದಾರೆ.

ದುಭ್ವಾದ್ಯಾಯತನತ್ವವು ಸ್ವರೂಪತಃ ಜೀವನಲ್ಲಿ ಅಸ್ಪಷ್ಟವಾಗಿದ್ದರೂ ಪ್ರಸಿದ್ಧಲಿಂಗಸಾಹಿತ್ಯದಿಂದ ಜೀವನಲ್ಲಿಯೂ ಸ್ಪಷ್ಟವಾಗಿ ಇದೆ.

ಮೂರನೆಯ ಪಾದದ ಉಪಾಧಿಯನ್ನು 'ಪ್ರತ್ಯುತ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ನಾಲ್ಕನೆಯ ಪಾದದ ಉಪಾಧಿಯನ್ನು 'ತತ್ತತ್‌ಪ್ರತಿಪಾದನ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.




ಅದ್ವೈತಿಗಳಂತೆ ರಾಮಾನುಜರೂ ಸಹ ಅಸ್ಪಷ್ಟಜೀವಾದಿಲಿಂಗಗಳ ಸಮನ್ವಯವನ್ನು ಎರಡನೆಯ ಪಾದದಲ್ಲಿ ಹೇಳುತ್ತಾರೆ. ಆದರೆ ಮನೋಮಯತ್ವ ಅತೃತ್ವ ಮೊದಲಾದ ಧರ್ಮಗಳನ್ನು ಎರಡನೆಯ ಪಾದದಲ್ಲಿ ಅವರೇ ಹೇಳಿದ್ದರಿಂದ ಅವರ ನಿಯಮಕ್ಕೆ ಭಂಗ ಬರುತ್ತದೆ. ಮನೋಮಯತ್ವ ಎಂದರೆ ಮನಃಕರಣಕತ್ವಮ್ ಎಂದರ್ಥ. ಇದು ಜೀವನಲ್ಲಿ ಸ್ಪಷ್ಟವಾಗಿ ಇದೆ. ಮೂರನೆಯ ಪಾದದಲ್ಲಿ ಅಸ್ಪಷ್ಟಜೀವಲಿಂಗಗಳ ಸಮನ್ವಯವೆನ್ನುತ್ತಾರೆ. ಆದರೆ ಇದೂ ಸರಿಯಿಲ್ಲ. ಇನ್ನು ಯಾವುದೇ ಲಿಂಗಗಳಾದರೂ ಸ್ಪಷ್ಟದಲ್ಲಾಗಲೀ ಅಸ್ಪಷ್ಟದಲ್ಲಾಗಲೀ ಸೇರಲೇಬೇಕಾದ್ದರಿಂದ ನಾಲ್ಕನೆಯ ಪಾದ ಹೊರಟಿದ್ದೇ ವ್ಯರ್ಥ .



"ರಾಮಾನುಜರ ಮತ್ತೊಂದು ಪ್ರಕಾರದ ಪಾದೋಪಾಧಿ ನಿರಾಕರಣೆ"

**तात्पर्यचन्द्रिका–**

**ननु तत्तत्प्रतिपादनच्छायानुसारित्वं नाम स्पष्टतरपूर्वपक्षहेतुकत्वमिति चेत्, न । चतुर्थपादे "आनुमानिकं" इत्यस्य विषये, "महतः परमव्यक्तम् अव्यक्तात्पुरुषः परः" इति वाक्ये, "ज्योतिरुपक्रमात्" इत्यस्य विषये "अजामेकाम्" इत्यादिवाक्ये, "न सङ्ख्योपसङ्ग्रहात्" इत्यादेर्विषये –**

**'यस्मिन् पञ्च पञ्चजना आकाशश्च प्रतिष्ठितः ।**
**तमेव मन्य आत्मानं विद्वान् ब्रह्मामृतोऽमृतम्'**
**इत्यादिवाक्ये च पूर्वपक्षहेतोरस्पष्टत्वात् ।**

**तथा हि – न तावत्तत्र प्रधानमस्तीत्येव पूर्वपक्षः, तस्य सिद्धान्तेऽपि सत्त्वात् । किंत्वीश्वरानधीनं तदस्तीति । न चोक्तविषयवाक्ये ईश्वरानधीनं प्रधानादिकमस्तीत्यत्र स्पष्टो हेतुरस्ति ।**

यच्चोक्तं द्वितीये सर्वशरीरत्वं, तृतीये सर्वात्मकत्वं, चतुर्थे त्वतत्कार्यातच्छरीरवत्वाभावः प्रतिपाद्यत इति, तन्न ।

द्वितीये "अन्तर्यामी" इत्यत्रैव "यस्य पृथिवी शरीरम्" "यस्यापः शरीरम्" इत्यादिना सर्ववस्तूनां प्रत्येकं विशिष्य नियम्यत्वरूपशरीरत्वोक्तेः, तृतीयेऽपि "द्युभ्वाद्यायतनम्" इत्यत्रैव "यस्मिन् द्यौः" इत्यादिना सर्वप्रकारित्व-रूपसर्वात्मकत्वोक्तेः द्वितीये तृतीये चाधिकरणान्तरवैयर्थ्यापातात् ।

द्वितीये "अदृश्यत्वादिगुणकः" इत्यादौ सर्वशरीरत्वस्य, तृतीयेऽपि "भूमा" इत्यादौ सर्वात्मत्वस्याप्रतीतेश्च । श्रुतिसूत्रानुसारेण सर्वगतत्वात्तृत्वद्युभ्वाद्यायतनत्व पूर्णत्वाद्यनेकगुणपरत्वसम्भवे एकैकस्य पादस्य एकैकगुणमात्रपरत्वायोगाच्च । अतत्कार्यवस्तुनो "न वियत्" इत्यत्र निरसिष्यमाणत्वात् अतच्छरीरत्वस्य च "अन्तर्यामी" इत्यत्र निरस्तत्वेन चतुर्थवैयर्थ्याच्च ।

चतुर्थस्य समन्वयाध्यायासङ्गतेश्च । तस्मान्नान्योक्तं पादभेदादिकं युक्तम् । तदेतदभिप्रेत्योक्तं भाष्ये "नान्यथा तददृष्टेः" इति ।

ಅನುವಾದ - ಆಕ್ಷೇಪ - "ತತ್ತತ್ ಪ್ರತಿಪಾದನೇಚ್ಛಾನುಸಾರಿತ್ವ" ಎಂದರೆ ಪೂರ್ವಪಕ್ಷದ ಹೇತು ಬಹಳ ಸ್ಪಷ್ಟವಾಗಿರಬೇಕೆಂದು ಅರ್ಥ. ಹಾಗಾಗಿ ಸ್ಪಷ್ಟಾಸ್ಪಷ್ಟಜೀವಾದಿಲಿಂಗಕವಾಕ್ಯಗಳಿಂದ ಭಿನ್ನವಾಗುತ್ತದೆ.

ಸಮಾಧಾನ - ಇದೂ ಸಹ ಸರಿಯಲ್ಲ. ಏಕೆಂದರೆ ನಾಲ್ಕನೆಯ ಪಾದದ ಅನೇಕ ಅಧಿಕರಣಗಳ ವಿಷಯವಾಕ್ಯಗಳಲ್ಲಿ ಪೂರ್ವಪಕ್ಷದ ಹೇತು ಸ್ಪಷ್ಟವಾಗಿ ಕಾಣಿಸುತ್ತಿಲ್ಲ. 'ಆನುಮಾನಿಕಮ್' ಇತ್ಯಾದಿ ಸೂತ್ರದ "ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ" ಎಂಬ ವಾಕ್ಯದಲ್ಲಿ ಪೂರ್ವಪಕ್ಷಹೇತು ಸ್ಪಷ್ಟವಾಗಿಲ್ಲ. 'ಜ್ಯೋತಿರುಪಕ್ರಮಾತ್' ಇತ್ಯಾದಿ ಸೂತ್ರದ 'ಅಜಾಮೇಕಾಮ್' ಇತ್ಯಾದಿ ವಿಷಯವಾಕ್ಯದಲ್ಲಿಯೂ ಪೂರ್ವಪಕ್ಷಹೇತು ಸ್ಪಷ್ಟವಾಗಿಲ್ಲ. ಅದರಂತೆ 'ನ ಸಂಖ್ಯೋಪಸಂಗ್ರಹಾತ್' ಎಂಬ ಸೂತ್ರದ

ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ ।
ತಮೇವಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್ ॥

ಎಂಬ ವಾಕ್ಯದಲ್ಲಿಯೂ ಪೂರ್ವಪಕ್ಷಹೇತುವು ಸ್ಪಷ್ಟವಾಗಿ ಇರುವುದಿಲ್ಲ.

ಅದು ಹೀಗೆ - ಆ ಅಧಿಕರಣಗಳಲ್ಲಿ ಎಲ್ಲಿಯೂ ಸಹ ಪ್ರಧಾನ ಇದೆಯೆಂದಷ್ಟೇ ಪೂರ್ವಪಕ್ಷವನ್ನು

ಮಾಡಿಲ್ಲ. ಪ್ರಧಾನ ಇದೆಯೆಂಬುದು ಸಿದ್ಧಾಂತಕಾರರಿಗೂ ಸಮ್ಮತವಾಗಿದೆ. ಆದರೆ ಈಶ್ವರಾಧೀನವಾಗದ ಪ್ರಧಾನವಿದೆಯೆಂದೇ ಪೂರ್ವಪಕ್ಷ ಮಾಡಬೇಕು. ಆದರೆ ಹಿಂದೆ ತೋರಿಸಿದ ವಿಷಯವಾಕ್ಯಗಳಲ್ಲಿ ಹಾಗೆ ಈಶ್ವರಾಧೀನವಾಗದ ಪ್ರಧಾನಾದಿಗಳು ಇವೆಯೆಂಬುದಕ್ಕೆ ಸ್ಪಷ್ಟವಾದ ಯಾವ ಹೇತುಗಳೂ ಇಲ್ಲ ರಾಮಾನುಜರು - ಮತ್ತೊಂದು ಬಗೆಯಲ್ಲಿ ಪಾದೋಪಾಧಿಗಳನ್ನು ಹೇಳಬಹುದು - ಎರಡನೆಯ ಪಾದವು ಬ್ರಹ್ಮನಿಗೆ ಸರ್ವಶರೀರತ್ವವನ್ನು ಹೇಳುತ್ತಿದೆ. ಮೂರನೆಯ ಪಾದವು ಸರ್ವಾತ್ಮಕತ್ವ (ಎಲ್ಲವಿಧ ಪ್ರಕಾರವುಳ್ಳವನೆಂದು) ಹೇಳುತ್ತಿದೆ. ನಾಲ್ಕನೆಯ ಪಾದವು ಬ್ರಹ್ಮನ ಕಾರ್ಯವಲ್ಲದ ಬ್ರಹ್ಮನ ಶರೀರವಲ್ಲದ ಯಾವುದೇ ವಸ್ತುವೂ ಇರುವುದಿಲ್ಲವೆಂದು ಹೇಳುತ್ತಿದೆ. ಆದ್ದರಿಂದ ಪಾದಭೇದವು ಸಾರ್ಥಕ.

ಸಮಾಧಾನ - ಇದೂ ಸಹ ತಪ್ಪು. ಎರಡನೆಯ ಪಾದದಲ್ಲಿ 'ಅಂತರ್ಯಾಮ್ಯಧಿದೈವಾದಿಷು' ಇತ್ಯಾದಿ ಸೂತ್ರದಲ್ಲಿ 'ಯಸ್ಯ ಪೃಥಿವೀಶರೀರಂ ಯಸ್ಯಾಪಃ ಶರೀರಮ್' ಇತ್ಯಾದಿಯಾಗಿ ಸಕಲ-ವಸ್ತುಗಳಿಗೂ ಪ್ರತ್ಯೇಕವಾದ ನಿಯಮ್ಯತ್ವವೆಂಬ ಶರೀರವನ್ನು ಹೇಳಿದ್ದಾರೆ. ಆದ್ದರಿಂದ ಎರಡನೆಯ ಪಾದದಲ್ಲಿ ಎಲ್ಲೆಡೆ ಬ್ರಹ್ಮನ ಶರೀರವೇ ಹೇಳಲ್ಪಟ್ಟಿದೆ ಎಂಬುದು ತಪ್ಪು. ಒಂದೇ ಅಂತರ್ಯಾಮ್ಯ-ಧಿಕರಣದಿಂದ ಪಾದಪ್ರಮೇಯವೆಲ್ಲ ಸಿದ್ಧವಾಗಿರಬೇಕಾದರೆ ಅಧಿಕರಣಗಳೆಲ್ಲ ವ್ಯರ್ಥವಾಗುತ್ತವೆ. ಇದರಂತೆ ಮೂರನೆಯ ಪಾದದಲ್ಲಿಯೂ 'ದ್ಯುಭ್ವಾದ್ಯಾಯತನಮ್' ಎಂಬ ಸೂತ್ರದಲ್ಲಿ 'ಯಸ್ಮಿನ್ ದ್ಯೌಃ' ಇತ್ಯಾದಿ ವಿಷಯವಾಕ್ಯದಿಂದ ಸರ್ವಪ್ರಕಾರವುಳ್ಳವನೆಂಬ ಸರ್ವಾತ್ಮಕತ್ವವನ್ನು ಸಂಪೂರ್ಣವಾಗಿ ಹೇಳಿದ್ದಾಗಿದೆ ಉಳಿದ ಅಧಿಕರಣಗಳೆಲ್ಲವೂ ವ್ಯರ್ಥ.

ಮತ್ತು ಎರಡನೆಯ ಪಾದದ ಪ್ರತಿಯೊಂದು ಅಧಿಕರಣಗಳಲ್ಲಿಯೂ ಸರ್ವಶರೀರತ್ವವನ್ನು ಹೇಳಬೇಕು. ಆದರೆ 'ಅದೃಶ್ಯತ್ವಾದಿಗುಣಕೋ' ಇತ್ಯಾದಿ ಸೂತ್ರದಲ್ಲಿ ಸರ್ವಶರೀರತ್ವ ಹೇಳಿದ್ದು ಕಾಣಿಸುತ್ತಿಲ್ಲ. ಹಾಗೆಯೇ ಮೂರನೇ ಪಾದದ 'ಭೂಮಾ ಸಂಪ್ರಸಾದಾತ್' ಇತ್ಯಾದಿಸೂತ್ರದಲ್ಲಿಯೂ ಸರ್ವಾತ್ಮಕತ್ವ ಹೇಳಿದ್ದು ಕಾಣಿಸುತ್ತಿಲ್ಲ.

ಮತ್ತು ಶ್ರುತಿಸ್ಮೃತಿಗಳಿಗೆ ಅನುಸಾರಿಯಾಗಿ ಒಂದೇ ಪಾದದಲ್ಲಿ ಸರ್ವಗತತ್ವ, ಅತ್ತೃತ್ವ ದ್ಯುಭ್ವಾದ್ಯಾಯತನತ್ವ ಪೂರ್ಣತ್ವ ಮೊದಲಾದ ಅನೇಕ ಗುಣಗಳನ್ನು ಸಮನ್ವಯ ಮಾಡಲಾಗಿದೆ ಎಂದು ಹೇಳಲು ಬರುವಾಗ ಒಂದು ಪಾದದಲ್ಲಿ ಒಂದೊಂದೇ ಗುಣಗಳನ್ನು ಪ್ರತಿಪಾದಿಸಲಾಗಿದೆ ಎಂಬುದು ತಪ್ಪಲ್ಲವೇ? ಒಂದೊಂದು ಗುಣಗಳ ಪ್ರತಿಪಾದನೆಗಾಗಿ ಒಂದೊಂದು ಪಾದವೆಂದು ಹೇಳುವುದಾದರೆ ಆ ಒಂದು ಗುಣ ಒಂದೇ ಅಧಿಕರಣದಿಂದ ಸಿದ್ಧವಾಗುವಾಗ ಉಳಿದ ಅಧಿಕರಣ-ಗಳೆಲ್ಲವೂ ವ್ಯರ್ಥವಾಗುತ್ತವೆ.

ಬ್ರಹ್ಮನ ಕಾರ್ಯವಾಗದ ವಸ್ತು ಇಲ್ಲ. ಬ್ರಹ್ಮನ ಶರೀರವಾಗದ ವಸ್ತು ಇಲ್ಲವೆಂದು ಪ್ರತಿಪಾದಿಸಲು ನಾಲ್ಕನೆಯ ಪಾದ ಹೊರಟಿದೆಯೆಂಬುದೂ ತಪ್ಪು. 'ನ ವಿಯದಶ್ರುತೇಃ' ಎಂಬ ಸೂತ್ರದಲ್ಲಿ ಸಕಲ

ಪದಾರ್ಥಗಳು ಬ್ರಹ್ಮನಿಂದಲೇ ಹುಟ್ಟುತ್ತವೆಂದು ಸಮರ್ಥಿಸಿದ್ದರಿಂದ ಬ್ರಹ್ಮನ ಕಾರ್ಯವಲ್ಲದ ವಸ್ತುವೇ ಇಲ್ಲವೆಂಬುದನ್ನು 'ನ ವಿಯದಶ್ರುತೇಃ' ಎಂಬುದರಿಂದಲೇ ನಿರಾಸ ಮಾಡಿದ್ದಾಗಿದೆ. ಹಾಗೆಯೇ 'ಅಂತರ್ಯಾಮ್ಯಧಿದೈವಾದಿಷು' ಎಂಬ ಸೂತ್ರದಲ್ಲಿ ಬ್ರಹ್ಮನ ಶರೀರವಾಗದ ವಸ್ತುವೇ ಇಲ್ಲವೆಂಬುದನ್ನು ನಿರಾಸ ಮಾಡಿದ್ದಾಗಿದೆ. ಹೀಗಿರುವಾಗ ಪುನಃ ನಾಲ್ಕನೆಯ ಪಾದವು ಬೇಕಾಗಿಲ್ಲ. ಒಂದು ವೇಳೆ ಚತುರ್ಥಪಾದದಲ್ಲಿ ಇವುಗಳನ್ನು ಪ್ರತಿಪಾದಿಸಿದರೆ ಸಮನ್ವಯಾಧ್ಯಾಯದಲ್ಲಿ ಅದಕ್ಕೆ ಸಂಗತಿಯೇ ಸಿಗುವುದಿಲ್ಲ. ಆದ್ದರಿಂದ ಪರರು ನಿರೂಪಿಸುವ ಪಾದೋಪಾಧಿಗಳು ಸಮಂಜಸವಾಗಿಲ್ಲ. ಇದನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡೇ ಶ್ರೀಮದಾಚಾರ್ಯರು 'ನಾನ್ಯಥಾ ತದದೃಷ್ಟೇಃ' ಎಂಬ ತೂಕದ ಮಾತನ್ನು ಹೇಳಿದ್ದಾರೆ.

### ಕಠಿಣಪದಾರ್ಥ

ಸರ್ವಶರೀರತ್ವಮ್ = ಎಲ್ಲವೂ ಬ್ರಹ್ಮನ ಶರೀರವೆಂದು, ಸರ್ವಾತ್ಮಕತ್ವಮ್ = ಎಲ್ಲದರಲ್ಲೂ ವಿಶೇಷಣವಾಗಿದ್ದಾನೆಂದು, ಅತತ್‌ಕಾರ್ಯಾತಚ್ಛರೀರವತ್ತ್ವಾಭಾವಃ = ಬ್ರಹ್ಮನ ಕಾರ್ಯವಾಗದ ಬ್ರಹ್ಮನ ಶರೀರವಾಗದ ವಸ್ತುವೇ ಇಲ್ಲವೆಂದು, ತದೇತತ್ = ಈ ಎರಡು ಮತಗಳಿಗಿರುವ ದೋಷವನ್ನು.

**प्रकाशः** – प्रकारान्तरमाशङ्कते – **नन्विति** ।। अधिकरणान्युत्तरत्र स्पष्टानि । अस्पष्टत्वं व्यनक्ति – **तथा हीति** ।। अन्यथापदस्यार्थान्तरमुपेत्य परोक्तं त्रिपाद्यामवान्तरपादोपाध्यन्तरमप्यनूद्य निराह – **यच्चेति** ।। 'ब्रह्मणः' इति शेषः ।।

**अतत्कार्येति** ।। ब्रह्माकार्यं ब्रह्माशरीरं वस्तु नेत्युच्यत इत्यर्थः । यदि एकैकगुणबोधकत्वं पादार्थः, तर्हि एकैकाधिकरणेनैव तत्सिद्धेरधिकरणान्तरवैयर्थ्यम् इत्याह – **अन्तर्यामीति** ।। **द्वितीय इति** । अन्यासौ पादोपाधी इत्याह – **अदृश्यत्वादीति** ।। विषयवाक्यभूतश्रुतिसूत्रयोरनुगुणश्चायं पादोपाधिरित्याह – **श्रुतीति** ।। चतुर्थपादार्थं निराह – **अतत्कार्येति** ।। वियत्पाद इत्यर्थः । अतत्कार्यातच्छरीरवस्त्वभावपरत्वे दोषान्तरमाह – **चतुर्थस्येति** ।। मतद्वयदूषणमुपसंहरति – **तस्मादिति** ।। **तदेतदिति** ।। मतद्वयदूषणमित्यर्थः । टीकोपलक्षणमिति भावः । एतेनाद्वैतमतानुरोधेन पादोपाधीन् वर्णयन् कश्चिदपि प्रत्यूढो बोध्यः ।

**गुरुराजीयम्** – ननु 'अव्यक्तात्पुरुषः परः' इति वाक्येऽवरत्वस्य, 'अजामेकाम्' इत्यत्र शुक्लकृष्णात्मकत्वस्य, 'यस्मिन्पञ्च' इत्यत्र बहुरूपत्वस्य चास्पष्टत्वाभाव इत्याशङ्क्याह – **तथा हीति** ।। अवरत्वादिकं च प्रधानादिक-

मीश्वराधीनमित्यत्रैव हेतुः । न त्वनधीनत्व इति भावः । प्रकारान्तरेण त्रिपाद्या असाङ्कर्यं दूषयितुमनुवदति – **यच्चोक्तमिति** ।।

**अतत्कार्येति** ।। अतत्कार्यं ब्रह्माकार्यम् । अतच्छरीरं ब्रह्माशरीरं यद्वस्तु तदभाव इत्यर्थः । सर्वशरीरत्वं नाम सुखदुःखावच्छेदकत्वरूपं नियम्यत्वरूपत्वं वा । नाद्यः । ब्रह्मणो दुःखरहितत्वेनैतादृशशरीरत्वानङ्गीकारात् । नान्त्यः । तस्यान्तर्यामीत्यत्रैवोक्तत्वेन पादार्थत्वायोगात् । तथा सर्वात्मकत्वं नाम सर्वरूपत्वं वा सर्वप्रकारित्वं वा । नाद्यः । तस्यानङ्गीकारात् । नान्त्यः । तस्य द्युभ्वादीत्यत्रैवोक्तत्वेन पादार्थत्वासम्भवादित्याह – **द्वितीय इत्यादिना** ।। सर्वप्रकारित्वं सर्वविशेषणत्वम् । तद्विवरणरूपत्वादवैयर्थ्यमित्यत आह – **द्वितीय इति** ।। तथाचाप्रतीयमानत्वान्न पादार्थत्वमिति भावः । किं चास्मदुक्तरीत्याऽनेकगुणपरत्वसम्भव एकगुणपरत्वं न युक्तमित्याह – **श्रुतिसूत्रेति** ।। तुरीयपादार्थं दूषयति – **अतत्कार्येति** ।। परोक्तपादभेददूषणमुपसंहरति – तस्मादिति ।।

ವಿವರಣೆ - ಚತುರ್ಥಪಾದಪ್ರಮೇಯವನ್ನು ಮತ್ತೊಂದು ಬಗೆಯಲ್ಲಿ ಶಂಕಿಸುತ್ತಿದ್ದಾರೆ. 'ನನು' ಇತ್ಯಾದಿಯಾಗಿ.

ಆನುಮಾನಿಕಾಧಿಕರಣವೇ ಮೊದಲಾದ ಅಧಿಕರಣಗಳನ್ನು ಮುಂದೆ ವಿವರಿಸುತ್ತೇವೆ. ಪೂರ್ವಪಕ್ಷಹೇತುಗಳಲ್ಲಿರುವ ಅಸ್ಪಷ್ಟತೆಯನ್ನು 'ತಥಾ ಹಿ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

'ನಾನ್ಯಥಾ ತದದೃಷ್ಟೇಃ' ಎಂಬ ಆಚಾರ್ಯರ ಮಾತಿಗೆ ಮತ್ತೊಂದು ವ್ಯಾಖ್ಯಾನವನ್ನು 'ಯಚ್ಚೋಕ್ತಂ' ಇತ್ಯಾದಿಯಾಗಿ ಮಾಡುತ್ತಿದ್ದಾರೆ.

ದ್ವಿತೀಯ ತೃತೀಯಪಾದೋಪಾಧಿಗಳು ಅವ್ಯಾಪ್ತವಾಗಿವೆಯೆಂದು 'ಅದೃಶ್ಯತ್ವಾದಿಗುಣಕಃ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ನೀವು ಹೇಳುವ ಪಾದೋಪಾಧಿಗಳು ಶ್ರುತಿ ಮತ್ತು ಸ್ಮೃತಿಗಳಿಗೆ ಅನನುಗುಣವಾಗಿದೆಯೆಂದು 'ಶ್ರುತಿಸೂತ್ರಾನುಸಾರೇಣ' ಇತ್ಯಾದಿವಾಕ್ಯದಿಂದ ಹೇಳುತ್ತಿದ್ದಾರೆ. ನಾಲ್ಕನೇ ಪಾದದ ಪ್ರಮೇಯವನ್ನು ತತ್ ಕಾರ್ಯ ಇತ್ಯಾದಿಯಾಗಿ ನಿರಾಕರಿಸುತ್ತಿದ್ದಾರೆ. ಚತುರ್ಥಪಾದಪ್ರಮೇಯಕ್ಕೆ 'ಚತುರ್ಥಸ್ಯ' ಇತ್ಯಾದಿವಾಕ್ಯದಿಂದ ಮತ್ತೊಂದು ದೋಷ ಹೇಳುತ್ತಿದ್ದಾರೆ.

ಅದ್ವೈತಿಗಳ ಹಾಗೂ ವಿಶಿಷ್ಟಾದ್ವೈತಿಗಳ ಮತಕ್ಕೆ ಹೇಳಿದ ದೋಷಗಳನ್ನು 'ತಸ್ಮಾತ್' ಎಂದು ಉಪಸಂಹಾರ ಮಾಡುತ್ತಿದ್ದಾರೆ. ಈ ಎಲ್ಲ ದೋಷಗಳನ್ನು ಆಚಾರ್ಯರು 'ನಾನ್ಯಥಾ ತದದೃಷ್ಟೇಃ' ಎಂಬ ಒಂದೇ ಮಾತಿನಿಂದ ಸೂಚಿಸಿದ್ದಾರೆ. ಟೀಕಾರಾಯರೂ ಸಹ ಈ ಎಲ್ಲ ದೋಷಗಳನ್ನು ಟೀಕೆಯಲ್ಲಿ ಸೂಚಿಸಿದ್ದಾರೆ.

ಇನ್ನು ಶೈವರೂ ಕೂಡ ಅದ್ವೈತಿಗಳಂತೆ ಪಾದೋಪಾಧಿಗಳನ್ನು ವರ್ಣಿಸಲು ಮುನ್ನುಗ್ಗಿದ್ದಾರೆ. ಆದರೆ ಅದ್ವೈತಿಗಳಿಗೆ ಬರುವ ಎಲ್ಲ ದೋಷಗಳು ಅವರಿಗೂ ತಪ್ಪಿದ್ದಲ್ಲ.




ಯಾವ ವಿಷಯವಾಕ್ಯಗಳಲ್ಲಿ ಪೂರ್ವಪಕ್ಷದ ಹೇತು ಸ್ಪಷ್ಟವಾಗಿರುತ್ತದೋ. ಆ ವಿಷಯವಾಕ್ಯಗಳನ್ನು ನಾಲ್ಕನೇ ಪಾದ ಸಮರ್ಥಿಸುತ್ತದೆಂದು ರಾಮಾನುಜರು ತಮ್ಮ ಅಭಿಪ್ರಾಯವನ್ನು ವ್ಯತ್ಯಾಸ ಮಾಡಿಕೊಳ್ಳುತ್ತಾರೆ.

ಆದರೆ ಈ ಅಭಿಪ್ರಾಯಕ್ಕೂ ವಿರುದ್ಧವಾದ ನಡುವಳಿಕೆಯೇ ಅವರಲ್ಲಿ ಕಾಣಿಸುತ್ತಿದೆ. ಆನುಮಾನಿಕಾಧಿಕರಣದಲ್ಲಿ ಜ್ಯೋತಿರುಪಕ್ರಮಾಧಿಕರಣದಲ್ಲಿ ನಸಂಖ್ಯೋಪಸಂಗ್ರಹಾಧಿಕರಣದಲ್ಲಿ ಪೂರ್ವಪಕ್ಷದ ಹೇತು ಸ್ಪಷ್ಟವಾಗಿ ಕಾಣಿಸುತ್ತಿಲ್ಲ. ಈಶ್ವರಾಧೀನವಾಗದ ಪ್ರಧಾನವು ಜಗತ್ಕಾರಣವಾಗಿದೆಯೆಂದು ಅಲ್ಲಿನ ವಿಷಯವಾಕ್ಯಗಳು ನಿಖರವಾಗಿ ಹೇಳುತ್ತಲೇ ಇಲ್ಲ.

ರಾಮಾನುಜರು ಮತ್ತೊಂದು ಬಗೆಯಲ್ಲಿಯೂ ಪಾದೋಪಾಧಿಗಳನ್ನು ನಿರೂಪಿಸಲು ಪ್ರಯತ್ನಿಸಿದ್ದಾರೆ. ಎರಡನೆಯ ಪಾದವು ಬ್ರಹ್ಮನಿಗೆ ಸರ್ವಶರೀರತ್ವವನ್ನು ಮೂರನೆಯ ಪಾದವು ಸರ್ವಾತ್ಮಕತ್ವವನ್ನು, ನಾಲ್ಕನೆಯ ಪಾದವು ಬ್ರಹ್ಮನ ಕಾರ್ಯವಾಗದ ಬ್ರಹ್ಮನ ಶರೀರವಾಗದ ವಸ್ತುವೇ ಇಲ್ಲವೆಂದು ಪ್ರತಿಪಾದಿಸುತ್ತಿದೆಯೆಂದು ಹೇಳುತ್ತಾರೆ. ಆದರೆ ಈ ವಿಷಯಗಳನ್ನೆಲ್ಲ ಪ್ರತಿಪಾದನೆ ಮಾಡಲು ಸಂಪೂರ್ಣ ಪಾದವೇನು ಬೇಕಾಗಿಲ್ಲ. ಒಂದೊಂದು ಅಧಿಕರಣಗಳಷ್ಟೇ ಸಾಕು. ಒಂದು ಅಧಿಕರಣದಿಂದ ಸರ್ವಶರೀರತ್ವಾದಿಗಳು ತಿಳಿದಾಗ ಉಳಿದ ಅಧಿಕರಣಗಳು ವ್ಯರ್ಥವಾಗುತ್ತವೆ. ಒಂದು ಪಾದದಲ್ಲಿ ಅನೇಕಗುಣಗಳನ್ನು ಸುಲಭವಾಗಿ ಸಮನ್ವಯ ಮಾಡಲು ಬರುವಾಗ ಒಂದೇ ಗುಣವನ್ನು ಸಮನ್ವಯ ಮಾಡುವುದು ಅತ್ಯಂತ ಅನುಚಿತ.



## ಸಮನ್ವಯ ಶ್ರುತಿಸಿದ್ಧವಾದರೂ ಪ್ರಥಮಾಧ್ಯಾಯ ಅನಿವಾರ್ಯ

**तात्पर्यचन्द्रिका—**

**अत्र च "सर्वे वेदा यत्पदमामनन्ति" इत्यादिश्रुत्युक्तस्यापि समन्वयस्य बाधकोद्धारादिना स्थापनार्थमयमध्यायस्सफलः, यथा "स एष यज्ञः पञ्चविधोऽग्निहोत्रं दर्शपौर्णमासौ चातुर्मास्यानि पशुः सोमः" इत्यादिश्रुतिसिद्धाग्निहोत्रादिपदनामधेयत्वस्थापनार्थं नामधेयपादः ॥**

ಅನುವಾದ : - ಸಮನ್ವಯಕ್ಕೋಸ್ಕರ ಈ ಅಧ್ಯಾಯ ಹೊರಟಿದೆ. ಆದರೆ 'ಸರ್ವೇ ವೇದಾಃ ಯತ್ಪದಮಾಮನಂತಿ' ಇತ್ಯಾದಿ ಶ್ರುತಿಯಲ್ಲಿಯೇ ಸರ್ವಸಮನ್ವಯವನ್ನು ಹೇಳಿರುವಾಗ ಈ ಅಧ್ಯಾಯ

ವ್ಯರ್ಥವಲ್ಲವೇ? ಎಂದರೆ ಹಾಗೇನಿಲ್ಲ. ಸಮನ್ವಯ ವಿಷಯದಲ್ಲಿ ಬರುವ ಬಾಧಕಗಳನ್ನೆಲ್ಲ ಪರಿಹರಿಸಿ ಅನೇಕ ನ್ಯಾಯಗಳ ಮೂಲಕ ಸಮನ್ವಯದ ಸ್ಥಾಪನೆಗಾಗಿ ಈ ಅಧ್ಯಾಯವು ಸಾರ್ಥಕವಾಗಿದೆ.

ಈ ವಿಷಯದಲ್ಲಿ ಪೂರ್ವಮೀಮಾಂಸೆ ಉದಾಹರಣೆಯಾಗಿದೆ - 'ಸ ಏಷಃ ಯಜ್ಞಃ ಪಂಚವಿಧೋಗ್ನಿಹೋತ್ರಂ ದರ್ಶಪೌರ್ಣಮಾಸೌ ಚಾತುರ್ಮಾಸ್ಯಾನಿ ಪಶುಃ ಸೋಮಃ' ಎಂಬ ಶ್ರುತಿಯಿಂದಲೇ ಅಗ್ನಿಹೋತ್ರಾದಿಶಬ್ದಗಳಿಗೆ ನಾಮಧೇಯತ್ವವು ಸಿದ್ಧವಾಗಿದೆ. ಆದರೂ ಸಹ ನಾಮಧೇಯತ್ವವಿಷಯದಲ್ಲಿರುವ ಬಾಧಕವನ್ನು ಪರಿಹರಿಸುವ ಮೂಲಕ ನಾಮಧೇಯತ್ವವನ್ನು ಸ್ಥಾಪನೆ ಮಾಡಲು ಪೂರ್ವಮೀಮಾಂಸೆಯ ನಾಲ್ಕನೇಪಾದ ಹೊರಟಿದೆ.

**प्रकाशः** – एवं पादोपाधीन् स्वाभिमतान् समर्थ्य, पराभिमतांश्च निरस्येदानीं श्रुतावेवोक्तस्य समन्वयस्य व्युत्पादनं व्यर्थमित्यतोऽध्यायस्य फलमाह – **अत्र चेति** ।। अस्मिन् शास्त्र इत्यर्थः । विशिष्य न्यायैः प्रपञ्चनमादिपदार्थः । अत एव सुधायां श्रौतस्य प्रयोजनस्य न्यायेनोपपादनार्थं आद्यं सूत्रम्'' इत्युक्तत्वेनैतच्छङ्का-समाधिरप्युक्तप्राय इति, 'सर्वे वेदा आमनन्ति यत्पदं त्विति हि श्रुतिः ।' इत्येतद्व्याख्यावसरे पृथगेतच्छङ्कासमाधी द्वावपि नोक्ताविति भावः ।।

**यथेति** ।। तत्तत्कर्मवाक्योपात्तानामग्निहोत्रादिशब्दानां धर्मे प्रामाण्यादिप्रकारा-पेक्षायामैतरेयादौ ''स एषः'' इत्यादियज्ञविभाजकवाक्येषु नामधेयत्वेन निर्देशे सत्यपि तन्निर्वाहाय बाधकोद्धारादिना व्यवस्थापनार्थमाद्याध्यायचतुर्थपादारम्भो यथा पूर्वतन्त्रे, तथाऽत्रापीत्यर्थः । सोमशब्दो यद्यपि द्रव्यवचनः, तथाऽपि ''अव्यक्ता सुतसोमस्य'' इत्यादाविव लक्षणया कर्मविषयत्वेन निर्देश इति ध्येयम् ।

**गुरुराजीयम्** – नन्वध्यायोयमनारम्भणीयः । प्रयोजनाभावात् । नच समन्वयसिद्धिरेव प्रयोजनमिति वाच्यम् । तस्य 'सर्वे वेदाः' इत्यादिश्रुत्यैव प्रमितत्वात् । न हि श्रौतेऽर्थे कश्चिदपि प्रतिपद्यत इत्यत आह – **अत्र चेति** ।। तथाचाध्यायस्य साक्षात्समन्वयप्रतिपादकत्वेपि श्रुत्युक्तसमन्वये बाधकोद्धारेण तत्स्थापकत्वान्न वैयर्थ्यमिति भावः । यद्वा एवं परोदीरितपादार्थं तत्क्रमं चानूद्य दूषयित्वा स्वमतेन पदार्थमुक्त्वा तत्क्रमश्च व्युत्पादितः । इदानीमध्यायस्य साफल्यं दृष्टान्तपूर्वकमुपपादयति – **अत्र चेति** ।। आदिपदेन साधकान्तरोक्तिग्रहणम् ।

ವಿವರಣೆ - ಇಲ್ಲಿಯ ತನಕ ನಮಗೆ ಸಮ್ಮತವಾದ ಪಾದೋಪಾಧಿಗಳನ್ನು ಸಮರ್ಥಿಸಿ, ಪರಾಭಿಮತವಾದ ಪಾದೋಪಾಧಿಗಳನ್ನು ನಿರಾಸ ಮಾಡಿದ್ದಾಯಿತು. ಈಗ ಶ್ರುತಿಯಲ್ಲಿಯೇ ಸಕಲಸಮನ್ವಯವನ್ನು ಹೇಳಿರುವಾಗ ಈ ಅಧ್ಯಾಯದಲ್ಲಿ ಸಮನ್ವಯ ಮಾಡುವುದು ವ್ಯರ್ಥ ಎಂಬ ಆಶಂಕೆಗೆ ಉತ್ತರಿಸಲು ಪ್ರಥಮಾಧ್ಯಾಯಕ್ಕೆ ಪ್ರಯೋಜನವನ್ನು ಸಮರ್ಥಿಸುತ್ತಿದ್ದಾರೆ.

'ವಸ್ತುತಃ ಟೀಕೆಯಲ್ಲಿ ಸರ್ವೇ ವೇದಾಃ' ಇತ್ಯಾದಿ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನಿಸುವಾಗ ಸುಧೆಯಲ್ಲಿ ಈ ಆಕ್ಷೇಪ ಸಮಾಧಾನಗಳನ್ನು ಮಾಡಬೇಕಿತ್ತು. ಆದರೆ ಮೊದಲನೆಯ ಸೂತ್ರದಲ್ಲಿಯೇ ಇದನ್ನು ಹೇಳಿದ್ದಾಗಿದೆಯೆಂದು ಪುನಃ ಹೇಳಲು ಹೋಗಿಲ್ಲ. ಶ್ರುತಿಯಲ್ಲಿಯೇ ಸಿದ್ಧವಾದ ಸಮನ್ವಯವನ್ನು ನ್ಯಾಯಗಳಿಂದ ಉಪಪಾದಿಸಲು ಪ್ರಥಮಸೂತ್ರವು ಸಾರ್ಥಕವಾಗಿದೆಯೆಂಬ ಟೀಕೆಯ ಮಾತಿನಿಂದಲೇ ಈ ಆಕ್ಷೇಪ ಸಮಾಧಾನಗಳು ಇಲ್ಲಿ ಸೂಚಿತವಾಗುತ್ತವೆ.

'ಸಃ ಏಷಃ ಯಜ್ಞಃ' ಎಂಬ ವಾಕ್ಯವು ಐದು ಯಜ್ಞಗಳನ್ನು ವಿಧಿಸುತ್ತಿದೆ. ಆದ್ದರಿಂದ ಇದು ಕರ್ಮಪ್ರತಿಪಾದಕವಾದ ಯಜ್ಞವಿಭಾಜಕವಾಕ್ಯ. ಈ ವಾಕ್ಯದಲ್ಲಿ ಕೇಳಿಸುತ್ತಿರುವ ಶಬ್ದಗಳೆಲ್ಲ ನಾಮಧೇಯಗಳಾಗಿವೆ. ವಸ್ತುತಃ ಶ್ರುತಿಯಲ್ಲಿ ಪಂಚವಿಧವೆಂದು ಹೇಳಿ ಅಗ್ನಿಹೋತ್ರ ದರ್ಶಪೂರ್ಣಮಾಸ ಚಾತುರ್ಮಾಸ್ಯ ಇತ್ಯಾದಿಯಾಗಿ ಹೇಳಿದ್ದರಿಂದ ಈ ಶಬ್ದಗಳೆಲ್ಲವೂ ಕರ್ಮದ ನಾಮಧೇಯಗಳೆಂದು ತಿಳಿಯುತ್ತದೆ. ಆದರೂ ಸಹ ಇದರ ಮೇಲೆ ಬರುವ ಬಾಧಕಗಳನ್ನು ಪರಿಹರಿಸಿ ನಾಮಧೇಯತ್ವವನ್ನು ಸಮರ್ಥಿಸಲು ಪೂರ್ವಮೀಮಾಂಸೆಯ ಚತುರ್ಥಪಾದ ಹೊರಟಿದೆ. ಅಗ್ನಿಹೋತ್ರಾದಿಶಬ್ದಗಳು ಅಗ್ನಿಹೋತ್ರಾದಿಕರ್ಮಗಳ ನಾಮಧೇಯವಾಗದಿದ್ದರೆ ಧರ್ಮದಲ್ಲಿ ಪ್ರಾಮಾಣ್ಯವೇ ಬರುವುದಿಲ್ಲ. ಯಾಗದ ನಾಮಧೇಯವಾದರೆ ಯಾಗದ ಹೆಸರಾದ್ದರಿಂದಲೇ ಪ್ರಮಾಣವಾಗುತ್ತದೆಂದು ತಿಳಿಯುತ್ತದೆ. ಶ್ರುತಿಯಲ್ಲಿರುವ ಸೋಮಶಬ್ದವು ದ್ರವ್ಯವಾಚಕವಾಗಿದ್ದರೂ 'ಅವ್ಯಕ್ತಾ ಸುತಸೋಮಸ್ಯ' ಎಂಬಂತೆ ಲಕ್ಷಣಯಾ ಕರ್ಮವಾಚಿಯಾಗಿದೆ. ಹೀಗೆ ಪೂರ್ವಮೀಮಾಂಸೆಯ ದೃಷ್ಟಾಂತದಿಂದ ಪ್ರಕೃತದಲ್ಲಿಯೂ ಶ್ರುತ್ಯುಕ್ತವಾದದ್ದನ್ನೇ ಸಮನ್ವಯಾಧ್ಯಾಯವು ಬಾಧಕೋದ್ಧಾರದಿಂದ ಸಮರ್ಥಿಸಬಹುದು.

## ಸಾರ

ಸಮನ್ವಯಕ್ಕೋಸ್ಕರ ಈ ಅಧ್ಯಾಯ ಹೊರಟಿದೆ. ಆದರೆ 'ಸರ್ವೇ ವೇದಾಃ ಯತ್ಪದಮಾಮನಂತಿ' ಇತ್ಯಾದಿ ಶ್ರುತಿಯಲ್ಲಿಯೇ ಸರ್ವಸಮನ್ವಯವನ್ನು ಹೇಳಿರುವಾಗ ಈ ಅಧ್ಯಾಯ ವ್ಯರ್ಥವಲ್ಲವೇ? ಎಂದರೆ ಹಾಗೇನಿಲ್ಲ. ಸಮನ್ವಯ ವಿಷಯದಲ್ಲಿ ಬರುವ ಬಾಧಕಗಳನ್ನೆಲ್ಲ ಪರಿಹರಿಸಿ ಅನೇಕ ನ್ಯಾಯಗಳ ಮೂಲಕ ಸಮನ್ವಯದ ಸ್ಥಾಪನೆಗಾಗಿ ಈ ಅಧ್ಯಾಯವು ಸಾರ್ಥಕವಾಗಿದೆ.

## ಐದು ಸಂಗತಿಗಳ ನಿರೂಪಣೆ

### तात्पर्यचन्द्रिका

शास्त्रेऽध्याये तथा पादे श्रुत्याऽधिकरणेन च ।
सङ्गतिः पञ्चधा प्रोक्ता सर्वाधिकरणेष्वपि ।।

तत्र चाद्यत्रिकं प्रायेणान्तर्भावात्मकं मतम् ।
उत्तरं तु द्वयं प्रोक्तमानन्तर्यात्मकं सदा ।।

अध्याययोः पादयोरप्यानन्तर्यात्मिकैव हि ।
तत्राद्यत्रितयं स्पष्टमस्पष्टं तु परं द्वयम् ।।

व्यध्याय्यां च त्रिपाद्यां च द्विपाद्यां चापि सङ्गतिः ।
ऊहनीया यथा योगमिति सङ्गतिसङ्ग्रहः ।।

पेटिकासङ्गतिस्तु न सार्वत्रिकी । तत्तदधिकरणसङ्गतेस्तत्तदधिकरणविषयवाक्यभूतश्रुतिसङ्गत्या अविनाभाव एव, न त्वभेद इति, सा पृथक् ।

ईक्षत्यधिकरणादेः समन्वयाध्यायादिना सङ्गतेरानन्तर्यरूपत्वेनान्तर्भावरूपत्वाभावात् तस्याः प्रायिकता । अधिकरणस्याधिकरणान्तरे, पादस्य पादान्तरे, अध्यायस्य वाध्यायान्तरे अन्तर्भावाभावात् आनन्तर्यमेव नियतम् ।

तत्र शास्त्राध्यायपादसङ्गतीनां सर्वत्र स्पष्टत्वात् भाष्ये क्वापि तदनुक्तिः । श्रुत्यधिकरणसङ्गती त्वस्पष्टे इति ते सर्वत्र भाष्ये वक्ष्येते ।

एवं पूर्वतन्त्रे उपदेशातिदेशविषयत्वेन पूर्वोत्तरशकटद्वयवदिहापि अनुव्याख्याने – 'समन्वयाविरोधाभ्यां सञ्जाते वस्तुनिर्णये' इत्युक्तत्वात् सिद्धरूपविषयसाध्यरूपसाधनफलप्रतिपादकत्वेन पूर्वोत्तरद्विकभेदसम्भवात् तत्स्थाधिकरणानां यथायोगं द्विकसङ्गतिरूह्या ।

एवं पूर्वतन्त्रेऽविनियोगसमुत्थाप्रामाण्यनिरासकत्वेन द्वितीयादिपादत्रयस्यैकार्थत्वेन त्रिपादीत्ववदिहाप्यनुव्याख्याने – 'महासमन्वये तस्मिन् नाधि-

कारोऽखिलस्य हि' इत्युक्तत्वेन चतुर्थपादस्यासर्वाधिकारिकतया आद्यादिपादत्रयस्य सर्वाधिकारिकत्वेन त्रिपादीत्वसम्भवात् तत्स्थाधिकरणानां तत्सङ्गतिः, तथाऽऽद्यादि पादद्वयस्यान्यत्रप्रसिद्धविषयत्वेन द्विपादीत्वसम्भवात्तत्स्थाधिकरणानां तत्सङ्गति-रप्यूह्या ।

आक्षेपिक्यतिदेशिक्यावुपोद्घातापवादते ।
प्रसङ्गश्चेत्यादिरूपा सा चानन्तर्यलक्षणा ॥

आनन्तर्यलक्षणाऽपि सङ्गतिः आक्षेपिकी, अतिदेशिकी, औपोद्घातिकी, आपवादिकी, प्रासङ्गिकी इत्यादिरूपेण बहुविधा । आसां स्वरूपमुत्तराधिकरणेषु व्यक्तं भविष्यति ।

ಅನುವಾದ - ಶಾಸ್ತ್ರ ಸಂಗತಿ,

ಶಾಸ್ತ್ರಾಧ್ಯಾಯೇ ತಥಾ ಪಾದೇ ಶ್ರುತ್ಯಾಽಧಿಕರಣೇನ ಚ ।
ಸಂಗತಿಃ ಪಂಚಧಾ ಪ್ರೋಕ್ತಾ ಸರ್ವಾಧಿಕರಣೇಷ್ವಪಿ ॥

ಅಧ್ಯಾಯಸಂಗತಿ, ಪಾದಸಂಗತಿ, ಶ್ರುತಿಸಂಗತಿ, ಅಧಿಕರಣಸಂಗತಿ ಎಂದು ಐದು ವಿಧಸಂಗತಿಗಳು ಪ್ರತಿಯೊಂದು ಅಧಿಕರಣಗಳಲ್ಲಿಯೂ ಹೇಳಲ್ಪಟ್ಟಿವೆ.

ತತ್ರ ಆದ್ಯತ್ರಿಕಂ ಪ್ರಾಯೇಣಾಂತರ್ಭಾವಾತ್ಮಕಂ ಮತಮ್ ।
ಉತ್ತರಂ ತು ದ್ವಯಂ ಪ್ರೋಕ್ತಮಾನಂತರ್ಯಾತ್ಮಕಂ ಸದಾ ॥

ಐದುವಿಧ ಸಂಗತಿಗಳಲ್ಲಿ ಮೊದಲ ಮೂರು ಸಂಗತಿಗಳು ಅಂತರ್ಭಾವರೂಪವಾಗಿವೆ. ಉಳಿದೆರೆಡು ಆನಂತರ್ಯರೂಪಗಳಾಗಿವೆ.

ಅಧ್ಯಾಯಯೋಃ ಪಾದಯೋರಪ್ಯಾನಂತರ್ಯಾತ್ಮಿಕೈವ ಹಿ ।
ತತ್ರಾದ್ಯತ್ರಿತಯಂ ಸ್ಪಷ್ಟಮಸ್ಪಷ್ಟಂ ತು ಪರಂ ದ್ವಯಮ್ ।

ಒಂದು ಅಧ್ಯಾಯದಿಂದ ಮತ್ತೊಂದು ಅಧ್ಯಾಯಕ್ಕೆ ಒಂದು ಪಾದದಿಂದ ಮತ್ತೊಂದು ಪಾದಕ್ಕೆ ಆನಂತರ್ಯ ಎಂಬ ಸಂಗತಿಯನ್ನು ಹೇಳಬೇಕು. ಐದು ಸಂಗತಿಗಳಲ್ಲಿ ಮೊದಲ ಮೂರು ಸಂಗತಿಗಳು ಸ್ಪಷ್ಟವಾಗಿವೆ. ಅನಂತರದ ಎರಡು ಸಂಗತಿಗಳು ಅಸ್ಪಷ್ಟವಾಗಿವೆ.

ದ್ವ್ಯಧ್ಯಾಯ್ಯಾಂ ಚ ತ್ರಿಪಾದ್ಯಾಂ ಚ ದ್ವಿಪಾದ್ಯಾಂ ಚಾಪಿ ಸಂಗತಿಃ ।
ಊಹನೀಯಾ ಯಥಾ ಯೋಗಮಿತಿ ಸಂಗತಿಸಂಗ್ರಹಃ ॥

ಎರಡು ಅಧ್ಯಾಯಗಳಿಗಿರುವ ಏಕಾರ್ಥವನ್ನು ವಿವಕ್ಷಿಸಿ ಸಂಗತಿ ಹೇಳಬೇಕು. ಅದರಂತೆ ಮೂರು

ಪಾದಗಳಿಗೆ ಎರಡು ಪಾದಗಳಿಗಿರುವ ಸಂಗತಿಯನ್ನೂ ಸಮಾನಾರ್ಥದಿಂದ ಯಥಾಯೋಗ್ಯವಾಗಿ ಊಹಿಸಿಕೊಳ್ಳಬೇಕು.

ಪೇಟಿಕಾಸಂಗತಿಯನ್ನು ಎಲ್ಲೆಡೆ ಹೇಳಲು ಬರುವುದಿಲ್ಲ. ಇನ್ನು ಶ್ರುತಿಸಂಗತಿ ಇದ್ದಲ್ಲೆಲ್ಲ ಅಧಿಕರಣಸಂಗತಿ ಇರುತ್ತದೆ. ಜೊತೆಗೆ ಇದ್ದ ಮಾತ್ರದಿಂದ ಅವೆರಡಕ್ಕೆ ಅಭೇದವನ್ನು ಹೇಳಬಾರದು. ಆಯಾ ಅಧಿಕರಣಗಳ ವಿಷಯವಾಗಿರುವ ಶ್ರುತಿಯಿಂದ ಎಲ್ಲಿ ಸಂಗತಿ ಇರುತ್ತದೋ, ಅಲ್ಲಿ ಅಧಿಕರಣಸಂಗತಿಯೂ ಇರುತ್ತದೆ.

ಮೊದಲು ಮೂರು ಸಂಗತಿಗಳು ಪ್ರಾಯಿಕವಾಗಿ ಅಂತರ್ಭಾವರೂಪವಾಗಿರುತ್ತವೆ. ಇಲ್ಲಿ ಪ್ರಾಯಿಕವೆಂದು ಏಕೆ ಹೇಳಿದರೆಂದರೆ ಪಂಚಾಧಿಕರಣಗಳ ಅನಂತರ ಸಮನ್ವಯಾಧ್ಯಾಯ ಹೊರಡುತ್ತದೆ. ಇಲ್ಲಿ ಪಂಚಾಧಿಕರಣಗಳಿಗೂ ಸಮನ್ವಯಾಧ್ಯಾಯಕ್ಕೂ ಇರುವ ಸಂಗತಿಯು ಆನಂತರ್ಯರೂಪವೇ ಆಗಿರುತ್ತದೆ ಹೊರತು ಅಂತರ್ಭಾವರೂಪವಾಗಿಲ್ಲ. ಶ್ರುತಿಸಂಗತಿ ಮತ್ತು ಅಧಿಕರಣಸಂಗತಿಗಳು ನಿಯಮೇನ ಆನಂತರ್ಯರೂಪವೇ ಆಗಿರುತ್ತದೆ. ಏಕೆಂದರೆ ಒಂದು ಅಧಿಕರಣದಿಂದ ಮತ್ತೊಂದು ಅಧಿಕರಣಕ್ಕೆ ಒಂದು ಪಾದದಿಂದ ಮತ್ತೊಂದು ಪಾದಕ್ಕೆ ಒಂದು ಅಧ್ಯಾಯದಿಂದ ಮತ್ತೊಂದು ಅಧ್ಯಾಯಕ್ಕೆ ಅಂತರ್ಭಾವವನ್ನು ಹೇಳಲು ಸಾಧ್ಯವಿಲ್ಲದ ಕಾರಣ ಆನಂತರ್ಯವನ್ನೇ ಹೇಳಬೇಕು.

ಈ ಐದುವಿಧ ಸಂಗತಿಗಳಲ್ಲಿ ಶಾಸ್ತ್ರಸಂಗತಿ ಅಧ್ಯಾಯಸಂಗತಿ ಪಾದಸಂಗತಿಗಳು ಪ್ರತಿಯೊಂದು ಅಧಿಕರಣಗಳಲ್ಲಿ ಸ್ಪಷ್ಟವಾಗಿ ಇರುವುದರಿಂದ ಭಾಷ್ಯದಲ್ಲಿ ಎಲ್ಲಿಯೂ ಹೇಳುವುದಿಲ್ಲ. ಆದರೆ ಶ್ರುತಿಸಂಗತಿ ಅಧಿಕರಣಸಂಗತಿಗಳು ಸ್ಪಷ್ಟವಾಗಿ ಗೊತ್ತಾಗದಿರುವುದರಿಂದ ಎಲ್ಲ ಅಧಿಕರಣಗಳಲ್ಲಿ ಹೇಳಿದ್ದಾರೆ.

ಪೂರ್ವಮೀಮಾಂಸೆಯ ಹನ್ನೆರಡು ಅಧ್ಯಾಯಗಳಲ್ಲಿ ಉಪದೇಶಷಟ್ಕ ಅತಿದೇಶಷಟ್ಕ ಎಂದು ಎರಡು ಷಟ್ಕಗಳನ್ನು ಮಾಡಿದ್ದಾರೆ. ಮೊದಲ ಆರು ಅಧ್ಯಾಯಗಳಲ್ಲಿ ಉಪದೇಶವಾಕ್ಯಗಳನ್ನು ವಿಚಾರ ಮಾಡಿದ್ದಾರೆ. ಅನಂತರದ ಆರು ಅಧ್ಯಾಯಗಳಲ್ಲಿ ಅತಿದೇಶವಾಕ್ಯಗಳನ್ನು ವಿಚಾರ ಮಾಡಿದ್ದಾರೆ. ಅದರಂತೆ ಬ್ರಹ್ಮಮೀಮಾಂಸೆಯಲ್ಲಿಯೂ ಮೊದಲೆರಡು ಅಧ್ಯಾಯಗಳಲ್ಲಿ ಸಿದ್ಧನಾದ ಬ್ರಹ್ಮನನ್ನು ವಿಚಾರ ಮಾಡಲಾಗಿದೆ. ಪೂರ್ವಮೀಮಾಂಸೆಯಲ್ಲಿ ಷಟ್ಕದ್ವಯಗಳನ್ನು ಮಾಡಿದಂತೆ ಇಲ್ಲಿ ದ್ವಿಕದ್ವಯಗಳನ್ನು ಮಾಡಬೇಕು. ಒಂದೊಂದು ದ್ವಿಕಗಳಲ್ಲಿರುವ ಅಧಿಕರಣಗಳಿಗೂ ಯಥಾಯೋಗ್ಯವಾದ ಸಂಬಂಧವನ್ನು ತಿಳಿಯಬೇಕು.

ಇದರಂತೆ ಪೂರ್ವಮೀಮಾಂಸೆಯಲ್ಲಿ ಕಾರ್ಯಬೋಧಕವಾಗದ ವಾಕ್ಯಗಳು ಅಪ್ರಮಾಣವಾಗುತ್ತವೆಂದು ಹೇಳಿದ್ದಾರೆ. ಹೀಗೆ ಅವಿನಿಯೋಗದಿಂದ ಹುಟ್ಟಿದ ಅಪ್ರಾಮಾಣ್ಯವನ್ನು ನಿರಾಸ ಮಾಡುವುದಕ್ಕಾಗಿ ಎರಡು ಮೂರು ನಾಲ್ಕನೆಯ ಪಾದಗಳು ಹೊರಟಿವೆ. ಆ ಮೂರು

ಪಾದಗಳು ಒಂದೇ ಅರ್ಥವನ್ನು ಹೇಳುವುದರಿಂದ ತ್ರಿಪಾದಿಯೆಂದು ಗುಂಪು ಮಾಡಿದ್ದಾರೆ. ಅದರಂತೆ ಇಲ್ಲಿಯೂ ಅನುವ್ಯಾಖ್ಯಾನದಲ್ಲಿ ಮೂರು ಪಾದಗಳ ಗುಂಪು ಮಾಡಿದ್ದಾರೆ. 'ಮಹಾಸಮನ್ವಯೇ ತಸ್ಮಿನ್ನಾಧಿಕಾರೋಽಖಿಲಸ್ಯ ಹಿ' ಎಂಬಂತೆ ನಾಲ್ಕನೆಯ ಪಾದದಲ್ಲಿ ಮಾಡುವ ಸಮನ್ವಯವು ಸರ್ವಾಧಿಕಾರಿಕವಲ್ಲ. ಮೊದಲು ಮೂರು ಪಾದಗಳಲ್ಲಿ ಮಾಡುವ ಸಮನ್ವಯವು ಸರ್ವಾಧಿಕಾರಿಕವಾಗಿದೆ. ಸರ್ವಾಧಿಕಾರಿಕವಾದ ಸಮನ್ವಯವನ್ನು ಮೊದಲ ಮೂರು ಪಾದಗಳಲ್ಲಿ ಹೇಳುವುದರಿಂದ ತ್ರಿಪಾದಿತ್ವವು ಕೂಡುತ್ತದೆ. ಅದರಲ್ಲಿರುವ ಅಧಿಕರಣಗಳಿಗೆ ತ್ರಿಪಾದಿತ್ವದಿಂದ ಸಂಗತಿ ಹೇಳಬೇಕು. ಹಾಗೆಯೇ ಮೊದಲೆರಡು ಪಾದಗಳು ಅನ್ಯತ್ರಪ್ರಸಿದ್ಧವಿಷಯತ್ವೇನ ದ್ವಿಪಾದಿತ್ವ ಹೊಂದುತ್ತದೆ. ಅವುಗಳಲ್ಲಿರುವ ಅಧಿಕರಣಗಳಿಗೆ ದ್ವಿಪಾದಿತ್ವದಿಂದ ಸಂಗತಿಯನ್ನು ಊಹಿಸಿಕೊಳ್ಳಬೇಕು.

ಆಕ್ಷೇಪಿಕ್ಯಾತಿದೇಶಿಕ್ಯಾವುಪೋದ್ಘಾತಾಪವಾದತೇ ।
ಪ್ರಸಂಗಶ್ಚೇತ್ಯಾದಿರೂಪಾ ಸಾ ಚಾನಂತರ್ಯಲಕ್ಷಣಾ ॥

ಆನಂತರ್ಯರೂಪವಾದ ಸಂಗತಿಯೂ ಸಹ ಆಕ್ಷೇಪಿಕೀ, ಆತಿದೇಶಿಕೀ, ಔಪೋದ್ಘಾತಕೀ, ಆಪವಾದಿಕೀ, ಪ್ರಾಸಂಗಿಕೀ ಇತ್ಯಾದಿರೂಪದಿಂದ ಬಹುವಿಧವಾಗಿದೆ. ಇವುಗಳ ಸ್ವರೂಪವನ್ನು ಮುಂದಿನ ಅಧಿಕರಣಗಳಲ್ಲಿ ಸ್ಪಷ್ಟಪಡಿಸುತ್ತೇವೆ.

**प्रकाशः** – ''नन्वत्रान्यत्रप्रसिद्ध'' इत्यादिसङ्गतिटीकां विवृण्वानो भाष्य-टीकाभ्यां मिलित्वोक्तं सङ्गतिपञ्चकं सङ्गृह्णाति – **शास्त्र इति** ।। अन्तर्भावानन्तर्य-रूपवैलक्षण्यसूचनाय भिन्नविभक्त्या निर्देशः । 'प्रायेण' इत्यस्य कृत्यं वक्ष्यति । यतिभङ्गस्य काव्य एव दोषत्वं न शास्त्र इत्युक्तं प्रमेयदीपिकायाम् । 'उत्तरं तु' 'श्रुत्या' इत्यादिनोक्तम् । 'अधिकरणेषु' इत्यु-क्त्या अध्यायानां पादानां च सङ्गत्यन्तरं न भ्रमितव्यमित्याह – **अध्याययोरिति** ।।

तर्हि भाष्ये सङ्गतिपञ्चकं कुतो नोक्तमित्यत आह – **तत्राद्येति** ।। **व्यध्याय्या-मिति** ।। अध्यायद्वयस्यावान्तरार्थविवक्षयैकार्थत्वेनैक्यं विवक्षित्वा तत्रत्याधिकरणानां तदन्तर्भावो बोध्य इत्यर्थः । एवं त्रिपाद्यां द्विपाद्यामित्यपि बोध्यम् । ''तद्धितार्थोत्तरपदसमाहारे च'' इति समासे ''सङ्ख्यापूर्वो द्विगुः'' इति द्विगुसंज्ञायां ''द्विगोः'' इति ङीष्प्रत्यये रूपमिति ध्येयम् ।।

**पेटिकेति** ।। केषाञ्चिदधिकरणानामवान्तरविवक्षयैकार्थत्वेनैक्यं विवक्षित्वा

तत्समुदाये तत्रत्यस्यैकैकस्य तत्र सङ्गतिरित्यर्थः ।। **न सार्वत्रिकीति** ।। यत्रास्ति तत्र वक्ष्याम इति भावः ।

ननु "श्रुत्याऽधिकरणेन च" इत्ययुक्तं, तयोः परस्परपरिहारेणानुपलम्भेनैकत्वादित्यत आह – **तत्तदिति** ।। एतेन "श्रुत्यधिकरणसङ्गती दर्शयति" इति टीकास्थं द्विवचनं समर्थितं बोध्यम् । 'प्रायेण' इत्यस्य व्यावर्त्यमाह – **ईक्षतीति** ।। पञ्चाधिकरण्या इत्यर्थः । आदिपदेनाद्यपादेनेति ग्राह्यम् । "उत्तरं तु" इति श्लोकं व्याख्याति – **अधिकरणस्येति** ।। 'श्रुतेः श्रुत्यन्तरे' इत्यपि ग्राह्यम् । 'नियतं' इति सदापदार्थः । "तत्राद्यत्रितयं" इत्युक्तेरुपयोगमाह – **तत्रेति** ।।

एतेन "अस्तु शास्त्राध्यायपादसङ्गतिः" इति टीका, उत्तरत्र प्रतिनियं तत्त्रितयसङ्गत्युक्तिपरटीका च न भाष्यविरुद्धा, सङ्गतिपदं चान्तर्भावसङ्गत्यर्थकं, "श्रुत्यधिकरणसङ्गती" इत्यत्रस्थसङ्गतिपदं चानन्तर्यसङ्गत्यर्थकमिति व्याख्यातं भवति ।।

'व्याध्याय्यां' इत्येतद्विवृणोति – **एवमिति** ।। 'इदमित्थं कर्तव्यं' इत्युक्तिरुपदेशः, 'तद्वदिदं कर्तव्यं' इत्यतिदेशः, तदुभयप्रमाणकत्वाद्धर्मस्य द्वैराश्येन यथा षट्कद्वयव्यवस्था तथेत्यर्थः ।। **इत्युक्तत्वादिति** ।।

................. सञ्जाते वस्तुनिर्णये ।
किं मया कार्यमित्येव स्याद्बुद्धिरधिकारिणः ।।

इत्युपासनापादे उक्तत्वादित्यर्थः ।।

**तत्स्थेति** ।। सिद्धरूपविषयभूतब्रह्मप्रतिपादकत्वेनैकीभूतपूर्वाध्यायद्वयस्थानां यथायोगं साक्षात्परम्परया वा तादृशवस्तुप्रतिपादनेन तत्रान्तर्भावो ध्येयः, तथा साधनफललक्षणसाध्यरूपैकार्थत्वेनेकीभूतोत्तराध्यायद्वयस्थानां यथायोगं तादृशवस्तुबोधनेन तत्र सङ्गतिर्ध्येयेत्यर्थः ।

'त्रिपाद्यां' इत्येतत्सदृष्टान्तं विवृणोति – **एवमिति** ।। 'तत्सङ्गतिरप्यूह्या' इत्यन्वयः । यथाऽऽद्याध्याये कृत्स्नवेदस्याद्यपादेन प्रामाण्ये सिद्धेऽप्यर्थवादमन्त्र-

नामधेयात्मकभागस्य साक्षाद्धर्मबोधकत्वायोगेन धर्मबोधे विनियोगाभावादप्रामाण्यमाशङ्क्यार्थवादस्य स्तावकत्वेन, मन्त्राणां स्मारकत्वेन, नामधेयस्य धात्वर्थावच्छेदकतया धर्मबोधे विनियोगात् प्रामाण्यमित्यर्थवादस्मृतिनामधेयरूपपादत्रयस्यैकार्थत्वेन त्रिपादीत्वं, तथाऽत्रापीत्यर्थः ।

यद्यपि स्मृतिपादे न वेदभागप्रामाण्योक्तिः, तथाऽपि तत्प्रामाण्यार्थमेव स्मृतिप्रामाण्यनिरूपणाद्वा, धर्मप्रमाणचिन्ताधिकारात् स्मृत्यादीनामपि धर्मे प्रामाण्यमुच्यत इति वा, त्रिपाद्यन्तर्भावोक्तेरिति भावः ।। **तत्स्थेति** ।। त्रिपादीस्थेत्यर्थः । 'द्विपाद्यां' इत्येतद्विवृणोति – **तथेति** ।। एवमन्तर्भावसङ्गतिमनेकधा निरूप्यानन्तर्यरूपाऽपि तथेत्याह – **आक्षेपिकीति** ।। व्याचष्टे – **आनन्तर्येति** ।। आदिपदेन प्रत्युदाहरणबुद्धिस्थानादिरूपा ग्राह्या । आसां लक्षणसङ्ग्रहस्तु –

पूर्वमाक्षिप्यते यत्र तत्र साऽऽक्षेपकी मता ।
कृत्वाऽप्यभ्यधिकाशङ्कां पूर्वमेवातिदिश्यते ।
सङ्गतिः कथिता सद्भिः काचित्तत्रातिदेशिकी ।
चिन्तां प्रकृतसिद्ध्यर्थामुपोद्धातं प्रचक्षते ।
पूर्वसिद्धान्ततो यत्र पूर्वपक्षः प्रवर्तते ।
तत्राऽऽपवादिकी प्रोक्ता सङ्गतिर्न्यायवेदिभिः ।
प्रसङ्गाच्चिन्त्यते यत्र तत्र प्रासङ्गिकी मता ।
पूर्वन्यायात्ययो यत्र प्रत्युदाहरणा तु सा ।
बुद्धिस्थं चिन्त्यते यत्र बुद्धिस्थानात्मिका तु सा ।।

इत्यादिस्तन्त्रचूडामण्युक्तो बोध्यः ।

ननु सुधायां देवताऽधिकरणसङ्गत्युक्तिप्रस्तावे "सङ्गतिस्तावत् द्विविधा भवति, अन्तर्भावलक्षणाऽऽनन्तर्यलक्षणा चेति । उत्तराऽपि षोढा भवति, प्रसङ्गोपोद्धातावसरप्राप्तिकारणकार्यत्वैककार्यत्वभेदात्" इत्येवं षाड्विध्योक्तेः कथमेवमुक्तिरिति चेत्, आक्षेपिक्यादेरेककार्यत्वादिरूपसङ्गतावन्तर्भावेन राशीकरणेन षाड्-

विध्योत्त्युपपत्तेरविरोध ऊह्यः ।। **आसामिति** ।। स्वरूपकीर्तनपूर्वकं तत्र तत्रोदाहरणनिष्ठतया सङ्गतेर्वक्ष्यमाणत्वादिति भावः ।

**गुरुराजीयम्** – टीकोक्तसङ्गतिपञ्चकं भाष्योक्त्यनुक्तिघटकोपाध्यवच्छेदेन दर्शयितुमुपलक्षितसङ्गत्यन्तराणि चाह – **शास्त्र इत्यादिना** ।। शास्त्र इत्यादिसप्तमी तृतीयार्थे । अपिरभिव्याप्तौ । एवं च सर्वाण्यधिकरणान्यभिव्याप्येत्यर्थः । नच सर्वशब्दादेव तल्लाभ इति वाच्यम् । 'सर्वं घृतं विलीनम्' इत्यादाविव सर्वशब्दसङ्कोचस्यापि सम्भवादिति भावः । ननु पञ्चविधापि सङ्गतिरेकरूपैव किं नेत्याह – **तत्र चेति** ।।

देवताधिकरणादावध्यायपादसङ्गत्योरभावात्तदभिप्रायेण **प्रायेणेत्युक्तम्**। नन्वध्यायपादयोरन्तर्भावरूपसङ्गत्यभावात् का सङ्गतिरित्यत आह – **अध्याययोरिति** ।। ननु तर्हि टीकादावाद्यं सङ्गतित्रयं किं न प्रदर्श्यत इत्यत आह – **तत्राद्येति** ।।

ननु पञ्चविधसङ्गतिप्रदर्शनवत्पेटिकासङ्गतिरपि किं न प्रदर्श्यत इत्यत आह – **पेटिकेति** ।। तथाचासार्वत्रिकत्वान्न सा प्रदर्श्यत इति भावः । ननु सङ्गतिः पञ्चधेत्ययुक्तम् । श्रुत्यधिकरणसङ्गत्योरैक्यादित्यत आह – **तत्तदधिकरणेति** ।। यत्राधिकरणसङ्गतिः तत्र श्रुतिसङ्गतिरित्यविनाभावः । नच श्रुतिसङ्गत्यैवाधिकरणसङ्गतेरपि लाभान्न तस्याःपार्थक्यमिति वाच्यम् । उत्तराधिकरणविषयभूतश्रुतेः पूर्वाधिकरणविषयवाक्येन सङ्गतिः श्रुतिसङ्गतिः पूर्वाधिकरणस्थेन येन केनचित्सूत्रेण सङ्गतिरधिकरणसङ्गतिरिति तयोर्भेद इति भावः । अध्याययोः पादयोरप्यानन्तर्यात्मिकैव सङ्गतिरिति सङ्ग्रह उक्तम् । तत्र किं निमित्तम् । अन्तर्भावात्मिकापि सङ्गतिः किं न स्यादित्यतस्तत्र निमित्तमाह – **अधिकरणस्येति** ।।

तत्राद्यत्रितयं स्पष्टमित्यादिना त्रितयद्विकयोः स्पष्टत्वास्पष्टत्वे सङ्ग्रह उक्ते । तयोःप्रयोजनमाह – **तत्रेति** ।। ननु श्रुत्यधिकरणसङ्गत्योरपि स्पष्टत्वात्ते अपि न वक्तव्ये इत्यत आह – **श्रुत्यधिकरणसङ्गती इति** ।। नन्वध्यायद्वयस्य केनचिदर्थविशेषणक्रोडीकरणभावात् कथमध्याय इत्युक्तमित्यत आह – **एवं पूर्वतन्त्र इति** ।। त्रिपाद्यामित्युक्तपादत्रयसङ्गतिमुपपादयति – **एवमिति** ।। विनियोगो विधिः तत्समुत्थायाऽप्रामाण्यशङ्का तन्निरासकत्वेनेत्यर्थः ।। **द्वितीयादिपादत्रयस्येति** ।।

प्रथमाध्यायस्थद्वितीयादिपादत्रयं तस्येत्यर्थः । द्विपाद्याम् इत्युक्तं विवृणोति – **तथेति** ।।

नन्वानन्तर्यलक्षणसङ्गतेः कार्यकारणभावरूपतयाऽध्यायपादाधिकरणानां कार्य कारणभावाभावेनानन्तर्यात्मिकैव सङ्गतिरध्यायपादानामिति कथमुक्तिरित्यत आह – **आक्षेपिकीति** ।। आदिपदेन प्रत्युदाहरणबुद्धिस्थावसरहेतुहेतुमद्भावलक्षणसङ्गति-परिग्रहः । तथाचानन्तर्यलक्षणसङ्गतेरनेकविधत्वेन नोक्तमयुक्तमिति भावः । नन्वासां स्वरूपं कीदृशमित्यत आह – **आसामिति** ।।

अस्माभिः संक्षेपत एषां लक्षणानि प्रदर्श्यन्ते । यत्र पूर्वार्थ आक्षिप्यते तत्राक्षेपिकी सङ्गतिः । यत्राधिकाशङ्कां कृत्वापूर्वन्यायातिदेशस्तत्रातिदेशिकी-सङ्गतिः । प्रकृतसिद्ध्यर्थचिन्तोपोद्धातः । पूर्वसिद्धान्ततो यत्र पूर्वपक्षः प्रवर्तते तत्रापवादिकी । प्रसङ्गाद्यत्र चिन्त्यते सा प्रासङ्गिकी । पूर्वन्यायात्ययो यत्र सा प्रत्युदाहरणसङ्गतिः । यत्र बुद्धिस्थं चिन्त्यते सा बुद्धिस्थलक्षणेति ।

ವಿವರಣೆ - ಪ್ರಕೃತ 'ನನ್ವತ್ರಾನ್ಯತ್ರಪ್ರಸಿದ್ಧ' ಇತ್ಯಾದಿ ಸಂಗತಿಟೀಕೆಯನ್ನು ವಿವರಿಸುತ್ತಿದ್ದಾರೆ. ಸಂಗತಿ ವಿಷಯದಲ್ಲಿ ಭಾಷ್ಯ ಹಾಗು ಟೀಕೆಗಳಲ್ಲಿ ಹೇಳಿದ್ದನ್ನು ಶ್ಲೋಕರೂಪದಲ್ಲಿ ಸಂಗ್ರಹಿಸುತ್ತಿದ್ದಾರೆ. ಶ್ಲೋಕದಲ್ಲಿ 'ಶಾಸ್ತ್ರೇ' 'ಅಧ್ಯಾಯೇ' 'ಪಾದೇ' ಎಂದು ಸಪ್ತಮೀವಿಭಕ್ತಿಯನ್ನು; 'ಶ್ರುತ್ಯಾ' 'ಅಧಿಕರಣೇನ' ಎಂದು ತೃತೀಯಾವಿಭಕ್ತಿಯನ್ನು ಹೇಳಿದ್ದಾರೆ. ಹೀಗೆ ಬೇರೆ ಬೇರೆ ವಿಭಕ್ತಿಗಳನ್ನು ಹೇಳಿದ್ದರಿಂದ ಸಪ್ತಮೀ-ವಿಭಕ್ತ್ಯಂತವಾದದ್ದು ಅಂತರ್ಭಾವ ರೂಪವೆಂದು ತೃತೀಯಾವಿಭಕ್ತ್ಯಂತವಾದದ್ದು ಆನಂತರ್ಯರೂಪವೆಂದು ತಿಳಿಯುತ್ತದೆ. ಐದುವಿಧಸಂಗತಿಗಳಲ್ಲಿಯೂ ವೈಲಕ್ಷಣ್ಯವಿದೆಯೆಂದು ತಿಳಿಯುತ್ತದೆ. 'ತತ್ರ ಚಾದ್ಯತ್ರಿಕಂ ಪ್ರಾಯೇ' ಎಂದು ಯತಿಭಂಗದೋಷ ಬರುತ್ತದಲ್ಲ? ಎಂದರೆ. ಈ ದೋಷ ಕೇವಲ ಕಾವ್ಯದಲ್ಲಷ್ಟೇ ಹೊರತು ಶಾಸ್ತ್ರದಲ್ಲಲ್ಲವೆಂದು ಪ್ರಮೇಯದೀಪಿಕಾದಲ್ಲಿ ಟೀಕಾರಾಯರೇ ಹೇಳಿದ್ದಾರೆ.

'ಸರ್ವಾಧಿಕರಣೇಷ್ವಪಿ' ಎಂದು ಹೇಳಿದ್ದರಿಂದ ಈ ಐದು ಸಂಗತಿಗಳು ಕೇವಲ ಅಧಿಕರಣಗಳಲ್ಲಿ ಮಾತ್ರ ಅಧ್ಯಾಯ ಮತ್ತು ಪಾದಗಳಲ್ಲಿ ಬೇರೆ ಸಂಗತಿಗಳೆಂಬ ಭ್ರಮೆ ಬರುತ್ತದೆ. ಅದಕ್ಕೋಸ್ಕರ 'ಅಧ್ಯಾಯಯೋಃ' ಎಂಬ ಶ್ಲೋಕದಿಂದ ಅಧ್ಯಾಯ ಪಾದಗಳಲ್ಲಿಯೂ ಈ ಸಂಗತಿಗಳನ್ನೇ ತಿಳಿಯಬೇಕೆಂದು ಹೇಳುತ್ತಿದ್ದಾರೆ.

'ದ್ವ್ಯಧ್ಯಾಯ್ಯಾಮ್' ಎಂಬ ಶ್ಲೋಕದ ಅಭಿಪ್ರಾಯ ಹೀಗಿದೆ - ಎರಡು ಅಧ್ಯಾಯಗಳಿಗೆ ಅವಾಂತರಾರ್ಥವನ್ನು ವಿವಕ್ಷಿಸಿ ಏಕಾರ್ಥತ್ವವನ್ನು ಹೇಳಬೇಕು. ಅದರಲ್ಲಿರುವ ಅಧಿಕರಣಗಳಿಗೆ ಆ ಎರಡು ಅಧ್ಯಾಯಗಳಲ್ಲಿ ಅಂತರ್ಭಾವವನ್ನು ಹೇಳಬೇಕು. ಇದರಂತೆ ಮೂರು ಪಾದಗಳ ವಿಷಯದಲ್ಲೂ ಎರಡು ಪಾದಗಳ ವಿಷಯದಲ್ಲೂ ತಿಳಿಯಬೇಕು. 'ದ್ವಯೋಃ ಅಧ್ಯಾಯಯೋಃ ಸಮಾಹಾರಃ ದ್ವ್ಯಧ್ಯಾಯೀ' ಎಂದು ಸಮಾಸ. 'ತದ್ಧಿತಾರ್ಥೋತ್ತರಪದಸಮಾಹಾರೇಚ' ಎಂಬ ಸೂತ್ರದಿಂದ ಸಮಾಸಸಂಜ್ಞೆ ಬರುತ್ತದೆ.

ಅನಂತರ 'ಸಂಖ್ಯಾಪೂರ್ವೋ ದ್ವಿಗುಃ' ಎಂಬ ಸೂತ್ರದಿಂದ ದ್ವಿಗು ಸಂಜ್ಞೆ ಬಂದರೆ 'ದ್ವಿಗೋಃ' ಎಂಬುದರಿಂದ 'ಙೀಷ್' ಪ್ರತ್ಯಯ ಬಂದು 'ದ್ವ್ಯಧ್ಯಾಯೀ' ಎಂದಾಗುತ್ತದೆ. ಪೇಟಿಕಾಸಂಗತಿ ಕೆಲವೆಡೆ ಮಾತ್ರ ಇರುತ್ತದೆ. ಒಟ್ಟಿಗೆ ನಾಲ್ಕೈದು ಅಧಿಕರಣಗಳು ಒಂದೇ ಅರ್ಥವನ್ನು ಪ್ರತಿಪಾದಿಸುತ್ತಿದ್ದರೆ ಅವುಗಳ ಸಮುದಾಯದಲ್ಲಿ ಆಯಾ ಅಧಿಕರಣಗಳಿಂದ ಸಂಗತಿ ತೋರಿಸುವುದೇ ಪೇಟಿಕಾ ಸಂಗತಿ. ಆಯಾ ಸಂದರ್ಭದಲ್ಲಿ ಗ್ರಂಥಕಾರರೇ ಈ ಪೇಟಿಕಾಸಂಗತಿಯನ್ನು ತೋರಿಸುತ್ತಾರೆ.

ಶ್ರುತಿಸಂಗತಿ ಅಧಿಕರಣಸಂಗತಿಗಳನ್ನು ಪ್ರತ್ಯೇಕ ಏಕೆ ಹೇಳಬೇಕು. ಎರಡೂ ಸಹ ಒಂದನ್ನು ಬಿಟ್ಟು ಒಂದು ಇರುವುದೇ ಇಲ್ಲವಲ್ಲ? ಎಂಬ ಪ್ರಶ್ನೆಗೆ 'ತತ್ತದಧಿಕರಣ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಟೀಕೆಯಲ್ಲಿ 'ಶ್ರುತ್ಯಧಿಕರಣಸಂಗತೀ ದರ್ಶಯತಿ' ಎಂಬ ದ್ವಿವಚನವನ್ನು ಇದರಿಂದ ವ್ಯಾಖ್ಯಾನಿಸಿದಂತಾಯಿತು. ಶ್ಲೋಕದಲ್ಲಿ 'ಪ್ರಾಯೇಣ' ಎಂದು ಹೇಳಿದರು. ಆ ಅಪವಾದಸ್ಥಳವನ್ನು 'ಈಕ್ಷತ್ಯಧಿಕರಣಾದೇಃ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. 'ಉತ್ತರಂ ತಂ ದ್ವಯಂ' ಎಂಬ ಶ್ಲೋಕವನ್ನು 'ಅಧಿಕರಣಸ್ಯ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಸಮನ್ವಯಾಧ್ಯಾಯಾದಿನಾ' ಎಂಬಲ್ಲಿರುವ ಆದಿಪದದಿಂದ ಸಮನ್ವಯಾಧ್ಯಾಯದಲ್ಲಿರುವ ಮೊದಲನೆಯ ಪಾದವನ್ನು ವಿವಕ್ಷಿಸಬೇಕು. 'ಅಧಿಕರಣಸ್ಯ ಅಧಿಕರಣಾಂತರೇಣ' ಎಂಬುದರಿಂದ ಉಪಲಕ್ಷಣಯಾ 'ಶ್ರುತೇಃ ಶ್ರುತ್ಯಂತರಃ' ಎಂಬುದನ್ನು ಇಟ್ಟುಕೊಳ್ಳಬೇಕು.

'ತತ್ರಾದ್ಯತ್ರಿತಯಮ್' ಎಂಬ ಶ್ಲೋಕದಲ್ಲಿ ಮೊದಲಿನ ಮೂರು ಸಂಗತಿಗಳು ಸ್ಪಷ್ಟ. ಉಳಿದೆರೆಡು ಅಸ್ಪಷ್ಟವೆಂದು ಹೇಳಿದರು. ಅದರಿಂದೇನು ಪ್ರಯೋಜನ? ಎಂಬ ಪ್ರಶ್ನೆಗೆ 'ತತ್ರ' ಇತ್ಯಾದಿವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಸ್ಪಷ್ಟವಾದ್ದರಿಂದ ಭಾಷ್ಯಕಾರರು ಹೇಳುವುದಿಲ್ಲ. ಅಸ್ಪಷ್ಟವಾದ್ದರಿಂದ ಹೇಳುತ್ತಾರೆಂಬುದೇ ಪ್ರಯೋಜನ. ಹೀಗೆ ಹೇಳಿದ್ದರಿಂದ 'ಅಸ್ತಿ ಶಾಸ್ತ್ರಾಧ್ಯಾಯಪಾದಸಂಗತಿಃ' ಎಂದು ಮುಂದೆ ಪ್ರತಿಯೊಂದು ಅಧಿಕರಣಗಳ ಪ್ರಾರಂಭದಲ್ಲಿಯೂ ಟೀಕಾರಾಯರು ಈ ಮೂರು ಸಂಗತಿಗಳನ್ನು ತೋರಿಸುತ್ತಾರೆ. ಇದು ಭಾಷ್ಯವಿರುದ್ಧವಲ್ಲವೆಂದು ಹೇಳಿದಂತಾಯಿತು. ಶಾಸ್ತ್ರಾಧ್ಯಾಯಪಾದಸಂಗತಿಃ' ಎಂಬ ಟೀಕೆಯಲ್ಲಿರುವ 'ಸಂಗತಿ' ಶಬ್ದಕ್ಕೆ ಅಂತರ್ಭಾವರೂಪಸಂಗತಿಯೆಂದು ಅರ್ಥೈಸಬೇಕು. 'ಶ್ರುತ್ಯಧಿಕರಣಸಂಗತೀ' ಎಂಬಲ್ಲಿರುವ 'ಸಂಗತಿ' ಶಬ್ದಕ್ಕೆ ಆನಂತರ್ಯರೂಪಸಂಗತಿ ಎಂದರ್ಥ. 'ದ್ವ್ಯಧ್ಯಾಯ್ಯಾಮ್' ಎಂಬ ಶ್ಲೋಕವನ್ನೇ 'ಏವಂ ಪೂರ್ವತಂತ್ರೇ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಇದನ್ನು ಹೀಗೆ ಮಾಡಬೇಕೆಂಬುದು ಉಪದೇಶ ಇದನ್ನು ಅದರಂತೆ ಮಾಡಬೇಕೆಂಬುದು ಅತಿದೇಶ. ಉಪದೇಶ ಪ್ರಮಾಣಕವಾದ ಧರ್ಮವನ್ನು ಬೋಧಿಸುವಂತಹದ್ದು ಮೊದಲ ಆರು ಅಧ್ಯಾಯ. ಅತಿದೇಶಪ್ರಮಾಣಕವಾದ ಧರ್ಮವನನು ಬೋಧನೆ ಮಾಡುವಂತಹದ್ದು ಅನಂತರದ ಆರು ಅಧ್ಯಾಯ. ಹೀಗೆ ಎರಡುವಿಧ ಧರ್ಮಗಳನ್ನು ಬೋಧನೆ ಮಾಡಲು ಎರಡು ಷಟ್ಕಗಳು ಹೊರಟಿವೆ. ಅದರಂತೆ ಬ್ರಹ್ಮಮೀಮಾಂಸೆಯಲ್ಲಿಯೂ ದ್ವಿಕದ್ವಯಗಳು ಹೊರಟಿವೆ.

ಸಮನ್ವಯಾವಿರೋಧಾಭ್ಯಾಂ ಸಂಜಾತೇ ವಸ್ತುನಿರ್ಣಯೇ ।
ಕಿಂ ಮಯಾ ಕಾರ್ಯಮಿತ್ಯೇವ ಸ್ಯಾದ್‌ಬುದ್ಧಿರಧಿಕಾರಿಣಾಮ್ ॥

ಎಂಬ ಉಪಾಸನಾಪಾದದ ಅನುವ್ಯಾಖ್ಯಾನದ ಮಾತಿನಂತೆ ದ್ವಿಕದ್ವಯಗಳು ಸಿದ್ಧವಾಗುತ್ತವೆ.

ಸಿದ್ಧರೂಪವಿಷಯನಾದ ಬ್ರಹ್ಮಪ್ರತಿಪಾದಕತ್ವೇನ ಎರಡಧ್ಯಾಯವು ಒಂದು ಗುಂಪಾಗಿದೆ. ಎರಡ-ಧ್ಯಾಯದಲ್ಲಿರುವ ಕೆಲವು ಅಧಿಕರಣಗಳು ಸಾಕ್ಷಾತ್ತಾಗಿ ಬ್ರಹ್ಮನನ್ನು ಪ್ರತಿಪಾದಿಸುತ್ತವೆ. ಇನ್ನು ಕೆಲವಧಿಕರಣಗಳು ಪರಮತವನ್ನು ನಿರಾಸ ಮಾಡುವ ಮೂಲಕವಾಗಿ ಬ್ರಹ್ಮನನ್ನು ಪ್ರತಿಪಾದಿಸುತ್ತವೆ. ಹೀಗೆ ಅಧ್ಯಾಯದ್ವಿಕದಿಂದ ಅದರಲ್ಲಿರುವ ಅಧಿಕರಣಗಳಿಗೆ ಅಂತರ್ಭಾವಸಂಗತಿಯನ್ನು ಹೇಳಬೇಕು. ಇದರಂತೆ ಸಾಧನ ಮತ್ತು ಫಲ ಎಂಬ ಸಾಧ್ಯರೂಪವಾದ ಒಂದೇ ವಸ್ತುವನ್ನು ಪ್ರತಿಪಾದಿಸುವುದರಿಂದ ಮುಂದಿನ ಎರಡಧ್ಯಾಯಗಳು ಒಂದು ಗುಂಪಾಗುತ್ತವೆ. ಆ ಅಧ್ಯಾಯದಲ್ಲಿರುವ ಅಧಿಕರಣಗಳಿಗೆ ಆ ಅಧ್ಯಾಯದ್ವಿಕದಿಂದ ಯಥಾಯೋಗ್ಯವಾದ ಸಂಬಂಧನನ್ನು ಊಹಿಸಿಕೊಳ್ಳಬೇಕು.

ಇನ್ನು ಶ್ಲೋಕದಲ್ಲಿರುವ 'ತ್ರಿಪಾದ್ಯಾಮ್' ಎಂಬುದನ್ನು ದೃಷ್ಟಾಂತಪೂರ್ವಕವಾಗಿ ವಿವರಿಸುತ್ತಿದ್ದಾರೆ. ಪೂರ್ವಮೀಮಾಂಸೆಯ ಪ್ರಥಮಾಧ್ಯಾಯದಲ್ಲಿ ಹೀಗೆ ಹೇಳಿದ್ದಾರೆ - ಸಮಸ್ತವೇದಕ್ಕೆ ಪ್ರಥಮಪಾದದಿಂದ ಪ್ರಾಮಾಣ್ಯವು ಸಿದ್ಧವಾಯಿತು. ಆದರೂ ಸಹ ಅರ್ಥವಾದ, ಮಂತ್ರ, ನಾಮಧೇಯಾತ್ಮಕವಾದ ವೇದಭಾಗವು ಸಾಕ್ಷಾತ್ತಾಗಿ ಧರ್ಮಬೋಧವನ್ನು ಮಾಡುವುದಿಲ್ಲ. ಧರ್ಮವನ್ನು ಬೋಧನ ಮಾಡುವುದರಲ್ಲಿ ವಿನಿಯೋಗವಾಗದ ಕಾರಣ ಅಪ್ರಮಾಣವಾಗುತ್ತವೆ. 'ಚೋದನಾಲಕ್ಷಣೋ ಧರ್ಮಃ' ಎಂಬಂತೆ ಸಮಸ್ತ ವೇದಕ್ಕೆ ಧರ್ಮಪ್ರತಿಪಾದಕತ್ವೇನೈವ ಪ್ರಾಮಾಣ್ಯವನ್ನು ಹೇಳಬೇಕು. ಅರ್ಥವಾದಾದಿವಾಕ್ಯಗಳು ಧರ್ಮವನ್ನು ಪ್ರತಿಪಾದಿಸದೇ ಇರುವುದರಿಂದ ಅಪ್ರಾಮಾಣ್ಯ ಬರುತ್ತದೆಂಬ ಶಂಕೆ ಬಂದರೆ, ಅರ್ಥವಾದವು ಸ್ತಾವಕತ್ವೇನ ವಿನಿಯೋಗವಾಗುತ್ತದೆ. ಮಂತ್ರಗಳು ಸ್ಮರಣೆಯನ್ನು ತಂದುಕೊಡುವ ಮೂಲಕ ವಿನಿಯೋಗವಾಗುತ್ತವೆ. ನಾಮಧೇಯಗಳು ಯಾಗವೆಂಬ ಧಾತ್ವರ್ಥಕ್ಕೆ ಅವಚ್ಛೇದಕವಾಗಿ (ಜ್ಯೋತಿಷ್ಟೋಮಾದಿಗಳೆಂದು) ಧರ್ಮಬೋಧದಲ್ಲಿ ವಿನಿಯುಕ್ತವಾಗಿವೆ. ಆದ್ದರಿಂದ ಪ್ರಾಮಾಣ್ಯವು ಬರುತ್ತದೆ. ಹೀಗೆ ಅರ್ಥವಾದ, ಸ್ಮೃತಿ, ನಾಮಧೇಯವೆಂಬ ಮೂರು ಪಾದಗಳು ಒಂದೇ ಅರ್ಥವನ್ನು ಪ್ರತಿಪಾದಿಸುವುದರಿಂದ ತ್ರಿಪಾದಿತ್ವವು ಉಪಪನ್ನವಾಗುತ್ತದೆ. ಅದರಂತೆ ಪ್ರಕೃತದಲ್ಲಿಯೂ ಮೊದಲ ಮೂರು ಪಾದಗಳು ಸರ್ವಾಧಿಕಾರಿಕವಾದ್ದರಿಂದ ತ್ರಿಪಾದಿತ್ವವನ್ನು ಹೊಂದಿವೆ.

ವಸ್ತುತಃ ಅರ್ಥವಾದ ನಾಮಧೇಯಪಾದಗಳಿಂದ ವೇದಪ್ರಾಮಾಣ್ಯವು ಸಿದ್ಧವಾಗುತ್ತದೆ. ಆದರೆ ಸ್ಮೃತಿಪಾದದಲ್ಲಿ ವೇದಭಾಗಕ್ಕೆ ಪ್ರಾಮಾಣ್ಯವನ್ನೇನು ಸಮರ್ಥಿಸುತ್ತಿಲ್ಲ. ಅಷ್ಟಕ ಆಶ್ವಲಾಯನ ಮೊದಲಾದ ಸ್ಮೃತಿಗಳಿಗಷ್ಟೇ ಪ್ರಾಮಾಣ್ಯವನ್ನು ಸಮರ್ಥಿಸಿದ್ದಾರೆ. ಆದರೂ ಸಹ ಅಷ್ಟಕಾಧಿಸ್ಮೃತಿಗಳಿಗೆ ಪ್ರಾಮಾಣ್ಯವನ್ನು ನಿರೂಪಣ ಮಾಡಿದರೆ ಸ್ಮೃತಿಗಳಿಗೆ ಮೂಲವಾದ ವೇದಗಳ ಪ್ರಾಮಾಣ್ಯವನ್ನೇ ಸಮರ್ಥಿಸಿದಂತಾಗುತ್ತದೆ. ಅಥವಾ ಧರ್ಮಪ್ರಾಮಾಣ್ಯದ ಬಗ್ಗೆ ಚಿಂತೆ ಮಾಡುತ್ತಿದ್ದಾರೆ. ಅವಾಗ ಶ್ರುತಿ ಹಾಗು ಸ್ಮೃತಿಗಳೆರಡೂ ಪ್ರಸಕ್ತವಾಗುತ್ತವೆ. ಸ್ಮೃತಿಪಾದದಲ್ಲಿ ಸ್ಮೃತಿಯ ಮೂಲಕ ಧರ್ಮಪ್ರಾಮಾಣ್ಯವನ್ನು ಸಮರ್ಥಿಸಿದ್ದಾರೆ. ಏನು ತಪ್ಪು?

ಅಂತರ್ಭಾವಸಂಗತಿಯನ್ನು ಅನೇಕವಿಧವೆಂದು ಹೇಳಿ ಆನಂತರ್ಯಸಂಗತಿಯನ್ನು ಅನೇಕವಿಧವೆಂದು 'ಆಕ್ಷೇಪಿಕೀ' ಎಂಬ ಶ್ಲೋಕದಿಂದ ಹೇಳುತ್ತಿದ್ದಾರೆ. ಆದಿಪದದಿಂದ ಪ್ರತ್ಯುದಾಹರಣಸಂಗತಿ, ಬುದ್ಧಿಸ್ಥಾನ-ಸಂಗತಿಯೇ ಮೊದಲಾದವುಗಳನ್ನು ಇಟ್ಟುಕೊಳ್ಳಬೇಕು. ಇವುಗಳ ಲಕ್ಷಣ ಹೀಗಿದೆ -

*ಪರಿಪೂರ್ಣಚಂದ್ರಿಕಾ*

ಪೂರ್ವಮಾಕ್ಷಿಪ್ಯತೇ ಯತ್ರ ತತ್ರ ಸಾಕ್ಷೇಪಿಕೀ ಮತಾ ।
ಕೃತ್ವಾಪ್ಯಭ್ಯಧಿಕಾಶಂಕಾಂ ಪೂರ್ವಮೇವಾತಿದಿಶ್ಯತೇ ॥
ಸಂಗತಿಃ ಕಥಿತಾ ಸದ್ಭಿಃ ಕಾಚಿತ್ತತ್ರಾತಿದೇಶಿಕೀ ।

ಹಿಂದಿನ ಅಧಿಕರಣದಲ್ಲಿ ಹೇಳಿದ್ದನ್ನು ಆಕ್ಷೇಪ ಮಾಡಿದರೆ ಆಕ್ಷೇಪಿಕೀ ಸಂಗತಿ, ಅಭ್ಯಧಿಕಾಶಂಕೆ ಮಾಡಿ ಹಿಂದೆ ಹೇಳಿದ್ದನ್ನೇ ಅತಿದೇಶ ಮಾಡಿದರೆ ಅತಿದೇಶಿಕೀಸಂಗತಿ.

ಚಿಂತಾಂ ಪ್ರಕೃತಧ್ಯರ್ಥಾಮುಪೋದ್ಘಾತಂ ಪ್ರಚಕ್ಷತೇ ।
ಪೂರ್ವಸಿದ್ಧಾಂತತೋ ಯತ್ರ ಪೂರ್ವಪಕ್ಷಃ ಪ್ರವರ್ತತೇ ॥
ತತ್ರಾಪವಾದಕೀ ಪ್ರೋಕ್ತಾ ಸಂಗತಿರ್ನ್ಯಾಯವೇದಿಭಿಃ ।

ಮುಂದೆ ಒಂದು ವಿಷಯವನ್ನು ಸಮರ್ಥಿಸುವುದಿದ್ದರೆ ಅದಕ್ಕೆ ಉಪಯುಕ್ತವಾಗಿ ಮೊದಲೇ ಚಿಂತಾ ಮಾಡಿದರೆ ಉಪೋದ್ಘಾತಸಂಗತಿ.

ಪೂರ್ವಾಧಿಕರಣದ ಸಿದ್ಧಾಂತದ ಆಧಾರದಲ್ಲೇ ಮುಂದಿನ ಅಧಿಕರಣದ ಪೂರ್ವಪಕ್ಷ ಹೊರಟರೆ ಅದು ಅದು ಆಪವಾದಿಕೀ ಸಂಗತಿ.

ಪ್ರಸಂಗಾಚ್ಚಿಂತ್ಯತೇ ಯತ್ರ ತತ್ರ ಪ್ರಾಸಂಗಿಕೀ ಮತಾ ।
ಪೂರ್ವನ್ಯಾಯಾತ್ಯಯೋ ಯತ್ರ ಪ್ರತ್ಯುದಾಹರಣಾ ತು ಸಾ ।
ಬುದ್ಧಿಸ್ಥಂ ಚಿಂತ್ಯತೇ ಯತ್ರ ಬುದ್ಧಿಸ್ಥಾನಾತ್ಮಿಕಾ ತು ಸಾ ।

ಪ್ರಸಂಗವಶಾತ್ ಬೇರೊಂದು ವಿಷಯವನ್ನು ಚಿಂತನೆ ಮಾಡಿದರೆ ಪ್ರಾಸಂಗಿಕೀಸಂಗತಿ. ಹಿಂದೆ ಹೇಳಿದ ನ್ಯಾಯವನ್ನು ಮೀರಿ ಇನ್ನೊಂದು ನ್ಯಾಯ ಹೇಳಿದರೆ ಪ್ರತ್ಯುದಾಹರಣಸಂಗತಿ.

ಬುದ್ಧಿಸ್ಥವಾದದ್ದನ್ನು ಚಿಂತನೆ ಮಾಡಿದರೆ ಬುದ್ಧಿಸ್ಥಾನ ಎಂಬ ಸಂಗತಿ. (ವಿಷಯಕ್ಕೆ ಸಂಬಂಧಪಟ್ಟ ಮತ್ತೊಂದು ವಿಷಯ ಹೇಳಿದರೆ ಪ್ರಾಸಂಗಿಕೀಸಂಗತಿ, ಸಂಬಂಧ ಪಡದೇ ಇದ್ದರೆ ಬುದ್ಧಿಸ್ಥಾನ ಸಂಗತಿ ಹೇಳಬಹುದು)

ಇವುಗಳನ್ನೆಲ್ಲ ತಂತ್ರಚೂಡಾಮಣಿ ಎಂಬ ಗ್ರಂಥದಲ್ಲಿ ವಿವರಿಸಿದೆ. ಇನ್ನೂ ಹೆಚ್ಚಿನ ಸಂಗತಿಗಳನ್ನು ಅಲ್ಲಿಯೇ ನೋಡಿ ತಿಳಿಯಬೇಕು.

(ರಾಯರು ಬರೆದ ನ್ಯಾಯಮುಕ್ತಾವಲಿಯ ಪ್ರಾರಂಭದಲ್ಲಿಯೂ ಸಂಗತಿಗಳ ವಿಭಾಗವು ಸ್ಪಷ್ಟವಾಗಿದೆ)

ಪ್ರಶ್ನೆ - ಸುಧೆಯ ದೇವತಾಧಿಕರಣದಲ್ಲಿ ಸಂಗತಿಯು ಎರಡುವಿಧ - ಅಂತರ್ಭಾವಲಕ್ಷಣಾ ಆನಂತರ್ಯಲಕ್ಷಣಾ ಎಂದು. ಆನಂತರ್ಯಲಕ್ಷಣಾಸಂಗತಿಯು ೧) ಪ್ರಸಂಗ, ೨) ಉಪೋದ್ಘಾತ ೩) ಅವಸರಪ್ರಾಪ್ತಿ ೪) ಕಾರಣತಾ ೫) ಕಾರ್ಯತಾ ೬) ಏಕಕಾರ್ಯತ್ವ ಎಂದು ಕೇವಲ ಆರುವಿಧವೆಂದು ಹೇಳಿದ್ದಾರೆ. ಈಗ ನೀವು ಅನೇಕವಿಧವೆಂದು ಹೇಳುತ್ತಿದ್ದೀರಿ. ಇದು ತಪ್ಪಲ್ಲವೇ?

ಉತ್ತರ - ಅನೇಕವಿಧವಾದರೂ ಆ ಎಲ್ಲ ಸಂಗತಿಗಳು ಈ ಆರರಲ್ಲೇ ಅಂತರ್ಭಾವ ಹೊಂದುತ್ತವೆ.

ಉದಾಹರಣೆ - ಆಕ್ಷೇಪಿಕೀ, ಆತಿದೇಶಿಕೀ ಸಂಗತಿಗಳು ಏಕಕಾರ್ಯತ್ವವೆಂಬ ಸಂಗತಿಯಲ್ಲಿ ಸೇರುತ್ತವೆ. ಹೀಗೆ ಅಂತರ್ಭಾವ ಮಾಡಿದಾಗ ಆರು ರಾಶಿಗಳಾಗುತ್ತವೆಂದು ತಿಳಿಯಬೇಕು. ಇವುಗಳ ಸ್ವರೂಪವನ್ನು ಮುಂದೆ ಪ್ರಸಂಗ ಬಂದಾಗ ವಿವರಿಸುತ್ತೇವೆ.




ಒಟ್ಟು ಸಂಗತಿಯು ಐದುವಿಧವಾಗಿದೆ ೧) ಶಾಸ್ತ್ರಸಂಗತಿ ೨) ಅಧ್ಯಾಯಸಂಗತಿ ೩) ಪಾದಸಂಗತಿ ೪) ಶ್ರುತಿಸಂಗತಿ ೫) ಅಧಿಕರಣಸಂಗತಿ ಎಂದು, ಈ ಐದು ಸಂಗತಿಗಳನ್ನು ಮುಂದೆ ಪ್ರತಿಯೊಂದು ಅಧಿಕರಣಗಳ ಪ್ರಾರಂಭದಲ್ಲಿ ಸಮನ್ವಯ ಮಾಡಿ ತಿಳಿದುಕೊಳ್ಳಬೇಕು.

ವಸ್ತುತಃ ಸಂಗತಿಯು ಎರಡುವಿಧ - ೧) ಅಂತರ್ಭಾವ ೨) ಆನಂತರ್ಯ ಎಂದು. ಇವೆರಡರಲ್ಲಿ ಅಂತರ್ಭಾವಸಂಗತಿಯು ಪ್ರಧಾನವಾಗಿ ಮೂರುವಿಧ - ೧) ಶಾಸ್ತ್ರಾಂತರ್ಭಾವ ೨) ಅಧ್ಯಾಯಾಂತರ್ಭಾವ ೩) ಪಾದಾಂತರ್ಭಾವ ಎಂದು. ಇನ್ನು ಆನಂತರ್ಯಸಂಗತಿಯು ಪ್ರಧಾನವಾಗಿ ಎರಡುವಿಧ - ೧) ಶ್ರುತ್ಯಾನಂತರ್ಯ ೨) ಅಧಿಕರಣಾನಂತರ್ಯ ಎಂದು. ಆದರೆ ಅಂತರ್ಭಾವಸಂಗತಿಯಾಗಲೀ ಆನಂತರ್ಯಸಂಗತಿಯಾಗಲೀ ಇನ್ನೂ ಅನೇಕ ಬಗೆಯಲ್ಲಿವೆ. ಅವುಗಳಲ್ಲಿ ಕೆಲವನ್ನಷ್ಟೇ ಗ್ರಂಥಕಾರರು ಇಲ್ಲಿ ಹೇಳಿದ್ದಾರೆ. ೧) ಪೇಟಿಕಾಸಂಗತಿ ೨) ಅಧ್ಯಾಯದ್ವಿಕಸಂಗತಿ ೩) ಪಾದತ್ರಿಕಸಂಗತಿ ೪) ಪಾದದ್ವದಸಂಗತಿ ಹೀಗೆ ಅಂತರ್ಭಾವಸಂಗತಿಯು ಹಲವು ಬಗೆಯಲ್ಲಿ ತಿಳಿಯಬಹುದು.

ಆನಂತರ್ಯಸಂಗತಿಯೂ ಸಹ ೧) ಆಕ್ಷೇಪಿಕೀ ೨) ಆತಿದೇಶಿಕೀ ೩) ಔಪೋದ್ಘಾತಕೀ ೪) ಆಪವಾದಿಕೀ ೫) ಪ್ರಾಸಂಗಿಕೀ ೬) ಪ್ರತ್ಯುದಾಹರಣ ೭) ಬುದ್ಧಿಸ್ಥಾನಾ ಹೀಗೆ ಹಲವು ಬಗೆಯಲ್ಲಿವೆ. ಆನಂತರ್ಯಸಂಗತಿಯು ಬಹುಬಗೆಯಲ್ಲಿದ್ದರೂ ೧) ಪ್ರಾಸಂಗಿಕೀ ೨) ಔಪೋದ್ಘಾತಕೀ ೩) ಅವಸರಪ್ರಾಪ್ತಿ ೪) ಕಾರಣತಾ ೫) ಕಾರ್ಯತಾ ೬) ಏಕಕಾರ್ಯತ್ವ ಎಂಬ ಆರುವಿಧಸಂಗತಿಗಳಲ್ಲೇ ಸೇರುತ್ತವೆ.



## ನಾಮಾತ್ಮಕವಾದ ಆನಂದಮಯಶಬ್ದಕ್ಕೆ ಪಾದಾಂತರ್ಭಾವ

## तात्पर्यचन्द्रिका

**अत्राधिकरणे टीकायां पादसङ्गत्यर्थं 'आनन्दमयनाम्नः' इत्यानन्दमयशब्दस्य नामत्वमुक्तम् । तत्र केचित् 'उद्भिदग्निहोत्रादिशब्दानामिव आनन्दमयादिशब्दानां यौगिकत्वेऽपि पूर्वपक्षेऽपि कोशादिनामत्वम्, सन्ति ह्यन्वर्था अपि संज्ञाः' इत्याहुः । तन्न, अत्राभिप्रेतस्य रूढत्वरूपनामत्वस्य यौगिकेऽनुपपत्तिः ।**

**अन्ये त्वानन्दमयादिशब्दाः कोशेषु रूढाः, ''आनन्दमया मे शुध्यन्ताम्''**

इत्यादौ कोशेषु प्रयोगबाहुल्यात् इत्याहुः । तदपि न । पूर्वपक्षे विकारे सिद्धान्ते च प्राचुर्ये यौगिकत्वेन केवलरूढत्वायोगात् ।

अपरे तु आनन्दमयादिशब्दा योगरूढाः । एवञ्च यान्यापाततो रूढान्येव तानि नामानीति पक्षे आनन्दमयादेर्नामत्वाभावेऽपि, यान्यापाततो रूढानि तानि नामानि, यानि तु यौगिकानि तानि लिङ्गानीति पक्षे, आनन्दमयादिशब्दानामुभया त्मकत्वम् । एवञ्च यथा "स्मृत्यनवकाशदोषप्रसङ्ग" इत्यत्र स्मृतिविरोधपरिहारस्य चतुर्विधविरोधपरिहारात्मकत्वेन एकैकविरोधपरिहारपरेषु पादेष्वसङ्गतेः पूर्वं पश्चाद्वा कर्तव्यत्वे प्रथमातिक्रमे कारणाभावात् पूर्वं निवेशः, तथाऽस्योभयसमन्वयपरत्वेन पादद्वये असङ्गतेः पूर्वं पश्चाद्वा कर्तव्यत्वे पूर्वं निवेश इत्याहुः ।

तन्न, वक्ष्यमाणरीत्या दृष्टान्तस्य दार्ष्टान्तिकस्य च तत्तत्पादसङ्गतिसम्भवे तद्बहिर्भावायोगात् । तस्मादानन्दमयादीनामुक्तरीत्या उभयात्मकत्वात्पादद्वयसङ्गति-सम्भवेन इहापि विचारसम्भवात्, प्रथमातिक्रमे कारणाभावाच्चाऽऽद्यपादे तत्समन्वयः, यथा स्मृतिविरोधपरिहारस्याद्यपादे निवेशः तद्वत् । यान्यापाततो रूढिरहितानि तानि लिङ्गानि, यानि तु तद्विपरीतान्यापाततो रूढानि वा तानि नामानीति पक्ष आनन्दमयादिशब्दानां नामतैव ।

ಅನುವಾದ - ಸಂಗತಿ ನಿರೂಪಣೆ ಮಾಡುವ ಸಂದರ್ಭದಲ್ಲಿ ಪಾದಸಂಗತಿಗೋಸ್ಕರ 'ಆನಂದಮಯನಾಮ್ನಃ' ಎಂದು ಆನಂದಮಯಶಬ್ದಕ್ಕೆ ರೂಢತ್ವವನ್ನು ಟೀಕೆಯಲ್ಲಿ ಹೇಳಿದ್ದಾರೆ.

ಕೆಲವರ ಅಭಿಪ್ರಾಯ - ಆನಂದಮಯಾದಿಶಬ್ದಗಳು ಯೌಗಿಕವಾಗಿವೆ. ಆದರೂ ರೂಢ-ವಾಗುತ್ತವೆ. ಹೇಗೆಂದರೆ 'ಉದ್ಭಿತ್' 'ಅಗ್ನಿಹೋತ್ರ' ಇತ್ಯಾದಿ ಶಬ್ದಗಳು ಯೌಗಿಕವಾಗಿದ್ದರೂ ಯಾಗದ ನಾಮಧೇಯಗಳೂ ಹೇಗೆ ಆಗಿವೆಯೋ ಅದರಂತೆ ಆನಂದಮಯನಾಮವು ಯೌಗಿಕವಾಗಿದ್ದರೂ ರೂಢವಾಗಬಹುದು. ಕೆಲವೊಂದು ವಸ್ತುವಿನ ಹೆಸರುಗಳಾಗಿದ್ದರೂ ಅನ್ವರ್ಥಕಗಳೂ ಆಗಿರುತ್ತವೆ.

ಸಮಾಧಾನ - ಇದು ತಪ್ಪು. ಪ್ರಕೃತದಲ್ಲಿ ಅಭಿಪ್ರೇತವಾದ ರೂಢವೆಂಬ ನಾಮತ್ವವು ಯೌಗಿಕವಾದ್ದರಲ್ಲಿ ಕೂಡುವುದೇ ಇಲ್ಲ.

ಅನ್ಯರ ಅಭಿಪ್ರಾಯ - ಆನಂದಮಯಾದಿಶಬ್ದಗಳು ಕೋಶಗಳಲ್ಲಿ ರೂಢವಾಗಿವೆ. 'ಆನಂದಮಯಾ ಮೇ ಶುದ್ಧ್ಯಂತಾಮ್' ಇತ್ಯಾದಿ ಶ್ರುತಿಯಲ್ಲಿ ಕೋಶದಲ್ಲಿ ಆನಂದಮಯಶಬ್ದದ ಬಹುಲಪ್ರಯೋಗ ಕಂಡಿದೆ.

ಸಮಾಧಾನ - ಇದೂ ಸಹ ಸರಿಯಲ್ಲ. ಏಕೆಂದರೆ ಪೂರ್ವಪಕ್ಷದ ಸಂದರ್ಭದಲ್ಲಿ 'ಆನಂದಮಯ' ಎಂಬಲ್ಲಿರುವ ಮಯಟ್ ಪ್ರತ್ಯಯಕ್ಕೆ ವಿಕಾರ ಎಂಬರ್ಥವನ್ನು ಅಂಗೀಕರಿಸಲಾಗಿದೆ. ಸಿದ್ಧಾಂತದಲ್ಲಿಯೂ ಪ್ರಾಚುರ್ಯವೆಂಬರ್ಥವನ್ನು ಅಂಗೀಕರಿಸಿದ್ದರಿಂದ ಆನಂದಮಯಶಬ್ದವು ಯೌಗಿಕ ಆಗಿದೆ. ಕೇವಲ ರೂಢವಾಗಲು ಸಾಧ್ಯವಿಲ್ಲ.

ಅಪರರ ಅಭಿಪ್ರಾಯ - ಆನಂದಮಯಾದಿಶಬ್ದಗಳು ಯೋಗರೂಢವಾದ ಶಬ್ದಗಳು. ಹಿಂದೆ ನಾಮಾತ್ಮಕಶಬ್ದಗಳ ಲಕ್ಷಣವನ್ನು ಹೇಳಿದಾಗ ಯಾವ ಶಬ್ದಗಳು ಆಪಾತತಃ ರೂಢವೇ ಆಗಿರುತ್ತವೋ ಅವು ನಾಮಾತ್ಮಕಶಬ್ದಗಳೆಂದು ಹೇಳಿದ್ದರು. ಈ ಪಕ್ಷದಲ್ಲಿ ಆನಂದಮಯಾದಿಗಳು ಕೇವಲ ರೂಢವಲ್ಲದ ಕಾರಣ ನಾಮಾತ್ಮಕವೆಂದು ಹೇಳಲಾಗದು. ಆದರೆ 'ಯಾವುದು ಆಪಾತತಃ ರೂಢವಾಗಿವೆಯೋ, ಅವು ನಾಮಾತ್ಮಕಗಳು ಯಾವುದು ಯೌಗಿಕವೋ ಅವು ಲಿಂಗಾತ್ಮಕಗಳು' ಎಂಬ ಪಕ್ಷದಲ್ಲಿ ಆನಂದಮಯಾದಿಶಬ್ದಗಳು ನಾಮಾತ್ಮಕಗಳೂ ಆಗುತ್ತವೆ, ಲಿಂಗಾತ್ಮಕಗಳೂ ಆಗುತ್ತವೆ. ಹಾಗಾದರೆ ಆನಂದಮಯಾಧಿಕರಣವನ್ನು ನಾಮಪಾದದಲ್ಲಿ ಸೇರಿಸಬೇಕೋ? ಅಥವಾ ಲಿಂಗಪಾದದಲ್ಲಿ ಸೇರಿಸಬೇಕೋ? ಎಂದರೆ ನಾಮಪಾದದ ಪ್ರಾರಂಭದಲ್ಲೇ ಸೇರಿಸಬೇಕು. ಅದು ಹೀಗೆ - 'ಸ್ಮೃತ್ಯನವಕಾಶದೋಷಪ್ರಸಂಗಾತ್' ಇತ್ಯಾದಿ ಸೂತ್ರದಲ್ಲಿ ಸ್ಮೃತಿವಿರೋಧವನ್ನು ಪರಿಹಾರ ಮಾಡಿದ್ದಾರೆ. ಸ್ಮೃತಿವಿರೋಧದ ಪರಿಹಾರವು, ಯುಕ್ತಿ, ಶ್ರುತಿ, ನ್ಯಾಯೋಪೇತಶ್ರುತಿ, ಸಮಯವಿರೋಧವೆಂಬ ನಾಲ್ಕುವಿಧ ಪರಿಹಾರಾತ್ಮಕವಾಗಿದೆ. ಆದ್ದರಿಂದ ಸ್ಮೃತ್ಯಧಿಕರಣಕ್ಕೆ ನಾಲ್ಕು ಪಾದಗಳಲ್ಲಿಯೂ ಅಂತರ್ಭಾವ ಕೂಡುವುದಿಲ್ಲ. ಏಕೆಂದರೆ ಒಂದೊಂದು ಪಾದಗಳು ಒಂದೊಂದು ವಿರೋಧ ಪರಿಹಾರರೂಪವಷ್ಟೇ ಆಗಿದೆ. ನಾಲ್ಕು ಪಾದಗಳಲ್ಲಿಯೂ ಅಂತರ್ಭಾವ ಹೊಂದದೇ ಇದ್ದಾಗ ಅಧ್ಯಾಯದ ಪ್ರಾರಂಭದಲ್ಲಿ ಅಥವಾ ಅಧ್ಯಾಯದ ಕೊನೆಯಲ್ಲಿ ಹಾಕಬೇಕು. 'ಪ್ರಥಮಾತಿಕ್ರಮಣೇ ಕಾರಣಾಭಾವಾತ್' ಅಧ್ಯಾಯದ ಪ್ರಾರಂಭದಲ್ಲೇ ಹಾಕಿದ್ದಾರೆ. ಇದೇ ರೀತಿಯಾಗಿ ಆನಂದಮಯಾಧಿಕರಣವೂ ನಾಮಲಿಂಗ ಉಭಯಾತ್ಮಕಶಬ್ದಗಳನ್ನು ಸಮನ್ವಯ ಮಾಡುತ್ತಿರುವುದರಿಂದ ನಾಮಪಾದದಲ್ಲಾಗಲೀ ಲಿಂಗಪಾದದಲ್ಲಾಗಲೀ ಅಂತರ್ಭಾವವಾಗುವುದಿಲ್ಲ. ಆದ್ದರಿಂದ ಸ್ಮೃತ್ಯಧಿಕರಣದಂತೆ ಎರಡೂ ಪಾದಗಳ ಮೊದಲು ಅಥವಾ ಅನಂತರವೇ ಹಾಕಬೇಕು. 'ಪ್ರಥಮಾತಿಕ್ರಮಣೇ ಕಾರಣಾಭಾವಾತ್' ಸೂತ್ರಕಾರರು ಮೊದಲೇ ಹೇಳಿದ್ದಾರೆ.

ಸಮಾಧಾನ - ಇವರ ಅಭಿಪ್ರಾಯವೂ ಸರಿಯಲ್ಲ. ಸ್ಮೃತ್ಯಧಿಕರಣದಲ್ಲಿ ನಾಲ್ಕುವಿಧವಾದ ಪರಿಹಾರಗಳನ್ನು ಮಾಡಿದ್ದರಿಂದ ನಾಲ್ಕು ಪಾದಗಳಲ್ಲಿ ಸಂಗತಿ ಇದೆ. ಆದ್ದರಿಂದ ಆಯಾ ಪಾದಗಳಿಂದ ಬಹಿರ್ಭಾವವು ಸ್ಮೃತ್ಯಧಿಕರಣಕ್ಕೆ ಕೂಡುವುದಿಲ್ಲ. ಇದರಂತೆ ಆನಂದಮಯಾಧಿಕರಣದಲ್ಲಿಯೂ ನಾಮಾತ್ಮಕ ಲಿಂಗಾತ್ಮಕ ಶಬ್ದಗಳನ್ನು ಸಮನ್ವಯ ಮಾಡುತ್ತಿರುವುದರಿಂದ ಎರಡು ಪಾದಗಳಲ್ಲಿಯೂ ಸಂಗತಿ ಇರುತ್ತದೆ. ಈ ವಿಷಯವನ್ನು ಮುಂದೆ ಉಪಪಾದಿಸುತ್ತೇವೆ. ಹೀಗೆ ಆನಂದಮಯಾಧಿಕರಣಕ್ಕೆ ಪಾದದ್ವಯದಲ್ಲಿ ಸಂಗತಿ ಇರುವುದರಿಂದ ಇಲ್ಲಿಯೂ ವಿಚಾರ ಮಾಡಬಹುದು. ಎಲ್ಲೆಡೆಯೂ

ಸಂಗತಿಯಿರುವುದರಿಂದ 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಮೊದಲೇ ಸಮನ್ವಯ ಮಾಡಿದ್ದಾರೆ. ಆದ್ದರಿಂದ ಅಪರರ ಅಭಿಪ್ರಾಯವು ಸೂತ್ರಕಾರರಿಗೆ ವಿರುದ್ಧವಾಗಿದೆ.

ಅಥವಾ ಆನಂದಮಯಾದಿಶಬ್ದಗಳು ಕೇವಲ ನಾಮಾತ್ಮಕವೇ ಆಗಿವೆ. ಆದ್ದರಿಂದಲೂ ಈ ಅಧಿಕರಣಕ್ಕೆ ಸಂಗತಿ ಕೂಡುತ್ತದೆ. ಹೇಗೆಂದರೆ 'ಯಾವ ಶಬ್ದಗಳು ಆಪಾತತಃ ರೂಢಿರಹಿತವೋ ಅವುಗಳು ಲಿಂಗಾತ್ಮಕಗಳು ತದ್ವಿಪರೀತವಾಗಿ ಆಪಾತತಃ ರೂಢವಾದವುಗಳು ನಾಮಾತ್ಮಕಶಬ್ದಗಳು' ಎಂಬ ಪಕ್ಷದಲ್ಲಿ ಆನಂದಮಯಾದಿಶಬ್ದಗಳು ನಾಮಾತ್ಮಕಗಳೇ ಆಗುತ್ತವೆ.

### ಕಠಿಣಪದಾರ್ಥ

ಅತ್ರ = ಈ ಅಧಿಕರಣದಲ್ಲಿ, ಉದ್ಭಿದಾ = ೧) ಮಣ್ಣನ್ನು ಮೇಲೆ ತೆಗೆಯುವ ಸಲಕರಣೆಯಿಂದ, ೨) ಯಾಗವಿಶೇಷದಿಂದ. ಕೋಶೇಷು = ಆನಂದಮಯಾದಿ ಕೋಶಗಳಲ್ಲಿ, ಅಸ್ಯ = ಆನಂದಮಯಾಧಿಕರಣಕ್ಕೆ, ಉಭಯಸಮನ್ವಯಪರತ್ವೇನ = ನಾಮಲಿಂಗೋಭಯಸಮನ್ವಯ ಪರವಾದ್ದರಿಂದ. ವಕ್ಷ್ಯಮಾಣರೀತ್ಯಾ = 'ತಸ್ಮಾತ್' ಇತ್ಯಾದಿಯಾಗಿ ಮುಂದಿನ ವಾಕ್ಯದಲ್ಲಿ ಹೇಳುವಂತೆ, ಇಹಾಪಿ = ನಾಮಪಾದದಲ್ಲಿಯೂ.

**प्रकाशः** – एवं द्विविधां सङ्गतिं निरूप्यास्याधिकरणस्य टीकोक्तं पादान्तर्भावमनुपपत्ति-निरासेन साधयितुमाह – **अत्राधिकरण इति** ।। तत्र योगरूढत्वेन नामत्वं वक्तुं केवलयौगिकत्वं केवलरूढत्वं वाऽनूद्य निराह – **तत्र केचिदिति, अन्ये त्विति च** ।।

उद्भिदिति ।। आद्ये चतुर्थपादे "अपि वा नामधेयं स्यात्" इत्याद्यनये "उद्भिदा यजेत पशुकामः" इत्युदाहृत्योद्भिच्छब्दः किं गुणोवा उच्युत कर्मनामेति सन्देहे, व्रीह्यादिशब्दवत् क्वचिद्रूढ्यभावेऽपि खनित्रादावूर्ध्वं भिनत्तीत्यवयवशक्ति-योगात् प्रवृत्त्यौपयिकत्वेन साफल्याच्च ज्योतिष्टोमे फलाय खनित्रादिरूपगुणविधिः, गुणविशिष्टकर्मान्तरविधिर्वेति प्राप्ते, पदश्रुत्या धात्वर्थविधिसम्भवे वाक्येन गुण-विध्ययोगान्मत्वर्थलक्षणाप्रसङ्गेन कर्मान्तरविध्ययोगाच्च फलोद्भेदसाधनतया कर्मण्य-वयवशक्तिसम्भवेन नामत्वमिति सिद्धान्तितम् ।

तथा तत्रैव तृतीयेऽधिकरणे "अग्निहोत्रं जुहोति" "आघारमाघारयति" इत्यग्निहोत्रशब्दः आघारशब्दश्च किमग्न्याख्यदेवतादिरूपगुणवचनः किं वा कर्मनामेति संशये, अग्निशब्दस्य प्रसिद्धतया अग्नये होत्रमस्मिन्निति बहुव्रीहिणा मत्वर्थलाभेन लक्षणानापत्तेर्नामत्वे देवतालाभे नामरूपत्वादुपसर्जनाग्निविशिष्टहोमविधिरिति प्राप्ते,

श्रुत्या धात्वर्थविधिसम्भवे वाक्यार्थविध्ययोगात् "अग्निर्ज्योतिर्ज्योतिरग्निस्स्वाहा" इति मन्त्रवर्णादग्निप्राप्तेः कर्मनामैवाग्निहोत्रपदमिति सिद्धान्तितम् । एवमाघारशब्देऽपि ध्येयम् । तत्र यथोद्भिदादिशब्दानां यौगिकत्वेऽपि कर्मनामत्वं तथेत्यर्थः ।

योगरूढत्वेऽपि नामत्वमुपेत्य प्रकारान्तरेण सङ्गतिसम्भवं निराह – **अपरे त्विति ।। चतुर्विधेति ।।** "पाशुपतादिस्मृतीनां समयरूपत्वेन स्वोक्तार्थे सम्मतित्वेन श्रुतियुक्तिकथनेन च चतुस्स्वरूपत्वात्" इत्यादिना वक्ष्यमाणदिशेति भावः ।। **अस्येति ।।** अस्याधिकरणस्य नामलिङ्गोभयसमन्वयपरत्वेनेत्यर्थः । 'वक्ष्यमाणरीत्या' इत्युक्तम् । तदाह – **तस्मादिति ।।**

**उक्तरीत्या** पक्षत्रयसम्भवादित्यर्थः । 'इहापि' नामपादेऽपि । अत्रैव विचारे हेतुमाह – **प्रथमेति ।। यथेति ।।** तथैव तत्र वक्ष्यमाणत्वादिति भावः । एतेनास्मिन् पक्षे नामत्वस्यापि सत्वाट्टीकायां नामत्वोक्तिस्तत्त्वप्रदीपे लिङ्गत्वोक्तिश्च युक्ता, टीकोक्तसङ्गतिश्चोक्तरूपेण व्याख्येयेति भावः ।। **नामतैवेति ।।** तथा च टीकायां केवलनामत्वोक्तिर्युक्ता, सङ्गतिश्च सुलभेति भावः ।

**गुरुराजीयम्** – नन्वानन्दमयनाम्न इति टीकायामानन्दमयशब्दस्य नामत्वमुक्तम् । तदयुक्तम् । प्रयोजनाभावादित्यत आह – **अत्रेति ।।** ननूक्तमप्यानन्दमयशब्दस्य नामत्वमयुक्तम् । यौगिकत्वेन तदसम्भवादर्थविशेषे रूढेरभावाच्चेत्यतः कैश्चिदुक्तं समाधानं दूषयितुमनुवदति ।। **तत्र केचिदिति ।।** ननु यौगिकत्वे नामत्वं काप्यदृष्टमित्यत उक्तं उद्भिदिति ।।

ननु दृष्टमपि यौगिकानां नामत्वं कथं घटत इत्यत आह – **सन्ति हीति ।।** अन्वर्था अपि सर्वनामसंज्ञादयो दृष्टा इत्यर्थः । अत्र टीकायां यौगिकमात्रभिन्नत्वरूपमेव नामत्वमभिप्रेतम् । तस्य चानन्दमयेऽसम्भवान्नोभयात्मकत्वं युक्तमित्याह – **अत्राभिप्रेतस्येति ।।**

नच यानि योगरूढानि तानि नामानीत्युभयात्मकत्वं युक्तमिति वाच्यम् । तथात्वे सर्वेषामपि शब्दानां महायोगविद्वद्रूढिभ्यामुभयात्मकत्वेन नामलिङ्गभेदो न स्यादिति भावः । नन्वानन्दमयादिशब्दाः केवलरूढा एव । एवं च टीकोक्तनामत्वं सङ्गच्छते ।

नच रूढिज्ञापकाभावात्कथं रूढत्वमिति वाच्यम् । आनन्दमया मे शुध्यन्ताम् इत्यादौ प्रयोगबाहुल्यस्यैव ज्ञापकत्वादिति केचित्समादधुः । तद्दूषयितुमनुवदति – **अन्ये त्विति** ।। केवलरूढत्वस्य पूर्वपक्षिसिद्धान्तिनोरसंमतत्वादयुक्तं तदित्याह – **पूर्वपक्ष इति** ।।

ननु टीकोक्तं नामत्वं केवलनामत्वमेव न । किन्तु यौगिकत्वे सति नामत्वमेव । नच तर्हि पादासङ्गतत्वात्प्रथमं निवेशो न स्यादिति वाच्यम् । स्मृत्यधिकरणन्यायेन प्रथमं निवेशोपपत्तेरिति केचित्समादधुः । तद्दूषयितुमनुवदति – **अपरे त्विति** ।। किमुभयसमन्वयरूपत्वादस्य पादद्वयेपि सर्वथा सङ्गतिर्नास्तीत्याशयः किंवा एकैकस्मिन्नेव निष्कृष्य सङ्गतिर्नास्तीति । नाद्य इत्याह – **वक्ष्यमाणरीत्येति** ।। द्वितीयमभ्युपगमेनोपसंहरति – **तस्मादिति** ।। यद्वा नामलिङ्गान्यतरमात्रस्य पादार्थत्वात्पादद्वयासङ्गतिरित्येतन्निराचष्टे ।। **तन्नेति** ।। निरवधारणान्यतरसमन्वयस्य पादार्थत्वादुभयत्र सङ्गतिरित्येतदपि निराचष्टे ।। **तन्नेति** ।। अत्र केषाञ्चित्पक्षे केवलयौगिकत्वमभिप्रेतम् । अन्ये त्विति पक्षे च केवलरूढत्वमभिप्रेतमिति न दूषणासङ्गतिः । अत एव चापरे त्वानन्दमयादिशब्दाः योगरूढा इत्युत्तरग्रन्थः सङ्गच्छत इति ध्येयम् । अत्र मयट्शब्दरूपावयवरूढ्यनपेक्षायां गुणिसामान्यवाचित्वम् । तदपेक्षायामर्थविशेषरूढत्वमिति न कश्चिद्विरोध इत्याहुः । आनन्दमयादिशब्दानामुभयात्मकत्वमाश्रित्य पादान्तरसङ्गतत्वेप्याद्यपादे निवेशस्समर्थितः ।

ವಿವರಣೆ - ಇಲ್ಲಿಯ ತನಕ ಅಂತರ್ಭಾವ ಆನಂತರ್ಯ ಎಂಬ ಎರಡುವಿಧ ಸಂಗತಿಗಳನ್ನು ನಿರೂಪಿಸಿದ್ದಾಯಿತು. ಪ್ರಕೃತ ಆನಂದಮಾಧಿಕರಣಕ್ಕೆ ಪಾದಾಂತರ್ಭಾವಸಂಗತಿಯನ್ನು ಸಾಧಿಸುತ್ತಿದ್ದಾರೆ. ಟೀಕೆಯಲ್ಲಿಯೇ ಪಾಂದಾಂತರ್ಭಾವ ಸಂಗತಿಯನ್ನು ಹೇಳಿದ್ದರೂ ಅನುಪಪತ್ತಿಯನ್ನು ಪರಿಹರಿಸುವ ಮೂಲಕ ಟೀಕೆಯಲ್ಲಿ ಹೇಳಿದ್ದನ್ನೇ ಸಮರ್ಥಿಸಲು ಹೊರಟಿದ್ದಾರೆ.

'ಆನಂದಮಯ' ಎಂಬ ಪದವು ಯೋಗರೂಢವಾಗಿದೆ. ಆದರೆ ಕೆಲವರು ಕೇವಲ ಯೌಗಿಕವೆನ್ನುತ್ತಾರೆ. ಕೆಲವರು ಕೇವಲ ರೂಢವೆನ್ನುತ್ತಾರೆ. ಅವರಿಬ್ಬರ ಅಭಿಪ್ರಾಯವನ್ನು 'ತತ್ರ ಕೇಚಿತ್' ಇತ್ಯಾದಿ ಗ್ರಂಥದಿಂದ ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ.

ಕೆಲವರ ಅಭಿಪ್ರಾಯ ಹೀಗಿದೆ - 'ಉದ್ಭಿತ್' 'ಅಗ್ನಿಹೋತ್ರ' ಮೊದಲಾದ ಶಬ್ದಗಳು ಕೇವಲ ಯೌಗಿಕವೇ ಆಗಿವೆ. ಆದರೆ ಸಹ ಕರ್ಮದ ನಾಮಧೇಯಗಳೂ ಆಗುತ್ತವೆ. ಅದರಂತೆ ಆನಂದಮಯಶಬ್ದವು ವಸ್ತುತಃ

ಯೌಗಿಕಪದವೇ ಆಗಿದೆ. ಆದರೂ ನಾಮವಾಚಕವಾಗಬಹುದು. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ಅಧಿಕರಣ ಹೀಗಿದೆ -

## ಉದ್ಭಿದಧಿಕರಣ [1]

'ಅಪಿ ವಾ ನಾಮಧೇಯಂ ಸ್ಯಾತ್' (೧-೪-೧)

ಎಂಬ ಅಧಿಕರಣದಲ್ಲಿ 'ಉದ್ಭಿದಾ ಯಜೇತ ಪಶುಕಾಮಃ' ಎಂಬ ವಾಕ್ಯವನ್ನು ವಿಚಾರ ಮಾಡಲಾಗಿದೆ. ಈ ವಿಷಯವಾಕ್ಯದಲ್ಲಿರುವ 'ಉದ್ಭಿತ್' ಶಬ್ದವು ಗುಣವಾಚಕವೋ? ಅಥವಾ ಕರ್ಮದ ನಾಮವೋ? ಎಂದು ಸಂಶಯ.

ಪೂರ್ವಪಕ್ಷ - 'ವ್ರೀಹಿ' ಮೊದಲಾದ ಶಬ್ದಗಳಿಗೆ ಅರ್ಥವಿಶೇಷದಲ್ಲಿ ಹೇಗೆ ರೂಢಿ ಇರುತ್ತದೋ. ಆದರಂತೆ 'ಉದ್ಭಿತ್' ಶಬ್ದಕ್ಕೆ ಅರ್ಥವಿಶೇಷದಲ್ಲಿ ರೂಢಿ ಇರುವುದಿಲ್ಲ. ಆದರೆ 'ಊರ್ಧ್ವಮ್ ಭಿನತ್ತಿ' ಎಂಬ ಅವಯವಶಕ್ತಿಯಿಂದ ಮಣ್ಣು ತಗೆಯುವ ಸಾಧನವನ್ನು (ಗುದ್ದಲಿಯನ್ನು) ಹೇಳುತ್ತದೆ. 'ಉದ್ಭಿತ್' ಶಬ್ದದಿಂದ ಕೇವಲ ಯೋಗವನ್ನು ವಿವಕ್ಷಿಸಿದರೆ ಏನೂ ಪ್ರಯೋಜನವಿಲ್ಲ. ಖನಿತ್ರವನ್ನು ವಿವಕ್ಷಿಸಿದರೆ ಪ್ರವೃತ್ತಿಗೆ ಅನುಕೂಲವಾಗಿ ಸಫಲವೂ ಆಗುತ್ತದೆ. ಆದ್ದರಿಂದ ಜ್ಯೋತಿಷ್ಟೋಮದಲ್ಲಿ ಏನಾದರೂ ಫಲ ಸಿಗಬೇಕೆಂದರೆ ಖನಿತ್ರ ಎಂಬ ಗುಣವಿಧಿಯನ್ನೇ 'ಉದ್ಭಿದಾ ಯಜೇತ' ಎಂಬ ವಾಕ್ಯವು ಮಾಡುತ್ತಿದೆಯೆಂದು ತಿಳಿಯಬೇಕು.

---

(१) भाट्टसङ्ग्रहः –

**अपि वा नामधेयं स्याद्यदुत्पत्तौ चापूर्वमविधायकत्वात् ।।२।।**

एवं विध्यन्तर्गतत्वेन सामन्यतः सिद्धे प्रामाण्ये अत्र विशेषचिन्तनात् **सङ्गतिः** । यौगिक उद्भिदादिशब्दः किं पशुफलाय गुणविधिपरोऽथ कर्मनामधेयं इति **सन्देहः** । 'दध्ना जुहोति' इत्यादौ दध्न इव उद्भिन्नामकगुणस्याप्रसिद्धावपि 'उद्भिद्यते भूमिरनेन' इति व्युत्पत्त्या योगेन खनित्रादिवाचित्वसम्भवात् प्रकृतज्योतिष्टोमयागं 'यजेत' इति यजिना अनूद्य पशुफलाय खनित्रादिगुणो विधीयते 'उद्भिदा यागनिर्वृत्तिद्वारा पशून् भावयेत्' इति, इति **प्राप्ते** समानाधिकरण्येनान्वये सम्भवति 'उद्भिदा साधितेन यागेन पशून् भावयेत्' इति वैयधिकरण्येनान्वयमुपेत्य गुणविधिपक्षे गुणफलसम्बन्धविधानेन धात्वर्थस्याविधानात् धातोरत्यन्तपारार्थ्यापत्तिः । 'उद्भिद्यते पशुफलमनेन यागेन' इति व्युत्पत्त्या उद्भिच्छब्दस्य यागनामत्वे तु फलाय यागविधानेन धातोरपारार्थ्यं सामानाधिकरण्यं च लभ्यते । न च 'उद्भिद्वता यागेन' इत्युक्तावपि सामानाधिकरण्यलाभ इति वाच्यम् । मत्वर्थलक्ष्णादोष-प्रसङ्गात् । अतः कर्मनामधेयमुद्भिदादिशब्दः इति **सिद्धान्तः** । **फलन्तु** 'अनेनाहं यक्ष्ये' इत्यादिव्यवहारो नामत्वसमर्थनस्येति ज्ञेयम् । **सूत्रार्थस्तु, उत्पत्तौ** प्रथमज्ञाने **यदपूर्व**-मर्थान्तरावाचकत्वेन प्रसिद्धं उद्भिदादि **तन्नामधेयं स्यात्** । कुतः मत्वर्थलक्षणादोषेण **गुणविधायकत्वासम्भवादिति** ।।२।।

ಅಥವಾ ಇಲ್ಲಿ ಖನಿತ್ರವನ್ನು ವಿಧಾನ ಮಾಡುತ್ತಿಲ್ಲ. ಖನಿತ್ರದಿಂದ ವಿಶಿಷ್ಟವಾದ ಮತ್ತೊಂದು ಕರ್ಮವನ್ನು ವಿಧಾನ ಮಾಡುತ್ತಿದೆ ಎಂದು. ಒಟ್ಟು ಇಲ್ಲಿ ಎರಡು ಪಕ್ಷಗಳನ್ನು ಹೇಳಿದಂತಾಯಿತು. ಪ್ರಸಕ್ತವಾದ 'ಜ್ಯೋತಿಷ್ಟೋಮ' ಎಂಬ ಯಾಗದಲ್ಲಿಯೇ ಖನಿತ್ರವೆಂಬ ಗುಣವನ್ನು ವಿಧಾನ ಮಾಡುತ್ತಿದೆ ಎಂದು. ಮತ್ತೊಂದು ಪಕ್ಷ ಜ್ಯೋತಿಷ್ಟೋಮಯಾಗದಲ್ಲಿ ಈ ವಾಕ್ಯ ಏನನ್ನೂ ಹೇಳುತ್ತಿಲ್ಲ. ಬೇರೆ ಒಂದು ಯಾಗದಲ್ಲಿ ಗುಣವಿಶಿಷ್ಟವಾದ ಕರ್ಮವನ್ನು ವಿಧಾನ ಮಾಡುತ್ತಿದೆ ಎಂದು. ಅಂತೂ ಎರಡುವಿಧ ಪಕ್ಷಗಳಲ್ಲಿ 'ಉದ್ಭಿತ್' ಎಂಬುದು ಯಾಗದ ಹೆಸರಲ್ಲ ಎಂದು ಹೇಳಿದಂತಾಯಿತು.

ಸಿದ್ಧಾಂತ - ಗುಣವಿಧಿ ಎಂಬ ಪಕ್ಷ ತಪ್ಪು ಯಾಗದ ವಿಧಿಯೆಂದು ಹೇಳಿದಾಗ ಸ್ವಾರಸ್ಯವಿದೆ. 'ಯಜೇತ' ಎಂಬ ಏಕಪದರೂಪವಾದ ಶ್ರುತಿಯ ಬಲದಿಂದ ಈ ವಾಕ್ಯದಲ್ಲಿ ಯಾಗವೇ ವಿಹಿತವಾಗಿದೆಯೆಂದು ಸುಲಭವಾಗಿ ಹೇಳಬಹುದು. ವಾಕ್ಯದ ವಿಧಿಯಿಂದ ಗುಣವಿಧಿಯೆಂದು ಹೇಳಬಾರದು. ಶ್ರುತಿವಿಧಿವಾಕ್ಯಗಳಲ್ಲಿ ವಾಕ್ಯವಿಧಿಯು ದುರ್ಬಲವಾಗಿದೆ. ಉದಾಹರಣೆ - 'ದಧ್ನಾ ಜುಹೋತಿ' ಎಂಬಲ್ಲಿರುವ ಲೇಟ್ ಎಂಬ ವಿಧಿಪ್ರತ್ಯಯವು ಹೋಮವನ್ನು ವಿಧಿಸುತ್ತಿಲ್ಲ. ಹೋಮವು ಮೊದಲೇ ಸಿದ್ಧವಾಗಿದೆ. ಕಿಂತು ದಧಿಯೆಂಬ ಗುಣವನ್ನಷ್ಟೇ ವಿಧಿಸುತ್ತಿದೆ. ಇಲ್ಲಿ ವಿಧಿಪ್ರತ್ಯಯವು ಧಾತುವಿನ ಜೊತೆ ಸಂಬದ್ಧವಾಗಿದೆ. ಆದರೆ ವಿಧೇಯವಾದ ದಧಿಯು ಪದಾಂತರೋಪಾತ್ತವಾಗಿದೆ. ಇಂತಹ ಸಂದರ್ಭದಲ್ಲಿ 'ದಧ್ನಾ' ಮತ್ತು 'ಜುಹೋತಿ' ಎಂಬ ಎರಡೂ ಪದಗಳ ಸಮಭಿವ್ಯಾಹಾರರೂಪವಾದ ವಾಕ್ಯದಿಂದಲೇ ಗುಣವಿಧಿಯೆಂದು ಹೇಳಬೇಕು. ಆದರೆ ಕೇವಲ ಯಾಗವೇ ವಿಧೇಯವಾದಲ್ಲಿ 'ಯಜೇತ' ಎಂದಷ್ಟೇ ಸಾಕಾಗುತ್ತದೆ. ಪ್ರಕೃತ 'ಉದ್ಭಿದಾ ಯಜೇತ' ಎಂಬುದು 'ದಧ್ನಾ ಜುಹೋತಿ' ಎಂಬಂತೆ ಗುಣವಿಧಿಯೋ? ಅಥವಾ ಯಾಗವಿಧಿಯೋ? ಎಂಬ ಸಂಶಯ ಬಂದಾಗ ಯಾಗವಿಧಿಯೆಂದೇ ಹೇಳಬೇಕು. ಯಾಗವಿಧಿಯೆಂದು ಹೇಳಿದಾಗ ಏಕಪದದಿಂದಲೇ ವಿಧಿ ಹೇಳಿದಂತಾಗುತ್ತವೆ. ಗುಣವಿಧಿಯೆಂದರೆ ಅನೇಕಪದಸಮಭಿವ್ಯಾಹಾರರೂಪವಾದ ವಾಕ್ಯದಿಂದ ವಿಧಿಯೆಂದು ಹೇಳಬೇಕು. ಏಕಪದಶ್ರುತಿಯಿಂದಲೇ ವಿಧಿಯನ್ನು ಹೇಳಲು ಬರುವಾಗ ಅನೇಕ ಪದಸಮಭಿವ್ಯಾಹಾರ-ರೂಪವಾದ ವಾಕ್ಯದಿಂದ ವಿಧಿಯನ್ನು ಕಲ್ಪಿಸುವುದು ಗೌರವ. ಆದ್ದರಿಂದ ಗುಣವಿಧಿಯೆಂಬ ಪಕ್ಷ ತಪ್ಪಾಯಿತು.

ಹಾಗಾದರೆ ಗುಣವಿಶಿಷ್ಟಕರ್ಮವಿಧಿಯೆಂದು ಹೇಳೋಣ ಎಂದರೆ ಇದೂ ತಪ್ಪಾಗುತ್ತದೆ. 'ಉದ್ಭಿದಾ ಯಜೇತ' ಎಂದರೆ ಖನಿತ್ರ ಎಂಬ ದ್ರವ್ಯದಿಂದ ವಿಶಿಷ್ಟವಾದ ಜ್ಯೋತಿಷ್ಟೋಮವೆಂಬ ಯಾಗಕ್ಕಿಂತ ಭಿನ್ನವಾದ ಯಾಗವನ್ನು ಮಾಡಬೇಕೆಂದು ಅರ್ಥವಾಗುತ್ತದೆ. ಆವಾಗ 'ಉದ್ಭಿತ್' ಶಬ್ದಕ್ಕೆ ಖನಿತ್ರ ಉಳ್ಳಂತಹ ಯಾಗದಿಂದ ಎಂದು ಮತ್ವರ್ಥದಲ್ಲಿ ಲಕ್ಷಣಾ ಮಾಡಬೇಕು.

ಆದ್ದರಿಂದ ಹೀಗೆ ಸಿದ್ಧಾಂತ - 'ಉದ್ಭಿತ್' ಎಂಬುದು ಯಜ್ಞದ ಹೆಸರು. 'ಉದ್ಭಿದ್ಯತೇ ಫಲಂ ಅನೇನ ಇತಿ ಉದ್ಭಿತ್' 'ಫಲಗಳ ಅಭಿವ್ಯಕ್ತಿಯು ಯಾವುದರಿಂದ ಆಗುತ್ತದೋ, ಅದು ಉದ್ಭಿತ್' ಎಂದು ನಿಷ್ಪತ್ತಿ ಮಾಡಿದಾಗ ಯಾಗದ ಹೆಸರಾಗುತ್ತದೆ. 'ಫಲದ ಉದ್ಭೇದನಸಾಧನವಾದ ಯಾಗದಿಂದ ಪಶುಂ ಭಾವಯೇತ್' ಎಂದು 'ಉದ್ಭಿದಾ ಯಜೇತ' ಎಂಬುದರ ಅರ್ಥ. ಹೀಗೆ ಹೇಳಿದಾಗ ಗುಣವಿಧಿಯನ್ನಾಗಲೀ ಗುಣವಿಶಿಷ್ಟಕರ್ಮಾಂತರವಿಧಿಯೆಂದಾಗಲೀ ಅಂಗೀಕರಿಸಬೇಕಾಗಿಲ್ಲ. ಫಲೋದ್ಭೇದನಸಾಧನವೆಂದು ಒಪ್ಪಿದ್ದರಿಂದ ಅವಯವಶಕ್ತಿಯೂ ಇದೆ. ಯಾಗದ ಹೆಸರಾದ್ದರಿಂದ ನಾಮಧೇಯವೂ ಆಗಿದೆ.

ಇಲ್ಲಿ ಹೇಗೆ 'ಉದ್ಭಿತ್' ಎಂಬ ಶಬ್ದವು ಯೌಗಿಕವಾಗಿದ್ದರೂ ರೂಢವೂ ಆಗಿದೆಯೋ ಅದರಂತೆ ಆನಂದಮಯಶಬ್ದವೂ ಸಹ ಯೌಗಿಕವಾಗಿದ್ದರೂ ನಾಮಧೇಯವೂ ಆಗುತ್ತದೆ.

## ಅಗ್ನಿಹೋತ್ರಾಧಿಕರಣ[1]

'ಅಗ್ನಿಹೋತ್ರಂ ಜುಹೋತಿ' 'ಆಘಾರಮಾಘಾರಯತಿ' ಈ ಎರಡು ಶ್ರುತಿಗಳಲ್ಲಿರುವ 'ಅಗ್ನಿಹೋತ್ರ'

---

(१) भाट्टसङ्ग्रहः –

**अथ तुरीयमग्निहोत्रशदिशब्दानां यागनामधेयत्वाधिकरणम्**

**तत्प्रख्यश्चान्यशास्त्रम् ।। ४ ।।**

पूर्ववैषम्येण पूर्वपक्षोत्थानात्प्रत्युदाहरणसङ्गतिः । 'अग्निहोत्रं जुहोति' इत्यादावग्निहोत्रशब्दः किं गुणविधिपरः, कर्मनाम वेति **सन्देहे** पूर्वत्रोद्भिच्छब्दे मत्वर्थलक्षणादोषाच्चित्रादिशब्दे वाक्यभेदादिदोषादुद्भिच्चित्रादिशब्दानां गुणविधिपरत्वासम्भवेन नामत्वेपीह 'अग्नये होत्रं हविरस्मिन्' इति बहुव्रीहिणा मत्वर्थलक्षणादोषं विनैवोपसर्जनीभूतोऽग्निदेतारूपो गुणोऽविहितदेवताकेषु दर्वीहोमेषु विधीयते । नामत्वे तु द्रव्यदेवतारूपयागरूपाभावेन यागस्वरूपस्यैवासिद्धेः इति **प्राप्ते, सिद्धान्तः** एकपदोपात्तधात्वर्थविधिसम्भवे भिन्नपदोपात्तार्थविध्ययोगात् 'दध्ना जुहोति' इत्यादिवाक्यैर्दध्यादिद्रव्यस्य 'अग्निर्ज्योतिर्ज्योतिरग्निः स्वाहेति सायं जुहोति' 'सूर्यो ज्योतिर्ज्योतिः सूर्यः स्वाहेति प्रातः' इति विहितमन्त्रलिङ्गप्राप्ताग्निसूर्याख्यदेवतयोश्च सत्त्वेन यागस्वरूपावगतिसम्भवान्मन्त्रप्राप्ताग्निसम्बन्धनिमित्तं यौगिकमग्निहोत्रपदं नामधेयमिति ।

एवं 'आघारमाधारयति' इत्यत्रापि आघारशब्दो गुणविधिपरः, उत कर्मनामधेयमिति **सन्देहे** 'घृ क्षरणदीप्त्योः' इति धातोरुत्पन्नाऽघारशब्दार्थमुपांशुयाजसम्बन्धि क्षरद्द्रव्यं घृतं द्वितीयया निर्दिश्य 'आघारयति' इति तस्य संस्कार्यत्वमुच्यत इति **प्राप्ते** 'चतुर्गृहीतं वा एतदभूत्तस्याघारमाघार्य' इत्यनेन क्षरणात्मकत्वं प्राप्तमिति तन्निमित्तं यौगिकं यत्र कर्मणि नैऋर्ती दिशमारभ्यैशानीं दिशमवधिं कृत्वा सन्तत्या घृतं क्षार्यते तस्य कर्मणो नामधेयमिति **सिद्धान्तितम्** । तथा च **सूत्रम्** ।। **तत्प्रख्यश्चेत्यादि** ।। **तस्य** विधित्सितस्याग्निरूपगुणस्य उद्देश्यस्याज्यस्य प्रख्यापकं प्रापकमन्यत् 'अग्निर्ज्योतिः' इत्यादि **शास्त्रं** अस्तीति नामैवैतदिति । 'अग्निहोत्रेण जुहोति' 'आघारेणाधारयति' इति वाच्ये द्वितीयया निर्देशस्तु अनुष्ठानादूर्ध्वं धात्वर्थस्य सिद्धत्वाकारेण करणत्वेऽपि ततः पूर्वं साध्यत्वाकारं वक्तुमिति ज्ञेयम् । **फलन्तु** मासाग्निहोत्रे नाम्ना नैयमिकाग्निहोत्रधर्माणामतिदेशः आघारपदस्य नामत्वे तु 'इन्द्र ऊर्ध्वम्' इति मन्त्रस्य तन्मात्रे विनियोगेनेन्द्रस्योपांशुदेवतात्वाभावात् विष्णवादीनामुपांशुयाजदेवतानां नेन्द्रेण विकल्प इति ।। ४।।

इति तुरीयमग्निहोत्रादिपदानां यागनामधेयत्वाधिकरणम्

ಮತ್ತು 'ಆಘಾರ' ಎಂಬ ಶಬ್ದಗಳು ಅಗ್ನಿ ಮೊದಲಾದ ದೇವತೆಗಳೆಂಬ ಗುಣವನ್ನು ಹೇಳುತ್ತದೋ? ಅಥವಾ ಅಗ್ನಿಹೋತ್ರ ಎಂಬ ಕರ್ಮವನ್ನು ಹೇಳುತ್ತದೋ? ಎಂದು ಸಂಶಯ.

ಪೂರ್ವಪಕ್ಷ - ''ಯಾವ ಕರ್ಮದಲ್ಲಿ ಅಗ್ನಿಯ ಉದ್ದೇಶದಿಂದ ಹವಿಸ್ಸು ಹಾಕಲ್ಪಡುತ್ತದೋ, ಅದು ಅಗ್ನಿಹೋತ್ರ'' ಎಂಬ ಬಹುವ್ರೀಹಿಯ ಬಲದಿಂದಲೇ ಮತುಪ್‌ಪ್ರತ್ಯಯದ ಅರ್ಥ ಬರುತ್ತದೆ. ಪುನಃ ಮತುಪ್‌ಪ್ರತ್ಯಯಾರ್ಥದಲ್ಲಿ ಅತ್ರಿಹೋತ್ರಶಬ್ದಕ್ಕೆ ಲಕ್ಷಣಾ ಮಾಡಬೇಕಾಗಿಲ್ಲ. ಮತ್ತು 'ಅಗ್ನಯೇ ಹೋತ್ರಂ ಯಸ್ಮಿನ್ ತತ್' ಎಂದು ಸಮಾಸ ಮಾಡುವಾಗ 'ಅಗ್ನಯೇ' ಎಂದು ಚತುರ್ಥೀವಿಭಕ್ತಿಪ್ರಯೋಗ ಇದೆ. ಈ ಚತುರ್ಥಿಯಿಂದ ದೇವತೆಯ ಪ್ರತೀತಿ ಬರುತ್ತದೆ. (ಮೀಮಾಂಸಕರ ಮತದಲ್ಲಿ ಚತುರ್ಥ್ಯಂತಪದವು ದೇವತಾವಾಚಕವಾಗುತ್ತದೆ.) ಒಂದು ವೇಳೆ ಅಗ್ನಿಹೋತ್ರಶಬ್ದವು ಕರ್ಮವಾಚಕವಾದರೆ ದೇವತಾವಾಚಕಪದವೇ ಇಲ್ಲವೆಂದಾಯಿತು. ಯಾಗವೆನಿಸಬೇಕಾದರೆ ದ್ರವ್ಯ ಮತ್ತು ದೇವತೆಗಳು ಇರಬೇಕು. ಇವೆರಡರಲ್ಲಿ ಒಂದು ಇಲ್ಲದಿದ್ದರೂ ಯಾಗವು ಸಿದ್ಧವಾಗುವುದಿಲ್ಲ. ಆದ್ದರಿಂದ ಅಗ್ನಿಹೋತ್ರಶಬ್ದವು ದೇವತಾವಾಚಕವಾದಾಗ ಮತ್ವರ್ಥಲಕ್ಷಣಾ ಮಾಡಬೇಕಾಗಿಲ್ಲ. ದೇವತಾಪ್ರಸಿದ್ಧಿಗೂ ವಿಘಾತವಿಲ್ಲ. ಸಮಾಸದ ಕಾಲದಲ್ಲಿ ಚತುರ್ಥೀ ಇರುವುದರಿಂದ ದೇವತಾಲಾಭವೂ ಆಗುತ್ತದೆ. ಕರ್ಮವಾಚಿಯಾದರೆ ದೇವತಾ ಇಲ್ಲದೆ ಹೋಗಬೇಕಾದೀತು. ಇಷ್ಟು ಸಾಧಕ - ಬಾಧಕಗಳಿರುವುದರಿಂದ ಅಗ್ನಿಹೋತ್ರಶಬ್ದವು ಕರ್ಮವಾಚಿಯಾಗುವುದಿಲ್ಲ. ಕಿಂತು ಅಗ್ನಿದೇವತೆಯಿಂದ ವಿಶಿಷ್ಟವಾದ ಹೋಮವನ್ನು ವಿಧಾನ ಮಾಡುತ್ತದೆ. 'ಅಗ್ನಿಹೋತ್ರಂ ಜುಹೋತಿ' ಎಂದರೆ ಅಗ್ನಿಗೋಸ್ಕರ ಹವಿಸ್ಸನ್ನು ಯಾವ ಯಾಗದಲ್ಲಿ ಹಾಕುತ್ತಾರೋ ಆ ಹೋಮವನ್ನು ಮಾಡಬೇಕೆಂದು ಅರ್ಥ.

ಸಿದ್ಧಾಂತ - 'ಅಗ್ನಿಹೋತ್ರ' ಶಬ್ದವು ಕರ್ಮವಾಚಿಯೇ ಆಗಿದೆ ಹೊರತು ದೇವತಾವಾಚಿಯಾಗಿಲ್ಲ. ನೀವು ಗುಣವಿಶಿಷ್ಟಕರ್ಮವನ್ನು ಈ ವಾಕ್ಯದಿಂದ ವಿಧಾನ ಮಾಡುತ್ತಿದ್ದೀರಿ. ಆವಾಗ ಗುಣವನ್ನೂ ವಿಧಾನ ಮಾಡಿದಂತಾಗುತ್ತದೆ. ಈ ಗುಣದ ವಿಧಾನಕ್ಕೆ ಅನೇಕ ಪದಸಮಭಿವ್ಯಾಹಾರರೂಪವಾದ ವಾಕ್ಯವನ್ನೇ ಆಶ್ರಯಿಸಬೇಕಾಗುತ್ತದೆ. ಆದರೆ ಕರ್ಮವಿಧಾಯಕವೆಂದು ಹೇಳಿದಾಗ ಪದಶ್ರುತಿಯಿಂದಲೇ ಧಾತ್ವರ್ಥವಿಧಿಯು ಕೂಡುತ್ತದೆ. (ಉದ್ಭಿದಧಿಕರಣದಲ್ಲಿ ಹೇಳಿದ್ದನ್ನೇ ಇಲ್ಲಿಯೂ ತಿಳಿಯಬೇಕು) ಕರ್ಮವಿಧಾಯಕವಾದರೆ ದೇವತೆಯ ಲಾಭ ಹೇಗೆ? ಎಂದರೆ 'ಅಗ್ನಿರ್ಜ್ಯೋತಿ ಜ್ಯೋತಿರಗ್ನಿಃ ಸ್ವಾಹಾ' ಎಂಬ ಮಂತ್ರವರ್ಣದಿಂದ ಅಗ್ನಿದೇವತೆಯ ಪ್ರಾಪ್ತಿಯಾಗುತ್ತದೆ. ದೇವತೆಯ ಲಾಭವು 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯದಿಂದಲೇ ಆಗಬೇಕೆಂದೇನು ಇಲ್ಲ. 'ದೇವತಾ ಮಾಂತ್ರವರ್ಣಿಕೀ' ಎಂಬಂತೆ ಕರ್ಮಭಾಗದಲ್ಲಿ ದೇವತೆಯನ್ನು ಹೇಳದಿದ್ದರೆ ಮಂತ್ರಭಾಗದಲ್ಲಿರುವ ದೇವತೆಯನ್ನು ತೆಗೆದುಕೊಳ್ಳಬೇಕೆಂದು ಮೀಮಾಂಸಕರ ಸಿದ್ಧಾಂತ. ಆದ್ದರಿಂದ 'ಅಗ್ನಿಹೋತ್ರಂ ಜುಹೋತಿ' ಎಂದರೆ ಅಗ್ನಿಹೋತ್ರ ಎಂಬ ಹೋಮವನ್ನು ಮಾಡುತ್ತಾನೆಂದರ್ಥ. ಹೀಗೆ ಅಗ್ನಿಹೋತ್ರಶಬ್ದವು ಕರ್ಮದ ಹೆಸರೇ ಆಗುತ್ತದೆಂದು ಸಿದ್ಧಾಂತ. ಇದರಂತೆ ಆಘಾರಶಬ್ದದಲ್ಲಿಯೂ ತಿಳಿಯಬೇಕು. ಇಲ್ಲಿ ಹೇಗೆ ಅಗ್ನಿಹೋತ್ರಾದಿಶಬ್ದಗಳು ಯೌಗಿಕವಾಗಿದ್ದರೂ ಕರ್ಮದಲ್ಲಿ ರೂಢವಾಗಿವೆಯೋ ಅದರಂತೆ ಆನಂದಮಯಶಬ್ದವೂ ಸಹ ಯೌಗಿಕವಾಗಿದ್ದರೂ ರೂಢವಾಗುತ್ತವೆ. ಇನ್ನು ಕೆಲವರು ಆನಂದಮಯಶಬ್ದವನ್ನು ಯೋಗರೂಢವೆಂದು ಒಪ್ಪುತ್ತಾರೆ. ಆದರೆ ಪಾದಸಂಗತಿಯನ್ನು ಬೇರೆ ರೀತಿಯಾಗಿ ಹೇಳುತ್ತಾರೆ. ಅದನ್ನು ಗ್ರಂಥಕಾರರು 'ಅಪರೇ ತು' ಎಂದು ನಿರಾಕರಣೆ ಮಾಡುತ್ತಿದ್ದಾರೆ.

*ಆನಂದಮಯಾಧಿಕರಣ*

ಇಲ್ಲಿ ಹೇಗೆ 'ಉದ್ಭಿತ್' ಎಂಬ ಶಬ್ದವು ಯೌಗಿಕವಾಗಿದ್ದರೂ ರೂಢವೂ ಆಗಿದೆಯೋ ಅದರಂತೆ ಆನಂದಮಯಶಬ್ದವೂ ಸಹ ಯೌಗಿಕವಾಗಿದ್ದರೂ ನಾಮಧೇಯವೂ ಆಗುತ್ತದೆ.

## ಅಗ್ನಿಹೋತ್ರಾಧಿಕರಣ[1]

'ಅಗ್ನಿಹೋತ್ರಂ ಜುಹೋತಿ' 'ಆಘಾರಮಾಘಾರಯತಿ' ಈ ಎರಡು ಶ್ರುತಿಗಳಲ್ಲಿರುವ 'ಅಗ್ನಿಹೋತ್ರ'

---

(१) भाट्टसङ्ग्रहः –

**अथ तुरीयमग्निहोत्रशदिशब्दानां यागनामधेयत्वाधिकरणम्**

**तत्प्रख्यश्चान्यशास्त्रम् ।। ४ ।।**

पूर्ववैषम्येण पूर्वपक्षोत्थानात्प्रत्युदाहरण**सङ्गतिः** । 'अग्निहोत्रं जुहोति' इत्यादावग्निहोत्रशब्दः किं गुणविधिपरः, कर्मनाम वेति **सन्देहे** पूर्वत्रोद्भिच्छब्दे मत्वर्थलक्षणादोषाच्चित्रादिशब्दे वाक्यभेदादिदोषादुद्भिच्चित्रादिशब्दानां गुणविधिपरत्वासम्भवेन नामत्वेपीह 'अग्नये होत्रं हविरस्मिन्' इति बहुव्रीहिणा मत्वर्थलक्षणादोषं विनैवोपसर्जनीभूतोऽग्निदेतारूपो गुणोऽविहितदेवताकेषु दर्वीहोमेषु विधीयते । नामत्वे तु द्रव्यदेवतारूपयागरूपाभावेन यागस्वरूपस्यैवासिद्धेः इति **प्राप्ते, सिद्धान्तः** एकपदोपात्तधात्वर्थविधिसम्भवे भिन्नपदोपात्तार्थविध्ययोगात् 'दध्ना जुहोति' इत्यादिवाक्यैर्दध्यादिद्रव्यस्य 'अग्निर्ज्योतिर्ज्योतिरग्निः स्वाहेति सायं जुहोति' 'सूर्यो ज्योतिर्ज्योतिः सूर्यः स्वाहेति प्रातः' इति विहितमन्त्रलिङ्गप्राप्ताग्निसूर्याख्यदेवतयोश्च सत्त्वेन यागस्वरूपावगतिसम्भवान्मन्त्रप्राप्ताग्निसम्बन्धनिमित्तं यौगिकमग्निहोत्रपदं नामधेयमिति ।

एवं 'आघारमाधारयति' इत्यत्रापि आघारशब्दो गुणविधिपरः, उत कर्मनामधेयमिति **सन्देहे** 'घृ क्षरणदीप्त्योः' इति धातोरुत्पन्नाऽघारशब्दार्थमुपांशुयाजसम्बन्धि क्षरद्द्रव्यं घृतं द्वितीयया निर्दिश्य 'आघारयति' इति तस्य संस्कार्यत्वमुच्यत इति **प्राप्ते** 'चतुर्गृहीतं वा एतदभूत्तस्याघारमाघार्य' इत्यनेन क्षरणात्मकत्वं प्राप्तमिति तन्निमित्तं यौगिकं यत्र कर्मणि नैरृर्तीं दिशमारभ्यैशानीं दिशमवधिं कृत्वा सन्तत्या घृतं क्षार्यते तस्य कर्मणो नामधेयमिति **सिद्धान्तितम्** । तथा च **सूत्रम्** ।। **तत्प्रख्यश्चेत्यादि** ।। **तस्य** विधित्सितस्याग्निरूपगुणस्य उद्देश्यस्याज्यस्य प्रख्यापकं प्रापकमन्यत् 'अग्निर्ज्योतिः' इत्यादि **शास्त्रं** अस्तीति नामैवैतदिति । 'अग्निहोत्रेण जुहोति' 'आघारेणाधारयति' इति वाच्ये द्वितीयया निर्देशस्तु अनुष्ठानादूर्ध्वं धात्वर्थस्य सिद्धत्वाकारेण करणत्वेऽपि ततः पूर्वं साध्यत्वाकारं वक्तुमिति ज्ञेयम् । **फलन्तु** मासाग्निहोत्रे नाम्ना नैयमिकाग्निहोत्रधर्माणामतिदेशः आघारपदस्य नामत्वे तु 'इन्द्र ऊर्ध्वम्' इति मन्त्रस्य तन्मात्रे विनियोगेनेन्द्रस्योपांशुदेवतात्वाभावात् विष्णवादीनामुपांशुयाजदेवतानां नेन्द्रेण विकल्प इति ।। ४।।

इति तुरीयमग्निहोत्रादिपदानां यागनामधेयत्वाधिकरणम्

ಮತ್ತು 'ಆಘಾರ' ಎಂಬ ಶಬ್ದಗಳು ಅಗ್ನಿ ಮೊದಲಾದ ದೇವತೆಗಳೆಂಬ ಗುಣವನ್ನು ಹೇಳುತ್ತದೋ? ಅಥವಾ ಅಗ್ನಿಹೋತ್ರ ಎಂಬ ಕರ್ಮವನ್ನು ಹೇಳುತ್ತದೋ? ಎಂದು ಸಂಶಯ.

ಪೂರ್ವಪಕ್ಷ - ''ಯಾವ ಕರ್ಮದಲ್ಲಿ ಅಗ್ನಿಯ ಉದ್ದೇಶದಿಂದ ಹವಿಸ್ಸು ಹಾಕಲ್ಪಡುತ್ತದೋ, ಅದು ಅಗ್ನಿಹೋತ್ರ'' ಎಂಬ ಬಹುವ್ರೀಹಿಯ ಬಲದಿಂದಲೇ ಮತುಪ್‌ಪ್ರತ್ಯಯದ ಅರ್ಥ ಬರುತ್ತದೆ. ಪುನಃ ಮತುಪ್‌ಪ್ರತ್ಯಯಾರ್ಥದಲ್ಲಿ ಅಗ್ನಿಹೋತ್ರಶಬ್ದಕ್ಕೆ ಲಕ್ಷಣಾ ಮಾಡಬೇಕಾಗಿಲ್ಲ. ಮತ್ತು 'ಅಗ್ನಯೇ ಹೋತ್ರಂ ಯಸ್ಮಿನ್ ತತ್' ಎಂದು ಸಮಾಸ ಮಾಡುವಾಗ 'ಅಗ್ನಯೇ' ಎಂದು ಚತುರ್ಥೀವಿಭಕ್ತಿಪ್ರಯೋಗ ಇದೆ. ಈ ಚತುರ್ಥಿಯಿಂದ ದೇವತೆಯ ಪ್ರತೀತಿ ಬರುತ್ತದೆ. (ಮೀಮಾಂಸಕರ ಮತದಲ್ಲಿ ಚತುರ್ಥ್ಯಂತಪದವು ದೇವತಾವಾಚಕವಾಗುತ್ತದೆ.) ಒಂದು ವೇಳೆ ಅಗ್ನಿಹೋತ್ರಶಬ್ದವು ಕರ್ಮವಾಚಕವಾದರೆ ದೇವತಾವಾಚಕಪದವೇ ಇಲ್ಲವೆಂದಾಯಿತು. ಯಾಗವೆನಿಸಬೇಕಾದರೆ ದ್ರವ್ಯ ಮತ್ತು ದೇವತೆಗಳು ಇರಬೇಕು. ಇವೆರಡರಲ್ಲಿ ಒಂದು ಇಲ್ಲದಿದ್ದರೂ ಯಾಗವು ಸಿದ್ಧವಾಗುವುದಿಲ್ಲ. ಆದ್ದರಿಂದ ಅಗ್ನಿಹೋತ್ರಶಬ್ದವು ದೇವತಾವಾಚಕವಾದಾಗ ಮತ್ವರ್ಥಲಕ್ಷಣಾ ಮಾಡಬೇಕಾಗಿಲ್ಲ. ದೇವತಾಪ್ರಸಿದ್ಧಿಗೂ ವಿಘಾತವಿಲ್ಲ. ಸಮಾಸದ ಕಾಲದಲ್ಲಿ ಚತುರ್ಥೀ ಇರುವುದರಿಂದ ದೇವತಾಲಾಭವೂ ಆಗುತ್ತದೆ. ಕರ್ಮವಾಚಿಯಾದರೆ ದೇವತಾ ಇಲ್ಲದೆ ಹೋಗಬೇಕಾದೀತು. ಇಷ್ಟು ಸಾಧಕ - ಬಾಧಕಗಳಿರುವುದರಿಂದ ಅಗ್ನಿಹೋತ್ರಶಬ್ದವು ಕರ್ಮವಾಚಿಯಾಗುವುದಿಲ್ಲ. ಕಿಂತು ಅಗ್ನಿದೇವತೆಯಿಂದ ವಿಶಿಷ್ಟವಾದ ಹೋಮವನ್ನು ವಿಧಾನ ಮಾಡುತ್ತದೆ. 'ಅಗ್ನಿಹೋತ್ರಂ ಜುಹೋತಿ' ಎಂದರೆ ಅಗ್ನಿಗೋಸ್ಕರ ಹವಿಸ್ಸನ್ನು ಯಾವ ಯಾಗದಲ್ಲಿ ಹಾಕುತ್ತಾರೋ ಆ ಹೋಮವನ್ನು ಮಾಡಬೇಕೆಂದು ಅರ್ಥ.

ಸಿದ್ಧಾಂತ - 'ಅಗ್ನಿಹೋತ್ರ' ಶಬ್ದವು ಕರ್ಮವಾಚಿಯೇ ಆಗಿದೆ ಹೊರತು ದೇವತಾವಾಚಿಯಾಗಿಲ್ಲ. ನೀವು ಗುಣವಿಶಿಷ್ಟಕರ್ಮವನ್ನು ಈ ವಾಕ್ಯದಿಂದ ವಿಧಾನ ಮಾಡುತ್ತಿದ್ದೀರಿ. ಆವಾಗ ಗುಣವನ್ನೂ ವಿಧಾನ ಮಾಡಿದಂತಾಗುತ್ತದೆ. ಈ ಗುಣದ ವಿಧಾನಕ್ಕೆ ಅನೇಕ ಪದಸಮಭಿವ್ಯಾಹಾರರೂಪವಾದ ವಾಕ್ಯವನ್ನೇ ಆಶ್ರಯಿಸಬೇಕಾಗುತ್ತದೆ. ಆದರೆ ಕರ್ಮವಿಧಾಯಕವೆಂದು ಹೇಳಿದಾಗ ಪದಶ್ರುತಿಯಿಂದಲೇ ಧಾತ್ವರ್ಥವಿಧಿಯು ಕೂಡುತ್ತದೆ. (ಉದ್ಭಿದಧಿಕರಣದಲ್ಲಿ ಹೇಳಿದ್ದನ್ನೇ ಇಲ್ಲಿಯೂ ತಿಳಿಯಬೇಕು) ಕರ್ಮವಿಧಾಯಕವಾದರೆ ದೇವತೆಯ ಲಾಭ ಹೇಗೆ? ಎಂದರೆ 'ಅಗ್ನಿರ್ಜ್ಯೋತಿ ಜ್ಯೋತಿರಗ್ನಿಃ ಸ್ವಾಹಾ' ಎಂಬ ಮಂತ್ರವರ್ಣದಿಂದ ಅಗ್ನಿದೇವತೆಯ ಪ್ರಾಪ್ತಿಯಾಗುತ್ತದೆ. ದೇವತೆಯ ಲಾಭವು 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯದಿಂದಲೇ ಆಗಬೇಕೆಂದೇನು ಇಲ್ಲ. 'ದೇವತಾ ಮಾಂತ್ರವರ್ಣಿಕೀ' ಎಂಬಂತೆ ಕರ್ಮಭಾಗದಲ್ಲಿ ದೇವತೆಯನ್ನು ಹೇಳದಿದ್ದರೆ ಮಂತ್ರಭಾಗದಲ್ಲಿರುವ ದೇವತೆಯನ್ನು ತೆಗೆದುಕೊಳ್ಳಬೇಕೆಂದು ಮೀಮಾಂಸಕರ ಸಿದ್ಧಾಂತ. ಆದ್ದರಿಂದ 'ಅಗ್ನಿಹೋತ್ರಂ ಜುಹೋತಿ' ಎಂದರೆ ಅಗ್ನಿಹೋತ್ರ ಎಂಬ ಹೋಮವನ್ನು ಮಾಡುತ್ತಾನೆಂದರ್ಥ. ಹೀಗೆ ಅಗ್ನಿಹೋತ್ರಶಬ್ದವು ಕರ್ಮದ ಹೆಸರೇ ಆಗುತ್ತದೆಂದು ಸಿದ್ಧಾಂತ. ಇದರಂತೆ ಆಘಾರಶಬ್ದದಲ್ಲಿಯೂ ತಿಳಿಯಬೇಕು. ಇಲ್ಲಿ ಹೇಗೆ ಅಗ್ನಿಹೋತ್ರಾದಿಶಬ್ದಗಳು ಯೌಗಿಕವಾಗಿದ್ದರೂ ಕರ್ಮದಲ್ಲಿ ರೂಢವಾಗಿವೆಯೋ ಅದರಂತೆ ಆನಂದಮಯಶಬ್ದವೂ ಸಹ ಯೌಗಿಕವಾಗಿದ್ದರೂ ರೂಢವಾಗುತ್ತವೆ. ಇನ್ನು ಕೆಲವರು ಆನಂದಮಯಶಬ್ದವನ್ನು ಯೋಗರೂಢವೆಂದು ಒಪ್ಪುತ್ತಾರೆ. ಆದರೆ ಪಾದಸಂಗತಿಯನ್ನು ಬೇರೆ ರೀತಿಯಾಗಿ ಹೇಳುತ್ತಾರೆ. ಅದನ್ನು ಗ್ರಂಥಕಾರರು 'ಅಪರೇ ತು' ಎಂದು ನಿರಾಕರಣೆ ಮಾಡುತ್ತಿದ್ದಾರೆ.

ಗ್ರಂಥಕಾರರು ಆನಂದಮಯಶಬ್ದವನ್ನು ನಾಮಾತ್ಮಕ ಹಾಗು ಲಿಂಗಾತ್ಮಕ ಎಂದು ಒಪ್ಪಿದ್ದರಿಂದ ಟೀಕೆಯಲ್ಲಿ ನಾಮಾತ್ಮಕತ್ವವೆಂದು ಹೇಳಿದ್ದನ್ನು ಸಮರ್ಥಿಸಿದ್ದಾಯಿತು. ಮತ್ತು ತತ್ವಪ್ರದೀಪದಲ್ಲಿ ಲಿಂಗಾತ್ಮಕತ್ವವನ್ನು ಹೇಳಿದ್ದನ್ನೂ ಸಮರ್ಥಿಸಿದ್ದಾಯಿತು.




ನಮ್ಮಲ್ಲೇ ಕೆಲವರು ಆನಂದಮಯಶಬ್ದವನ್ನು ಕೇವಲ ಯೌಗಿಕವೆನ್ನುತ್ತಾರೆ. ಕೆಲವರು ಕೇವಲ ರೂಢವೆನ್ನುತ್ತಾರೆ. ಇವರಿಬ್ಬರ ಅಭಿಪ್ರಾಯವೂ ಸಮಂಜಸವಲ್ಲ. ಆನಂದಮಯಶಬ್ದವನ್ನು ರೂಢವೆಂದು ನಾಮಪಾದದಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಯೌಗಿಕವೆಂದು ಹೇಳಿದರೆ ರೂಢಲಕ್ಷಣ ಬಾರದಕಾರಣ ಇಲ್ಲಿ ಮಾಡುವ ಸಮನ್ವಯವು ತಪ್ಪಾಗುತ್ತದೆ. ಕೇವಲ ರೂಢವೆನ್ನುವುದೂ ತಪ್ಪಾಗುತ್ತದೆ. ಪೂರ್ವಪಕ್ಷದಲ್ಲಿ ಹಾಗೂ ಸಿದ್ಧಾಂತದಲ್ಲಿ ಆನಂದವಿಕಾರಪ್ರಚುರವಾದ ಆನಂದ ಎಂದು ಅವಯವಾರ್ಥವನ್ನು ಸ್ವೀಕರಿಸಿದ್ದಾರೆ.

ಇನ್ನೂ ಕೆಲವರು ಆನಂದಮಯಶಬ್ದವು ಯೌಗಿಕವೂ ರೂಢವೂ ಆಗಿದೆ ಎನ್ನುತ್ತಾರೆ. ಆದರೆ ಇವರು ಹೇಳುವ ಪಾದಾಂತರ್ಭಾವಸಂಗತಿಯು ಅಸಾಧುವಾಗಿದೆ. ಆನಂದಮಯಶಬ್ದವು ನಾಮಾತ್ಮಕವೂ ಲಿಂಗಾತ್ಮಕವೂ ಆಗಿರುವುದರಿಂದ ಎರಡೂ ಪಾದಗಳಲ್ಲಿ ಸೇರುವುದಿಲ್ಲ. ಆದ್ದರಿಂದ ಎರಡು ಪಾದಗಳ ಮೊದಲು ಅಥವಾ ಕೊನೆಯಲ್ಲಿ ಹೇಳಬೇಕು. 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಮೊದಲೇ ಹೇಳಿದ್ದಾರೆಂದು ಇವರ ವಾದ. ಈ ವಿಷಯದಲ್ಲಿ ದೃಷ್ಟಾಂತವನ್ನೂ ಹೇಳುತ್ತಾರೆ. ಸ್ಮೃತ್ಯಧಿಕರಣದಲ್ಲಿ ಶ್ರುತಿ, ಸಮಯ ಮೊದಲಾದ ನಾಲ್ಕು ವಿಧವಾದ ವಿರೋಧಗಳನ್ನು ಪರಿಹರಿಸುವುದರಿಂದ ಎರಡನೆಯ ಅಧ್ಯಾಯದ ನಾಲ್ಕೂ ಪಾದಗಳಲ್ಲಿ ಹೇಗೆ ಸೇರುವುದಿಲ್ಲವೋ ಅದರಂತೆ ಎಂದು.

ಇವರ ವಾದದಲ್ಲಿ ಹುರುಳಿಲ್ಲ. ಸ್ಮೃತ್ಯಧಿಕರಣದ ದೃಷ್ಟಾಂತ ಅತ್ಯಂತ ವಿಷಮವಾಗಿದೆ. ಸ್ಮೃತ್ಯಧಿಕರಣದಲ್ಲಿ ನಾಲ್ಕುವಿಧವಾದ ವಿರೋಧಗಳನ್ನು ಪರಿಹರಿಸಿದ್ದರಿಂದ ಯಾವ ಪಾದದಲ್ಲಿ ಬೇಕಾದರೂ ಸೇರಿಸಬಹುದು. ಆದ್ದರಿಂದ ಮೊದಲೇ ಹೇಳಿದ್ದಾರೆ. ಇದರಂತೆ ಆನಂದಮಯಶಬ್ದವೂ ಸಹ ನಾಮಾತ್ಮಕ ಹಾಗೂ ಲಿಂಗಾತ್ಮಕ ಆಗಿದ್ದರಿಂದ ಎರಡು ಪಾದದಲ್ಲಿ ಎಲ್ಲಿ ಬೇಕಾದರೂ ಸೇರಿಸಬಹುದು. 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಮೊದಲೇ ಹೇಳಿದ್ದಾರೆಂದು ತಿಳಿಯಬೇಕು. ಅಥವಾ ಆನಂದಮಯಶಬ್ದವು ಆಪಾತತಃ ರೂಢವಾದ್ದರಿಂದ ಕೇವಲ ನಾಮಾತ್ಮಕವಾಗಿದೆಯೆಂದೂ ಹೇಳಬಹುದು.



## ಆನಂದಮಯಾಧಿಕರಣದಲ್ಲಿ ಮುಖತಃ ಲಿಂಗಸಮನ್ವಯ

**तात्पर्यचन्द्रिका –**

**तत्त्वप्रदीपे तु ''आनन्दमयाधिकरणे लिङ्गविचारात्'' इति आनन्दमयादेर्लिङ्गत्व-मेवोक्तम् । तदनुसारेण 'आनन्दमयनाम्नः' इति टीकायामानन्दमयनामशब्दः**

आनन्दादिनामपरो वा योज्यः । तथा च आनन्दादिनामसमन्वयस्यापीह समर्थनात् फलतः पादसङ्गतिः ।

तथा पूर्वतन्त्रे पौर्णमास्यधिकरणस्य मुखतो विद्वद्वाक्यमनुवादकमिति व्युत्पादकत्वेऽपि, करणेतिकर्तव्यताभेदस्य फलितत्वेन फलतो भेदलक्षणसङ्गतिः, यथा चात्रैव शास्त्रे ''असदिति चेत्'' इत्यधिकरणस्य मुखतः श्रुत्यविरोध-व्युत्पादकत्वेऽपि फलतो युक्त्यविरोधव्युत्पादकत्वाद्युक्तिपादसङ्गतिः, यथा चान्तरधिकरणस्य मुखतो लिङ्गसमन्वयव्युत्पादकत्वेऽपि फलतो नामसमन्वय-व्युत्पादकत्वान्नामपादसङ्गतिः तद्वत् ।

यद्यप्यानन्दादिनामसमन्वये उक्ते आनन्दमयादिलिङ्गसमन्वयोऽप्यर्थात्सेत्स्यति, पादसङ्गतिश्च स्वरसा भवति । तथाऽप्यानन्दमयोदाहरणे विकारशब्दादिपूर्वपक्षबीजस्य ''तद्योगं'' इत्यादिसिद्धान्तहेतोश्च सत्त्वाल्लिङ्गस्य मुखतः कीर्तनमिति ।।

ಅನುವಾದ - ತತ್ವಪ್ರದೀಪದಲ್ಲಿ 'ಆನಂದಮಯಾಧಿಕರಣೇ ಲಿಂಗವಿಚಾರಾತ್' ಎಂದು ಆನಂದಮಯಶಬ್ದವನ್ನು ಲಿಂಗಾತ್ಮಕವೆಂದು ಹೇಳಿದ್ದಾರೆ. ಈ ಪಕ್ಷದಲ್ಲಿ 'ಆನಂದಮಯನಾಮ್ನಃ' ಎಂಬ ಟೀಕೆಯಲ್ಲಿರುವ ಆನಂದಮಯನಾಮ ಎಂಬ ಶಬ್ದಕ್ಕೆ ಆನಂದಾದಿನಾಮಗಳು ಎಂದು ಅರ್ಥೈಸಬೇಕು. ಆದ್ದರಿಂದ ಈ ಅಧಿಕರಣದಲ್ಲಿ ಲಿಂಗಸಮನ್ವಯ ಮಾಡಿದ್ದರೂ ಫಲತಃ ನಾಮಸಮನ್ವಯ ಸಿದ್ಧವಾಗುತ್ತದೆ. ಆದ್ದರಿಂದ ಪಾದಸಂಗತಿ ಬರುತ್ತದೆ.

ಪೂರ್ವಮೀಮಾಂಸೆಯಲ್ಲಿ ಪೌರ್ಣಮಾಸ್ಯಧಿಕರಣದಲ್ಲಿ ಬರುವ ವಿದ್ವದ್ವಾಕ್ಯಗಳು ಮುಖತಃ ಅನುವಾದಕಗಳಾಗಿವೆ. ಅನುವಾದಕವಾದ್ದರಿಂದ ವಿದ್ವದ್ವಾಕ್ಯವು ಹೊಸ ಯಾಗವನ್ನು ಹೇಳುತ್ತಿಲ್ಲ. ಪೂರ್ವಪ್ರಸಕ್ತವಾದ ಆರು ಯಾಗಗಳನ್ನೇ ಅನುವಾದ ಮಾಡುತ್ತಿದೆ. ಆದ್ದರಿಂದ ಆರು ಯಾಗಗಳು ಕರಣವಾಗಿವೆ. ಇಡಾಸಮಿದಾದಿಯಾಗಗಳು ಇತಿಕರ್ತವ್ಯ(ಅಂಗ)ವಾಗಿವೆ. ಹೀಗೆ ಕರಣ ಮತ್ತು ಇತಿಕರ್ತವ್ಯತಾಗಳಿಗೆ ಭೇದವು ಫಲತಃ ಸಿದ್ಧವಾಗಿದೆ. ಭೇದಾಧ್ಯಾಯದಲ್ಲಿ ಈ ವಿದ್ವದ್ವಾಕ್ಯಾಧಿಕರಣಕ್ಕೆ ಫಲತಃ ಅಂತರ್ಭಾವವು ಕೂಡುತ್ತದೆ.

ಇದೇ ಶಾಸ್ತ್ರದ ಎರಡನೇ ಅಧ್ಯಾಯದಲ್ಲಿ 'ಅಸದಿತಿ ಚೇನ್ನ' ಇತ್ಯಾದಿ ಅಧಿಕರಣವಿದೆ. ಅಲ್ಲಿ ಮುಖತಃ ಶ್ರುತಿಯ ಅವಿರೋಧವನ್ನೇ ಪ್ರತಿಪಾದಿಸಿದ್ದಾರೆ. ಆದರೆ ಫಲತಃ ಯುಕ್ತಿಯ ಅವಿರೋಧವೇ ಸಿದ್ಧವಾಗುತ್ತದೆಂದು ಯುಕ್ತಿಪಾದದಲ್ಲಿ ಅಸದಧಿಕರಣವು ಸಂಗತವಾಗಿದೆ.

ಅಥವಾ ಇದೇ ಅಧ್ಯಾಯದ ಇದೇ ಪಾದದಲ್ಲಿರುವ ಅಂತರಧಿಕರಣವೇ ಉದಾಹರಣೆಯಾಗಿದೆ

- ಅಂತರಧಿಕರಣದಲ್ಲಿ ಅಂತಸ್ಥತ್ವವೆಂಬ ಲಿಂಗವನ್ನು ಮುಖತಃ ಸಮನ್ವಯ ಮಾಡಿದ್ದರೂ ಫಲತಃ ಅನೇಕ ನಾಮಾತ್ಮಕಶಬ್ದಗಳ ಸಮನ್ವಯವು ಸಿದ್ಧವಾಗುತ್ತದೆ. ಆದ್ದರಿಂದ ನಾಮಪಾದದಲ್ಲೇ ಅಂತರಧಿಕರಣವು ಹೇಗೆ ಸಂಗತವಾಗುತ್ತದೋ ಅದರಂತೆ ಆನಂದಮಯಾಧಿಕರಣದಲ್ಲಿ ಲಿಂಗಸಮನ್ವಯ ಮಾಡಿದ್ದರೂ ಫಲತಃ ನಾಮಸಮನ್ವಯವನ್ನೇ ಮಾಡಿದ್ದರಿಂದ ನಾಮಪಾದದಲ್ಲಿ ಸಂಗತವಾಗುತ್ತದೆ.

ವಸ್ತುತಃ ಸೂತ್ರಕಾರರು 'ಆನಂದೋಭ್ಯಾಸಾತ್' ಎಂದು ಹೇಳಿ ನೇರವಾಗಿ ನಾಮಸಮನ್ವಯವನ್ನೇ ಮಾಡಬಹುದಿತ್ತು. ಇದರಿಂದ ಫಲತಃ ಆನಂದಮಯಾದಿ ಶಬ್ದಗಳ ಸಮನ್ವಯವು ಸಿದ್ಧವಾಗುತ್ತಿತ್ತು. ಹೀಗೆ ಹೇಳಿದಾಗ ನಾಮಪಾದದಲ್ಲಿ ಸ್ವರಸವಾಗಿ ಸಂಗತಿಯನ್ನೂ ಹೇಳಿದಂತಾಗುತ್ತಿತ್ತು.

ಆದರೆ ಸೂತ್ರಕಾರರು ಹಾಗೆ ಮಾಡದಿರಲು ಕಾರಣವಿದೆ. ಆನಂದಮಯ ಎಂಬ ಶಬ್ದದಲ್ಲಿಯೇ ಪೂರ್ವಪಕ್ಷ ಹಾಗು ಸಿದ್ಧಾಂತಗಳ ಬೀಜ ಇರುವುದು. ಮಯಟ್ ಪ್ರತ್ಯಯಕ್ಕೆ ವಿಕಾರವೆಂಬ ಅರ್ಥವಿರುವುದರಿಂದ ವಿಷ್ಣು ಆನಂದಮನಾಗುವುದಿಲ್ಲವೆಂಬುದು ಪೂರ್ವಪಕ್ಷಬೀಜ. ಮತ್ತು ಸಿದ್ಧಾಂತ ಮಾಡಬೇಕಾದರೆ ಆನಂದಮಯನನ್ನೇ ಮುಕ್ತನು ಹೊಂದುತ್ತಾನೆಂದು ಶ್ರುತಿ ಹೇಳುತ್ತದೆಂದು 'ತದ್ಯೋಗಮ್ ಶಾಸ್ತಿ' ಎಂಬ ಸೂತ್ರ ಹೇಳುತ್ತಿದೆ. ಹೀಗೆ ಸಿದ್ಧಾಂತಬೀಜವೂ ಆನಂದಮಯ-ಶಬ್ದದಲ್ಲಿಯೇ ಇದೆ. ಆದ್ದರಿಂದ ಸೂತ್ರಕಾರರು ಲಿಂಗಾತ್ಮಕವಾದ ಆನಂದಮಯಶಬ್ದವನ್ನೇ ಮುಖತಃ ಹೇಳಿದ್ದಾರೆ.

ಕಠಿಣಪದಾರ್ಥ

ತದನುಸಾರೇಣ = ತತ್ವಪ್ರದೀಪಕ್ಕೆ ಅನುಸಾರಿಯಾಗಿ, ಕರಣೇತಿಕರ್ತವ್ಯತಾಭೇದಸ್ಯ = ಅಂಗಾಂಗಿಗಳ ಭೇದವು, ಭೇದಲಕ್ಷಣಸಂಗತಿಃ = ಕರ್ಮಭೇದಪ್ರತಿಪಾದಕವಾದ ಅಧ್ಯಾಯದಲ್ಲಿ ಸಂಗತವಾಗುತ್ತದೆ, ಸಿದ್ಧಾಂತಹೇತೋಶ್ಚ = ಆನಂದಮಯನ ಪ್ರಾಪ್ತಿ ಎಂಬ ಸಿದ್ಧಾಂತಹೇತುವು, ಲಿಂಗಸ್ಯ = 'ಆನಂದಮಯ' ಎಂಬ ಲಿಂಗವನ್ನು.

**प्रकाशः – योज्य इति ।।** ''आनन्दमयनाम हि'' इत्यनुव्याख्यानमपि यौगिकनामाभिप्रायं व्याख्येयमिति भावः । आनन्दादिगुणवाचिनामानन्दमयादि-गुणिवाचिनां च शब्दानां समन्वयसिद्ध्यर्थमानन्दमयाधिकरणे लिङ्गविचारात्'' इति तत्त्वप्रदीपोक्तामेव सङ्गतिमाह – **तथा चेति ।।**

**यथेति ।।** उक्तमधिकरणशरीरमाद्यसूत्रे । अस्याधिकरणस्य रूपालाभेन स्वतन्त्रयागविधायकत्वासम्भवादाग्नेयादित्रिकत्रिकानुवादकं विद्वद्वाक्यमिति मुखतो व्युत्पादनार्थत्वेऽपि, षड्यागाः करणं समिदादिस्त्वितिकर्तव्यतेति भेदस्य फलतो लाभात् यथा कर्मभेदपराध्यायान्तर्भावः, तथाऽत्रापि नामसमन्वयस्य फलतो

लाभादत्रान्तर्भावः इत्यर्थः । अत्र कश्चिदभ्यासप्रमाणा-पन्नभेदापवादकतया मुखत एव सङ्गतिसम्भवात् कथं फलतः सङ्गत्युक्तिः, सापवादकस्यैव भेदशेष-प्रयुक्त्यादेस्तत्तदध्यायार्थत्वात् । अन्यथा तत्र तत्र "इष्ट्यर्थमग्न्याधेयम्" "पदकर्माप्रयोजकम्" इत्याद्यधिकरणानामसङ्गत्यापत्तेः । कथं चानेनाधिकरणेन करणेतिकर्तव्यताभेदसिद्ध्युपन्यासः, तस्याग्नेयादिवाक्येषु द्रव्यदेवताद्यनेकगुण-रूपिगुणप्रमाणाधीनत्वात् । किं त्वाग्नेयादीनां समिदादीनां चाङ्गाङ्गिभावो लभ्यते । न चायमेवाध्यायार्थः, तृतीयाभेदापत्तेरिति, तन्न, फलतो लभ्यायाः साक्षाल्लक्षणप्रतिपाद्यविषयायाः सङ्गतेरभ्यर्हितायाः सम्भवे, आपवादिक्यास्तस्या अनादरणीयत्वादित्याशयात् । करणेतिकर्तव्यताभावस्य भेदव्याप्ततया तदभिप्रायेण भेदफलत्वोक्तेश्चेत्याद्यूह्यम् ॥

**यथा चेति** ॥ युक्तिपादे "असदिति चेन्न प्रतिषेधमात्रत्वात्" इति नये जगत्कारणत्वं विष्णोर्युक्तमयुक्तं वेति संशये, "यतो वा इमानि भूतानि" इत्यादिकारणत्वश्रुतेः, कारणं प्रलये असत् वस्तुत्वात् कार्यवदित्यनुमानयुक्त्या "असदेवेदमग्र आसीत्" इत्यादिश्रुत्या असत्कारणत्ववादिन्या विरुद्धत्वादयुक्तमिति प्राप्ते, असतो निषेधैकरूपस्य कर्तृत्वोपयोगिज्ञानादेरयोगेन "असदेव" इति श्रुतेः "सदेव" इत्याद्यनेकश्रुतिविरोधेन च विष्णुपरत्वादनुमानस्य निर्मूलत्वाद्युक्तं **कारणत्वमिति** । तत्र यथा पूर्वपक्षिणा स्वोक्तानुमानमूलतयोदाहृतश्रुत्यविरोधे मुखतो व्युत्पादिते युक्त्यविरोधः फलिष्यतीति, तद्विचारस्य, युक्त्यविरोधपादेऽन्तर्भावो न तु श्रुत्यविरोधपादे, तथेहापीत्यर्थः । उक्तं च तत्र भाष्ये – "अर्थाद्युक्तिविरोधो निराक्रियते" इति ।

अन्तरङ्गदृष्टान्तमाह – **यथा चान्तरिति** ॥ स्पष्टमेतदुत्तरत्र । लिङ्गसमन्वय-पक्षमाक्षिप्याह – **यद्यपीति** । 'शब्दादि' इत्यादिपदेन पुच्छब्रह्मत्वादिग्राह्यम् । **तद्योगमिति** । 'अस्मिन्' प्रकरणे, 'अस्य' हिरण्यगर्भादिजीवस्य, 'तद्योगं' तेनानन्दमयेन सम्बन्धं, । "एतमानन्दमयमात्मानमुपसङ्क्रामति" इत्यादिश्रुतिः शास्तीत्युक्तानन्दमययोगादिहेतोरित्यर्थः । 'इत्यादि' इत्यादिपदेन हेतुव्यपदेशादि ।

**गुरुराजीयम्** – इदानीं पक्षान्तरमाश्रित्य समन्वयकथनमयुक्तम् । तत्वप्रदीपे आनन्दमयाधिकरणे लिङ्गविचारादित्यानन्दमयत्वस्य लिङ्गत्वेन समन्वयोक्तेरित्यत आह – **तत्वप्रदीपे त्विति** ।। नच लिङ्गत्वे सति नामत्वस्य स्वीकृतत्वाल्लिङ्गत्वकथनं न विरुद्धमिति वाच्यम् । उभयात्मकत्वे सत्यसाधारण्येन लिङ्गत्वकथनस्यायुक्तत्वादिति भावः । विरोधपरिहारः कथमित्यत आह – **तदनुसारेणेति** ।। लिङ्गसमन्वय-परश्चेत्पादासङ्गतिरित्यत आह – **तथा चेति** ।।

ननु फलतः पादसङ्गत्युक्तिरयुक्ता । शब्दानां प्रथमे पादे गुणसामान्य-वाचिनाम् । गुणवाचिनां च प्रथममित्यनुव्याख्याने गुणवाचकशब्दसमन्वयस्योक्तत्वेन नामसमन्वयस्योक्तत्वादिति चेन्न । तथाऽपि सूत्रकारेण मुखतोनुक्तत्वादित्याशयेन फलत इत्युक्तत्वान्न विरोध इति भावः ।

ननु तदर्थस्य मुखतोनुक्तत्वेपि फलतस्तदर्थस्योक्तत्वेन सङ्गतिः कुत्राप्यदृष्टेत्यत आह – **यथेति** ।। पौर्णमास्यधिकरणस्य य एवं विद्वान्पौर्णमासीं यजत इत्यादिविद्वद्वाक्यं षड्यागानुवादकमित्यर्थव्युत्पादकत्वेन कर्मभेदव्युत्पा-दकत्वाभावादसङ्गतिरिति प्राप्ते मुखतोनुवादकत्वेपि फलतः करणेतिकर्तव्यताभेद-प्रतिपादकत्वाद्द्वितीयाध्यायसङ्गतिर्यथेत्यर्थः । ननु तर्ह्यानन्दोभ्यासादित्येव सूत्रं कर्तव्यम् । एवं सति सूत्रस्याल्पाक्षरतापि भवति । न चैवं लिङ्गसमन्वयः कथमिति वाच्यम् । तस्यार्थादेव सिद्धेः । आनन्दनामसमन्वयस्य मुखतो व्युत्पादनेन पादसङ्गतेः स्वरसत्वादित्याशङ्क्य निराकरोति – **यद्यपीत्यादिना** ।। तत्तु समन्वयादित्यत्र प्रतिज्ञाते समन्वये बाधके प्राप्ते ईक्षतिसूत्रे बाधकमुद्धृतम् ।

**ವಿವರಣೆ** - ಆನಂದಮಯಾಧಿಕರಣಕ್ಕೆ ನಾಮಪಾದದಲ್ಲಿ ಸಂಗತಿ ಹೇಳುವುದು ಕಷ್ಟ. ಏಕೆಂದರೆ ತತ್ವಪ್ರದೀಪದಲ್ಲಿ ಆನಂದಮಯಶಬ್ದವನ್ನು ಲಿಂಗಾತ್ಮಕವೆಂದು ಹೇಳಿದ್ದಾರೆ. ಈ ಆಶಂಕೆಯನ್ನು ಈಗ ಪರಿಹರಿಸುತ್ತಿದ್ದಾರೆ. ತತ್ವಪ್ರದೀಪದಲ್ಲಿ ಆನಂದಮಯಶಬ್ದವನ್ನು ಲಿಂಗಾತ್ಮಕವೆಂದು ಹೇಳಿದರೆ ನಾಮಾತ್ಮಕವೆಂದು ಹೇಳುವ ಟೀಕೆಯನ್ನು ಹೇಗೆ ಕೂಡಿಸುವುದು? ಮತ್ತು ಅನುವ್ಯಾಖ್ಯಾನದಲ್ಲಿಯೂ 'ಆನಂದಮಯನಾಮ ಹಿ' ಎಂದು ನಾಮಾತ್ಮಕವೆಂದೇ ಹೇಳಿದ್ದಾರೆ. ಮತ್ತು ಲಿಂಗಾತ್ಮಕವಾದರೆ ನಾಮಪಾದದಲ್ಲಿ ಅದರ ಸಮನ್ವಯ ಹೇಗೆ? ಇತ್ಯಾದಿ ಪ್ರಶ್ನೆಗಳು ಬರುತ್ತವೆ. ಆದರೆ ಈ ಪ್ರಶ್ನೆಗಳಿಗೆ ತತ್ವಪ್ರದೀಪಕಾರರೇ ಉತ್ತರಿಸಿದ್ದಾರೆ. ಟೀಕೆಯಲ್ಲಿರುವ 'ಆನಂದಮಯನಾಮ್ನಃ' ಎಂಬ ಶಬ್ದಕ್ಕೆ ಆನಂದಾದಿನಾಮಗಳ ಸಮನ್ವಯ ಎಂದರ್ಥ. ಅನುವ್ಯಾಖ್ಯಾನದಲ್ಲಿರುವ 'ಆನಂದಮಯನಾಮ ಹಿ' ಎಂಬ

ಮಾತಿಗೂ ಯೌಗಿಕವಾದ ನಾಮಗಳ ಸಮನ್ವಯ ಎಂದೇ ಅರ್ಥ. ಇನ್ನು ತತ್ವಪ್ರದೀಪದಲ್ಲಿ 'ಆನಂದಾದಿಗುಣವಾಚಿನಾಮ್ ಆನಂದಮಯಾದಿ ಗುಣಿವಾಚಿನಾಮ್ ಶಬ್ದಾನಾಮ್ ಸಮನ್ವಯ-ಸಿದ್ಧ್ಯರ್ಥಮ್ ಆನಂದಮಯಾಧಿಕರಣೇ ಲಿಂಗವಿಚಾರಾತ್' 'ಆನಂದ ಮೊದಲಾದ ಶಬ್ದಗಳು ಗುಣವಾಚಕ. ಆನಂದಮಯ ಮೊದಲಾದ ಶಬ್ದಗಳು ಗುಣಿವಾಚಕ. ಈ ಎರಡೂವಿಧ ಶಬ್ದಗಳ ಸಮನ್ವಯಸಿದ್ಧಿಗೋಸ್ಕರ ಆನಂದಮಯಾಧಿಕರಣದಲ್ಲಿ ಲಿಂಗವಿಚಾರವನ್ನು ಮಾಡಿದ್ದಾರೆ' ಎಂದು ಹೇಳಿದ್ದಾರೆ. ಆದ್ದರಿಂದ ಸೂತ್ರಕಾರರು ಲಿಂಗಸಮನ್ವಯವನ್ನೇ ಮಾಡಿದ್ದಾರೆ. ಇದರಿಂದ ಫಲತಃ ನಾಮಸಮನ್ವಯವೂ ಸಿದ್ಧವಾಗುತ್ತದೆ ಎಂದು ಈ ವಿಷಯದಲ್ಲಿ ಪೂರ್ವಮೀಮಾಂಸೆಯ ವಿದ್ವದ್ವಾಕ್ಯಾಧಿಕರಣವು ದೃಷ್ಟಾಂತವಾಗಿದೆ.

ವಿದ್ವದ್ವಾಕ್ಯಾಧಿಕರಣವನ್ನು ಜಿಜ್ಞಾಸಾಧಿಕರಣದಲ್ಲೇ ಹೇಳಿದ್ದಾಗಿದೆ. ಒಂದು ಯಾಗವು ಸಿದ್ಧಿಸಬೇಕಾದರೆ ದ್ರವ್ಯ ಮತ್ತು ದೇವತೆಯ ಲಾಭವಾಗಬೇಕು. ಈಗ ವಿದ್ವದ್ವಾಕ್ಯವು ಅಪೂರ್ವಯಾಗವನ್ನು ವಿಧಿಸುವುದಾದರೆ ದ್ರವ್ಯ ಮತ್ತು ದೇವತೆಗಳು ಇರಬೇಕು. ಆದರೆ ದ್ರವ್ಯದೇವತೆಗಳೇ ಇಲ್ಲದ್ದರಿಂದ ಯಾಗದ ರೂಪವೇ ಸಿದ್ಧವಾಗುವುದಿಲ್ಲ. ಆದ್ದರಿಂದ ಆಗ್ನೇಯಾದಿ ಮೂರು ಮೂರು ಯಾಗಗಳನ್ನು ಅನುವಾದ ಮಾಡುತ್ತಿದೆಯೆಂದು ಹೇಳಬೇಕು. ಹೀಗೆ ಹೇಳಿದಾಗ ಆರು ಯಾಗಗಳು ಕರಣಗಳು. ಸಮಿದಾದಿ ಯಾಗಗಳು ಇತಿಕರ್ತವ್ಯತಾಗಳಾಗುತ್ತವೆ. ಕರಣ ಮತ್ತು ಇತಿಕರ್ತವ್ಯತಾಗಳಿಗೆ ಭೇದವು ಫಲತಃ ಸಿದ್ಧವಾಗುತ್ತದೆ. ಆದ್ದರಿಂದ ಕರ್ಮಭೇದಾಧಿಕರಣದಲ್ಲಿ ವಿದ್ವದ್ವಾಕ್ಯಾಧಿಕರಣವು ಅಂತರ್ಭಾವ ಹೊಂದುತ್ತದೆ.

ಕೆಲವರು ಹೀಗೆ ಹೇಳುತ್ತಾರೆ - ಫಲತಃ ಸಂಗತಿ ಹೇಳುವುದು ತಪ್ಪು. ಏಕೆಂದರೆ ಕ್ರಿಯಾಪದದ ಅಭ್ಯಾಸದಿಂದ ಕರ್ಮಭೇದವು ಸಿದ್ಧವಾಗುತ್ತದೆ. ಅಂದರೆ 'ಇಡೋ ಯಜತಿ' ಇತ್ಯಾದಿ ವಾಕ್ಯಗಳಿಂದ ಒಂದೇ ಯಾಗದಲ್ಲಿ ಐದು ದೇವತೆಗಳನ್ನು ಹೇಳುತ್ತಿದ್ದಾರೋ? ಅಥವಾ ಪ್ರತ್ಯೇಕವಾದ ಐದು ಯಾಗಗಳನ್ನು ವಿಧಾನ ಮಾಡುತ್ತಿದ್ದಾರೋ? ಎಂಬ ಸಂಶಯ ಬಂದರೆ ಯಜತಿ ಪದದ ಅಭ್ಯಾಸದಿಂದ ಬೇರೆ ಬೇರೆ ಕರ್ಮಗಳನ್ನೇ ಹೇಳುತ್ತಿದ್ದಾರೆಂದು ಅಭ್ಯಾಸವೆಂಬ ಪ್ರಮಾಣದಿಂದ ಕರ್ಮಭೇದವು ಸಿದ್ಧವಾಗುತ್ತದೆ. ಆದರೆ ಕ್ರಿಯಾಪದಭೇದವಿದ್ದರೆ ಕರ್ಮಭೇದ ಹೇಳಬೇಕೆಂಬುದು ಔತ್ಸರ್ಗಿಕನ್ಯಾಯ 'ಏವಂ ವಿದ್ವಾನ್ ಪೌರ್ಣಮಾಸ್ಯಾಂ ಯಜತಿ' 'ಯ ಏವಂ ವಿದ್ವಾನ್ ಅಮಾವಾಸ್ಯಾಯಾಮ್ ಯಜತಿ' ಎಂಬುದೇ ಈ ವಿಷಯದಲ್ಲಿ ಅಪವಾದವಾಗಿದೆ. ಈ ವಾಕ್ಯದಲ್ಲಿ ಅನೇಕ ಬಾರಿ ಯಜತಿ ಎಂಬ ಕ್ರಿಯಾಪದವು ಕೇಳಿಸುತ್ತಿದೆ. ಆದ್ದರಿಂದ ಪೂರ್ವದಲ್ಲಿ ಹೇಳಿದ ಯಾಗಗಳಿಗಿಂತ ಈ ವಿದ್ವದ್ವಾಕ್ಯದಲ್ಲಿ ಕೇಳಿಸುತ್ತಿರುವ ಯಾಗವು ಬೇರೆ ಆಗಿದೆಯೆಂದು ಅಭ್ಯಾಸಪ್ರಮಾಣದಿಂದ ಕರ್ಮಭೇದವು ಪ್ರಸಕ್ತವಾಗುತ್ತದೆ. ಆದರೆ ಇದು ಅಪವಾದ ಸ್ಥಳ. ಪೂರ್ವದಲ್ಲಿ ಹೇಳಿದ ಕರ್ಮವನ್ನು ಇಲ್ಲಿ ಕೇವಲ ಅನುವಾದ ಮಾಡಲಾಗಿದೆ. ಆದ್ದರಿಂದ ಭೇದಾಧ್ಯಾಯದಲ್ಲಿ ಸಂಗತವಾಗುತ್ತದೆಂದು ಹೇಳಿದಿರಿ. ಆದರೆ ಕರ್ಮಭೇದವಿದ್ದರೆ ಮಾತ್ರ ಭೇದಾಧ್ಯಾಯದಲ್ಲಿ ಸಂಗತವಾಗುತ್ತದೆ. ಆದರೆ ವಿದ್ವದಧಿಕರಣದಲ್ಲಿ ಕರ್ಮಭೇದವನ್ನು ಇಲ್ಲವೆಂದೇ ಸಾಧನೆ ಮಾಡುತ್ತಿದ್ದಾರೆ. ಹೀಗಿರುವಾಗ ಭೇದಾಧ್ಯಾಯದಲ್ಲಿ ಹೇಗೆ ಅಂತರ್ಭಾವ ಹೊಂದುತ್ತದೆ? ಎಂದರೆ ಹಾಗಲ್ಲ. ಎಲ್ಲೆಡೆ ಅಧ್ಯಾಯ ಪ್ರತಿಪಾದ್ಯವಾದ ಅರ್ಥ ಅಪವಾದವಾದ ಅರ್ಥವೇ ವಿಷಯ ಆಗಿರುತ್ತದೆ. ಉದಾಹರಣೆ - ಶೇಷಶೇಷಿಭಾವವು ಒಂದು ಅಧ್ಯಾಯದಲ್ಲಿ ಪ್ರತಿಪಾದ್ಯವಾಗಿರುತ್ತದೆ. ಅಲ್ಲಿ ಕೇವಲ ಶೇಷಶೇಷಿಭಾವವಷ್ಟೇ ಪ್ರತಿಪಾದ್ಯವಾಗಿಲ್ಲ. ಆದರ ಅಪವಾದವೂ ಪ್ರತಿಪಾದ್ಯವಾಗಿರುತ್ತದೆ. ಎಲ್ಲಿ ಶೇಷಶೇಷಿಭಾವ ಬರುತ್ತದೆ ಎಂಬುದು

ಅಧ್ಯಾಯಪ್ರತಿಪಾದ್ಯವಾದಂತೆ ಎಲ್ಲಿ ಶೇಷಶೇಷಿಭಾವ ಬರುವುದಿಲ್ಲವೆಂದು ಹೇಳುತ್ತಾರೋ ಅದೂ ಸಹ ಅಧ್ಯಾಯಪ್ರತಿಪಾದ್ಯವಾಗುತ್ತದೆ. ಅದರಂತೆ ಈ ಭೇದಾಧ್ಯಾಯದಲ್ಲಿಯೂ ಎಲ್ಲಿ ಕರ್ಮಭೇದ ಬರುತ್ತದೆ. ಎಲ್ಲಿ ಕರ್ಮಭೇದ ಬರುವುದಿಲ್ಲ ಎಂಬುದೆರಡೂ ಅಧ್ಯಾಯ ಪ್ರತಿಪಾದ್ಯವಾಗಲೇ ಬೇಕು. ಹೀಗೆ ಅಪವಾದ ಹೇಳುವುದು ಅಧ್ಯಾಯ ಪ್ರತಿಪಾದ್ಯವಾಗದಿದ್ದರೆ 'ಇಷ್ಟ್ಯರ್ಥಮಗ್ನ್ಯಾಧೇಯಸಂಪದಕರ್ಮಪ್ರಯೋಜಕಮ್' ಇವೇ ಮೊದಲಾದ ಅಧಿಕರಣಗಳು ಅಧ್ಯಾಯದಲ್ಲಿ ಅಸಂಗತವಾಗಬೇಕಾಗುತ್ತವೆ. ಏಕೆಂದರೆ ಈ ಅಧಿಕರಣವು ಯಾವ ಅಧ್ಯಾಯದಲ್ಲಿ ಬಂದಿದೆಯೋ ಆ ಅಧ್ಯಾಯದ ವಿಷಯವನ್ನು ಹೇಳದೇ ಅಪವಾದವನ್ನಷ್ಟೇ ಹೇಳುತ್ತಿದೆ. ಗ್ರಂಥಕಾರರು ಮತ್ತೊಂದು ಅಂಶವನ್ನು ಹೇಳಿದ್ದರು. ವಿದ್ವದ್ವಾಕ್ಯವು ಕರ್ಮಭೇದವನ್ನು ಹೇಳುತ್ತಿದ್ದರೂ ಫಲತಃ ಕರಣ ಮತ್ತು ಇತಿಕರ್ತವ್ಯತಾಗಳಿಗೆ ಭೇದವೂ ಸಿದ್ಧವಾಗುತ್ತದೆ ಎಂದು. ಇದು ಹೇಗೆ ಸಿದ್ಧವಾಗುತ್ತದೆ? ಏಕೆಂದರೆ ಕರಣ ಇತಿಕರ್ತವ್ಯತಾಗಳಿಗೆ ಭೇದವು ಬೇರೆ ಪ್ರಮಾಣದಿಂದ ಸಿದ್ಧವಾಗಿದೆ. ಏಕೆಂದರೆ ಆಗ್ನೇಯಾದಿ ವಾಕ್ಯಗಳಲ್ಲಿ ದ್ರವ್ಯ ದೇವತಾದಿ ಅನೇಕ ಗುಣಗಳು ಉಕ್ತವಾಗಿವೆ. ಈ ಗುಣ ಎಂಬ ಪ್ರಮಾಣದಿಂದ ಕರಣವಾದ ದರ್ಶಪೂರ್ಣಮಾಸ ಯಾಗಗಳಿಗೂ ಅದರ ಅಂಗಯಾಗವಾದ ಸಮಿದಾದಿ ಯಾಗಗಳಿಗೂ ಭೇದವು ಸಿದ್ಧವಾಗುತ್ತದೆ. ಆಯಾ ಯಾಗದ ದೇವತೆ ಹಾಗು ದ್ರವ್ಯಗಳು ಬೇರೆ ಬೇರೆಯಾದ್ದರಿಂದ ಕರ್ಮಗಳಿಗೂ ಭೇದ ಸಿದ್ಧವಾಗುತ್ತದೆ. ಕರಣವಾದ ಯಾಗಕ್ಕೂ ಇತಿಕರ್ತವ್ಯವಾದ ಸಮಿದಾದಿ ಯಾಗಗಳಿಗೂ ಅಂಗಾಂಗಿಭಾವವನ್ನು ಹೇಳುವುದಕ್ಕೋಸ್ಕರ ವಿದ್ವದ್ವಾಕ್ಯ ಬೇಕೆಂದರೆ ಹಾಗಾದರೆ ವಿದ್ವದ್ವಾಕ್ಯವು ಅಂಗಾಂಗಿಭಾವವನ್ನಷ್ಟೇ ತಿಳಿಸುತ್ತದೆಂದಂತಾಯಿತು. ಆದರೆ ಇದು ಎರಡನೆಯ ಅಧ್ಯಾಯದ ಅರ್ಥವೇ ಅಲ್ಲವಾದ್ದರಿಂದ ವಿದ್ವದಧಿಕರಣಕ್ಕೆ ಅಧ್ಯಾಯಾಂತರ್ಭಾವವೇ ಕೂಡುವುದಿಲ್ಲ. ಹಾಗೆ ಅಂಗಾಂಗಿಭಾವ ಹೇಳುವ ಮೂರನೇ ಅಧ್ಯಾಯದಲ್ಲಿ ಇದು ಅಂತರ್ಭಾವ ಹೊಂದಬೇಕಾಗುತ್ತದೆ. ಆದ್ದರಿಂದ ಗ್ರಂಥಕಾರರು ನೀಡಿದ ದೃಷ್ಟಾಂತವೇ ಸರಿಯಿಲ್ಲ.

ಇವರ ಅಭಿಪ್ರಾಯ ಇಷ್ಟು - ವಿದ್ವದ್ವಾಕ್ಯವು ಅನುವಾದಕವಾದ್ದರಿಂದ ಕರಣ ಇತಿಕರ್ತವ್ಯತಾಗಳಿಗೆ ಅಂಗಾಂಗಿಭಾವವು ಸಿದ್ಧವಾಗುತ್ತದೆ. ಹಾಗಾದರೆ ಭೇದಾಧ್ಯಾಯದಲ್ಲಿ ಹೇಗೆ ಅಂತರ್ಭಾವ ಆಯಿತು? ಎಂದರೆ ಭೇದದ ಅಪವಾದವನ್ನೇ ಹೇಳುತ್ತಿದೆ. ಭೇದದ ಅಪವಾದ ಹೇಳಿದರೂ ಭೇದವಿಷಯವೇ ಆಗುತ್ತದೆ. ಆದ್ದರಿಂದ ಭೇದಾಧ್ಯಾಯದಲ್ಲಿ ಅಂತರ್ಭಾವ ಹೊಂದುತ್ತದೆ. ಆದ್ದರಿಂದ ಭೇದಾಧ್ಯಾಯದಲ್ಲಿ ಅಂತರ್ಭಾವ ಹೊಂದುತ್ತದೆಂಬ ವಿಷಯದಲ್ಲಿ ಗ್ರಂಥಕಾರರಿಗೂ ಇವರಿಗೂ ವಿಪ್ರತಿಪತ್ತಿಯಿಲ್ಲ. ಹೇಗೆ ಅಂತರ್ಭಾವ ಆಗುತ್ತದೆಂಬ ವಿಷಯದಲ್ಲಷ್ಟೇ ವಿಪ್ರತಿಪತ್ತಿಯೆಂದು ತಿಳಿಯಬೇಕು.

ಇದು ತಪ್ಪು - ಕೆಲವರ ಆಕ್ಷೇಪ ಒಟ್ಟು ಎರಡು ೧) ಆಪವಾದಿಕೀ ಸಂಗತಿ ಹೇಳಿದರೆ ಸಾಕು. ಫಲತಃ ಸಂಗತಿ ಏಕೆ ಹೇಳಿದಿರಿ? ಎಂದು. ೨) ಅಂಗಾಗಿಭಾವಸಿದ್ಧವಾಗುತ್ತದೆ ಹೊರತು ಭೇದಸಿದ್ಧವಾಗುವುದಿಲ್ಲ ಎಂದು. ಈ ಎರಡೂ ಆಕ್ಷೇಪಗಳಿಗೆ ಒಂದೇ ಉತ್ತರ - ನಾವು ಕೇಳಿದ ಫಲತಃ ಸಂಗತಿಯು ಅತ್ಯಂತ ಸಂಗತ. ಏಕೆಂದರೆ ಇದು ಭೇದಾಧ್ಯಾಯ. ಭೇದಾಧ್ಯಾಯದಲ್ಲಿ ಭೇದವೇ ಪ್ರತಿಪಾದ್ಯವಾಗುತ್ತದೆ. ನಾವು ಹೇಳುವಂತೆ ಭೇದವು ಫಲತಃ ಸಿದ್ಧವಾಗುವುದರಿಂದ ಭೇದವೇ ಪ್ರತಿಪಾದ್ಯವಾಗುತ್ತದೆ. ನೀವು ಆಪವಾದಿಕೀಸಂಗತಿಯನ್ನು ಹೇಳುತ್ತಿದ್ದೀರಿ. ಅದು ಮುಖತಃ ಸಂಗತಿ ಆಗಿರಬಹುದು. ಆದರೂ ಅಧ್ಯಾಯಪ್ರತಿಪಾದ್ಯವನ್ನು ಹೇಳುತ್ತಿಲ್ಲವಾದ್ದರಿಂದ ನಿಮ್ಮ ಆಪವಾದಿಕೀ ಸಂಗತಿಗಿಂತ ನಾವು ಹೇಳುವ ಫಲತಃ

ಸಂಗತಿಯೇ ಶ್ರೇಷ್ಠವಾಗಿದೆ. ಇನ್ನು ಕರಣ ಇತಿಕರ್ತವ್ಯತಾಗಳಿಗೆ ಅಂಗಾಂಗಿಭಾವ ಸಿದ್ಧವಾಗುತ್ತದೆಂದು ಹೇಳಿದಿರಿ. ಇದರಿಂದ ಭೇದವೇ ಸಿದ್ಧವಾಗುವುದರಿಂದ ನಮಗಿದು ಇಷ್ಟವೇ ಆಗಿದೆ. ಆದ್ದರಿಂದ ಕೆಲವರು ಮಾಡುವ ಆಕ್ಷೇಪದ ಬಹಳ ಮಾತುಗಳು ಸಂಪೂರ್ಣ ವ್ಯರ್ಥವಾಗಿವೆ.

ಫಲತಃ ಸಿದ್ಧವಾಗುವ ವಿಚಾರಕ್ಕೆ ಅಧ್ಯಾಯದಿಂದ ಸಂಗತಿ ಕೂಡುತ್ತದೆನ್ನಲು ಬ್ರಹ್ಮಮೀಮಾಂಸೆಯದ್ದೇ ಮತ್ತೊಂದು ದೃಷ್ಟಾಂತ. ಯುಕ್ತಿಪಾದದ 'ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ಅಧಿಕರಣದಲ್ಲಿ ಹೀಗೆ ವಿಚಾರ ಮಾಡಿದ್ದಾರೆ - ಜಗತ್ಕಾರಣತ್ವವು ವಿಷ್ಣುವಿನಲ್ಲಿ ಕೂಡುತ್ತದೋ? ಇಲ್ಲವೋ? ಎಂದು ಸಂಶಯ. 'ಯತೋ ವಾ ಇಮಾನಿ ಭೂತಾನಿ' ಎಂಬ ಶ್ರುತಿಯು ವಿಷ್ಣುವಿನಲ್ಲಿ ಜಗತ್ಕಾರಣತ್ವವನ್ನು ಹೇಳುತ್ತಿರಬಹುದು. ಆದರೆ ಇದೇ ಅಪ್ರಮಾಣವಾಗಿದೆ. ಏಕೆಂದರೆ 'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಯು ಅಸತ್ತಿಗೆ ಕಾರಣತ್ವವನ್ನು ಹೇಳುತ್ತಿದೆ. ಈ ಶ್ರುತಿಗೆ ಯುಕ್ತಿಯ ಬೆಂಬಲವೂ ಇದೆ. 'ಅಸತ್ ಪ್ರಲಯೇ ಕಾರಣಮ್ ವಸ್ತುತ್ವಾತ್ ಕಾರ್ಯವತ್' ಎಂದು. ಹೀಗೆ ಯುಕ್ತಿಸಹಿತವಾದ ಶ್ರುತಿವಿರೋಧ-ವಿರುವುದರಿಂದ 'ಯತೋ ವಾ' ಇತ್ಯಾದಿ ಶ್ರುತಿಯು ಅಪ್ರಮಾಣವಾಗುತ್ತದೆ. ಆದ್ದರಿಂದ ವಿಷ್ಣುವು ಜಗತ್ಕಾರಣನಾಗಲಾರ. ಇಷ್ಟು ಪೂರ್ವಪಕ್ಷ.

ಸಿದ್ಧಾಂತ - 'ಅಸತ್' ಜಗತ್ಕಾರಣವಾಗಬೇಕಾದರೆ ಕರ್ತೃತ್ವಕ್ಕೆ ಪ್ರಯೋಗಿಯಾದ ಜ್ಞಾನ, ಇಚ್ಛಾ, ಕೃತಿಗಳು ಇರಬೇಕು. ಆದರೆ ಅಸತ್ ನಿಷೇಧರೂಪವಾದ್ದರಿಂದ ಇವುಗಳು ಬರುವುದಿಲ್ಲ ಮತ್ತು 'ಸದೇವ ಸೌಮ್ಯ' ಇತ್ಯಾದಿ ಅನೇಕ ಶ್ರುತಿಗಳು 'ಅಸದೇವೇದಮಗ್ರ' ಎಂಬ ಶ್ರುತಿಯನ್ನು ವಿರೋಧಿಸುತ್ತವೆ. ಆದ್ದರಿಂದ 'ಅಸತ್' ಶಬ್ದವನ್ನು ವಿಷ್ಣುಪರವಾಗಿಯೇ ಅರ್ಥೈಸಬೇಕು. ಅಸತ್‌ಕಾರಣತ್ವವಿಷಯದಲ್ಲಿ ಹೇಳಿದ ಅನುಮಾನವು ನಿರ್ಮೂಲವಾಗಿರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಾಗಿದೆ.

ಈ ಅಸದಧಿಕರಣದಲ್ಲಿ ಪೂರ್ವಪಕ್ಷಿಯು ತಾನು ಹೇಳಿದ ಯುಕ್ತಿಗೆ ಮೂಲವಾಗಿ ಒಂದು ಶ್ರುತಿಯನ್ನು ಹೇಳಿದ್ದಾನೆ. ಸೂತ್ರಕಾರರು ಆ ಶ್ರುತಿಯ ವಿರೋಧವನ್ನೇ ಮೊದಲು ನಿರಾಕರಿಸಿ 'ಅಸದೇವ' ಎಂಬ ಶ್ರುತಿಯು ವಿಷ್ಣುಪರವೆಂದು ಸಮರ್ಥಿಸಿದ್ದಾರೆ. ಆವಾಗ ಶ್ರುತಿಯ ಆಧಾರವನ್ನು ಯುಕ್ತಿಗೆ ಹೇಳಲು ಬರುವುದಿಲ್ಲ. ಯುಕ್ತಿಯು ನಿರ್ಮೂಲವಾದ್ದರಿಂದ ಪೂರ್ವಪಕ್ಷವನ್ನು ಮಾಡಲು ಬರುವುದಿಲ್ಲ. ಆದ್ದರಿಂದ ಮುಖತಃ ಶ್ರುತ್ಯವಿರೋಧವನ್ನು ಹೇಳಿದರೂ ಕೂಡ ಫಲತಃ ಶ್ರುತಿಮೂಲತಯಾ ಅಭಿಮತವಾದ ಯುಕ್ತಿಯ ಅವಿರೋಧದಲ್ಲಿ ಪರ್ಯವಸಾನವಾಗುವುದರಿಂದ ಯುಕ್ತ್ಯವಿರೋಧಪಾದದಲ್ಲಿ ಅಂತರ್ಭಾವವಾಗುತ್ತದೆ. ಹೊರತು ಶ್ರುತ್ಯವಿರೋಧಪಾದದಲ್ಲಿ ಅಂತರ್ಭಾವ ಹೊಂದುವುದಿಲ್ಲ. ಇದನ್ನೇ ಭಾಷ್ಯದಲ್ಲಿ 'ಅರ್ಥಾದ್ಯುಕ್ತಿವಿರೋಧಃ ನಿರಾಕ್ರಿಯತೇ' ಎಂದು ಹೇಳಿದ್ದಾರೆ. ಅದರಂತೆ ಇಲ್ಲಿಯೂ ಸಹ ಫಲತಃ ನಾಮಸಮನ್ವಯ ಸಿದ್ಧವಾಗುವುದರಿಂದ ನಾಮಪಾದದಲ್ಲಿ ಅಂತರ್ಭಾವ ಹೊಂದುತ್ತದೆ.

ಈ ವಿಷಯದಲ್ಲಿ ಎರಡನೆಯ ಅಧ್ಯಾಯ ಬೇಡ; ಇದೇ ಅಧ್ಯಾಯದ ಇದೇ ಪಾದದಲ್ಲಿರುವ ಅಂತಃಸ್ಥತ್ವಾಧಿಕರಣವೇ ದೃಷ್ಟಾಂತವಾಗಿದೆ - 'ಅಂತಸ್ತದ್ಧರ್ಮೋಪದೇಶಾತ್' ಎಂಬಲ್ಲಿ 'ಅಂತಸ್ಥತ್ವ' ಎಂಬ ಲಿಂಗ ಸಮನ್ವಯವನ್ನು ಮಾಡುತ್ತಾರೆ. ಅಂತಸ್ಥತ್ವ ಎಂಬ ಲಿಂಗವು ಯಾವ ವಾಕ್ಯದಲ್ಲಿ ಕೇಳಿಸುತ್ತಿದೆಯೋ ಆ ವಾಕ್ಯದ ಸಮೀಪದಲ್ಲಿ ಇಂದ್ರ, ಮಿತ್ರ ವರುಣ ಮೊದಲಾದ ಅನೇಕ ನಾಮಾತ್ಮಕಶಬ್ದಗಳೂ ಕೇಳಿಸುತ್ತಿವೆ.

ಅಂತಸ್ಥತ್ವ ಎಂಬ ಒಂದು ಲಿಂಗಸಮನ್ವಯ ಮಾಡಿದರೆ ಈ ಎಲ್ಲಾ ನಾಮಾತ್ಮಕ ಶಬ್ದಗಳ ಸಮನ್ವಯವು ಆಗುತ್ತವೆ. ಇಲ್ಲಿ ಹೇಗೆ ಮುಖತಃ ಅಂತಸ್ಥವೆಂಬ ಲಿಂಗಸಮನ್ವಯ ಮಾಡಿದ್ದರೂ ಫಲತಃ ನಾಮಸಮಯನ್ವವೇ ಸಿದ್ಧವಾಗುವುದರಿಂದ ನಾಮಪಾದದಲ್ಲಿ ಅಂತರ್ಭಾವ ಹೊಂದಿದೆಯೋ ಅದರಂತೆ ಆನಂದಮಯಾ-ಧಿಕರಣವೂ ನಾಮಪಾದದಲ್ಲಿ ಸೇರಿದೆ.

'ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ' ಇತ್ಯಾದಿ ಶ್ರುತಿಯು ಆನಂದಮಯನ ಪ್ರಾಪ್ತಿಯನ್ನು ಹೇಳುತ್ತಿರುವುದರಿಂದಲೂ ಸೂತ್ರಕಾರರು ಆನಂದಮಯ ಶಬ್ದ ಹೇಳಿದ್ದು ಸಂಗತವಾಗಿದೆ.




ಆನಂದಮಯ ಶಬ್ದವು ನಾಮಾತ್ಮಕವೆಂದು ಈ ಹಿಂದೆ ಹೇಳಿದರು. ಆದರೆ ಈಗ ಲಿಂಗಾತ್ಮಕವೆಂದು ಹೇಳುತ್ತಿದ್ದಾರೆ. 'ಆನಂದ' ಎಂಬುದು ನಾಮಾತ್ಮಕ ಶಬ್ದ. ಆನಂದಮಯವೆಂಬ ಲಿಂಗದ ಸಮನ್ವಯದಿಂದ ಆನಂದಾದಿ ಅನೇಕನಾಮುಗಳ ಸಮನ್ವಯವು ಫಲತಃ ಸಿದ್ಧವಾಗುತ್ತದೆ. ಯಾವ ರೀತಿಯಾಗಿ ನಾಮಪಾದದಲ್ಲಿ ಸೇರಿದೆಯೋ ಅದರಂತೆ ಆನಂದಮಯಾಧಿಕರಣವೂ ಸೇರಿದೆ. ಹಾಗಾದರೆ ನಾಮಪಾದದಿಂದ ಸಂಗತಿ ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಸುಲಭವಾಗಿ ಉತ್ತರಿಸಬಹುದು. ಮೇಲ್ನೋಟಕ್ಕೆ ಆನಂದಮಯ ಎಂಬ ಲಿಂಗಸಮನ್ವಯ ಮಾಡುತ್ತಿದ್ದರೂ ಅನೇಕ ನಾಮುಗಳ ಸಮನ್ವಯವೇ ಫಲತಃ ಸಿದ್ಧವಾಗುತ್ತದೆ. ಫಲತಃ ಸಿದ್ಧವಾಗುವ ನಾಮಸಮನ್ವಯವನ್ನು ವಿವಕ್ಷಿಸಿ ನಾಮಪಾದದಲ್ಲಿ ಸೇರಿಸಿದ್ದು ಯುಕ್ತವಾಗಿದೆ. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ವಿದ್ವದ್ವಾಕ್ಯಾಧಿಕರಣವು ಬ್ರಹ್ಮಮೀಮಾಂಸೆಯಲ್ಲಿ ಅಸದಧಿಕರಣ ಅಂತರಧಿಕರಣಗಳು ಉದಾಹರಣೆಯಾಗಿವೆ. ಸೂತ್ರಕಾರರು ಆನಂದ ಎಂಬ ನಾಮಸಮನ್ವಯವನ್ನೇ ನೇರವಾಗಿ ಮಾಡಿದ್ದರೆ ನಾಮಪಾದದ ಸಂಗತಿ ಇನ್ನೂ ಹೆಚ್ಚು ಸ್ವರಸವಾಗುತ್ತಿತ್ತಲ್ಲವೇ? ಎಂದರೆ, ಹೌದು. ಆದರೆ ಕೇವಲ ಆನಂದ ಶಬ್ದದಿಂದ ಪೂರ್ವಪಕ್ಷಸಿದ್ಧಾಂತ ಬೀಜಗಳೇ ಸ್ಥಾಪನೆಯಾಗುತ್ತಿರಲಿಲ್ಲ. ಆನಂದಮಯ ಎಂಬಲ್ಲಿರುವ ಮಯಟ್ ಪ್ರತ್ಯಯ ಇರುವುದೇ ಈ ಅಧಿಕರಣ ರಚನೆಗೆ ಪ್ರಧಾನ ಕಾರಣವಾಗಿದೆ.



## ಈಕ್ಷತ್ಯಧಿಕರಣದಿಂದ ಆನಂತರ್ಯಸಂಗತಿ

**तात्पर्यचन्द्रिका–**

**इह समन्वयसूत्रप्रतिज्ञातसमन्वयहेतौ वाच्यत्वे ईक्षत्यधिकरणेनोक्ते अध्यायशेषेण प्रतिज्ञातसमन्वय उपपादनीयः । तत्रान्तराद्यधिकरणानामानन्द-मयानन्तर्ये हेतोर्वक्ष्यमाणत्वात् सर्वापेक्षितानन्दप्रदोपासनाविषयपूर्णानन्दत्वरूप-महागुणस्य प्रथमं वक्तव्यत्वाच्चानन्तरसङ्गतिः ।**

**यद्वा ईक्षत्यधिकरणोक्तात्मशब्दात् गौणत्वनिरासो न युक्तः, अब्रह्मणि गौणात्मन्यानन्दमये ''एतमानन्दमयमात्मानम्'' इति तच्छ्रवणात् ।**

**तथा ब्रह्मनिष्ठस्य मोक्षोपदेशो वा, ''पूर्णमेवावशिष्यते'' इति पूर्णस्य ब्रह्मणः स्वाप्ययो वा न युक्तः, ब्रह्मण आनन्दमयावयवत्वे अवयविनं विहायावयवनिष्ठायाः प्राप्यताया अवयवपूर्णतायाश्चायोगात् ।**

**तथा ब्रह्मणो जिज्ञास्यतायां कारणतायां च यद्गतिसामान्यमुक्तम्, तदयुक्तम्, ब्रह्म प्रत्यवयविनः आनन्दमयस्य ''सोऽकामयत बहु स्याम्'' इत्यादिना कारणत्वावगतेः कारणस्यैव जिज्ञास्यत्वनियमादिति पूर्वोक्ताक्षेपेण पूर्वपक्ष-प्रवृत्तेराक्षेपिकी सङ्गतिः ।**

ಅನುವಾದ - ಹಿಂದೆ ಸಮನ್ವಯಾಧಿಕರಣದಲ್ಲಿ ಸಕಲಶಬ್ದಗಳ ಸಮನ್ವಯವನ್ನು ಪ್ರತಿಜ್ಞೆ ಮಾಡಿದ್ದರು. ಅದನ್ನು ಉಪಪಾದಿಸುವುದಕ್ಕಾಗಿಯೇ ಆನಂದಮಯಾಧಿಕರಣದಿಂದ ಸಂಪೂರ್ಣ ಅಧ್ಯಾಯವು ಹೊರಟಿದೆ. ಹಾಗಾದರೆ ಮಧ್ಯದಲ್ಲಿ ಈಕ್ಷತ್ಯಧಿಕರಣದ ಕೃತ್ಯವೇನು? ಎಂದರೆ ಸಮನ್ವಯವು ಪ್ರತಿಜ್ಞಾತವಾಗಿದೆ. ಅದಕ್ಕೇ ಹೇತುವಾದದ್ದು ವಾಚ್ಯತ್ವ. ಪರಮಾತ್ಮನಿಗೆ ವಾಚ್ಯತ್ವವೇ ಕೂಡದಿದ್ದರೆ ಸರ್ವಶಬ್ದಸಮನ್ವಯವು ಸರ್ವಥಾ ಕೂಡುವುದಿಲ್ಲ. ಆದ್ದರಿಂದ ಸಮನ್ವಯಕ್ಕೆ ಸಂಭಾವಕಹೇತು ವಾಚ್ಯತ್ವ. ಅದನ್ನು ಈಕ್ಷತ್ಯಧಿಕರಣದಲ್ಲಿ ಸಮನ್ವಯ ಮಾಡಿದ ಮೇಲೆ ಅಧ್ಯಾಯಶೇಷದಿಂದ ಪ್ರತಿಜ್ಞಾತವಾದ ಸಮನ್ವಯವನ್ನು ಉಪಪಾದಿಸುತ್ತಿದ್ದಾರೆ. ಹಾಗಾದರೆ ಆನಂದಮಯಾಧಿಕರಣವನ್ನೇ ಮೊದಲೇಕೆ ಹೇಳಬೇಕು? ಎಂದರೆ ಈ ಪಾದದಲ್ಲಿರುವ ಅಂತರಾದ್ಯಧಿಕರಣಗಳು ಆನಂದಮಯಾಧಿಕರಣದ ಅನಂತರವೇ ಬರಬೇಕೆಂದು ಮುಂದೆ ಕಾರಣ ಹೇಳುತ್ತೇವೆ. ಅದರಿಂದಲೇ ಆನಂದಮಯಾಧಿಕರಣಕ್ಕೆ ಪ್ರಾಥಮ್ಯವು ಸಿದ್ಧವಾಗುತ್ತದೆ. ಮತ್ತು ಸರ್ವಾಪೇಕ್ಷಿತವಾದದ್ದು ಆನಂದ. ಇಂತಹ ಆನಂದವನ್ನು ಪಡೆಯಬೇಕೆಂದರೆ ಭಗವಂತನಲ್ಲಿರುವ ಪೂರ್ಣಾನಂದತ್ವ ಎಂಬ ಮಹಾಗುಣವನ್ನು ಉಪಾಸನೆ ಮಾಡಬೇಕು. ಆವಾಗ ನಮಗೆ ಆನಂದದ ಲಾಭವಾಗುತ್ತದೆ. ಆದ್ದರಿಂದ ಮೊದಲು ಆನಂದಮಯಾಧಿಕರಣವೇ ಹೊರಟಿದೆ. ಹೀಗೆ ಈಕ್ಷತ್ಯಧಿಕರಣದಿಂದ ಆನಂತರ್ಯಸಂಗತಿಯು ಆನಂದಮಯಾಧಿಕರಣಕ್ಕೆ ಲಭ್ಯವಾಗುತ್ತದೆ.

ಅಥವಾ ಈಕ್ಷತ್ಯಧಿಕರಣದಲ್ಲಿ ಆತ್ಮಶಬ್ದದ ಬಲದಿಂದ ಗೌಣಾತ್ಮನನ್ನು ನಿರಾಸ ಮಾಡಿದ್ದಾರೆ. ಇದೂ ಸಹ ಕೂಡುವುದಿಲ್ಲ. ಏಕೆಂದರೆ 'ಏತಮಾನಂದಮಯಮಾತ್ಮಾನಮ್' ಎಂದು ಆನಂದಮಯನಲ್ಲಿ ಆತ್ಮಶಬ್ದಪ್ರಯೋಗವಿದೆ. ಆನಂದಮಯನಂತೂ ನಿರ್ಗುಣಾತ್ಮನಲ್ಲ. ಗೌಣಾತ್ಮನೇ ಆಗಿದ್ದಾನೆ. ಆದ್ದರಿಂದ ಆತ್ಮ ಶಬ್ದದ ಬಲದಿಂದ ಗೌಣಾತ್ಮನನ್ನು ನಿರಾಸ ಮಾಡಲು ಸಾಧ್ಯವಿಲ್ಲ.

ಮತ್ತು 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' ಎಂಬಲ್ಲಿ ಈಕ್ಷಣೀಯನಾದ ಆತ್ಮನನ್ನು ಉಪಾಸನೆ ಮಾಡುವವರಿಗೆ ಮೋಕ್ಷವನ್ನು ಹೇಳಿದ್ದಾರೆಂದು ಹೇಳಿದ್ದು ಸರಿಯಿಲ್ಲ. ಮತ್ತು 'ಸ್ವಾಪ್ಯಯಾತ್' ಎಂಬ ಸೂತ್ರದಲ್ಲಿ ಪೂರ್ಣನಾದ ಬ್ರಹ್ಮನಿಗೆ ಸ್ವಾಪ್ಯಯವನ್ನು ಹೇಳಿದ್ದಾರೆ. ಇದೂ ಸರಿಯಲ್ಲ. ಏಕೆಂದರೆ ಬ್ರಹ್ಮನನ್ನು ಆನಂದಮಯನ ಅವಯವ ಎಂದು ಶ್ರುತಿ ಹೇಳಿದೆ. ಅವಯವಿ ಬಿಟ್ಟು ಅವಯವನಾದ ಬ್ರಹ್ಮನಲ್ಲಿ ನಿಷ್ಠನಾಗಿರುವವನಿಗೆ ಮೋಕ್ಷವಾಗಲು ಸಾಧ್ಯವಿಲ್ಲ. ಮತ್ತು ಅವಯವಿ ಪೂರ್ಣವಾಗಿರುತ್ತದೆ ಹೊರತು ಅವಯವವು ಪೂರ್ಣವಾಗಿರುವುದಿಲ್ಲ. ಆದ್ದರಿಂದ ಬ್ರಹ್ಮನು ಅಪೂರ್ಣನಾದ್ದರಿಂದ ಸ್ವಾಪ್ಯಯವನ್ನೂ ಹೇಳಲು ಬರುವುದಿಲ್ಲ.

ಇದರಂತೆ ಬ್ರಹ್ಮನೇ ಜಿಜ್ಞಾಸ್ಯನಾಗಿದ್ದಾನೆ ಮತ್ತು ಜಗತ್ಕಾರಣನಾಗಿದ್ದಾನೆ ಎನ್ನಲು ಗತಿಸಾಮಾನ್ಯವನ್ನು ಹೇಳಿದಿರಿ. ಇದೂ ಸಹ ಅಯುಕ್ತವಾಗಿದೆ. ಏಕೆಂದರೆ ಬ್ರಹ್ಮನಿಗೂ ಅವಯವಿ ಆದವನು ಆನಂದಮಯ. ಇವನೇ ಜಗತ್ಕಾರಣನಾಗಿದ್ದಾನೆಂದು 'ಸೋಽಕಾಮಯತ ಬಹು ಸ್ಯಾಮ್' ಎಂಬ ಶ್ರುತಿ ಹೇಳುತ್ತಿದೆ. ಯಾರು ಜಗತ್ಕಾರಣನೋ ಅವನೇ ಜಿಜ್ಞಾಸ್ಯನಾಗುತ್ತಾನೆ. ಆನಂದಮಯನು ಜಗತ್ಕಾರಣನಾದ್ದರಿಂದ ಅವನೇ ಜಿಜ್ಞಾಸ್ಯನಾಗುತ್ತಾನೆಂದು ಶ್ರುತಿಯಿಂದಲೇ ಸಿದ್ಧವಾಗುತ್ತದೆ. ಹೀಗೆ ಈಕ್ಷತ್ಯಧಿಕರಣದಲ್ಲಿ ಸಿದ್ಧವಾದ ಪ್ರಮೇಯವನ್ನು ಆಕ್ಷೇಪಿಸಿ ಈ ಅಧಿಕರಣ ಹೊರಟಿದೆ. ಆದ್ದರಿಂದ ಈಕ್ಷತ್ಯಧಿಕರಣದಿಂದ ಆನಂದಮಯಾಧಿಕರಣಕ್ಕೆ ಆಕ್ಷೇಪಿಕೀಸಂಗತಿಯು ಇದೆ. ಈಕ್ಷತ್ಯಧಿಕರಣದ ಅನಂತರ ಆನಂದಮಯಾಧಿಕರಣ ಹೇಳಿದ್ದು ಅತ್ಯಂತ ಸಂಗತವಾಗಿದೆ.

## ಕಠಿಣಪದಾರ್ಥ

ಅಧ್ಯಾಯಶೇಷೇಣ = ಪ್ರಥಮಾಧ್ಯಾಯದ ಶೇಷವಾದ ಆನಂದಮಯಾಧಿಕರಣದಿಂದ ಪ್ರಾರಂಭಿಸಿ ಸಂಪೂರ್ಣ ಅಧ್ಯಾಯದಿಂದ, ಆನಂದಮಯಾವಯವತ್ವೇ = ಆನಂದಮಯನು ಅವಯವೀ, ಬ್ರಹ್ಮನು ಅವಯವ ಎಂದು ಹೇಳಿದರೆ, ಬ್ರಹ್ಮ ಪ್ರತಿ = ಪುಚ್ಛತ್ವೇನ ಉಕ್ತನಾದ ಬ್ರಹ್ಮನೆಂಬ ಅವಯವನನ್ನು ಕುರಿತು. ಪೂರ್ವೋಕ್ತಾಕ್ಷೇಪೇಣ = ಗೌಣಸೂತ್ರದಿಂದ, ತನ್ನಿಷ್ಠಸೂತ್ರದಿಂದ, ಸ್ವಾಪ್ಯಯಸೂತ್ರದಿಂದ, ಅಥವಾ ಗತಿಸೂತ್ರದಿಂದ ಉಕ್ತನಾದವನನ್ನು ಆಕ್ಷೇಪಿಸುತ್ತಿರುವುದರಿಂದ.

**प्रकाशः** – अस्य नयस्य पूर्वानन्तर्यरूपसङ्गतिं वक्तुमस्याध्यायस्य समन्वयसूत्रेणागतार्थत्वमाह – **इहेति** ।। **उपपादनीय इति** ।। न हि प्रपञ्चनेनोपपादनं विना 'समन्वयात्' इति प्रतिज्ञामात्रेणार्थसिद्धिरिति भावः । तर्हि तदानन्तर्यमेव स्यादित्यत उक्तं **समन्वयहेताविति** ।। ''तदभावे कुतोऽन्वयः'' इत्युक्तरीत्या ब्रह्मणि शब्दानां शक्त्यभावे वचनवृत्तेरेवाभावापातेन तत्र समन्वयप्रतिज्ञैवायुक्ता, यस्या उपपादनं स्यात्,

सम्भावितः प्रतिज्ञाया अर्थः साध्येत हेतुना ।

इत्यादेः । तथा चेक्षतिनये वाच्यत्वोक्त्या सम्भावितस्य समन्वयस्योपपादनमनन्तरप्राप्तमित्यर्थः । एतेन "अथ ब्रह्मस्वरूपनिरूपणे" इत्यादिटीका व्याख्याता । अनेन समन्वयसूत्रस्य अस्य च प्रपञ्चयप्रपञ्चकाभावरूपसङ्गतिरुक्ता भवति । सुधारीत्या शेषपदोक्तिः ।

एवमध्यायस्यारब्धव्यत्वे सिद्धेऽस्य नयस्येतरस्मात् प्राथम्ये हेतुद्वयमाह – **तत्रेति ।। सर्वापेक्षितेति ।।** अयं च हेतुः –

....... ........ ..... तत्रानन्दादयो गुणाः ।
ईशस्यैवेति निर्णीताः श्रुतियुक्तिसमाश्रयात् ।।

इत्युपासनादीयानुव्याख्यानव्याख्याऽवसरे सुधायां "अत्र आनन्दमयाधिकरणस्याद्यत्वे हेतुं सूचयन्नाह" इत्यवतार्य, "सर्वेषु हि श्रुतेषु मूर्धाभिषिक्ता आनन्दविज्ञानादयः । अतो माङ्गलिक आचार्यस्तच्छब्दसमन्वयमादावाह" इत्युक्तत्वाल्लब्धः । तत्रैव सुधायां – "उत्तराधिकरणेष्वप्येवं क्रमनिमित्तादिकं स्वयमूहनीयं" इत्युक्तेः पूर्वेणास्य सङ्गत्यन्तरं स्वयमुत्प्रेक्ष्याह – **यद्वेति ।। गौणत्वेति ।।** 'ईक्षणीयस्य' इति शेषः ।। **जिज्ञास्यतायामिति ।।** यद्यपि कारणतायामेव सर्वशाखानामैकमत्यरूपं गतिसामान्यमुक्तं टीकायां, तथाऽपि तस्य जिज्ञासापर्यन्तत्वात् 'जिज्ञास्यतायां' इत्युक्तम् । एतच्च जिज्ञासासूत्रस्याप्याक्षेपायोक्तम् ।। **ब्रह्म प्रतीति ।।** पुच्छत्वेनोक्तब्रह्मरूपावयवं प्रतीत्यर्थः ।। **पूर्वोक्तेति ।।** गौणसूत्रेण तन्निष्ठसूत्रेण वा स्वाप्ययसूत्रेण वा गतिसूत्रेण वोक्तस्याक्षेपेणेत्यर्थः ।

गुरुराजीयम् – इदानीं गुणपूर्णत्वसिद्ध्यर्थं समन्वयो व्युत्पादनीयः । तत्रानन्दमयशब्द एव किमिति प्रदर्श्यते । आकाशादिशब्दानामपि विद्यमानत्वात् । न च सङ्गतिलाभात् तत्समन्वयोक्तिरिति वाच्यम् । सङ्गतेः शब्दान्तरेपि सम्भवेन प्रथमत एव तत्कथने विशेषहेत्वभावादित्यत आह – इहेति ।।

वचनवृत्तिगोचरत्वमात्ररूपवाच्यत्वस्योपक्रमादिप्रमाणकशास्त्रजन्यप्रमागोचरत्वरूपसमन्वयहेतुत्वाद्धेतुहेतुमद्भावलक्षणा सङ्गतिरित्यर्थः । तथा च आन्तरा-

**द्यधिकरणानामानन्दमयाधिकरणानन्तर्यं हेतुप्रयोज्यमेव । आनन्दमयस्येक्षत्यधिकरणाव्यवहितानन्तर्यमिति भावः । आनन्दादयः प्रधानस्येति सूत्रानुसारितत्रानन्दादयो गुणा इत्याद्यनुव्याख्यानानुसारेण सर्वापेक्षितेति । न केवलमाकाङ्क्षालक्षणसङ्गतिसद्भावादानन्दमयस्य प्राथम्यं किंत्वाक्षेपसङ्गतिसद्भावाचेत्याह – यद्वेति ।।**

ವಿವರಣೆ - ಇಲ್ಲಿಯ ತನಕ ಆನಂದಮಯಾಧಿಕರಣಕ್ಕೆ ಪಾದಸಂಗತಿಯನ್ನು ತೋರಿಸಿದ್ದಾಯಿತು. ಈಗ ಹಿಂದಿನ ಪಂಚಾಧಿಕರಣಗಳಿಂದ ಆನಂತರ್ಯರೂಪಸಂಗತಿಯನ್ನು ತೋರಿಸುತ್ತಿದ್ದಾರೆ. ಅಂದರೆ ಅಂತರ್ಭಾವ ಸಂಗತಿಗಳನ್ನೆಲ್ಲ ಇದುವರೆಗೂ ತೋರಿಸಿ ಈಗ ಆನಂತರ್ಯರೂಪವಾದ ಸಂಗತಿಯನ್ನು ತೋರಿಸುತ್ತಿದ್ದಾರೆ. ಅದಕ್ಕೆ ಪೂರಕವಾಗಿ ಸಮನ್ವಯಸೂತ್ರದಿಂದ ಪ್ರಥಮಾಧ್ಯಾಯಕ್ಕೆ ಗತಾರ್ಥತ್ವ ಬರುವುದಿಲ್ಲವೆಂದು 'ಇಹ' ಇತ್ಯಾದಿ ಗ್ರಂಥದಿಂದ ಉಪಪಾದಿಸುತ್ತಿದ್ದಾರೆ.

ಸಮನ್ವಯ ಸೂತ್ರದಲ್ಲಿ ಸಮನ್ವಯದ ಪ್ರತಿಜ್ಞೆ ಮಾಡಿದ್ದಾರೆ. ಇದರಿಂದ ಸಮನ್ವಯವು ಸಿದ್ಧವಾಗುವುದಿಲ್ಲ. ಆ ಪ್ರತಿಜ್ಞೆಯನ್ನು ಉಪಪಾದಿಸಿದಾಗ ಮಾತ್ರ ಸಮನ್ವಯವು ಸಿದ್ಧವಾಗುತ್ತದೆ. ಅದಕ್ಕೋಸ್ಕರ ಆನಂದಮಯಾಧಿಕರಣದಿಂದ ಅಧ್ಯಾಯಶೇಷವು ಹೊರಟಿದೆ. ಹಾಗಾದರೆ ಸಮನ್ವಯಸೂತ್ರದ ಅನಂತರವೇ ಆನಂದಮಯಾಧಿಕರಣವನ್ನು ಹೇಳಬೇಕಿತ್ತಲ್ಲವೇ? ಎಂದರೆ ಈಕ್ಷತ್ಯಧಿಕರಣದಿಂದಷ್ಟೇ ಆನಂದಮಯಾಧಿಕರಣಕ್ಕೆ ಸಂಗತಿ ದೊರೆಯುತ್ತದೆಂದು ಹಲವು ಬಗೆಯಲ್ಲಿ ಸಮರ್ಥಿಸುತ್ತಿದ್ದಾರೆ. ಒಂದು ವೇಳೆ ಸಮನ್ವಯಾಧಿಕರಣ ಆದ ಕೂಡಲೇ ಆನಂದಯಾಧಿಕರಣವನ್ನು ಹೇಳಿದರೆ ಯಾವ ಪ್ರತಿಜ್ಞೆಯನ್ನು ಉಪಪಾದಿಸಲು ಅಧ್ಯಾಯಶೇಷ ಹೊರಟಿದೆಯೋ ಅದೇ ತಪ್ಪಾಗುತ್ತದೆ. ಏಕೆಂದರೆ ಪರಮಾತ್ಮನಲ್ಲಿ ಶಬ್ದಗಳಿಗೆ ಶಕ್ತಿಯೇ ಇಲ್ಲವಾದರೆ 'ತದಭಾವೇ ಕುತೋಽನ್ವಯಃ' ಎಂಬಂತೆ ಸಮನ್ವಯದ ಪ್ರತಿಜ್ಞೆಯೇ ತಪ್ಪಾಗುತ್ತದೆ. ಇನ್ನು ಅದರ ಉಪಪಾದನೆಯಂತೂ ದೂರತೋಪಾಸ್ತ.

**ಸಂಭಾವಿತಃ ಪ್ರತಿಜ್ಞಾಯಾಃ ಅರ್ಥಃ ಸಾಧ್ಯೇತ ಹೇತುನಾ ।**
**ನ ತಸ್ಯ ಹೇತುಭಿಸ್ತ್ರಾಮ್ ಉತ್ಪತನ್ನೇವ ಯೋ ಮೃತಃ ॥**

ಎಂಬಂತೆ ಪ್ರತಿಜ್ಞೆ ಮಾಡಿದ ಅರ್ಥವು ಸಂಭಾವಿತವಾಗಿದ್ದಲ್ಲಿ ಅದನ್ನು ಹೇತುಗಳಿಂದ ಸಾಧಿಸಬಹುದು. ಪ್ರತಿಜ್ಞಾರ್ಥವೇ ಅಸಂಭಾವಿತವಾದಲ್ಲಿ ಅದನ್ನು ಹೇತುಗಳಿಂದ ಸಾಧಿಸುವುದಾದರೂ ಹೇಗೆ ಸಾಧ್ಯ? ಆದ್ದರಿಂದ ಈಕ್ಷತ್ಯಧಿಕರಣದಲ್ಲಿ ವಾಚ್ಯತ್ವವನ್ನು ಸಮರ್ಥಿಸುವ ಮೂಲಕ ಸಮನ್ವಯದ ಪ್ರತಿಜ್ಞೆಯನ್ನು ಸಂಭಾವಿತವೆಂದು ಸಮರ್ಥಿಸಿದರು. ಅನಂತರ ಸಂಭಾವಿತವಾದ ಸಮನ್ವಯವನ್ನು ಈ ಅಧಿಕರಣದಿಂದ ಉಪಪಾದಿಸುತ್ತಿದ್ದಾರೆ. ಹೀಗೆ ಹೇಳಿದ್ದರಿಂದ 'ಬ್ರಹ್ಮಸ್ವರೂಪನಿರೂಪಣೇ' ಇತ್ಯಾದಿ ಟೀಕೆಯನ್ನೂ ವ್ಯಾಖ್ಯಾನಿಸಿದಂತಾಯಿತು. ಮತ್ತು ಸಮನ್ವಯಸೂತ್ರಕ್ಕೂ ಆನಂದಮಯಾಧಿಕರಣಕ್ಕೂ ಪ್ರಪಂಚ್ಯಪ್ರಪಂಚಕ ಭಾವಸಂಗತಿಯನ್ನು ಹೇಳಿದಂತಾಯಿತು.

ಗ್ರಂಥದಲ್ಲಿ 'ಅಧ್ಯಾಯಶೇಷ' ಎಂಬ ಪದಪ್ರಯೋಗವನ್ನು ಸುಧೆಯ ಪ್ರಕಾರ ಮಾಡಿದ್ದಾರೆ. ಆನಂದಮಯಾಧಿಕರಣದಿಂದ ಅಧ್ಯಾಯ ಪ್ರಾರಂಭವಾಗುವುದಾದರೆ ಸಂಪೂರ್ಣ ಅಧ್ಯಾಯದಿಂದವೆಂದು

ಹೇಳಬೇಕು. ಅಧ್ಯಾಯಶೇಷ ಎಂಬುದು ತಪ್ಪಾಗುತ್ತದೆ. ಆದರೆ ಸುಧೆಯಲ್ಲಿ ಜಿಜ್ಞಾಸಾಸೂತ್ರದಿಂದಲೇ ಅಧ್ಯಾಯವು ಪ್ರಾರಂಭವಾಗಿದೆ ಎಂದಿದ್ದಾರೆ. ಆವಾಗ ಅಧ್ಯಾಯಶೇಷ ಎಂಬುದು ಸಾಧುವಾಗುತ್ತದೆ.

ಹೀಗೆ ಸಮನ್ವಯಾಧ್ಯಾಯವು ಆರಂಭಣೀಯವೆಂದು ಸಿದ್ಧವಾದ ಮೇಲೆ ಆನಂದಮಯಾಧಿಕರಣಕ್ಕೆ ಪ್ರಾಥಮ್ಯ ಬರಲು ಎರಡು ಹೇತುಗಳನ್ನು 'ತತ್ರ' ಇತ್ಯಾದಿವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

'ಆನಂದ' ಎಂಬ ಗುಣವು ಪ್ರಧಾನವಾಗಿದೆಯೆಂದು ಅನುವ್ಯಾಖ್ಯಾನ ಮತ್ತು ಸುಧೆಯಲ್ಲಿಯೂ ಹೇಳಿದ್ದಾರೆ - 'ತತ್ರಾನಂದಾದಯೋ ಗುಣಾಃ ಈಶಸ್ಯೈವೇತಿ ನಿರ್ಣೀತಾಃ ಶ್ರುತಿಯುಕ್ತಿಸಮಾಶ್ರಯಾತ್' ಎಂದು ಉಪಾಸನಾಪಾದದ ಅನುವ್ಯಾಖ್ಯಾನವನ್ನು ವ್ಯಾಖ್ಯಾನ ಮಾಡುವಾಗ ಸುಧೆಯಲ್ಲಿ 'ತತ್ರಾನಂದಮಯಾಧಿಕರಣಸ್ಯಾದ್ಯತ್ವೇ ಹೇತುಂ ಸೂಚಯನ್ನಾಹ' ಆನಂದಮಯಾಧಿಕರಣವೇ ಮೊದಲೇಕೆ? ಎಂಬುದಕ್ಕೆ ಕಾರಣವನ್ನು ಸೂಚಿಸುತ್ತಿದ್ದಾರೆಂದು ಅವತಾರಿಕೆ ನೀಡಿದ್ದಾರೆ - 'ಸರ್ವೇಷು ಹಿ ಶ್ರುತೇಷು ಮೂರ್ಧಾಭಿಷಿಕ್ತಾ ಆನಂದವಿಜ್ಞಾನಾದಯಃ ಅತೋ ಮಾಂಗಲಿಕಃ ಆಚಾರ್ಯಃ ತಚ್ಛಬ್ದಸಮನ್ವಯ-ಮಾದಾವಾಹ' ಅನಂತಗುಣಗಳಲ್ಲಿ ಆನಂದವಿಜ್ಞಾನಾದಿಗುಣಗಳು ಮೂರ್ಧಾಭಿಷಿಕ್ತವಾಗಿವೆ. ಆದ್ದರಿಂದ ವ್ಯಾಸರು ಅವುಗಳ ಸಮನ್ವಯವನ್ನೇ ಮೊದಲು ಹೇಳಿದ್ದಾರೆ' ಎಂದು. ಇದಕ್ಕೆ ವ್ಯಾಖ್ಯಾನಿಸುತ್ತಾ ಸುಧೆಯಲ್ಲಿ 'ಉತ್ತರಾಧಿಕರಣೇಷ್ವಪಿ ಏವಂ ಕ್ರಮನಿಮಿತ್ತಾದಿಕಂ ಸ್ವಯಮೂಹನೀಯಮ್' ಮುಂದಿನ ಅಧಿಕರಣ-ಗಳಲ್ಲಿಯೂ ಕ್ರಮ ನಿಮಿತ್ತಾದಿಗಳನ್ನು ಸ್ವತಃ ಊಹಿಸಿಕೊಳ್ಳಬೇಕು.

ಪ್ರಶ್ನೆ : ಜಿಜ್ಞಾಸ್ಯತ್ವವಿಷಯದಲ್ಲಿ ಗತಿಸಾಮಾನ್ಯವನ್ನು ಹೇಳಿದ್ದಾರೆಂದು ಗ್ರಂಥಕಾರರು ಹೇಗೆ ಹೇಳಿದರು? ಜಗತ್‌ಕಾರಣತ್ವ ವಿಷಯದಲ್ಲಷ್ಟೇ ಹಿಂದೆ ಗತಿಸಾಮಾನ್ಯ ಹೇಳಿದ್ದಾರೆ?

ಉತ್ತರ : ಜಗತ್ಕಾರಣತ್ವವು ಜಿಜ್ಞಾಸ್ಯತ್ವದಲ್ಲೇ ಪರ್ಯವಸಾನ ಹೊಂದುತ್ತದೆ. ಸಕಲ ಶಾಖೆಗಳು ಒಬ್ಬನನ್ನೇ ಜಗತ್ಕಾರಣನೆಂದು ಹೇಳುತ್ತಿವೆ ಎಂದರೆ ಒಬ್ಬನನ್ನೇ ಜಿಜ್ಞಾಸ್ಯನೆಂದು ಹೇಳುತ್ತಿವೆ ಎಂದರ್ಥ. ಹೀಗೆ ಜಿಜ್ಞಾಸ್ಯತಾಯಾಮ್ ಎಂದು ಹೇಳಿದ್ದರಿಂದ ಜಿಜ್ಞಾಸಾಸೂತ್ರವೂ ಸರಿಯಿಲ್ಲ ಎಂಬ ಆಕ್ಷೇಪವನ್ನೂ ತೋರಿಸಿದಂತಾಯಿತು.




ಈಕ್ಷತ್ಯಧಿಕರಣದ ಅನಂತರ ಬೇರೆ ಅಧಿಕರಣಗಳನ್ನು ಹೇಳಬಹುದಿತ್ತು. ಅಥವಾ ಈಕ್ಷತ್ಯಧಿಕರಣಕ್ಕಿಂತ ಮೊದಲೇ ಆನಂದಮಯಾದ್ಯಧಿಕರಣಗಳನ್ನು ಹೇಳಬಹುದಿತ್ತು? ಎಂಬ ಪ್ರಶ್ನೆಗೆ ಇಲ್ಲಿ ಸಮಂಜಸವಾಗಿ ಉತ್ತರ ನೀಡಿದ್ದಾರೆ. ಆನಂದಮಯಾಧಿಕರಣದಿಂದ ಆರಂಭಿಸಿ ಸಂಪೂರ್ಣ ಅಧ್ಯಾಯದಲ್ಲಿ ಸಕಲಶಬ್ದಗಳ ಸಮನ್ವಯ ಮಾಡಿದ್ದಾರೆ. ಇದನ್ನು ಸಮನ್ವಯಸೂತ್ರದ ಅನಂತರವೇ ಹೇಳಿದರೆ ಸಂಗತವೆಂದು ಮೇಲ್ನೋಟಕ್ಕೆ ತೋರುತ್ತದೆ. ಆದರೆ ಯಾವ ಶಬ್ದಗಳಿಂದಲೂ ವಾಚ್ಯನೇ ಆಗದ ಪರಮಾತ್ಮನಲ್ಲಿ ಸಕಲ ಶಬ್ದಗಳ ಸಮನ್ವಯವು ಅತ್ಯಂತ ಅಸಾಧ್ಯ ಎಂಬ ಗೊಂದಲವನ್ನು ಪರಿಹರಿಸಲು ಮಧ್ಯದಲ್ಲಿ ವಾಚ್ಯತ್ವಸಮರ್ಥನೆಗಾಗಿ ಈಕ್ಷತ್ಯಧಿಕರಣ ಹೊರಟಿದೆ. ಇನ್ನು ಈಕ್ಷತ್ಯಧಿಕರಣದ ಅನಂತರವೇ ಆನಂದಮಯಾಧಿಕರಣವನ್ನು ಉಲ್ಲೇಖಿಸಲು ಬಹಳ ಕಾರಣಗಳಿವೆ. ಮುಖ್ಯವಾಗಿ ಎಲ್ಲರಿಗೂ ಅಪೇಕ್ಷೆ ಇರುವುದು ಆನಂದದ ಪರಾಕಾಷ್ಠೆ. ಇದು ಲಭಿಸಬೇಕಾದರೆ ಭಗವಂತನ ಮಹಾಗುಣವೆನಿಸಿದ

ಪೂರ್ಣಾನಂದತ್ವವನ್ನು ಉಪಾಸನೆ ಮಾಡಬೇಕು. ಮಹಾಗುಣವನ್ನೇ ಮೊದಲು ಉಪಾಸನೆ ಮಾಡಿದರೆ ನಾವೂ ಸಹ ಖಚಿತವಾಗಿ ಯೋಗ್ಯತಾನುಸಾರಿಯಾಗಿ ಆನಂದದ ಪರಾಕಾಷ್ಠೆಯನ್ನು ತಲುಪಬಹುದು.

ಅಷ್ಟೇ ಅಲ್ಲದೇ ಈಕ್ಷತ್ಯಧಿಕರಣದ ಅನೇಕ ಸೂತ್ರಗಳಿಂದ ಆನಂದಮಯಾಧಿಕರಣಕ್ಕೆ ಆನಂತರ್ಯ ಕೂಡುತ್ತದೆ. ಗೌಣಸೂತ್ರದಲ್ಲಿ ಹೇಳಿದ ಆತ್ಮಶಬ್ದ ತನ್ನಿಷ್ಠಸೂತ್ರದಲ್ಲಿ ಹೇಳಿದ ಮೋಕ್ಷೋಪದೇಶ, ಸ್ವಾಪ್ಯಯಸೂತ್ರದಲ್ಲಿ ಹೇಳಿದ ಪೂರ್ಣತ್ವ ಗತಿಸೂತ್ರದಲ್ಲಿ ಹೇಳಿದ ಗತಿಸಾಮಾನ್ಯ ಇವುಗಳು ಬ್ರಹ್ಮನಲ್ಲಿ ಬರುವುದೇ ಇಲ್ಲ. ಬ್ರಹ್ಮನು ಆನಂದಮಯನ ಅವಯವನಾಗಿದ್ದಾನೆ. ಅವಯವ ಅವಯವಿಗಳಿಗೆ ಭೇದವಿರುವುದರಿಂದ ಆನಂದಮಯನು ಮಾತ್ರ ಪೂರ್ಣತ್ವಾದಿಗುಣವುಳ್ಳವನಾಗುತ್ತಾನೆಂಬ ಆಕ್ಷೇಪ ಬರುತ್ತದೆ. ಈ ಆಕ್ಷೇಪವನ್ನು ಪರಿಹರಿಸಿ ಬ್ರಹ್ಮನಿಗೂ ಆನಂದಮಯನಿಗೂ ಅಭೇದವನ್ನು ಸ್ಥಾಪನೆ ಮಾಡಬೇಕೆಂದರೆ ಈಕ್ಷತ್ಯಧಿಕರಣದ ಅನಂತರವೇ ಆನಂದಮಯಾಧಿಕರಣ ಹೊರಡಬೇಕಾಗುತ್ತದೆ. ಹೀಗೆ ಈಕ್ಷತ್ಯಧಿಕರಣದದಿಂದ ಇರುವ ಆನಂತರ್ಯಸಂಗತಿಯನ್ನು ತಿಳಿಯಬೇಕು.



## ಅವ್ಯವಹಿತಪೂರ್ವಾಧಿಕರಣದ ಸಂಗತಿಯು ಆಚಾರ್ಯರಿಗೆ ಸಮ್ಮತವೇ?

**तात्पर्यचन्द्रिका–**

भाष्ये तु, विप्रकीर्णनानाशाखास्थवाक्यविनिर्णायकेष्वन्यथाऽपि क्रमहेतोरुत्प्रेक्षासम्भवेन नियतपूर्वापरीभावहेतुविशेषशून्येषु चाधिकरणेषु वाचः क्रमवृत्तित्वेन क्रमे सिद्धे, येन केनचित् पूर्वाधिकरणेनाक्षेपादिरूपा सङ्गतिरेवापेक्षिता, तावन्मात्रेण चिन्तायाः साफल्यसिद्धेः, न त्वव्यवहितपूर्वेणेति भावेनानन्तरसङ्गत्यनुक्तिः । अत एवात्र ''जिज्ञासा कर्तव्येत्युक्तम्'' इति भाष्ये जिज्ञासासूत्रेणैव सङ्गतिर्दर्शिता । उत्तरत्र चाऽऽकाशाद्यधिकरणेषु ''को ह्येवान्यात्'' इत्यादिभाष्ये आनन्दमयाद्यधिकरणैरेव सङ्गतिर्दर्शयिष्यते ।

यद्वा – व्यवहितपूर्वाधिकरणसङ्गतिः स्फुटत्वाच्छिष्यैरेवोह्येति भावेन भाष्ये तदनुक्तिः । तदुक्तं सुधायां 'उत्तराधिकरणेष्वप्येवं क्रमनिमित्तादिकं स्वयमूहनीयम्' इति । ''जिज्ञासाकर्तव्येत्युक्तम्'' इति भाष्येण तु चिन्ताफलमात्रमुक्तम् ।

यद्वा – उक्तास्सङ्गतयो भाष्ये आत्मशब्दादियुक्तमहागुणवाचकानन्दमयशब्दोदाहरणात् जिज्ञासासूत्राक्षेपेणैव तन्निष्ठसूत्रस्याऽऽक्षिप्तत्वाच्च सूचिता इति तदनुक्तिः । इह गुणिसामान्यवाचकाः आनन्दमयादिशब्दाः उदाहरणम् ।

**तेषां समन्वये सिद्धे मनोमयादावुदाहृतश्लोकस्थानां गुणवाचिनां ''आनन्दं ब्रह्मणो विद्वान्'' इत्यानन्दादिशब्दानामपि समन्वयः सिध्यति । तदुक्तमनुव्याख्याने –**

**शब्दानां प्रथमे पादे गुणिसामान्यवाचिनाम् ।**
**गुणवाचिनां च प्रथममाह देवः समन्वयम् ।। इति ।**

ಅನುವಾದ - ಭಾಷ್ಯಕಾರರು ಪ್ರತಿಯೊಂದು ಅಧಿಕರಣಗಳಲ್ಲಿಯೂ ಹಿಂದಿನ ಅಧಿಕರಣದಿಂದ ಸಂಗತಿ ಹೇಳುತ್ತಾರೆ. ಆದರೆ ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಸಂಗತಿ ಹೇಳುವುದಿಲ್ಲ. ಏಕೆಂದರೆ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಬೇರೆ ಬೇರೆ ಕಡೆ ಇರುವ ಅನೇಕ ಶಾಖೆಗಳಲ್ಲಿರುವ ವಾಕ್ಯವನ್ನು ವಿಚಾರ ಮಾಡಲು ಅಧಿಕರಣಗಳು ಹೊರಟಿವೆ. ಹೀಗಿರುವಾಗ ಒಂದು ದೃಷ್ಟಿಯಿಂದ ಅಧಿಕರಣಗಳ ಕ್ರಮವನ್ನು ಆಲೋಚನೆ ಮಾಡಿದರೆ ಮತ್ತೊಂದು ದೃಷ್ಟಿಯಿಂದ ವಿಚಾರಮಾಡಿ ಬೇರೆ ಕ್ರಮದಲ್ಲಿಯೂ ಅಧಿಕರಣಗಳನ್ನು ಹೊಂದಿಸಬಹುದು. ಹೀಗಿರುವಾಗ ನಿಯಮೇನ ಹೀಗೆಯೇ ಅಧಿಕರಣಗಳ ಜೋಡಣೆ ಇರಬೇಕೆನ್ನಲು ವಿಶೇಷಕಾರಣವಿಲ್ಲ. ಆದ್ದರಿಂದ ಕೊನೆಗೆ ಇಷ್ಟನ್ನೇ ಹೇಳಬೇಕು. ವೇದವ್ಯಾಸದೇವರ ಮಾತಿನ ಕ್ರಮ ಹೇಗೆ ಇದೆಯೋ ಆ ಕ್ರಮದಲ್ಲಿಯೇ ಅಧಿಕರಣಗಳ ಕ್ರಮ ಇದೆಯೆಂದು ಹೊರತು ಸೂತ್ರಕಾರರ ಮಾತಿನ ಕ್ರಮ ಹಾಗೆಯೇ ಏಕೆ? ಎಂದು ಪ್ರಶ್ನಿಸುವಂತಿಲ್ಲ. ಆದ್ದರಿಂದ ಪ್ರಕೃತ ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ತೋರಿಸಿಬೇಕೆಂದೇನು ಇಲ್ಲ. ಯಾವುದಾದರೂ ಒಂದು ಹಿಂದಿನ ಅಧಿಕರಣದಿಂದ ಆಕ್ಷೇಪಾದಿ ಸಂಗತಿಗಳನ್ನು ತೋರಿಸಿದರೆ ಸಾಕು. ಅಷ್ಟರಿಂದಲೇ ವಿಚಾರ ಮಾಡಿದ್ದಕ್ಕೆ ಫಲ ದೊರೆಯುತ್ತದೆ. ಹೊರತು ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಅನಂತರ ಸಂಗತಿಯನ್ನು ಹೇಳಬೇಕಾಗಿಲ್ಲ. ಆದ್ದರಿಂದಲೇ ಈ ಅಧಿಕರಣದ ಭಾಷ್ಯದಲ್ಲಿ 'ಜಿಜ್ಞಾಸಾ ಕರ್ತವ್ಯೇತ್ಯುಕ್ತಮ್' ಎಂದು ಜಿಜ್ಞಾಸಾಧಿಕರಣದಿಂದಲೇ ನೇರವಾದ ಸಂಗತಿಯನ್ನು ತೋರಿಸಿದ್ದಾರೆ. ಮುಂದೆ ಆಕಾಶಾದಿ ಅಧಿಕರಣಗಳ 'ಕೋ ಹ್ಯೇವಾನ್ಯತ್ಕಃ' ಇತ್ಯಾದಿ ಭಾಷ್ಯದಲ್ಲಿಯೂ ವ್ಯವಹಿತವಾದ ಆನಂದಮಯಾಧಿಕರಣದಿಂದಲೇ ಸಂಗತಿಯನ್ನು ತೋರಿಸುತ್ತಾರೆ.

ಅಥವಾ ಅವ್ಯವಹಿತವಾದ ಹಿಂದಿನ ಅಧಿಕರಣದಿಂದ ಭಾಷ್ಯದಲ್ಲಿ ಸಂಗತಿ ತೋರಿಸದಿರಲು ಮತ್ತೊಂದು ಕಾರಣವಿದೆ - ಹಿಂದಿನ ಅಧಿಕರಣದಿಂದ ಸಂಗತಿಯನ್ನು ಶಿಷ್ಯರೇ ಸುಲಭವಾಗಿ ತಿಳಿದುಕೊಳ್ಳಬಹುದು ಎಂದು. ಇದನ್ನೇ ಸುಧೆಯಲ್ಲಿ 'ಉತ್ತರಾಧಿಕರಣೇಷ್ವಪ್ಯೇವಂ ಕ್ರಮನಿಮಿತ್ತಾದಿಕಂ ಸ್ವಯಮೂಹನೀಯಮ್' 'ಹಿಂದಿನ ಅಧಿಕರಣದಿಂದಿರುವ ಸಂಗತಿಯನ್ನು ಮುಂದಿನ ಅಧಿಕರಣಗಳಲ್ಲಿ ಶಿಷ್ಯರೇ ಊಹಿಸಿಕೊಳ್ಳಬೇಕು' ಎಂದು. ಈ ಪಕ್ಷದಲ್ಲಿ 'ಜಿಜ್ಞಾಸಾಕರ್ತವ್ಯಾ ಇತ್ಯುಕ್ತಮ್' ಎಂಬ ಭಾಷ್ಯದ ಮಾತು ಜಿಜ್ಞಾಸಾಧಿಕರಣದಿಂದ ಸಂಗತಿ ಹೇಳಲು ಹೊರಟಿಲ್ಲ. ಕೇವಲ ವಿಚಾರದ ಫಲವನ್ನಷ್ಟೇ ಹೇಳುತ್ತಿದೆ.

ಅಥವಾ ಈಕ್ಷತ್ಯಧಿಕರಣದಲ್ಲಿರುವ ಗೌಣಸೂತ್ರದಿಂದ ತನ್ನಿಷ್ಠ ಮೊದಲಾದ ಸೂತ್ರಗಳಿಂದ ಹೇಳಿದ ಆನಂದಮಯಾಧಿಕರಣಕ್ಕೆ ಹೇಳಿದ ಸಂಗತಿಗಳು ಭಾಷ್ಯದಲ್ಲಿ ಸೂಚಿತವಾಗಿವೆ. ಹೇಗೆಂದರೆ ಆಚಾರ್ಯರು ವಿಷಯವಾಕ್ಯವನ್ನು ಉದಾಹರಿಸಬೇಕಾದರೆ ಆತ್ಮಶಬ್ದಾದಿಗಳಿಂದ ಕೂಡಿದ ಆನಂದಮಯಶಬ್ದವುಳ್ಳ ವಾಕ್ಯವನ್ನು ಉದಾಹರಿಸಿದ್ದಾರೆ. ಮತ್ತು ಮಹಾಗುಣವಾಚಕವಾದ ಆನಂದಮಯಶಬ್ದವನ್ನು ಉದಾಹರಿಸಿದ್ದಾರೆ. ಮತ್ತು ಜಿಜ್ಞಾಸಾಸೂತ್ರದ ಆಕ್ಷೇಪವನ್ನು ತೋರಿಸಿದ್ದಾರೆ. ಈ ಮೂರರಿಂದ ನಾವು ಹೇಳಿದ ಮೂರುವಿಧ ಸಂಗತಿಗಳೂ ಸೂಚಿತವಾದವು. ಜಿಜ್ಞಾಸಾಸೂತ್ರವನ್ನು ಆಕ್ಷೇಪ ಮಾಡಿದ್ದರಿಂದಲೇ ತನ್ನಿಷ್ಠಸೂತ್ರವೂ ಆಕ್ಷಿಪ್ತವಾಯಿತು. ಹೀಗೆ ಹಿಂದೆ ನಾವು ಹೇಳಿದ ಎಲ್ಲ ಸಂಗತಿಗಳನ್ನೂ ಆಚಾರ್ಯರು ಸೂಚಿಸಿದ್ದಾರೆ. ಇಲ್ಲಿಗೆ ಸಂಗತಿವಿಚಾರ ಮುಗಿಯಿತು.

ವಿಷಯವಾಕ್ಯವಿಚಾರ - ಈ ಆನಂದಮಯಾಧಿಕರಣದಲ್ಲಿ ಗುಣವುಳ್ಳವನನ್ನು ಹೇಳುವ ಆನಂದಮಯ ಇತ್ಯಾದಿಶಬ್ದಗಳು ಉದಾಹರಣೆಯಾಗಿವೆ. ಎಲ್ಲ ಶಾಖೆಗಳಲ್ಲಿರುವ ಗುಣವಿಶಿಷ್ಟವ್ಯಕ್ತಿವಾಚಕ ಶಬ್ದಗಳೇ ಉದಾಹರಣೆಯಾಗಿವೆ. ಇವುಗಳ ಸಮನ್ವಯ ಮಾಡಿದರೆ ಆನಂದಾದಿಗುಣಗಳ ಸಮನ್ವಯವೂ ಸಿದ್ಧವಾಗುತ್ತದೆ. ಅಂದರೆ ಅನ್ನಮಯಾದಿ ಪ್ರಾಣಮಯಾದಿಗಳನ್ನು ಹೇಳುವ ಶ್ಲೋಕವನ್ನು ಸಮನ್ವಯ ಮಾಡಿದರೆ ಗುಣಿವಾಚಕಶಬ್ದಗಳ ಸಮನ್ವಯವು ಸಿದ್ಧವಾಗುತ್ತದೆ. ಇದರಿಂದ ಮಯಟ್ ಪ್ರತ್ಯಯರಹಿತವಾದ ಗುಣವಾಚಕವಾದ 'ಆನಂದಂ ಬ್ರಹ್ಮಣೋ ವಿದ್ವಾನ್' ಇತ್ಯಾದಿ ಆನಂದಾದಿಶಬ್ದಗಳ ಸಮನ್ವಯವು ಸಿದ್ಧವಾಗುತ್ತದೆ. ಆಚಾರ್ಯರು ಅನುವ್ಯಾಖ್ಯಾನದಲ್ಲಿ ಈ ವಿಷಯವನ್ನೇ ಹೇಳಿದ್ದಾರೆ -

ಶಬ್ದಾನಾಂ ಪ್ರಥಮೇ ಪಾದೇ ಗುಣಿಸಾಮಾನ್ಯವಾಚಿನಾಮ್ ।
ಗುಣವಾಚಿನಾಂ ಚ ಪ್ರಥಮಮಾಹ ದೇವಸ್ಸಮನ್ವಯಮ್ ।

ಪ್ರಥಮಪಾದದ ಪ್ರಥಮಾಧಿಕರಣದಲ್ಲಿ ಗುಣಿಸಾಮಾನ್ಯವಾಚಿಯಾದ ಗುಣವಾಚಿಯಾದ ಶಬ್ದಗಳ ಸಮನ್ವಯವನ್ನು ಸೂತ್ರಕಾರರು ಮಾಡಿದ್ದಾರೆ. ಎಂದು.

### ಕಠಿಣಪದಾರ್ಥ

ವಿಪ್ರಕೀರ್ಣ = ಬೇರೆ ಬೇರೆ ಕಡೆಯಿರುವ, ಪೂರ್ವಾಪರೀಭಾವ = ವ್ಯವಹಿತದಿಂದ ಅಥವಾ ಅವ್ಯವಹಿತದಿಂದ. ಅತ ಏವ = ಅವ್ಯವಹಿತವಾದ ಹಿಂದಿನ ಅಧಿಕರಣದಿಂದ ಸಂಗತಿ ಬೇಕಾಗಿಲ್ಲವಾದ್ದರಿಂದಲೇ, ತದುಕ್ತಮ್ = ಉಪಾಸನಾಪಾದದಲ್ಲಿ 'ವಿಷ್ಣುಮೇವ ಪರಂ ಬ್ರಹ್ಮ' ಎಂಬುದನ್ನು ವ್ಯಾಖ್ಯಾನಿಸುವಾಗ ಹೇಳಿದ್ದೇವೆ, ಆತ್ಮಶಬ್ದಾದಿ = ಆತ್ಮಶಬ್ದ, ಕಾರಣತ್ವ, ಮೋಕ್ಷೋಪದೇಶಾದಿಗಳು, ಮಹಾಗುಣ = ಆನಂದರೂಪವಾದ ಮಹಾಗುಣ, ಇಹ = ಆನಂದಮಯಾಧಿಕರಣದಲ್ಲಿ, ತೇಷಾಮ್ = ಗುಣಿಸಾಮಾನ್ಯವಾಚಿಯಾದ ಶಬ್ದಗಳ.

ಪರಿಪೂರ್ಣಚಂದ್ರಿಕಾ

**प्रकाशः** – भाष्ये एवमनुक्तौ व्यवहितेनोक्तौ च बीजमाह – **भाष्ये त्विति** ।। हेतुविशेषशून्यत्वे हेतुः – **विप्रकीर्णेत्यादिः** ।। **पूर्वेति** ।। व्यवहितेनाव्यवहितेन वेत्यर्थः । 'सङ्गतिरेव' इत्येवकारार्थमाह – **न त्विति** ।। **अत एवेति** ।। निरन्तर-सङ्गतिनियमाभावादेवेत्यर्थः ।। **ऊह्येतीति** ।। सा च प्रागूहित्वा प्रदर्शितेति भावः ।। **तदुक्तमिति** ।। उपासनापादे –

विष्णुमेव परं ब्रूयुरेवमन्येऽप्यशेषतः ।

इत्येतद्व्याख्यावसर इत्यर्थः ।। **चिन्तेति** ।। अत्र क्रियमाणविचारस्य फलमात्रमुक्तं, न तु सङ्गतिरप्यभिमता, येनाव्यवहितेन सङ्गत्यूहनं विरुध्येत । "का पूर्वसङ्गतिः" इति टीकास्थसङ्गतिपदं च फलपरमिति भावः ।। **उक्ता इति** ।। आक्षेपबहुत्वात् बहुवचनम् । आदिपदेन कारणत्वमोक्षोपदेशादेर्ग्रहः ।। **महा-गुणेति** ।। आनन्दरूपमहागुणेत्यर्थः । एतच्चाद्यसङ्गतिसूचकम् ।। **तन्निष्ठेति** ।। जिज्ञास्यत्वाभावे तज्ज्ञानान्मोक्षस्याप्ययोगादिति भावः । टीकायां "आनन्दमयो विषयः" इत्युक्तम् । तदुपलक्षणत्वेन व्याचष्टे – **इहेति** ।।

शतक्रत्वादिशब्दैरिवानन्दमयविज्ञानमयादिशब्दैर्धर्मिविशेषाप्रतीतेः 'गुणि-सामान्य' इत्युक्तम् । तर्ह्यन्यत्रप्रसिद्धता न स्यादिति चेन्न, "मयट्प्रत्ययादिना ब्रह्मणोऽन्यत्प्रत्याययन्तीति भवन्त्यन्यत्रप्रसिद्धाः" इति सुधायामेवोक्तेरित्याशयात् । नन्वेवमन्यसाहित्येनान्यत्रप्रसिद्धत्वे द्वितीयपादे निवेशः स्यात् ।

नच पृथक्पदसाहित्येनैव तत्र तथात्वमिति वाच्यं, 'गुहां' इत्यत्र चन्द्रिकायां "पिबन्तावितिप्रत्ययश्रुतिबलादन्यत्रप्रसिद्ध" इत्युक्तेरिति चेन्न, लोकतोऽन्यत्र-प्रसिद्धत्वमाद्यपादोपाधिरन्यसाहित्येन तथात्वं द्वितीयोपाधिरित्यनुक्तेः । किन्तु नामत्वादिकम् । तच्च नामत्वमानन्दमयेऽप्यस्ति । अत एव 'गुहां' इत्यत्र टीकायां "लोकतोऽन्यत्रप्रसिद्धस्य" इत्युक्तम् । चन्द्रिकायान्तु तथैव प्रक्रमात्सति सम्भवे त्यागायोगात् उपायस्य उपायान्तरादूषकत्वाच्चान्यसाहाय्यमुक्तम् ।। **तेषामिति** ।।

एतेन – 'गुणवाचिनां' इत्यनुव्याख्यानं तत्सुधावाक्यं च फलाभिप्रायं व्याख्येयमित्युक्तं भवति । तेनाभ्यासहेतुव्यपदेशादिहेतूनामानन्दमयादि-

सामानाधिकरण्येन तदसामानाधिकरण्येऽपि न दोष इति भावः । उपलक्षणत्वेन टीकान्व्याख्याने बीजमाह – **तदुक्तमिति** ॥

**गुरुराजीयम्** – ननु तर्हि पूर्वाधिकरणाक्षेपेणेह पूर्वपक्षस्य प्रवृत्तत्वादस्याधिकरणस्य पूर्वाधिकरणेन सह यद्याक्षेपिकी सङ्गतिस्तर्हि किमिति भाष्येऽव्यवहितपूर्वाधिकरणेन सङ्गत्यनुक्तिरित्यत आह – **भाष्ये त्विति** ॥

ननु विप्रकीर्णनानाशाखास्थानां वाक्यानां परस्परसङ्गत्यभावेन तन्निर्णायकानां सूत्राणामपि पूर्वापरीभावहेतुशून्यत्वेन पूर्वाधिकरणेन सङ्गतेरनावश्यकत्वेऽव्यवहितपूर्वाधिकरणेपि सङ्गतिः किमर्थं भाष्ये प्रदर्शिता । सूत्राणां परस्परसङ्गत्यनपेक्षत्वादित्यत आह – **यद्वेति** ॥ नियतपूर्वापरीभावहेतुविशेषशून्यत्वोक्तिः शुद्धाविरुद्धेत्यतो वाह – **यद्वेति** ॥

यद्वा ननु विप्रकृष्टनानाशाखास्थानामपि वाक्यानामेकवाक्यतया ब्रह्मपरत्वेन परस्परसङ्गत्यनपेक्षयैकवाक्यताया एवासम्भवेन परस्परसङ्गतेरावश्यकत्वात्कथं सङ्गतिः परस्परानपेक्षितेत्युच्यते । तथा च सङ्गत्यपेक्षायामव्यवहितपूर्वाधिकरणेनैव सङ्गतिर्वक्तव्येत्यस्वरसादाह – **यद्वेति** ॥ अस्मिन्पक्षे भाष्ये सङ्गत्यनुक्तिः समायातीतीममेवास्वरसं मनसि निधायाह – **यद्वेति** ॥ यद्वा श्रुत्यधिकरणसङ्गती दर्शयतीतिटीकाविरोधपरिहारायाह – **यद्वेति** ॥ अधिकरणोपाधिमाह – **इहेति** ॥ तर्ह्यानन्दमयादिशब्दसमन्वयः कथं सेत्स्यतीत्यत आह – **तेषामिति** ॥

नन्वनुव्याख्याने गुणिसामान्यवाचिनाम् । गुणवाचिनां च प्रथममाह देवः समन्वयमित्यत्रानन्दमयादिशब्दवदन्नादिशब्दानामप्युदाहरणत्वस्योक्तत्वाद्गुणिसामान्यवाचकानन्दमयादिशब्दा उदाहरणमित्युक्तिरयुक्ता । किं चैवमानन्दमयादीनां ब्रह्मत्वसमर्थनार्थमुदाहृतश्लोकेष्वानन्दादिशब्देष्वेव साक्षाद्ब्रह्मशब्दश्रवणात्तद्वाराऽऽनन्दमयादिशब्देषु ब्रह्मशब्दश्रवणस्यानीयमानत्वेनानन्दादिशब्दानामुदाहरणत्वमुचितम् । अनुव्याख्यानस्थचशब्दस्वारस्यं च ।

नच सूत्रकृतानन्दमयशब्दस्य कण्ठतो गृहीतत्वादुदाहरणत्वमिति वाच्यम् । तर्हि मनोमयादिशब्दानामुदाहरणत्वं न स्यात् । सूत्रकारेण मुखतोऽनुक्तत्वात् । न

चानन्दमयशब्देन तदुपलक्षणादुदाहरणत्वमिति वाच्यम् । आनन्दमयशब्देनानन्दादेरप्युपलक्षणसम्भवात् । न चानन्दमयशब्दस्य गुणिसामान्यवाचकत्वात्तद्रूपगुणयोगेन मनोमयादिशब्दानामेवोपलक्षणमिति न तेषामुदाहरणत्वमिति वाच्यम् । उपलक्षणत्वे लाघवेन सम्बन्धमात्रस्यैव तन्त्रत्वेनास्यातन्त्रत्वात् । तथा च आनन्दादिशब्दानामप्युदाहरणत्वसम्भवेनानन्दमयादिशब्दानामेवोदाहरणं युक्तमिति चेत्, इदमत्राकूतम् – विकारशब्दान्नेति चेदित्यादिसूत्रोक्तबाधकतत्समाधानानामानन्दादिशब्देष्वभावादानन्दमयादिशब्देष्वेव भावादित्याशयेनानन्दमयादिशब्दा उदाहरणमित्युक्तमिति न कश्चिद्दोष इति ।।

ವಿವರಣೆ - ಈಕ್ಷತ್ಯಧಿಕರಣದಿಂದ ಆನಂದಮಯಾಧಿಕರಣಕ್ಕೆ ಇರುವ ಸಂಗತಿಯನ್ನು ಇಲ್ಲಿಯ ತನಕ ತೋರಿಸಿದ್ದಾಯಿತು. ಆದರೆ ಈ ವಿಧವಾದ ಸಂಗತಿಯನ್ನು ಭಾಷ್ಯಕಾರರು ತೋರಿಸಿಯೇ ಇಲ್ಲ. ಮತ್ತು ಜಿಜ್ಞಾಸಾಧಿಕರಣದಿಂದ ನೇರವಾಗಿ ಸಂಗತಿಯನ್ನು ತೋರಿಸಿದ್ದಾರಲ್ಲ? ಎಂಬ ಪ್ರಶ್ನೆ ಬಂದರೆ ಪ್ರಕೃತ ಉತ್ತರಿಸುತ್ತಿದ್ದಾರೆ -

ಆನಂದಮಯಾಧಿಕರಣದಲ್ಲಿ ಆನಂದಮಯಶಬ್ದವನ್ನು ಹೇಳಿದ್ದು ಉಪಲಕ್ಷಣ. ಗುಣಿಸಾಮಾನ್ಯವಾಚಕವಾದ ಗುಣವಾಚಕವಾದ ಸಕಲಶಬ್ದಗಳ ಸಮನ್ವಯವನ್ನೂ ತಿಳಿಯಬೇಕು. ಶತಕ್ರತು ಎಂದರೆ ಇಂದ್ರನ ಜ್ಞಾನ ಬರುವುದರಿಂದ ಗುಣವಾಚಕವಾಗಿದೆ. ಈ ಶಬ್ದದಂತೆ ಆನಂದಮಯ ವಿಜ್ಞಾನಮಯಾದಿಶಬ್ದಗಳಿಂದ ಗುಣಿಸಾಮಾನ್ಯದ ಪ್ರತೀತಿ ಬರುವುದಿಲ್ಲ. ಆದ್ದರಿಂದ 'ಗುಣವಾಚಿನಾಮ್' ಎಂದು ಹೇಳಿದರು.

ಹಾಗಾದರೆ ಆನಂದಮಯಾದಿಶಬ್ದಗಳು ವ್ಯಕ್ತಿವಿಶೇಷವಾಚಕವಾಗದಿದ್ದರೆ ಅನ್ಯತ್ರಪ್ರಸಿದ್ಧವೇ ಆಗಲಾರದು. ಶತಕ್ರತ್ವಾದಿಶಬ್ದಗಳಷ್ಟೇ ಅನ್ಯತ್ರಪ್ರಸಿದ್ಧವಾಗುತ್ತವೆಂದರೆ ಹಾಗೇನಿಲ್ಲ, ವಿಕಾರ ವಾಚಕವಾದ ಮಯಟ್ ಪ್ರತ್ಯಯದ ಬಲದಿಂದಲೇ ಅನ್ಯತ್ರಪ್ರಸಿದ್ಧವಾಗುತ್ತವೆ.

ಆಕ್ಷೇಪ - ಮಯಟ್‌ಪ್ರತ್ಯಯದ ಸಾಹಿತ್ಯದಿಂದ ಅನ್ಯತ್ರಪ್ರಸಿದ್ಧವಾಗುವುದಾದರೆ ದ್ವಿತೀಯಪಾದದಲ್ಲಿ ನಿವೇಶಿಸಬೇಕು. ಆದಿತ್ಯಶ್ರುತಿಯ ಸಾಹಿತ್ಯದಿಂದ ಸರ್ವಗತತ್ವವು ಅನ್ಯತ್ರಪ್ರಸಿದ್ಧವಾಗಿದೆ. ಅದಿತಿಶಬ್ದದಿಂದ ಸಾಹಿತ್ಯದಿಂದ ಅತೃತ್ವವು ಅನ್ಯತ್ರ ಪ್ರಸಿದ್ಧವಾಗಿದೆ. ಇವುಗಳನ್ನೆಲ್ಲ ದ್ವಿತೀಯಪಾದದಲ್ಲಿ ಸಮನ್ವಯ ಮಾಡಿದಂತೆ ಆನಂದಮಯಶಬ್ದವನ್ನೂ ದ್ವಿತೀಯಪಾದದಲ್ಲಿ ಸಮನ್ವಯ ಮಾಡಬೇಕು. ಪ್ರತ್ಯೇಕಪದಸಾಹಿತ್ಯವಿದ್ದರೆ ಅನ್ಯತ್ರ ಪ್ರಸಿದ್ಧವಾದರೆ ಮಾತ್ರ ದ್ವಿತೀಯಪಾದದಲ್ಲಿ ನಿವೇಶ ಮಾಡಬೇಕು. ಆನಂದಮಯ ಎಂಬಲ್ಲಿರುವ ಮಯಟ್‌ಪ್ರತ್ಯಯವು ಪ್ರತ್ಯೇಕವಾದ ಪದವೇ ಅಲ್ಲವೆಂದರೆ, ಹಾಗೇನು ನಿಯಮವಿಲ್ಲ. ಎರಡನೇ ಪಾದದ ಗುಹಾಧಿಕರಣದಲ್ಲಿ 'ಪಿಬಂತೌ' ಎಂದು ದ್ವಿವಚನಪ್ರತ್ಯಯದ ಬಲದಿಂದ ಅನ್ಯತ್ರಪ್ರಸಿದ್ಧಿ ಹೇಳಿದ್ದಾರೆ. ಆದ್ದರಿಂದ ಆನಂದಮಯ ಶಬ್ದದ ಸಮನ್ವಯವನ್ನು ಎರಡನೆಯ ಪಾದದಲ್ಲೇ ಮಾಡಬೇಕು.

ಸಮಾಧಾನ - ಲೋಕತಃ ಅನ್ಯತ್ರಪ್ರಸಿದ್ಧತ್ವವು ಪ್ರಥಮಪಾದದ ಉಪಾಧಿ. ಅನ್ಯಪದದ ಸಾಹಿತ್ಯದಿಂದ

ಅನ್ಯತ್ರಪ್ರಸಿದ್ಧವಾಗಿರುವಿಕೆಯು ದ್ವಿತೀಯಪಾದದ ಉಪಾಧಿಯೆಂದು ನಾವು ಹೇಳಿಯೇ ಇಲ್ಲ. ಕಿಂತು ನಾಮಾತ್ಮಕವಾಗಿದ್ದರೆ ಪ್ರಥಮಪಾದದಲ್ಲಿ ಸಮನ್ವಯ ಮಾಡಬೇಕು. ಲಿಂಗಾತ್ಮಕವಾಗಿದ್ದರೆ ದ್ವಿತೀಯಪಾದದಲ್ಲಿ ಸಮನ್ವಯ ಮಾಡಬೇಕೆಂದಷ್ಟೇ ಹೇಳಿದ್ದೇವೆ. ಆನಂದಮಯಾದಿಗಳಲ್ಲಿ ನಾಮಾತ್ಮಕತ್ವ ಇರುವುದರಿಂದ ಪ್ರಥಮಪಾದದಲ್ಲಿ ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ. ಆದ್ದರಿಂದಲೇ ಗುಹಾಧಿಕರಣದಲ್ಲಿ ಕರ್ಮಫಲಪಾತೃತ್ವವು ಅನ್ಯತ್ರಪ್ರಸಿದ್ಧವಾಗಿದೆಯೆಂದೇ ಹೇಳಿದ್ದಾರೆ. ಹಾಗಾದರೆ ಚಂದ್ರಿಕೆಯಲ್ಲಿ ಮುಂದೆ ದ್ವಿವಚನದ ಸಾಹಿತ್ಯದಿಂದ ಅನ್ಯತ್ರಪ್ರಸಿದ್ಧವೆಂದು ಏಕೆ ಹೇಳಿದರು? ಎಂದರೆ ಚಂದ್ರಿಕೆಯಲ್ಲಿ ಅನ್ಯಪದಸಾಹಿತ್ಯದಿಂದ ಅನ್ಯತ್ರಪ್ರಸಿದ್ಧಿಯನ್ನು ಕ್ರಮವಾಗಿ ಹಿಂದಿನ ಅಧಿಕರಣಗಳಲ್ಲೆಲ್ಲಾ ಹೇಳಿಕೊಂಡು ಬಂದಿದ್ದಾರೆ. ಪ್ರಕೃತ ಗುಹಾಧಿಕರಣದಲ್ಲಿಯೂ ಪ್ರಕ್ರಾಂತವಾದ್ದರಿಂದ ಹೇಳಿದ್ದಾರೆ. ಈ ದ್ವಿವಚನಸಾಹಿತ್ಯವೆಂಬ ಈ ಉಪಾಧಿಯು ಮತ್ತೊಂದು ಉಪಾಧಿಯನ್ನೇನು ನಿರಾಕರಿಸುವುದಿಲ್ಲ. ಒಂದು ಉಪಾಯವು ಮತ್ತೊಂದು ಉಪಾಯಕ್ಕೆ ದೂಷಕವಲ್ಲ. ಹೀಗೆ ಹೇಳಿದ್ದರಿಂದ ಆನಂದಮಯಾಧಿಕರಣದಲ್ಲಿ ಗುಣಿವಾಚಕವಾದ ಶಬ್ದಗಳ ಸಮನ್ವಯವೇ ಪ್ರಧಾನ. ಗುಣವಾಚಿಯಾದ ಶಬ್ದಗಳ ಸಮನ್ವಯವು ಫಲತಃ ಸಿದ್ಧವಾಗುತ್ತದೆಂದು ತಿಳಿಯಬೇಕು. ಆದ್ದರಿಂದ ಸೂತ್ರಗಳಲ್ಲಿ ಹೇಳಿದ 'ಅಭ್ಯಾಸಾತ್' 'ಹೇತುವ್ಯಪದೇಶಾತ್' ಇತ್ಯಾದಿ ಹೇತುಗಳು ಆನಂದಮಯಸಾಮಾನಾಧಿಕರಣ್ಯದಿಂದ ಕೇಳಿಬರುತ್ತಿವೆ. ಆನಂದಸಾಮಾನಾಧಿಕರಣ್ಯದಿಂದ ಕೇಳಿ ಬರುತ್ತಿಲ್ಲ. ಈಗ ಆನಂದಶಬ್ದವನ್ನು ಸಮನ್ವಯ ಮಾಡುತ್ತಿದ್ದಾರೆಂದು ಹೇಳಿದರೆ ಈ ಎಲ್ಲ ಹೇತುಗಳು ಅಸಂಗತವಾಗುತ್ತವೆಂಬ ಶಂಕೆಯನ್ನೂ ಪರಿಹರಿಸಿದಂತಾಯಿತು. ಈ ಹೇತುಗಳಿಂದ ಆನಂದಮಯಾದಿಶಬ್ದಗಳ ಸಮನ್ವಯವೇ ಸಿದ್ಧವಾಗುತ್ತವೆ. ಮತ್ತು ಫಲತಃ ಆನಂದಾದಿಶಬ್ದಗಳ ಸಮನ್ವಯವೂ ಸಿದ್ಧವಾಗುತ್ತವೆಂಬ ಸೂಕ್ಷ್ಮವಿಷಯವನ್ನು ಅವಶ್ಯ ತಿಳಿಯಬೇಕು.




ಈಕ್ಷತ್ಯಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾಯಿತು. ವಿಚಾರ ಮಾಡಿದರೆ ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ತೋರಿಸಬೇಕಾಗಿಲ್ಲ. ಮುಂದೆ ಅನೇಕ ಕಡೆ ವ್ಯವಹಿತವಾದ ಅಧಿಕರಣಗಳಿಂದಲೂ ಸಂಗತಿ ತೋರಿಸುತ್ತಾರೆ. ಆದ್ದರಿಂದ ಜಿಜ್ಞಾಸಾಧಿಕರಣದಿಂದಲೇ ಈ ಅಧಿಕರಣಕ್ಕೆ ನೇರವಾದ ಸಂಗತಿಯನ್ನು ಆಚಾರ್ಯರು ತೋರಿಸುತ್ತಾರೆ. ಅಷ್ಟೇ ಅಲ್ಲದೆ ಆಚಾರ್ಯರ ಮಾತುಗಳಲ್ಲಿ ಈಕ್ಷತ್ಯಧಿಕರಣದಿಂದ ಆನಂದಮಯಾಧಿಕರಣಕ್ಕೆ ಸಂಗತಿ ತೋರಿಸಿದ್ದು ಸ್ಪಷ್ಟವಾಗಿ ಕಾಣಿಸುತ್ತಿಲ್ಲ. ಹಾಗಂದಮಾತ್ರದಿಂದ ಹಿಂದಿನ ಅಧಿಕರಣದಿಂದ ಸಂಗತಿಯೇ ಇರುವುದಿಲ್ಲವೆಂದು ತಿಳಿಯಬಾರದು. ಅವ್ಯವಹಿತವಾದ ಹಿಂದಿನ ಅಧಿಕರಣದಿಂದ ಸಂಗತಿ ತೋರಿಸುವುದು ಬಹಳ ಸುಲಭ. ಅದನ್ನು ಶಿಷ್ಯರೇ ಊಹಿಸಿಕೊಳ್ಳಬಹುದೆಂದು ಆಚಾರ್ಯರು ಇಲ್ಲಿ ಹೇಳಿರಲಿಕ್ಕಿಲ್ಲ. ಅಥವಾ ಆತ್ಮಶಬ್ದಾದಿಗಳುಳ್ಳ ಆನಂದಮಯಶಬ್ದದಿಂದ ಕೂಡಿದ ವಿಷಯವಾಕ್ಯವನ್ನು ಆಚಾರ್ಯರು ಇಲ್ಲಿ ಉದಾಹರಿಸಿದ್ದರಿಂದಲೇ ನಾವು ಹಿಂದೆ ಹೇಳಿದ ಈಕ್ಷತ್ಯಧಿಕರಣದ ಸೂತ್ರಗಳಿಂದ ಆಕ್ಷೇಪಿಕೀ ಸಂಗತಿಯನ್ನು ಸೂಚಿಸಿದ್ದಾರೆಂದೂ ಊಹಿಸಬಹುದು.



ಪರಿಪೂರ್ಣಚಂದ್ರಿಕಾ

· ಸಂಶಯ, ಪೂರ್ವಪಕ್ಷ, ಆನಂದಮಯಶಬ್ದಸ್ವಾರಸ್ಯ (ಪ್ರಥಮಸೂತ್ರ)

**तात्पर्यचन्द्रिका–**

अत्रानन्दमयः किं चतुर्मुखादिः किं वा विष्णुरिति चिन्ता । तदर्थं "असद् ब्रह्मेति वेद चेत्" इत्यानन्दमये श्रुतब्रह्मशब्दः किं जघन्यवृत्तिः उत मुख्यवृत्तिरिति । तदर्थं मयट्प्रत्ययः किं ब्रह्मशब्दस्य मुख्यत्वविरोधी उत नेति । तदर्थं मयट् किं विकारार्थः किं वा प्राचुर्यार्थः इति । प्राचुर्यार्थत्वेऽपि प्राचुर्यं किं समानाधिकरणविजातीयाल्पत्वेनैव भवति, किं वा व्यधिकरणसजातीयाल्पत्वेनापीति ।

आद्ये ब्रह्मणि विजातीयस्य दुःखस्य अल्पस्याप्यभावादानन्दप्राचुर्यायोगः । द्वितीये तु जीवगतस्य सुखस्याल्पत्वात् ब्रह्मण्यानन्दप्राचुर्यसम्भवः । अत्र पूर्वोत्तरपक्षयोर्भाष्यादावेव व्यक्तत्वात् सूत्रे परमतस्यैव पूर्वपक्षितत्वेन परमततन्निरासयोरेवेह पूर्वपक्षसिद्धान्तरूपतया पृथक्तयोरभावाच्च न तौ पृथगुच्येते ।

यद्यपि जिज्ञासासूत्रे "तद्विजिज्ञासस्व" इति वाक्यस्थब्रह्मशब्दस्य गुणपूर्तौ यौगिकत्वेन जीवाद्भेदकतोक्ता, जन्मादिसूत्रे च तस्मिन्नेव वाक्ये कारणत्वादिना रूढिं बाधित्वा योगः स्थापितः । तथाऽप्यानन्दमयवाक्ये रूढौ बाधकाभावात्, प्रत्युत विकारशब्दादेस्तत्साधकस्यैव च भावात् पूर्वपक्षोदय इति द्रष्टव्यम् । अत्र श्रुतावन्नमयस्यादित्वेऽपि सूत्रे आनन्दमयस्येतरोपलक्षकत्वेनोपादानं युक्तम्, तत्र जिज्ञासासूत्राक्षेपकस्यावयवत्वादिपूर्वपक्षहेतोः सत्त्वात् ।

यथा चित्राज्याधिकरणे "आज्यैस्स्तुवते" इत्युक्तोत्पत्तिवाक्यमुपेक्ष्य वाक्यभेदरूपसिद्धान्तहेतोः सत्त्वात् "पञ्चदशान्याज्यानि" इति गुणवाक्योदाहरणम्, तद्वत् ।

ಅನುವಾದ - ಈ ಅಧಿಕರಣದ ಸಂಶಯಕೋಟಿ ಹೀಗಿದೆ - ೧) ಆನಂದಮಯನು ಚತುರ್ಮುಖಾದಿಗಳೋ? ಅಥವಾ ವಿಷ್ಣುವೋ? ಎಂದು ಸಂಶಯ. ೨) ಈ ಸಂಶಯ ಪರಿಹಾರವಾಗಬೇಕೆಂದರೆ 'ಅಸದ್‌ಬ್ರಹ್ಮೇತಿ ವೇದ ಚೇತ್' ಎಂದು ಆನಂದಮಯನಲ್ಲಿ ಶ್ರುತವಾದ ಬ್ರಹ್ಮಶಬ್ದವು ಅಮುಖ್ಯವೃತ್ತಿಯೋ ಅಥವಾ ಮುಖ್ಯವೃತ್ತಿಯೋ? ಎಂಬ ಸಂಶಯ ಪರಿಹಾರವಾಗಬೇಕು.

೩) ಈ ಸಂಶಯ ಪರಿಹಾರವಾಗಬೇಕೆಂದರೆ ಮಯಟ್‌ಪ್ರತ್ಯಯವು ಬ್ರಹ್ಮಶಬ್ದದ ಮುಖ್ಯತ್ವಕ್ಕೆ ವಿರೋಧಿಯೋ? ಅಥವಾ ಅವಿರೋಧಿಯೋ? ಎಂಬ ಸಂಶಯವು ಪರಿಹಾರವಾಗಬೇಕು. ೪) ಈ ಸಂಶಯವು ಪರಿಹಾರವಾಗಬೇಕೆಂದರೆ ಮಯಟ್‌ಪ್ರತ್ಯಯವು ವಿಕಾರಾರ್ಥಕವೋ? ಅಥವಾ ಪ್ರಾಚುರ್ಯಾರ್ಥಕವೋ? ಎಂಬ ಸಂಶಯ ಪರಿಹಾರವಾಗಬೇಕು. ೫) ಈ ಸಂಶಯ ಪರಿಹಾರವಾಗಬೇಕೆಂದರೆ ಪ್ರಾಚುರ್ಯಾರ್ಥಕವಾದರೂ ಪ್ರಾಚುರ್ಯವು ಯಾವ ವ್ಯಕ್ತಿಯಲ್ಲಿ ಯಾವುದರ ಪ್ರಾಚುರ್ಯವಿದೆಯೋ ಅದೇ ವ್ಯಕ್ತಿಯಲ್ಲಿಯೇ ವಿಜಾತೀಯವಾದ ಮತ್ತೊಂದು ಧರ್ಮವು ಅಲ್ಪವಾಗಿದೆಯೆಂದು ಹೇಳುತ್ತದೋ? ಅಥವಾ ಯಾವುದರ ಪ್ರಾಚುರ್ಯವು ಯಾವ ವ್ಯಕ್ತಿಯಲ್ಲಿ ಇದೆಯೋ ಅದಕ್ಕಿಂತ ಭಿನ್ನವ್ಯಕ್ತಿಯಲ್ಲಿ ಸಜಾತೀಯವಾದ ಧರ್ಮವು ಅಲ್ಪವಾಗಿದೆಯೆಂದು ಹೇಳುತ್ತದೋ? ಎಂಬ ಸಂಶಯದ ಪರಿಹಾರವಾಗಬೇಕು.

ಆನಂದಮಯನು ವಿಷ್ಣು ಎಂದು ಹೇಳಿದರೆ ವಿಜಾತೀಯವಾದ ದುಃಖವು ವಿಷ್ಣುವಿನಲ್ಲಿ ಅಲ್ಪವಾಗಿ ಬರಬೇಕಾಗುತ್ತದೆ. ಆದ್ದರಿಂದ ಆನಂದಪ್ರಾಚುರ್ಯವನ್ನು ಪರಮಾತ್ಮನಿಗೆ ಹೇಳಬಾರದು. ಇದು ಪೂರ್ವಪಕ್ಷದ ಫಲ.

ಜೀವನಲ್ಲಿರುವ ಸುಖವು ಅಲ್ಪವಾದ್ದರಿಂದ ಬ್ರಹ್ಮನಲ್ಲಿ ಆನಂದವು ಪ್ರಚುರವಾಗಿದೆಯೆಂಬುದು ಸಿದ್ಧಾಂತದ ಫಲ.

ಈ ಅಧಿಕರಣದ ಒಂದು ವಿಶೇಷವೆಂದರೆ ಪೂರ್ವಪಕ್ಷ ಹಾಗು ಸಿದ್ಧಾಂತಗಳನ್ನು ಗ್ರಂಥಕಾರರು ತೋರಿಸಿಲ್ಲ. ಏಕೆಂದರೆ ಭಾಷ್ಯದಲ್ಲೇ ಸ್ಪಷ್ಟವಾಗಿ ತಿಳಿಯುತ್ತದೆಂದು. ಅಷ್ಟೇ ಅಲ್ಲದೆ ಅದ್ವೈತಮತದ ಅನುವಾದವನ್ನೂ ಮಾಡಿಲ್ಲ. ಏಕೆಂದರೆ ಈ ಅಧಿಕರಣದಲ್ಲಿ ನಾವು ಮಾಡಿಕೊಂಡ ಪೂರ್ವಪಕ್ಷ ಅದ್ವೈತಮತವೇ ಆಗಿದೆ. ನಾವು ಮಾಡಿದ ಸಿದ್ಧಾಂತ ಅದ್ವೈತಮತನಿರಾಸರೂಪವೇ ಆಗಿದೆ. ಆದ್ದರಿಂದ ಇಲ್ಲಿ ಪ್ರತ್ಯೇಕವಾಗಿ ಅದ್ವೈತಮತ ನಿರಾಸಮಾಡಿಲ್ಲ.

ವಸ್ತುತಸ್ತು ಜಿಜ್ಞಾಸಾಸೂತ್ರದಲ್ಲಿ 'ತದ್‌ವಿಜಿಜ್ಞಾಸಸ್ವ' ಎಂಬ ವಾಕ್ಯದಲ್ಲಿರುವ ಬ್ರಹ್ಮಶಬ್ದವು ಯೌಗಿಕವಾದ್ದರಿಂದ ಗುಣಪೂರ್ಣತ್ವವನ್ನು ಹೇಳುತ್ತದೆ; ಈ ಗುಣಪೂರ್ಣತ್ವವು ಜೀವಬ್ರಹ್ಮರ ಭೇದವನ್ನು ಸಾಧಿಸುತ್ತದೆಂದು ಹೇಳಿದ್ದೇವೆ. ಮತ್ತು ಜನ್ಮಾದಿಸೂತ್ರದಲ್ಲಿ ಅದೇ ವಿಷಯವಾಕ್ಯದಲ್ಲಿರುವ ಜಗತ್ಕಾರಣತ್ವವು ಜೀವನಲ್ಲಿರುವ ರೂಢಿಯನ್ನು ಬಾಧಿಸುತ್ತದೆ. ಗುಣಪೂರ್ಣತ್ವವೆಂಬ ಯೋಗಾರ್ಥವನ್ನೇ ಸ್ವೀಕರಿಸಬೇಕೆಂದು ತಿಳಿಸುತ್ತದೆ. ಹೀಗೆ ಬ್ರಹ್ಮಶಬ್ದವು ವಿಷ್ಣುಪರವೆಂದು ನಿರ್ಣಯವಾಗಿದೆ. ಅದೇ ಬ್ರಹ್ಮಶಬ್ದವು ಆನಂದಮಯನಲ್ಲಿ ಶ್ರುತವಾದ್ದರಿಂದ ಆನಂದಮಯನು ವಿಷ್ಣುವೆಂದು ಸಿದ್ಧವಾಗುತ್ತದೆ. ಪುನಃ ಪೂರ್ವಪಕ್ಷಕ್ಕೆ ಏನು ಅವಕಾಶ? ಎಂಬ ಪ್ರಶ್ನೆ ಬರುತ್ತದೆ. ಆದರೆ ಆನಂದಮಯವಾಕ್ಯದಲ್ಲಿರುವ ಬ್ರಹ್ಮಶಬ್ದದಿಂದ ರೂಢ್ಯರ್ಥವನ್ನು ಸ್ವೀಕರಿಸಲು ಬಾಧಕವೇನು ಕಾಣಿಸುತ್ತಿಲ್ಲ. ಅಷ್ಟೇ ಅಲ್ಲದೇ ವಿಕಾರಾರ್ಥಕವಾದ ಮಯಟ್ ಪ್ರತ್ಯಯಾದಿ ಸಾಧಕಗಳೇ ಇವೆ. ಆದ್ದರಿಂದ ಪೂರ್ವಪಕ್ಷದ ಉದಯವು ಸುಲಭವಾಗಿ ಆಗುತ್ತದೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

. ಈ ಅಧಿಕರಣದ ವಿಷಯವಾಕ್ಯದಲ್ಲಿ ಅನ್ನಮಯವೇ ಮೊದಲು ಶ್ರುತವಾಗಿದೆ. ಆದರೂ ಆನಂದಮಯಶಬ್ದವೇ ಅನ್ನಮಯಾದಿಗಳಿಗೆ ಉಪಲಕ್ಷಕವಾಗಿದೆಯೆಂದು ಹೇಳುವುದು ಉಚಿತ. ಹೀಗೆ ಹೇಳಿದ್ದರಿಂದ ಆನಂದಮಯನ ಅವಯವನಾದ ಬ್ರಹ್ಮನ ಜಿಜ್ಞಾಸೆಯು ಕರ್ತವ್ಯವಲ್ಲವೆಂದು ಪೂರ್ವಪಕ್ಷ ಮಾಡುವುದು ಸುಲಭವಾಗುತ್ತದೆ. ಉದಾಹರಣೆ - ಪೂರ್ವಮೀಮಾಂಸೆಯಲ್ಲಿ 'ಆಜ್ಯೈಃ ಸ್ತುವತೇ' ಎಂಬ ಉತ್ಪತ್ತಿವಾಕ್ಯವನ್ನು ಬಿಟ್ಟು ವಾಕ್ಯಭೇದವೆಂಬ ಸಿದ್ಧಾಂತಹೇತು ಇರುವುದರಿಂದ 'ಪಂಚದಶಾನ್ಯಾಜ್ಯಾನಿ' ಎಂಬ ಗುಣವಾಕ್ಯವನ್ನು ಉದಾಹರಿಸಿದ್ದಾರೆ. ಅದರಂತೆ ಇಲ್ಲಿಯೂ ತಿಳಿಯಬೇಕು.

**प्रकाशः – संशयटीकां व्यनक्ति – अत्रेति** ।। सूत्रे अन्योपलक्षणत्वेनानन्दमयस्यैवोक्तेष्टीकानुरोधेनेतरोपलक्षणत्वेनात्राप्येकस्यैवोक्तिरिति बोध्यम् । आदिपदेन चेतनाचेतनप्रकृत्योर्जीवसमुदायादेश्च ग्रहः ।। **असद्ब्रह्मेतीति** ।। ब्रह्मशब्दः पुच्छ एव श्रुतो न त्वानन्दमय इत्यस्य निरसिष्यमाणत्वात्सिद्धवन्निर्देशः कृतः ।। **मयडिति** ।। यद्यप्यत्र ''अन्योऽन्तर आत्मा'' इत्यत्रान्यान्तरशब्दौ, ''तस्यैष एव शारीर आत्मा'' इति शरीरशरीरिभाव इत्यादिकमपि विरोधि न वेति शक्यं वक्तुम् । तथाऽपि ''विकारशब्दात्'' इति सूत्रे तस्य कण्ठत उक्तत्वादितरस्योपलक्षणत्वेनोपादानादेवमुक्तम् । विशेषविवक्षया वा तन्मात्रोक्तिरित्यदोषः ।। **व्यधिकरणेति** ।। भिन्नाधिकरणेत्यर्थः ।

अस्पष्टभागे फलफलिभावं व्यनक्ति – **आद्य इति** ।। तथा च मयटो विकारार्थत्वेन ब्रह्मशब्दस्यामुख्यार्थत्वादानन्दमयो न ब्रह्मेति पूर्वपक्षे फलं, प्राचुर्यार्थत्वसम्भवे तु बाधकाभावेन ब्रह्मशब्दस्य मुख्यार्थत्वादानन्दमयो ब्रह्मेति सिद्धान्ते फलं स्पष्टमिति भावः ।।

**परमतस्येति** ।। यद्यपि परमते पञ्चानां कोशत्वं, पूर्वपक्षे तु चतुर्मुखादित्वम् । तथाऽप्यब्रह्मत्वसाम्यात्कोशत्वस्याप्यभिमतत्वाद्वर एवमुक्तम् । उक्तं च टीकायां – ''यस्त्वन्नमयादिपञ्चानामप्यब्रह्मतां ब्रूते, स तु सूत्रकारेणैव पूर्वपक्षीकृत इति न तत्पक्षं प्रत्याक्षिपद्भाष्यकारः'' इति ।। **पृथगिति** ।। परमतानुवादतन्निरासाभ्यां तावुच्येते इत्यर्थः । पूर्वपक्षानुदयमाशङ्कते – **यद्यपीति** ।। 'पुनश्च प्रापकाद्धेतोः तत्राधिकरणान्तरम् ।' इत्यनुव्याख्यानोक्तं समाधिमाह – **तथाऽपीति** ।।

इतः परं 'अत्र' इत्यादिना 'अन्ये तु' इत्यन्तं सूत्राणामक्षरार्थस्वारस्यचिन्ता क्रमचिन्ता च क्रियत इति ध्येयम् । तत्राद्यसूत्रे प्रतिज्ञाभागचिन्ता तावदारभ्यते – **अत्रेति** ।। नन्वत्रानन्दमययादिशब्दा उदाहरणमित्युक्तं, तन्न युक्तं, सूत्रे एकस्यैवोपादानात् । यदि च –

उपलक्षणत्वं शब्दानामानन्दमयपूर्विणाम् ।
सूत्रस्याल्पाक्षरत्वेन सर्वशाखाविनिर्णये ।।

इत्यनुव्याख्यानानुरोधेनोपलक्षकत्वमुच्यते, तदाऽपि प्राथम्यादल्पाक्षरत्वाच्च • 'अन्नमयः' इत्येवोच्येतेत्याशङ्क्य,

आनन्दमयरूपे तु ब्रह्मणः पुच्छतोक्तितः ।
समस्ताब्रह्मताप्राप्तेरानन्दमयनाम हि ।।

इत्यनुव्याख्यानोक्तं परिहारमाह – **श्रुताविति** ।।

'तत्र' आनन्दमये आनन्दमयासाधारणपूर्वपक्षहेतोरधिकस्य सत्त्वादित्यर्थः। आदिपदान्मयडादेः साधारणस्य ग्रहः। उपलक्षणमेतत्, हेतुव्यपदेशरूप-सिद्धान्तहेतोश्चाधिकस्य तत्र सत्त्वात्, ''सर्वापेक्षितानन्दप्रद'' इत्यादिना प्रागुक्त-सङ्गतिसूचनार्थत्वाच्चेत्यपि ध्येयम् । अत एव वक्ष्यमाणदृष्टान्तस्यानानुगुण्यशङ्का-लेशोऽपि नेति । एतेन ''अन्नमयादीनामपि तर्हि ब्रह्मतां किं नासूत्रयदिति चेत्, सूत्रस्याल्पाक्षरत्वादेव । आदिमत्वेऽप्यन्नमयादीनामानन्दमयस्य सङ्गतत्वेन ग्रहणम्'' इति टीका व्याख्याता ।

**यथेति** ।। आद्ये चतुर्थपादे ''यस्मिन् गुणोपदेशः प्रधानतोऽभिसम्बन्धः'' इति द्वितीयेऽधिकरणे ''पञ्चदशान्याज्यानि इत्यत्राज्यशब्दः किं घृतरूपगुणवाची किं वा स्तोत्रनामेति संशये, रूढत्वेनोद्भिदादियौगिकशब्दवन्नामत्वायोगात् सङ्ख्या-विशिष्टाज्यविधौ वाक्यभेदाभावादा ज्यशब्दोऽवान्तरप्रकरणेन स्तोत्रे गुणविधिरिति प्राप्ते, समासाभावेन सङ्ख्याविशिष्टद्रव्याप्रतीतेरुभयविधानावश्यंभावेन वाक्यभेदा-परिहारात्, आज्यानुवादेन सङ्ख्यामात्रस्य विधेयत्वात् ''आज्यैः स्तुवते''

इत्युत्पत्तिवाक्ये धात्वर्थसामानाधिकरण्येन निर्देशात्, ''यदाजिमीयुस्तदाज्यानामाज्यत्वम्'' इति वाक्यशेषे अन्वाख्यानाच्चाज्यशब्दः स्तोत्रनामेति सिद्धान्तितम् ।

एवं ''चित्रया यजेत पशुकामः'' इत्यत्रापि चित्राशब्दः किं चित्रत्वस्त्रीत्वगुणविधिपरः किं वा कर्मनामेति संशये, पूर्ववत्पूर्वोत्तरपक्षौ बोध्यौ । तत्र ''आज्यैः स्तुवते'' इत्युत्पत्तिवाक्ये गुणविधिपक्षे द्रव्यक्रिययोरुभयोरुपादानेऽपि कारकविशिष्टक्रियाविध्युपपत्तेः, चित्रावाक्यसाधारणस्य वाक्यभेदरूपस्य सिद्धान्तहेतोरनवतारात् तद्वाक्यमुपेक्ष्य गुणवाक्ये समासाभावेन विशिष्टद्रव्यविध्ययोगादुक्तरूपसिद्धान्तहेतुसत्त्वात् तदुपजीवनेनैवोत्पत्तिवाक्यस्थाज्यशब्दस्यस्तोत्रनामत्वनिर्वाहाय यथा तदेवोदाहृतं, 'तद्वदत्रापि युक्तम्' इति पूर्वेणान्वयः।

अत्र कश्चिदाह – विषमोऽयमुपन्यासः । तत्रोत्पत्तिवाक्योदाहरणे सिद्धान्तोन्मेषहेतुरेव नेति गुणवाक्योदाहरणं युक्तम् । इह तु मयडादेर्हेत्वन्तरस्यापि भावेन प्रथमातिक्रमेण चरमोदाहरणमयुक्तमिति, तन्न, हेतुसद्भावमात्र एव दृष्टान्तत्वात् । उत्पत्तिवाक्ये नामत्वहेतोरलाक्षणिकत्वस्यान्वाख्यानस्य च सत्वाच्च । आनन्दमय इवावयवत्वरूपप्रबलहेतोरन्नमयादावभावाच्च । नन्वन्नमयेऽपि 'ओषधीभ्योऽन्नम् अन्नात्पुरुषः स वा एष पुरुषोऽन्नरसमयः' इति देहपरामर्शः, 'तस्येदमेव शिरः' इति प्रत्यक्षनिर्देशश्चान्नमये पूर्वपक्षहेतुरधिकोऽस्तीति चेन्न, तस्य विकारार्थोपपादकत्वेन तदन्तर्भावादिति सुधायामेवमेवोक्तेरिति भावः ।

गुरुराजीयम् – समानाधिकरणेति ।। समानाधिकरणं यद्विजातीयं तदल्पत्वेनेत्यर्थः । एवमुत्तरत्रापि व्यधिकरणं यत्सजातीयं तदल्पत्वेनेति व्याख्येयम् । पूर्वपक्षे च सिद्धान्ते च फलफलिभावमाह – आद्य इति ।। नन्वधिकरणानामितर इवात्रापि पूर्वपक्षसिद्धान्तौ कुतो नोच्येते इत्यत आह – अत्र चेति ।।

न तौ पृथगुच्येते इति ।। तथा च पूर्वोत्तरपक्षविवेचनादिप्रतिज्ञाविरोधो न शङ्क्य इति भावः । नन्विदमधिकरणमनारम्भणीयम् । एतदधिकरणनिर्णेतव्यविषयवाक्ये ब्रह्मशब्दस्य श्रुतत्वात्तस्य च जिज्ञासासूत्रे योगरूढिभ्यां ब्रह्मनिष्ठत्वस्य जीवनिष्ठत्वस्य चोपपादितत्वात्तद्युक्तानन्दमयशब्दस्यापि ब्रह्मपरत्वान्न पूर्वपक्षोदय इत्याशङ्क्य निराकरोति – यद्यपीत्यादिना ।।

ननु सूत्रकारेणानन्दमयोभ्यासादित्यानन्दमयस्यैव ब्रह्मत्वमुक्तम् । तथा च भाष्यकारेण तदेवोपपादनीयम् । अन्नमयादौ येन्नं ब्रह्मोपासत इत्याद्यभ्यास- वर्णनमयुक्तम् । नच सूत्रकारेणानन्दमयस्योपलक्षणतया गृहीतत्वेनान्नमयादीनां ब्रह्मत्वस्यापि सूत्रकाराभिप्रेत- त्वाद्भाष्यकारीयतद्व्युत्पादनं सङ्गतमेवेति वाच्यम् । तर्ह्यन्नमयस्यैव प्रथमत्वेन प्रथमातिक्रमे कारणाभावेन अन्नमयोभ्यासादित्यन्नमयस्यैव वक्तव्यत्वापत्त्याऽऽनन्दमयस्य प्रथमग्रहणमनुपपन्नमित्यत आह – अत्रेति ।। तत्रेति ।।

ननु यदि पूर्वपक्षहेतुभूतस्यावयवत्वस्यानन्दमये विद्यमानत्वेन तस्यैवेतरलक्षकत्वेनोपपादनं तर्ह्यानन्दमय एवान्नमयेपि इदमित्यादिनिर्देशानुपपत्ति- रूपस्य पूर्वपक्षहेतोः सत्त्वात्तस्यैवेतरलक्षकत्वेन ग्रहणोपपत्त्या नानन्दमयग्रहणं युक्तमित्यत उक्तं **जिज्ञासासूत्राक्षेपकस्येति** ।। तस्य जिज्ञासासूत्राक्षेपकत्वाभावेन सङ्गतिकथनेनैव पूर्वपक्षस्य लाभादानन्दमयस्यैवोपादानं न त्वितरस्येत्यर्थः । नन्वानन्दमये पूर्वपक्षहेतोः सत्त्वेपि तस्यैवोदाहरणं कुत इत्यतः तत्र पूर्वमीमांसायां सम्प्रतिपन्नं दृष्टान्तमाह – **यथेति** ।। **वाक्यभेदेति** ।। आज्ये मन्त्रसम्बन्धस्य पञ्चदशत्वस्य च विधाने वाक्यभेदापत्तेरिति भावः ।

ವಿವರಣೆ - ಆನಂದಮಯಾಧಿಕರಣದ ವಿಷಯವಾಕ್ಯದ ಬಗ್ಗೆ ಇಲ್ಲಿಯ ತನಕ ವಿಚಾರ ಮಾಡಿದ್ದಾಯಿತು. ಈಗ ಸಂಶಯವನ್ನು ತೋರಿಸುತ್ತಾ ಸಂಶಯಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ. ಗ್ರಂಥಕಾರರು 'ಆನಂದಮಯಾದಿಃ' ಎಂದು ಅನ್ನಮಯಾದಿಗಳನ್ನೂ ಆದಿಪದದಿಂದ ಹೇಳಬೇಕಿತ್ತಲ್ಲವೇ? ಕೇವಲ ಆನಂದಮಯಃ ಎಂದಷ್ಟೇ ಹೇಗೆ ಹೇಳಿದರು? ಎಂಬ ಪ್ರಶ್ನೆ ಬರುತ್ತದೆ. ಆದರೆ ಸೂತ್ರಕಾರರು 'ಆನಂದಮಯಃ' ಎಂದು ಉಪಲಕ್ಷಣಯಾ ಉಳಿದವುಗಳನ್ನು ಸ್ವೀಕರಿಸಿದ್ದಾರೆ. ಟೀಕೆಯಲ್ಲಿಯೂ ಸಹ ಆದಿಪದವನ್ನು ಹೇಳದೇ ಆನಂದಮಯಶಬ್ದವನ್ನು ಉಪಲಕ್ಷಣಯಾ ಹೇಳಿದ್ದಾರೆ. ಅದರಂತೆ ಇಲ್ಲಿಯೂ ಗ್ರಂಥಕಾರರು ಹೇಳಿದ್ದಾರೆ. ಈ ಅಧಿಕರಣದ ಪೂರ್ವಪಕ್ಷಕ್ಕೆ ಕೇವಲ ಚತುರ್ಮುಖನಷ್ಟೇ ವಿಷಯವಲ್ಲ. ಲಕ್ಷ್ಮೀದೇವಿ, ಜಡಪ್ರಕೃತಿ, ಜೀವಸಮುದಾಯವೂ ವಿಷಯವಾಗಿರುವುದರಿಂದ 'ಚತುರ್ಮುಖಾದಿಃ' ಎಂಬಲ್ಲಿರುವ ಆದಿಪದದಿಂದ ಇವುಗಳನ್ನೆಲ್ಲ ತೆಗೆದುಕೊಳ್ಳಬೇಕು. ಇವರನ್ನೆಲ್ಲ ತೆಗೆದುಕೊಳ್ಳಲು ಮಯಟ್ ಪ್ರತ್ಯಯವೇ ಗಮಕ. ಗ್ರಂಥಕಾರರು 'ಅಸದ್‌ಬ್ರಹ್ಮೇತಿ ವೇದ ಚೇತ್' ಎಂದು ಬ್ರಹ್ಮಶಬ್ದವು ಆನಂದಮಯನಲ್ಲಿ ಶ್ರುತವಾಗಿದೆಯೆಂದು ಹೇಳಿದರು. ಆದರೆ ಬ್ರಹ್ಮಶಬ್ದವು ಪುಚ್ಛನಲ್ಲಷ್ಟೇ ಕೇಳಿಸುತ್ತಿರುವಾಗ ಆನಂದಮಯನಲ್ಲಿ ಕೇಳಿಸುತ್ತಿದೆಯೆಂದು ಗ್ರಂಥಕಾರರು ಹೇಗೆ ಹೇಳಿದರು? ಎಂದರೆ ಮುಂದೆ ಆನಂದಮಯನಲ್ಲೇ ಬ್ರಹ್ಮಶಬ್ದವನ್ನು ಉಪಪಾದಿಸುವುದರಿಂದ ಸಿದ್ಧವತ್‌ಕೃತ್ಯ ಆನಂದಮಯನನ್ನು ಬ್ರಹ್ಮನೆಂದು ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

ಆನಂದಮಯ ವಿಜ್ಞಾನಮಯ ಎಲ್ಲರನ್ನೂ ನೀವು ಬ್ರಹ್ಮರೆಂದು ಹೇಳಿದರೆ 'ಅನ್ಯೋಂತರ ಆತ್ಮಾ' ಎಂಬಲ್ಲಿರುವ ಅಂತರಶಬ್ದವನ್ನು ಹೇಗೆ ಕೂಡಿಸುವುದೆಂಬ ಬಾಧಕವಿದೆ. ಮತ್ತು 'ತಸ್ಯೈಷ ಏವ ಶಾರೀರ ಆತ್ಮಾ' ಎಂದು ಆನಂದಮಯಾದಿಗಳಿಗೆ ಶರೀರಶರೀರಿಭಾವವನ್ನು ಹೇಳಿದ್ದಾರೆ. ಇದು ಒಂದು ಬಾಧಕ. ಈ ಬಾಧಕಗಳನ್ನೂ ಗ್ರಂಥಕಾರರು ಹೇಳಬಹುದಿತ್ತಲ್ಲ? ಎಂದರೆ 'ವಿಕಾರಶಬ್ದಾತ್' ಎಂಬ ಸೂತ್ರದಲ್ಲಿ ವಿಕಾರಾರ್ಥಕವಾದ ಮಯಟ್ ಪ್ರತ್ಯಯವನ್ನು ಕಂಠತಃ ತೆಗೆದುಕೊಂಡಿದ್ದಾರೆ. ಉಳಿದವುಗಳನ್ನು ಉಪಲಕ್ಷಣಯಾ ತೆಗೆದುಕೊಂಡಿದ್ದಾರೆ.

ಗ್ರಂಥಕಾರರು ಅಸ್ಪಷ್ಟಭಾಗದಲ್ಲಷ್ಟೇ ಫಲಫಲಿಭಾವವನ್ನು ಹೇಳಿದ್ದಾರೆ. ವಸ್ತುತಃ ಮಯಟ್‌ಪ್ರತ್ಯಯವು ವಿಕಾರಾರ್ಥಕವಾದ್ದರಿಂದ ಬ್ರಹ್ಮಶಬ್ದವು ಅಮುಖ್ಯಾರ್ಥವಾದ್ದರಿಂದ ಆನಂದಮಯನು ಬ್ರಹ್ಮನಲ್ಲವೆಂದು ಪೂರ್ವಪಕ್ಷದ ಫಲ. ಪ್ರಾಚುರ್ಯಾರ್ಥವನ್ನು ವಿವಕ್ಷಿಸಿದಾಗ ಬಾಧಕವಿಲ್ಲದ್ದರಿಂದ ಬ್ರಹ್ಮಶಬ್ದವು ಮಖ್ಯಾರ್ಥವಾಗುತ್ತದೆ. ಆದ್ದರಿಂದ ಆನಂದಮಯನು ಬ್ರಹ್ಮನಾಗುತ್ತಾನೆಂದು ಸಿದ್ಧಾಂತದ ಫಲ.

ಪ್ರಶ್ನೆ - ಗ್ರಂಥಕಾರರು ಪರಮತವನ್ನೇ ಪೂರ್ವಪಕ್ಷ ಎಂದು ಹೇಗೆ ಹೇಳಿದರು? ಅದ್ವೈತಿಗಳು ಐದನ್ನೂ ಕೋಶವೆಂದು ಹೇಳುತ್ತಾರೆ. ಆದರೆ ಇಲ್ಲಿ ಚತುರ್ಮುಖಾದಿಗಳೆಂದು ಹೇಳಿದ್ದಾರಲ್ಲ?

ಉತ್ತರ - ಹೌದು. ಆದರೆ ಕೋಶವಾಗಲೀ ಚತುರ್ಮುಖಾದಿಗಳಾಗಲೀ ಆ ಬ್ರಹ್ಮವಾಗಿರುವುದರಿಂದ ಅಬ್ರಹ್ಮತ್ವವಿಷಯದಲ್ಲಿ ಎರಡೂ ಸಮಾನವಾಗಿದೆ. ಆದ್ದರಿಂದ ಇಲ್ಲಿ ಚತುರ್ಮುಖಾದಿಗಳೆಂದು ಹೇಳಿದ್ದು ತಪ್ಪಲ್ಲ. ಮತ್ತು ಕೋಶವನ್ನು ಸಹ ಇಲ್ಲಿ ತೆಗೆದುಕೊಳ್ಳಬೇಕು. ಆದ್ದರಿಂದ ಅದ್ವೈತಮತವೇ ಇಲ್ಲಿ ಪೂರ್ವಪಕ್ಷವಾಗುತ್ತದೆ. ಪುನಃ ಪ್ರತ್ಯೇಕವಾಗಿ ಅದ್ವೈತಮತವನ್ನು ಇಲ್ಲಿ ದೂಷಿಸಬೇಕಾಗಿಲ್ಲ. ಇದನ್ನೇ ಟೀಕೆಯಲ್ಲಿ - 'ಯಸ್ತು ಅನ್ನಮಯಾದಿಪಂಚಾನಾಮಪಿ ಅಬ್ರಹ್ಮತಾಂ ಬ್ರೂತೇ ಸತು ಸೂತ್ರಕಾರೇಣೈವ ಪೂರ್ವಪಕ್ಷೀಕೃತ ಇತಿ ನ ತತ್ ಪಕ್ಷಂ ಪ್ರಕ್ಷಿಪದ್‌ಭಾಷ್ಯಕಾರಃ' ಎಂದು. ಇಲ್ಲಿ 'ಅಬ್ರಹ್ಮತಾಮ್' ಎಂದು ಹೇಳಿದ್ದರಿಂದ ಕೋಶವೆಂದು ಬೇಕಾದರೆ ಹೇಳಲಿ ಚತುರ್ಮುಖನೆಂದು ಬೇಕಾದರೆ ಹೇಳಲಿ ಅಬ್ರಹ್ಮತ್ವವೆಂಬ ಅಂಶದಲ್ಲಿ ಪೂರ್ವಪಕ್ಷ ಸಮಾನವಾಗಿದೆಯೆಂದು ಸೂಚಿಸಿದ್ದಾರೆ. ಸೂತ್ರಕಾರರು ಆನಂದಮಯನನ್ನು ಬ್ರಹ್ಮನೆಂದು ಹೇಳಿದ್ದರಿಂದ ಆನಂದಮಯ ಕೋಶವೆಂಬುದು ಪೂರ್ವಪಕ್ಷವಾಗುತ್ತದೆಂದು ತಿಳಿಸಿದ್ದಾರೆ.

'ಅತ್ರ ಶ್ರುತೌ' ಎಂಬುದರಿಂದ ಪ್ರಾರಂಭಿಸಿ 'ಅನ್ಯೇ ತು' ಎಂಬುದರ ತನಕ ಸೂತ್ರಗಳ ಅಕ್ಷರಾರ್ಥಸ್ವಾರಸ್ಯವನ್ನು ಸೂತ್ರಗಳ ಕ್ರಮವಿನ್ಯಾಸವನ್ನು ವರ್ಣಿಸುತ್ತಿದ್ದಾರೆ. ಮೊದಲಿನ ಸೂತ್ರದ 'ಆನಂದಮಯಃ' ಎಂಬ ಪ್ರತಿಜ್ಞಾಭಾಗವನ್ನು ಮೊದಲು ಚಿಂತನೆ ಮಾಡುತ್ತಿದ್ದಾರೆ.

ಆಕ್ಷೇಪ - ಅನ್ನಮಯಾದಿಶಬ್ದಗಳನ್ನು ಉದಾಹರಣೆಯಾಗಿ ಹೇಳಿದಿರಿ ಇದು ತಪ್ಪು. ಸೂತ್ರಕಾರರು ಕೇವಲ ಆನಂದಮಯಶಬ್ದವನ್ನಷ್ಟೇ ತೆಗೆದುಕೊಂಡಿದ್ದಾರೆ. ಇನ್ನು

ಉಪಲಕ್ಷಣತ್ವಂ ಶಬ್ದಾನಾಮಾನಂದಮಯಪೂರ್ವಣಾಮ್ ॥
ಸೂತ್ರಸ್ಯಾಲ್ಪಕ್ಷರತ್ವೇನ ಸರ್ವಶಾಖಾವಿನಿರ್ಣಯೇ ॥

ಸರ್ವಶಾಖಾವಿನಿರ್ಣಾಯಕವಾದ ಸೂತ್ರಗಳು ಅಲ್ಪಾಕ್ಷರದಿಂದ ಕೂಡಿರುತ್ತವೆ. ಆದ್ದರಿಂದ ಆನಂದಮಯ ಮೊದಲಾದ ಶಬ್ದಗಳನ್ನು ಉಪಲಕ್ಷಣವನ್ನಾಗಿ ತಿಳಿಯಬೇಕು. ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ

ಆನಂದಮಯಶಬ್ದವನ್ನು ಉಪಲಕ್ಷಕವಾಗಿ ಹೇಳಿದಾಗ ಅನ್ನಮಯಾದಿಗಳ ಸಂಗ್ರಹವಾಗುತ್ತದೆ. ಆದರೆ ಪ್ರಥಮದಲ್ಲಿರುವ ಅನ್ನಮಯಶಬ್ದವನ್ನೇ ಸೂತ್ರದಲ್ಲಿ ಹೇಳಬಹುದಿತ್ತಲ್ಲ? ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ. ಮತ್ತು ಆನಂದಮಯ ಎಂಬ ಶಬ್ದಕ್ಕಿಂತ ಅನ್ನಮಯಶಬ್ದವು ಅಲ್ಪಾಕ್ಷರವಾಗಿದೆ. ಆದ್ದರಿಂದ ಸೂತ್ರಕಾರರು ಆನಂದಮಯಶಬ್ದವನ್ನೇ ಏಕೆ ಹೇಳಿದರು?

ಸಮಾಧಾನ -

ಆನಂದಮಯರೂಪೇ ತು ಬ್ರಹ್ಮಣಃ ಪುಚ್ಛತೋಕ್ತಿತಃ।
ಸಮಸ್ತಾಬ್ರಹ್ಮತಾ ಪ್ರಾಪ್ತೇರಾನಂದಮಯನಾಮ ಹಿ॥

ಆನಂದಮಯನಿಗೆ ಬ್ರಹ್ಮನನ್ನು ಪುಚ್ಛನೆಂದು ಹೇಳಿದ್ದಾರೆ. ಬ್ರಹ್ಮನು ಪುಚ್ಛನಾದ ಮೇಲೆ ಸಮಸ್ತನಾದ ಆನಂದಮಯನೆಂಬ ಅವಯವಿಯು ಬ್ರಹ್ಮನಾಗಲ್ಲ ಎಂಬ ಅನುವ್ಯಾಖ್ಯಾನದ ಮಾತಿನಂತೆ ಆನಂದಮಯಶಬ್ದದಲ್ಲೇ ಪೂರ್ವಪಕ್ಷದ ಹೇತು ಪ್ರಬಲವಾಗಿದೆ. ಆದ್ದರಿಂದ ಆನಂದಮಯಶಬ್ದವನ್ನೇ ಸೂತ್ರಕಾರರು ತೆಗೆದುಕೊಂಡಿದ್ದಾರೆ. ವಿಕಾರಾರ್ಥಕ ಮಯಟ್ ಪ್ರತ್ಯಯ ಇರುವುದು ಎಲ್ಲ ಶಬ್ದಗಳಲ್ಲಿಯೂ ಸಮಾನ. ಆನಂದಮಯ ಎಂಬ ಹೆಸರು ಇದರಲ್ಲಿ ಅಧಿಕ ಹೇತುವಾಗಿದೆ. ಉಪಲಕ್ಷಣಯಾ ಇನ್ನೂ ಎರಡು ಹೇತುಗಳನ್ನು ವಿವಕ್ಷಿಸಬೇಕು. ಮತ್ತು ಸಿದ್ಧಾಂತಹೇತುವಾಗಿರುವ ತದ್ಧೇತುವ್ಯಪದೇಶವೆಂಬ ಹೇತುವೂ ಸಹ ಆನಂದಮಯಪ್ರಕರಣದಲ್ಲೇ ಶ್ರುತವಾಗಿದೆ. ಮತ್ತು ಸರ್ವಾಪೇಕ್ಷಿತವಾದದ್ದು ಆನಂದ. ಅದನ್ನು ಹೊಂದಬೇಕಾದರೆ ಆನಂದಮಯನ ಉಪಾಸನೆ ಮಾಡಬೇಕೆಂಬ ಯುಕ್ತಿಯನ್ನು ಸೂತ್ರದಿಂದ ತೋರಿಸುತ್ತಿದ್ದಾರೆ. ಹೀಗೆ ಹೇಳಿದ್ದರಿಂದ "ಅನ್ನಮಯಾದೀನಾಮಪಿ ತರ್ಹಿ ಬ್ರಹ್ಮತ್ವಾಂ ಕಿಂ ನಾಸೂತ್ರಯದಿತಿ ಚೇತ್ ಸೂತ್ರಸ್ಯಾಲ್ಪಕ್ಷರತ್ವಾದೇವ, ಆದಿಮತ್ವೇಪ್ಯನ್ನಮಯಾದೀನಾಮಾನಂದಮಯಸ್ಯ ಸಂಗತತ್ವೇನ ಗ್ರಹಣಮ್' ಎಂಬ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು.

ಯಸ್ಮಿನ್‌ಗುಣೋಪದೇಶಃ ಪ್ರಧಾನತೋಽಭಿಸಂಬಂಧಃ[1] (೧- ೪-೨)

---

(१) भाट्टसङ्ग्रहः –

**यस्मिन् गुणोपदेशः प्रधानतोऽभिसम्बन्धः ।। ३ ।।**

पूर्ववैषम्येण पूर्वपक्षप्रवृत्तेः प्रत्युदाहरणरूप **सङ्गतिर्ज्ञेया** । 'चित्रया यजेत पशुकामः', 'पञ्चदशान्याज्यानि भवन्ति' इत्यादौ श्रुतः चित्रादिशब्दः किं गुणविधिः, उत कर्मनामधेयं इति **सन्देहः** । पूर्वत्र यौगिकत्वेन उद्भिदादिशब्दस्य कर्मनामधेयत्वेऽपीह चित्रादिशब्दस्य रूढ्या चित्रत्वस्त्रीत्वविशिष्टार्थवाचित्वादाज्य-शब्दस्य घृतवाचित्वात् कर्मनामत्वस्य सर्वथाऽयोगात् 'अग्नीषोमीयं पशुमालभेत' इति विहितपशुयागमत्र यजिनाऽनूद्य तस्मिन् पशौ चित्रत्वस्त्रीत्वगुणो विधीयते । तथा संख्यायुक्तं घृतं स्तोत्राङ्गतया विधीयत इति **प्राप्ते, सिद्धान्तः** चित्रत्वस्त्रीत्वरूपगुणद्वयविधौ 'पशुश्चित्रः, स्त्री च' इति वाक्यभेदप्रसङ्गात् वाक्यभेदपरिहाराय गुणद्वययुक्तपशुद्रव्यकापूर्वकर्मविधानेऽपि विशिष्टविधानरूपगौरवं स्यात्

'ಪಂಚದಶಾನಿ ಆಜ್ಯಾನಿ' ಎಂಬ ಶ್ರುತಿವಾಕ್ಯದಲ್ಲಿ ಆಜ್ಯಶಬ್ದವು 'ತುಪ್ಪ' ಎಂಬ ಅಂಗವನ್ನು ಹೇಳುತ್ತಿದೆಯೋ? ಅಥವಾ ಸ್ತೋತ್ರ ಮಾಡುವ ಮಂತ್ರದ ಹೆಸರನ್ನು ಹೇಳುತ್ತಿದೆಯೋ? ಎಂದು ಸಂಶಯ.

ಪೂರ್ವಪಕ್ಷ - ಆಜ್ಯಶಬ್ದವು ತುಪ್ಪದಲ್ಲಿ ರೂಢವಾಗಿದೆ. 'ಉದ್ಭಿದಾ ಯಜೇತ' ಎಂಬಲ್ಲಿ ಉದ್ಭಿತ್ ಶಬ್ದವು ಯೌಗಿಕವಾಗಿದ್ದರೂ ಯಾಗದ ಹೆಸರೂ ಆಗಿದೆ. ಆದರಂತೆ ಆಜ್ಯಶಬ್ದವು ಯೌಗಿಕವಾಗಿಲ್ಲ. 'ಪಂಚದಶಾನಿ' ಎಂಬ ಸಂಖ್ಯಾವಾಚಕಶಬ್ದವು ಜೊತೆಗಿರುವುದರಿಂದ ವಾಕ್ಯಭೇದ ಬರುತ್ತದೆಂದೂ ತಿಳಿಯಬಾರದು. ಸಂಖ್ಯಾವಿಶಿಷ್ಟವಾದ ಆಜ್ಯವನ್ನು ವಿಧಾನ ಮಾಡುತ್ತಿದೆಂದೇ ತಿಳಿಯಬೇಕು. ಆವಾಗ ವಾಕ್ಯಭೇದದೋಷ ಬರುವುದಿಲ್ಲ. ಆದ್ದರಿಂದ 'ಆಜ್ಯೈಃ ಸ್ತುವತೇ' ಎಂಬ ಸ್ತೋತ್ರಪ್ರಕರಣದಲ್ಲಿ ಪ್ರಸಕ್ತವಾಗಿರುವ 'ಪಂಚದಶಾನ್ಯಾಜ್ಯಾನಿ' ಎಂಬ ವಾಕ್ಯವು ಪ್ರಸಕ್ತವಾಗಿದೆ. 'ಆಜ್ಯೈಃ ಸ್ತುವತೇ' ಎಂದು ಹೇಳಿದಾಗ ಸ್ತೋತ್ರವನ್ನು ಹೇಗೆ ಮಾಡಬೇಕೆಂಬ ಕಥಂಭಾವಾಕಾಂಕ್ಷೆ ಬರುತ್ತದೆ. ಆವಾಗ 'ಪಂಚದಶಾನ್ಯಾಜ್ಯಾನಿ' ಎಂಬ ವಾಕ್ಯ ಹೊರಟಿರುವುದರಿಂದ ಆಜ್ಯವು ಅಂಗವೆಂದು ತಿಳಿಯುತ್ತದೆ. ಹೀಗೆ ಪಂಚದಶತ್ವಸಂಖ್ಯಾವಿಶಿಷ್ಟವಾದ ಆಜ್ಯವನ್ನೇ ಸ್ತೋತ್ರದಲ್ಲಿ 'ಪಂಚದಾಶಾನ್ಯಾಜ್ಯಾನಿ' ಎಂಬ ವಾಕ್ಯವು ವಿಧಾನ ಮಾಡುತ್ತಿದೆಯೆಂದು ಪೂರ್ವಪಕ್ಷ

ಸಿದ್ಧಾಂತ - ಸಂಖ್ಯಾವಿಶಿಷ್ಟವಾದ ಆಜ್ಯವಿಧಿಯೆಂದು ಹೇಳಿದರೂ ವಾಕ್ಯಭೇದದೋಷ ಬಂದೇ ಬರುತ್ತದೆ. ಪಂಚದಶಾನಿ ಮತ್ತು ಆಜ್ಯಾನಿ ಎಂಬುದು ಬೇರೆ ಬೇರೆ ಪದಗಳಾಗಿವೆ. ಒಂದು ವೇಳೆ ಸಮಸ್ತ ಪದವಾಗಿದ್ದರೆ ವಿಶಿಷ್ಟವಿಧಿಯೆಂದು ಹೇಳಬಹುದಿತ್ತು. ಈ ವಾಕ್ಯಭೇದ ಪರಿಹಾರವಾಗಬೇಕೆಂದರೆ ಆಜ್ಯವನ್ನು ಅನುವಾದ ಮಾಡಿ ಸಂಖ್ಯಾವನ್ನಷ್ಟೇ ವಿಧಾನಮಾಡಬೇಕು. 'ಆಜ್ಯೈಃ ಸ್ತುವತೇ' ಎಂಬ ಉತ್ಪತ್ತಿವಾಕ್ಯದಲ್ಲಿ ಆಜ್ಯವು ಪ್ರಸಕ್ತವಾಗಿದೆ. ಅದನ್ನು ಅನುವಾದ ಮಾಡಿ ಈ ವಾಕ್ಯವು ಪಂಚದಶತ್ವಸಂಖ್ಯೆಯನ್ನು ಅನುವಾದ ಮಾಡುತ್ತಿದೆ. ಅಷ್ಟೇ ಅಲ್ಲದೇ ಆಜ್ಯಶಬ್ದದ ಅರ್ಥವನ್ನು ವಾಕ್ಯಶೇಷವೇ ವಿವರಿಸುತ್ತಿದೆ. 'ಯದಾಜಿಮೀಯು-

---

अतो 'दधि मधु घृतमापो धानास्तण्डुलास्तत्संस्पृष्टं प्राजापत्यं' इत्युत्पत्तिवाक्यावगत-विचित्रनानाद्रव्यसम्बन्धेन यागस्य चित्रत्वोपपत्तेः 'चित्रनामकेन यागेन पशून् भावयेत्' इति समानाधिकरण्येन पूर्ववद्यागनामधेयं चित्रापदमिति । तथा 'पञ्चदशान्याज्यानि' इत्यत्र सामासाभावेन संख्याविशिष्टद्रव्यविध्ययोगेनोभयविधौ वाक्यभेदप्रसङ्गात् 'यदा-जिमीयुस्तदाज्यानामाज्यत्वं' इति वाक्यशेषवगतनिर्वचनेन मन्त्रनामधेयमाज्यपदम् । एवं च 'आज्यैः स्तुवते' इति वाक्ये आज्यपदस्य नामत्वे तदनुवादेन संख्यामात्रविधाने लाघवमवाक्यभेदश्चेति । तथा च **सूत्रं ॥ यस्मिन्नित्यादि ॥ यस्मिन्** चित्रादिवाक्ये **गुणोपदेश** इव भाति तत्र वाक्यभेदादिदोषात्**प्रधानकर्मणैव** नामत्वेना**भिसम्बन्ध** इति । **फलन्तु, पूर्वपक्षे** अग्नीषोमीयपशुः चित्रः स्त्री च सम्पाद्यः । **सिद्धान्ते** त्वपूर्वकर्मानुष्ठान-मिति । व्यक्तम् ।।३।।

।। इति तृतीयं चित्रादिशब्दानां नामधेयत्वाधिकरणम् ।।

*ಆನಂದಮಯಾಧಿಕರಣ*

ಸ್ತದಾಜ್ಯಾನಾಮಾಜ್ಯತ್ವಮ್' ಯುದ್ಧದ ಸಿದ್ಧತೆಯಲ್ಲಿ ಹೇಳಬೇಕಾದ ಮಂತ್ರವಾದ್ದರಿಂದ ಅದಕ್ಕೆ ಆಜ್ಯವೆಂದು ಹೆಸರು. ಆದ್ದರಿಂದ ಆಜ್ಯಶಬ್ದವು ತುಪ್ಪವನ್ನು ಹೇಳುವುದಿಲ್ಲ. ಸ್ತೋತ್ರದ ಹೆಸರನ್ನು ಹೇಳುತ್ತಿದೆ.

ಇದರಂತೆ 'ಚಿತ್ರಯಾ ಯಜೇತ ಪಶುಕಾಮಃ' ಎಂಬಲ್ಲಿಯೂ ಚಿತ್ರಶಬ್ದವು ಯಾಗಪಶುವಿನಲ್ಲಿ ಚಿತ್ರವರ್ಣವನ್ನು ಸ್ತ್ರೀಲಿಂಗವು ಸ್ತ್ರೀತ್ವವನ್ನು ವಿಧಿಸುತ್ತದೋ? ಅಥವಾ ಯಾಗದ ಹೆಸರನ್ನು ಹೇಳುತ್ತದೋ? ಎಂದು ಸಂಶಯ ಬಂದರೆ ಪೂರ್ವಪಕ್ಷ ಮತ್ತು ಸಿದ್ಧಾಂತಗಳನ್ನು ಹಿಂದಿನಂತೆ ತಿಳಿಯಬೇಕು. ಚಿತ್ರವೆಂಬ ವರ್ಣವನ್ನು ವಿಧಾನ ಮಾಡಿದರೆ ಎರಡನ್ನು ವಿಧಾನ ಮಾಡಿದಂತಾಗುತ್ತದೆ. ಆವಾಗ ವಾಕ್ಯಭೇದದೋಷ ಬರುತ್ತದೆ. ಚಿತ್ರ ಎಂಬುದನ್ನು ಯಾಗದ ಹೆಸರು ಎಂದು ಹೇಳಿದಾಗ ಒಂದನ್ನೇ ವಿಧಾನ ಮಾಡಿದಂತಾಗುತ್ತದೆ. ಆವಾಗ ವಾಕ್ಯಭೇದದೋಷ ಬರುವುದಿಲ್ಲ. ವಸ್ತುತಃ ಜೈಮಿನ್ಯಾಚಾರ್ಯರು 'ಆಜ್ಯೈಃ ಸ್ತುವತೇ' ಎಂಬ ಉತ್ಪತ್ತಿವಾಕ್ಯವನ್ನೇ ವಿಷಯವಾಕ್ಯವನ್ನಾಗಿ ತೆಗೆದುಕೊಳ್ಳಬಹುದಿತ್ತು. 'ಪಂಚದಶಾನ್ಯಾಜ್ಯಾನಿ' ಎಂಬುದನ್ನೇಕೆ ತೆಗೆದುಕೊಂಡರು? ಎಂಬ ಪ್ರಶ್ನೆ ಬರುತ್ತದೆ. ಆದರೆ ಸಿದ್ಧಾಂತದಲ್ಲಿ ವಾಕ್ಯಭೇದವನ್ನು ಆಪಾದನೆ ಮಾಡಲು ಬರುತ್ತಿರಲಿಲ್ಲ. ಘೃತವೆಂಬ ದ್ರವ್ಯದಿಂದ ವಿಶಿಷ್ಟವಾದ ಸ್ತೋತ್ರಕ್ರಿಯಾವನ್ನು ವಿಧಾನ ಮಾಡುತ್ತಿದ್ದಾರೆಂದು ಹೇಳಬಹುದು. ವಸ್ತುತಃ ಇಲ್ಲಿಯೂ ಕೂಡ ಸಮಾಸವಿಲ್ಲ. ಆದರೆ ಮೀಮಾಂಸಕರಲ್ಲಿ ದ್ರವ್ಯ ಮತ್ತು ಕ್ರಿಯೆಗಳು ಉಕ್ತವಾಗಿದ್ದರೆ ವ್ಯಸ್ತಪದವಾಗಿದ್ದರೂ ವಿಶಿಷ್ಟವಿಧಿಯನ್ನು ಹೇಳಬಹುದು. 'ಪಂಚದಶಾನಿ ಆಜ್ಯಾನಿ' ಎಂಬಲ್ಲಿ ದ್ರವ್ಯ ಮಾತ್ರ ಉಕ್ತವಾಗಿದ್ದರಿಂದ ವಿಶಿಷ್ಟವಿಧಿ ಎನಿಸುವುದಿಲ್ಲ. 'ಆಜ್ಯೈಃ ಸ್ತುವತೇ' ಎಂಬಲ್ಲಿ ದ್ರವ್ಯಕ್ರಿಯಗಳು ಉಕ್ತವಾದ್ದರಿಂದ ವಿಶಿಷ್ಟವಿಧಿ ಆಗುತ್ತದೆ. ಹಾಗಾಗಿ 'ಪಂಚದಶಾನ್ಯಾಜ್ಯಾನಿ' ಎಂಬಲ್ಲಿ ವಾಕ್ಯಭೇದವು ದೋಷವಾಗುತ್ತದೆ. 'ಆಜ್ಯೈಃ ಸ್ತುವತೇ' ಎಂಬಲ್ಲಿ ವಾಕ್ಯಭೇದವು ದೋಷವಾಗುವುದಿಲ್ಲ. ಈ ಕಾರಣದಿಂದ 'ಪಂಚದಶಾನ್ಯಾಜ್ಯಾನಿ' ಎಂಬ ವಾಕ್ಯವನ್ನು ವಿಷಯವಾಕ್ಯವನ್ನಾಗಿ ತೆಗೆದುಕೊಂಡಿದ್ದಾರೆ. ಮತ್ತು ಈ ವಾಕ್ಯದಲ್ಲಿರುವ ಆಜ್ಯಶಬ್ದವು ಘೃತಪರವಲ್ಲ; ಸ್ತೋತ್ರಪರವೆಂದು ಸಿದ್ಧಾಂತ ಮಾಡಿದಾಗ ಇದನ್ನು ಉಪಜೀವಿಸಿದ ಉತ್ಪತ್ತಿವಾಕ್ಯದಲ್ಲಿರುವ ಆಜ್ಯಶಬ್ದವೂ ಸಹ ಸ್ತೋತ್ರಪರವೆಂದು ಸುಲಭವಾಗಿ ತಿಳಿಯಬಹುದೆಂದು 'ಪಂಚದಶಾನ್ಯಾಜ್ಯಾನಿ' ಎಂಬುದನ್ನೇ ವಿಷಯವಾಕ್ಯವನ್ನಾಗಿ ಸ್ವೀಕರಿಸಿದ್ದಾರೆ.

ಹೇಗೆ ಇಲ್ಲಿ ಪೂರ್ವಪಕ್ಷ ಮಾಡಲು ಅನುಕೂಲವಾಗುತ್ತದೆಂದು ಉತ್ಪತ್ತಿವಾಕ್ಯವನ್ನು ಬಿಟ್ಟು ಗುಣವಾಕ್ಯವನ್ನು ಗ್ರಹಣ ಮಾಡಿದ್ದಾರೋ ಅದರಂತೆ ಆನಂದಮಯಾಧಿಕರಣದಲ್ಲಿಯೂ ಅನ್ನಮಯಾದಿ-ಗಳನ್ನು ಸ್ವೀಕರಿಸುವುದಕ್ಕಿಂತ ಆನಂದಮಯನನ್ನು ಸ್ವೀಕರಿಸಿದಾಗ ಪೂರ್ವಪಕ್ಷ ಮಾಡುವುದು ಸುಲಭವಾಗುತ್ತದೆ.

ಕೆಲವರ ಆಕ್ಷೇಪ - ಪೂರ್ವಮೀಮಾಂಸಾಸೂತ್ರದ ದೃಷ್ಟಾಂತವು ವಿಷಮವಾಗಿದೆ. 'ಆಜ್ಯೈಃ ಸ್ತುವತೇ' ಎಂಬ ಉತ್ಪತ್ತಿವಾಕ್ಯದಲ್ಲಿ ವಾಕ್ಯಭೇದವೆಂಬ ಪೂರ್ವಪಕ್ಷಹೇತುವೇ ಇಲ್ಲ. ಆದ್ದರಿಂದ ಗುಣವಾಕ್ಯವನ್ನು ಉದಾಹರಿಸಿದ್ದು ಯುಕ್ತವೇ ಆಗಿದೆ. ಆದರೆ ಇಲ್ಲಿ ಬ್ರಹ್ಮನ ಅವಯವ ಎಂಬುದಷ್ಟೇ ಪೂರ್ವಪಕ್ಷದ ಹೇತುವಲ್ಲ. ವಿಕಾರಾರ್ಥಕ ಮಯಟ್‌ಪ್ರತ್ಯಯ ಶರೀರಶರೀರಿಭಾವ ಇತ್ಯಾದಿ ಅನೇಕ ಪೂರ್ವಪಕ್ಷಹೇತುಗಳಿವೆ. ಆದ್ದರಿಂದ ಪ್ರಥಮಶ್ರುತವಾದ ಅನ್ನಮಯಾದಿಗಳನ್ನು ಬಿಟ್ಟು ಆನಂದಮಯನನ್ನು ಸ್ವೀಕರಿಸುವುದು ಉಚಿತವಲ್ಲ.

ಪರಿಪೂರ್ಣಚಂದ್ರಿಕಾ

ಸಮಾಧಾನ - ಆನಂದಮಯನಲ್ಲಿ ಪೂರ್ವಪಕ್ಷಪ್ರಾಪಕವಾದ ಹೇತು ಇದೆ. 'ಪಂಚದಶಾನ್ಯಾಜ್ಯಾನಿ' ಎಂಬಲ್ಲಿಯೂ ಪೂರ್ವಪಕ್ಷಪ್ರಾಪಕವಾದ ಹೇತುವಿದೆ. ಈ ಅಂಶದಲ್ಲಷ್ಟೇ ದೃಷ್ಟಾಂತ ಹೇಳಿದ್ದು ಹೊರತು ಅನ್ನಮಯಾದಿಗಳಲ್ಲಿ ಪೂರ್ವಪಕ್ಷಪ್ರಾಪಕವಾದ ಹೇತುವಿಲ್ಲ ಎಂಬ ಕಾರಣದಿಂದಲ್ಲ. ಮತ್ತು 'ಆಜ್ಯೈಃ ಸ್ತುವತೇ' ಎಂಬ ಉತ್ಪತ್ತಿವಾಕ್ಯದಲ್ಲಿಯೂ ನಾಮತ್ವ ಅಲಾಕ್ಷಣಿಕತ್ವ ಅನ್ವಾಖ್ಯಾನವೆಂಬ ಅನೇಕ ಸಿದ್ಧಾಂತ ಹೇತುಗಳಿವೆ. ಇಷ್ಟೆಲ್ಲಾ ಹೇತುಗಳಿದ್ದರೂ ಉತ್ಪತ್ತಿವಾಕ್ಯವನ್ನು ಬಿಟ್ಟು ವಾಕ್ಯಭೇದವೆಂಬ ಒಂದೇ ಪೂರ್ವಪಕ್ಷ ಹೇತುವನ್ನಾಶ್ರಯಿಸಿ 'ಪಂಚದಶ್ಯಾನ್ಯಾಜ್ಯಾನಿ' ಎಂಬುದನ್ನು ಹೇಗೆ ಗ್ರಹಣ ಮಾಡಿದ್ದಾರೋ ಅದರಂತೆ. ಮತ್ತು ಅನ್ನಮಯಾದಿಗಳಲ್ಲಿ ಪೂರ್ವಪಕ್ಷಪ್ರಾಪಕವಾದ ಹೇತುಗಳಿರಬಹುದು; ಆದರೆ ಆನಂದಮಯನಲ್ಲಿ ಶ್ರುತವಾದ ಅವಯವತ್ವವೆಂಬ ಹೇತು ಅತ್ಯಂತ ಪ್ರಬಲವಾಗಿದೆ. ಆದ್ದರಿಂದಲೂ ಆನಂದಮಯಶಬ್ದಗ್ರಹಣವು ಸಮಂಜಸವಾಗಿದೆ.

ಆಕ್ಷೇಪ - ಅನ್ನಮಯನಲ್ಲೂ ಪ್ರಬಲವಾದ ಹೇತು ಶ್ರುತವಾಗಿದೆ. 'ಓಷಧೀಭ್ಯೋऽನ್ನಮ್, ಅನ್ನಾತ್ ಪುರುಷಃ ಸ ವಾ ಏಷ ಪುರುಷೋನ್ನರಸಮಯಃ' ಎಂಬಲ್ಲಿ ಸಃ ಎಂದು ದೇಹವನ್ನು ಪರಾಮರ್ಶ ಮಾಡಿ ಅನ್ನಮಯ ಎಂದಿದ್ದಾರೆ. ಮತ್ತು 'ತಸ್ಯೇದಮೇವ ಶಿರಃ' ಎಂದು ಇದಂ ಶಬ್ದದಿಂದ ಪ್ರತ್ಯಕ್ಷನಿರ್ದೇಶ ಮಾಡಿದ್ದಾರೆ. ಹೀಗೆ ಅನ್ನಮಯನಲ್ಲಿ ದೇಹಪರಾಮರ್ಶ ಪ್ರತ್ಯಕ್ಷನಿರ್ದೇಶವೆಂಬ ಅಧಿಕವಾದ ಹೇತುಗಳಿವೆ-ಯಲ್ಲ?

ಸಮಾಧಾನ - ಇವೆರಡೂ ಸಹ 'ಮಯಟ್' ಪ್ರತ್ಯಯಯಾರ್ಥವಾದ ವಿಕಾರತ್ವವನ್ನು ಉಪಪಾದಿಸು-ತ್ತಿವೆ. ಹೊರತು ಸ್ವತಂತ್ರವಾಗಿ ಏನನ್ನೂ ಹೇಳುತ್ತಿಲ್ಲ. ಹೀಗೆ ಸುಧೆಯಲ್ಲಿ ಹೇಳಿದ್ದಾರೆ.

ಆದ್ದರಿಂದ ಅನ್ನಮಯಾದಿಗಳು ಮೊದಲೇ ಪ್ರಸಕ್ತವಾಗಿದ್ದರೂ ವಿಶೇಷಕಾರಣವಿರುವುದರಿಂದ ಆನಂದಮಯನ ಗ್ರಹಣವೇ ಸೂಕ್ತವಾಗಿದೆ.




ಆನಂದಮಯಾಧಿಕರಣದ ರಚನೆಯು ಪ್ರಾರಂಭವಾಗಿದೆ. ಮಯಟ್ ಪ್ರತ್ಯಯಕ್ಕೆ ವಿಕಾರವೆಂಬರ್ಥವನ್ನು ವಿವಕ್ಷಿಸಿದರೆ ಆನಂದಮಯನು ವಿಷ್ಣು ಆಗಲ್ಲ. ಪ್ರಾಚುರ್ಯಾರ್ಥವನ್ನು ವಿವಕ್ಷಿಸಿದರೆ ವಿಷ್ಣುವೇ ಆನಂದಮಯನಾಗುತ್ತಾನೆ. ಮೊದಲು ಆನಂದಮಯನು ಬ್ರಹ್ಮನಲ್ಲವೆಂದು ಪೂರ್ವಪಕ್ಷ

ಪ್ರತಿಯೊಂದು ಅಧಿಕರಣಗಳಲ್ಲಿಯೂ ಗ್ರಂಥಕಾರರು ಅದ್ವೈತಿಗಳ ಪೂರ್ವಪಕ್ಷಸಿದ್ಧಾಂತಗಳನ್ನು ಮೊದಲು ತೋರಿಸಿ ಅನಂತರ ಅವುಗಳನ್ನು ನಿರಾಕರಿಸುತ್ತಾರೆ. ಅನಂತರ ನಮ್ಮ ಅಧಿಕರಣದ ಪೂರ್ವಪಕ್ಷ ಸಿದ್ಧಾಂತಗಳನ್ನು ಹೇಳುತ್ತಾರೆ. ಆದರೆ ಈ ಅಧಿಕರಣದಲ್ಲಿ ಮಾತ್ರ ನೇರವಾಗಿ ನಮ್ಮ ಸಿದ್ಧಾಂತದ ಪ್ರಕಾರವೇ ಅಧಿಕರಣವನ್ನು ರಚಿಸುತ್ತಿದ್ದಾರೆ. ಕಾರಣವೇನೆಂದರೆ ನಮ್ಮ ಸಿದ್ಧಾಂತದ ಪೂರ್ವಪಕ್ಷ ಅದ್ವೈತಮತವನ್ನೇ ಆಶ್ರಯಿಸಿ ಹೊರಟಿದೆ. ಪೂರ್ವಪಕ್ಷದ ನಿರಾಕರಣೆ ಮಾಡಿದರೆ ಅದ್ವೈತಮತ ನಿರಾಕರಣೆ ಮಾಡಿದಂತೆಯೇ ಆಗುತ್ತದೆ.

ಹಿಂದಿನ ಅಧಿಕರಣಗಳಲ್ಲಿ ಬ್ರಹ್ಮನು ವಿಷ್ಣುವೆಂದು ನಿರ್ಣಯವಾಗಿದ್ದರೂ ಆನಂದಮಯವಾಕ್ಯದಲ್ಲಿ ಶ್ರುತವಾದ ಬ್ರಹ್ಮಶಬ್ದವು ರೂಢ್ಯರ್ಥವನ್ನು ಹೇಳುವಂತೆ ತೋರುತ್ತದೆ. ಅದನ್ನು ನಿರಾಕರಿಸಿ ಯೌಗಿಕಾರ್ಥದ

ಸಮರ್ಥನೆಗಾಗಿ ಈ ಅಧಿಕರಣ ಸಾರ್ಥಕವಾಗಿದೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಐದು ಪ್ರಕರಣಗಳಲ್ಲಿರುವ ಶಬ್ದಗಳನ್ನು ಈ ಅಧಿಕರಣದಲ್ಲಿ ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಆದರೆ ಪ್ರಥಮ ಪ್ರಸಕ್ತವಾದ ಅನ್ನಮಯನನ್ನು ಸೂತ್ರದಲ್ಲಿ ಉಲ್ಲೇಖಿಸದೇ ಆನಂದಮಯನನ್ನೇ ಏಕೆ ಉಲ್ಲೇಖಿಸಿದರು? ಎಂಬ ಪ್ರಶ್ನೆ ಬರುತ್ತದೆ. ಆದರೆ ಆನಂದಮಯನ ಪ್ರಕರಣದಲ್ಲಿ ಪೂರ್ವಪಕ್ಷ ಪ್ರಾಪಕ- ವಾದ ಹೇತು ಪ್ರಬಲವಾಗಿರುವುದರಿಂದ ಆನಂದಮಯನನ್ನೇ ಉಲ್ಲೇಖಿಸಿದ್ದಾರೆ.

• • • • •

## ಅಭ್ಯಾಸಾತ್ ಎಂಬುದಕ್ಕೆ ಮೂರು ಅರ್ಥ

**तात्पर्यचन्द्रिका –**

अत्र ब्रह्मशब्दाभ्यासो यद्यपि सूत्रोदाहृतमानन्दमयं प्रति श्रुत्योदाहृते श्लोके 'असद्ब्रह्मेति वेद चेत् अस्ति ब्रह्मेति चेद्वेद' इति, तथा विज्ञानमयेऽपि,

'विज्ञानं देवास्सर्वे ब्रह्म ज्येष्ठमुपासते । विज्ञानं ब्रह्म चेद्वेद ।'

इत्यस्ति । न च ''असत्'' इति श्लोके आनन्दमयपुच्छविषयः, अन्नमयादीन् प्रत्युदाहृतश्लोकानामपि तदीयपुच्छविषयत्वापातात् । अन्नमयप्राणमयमनोमयेषु तु ''येऽन्नं ब्रह्मोपासते'' ''ये प्राणं ब्रह्मोपासते'' ''आनन्दं ब्रह्मणो विद्वान्'' इति ब्रह्मशब्दः सकृदेव श्रुतः । तथाऽपि तन्मात्रेणैव तेषां ब्रह्मता । आनन्दमयविज्ञान-मययोस्त्वभ्यासोऽप्यस्तीति स सूत्रितः । अत एव भाष्ये ''तथाऽपि न त आनन्दमयशब्देनोच्यन्ते । किन्तु विष्णुरेव । ब्रह्मशब्दाभ्यासात्'' इत्युक्त्वा ''येऽन्नं ब्रह्मेत्यादिब्रह्मशब्दात्'' इत्येवोक्तम् ।

टीकायामपि ''आनन्दमये ब्रह्मशब्दाभ्यासात्'' इत्युक्त्वा ''अन्नमयादीन् प्रत्युदाहृतश्लोकेषु तद्विषयत्वेन ब्रह्मशब्दश्रवणात्'' इत्येवोक्तम् । सुधायां तु –

'येऽन्नं ब्रह्मेत्यादिरूपादभ्यासात्तैत्तिरीयके' इत्यनुव्याख्यानानुसारेण एक-विषयासकृदुक्तिलक्षणमुख्याभ्यासाभावेऽपि असकृदुक्तिमात्रमस्ति ।

तथा चान्नमयादिविषयत्वेन ब्रह्मशब्दस्य श्रुतत्वाभिप्रायोऽभ्यासशब्द'' इत्युक्तम् ।

**यद्वा – ब्रह्मशब्दवत् ''अन्योऽन्तर आत्मा'' ''एतमन्नमयमात्मानमुपसङ्क्रामति'' ''एतमन्नमयमात्मानमुपसङ्क्रम्य'' इत्यादौ ब्रह्मशब्दसमानार्थात्मशब्दसद्भावादभ्यासः ।**

ಅನುವಾದ - ಸೂತ್ರದಲ್ಲಿ 'ಅಭ್ಯಾಸಾತ್' ಎಂದು ಹೇತು ಹೇಳಿದ್ದಾರೆ. ಇದಕ್ಕೆ ಬ್ರಹ್ಮಶಬ್ದವು ಅನೇಕ ಬಾರಿ ಕೇಳಿಸುತ್ತಿರುವುದರಿಂದ ಎಂದರ್ಥ. ಆದರೆ ಆನಂದಮಯ ವಿಜ್ಞಾನಮಯರಲ್ಲಷ್ಟೇ ಅನೇಕ ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದೆ. ಉಳಿದ ಮೂವರಲ್ಲಿ ಕೇಳಿಸುತ್ತಿಲ್ಲ. ಅದು ಹೀಗೆ - 'ಆನಂದಮಯನ ಬಗ್ಗೆ ಉದಾಹರಿಸಿರುವ ಶ್ಲೋಕದಲ್ಲಿ 'ಅಸದ್‌ಬ್ರಹ್ಮೇತಿ ವೇದ ಚೇತ್ ಅಸ್ತಿ ಬ್ರಹ್ಮೇತಿ ಚೇದ್‌ವೇದ' ಎಂದು ಎರಡು ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದೆ. ಹಾಗೆಯೇ ವಿಜ್ಞಾನಮಯನಲ್ಲಿಯೂ 'ವಿಜ್ಞಾನಂ ದೇವಾಸ್ಸರ್ವೇ ಬ್ರಹ್ಮಜ್ಯೇಷ್ಠಮುಪಾಸತೇ, ವಿಜ್ಞಾನಂ ಬ್ರಹ್ಮ ಚೇದ್ ವೇದ' ಎಂದು ಎರಡು ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದೆ.

ಪ್ರಶ್ನೆ - 'ಅಸದ್‌ಬ್ರಹ್ಮೇತಿ' ಎಂಬ ಶ್ಲೋಕವು ಆನಂದಮಯನನ್ನು ಹೇಳುತ್ತಿಲ್ಲ. ಕೊನೆಯಲ್ಲಿ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂದು ಹೇಳಿದ್ದರಿಂದ ಪುಚ್ಛನನ್ನು ಹೇಳುತ್ತಿದೆಯಲ್ಲವೇ?

ಉತ್ತರ - ಅನ್ನಮಯಾದಿಗಳನ್ನು ಪರಿಚಯಿಸುವಾಗಲೂ ಪುಚ್ಛಶಬ್ದ ಕೇಳಿಸುತ್ತಿದೆ. ಆದ್ದರಿಂದ ಅನ್ನಮಯಾದಿಗಳ ಶ್ಲೋಕಗಳೂ ಪುಚ್ಛವಿಷಯಕವಾಗಬೇಕಾದೀತು. ಅನ್ನಮಯಾದಿಶ್ಲೋಕಗಳು ಪುಚ್ಛವಿಷಯಕ ಆಗದಿದ್ದರೆ ಪ್ರಾಯಪಾಠ ವಿರೋಧ ಬರಬಾರದೆಂದು ಆನಂದಮಯಶ್ಲೋಕವೂ ಪುಚ್ಛವಿಷಯಕವಾಗುವುದಿಲ್ಲ.

ಹೀಗೆ ಆನಂದಮಯ ಮತ್ತು ವಿಜ್ಞಾನಮಯರಲ್ಲಿ ಬ್ರಹ್ಮಶಬ್ದವು ಅನೇಕ ಬಾರಿ ಕೇಳಿಸುತ್ತಿದೆ. ಆದರೆ ಅನ್ನಮಯ, ಪ್ರಾಣಮಯ, ಮನೋಮಯರಲ್ಲಿ ಒಮ್ಮೆ ಮಾತ್ರ ಕೇಳಿಸುತ್ತಿದೆ. 'ಯೇನ್ನಂ ಬ್ರಹ್ಮೋಪಾಸತೇ' 'ಯೇ ಪ್ರಾಣಂ ಬ್ರಹ್ಮೋಪಾಸತೇ' 'ಆನಂದಂ ಬ್ರಹ್ಮಣೋ ವಿದ್ವಾನ್' ಎಂದು. ಆದ್ದರಿಂದ ಸೂತ್ರಕಾರರು ಬ್ರಹ್ಮಶಬ್ದದ ಅಭ್ಯಾಸವನ್ನು ಹೇತು ಮಾಡಿದ್ದು ತಪ್ಪಲ್ಲವೇ?

ಬ್ರಹ್ಮಶಬ್ದವಷ್ಟೇ ಹೇತು ಹೊರತು ಬ್ರಹ್ಮಶಬ್ದದ ಅಭ್ಯಾಸವಲ್ಲ. ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದವು ಕೇಳಿಸುತ್ತಿರುವುದರಿಂದ ಅನ್ನಮಯಾದಿಗಳನ್ನು ಬ್ರಹ್ಮರೆಂದು ಸಾಧಿಸುತ್ತಿದ್ದಾರೆ. ಆದರೆ ಆನಂದಮಯ ವಿಜ್ಞಾನಮಯರಲ್ಲಿ ಬ್ರಹ್ಮಶಬ್ದದ ಅಭ್ಯಾಸವೂ ಇರುವುದರಿಂದ ಇದು ಬಲಿಷ್ಠಹೇತುವೆಂದು 'ಅಭ್ಯಾಸಾತ್' ಎಂದು ಸೂತ್ರದಲ್ಲಿ ಹೇಳಿದ್ದಾರೆ. ಆದ್ದರಿಂದಲೇ ಭಾಷ್ಯದಲ್ಲಿ 'ತಥಾಪಿ ನ ತೇ ಆನಂದಮಯಶಬ್ದೇನ ಉಚ್ಯಂತೇ ಕಿಂತು ವಿಷ್ಣುರೇವ ಬ್ರಹ್ಮಶಬ್ದಾಭ್ಯಾಸಾತ್' ಎಂದು ಆನಂದಮಯನಲ್ಲಿ ಬ್ರಹ್ಮಶಬ್ದದ ಅಭ್ಯಾಸವನ್ನು ಹೇತು ಮಾಡಿದ್ದಾರೆ. ಮುಂದೆ ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದವನ್ನಷ್ಟೇ ಹೇತು ಮಾಡಿದ್ದಾರೆ. ಟೀಕೆಯಲ್ಲಿಯೂ ಆನಂದಮಯನಲ್ಲಿ 'ಬ್ರಹ್ಮಶಬ್ದಾಭ್ಯಾಸಾತ್'

ಎಂದು ಹೇಳಿ ಅನ್ನಮಯಾದಿಗಳನ್ನು ಪರಿಚಯಿಸುವ ಶ್ಲೋಕಗಳಲ್ಲಿ ಬ್ರಹ್ಮಶಬ್ದ ಕೇಳಿಸುತ್ತಿದೆ ಎಂದಷ್ಟೇ ಹೇಳಿದ್ದಾರೆ.

ಸುಧೆಯ ಸಮ್ಮತಿಯೂ ಇದೆ. 'ಬ್ರಹ್ಮೇತ್ಯಾದಿರೂಪಾದಭ್ಯಾಸಾತ್ತೈತ್ತಿರೀಯಕೇ' ಎಂಬ ಅನುವ್ಯಾಖ್ಯಾನವನ್ನು ವ್ಯಾಖ್ಯಾನಿಸುತ್ತಾ ಹೀಗೆ ಹೇಳಿದ್ದಾರೆ. ಒಬ್ಬನಲ್ಲೇ ಅನೇಕ ಬಾರಿ ಬ್ರಹ್ಮಶಬ್ದ ಕೇಳಿ ಬಂದರೆ ಅದು ಮುಖ್ಯವಾದ ಅಭ್ಯಾಸ. ಇದು ಆನಂದಮಯ ವಿಜ್ಞಾನಮಯರಲ್ಲಿ ಶ್ರುತವಾಗಿದೆ. ಆದರೆ ಅನ್ನಮಯಾದಿಗಳಲ್ಲಿ ಇದು ಕೇಳಿಸುತ್ತಿಲ್ಲ. ಎಲ್ಲರಲ್ಲೂ ಸೇರಿ ಅನೇಕ ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದೆ. ಆದ್ದರಿಂದ 'ಅಭ್ಯಾಸಾತ್ತೈತ್ತಿರೀಯಕೇ' ಎಂಬ ಆಚಾರ್ಯರ ಮಾತಿಗೆ ಒಬ್ಬರಲ್ಲೇ ಬ್ರಹ್ಮಶಬ್ದವು ಅನೇಕ ಬಾರಿ ಕೇಳಿಸುತ್ತಿದೆ ಎಂದರ್ಥವಲ್ಲ. ಎಲ್ಲರಲ್ಲಿಯೂ ಸೇರಿ ಅನೇಕ ಬಾರಿ ಬ್ರಹ್ಮಶಬ್ದವು ಕೇಳಿಸುತ್ತಿದೆ ಎಂದರ್ಥ. ಆದ್ದರಿಂದ ಸೂತ್ರದಲ್ಲಿರುವ ಅಭ್ಯಾಸಶಬ್ದಕ್ಕೆ ಐದು ಜನರಲ್ಲಿ ಒಟ್ಟು ಏಳು ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದೆ ಎಂದರ್ಥ.

ಅಥವಾ ಸೂತ್ರದಲ್ಲಿ ಬ್ರಹ್ಮಶಬ್ದದ ಅಭ್ಯಾಸವೆಂದು ಹೇಳಿಯೇ ಇಲ್ಲ. ಆತ್ಮಶಬ್ದದ ಅಭ್ಯಾಸವೆಂದು ಹೇಳಿದ್ದಾರೆಂದು ವ್ಯಾಖ್ಯಾನಿಸಬಹುದು. ಆತ್ಮಶಬ್ದವು ಅನ್ನಮಯಾದಿಗಳಲ್ಲಿಯೂ ಅನೇಕ ಬಾರಿ ಕೇಳಿಸುತ್ತಿದೆ. 'ಅನ್ಯೋಽಂತರ ಆತ್ಮಾ' 'ಏತಮನ್ನಮಯಮಾತ್ಮಾನಮುಪಸಂಕ್ರಾಮತಿ' 'ಏತಮನ್ನ-ಮಯಮಾತ್ಮಾನಮುಪಸಂಕ್ರಮ್ಯ' ಎಂದು ಬ್ರಹ್ಮಶಬ್ದಕ್ಕೆ ಸಮಾನ ಅರ್ಥವುಳ್ಳ ಆತ್ಮಶಬ್ದದ ಅಭ್ಯಾಸವು ಸ್ಪಷ್ಟವಾಗಿ ಕಾಣಿಸುತ್ತಿದೆ.

### ಕಠಿಣಪದಾರ್ಥ

ಶ್ರುತ್ಯಾ = ಉಪನಿಷತ್ತಿನಿಂದ, ತನ್ಮಾತ್ರೇಣ = ಬ್ರಹ್ಮಶಬ್ದದ ಇರುವಿಕೆಯಿಂದಷ್ಟೇ, ಅತ ಏವ = ಎಲ್ಲೆಡೆ ಐಕ್ಯರೂಪ್ಯ ಇಲ್ಲದಿರುವುದರಿಂದಲೇ, ತೇ = ಚತುರ್ಮುಖಾದಿಗಳು.

**प्रकाशः** – यद्येवं प्रतिज्ञाभागस्यान्नमयाद्युपलक्षकत्वं, तर्हि प्रकरणद्वये ब्रह्मशब्दाभ्याससत्त्वेपि प्रकरणत्रये तदभावात् सौत्रो हेतुर्भागासिद्ध इति शङ्को – **अत्रेति** ।। 'श्रुत्या' उपनिषदा । अद्वैत्युक्तमाशङ्कते – **न चेति** ।। ''ब्रह्म पुच्छं प्रतिष्ठा'' इति पुच्छत्वेन यद्ब्रह्मोक्तं, तत्रैव ''असद्ब्रह्म'' इति श्लोक उच्यत इति शङ्कार्थः ।। **आपातादिति** ।। अन्यथा प्रायपाठविरोधः स्यात्, तच्च परैर्नाङ्गीकृतमिति भावः ।। **तन्मात्रेणेति** ।। ब्रह्मशब्दमात्रेणेत्यर्थः । तर्हि 'ब्रह्मशब्दात्' इत्येव वाच्यमित्यत आह – **आनन्देति** ।। **अत एवेति** ।। सर्वत्रैकरूप्याभावादेवेत्यर्थः । 'ते' चतुर्मुखादयः । सुधायामैकरूप्यमेवोक्तमित्याह – **सुधायान्त्विति** ।। अभ्यासशब्दस्य मुख्यार्थमेवोपेत्य सर्वत्रैकरूप्यं समर्थयितुं 'अभ्यासात्'

इत्यस्यात्मशब्दाभ्यासादित्यभिप्रेत्य ब्रह्मवल्ल्यां भृगुवल्ल्यां चान्नमयादिसमानाधिकरणानात्मशब्दानाह – **यद्वेति** ।। 'ब्रह्मशब्दवदात्मशब्दसद्भावात्' इत्यन्वयः ।

यद्यपि "तस्माद्वा एतस्मादन्नरसमयात् अन्योऽन्तर आत्मा प्राणमयः" इति, "अन्योऽन्तर आत्मा मनोमयः" इत्येवंरूपेण प्राणमयादिप्रकरणोपक्रमेषु, तथा "एतं प्राणमयमात्मानमुपसङ्क्रामति" इत्यादिरूपेण ब्रह्मवल्ल्युपसंहारे, तथा "एतं प्राणमयमात्मानमुपसङ्क्रम्य" इति भृगुवल्ल्युपसंहारे च प्राणमयादिषु त्रिरात्मशब्दश्रवणमस्ति, अन्नमये तूपक्रमे आत्मपदाभावादुपसंहारयोरेव द्विरात्मपदश्रवणमिति द्वैरूप्यम् ।

तथाऽप्यसकृदुक्तिरूपाभ्यासस्य सत्त्वादेवमुक्तम् । ब्रह्मशब्दस्येवात्मशब्दस्यापि विष्णुत्वसाधकत्वमस्तीति ज्ञापयितुं 'ब्रह्मशब्दसमानार्थः' इत्युक्तम् । तथात्वं च भाष्ये स्पष्टमिति भावः ।

**गुरुराजीयम्** – नन्वानन्दमयादीनां ब्रह्मत्वे ब्रह्मशब्दाभ्यासस्य हेतूकरणमयुक्तम् । आनन्दमयादिशब्दोपेतवाक्ये ब्रह्मशब्दाभ्यासाभावेनासिद्धत्वादित्यत आह – **अत्रेति** ।। तदीय-पुच्छविषयत्वापातादिति ।। **न चेष्टापत्तिः** ।। तथा सत्यविशेषादन्नमनोमयपुच्छस्यापि ब्रह्मत्वं स्यात् । अथर्वाङ्गिरसः पुच्छं प्रतिष्ठेत्युक्तमनोमयपुच्छस्य ब्रह्मत्वस्य त्वयानङ्गीकारादिति भावः ।। **अन्नमयेति** ।। तथा च ब्रह्मत्वसाधने हेतूकृतस्याभ्यासस्यांशेऽसिद्धिरिति भावः ।। **स सूत्रित इति** ।। आनन्दमयविज्ञानमयगतब्रह्मशब्दाभ्यासेन ब्रह्मत्वे तात्पर्ये निश्चिते प्रायपाठेनान्नमयादिष्वपि श्रुतब्रह्मशब्दस्य ब्रह्मपरत्वनिश्चये तावन्मात्रेणान्नमयादीनां ब्रह्मसिद्धिरित्याशयः । अनेन सौत्रोऽभ्यास उपलक्षणमित्युक्तं भवति । नन्वानन्दमये ब्रह्मशब्दाभ्यासस्यान्नमयादौ ब्रह्मशब्दश्रवणमात्रस्यैव ब्रह्मत्वसाधकत्वमिति टीका नोपपद्यते । तथा सति सुधाविरोधात् । सुधायामन्नमयादीनां पञ्चानामपि ब्रह्मत्वेऽमुख्याभ्यासस्य साधकत्वेनोक्तत्वात् । तथा च सुधाविरोध इत्यत आह – **सुधायां त्विति** ।।

तथा च श्रुतोपलक्षितसाधारणामुख्याभ्यासपरत्वान्नासाधारणमुख्याभ्यासस्य काचित्कोक्तिविरोध इति भावः ।

नन्वसकृदुक्तिमात्रमिति कथम् । एकविषयताप्यस्तीत्यन्यत्रोक्तत्वादिति चेत्तस्यायमभिप्रायः । क्वचिदेकविषयताप्यस्तीति नाभ्यासस्य हेतुत्वम् । किन्तु ब्रह्मपदश्रवणमेव । अभ्यासस्तु क्वचित्तिष्ठतीति कृत्वोक्तेः । तथा च टीकासुधयोः फलत एकार्थत्वान्न विरोध इति भावः । अस्मिन्पक्षे सूत्रोक्तस्याभ्यासादिति हेतोः गौणता समायाति । इममेवास्वारस्यं मनसि निधायाह – यद्वा ब्रह्मशब्दवदिति ॥

यद्यपि स वा एष पुरुषोऽन्नरसमय इति परामर्शानुरोधात्तस्माद्वा एतस्मादात्मन इत्यन्नमयघटकात्मशब्दमुपादाय सर्वत्रात्मशब्दाभ्यासो वक्तुं शक्यः । तथाप्यभ्यासे त्रितयोक्तेरसकृदुक्त्यन्तरत्वेनातिशयसूचनार्थमुत्तरानुवाकस्थात्मशब्द उपात्तः । इदं चानुवाकद्वयस्य वक्ष्यमाणरीत्यैकस्थानत्वविवक्षया । अत्र ब्रह्मशब्दसमानार्थेत्युक्त्या ब्रह्मात्मशब्दयोरेकविषया सकृदुक्तिरूपत्वादभ्यासत्वे सुतरामतिशय इति सूचितम् । यद्यपि गुणविशेषवाचिनां सर्वेषामपि शब्दानामपर्यायत्वादपर्यायशब्दानामभ्यासत्वेऽतिप्रसङ्गः । तथाऽपि लोकेऽभिधानसिद्धपर्यायत्वमभ्युपेत्येदमुक्तम् ।

यद्वा अन्योन्तर आत्मा विज्ञानमयः । एतमानन्दमयमात्मानमित्यात्मशब्दस्य विभक्तिभेदेनार्थविशेषोपस्थापकत्वेपि प्रातिपदिकमात्रविवक्षया यथाभ्यासत्वं तथा यच्चाप्नोति यदादत्ते यच्चात्तीत्याद्यर्थभेदेनापर्यायत्वेपि आत्मब्रह्मादयः शब्दा इत्यादिभाष्योदाहृतस्मृत्यनुसारेण स्वशब्दपर्यायात्मशब्दादिति वक्ष्यमाणन्यायेनावान्तरभेदविवक्षया शब्दान्तरव्यावृत्तानतिभिन्नार्थत्वविवक्षया पर्यायत्वेनाभ्यासोपपत्तेः ।

ಪ್ರಕಾಶಿಕಾ : - 'ಆನಂದಮಯಃ ಬ್ರಹ್ಮೈವ ಬ್ರಹ್ಮಶಬ್ದಾಭ್ಯಾಸಾತ್' ಎಂದು ಸೂತ್ರದಲ್ಲಿ ಸಾಧನೆ ಮಾಡಿದರು. ಇಲ್ಲಿರುವ ಪ್ರತಿಜ್ಞಾಭಾಗದಿಂದ ಅನ್ನಮಯಾದಿಗಳನ್ನೂ ಉಪಲಕ್ಷಣಯಾ ತೆಗೆದುಕೊಂಡರೆ ಭಾಗಾಸಿದ್ಧಿದೋಷ ಬರುತ್ತದೆ. ಆನಂದಮಯವಿಜ್ಞಾನಮಯಪ್ರಕರಣದಲ್ಲಿ ಬ್ರಹ್ಮಶಬ್ದಾಭ್ಯಾಸವೆಂಬ ಹೇತುವಿದ್ದರೂ ಅನ್ನಮಯಾದಿ ಮೂರು ಪ್ರಕರಣಗಳಲ್ಲಿ ಹೇತುವಿಲ್ಲವೆಂದು ಭಾಗಾಸಿದ್ಧಿ ಬರುತ್ತದೆಂದು 'ಅತ್ರ' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ.

ಅಭ್ಯಾಸಶಬ್ದಕ್ಕೆ ಮುಖ್ಯಾರ್ಥವನ್ನೇ ಹೇಳಬೇಕು. ಮತ್ತು ಎಲ್ಲೆಡೆ ಐಕ್ಯರೂಪ್ಯವನ್ನೇ ಹೇಳಬೇಕೆಂದರೆ 'ಆತ್ಮಶಬ್ದಾಭ್ಯಾಸಾತ್' ಎಂದು ಅರ್ಥೈಸಬೇಕೆಂದು 'ಯದ್ವಾ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ವಸ್ತುತಸ್ತು ಆತ್ಮಶಬ್ದವು ಪ್ರಾಣಮಯಾದಿಗಳಲ್ಲಿ ಮೂರು ಬಾರಿ ಕೇಳಿಸುತ್ತಿದೆ. 'ತಸ್ಮಾದ್ವಾ ಏತಸ್ಮಾದನ್ನರಸಮಯಾತ್ ಅನ್ಯೋಽಂತರ ಆತ್ಮಾ ಪ್ರಾಣಮಯಃ' ಎಂದು 'ಅನ್ಯೋಽಂತರ ಆತ್ಮಾ

ಮನೋಮಯಃ' ಎಂಬುದಾಗಿ ಪ್ರಾಣಮಯಾದಿಪ್ರಕರಣಗಳ ಉಪಕ್ರಮಗಳಲ್ಲಿ ಆತ್ಮಶಬ್ದವು ಎರಡು ಬಾರಿ ಕೇಳಿಸುತ್ತಿದೆ. ಮತ್ತು ಬ್ರಹ್ಮವಲ್ಲಿಯ ಉಪಸಂಹಾರದಲ್ಲಿಯೂ 'ಏತಂ ಪ್ರಾಣಮಯಮಾತ್ಮಾನಮುಪ-ಸಂಕ್ರಮ್ಯ' ಎಂದು ಆತ್ಮಶಬ್ದ ಕೇಳಿಸುತ್ತಿದೆ. ಹೀಗೆ ಒಟ್ಟು ಮೂರು ಬಾರಿ ಆತ್ಮಶಬ್ದ ಶ್ರುತವಾಗಿದೆ. ಆದರೆ ಅನ್ನಮಯಪ್ರಕರಣದಲ್ಲಿ ಮೂರು ಬಾರಿ ಕೇಳಿಸುತ್ತಿಲ್ಲ. ಅನ್ನಮಯನ ಉಪಕ್ರಮದಲ್ಲಿ ಆತ್ಮಶಬ್ದ ಕೇಳಿಸುತ್ತಲೇ ಇಲ್ಲ. ಆದರೆ ಉಪಸಂಹಾರದಲ್ಲಿ ಒಟ್ಟಿಗೆ ಎರಡು ಬಾರಿ ಕೇಳಿಸುತ್ತಿದೆ. ಅಂತೂ ಮೂರು ಬಾರಿ ಕೇಳಿಸದೇ ಇರುವುದರಿಂದ ಗ್ರಂಥಕಾರರು 'ಅನ್ಯೋಽಂತರ' ಇತ್ಯಾದಿಯಾಗಿ ಹೇಳಿದ್ದು ಹೇಗೆ ಸರಿ? ಎಂಬ ಪ್ರಶ್ನೆ ಬರುತ್ತದೆ. ಆದರೆ ಎಲ್ಲಿಯೂ ಒಮ್ಮೆ ಮಾತ್ರ ಬ್ರಹ್ಮಶಬ್ದ ಕೇಳಿಸುತ್ತಿಲ್ಲ. ಎರಡು ಬಾರಿ ಹೇಳಿದರೂ ಅಭ್ಯಾಸ ಬಂದೇ ಬರುತ್ತದೆ. ಆದ್ದರಿಂದ ಅನ್ನಮಯಪ್ರಕರಣದಲ್ಲಿಯೂ ಆತ್ಮಶಬ್ದದ ಅಭ್ಯಾಸವನ್ನು ಹೇಳಬಹುದು.

ಆತ್ಮಶಬ್ದವು ವಿಷ್ಣುತ್ವಸಾಧಕ ಹೇಗೆ ಆಗುತ್ತದೆ? ಎಂಬ ಪ್ರಶ್ನೆ ಬಂದರೆ ಗ್ರಂಥಕಾರರು ಬ್ರಹ್ಮಶಬ್ದದ ಸಮಾನಾರ್ಥವಾದ್ದರಿಂದ ಎಂದು ಉತ್ತರಿಸಿದ್ದಾರೆ. ಹೀಗೆ ಭಾಷ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.



## ಸಾರ

'ಆನಂದಮಯೋಽಭ್ಯಾಸಾತ್' ಎಂಬ ಸೂತ್ರದಲ್ಲಿ 'ಅಭ್ಯಾಸಾತ್' ಎಂಬ ಹೇತುವಿಗೆ ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದ ಎಂದು ಪ್ರಸಿದ್ಧವಾದ ಅರ್ಥ. ಆದರೆ ಈ ಅರ್ಥದಲ್ಲಿರುವ ಕೆಲವು ತೊಡಕುಗಳು ಮೇಲ್ನೋಟಕ್ಕೆ ಕಾಣಿಸುತ್ತದೆ. ಅನ್ನಮಯ ಪ್ರಾಣಮಯ ಪ್ರತಿಯೊಂದು ಪ್ರಕರಣಗಳಲ್ಲಿಯೂ ಅನೇಕ ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದ್ದಲ್ಲಿ ಬ್ರಹ್ಮಶಬ್ದದ ಅಭ್ಯಾಸವನ್ನು ಹೇಳಬಹುದಿತ್ತು. ಆದರೆ ಆನಂದಮಯ ವಿಜ್ಞಾನಮಯ ಪ್ರಕರಣಗಳಲ್ಲಷ್ಟೇ ಬ್ರಹ್ಮಶಬ್ದವು ಅನೇಕ ಬಾರಿ ಕೇಳಿಸುತ್ತಿದೆ. ಈ ಪ್ರಶ್ನೆಗೆ ಮೂರು ಬಗೆಯಲ್ಲಿ ಗ್ರಂಥಕಾರರು ಉತ್ತರಿಸಿದ್ದಾರೆ.

೧) ಆನಂದಮಯ ವಿಜ್ಞಾನಮಯರಲ್ಲಿ ಬ್ರಹ್ಮತ್ವವನ್ನು ಸಾಧಿಸಲು ಬ್ರಹ್ಮಶಬ್ದದ ಅಭ್ಯಾಸವನ್ನು ಹೇತು ಮಾಡಿದರು. ಅದೇ ಬ್ರಹ್ಮಶಬ್ದ ಅನ್ನಮಯಾದಿಗಳಲ್ಲಿಯೂ ಶ್ರುತವಾದ್ದರಿಂದ ಪ್ರಾಯಪಾಠದ ವಿರೋಧ ಬರಬಾರದೆಂದು ಅನ್ನಮಯಾದಿಗಳಲ್ಲಿಯೂ ಶ್ರುತವಾದ್ದರಿಂದ ಪ್ರಾಯಪಾಠದ ವಿರೋಧ ಬರಬಾರದೆಂದು ಅನ್ನಮಯಾದಿಗಳೂ ಬ್ರಹ್ಮರಾಗುತ್ತಾರೆ. ಆದ್ದರಿಂದ ಸೂತ್ರದಲ್ಲಿ ಹೇಳಿದ ಬ್ರಹ್ಮಶಬ್ದಾಭ್ಯಾಸಾತ್ ಎಂಬುದು ಉಪಲಕ್ಷಣ; ಜೊತೆಗೆ ಬ್ರಹ್ಮಶಬ್ದಾತ್ ಎಂಬುದೂ ಹೇತುವಾಗಿದೆ. ಬ್ರಹ್ಮಶಬ್ದಾಭ್ಯಾಸವೆಂಬ ಹೇತು ಆನಂದಮಯ ವಿಜ್ಞಾನಮಯರಲ್ಲಿ ಇದೆ. ಬ್ರಹ್ಮಶಬ್ದವೆಂಬ ಹೇತು ಉಳಿದ ಮೂವರಲ್ಲಿ ಇದೆ.

೨) ಅಥವಾ ಬ್ರಹ್ಮಶಬ್ದಾಭ್ಯಾಸವೆಂಬುದು ಒಂದೇ ಹೇತು. ಅನ್ನಮಯಾದಿ ಒಂದೊಂದು ಪ್ರಕರಣದಲ್ಲಿಯೂ ಬ್ರಹ್ಮಶಬ್ದ ಅನೇಕ ಬಾರಿ ಕೇಳಿಸಬೇಕೆಂದು ಇದರ ಅರ್ಥವಲ್ಲ. ಒಟ್ಟು ಐದು ಪ್ರಕರಣದಲ್ಲಿ ಅನೇಕ ಬಾರಿ ಕೇಳಿಸಬೇಕೆಂದು ಅರ್ಥ. ಐದು ಪ್ರಕರಣಗಳಲ್ಲಿ ಒಟ್ಟು ಏಳು ಬಾರಿ ಬ್ರಹ್ಮಶಬ್ದ ಇರುವುದರಿಂದ ಬ್ರಹ್ಮಶಬ್ದಾಭ್ಯಾಸವೆಂಬ ಹೇತು ಎಲ್ಲರಲ್ಲಿಯೂ ಬರುತ್ತದೆ.

೩) ಅಥವಾ ಪ್ರತಿಯೊಂದು ಪ್ರಕರಣಗಳಲ್ಲಿಯೂ ಅನೇಕ ಬಾರಿ ಕೇಳಿಸಬೇಕೆಂಬ ಮುಖ್ಯಾರ್ಥವನ್ನೇ ಸ್ವೀಕರಿಸಬೇಕೆಂದು ಆಗ್ರಹಿಸಿದರೆ ಸೂತ್ರದಲ್ಲಿರುವ 'ಅಭ್ಯಾಸಾತ್' ಎಂಬುದಕ್ಕೆ ಆತ್ಮಶಬ್ದದ ಅಭ್ಯಾಸವಿರು-

ವುದರಿಂದ ಎಂದು ಅರ್ಥ. ಆತ್ಮಶಬ್ದವಂತೂ ಪ್ರತಿಯೊಂದು ಪ್ರಕರಣಗಳ ಉಪಕ್ರಮ ಉಪಸಂಹಾರಗಳಲ್ಲಿ ಅನೇಕ ಬಾರಿ ಕೇಳಿಸುತ್ತಿದೆ.

• • • • •

## ಆತ್ಮಾ ಬ್ರಹ್ಮ ಎರಡು ಶಬ್ದಗಳ ಅಭ್ಯಾಸವೂ ಸಮಂಜಸ

**तात्पर्यचन्द्रिका –**

**भाष्ये तु ब्रह्मशब्दपदेन ब्रह्मवाचकः शब्दो विवक्षितः । अत एव भाष्ये "परमात्मा" इति आत्मपदोपेतस्मृत्युपादानम् ।**

**यद्वा – "अन्नं ब्रह्मेति व्यजानात्" इत्युत्तरानुवाकेऽप्यन्नमयादौ ब्रह्मशब्द-सद्भावादभ्यासः ।**

ಅನುವಾದ - ಸೂತ್ರದಲ್ಲಿರುವ 'ಅಭ್ಯಾಸಾತ್' ಎಂಬ ಹೇತುವಿಗೆ ಆತ್ಮಶಬ್ದಾಭ್ಯಾಸಾತ್ ಎಂಬ ವ್ಯಾಖ್ಯಾನವು ಭಾಷ್ಯಕಾರರಿಗೆ ಸಮ್ಮತವಲ್ಲವೆಂದು ತಿಳಿಯಬಾರದು. ಭಾಷ್ಯದಲ್ಲಿರುವ 'ಬ್ರಹ್ಮಶಬ್ದಾಭ್ಯಾಸಾತ್' ಎಂಬ ಮಾತಿಗೆ ಬ್ರಹ್ಮವಾಚಕವಾದ ಶಬ್ದದ ಅಭ್ಯಾಸವಿರುವುದರಿಂದ ಎಂದರ್ಥ. ಆತ್ಮಶಬ್ದವು ಬ್ರಹ್ಮವಾಚಕವಾದ್ದರಿಂದ ದೋಷವಿಲ್ಲ. ಈ ಅರ್ಥ ಭಾಷ್ಯಕಾರರಿಗೆ ಸಮ್ಮತವಾದ್ದರಿಂದಲೇ 'ಬ್ರಹ್ಮೇತಿ ಪರಮಾತ್ಮೇತಿ' ಎಂಬ ಆತ್ಮಪದದಿಂದ ಕೂಡಿದ ಸ್ಮೃತಿಯನ್ನು ಉದಾಹರಿಸಿದ್ದಾರೆ.

ಅಥವಾ ಬ್ರಹ್ಮಶಬ್ದಾಭ್ಯಾಸವೆಂಬ ಹೇತುವಿನ ಮುಖ್ಯಾರ್ಥವನ್ನು ಅನ್ನಮಯಾದಿಗಳಲ್ಲಿಯೂ ಹೇಳಬಹುದು. ಅನ್ನಮಯಾದಿಗಳಲ್ಲಿಯೂ ಬ್ರಹ್ಮಶಬ್ದವು ಅನೇಕ ಬಾರಿ ಕೇಳಿಸುತ್ತದೆ. ಬ್ರಹ್ಮವಲ್ಲಿಯ ಜೊತೆಗೆ 'ಅನ್ನಂ ಬ್ರಹ್ಮೇತಿವ್ಯಜಾನಾತ್' ಎಂಬ ಭೃಗುವಲ್ಲಿಯನ್ನೂ ಇಟ್ಟುಕೊಳ್ಳಬೇಕು. ಎರಡೂ ವಲ್ಲಿಗಳು ಒಂದೇ ವಿಷಯವನ್ನು ಪ್ರತಿಪಾದಿಸಲು ಹೊರಟಿರುವುದರಿಂದ ಬ್ರಹ್ಮಶಬ್ದಾಭ್ಯಾಸವು ಸುಸಂಗತವಾಗುತ್ತದೆ.

**प्रकाशः** – भाष्यविरोधं निराह – **भाष्ये त्विति** ।। **स्मृतीति** ।। 'ब्रह्मेति परमात्मेति भगवानिति शब्द्यते ।' इति स्मृत्युपादानमित्यर्थः ।

नन्वेवं "येऽन्नं ब्रह्मोपासते इत्यादिब्रह्मशब्दात्" इति भाष्यमसङ्गतं, किन्तु 'अन्योन्तर आत्मा इत्यादि' इत्येवोच्येतेति चेन्न, आदिपदेनास्यापि सङ्ग्रहात्, तदर्थापरित्यागेनास्यार्थस्योक्तत्वात् । अत एव 'ब्रह्मशब्दवत्' इत्युक्तम् ।

नन्वानन्दमयादेश्चतुर्मुखादिगौणात्मत्वमुपेत्य, तत्र श्रुतात्मशब्दोऽपि तस्यैवेति

''यस्यानुवित्तः प्रतिबुद्ध आत्मा'' इत्यादावत्मपदश्रवणादीक्षणीयो न गौण आत्मेति निरासो न युक्त इति आत्मशब्दस्य पूर्वपक्ष आक्षेपादाक्षिप्तेन कथं सिद्धान्त-निर्णयः । न चाभ्यासेन निर्णयः, गौणात्मन्येवायमात्मशब्द इति वदता तदभ्यासोऽपि गौणात्मन्येव, न तु परमात्मसाधक इति वक्तुं शक्यत्वात् । अन्यथा ''अदृश्यत्वमुखेनाऽनाक्षेपेऽदृश्यत्वेन विष्णुलिङ्गेन विष्णुरेवान्तस्थ इति शङ्का स्यात्'' इत्यादि तत्र तत्राग्रेतनचन्द्रिकावाक्यविरोधापातात् । तेनाक्षिप्तस्य सिद्धान्ता-साधकत्वावगतेः । तस्मादन्यस्मादेव साधकादानन्दमयादेर्ब्रह्मत्वं प्रसाध्य, तत्रत्यात्मशब्दस्य परमात्मशब्दत्वं समर्थ्य प्राक्तनाक्षेपोऽपि समाधेय इति चेन्न, भाष्योक्तब्रह्मशब्दाभ्यासस्यैव साधकत्वमभिप्रेत्यात्मशब्दमुखाक्षेपस्य दर्शितत्वात् । आत्मशब्दस्य साधकत्वे तु तन्निष्ठसूत्रादिकमाक्षेप्यम् ।

यद्वा – आत्मशब्दस्य परमात्मनि मुख्यत्वात् मुख्यार्थत्यागेनामुख्यार्थग्रहणे बाधकाभावात् मयट्प्रत्ययादेः प्राचुर्याद्यर्थत्वेन बाधकानां निरसिष्यमाणत्वादित्या-त्मशब्दस्य भगवत्साधकत्वस्य प्रसाध्यत्वाभिप्रायेण तस्य साधकत्वोक्तिसम्भवाच्च ।

अत एव भाष्ये आत्मशब्दस्य भगवच्छब्दत्वं तत्र तत्र साध्यते, अत्राप्यग्रे ''न च ब्रह्मशब्दः'' इत्यादिना तत्साधनम् ।

अत एव ''कम्पनात्'' इत्यत्र ''य एतद्विदुः'' इत्याक्षिप्तमपि लिङ्गं, तत्र टीकायां – ''नन्वेवं सावकाशत्वे श्रुतिलिङ्गयोः ''य एतद्विदुः'' इत्युक्तलिङ्गं विहाय किं लिङ्गान्तरग्रहणेन । मैवं, तदविहायैव लिङ्गान्तरस्याप्युक्तत्वात् । एतदन्यत्राप्यनुसन्धेयम्'' इति साधकमुक्तम् ।

अत एव ''अन्तर उपपत्तेः'' इत्यादावाक्षिप्तस्यामृतत्वादेः सिद्धान्ते हेतूकरणमित्याद्यूह्यम् । ''न चान्नमयादीनामब्रह्मत्वे किञ्चिन्मानं, ''येऽन्नं ब्रह्मोपासते, ये प्राणं ब्रह्मोपासते, आनन्दं ब्रह्मणो विद्वान्, विज्ञानं ब्रह्म चेद्वेद, अस्ति ब्रह्मेति चेद्वेद, अधीहि भगवो ब्रह्मेति, तस्मा एतत्प्रोवाच, अन्नं प्राणं चक्षुः श्रोत्रं'' इत्यादिना ब्रह्मशब्देनोक्तत्वाच्च'' इति तैत्तिरीयभाष्यपर्यालोचनयाऽनुवाक-द्वयाभिप्रायेणान्नमयादिषु ब्रह्मशब्दस्य मुख्य एवाभ्यासो लभ्यत इत्याह – यद्वेति ॥

ननूत्तरानुवाके अन्नप्राणशब्दा एव श्रुताः नान्नमयादय इति, कथमन्नमयादिषु स्थानद्वयेनापि तदभ्यास इति चेन्न, तदुपसंहारे "अन्नमयमुपसंक्रम्य" इत्यादौ मयटः श्रवणेन पूर्वत्रान्नादिशब्देऽपि तस्यावश्यकत्वात् । अन्यथा अन्नमयादीन् प्रत्युदाहृतश्लोकेषु मयटोऽभावेनान्यत्वप्रसङ्गात्, श्लोकानामुक्तार्थासाङ्गत्यप्रसङ्गात् । भृगुवल्ल्याः ब्रह्मवल्ल्युक्तार्थे समाख्यारूपत्वस्याग्रे साधयिष्यमाणत्वाच्चान्नादेरन्नमयादेरेकत्वमित्यभिप्रायात् ।

गुरुराजीयम् – न चैवं भाष्यटीकयोर्येऽन्नं ब्रह्मोपासते ये प्राणं ब्रह्मोपासते इति वाक्योदाहरणमयुक्तम् । तत्रात्मशब्दाभावादिति वाच्यम् । तद्वाक्यस्य प्रतीकग्रहणरूपत्वेनोपपत्तेः । अस्मिन्पक्षे ब्रह्मशब्दाभ्यासादिति भाष्यं ब्रह्मवाचकात्मशब्दाभ्यासादिति गौणं व्याख्येयम् । तथा तट्टीका गौणी व्याख्येया । एवं च भाष्यटीकयोर्गौणत्वं भवतीत्यतस्तद्भयात्पक्षान्तरमाह – यद्वेति ॥

अत्राप्यनुवाकद्वयस्थब्रह्मशब्दस्यान्नं ब्रह्मेत्यन्नशब्दोपपदस्योपादानादभ्यासत्वम् । अनेन 'येन्नं ब्रह्मेत्यादिरूपादभ्यासात्तैत्तिरीयके' इत्याद्यनुव्याख्यानमपि प्रकारान्तरेण व्याख्यातं भवति । एवमुत्तरानुवाकेप्येकैकत्रानेकशो ब्रह्मशब्दश्रवणादभ्यासत्वं ज्ञेयम् । यद्यपि सर्जकत्वादीनामत्रोत्तरत्र चानेकेषां लिङ्गानामभ्यासोस्ति तथाऽपि लिङ्गात् श्रुतेर्बलवत्त्वात् श्रुत्या पूर्वपक्षे तदभ्यास एवोक्तः ।

यद्वा शब्दमात्रस्यान्यत्रापि सम्भवाशङ्कायां तदभ्यासो हेतुत्वेनोक्तः । लक्षणस्यान्यत्रासम्भावितत्वात्सन्नप्यभ्यासो न विवक्षितः । अथवा मुख्योक्त्याऽन्यदप्यूह्यमिति लिङ्गाभ्यासो नोक्तः ।

ವಿವರಣೆ - ಆಕ್ಷೇಪ - ಭಾಷ್ಯದಲ್ಲಿ 'ಬ್ರಹ್ಮಶಬ್ದಾಭ್ಯಾಸಾತ್' ಎಂದು ಹೇಳಿದ್ದಾರೆ. ಇದಕ್ಕೆ ಬ್ರಹ್ಮವಾಚಕವಾದ ಶಬ್ದದ ಅಭ್ಯಾಸವಿರುವುದರಿಂದ ಎಂದು ಅರ್ಥೈಸಿದರೆ ಭಾಷ್ಯದ ಮಾತು ಅಸಂಗತವಾಗುತ್ತದೆ. ಭಾಷ್ಯದಲ್ಲಿ 'ಯೇನ್ನಂ ಬ್ರಹ್ಮೋಪಾಸತೇ ಇತ್ಯಾದಿ ಬ್ರಹ್ಮಶಬ್ದಾತ್' ಎಂದು ಹೇಳಿದ್ದಾರೆ. ಇಲ್ಲಿ ಬ್ರಹ್ಮಶಬ್ದವಷ್ಟೇ ಕೇಳಿಸುತ್ತಿದೆ. ಆತ್ಮಶಬ್ದ ಕೇಳಿಸುತ್ತಿಲ್ಲ. ನಿಮ್ಮ ಪ್ರಕಾರ ಭಾಷ್ಯದಲ್ಲಿ 'ಅನ್ಯೋಂತರ ಆತ್ಮಾ ಇತ್ಯಾದಿ' ಎಂದು ಹೇಳಬೇಕಾಗಿತ್ತಲ್ಲವೇ?

ಸಮಾಧಾನ - ಭಾಷ್ಯದಲ್ಲಿರುವ ಆದಿಪದದಿಂದ 'ಅನ್ಯೋಂತರ ಆತ್ಮಾ' ಎಂಬುದನ್ನೂ ಸಂಗ್ರಹಿಸಿದ್ದಾರೆ. ಈಗ ಬ್ರಹ್ಮವಾಚಕವಾದ ಶಬ್ದವಿರುವುದರಿಂದ ಎಂದು ಅರ್ಥವಾಗುತ್ತದೆ. 'ಬ್ರಹ್ಮಶಬ್ದಾತ್' ಎಂಬ ಭಾಷ್ಯಕ್ಕೆ ಬ್ರಹ್ಮಶಬ್ದವಿರುವುದರಿಂದ ಎಂಬ ಅರ್ಥದ ಜೊತೆಗೆ ಬ್ರಹ್ಮವಾಚಕವಾದ ಆತ್ಮಶಬ್ದವಿರುವುದರಿಂದ

ಎಂಬರ್ಥವನ್ನು ವಿವಕ್ಷಿಸಿದ್ದರಿಂದ 'ಯೇನ್ನಂ ಬ್ರಹ್ಮೋಪಾಸತೇ' ಎಂಬ ಉದಾಹರಣೆಯೂ ಅರ್ಥವತ್ತಾಗುತ್ತದೆ. ಆದ್ದರಿಂದಲೇ ಹಿಂದಿನ ಮೂಲದಲ್ಲಿ ಗ್ರಂಥಕಾರರು 'ಬ್ರಹ್ಮಶಬ್ದವತ್ ಆತ್ಮಶಬ್ದಸದ್ಭಾವಾತ್' ಎಂದು ಬ್ರಹ್ಮಶಬ್ದವನ್ನು ದೃಷ್ಟಾಂತವನ್ನಾಗಿ ಹೇಳಿದ್ದಾರೆ. ಬ್ರಹ್ಮಶಬ್ದವನ್ನು ದೃಷ್ಟಾಂತವನ್ನಾಗಿ ಹೇಳಿದ್ದರಿಂದ ಬ್ರಹ್ಮಶಬ್ದವೆಂಬ ಅರ್ಥವೂ ವಿವಕ್ಷಿತವೆಂದು ತಿಳಿಯುತ್ತದೆ.

ಆಕ್ಷೇಪ - ಆತ್ಮಶಬ್ದಶ್ರವಣವು ಸಿದ್ಧಾಂತಹೇತು ಆಗುವುದಿಲ್ಲ. ಆನಂದಮಯಾದಿ ಶಬ್ದಗಳಿಂದ ಪ್ರತಿಪಾದ್ಯರಾದವರು ಚತುರ್ಮುಖಾದಿ ಗೌಣಾತ್ಮರಾಗುತ್ತಾರೆ. ಆನಂದಮಯಾದಿ ಪ್ರಕರಣಗಳಲ್ಲಿ ಶ್ರುತವಾದ ಆತ್ಮಶಬ್ದವೂ ಸಹ ಚತುರ್ಮುಖಾದಿಗಳನ್ನೇ ಹೇಳುತ್ತದೆಂದು ಈ ಅಧಿಕರಣದ ಪೂರ್ವಪಕ್ಷ. 'ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾ' ಎಂಬಲ್ಲಿ ಆತ್ಮಶಬ್ದ ಕೇಳಿಸುತ್ತಿರುವುದರಿಂದ ಈಕ್ಷಣೀಯನಾದವನು ಗೌಣಾತ್ಮನಲ್ಲವೆಂದು ಹಿಂದಿನ ಅಧಿಕರಣದ ಸಿದ್ಧಾಂತವೂ ಸರಿಯಲ್ಲವೆಂದು ಈಗ ಆಕ್ಷೇಪಿಸಲಾಗಿದೆ. ಹೀಗೆ ಆಕ್ಷಿಪ್ತವಾದ ಆತ್ಮಶಬ್ದದಿಂದ ಸಿದ್ಧಾಂತ ಮಾಡುವುದು ತಪ್ಪಲ್ಲವೇ? ಆತ್ಮಶಬ್ದದ ಅಭ್ಯಾಸವಿರುವುದರಿಂದ ವಿಷ್ಣುವೇ ಆತ್ಮಶಬ್ದವಾಚ್ಯನೆಂದು ನಿರ್ಣಯಿಸುತ್ತೇವೆಂದೂ ಹೇಳಲಾಗದು. ಆತ್ಮಶಬ್ದವು ಗೌಣಾತ್ಮನಿಷ್ಠವೇ ಆಗಿದೆಯೆಂದು ಹೇಳುವ ಪೂರ್ವಪಕ್ಷಿಯು ಅಭ್ಯಾಸವನ್ನೂ ಗೌಣಾತ್ಮನಲ್ಲಿಯೇ ಹೇಳುತ್ತಾನೆ. ಆದ್ದರಿಂದ ಅಭ್ಯಾಸವೂ ಪರಮಾತ್ಮಸಾಧಕವಾಗುವುದಿಲ್ಲ.

ಆಕ್ಷಿಪ್ತವಾದ ಹೇತು ಸಿದ್ಧಾಂತಸಾಧಕವಾಗುವುದಿಲ್ಲವೆಂಬುದು ಗ್ರಂಥಕಾರರಿಗೂ ಸಮ್ಮತವಾಗಿದೆ. ಅಂತಸ್ಥತ್ವಾಧಿಕರಣದಲ್ಲಿ ಗ್ರಂಥಕಾರರು ಹೀಗೆ ಹೇಳುತ್ತಾರೆ - 'ಅದೃಶ್ಯತ್ವಮುಖೇನಾನಾಕ್ಷೇಪೇ ಅದೃಶ್ಯತ್ವೇನ ವಿಷ್ಣುಲಿಂಗೇನ ವಿಷ್ಣುರೇವಾಂತಸ್ಥಃ ಇತಿ ಶಂಕಾ ಸ್ಯಾತ್' 'ಅದೃಶ್ಯೇಽನಾತ್ಮ್ಯೇ' ಎಂದು ಆನಂದಮಯನಲ್ಲಿ ಅದೃಶ್ಯತ್ವ ಎಂಬ ಧರ್ಮ ಕೇಳಿಸುತ್ತಿದೆ. ಆದರೆ ಇದೇ ಅದೃಶ್ಯತ್ವಧರ್ಮ ಅಂತಸ್ಥನಲ್ಲಿ ಕೇಳಿ ಬರುತ್ತಿದೆ. ಈ ಅಂತಸ್ಥನು ಬೇರೆಯವನಾದರೆ ಆನಂದಮಯನೂ ಸಹ ಬೇರೆಯವನೇ ಆಗುತ್ತಾನೆಂದು ಅದೃಶ್ಯತ್ವಮುಖದಿಂದ ಆಕ್ಷೇಪ ಮಾಡಲಾಗಿದೆ. ಅದೃಶ್ಯತ್ವಮುಖದಿಂದಲೇ ಆಕ್ಷೇಪ ಮಾಡಲು ಕಾರಣವೇನೆಂದರೆ ಅದೃಶ್ಯನು ವಿಷ್ಣು ಆದ್ದರಿಂದ ಅಂತಸ್ಥನೂ ವಿಷ್ಣುವೇ ಆಗುತ್ತಾನೆಂದು ಸಿದ್ಧಾಂತಿಯು ಸುಲಭವಾಗಿ ಉತ್ತರಿಸಬಹುದು. ಈ ಅದೃಶ್ಯತ್ವವನ್ನೇ ಇಟ್ಟುಕೊಂಡು ಪೂರ್ವಪಕ್ಷ ಮಾಡಿದರೆ ಆ ಅದೃಶ್ಯತ್ವವು ಸಿದ್ಧಾಂತಯುಕ್ತಿ ಆಗುವುದಿಲ್ಲವೆಂದು ಹೇಳಿದ್ದಾರೆ. ಗ್ರಂಥಕಾರರ ಈ ಮಾತಿನಿಂದ ಪೂರ್ವಪಕ್ಷಯುಕ್ತಿಯು ಸಿದ್ಧಾಂತಯುಕ್ತಿಯಾಗುವುದಿಲ್ಲವೆಂದು ತಿಳಿಯುತ್ತದೆ. ಹೀಗೆ ಗ್ರಂಥಕಾರರು ಅನೇಕ ಅಧಿಕರಣಗಳಲ್ಲಿ ಹೇಳಿದ್ದಾರೆ. ಆದ್ದರಿಂದ ಪೂರ್ವಪಕ್ಷಯುಕ್ತಿಯಾದ ಆತ್ಮಶಬ್ದದ ಬಲದಿಂದ ಆನಂದಮಯನಿಗೆ ಬ್ರಹ್ಮತ್ವವನ್ನು ಸಾಧಿಸಲಾಗದು. ಹೊರತಾಗಿ ಬೇರೆ ಯಾವುದಾದರೊಂದು ಹೇತುವಿನಿಂದ ಆನಂದಮಯನಿಗೆ ಬ್ರಹ್ಮತ್ವವನ್ನು ಸಮರ್ಥನೆ ಮಾಡಿ ಅಲ್ಲೇ ಇರುವ ಆತ್ಮಶಬ್ದವು ಪರಮಾತ್ಮಪರವೆಂದು ಸಾಧಿಸಬೇಕು. ಅನಂತರ 'ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾ' ಎಂಬಲ್ಲಿರುವ ಆತ್ಮಶಬ್ದವೂ ಪರಮಾತ್ಮಪರವೆಂದು ಸಾಧಿಸಬೇಕು. ನೇರವಾಗಿ ಆತ್ಮಶಬ್ದವು ಪರಮಾತ್ಮಪರವೆನ್ನುವುದು ತಪ್ಪಲ್ಲವೇ?

ಸಮಾಧಾನ - ಸಿದ್ಧಾಂತದಲ್ಲಿ ಕೇವಲ ಬ್ರಹ್ಮಶಬ್ದಾಭ್ಯಾಸವೇ ಸಾಧಕವಾದಾಗ ಪೂರ್ವಪಕ್ಷದಲ್ಲಿ ಆತ್ಮಶಬ್ದವು ಯುಕ್ತವಾಗುತ್ತದೆ. ಹೀಗೆ ಹೇಳಿದಾಗ ಯಾವ ತೊಂದರೆಯೂ ಇಲ್ಲ. ಪೂರ್ವಪಕ್ಷಿಯು ಆತ್ಮಶಬ್ದದ ಬಲದಿಂದ ಪೂರ್ವಪಕ್ಷ ಮಾಡಿರುತ್ತಾನೆ. ಆವಾಗ ಸಿದ್ಧಾಂತಿಯು ಬ್ರಹ್ಮಶಬ್ದದ ಅಭ್ಯಾಸದಿಂದ

ಆನಂದಮಯನನ್ನು ಬ್ರಹ್ಮನೆಂದು ನಿರ್ಣಯ ಮಾಡಿ ಅಲ್ಲಿರುವ ಆತ್ಮಶಬ್ದವು ಬ್ರಹ್ಮಪರವೆಂದು ಸುಲಭವಾಗಿ ಹೇಳಬಹುದು. ಆದರೆ ಆತ್ಮಶಬ್ದವೇ ಸಿದ್ಧಾಂತಸಾಧಕವಾದಾಗ ಪೂರ್ವಪಕ್ಷದಲ್ಲಿ ಆತ್ಮಶಬ್ದವನ್ನು ತೆಗೆದುಕೊಳ್ಳುವುದೇ ಇಲ್ಲ. ಕೇವಲ ತನ್ನಿಷ್ಠಸೂತ್ರಾದಿಗಳಲ್ಲಿ ಮಾಡಿದ ಆಕ್ಷೇಪವನ್ನಷ್ಟೇ ಇಟ್ಟುಕೊಳ್ಳಬೇಕು.

ಅಥವಾ ಆತ್ಮಶಬ್ದವು ಪರಮಾತ್ಮನಲ್ಲಿ ಮುಖ್ಯವಾಗಿ ಇದೆ. ಮುಖ್ಯಾರ್ಥ ಬಿಟ್ಟು ಅಮುಖ್ಯಾರ್ಥವನ್ನು ವಿವಕ್ಷಿಸುವುದು ಸರಿಯಲ್ಲ. ಮುಖ್ಯಾರ್ಥವನ್ನಿಟ್ಟುಕೊಳ್ಳಲು ಮಯಟ್ ಪ್ರತ್ಯಯವೇ ಬಾಧಕವಾಗಿದೆಯೆಂದು ಹೇಳಬಾರದು. ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯಾದ್ಯರ್ಥಗಳಿರುವುದರಿಂದ ಬಾಧಕಗಳನ್ನು ನಿರಾಕರಿಸುತ್ತೇವೆ. ಈ ಪ್ರಕಾರದಲ್ಲಿ ಆತ್ಮಶಬ್ದವು ಭಗವಂತನನ್ನೇ ಸಾಧಿಸುತ್ತದೆಂದು ಉಪಪಾದಿಸಬಹುದು. ಈ ಅಭಿಪ್ರಾಯದಿಂದ ಆತ್ಮಶಬ್ದವನ್ನು ಸಾಧಕವನ್ನಾಗಿ ಹೇಳಿದ್ದಾರೆ. ಹೀಗೆ ಆತ್ಮಶಬ್ದವು ಮುಖ್ಯವಾಗಿ ಭಗವಂತನನ್ನೇ ಹೇಳುವುದರಿಂದ ಆಚಾರ್ಯರು ಭಾಷ್ಯದಲ್ಲಿ ಅನೇಕ ಸಂದರ್ಭದಲ್ಲಿ ಭಗವಂತನ ಸಾಧಕಯುಕ್ತಿಯನ್ನಾಗಿ ಹೇಳಿದ್ದಾರೆ. ಇಲ್ಲಿಯೇ ಮುಂದೆ ಗ್ರಂಥಕಾರರು 'ನಚ ಬ್ರಹ್ಮಶಬ್ದಃ' ಇತ್ಯಾದಿ ಗ್ರಂಥದಿಂದ ಆತ್ಮಶಬ್ದವು ಸಿದ್ಧಾಂತಸಾಧಕವಾಗುತ್ತದೆಂದು ಸಮರ್ಥಿಸುವವರಿದ್ದಾರೆ.

ಮತ್ತು ಪೂರ್ವಪಕ್ಷಿಯು ಆಕ್ಷೇಪ ಮಾಡಿದ್ದನ್ನು ಸಿದ್ಧಾಂತದ ಯುಕ್ತಿಯನ್ನಾಗಿ ಬಳಸಬಾರದೆಂದೇನು ಇಲ್ಲ. 'ಕಂಪನಾತ್' ಎಂಬ ಸೂತ್ರದಲ್ಲಿ 'ಮೋಕ್ಷಹೇತುಜ್ಞಾನವಿಷಯತ್ವ'ವೆಂಬುದನ್ನು ಪೂರ್ವಪಕ್ಷಿ ಆಕ್ಷೇಪಿಸಿದ್ದಾನೆ. ಆದರೆ ಟೀಕೆಯಲ್ಲಿ ಇದನ್ನೇ ಸಿದ್ಧಾಂತಯುಕ್ತಿಯನ್ನಾಗಿ ಹೇಳಿದ್ದಾರೆ - ವಜ್ರಶ್ರುತಿ ಉದ್ಯತತ್ವಲಿಂಗಗಳನ್ನು ಪೂರ್ವಪಕ್ಷಿ ಹೇಳಿದ್ದ. ಈ ಎಲ್ಲ ಲಿಂಗಗಳು ವಿಷ್ಣುವಿನಲ್ಲಿ ಸಾವಕಾಶಗಳಾಗಿವೆ. ಹಾಗಾದರೆ 'ಯ ಏತದ್‌ವಿದುಃ' ಎಂಬಲ್ಲಿ ಹೇಳಿದ 'ಮೋಕ್ಷಹೇತುಜ್ಞಾನವಿಷಯತ್ವ'ವೆಂಬ ಲಿಂಗದಿಂದಲೇ ವಜ್ರಶಬ್ದವಾಚ್ಯನಾದವನು ವಿಷ್ಣು ಎಂದು ನಿರ್ಣಯಿಸಬಹುದು. 'ಕಂಪನಾತ್' ಎಂದು ಬೇರೆ ಲಿಂಗವನ್ನೇಕೆ ಹೇಳಬೇಕು? ಎಂಬ ಶಂಕೆ ಬಂದರೆ 'ಮೋಕ್ಷಹೇತುಜ್ಞಾನವಿಷಯತ್ವ'ವನ್ನು ಬಿಡದೆ ಜಗಚ್ಚೇಷ್ಟಕತ್ವವೆಂಬ ಲಿಂಗಾಂತರವನ್ನು ಹೇಳಿದ್ದೇವೆ. ಪೂರ್ವಪಕ್ಷಿ ಹೇಳಿದ್ದನ್ನೇ ಸಿದ್ಧಾಂತಯುಕ್ತಿಯನ್ನಾಗಿ ಬಳಸಬಹುದೆಂಬುದು ಇಲ್ಲಿ ಮಾತ್ರವಲ್ಲ. ಬೇರೆ ಅಧಿಕರಣಗಳಲ್ಲಿಯೂ ಎಂಬುದನ್ನು 'ನನ್ವೇವಂ ಸಾವಕಾಶತ್ವೇ ಶ್ರುತಿಲಿಂಗಯೋರ್ಯ ಏತದ್ವಿದುರಿತ್ಯುಕ್ತಂ ಲಿಂಗಂ ವಿಹಾಯ ಕಿಂ ಲಿಂಗಾಂತರಗ್ರಹಣೇನ. ಮೈವಮ್ ತದವಿಹಾಯ್ಯೈವ ಲಿಂಗಾಂತರಸ್ಯಾಪ್ಯುಕ್ತತ್ವಾತ್ ಏತದನ್ಯತ್ರಾಪ್ಯನುಸಂಧೇಯಮ್' ಎಂದು ಟೀಕೆಯಲ್ಲಿ ಹೇಳಿದ್ದಾರೆ.

ಮತ್ತು 'ಅಂತರ ಉಪಪತ್ತೇಃ' ಎಂಬ ಸೂತ್ರದಲ್ಲಿ ಅಮೃತತ್ವವನ್ನು ಆಕ್ಷೇಪ ಮಾಡಿದ್ದಾರೆ. ಅದನ್ನೇ ಸಿದ್ಧಾಂತಯುಕ್ತಿಯನ್ನಾಗಿ ಬಳಸಿದ್ದಾರೆ. ಆದ್ದರಿಂದ ಪ್ರಕೃತ ಆತ್ಮಶಬ್ದವನ್ನು ಪೂರ್ವಪಕ್ಷಿಯು ಆಕ್ಷೇಪ ಮಾಡಿದ್ದರೂ ಸಿದ್ಧಾಂತಯುಕ್ತಿಯನ್ನಾಗಿ ಹೇಳಬಹುದು.

ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದದ ಅಭ್ಯಾಸವಿಲ್ಲವೆಂಬುದಕ್ಕೆ ಹಿಂದೆ ಮೂರು ರೀತಿ ಉತ್ತರಿಸಿದರು. ಈಗ ಮತ್ತೊಂದು ರೀತಿಯಲ್ಲಿ ಉತ್ತರಿಸುತ್ತಿದ್ದಾರೆ. ಅನ್ನಮಯಾದಿಗಳಲ್ಲಿಯೂ ಮುಖ್ಯವಾದ ಅಭ್ಯಾಸವನ್ನೇ ಹೇಳಬಹುದು. ಬ್ರಹ್ಮವಲ್ಲಿ ಮತ್ತು ಭೃಗುವಲ್ಲಿ ಎರಡನ್ನೂ ವಿವಕ್ಷಿಸಿದಾಗ ಅನ್ನಮಯಾದಿಗಳಲ್ಲಿ ಅನೇಕ ಬಾರಿ ಬ್ರಹ್ಮಶಬ್ದ ಕೇಳಿಸುತ್ತದೆಂದು ಆಚಾರ್ಯರು ತೈತ್ತಿರೀಯಭಾಷ್ಯದಲ್ಲಿ ಹೇಳಿದ್ದಾರೆ. 'ನಚಾನ್ನಮಯಾದೀನಾ-ಮಬ್ರಹ್ಮತ್ವೇ ಕಿಂಚಿನ್‌ಮಾನಮ್ ಯೇನ್ನಂ ಬ್ರಹ್ಮೋಪಾಸತೇ ಯೇ ಪ್ರಾಣಂ ಬ್ರಹ್ಮೋಪಾಸತೇ ಆನಂದಂ

ಬ್ರಹ್ಮಣೋ ವಿದ್ವಾನ್ ವಿಜ್ಞಾನಂ ಬ್ರಹ್ಮ ಚೇದ್ವೇದ ಅಸ್ತಿ ಬ್ರಹ್ಮೇತಿ ಚೇದ್ವೇದ ಅಧೀಹಿ ಭಗವೋ ಬ್ರಹ್ಮೇತಿ ತಸ್ಮಾ ಏತತ್ ಪ್ರೋವಾಚ. ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಮಿತ್ಯಾದಿನಾ ಬ್ರಹ್ಮಶಬ್ದೇನೋಕ್ತತ್ವಾಚ್ಚ' ಭಾಷ್ಯದ ಈ ಮಾತಿನಿಂದ ಅನ್ನಮಯಾದಿಗಳಲ್ಲಿಯೂ ಬ್ರಹ್ಮಶಬ್ದದ ಮುಖ್ಯಾಭ್ಯಾಸವನ್ನು ಹೇಳಬಹುದು. ಬ್ರಹ್ಮವಲ್ಲಿಯಲ್ಲಿ 'ಯೇನ್ನಂ ಬ್ರಹ್ಮೋಪಾಸತೇ' ಎಂದು; ಭೃಗುವಲ್ಲಿಯಲ್ಲಿ 'ಅನ್ನಂ ಬ್ರಹ್ಮೇತಿ ವ್ಯಜಾನಾತ್' ಎಂದು ಕೇಳಿಸುತ್ತದೆ. ಎರಡು ಕಡೆ ಹೇಳಿರುವ ಅನ್ನಮಯನು ಒಬ್ಬನೇ ಆದ್ದರಿಂದ ಒಬ್ಬನಲ್ಲಿ ಎರಡು ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದೆ.

ಆಕ್ಷೇಪ - ಭೃಗುವಲ್ಲಿಯಲ್ಲಿ ಅನ್ನಮಯ ಪ್ರಾಣಮಯ ಇತ್ಯಾದಿಯಾಗಿ ಕೇಳಿಸುತ್ತಿಲ್ಲ. ಕೇವಲ ಅನ್ನ ಪ್ರಾಣ ಇತ್ಯಾದಿಯಾಗಷ್ಟೇ ಕೇಳಿಸುತ್ತಿದೆ. ಆದ್ದರಿಂದ ಸ್ಥಾನದ್ವಯದಿಂದ ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದದ ಅಭ್ಯಾಸ ಹೇಳುವುದು ಹೇಗೆ ಸಾಧ್ಯ?

ಸಮಾಧಾನ - ಅದೇ ಭೃಗುವಲ್ಲಿಯ ಉಪಸಂಹಾರದಲ್ಲಿ 'ಅನ್ನಮಯಮುಪಸಂಕ್ರಮ್ಯ' ಇತ್ಯಾದಿಯಾಗಿ ಮಯಟ್ ಪ್ರತ್ಯಯ ಕೇಳಿಸುತ್ತಿದೆ. ಆದ್ದರಿಂದ ಮೊದಲಿರುವ ಅನ್ನಾದಿಶಬ್ದಗಳಿಂದಲೂ ಮಯಡಂತವಾದದ್ದನ್ನೇ ತೆಗೆದುಕೊಳ್ಳಬೇಕು. ಮತ್ತು ಅನ್ನ ಬೇರೆ ಅನ್ನಮಯ ಬೇರೆ ಎಂದು ಹೇಳುವುದಾದರೆ ಬ್ರಹ್ಮವಲ್ಲಿಯಲ್ಲಿಯೇ 'ಯೇನ್ನಂ ಬ್ರಹ್ಮೋಪಾಸತೇ' ಎಂದು ಹೇಳಿದ್ದಾರೆ. ಇಲ್ಲಿ ಮೊದಲು ಹೇಳಿದ ಅನ್ನಮಯನೇ ಈ ಶ್ಲೋಕದಿಂದ ಹೇಳಲ್ಪಡುತ್ತಿದ್ದಾನೆಂದು ಹೇಳಬೇಕು. ಇಲ್ಲವಾದರೆ ಅಸಂಗತವಾಗುತ್ತದೆ. ಅಸಂಗತಿ ಪರಿಹಾರಕ್ಕಾಗಿ ನೀವು ಬ್ರಹ್ಮವಲ್ಲಿಯಲ್ಲಿ ಉಕ್ತನಾದ ಅನ್ನಮಯನು ಅನ್ನನು ಒಬ್ಬನೇ ಎಂದು ಹೇಳಬೇಕು. ಅದನ್ನೇ ನಾವೂ ಸಹ ಬ್ರಹ್ಮವಲ್ಲಿಯಲ್ಲಿ ಹೇಳಿದ. ಅನ್ನಮಯನು ಭೃಗುವಲ್ಲಿಯಲ್ಲಿ ಹೇಳಿದ ಅನ್ನನು ಒಬ್ಬನೇ ಎಂದು ಹೇಳುತ್ತೇವೆ. ಮತ್ತು ಸಮಸ್ತ ಭೃಗುವಲ್ಲಿಯು ಬ್ರಹ್ಮವಲ್ಲಿಯ ಅರ್ಥಕ್ಕೆ ಸಮಾಖ್ಯಾರೂಪವಾಗಿದೆಯೆಂದು ಗ್ರಂಥಕಾರರೇ ಮುಂದೆ ಸಮರ್ಥಿಸುತ್ತಾರೆ. ಸಮಾಖ್ಯಾರೂಪವಾಗಬೇಕಾದರೆ ಎರಡೂ ವಲ್ಲಿಗಳು ಒಬ್ಬನನ್ನೇ ಪ್ರತಿಪಾದಿಸಬೇಕು.




ಶ್ರೀಮದಾಚಾರ್ಯರು 'ಬ್ರಹ್ಮಶಬ್ದಾಭ್ಯಾಸಾತ್' ಎಂದು ಹೇಳಿದ್ದಾರೆ. ನೀವು 'ಆತ್ಮಶಬ್ದಾಭ್ಯಾಸಾತ್' ಎಂದು ವ್ಯಾಖ್ಯಾನಿಸುತ್ತಿದ್ದೀರಿ. ಇದು ತಪ್ಪಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಬ್ರಹ್ಮವಾಚಕವಾದ ಶಬ್ದದ ಅಭ್ಯಾಸದಿಂದ ಎಂದು ಆಚಾರ್ಯರ ಮಾತಿಗೆ ಅರ್ಥೈಸಬಹುದು. ಆವಾಗ ಆತ್ಮಶಬ್ದವು ಬ್ರಹ್ಮವಾಚಕವೇ ಆಗಿರುವುದರಿಂದ ಬ್ರಹ್ಮಶಬ್ದಾಭ್ಯಾಸವೆಂದರೆ ಆತ್ಮಶಬ್ದದ ಅಭ್ಯಾಸವೂ ಆಗುತ್ತದೆ. ಆಚಾರ್ಯರ ಮಾತಿಗೆ ವಿರೋಧ ಬರುವುದಿಲ್ಲ.

ಅಥವಾ ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದ ಎಂದೇ ಆಚಾರ್ಯರ ಅಭಿಪ್ರಾಯ. ಹಾಗಾದರೆ ಅನ್ನಮಯಾದಿಗಳಲ್ಲಿ ಭಾಗಾಸಿದ್ಧಿ ಬರುತ್ತದಲ್ಲ? ಎಂದರೆ ಬ್ರಹ್ಮವಲ್ಲಿಗೆ ಸಮಾಖ್ಯಾಶ್ರುತಿ ಎಂದರೆ ಭೃಗುವಲ್ಲಿ. ಎರಡೂ ವಲ್ಲಿಗಳು ಒಂದೇ ವಿಷಯವನ್ನು ಪ್ರತಿಪಾದಿಸುತ್ತಿರುವುದರಿಂದ ಬ್ರಹ್ಮವಲ್ಲಿಯ ಜೊತೆ ಭೃಗುವಲ್ಲಿಯನ್ನೂ ವಿವಕ್ಷಿಸಬೇಕು. ಆವಾಗ ಬ್ರಹ್ಮವಲ್ಲಿಯ ಅನ್ನಮಯಾದಿ ಪ್ರಕರಣಗಳಲ್ಲಿ ಬ್ರಹ್ಮಶಬ್ದ ಕೇಳಿಸುತ್ತಿದೆ. ಭೃಗುವಲ್ಲಿಯ ಅನ್ನಮಯಾದಿಪ್ರಕರಣಗಳಲ್ಲಿಯೂ ಮತ್ತೊಮ್ಮೆ ಬ್ರಹ್ಮಶಬ್ದ ಕೇಳಿಸುತ್ತಿದೆ. ಹೀಗೆ

ಸುಲಭವಾಗಿಯೇ ಒಂದೇ ವಿಧವಾದ ಬ್ರಹ್ಮಶಬ್ದದ ಅಭ್ಯಾಸವನ್ನು ಅನ್ನಮಯಾದಿ ಐದು ಪ್ರಕರಣಗಳಲ್ಲಿಯೂ ಹೇಳಬಹುದು.



## 'ಅಭ್ಯಾಸಾತ್' ಎಂಬ ಹೇತುವಿಗೆ ಭಾಗಾಸಿದ್ಧಿ ವ್ಯಾಪ್ಯತ್ವಾಸಿದ್ಧಿಗಲ್ಲ

**तात्पर्यचन्द्रिका**

केचित्तु शाखान्तरेऽप्यन्नमयादौ ब्रह्मशब्दसद्भावादभ्यासः । अत एवानुव्याख्याने – 'अन्यासु चैतद्रूपासु शाखास्वपि सहस्रशः' इत्युक्तमित्याहुः । तन्न, शाखान्तरमादाय अभ्यासेऽतिऽप्रसङ्गात् । अनुव्याख्याने –

येऽन्नं ब्रह्मेत्यादिरूपादभ्यासात्तैत्तिरीयके ।
अन्यासु चैतद्रूपासु .....................॥

इति प्रतिशाखमभ्यासोक्तेश्च । न चान्नादेरब्रह्मत्वेऽपि ब्रह्मत्वेनोपासनोपपत्तिरिति शङ्क्यम्, असदुपासनाया निषेत्स्यमानत्वात् । ''विज्ञानं ब्रह्म चेद्वेद'' ''अन्नं ब्रह्मेति व्यजानात्'' इत्यादावुपासनाया अश्रवणाच्च । ''एतमानन्दमयमात्मानम्'' इत्यादावुपासनाया अश्रवणेऽपि ब्रह्मशब्दसमानार्थात्मशब्दश्रवणाच्च । न च ब्रह्मशब्दोऽन्यत्र युक्तः,

प्रवृत्तिहेतुपौष्कल्याद्भाष्यकृद्भिरुदाहृतैः ।
श्रुतिस्मृतिशतैश्चापि ब्रह्मशब्दो हि विष्णुगः ॥

यद्यपि ''तपो ब्रह्म'' इत्यसकृच्छ्रवणात्तपस्यपि ब्रह्मशब्दाभ्यासोऽस्ति । तथाऽपि पूर्वत्र ''तपसा ब्रह्म विजिज्ञासस्व'' इति, उत्तरत्र च ''स तपस्तप्त्वा, अन्नं ब्रह्मेति व्यजानात्'' इति चाभ्यासात् तपसि ब्रह्मशब्दो न मुख्य इति न तपसो ब्रह्मता ।

ಅನುವಾದ - ಕೆಲವರು ಹೀಗೆನ್ನುತ್ತಾರೆ - ಭೃಗುವಲ್ಲಿ ಬ್ರಹ್ಮವಲ್ಲಿಯಲ್ಲಿ ಮಾತ್ರವಲ್ಲ. ಬೇರೆ ಶಾಖೆಗಳಲ್ಲಿಯೂ ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದ ಕೇಳಿಸುತ್ತದೆ. ಆದ್ದರಿಂದ ಅನೇಕ ಬಾರಿ ಬ್ರಹ್ಮಶಬ್ದದ ಅಭ್ಯಾಸ ಹೇಳಬಹುದು. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ 'ಅನ್ಯಾಸು ಚೈತದ್ರೂಪಾಸು ಶಾಖಾಸ್ವಪಿ ಸಹಸ್ರಶಃ' ಎಂದು ಅನೇಕ ಶಾಖೆಗಳನ್ನು ಉದಾಹರಿಸಿದ್ದಾರೆ ಎಂದು.

**ಪರಿಪೂರ್ಣಚಂದ್ರಿಕಾ**

(೧) ಇದು ತಪ್ಪು. ತೈತ್ತಿರೀಯಶಾಖೆ ಬಿಟ್ಟು ಬೇರೆ ಶಾಖೆಗಳನ್ನು ವಿವಕ್ಷಿಸಿದರೆ ಅತಿಪ್ರಸಂಗ ಬರುತ್ತದೆ. ಸ್ವಲ್ಪ ಗಮನವಿಟ್ಟು ಆಚಾರ್ಯರ ಮಾತನ್ನು ಅರ್ಥಮಾಡಿಕೊಳ್ಳಬೇಕು. 'ಯೇನ್ನಂ ಬ್ರಹ್ಮೇತ್ಯಾದಿರೂಪಾದಭ್ಯಾಸಾತ್ತೈತ್ತಿರೀಯಕೇ ಅನ್ಯಾಸು ಚೈತದ್ರೂಪಾಸು' ಎಂದು 'ಯೇನ್ನಂ ಬ್ರಹ್ಮೋಪಾಸತೇ' ಇತ್ಯಾದಿಯಾದ ಅಭ್ಯಾಸವು ತೈತ್ತಿರೀಯದಲ್ಲಿದೆ. ಇದರಂತೆ ಬೇರೆ ಶಾಖೆಗಳಲ್ಲಿಯೂ ಅಭ್ಯಾಸವಿದೆ. ಬೇರೆ ಬೇರೆ ಶಾಖೆಗಳಲ್ಲಿ ಬೇರೆ ಬೇರೆ ಬ್ರಹ್ಮಶಬ್ದಾಭ್ಯಾಸವನ್ನು ಹೇಳಿರುವುದರಿಂದ ಎಲ್ಲಾ ಶಾಖೆಗಳನ್ನು ಸೇರಿಸಿ ಒಟ್ಟಿಗೆ ಅಭ್ಯಾಸ ಹೇಳುವ ಕೆಲವರ ವಾದವು ಸರಿಯಿಲ್ಲ.

(೨) ಆಕ್ಷೇಪ - ಅನ್ನಮಯಾದಿಗಳು ಬ್ರಹ್ಮ ಆಗದೇ ಇದ್ದರೂ ಬ್ರಹ್ಮನೆಂದು ಉಪಾಸನೆ ಮಾಡಬೇಕು. ಉಪನಿಷತ್ತು ಈ ಉಪಾಸನೆಯನ್ನಷ್ಟೇ ಹೇಳುತ್ತಿದೆ.

ಸಮಾಧಾನ - ಅಸದುಪಾಸನೆಯನ್ನು ನಾಲ್ಕನೇ ಅಧ್ಯಾಯದಲ್ಲಿ ನಿರಾಕರಣೆ ಮಾಡುತ್ತೇವೆ. ಮತ್ತು 'ವಿಜ್ಞಾನಂ ಬ್ರಹ್ಮಚೇದ್ವೇದ ಅನ್ನಂ ಬ್ರಹ್ಮೇತಿ ವ್ಯಜಾನಾತ್' ಇತ್ಯಾದಿ ಉಪಾಸನೆ ಕೇಳಿಸುತ್ತಲೇ ಇಲ್ಲ. 'ಏತಮಾನಂದಮಯಮಾತ್ಮಾನಮ್' ಇತ್ಯಾದಿ ವಾಕ್ಯಗಳಲ್ಲಿ ಉಪಾಸನೆ ಕೇಳಿಸುತ್ತಿಲ್ಲ. ಆದರೆ ಬ್ರಹ್ಮಶಬ್ದಕ್ಕೆ ಸಮಾನವಾದ ಅರ್ಥವುಳ್ಳ ಆತ್ಮಶಬ್ದ ಕೇಳಿಸುತ್ತಿದೆ.

ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಬಿಟ್ಟು ಬೇರೆ ಯಾರಲ್ಲಿಯೂ ಕೂಡುವುದಿಲ್ಲ. ಏಕೆಂದರೆ

ಪ್ರವೃತ್ತಿಹೇತುಪೌಷ್ಕಲ್ಯಾದ್ ಭಾಷ್ಯಕೃದ್ಭಿರುದಾಹೃತ್ಯೈಃ।
ಶ್ರುತಿಸ್ಮೃತಿಶತೈಶ್ಚಾಪಿ ಬ್ರಹ್ಮಶಬ್ದೋ ಹಿ ವಿಷ್ಣುಗಃ॥

ಭಾಷ್ಯಕಾರರು ಉದಾಹರಿಸಿರುವ ನೂರಾರು ಶ್ರುತಿಸ್ಮೃತಿಗಳಿಂದ ಬ್ರಹ್ಮಶಬ್ದದ ಪ್ರವೃತ್ತಿನಿಮಿತ್ತವು ವಿಷ್ಣುವಿನಲ್ಲೇ ಬರುತ್ತದೆ. ಆದ್ದರಿಂದ ಬ್ರಹ್ಮಶಬ್ದ ವಿಷ್ಣುವನ್ನು ಮಾತ್ರ ಹೇಳುತ್ತದೆ.

ವಸ್ತುತಃ 'ತಪೋ ಬ್ರಹ್ಮೇತಿ' ಇತ್ಯಾದಿಯಾಗಿ ಅನೇಕ ಬಾರಿ ತಪಸ್ಸಿನಲ್ಲೂ ಬ್ರಹ್ಮಶಬ್ದಪ್ರಯೋಗವಿದೆ. ಆದರೂ ತಪಸ್ಸನ್ನು ಬ್ರಹ್ಮನೆಂದು ಹೇಳಬಾರದು. ಏಕೆಂದರೆ 'ತಪಸಾ ಬ್ರಹ್ಮ ವಿಜಿಜ್ಞಾಸಸ್ವ' ಎಂದು ತಪಸ್ಸಿನಿಂದ ಬ್ರಹ್ಮನನ್ನು ತಿಳಿಯಬೇಕೆಂದು ಶ್ರುತಿ ಹೇಳಿದೆ. ಮುಂದೆಯೂ 'ಸ ತಪಸ್ತಪ್ತ್ವಾ ಅನ್ನಂ ಬ್ರಹ್ಮೇತಿ ವ್ಯಜಾನಾತ್' ಎಂದು ತಪಸ್ಸಿನಿಂದ ಅನ್ನಮಯಾದಿಗಳನ್ನೇ ಬ್ರಹ್ಮನೆಂದು ತಿಳಿಯಬೇಕೆಂದು ಹೇಳಿದೆ. ಆದ್ದರಿಂದ ಬ್ರಹ್ಮಶಬ್ದವು ತಪಸ್ಸಿನಲ್ಲಿ ಮುಖ್ಯವಲ್ಲ. ತಪಸ್ಸೂ ಬ್ರಹ್ಮ ಆಗಲು ಸಾಧ್ಯವಿಲ್ಲ.

### ಕಠಿಣಪದಾರ್ಥ

ಏತದ್ರೂಪಾಸು = ತೈತ್ತಿರೀಯಶಾಖೆಯಂತೆ ಗುಣಸಾಮಾನ್ಯವಾಚಕವಾದ ನಾಮವುಳ್ಳವುಗಳಲ್ಲಿ, ಶಾಖಾಂತರಮಾದಾಯ = ಬೇರೆ ಶಾಖೆಯಲ್ಲಿರುವ ಬ್ರಹ್ಮಶಬ್ದವನ್ನಿಟ್ಟುಕೊಂಡು, ಬ್ರಹ್ಮಶಬ್ದಃ = ೧) ಬ್ರಹ್ಮ ಇತಿ ಶಬ್ದಃ ಬ್ರಹ್ಮಶಬ್ದಃ ೨) ಬ್ರಹ್ಮಣಃ ಶಬ್ದಃ ಬ್ರಹ್ಮಶಬ್ದಃ, ಅನ್ಯತ್ರ = ವಿಷ್ಣುತ್ವವಿಲ್ಲದ ಪ್ರಕೃತ್ಯಾದಿಗಳಲ್ಲಿ, ಉದಾಹೃತ್ಯೈಃ = ಅನೇಕ ಕಡೆ ಉದಾಹರಿಸಿರುವ, ಚಾಪಿ = ಹೇತುದ್ವಯಸಮುಚ್ಚಾಯಕ,

ನ ಮುಖ್ಯಃ = ಮುಖ್ಯವಲ್ಲ (ಸೂತ್ರದಲ್ಲಿ ಮುಖ್ಯವಾದ ಬ್ರಹ್ಮಶಬ್ದವನ್ನೇ ಹೇತು ಮಾಡಿದ್ದರಿಂದ ವ್ಯಭಿಚಾರವಿಲ್ಲ.)

**प्रकाशः** – अनुव्याख्यानापातप्राप्तिं निराह – **केचित्त्विति** ।। 'एतद्रूपासु' तैत्तिरीयशाखायामिव गुणिसामान्यवाचकनामवतीषु ।

आनन्दमय इत्याद्यैः शब्दैर्वाच्यो हरिः स्वयम् ।

इत्युत्तरार्धेनान्वयः । 'शाखान्तरमादाय' शाखान्तरीयब्रह्मशब्दमादाय । **प्रतिशाखमिति** ।। यदि तैत्तिरीयशाखास्थब्रह्मशब्दस्य शाखान्तरीयब्रह्मशब्दविवक्षयाऽभ्यासविवक्षा स्यात्तदा प्रतिशाखमभ्यासोक्तिर्न स्यादित्यर्थः । एवं हेतुदोषेषु प्रबलासिद्धिरूपदोषनिरासेऽपि अप्रयोजकत्वेन व्याप्यत्वासिद्धिः स्यादेव । यथा खलु "नाम ब्रह्मेत्युपासीत" "योषितमग्निं ध्यायीत" इत्यादौ नामादौ ब्रह्मादित्वाभावेऽप्युपासनार्थत्वमात्रेण तदुक्तिः, तथाऽत्रापि अन्नमयादौ ब्रह्मशब्दार्थस्य विष्णुत्वस्याभावेऽप्यब्रह्मरूपेऽन्नमयादौ ब्रह्मत्वेन ध्यानार्थत्वेनापि तत्र ब्रह्मशब्दोक्तिसम्भवेनान्यथासिद्धेः । अत एव "येऽन्नं ब्रह्मोपासते" "ये प्राणं ब्रह्मोपासते" इत्युक्तिरित्याशङ्क्य निराह – **न चेति** ।। अत्रान्नमयादेरेकत्वात् 'अन्नादेः' इत्युक्तम् । "न प्रतीके न हि सः" इति चतुर्थे सूत्रकृतैव निरसिष्यमाणत्वादित्यर्थः।

प्रतीकविषयत्वेन न कार्या विष्णुभावना ।
प्रतीकं नैव विष्णुर्यन्मिथ्योपासा ह्यनर्थदा ।।

इत्याद्यनुव्याख्यानोक्तेः । उक्तं च तैत्तिरीयभाष्ये – "येऽन्यथा विदुस्तेऽन्यराजानस्ते क्षय्यलोका भवन्ति" इति श्रुतेरविद्यमानोपासनादोषावगतेश्च" इत्यादीति भावः । अन्नमयादि-साधारणपक्षान्तरमाह – **एतमिति** ।। एवमप्रयोजकत्वशङ्काऽऽरहितमव्याप्यत्वं निरस्येदानीं विपक्षवृत्तित्वं निराह – **न चेति** ।। ब्रह्मेति शब्दो ब्रह्मणः शब्द इति विग्रहेण ब्रह्मात्मशब्दौ ग्राह्यौ । 'अन्यत्र' विष्णुत्वरहिते प्रकृत्यादावित्यर्थः । श्लोकेनान्वयः । 'उदाहृतैः' तत्र तत्रेति भावः । चापिशब्दौ हेतुद्वयसमुच्चयार्थौ । हिर्हेतौ । महायोगविद्वद्रूढिभ्यां विष्णुमात्रनिष्ठो यस्मात्तस्मादन्यत्र न युक्त इत्यर्थः । समर्थितमेतत् प्राग्जन्माधिकरणादावित्यर्थः ।

ಪರಿಪೂರ್ಣಚಂದ್ರಿಕಾ

यदत्र कश्चिदाह – ब्रह्मशब्दाद्विरिञ्चापाकरणमयुक्तं, तस्य विष्णुनिष्ठत्वे मानाभावात् । "तदेव ब्रह्म" इत्यादेश्च प्रजापतिहिरण्यगर्भादिश्रुत्या विरिञ्चादि-परत्वोपपत्तेरित्यादि, तदनेनैव निरस्तम् । आद्याधिकरणे "ब्रह्मशब्दश्च विष्णावेव" इत्यादिभाष्ये,

स विष्णुराह हीत्यन्ते देवशास्त्रस्य तेन हि ।

इत्याद्यनुव्याख्याने च "तदेव" इत्यादिश्रुतेर्वैष्णवत्वोक्त्या च ब्रह्मशब्दस्य विष्ण्वेकनिष्ठतायाः समर्थनात् । "एष उ एव ब्रह्म एष उ एवाऽऽत्मा" इति, "विष्णुरेव ज्योतिर्विष्णुरेव ब्रह्म" इति,

'पुरुषः पर आत्माऽजो ब्रह्म नारायणः प्रभुः ।' इति,

'आत्मा ब्रह्म महांस्तारः परमेशश्शुचिश्रवाः ।
विष्णुर्नारायणोऽनन्तः ....................॥'

इत्यादिश्रुतिभिः, "ब्रह्मशब्दः परे विष्णौ नान्यत्र" इति, "ब्रह्मेति परमात्मा" इति, "वासुदेवात्मकं ब्रह्म" इति, "अनन्तो भगवान् ब्रह्म" इति, "परमं यो महद्ब्रह्म" इति,

वासुदेवात्परः को नु ब्रह्मशब्दोदितो भवेत् ।

इति, "एतस्माद्ब्रह्मशब्दोऽयं विष्णोरेव" इति, "ब्रह्मात्मा विष्णुरेव हि" इति, "आत्मब्रह्मादयः शब्दास्तमृते विष्णुं" इत्यादिस्मृतिभिस्तत्र तत्रोदाहृताभिरनेकाभिर्ब्रह्मात्मादिशब्दस्य विष्णुनिष्ठतायाः स्पष्टत्वात् ॥

**असकृदिति** ॥ "तं होवाच । तपसा ब्रह्म विजिज्ञासस्व तपो ब्रह्मेति । स तपोऽतप्यत । स तपस्तप्त्वा । अन्नं ब्रह्मेति व्यजानात्" इति पञ्चकृत्वोऽब्रह्मण्यपि तपसि ब्रह्मपदस्य भृगुवल्ल्यां श्रवणादित्यर्थः । 'तपसा' इति तृतीयया साधनत्वावगमात् "आयुर्घृतं" "द्विर्वचनेऽचि" इत्यादिवदभेदोपचार इति भावः । "तपो ज्ञानस्वरूपत्वात्" इति तैत्तिरीयभाष्योक्तादर्थादर्थान्तरमुपेत्यैवमुक्तिरित्य-विरोधः ॥ **न मुख्य इतीति** ॥ सूत्रे मुख्यस्यैव ब्रह्मशब्दस्य हेतुकरणान्न व्यभिचार इति भावः ।

**गुरुराजीयम्** – नन्वेतस्यां दशायां ब्रह्मशब्दाभ्यासाभावेपि शाखान्तरस्थाभ्यासमादायाभ्यासशब्दो मुख्य एवेति केचिदाहुः । तद्दूषयितुमनुवदति – **केचित्त्विति** ।। अन्नमयादीनां ब्रह्मत्वे शाखान्तरीयाभ्यासो विवक्षित इत्यत्रोपोद्बलकमाह – **अत एवेति** ।। **शाखान्तरमादायेति** ।। यदि शाखान्तरीयाभ्यासमादायान्नमयादीनां ब्रह्मत्वं तर्हि ब्रह्म भृगुवल्लीस्थब्रह्मशब्दाभ्यासमादाय 'आनन्दमया मे शुध्यन्ताम्' इति वाक्यस्थान्नमयादीनामपि ब्रह्मत्वं स्यादित्यर्थः । नच तत्र शुद्धिप्रार्थनलिङ्गान्न तेषां ब्रह्मपरत्वमिति वाच्यम् । अभ्यासस्य श्रुतिरूपत्वेन लिङ्गापेक्षयापि बलवत्त्वादिति भावः ।

ननु तर्ह्यनुव्याख्याने शाखान्तरीयाभ्यासस्य हेतुत्वेन विवक्षितत्वात्तद्विरोध इत्यत आह – **अनुव्याख्यान इति** ।। ननु किमित्येवं महायासेनानन्दमयादीनां ब्रह्मत्वं समर्थ्यते । अब्रह्मत्वमेव किं न स्यात् । न चैवं ब्रह्मशब्दादेः का गतिरिति वाच्यम् । ब्रह्मत्वेनोपासनसम्भवात् । एवं च हेतोरन्यथासिद्धिरित्याशङ्क्य परिहरति – **न चान्नादेरिति** ।। असदिति ।। न प्रतीक इति सूत्रे नच रमन्त्यहो असदुपासनयाऽऽत्महन इत्यादौ च निषेत्स्यमानत्वादित्यर्थः ।। **विज्ञानमिति** ।। अत्र च धात्वर्थश्च नोपासनेति भावः । चित्तवृत्तित्वसाम्यादत्राप्युपासना व्याख्यायत इत्यत आह – **एतमिति** ।। असिद्धिं परिहरति – **न चेति** ।।

कुतो नेत्यतो हेतुं कारिकया सङ्गृह्णाति – **प्रवृत्तीति** ।। विष्णुगः विष्णावेव मुख्यः । तत्र हेतुद्वयं प्रवृत्तीत्यादि-ब्रह्मशब्दप्रवृत्तौ हेतुभूतस्य गुणपूर्णत्वस्य विष्णौ पुष्कलत्वादित्यर्थः । अनेन ब्रह्मशब्दस्य योग उक्तः । श्रुतिस्मृतीत्यनेन प्रयोगबाहुल्येन रूढिश्चोक्ता । एवं च ब्रह्मशब्दो महायोगरूढिभ्यां विष्णुपर इति भावः । ननु ब्रह्मशब्दाभ्यासेनानन्दमयादीनां ब्रह्मत्वसाधनमनुपपन्नम् । तस्य तपस्यपि सत्त्वेन व्यभिचारादित्यतो नाभ्यासमात्रं हेतुः । किन्तु मुख्याभ्यास एव । तथा च न व्यभिचार इत्याह – **यद्यपीति** ।। तपसेति तृतीयया ब्रह्मज्ञानं प्रति तस्य कारणत्वाभिधानात्तस्वेति क्त्वाप्रत्ययेन तस्य ब्रह्मज्ञानात्पूर्वभावित्वाभिधानाच्चेति भावः । इदं च तपसा ब्रह्म विजिज्ञासस्वेति पूर्ववाक्ये ब्रह्मज्ञानकारणत्वेन प्रकृतं तप एव तपो ब्रह्मेति वाक्ये प्रतिपाद्यत इति पूर्वपक्ष्युक्तमङ्गीकृत्य समाहितम् । तावतापि पूर्वपक्ष्युक्तव्यभिचारपरिहारसम्भवात् न तु वस्तुतः । तपो

ब्रह्मेत्यत्र ब्रह्मशब्दस्य मुख्यार्थत्वस्य सिद्धान्तिनोऽभिमतत्वात् । अन्यथा तपो ज्ञानस्वरूपत्वादित्यादितैत्तिरीयभाष्येण तपसा आलोचनेन । तपो ब्रह्म ज्ञानरूपं ब्रह्मेत्यर्थ इति तत्वप्रदीपेन –

ज्ञानानुसन्धानरूपतपसा तं जनार्दनम् ।
क्रमाद्भृगुर्व्यजानात्तमन्नादिबहुरूपिणम्
इति तत्रैवोदाहृतयजुःसंहितागतवाक्यविरोधादिति ध्येयम् ।

ವಿವರಣೆ - (೧) ಅನುವ್ಯಾಖ್ಯಾನ ನೋಡಿದಾಗ ಮೇಲ್ನೋಟಕ್ಕೆ ತೋರುವ ಅರ್ಥವನ್ನು 'ಕೇಚಿತ್ತು' ಇತ್ಯಾದಿಯಾಗಿ ಆಕ್ಷೇಪಿಸಿ ನಿರಾಕರಿಸುತ್ತಿದ್ದಾರೆ. ಅನುವ್ಯಾಖ್ಯಾನದಲ್ಲಿ ಪ್ರತೀಶಾಖೆಗಳಲ್ಲಿ ಪ್ರತ್ಯೇಕವಾದ ಅಭ್ಯಾಸವನ್ನೇ ಹೇಳಿದ್ದಾರೆ. ತೈತ್ತಿರೀಯಶಾಖೆಗೆ ಬೇರೆ ಶಾಖೆಯ ಬ್ರಹ್ಮಶಬ್ದದಿಂದ ಅಭ್ಯಾಸವನ್ನು ವಿವಕ್ಷಿಸಬಾರದು. ಹಾಗೆ ವಿವಕ್ಷಿಸಿದರೆ ಪ್ರತಿಯೊಂದು ಶಾಖೆಗಳಲ್ಲಿ ಬ್ರಹ್ಮಶಬ್ದಾಭ್ಯಾಸ ಹೇಳಿದ್ದು ತಪ್ಪಾಗುತ್ತದೆ.

(೨) 'ಅಭ್ಯಾಸಾತ್' ಎಂಬ ಹೇತು ಅನ್ನಮಯಾದಿಗಳಲ್ಲಿ ಬಾರದ ಕಾರಣ ಭಾಗಾಸಿದ್ಧಿದೋಷವನ್ನು ಆಕ್ಷೇಪಿಸಲಾಗಿತ್ತು. ಅದನ್ನು ಅನೇಕ ಮುಖಗಳಿಂದ ಇಲ್ಲಿಯತನಕ ಪರಿಹರಿಸಿದರು. ಈ ಭಾಗಾಸಿದ್ಧಿಯು ಸ್ವರೂಪಾಸಿದ್ಧಿರೂಪವಾಗಿದೆ. ಸ್ವರೂಪಾಸಿದ್ಧಿಯು ಹೇತುದೋಷಗಳಲ್ಲಿ ಪ್ರಬಲವಾದ್ದರಿಂದ ಮೊದಲು ಅದನ್ನೇ ಪರಿಹರಿಸುತ್ತಿದ್ದಾರೆ. ಈಗ ವ್ಯಾಪ್ಯತ್ವಾಸಿದ್ಧಿಯನ್ನು ಪರಿಹರಿಸುತ್ತಿದ್ದಾರೆ. ವ್ಯಾಪ್ಯತ್ವಾಸಿದ್ಧಿಯನ್ನು ತಾರ್ಕಿಕರು ಅನೇಕ ಮುಖದಲ್ಲಿ ಹೇಳುತ್ತಾರೆ. ಪ್ರಕೃತ ಅಪ್ರಯೋಜಕಮೂಲಕವಾದ ವ್ಯಾಪ್ಯತ್ವಾಸಿದ್ಧಿಯನ್ನು ಆಕ್ಷೇಪಿಸಿ ಉತ್ತರಿಸುತ್ತಿದ್ದಾರೆ. ಅಭ್ಯಾಸಾದಿಗಳಿದ್ದರೂ ಆನಂದಮಯಾದಿಗಳಲ್ಲಿ ಬ್ರಹ್ಮತ್ವ ಬೇಡವೆಂದು ಆಕ್ಷೇಪ.

'ನಾಮ ಬ್ರಹ್ಮೇತ್ಯುಪಾಸೀತ ಯೋಷಿತಮಗ್ನಿಂ ಧ್ಯಾಯೀತ' ಇತ್ಯಾದಿ ಸ್ಥಳದಲ್ಲಿ ನಾಮಾದಿಗಳಲ್ಲಿ ಬ್ರಹ್ಮತ್ವವಿಲ್ಲ. ಸ್ತ್ರೀಯಲ್ಲಿ ಅಗ್ನಿತ್ವವಿಲ್ಲ. ಆದರೂ ಕೇವಲ ಉಪಾಸನೆಗೋಸ್ಕರ ಹೇಗೆ ಹೇಳಲ್ಪಟ್ಟಿದೆಯೋ ಅದರಂತೆ ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದದ ಅರ್ಥವಾದ ವಿಷ್ಣುತ್ವ ಇಲ್ಲದೆ ಇದ್ದರೂ ಅಬ್ರಹ್ಮರೂಪನಾದ ಅನ್ನಮಯಾದಿಗಳಲ್ಲಿ ಬ್ರಹ್ಮತ್ವೇನ ಧ್ಯಾನ ಮಾಡುವುದಕ್ಕಾಗಿ ಶ್ರುತಿ ಹೊರಟಿದೆ. ಆದ್ದರಿಂದ 'ಬ್ರಹ್ಮಶಬ್ದಾಭ್ಯಾಸಃ ಅಸ್ತು ವಿಷ್ಣುತ್ವಮ್ ಮಾಸ್ತು ಬ್ರಹ್ಮಶಬ್ದಾಭ್ಯಾಸಸ್ತು ಉಪಾಸನಾಮಾತ್ರೇಣ ಸಂಭವತಿ' ಎಂದು ಅಪ್ರಯೋಜಕ ಶಂಕೆ ಮಾಡಬಹುದು. ಆದ್ದರಿಂದಲೇ 'ಯೇನ್ನಂ ಬ್ರಹ್ಮೋಪಾಸತೇ ಯೇ ಪ್ರಾಣಂ ಬ್ರಹ್ಮೋಪಾಸತೇ' ಎಂಬಲ್ಲಿ 'ಉಪಾಸತೇ' ಎಂಬ ಶಬ್ದಪ್ರಯೋಗ ಕಾಣಿಸುತ್ತದೆ.

ಈ ಆಕ್ಷೇಪ ಸರಿಯಲ್ಲ. ಏಕೆಂದರೆ ಅಸದುಪಾಸನೆ ಮಾಡಬಾರದೆಂದು ಸೂತ್ರಕಾರರು 'ನ ಪ್ರತೀಕೇ ನಹಿ ಸಃ' ಎಂಬ ಸೂತ್ರದಲ್ಲಿ ನಿರಾಕರಿಸುತ್ತಾರೆ.

ಪ್ರತೀಕವಿಷಯತ್ವೇನ ನ ಕಾರ್ಯಾ ವಿಷ್ಣುಭಾವನಾ ।
ಪ್ರತೀಕಂ ನೈವ ವಿಷ್ಣುರ್ಯನ್ ಮಿಥ್ಯೋಪಾಸಾ ಹ್ಯನರ್ಥದಾ ॥

ನಾಮದಲ್ಲಿ ವಿಷ್ಣುವನ್ನು ಉಪಾಸನೆ ಮಾಡಬೇಕು. ಹೊರತು ನಾಮವನ್ನೇ ವಿಷ್ಣುವೆಂದು ಉಪಾಸನೆ ಮಾಡಬಾರದು. ಪ್ರತೀಕದಲ್ಲಿ ವಿಷ್ಣು ಇರುತ್ತಾನೆ ಹೊರತು ಪ್ರತೀಕವೇ ವಿಷ್ಣುವಲ್ಲ. ಪ್ರತೀಕವನ್ನೇ ವಿಷ್ಣುವೆಂಬ

ಉಪಾಸನೆಯು ಮಿಥ್ಯೋಪಾಸನೆ ಆಗುತ್ತದೆ ಆದ್ದರಿಂದ ಅನರ್ಥವೇ ಆಗುತ್ತದೆ ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

ತೈತ್ತಿರೀಯಭಾಷ್ಯದಲ್ಲಿಯೂ ಆಚಾರ್ಯರು ಹೀಗೆ ಹೇಳಿದ್ದಾರೆ - 'ಯೇಽನ್ಯಥಾ ವಿದುಸ್ತೇಽನ್ಯ-ರಾಜಾನಸ್ತೇ ಕ್ಷಯ್ಯಲೋಕಾ ಭವಂತೀತಿ ಶ್ರುತೇರವಿದ್ಯಮಾನೋಪಾಸನಾದ್ದೋಷಾವಗತೇಶ್ಚ' 'ಯಾರು ಅನ್ಯಥಾ ಉಪಾಸನೆ ಮಾಡುತ್ತಾರೆ ಅವರು ಮತ್ತೊಬ್ಬರಿಗೆ ಭೃತ್ಯರಾಗಬೇಕಾಗುತ್ತದೆ. ಮತ್ತು ಕ್ಷೀಣಿಸುವ ಲೋಕವುಳ್ಳವರಾಗುತ್ತಾರೆಂದು ಶ್ರುತಿಯು ಅವಿದ್ಯಮಾನವಾದ ಉಪಾಸನೆಯಿಂದ ದೋಷ ಹೇಳುತ್ತಿದೆ.

ವಿಜ್ಞಾನಮಯನಲ್ಲಿ ಅನ್ನಮಯನಲ್ಲಿ ಜ್ಞಾನವಷ್ಟೇ ಕೇಳಿಸುತ್ತಿದೆ. ಉಪಾಸನೆ ಕೇಳಿಸುತ್ತಿಲ್ಲ. ಆದರೆ ಪ್ರಾಣಾದಿಗಳಲ್ಲಿ ಕೇಳಿಸುತ್ತಿರುವ ಉಪಾಸನೆಗೆ ಏನರ್ಥ? ಎಂಬ ಪ್ರಶ್ನೆ ಬಂದರೆ ಐವರಲ್ಲೂ ಸಾಧಾರಣವಾದ ಯುಕ್ತಿಯನ್ನು ಹೇಳುತ್ತಿದ್ದಾರೆ. ಭೃಗುವಲ್ಲಿಯ ಕೊನೆಯಲ್ಲಿ ಆತ್ಮಶಬ್ದ ಕೇಳಿಸುತ್ತಿದೆ ಅಲ್ಲಿ ಉಪಾಸನೆ ಕೇಳಿಸುತ್ತಿಲ್ಲ. ಆನಂದಮಯಾದಿಗಳನ್ನು ಬ್ರಹ್ಮರೆಂದು ಉಪಾಸನೆ ಮಾಡಬೇಕೆಂದಾದಲ್ಲಿ ಬ್ರಹ್ಮಶಬ್ದದ ಸಮಾನಾರ್ಥವಾದ ಆತ್ಮಶಬ್ದದ ಜೊತೆಗೆ ಉಪಾಸನೆಯನ್ನೂ ಹೇಳಬೇಕಿತ್ತು. ಆದ್ದರಿಂದ ವ್ಯಾಪ್ಯತ್ವಾ-ಸಿದ್ಧಿದೋಷ ಬರುವುದಿಲ್ಲ.

ಅಪ್ರಯೋಜಕತ್ವಶಂಕಾಮೂಲವಾದ ವ್ಯಾಪ್ಯತ್ವಾಸಿದ್ಧಿಯನ್ನು ಪರಿಹರಿಸಿ ಈಗ ವಿಪಕ್ಷವೃತ್ತಿತ್ವ ಮೂಲಕವಾದ ವ್ಯಾಪ್ಯತ್ವಾಸಿದ್ಧಿಯೂ ಬರುವುದಿಲ್ಲವೆಂದು 'ನಚ ಬ್ರಹ್ಮಶಬ್ದಃ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ಆನಂದಮಯಾದಿಃ ವಿಷ್ಣುಃ ಬ್ರಹ್ಮಶಬ್ದಾಭ್ಯಾಸಾತ್' ಎಂಬ ಅನುಮಾನದಲ್ಲಿ ವಿಷ್ಣುವೇ ಸಪಕ್ಷ, ಚತುರ್ಮುಖಾದಿಗಳು ವಿಪಕ್ಷರು. ಬ್ರಹ್ಮಶಬ್ದದ ಪ್ರವೃತ್ತಿನಿಮಿತ್ತ ಗುಣಪೂರ್ಣತ್ವ. ಇದು ವಿಷ್ಣುವಿನಲ್ಲಿ ಪುಷ್ಕಳವಾಗಿ ಇದೆ. ಬೇರೆ ಯಾರಲ್ಲೂ ಇಲ್ಲ.

ಪ್ರಶ್ನೆ - ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದಾಭ್ಯಾಸ ಇರುವ ಮಾತ್ರದಿಂದ ಅನ್ನಮಯಾದಿಗಳನ್ನು ವಿಷ್ಣು ಎನ್ನುವುದಾದರೆ ಭೃಗುವಲ್ಲಿಯಲ್ಲಿ 'ತಪೋ ಬ್ರಹ್ಮೇತಿ' ಇತ್ಯಾದಿಯಾಗಿ ತಪಸ್ಸನ್ನೇ ಬ್ರಹ್ಮನೆಂದು ಐದು ಬಾರಿ ಹೇಳಲಾಗಿದೆ. ಹೀಗೆ ತಪಸ್ಸಿನಲ್ಲೂ ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದ ತಪಸ್ಸೇ ಬ್ರಹ್ಮನಾಗಬೇಕಾದೀತು. ಆದರೆ ಅಲ್ಲಿ ತಪಸ್ಸನ್ನು ಬ್ರಹ್ಮನೆಂದು ಅರ್ಥ ಮಾಡಿಲ್ಲ. ಬ್ರಹ್ಮನು ತಪಸ್ಸಿನಿಂದ ಜ್ಞೇಯನೆಂಬ ಅಭಿಪ್ರಾಯದಿಂದ ತಪಸ್ಸೇ ಬ್ರಹ್ಮನೆಂಬ ಸಾಮಾನಾಧಿಕರಣ್ಯವನ್ನು ಕೂಡಿಸಿದ್ದಾರೆ. ಆದ್ದರಿಂದ ಬ್ರಹ್ಮಶಬ್ದಾಭ್ಯಾಸವೆಂಬ ಹೇತು ತಪಸ್ಸಿನಲ್ಲಿದೆ. ಆದರೆ ವಿಷ್ಣುತ್ವವಿಲ್ಲವೆಂದು ವ್ಯಭಿಚಾರ ಬರುತ್ತದಲ್ಲ?

ಉತ್ತರ - ಪೂರ್ವೋತ್ತರವಾಕ್ಯಗಳನ್ನು ನೋಡಿ ಶ್ರುತಿಗೆ ಅರ್ಥೈಸಬೇಕು. 'ತಪಸಾ ಬ್ರಹ್ಮ ವಿಜಿಜ್ಞಾಸಸ್ವ' ಎಂದು ತಪಸ್ಸಿನಿಂದ ಬ್ರಹ್ಮನನ್ನು ತಿಳಿಯಬೇಕೆಂದು ಹೇಳಿದ್ದಾರೆ. ಮತ್ತು ಮುಂದೆಯೂ 'ಸ ತಪಸ್ತಪ್ತ್ವಾ' ಎಂದೂ ಸಹ ಅನೇಕ ಬಾರಿ ಬಂದಿದೆ. ಆದ್ದರಿಂದ ತಪಸ್ಸೇ ಬ್ರಹ್ಮನಲ್ಲವೆಂದು ತಿಳಿಯುತ್ತದೆ.

ಕೆಲವರ ಆಕ್ಷೇಪ - ಬ್ರಹ್ಮಶಬ್ದದ ಬಲದಿಂದ ವಿಷ್ಣುವೇ ಆನಂದಮಯ. ಚತುರ್ಮುಖಾದಿಗಳಲ್ಲಿ ಇವೆಯೆಂದು ಹೇಳಿದ್ದು ಅಯುಕ್ತ. ಬ್ರಹ್ಮಶಬ್ದವು ವಿಷ್ಣುನಿಷ್ಠವೆನ್ನಲು ಪ್ರಮಾಣವಿಲ್ಲ. 'ತದೇವ ಬ್ರಹ್ಮ ಪರಮಂ ಕವೀನಾಮ್' ಎಂಬುದೂ ಪ್ರಮಾಣವಾಗಲ್ಲ. ಅಲ್ಲಿಯೂ ಪ್ರಜಾಪತಿ ಹಿರಣ್ಯಗರ್ಭಾದಿಶಬ್ದಗಳು ಕೇಳಿ ಬರುತ್ತಿವೆ.

ಸಮಾಧಾನ - ಇವರ ಆಕ್ಷೇಪವೂ ಈಗ ನಿರಸ್ತವಾಯಿತು. ಪ್ರವೃತ್ತಿನಿಮಿತ್ತಪೌಷ್ಕಲ್ಯ ಹಾಗೂ ಸಾವಿರಾರು ಶ್ರುತಿ ಸ್ಮೃತಿಗಳು ಬ್ರಹ್ಮನಲ್ಲೇ ಶ್ರುತವಾಗಿವೆ. ಮತ್ತು ಜಿಜ್ಞಾಸಾಧಿಕರಣದ 'ಬ್ರಹ್ಮಶಬ್ದಶ್ಚ ವಿಷ್ಣಾವೇವ' ಎಂಬ ಭಾಷ್ಯದಲ್ಲಿ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಮಾತ್ರವಿದೆಯೆಂದು ಸಮರ್ಥಿಸಿದ್ದಾರೆ. 'ಸ ವಿಷ್ಣುರಾಹ ಹೀತ್ಯಂತೇ ದೇವಶಾಸ್ತ್ರಸ್ಯ ತೇನ ಹಿ' ಎಂಬ ಅನುವ್ಯಾಖ್ಯಾನವು ಇದನ್ನೇ ಹೇಳುತ್ತಿದೆ. 'ತದೇವ ಬ್ರಹ್ಮ' ಎಂಬ ಶ್ರುತಿಯು ಚತುರ್ಮುಖಪರವಲ್ಲ ವಿಷ್ಣುಪರವೇ ಆಗಿದೆಯೆಂಬುದನ್ನೂ ಸಮರ್ಥಿಸಿದ್ದೇವೆ.

ಮತ್ತು 'ಏಷ ಉ ಏವ ಬ್ರಹ್ಮ ಏಷ ಉ ಏವಾತ್ಮಾ' 'ಇವನೇ ಬ್ರಹ್ಮ ಇವನೇ ಆತ್ಮಾ'; 'ವಿಷ್ಣುರೇವ ಜ್ಯೋತಿಃ ವಿಷ್ಣುರೇವ ಬ್ರಹ್ಮ' ವಿಷ್ಣುವೇ ಜ್ಯೋತಿಯು ವಿಷ್ಣುವೇ ಬ್ರಹ್ಮನು';

'ಪುರುಷಃ ಪರಮಾತ್ಮಾಽಜೋ ಬ್ರಹ್ಮ ನಾರಾಯಣಃ ಪ್ರಭುಃ' 'ಒಡೆಯನಾದ ನಾರಾಯಣನೇ ಪುರುಷ, ಪರಮಾತ್ಮನು ಅಜ ಬ್ರಹ್ಮ ಶಬ್ದಗಳಿಂದ ವೇದ್ಯನಾಗಿದ್ದಾನೆ'

'ಆತ್ಮಾ ಬ್ರಹ್ಮ ಮಹಾಂಸ್ತಾರಃ ಪರಮೇಶಃ
ಶುಚಿಶ್ರವಾಃ । ವಿಷ್ಣುರ್ನಾರಾಯಣೋಽನಂತಃ'

'ಆತ್ಮಾ, ಬ್ರಹ್ಮ, ಮಹಾಂಸ್ತಾರ, ಪರಮೇಶ, ಶುಚಿಶ್ರವ ವಿಷ್ಣು ನಾರಾಯಣ ಅನಂತ ಇವುಗಳೆಲ್ಲ ಒಬ್ಬನನ್ನೇ ಹೇಳುತ್ತವೆ'.

''ಬ್ರಹ್ಮಶಬ್ದಃ ಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೇ'' 'ಬ್ರಹ್ಮಶಬ್ದವು ಪರನಾದ ವಿಷ್ಣುವಿನಲ್ಲಿ ಬಿಟ್ಟು ಬೇರೆಲ್ಲಿಯೂ ಬರುವುದಿಲ್ಲ.

'ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ' ಭಗವಂತನೇ ಬ್ರಹ್ಮ ಮತ್ತು ಪರಮಾತ್ಮನೆನಿಸಿದ್ದಾನೆ.'

'ವಾಸುದೇವಾತ್ಮಕಂ ಬ್ರಹ್ಮ' 'ವಾಸುದೇವನೇ ಬ್ರಹ್ಮ'
'ಅನಂತೋ ಭಗವಾನ್ ಬ್ರಹ್ಮ' 'ಅನಂತನಾದ ಭಗವಂತನೇ ಬ್ರಹ್ಮ'
'ಪರಮಂ ಯೋ ಮಹದ್ ಬ್ರಹ್ಮ' 'ಸರ್ವೋತ್ತಮ ಬ್ರಹ್ಮನೇ ಸರ್ವಶ್ರೇಷ್ಠ'
'ವಾಸುದೇವಾತ್ ಪರಃ ಕೋನು ಬ್ರಹ್ಮಶಬ್ದೋದಿತಃ'
'ವಾಸುದೇವನನ್ನು ಬಿಟ್ಟು ಬೇರೆ ಯಾರು ತಾನೆ ಬ್ರಹ್ಮರಾಗುತ್ತಾರೆ'
'ಏತಸ್ಮಾದ್‌ಬ್ರಹ್ಮಶಬ್ದೋಽಯಂ ವಿಷ್ಣೋರೇವ' ಆದ್ದರಿಂದ ವಿಷ್ಣುವಿನಲ್ಲೇ ಈ ಬ್ರಹ್ಮಶಬ್ದ ಬರುತ್ತದೆ.

'ಬ್ರಹ್ಮಾತ್ಮಾ ವಿಷ್ಣುರೇವ ಹಿ' 'ಬ್ರಹ್ಮ ಆತ್ಮ ವಿಷ್ಣುವೇ ಆಗಿದ್ದಾನೆ.'
'ಆತ್ಮಾಬ್ರಹ್ಮಾದಯಃ ಶಬ್ದಾಸ್ತಮೃತೇ ವಿಷ್ಣುಮವ್ಯಯಮ್'
'ಆತ್ಮ ಬ್ರಹ್ಮಾದಿಶಬ್ದಗಳು ವಿಷ್ಣು ಬಿಟ್ಟು ಬೇರೆಯವರಲ್ಲಿ ಬರುವುದಿಲ್ಲ.'

ಇವೇ ಮೊದಲಾದ ಸ್ಮೃತಿಗಳಿಂದ ಮತ್ತು ಭಾಷ್ಯದಲ್ಲಿ ಅಲ್ಲಲ್ಲಿ ಅನೇಕ ಕಡೆ ಉದಾಹರಿಸಿದ ಅನೇಕ ಶ್ರುತಿಸ್ಮೃತಿಗಳಿಂದ ಬ್ರಹ್ಮ, ಆತ್ಮಶಬ್ದಗಳು ವಿಷ್ಣುವಿನಲ್ಲಷ್ಟೇ ಇವೆಯೆಂದು ತಿಳಿಯುತ್ತದೆ. ಎಲ್ಲಾ ವಾಕ್ಯಗಳೂ ಸ್ಪಷ್ಟವಾಗಿಯೇ ವಿಷ್ಣುವನ್ನು ಹೇಳುತ್ತಿವೆ.

'ತಂ ಹೋವಾಚ ತಪಸಾ ಬ್ರಹ್ಮ ವಿಜಿಜ್ಞಾಸಸ್ವ ತಪೋ ಬ್ರಹ್ಮೇತಿ ಸ ತಪೋ ತಪ್ಯತ ಸ ತಪಸ್ತಪ್ತ್ವಾ ಅನ್ನಂ ಬ್ರಹ್ಮೇತಿ ವ್ಯಜಾನಾತ್' ಎಂದು ಐದು ಬಾರಿ ಬ್ರಹ್ಮಶಬ್ದವು ಅಬ್ರಹ್ಮವಾದ ತಪಸ್ಸಿನಲ್ಲಿ ಕೇಳಿಸುತ್ತಿದೆ.

'ತಪಸಾ ಬ್ರಹ್ಮ' ಎಂದು ತೃತೀಯಾವಿಭಕ್ತಿಯಿಂದ ಸಾಧನತ್ವವು ತಿಳಿಯುತ್ತಿದೆ. ಆದ್ದರಿಂದ 'ತಪೋ ಬ್ರಹ್ಮೇತಿ' ಎಂಬಲ್ಲಿರುವ ಸಾಮಾನಾಧಿಕರಣ್ಯ ಪ್ರಯೋಗವು ಔಪಚಾರಿಕವೆಂದು ತಿಳಿಯುತ್ತದೆ. 'ಆಯುರ್ವೈ ಘೃತಮ್' ಎಂಬಲ್ಲಿ ಅಭೇದ ಪ್ರಯೋಗವಿದ್ದರೂ ಹೇಗೆ ಕಾರ್ಯಕಾರಣಭಾವವಿದೆಯೋ ಅದರಂತೆ ತಿಳಿಯಬೇಕು.




ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದಾಭ್ಯಾಸವನ್ನು ಇನ್ನೂ ಚೆನ್ನಾಗಿ ಹೇಳಬೇಕೆಂದರೆ ತೈತ್ತಿರೀಯ ಶಾಖೆಯಂತೆ ಬೇರೆ ಬೇರೆ ಶಾಖೆಗಳನ್ನೂ ವಿವಕ್ಷಿಸಬೇಕು. ಆವಾಗ ಅಲ್ಲಿಯೂ ಅನೇಕ ಅನ್ನಮಾಯಾದಿಗಳ ಜೊತೆ ಬ್ರಹ್ಮಶಬ್ದವು ಅನೇಕ ಬಾರಿ ಕೇಳಿಸುತ್ತದೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಆದರೆ ಇದು ಅಷ್ಟೊಂದು ಸಮಂಜಸವಾಗಿ ತೋರುವುದಿಲ್ಲ. ತೈತ್ತಿರೀಯ ಶಾಖೆಯಲ್ಲಷ್ಟೇ ಬ್ರಹ್ಮಶಬ್ದಾಭ್ಯಾಸ ತೋರಿಸಬೇಕು. ಅಥವಾ ಬೇರೆ ಶಾಖೆಗಳಲ್ಲಿ ತೈತ್ತಿರೀಯ ಶಾಖೆಯಂತೆ ಅಭ್ಯಾಸ ತೋರಿಸಬೇಕು. ಹೊರತು ಎಲ್ಲ ಶಾಖೆಗಳನ್ನು ಸೇರಿಸಿ ಒಟ್ಟಿಗೆ ಅಭ್ಯಾಸ ತೋರಿಸುವುದು ಆಚಾರ್ಯರಿಗೆ ಸಮ್ಮತವಲ್ಲ. ಆಚಾರ್ಯರ 'ಅನ್ಯಾಸು ಚೈತದ್ರೂಪಾಸು' ಎಂಬ ಮಾತನ್ನು ಗಮನಿಸಿದಾಗ ಈ ಸೂಕ್ಷ್ಮ ವಿಚಾರ ಮನದಟ್ಟಾಗುತ್ತದೆ.

ಇಲ್ಲಿಯ ತನಕ ಭಾಗಾಸಿದ್ಧಿಯನ್ನು ಪರಿಹರಿಸಿದ್ದಾಯಿತು. ಈಗ ವ್ಯಾಪ್ಯತ್ವಾಸಿದ್ಧಿಯೆಂಬ ಹೇತುದೋಷವನ್ನು ನಿರಾಕರಿಸುತ್ತಿದ್ದಾರೆ. ಕೇವಲ ಉಪಾಸನೆಗಾಗಿ ತೈತ್ತಿರೀಯವು ಬ್ರಹ್ಮಶಬ್ದವನ್ನು ಅನೇಕ ಬಾರಿ ಹೇಳುತ್ತಿದೆ. ಹೊರತು ಆನಂದಮಯಾದಿಗಳಲ್ಲಿ ಬ್ರಹ್ಮತ್ವವಿದೆಯೆಂಬ ಅಭಿಪ್ರಾಯದಿಂದಲ್ಲವೆಂದು ಅದ್ವೈತಮತದ ಪ್ರಕಾರ ಆಕ್ಷೇಪ ಬರುತ್ತದೆ. ಆದರೆ 'ನ ಪ್ರತೀಕೇ ನಹಿ ಸಃ' ಎಂಬಂತೆ ಪ್ರತಿಮೆಯೇ ದೇವರಲ್ಲ. ಪ್ರತಿಮೆಯಲ್ಲಿ ದೇವರಿದ್ದಾನೆಂದು ಸೂತ್ರಕಾರರೇ ಅಸದುಪಾಸನೆಯನ್ನು ನಿರಾಕರಿಸಿದ್ದಾರೆ. ಮತ್ತು ಬ್ರಹ್ಮಶಬ್ದದ ಪ್ರವೃತ್ತಿನಿಮಿತ್ತವು ಪರಮಮುಖ್ಯವೃತ್ತಿಯೆನಿಸಿದ ವಿದ್ವದ್ರೂಢಿಯಿಂದ ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಆದ್ದರಿಂದ ವ್ಯಾಪ್ಯತ್ವಾಸಿದ್ಧಿದೋಷ ಬರುವುದಿಲ್ಲ.

ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದವು ಕೇಳಿಸುತ್ತದೆಂದು ಅನ್ನಮಯಾದಿಗಳನ್ನು ಬ್ರಹ್ಮನೆಂದು ಹೇಳಿದರೆ ತಪಸ್ಸಿನಲ್ಲೂ ಅನೇಕ ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದೆ. ಆದ್ದರಿಂದ ತಪಸ್ಸನ್ನೂ ಬ್ರಹ್ಮನೆಂದು ಹೇಳಬೇಕಲ್ಲವೇ? ಎಂಬ ಪ್ರಶ್ನೆಗೂ ಗ್ರಂಥಕಾರರು ಇಲ್ಲಿ ಉತ್ತರಿಸಿದ್ದಾರೆ. 'ತಪಸ್ಸು ಬ್ರಹ್ಮ' ಎಂಬ ಪ್ರಯೋಗವು ಶ್ರುತಿಯಲ್ಲಿರಬಹುದು. ಆದರೆ ಅದೇ ವಾಕ್ಯದ ಹಿಂದಿನ ಮತ್ತು ಮುಂದಿನ ವಾಕ್ಯಗಳನ್ನು ಗಮನಿಸಿದರೆ ತಪಸ್ಸಿನಿಂದ ಬ್ರಹ್ಮನು ಲಭಿಸುತ್ತಾನೆಂದು ತಿಳಿಯುತ್ತದೆ. ಆದ್ದರಿಂದ ತಪಸ್ಸಿನಲ್ಲಿ ಬ್ರಹ್ಮನನ್ನು ಕಾಣಬೇಕೆಂಬ ಅಭಿಪ್ರಾಯವನ್ನು ಶ್ರುತಿಯಲ್ಲಿ ತಿಳಿಯಬೇಕು. ಇಲ್ಲಿಗೆ 'ಆನಂದಮಯೋಽಭ್ಯಾಸಾತ್' ಎಂಬ ಸೂತ್ರ ಮುಗಿಯಿತು.



## ಮಯಟ್ ಪ್ರತ್ಯಯಕ್ಕೆ ತಾದಾತ್ಮ್ಯವು ಅರ್ಥವಲ್ಲ
## (ದ್ವಿತೀಯ ಸೂತ್ರ)

**तात्पर्यचन्द्रिका –**

**यद्यपि –**

**तादात्म्यार्थे विकारार्थे प्राचुर्यार्थे मयट् त्रिधा ।**

**इति वचनात्तादात्म्ये मयट्स्वीकारे प्रतियोगिनो दुःखस्य ईषदनुवृत्त्यादिशङ्काऽनवकाशः । तथाऽपि ''यतो वाचो निवर्तन्ते'' ''को ह्येवान्यात्'' इत्यादिश्रुत्यनुसारेणानन्दादेः पूर्णत्वसिद्ध्यर्थं स्वार्थिकत्वे मयटो वैयर्थ्यपरिहारार्थं च प्राचुर्यार्थतोक्ता ।**

ಅನುವಾದ - ವಸ್ತುತಃ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯವೆಂಬ ಅರ್ಥವನ್ನು ಇಟ್ಟುಕೊಳ್ಳುವುದು ತರವಲ್ಲ. ಹಾಗಾದಲ್ಲಿ ಅಧಿಕವಾದ ಆನಂದವಿದೆಯೆಂದರೆ ಸ್ವಲ್ಪ ದುಃಖವೂ ಇದೆ ಎಂದಂತಾಗುತ್ತದೆ. ಆದ್ದರಿಂದ 'ತಾದಾತ್ಮ್ಯಾರ್ಥೇ ವಿಕಾರಾರ್ಥೇ ಪ್ರಾಚುರ್ಯಾರ್ಥೇ ಮಯಟ್ ತ್ರಿದಾ' ಎಂಬ ಮಾತಿನಂತೆ ತಾದಾತ್ಮ್ಯವೆಂಬ ಅರ್ಥವನ್ನು ಸ್ವೀಕರಿಸುವುದು ಉಚಿತ.

ಆದರೂ ಸಹ ಪ್ರಾಚುರ್ಯಾರ್ಥವನ್ನು ಹೇಳುವುದು ಅನಿವಾರ್ಯ. 'ಯತೋ ವಾಚೋ ನಿವರ್ತಂತೇ' 'ಕೋ ಹ್ಯೇವಾನ್ಯಾತ್‌ಕಃ' ಇತ್ಯಾದಿ ಶ್ರುತಿಗಳಲ್ಲಿ ಆನಂದಪೂರ್ಣತ್ವವನ್ನೇ ಹೇಳಿದ್ದಾರೆ. ಪೂರ್ಣಾನಂದತ್ವ ಸಿದ್ಧವಾಗಬೇಕಾದರೆ ಅವನು ಆನಂದರೂಪನೆಂದು ಹೇಳಬಾರದು. ಅಪರಿಮಿತವಾದ ಆನಂದವುಳ್ಳವನೆಂದೇ ಹೇಳಬೇಕು.

ಮತ್ತು ತಾದಾತ್ಮ್ಯಾರ್ಥ ಹೇಳಿದರೆ ಸ್ವಾರ್ಥದಲ್ಲಿ ಮಯಟ್‌ಪ್ರತ್ಯಯ ಹೇಳಿದಂತಾಯಿತು. ಇದು ವ್ಯರ್ಥ. ಅದಕ್ಕಾಗಿ ಪ್ರಾಚುರ್ಯಾರ್ಥ ಹೇಳಿದ್ದು ಅತ್ಯಂತ ಸಾರ್ಥಕ.

ಕಠಿಣಪದಾರ್ಥ

ವಚನಾತ್ = ಗೀತಾಭಾಷ್ಯದಲ್ಲಿ ಹೇಳಿದಂತೆ, ಪ್ರತಿಯೋಗಿನಃ = ಪ್ರಾಚುರ್ಯದಂತೆ ತಾದಾತ್ಮ್ಯವು ಇತರ ನಿರೂಪ್ಯವಲ್ಲ, ಸ್ವಾರ್ಥಿಕತ್ವೇ = ತಾದಾತ್ಮ್ಯಾರ್ಥ ಹೇಳಿದರೆ, ಉಕ್ತಾ = ಸೂತ್ರಕಾರರಿಂದ ಹೇಳಲ್ಪಟ್ಟಿದೆ.

**प्रकाशः –** एवमाद्यसूत्रं प्रतिज्ञाहेतुसमर्थनेन समर्थ्येदानीमन्नमयादीनां ब्रह्मत्वे यानि बाधकानि विकारप्रत्ययान्यत्वान्तरत्वशरीरत्वादीनि साधारणानि, यान्यन्न-

मयानन्दमययोर्ब्रह्मत्वे विशेषबाधकानि प्रकृतदेहपरामर्शित्वेदमितिप्रत्यक्षनिर्देश-पुच्छब्रह्मत्वोक्त्यादीनि, उपलक्षणत्वेन तत्सर्वबाधकनिरासार्थं सूत्रं –

विकारशब्दान्नेति चेन्न प्राचुर्यात् इति,
इदमित्येव निर्देशो वस्त्रप्रावृतवद्विभोः ।

इत्येतद्व्याख्याने सुधायां तथैवोक्तेः । तत्र प्राचुर्यार्थत्वमाक्षिप्य समाधत्ते – **यद्यपीति** ।। **वचनादिति** ।। गीताभाष्योक्तात् । **प्रतियोगिन इति** ।। तादात्म्यस्य प्राचुर्यवदितरानिरूप्यत्वादिति भावः । "यतो वाचः" इति श्रुतौ हि ब्रह्मानन्दस्या-परिच्छिन्नत्वाभिप्रायेणावाङ्मनसगोचरत्वमुच्यते, तथैव प्राक्समर्थनात् । "को ह्येवान्यात्" इत्यत्राकाशनयन्यायेनाकाशपदवाच्यस्य विष्णोरानन्दमयरूप-पूर्णानन्दत्वे विश्वचेष्टकत्वरूपहेतुर्व्यपदिश्यते । तदुभयानुसारेणेत्यर्थः । 'स्वार्थिकत्वे' तादात्म्यार्थत्वे यन्मयटो वैय्यर्थ्यं, तत्परिहारार्थमित्यर्थः । उक्ता 'सूत्रकृता' इति शेषः । एतेन तद्व्याख्यानपरभाष्यटीकादिग्रन्थोऽपि समर्थितो ध्येयः । तेन "निरवकाशब्रह्मशब्दबलात् सावकाशस्य मयटः प्राचुर्यार्थत्वोपपत्तेः" इति सुधा-वाक्यमुपपन्नं भवति ।

**गुरुराजीयम्** – ननु तथाऽपि द्वितीयसूत्रे मयटः प्राचुर्यार्थत्वं किमर्थमङ्गीकार्यम् । न च तदनङ्गीकारेऽनानन्दस्यापि प्राप्तिः स्यादिति वाच्यं तादात्म्याङ्गीकारेणाप्यनानन्दप्राप्तेःपरिहर्तुं शक्यत्वादित्यत आह – **यद्यपीति** ।।

ವಿವರಣೆ - ಇಲ್ಲಿಯ ತನಕ 'ಆನಂದಮಯೋಽಭ್ಯಾಸಾತ್' ಎಂಬ ಸೂತ್ರವನ್ನು ವ್ಯಾಖ್ಯಾನಿಸಿದ್ದಾಯಿತು. ಮತ್ತು 'ಆನಂದಮಯಃ ಬ್ರಹ್ಮೈವ' ಎಂಬ ಪ್ರತಿಜ್ಞೆಯನ್ನು 'ಅಭ್ಯಾಸಾತ್' ಎಂಬ ಹೇತುವನ್ನು ವಿವರಿಸಿದ್ದಾಯಿತು. ಪ್ರಕೃತ ಅನ್ನಮಯಾದಿಗಳು ಬ್ರಹ್ಮರಾದರೆ ಕೆಲವು ಬಾಧಕಗಳಿವೆ - ವಿಕಾರಪ್ರತ್ಯಯ, ಅನ್ಯತ್ವ, ಅಂತರತ್ವ, ಶರೀರತ್ವ ಮೊದಲಾದವು. ಇವು ಐದು ಜನರಲ್ಲಿ ಸಾಧಾರಣವಾದ ಬಾಧಕಗಳು. ಇನ್ನು ಆನಂದಮಯ ಅನ್ನಮಯಗಳಲ್ಲಿ ಮಾತ್ರ ಬಾಧಕಗಳು ಕೆಲವು - ಪ್ರಕೃತವಾದ ದೇಹಪರಾಮರ್ಶ ಮಾಡಿ 'ಇದಂ' ಎಂಬ ಪ್ರತ್ಯಕ್ಷನಿರ್ದೇಶವು ಅನ್ನಮಯನು ಬ್ರಹ್ಮ ಎನ್ನಲು ಬಾಧಕವಾಗಿದೆ. ಆನಂದಮಯನನ್ನು ಬ್ರಹ್ಮ ಎಂದರೆ ಬ್ರಹ್ಮನಿಗೆ ಪುಚ್ಛತ್ವ ಹೇಳಿದ್ದು ತಪ್ಪಾಗುತ್ತದೆ. ಇವು ವಿಶೇಷಬಾಧಕಗಳು. ಹೀಗೆ ಸಾಮಾನ್ಯಬಾಧಕಗಳು ವಿಶೇಷಬಾಧಕಗಳು ಅನೇಕ ಇವೆ. ಇವುಗಳನ್ನೆಲ್ಲ ಪರಿಹರಿಸಲು ಸೂತ್ರಕಾರರು ಉಪಲಕ್ಷಣತಯಾ ಒಂದು ಬಾಧಕವನ್ನು ಪರಿಹರಿಸುವ ಸೂತ್ರವನ್ನು ಹೇಳಿದ್ದಾರೆ. 'ವಿಕಾರಶಬ್ದಾನ್ನೇತಿ ಚೇನ್ನಪ್ರಾಚುರ್ಯಾತ್' ಎಂದು. ಈ ಸೂತ್ರವನ್ನು ಉಪಲಕ್ಷಣವೆಂದು ಸುಧಾಕಾರರೇ ಹೇಳಿದ್ದಾರೆ. 'ಇದಮಿತ್ಯೇವ ನಿರ್ದೇಶೋ

ವಸ್ತ್ರಪ್ರಾವೃತವದ್ ವಿಭೋಃ' ಎಂಬ ಅನುವ್ಯಾಖ್ಯಾನವನ್ನು ವ್ಯಾಖ್ಯಾನಿಸುವ ಸುಧೆಯಲ್ಲಿ ಇದು ಸ್ಪಷ್ಟವಾಗಿದೆ. 'ಯತೋ ವಾಚೋ' ಇತ್ಯಾದಿ ಶ್ರುತಿಯಲ್ಲಿ ಬ್ರಹ್ಮಾನಂದಕ್ಕೆ ಅವಾಙ್ಮನಸಗೋಚರತ್ವವನ್ನು ಹೇಳಿದ್ದಾರೆ. ವಾಙ್ ಮನಸ್ಸುಗಳಿಗೆ ಅಗೋಚರನಾಗಬೇಕಾದರೆ ಬ್ರಹ್ಮನು ಅಪರಿಚ್ಛಿನ್ನನಾಗಿರಲೇಬೇಕು. 'ಕೋ ಹ್ಯೇವ್ಯಾನ್ಯಾತ್ಕಃ' ಎಂಬ ಶ್ರುತಿಯಲ್ಲಿ ಆಕಾಶಾಧಿಕರಣದ ನ್ಯಾಯದಿಂದ ವಿಷ್ಣುವು ಪೂರ್ಣಾನಂದನಾಗಲು ವಿಶ್ವಚೇಷ್ಟಕತ್ವವೆಂಬ ಹೇತುವನ್ನು ಹೇಳಿದ್ದಾರೆ. ಈ ಎರಡು ಕಾರಣಗಳಿಂದ ಪ್ರಾಚುರ್ಯಾರ್ಥವನ್ನೇ ಸ್ವೀಕರಿಸಬೇಕು. ಪ್ರಾಚುರ್ಯಾರ್ಥ ಹೇಳಿದರೆ ದುಃಖವೂ ಸ್ವಲ್ಪ ಬರಬೇಕಾಗುತ್ತದೆಂಬ ಆಕ್ಷೇಪವನ್ನು ಪರಿಹರಿಸುತ್ತೇವೆ.

ತಾದಾತ್ಮ್ಯಾರ್ಥದಲ್ಲಿ ಮಯಟ್‌ಪ್ರತ್ಯಯ ಹೇಳಿದರೆ ಸ್ವಾರ್ಥದಲ್ಲಿ ಮಯಟ್‌ಪ್ರತ್ಯಯ ಹೇಳಿದಂತಾಗುತ್ತದೆ. ಆವಾಗ ಮಯಟ್‌ಪ್ರತ್ಯಯಕ್ಕೆ ವೈಯ್ಯರ್ಥ್ಯ ಬರುತ್ತದೆ. ಆದ್ದರಿಂದ ಸೂತ್ರಕಾರರು ಪ್ರಾಚುರ್ಯಾರ್ಥವನ್ನೇ ಹೇಳಿದ್ದಾರೆ.

ಹೀಗೆ ಸೂತ್ರವನ್ನು ಸಮರ್ಥಿಸಿದ್ದರಿಂದ ಸೂತ್ರವ್ಯಾಖ್ಯಾನಪರವಾದ ಭಾಷ್ಯ ಟೀಕೆಗಳನ್ನೂ ಸಮರ್ಥಿಸಿದ್ದಾಯಿತು. ಇದರಿಂದ ಪ್ರಾಚುರ್ಯಾರ್ಥ ಹೇಳುವ "ನಿರವಕಾಶ ಬ್ರಹ್ಮಶಬ್ದಬಲಾತ್ ಸಾವಕಾಶಸ್ಯ ಮಯಟಃ ಪ್ರಾಚುರ್ಯಾರ್ಥತ್ವೋಪಪತ್ತೇಃ' ಎಂಬ ಸುಧಾಮಾತನ್ನೂ ವ್ಯಾಖ್ಯಾನಿಸಿದಂತಾಯಿತು.




'ಆನಂದಮಯ' ಎಂದರೆ ಪ್ರಚುರವಾದ ಆನಂದವುಳ್ಳವನು ಎಂಬರ್ಥವನ್ನು ಹೇಳುತ್ತೀರಿ. ಹಾಗಾದಲ್ಲಿ ಸ್ವಲ್ಪ ದುಃಖವೂ ಇರಬೇಕಾಗುತ್ತದೆ. ಆದಕ್ಕೋಸ್ಕರ ಆನಂದಸ್ವರೂಪ ಎಂಬರ್ಥ ಹೇಳುವುದು ಅತ್ಯಂತ ಸೂಕ್ತ. ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯ ಎಂಬ ಅರ್ಥವಿದ್ದಂತೆ ತಾದಾತ್ಮ್ಯವೆಂಬ ಅರ್ಥವೂ ಇದೆ ಎಂಬ ಪ್ರಶ್ನೆ ಬರುತ್ತದೆ.

ಆದರೆ ಆನಂದಪೂರ್ಣತ್ವವನ್ನು ದೇವರಲ್ಲಿ ಸಮನ್ವಯ ಮಾಡಿದಾಗ ದೊರೆಯುವ ಲಾಭ ಆನಂದರೂಪತ್ವ ಹೇಳಿದಾಗ ದೊರೆಯುವುದಿಲ್ಲ. ಜೀವರೂ ಸಹ ಆನಂದರೂಪರಾಗಿದ್ದಾರೆ. ಅದರಂತೆ ದೇವರೂ ಆನಂದರೂಪನೆಂದು ಹೇಳುವುದರಿಂದ ಏನೂ ಲಾಭವಿಲ್ಲ. ಆದಕ್ಕಾಗಿ 'ವಿಕಾರಶಬ್ದಾನ್ನೇತಿ ಚೇನ್ನ' ಎಂಬ ಎರಡನೆಯ ಸೂತ್ರದಲ್ಲಿ ಸೂತ್ರಕಾರರು ವಿಕಾರಾರ್ಥದ ನಿರಾಕರಣೆ ಜೊತೆಗೆ ತಾದಾತ್ಮ್ಯಾರ್ಥವನ್ನೂ ನಿರಾಕರಿಸಿದ್ದಾರೆ. ಒಂದುವೇಳೆ ತಾದಾತ್ಮ್ಯಾರ್ಥ ಹೇಳಿದರೆ ಸ್ವಾರ್ಥದಲ್ಲಿ ಮಯಟ್‌ಪ್ರತ್ಯಯ ಹೇಳಿದಂತಾಗಿ ವೈಯ್ಯರ್ಥ್ಯವೂ ಬರುತ್ತದೆ. ಆದ್ದರಿಂದ ಆನಂದಮಯ ಎಂದರೆ ಪ್ರಚುರವಾದ ಆನಂದವುಳ್ಳವನು ಎಂದೇ ಅರ್ಥ. ದುಃಖದ ಲೇಶಕ್ಕೆ ಸ್ವಲ್ಪವೂ ಅವಕಾಶ ಬಾರದಂತೆ ಮುಂದೆ ಸಮರ್ಥಿಸುತ್ತೇವೆ.



मयानन्दमययोर्ब्रह्मत्वे विशेषबाधकानि प्रकृतदेहपरामर्शित्वेदमितिप्रत्यक्षनिर्देश-पुच्छब्रह्मत्वोक्त्यादीनि, उपलक्षणत्वेन तत्सर्वबाधकनिरासार्थं सूत्रं –

विकारशब्दान्नेति चेन्न प्राचुर्यात् इति,
इदमित्येव निर्देशो वस्त्रप्रावृतवद्विभोः ।

इत्येतद्व्याख्याने सुधायां तथैवोक्तेः । तत्र प्राचुर्यार्थत्वमाक्षिप्य समाधत्ते – **यद्यपीति ।। वचनादिति ।। गीताभाष्योक्तात् । प्रतियोगिन इति ।।** तादात्म्यस्य प्राचुर्यवदितरानिरूप्यत्वादिति भावः । ''यतो वाचः'' इति श्रुतौ हि ब्रह्मानन्दस्यापरिच्छिन्नत्वाभिप्रायेणावाङ्मनसगोचरत्वमुच्यते, तथैव प्राक्समर्थनात् । ''को ह्येवान्यात्'' इत्यत्राकाशनयन्यायेनाकाशपदवाच्यस्य विष्णोरानन्दमयरूपपूर्णानन्दत्वे विश्वचेष्टकत्वरूपहेतुर्व्यपदिश्यते । तदुभयानुसारेणेत्यर्थः । 'स्वार्थिकत्वे' तादात्म्यार्थत्वे यन्मयटो वैय्यर्थ्यं, तत्परिहारार्थमित्यर्थः । उक्ता 'सूत्रकृता' इति शेषः । एतेन तद्व्याख्यानपरभाष्यटीकादिग्रन्थोऽपि समर्थितो ध्येयः । तेन ''निरवकाशब्रह्मशब्दबलात् सावकाशस्य मयटः प्राचुर्यार्थत्वोपपत्तेः'' इति सुधावाक्यमुपपन्नं भवति ।

**गुरुराजीयम् –** ननु तथाऽपि द्वितीयसूत्रे मयटः प्राचुर्यार्थत्वं किमर्थमङ्गीकार्यम् । न च तदनङ्गीकारेऽनानन्दस्यापि प्राप्तिः स्यादिति वाच्यं तादात्म्याङ्गीकारेणाप्यनानन्दप्राप्तेःपरिहर्तुं शक्यत्वादित्यत आह – **यद्यपीति ।।**

ವಿವರಣೆ - ಇಲ್ಲಿಯ ತನಕ 'ಆನಂದಮಯೋಽಭ್ಯಾಸಾತ್' ಎಂಬ ಸೂತ್ರವನ್ನು ವ್ಯಾಖ್ಯಾನಿಸಿದ್ದಾಯಿತು. ಮತ್ತು 'ಆನಂದಮಯಃ ಬ್ರಹ್ಮೈವ' ಎಂಬ ಪ್ರತಿಜ್ಞೆಯನ್ನು 'ಅಭ್ಯಾಸಾತ್' ಎಂಬ ಹೇತುವನ್ನು ವಿವರಿಸಿದ್ದಾಯಿತು. ಪ್ರಕೃತ ಅನ್ನಮಯಾದಿಗಳು ಬ್ರಹ್ಮರಾದರೆ ಕೆಲವು ಬಾಧಕಗಳಿವೆ - ವಿಕಾರಪ್ರತ್ಯಯ, ಅನ್ಯತ್ವ, ಅಂತರತ್ವ, ಶರೀರತ್ವ ಮೊದಲಾದವು. ಇವು ಐದು ಜನರಲ್ಲಿ ಸಾಧಾರಣವಾದ ಬಾಧಕಗಳು. ಇನ್ನು ಆನಂದಮಯ ಅನ್ನಮಯಗಳಲ್ಲಿ ಮಾತ್ರ ಬಾಧಕಗಳು ಕೆಲವು - ಪ್ರಕೃತವಾದ ದೇಹಪರಾಮರ್ಶ ಮಾಡಿ 'ಇದಂ' ಎಂಬ ಪ್ರತ್ಯಕ್ಷನಿರ್ದೇಶವು ಅನ್ನಮಯನು ಬ್ರಹ್ಮ ಎನ್ನಲು ಬಾಧಕವಾಗಿದೆ. ಆನಂದಮಯನನ್ನು ಬ್ರಹ್ಮ ಎಂದರೆ ಬ್ರಹ್ಮನಿಗೆ ಪುಚ್ಛತ್ವ ಹೇಳಿದ್ದು ತಪ್ಪಾಗುತ್ತದೆ. ಇವು ವಿಶೇಷಬಾಧಕಗಳು. ಹೀಗೆ ಸಾಮಾನ್ಯಬಾಧಕಗಳು ವಿಶೇಷಬಾಧಕಗಳು ಅನೇಕ ಇವೆ. ಇವುಗಳನ್ನೆಲ್ಲ ಪರಿಹರಿಸಲು ಸೂತ್ರಕಾರರು ಉಪಲಕ್ಷಣತಯಾ ಒಂದು ಬಾಧಕವನ್ನು ಪರಿಹರಿಸುವ ಸೂತ್ರವನ್ನು ಹೇಳಿದ್ದಾರೆ. 'ವಿಕಾರಶಬ್ದಾನ್ನೇತಿ ಚೇನ್ನಪ್ರಾಚುರ್ಯಾತ್' ಎಂದು. ಈ ಸೂತ್ರವನ್ನು ಉಪಲಕ್ಷಣವೆಂದು ಸುಧಾಕಾರರೇ ಹೇಳಿದ್ದಾರೆ. 'ಇದಮಿತ್ಯೇವ ನಿರ್ದೇಶೋ

ವಸ್ತ್ರಪ್ರಾವೃತವದ್ ವಿಭೋಃ' ಎಂಬ ಅನುವ್ಯಾಖ್ಯಾನವನ್ನು ವ್ಯಾಖ್ಯಾನಿಸುವ ಸುಧೆಯಲ್ಲಿ ಇದು ಸ್ಪಷ್ಟವಾಗಿದೆ. 'ಯತೋ ವಾಚೋ' ಇತ್ಯಾದಿ ಶ್ರುತಿಯಲ್ಲಿ ಬ್ರಹ್ಮಾನಂದಕ್ಕೆ ಅವಾಙ್ಮನಸಗೋಚರತ್ವವನ್ನು ಹೇಳಿದ್ದಾರೆ. ವಾಙ್ ಮನಸ್ಸುಗಳಿಗೆ ಅಗೋಚರನಾಗಬೇಕಾದರೆ ಬ್ರಹ್ಮನು ಅಪರಿಚ್ಛಿನ್ನನಾಗಿರಲೇಬೇಕು. 'ಕೋ ಹ್ಯೇವ್ಯಾನ್ಯಾತ್ಕಃ' ಎಂಬ ಶ್ರುತಿಯಲ್ಲಿ ಆಕಾಶಾಧಿಕರಣದ ನ್ಯಾಯದಿಂದ ವಿಷ್ಣುವು ಪೂರ್ಣಾನಂದನಾಗಲು ವಿಶ್ವಚೇಷ್ಟಕತ್ವವೆಂಬ ಹೇತುವನ್ನು ಹೇಳಿದ್ದಾರೆ. ಈ ಎರಡು ಕಾರಣಗಳಿಂದ ಪ್ರಾಚುರ್ಯಾರ್ಥವನ್ನೇ ಸ್ವೀಕರಿಸಬೇಕು. ಪ್ರಾಚುರ್ಯಾರ್ಥ ಹೇಳಿದರೆ ದುಃಖವೂ ಸ್ವಲ್ಪ ಬರಬೇಕಾಗುತ್ತದೆಂಬ ಆಕ್ಷೇಪವನ್ನು ಪರಿಹರಿಸುತ್ತೇವೆ.

ತಾದಾತ್ಮ್ಯಾರ್ಥದಲ್ಲಿ ಮಯಟ್ಪ್ರತ್ಯಯ ಹೇಳಿದರೆ ಸ್ವಾರ್ಥದಲ್ಲಿ ಮಯಟ್ಪ್ರತ್ಯಯ ಹೇಳಿದಂತಾಗುತ್ತದೆ. ಆವಾಗ ಮಯಟ್ಪ್ರತ್ಯಯಕ್ಕೆ ವೈಯರ್ಥ್ಯ ಬರುತ್ತದೆ. ಆದ್ದರಿಂದ ಸೂತ್ರಕಾರರು ಪ್ರಾಚುರ್ಯಾರ್ಥವನ್ನೇ ಹೇಳಿದ್ದಾರೆ.

ಹೀಗೆ ಸೂತ್ರವನ್ನು ಸಮರ್ಥಿಸಿದ್ದರಿಂದ ಸೂತ್ರವ್ಯಾಖ್ಯಾನಪರವಾದ ಭಾಷ್ಯ ಟೀಕೆಗಳನ್ನೂ ಸಮರ್ಥಿಸಿದ್ದಾಯಿತು. ಇದರಿಂದ ಪ್ರಾಚುರ್ಯಾರ್ಥ ಹೇಳುವ "ನಿರವಕಾಶ ಬ್ರಹ್ಮಶಬ್ದಬಲಾತ್ ಸಾವಕಾಶಸ್ಯ ಮಯಟಃ ಪ್ರಾಚುರ್ಯಾರ್ಥತ್ವೋಪಪತ್ತೇಃ' ಎಂಬ ಸುಧಾಮಾತನ್ನೂ ವ್ಯಾಖ್ಯಾನಿಸಿದಂತಾಯಿತು.




'ಆನಂದಮಯ' ಎಂದರೆ ಪ್ರಚುರವಾದ ಆನಂದವುಳ್ಳವನು ಎಂಬರ್ಥವನ್ನು ಹೇಳುತ್ತೀರಿ. ಹಾಗಾದಲ್ಲಿ ಸ್ವಲ್ಪ ದುಃಖವೂ ಇರಬೇಕಾಗುತ್ತದೆ. ಅದಕ್ಕೋಸ್ಕರ ಆನಂದಸ್ವರೂಪ ಎಂಬರ್ಥ ಹೇಳುವುದು ಅತ್ಯಂತ ಸೂಕ್ತ. ಮಯಟ್ಪ್ರತ್ಯಯಕ್ಕೆ ಪ್ರಾಚುರ್ಯ ಎಂಬ ಅರ್ಥವಿದ್ದಂತೆ ತಾದಾತ್ಮ್ಯವೆಂಬ ಅರ್ಥವೂ ಇದೆ ಎಂಬ ಪ್ರಶ್ನೆ ಬರುತ್ತದೆ.

ಆದರೆ ಆನಂದಪೂರ್ಣತ್ವವನ್ನು ದೇವರಲ್ಲಿ ಸಮನ್ವಯ ಮಾಡಿದಾಗ ದೊರೆಯುವ ಲಾಭ ಆನಂದರೂಪತ್ವ ಹೇಳಿದಾಗ ದೊರೆಯುವುದಿಲ್ಲ. ಜೀವರೂ ಸಹ ಆನಂದರೂಪರಾಗಿದ್ದಾರೆ. ಅದರಂತೆ ದೇವರೂ ಆನಂದರೂಪನೆಂದು ಹೇಳುವುದರಿಂದ ಏನೂ ಲಾಭವಿಲ್ಲ. ಅದಕ್ಕಾಗಿ 'ವಿಕಾರಶಬ್ದಾನ್ನೇತಿ ಚೇನ್ನ' ಎಂಬ ಎರಡನೆಯ ಸೂತ್ರದಲ್ಲಿ ಸೂತ್ರಕಾರರು ವಿಕಾರಾರ್ಥದ ನಿರಾಕರಣೆ ಜೊತೆಗೆ ತಾದಾತ್ಮ್ಯಾರ್ಥವನ್ನೂ ನಿರಾಕರಿಸಿದ್ದಾರೆ. ಒಂದುವೇಳೆ ತಾದಾತ್ಮ್ಯಾರ್ಥ ಹೇಳಿದರೆ ಸ್ವಾರ್ಥದಲ್ಲಿ ಮಯಟ್ಪ್ರತ್ಯಯ ಹೇಳಿದಂತಾಗಿ ವೈಯರ್ಥ್ಯವೂ ಬರುತ್ತದೆ. ಆದ್ದರಿಂದ ಆನಂದಮಯ ಎಂದರೆ ಪ್ರಚುರವಾದ ಆನಂದವುಳ್ಳವನು ಎಂದೇ ಅರ್ಥ. ದುಃಖದ ಲೇಶಕ್ಕೆ ಸ್ವಲ್ಪವೂ ಅವಕಾಶ ಬಾರದಂತೆ ಮುಂದೆ ಸಮರ್ಥಿಸುತ್ತೇವೆ.



ಸೂತ್ರಕ್ರಮದಲ್ಲಿ ಸ್ವಾರಸ್ಯ

**तात्पर्यचन्द्रिका—**

अन्नमयादिसाधारणहेतोरभ्यासात् पश्चात् मान्त्रवर्णिकगानादेस्तु पूर्वमानन्दमयमात्रासाधारणस्य तद्धेतुव्यपेदशस्य निवेशनं तु, मान्त्रवर्णिकसूत्रे आनन्दमयादिस्थब्रह्मशब्दस्यापरब्रह्मपरत्वशङ्काया अपि मन्त्रवर्णस्थपरत्वविशेषणेन निरासात्, ''अस्मिन्नस्य'' इति सूत्रे च भेदस्य मुक्तावपि सत्त्वेनापारमार्थिकत्वशङ्काया अपि निरासात्, तदनन्तरं तद्धेतुव्यपदेशोक्तौ तन्निराऽसेपि तद्धेतुव्यपदेशो हेतुरिति शङ्का स्यात्, सा मा भूदित्येवमर्थम् । न चैवमप्यभ्यासं तद्धेतुव्यपदेशं च साधकमुक्त्वाऽनन्तरं ''विकारशब्दात्'' इति बाधकमुद्धर्तव्यमिति शङ्क्यम्, ''को ह्येवान्यात्'' इति तद्धेतुव्यपदेशस्य आनन्दमयस्य विष्णुत्व इव प्राचुर्यं मयडर्थ इत्यत्रापि हेतुत्वात् ''अस्मिन्'' इति सूत्रस्य स्वपक्षसाधकत्वेऽपि ''नेतरः'' ''भेदव्यपदेशात्'' इत्याभ्यां सूत्राभ्यां परपक्षे बाधकोक्तौ भेदस्यापारमार्थिकत्वशङ्कानिरासेन परपक्षे बाधकत्वस्यापि सत्त्वात्तदानन्तर्यम् ।

तथा ''भेदव्यपदेशात्'' इत्यस्यानन्तरं भेदवदभेदोऽपि प्रामाणिकः, तत्र प्रत्यक्षस्यासम्भवेऽपि, श्रुतेश्च ''तद्गुणसारत्वात्'' इत्यत्रान्यपरताया वक्ष्यमाणत्वेऽपि, जगत्कारणस्य शास्त्रयोनित्वेऽपि तत्सार्वज्ञ्यादौ सर्वकर्तृत्वादेरिव, 'विमताः आत्मानः परमात्मनो न भिद्यन्ते आत्मत्वात् परमात्मवत्' इत्याद्यनुमानस्य सम्भवादिति परपक्षे साधकशङ्कायां श्रुत्यादिसाहाय्यरहितं तद्विरुद्धं चानुमानमप्रमाणमतिप्रसङ्गादिति ''कामात्'' इति सूत्रेण निरस्तायां, अनन्तरं भेद श्रुत्यभेदानुमानयोरपारमार्थिकपारमार्थिकविषयत्वादविरोध इति या शङ्का, तस्या अपि ''अस्मिन्'' इति सूत्रेण निरासात्तस्यान्त्यत्वम् ।

यद्यपि ''नेतरः'' इत्यत्र 'अनुपपत्तेः' इत्यनेन हिरण्यगर्भादिजीवानामानन्दमयत्वे तज्ज्ञानान्मोक्षानुपपत्तिरिव हिरण्यगर्भादीनामानन्दमयाद् भेदव्यपदेशानुपपत्तिरपि विवक्षितुं शक्या । तथाऽपि जीव एवानन्दमयो न ब्रह्मेति वदता

पूर्वपक्षिणा पूर्वं स्वाङ्गीकृतं जीवब्रह्मभेदं त्यक्त्वा, जीवानामानन्दमयत्वेऽपि जीवचैतन्यस्य ब्रह्मचैतन्याभेदात् जीवतत्त्वज्ञानेनापि मोक्षोपपत्तिरिति प्रकारान्तरेण शङ्किते, तच्छङ्काया अपि जीवानन्दमययोरिव जीवब्रह्मणोरपि भेदं कथयता ''भेदव्यपदेशात्'' इत्यनेन निरासाय भेदव्यपदेशः पृथगुक्तः ।

अत एव ''भेद'' इति सूत्रमत्र टीकायां हिरण्यगर्भादिजीवानामानन्दमयत्व-निरासकतया व्याख्याय, सुधायां जीवब्रह्माभेदनिरासकतया व्याख्यातम् । अत एव च ''कामात्'' इति सूत्रे जीवब्रह्माभेदानुमाननिरासः; भाष्ये च ''न च तत्त्वमसि'' इत्यादिना जीवब्रह्माभेदश्रुतिगत्युक्तिः, अनुव्याख्याने च –

न जीवभेदसूत्राणां शङ्क्याऽत्र पुनरुक्तता ।
वाक्यान्तरद्योतकत्वात्पृथगित्यत्र पूर्णता ।

इति, ''भेद'' इत्यस्य सूत्रस्य अन्तरधिकरणादिस्थैः ''भेदव्यपदेशाच्चान्यः'' इत्यादिभिर्जीवेश्वराभेदनिरासकैः पौनरुक्त्यशङ्कासमाधानं च सङ्गच्छत इति ।

ಅನುವಾದ - ಅನ್ನಮಯಾದಿ ಐವರಲ್ಲೂ ಸಾಧಾರಣವಾದ ಅಭ್ಯಾಸದ ಅನಂತರ, ಮಾಂತ್ರವರ್ಣಿಕಗಾನಾದಿಗಳ ಮೊದಲು ಆನಂದಮಯನಲ್ಲಷ್ಟೇ ಇರುವ ತದ್ಧೇತುವ್ಯಪದೇಶ-ಸೂತ್ರವನ್ನು ಹೇಳಿದ್ದಾರೆ. ಈ ಸೂತ್ರಕ್ಕಿಂತ ಇರುವ ಮೊದಲೆರಡು ಸೂತ್ರಗಳು ಅನಂತರವಿರುವ ಸೂತ್ರಗಳೂ ಅನ್ನಮಯಾದಿ ಐವರಲ್ಲಿಯೂ ಸಾಧಾರಣವಾದ ಯುಕ್ತಿಗಳನ್ನು ಹೇಳುತ್ತಿವೆ; ಆದರೆ ತದ್ಧೇತುಸೂತ್ರ ಮಾತ್ರ ಕೇವಲ ಆನಂದಮಯಪರವಾಗಿದೆ. ಇದನ್ನು ಹೀಗೆ ಮಧ್ಯದಲ್ಲಿ ನಿವೇಶಿಸಲು ಕಾರಣವೇನು?

ಕಾರಣವಿದೆ - ಮಾಂತ್ರವರ್ಣಿಕಸೂತ್ರದಲ್ಲಿ ಆನಂದಮಯಾದಿ ಪ್ರಕರಣದಲ್ಲಿರುವ ಬ್ರಹ್ಮಶಬ್ದವು ಚತುರ್ಮುಖಾದಿಗಳೂ ಆಗಬಹುದೆಂಬ ಆಶಂಕೆಯನ್ನು ಪರಿಹರಿಸಿದ್ದಾರೆ. 'ಬ್ರಹ್ಮವಿದಾಪ್ನೋತಿ ಪರಮ್' ಎಂದು ಪರತ್ವ ವಿಶೇಷಣ ಹೇಳಿದ್ದರಿಂದ ಅಪರ ಬ್ರಹ್ಮರನ್ನು ವಿವಕ್ಷಿಸಬಾರದೆಂದು. ಹೀಗೆ ಮಾಂತ್ರವರ್ಣಿಕಸೂತ್ರವು ಆನಂದಮಯಾದಿಗಳಿಗೆ ಬ್ರಹ್ಮತ್ವವನ್ನು ಸಮರ್ಥಿಸುವುದರ ಜೊತೆಗೆ ಅಪರಬ್ರಹ್ಮತ್ವಶಂಕೆಯನ್ನೂ ನಿರಾಕರಿಸಿದೆ. ಮಾಂತ್ರವರ್ಣಿಕಸೂತ್ರದ ಅನಂತರ ತದ್ಧೇತುಸೂತ್ರ ಹೇಳಿದ್ದರೆ ತದ್ಧೇತುಸೂತ್ರವೂ ಅಪರಬ್ರಹ್ಮತ್ವದ ಶಂಕಾನಿರಾಸಪರವಾಗಬೇಕಾದೀತು.

'ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ' ಎಂಬ ಸೂತ್ರದಲ್ಲಿ ಬ್ರಹ್ಮನನ್ನು ಉಪಾಸನೆ ಮಾಡಿದರೆ ಅನ್ನಮಯಾದಿಗಳ ಪ್ರಾಪ್ತಿ ಹೇಳಿ ಬ್ರಹ್ಮ ಮತ್ತು ಅನ್ನಮಯಾದಿಗಳು ಬೇರೆಯಲ್ಲವೆಂದು

ಸಮರ್ಥಿಸಿದ್ದಾರೆ. ಮತ್ತು ಅನ್ನಮಯಾದಿಗಳ ಸಾಮೀಪ್ಯ ಹೇಳಿದ್ದರಿಂದ ಮುಕ್ತಿಯಲ್ಲಿ ಭೇದವನ್ನು ಹೇಳಿದಂತಾಯಿತು. ಆ ಭೇದವು ವ್ಯಾವಹಾರಿಕವಲ್ಲ ಎಂಬುದನ್ನೂ ಈ ಸೂತ್ರದಲ್ಲೇ ಹೇಳಿದ್ದಾರೆ. ಒಂದು ವೇಳೆ 'ಅಸ್ಮಿನ್ನಸ್ಯ ಚ' ಎಂಬ ಸೂತ್ರದ ಅನಂತರ 'ತದ್ಧೇತುಸೂತ್ರವನ್ನು ಹೇಳಿದರೆ ತದ್ಧೇತುಸೂತ್ರವೂ ಅನ್ನಮಯಾದಿಗಳಿಗೆ ಬ್ರಹ್ಮತ್ವವನ್ನು ಮತ್ತು ಭೇದಕ್ಕೆ ಪಾರಮಾರ್ಥಿಕತ್ವವನ್ನೂ ಸಮರ್ಥಿಸುತ್ತಿದೆ ಎಂದಾಗಬೇಕಾದೀತು.

ಅಭ್ಯಾಸ ಹಾಗು ತದ್ಧೇತುವ್ಯಪದೇಶಗಳು ಸ್ವಪಕ್ಷಸಾಧಕಯುಕ್ತಿಗಳಾಗಿವೆ. 'ವಿಕಾರಶಬ್ದಾತ್' ಎಂಬುದು ಬಾಧಕಯುಕ್ತಿಯಾಗಿದೆ. ಮೊದಲು ಸಾಧಕಯುಕ್ತಿಗಳನ್ನು ಹೇಳಿ ಅನಂತರ ಬಾಧಕಯುಕ್ತಿಯನ್ನು ಹೇಳುವುದು ಸಮಂಜಸವಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಹೀಗೆ ಪ್ರಶ್ನಿಸಬಾರದು. ಏಕೆಂದರೆ 'ಕೋ ಹ್ಯೇವಾನ್ಯಾತ್ಕಃ' ಎಂಬ ತದ್ಧೇತುವ್ಯಪದೇಶವು ಆನಂದಮಯನಿಗೆ ವಿಷ್ಣುತ್ವವನ್ನು ಹೇಗೆ ನಿಶ್ಚಯಿಸುತ್ತದೋ, ಅದರಂತೆ ಮಯಟ್‌ಪ್ರತ್ಯಯವು ಪ್ರಾಚುರ್ಯಾರ್ಥಕವೆಂಬುದನ್ನು ಸಮರ್ಥಿಸುತ್ತದೆ.

ಇನ್ನು 'ಅಸ್ಮಿನ್ನಸ್ಯಚ' ಎಂಬ ಸೂತ್ರವು ಸ್ವಪಕ್ಷಸಾಧಕವಾಗಿದೆ. ಇದನ್ನು ಕೊನೆಯಲ್ಲೇಕೆ ಹೇಳಿದಿರಿ? ಮಾಂತ್ರವರ್ಣಿಕದ ಅನಂತರವೆ ಹೇಳಬಹುದಿತ್ತಲ್ಲವೆ? ಎಂಬ ಪ್ರಶ್ನೆ ಬರುತ್ತದೆ. ಆದರೆ 'ನೇತರಃ' 'ಭೇದವ್ಯಪದೇಶಾತ್' ಎಂಬೆರೆಡು ಸೂತ್ರಗಳಲ್ಲಿ ಪರಪಕ್ಷದಲ್ಲಿ ಬಾಧಕ ಹೇಳಿದ್ದಾರೆ. ಅಲ್ಲಿ ಹೇಳಿದ ಭೇದವು ಅಪಾರಮಾರ್ಥಿಕವೆಂಬ ಶಂಕೆಯನ್ನು 'ಅಸ್ಮಿನ್ನಸ್ಯ' ಎಂಬ ಸೂತ್ರವು ಪರಿಹರಿಸುತ್ತಿದೆ. ಆದ್ದರಿಂದ 'ಅಸ್ಮಿನ್ನಸ್ಯ ಚ' ಎಂಬುದು ಕೇವಲ ಸ್ವಪಕ್ಷಸಾಧಕವಾಗಿಲ್ಲ. ಭೇದಕ್ಕೆ ಅಪಾರಮಾರ್ಥಿಕತ್ವ-ಶಂಕೆಯನ್ನು ಪರಿಹರಿಸುವ ಮೂಲಕ ಪರಪಕ್ಷದಲ್ಲಿರುವ ಬಾಧಕವನ್ನೂ ಸಮರ್ಥಿಸುತ್ತಿದೆ. ಆದ್ದರಿಂದ ಕೊನೆಯಲ್ಲೇ ಈ ಸೂತ್ರವನ್ನು ಹೇಳಿದ್ದಾರೆ.

'ಅಸ್ಮಿನ್ನಸ್ಯ' ಎಂಬ ಸೂತ್ರವು ಭೇದವ್ಯಪದೇಶಸೂತ್ರದ ಅನಂತರ ಬರಬೇಕೆಂದು ಹೇಳಿದಿರಿ. ಹಾಗಾದರೆ ಮಧ್ಯದಲ್ಲಿ 'ಕಾಮಾಚ್ಚ' ಎಂಬ ಸೂತ್ರವೇಕೆ? ಎಂಬ ಪ್ರಶ್ನೆ ಬರುತ್ತದೆ ಇದಕ್ಕೆ ಇಷ್ಟು ಉತ್ತರ - 'ಭೇದವ್ಯಪದೇಶಾತ್' ಎಂಬ ಸೂತ್ರದಲ್ಲಿ ಭೇದದಲ್ಲಿ ಪ್ರಮಾಣವಿದೆಯೆಂದು ಸಮರ್ಥಿಸಿದ್ದಾಯಿತು. ಇದರಿಂದ ಭೇದವು ಪ್ರಾಮಾಣಿಕವೆಂದು ಸಿದ್ಧವಾಯಿತು. ಭೇದದಂತೆ ಅಭೇದವೂ ಸಹ ಪ್ರಾಮಾಣಿಕವಾಗಲಿಯೆಂಬ ಆಕ್ಷೇಪ ಬರುತ್ತದೆ. ಅದು ಹೀಗೆ - ಜೀವ ಬ್ರಹ್ಮರ ಅಭೇದವಿಷಯದಲ್ಲಿ ಪ್ರತ್ಯಕ್ಷಕ್ಕೆ ಅವಕಾಶವಿಲ್ಲ. ಇನ್ನು ಶ್ರುತಿಯನ್ನು ಪ್ರಮಾಣವನ್ನಾಗಿ ಹೇಳಿದರೆ 'ತದ್‌ಗುಣಸಾರತ್ವಾತ್' ಇತ್ಯಾದಿ ಸೂತ್ರಗಳಲ್ಲಿ ಆ ಶ್ರುತಿಗಳಿಗೆ ಅನ್ಯಾರ್ಥವನ್ನು ಮಾಡುತ್ತೀರಿ. ಆದರೆ ಜೀವ ಬ್ರಹ್ಮಾಭೇದವಿಷಯದಲ್ಲಿ ಅನುಮಾನ ಪ್ರಮಾಣವನ್ನು ಹೇಳಬಹುದು - 'ವಿಮತಾಃ ಆತ್ಮಾನಃ ಪರಮಾತ್ಮನಃ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್' ಎಂದು ಜಗತ್ಕಾರಣನಾದ ಬ್ರಹ್ಮನಿಗೆ ಜೀವನಿಂದ ಅಭೇದ ಹೇಳಲು ಹೇಗೆ ಸಾಧ್ಯ? ಶಾಸ್ತ್ರಯೋನಿತ್ವಸೂತ್ರದಲ್ಲಿ ಬ್ರಹ್ಮನನ್ನು

ಶಾಸ್ತ್ರೈಕಸಮಧಿಗಮ್ಯನೆಂದು ಹೇಳಿದ್ದಾಗಿದೆಯೆಲ್ಲ? ಎಂದರೆ ಹೌದು. ಆದರೆ 'ಈಶ್ವರಃ ಸರ್ವಜ್ಞಃ ಸರ್ವಕರ್ತೃತ್ವಾತ್' ಇತ್ಯಾದಿಯಾಗಿ ನೀವೂ ಅನುಮಾನ ಮಾಡುತ್ತೀರಿ. ಶ್ರುತಿಸಹಾಯವುಳ್ಳ ಅನುಮಾನವೇದ್ಯತ್ವವು ನಿಮಗೂ ಸಮ್ಮತವಾಗಿದೆ. ಅದರಂತೆ ನಾವೂ ಸಹ ತತ್ವಮಸ್ಯಾದಿ ಶ್ರುತಿಗಳ ಸಹಾಯವುಳ್ಳ ಅನುಮಾನವನ್ನೇ ಪ್ರಯೋಗಿಸಿದ್ದೇವೆ. ಇವಾಗ ಅಭೇದವು ಪ್ರಾಮಾಣಿಕವಾಗುತ್ತದಲ್ಲ?

ಹೀಗೆ ಪರಪಕ್ಷದಲ್ಲಿಯೂ ಸಾಧಕ ಪ್ರಮಾಣವಿದೆಯೆಂಬ ಆಕ್ಷೇಪ ಬರುತ್ತದೆ. ಈ ಆಕ್ಷೇಪವನ್ನು ಪರಿಹರಿಸಲು 'ಕಾಮಾಚ್ಚ ನಾನುಮಾನಾಪೇಕ್ಷಾ' ಎಂಬ ಸೂತ್ರ ಹೊರಟಿದೆ. ಜೀವೇಶಾಭೇದವಿಷಯದಲ್ಲಿ ನೀವು ಹೇಳಿದ ಅನುಮಾನವು ಶ್ರುತ್ಯಾದಿ ಸಹಾಯದಿಂದ ರಹಿತವಾಗಿದೆ. ಇಂತಹ ಅನುಮಾನವೇನಾದರೂ ಪ್ರಮಾಣವಾದರೆ ಅತಿಪ್ರಸಂಗ ಬರುತ್ತದೆಂದು ಕಾಮಾಚ್ಚ ಸೂತ್ರವು ಸಮರ್ಥಿಸುತ್ತಿದೆ.

ಇದರ ಮೇಲೆ ಪುನಃ ಆಕ್ಷೇಪ ಬರುತ್ತದೆ - ನೀವು ಭೇದವಿಷಯದಲ್ಲಿ ಶ್ರುತಿ ಹೇಳುತ್ತೀರಿ. ನಾವು ಅಭೇದ ವಿಷಯದಲ್ಲಿ ಅನುಮಾನ ಹೇಳಿದ್ದೇವೆ. ನಿಮ್ಮ ಶ್ರುತಿಗೂ ನಮ್ಮ ಅನುಮಾನಕ್ಕೂ ವಿರೋಧವೇ ಇಲ್ಲ. ಏಕೆಂದರೆ ಭೇದಶ್ರುತಿಯು ಅಪಾರಮಾರ್ಥಿಕವಿಷಯವಾಗಿದೆ. ಅಭೇದಾನುಮಾನವು ಪಾರಮಾರ್ಥಿಕವಿಷಯವಾಗಿದೆ. ಆದ್ದರಿಂದ ಇವೆರಡಕ್ಕೆ ವಿರೋಧವೇ ಬರುವುದಿಲ್ಲವೆಂದು. ಈ ಆಕ್ಷೇಪವನ್ನೂ ಕೂಡ 'ಅಸ್ಮಿನ್ನಸ್ಯ ಚ' ಎಂಬ ಸೂತ್ರವು ಪರಿಹರಿಸುತ್ತದೆ. ಶ್ರುತಿ ಮುಕ್ತಿಯಲ್ಲಿಯೂ ಭೇದವನ್ನು ಹೇಳುವುದರಿಂದ ಭೇದವು ಅಪಾರಮಾರ್ಥಿಕವಾಗುವುದಿಲ್ಲವೆಂದು ಸೂತ್ರ ಹೇಳುತ್ತಿದೆ. ಮತ್ತು ಸ್ವಪಕ್ಷಸಾಧನೆಯನ್ನು ಮಾಡುತ್ತಿರುವುದರಿಂದ ಕೊನೆಯಲ್ಲಿಯೇ 'ಅಸ್ಮಿನ್ನಸ್ಯ' ಎಂಬ ಸೂತ್ರವನ್ನು ಹೇಳಿದ್ದಾರೆ.

ಪ್ರಶ್ನೆ - ಭೇದವ್ಯಪದೇಶಸೂತ್ರದ ಅರ್ಥವು 'ನೇತರೋಽನುಪಪತ್ತೇಃ' ಎಂಬ ಸೂತ್ರದಿಂದಲೇ ತಿಳಿಯುತ್ತದೆ. ಅದು ಹೀಗೆ - 'ನೇತರೋಽನುಪಪತ್ತೇಃ' ಎಂಬ ಸೂತ್ರದಲ್ಲಿ 'ಅನುಪಪತ್ತೇಃ' ಎಂಬುದಕ್ಕೆ ಹಿರಣ್ಯಗರ್ಭಾದಿಜೀವರು ಆನಂದಮಯರಾದರೆ ಅವರ ಜ್ಞಾನದಿಂದ ಮೋಕ್ಷವು ಅನುಪಪನ್ನವಾಗುತ್ತದೆಂದು ಅರ್ಥ. ಇದರಂತೆ ಇನ್ನೊಂದು ಅರ್ಥವನ್ನೂ ಹೇಳಬಹುದು - 'ಹಿರಣ್ಯಗರ್ಭಾದಿಗಳಿಗೆ ಆನಂದಮಯನಿಂದ ಭೇದ ಹೇಳಿದ್ದಾರೆ. ಹೀಗಿರುವಾಗ ಹಿರಣ್ಯಗರ್ಭಾದಿಗಳು ಆನಂದಮಯರಾಗುವುದಿಲ್ಲ' ಎಂಬ ಈ ಎರಡನೆಯ ಅರ್ಥವು ಭೇದವ್ಯಪದೇಶಸೂತ್ರದ ಅರ್ಥವೇ ಆಗಿದೆ. ಭೇದವ್ಯಪದೇಶ ಸೂತ್ರದ ಅರ್ಥವನ್ನು 'ನೇತರೋಽನುಪಪತ್ತೇಃ' ಎಂಬ ಸೂತ್ರದಿಂದಲೇ ತಿಳಿಯಲು ಬರುವಾಗ ಪುನಃ ಭೇದವ್ಯಪದೇಶ ಸೂತ್ರವು ಅನಾವಶ್ಯಕವಲ್ಲವೇ?

ಉತ್ತರ - ಹೌದು ಆದರೂ ಸಹ ಭೇದವ್ಯಪದೇಶಸೂತ್ರವು ಬೇಕು. ಏಕೆಂದರೆ ಜೀವನೇ ಆನಂದಮಯನಾಗಿದ್ದಾನೆ; ಬ್ರಹ್ಮನಲ್ಲವೆಂದು ಪೂರ್ವಪಕ್ಷಿ ಆಕ್ಷೇಪ ಮಾಡಿದ್ದ. ಹೀಗೆ ಆಕ್ಷೇಪಿಸಿದ ಪೂರ್ವಪಕ್ಷಿ ಜೀವಬ್ರಹ್ಮಭೇದವನ್ನು ಒಪ್ಪಿದ್ದಾನೆಂದು ಅರ್ಥವಾಯಿತು. ಈ ಭೇದವನ್ನು ಬಿಟ್ಟು 'ಜೀವರು

ಆನಂದಮಯರಾದರೂ ಜೀವಚೈತನ್ಯಕ್ಕೆ ಬ್ರಹ್ಮಚೈತನ್ಯದಿಂದ ಅಭೇದವಿರುವುದರಿಂದ ಜೀವನ ಜ್ಞಾನದಿಂದಲೂ ಮೋಕ್ಷವಾಗಬಹುದು. ಹೀಗೆ ಮತ್ತೊಂದು ಪ್ರಕಾರದಿಂದ ಪೂರ್ವಪಕ್ಷಿ ಆಕ್ಷೇಪ ಮಾಡಬಹುದು. ಈ ಆಕ್ಷೇಪವನ್ನು ಪರಿಹರಿಸಬೇಕೆಂದರೆ ಜೀವ ಮತ್ತು ಆನಂದಮಯರಿಗೆ ಭೇದವನ್ನು ಸಮರ್ಥಿಸುವಂತೆ ಜೀವ ಮತ್ತು ಬ್ರಹ್ಮರಿಗೂ ಭೇದವನ್ನು ಸಮರ್ಥಿಸಬೇಕು. ಭೇದವ್ಯಪದೇಶ ಸೂತ್ರವು ಜೀವ ಮತ್ತು ಆನಂದಮಯರಿಗೆ ಭೇದವನ್ನು ಸಮರ್ಥಿಸುವಂತೆ ಜೀವ ಮತ್ತು ಬ್ರಹ್ಮರಿಗೂ ಭೇದವನ್ನು ಸಮರ್ಥಿಸುತ್ತದೆ. ತನ್ಮೂಲಕ ಎರಡುವಿಧ ಆಶಂಕೆಗಳನ್ನು ಪರಿಹರಿಸುತ್ತದೆ. ಆದ್ದರಿಂದ ಭೇದವ್ಯಪದೇಶ ಸೂತ್ರವನ್ನು ಪ್ರತ್ಯೇಕವಾಗಿ ಹೇಳಲೇಬೇಕು.

ಆದ್ದರಿಂದಲೇ ಟೀಕೆಯಲ್ಲಿ 'ಹಿರಣ್ಯಗರ್ಭಾದಿಜೀವರು ಆನಂದಮಯರಲ್ಲ. ಆನಂದಮಯರಿಗೂ ಜೀವರಿಗೂ ಭೇದವನ್ನು ಹೇಳಿದ್ದರಿಂದ' ಎಂದು ವ್ಯಾಖ್ಯಾನಿಸಿದ್ದಾರೆ. ಸುಧೆಯಲ್ಲಿ ಜೀವಬ್ರಹ್ಮರ ಅಭೇದವನ್ನು ನಿರಾಸ ಮಾಡುವ ಮೂಲಕ ಸೂತ್ರವನ್ನು ವ್ಯಾಖ್ಯಾನಿಸಿದ್ದಾರೆ. ಒಂದುವೇಳೆ ಭೇದವ್ಯಪದೇಶಸೂತ್ರದಲ್ಲಿ ಜೀವರಿಗೂ ಆನಂದಮಯರಿಗೂ ಭೇದವನ್ನಷ್ಟೇ ಹೇಳಿದರೆ 'ಕಾಮಾಚ್ಚ ನಾನುಮಾನಾಪೇಕ್ಷಾ' ಎಂಬ ಸೂತ್ರದಲ್ಲಿ ಜೀವರಿಗೂ ಬ್ರಹ್ಮನಿಗೂ ಅಭೇದ ನಿರಾಕರಣೆ ಮಾಡಿದ್ದು ತಪ್ಪಾಗುತ್ತದೆ. ಮತ್ತು ಭಾಷ್ಯದಲ್ಲಿ 'ನ ಚ ತತ್ತ್ವಮಸಿ' ಇತ್ಯಾದಿ ವಾಕ್ಯಗಳಿಂದ ಜೀವಬ್ರಹ್ಮಾಭೇದಶ್ರುತಿಗಳಿಗೆ ಗತಿ ಹೇಳಿದ್ದಾರೆ. ಭೇದವ್ಯಪದೇಶಸೂತ್ರದಲ್ಲಿ ಜೀವಬ್ರಹ್ಮರಿಗೆ ಭೇದ ಹೇಳಿದ್ದರಿಂದ ಭಾಷ್ಯದಲ್ಲಿ ಹೇಳಿದ ಅಭೇದಶ್ರುತಿಗಳ ಗತಿಯು ಸಮಂಜಸವಾಗುತ್ತದೆ. ಮತ್ತು ಅನುವ್ಯಾಖ್ಯಾನದಲ್ಲಿಯೂ

ನ ಜೀವಭೇದಸೂತ್ರಾಣಾಂ ಶಂಕ್ಯಾಽತ್ರ ಪುನರುಕ್ತತಾ ।
ವಾಕ್ಯಾಂತರದ್ಯೋತಕತ್ವಾತ್ ಪೃಥಗಿತ್ಯತ್ರ ಪೂರ್ಣತಾ ॥

ಎಂಬ ಶ್ಲೋಕದಲ್ಲಿ ಅಂತರಾದ್ಯಧಿಕರಣಗಳಲ್ಲಿರುವ ಭೇದವ್ಯಪದೇಶಸೂತ್ರದಿಂದ ಪುನರುಕ್ತಿಯನ್ನು ಆಶಂಕಿಸಿದ್ದಾರೆ. ಒಂದುವೇಳೆ ಆನಂದಮಯಾಧಿಕರಣದಲ್ಲಿರುವ ಭೇದವ್ಯಪದೇಶಸೂತ್ರವು ಜೀವಬ್ರಹ್ಮಭೇದಸಾಧಕವಾಗದಿದ್ದರೆ ಪುನರುಕ್ತಿಯನ್ನು ಆಕ್ಷೇಪಿಸಿದ್ದು ತಪ್ಪಾಗುತ್ತದೆ. ಅದಕ್ಕೆ ಸಮಾಧಾನ ಹೇಳಿದ್ದೂ ತಪ್ಪಾಗುತ್ತದೆ. ಆದ್ದರಿಂದ ಭೇದವ್ಯಪದೇಶ ಸೂತ್ರವು ಜೀವಬ್ರಹ್ಮಭೇದಸಾಧಕವಾಗಿದೆಯೆಂದು ಒಪ್ಪಿಕೊಳ್ಳಬೇಕು.

### ಕಠಿಣಪದಾರ್ಥ

ಮಾಂತ್ರವರ್ಣಿಕಗಾನಾದೇಃ = ಐವರಲ್ಲೂ ಸಾಧಾರಣವಾದ ಮಂತ್ರವರ್ಣ-ಪ್ರತಿಪಾದ್ಯತ್ವದ (ಆದಿಪದದಿಂದ ಅಸ್ಮಿನ್ನಸ್ಯ ಎಂಬುದನ್ನು ವಿವಕ್ಷಿಸಬೇಕು), ನಿವೇಶನಂತು = ಇತ್ಯೇವಮರ್ಥಮ್ ಎಂಬಲ್ಲಿ ಅನ್ವಯಿಸಬೇಕು, ನಿರಾಸಾತ್ = 'ಮಂತ್ರವರ್ಣದಲ್ಲಿ ಹೇಳಲ್ಪಟ್ಟ ಪರಬ್ರಹ್ಮನೇ ಅನ್ನಮಯಾದಿಗಳಲ್ಲಿ ಪ್ರತಿಪಾದ್ಯನಾಗಿದ್ದಾನೆ' ಎಂಬ ಮಾತಿನಿಂದಲೇ ನಿರಸ್ತವಾದ್ದರಿಂದ. ಅಸ್ಮಿನ್ನಿತಿಸೂತ್ರಸ್ಯ = 'ತದಾನಂತರ್ಯಮ್' ಎಂಬಲ್ಲಿ ಅನ್ವಯ. ತದಾನಂತರ್ಯಮ್ =

ಭೇದವ್ಯಪದೇಶಸೂತ್ರದ ಅನಂತರ ಹೇಳಲಾಗಿದೆ. ಭೇದವ್ಯಪದೇಶಾದಿತ್ಯಸ್ಯಾ-ನಂತರಮ್ = ಇತಿ ಪರಪಕ್ಷೇ ಸಾಧಕಶಂಕಾಯಾಂ ಕಾಮಾದಿತಿಸೂತ್ರೇಣ ನಿರಸ್ತಾಯಾಮ್ ಎಂದು ಅನ್ವಯ, ಪ್ರಾಮಾಣಿಕಃ = ಇತ್ಯಾದ್ಯನುಮಾನಸ್ಯ ಸಂಭವಾತ್ ಎಂಬಲ್ಲಿ ಅನ್ವಯ. ಶಾಸ್ತ್ರಯೋನಿತ್ವೇಽಪಿ = ಶಾಸ್ತ್ರದಿಂದಷ್ಟೇ ತಿಳಿಯುವುದಾದರೂ. ಸಾಧಕಶಂಕಾಯಾಮ್ = ಅಭೇದಾನುಮಾನದ ವಿರೋಧವಿರುವುದರಿಂದ ಭೇದವ್ಯಪದೇಶವು ಅನ್ಯಪರವಾಗುತ್ತದೆ ಅನಂತರಮ್ = 'ಇತಿ ಶಂಕಾ ಭವತಿ' ಎಂದು ಸಂಬಂಧ, ತಸ್ಯಾ ಅಪಿ = ಹಿಂದೆ ಎರಡುವಿಧ ಅರ್ಥಗಳನ್ನು ವಿವಕ್ಷಿಸಿದ್ದರಿಂದಲೂ, ಪೂರ್ಣತಾ = ಪ್ರಧಾನವಾಗಿ.

**प्रकाशः** – एवं सूत्रद्वयार्थं समर्थ्येदानीं लेशेनेतरसूत्रार्थानुवादपूर्वं सूत्राणां क्रमहेतुचिन्ता प्रस्तूयते । तत्रेयमाशङ्का – ननु पञ्चानां ब्रह्मत्वं साधयितुं 'अभ्यासात्' इति, ''मान्त्रवर्णिकमेव च गीयते'' इति, ''अस्मिन्नस्य च तद्योगं शास्ति'' इति च सूत्राणि प्रवृत्तानि, ''तद्धेतुव्यपदेशात्'' इति त्वानन्दमयस्यैव, तथैव टीकादावुक्तेः । तथा च तद्धेतुसूत्रमभ्यासादि-त्रयानन्तरमेव निवेशनीयं, न तु मध्ये, हेत्वभावादिति । तत्राह – **अन्नमयेत्यादिना** ।। 'साधारणहेतोः' इत्यस्य 'मान्त्रवर्णिकगानादेः' इत्यत्राप्यन्वयः । आदिपदात् ''अस्मिन्नस्य'' इति गृह्यते । 'निवेशनं तु' इत्यस्य 'इत्येतदर्थं' इत्यन्वयः ।। **मन्त्रवर्णस्थेति** ।।

''ब्रह्मवित्परं'' इति पूर्ववाक्ये प्रकृतस्य परपदस्य मन्त्रवर्णेऽपि ब्रह्मविशेषणत्वेन विवक्षितत्वादेवमुक्तम् ।। **निरासादिति** ।। मन्त्रवर्णोक्तपरब्रह्मैवान्नमयादिषु गीयते इत्युक्त्या तन्निरासादिति भावः । ''तदनन्तरं तद्धेतुव्यपदेशोक्तौ'' इत्यादिकं वक्ष्यमाणमत्रापि योज्यम् ।

अयमर्थः – अभ्यासानन्तरं तावन्निवेशनीयं, तस्य साधारणहेतुत्वात् । एवं च त्वया मान्त्रवर्णिकगानानन्तरनिवेशनं चोद्यते,'अस्मिन्नस्य'' इत्यस्यानन्तरं वा ।

नाद्यः, ''अन्नमयादीनां पञ्चानामपि युक्त्यन्तरेण परब्रह्मत्वं प्रतिपादयितुं सूत्रं – मान्त्रवर्णिकं'' इत्यादिसुधोक्तदिशा, यथा 'मान्त्रवर्णिकं' ''सत्यं ज्ञानमनन्तं ब्रह्म'' इति मन्त्रवर्णेन लक्षणत्रयवत्तयोक्तमेव ब्रह्मान्नमयादिपञ्चप्रकरणेषु प्रतिपाद्यत इति पञ्चापि ब्रह्मेति पञ्चानामब्रह्मत्वशङ्कानिरासोऽर्थः, तथा टीकोक्तदिशा 'अभ्यासात्' इत्यत्र हेतुत्वेनोक्तब्रह्मशब्दस्यामुख्यचतुर्मुखाद्यर्थत्वशङ्काया अपि मन्त्रवर्णे ''ब्रह्मविदाप्नोति परं'' इति पूर्वप्रकृतपरब्रह्मण एव लक्षितत्वात्

तस्यैवोत्तरत्रान्नमयादिषु ब्रह्मशब्देन कथनान्नामुख्यार्थ इति शङ्कानिरासोऽपि मान्त्रवर्णिकसूत्रस्यार्थ इति तद्धेतुसूत्रस्यापि ब्रह्मशब्दामुख्यार्थत्वशङ्कानिरासार्थत्व-शङ्का स्यात्, सा माभूदित्यर्थं तदनन्तरमनिवेशात् ।

न द्वितीयः, "योगमन्नमयाद्यैर्यत्" इत्यनुव्याख्यानाद्युक्तदिशा "अस्मिन्" इत्यस्य यथा अस्मिन्ननुवाके 'अस्य' "स य एवं वित्" इत्युक्तस्य ब्रह्मविदः 'तद्योगं' "एतमन्नमयमात्मानमुपसङ्क्रामति" इत्यादिना 'तैः' अन्नमयादिभिः 'योगं' तत्प्राप्तिं शास्ति श्रुतिरतोऽन्नमयादयः पञ्चापि ब्रह्मेत्यर्थः, तथा टीकाद्युक्तदिशा "भेदव्यपदेशात्" इत्युक्तभेदो मिथ्या किं न स्यादिति शङ्काया अपि 'अस्मिन्' प्रकरणे 'अस्य' जीवस्यानन्दमयादिना सह मुक्तावपि सम्बन्धमेव "सोश्नुते" इति शास्ति श्रुतिः, अतो न भेदो मिथ्येति तन्निरासोऽप्यर्थ इति, तदनन्तरं हेतुव्यपदेशस्य निर्देशे अस्यापि भेदमिथ्यात्वशङ्कानिरासोऽर्थ इति शङ्का स्यात्, सा मा भूदित्येवमर्थमिति ।

ननु शङ्कामात्रमकिञ्चित्करं, व्याख्यानेन विशेषावगत्युपपत्तेः । यथोक्तं "व्याख्यानतो विशेषप्रतिपत्तिर्न हि सन्देहादलक्षणं भवति" इति, सत्यम् । अन्तरङ्गज्ञापकाभाव एव व्याख्यानानुसरणमित्याशयात् । नन्वेवमपि साधकोक्त्यनन्तरं बाधकोद्धारावसराद्विकारसूत्रव्यवधानमयुक्तमिति शङ्के – न चैवमिति ।। इत्यत्रापीति ।। टीकायां स्पष्टमनुक्तावपि –

महानन्दत्व एवास्य हेतुः कोऽन्यादिति स्फुटम् ।

इत्यनुव्याख्यासुधायां – "आनन्दमयस्य विष्णुवाचित्वं मयटश्च प्राचुर्यार्थत्वं हेत्वन्तरेणोपपादयत्तद्धेतुव्यपदेशाच्चेति सूत्रम्" इत्युक्तेरिति भावः । तर्ह्य "अस्मिन्" इत्यस्य स्वपक्षहेतुमान्त्रवर्णिकसूत्रानन्तर्यम् स्यात्, न तु व्यवधानमित्यतस्तत्र हेतुमाह – **अस्मिन्निति सूत्रस्येति** ।। 'तदानन्तर्यं' इत्यन्वयः । भेदव्यपदेशादेरानन्तर्यमित्यर्थः । तर्हि "कामाच्च नानुमानापेक्षा" इत्येतव्द्यवधानं कुत इत्यत आह – **तथेति** ।। 'अनन्तरं' इत्यस्य 'इति परपक्षे साधकशङ्कायां कामादिति सूत्रेण निरस्तायां' इत्यन्वयः । 'प्रामाणिकः' इत्यस्य 'इत्याद्यनुमानस्य सम्भवात्' इत्यन्वयः ।

ಪರಿಪೂರ್ಣಚಂದ್ರಿಕಾ

ननु "कामाच्च" इति सूत्रे अभेदे प्रत्यक्षागमावनिरस्यानुमानमात्रनिरासः कुत इत्यत आह – **तत्राभेद इति** ।। **श्रुतेश्चेति** । भाष्ये अधिकरणान्तरप्रमेयमेव श्रुत्यविरुद्धत्वं शिष्यहितायोक्तमित्युक्तं भवति । शास्त्रयोनिसूत्रविरोधमाशङ्क्याह – **जगदिति** ।। शास्त्रैकगम्यत्वेऽपीत्यर्थः । सिद्धान्ते ईशस्सर्वज्ञः स्वतन्त्रो वा, सर्वकर्तृत्वात् पूर्णशक्तित्वाद्वा, व्यतिरेकेण चैत्रवदित्याद्यनुमानस्येवेत्यर्थः । यद्यपि टीकायां "विमतानि शरीराणि" इत्यनुव्याख्यानानुरोधेन 'विमतानि शरीराणि मद्भोगायतनानि शरीरत्वात्' इत्यनुमानमुक्तं, तथाऽपि तेनानुमानेन पर्यवसानगत्या परमात्माभेदः सिद्ध्यति, साक्षात्तु जीवानामेव, आत्मत्वानुमानेन साक्षादेवेतीद-मुक्तम् । अत एव, 'विमतानि शरीराणि मद्भोगायतनानि यत्' इत्यनुव्याख्या-विवरणे सुधायां शरीरत्वानुमानं आक्षिप्य समाहितं, आत्मत्वानुमानं च प्रदर्शितम् । टीकायामादिपदं च । अत्राप्यादिपदेन शरीरत्वादेर्ग्रह इति भावः ।।

**साधकेति** ।। अभेदानुमानविरोधेन भेदव्यपदेशस्यान्यपरतोपपत्तेरिति भावः ।। **अनन्तरमिति** ।। 'इति शङ्का भवति' इति सम्बन्धः ।। **तस्या अपीति** ।। प्रागर्थ-द्वयस्य विवक्षितत्वेनोक्तत्वादपिशब्दः । "भेदव्यपदेशात्" इत्यस्य वैयर्थ्यमाशङ्क्य समाधत्ते ।। **यद्यपीति** ।। **भेदव्यपदेशेति** ।। "ते ये शतं प्रजापतेरानन्दाः स एको ब्रह्मण आनन्दः" इति चतुर्मुखानन्दस्य परिमितत्वेनानन्दमयशब्दितात् "यतो वाचो निवर्तते" इत्यपरिमितानन्दत्वेन श्रुतात् भेदव्यपदेशेत्यर्थः ।। **जीवब्रह्मणोरपि भेदमिति** ।। "स यश्चायं पुरुषे, यश्चासावादित्ये" इत्याधाराधेयभावेन "रसं ह्येवायं लब्ध्वाऽऽनन्दीभवति" इत्यादिलब्धृलब्धव्यतादिना च भेदं कथयतेत्यर्थः ।।

**अत एवेति** ।। एतेन टीकाद्वयस्य वर्णकान्तरपरतया विरोधोऽपि परिहृतः । द्वितीयेऽर्थे सूत्राद्यानुगुण्यमपीत्याह – **अत एव च कामादितीति** ।। **वाक्या-न्तरेति** ।। 'अत्र' शास्त्रे । तत्र तत्र प्रकरणस्यैक्य विवक्षायां चोदितायां तत्तद्गतभेदवाक्यद्योतनेन सूत्रेषु भेदसमर्थनं क्रियते । अतस्तात्पर्यभेदान्न पुनरुक्तता शङ्क्येत्यर्थः । नन्वेवं सत्यभेदः स्वरूपेण क्वापि न निराकृतः स्यादित्यत उक्तं – **पृथगिति** ।। 'पूर्णता' प्रधानता । भेदसाधनस्य "पृथगुपदेशात्" इत्यत्र स्वातन्त्र्येण विचारितत्वादित्यर्थः ।।

**गुरुराजीयम्** – ननु पञ्चानामपि ब्रह्मत्वेऽभ्यासमान्त्रवर्णिकगानतद्योगशासन रूपहेतुत्रयस्य साधारण्यात्साधारणहेतूक्त्यनन्तरं तद्धेतुव्यपदेशरूपो हेतुर्वक्तव्यः । तस्यानन्दमयस्यैव विष्णुत्वसाधकत्वेन तन्मात्रासाधारणत्वात् । तथा च मान्त्रवर्णिकगानादेः पूर्वमभ्यासात्पश्चात्तद्धेतु-व्यपदेशरूपहेतूक्तिरयुक्तेत्यत आह – **अन्नमयादीति ।। तन्निरासेपीति ।।** यदि मान्त्रवर्णिकमेव च गीयत इति सूत्रानन्तरं तद्धेतुव्यपदेश उच्यते तर्हि तस्यानन्दमयादिस्थब्रह्मशब्दस्यापरब्रह्मपरत्व-शङ्कानिरासकत्वं स्यात् । एवमस्मिन्नस्येति सूत्रानन्तर्ये भेदस्य मुक्तौ सत्त्वेनाऽ-पारमार्थिकत्वशङ्कानिरासकत्वं स्यादिति भावः । नन्वेवमपि पञ्चानामभ्यासस्य साधारणत्वात्तद्धेतुव्यपदेशस्य चानन्दमयासाधारणत्वात्तदुभयोक्त्यनन्तरं विकार-शब्दादिति बाधकमुद्धर्तव्यम् । तथा च साधारणा साधारणहेतुद्वयमध्ये बाधकोद्धरण-मयुक्तमित्याशङ्क्य निषेधति ।। **न चैवमिति ।।**

ननु तद्योगशासनरूपहेतोर्मांत्रवर्णिकगानानन्तरमेव निवेशो युक्तः । साधारणहेतुत्वादित्यत आह – **अस्मिन्निति ।।** ननु नेतरोनुपपत्तेरित्यनेनैव भेदव्यपदेशस्यापि सिद्धेर्भेदव्यपदेशस्य वैयर्थ्यमित्यतस्तत्परिहरति ।। **यद्यपीति ।।** नन्विदमयुक्तम् । पूर्वपक्षिणा जीवब्रह्मभेदस्यैवाङ्गीकृतत्वेनाभेदप्राप्तेरेवाभावेन तन्निरासायोगात् । अन्यथा जीव एवानन्दमयो न ब्रह्मेति पूर्वपक्षो न क्रियेतेत्यत आह – **जीव एवेति ।। जीवब्रह्मभेदं त्यक्त्वेति ।।** भेदेनैवात्र पूर्वपक्षोत्थानान्नात्र पत्यादिशब्देभ्य इत्यादाविव प्रथमत एवाभेदः पूर्वपक्षिणोऽभिप्रेतः । ग्रन्थस्य वादकथात्वात् तत्वनिर्णयाभावे स्वोक्तत्यागमात्रेण न कथावसानमिति भावः । तथाहि । प्रायपाठपरित्यागस्य प्रथमोक्तत्वेपि ब्रह्मशब्दस्य साधकत्वात्तस्यादौ समर्थनमिति ज्ञेयम् । ननु तर्हि टीकायां जीवब्रह्माभेदनिरासकत्वेनाव्याख्यातत्वात्तद्विरोध इत्यत आह – **अत एवेति ।।** अन्यथाऽभेदस्याप्राप्तत्वेन तन्निरासो न स्यादित्यर्थः । ननु भाष्यानुव्याख्यानयोस्तदनुक्तेस्तद्विरुद्धमेतदित्यत आह – **भाष्ये चेति ।।** तथा चात्र तन्निराकरणाभावे पौनरुक्त्यसमाधानयोरनुपपत्तेरिति भावः ।

ವಿವರಣೆ - 'ಆನಂದಮಯೋಽಭ್ಯಾಸಾತ್' 'ವಿಕಾರಶಬ್ದಾನ್ನೇತಿಚೇನ್ನ' ಎಂಬ ಎರಡು ಸೂತ್ರಗಳ ಅರ್ಥವನ್ನು ಇಲ್ಲಿಯ ತನಕ ಸಮರ್ಥಿಸಿದ್ದಾಯಿತು. ಈಗ ಬೇರೆ ಸೂತ್ರಗಳ ಅರ್ಥವನ್ನು ತಕ್ಕಮಟ್ಟಿಗೆ ಹೇಳುತ್ತಾ ಸೂತ್ರಗಳ ಕ್ರಮವನ್ನು ವಿಚಾರ ಮಾಡುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

ಪ್ರಶ್ನೆ - ಅನ್ನಮಯಾದಿ ಐವರಿಗೂ ಬ್ರಹ್ಮತ್ವವನ್ನು ಸಾಧಿಸಲು 'ಆನಂದಮಯೋಽಭ್ಯಾಸಾತ್' 'ಮಾಂತ್ರವರ್ಣಿಕಮೇವ ಚ ಗೀಯತೇ' 'ಅಸ್ಮಿನ್ನಸ್ಯಚ ತದ್ಯೋಗಂ ಶಾಸ್ತಿ' ಎಂಬ ಸೂತ್ರಗಳು ಹೊರಟಿವೆ. ಆದರೆ 'ತದ್ಧೇತುವ್ಯಪದೇಶಾಚ್ಚ' ಎಂಬ ಸೂತ್ರವು ಆನಂದಮಯನಿಗಷ್ಟೇ ಬ್ರಹ್ಮತ್ವವನ್ನು ಸಾಧಿಸುತ್ತಿವೆ. ಟೀಕೆಯಲ್ಲಿ ಹಿಗೆಯೇ ಹೇಳಿದ್ದಾರೆ. ಆದ್ದರಿಂದ ಇವುಗಳ ಮಧ್ಯದಲ್ಲಿ ತದ್ಧೇತುಸೂತ್ರ ಹೇಳಬಾರದಿತ್ತು. ಇವುಗಳ ಕೊನೆಯಲ್ಲಿ ಹೇಳಬೇಕಿತ್ತಲ್ಲವೇ? (ತಸ್ಯ = ವಿಷ್ಣುವಿಗೆ, ತಸ್ಮಿನ್ = ಪೂರ್ಣಾನಂದತ್ವದಲ್ಲೇ, ಹೇತುವ್ಯಪದೇಶಾತ್ = ಜಗಚ್ಚೇಷ್ಟಕತ್ವವೆಂಬ ಹೇತು ಹೇಳಿದ್ದರಿಂದ ಎಂದು ಸೂತ್ರಾರ್ಥ)

ಉತ್ತರ - ತದ್ಧೇತುವ್ಯಪದೇಶವನ್ನು ಅಭ್ಯಾಸದ ಅನಂತರವೇ ಹೇಳಬೇಕು. ಅಭ್ಯಾಸವು ಸಾಧಾರಣಹೇತುವಾದ್ದರಿಂದ ಅಭ್ಯಾಸಕ್ಕಿಂತ ಮೊದಲು ಹೇಳಲು ಸಾಧ್ಯವಿಲ್ಲ. ಆದ್ದರಿಂದ ನಿಮ್ಮ ಅಭಿಪ್ರಾಯವೇನು? ಮಾಂತ್ರವರ್ಣಿಕಸೂತ್ರದ ಅನಂತರ ಹೇಳಬೇಕೆಂದೋ? 'ಅಸ್ಮಿನ್ನಸ್ಯ ಚ' ಎಂಬ ಸೂತ್ರದ ಅನಂತರ ಹೇಳಬೇಕೆಂಬ ಪ್ರಥಮಪಕ್ಷ ತಪ್ಪು. 'ಅನ್ನಮಯಾದಿ ಐವರೂ ಸಹ ಪರಬ್ರಹ್ಮರೇ ಆಗಿದ್ದಾರೆಂದು ಪ್ರತಿಪಾದಿಸಲು ಮಾಂತ್ರವರ್ಣಿಕಸೂತ್ರ ಹೊರಟಿದೆ' ಎಂದು ಸುಧೆಯಲ್ಲಿ ಹೇಳಿದ್ದಾರೆ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಮಂತ್ರದಲ್ಲಿ ಸತ್ಯಜ್ಞಾನಾದಿಲಕ್ಷಣಸಹಿತನಾಗಿ ಪ್ರತಿಪಾದಿಸಲ್ಪಟ್ಟ ಬ್ರಹ್ಮನೇ ಅನ್ನಮಯಾದಿ ಐದು ಪ್ರಕರಣಗಳಿಂದ ಪ್ರತಿಪಾದಿತನಾಗಿದ್ದಾನೆ. ಆದ್ದರಿಂದ ಅನ್ನಮಯಾದಿಗಳು ಅಬ್ರಹ್ಮರಲ್ಲ ಎಂಬ ಶಂಕೆಯನ್ನು ಪರಿಹರಿಸಲು ಮಾಂತ್ರವರ್ಣಿಕಸೂತ್ರ ಹೊರಟಿದೆ. ಇದರಂತೆ ಟೀಕೆಯಲ್ಲಿ ಹೇಳಿದಂತೆ 'ಅಭ್ಯಾಸಾತ್' ಎಂಬಲ್ಲಿ ಹೇತುತ್ವೇನ ಹೇಳಿದ ಬ್ರಹ್ಮಶಬ್ದವು ಅಪರಬ್ರಹ್ಮವಿಷಯಕವೇ ಆಗಲಿ ಎಂಬ ಶಂಕೆ ಬಂದರೆ ಇದನ್ನೂ ಪರಿಹರಿಸಲು 'ಮಾಂತ್ರವರ್ಣಿಕಸೂತ್ರ' ಹೊರಟಿದೆ. ಮಂತ್ರವರ್ಣದ ಪ್ರಾರಂಭದಲ್ಲಿ 'ಬ್ರಹ್ಮವಿದಾಪ್ನೋತಿ ಪರಮ್' ಎಂದು ಹೇಳಿದ್ದಾರೆ. ಮುಂದೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬಲ್ಲಿ ಪೂರ್ವಪ್ರಕೃತನಾದ ಪರಬ್ರಹ್ಮನೇ ಪ್ರಸಕ್ತನಾಗುತ್ತಾನೆ. ಇಂತಹ ಪರಬ್ರಹ್ಮನೇ ಮುಂದೆಯೂ ಅನ್ನಮಯಾದಿಪ್ರಕರಣಗಳಿಂದ ಪ್ರತಿಪಾದಿತನಾಗುತ್ತಾನೆ. ಏಕೆಂದರೆ ಅನ್ನಮಯಾದಿಪ್ರಕರಣಗಳಲ್ಲಿರುವ ಬ್ರಹ್ಮಶಬ್ದದಿಂದ ಅಮುಖ್ಯಬ್ರಹ್ಮನು ಪ್ರತಿಪಾದಿತನಾಗಲಾರ. ಹೀಗೆ ಎರಡುವಿಧ ಆಶಂಕೆಗಳನ್ನು ಪರಿಹರಿಸುವುದಕ್ಕಾಗಿ ಮಾಂತ್ರವರ್ಣಿಕಸೂತ್ರ ಹೊರಟಿದೆ. ಈ ಸೂತ್ರದ ಅನಂತರ ತದ್ಧೇತುಸೂತ್ರ ಹೇಳಿದರೆ ಆ ಸೂತ್ರವೂ ಬ್ರಹ್ಮಶಬ್ದಕ್ಕೆ ಅಮುಖ್ಯಾರ್ಥತ್ವದ ಶಂಕೆಯ ಪರಿಹಾರಕ್ಕೋಸ್ಕರ ಹೊರಟಿದೆ ಎಂದಾಗಬೇಕಾದೀತು. ಹೀಗಾಗಬಾರದೆಂದು ಮಾಂತ್ರವರ್ಣಿಕ ಸೂತ್ರದ ಅನಂತರ ತದ್ಧೇತುಸೂತ್ರವನ್ನು ಹೇಳಿಲ್ಲ.

ಎರಡನೆಯ ಪಕ್ಷವೂ ಸರಿಯಲ್ಲ. 'ಯೋಗಮನ್ನಮಯಾದ್ಯೈರ್ಯತ್' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದಂತೆ 'ಅಸ್ಮಿನ್ನಸ್ಯ ಚ' ಎಂಬ ಸೂತ್ರಾರ್ಥ ಹೀಗಿದೆ - ಅಸ್ಮಿನ್ = ಈ ಅನುವಾಕ್ಯದಲ್ಲಿ 'ಅಸ್ಯ' = 'ಸ ಏವಂವಿತ್' ಎಂದು ಹೇಳಿದ ಬ್ರಹ್ಮಜ್ಞಾನಿಗೆ ತದ್ಯೋಗಮ್ = 'ಏತಮನ್ನಮಯಮಾತ್ಮಾನಮುಪಸಂಕ್ರಾಮತಿ' ಇತ್ಯಾದಿಯಾಗಿ ಅನ್ನಮಯಾದಿಗಳ ಪ್ರಾಪ್ತಿಯನ್ನು ಶಾಸ್ತಿ = ಶ್ರುತಿಯು ಶಾಸನ ಮಾಡಿದೆ. ಆದ್ದರಿಂದ ಅನ್ನಮಯಾದಿ ಐವರೂ ಸಹ ಬ್ರಹ್ಮರೇ ಆಗಿದ್ದಾರೆ. ಇದು ಸುಧೆಯ ಪ್ರಕಾರ.

ಇನ್ನು ಟೀಕೆಯ ಪ್ರಕಾರ ಹೀಗರ್ಥ - 'ಭೇದವ್ಯಪದೇಶಾತ್' ಎಂಬಲ್ಲಿ ಹೇಳಿದ ಭೇದವು ಮಿಥ್ಯಾ ಏಕಾಗಬಾರದು? ಎಂಬ ಶಂಕೆಗೆ ಈ ಸೂತ್ರ ಉತ್ತರಿಸುತ್ತದೆ ಅಸ್ಮಿನ್ = ಈ ಪ್ರಕರಣದಲ್ಲಿ ಅಸ್ಯ = ಜೀವನಿಗೆ

ತದ್ಯೋಗಮ್ = ಆನಂದಮಯಾದಿಗಳಿಂದ ಸಂಬಂಧವನ್ನು ಶಾಸ್ತಿ= ಸೋಽಶ್ನುತೇ ಎಂದು ಶ್ರುತಿಯು ಶಾಸನಮಾಡುತ್ತದೆ. ಆದ್ದರಿಂದ ಭೇದವು ಮಿಥ್ಯಾವಲ್ಲ. ಹೀಗೆ ಭೇದಮಿಥ್ಯಾತ್ವ ನಿರಾಸಪರವಾಗಿಯೂ ಈ ಸೂತ್ರ ಹೊರಟಿದೆ. ಒಂದುವೇಳೆ 'ಅಸ್ಮಿನ್ನಸ್ಯ' ಎಂಬ ಸೂತ್ರದ ಅನಂತರ 'ತದ್ಧೇತುವ್ಯಪದೇಶಾಚ್ಚ' ಎಂಬ ಸೂತ್ರವನ್ನು ಹೇಳಿದರೆ ಪರಬ್ರಹ್ಮತ್ವ ಸಮರ್ಥನೆಯನ್ನು ಭೇದಮಿಥ್ಯಾತ್ವನಿರಾಕರಣೆಯನ್ನೂ ಈ ಸೂತ್ರ ಮಾಡಬೇಕಾಗಿತ್ತು. ಹಾಗೆ ಮಾಡಬಾರದೆಂದು ತದ್ಧೇತುಸೂತ್ರವನ್ನು 'ಅಸ್ಮಿನ್ನಸ್ಯ' ಎಂಬ ಸೂತ್ರದ ಅನಂತರ ಹೇಳಲಿಲ್ಲ.

ಪ್ರಶ್ನೆ - ಮಾಂತ್ರವರ್ಣಿಕಸೂತ್ರದಲ್ಲಿ 'ಅಸ್ಮಿನ್ನಸ್ಯ ಚ' ಎಂಬ ಸೂತ್ರಗಳ ಕಾರ್ಯವನ್ನು ತದ್ಧೇತುಸೂತ್ರವು ಮಾಡುತ್ತಿದೆಯೋ? ಎಂಬ ಶಂಕೆ ಬರುತ್ತದೆ. ಈ ಶಂಕೆ ಬರಬಾರದೆಂದು ಸೂತ್ರಕಾರರು ಮೊದಲೇ ಈ ಸೂತ್ರವನ್ನು ಹೇಳಿದ್ದಾರೆಂದು ಉತ್ತರಿಸಿದಿರಿ. ಆದರೆ ಈ ಶಂಕಾಮಾತ್ರವು ಅಕಿಂಚಿತ್ಕರ. ಏಕೆಂದರೆ ವ್ಯಾಖ್ಯಾನದಿಂದ ಆಯಾ ಸೂತ್ರಗಳ ಕಾರ್ಯವಿಶೇಷವನ್ನು ತಿಳಿಯಬಹುದು. ಮಹಾಭಾಷ್ಯದಲ್ಲಿ ಸ್ಪಷ್ಟವಾಗಿ ಹೀಗೆ ಹೇಳಿದ್ದಾರೆ. 'ವ್ಯಾಖ್ಯಾನತೋ ವಿಶೇಷಪ್ರತಿಪತ್ತಿರ್ನ ಹಿ ಸಂದೇಹಾದಲಕ್ಷಣಮ್ ಭವತಿ' 'ಯಾವುದೇ ಒಂದು ಸೂತ್ರದಲ್ಲಿ ಸಂದೇಹ ಬಂತೆಂಬ ಕಾರಣದಿಂದ ಆ ಸೂತ್ರವು ಸೂತ್ರವೇ ಅಲ್ಲವೆಂದೇನಾಗುವುದಿಲ್ಲ. ವ್ಯಾಖ್ಯಾನದಿಂದ ಸಂಶಯ ಪರಿಹರಿಸಿಕೊಂಡು ಸರಿಯಾದ ಸೂತ್ರಾರ್ಥ ತಿಳಿಯಬೇಕು' ಎಂದು. ಆದ್ದರಿಂದ ಪ್ರಕೃತದಲ್ಲಿ ಶಂಕಾಪರಿಹಾರಕ್ಕಾಗಿ ಸೂತ್ರಕ್ರಮಹೇಳಿದ್ದು ತಪ್ಪಲ್ಲವೇ?

ಉತ್ತರ - ತಪ್ಪಾಗುವುದಿಲ್ಲ. ಏಕೆಂದರೆ ವ್ಯಾಖ್ಯಾನದ ಪ್ರಕಾರ ಸೂತ್ರಾರ್ಥ ತಿಳಿಯುವುದು ತಪ್ಪಲ್ಲ. ಆದರೆ ವ್ಯಾಖ್ಯಾನವನ್ನು ಬೇರೆ ಯಾರೋ ಮಾಡುವುದರಿಂದ ಬಹಿರಂಗವಾಗುತ್ತದೆ. ಸೂತ್ರವು ಅಂತರಂಗ. ಅಂತರಂಗವಾದ ಸೂತ್ರದಿಂದಲೇ ತದ್ಧೇತುಸೂತ್ರದ ವಿನ್ಯಾಸಕ್ರಮ ತಿಳಿಯಲು ಬರುವಾಗ ಬಹಿರಂಗವಾದ ವ್ಯಾಖ್ಯಾನದಿಂದ ಸೂತ್ರವಿನ್ಯಾಸ ತಿಳಿಯುವುದು ಅಯುಕ್ತ. ತದ್ಧೇತುವ್ಯಪದೇಶತ್ವವು ಆನಂದಮಯನಿಗೆ ವಿಷ್ಣುತ್ವನಿಶ್ಚಯದಲ್ಲಿ ಮಾತ್ರವಲ್ಲ ಪ್ರಾಚುರ್ಯಾರ್ಥದಲ್ಲಿಯೂ ಹೇತುವಾಗಿದೆಯೆಂದು ಟೀಕೆಯಲ್ಲಿ ಸ್ಪಷ್ಟವಾಗಿ ಕಾಣಿಸುವುದಿಲ್ಲ. ಆದರೆ ''ಮಹಾನಂದತ್ವೇ ಏವಾಸ್ಯ ಹೇತುಃ ಕೋಽನ್ಯಾದಿತಿ ಸ್ಫುಟಮ್' ಎಂಬ ಅನುವ್ಯಾಖ್ಯಾನದ ಸುಧೆಯಲ್ಲಿ ಹೀಗೆ ಸ್ಪಷ್ಟವಾಗಿ ಹೇಳಿದ್ದಾರೆ - 'ಆನಂದಮಯಸ್ಯ ವಿಷ್ಣುವಾಚಿತ್ವಮ್ ಮಯಟಶ್ಚ ಪ್ರಾಚುರ್ಯಾರ್ಥತ್ವಮ್ ಹೇತ್ವಂತರೇಣೋಪಪಾದಯತ್ ತದ್ಧೇತುವ್ಯಪದೇಶಾಚ್ಚೇತಿ ಸೂತ್ರಮ್' ತದ್ಧೇತುವ್ಯಪದೇಶಾಚ್ಚ ಎಂಬ ಸೂತ್ರವು ಆನಂದಮಯನಿಗೆ ವಿಷ್ಣುವಾಚಿತ್ವವನ್ನು ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯಾರ್ಥತ್ವವನ್ನು ಮತ್ತೊಂದು ಕಾರಣದಿಂದ ಉಪಪಾದಿಸುತ್ತಿದೆಯೆಂದು ಹೇಳಿದ್ದಾರೆ.

ಹಾಗಾದರೆ 'ಅಸ್ಮಿನ್ನಸ್ಯ' ಎಂಬ ಸೂತ್ರವು ಸ್ವಪಕ್ಷಸಾಧಕವಾದ್ದರಿಂದ ಮಾಂತ್ರವರ್ಣಿಕಸೂತ್ರದ ಅನಂತರ ಹೇಳಬೇಕಿತ್ತಲ್ಲವೇ? ವ್ಯವಹಿತವಾಗಿ ಏಕೆ ಹೇಳಿದರು? ಎಂದರೆ ಅಸ್ಮಿನ್ನತಿ ಸೂತ್ರಸ್ಯ ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಪ್ರಶ್ನೆ - 'ಅಸ್ಮಿನ್ನಸ್ಯ ಚ' ಎಂಬ ಸೂತ್ರವು ಸ್ವಪಕ್ಷಸಾಧಕವಾದರೂ ಭೇದಕ್ಕೆ ಅಪಾರಮಾರ್ಥಿಕತ್ವಶಂಕೆಯನ್ನು ಪರಿಹರಿಸುವುದರಿಂದ ಭೇದವ್ಯಪದೇಶಸೂತ್ರದ ಅನಂತರ ಬರಬೇಕೆಂದು ಹೇಳಿದಿರಿ. ಆದರೆ 'ಕಾಮಾಚ್ಚ ನಾನುಮಾನಾಪೇಕ್ಷಾ' ಎಂಬ ಸೂತ್ರವು ಮಧ್ಯದಲ್ಲೇಕೆ ಬಂತು? ಕೊನೆಯಲ್ಲಿ ಹೇಳಬಹುದಿತ್ತಲ್ಲವೇ?

ಅಭೇದವು ಅಪಾರಮಾರ್ಥಿಕ ಎಂಬ ಶಂಕೆಯನ್ನು ಪರಿಹರಿಸಲು 'ಕಾಮಾಚ್ಚ' ಸೂತ್ರ ಹೊರಟಿದೆ. ಇದನ್ನು ಕೊನೆಯಲ್ಲಿ ಹೇಳುವುದೇ ಸೂಕ್ತ.

ಉತ್ತರ - ಕಾಮಾಚ್ಚ ಸೂತ್ರದ ಮೇಲೆ ಭೇದವು ಅಪಾರಮಾರ್ಥಿಕವೆಂಬ ಆಕ್ಷೇಪ ಬರುತ್ತದೆ. ಅದನ್ನು ನಿರಾಕರಿಸಿ ಭೇದಕ್ಕೆ ಪಾರಮಾರ್ಥಿಕತ್ವವನ್ನು ಸಮರ್ಥಿಸಬೇಕೆಂದರೆ ಕಾಮಾಚ್ಚ ಸೂತ್ರದ ಅನಂತರವೇ 'ಅಸ್ಮಿನ್ನಸ್ಯ' ಎಂಬ ಸೂತ್ರವನ್ನು ಹೇಳಬೇಕು.

ಗ್ರಂಥದಲ್ಲಿರುವ 'ಅನಂತರಮ್' ಎಂಬುದಕ್ಕೆ 'ಪರಪಕ್ಷೇ' ಸಾಧಕಶಂಕಾಯಾಂ ಕಾಮಾದಿತಿ ಸೂತ್ರೇಣ ನಿರಸ್ತಾಯಾಮ್' ಎಂಬಲ್ಲಿ ಅನ್ವಯ ಮಾಡಬೇಕು.

ಪ್ರಶ್ನೆ - 'ಕಾಮಾಚ್ಚ' ಎಂಬ ಸೂತ್ರದಲ್ಲಿ ಅಭೇದವಿಷಯದಲ್ಲಿ ಪ್ರತ್ಯಕ್ಷ ಮತ್ತು ಆಗಮಗಳನ್ನು ನಿರಾಸ ಮಾಡದೇ ಅನುಮಾನವನ್ನಷ್ಟೇ ಏಕೆ ನಿರಾಕರಿಸಿದ್ದಾರೆ? ಎಂಬ ಪ್ರಶ್ನೆಗೆ ಅಭೇದ ವಿಷಯದಲ್ಲಿ ಪ್ರತ್ಯಕ್ಷಕ್ಕೆ ಅವಕಾಶವಿಲ್ಲ ಶ್ರುತಿಗೆ ಅನ್ಯಾರ್ಥ ಮಾಡುತ್ತೀರೆಂದು ಗ್ರಂಥಕಾರರು ಉತ್ತರಿಸಿದ್ದಾರೆ.

ಕಾಮಾಚ್ಚಸೂತ್ರದ ಭಾಷ್ಯದಲ್ಲಿ ಆಚಾರ್ಯರು ಶ್ರುತ್ಯವಿರುದ್ಧತ್ವವನ್ನೂ ಹೇಳಿದ್ದಾರೆ. ಇದನ್ನು ಸೂತ್ರಕಾರರು ಹೇಳಿಲ್ಲ. 'ತದ್‌ಗುಣಸಾರತ್ವಾತ್' ಎಂಬ ಅಧಿಕರಣದ ಪ್ರಮೇಯವನ್ನು ಆಚಾರ್ಯರು ಇಲ್ಲಿ ಶಿಷ್ಯಹಿತಕ್ಕಾಗಿ ಮಾತ್ರ ಹೇಳಿದ್ದಾರೆ.

ಪ್ರಶ್ನೆ : ಗ್ರಂಥಕಾರರು 'ವಿಮತಾಃ ಆತ್ಮಾನಃ ಪರಮಾತ್ಮನಃ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್' ಎಂಬ ಅನುಮಾನದಿಂದ ಅಭೇದವನ್ನು ಸಾಧಿಸಿದ್ದಾರೆ. ಆದರೆ ಟೀಕೆಯಲ್ಲಿ 'ವಿಮತಾನಿ ಶರೀರಾಣಿ ಮದ್ ಭೋಗಾಯತನಾನಿ ಶರೀರತ್ವಾತ್' ಎಂಬ ಅನುಮಾನ ಹೇಳಿದ್ದಾರೆ. ಎಲ್ಲ ಶರೀರಗಳೂ ನನ್ನ ಭೋಗಕ್ಕಾಗಿಯೇ ಇವೆಯೆಂದರೆ ಎಲ್ಲ ಶರೀರದಲ್ಲಿರುವ ಆತ್ಮ ನಾನೊಬ್ಬನೇ ಎಂದರ್ಥ. ಗ್ರಂಥಕಾರರೂ ಸಹ ಟೀಕೆಯಲ್ಲಿ ಹೇಳಿದ ಅನುಮಾನವನ್ನೇ ಹೇಳಬೇಕಿತ್ತಲ್ಲವೇ?

ಉತ್ತರ : ಟೀಕೆಯಲ್ಲಿ ಹೇಳಿದ ಅನುಮಾನದಿಂದ ಸಾಕ್ಷಾತ್ತಾಗಿ ಜೀವರಿಗೆ ಅಭೇದಸಿದ್ಧವಾಗುತ್ತದೆ ಹೊರತು ಪರಮಾತ್ಮನಿಂದ ಅಭೇದ ಸಿದ್ಧವಾಗುವುದಿಲ್ಲ. ಪರಮಾತ್ಮಾಭೇದವು ಪರ್ಯವಸಾನದಿಂದಷ್ಟೇ ಸಿದ್ಧವಾಗುತ್ತದೆಯಷ್ಟೇ. ಪರಸ್ಪರ ಜೀವರಿಗೆ ಅಭೇದವನ್ನು ಸಾಧಿಸಬೇಕೆಂದರೆ ಶುದ್ಧಚೈತನ್ಯದಿಂದಲೇ ಸಾಧಿಸಬೇಕು. ಆ ಶುದ್ಧಚೈತನ್ಯನೇ ಬ್ರಹ್ಮನೆಂದು ಅರ್ಥಾತ್ ಸಿದ್ಧವಾಗುತ್ತದೆ. ಆದರೆ ಗ್ರಂಥಕಾರರು ಹೇಳಿದ 'ವಿಮತಾಃ ಆತ್ಮಾನಃ ಪರಮಾತ್ಮನೋ ನ ಭಿದ್ಯಂತೇ ಆತ್ಮತ್ವಾತ್' ಎಂಬ ಅನುಮಾನದಿಂದ ಸಾಕ್ಷಾತ್ತಾಗಿಯೇ ಪರಮಾತ್ಮನಿಂದ ಜೀವರಿಗೆ ಅಭೇದ ಸಿದ್ಧವಾಗುತ್ತದೆ. ಆದ್ದರಿಂದಲೇ 'ವಿಮತಾನಿ ಶರೀರಾಣಿ ಮದ್‌ಭೋಗಾಯತನಾನಿ ಯದ್' ಎಂಬ ಅನುವ್ಯಾಖ್ಯಾನದ ಸುಧೆಯಲ್ಲಿ ಶರೀರತ್ವಾನುಮಾನವನ್ನು ಆಕ್ಷೇಪಿಸಿಕೊಂಡು ಹೀಗೆಯೇ ಉತ್ತರಿಸಿದ್ದಾರೆ. ಮತ್ತು ಸುಧೆಯಲ್ಲಿ ಶರೀರತ್ವಾನುಮಾನದ ಜೊತೆಗೆ ಆತ್ಮತ್ವಾನುಮಾನವನ್ನೂ ತೋರಿಸಿದ್ದಾರೆ. ಟೀಕೆಯಲ್ಲಿ ಆದಿಪದದಿಂದ ಆತ್ಮತ್ವಾನುಮಾನವನ್ನು ಸೂಚಿಸಿದ್ದಾರೆ. ಪ್ರಕೃತ ಗ್ರಂಥಕಾರರೂ ಸಹ ಆದಿಪದದಿಂದ ಶರೀರತ್ವಾನುಮಾನವನ್ನು ವಿವಕ್ಷಿಸಿದ್ದಾರೆ. ಹೀಗೆ ಎಲ್ಲ ಕಡೆ ಎರಡೂ ಅನುಮಾನಗಳು ವಿವಕ್ಷಿತವಾಗಿವೆ.

ಈ ಎಲ್ಲ ಅಭೇದಾನುಮಾನಗಳ ವಿರೋಧ ಬರುವುದರಿಂದ ಭೇದಶ್ರುತಿಗಳಿಗೆ ಅನ್ಯಪರತ್ವ ಹೇಳಬೇಕೆಂದು ಪೂರ್ವಪಕ್ಷಿಯ ಅಭಿಪ್ರಾಯ.

ಇನ್ನು ಭೇದವ್ಯಪದೇಶಸೂತ್ರವೇ ವ್ಯರ್ಥವೆಂಬ ಶಂಕೆಯನ್ನು ಯದ್ಯಪಿ ಎಂಬ ಗ್ರಂಥದಿಂದ ಪರಿಹರಿಸುತ್ತಿದ್ದಾರೆ.

ಆನಂದಮಯನಿಗೂ ಬ್ರಹ್ಮನಿಗೂ ಭೇದವು ಶ್ರುತಿಸಿದ್ಧವಾಗಿದೆ - 'ತೇ ಯೇ ಶತಂ ಪ್ರಜಾಪತೇರಾನಂದಾ ಸ ಏಕೋ ಬ್ರಹ್ಮಣಃ ಆನಂದಃ' ಎಂದು ಚತುರ್ಮುಖನ ಆನಂದವನ್ನು ಪರಿಮಿತವೆಂದು ಹೇಳಿದೆ. ಆನಂದಮಯನ ಆನಂದವನ್ನು ಅಪರಿಮಿತವೆಂದು 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಭೇದಸಿದ್ಧವಾಗುತ್ತದೆ. ಈ ಸೂತ್ರವು ಜೀವ ಮತ್ತು ಆನಂದಮಯರಿಗೆ ಭೇದವನ್ನು ಹೇಳುವುದರ ಜೊತೆಗೆ ಜೀವಬ್ರಹ್ಮರಿಗೂ ಭೇದ ಹೇಳುತ್ತಿದೆ. 'ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ' ಎಂದು ಜೀವಬ್ರಹ್ಮರಿಗೂ ಆಧಾರಾಧೇಯಭಾವವನ್ನು ಹೇಳಿದ್ದಾರೆ. 'ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ' ಎಂದು ಜೀವಬ್ರಹ್ಮರಿಗೆ ಪ್ರಾಪ್ಯಪ್ರಾಪಕಭಾವ ಹೇಳಿದ್ದಾರೆ. ಹೀಗೆ ತೈತ್ತಿರೀಯಮಾತುಗಳಿಂದಲೇ ಜೀವಬ್ರಹ್ಮರಿಗೆ ಭೇದ ಸಿದ್ಧವಾಗುತ್ತದೆಂದು ಸೂತ್ರ ಸಮರ್ಥಿಸುತ್ತಿದೆ. ಹೀಗೆ ಭೇದವ್ಯಪದೇಶಸೂತ್ರಕ್ಕೆ ಎರಡೂ ಅರ್ಥಗಳನ್ನು ಹೇಳಿದ್ದರಿಂದ ಸುಧೆಗೂ ಟೀಕೆಗೂ ವಿರೋಧ ಪರಿಹರಿಸಿದಂತಾಯಿತು. ಮತ್ತು ಜೀವಬ್ರಹ್ಮಭೇದಪರವಾಗಿ ಅರ್ಥೈಸಿದ್ದರಿಂದ ಅನೇಕ ಸೂತ್ರಗಳಿಂದ ಆನುಗುಣ್ಯವನ್ನೂ ತೋರಿಸಿದಂತಾಯಿತು.

ಆನಂದಮಯಪ್ರಕರಣ. ಅಂತಸ್ಥಪ್ರಕರಣ ದ್ಯುಭ್ವಾದ್ಯಾಯತನ ಪ್ರಕರಣಗಳಲ್ಲಿ ಜೀವಬ್ರಹ್ಮೈಕ್ಯವು ಉಕ್ತವಾಗಿದೆಯಲ್ಲ? ಎಂಬ ಶಂಕೆ ಬಂದರೆ ಆಯಾ ಪ್ರಕರಣಗಳಲ್ಲೇ ಇರುವ ವಾಕ್ಯಗಳಿಂದ ಐಕ್ಯವು ವಿವಕ್ಷಿತವಲ್ಲ, ಭೇದವೇ ವಿವಕ್ಷಿತವಾಗಿದೆಯೆಂದು ಉತ್ತರಿಸಿದ್ದಾರೆ. ಆದ್ದರಿಂದ ಪುನರುಕ್ತಿ ಬರುವುದಿಲ್ಲವೆಂದು ಅನುವ್ಯಾಖ್ಯಾನದಲ್ಲಿ ಹೇಳಿದರೆ ಹೀಗೆ ಐಕ್ಯವಿದ್ದಲ್ಲಿ ಭೇದವಾಕ್ಯದಿಂದ ಭೇದವನ್ನು ಸಮರ್ಥಿಸಿದರೆ ಐಕ್ಯವನ್ನು ಸ್ವರೂಪತಃ ಎಲ್ಲಿಯೂ ನಿರಾಕರಿಸಿದಂತಾಗುವುದಿಲ್ಲವಲ್ಲ? ಎಂಬ ಪ್ರಶ್ನೆ ಬಂದರೆ 'ಪೃಥಗುಪದೇಶಾತ್' ಎಂಬ ಅಧಿಕರಣದಲ್ಲಿ ಐಕ್ಯಸ್ವರೂಪವನ್ನೇ ನಿರಾಕರಿಸಿದ್ದಾರೆಂದು ಉತ್ತರ.




ಆನಂದಮಯಾಧಿಕರಣದಲ್ಲಿ ಒಟ್ಟು ಎಂಟು ಸೂತ್ರಗಳಿವೆ. ಈ ಎಂಟು ಸೂತ್ರಗಳ ಜೋಡಣೆಯು ಇದೇ ಕ್ರಮದಲ್ಲಿರಬೇಕೆನ್ನಲು ಬಹಳ ಸ್ವಾರಸ್ಯವಿದೆ. ಅನೇಕ ಪ್ರಯೋಜನವೂ ಇದೆಯೆಂದು ಪ್ರಕೃತ ಗ್ರಂಥಕಾರರು ವಿಮರ್ಶಿಸುತ್ತಿದ್ದಾರೆ.

ಸೂತ್ರಕಾರರು ಜೋಡಿಸಿದ ಸೂತ್ರಕ್ರಮ ಹೀಗಿದೆ -

೧) ಓಂ ಆನಂದಮಯೋಽಭ್ಯಾಸಾತ್ ಓಂ
೨) ಓಂ ವಿಕಾರಶಬ್ದಾನ್ನೇತಿ ಚೇನ್ನಪ್ರಾಚುರ್ಯಾತ್ ಓಂ
೩) ಓಂ ತದ್ಧೇತುವ್ಯಪದೇಶಾಚ್ಚ ಓಂ

೪) ಓಂ ಮಾಂತ್ರವರ್ಣಿಕಮೇವ ಚ ಗೀಯತೇ ಓಂ
೫) ಓಂ ನೇತರೋऽನುಪಪತ್ತೇಃ ಓಂ
೬) ಓಂ ಭೇದವ್ಯಪದೇಶಾಚ್ಚ ಓಂ
೭) ಓಂ ಕಾಮಾಚ್ಚ ನಾನುಮಾನಾಪೇಕ್ಷಾ ಓಂ
೮) ಓಂ ಅಸ್ಮಿನ್ನಸ್ಯ ಚ ಯದ್ಯೋಗಂ ಶಾಸ್ತಿ ಓಂ

ಈ ಎಂಟು ಸೂತ್ರಗಳಲ್ಲಿ 'ತದ್ಧೇತುವ್ಯಪದೇಶಾಚ್ಚ' ಎಂಬ ಸೂತ್ರವನ್ನು ಕೊನೆಯಲ್ಲಿ ಹೇಳಬೇಕಿತ್ತು. ಏಕೆಂದರೆ 'ಆನಂದಮಯೋऽಭ್ಯಾಸಾತ್' 'ಮಾಂತ್ರವರ್ಣಿಕಮೇವ ಚ ಗೀಯತೇ' 'ಅಸ್ಮಿನ್ನಸ್ಯ ಚ' ಎಂಬ ಸೂತ್ರಗಳು ಅನ್ನಮಯಾದಿ ಐವರಲ್ಲಿಯೂ ಬ್ರಹ್ಮತ್ವವನ್ನು ಸಾಧಿಸಲು ಹೊರಟಿವೆ. ಆದರೆ ತದ್ಧೇತುಸೂತ್ರವು ಕೇವಲ ಆನಂದಮಯನಲ್ಲಿ ಬ್ರಹ್ಮತ್ವವನ್ನು ಸಾಧಿಸುತ್ತಿದೆಯಲ್ಲವೇ? ಎಂಬ ಪ್ರಶ್ನೆ ಬರುತ್ತದೆ.

ಆದರೆ ಮಾಂತ್ರವರ್ಣಿಕಸೂತ್ರದಲ್ಲಿ ಮತ್ತು 'ಅಸ್ಮಿನ್ನಸ್ಯ' ಎಂಬ ಸೂತ್ರದಲ್ಲಿ ಸಮರ್ಥಿಸಿದ ವಿಚಾರಗಳಿಗೆ ತದ್ಧೇತುಸೂತ್ರವು ಸಾಧಕವಾಗಿದೆಯೆಂಬ ಸಂಶಯ ಬರುತ್ತಿತ್ತು. ಈ ಸಂಶಯ ಬರಬಾರದೆಂದು ಸೂತ್ರಕಾರರು ಈ ಎರಡು ಸೂತ್ರಗಳ ಮೊದಲೇ ತದ್ಧೇತುಸೂತ್ರವನ್ನು ಉಚ್ಚರಿಸಿದ್ದಾರೆ. ಮತ್ತು ತದ್ಧೇತುಸೂತ್ರವು ಆನಂದಮಯನಿಗೆ ವಿಷ್ಣುತ್ವವನ್ನಷ್ಟೇ ನಿಶ್ಚಯಿಸುತ್ತಿಲ್ಲ. ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯಾರ್ಥವನ್ನೂ ಮತ್ತೊಂದು ಕಾರಣದಿಂದ ಸಮರ್ಥಿಸುತ್ತಿದೆ. ಆದ್ದರಿಂದ ವಿಕಾರಶಬ್ದಾತ್ ಎಂಬ ಸೂತ್ರದ ಅನಂತರ ಈ ಸೂತ್ರ ಹೇಳಿದ್ದು ಅತ್ಯಂತ ಉಚಿತವಾಗಿದೆ.

ಇನ್ನು ಅಸ್ಮಿನ್ನಸ್ಯ ಎಂಬ ಕೊನೆಯ ಸೂತ್ರವು ಸ್ವಪಕ್ಷಸಾಧಕವಾದ್ದರಿಂದ ಮಾಂತ್ರವರ್ಣಿಕಸೂತ್ರದ ಅನಂತರ ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಈ ಸೂತ್ರವು ಕೇವಲ ಸ್ವಪಕ್ಷಸಾಧಕವಾಗಿದ್ದಲ್ಲಿ ಪ್ರಶ್ನೆ ಸಮಂಜಸವಾಗುತ್ತಿತ್ತು. ಪರಪಕ್ಷನಿರಾಸಕವೂ ಆದ್ದರಿಂದ ಅಂತಿಮವಾಗಿ ಹೇಳಿದ್ದು ಅರ್ಥವತ್ತಾಗಿದೆ. 'ನೇತರಃ' 'ಭೇದವ್ಯಪದೇಶಾತ್' ಎಂಬ ಸೂತ್ರಗಳಲ್ಲಿ ಭೇದವು ಪ್ರತಿಪಾದಿಸಲ್ಪಟ್ಟಿದೆ. ಆ ಭೇದವು ಅಪಾರಮಾರ್ಥಿಕವೆಂಬ ಆಕ್ಷೇಪವನ್ನು ಪರಿಹರಿಸುವ ಮೂಲಕ ಪರಪಕ್ಷ ನಿರಾಸಕವಾಗಿದೆ.

ಹಾಗಾದರೆ ಭೇದವ್ಯಪದೇಶಸೂತ್ರದ ಅನಂತರವೇ 'ಅಸ್ಮಿನ್ನಸ್ಯ' ಎಂಬ ಸೂತ್ರ ಬರಬೇಕು. ಮಧ್ಯದಲ್ಲಿ 'ಕಾಮಾಚ್ಚ' ಎಂಬ ಸೂತ್ರವೇಕೆ? ಎಂದರೆ ಭೇದದಂತೆ ಅಭೇದವೂ ಪ್ರಾಮಾಣಿಕವೆಂಬ ಅವಾಂತರಶಂಕೆಯನ್ನು ನಿರಾಕರಿಸಲು ಕಾಮಾಚ್ಚಸೂತ್ರವು ಹೊರಟಿದೆ. ಅಭೇದವು ಅನುಮಾನಸಿದ್ಧವಾಗಿದೆ. ಭೇದವು ಶ್ರುತಿಸಿದ್ಧವಾಗಿದೆ. ಇವೆರಡಕ್ಕೆ ಪರಸ್ಪರ ವಿರೋಧವೇ ಇಲ್ಲವಲ್ಲ? ಎಂಬ ಪ್ರಶ್ನೆಯನ್ನು ಪರಿಹರಿಸಲು ಕಾಮಾಚ್ಚಸೂತ್ರದ ಅನಂತರವೇ ಅಸ್ಮಿನ್ನಸ್ಯ ಸೂತ್ರ ಹೊರಟಿದೆ. ಆದ್ದರಿಂದ ಸೂತ್ರಕಾರರು ಜೋಡಿಸಿದ ಸೂತ್ರಗಳ ಕ್ರಮವು ಸುವ್ಯವಸ್ಥಿತವಾಗಿವೆ. ಮತ್ತು ಅರ್ಥಪೂರ್ಣವಾಗಿವೆ.

ಭೇದವ್ಯಪದೇಶಸೂತ್ರವು ಜೀವನಿಗೆ ಆನಂದಮಯರಿಂದ ಭೇದವನ್ನು ಸಮರ್ಥಿಸುತ್ತದೆ. ಅದರಂತೆ ಜೀವಬ್ರಹ್ಮರ ಭೇದವನ್ನೂ ಸಮರ್ಥಿಸುತ್ತದೆ. ಜೀವಬ್ರಹ್ಮಸಾಧಕವಾಗದಿದ್ದಲ್ಲಿ ನೇತರಃ' ಎಂಬ ಒಂದೇ ಸೂತ್ರ ಸಾಕಾಗಿತ್ತು.



ಪುಚ್ಛನೇ ಬ್ರಹ್ಮ, ಆನಂದಮಯನಲ್ಲ (ಅದ್ವೈತಿಗಳು)

**तात्पर्यचन्द्रिका –**

अन्ये तु – आनन्दमयतदवयवपुच्छयोर्द्वयोर्ब्रह्मत्वायोगादेकस्य ब्रह्मता वाच्या । तत्रानन्दमयस्य ब्रह्मत्वे, विकारार्थस्य मयटः प्रायपाठत्यागः, प्राचुर्यस्यापि प्रतियोग्यल्पत्वापेक्षत्वात् ब्रह्मणि च दुःखलेशस्याप्यभावान्मयटः स्वार्थत्यागः, पुच्छवाक्यगतब्रह्मशब्दस्य च गौणार्थत्वं, "सैषाऽऽनन्दस्य मीमांसा" इत्यादौ अभ्यस्यमानानन्दप्रांतिपदिकेन मयडर्थो लक्ष्यते इति चत्वारो दोषाः ।

पुच्छस्य ब्रह्मत्वे तु अवयवप्रायपाठबाधमात्रम् । पुच्छपदमुख्यार्थत्यागस्तु आनन्दमयस्य ब्रह्मत्वपक्षेऽपि समः । लाङ्गूले मुख्यस्य तस्यानन्दमयावयवेऽपि गौणत्वात् । तस्मान्मयट्प्रत्ययब्रह्मशब्दानन्दप्रातिपदिकरूपमुख्यत्रितयानुगुण्यात् पुच्छमेव ब्रह्मेति युक्तम् । पुच्छपदं तु प्रतिष्ठापदसन्निधानादाधारलक्षकम् । तदुक्तं भामत्याम् –

प्रायपाठपरित्यागो मुख्यत्रितयलङ्घनम् ।
पूर्वस्मिन्नुत्तरे पक्षे प्रायपाठस्य बाधनम् ॥

इति ।

किञ्च प्रियाद्यवयवयोगेन आनन्दमयस्सविशेषः, ब्रह्म तु निर्विशेषम् । अपि च आनन्दमयः प्रतिशरीरं प्रियादिभेदाद्भिन्नः, ब्रह्म त्वभिन्नम् । तस्मादानन्दमयो न ब्रह्म, किन्तु पञ्चापि कोशाः ।

न च सर्वांतरत्वादानन्दमयो ब्रह्म । पुच्छवाक्ये ततोऽप्यन्तरस्य प्रतिष्ठापदेनोक्तेः । या तु भार्गवी वारुणी विद्या, तस्यां मयटः प्रियशिरस्त्वादेश्चाश्रवणात् न युक्तमानन्दस्य ब्रह्मत्वमिति सिद्धान्तः ।

सूत्राणि तु "वेदसूत्रविरोधे तु गुणे त्वन्याय्यकल्पना" इति न्यायेन अन्यथा व्याख्येयानीत्याहुः ।

ಅನುವಾದ - ಅದ್ವೈತಿಗಳು ಹೀಗೆ ಹೇಳುತ್ತಾರೆ - ಆನಂದಮಯ ಮತ್ತು ಆನಂದಮಯನ ಅವಯವವಾದ ಪುಚ್ಛ, ಎರಡನ್ನೂ ಬ್ರಹ್ಮ ಎನ್ನುವುದು ತಪ್ಪು. ಎರಡರಲ್ಲಿ ಒಂದನ್ನಷ್ಟೇ ಪುಚ್ಛ ಎನ್ನಬೇಕು. ಆನಂದಮಯನನ್ನು ಬ್ರಹ್ಮ ಎಂದು ಹೇಳಿದರೆ ನಾಲ್ಕು ದೋಷಗಳು ಬರುತ್ತವೆ. ೧) ಅನ್ನಮಯಾದಿ ನಾಲ್ಕರಲ್ಲಿರುವ ಮಯಟ್‌ಪ್ರತ್ಯಯವು ವಿಕಾರ ಎಂಬರ್ಥದಲ್ಲಿದೆ. ಆನಂದಮಯ ಎಂಬಲ್ಲಿರುವ ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯಾರ್ಥ ಹೇಳಿದರೆ ಪ್ರಾಯಪಾಠವಿರೋಧ ಬರುತ್ತದೆ. ೨) ಪ್ರಾಚುರ್ಯಾರ್ಥ ಹೇಳಿದರೂ ವಿಜಾತೀಯವಾದ ದುಃಖರೂಪಪ್ರತಿಯೋಗಿಯಲ್ಲಿ ಅಲ್ಪತ್ವ ಬರಬೇಕಾಗುತ್ತದೆ. ಆದರೆ ಬ್ರಹ್ಮನಲ್ಲಿ ದುಃಖದ ಲೇಶವೂ ಇಲ್ಲ. ಆದ್ದರಿಂದ ಮಯಟ್‌ಪ್ರತ್ಯಯಕ್ಕೆ ಅರ್ಥವೇ ಇಲ್ಲವಾಗಬೇಕಾದೀತು. ೩) ಆನಂದಮಯನನ್ನು ಬ್ರಹ್ಮನೆಂದು ಹೇಳಿದರೆ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂಬ ಪುಚ್ಛ ವಾಕ್ಯದಲ್ಲಿರುವ ಬ್ರಹ್ಮಶಬ್ದವು ಗೌಣವಾಗಬೇಕಾದೀತು. ೪) 'ಸೈಷಾನಂದಸ್ಯ ಮೀಮಾಂಸಾ ಭವತಿ' ಎಂಬಲ್ಲಿರುವ ಆನಂದಶಬ್ದಕ್ಕೆ ಆನಂದಮಯನಲ್ಲಿ ಲಕ್ಷಣಾ ಮಾಡಬೇಕಾಗುತ್ತದೆ.

ಈ ದೋಷಗಳಿಗೆ ಹೆದರಿ ಪುಚ್ಛನನ್ನು ಬ್ರಹ್ಮನೆಂದು ಹೇಳಿದರೆ ನಾಲ್ಕು ದೋಷ ಬಾರದಿದ್ದರೂ ಒಂದು ದೋಷ ಬರುತ್ತದೆ. ಹಿಂದೆ 'ತಸ್ಯ ಪ್ರಿಯಮೇವ ಶಿರಃ ಮೋದೋ ದಕ್ಷಿಣಃ ಪಕ್ಷಃ' ದಕ್ಷಿಣಪಕ್ಷ ಉತ್ತರ ಪಕ್ಷ ಎಂದು ಅವಯವಗಳೇ ಹಿಂದೆ ಪ್ರಸಕ್ತವಾಗಿವೆ. ಈಗ ಮಾತ್ರ ಪುಚ್ಛಶಬ್ದಕ್ಕೆ ಅವಯವಾರ್ಥ ಹೇಳದಿದ್ದರೆ ಪ್ರಾಯಪಾಠವನ್ನು ಬಿಟ್ಟಂತಾಗುತ್ತದೆ. ಪುಚ್ಛನನ್ನು ಬ್ರಹ್ಮನೆಂದು ಹೇಳಿದರೆ ಪುಚ್ಛಪದಕ್ಕೆ ಮುಖ್ಯವಾದ ಅವಯವ ಎಂಬರ್ಥವನ್ನು ಬಿಟ್ಟಂತಾಗುತ್ತದಲ್ಲ? ಎಂದರೆ 'ಆನಂದಮಯನು ಬ್ರಹ್ಮ' ಎಂಬ ಪಕ್ಷದಲ್ಲಿಯೂ 'ಪುಚ್ಛ' ಪದಕ್ಕೆ ಅವಯವವೆಂಬರ್ಥವನ್ನು ಬಿಡಲೇಬೇಕು. ಏಕೆಂದರೆ ಪುಚ್ಛಪದಕ್ಕೆ 'ಬಾಲ'ವೇ ಮುಖ್ಯಾರ್ಥ. ಆನಂದಮಯನಿಗೆ ಬಾಲ ಇಲ್ಲದ ಕಾರಣ ಆನಂದಮಯಾವಯವ ಎಂದರೂ ಗೌಣಾರ್ಥ ಹೇಳಲೇಬೇಕು. ಆದ್ದರಿಂದ ಪುಚ್ಛನನ್ನು ಬ್ರಹ್ಮನೆಂದಾಗ ಮೂರಕ್ಕೆ ಮುಖ್ಯಾರ್ಥ ಹಾಗೆ ಉಳಿಯುತ್ತದೆ. ವಿಕಾರಾರ್ಥಕ ಮಯಟ್‌ಪ್ರತ್ಯಯಕ್ಕೆ 'ಬ್ರಹ್ಮ ಪುಚ್ಛಂ' ಎಂಬಲ್ಲಿರುವ ಬ್ರಹ್ಮ ಶಬ್ದಕ್ಕೆ 'ಸೈಷಾನಂದ' ಎಂಬಲ್ಲಿರುವ ಆನಂದಪ್ರಾತಿಪದಿಕಕ್ಕೆ ಲಕ್ಷಣಾ ಮಾಡಬೇಕಾಗಿಲ್ಲ. ಹೀಗೆ ತ್ರಿತಯಾನುಗುಣ್ಯವಿರುವುದರಿಂದ ಪುಚ್ಛನೇ ಬ್ರಹ್ಮನೆಂದು ಹೇಳಬೇಕು. ಪುಚ್ಛಪದಕ್ಕಾದರೂ ಪ್ರತಿಷ್ಠಾಪದದ ಸನ್ನಿಧಾನವಿರುವುದರಿಂದ ಆಧಾರದಲ್ಲಿ ಲಕ್ಷಣಾ ಮಾಡಬೇಕು. ಇದನ್ನೇ ಭಾಮತಿಯಲ್ಲಿ ಹೇಳಿದ್ದಾರೆ -

ಪ್ರಾಯಪಾಠಪರಿತ್ಯಾಗೋ ಮುಖ್ಯತ್ರಿತಯಲಂಘನಮ್ ।
ಪೂರ್ವಸ್ಮಿನ್ನುತ್ತರೆ ಪಕ್ಷೇ ಪ್ರಾಯಪಾಠಸ್ಯ ಬಾಧನಮ್ ॥

ನಿಮ್ಮ ಪೂರ್ವಪಕ್ಷದಲ್ಲಿ ಪ್ರಾಯಪಾಠಪರಿತ್ಯಾಗ ಮತ್ತು ಮೂರು ಕಡೆ ಮುಖ್ಯಾರ್ಥ ಬಿಡಬೇಕಾದ ಪ್ರಸಂಗ ಬರುತ್ತದೆ ಉತ್ತರಪಕ್ಷದಲ್ಲಿ ಪ್ರಾಯಪಾಠದ ಬಾಧವಷ್ಟೇ ಬರುತ್ತದೆ ಎಂದು.

ಆನಂದಮಯನನ್ನೇ ಬ್ರಹ್ಮನೆಂದು ಹೇಳಿದರೆ ಇನ್ನೂ ಕೆಲವು ದೋಷಗಳು ಬರುತ್ತವೆ. ಬ್ರಹ್ಮನು ವಸ್ತುತಃ ನಿರ್ವಿಶೇಷ, ಆದರೆ ಆನಂದಮಯನು ಪ್ರಿಯ, ಮೋದಾದಿ ಅವಯವಗಳ

ಸಂಬಂಧವಿರುವುದರಿಂದ ಸವಿಶೇಷನಾಗಿದ್ದಾನೆ. ಮತ್ತು ಪ್ರತಿಯೊಬ್ಬರ ಮೋದ ಪ್ರಮೋದಗಳು ಭಿನ್ನ ಭಿನ್ನವಾದ್ದರಿಂದ ಆನಂದಮಯನೂ ಬೇರೆ ಬೇರೆಯೇ ಆಗಿದ್ದಾನೆ. ಆದರೆ ಬ್ರಹ್ಮನು ಎಲ್ಲೆಡೆ ಒಬ್ಬನೇ ಆಗಿದ್ದಾನೆ. ಆದ್ದರಿಂದ ಆನಂದಮಯನು ಬ್ರಹ್ಮನಾಗಲಾರ, ಹೊರತಾಗಿ ಐದನ್ನೂ ಕೋಶವೆಂದೇ ಹೇಳಬೇಕು. ಎಲ್ಲರ ಒಳಗಿರುವುದರಿಂದ ಆನಂದಮಯನನ್ನು ಬ್ರಹ್ಮನೆಂದು ಹೇಳಬಹುದಲ್ಲ? ಎಂದರೆ 'ಬ್ರಹ್ಮ ಪುಚ್ಛಮ್ ಪ್ರತಿಷ್ಠಾ' ಎಂಬಲ್ಲಿ ಪ್ರತಿಷ್ಠಾಪದದಿಂದ ಆನಂದಮಯನಿಗೂ ಪುಚ್ಛಬ್ರಹ್ಮನು ಆಧಾರನೆಂದು ಹೇಳಿದ್ದರಿಂದ ಆನಂದಮಯನು ಬ್ರಹ್ಮನಾಗಲಾರ.

'ಸೈಷಾ ಭಾರ್ಗವೀ ವಾರುಣೀ ವಿದ್ಯಾ' ಎಂಬಲ್ಲಿ ಮಯಟ್‌ಪ್ರತ್ಯಯವಾಗಲೀ ಪ್ರಿಯಶಿರಸ್ತ್ವಾದಿ-ಗಳಾಗಲೀ ಕೇಳಿಸುತ್ತಿಲ್ಲ. ಆದ್ದರಿಂದ ಅಲ್ಲಿರುವ ಆನಂದನು ಬ್ರಹ್ಮನಾಗಬಹುದು. ಇಷ್ಟು ಸಿದ್ಧಾಂತ. ಸೂತ್ರಗಳ ಗತಿಯೇನು? ಎಂಬ ಪ್ರಶ್ನೆ ಬರುತ್ತದೆ. ಆದರೆ 'ವೇದಸೂತ್ರವಿರೋಧೇ ತು ಗುಣೇತ್ವನ್ಯಾಯಕಲ್ಪನಾ' ವೇದ ಮತ್ತು ಸೂತ್ರಗಳಿಗೆ ವಿರೋಧ ಬಂದರೆ ಗೌಣವಾದ ಸೂತ್ರಗಳಿಗೇನೇ ಅನ್ಯಾಯವನ್ನು ಹೇಳಬೇಕು. ಅಂದರೆ ಸೂತ್ರಗಳಿಗೆ ಗೌಣಾರ್ಥ ಮಾಡಿ ವೇದಗಳಿಗೆ ಮುಖ್ಯಾರ್ಥ ಮಾಡಬೇಕು. ಹೀಗೆ ಅದ್ವೈತಿಗಳು ಹೇಳುತ್ತಾರೆ.

### ಕಠಿಣಪದಾರ್ಥ

ಅಯೋಗಾತ್ = ವಿರೋಧ ಬರುವುದರಿಂದ, ಪ್ರತಿಯೋಗ್ಯಲ್ಪತ್ವಾಪೇಕ್ಷತ್ವಾತ್= ಆನಂದಕ್ಕೆ ಪ್ರತಿಯೋಗಿಯಾದ ದುಃಖದ ಲೇಶವನ್ನು ಅಪೇಕ್ಷಿಸುವುದರಿಂದ, ಲಕ್ಷ್ಯತೇ = ಸೂತ್ರದಲ್ಲಿರುವ 'ಅಭ್ಯಾಸಾತ್' ಎಂಬುದಕ್ಕೆ ಆನಂದಮಯಶಬ್ದದ ಅಭ್ಯಾಸವಿರುವು-ದರಿಂದ ಲಕ್ಷಣಾ ಮಾಡಬೇಕು, ನಿರ್ವಿಶೇಷಮ್ = ವಾಕ್ ಮತ್ತು ಮನಸ್ಸುಗಳಿಗೆ ಗೋಚರನಲ್ಲವೆಂಬ ಶ್ರುತಿಯಂತೆ ನಿರ್ವಿಶೇಷನಾಗಿದ್ದಾನೆ, ಯಾತು = ಭೃಗುವಲ್ಲಿಯಲ್ಲಿ ಹೇಳಿದ. ಅನ್ಯಾಯ್ಯಕಲ್ಪನಾ = ಗೌಣಾರ್ಥ ಮಾಡಬೇಕು.

**प्रकाशः – अयोगादिति** ।। **विरोधादिति** भावः । उदाहरिष्यमाणश्लोके ''प्रायपाठ'' इति पादं व्याचष्टे – **तत्रेति** ।। अन्नमयादीनामन्तरन्यस्य श्रवणेन तेषां अब्रह्मतया कोशत्वेन तत्रान्नादिविकारार्थत्वस्याऽऽवश्यकत्वात्, तत्प्रायपाठपरित्याग इत्यर्थः । ''मुख्यत्रितयलङ्घनं'' इत्येतद्विवृणोति – **प्राचुर्यस्येति** ।। यथा **'ब्राह्मणप्रचुरो ग्रामः'** इत्यादौ विजातीयशूद्राल्पत्वं लभ्यते, तथाऽत्रापि दुःखाल्पत्वं लभ्यते व्युत्पत्तिबलात्, न च तदस्तीत्यर्थः ।।

**ब्रह्मशब्दस्येति** ।। निर्विकारे **ब्रह्मणि** मुख्यस्याब्रह्मणि पुच्छे गौणार्थत्वम् इत्यर्थः ।। **लक्ष्यत इति** ।। **'आनन्दमयो ब्रह्म अभ्यासात्'** इत्युक्ते आनन्दमयशब्दस्यैव अभ्यासादिति लभ्यते । श्रुतौ च **''सैषाऽऽनन्दस्य''** इत्यादिना आनन्दस्यैवाभ्यासो

न त्वानन्दमयस्येति । तेन मयडर्थो लक्ष्यते इत्यर्थः । "उत्तरे पक्षे प्रायपाठस्य बाधनम्" इति सिद्धान्तांशं विवृणोति – **पुच्छस्येति** ।।

आनन्दमयस्य ब्रह्मत्वे दोषान्तरमाह – **किञ्चेति** ।। "तस्य प्रियमेव शिरः मोदो दक्षिणः पक्षः" इत्यादिनोच्यमानशिरः प्रभृत्यवयवयोगेनेत्यर्थः । **निर्विशेषमिति** ।। अवाङ्मनसगोचरत्वश्रुतेरिति भावः ।। **अभिन्नमिति** ।। अनन्तत्वश्रुतेरिति भावः ।। **सर्वेति** ।। अन्नमयादिचतुष्टयान्तरत्वादित्यर्थः ।। **प्रतिष्ठेति** ।। "ब्रह्म पुच्छं प्रतिष्ठा" इति प्रतिष्ठापदेनानन्दमयाश्रयतयोक्तेरित्यर्थः । नन्वेवं भृगुवल्लीविरोध इत्यत आह – **या त्विति** ।। **आनन्दस्येति** ।। "आनन्दो ब्रह्मेति व्यजानात्" इत्युक्तस्येत्यर्थः ।। **गुणे त्विति** ।। नवमे "विप्रतिपत्तौ विकल्पः स्यात्समत्वाद् गुणे त्वन्याय्यकल्पनैकदेशत्वात्" इति जैमिनिसूत्रोक्तन्यायेनेत्यर्थः ।।

**अन्यथेति** ।। "ब्रह्म पुच्छं प्रतिष्ठा" इत्यत्र किमानन्दमयावयवत्वेन ब्रह्म विवक्षितमुत स्वप्रधानत्वेनेति संशये, पुच्छशब्दादवयवत्वेनेति प्राप्ते, उच्यते – **आनन्दमयोऽभ्यासात्** । आनन्दमयवाक्यशेषे "ब्रह्म पुच्छं प्रतिष्ठा" इत्यत्र स्वप्रधानमेव ब्रह्मोच्यते । कुतः "असद्ब्रह्मेति वेद चेत्" इत्यादौ केवलब्रह्मण एवाभ्यस्यमानत्वात् । विकारशब्दात्पुच्छमिति अवयवशब्दान्न स्वप्रधानमिति चेन्न, प्राचुर्यादन्नमयाद्यवयवप्रायवचनात् । "स इदं सर्वमसृजत । यदिदं किञ्च" इत्यानन्दमयसहितस्य सर्वस्यापि जगतो ब्रह्मण एव हेतुत्वव्यपदेशाच्च । इतराणि तु सूत्राणि पुच्छवाक्यनिर्दिष्टब्रह्मण एवोपपादकानीति तदीयभाष्यानुरोधेनेत्यर्थः ।

**गुरुराजीयम्** – नन्वानन्दमयस्य ब्रह्मत्वप्रतिपादनमयुक्तम् । तथात्वे प्रायपाठत्यागादिरूपदोषप्रसङ्गात् । नच मयटः प्राचुर्यार्थत्वान्न तत्त्याग इति वाच्यम् । पुच्छस्य ब्रह्मत्वे तत्प्राप्तिपरिहारक्लेशयोरभावात् तथा च तस्यैव ब्रह्मत्वमिति परे वर्णयन्ति तद्दूषयितुमनुवदति ।। **अन्ये त्विति** ।। **द्वयोरिति** ।। अन्यथाऽवयवावयविभावो न स्यादिति भावः । नन्वस्तु द्वयोर्मध्य आनन्दमयस्य ब्रह्मत्वमित्यत आह – **तत्रेति** ।। प्राचुर्यार्थत्वान्न प्रायपाठविरोध इत्यत आह – **प्राचुर्यस्येति** ।। तथा च प्राचुर्यार्थत्वाङ्गीकारेऽपीषद्दुःखस्याप्यनङ्गीकारान्मयटः स्वार्थत्याग इत्यर्थः । ननु पुच्छस्य ब्रह्मत्वे पुच्छपदमुख्यार्थत्याग इत्यत आह – **पुच्छपदेति** ।।

नन्वानन्दमयस्याब्रह्मत्वे सोऽकामयतेत्यादावानन्दमयस्य कामयितृत्वस्रष्टृत्वादि श्रुतमिति तस्यामुख्यत्वं को ह्येवान्यादित्यानन्दमयस्य पूर्णानन्दत्वप्रतिपादकत्वेन तस्याप्यमुख्यत्वं एतमानन्दमयमित्यस्याप्यमुख्यत्वमित्यनेकवाक्यानाममुख्यत्वं तुल्यमेवेत्यत आह – **किञ्चेति** ।। अन्यथा निष्कलमित्यादिश्रुतिव्याकोपः स्यादिति भावः । नन्वानन्दमयस्य सर्वान्तर्यामित्वश्रवणादन्तर्यामिणश्चान्यस्याभवात्तास्यैव ब्रह्मत्वमित्याशङ्क्य निषेधति – **नच सर्वेति** ।। ननु भृगुवल्या ब्रह्मपरत्वेन निर्णीतत्वात् तत्समाख्यानादानन्दमयस्यापि ब्रह्मत्वमित्यत आह – **या त्विति** ।। ननु तर्हि पुच्छमभ्यासादित्येवमाद्याकाराणि सूत्राणि स्युरित्यत आह – **सूत्राणि ।। त्विति** ।।

ವಿವರಣೆ : - ಆನಂದಮಯನಿಗೂ ಪುಚ್ಛಕ್ಕೂ ಬ್ರಹ್ಮತ್ವ ಹೇಳುವುದು ವಿರುದ್ಧ. ಅವಯವ ಅವಯವಿಗಳಿಗೆ ಭೇದವಿರುವುದರಿಂದ ಆನಂದಮಯನು ಬ್ರಹ್ಮನಾದರೆ ಪುಚ್ಛ ಬ್ರಹ್ಮನಾಗಲ್ಲ. ಪುಚ್ಛ ಬ್ರಹ್ಮನಾದರೆ ಆನಂದಮಯನು ಬ್ರಹ್ಮನಾಗಲಾರ ಎಂದು ಅದ್ವೈತಿಗಳ ಆಕ್ಷೇಪ.

ಇದೇ ಮೂಲದಲ್ಲಿ ಮುಂದೆ ಭಾಮತಿಯ ಮಾತನ್ನು ಉಲ್ಲೇಖಿಸಿದ್ದಾರೆ. 'ಪ್ರಾಯಪಾಠಸ್ಯ ಬಾಧನಮ್' ಎಂದು. ಪ್ರಕೃತ ತತ್ರ ಇತ್ಯಾದಿ ವಾಕ್ಯದಿಂದ ಅದನ್ನು ವ್ಯಾಖ್ಯಾನಿಸುತ್ತಿದ್ದಾರೆ.

ಅನ್ನಮಯಾದಿಗಳಂತೂ ಬ್ರಹ್ಮ ಆಗಲು ಸಾಧ್ಯವಿಲ್ಲ. ಬ್ರಹ್ಮನು ಸರ್ವಾಂತರ್ಗತನಾಗಿದ್ದಾನೆ. ಆದರೆ ಅನ್ನಮಯಾದಿಗಳಿಗೆ ಒಂದೊಂದರಲ್ಲೇ ಅಂತರತ್ವ ಹೇಳಿದ್ದಾರೆ. ಮತ್ತು ಅನ್ನಮಯಪ್ರಾಣಮಯಾದಿಗಳಿಗೆ ಪರಸ್ಪರ ಭೇದವೂ ಕೇಳಿಸುತ್ತಿದೆ. ಆದ್ದರಿಂದ ಅನ್ನಮಯಾದಿ ನಾಲ್ಕೂ ಸಹ ಕೋಶವೆಂದು ನಿರ್ಣಯವಾಗಿದೆ. ಆನಂದಮಯನ ಒಳಗೆ ಮತ್ತೊಂದನ್ನು ಹೇಳದ ಕಾರಣ ಆನಂದಮಯನು ಬ್ರಹ್ಮನಾಗಬಹುದು. ಕೋಶವೆಂದು ನಿರ್ಣಯವಾದ ಅನ್ನಮಯಾದಿಗಳಲ್ಲಿರುವ ಮಯಟ್‌ಪ್ರತ್ಯಯಕ್ಕೆ ವಿಕಾರಾರ್ಥವನ್ನು ಹೇಳಲೇಬೇಕಾಗುತ್ತದೆ. ಈಗ ಆನಂದಮಯಶಬ್ದದ ಮಯಟ್ ಪ್ರತ್ಯಯಕ್ಕಷ್ಟೇ ಪ್ರಾಚುರ್ಯಾರ್ಥ ಹೇಳಿದರೆ ಪ್ರಾಯಪಾಠದ ವಿರೋಧ ಬರುತ್ತದೆಂದು ತಿಳಿಯಬೇಕು.

ಭಾಮತಿ ಶ್ಲೋಕದಲ್ಲಿರುವ 'ಮುಖ್ಯತ್ರಿತಯಲಂಘನಮ್' ಎಂಬುದನ್ನು 'ಪ್ರಾಚುರ್ಯಸ್ಯ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ೧) ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯಾರ್ಥ ಸ್ವೀಕರಿಸಿದರೆ ದುಃಖದ ಲೇಶಕ್ಕೆ ಅವಕಾಶವಿದೆ. 'ಬ್ರಾಹ್ಮಣಪ್ರಚುರಃ ಗ್ರಾಮಃ' ಎಂದು ಹೇಳಿದರೆ ವಿಜಾತೀಯರಾದ ಶೂದ್ರರೂ ಕೆಲವರಿದ್ದಾರೆಂಬ ಪ್ರತೀತಿ ಹೇಗೆ ಬರುತ್ತದೋ, ಅದರಂತೆ ವಿಕಾರಾರ್ಥವಂತೂ ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಮಯಟ್‌ಪ್ರತ್ಯಯಕ್ಕೆ ಮುಖ್ಯಾರ್ಥ ಬಿಟ್ಟಂತಾಯಿತು. ೨) 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂಬಲ್ಲಿರುವ ಬ್ರಹ್ಮಶಬ್ದಕ್ಕೆ ಗೌಣಾರ್ಥ ಹೇಳಿದ್ದರಿಂದ ಮುಖ್ಯಾರ್ಥ ಬಿಟ್ಟಂತಾಯಿತು. ನಿರ್ವಿಕಾರ ಬ್ರಹ್ಮನಲ್ಲಿ ಬ್ರಹ್ಮಶಬ್ದವು ಮುಖ್ಯವಾದ್ದರಿಂದ ಅವನ ಅವಯವವಾದ ಪುಚ್ಛದಲ್ಲಿ ಗೌಣವಾಯಿತು. ೩) ಆನಂದಶಬ್ದದಿಂದ ಲಕ್ಷಣಯಾ

ಆನಂದಮಯನನ್ನು ತೆಗೆದುಕೊಂಡಾಗ ಆನಂದಶಬ್ದಕ್ಕೆ ಮುಖ್ಯಾರ್ಥ ಬಿಟ್ಟಂತಾಯಿತು. ಹೀಗೆ ಮೂರು ಕಡೆ ಮುಖ್ಯಾರ್ಥ ಬಿಟ್ಟಂತಾಯಿತೆಂದು 'ಮುಖ್ಯತ್ರಿತಯಲಂಘನಮ್' ಎಂಬುದರ ಅರ್ಥ.

ಆದ್ದರಿಂದ ದ್ವೈತಿಗಳು ಹೀಗೆ ಅನುಮಾನ ಮಾಡಬೇಕು. 'ಆನಂದಮಯಃ ಬ್ರಹ್ಮ ಅಭ್ಯಾಸಾತ್' ಎಂದು ಇಲ್ಲಿ ಅಭ್ಯಾಸಾತ್ ಎಂದರೆ ಆನಂದಮಯಶಬ್ದದ ಅಭ್ಯಾಸವೆಂದೇ ಅರ್ಥವಾಗುತ್ತದೆ. ಆದರೆ ಆನಂದಮಯಶಬ್ದವು ಅನೇಕ ಬಾರಿ ಶ್ರುತಿಯಲ್ಲಿ ಕೇಳಿಸುತ್ತಲೇ ಇಲ್ಲ. 'ಸೈಷಾನಂದಸ್ಯ ಮೀಮಾಂಸಾ' ಇತ್ಯಾದಿಯಾಗಿ ಆನಂದಶಬ್ದದ ಅಭ್ಯಾಸವೇ ಶ್ರುತವಾಗಿದೆ. ಇಂತಹ ಆನಂದ ಶಬ್ದದಿಂದ ಆನಂದಮಯನನ್ನು ಲಕ್ಷಣಯಾ ವಿವಕ್ಷಿಸಬೇಕು. ದ್ವೈತಿಗಳಿಗೆ ಒಟ್ಟು ನಾಲ್ಕು ದೋಷಗಳು ಬರುತ್ತವೆ.

ಉತ್ತರಪಕ್ಷದಲ್ಲಿ 'ಪ್ರಾಯಪಾಠಸ್ಯ ಬಾಧನಮ್' ಎಂಬ ಸಿದ್ಧಾಂತಭಾಗವನ್ನು 'ಪುಚ್ಛಸ್ಯ' ಇತ್ಯಾದಿಯಾಗಿ ವಿವರಿಸುತ್ತಿದ್ದಾರೆ, ಆನಂದಮಯನು ಬ್ರಹ್ಮನೆಂಬ ಪಕ್ಷದಲ್ಲಿ ಮತ್ತೊಂದು ದೋಷವನ್ನು 'ಕಿಂಚ; ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಬ್ರಹ್ಮನು 'ಯತೋ ವಾ' ಇತ್ಯಾದಿ ಶ್ರುತಿಗಳಿಂದ ಮನಸ್ಸಿಗೆ ಮತ್ತು ಮಾತಿಗೆ ಗೋಚರನಲ್ಲವೆಂದು ನಿರ್ಣಯವಾಗಿದೆ. 'ಸತ್ಯಂ ಜ್ಞಾನಂ ಅನಂತಂ' ಎಂಬ ಶ್ರುತಿಯಿಂದ ಬ್ರಹ್ಮನು ದೇಶಕಾಲಾದಿಗಳಿಂದ ಅಪರಿಚ್ಛಿನ್ನನೆಂದು ಸಿದ್ಧವಾಗಿದೆ. ಆದ್ದರಿಂದ ಬ್ರಹ್ಮನಿಗೆ ಭೇದ ಬರುವುದಿಲ್ಲ. ಆನಂದಮಯನಿಗೆ ಆಶ್ರಯನಾಗಿ ಮತ್ತೊಬ್ಬನನ್ನು ಹೇಳಿದ್ದರಿಂದ ಆನಂದಮಯನು ಬ್ರಹ್ಮನಾಗುವುದಿಲ್ಲ. ಭೃಗುವಲ್ಲಿಯಲ್ಲಿರುವ 'ಆನಂದೋ ಬ್ರಹ್ಮೇತಿ ವ್ಯಜಾನಾತ್' ಎಂಬಲ್ಲಿರುವ ಆನಂದಶಬ್ದದಿಂದ ಬ್ರಹ್ಮನು ವಾಚ್ಯನಾಗಬಹುದು.

'ವೇದಸೂತ್ರವಿರೋಧೇ ತು ಗುಣೇ ತ್ವನ್ಯಾಯ್ಯಕಲ್ಪನಾ' ಎಂಬುದಕ್ಕೆ ಪೂರ್ವಮೀಮಾಂಸೆಯ ಸಮ್ಮತಿಯೂ ಇದೆ. ಒಂಬತ್ತನೆಯ ಅಧ್ಯಾಯದಲ್ಲಿ 'ವಿಪ್ರತಿಪತ್ತೌ ವಿಕಲ್ಪಃ ಸ್ಯಾದಸಮರ್ಥತ್ವಾದ್ಗುಣೇ ತ್ವನ್ಯಾಯ್ಯಕಲ್ಪನೈಕದೇಶತ್ವಾತ್'[1] ಎಂಬ ಜೈಮಿನೀಸೂತ್ರದಲ್ಲಿ ಇದನ್ನೇ ಹೇಳಿದ್ದಾರೆ. ವಸ್ತುತಃ ಈ ಸೂತ್ರದಲ್ಲಿ

---

(१) भाट्टसङ्ग्रहः –

**विप्रतिपत्तौ विकल्पः स्यात्समत्वाद्गुणे त्वन्याय्यकल्पनैकदेशत्वात् ।। १५ ।।**
**(प्रकरणविशेषाच्च ।। १६ ।। अर्थाभावात्तु नैवं स्यादुगुणमात्रमितरत् ।। १७ ।।**
**यावोस्तथेति चेत् ।। १८ ।। नोत्पत्तिशब्दत्वात् ।। १९ ।।)**

पूर्वाक्षेपेणात्र शङ्कनात् **सङ्गतिः** । अग्नीषोमीयपशौ द्वौ पाशमन्त्रावित्युक्तम् । तत्र बहुवचनान्तो मन्त्रः किं प्रकरणे निविशते, किं वा बहुपाशके पशुगणे उत्कृष्यत इति **सन्देहे**, बहुवचनस्यैकस्मिन्नयोगाद्बहुवचनोक्तबहुत्वलिङ्गेन प्रकरणं बाधित्वोत्कृष्यत इति प्रकृतावनिवेशो विकृतौ चोदकेनाप्राप्ते, प्राक्तनचिन्ता न युक्तेति **प्राप्ते सिद्धान्तः**, प्रधान-भूतप्रतिपादिकार्थस्य पाशस्य विभक्त्यर्थस्य च कर्मत्वस्य प्रकरणे निवेशसम्भवेन गुणभूत-वचनोक्तबहुत्वानुरोधेनोत्कर्षस्यायुक्तत्वादवयवबहुत्वाभिप्रायेण बहुवचनमपि प्रकरण एव कथञ्चिन्निवेशनीयमिति नोत्क्रष्टव्यो मन्त्रः । एवञ्चैकवचनान्तबहुवचनान्तयोर्द्वयोरपि प्रकरण एव निवेशाद्विकल्प इति । तदाह **सूत्रे, विप्रतिपत्तौ** पाशमन्त्रयोः प्रकृतौ कः प्रयोज्य इति

ವೇದಸೂತ್ರಗಳಿಗೆ ವಿರೋಧ ಬಂದಾಗ ಸೂತ್ರಕ್ಕೆ ಗೌಣಾರ್ಥ ಮಾಡಬೇಕೆಂದೇನು ಹೇಳಿಲ್ಲ. ಪ್ರಧಾನ ಅಪ್ರಧಾನಗಳಿಗೆ ವಿರೋಧ ಬಂದಾಗ ಅಪ್ರಧಾನಕ್ಕೆ ಗೌಣಾರ್ಥ ಮಾಡಬೇಕೆಂದು ಹೇಳಿದ್ದಾರೆ. 'ಪ್ರೋದ್ಗಾತೃಣಾಮ್ ಚಮಸಭಕ್ಷಃ' ಎಂಬಲ್ಲಿ ಉದ್ಗಾತೃ ಎಂಬ ಪ್ರಾತಿಪದಿಕಕ್ಕೆ ಲಕ್ಷಣಾ ಮಾಡಬೇಕೋ? ಅಥವಾ ಬಹುವಚನಕ್ಕೆ ಲಕ್ಷಣಾ ಮಾಡಬೇಕೋ? ಎಂದು ಸಂಶಯ ಬಂದರೆ ಬಹುವಚನಕ್ಕೆ ಲಕ್ಷಣಾ ಮಾಡಿದ್ದಾರೆ. 'ಅದಿತಿಃ ಪಾಶಾನ್ ಪ್ರಮುಮೋಕ್ತು ದೇವಃ' ಎಂಬಲ್ಲಿಯೂ ಪಾಶಾನ್ ಎಂಬ ಪ್ರಾತಿಪದಿಕಕ್ಕೆ ಲಕ್ಷಣಾ ಮಾಡಬೇಕೆಂದು ಪೂರ್ವಪಕ್ಷ, ಬಹುವಚನಕ್ಕೆ ಲಕ್ಷಣಾ ಮಾಡಬೇಕೆಂದು ಸಿದ್ಧಾಂತ. ಪ್ರಕೃತಿ ಪ್ರತ್ಯಯಗಳಲ್ಲಿ ಪ್ರಕೃತಿಯೇ ಪ್ರಧಾನವಾದ್ದರಿಂದ ಪ್ರತ್ಯಯಕ್ಕೆ ಗೌಣಾರ್ಥ ಮಾಡಬೇಕೆಂದು ನಿರ್ಣಯಿಸಿದ್ದಾರೆ. ಇದರಂತೆ ಪ್ರಕೃತದಲ್ಲಿಯೂ ಅಪ್ರಧಾನವಾದ ಸೂತ್ರಕ್ಕೆ ಗೌಣಾರ್ಥ ಮಾಡಬೇಕು.

'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂಬಲ್ಲಿ ಬ್ರಹ್ಮನು ಆನಂದಮಯನ ಅವಯವನಾಗಿ ಹೇಳಲ್ಪಟ್ಟಿದ್ದಾನೋ? ಅಥವಾ ಬ್ರಹ್ಮನೇ ಆಧಾರವೆಂದು ಪ್ರಧಾನವಾಗಿ ಹೇಳಲ್ಪಟ್ಟಿದ್ದಾನೋ? ಎಂದು ಸಂಶಯ.

ಪುಚ್ಛಶಬ್ದದಿಂದ ಅವಯವವೇ ಉಕ್ತವಾಗಿದೆ. ಆದ್ದರಿಂದ ಬ್ರಹ್ಮನು ಆನಂದಮಯನ ಅವಯವನೇ ಆಗುತ್ತಾನೆಂದು ಪೂರ್ವಪಕ್ಷ.

ಪುಚ್ಛಶಬ್ದಕ್ಕೆ ಆಧಾರ ಎಂದರ್ಥ. ಆಧಾರನಾದ್ದರಿಂದ ಬ್ರಹ್ಮನು ಪ್ರಧಾನನಾಗುತ್ತಾನೆ. 'ಆನಂದಮಯೋಽಭ್ಯಾಸಾತ್' ಎಂಬ ಸೂತ್ರಕ್ಕೆ ಹೀಗೆ ಅರ್ಥ - ಆನಂದಮಯವಾಕ್ಯದಲ್ಲಿ ಕೇಳಿಬರುವ ಪುಚ್ಛಶಬ್ದದಿಂದ ಪ್ರಧಾನನಾದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ 'ಅಸದ್‌ಬ್ರಹ್ಮೇತಿ ವೇದ ಚೇದ್' ಎಂದು ಮುಂದಿನ ವಾಕ್ಯದಲ್ಲಿ ಪುಚ್ಛಶಬ್ದವಿಲ್ಲದೆ ಕೇವಲ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಬ್ರಹ್ಮನಿಗೆ ಸ್ವಪ್ರಾಧಾನ್ಯ ಇದ್ದೇ ಇದೆ. ವಿಕಾರಶಬ್ದಾತ್ = ಅವಯವವಾಚಕವಾದ ಪುಚ್ಛಶಬ್ದ ಇರುವುದರಿಂದ, ಬ್ರಹ್ಮನು ಸ್ವಪ್ರಧಾನನಾಗಲ್ಲ ಎಂದರೆ ಪ್ರಾಚುರ್ಯಾತ್ = ಅನ್ನಮಯಾದಿಗಳಲ್ಲಿ ಅವಯವ ಶಬ್ದವನ್ನು ಹೇಳಿದ್ದರಿಂದ ಇಲ್ಲಿಯೂ ಅವಯವಶಬ್ದವನ್ನೇ ಹೇಳಬೇಕು. ಆದರೆ ಇಲ್ಲಿರುವ ಪುಚ್ಛಶಬ್ದಕ್ಕೆ ಅವಯವ ಎಂದರ್ಥವಲ್ಲ. ಆಧಾರ ಎಂದೇ ಅರ್ಥ. ಆದ್ದರಿಂದ ಶ್ರುತಿಯಲ್ಲಿ ಆಧಾರವೆಂದೇ ಹೇಳದೇ ಪುಚ್ಛ ಎಂದೇಕೆ ಹೇಳಿದರು? ಎಂಬ ಪ್ರಶ್ನೆಗೆ ಅವಕಾಶವಿಲ್ಲ. 'ತದ್ಧೇತುವ್ಯಪದೇಶಾತ್' ಎಂಬ ಸೂತ್ರಕ್ಕೆ ಹೀಗೆ ಅರ್ಥ - 'ಸ ಇದಂ ಸರ್ವಮಸೃಜತ ಯದಿದಂ ಕಿಂಚ' ಎಂಬ ಶ್ರುತಿ ಹೇಳುವಂತೆ ಆನಂದಮಯಸಹಿತವಾದ ಸಮಸ್ತ ಜಗತ್ತಿಗೆ ಬ್ರಹ್ಮನೇ ಕಾರಣನೆಂದು ತಿಳಿಯುತ್ತದೆ. ಎಲ್ಲ ಜಗತ್ತಿಗೂ ಕಾರಣನಾದ ಮೇಲೆ ಬ್ರಹ್ಮನು ಪ್ರಧಾನನಾಗಲೇ ಬೇಕು. ಮಾಂತ್ರವರ್ಣಿಕ ಮೊದಲಾದ ಸೂತ್ರಗಳೂ ಸಹ ಪುಚ್ಛವಾಕ್ಯದಲ್ಲಿ ಶ್ರುತನಾದವನಿಗೇ ಬ್ರಹ್ಮತ್ವವನ್ನು ಸಮರ್ಥಿಸುತ್ತಿವೆ ಹೊರತು ಆನಂದಮಯನಿಗೆ ಬ್ರಹ್ಮತ್ವವನ್ನು ಸಮರ್ಥಿಸುತ್ತಿಲ್ಲ. ಹೀಗೆಲ್ಲ ಶಂಕರಭಾಷ್ಯದಲ್ಲಿ ಹೇಳಿದ್ದಾರೆ.

---

विशये **विकल्पः स्यात्** । कुतः? पाशप्रकाशनसामर्थ्यरूपलिङ्गस्य प्रकरणस्य च समत्वात् । **गुणे तु** बहुवचने तु **अन्याय्यनिगदत्वकल्पनात्तस्यैकदेशत्वाद**प्रधानत्वादिति । **फलन्तु** विकृतौ प्रवृत्तिर्मन्त्रस्य ।

।। इति पञ्चममग्नीषोमीयपशौ पाशैकत्वपाशबहुत्वाभिधायिमन्त्रयोर्विकल्पाधिकरणम् ।।



ದ್ವೈತಿಗಳು ಪುಚ್ಛನನ್ನೇ ಬ್ರಹ್ಮನೆನ್ನಬೇಕೆಂದು ಅದ್ವೈತಿಗಳು ಆಗ್ರಹಿಸುತ್ತಾರೆ. ಪುಚ್ಛನನ್ನು ಬ್ರಹ್ಮನೆಂದು ಹೇಳಿದಾಗ ಪ್ರಾಯಪಾಠವಿರೋಧ ಮಾತ್ರ ಬರುತ್ತದೆ. ಆದರೆ ಆನಂದಮಯನನ್ನು ಬ್ರಹ್ಮನೆಂದು ಹೇಳಿದರೆ ನಾಲ್ಕು ದೋಷಗಳು ಬರುತ್ತವೆ. ೧) ಪ್ರಾಯಪಾಠವಿರೋಧ ೨) ದುಃಖ ೩) ಬ್ರಹ್ಮಶಬ್ದಕ್ಕೆ ಗೌಣಾರ್ಥತ್ವ ೪) ಆನಂದಶಬ್ದಕ್ಕೆ ಆನಂದಮಯನಲ್ಲಿ ಲಕ್ಷಣಾಪ್ರಸಂಗ ಹೀಗೆ ನಾಲ್ಕು ದೋಷಗಳು ಬರುತ್ತವೆ. ಈ ನಾಲ್ಕು ದೋಷಗಳ ಜೊತೆ ಇನ್ನೂ ಕೆಲವು ದೋಷಗಳು ಬರುತ್ತವೆ - ಉಪನಿಷತ್ತಿನಲ್ಲಿ ವರ್ಣಿಸಿರುವ ಆನಂದಮಯನು ಸವಿಶೇಷ. ಬ್ರಹ್ಮನು ನಿರ್ವಿಶೇಷ. ಆನಂದಮಯನು ಉಪನಿಷತ್ತು ವರ್ಣಿಸುವಂತೆ ಪ್ರತಿಯೊಂದು ಶರೀರಗಳಲ್ಲಿ ಬೇರೆ ಬೇರೆಯಾಗಿದ್ದಾನೆ. ಬ್ರಹ್ಮನು ಅಭಿನ್ನನಾಗಿದ್ದಾನೆ. ಇದರಂತೆ ಇನ್ನೂ ಅನೇಕ ದೋಷಗಳನ್ನು ಸ್ವತಃ ಊಹಿಸಿಕೊಳ್ಳಬೇಕು. ಆನಂದಮಯನು ಅನ್ನಮಯಾದಿಕೋಶಗಳ ಒಳಗೆ ಇರುವುದರಿಂದ ಬ್ರಹ್ಮನೆಂದನಿಸುತ್ತದೆ. ಆದರೆ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂದು ಆನಂದಮಯನಿಗೆ ಪುಚ್ಛಬ್ರಹ್ಮನು ಆಧಾರನೆಂದು ಶ್ರುತಿಯೇ ಹೇಳಿದೆ. ಆದ್ದರಿಂದ ಆನಂದ ಬೇಕಾದರೆ ಬ್ರಹ್ಮನಾಗಬಹುದು. ಆನಂದಮಯನಂತೂ ಬ್ರಹ್ಮನಾಗಲಾರ. ಪುಚ್ಛನೇ ಬ್ರಹ್ಮನಾಗುತ್ತಾನೆಂದು ಶಂಕರಭಾಷ್ಯದಲ್ಲಿ ಸಿದ್ಧಾಂತ ಮಾಡಿದ್ದಾರೆ.



## ಪುಚ್ಛ ಎಂದರೆ ಆನಂದಮಯನೇ (ಅದ್ವೈತಮತನಿರಾಸ)

**तात्पर्यचन्द्रिका**

**तन्न । यतः,**

**एकत्रापि न मुख्यार्थलङ्घनं मामके मते ।**
**सर्वत्रापि च मुख्यार्थलङ्घनं तावके मते ।।**

**तथा हि – आनन्दमयपुच्छयोर्द्वयोरपि पूर्णत्वेन ब्रह्मशब्दस्तावन्मुख्यः । पूर्णत्वं हि ब्रह्मशब्दस्य मुख्यार्थः ।**

**यथा धर्मान्तरेष्वदृष्टमपि जातिसमवायादौ धर्मितोऽधिकदेशत्वम्, यथा वा परिच्छिन्नेनाव्रियमाणसम्बन्धिनाऽऽवृतेष्वन्येष्वदृष्टमपि परिच्छिन्नाज्ञानावृते निरंशे चैतन्ये अपरिच्छिन्नत्वं,**

**यथा वाऽऽनन्दान्तरेष्वदृष्टमपि ब्रह्मानन्दस्य पूर्णत्वादिकं, तथाऽन्यत्रादृष्टमपि अवयवस्य पूर्णत्वं विचित्रशक्तियुक्तब्रह्मावयवेऽस्तु । उक्तञ्च ''विश्वतश्चक्षुः ''पूर्णमदः**

पूर्णमिदं'' इत्यादिश्रुत्या ''सर्वतः पाणिपादं तत्'' इत्यादिस्मृत्या च अवयवस्य पूर्णत्वम् ।

तथा ''उद्धवर्हात्मनः केशौ'' इत्यादिस्मृत्या केशस्य कृष्णस्य ''व्याप्तं त्वयैकेन दिशश्च सर्वाः'' इति पूर्णतोक्ता । तदुक्तमनुव्याख्याने –

ब्रह्मताऽवयवेऽपि स्यात्तथाऽवयविनि स्वतः ।
यथैव कृष्णकेशस्य कृष्णस्य ब्रह्मताऽखिला ।
दर्शिता चैव पार्थाय निस्सीमाश्शक्तयोऽस्य हि ।

इति । युक्तं चानवस्थापरिहाराय कचित्सम्बन्ध्यादेरेव सम्बन्धत्वादिवत् अस्मिन्नेव प्रकरणे ''आनन्दं ब्रह्मणः'' इति श्रुतेरानन्दात्मकस्यैव ब्रह्मण आनन्दित्ववच्च, विशेषबलाच्छक्तिव्यक्तिभावात् ''स शिरः स दक्षिणः पक्षः'' इत्यादिश्रुत्या अवयविन एवावयवत्वम् ।

तदुक्तं न्यायविवरणे – ''न चावयवत्वविरोधः, ''नेह नानास्ति किञ्चन'' इत्यादिश्रुतेरवयवाद्यभेदात्'' इति ।

ಅನುವಾದ - ಅದ್ವೈತಿಗಳ ಈ ವಾದ ತಪ್ಪು. ಏಕೆಂದರೆ -

ಏಕತ್ರಾಪಿ ನ ಮುಖ್ಯಾರ್ಥಲಂಘನಂ ಮಾಮಕೇ ಮತೇ ।
ಸರ್ವತ್ರಾಪಿ ಚ ಮುಖ್ಯಾರ್ಥಲಂಘನಂ ತಾವಕೇ ಮತೇ ॥

ನಮ್ಮ ಮತದಲ್ಲಿ ಒಂದು ಕಡೆಯೂ ಮುಖ್ಯಾರ್ಥವನ್ನು ಬಿಟ್ಟಿಲ್ಲ. ನಿಮ್ಮ ಮತದಲ್ಲಿ ಎಲ್ಲ ಕಡೆಯೂ ಮುಖ್ಯಾರ್ಥವನ್ನು ಬಿಟ್ಟಿದ್ದೀರಿ.

ಅದು ಹೀಗೆ - ನಮ್ಮ ಮತದಲ್ಲಿ ಆನಂದಮಯ ಮತ್ತು ಪುಚ್ಛ ಎರಡೂ ಪೂರ್ಣವಾಗಿರುವುದರಿಂದ ಎರಡರಲ್ಲಿಯೂ ಬ್ರಹ್ಮಶಬ್ದ ಮುಖ್ಯವಾಗಿದೆ. ಪೂರ್ಣತ್ವವಷ್ಟೇ ಬ್ರಹ್ಮಶಬ್ದದ ಮುಖ್ಯಾರ್ಥ. ಆನಂದಮಯನು ಅವಯವಿಯಾದ್ದರಿಂದ ಪೂರ್ಣನಾಗಬಹುದು. ಆದರೆ ಅವಯವವಾಗಿರುವ ಪುಚ್ಛವು ಹೇಗೆ ತಾನೆ ಪೂರ್ಣವಾಗಲು ಸಾಧ್ಯ? ಎಂಬ ಪ್ರಶ್ನೆ ಬರುತ್ತದೆ. ಆದರೆ ಕೆಲವೊಂದು ಪ್ರಮೇಯಗಳು ಬೇರೆ ಕಡೆ ಕಾಣಿಸದಿದ್ದರೂ ಕೆಲವು ಕಡೆ ಕಾಣಿಸುತ್ತವೆ. ಈ ವಿಷಯದಲ್ಲಿ ಅನೇಕ ಉದಾಹರಣೆಗಳಿವೆ - ಜಾತಿ ಸಮವಾಯ ಮೊದಲಾದವು ಧರ್ಮಿಗಿಂತ ಅಧಿಕದೇಶದಲ್ಲಿ ಇರತಕ್ಕವು. ಗೋತ್ವಜಾತಿಯು ಯಾವ ಗೋವ್ಯಕ್ತಿಯಲ್ಲಿ ಇದೆಯೋ ಅದಕ್ಕಿಂತ ಹೆಚ್ಚು ಸ್ಥಳದಲ್ಲಿ

ಗ್ಘೋತ್ವಜಾತಿ ಇದೆ. ಸಮವಾಯವೂ ಸಹ ಸಮವಾಯಿಯಾದ ಘಟಾದಿಗಳಿಗಿಂತ ಹೆಚ್ಚಿನ ಸ್ಥಳದಲ್ಲಿ ಇದೆ. ಅದ್ವೈತಮತದಲ್ಲಿ ಅಜ್ಞಾನವು ಪರಿಚ್ಛಿನ್ನ. ಅಜ್ಞಾನದಿಂದ ಆವೃತನಾದ ಬ್ರಹ್ಮನು ಅಪರಿಚ್ಛಿನ್ನ. ಆವೃತನಾದ ಬ್ರಹ್ಮಚೈತನ್ಯವು ನಿರಂಶವಾದ್ದರಿಂದ ಅಪರಿಚ್ಛಿನ್ನನಾಗಿದ್ದಾನೆ. ಆದರೆ ಲೋಕದಲ್ಲಿ ಬೇರೆಲ್ಲೂ ಹೀಗೆ ಕಂಡಿಲ್ಲ. ಇದರಂತೆ ಅದ್ವೈತಮತದಲ್ಲಿ ವೈಷಯಿಕಾನಂದ ಬ್ರಹ್ಮಾನಂದವೆಂದು ಎರಡುವಿಧ ಆನಂದಗಳಿವೆ. ವೈಷಯಿಕಾನಂಗಗಳಲ್ಲಿ ಪೂರ್ಣತ್ವ ಇಲ್ಲದಿದ್ದರೂ ಬ್ರಹ್ಮಾನಂದದಲ್ಲಿ ಪೂರ್ಣತ್ವವನ್ನು ಒಪ್ಪಿದ್ದೀರಿ. ಅದರಂತೆ ಪ್ರಕೃತದಲ್ಲಿಯೂ ಅವಯವಕ್ಕೆ ಪೂರ್ಣತ್ವ ಎಲ್ಲಿಯೂ ಕಾಣಿಸದಿದ್ದರೂ ವಿಚಿತ್ರಶಕ್ತಿಯಿಂದ ಕೂಡಿದ ಬ್ರಹ್ಮನ ಅವಯವದಲ್ಲಿ ಪೂರ್ಣತ್ವ ಬರಬಹುದು. ಬ್ರಹ್ಮನಂತೆ ಬ್ರಹ್ಮನ ಅವಯವವೂ ಪೂರ್ಣವೆನ್ನಲು ಏನು ಪ್ರಮಾಣ? ಎಂದರೆ 'ವಿಶ್ವತಶ್ಚಕ್ಷುಃ' ಎಂಬ ಶ್ರುತಿಯಲ್ಲಿ ಬ್ರಹ್ಮನ ಒಂದೊಂದು ಅವಯವಗಳೂ ವಿಶ್ವದಲ್ಲೆಲ್ಲೆಡೆ ಇವೆಯೆಂದು ಹೇಳಲಾಗಿದೆ. ಮತ್ತು 'ಪೂರ್ಣಮದಃ ಪೂರ್ಣಮಿದಮ್' ಎಂಬಲ್ಲಿ ಬ್ರಹ್ಮನ ಶಿರಸ್ಸು ಪಾದ ಮೊದಲಾದ ಅವಯವಗಳನ್ನು ಪೂರ್ಣವೆಂದು ಹೇಳಿದ್ದಾರೆ. ಮತ್ತು ಗೀತೆಯಲ್ಲಿ 'ಸರ್ವತಃ ಪಾಣಿಪಾದಂ ತತ್' ಎಂದು ಅವನ ಅವಯವಗಳೆಲ್ಲವೂ ಎಲ್ಲೆಡೆಯೂ ಇವೆಯೆನ್ನಲಾಗಿದೆ. ಹೀಗೆ ಶ್ರುತಿಸ್ಮೃತಿಗಳಿಂದ ಅವನ ಅವಯವಗಳು ಪೂರ್ಣವೆಂದು ನಿರ್ಣಯವಾಗಿದೆ. ಇದರಂತೆ 'ಉದ್‌ಬರ್ಹಾತ್ಮನಃಕೇಶಃ' ಎಂಬ ಸ್ಮೃತಿಯಿಂದ ಭಗವಂತನ ಒಂದು ಕೇಶವೇ ಕೃಷ್ಣನೆಂದು ತಿಳಿಯುತ್ತದೆ. ಅಂತಹ ಕೃಷ್ಣನಾದರೂ 'ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ' ಎಂದು ಅರ್ಜುನ ಸ್ತೋತ್ರ ಮಾಡುವಂತೆ ಎಲ್ಲ ದಿಕ್ಕುಗಳಲ್ಲಿ ವ್ಯಾಪಿಸಿದ್ದಾನೆಂದು ಪೂರ್ಣತ್ವ ತಿಳಿಯುತ್ತದೆ. ಇದನ್ನೇ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

ಬ್ರಹ್ಮತಾऽವಯವೇऽಪಿ ಸ್ಯಾತ್ತಥಾऽವಯವಿನಿ ಸ್ವತಃ ।
ಯಥೈವ ಕೃಷ್ಣಕೇಶಸ್ಯ ಕೃಷ್ಣಸ್ಯ ಬ್ರಹ್ಮತಾऽಖಿಲಾ ।
ದರ್ಶಿತಾ ಚೈವ ಪಾರ್ಥಾಯ ನಿಸ್ಸಿಮಾಃ ಶಕ್ತಯೋऽಸ್ಯ ಹಿ ॥

ಅವಯವಿ ಪೂರ್ಣವಾದಂತೆ ಅವಯವವೂ ಪೂರ್ಣವಾಗಿದೆ. ಕೇಶರೂಪನಾದ ಕೃಷ್ಣನು ತನ್ನಲ್ಲಿರುವ ಪೂರ್ಣತ್ವವನ್ನು ಮತ್ತು ಅಪಾರಶಕ್ತಿಯನ್ನು ಪಾರ್ಥನಿಗೆ ತೋರಿಸಿದ್ದೇ ಇದಕ್ಕೆ ನಿದರ್ಶನ. ಮತ್ತು ಅವಯವಿಯಾದ ಬ್ರಹ್ಮನೇ ಅವಯವನೂ ಆಗಬಹುದು. ಯಾವ ರೀತಿಯಾಗಿ ಅನವಸ್ಥಾಪರಿಹಾರಕ್ಕಾಗಿ ತಾರ್ಕಿಕರು ಸಂಬಂಧಿಯಾದ ಸಮವಾಯವನ್ನೇ ಸಂಬಂಧವೆಂದು ಹೇಳುತ್ತಾರೋ. ಆ ಸಮವಾಯದಲ್ಲಿ ಮತ್ತೊಂದು ಸಮವಾಯವನ್ನು ಅಂಗೀಕರಿಸಿದರೆ ಅನವಸ್ಥಾದೋಷ ಬರುತ್ತದೋ. ಮತ್ತು ಇದೇ ಪ್ರಕರಣದಲ್ಲಿ 'ಆನಂದಂ ಬ್ರಹ್ಮಣಃ' ಎಂಬ ಶ್ರುತಿಯಲ್ಲಿ ಆನಂದರೂಪನಾದ ಬ್ರಹ್ಮನಿಗೆ ಆನಂದಿತ್ವವನ್ನು ಹೇಗೆ ಹೇಳಿದ್ದಾರೋ, ಹಾಗೆಯೇ ಪ್ರಕೃತದಲ್ಲಿಯೂ ಅವಯವಿಯಾದ ಬ್ರಹ್ಮನು ಅವಯವರೂಪನೂ ಆಗುತ್ತಾನೆ. ವಿಶೇಷಬಲದಿಂದ ಅವಯವ ಅವಯವಿಭಾವವೂ ಕೂಡುತ್ತದೆ. ಮತ್ತು ಅವಯವದಲ್ಲಿರುವ ಅವಯವತ್ವವನ್ನು ಶಕ್ತಿವ್ಯಕ್ತಿಭಾವದಿಂದ ಕೂಡಿಸಬೇಕು. ಆದ್ದರಿಂದ 'ಸ ಶಿರಃ ಸ ದಕ್ಷಿಣಃ ಪಕ್ಷಃ' ಇತ್ಯಾದಿ ಶ್ರುತಿ ಹೇಳುವಂತೆ ಅವಯವ

ಅವಯವಿಗಳಿಗೆ ಅಭೇದವನ್ನು ಹೇಳಬೇಕು. ಇದನ್ನೇ ನ್ಯಾಯವಿವರಣದಲ್ಲಿ ಹೇಳಿದ್ದಾರೆ - 'ನ ಚಾವಯತ್ವವಿರೋಧಃ ನೇಹನಾನಾಸ್ತಿ ಕಿಂಚನ ಇತ್ಯಾದಿ ಶ್ರುತೇರವಯವಾದ್ಯಭೇದಾತ್' 'ನೇಹನಾನಾ' ಇತ್ಯಾದಿ ಶ್ರುತಿಯು ಅವಯವ ಅವಯವಿಗಳಿಗೆ ಅಭೇದ ಹೇಳಿರುವುದರಿಂದ ಅವಯತ್ವದಿಂದ ವಿರೋಧ ಬರುವುದಿಲ್ಲ' ಎಂದು.

### ಕಠಿಣಪದಾರ್ಥ

'ಯತಃ ಶ್ಲೋಕದ ಅನಂತರ 'ಯತಃ ತನ್ನ' ಎಂದು ಅನ್ವಯಿಸಿಕೊಳ್ಳಬೇಕು, ''ಚ'' = ಏವ 'ತಾವಕೇ ಏವ' ಎಂದು ಅನ್ವಯ, ತಾವಕೇ = ನಿನ್ನ ಮತದಲ್ಲಿ, ಮಾಮಕೇ = ನನ್ನ ಮತದಲ್ಲಿ, ಧರ್ಮಾಂತರೇಷು = ರೂಪರಸಾದಿಗಳಲ್ಲಿ, ಸಂಬಂಧಿನಾ = ಪಟಾದಿಗಳಿಂದ, ಅನ್ಯೇಷು = ಘಟಾದಿಗಳಲ್ಲಿ, ವಿಚಿತ್ರಶಕ್ತಿಯುಕ್ತ = ವಿಚಿತ್ರಶಕ್ತಿಯುಳ್ಳವನಾದ್ದರಿಂದಲೇ ಅವಯವದಲ್ಲಿಯೂ ಪೂರ್ಣತ್ವ ಬರುತ್ತದೆಂದು ಹೇತುಗರ್ಭವಿಶೇಷಣ, ವಿಶ್ವತಃ = ವಿಶ್ವದೆಲ್ಲೆಡೆ, ಸರ್ವತಃ = ಎಲ್ಲಕಡೆ, ಅದಃ = ಮೂಲರೂಪ, ಇದಮ್ = ಅವತಾರರೂಪಗಳು, ಸ್ವತಃ = ಅನಾಯಾಸದಿಂದ, ಅಖಿಲಾ = ನಿರುಪಚರಿತವಾಗಿ, 'ಅವಯವಿನ ಏವಾವಯವತ್ವಮ್' ಯುಕ್ತಂ ಎಂದು ಅನ್ವಯ. ಕ್ವಚಿತ್ = ಸಮವಾಯಾದಿಗಳಲ್ಲಿ, ಇಹ = ಬ್ರಹ್ಮನ, ಕಿಂಚನ = ಗುಣ, ಕ್ರಿಯಾ, ಅವಯವಾದಿಗಳು, ನಾನಾ = ಭಿನ್ನವಾಗಿ, ನಾಸ್ತಿ = ಇರುವುದಿಲ್ಲ.

**प्रकाशः** – 'यतः' इत्यस्य श्लोकेनान्वयः । तावक एवेति चोऽवधारणे । ''तवकममकावेकवचने'' इति निपातनात् 'तावके' 'मामके' इति साधु । त्वदीये मदीय इत्यर्थः । यत्तावदुक्तमानन्दमयस्य ब्रह्मत्वे पुच्छे ब्रह्मशब्दस्य गौणार्थत्वमिति, तत्र द्वयोर्ब्रह्मत्वा-योगादिति कोऽर्थः । किमवयविनः पूर्णत्वे अवयवस्य पूर्णत्वायोग इति, उतावयवावयविनोर्भेदा- दवयविनः परमात्मत्वे अवयवस्य तत्त्वायोग इति । आद्यं तावन्नेति भावेन मुख्यार्थत्वं साधयति – **आनन्दमयेति** ।।

**पूर्णत्वं हीति** ।। ''बृह बृहि वृद्धौ'' इति धातो वृद्धिश्च पूर्णतेत्याद्यसूत्र एवोक्तमिति भावः । असम्भावितमेतदित्यतः, सम्भावनाहेतूननेकदृष्टान्तानाह – **यथेति** ।। **'धर्मान्तरेषु'** रूपरसादिषु । न्यायमते प्रसिद्धमेतन्निदर्शनम् । अद्वैतमतेन दृष्टान्तद्वयमाह – **यथा वेति** ।। 'सम्बन्धिना' पटादिनेत्यर्थः । 'अन्येषु' घटादिषु । 'विचित्रशक्तियुक्त' इति हेतुगर्भम् । अस्त्वेवं दृष्टान्तैः सम्भावना, मानं तु किमित्यतः श्रुतिस्मृतीराह – **उक्तं चेति** ।।

'विश्वतश्चक्षुरुत विश्वतोमुखो विश्वतोबाहुरुत विश्वतस्पात्'

**नारोपस्येति** ।। **आनन्दमय इति** ।। अन्नमयादाविवानन्दमय उपासनाया अश्रवणादित्यर्थः ।

नन्वत्र येन्नं ब्रह्मोपासते ये प्राणं ब्रह्मोपासते विज्ञानं देवाः सर्वे ब्रह्मज्येष्ठमुपासत इति त्रिष्वेवोपासनायाः श्रवणादानन्दमयमात्रग्रहणमसङ्गतमिति चेन्न । मनोमये आनन्दं ब्रह्मणो विद्वानित्यत्र तदश्रवणेपि तन्मध्यपतितस्य विद्वान् इत्यस्यापिसन्दंशन्यायेनोपांशुयाजवाक्यमध्यपतितविष्ण्वादिवाक्यस्येवोपासनापरत्वस्य परेण वक्तुं शक्यत्वादानन्दमयमात्रग्रहणस्य सङ्गतत्वात् । **उत्तरेति** ।। अन्नं ब्रह्मेति व्यजानात् प्राणो ब्रह्मेति व्यजानान्मनो ब्रह्मेति व्यजानाद्विज्ञानं ब्रह्मेति व्यजानादित्यत्र कुत्राप्युपासनाया अश्रवणेनान्नादीनां ब्रह्मत्वारोपस्य श्रौतत्वानुपपत्तेः ।

ननूत्तरानुवाकोक्तानामन्नादीनामन्नमयादित्वात्तेषां च देहत्वात् तत्र प्रत्यक्त्वारोपः सम्भवतीत्यत आह – **तत्रत्यानामिति** ।। अथवा यथासंख्याम्नानरूपपाठसादेश्यलक्षणस्थानेनोत्तरानुवाकोक्तान्नादीनामन्नमयादित्वात्तेषु च ब्रह्मत्वोपासनाश्रवणात् कथं तदभावाभिधानमित्यत आह – **तत्रत्यानामिति** ।। आनन्दमयः स्यादिति ।। **न चेष्टापत्तिरिति वाच्यम्** । विकारार्थकमयट्श्रवणेन तस्य त्वया ब्रह्मत्वानङ्गीकारात् । **स्थानेति** ।। ब्रह्मवल्ल्यामानन्दमयो यत्स्थाने कथितोस्ति भृगुवल्ल्यां तस्मिन्स्थान आनन्दस्य कथितत्वात् । अत्र यथासंख्याम्नानरूपपाठसादेश्यलक्षणमीमांसकाभिमतस्थानमेवाभिप्रेतम् । न त्वस्मदभिमतमिति ध्येयम् ।

ವಿವರಣೆ - ಇಲ್ಲಿಯ ತನಕ ಅದ್ವೈತಿಗಳು ಹೇಳಿದ ನಾಲ್ಕು ದೋಷಗಳನ್ನು ಪರಿಹರಿಸಿದ್ದಾಯಿತು. ಈಗ 'ಕಿಂಚ ಪ್ರಿಯಾದ್ಯವಯವಯೋಗೇನಾನಂದಮಯಃ ಸವಿಶೇಷಃ' ಇತ್ಯಾದಿಯಾಗಿ ಆಕ್ಷೇಪಿಸಿದ ಅದ್ವೈತಿಗಳ ಮಾತನ್ನು ನಿರಾಕರಿಸುತ್ತಿದ್ದಾರೆ.

'ಅಪಿ ಚಾನಂದಮಯಃ ಪ್ರತಿಶರೀರಂ ಪ್ರಿಯಾದಿಭೇದಾದ್ ಭಿನ್ನಃ ಬ್ರಹ್ಮ ತು ಅಭಿನ್ನಃ' ಎಂಬ ಅದ್ವೈತಿಗಳ ಆಕ್ಷೇಪವನ್ನು 'ಪ್ರಿಯಾದಿಕೇ ಚ' ಇತ್ಯಾದಿಯಾಗಿ ನಿರಾಕರಿಸುತ್ತಿದ್ದಾರೆ.

ತಸ್ಮಿನ್ನಾನಂದರೂಪೋಽಸೌ ಸ್ಥಿತೋ ನಾರಾಯಣಸ್ಸದಾ
ಶಿರಃ ಪ್ರಿಯೇ ಸ್ಥಿತಂ ತಸ್ಯ ಪರೇಯಂ ಪ್ರಿಯನಾಮಕಮ್ ।
ಮೋದಪ್ರಮೋದಯೋರ್ಬಾಹೂ ಮೋದನಾಚ್ಚ ಪ್ರಮೋದನಾತ್ ।
ಮೋದಪ್ರಮೋದನಾಮಾನಾವಾನಂದಸ್ತ್ವಾತತತ್ವತಃ ।

*ಪರಿಪೂರ್ಣಚಂದ್ರಿಕಾ*

ಮಧ್ಯಮಾನಂದಸಂಸ್ಥಂ ಚ ಬ್ರಹ್ಮ ಸೃಷ್ಟ್ಯಾ ತು ಬೃಂಹಯತ್ ।
ಪುಚ್ಛಂ ಪ್ರಧಾನವಾಯೌ ಚ ಬ್ರಹ್ಮಾಖ್ಯೇ ಸಂಸ್ಥಿತಂ ಸದಾ ॥

ಆನಂದಸ್ವರೂಪನಾದ ನಾರಾಯಣನು ಆ ವಿಜ್ಞಾನಮಯನಾಮಕನಾದ ವಾಸುದೇವನಲ್ಲಿ ನೆಲೆಸಿದ್ದಾನೆ. ಅವನ ಶಿರಸ್ಸು ಸಂಸಾರಿವಿಲಕ್ಷಣರಾದ ಮುಕ್ತಜನರಿಂದ ಹೊಂದಲ್ಪಡುವುದರಿಂದ ಮತ್ತು ಉಪಕಾರಜನ್ಯಸುಖ ಇರುವುದರಿಂದಲೂ ಪ್ರಿಯವೆಂದು ಕರೆಯಲ್ಪಡುತ್ತದೆ. ಅಪ್ರಕೃಷ್ಟವಿಷಯಜನ್ಯವಾದ ಮತ್ತು ಪ್ರಕೃಷ್ಟವಿಷಯಜನ್ಯವಾದ ಆನಂದಗಳಾಗಿರುವ ಮೋದ ಪ್ರಮೋದಗಳಿರುವುದರಿಂದಲೂ ಸ್ವರೂಪಭೂತ ಮೋದಪ್ರಮೋದಗಳುಳ್ಳವನಾದ್ದರಿಂದಲೂ ಅವನ ಬಾಹುಗಳು ಮೋದ ಪ್ರಮೋದವೆಂಬ ಹೆಸರುಗಳನ್ನು ಪಡೆದಿವೆ. ಆ ನಾರಾಯಣನ ಮಧ್ಯದೇಹವು ಎಲ್ಲೆಡೆ ವ್ಯಾಪ್ತವಾದ್ದರಿಂದಲೂ ಸ್ವರೂಪಾನಂದದಿಂದ ಕೂಡಿರುವುದರಿಂದಲೂ ಆನಂದನಾಮಕವಾಗಿದೆ. ಅವನ ಎರಡು ಪಾದಗಳು ಪೃಥಿವ್ಯಾದಿಲೋಕಗಳನ್ನು ಸೃಷ್ಟಿಸಿ ಅವುಗಳಿಗೆ ವೃದ್ಧಿಯನ್ನುಂಟುಮಾಡುವುದರಿಂದಲೂ ದೇಹದಲ್ಲಿರುವ ಬ್ರಹ್ಮನೆಂದು ಕರೆಯಲ್ಪಡುವ ಪ್ರಧಾನವಾಯುವಿನಲ್ಲಿ ಯಾವಾಗಲೂ ಇರುವುದರಿಂದಲೂ ಬ್ರಹ್ಮ ಎಂದು ಕರೆಯಲ್ಪಡುವುದು. (ತೈತ್ತಿರೀಯ ಭಾಷ್ಯ)

ಇಲ್ಲಿಯ ತನಕ ಆನಂದಮಯನು ಬ್ರಹ್ಮನಾಗಿದ್ದಾನೆಂಬ ವಿಷಯದಲ್ಲಿ ಪರರು ಹೇಳಿದ ಬಾಧಕಗಳನ್ನೆಲ್ಲ ಪರಿಹರಿಸಿದ್ದಾಯಿತು. ಈಗ ಆನಂದಮಯನು ಬ್ರಹ್ಮನೆನ್ನಲು ಸಾಧಕಪ್ರಮಾಣಗಳನ್ನು ಬ್ರಹ್ಮನಲ್ಲವೆಂಬ ವಿಷಯದಲ್ಲಿ ಬಾಧಕಪ್ರಮಾಣಗಳನ್ನು 'ಕಿಂಚ' ಇತ್ಯಾದಿವಾಕ್ಯದಿಂದ ಹೇಳುತ್ತಿದ್ದಾರೆ. ಶ್ರುತಿಯಲ್ಲಿ ಆನಂದಮಯಪ್ರಕರಣ ಮುಗಿಯಿತು. ಅನಂತರ 'ಅಥಾತೋನುಪ್ರಶ್ನಾಃ' ಎಂಬ ಪ್ರಶ್ನೆಗೆ ಉತ್ತರಿಸಲು 'ಸೋಽಕಾಮಯತ ಬಹುಸ್ಯಾಮ್ ಪ್ರಜಾಯೇಯ' ಇತ್ಯಾದಿಯಾಗಿ ಶ್ರುತಿ ಹೇಳಿದೆ. ಇಲ್ಲಿರುವ 'ತತ್' ಶಬ್ದದಿಂದ ಪೂರ್ವಪ್ರಕೃತನಾದ ಆನಂದಮಯನನ್ನು ಪರಾಮರ್ಶಿಸಿ ಅವನಿಗೆ ಜಗತ್ಕಾರಣತ್ವವನ್ನು ಹೇಳುತ್ತಿದೆ. ಜಗತ್ಕಾರಣತ್ವವು ಬ್ರಹ್ಮನ ಲಕ್ಷಣವೆಂದು ಜನ್ಮಾಧಿಕರಣದಲ್ಲಿ ಸಮರ್ಥಿಸಲಾಗಿದೆ. ಅದ್ವೈತಿಗಳೂ ಸಹ 'ತದ್ಧೇತುವ್ಯಪದೇಶಾತ್' ಎಂಬ ಸೂತ್ರದಲ್ಲಿ ಜಗತ್ಕಾರಣತ್ವವನ್ನು ಬ್ರಹ್ಮನ ಲಕ್ಷಣವೆಂದು ಸಮರ್ಥಿಸಿದ್ದಾರೆ. ಹೀಗಿರುವಾಗ ಆನಂದಮಯನನ್ನು ಬ್ರಹ್ಮನಲ್ಲವೆಂದು ಅದ್ವೈತಿಗಳಿಗೆ ಹೇಳಲಾಗದು. ಬ್ರಹ್ಮನೆಂದು ಹೇಳಲೇಬೇಕು.

ಪ್ರಶ್ನೆ - 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂದು ಹಿಂದೆ ಪುಚ್ಛವು ಸನ್ನಿಹಿತವಾಗಿದೆ. ಅದನ್ನೇ ಇಲ್ಲಿ ಪರಾಮರ್ಶಿಸ ಬಹುದಲ್ಲವೇ?

ಉತ್ತರ - 'ಪುಚ್ಛ' ಶಬ್ದವು ನಪುಂಸಕಲಿಂಗದಲ್ಲಿದೆ ಆದರೆ ಇಲ್ಲಿ 'ಸಃ' ಎಂದು ಪುಲ್ಲಿಂಗದಲ್ಲಿದೆ. ಪುಲ್ಲಿಂಗಶಬ್ದದಿಂದ ನಪುಂಸಕಲಿಂಗ ನಿರ್ದಿಷ್ಟವಾದದ್ದನ್ನು ಪರಾಮರ್ಶಿಸಬಾರದು.

ಪ್ರಾತಿಪಾದಿಕದ ಸ್ವಾರಸ್ಯಕ್ಕೋಸ್ಕರ ಗೌಣವಾದ ಲಿಂಗವನ್ನು ಗಮನಿಸದೆ ಸನ್ನಿಹಿತವಾದ ಪುಚ್ಛಪರತ್ವವನ್ನು ಹೇಳಬಹುದು. ಆನಂದಮಯನ ಪರಾಮರ್ಶ ಮಾಡಿದಾಗ ಪುಲ್ಲಿಂಗದ ಮತ್ತು ಸನ್ನಿಹಿತವಾದದ್ದರ ಪರಾಮರ್ಶವೇ ಆಗುತ್ತದೆ. ಉಭಯ ಸ್ವಾರಸ್ಯವಿರುವುದರಿಂದ ಆನಂದಮಯನ ಪರಾಮರ್ಶವೇ ಉಚಿತ.

ಪ್ರಶ್ನೆ - ಪುಚ್ಛದ ಪರಾಮರ್ಶ ಬೇಡ ಆತ್ಮನ ಪರಾಮರ್ಶ ಮಾಡಬಹುದು. 'ತಸ್ಮಾದ್ವಾ ಏತಸ್ಮಾದಾತ್ಮನಃ ಆಕಾಶಃ ಸಂಭೂತಃ' ಎಂದು ಭೂತಕಾರಣತ್ವೇನ ನಿರ್ದಿಷ್ಟನಾದ ಆತ್ಮನ ಪರಾಮರ್ಶ ಮಾಡಬಹುದಲ್ಲವೇ?

ಉತ್ತರ - 'ತತ್' ಶಬ್ದದಿಂದ ಸನ್ನಿಹಿತವಾದದ್ದನ್ನೇ ಪರಾಮರ್ಶ ಮಾಡಬೇಕು. ಆತ್ಮನು ವ್ಯವಹಿತನಾದ್ದರಿಂದ ಪರಾಮರ್ಶ ಮಾಡಲಾಗದು. ಇದನ್ನೇ ತೈತ್ತಿರೀಯಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ - 'ಸ ತು ಅಕಾಮಯತ್'

ಸೃಷ್ಟ್ವಾ ಜಗದಿದಂ ಸರ್ವಂ ನಿಯಾಮಕತಯಾಸ್ಯ ತು ।
ಬಹುರೂಪೋ ಭವಾನೀತಿ ಸ್ಯಾಜ್ಜಗಚ್ಚೇತ್ಯಚಿಂತಯತ್ ॥

ಭಗವಂತನು ಜಗತ್ತನ್ನು ಸೃಷ್ಟಿ ಮಾಡಿ ನಿಯಾಮಕನಾಗಲು ಅನೇಕ ರೂಪಗಳನ್ನು ಸ್ವೀಕರಿಸುತ್ತೇನೆಂದು ಇಚ್ಛಿಸಿದ' ಎಂದು.

ಮನೋಮಯನು ಬ್ರಹ್ಮನೆನ್ನಲು 'ಅಪಿಚ' ಇತ್ಯಾದಿ ವಾಕ್ಯದಿಂದ ಸಾಧಕಪ್ರಮಾಣವನ್ನು ಹೇಳುತ್ತಿದ್ದಾರೆ. ಅನುವಾಕದ ಕೊನೆಯಲ್ಲಿ 'ನ ಬಿಭೇತಿ ಕುತಶ್ಚನ' ಎಂದು ಇದೆ. ಮನೋಮಯನಲ್ಲಿ 'ನ ಬಿಭೇತಿ ಕದಾಚನ' ಎಂದಿದೆ. ಕುತಶ್ಚನ ಕದಾಚನ ಶಬ್ದಗಳಿಗೆ ದೊಡ್ಡ ವ್ಯತ್ಯಾಸವೇನು ಇಲ್ಲ.

ಅನ್ನಮಯಾದಿ ಐದನ್ನು ಬ್ರಹ್ಮ ಎಂದು ಅಂಗೀಕರಿಸದಿದ್ದರೆ ಬರುವ ಬಾಧಕವನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಿದ್ದಾರೆ. 'ಬ್ರಹ್ಮವಿದಾಪ್ನೋತಿ ಪರಮ್' ಬ್ರಹ್ಮನನ್ನು ತಿಳಿದವನು ಮೋಕ್ಷವನ್ನು ಪಡೆಯುತ್ತಾನೆಂದು ಚತುರ್ಮುಖನು ಹೇಳಿದಾಗ ಬ್ರಹ್ಮ ಎಂದರೆ ಯಾರು? ಎಂದು ವರುಣ ಪ್ರಶ್ನಿಸಿದಾಗ ಉತ್ತರಿಸಲು ಮುಂದಿನ ಗ್ರಂಥ ಹೊರಟಿದೆ. ಪ್ರಶ್ನೆಗೆ ಸರಿಯಾಗಿ ಬ್ರಹ್ಮನ ಬಗ್ಗೆಯೇ ಉತ್ತರಿಸಬೇಕು. ಹೊರತು ಕೋಶಗಳ ಬಗ್ಗೆ ಹೇಳಬಾರದು.

ಆಕ್ಷೇಪ - 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂದು ಬ್ರಹ್ಮನ ಬಗ್ಗೆ ಹೇಳಲಾಗಿದೆ. ಬ್ರಹ್ಮನ ಜ್ಞಾನಕ್ಕೋಸ್ಕರ ಅಬ್ರಹ್ಮವಾದರೂ ಅನ್ನಮಯಾದಿಕೋಶಗಳನ್ನು ದ್ವಾರವಾಗಿ ಉಪದೇಶಿಸಲಾಗಿದೆ. ಕೋಶಾದಿಗಳನ್ನು ಮೊದಲು ಬ್ರಹ್ಮ ಎಂದು ಉಪದೇಶಿಸಿ ಅನಂತರ ಇವುಗಳು ಬ್ರಹ್ಮ ಅಲ್ಲವೆಂದು ಹೇಳಬಹುದು. ಉದಾ - ದ್ವಿತೀಯಾತಿಥಿಯ ಚಂದ್ರ ಎಲ್ಲಿದ್ದಾನೆ? ಎಂಬ ಪ್ರಶ್ನೆ ಬಂದಾಗ ಅಚಂದ್ರನಾದ ಶಾಖೆಯನ್ನು ತೋರಿಸಿ ಚಂದ್ರನೆಂದು ಉಪದೇಶಿಸಿದಂತೆ, ಅರುಂಧತೀನಕ್ಷತ್ರದ ಪ್ರಶ್ನೆ ಬಂದಾಗ ಅರುಂಧತೀ ನಕ್ಷತ್ರದ ಸಮೀಪದಲ್ಲಿರುವ ದೊಡ್ಡನಕ್ಷತ್ರವನ್ನು ತೋರಿಸಿ ಅರುಂಧತೀ ಎಂದು ಪರಿಚಯಿಸಿದಂತೆ ಕೋಶಾದಿಗಳನ್ನು ತೋರಿಸಿ ಬ್ರಹ್ಮನನ್ನು ಉಪನಿಷತ್ತು ಪರಿಚಯಿಸುತ್ತಿದೆ.

ಸಮಾಧಾನ - ದೃಷ್ಟಾಂತವೇ ಸಮ್ಮತವಾಗಿಲ್ಲ. ಶಾಖೆಯನ್ನು ತೋರಿಸಿ ಯಾರೂ ಸಹ ಶಾಖೆಯನ್ನೇ ಚಂದ್ರನೆಂದು ಹೇಳುವುದಿಲ್ಲ. ಶಾಖೆಯ ಮೇಲೆ ಚಂದ್ರನಿದ್ದಾನೆಂದೇ ಹೇಳುತ್ತಾರೆ. ದೊಡ್ಡ ನಕ್ಷತ್ರದ ಸಮೀಪದಲ್ಲಿರುವುದು ಅರುಂಧತಿ ಎಂದೇ ಪರಿಚಯಿಸುತ್ತಾರೆ. ಮತ್ತು ಶಾಖೆಯನ್ನು ತೋರಿಸದೆ ಚಂದ್ರನನ್ನು ಪರಿಚಯಿಸುವುದು ಅಶಕ್ಯ. ಆದರಂತೆ ಪ್ರಕೃತದಲ್ಲಿ ಅನ್ನಾದಿಗಳನ್ನು ಹೇಳದೇ ಬ್ರಹ್ಮನನ್ನು ಪರಿಚಯಿಸಲಾಗದು ಎಂದೇನು ಇಲ್ಲ. ಬ್ರಹ್ಮಜ್ಞಾನಕ್ಕೋಸ್ಕರ ದ್ವಾರೋಪದೇಶ ಎಂದು ಹೇಳಿದ್ದೇ ಸರಿಯಲ್ಲವೆಂದು 'ನಚ ಸತ್ಯಮ್' ಇತ್ಯಾದಿವಾಕ್ಯದಿಂದ ಹೇಳುತ್ತಿದ್ದಾರೆ.

ಅಥವಾ ಹಿಂದಿನ ವರ್ಣಗಳನ್ನು ಉಚ್ಚರಿಸದೇ ಕೊನೆಯ ವರ್ಣವನ್ನು ಹೇಳಲು ಹೇಗೆ ಸಾಧ್ಯವಿಲ್ಲವೋ ಆದರಂತೆ ಅನ್ನಮಯಾದಿಗಳನ್ನು ಹೇಳದೇ ಬ್ರಹ್ಮನನ್ನು ಹೇಳಲು ಸಾಧ್ಯವಿಲ್ಲವೆಂಬ ಅಭಿಪ್ರಾಯದಿಂದ ಅನ್ನಾದಿಗಳ ಉಪದೇಶವೋ ಅಥವಾ ಪ್ರಯೋಜನವಿರುವುದರಿಂದ ಅನ್ನಾದಿಗಳ ಉಪದೇಶವೋ? ಪ್ರಥಮಪಕ್ಷದಲ್ಲಿ 'ನ ಚಾನ್ನಂ' ಎಂದು ಉತ್ತರಿಸುತ್ತಿದ್ದಾರೆ. ಎರಡನೆಯ ಪಕ್ಷದಲ್ಲಿ 'ನಚ ಸತ್ಯಮ್' ಎಂದು ಉತ್ತರಿಸುತ್ತಿದ್ದಾರೆ.

ಗ್ರಂಥಕಾರರು ಕೆಲವೆಡೆ ಅನ್ನಾದಿಶಬ್ದಪ್ರಯೋಗವನ್ನು, ಕೆಲವೆಡೆ ಅನ್ನಮಯಾದಿಶಬ್ದಗಳ ಪ್ರಯೋಗವನ್ನು ಮಾಡಿದ್ದಾರೆ. ಹೀಗೇಕೆ ವ್ಯತ್ಯಾಸ ಎಂದರೆ ಬ್ರಹ್ಮವಲ್ಲಿಯಲ್ಲಿ ಅನ್ನಮಯಾದಿಶಬ್ದಗಳ ಪ್ರಯೋಗವಿದೆ. ಭೃಗುವಲ್ಲಿಯಲ್ಲಿ ಅನ್ನಾದಿಶಬ್ದಗಳಿವೆ. ಅದ್ವೈತಿಗಳು ಅನ್ನಮಯಾದಿಗಳು ಅಬ್ರಹ್ಮ, ಪುಚ್ಛನೇ ಬ್ರಹ್ಮನೆಂದು ಬ್ರಹ್ಮವಲ್ಲಿಯಲ್ಲಿ; ಭೃಗುವಲ್ಲಿಯಲ್ಲಿ ಅನ್ನಾದಿಗಳೆಲ್ಲವೂ ಅಬ್ರಹ್ಮ ಆನಂದ ಮಾತ್ರ ಬ್ರಹ್ಮ ಹೀಗೆ ಹೇಳಿದ್ದಾರೆ. ಅನ್ನಮಯಾದಿಗಳ ಉಪದೇಶವಾಗಲೀ ಅನ್ನಾದಿಗಳ ಉಪದೇಶವಾಗಲೀ ಎರಡನ್ನೂ ಅಬ್ರಹ್ಮನೆಂದು ಹೇಳುತ್ತಾರೆ. ಈ ಎರಡೂ ಕಡೆ ಹೇಳಿದ್ದು ದ್ವಾರವಲ್ಲವೆಂದು ಹೇಳಲು ಗ್ರಂಥಕಾರರು ಕೆಲವು ಕಡೆ ಅನ್ನಾದಿಶಬ್ದಗಳನ್ನು ಪ್ರಯೋಗಿಸಿದ್ದಾರೆ. ಕೆಲವು ಕಡೆ ಅನ್ನಮಯಾದಿಶಬ್ದಗಳನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ದೃಷ್ಟಾಂತವು ವಿಷಮವಾಗಿದೆಯೆಂದು ಹೇಳಿದಂತಾಯಿತು. ಮೊದಲು ಕಣ್ಣಿಗೆ ಕಾಣಿಸದ ಚಂದ್ರನನ್ನು ತೋರಿಸಲು ಶಾಖಾದಿಗಳನ್ನು ತೋರಿಸುತ್ತಾರೆ. ಆದರೆ ಬ್ರಹ್ಮನು ಉಪದೇಶದಿಂದ ಮೊದಲೇ ತಿಳಿದಿದ್ದಾನೆ. ಪುನಃ ಅವನನ್ನು ತಿಳಿಸಲು ದ್ವಾರತ್ವೇನ ಉಪದೇಶ ಮಾಡುವುದು ಅನಾವಶ್ಯಕ. ನಿಷ್ಫಲ, ವಿಪರೀತಫಲದಾಯಕವೇ ಆಗಿದೆ.

ಆಕ್ಷೇಪ - ಕೋಶಗಳೆಲ್ಲವೂ ಪರಾಗರ್ಥಗಳೇ ಆಗಿವೆ. ಆದರೂ ಪ್ರತ್ಯಗರ್ಥವೆಂದು ತಿಳಿದಾಗ ಬ್ರಹ್ಮಜ್ಞಾನಕ್ಕೆ ದ್ವಾರವಾಗಬಹುದು. ಏನು ದೋಷ?

ಸಮಾಧಾನ - ಅನ್ನಮಯಾದಿ ಪ್ರಕರಣದಲ್ಲಿ ಬ್ರಹ್ಮಪದ ಇರುವುದರಿಂದ ಪರಾಗರ್ಥವಾದ ಕೋಶಾದಿಗಳನ್ನು ಪ್ರತ್ಯಗರ್ಥವೆಂದು ಆರೋಪ ಮಾಡಬಹುದು. ಆದರೆ ಆನಂದಮಯನ ವಿಷಯದಲ್ಲಿರುವ ಶ್ಲೋಕವನ್ನು ಪುಚ್ಛಪರವೆಂದು ಅದ್ವೈತಿಗಳು ಹೇಳಿದ್ದಾರೆ. ಆದ್ದರಿಂದ ಆನಂದಮಯನ ವಿಷಯದಲ್ಲಿ ಆರೋಪ ಮಾಡಲು ಸಾಧ್ಯವಿಲ್ಲ. ಇದೇ ರೀತಿಯಾಗಿ 'ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮ್' ಎಂಬಲ್ಲಿಯೂ ಬ್ರಹ್ಮಪದವು ಕೇಳಿಸುತ್ತಿಲ್ಲ.

ಆಕ್ಷೇಪ - ಆನಂದಮಯನಲ್ಲಿ ಬ್ರಹ್ಮಪದ ಕೇಳಿಸುತ್ತಿಲ್ಲ. ಆದರೆ ಅನ್ನಮಾಯಾದಿ ನಾಲ್ಕು ಪ್ರಕರಣಗಳಲ್ಲಿಯೂ ಬ್ರಹ್ಮಪದ ಕೇಳಿಸುತ್ತಿರುವುದರಿಂದ ಬ್ರಹ್ಮತ್ವೇನ ಉಪದೇಶ ಮಾಡಿದಂತಾಯಿತು. ಪ್ರತ್ಯಕ್ತ್ವೇನ ಆರೋಪವನ್ನು ಮಾಡಿದಂತಾಯಿತು. ಅನ್ನಪ್ರಾಣಾದಿಗಳನ್ನು ಬ್ರಹ್ಮತ್ವೇನ ಉಪದೇಶ ಮಾಡಿದಂತಾಗಲಿಲ್ಲವೆಂದು ತಿಳಿಯಬಾರದು. ಅನ್ನಮಯಾದಿಗಳನ್ನು ಬ್ರಹ್ಮತ್ವೇನ ಉಪದೇಶ ಮಾಡಿದ್ದರಿಂದಲೇ ಅನ್ನಾದಿಗಳನ್ನೂ ಬ್ರಹ್ಮತ್ವೇನ ಉಪದೇಶ ಮಾಡಿದಂತಾಯಿತು. ಪ್ರತ್ಯಕ್ತ್ವೇನ ಆರೋಪವನ್ನು ಮಾಡಬಹುದು.

ಸಮಾಧಾನ - ಅನ್ನಾದಿಗಳು ಅನ್ನಮಯಾದಿಗಳಾಗುವುದಾದರೆ ಅಲ್ಲಿರುವ ಆನಂದನೂ ಆನಂದಮಯ ಆಗಬೇಕಾದೀತು. ಸ್ಥಾನ ಎಂಬ ಪ್ರಮಾಣದಿಂದ ಏಕಾರ್ಥನಿಷ್ಠಪ್ರಕರಣಸಮೂಹಃ ಪ್ರಕರಣಮ್ ಎಂದು

ನಾವು ಹೇಳುತ್ತೇವೆ. ಆದರೆ ಇಲ್ಲಿ ಹೇಳಿರುವ ಸ್ಥಾನವು ಮೀಮಾಂಸಕರ ಪ್ರಕಾರ. ಮೀಮಾಂಸಕರ ಮತದಲ್ಲಿ 'ತುಲ್ಯಪ್ರದೇಶತ್ವಮ್ ಸ್ಥಾನಮ್' ಇದು ಎರಡವಿಧ. ಪಾಠಸಾದೇಶ್ಯ ಅನುಷ್ಠಾನಸಾದೇಶ್ಯವೆಂದು. ಪಾಠಸಾದೇಶ್ಯವೂ ಎರಡುವಿಧ ಯಥಾಸಂಖ್ಯಾಮ್ನಾನ ಸನ್ನಿಧ್ಯಾಮ್ನಾನ ಎಂದು. ಸಂಖ್ಯೆಗೆ ಅನುಗುಣವಾಗಿ ಹೇಳಿದರೆ ಯಥಾಸಂಖ್ಯಾಮ್ನಾನ ಎನಿಸುತ್ತದೆ. ಸಮೀಪದಲ್ಲಿರುವುದನ್ನು ಸನ್ನಿಧ್ಯಾಮ್ನಾನ ಎನಿಸುತ್ತದೆ. ಯಥಾಸಂಖ್ಯಾಮ್ನಾನರೂಪವಾದ ಸ್ಥಾನದ ಬಗ್ಗೆ 'ಕ್ರಮಶ್ಚ ದೇಶಸಾಮಾನ್ಯಾತ್' (೩-೩-೫) ಎಂಬ ಅಧಿಕರಣದಲ್ಲಿ ಹೀಗೆ ಹೇಳಿದ್ದಾರೆ - ಆಗ್ನೇಯಮಂತ್ರ ಮತ್ತು ಅಗ್ನೀಷೋಮೀಯಮಂತ್ರಗಳ ಮಧ್ಯದಲ್ಲಿ ಒಂದು ಮಂತ್ರವಿದೆ. ಆಗ್ನೇಯ ಅನುಮಂತ್ರಣ ಮಂತ್ರವೆಂದರೆ 'ಅಗ್ನೇರಹಂ ದೇವಯಜ್ಯಯಾನ್ನಾದೋ ಭೂಯಾಸಮ್' ಎಂಬುದು. 'ಅಗ್ನಿಷೋಮೀಯಯೋರಹಂ ದೇವಯಜ್ಯಯಾ ವೃತ್ರಹಾ ಭೂಯಾಸಮ್' ಎಂಬುದು ಅಗ್ನಿಷೋಮೀಯ ಅನುಮಂತ್ರಣಮಂತ್ರ. ಈ ಎರಡು ಮಂತ್ರಗಳ ಮಧ್ಯದಲ್ಲಿ 'ದಬ್ಧಿರಸ್ಯ ದಬ್ಧೋ ಭೂಯಾಸಮ್' ಎಂಬ ಮಂತ್ರವಿದೆ. ಹೀಗೆ ಈ ಮಂತ್ರವನ್ನು ಎರಡು ಮಂತ್ರಗಳ ಮಧ್ಯದಲ್ಲಿ ಹೇಳಿದ್ದರಿಂದಲೇ ಆಗ್ನೇಯಯಾಗ ಅಗ್ನಿಷೋಮೀಯಯಾಗಗಳ ಮಧ್ಯದ ಉಪಾಂಶುಯಾಗದಲ್ಲಿ ವಿನಿಯೋಗ ಮಾಡಬೇಕೆಂದು ತಿಳಿಯುತ್ತದೆ.

ಇದರಂತೆ ಪ್ರಕೃತದಲ್ಲಿಯೂ ಅನ್ನ, ಪ್ರಾಣ, ಮನಸ್ಸು, ವಿಜ್ಞಾನ, ಆನಂದಗಳು ಕ್ರಮವಾಗಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳ ಸ್ಥಾನದಲ್ಲಿ ಪಠಿತವಾಗಿವೆ. ಸಂಖ್ಯಾಕ್ರಮದಲ್ಲಿ ಆನಂದಮಯನ ಸ್ಥಾನದಲ್ಲಿ ಆನಂದ ಶಬ್ದವು ಪಠಿತವಾಗಿದೆ. ಎರಡಕ್ಕೂ ಐಕ್ಯ ಹೇಳಲೇಬೇಕು. ಆನಂದಮಯನು ಅಬ್ರಹ್ಮನಾದ್ದರಿಂದ ಆನಂದನನ್ನೂ ಅಬ್ರಹ್ಮನೆಂದೇ ಹೇಳಬೇಕು.




ಆನಂದಮಯನು ಬ್ರಹ್ಮನಲ್ಲವೆನ್ನಲು ಸವಿಶೇಷತ್ವವನ್ನು ಪ್ರತಿಶರೀರಗಳಿಂದ ಭೇದವನ್ನು ಬಾಧಕವಾಗಿ ಅದ್ವೈತಿಗಳು ಹಿಂದೆ ಹೇಳಿದ್ದರು. ಆದರೆ ಸವಿಶೇಷತ್ವವು ಬ್ರಹ್ಮತ್ವಕ್ಕೆ ಸಾಧಕವೇ ಹೊರತು ಬಾಧಕವಲ್ಲ. ಇನ್ನು ಪ್ರತಿಶರೀರಗಳಿಂದ ಭಿನ್ನವಾದದ್ದನ್ನು ಬ್ರಹ್ಮನೆಂದು ನಾವು ಹೇಳಿಯೇ ಇಲ್ಲ.

ಮತ್ತು ಉಪನಿಷತ್ತಿನ ಅಂತರ್ಯ ಆನಂದಮಯನೇ ಬ್ರಹ್ಮನೆಂದು ಸ್ಪಷ್ಟವಾಗುತ್ತದೆ. ಏಕೆಂದರೆ 'ಸೋಽಕಾಮಯತ' ಎಂದು ಜಗತ್‌ಕಾರಣತ್ವವನ್ನು ಹೇಳುವಾಗ ಪುಲ್ಲಿಂಗಶಬ್ದವನ್ನೇ ಹೇಳಿದೆ. 'ಸಃ' ಎಂಬ ಈ ಪುಲ್ಲಿಂಗ ಶಬ್ದದಿಂದ ನಪುಂಸಕಲಿಂಗದಲ್ಲಿರುವ ಬ್ರಹ್ಮಪದವನ್ನಾಗಲೀ ಪುಚ್ಛಪದವನ್ನಾಗಲೀ ವಿವಕ್ಷಿಸಲು ಬರುವುದಿಲ್ಲ. ಆದ್ದರಿಂದ ಅದ್ವೈತಿಗಳಿಗೆ ಇಷ್ಟವಿರಲಿ ಬಿಡಲಿ ಆನಂದಮಯನನ್ನು ಬ್ರಹ್ಮನೆಂದು ಅನಿವಾರ್ಯವಾಗಿ ಒಪ್ಪಿಕೊಳ್ಳಲೇಬೇಕಾಗುತ್ತದೆ.

ಆನಂದಮಯನಷ್ಟೇ ಬ್ರಹ್ಮನೆಂದಲ್ಲ. ಮನೋಮಯನನ್ನೂ ಬ್ರಹ್ಮನೆಂದು ಒಪ್ಪಿಕೊಳ್ಳಬೇಕು. ಏಕೆಂದರೆ ನೀವು ಯಾವ ವಾಕ್ಯವನ್ನು ಬ್ರಹ್ಮ ಜಗತ್ಕಾರಣತ್ವಪ್ರತಿಪಾದಕವೆಂದು ಅಂಗೀಕರಿಸುತ್ತೀರೋ, ಅಂತಹ 'ಯತೋವಾ' ಎಂಬ ವಾಕ್ಯವು ಮನೋಮಯನಲ್ಲಿ ಶ್ರುತವಾಗಿದೆ. ಇಷ್ಟೇ ಅಲ್ಲ; ಅನ್ನಮಯಾದಿಗಳನ್ನು ಬ್ರಹ್ಮರೆಂದು ಅಂಗೀಕರಿಸಬೇಕು. ಬ್ರಹ್ಮನನ್ನು ತಿಳಿಸಿರಿ ಎಂದು ಪ್ರಾರ್ಥಿಸಿದಾಗ ಅನ್ನಮಯಾದಿಗಳನ್ನು ಉಪನಿಷತ್ತು ವರ್ಣನೆಮಾಡಿದೆ. ಒಂದುವೇಳೆ

ಅನ್ನಮಯಾದಿಗಳನ್ನು ನೀವು ಕೋಶವೆಂದು ಹೇಳಿದರೆ ಬ್ರಹ್ಮಜಿಜ್ಞಾಸುವಿಗೆ ಮಾಡಿದ ಈ ಉಪದೇಶವು ಅಸಂಗತವಾಗುವುದಿಲ್ಲವೇ? ದ್ವಾರವಾಗಷ್ಟೇ ಅನ್ನಮಯಾದಿಕೋಶಗಳ ಉಪದೇಶವೆಂದೂ ಹೇಳಬಾರದು. ಬ್ರಹ್ಮನು ಮೊದಲೇ ಉಪದೇಶದಿಂದ ಸಿದ್ಧವಾಗಿದ್ದಾನೆ. ಅಸಿದ್ಧವಾದ ಚಂದ್ರಾದಿಗಳ ವಿಷಯದಲ್ಲಷ್ಟೇ ದ್ವಾರತ್ವೇನ ಉಪದೇಶವು ಲೋಕದಲ್ಲಿ ಕಂಡಿದೆ. ಆದ್ದರಿಂದ ಅನ್ನಮಯ ಪ್ರಾಣಮಯ, ಮನೋಮಯ, ವಿಜ್ಞಾನಮಯ ಆನಂದಮಯ ಐದನ್ನೂ ಬ್ರಹ್ಮವೆಂದು ಹೇಳಲೇಬೇಕು.

• • • • •

## ಅನ್ನಮಯಾದಿ ಪಂಚಕಗಳು ದ್ವಾರವಾದಲ್ಲಿ ಅನೇಕ ಬಾಧಕಗಳು

**तात्पर्यचन्द्रिका–**

नच आज्ञातधर्मतत्त्वं 'चैत्यवन्दनादि धर्म' इति मन्वानं प्रति 'चैत्यवन्दनादि धर्म' इत्युपदिश्य ज्योतिष्टोमादि धर्म इत्युपदिश्यते । नच त्वन्मते अपरिच्छिन्नस्यात्मनः शरीराद्यन्तरत्वमहन्त्वरूपं प्रत्यक्त्वं वाऽस्ति । नच घटाकाशादिज्ञानोपायोऽपि घटादिः महाकाशज्ञानोपायः । इह च ''सत्यं ज्ञानमनन्तम्'' इति प्रकृतोऽपरिच्छिन्न एवात्मा जिज्ञापयिषित इति तेऽपि मतम् ।

किञ्च निरवयवे चित्तप्रावण्यार्थं निरवयवान्तरमेवोपदेष्टव्यम्, न तु ''अयं दक्षिणः पक्षः'' इति सावयवम् ।

अपिच न तावदन्नादीनां अन्नमयादीनां वा प्राणादीन् प्राणमयादीन् वा प्रति द्वारत्वम्, अन्नादिज्ञानं विनापि प्राणादिज्ञानात् । ब्रह्मणि द्वारत्वे तु अन्नादिपूर्वकं प्राणाद्युपदेशो न युक्तः, अनेकद्वारवैयर्थ्यं च । नच द्वारविकल्पः, उत्तरानुवाके ''अन्नं ब्रह्मेति व्यजानात्'' ''प्राणो ब्रह्मेति व्यजानात्'' ''मनो ब्रह्मेति व्यजानात्'' इत्यादिना अन्नप्राणादिद्वारसमुच्चयोक्तेः ।

अपिच ''यतो वै'' इत्यादिपूर्ववाक्योक्तकारणत्वस्यापि त्वत्पक्षे ब्रह्मणि द्वारत्वात्, कोशानां च कारणत्वे द्वारत्वाभावात् कोशोपदेशवैयर्थ्यम् ।

किञ्च भृगुर्वरुणोपदिष्टानां द्वारत्वं न वेत्ति चेत्, विरोचनस्येव पुनरुपसत्त्ययोगः । वेत्ति इति चेत्, 'नान्नं ब्रह्मेति व्यजानात् नान्नाद्ध्येव' इत्यादि श्रूयेत । तस्मादन्नमयादयो ब्रह्मैव न कोशाः ।

ಅನುವಾದ - ಬ್ರಹ್ಮನನ್ನು ತಿಳಿಯಲು ಕೋಶಾದಿಗಳನ್ನು ಉಪದೇಶಿಸುವುದು ಬಹಳ ಅನ್ಯಾಯ. ಹೇಗೆಂದರೆ ಯಾರಿಗೆ ಧರ್ಮ ಎಂದರೆ ಗೊತ್ತಿಲ್ಲವೋ ಅಷ್ಟೇ ಅಲ್ಲದೆ ಚೈತ್ಯವಂದನವನ್ನೇ ಧರ್ಮ ಎಂದು ವಿಪರೀತವಾಗಿ ತಿಳಿದಿದ್ದಾನೋ ಅಂತಹವನಿಗೆ ಧರ್ಮವನ್ನು ಪರಿಚಯಿಸಲು ಚೈತ್ಯವಂದನವೇ ಧರ್ಮವೆಂದು ಮೊದಲು ಉಪದೇಶಿಸಿ ಅನಂತರ ಜ್ಯೋತಿಷ್ಟೋಮಾದಿಗಳನ್ನು ಧರ್ಮವೆಂದು ಉಪದೇಶಿಸುವುದು ಹೇಗೆ ಅನ್ಯಾಯವೋ, ಅದರಂತೆ ಬ್ರಹ್ಮನನ್ನು ತಿಳಿಸಲು ಕೋಶಾದಿಗಳನ್ನು ಉಪದೇಶಿಸುವುದೂ ಸಹ ಅನ್ಯಾಯ.

೧) ವಸ್ತುತಸ್ತು ಬ್ರಹ್ಮನಿಗೆ ಪ್ರತ್ಯಕ್ತ್ವವನ್ನೇ ಹೇಳಲಾಗದು. ಪ್ರತ್ಯಕ್ತ್ವವನ್ನು ಎರಡು ವಿಧದಲ್ಲಿ ಹೇಳಬಹುದು. ಶರೀರ ಇಂದ್ರಿಯ ಮನಸ್ಸು ಮೊದಲಾದವುಗಳನ್ನು (ಒಳಗೆ ಇರುವಂತಹದ್ದನ್ನು) ಪ್ರತ್ಯಕ್ತ್ವ ಎನ್ನಬೇಕು. ಅಥವಾ ಅಹಂತ್ವವನ್ನು ಪ್ರತ್ಯಕ್ತ್ವವೆನ್ನಬೇಕು. ಆದರೆ ನಿಮ್ಮ ಮತದಲ್ಲಿ ಆತ್ಮನನ್ನು ಅಪರಿಚ್ಛಿನ್ನನೆಂದು ಒಪ್ಪಿದ್ದರಿಂದ ಎರಡೂ ವಿಧವಾದ ಅಹಂತ್ವವನ್ನು ಒಪ್ಪಲಾಗದು. ಘಟಾಕಾಶವನ್ನು ತಿಳಿಯಲು ಉಪಯೋಗಿಯಾದ ಘಟಜ್ಞಾನವು ಮಹಾಕಾಶಜ್ಞಾನಕ್ಕೆ ಉಪಯೋಗವಾಗುವುದಿಲ್ಲ. ಪ್ರಕೃತ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಅಪರಿಚ್ಛಿನ್ನನಾದ ಆತ್ಮನೇ ಪ್ರಕೃತನಾಗಿದ್ದಾನೆ. ಅವನೇ ಈಗ ತಿಳಿಯಬೇಕಾಗಿದ್ದಾನೆಂಬುದು ಅದ್ವೈತಿಗಳಿಗೂ ಸಮ್ಮತವಾಗಿದೆ.

೨) ಮತ್ತು ನಿರವಯವನಲ್ಲಿ ಏಕಾಗ್ರತೆ ಬರಬೇಕೆಂದರೆ ಮತ್ತೊಂದು ನಿರವಯವಾದದ್ದರ ಉಪದೇಶವನ್ನೇ ಮಾಡಬೇಕು. ಹೊರತು ಇದು ದಕ್ಷಿಣಪಕ್ಷ ಇತ್ಯಾದಿಯಾಗಿ ಸಾವಯವದ ಉಪದೇಶವನ್ನು ಮಾಡಬಾರದು.

೩) ಇನ್ನು ಪ್ರಾಣನನ್ನು ತಿಳಿಯಲು ಅನ್ನನನ್ನು ತಿಳಿಯಬೇಕು. ಮನಸ್ಸನ್ನು ತಿಳಿಯಲು ಪ್ರಾಣನನ್ನು ತಿಳಿಯಬೇಕು. ಹೀಗೆಯೇ ಪ್ರಾಣಮಯನನ್ನು ತಿಳಿಯಲು ಅನ್ನಮಯನನ್ನು ತಿಳಿಯಬೇಕು. ಮನೋಮಯನನ್ನು ತಿಳಿಯಲು ಪ್ರಾಣಮಯನನ್ನು ತಿಳಿಯಬೇಕು. ಹೀಗೆ ಮುಂದಿನದ್ದನ್ನು ಕುರಿತು ಹಿಂದಿನವುಗಳು ದ್ವಾರಗಳಾಗುತ್ತವೆಯೆಂದೂ ಹೇಳಲು ಬರುವುದಿಲ್ಲ. ಅನ್ನಾದಿಜ್ಞಾನಗಳಿಲ್ಲದೆ ಪ್ರಾಣಾದಿಜ್ಞಾನವು ಅನ್ನಮಯಾದಿಗಳ ಜ್ಞಾನವಿಲ್ಲದೆ ಪ್ರಾಣಮಯಾದಿ ಜ್ಞಾನ ಬರುವುದು ಕಂಡಿದೆ. ಎಲ್ಲವೂ ಬ್ರಹ್ಮನನ್ನು ದ್ವಾರವೆಂದು ಹೇಳಿದರೆ ಅನ್ನಾದಿಪೂರ್ವಕವಾದ ಪ್ರಾಣಾದ್ಯುಪದೇಶವು ವ್ಯರ್ಥವಾಗುತ್ತದೆ. ಆನಂದಮಯಪ್ರಕರಣದಲ್ಲಿ ಹೇಳಿದಂತೆ ಪ್ರತಿಯೊಂದು ಕೋಶಗಳ ಪ್ರಕರಣಗಳಲ್ಲಿ ಬ್ರಹ್ಮನನ್ನು ಹೇಳಬೇಕಿತ್ತು. ಮತ್ತು ಬ್ರಹ್ಮನನ್ನು ತಿಳಿಸಲು ಒಂದು ದ್ವಾರವನ್ನು ಹೇಳಿದರೆ ಸಾಕು. ಅನೇಕ ದ್ವಾರಗಳನ್ನು ಹೇಳಿದ್ದು ವ್ಯರ್ಥ. ಅನೇಕದ್ವಾರ ಹೇಳಿದ್ದರಿಂದ ವಿಕಲ್ಪವಾಗಿ ಯಾವುದನ್ನು ಬೇಕಾದರೂ ಇಟ್ಟುಕೊಳ್ಳಬಹುದೆಂದೂ ಹೇಳಲಾಗದು. ಮುಂದಿನ ಅನುವಾಕದಲ್ಲಿ 'ಅನ್ನಂ ಬ್ರಹ್ಮೇತಿ ವ್ಯಜಾನಾತ್ ಪ್ರಾಣೋ ಬ್ರಹ್ಮೇತಿ ವ್ಯಜಾನಾತ್ ಮನೋ ಬ್ರಹ್ಮೇತಿ ವ್ಯಜಾನಾತ್' ಇತ್ಯಾದಿಯಾಗಿ ಅನ್ನಪ್ರಾಣಾದಿದ್ವಾರಗಳನ್ನು ಒಟ್ಟಿಗೆ ಹೇಳಿದ್ದಾರೆ. ಆದ್ದರಿಂದ ವಿಕಲ್ಪವೆಂದು ಹೇಳಲಾಗದು.

೪) ನಿಮ್ಮ ಮತದಲ್ಲಿ 'ಯತೋ ವಾ' ಇತ್ಯಾದಿ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟಿರುವ ಜಗತ್ ಕಾರಣತ್ವವೂ ದ್ವಾರವೇ ಆಗಿದೆ. ದ್ವಾರಭೂತವಾಗಿರುವ ಜಗತ್‌ಕಾರಣತ್ವಕ್ಕೆ ಕೋಶಗಳು ದ್ವಾರವಾಗಲು ಸಾಧ್ಯವಿಲ್ಲ. ಆದ್ದರಿಂದ ಕೋಶೋಪದೇಶವು ವ್ಯರ್ಥ.

೫) ಮತ್ತು ವರುಣರಿಂದ ಉಪದಿಷ್ಟರಾದ ಭೃಗುಋಷಿಗಳು ಅನ್ನಮಯಾದಿಗಳನ್ನು ದ್ವಾರವೆಂದು ತಿಳಿದಿಲ್ಲವಾದರೆ ವಿರೋಚನನಂತೆ ಪುನಃ ಪುನಃ 'ಉಪಸತ್ತಿಯು ಕೂಡುವುದಿಲ್ಲ. ತಿಳಿಯುವುದಾದರೆ 'ನಾನ್ನಂ ಬ್ರಹ್ಮೇತಿ ವ್ಯಜಾನಾತ್' 'ನಾನ್ನಾದ್ಧ್ಯೇವ' ಇತ್ಯಾದಿ ಮಾತುಗಳಿರಬೇಕಾಗಿತ್ತು. ಆದ್ದರಿಂದ ಅನ್ನಮಯಾದಿ ಐದೂ ಸಹ ಬ್ರಹ್ಮವೇ ಹೊರತು ಕೋಶವಲ್ಲ.

### ಕಠಿಣಪದಾರ್ಥ

ಅಜ್ಞಾತಧರ್ಮತತ್ತ್ವಮ್ = ಧರ್ಮಸ್ವರೂಪವನ್ನೇ ತಿಳಿಯದವನಿಗೆ, ಜಿಜ್ಞಾಪಯಿಷಿತಃ = ತಿಳಿಸಲು ಇಷ್ಟನಾಗಿದ್ದಾನೆ, ಸಾವಯವಮ್ = ಅವಯವವಿಶಿಷ್ಟನಾದ ಬ್ರಹ್ಮನನ್ನು, ದ್ವಾರವಿಕಲ್ಪಃ = ಯಾವುದಾದರೊಂದು ದ್ವಾರವನ್ನು ಇಟ್ಟುಕೊಳ್ಳಬಹುದೆಂಬ ವಿಕಲ್ಪವು, ಉಪಸತ್ತಿ = ಜ್ಞಾನಕ್ಕೋಸ್ಕರ ಶಿಷ್ಯನಾಗಿ ಗುರುಗಳನ್ನು ಆಶ್ರಯಿಸುವುದು.

**प्रकाशः** – न युक्तश्च कोशानां ब्रह्मत्वज्ञापनाय तथोपदेश इत्याह – **नच अज्ञातेति** ।। अन्यथा कर्मकाण्डेपि तथोपदेशः स्यादिति भावः । एवं प्रत्यक्प्रावण्यार्थं द्वारोपदेश इति निरस्तम् । इदानीं ब्रह्मणः प्रत्यक्त्वमेव नास्ति, येन तत्प्रावण्यार्थं तदुपदेशोऽर्थवान् स्यादित्याह – **नच त्वन्मत इति** ।। अपरिच्छिन्नत्वादन्तरत्वरूपं शुद्धचित्त्वादहन्त्वरूपं वा प्रत्यक्त्वं नेत्यर्थः ।

ननु कोशानां परिच्छिन्नाहमर्थजीवरूपप्रत्यग्ज्ञानोपायत्वात्तदभिन्नापरिच्छिन्न-ब्रह्मज्ञाने द्वारता भविष्यतीत्यत आह – **नच घटेति** ।। 'जिज्ञापयिषितः' ज्ञापयितुमिष्ट इत्यर्थः । तथा च "ब्रह्म पुच्छं" इत्युक्तब्रह्मज्ञानाय द्वारता कथं कोशानां स्यादित्यर्थः । 'अन्नादीनां' इत्युत्तरानुवाकस्थाभिप्रायेण । 'प्राणादीन्' इति यथाक्रममन्वयः ।। **समुच्चयेति** ।। अन्यथाऽन्नप्राणादिष्वन्यतमस्यैव श्रवणप्रसङ्गो वा 'अन्नं वा ब्रह्मेति व्यजानात्' इति वा स्यादिति भावः । **त्वत्पक्ष इति** ।। जन्मादिसूत्रे तथोक्तेरिति भावः ।

अधीहि भगवो ब्रह्मेत्युक्तोऽन्नप्राणपूर्वकम् ।
आह ब्रह्म कथं तन्न द्वारं तदिति वादिनः ।
उपसत्तिं कथं विद्युः ........ ......... ।।

ಆನಂದಮಯಾಧಿಕರಣ

इत्यनुव्याख्यानं हृदि कृत्वा दोषान्तरमाह – **किञ्च भृगुरिति** ।। **विरोचनस्येवेति** ।। यथा चतुर्मुखेनोपदिष्टस्य पुनरुपसत्तिर्नास्ति, तथा न स्यादित्यर्थः । व्यक्तमेतच्छान्दोग्ये अष्टमेऽध्याये ।

ननु परोक्तबाधकानां केषांचिन्निरासेऽप्यन्नमयादेः ब्रह्मत्वेऽनुपपत्तिरेव । तथा हि । ''ओषधीभ्योऽन्नमन्नात्पुरुषः'' इत्योषधिकार्या विकारं देहं पुरुषपदेनोक्त्वा, ''स वा एष पुरुषः'' इति तं परामृश्य, 'अन्नरसमयः' इति प्राकृतान्नमयत्वमुच्यते, तस्येश्वरेऽनुपपत्तेः । नच अनेन ''आत्मन आकाशः'' इत्युक्तात्मन एव परामर्श इति वाच्यं, तस्य व्यवहितत्वेनास्वारस्यात् । भृगुवल्ल्युक्तानामन्नादीनां ब्रह्मत्वे साधकविशेषस्यानुक्तेः, तत्र मयटोऽश्रवणेन अन्नमयादिभ्यस्तेषां भेदप्रतीतेः । तेषां ब्रह्मत्वे तज्ज्ञानानन्तरं ''तद्विज्ञाय पुनरेव वरुणं पितरमुपससार'' इति पुनरुप सृत्ययोगात्, इत्यादिबाधकापरिहाराच्चेत्यतः, ''यदवादि 'स वा एषः' इत्यन्यपरामर्शो न 'अन्नात् पुरुषः' इत्युक्तपरामर्शः'' इत्यादिटीकां विवृण्वन्नाह – **अत्रावशिष्टमिति** ।। 'इत्यादिकमुत्तरप्रस्थानादवगन्तव्यम्' इत्युत्तरेणान्वयः ।

**गुरुराजीयम्** – अस्तु तर्ह्यन्नमयादीनां ब्रह्मत्वारोपः प्रात्यक्षिक इति द्वितीयः पक्षः । निरवद्यत्वादित्यतः तर्हि तस्य स्वत एव सिद्धत्वात्पुनरन्नं ब्रह्मेत्यादिश्रुत्या तदुपदेशोऽनुपपन्नः । अन्यथा चैत्यवन्दनादि धर्म इति मन्वानं प्रति चैत्यवन्दनादि धर्म इत्युपदिश्येतेत्यत आह – **नचाज्ञातेति** ।। यदुक्तमन्नमयादेर्द्वारत्वं कथमिति तत्र विकल्पितपक्षेषु प्रथममेवाङ्गीकुर्मः । न चान्नं ब्रह्मेत्यनुक्त्वाप्यानन्दो ब्रह्मेति वक्तुं शक्यत्वात्कथं तस्य द्वारत्वमिति वाच्यम् । अन्नादौ ब्रह्मत्वविषयकभ्रमस्य जातत्वेन तदुपदेशाभावेऽन्नादौ ब्रह्मेत्युपदेशस्यैवासम्भवादित्यतो वाह – **नचेति** ।। अन्यथा यस्य चैत्यवन्दने धर्मत्वभ्रान्तिरुत्पन्नास्ति तं प्रति चैत्यवन्दनादिकं धर्म इत्युपदिश्य ज्योतिष्टोमादेर्धर्मत्वोपदेशस्य कर्तव्यत्वापत्तेः । ननु तथाप्यन्नमयाद्यनुपदेशे आनन्दमयोपदेशो न युज्यते । तस्यान्नमयाद्यपेक्षयान्तरत्वात् । तथा च तस्य द्वारत्वं युक्तमित्यत आह – **नच त्वन्मत इति** ।। अन्यथाऽपरिच्छिन्नत्वं न स्यादिति भावः । एवं ब्रह्मणः प्रत्यक्त्वमङ्गीकृत्य परागर्थस्य प्रत्यक्प्रावण्यार्थत्वासम्भवान्न परागर्थोपदेशोऽयुक्त इत्युक्तम् । इदानीं तु ब्रह्मणः प्रत्यक्त्वस्यैवासम्भवान्नान्नमयाद्युपदेशस्य प्रत्यक्प्रावण्यार्थत्वमिति वाह – **नच त्वन्मत इति** ।।

यदुक्तमन्नमयाद्युक्तिश्चित्तस्य प्रत्यक्प्रावण्यार्थं न सम्भवति । कोशादेः परात्त्वादिति । तदुपपादयति ।। **अहन्त्वरूपमिति** ।। प्रत्यक्त्वं ह्यहन्त्वम् । नच कोशेष्वहन्त्वबुद्धिरस्तीति भावः । ननु ब्रह्मणोऽपरिच्छिन्नत्वादन्नादेः परिच्छिन्न-प्रत्यग्ज्ञानसाधनत्वेनैवापरिच्छिन्नब्रह्मज्ञान-साधनत्वोपपत्तेस्तदुपदेशः सार्थक इत्यत आह – **नचेति** ।। यद्वा किञ्च कोशानामपरिच्छिन्नब्रह्मज्ञानोपायत्वं नोपपन्नम् । घटावच्छिन्नाकाशज्ञाने घटादेरिव तत्तत्कोशावच्छिन्नज्ञाने कोशानां हेतुत्वात् । नचावच्छिन्नज्ञानोपायत्वेऽप्यनवच्छिन्नज्ञानोपाय इति नोक्तदोष इति वाच्यम् । तथात्वे घटादेरपि महाकाशज्ञानोपायत्वापत्तेरित्याह – **नचेति** ।। ननु मास्तु परिच्छिन्न-ज्ञानोपायस्यापरिच्छिन्नज्ञानोपायत्वम् । प्रकृते जिज्ञापयिषितं तु परिच्छिन्नमेवेति तत्साधनत्वमन्नादेरुपपद्यत इत्यत आह – **इहचेति** ।।

ननु निरवयवे चित्तप्रावण्यार्थं निरवयवान्तरमुपदेष्टव्यमित्ययुक्तम् । तस्याति-सूक्ष्मत्वेन प्रथमं बुद्ध्यारोहासम्भवात् । नच सावयवोपदेशेन कथं निरवयवज्ञानमिति वाच्यम् । चन्द्रादिस्वरूपज्ञानार्थं शाखोपदेशस्य दर्शनात् । अन्यथा तत्राऽपि चन्द्रान्तरमेवोपदेष्टव्यमित्यरुचेराह – **अपिचेति** ।। उत्तरानुवाकानुरोधादन्नादीना-मित्युक्तम् । किमत्रान्नादीनामन्नमयादीनां च द्वारद्वारिभावेन परंपरया द्वारत्वमुत साक्षादेव ब्रह्मणि द्वारत्वम् । नाद्य इत्याह – **अन्नादिज्ञानं विनेति** ।। न द्वितीय इत्याह – **ब्रह्मणीति** ।। अन्नं प्राणं चक्षुः श्रोत्रमित्युपदेशो न युक्त इत्यर्थः ।

ननु यस्य कस्यचित्प्रथमं वक्तव्यत्वादन्नस्य प्राथम्येनोक्तिरित्यत आह – **अनेकेति** ।। ननु विकल्पेन विहितत्वान्न वैयर्थ्यमित्यत आह – **नचेति** ।।

ननु समुच्चयवाचकशब्दाभावान्न समुच्चयो युक्तः । नच विकल्पद्योतक-वाशब्दाभावान्न विकल्पोपि युक्त इति वाच्यम् । वैयर्थ्यान्यथानुपपत्त्याऽगत्या विकल्पस्याश्रयणादित्यस्वरसादाह – **अपिचेति** ।। **यतो वेत्यादीति** ।। अत्र वैशब्दसमानार्थो वाशब्दो विवक्षितः । अर्थानुवादश्चायम् । तेन यतोवेत्यादीत्युप-पन्नम् । अन्यथा यतो वा इत्यादीति स्यादिति द्रष्टव्यम् ।

ವಿವರಣೆ - ಬ್ರಹ್ಮಸ್ವರೂಪವನ್ನು ತಿಳಿಸುವುದಕ್ಕಾಗಿ ಕೋಶಗಳನ್ನು ಉಪದೇಶ ಮಾಡಿದ್ದಾರೆಂದು ಅದ್ವೈತಿಗಳ ವಾದ. ಆದರೆ ಕೋಶಗಳನ್ನು ಬ್ರಹ್ಮತ್ವೇನ ಉಪದೇಶ ಮಾಡಿದ್ದು ಬಹಳ ಅನ್ಯಾಯ. ಹಾಗಾದಲ್ಲಿ

ಜೈಮಿನಿಋಷಿಗಳೂ ಸಹ ಕರ್ಮಕಾಂಡದಲ್ಲಿ ಮೊದಲು ಚೈತ್ಯವಂದನವನ್ನು ಧರ್ಮ ಎಂದು ಉಪದೇಶಿಸಿ ಅನಂತರ ಜ್ಯೋತಿಷ್ಟೋಮಾದಿಗಳನ್ನು ಉಪದೇಶಿಸಬೇಕಾದೀತು.

ಇಲ್ಲಿಯ ತನಕ ಪ್ರತ್ಯಕ್‌ಚೈತನ್ಯನಲ್ಲಿ ಮನಸ್ಸಿನ ಏಕಾಗ್ರತೆಗಾಗಿ ದ್ವಾರೋಪದೇಶವೆಂದು ಹೇಳಿದರು. ಈಗ ಬ್ರಹ್ಮನಿಗೆ ಪ್ರತ್ಯಕ್ತ್ವವನ್ನೇ ಹೇಳಲು ಬರುವುದಿಲ್ಲ. ಒಂದುವೇಳೆ ಬ್ರಹ್ಮನು ಪ್ರತ್ಯಗರ್ಥನಾಗಿದ್ದರೆ ಅವನಲ್ಲಿ ಚಿತ್ತೈಕಾಗ್ರತೆಗೋಸ್ಕರ ದ್ವಾರೋಪದೇಶವು ಸಾರ್ಥಕವಾಗುತ್ತಿತ್ತೆಂದು ಹೇಳುತ್ತಿದ್ದಾರೆ.

ವಿಚಾರ ಮಾಡಿದರೆ ನಿಮ್ಮ ಮತದಲ್ಲಿ ಪ್ರತ್ಯಕ್ತ್ವವನ್ನೇ ಬ್ರಹ್ಮನಿಗೆ ಹೇಳಲಾಗದು. ಏಕೆಂದರೆ ಬ್ರಹ್ಮನನ್ನು ಅಪರಿಚ್ಛಿನ್ನನೆಂದು ನೀವು ಒಪ್ಪಿದ್ದೀರಿ. ಹಾಗಾಗಿ ಶರೀರಾದ್ಯಂತರತ್ವವನ್ನು ಪ್ರತ್ಯಕ್ತ್ವ ಎನ್ನಲಾಗದು. ಇನ್ನು ಬ್ರಹ್ಮನನ್ನು ಶುದ್ಧನೆಂದು ಹೇಳಿದ್ದರಿಂದ ಅಹಂತ್ವರೂಪವಾದ ಪ್ರತ್ಯಕ್ತ್ವವನ್ನು ಹೇಳಲಾಗದು.

ಆಕ್ಷೇಪ - ಅಂತಃಕರಣವಿಶಿಷ್ಟನಾದ ಪರಿಚ್ಛಿನ್ನನಾದ ಅಹಮರ್ಥನಾಗಿರುವ ಜೀವನ ಜ್ಞಾನಕ್ಕೋಸ್ಕರ ಕೋಶಗಳು ಉಪಯೋಗವಾಗುತ್ತವೆ. ಪ್ರತ್ಯಗರ್ಥನಾದ ಈ ಜೀವನಲ್ಲಿ ಶುದ್ಧಭಾಗದಿಂದ ಬ್ರಹ್ಮನ ಅಭೇದವಿದೆ. ಹೀಗೆ ಪರಂಪರಯಾ ಬ್ರಹ್ಮಜ್ಞಾನ ಬರುವುದಕ್ಕಾಗಿ ಕೋಶಾದಿಗಳ ಉಪದೇಶ ಸಾರ್ಥಕವಲ್ಲವೆ?

ಸಮಾಧಾನ - ಈ ಆಕ್ಷೇಪಕ್ಕೆ 'ನಚ ಘಟ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. 'ಬ್ರಹ್ಮಪುಚ್ಛಮ್' ಎಂದು ಹೇಳಿದ ಬ್ರಹ್ಮನ ಜ್ಞಾನಕ್ಕೋಸ್ಕರ ಕೋಶದ ಉಪದೇಶವು ಅಸಂಗತವಾಗುತ್ತದೆ.

ಯತೋ ವಾ ಇತ್ಯಾದಿ ವಾಕ್ಯವು ಹಿಂದೆ ಪ್ರಸಕ್ತವಾಗಿದೆ. ಈ ವಾಕ್ಯದಿಂದ ತಿಳಿಯುವ ಜಗತ್ಕಾರಣತ್ವವನ್ನು ಅದ್ವೈತಿಗಳು ಅವಿದ್ಯೆಯಲ್ಲಿ ಹೇಳುತ್ತಾರೆ ಬ್ರಹ್ಮನಲ್ಲಿ ಹೇಳುವುದಿಲ್ಲ. ಆದ್ದರಿಂದ ಈ ಜಗತ್ಕಾರಣತ್ವವು ಬ್ರಹ್ಮನಿಗೆ ದ್ವಾರವೆನ್ನುತ್ತಾರೆ. ಹಾಗಾಗಿ ಕೋಶಗಳು ಜಗತ್ಕಾರಣತ್ವಕ್ಕೆ ದ್ವಾರಗಳಾಗುವುದಿಲ್ಲ. ಕೋಶಗಳ ಉಪದೇಶವೇ ವ್ಯರ್ಥವಾಗುತ್ತವೆ.

ವರುಣನು ಭೃಗುವಿಗೆ ಉಪದೇಶ ಮಾಡಿದ್ದಾನೆ. ಆವಾಗ ಭೃಗುವು ವರುಣನಿಂದ ಉಪದಿಷ್ಟವಾದ ಅನ್ನಮಯಾದಿಗಳನ್ನು ದ್ವಾರವೆಂದು ತಿಳಿಯುವುದಾದರೆ ವಿರೋಚನನಂತೆ ಪುನಃ ಪುನಃ ಉಪಸತ್ತಿಯು ತಪ್ಪಾಗುತ್ತದೆ. ಇದನ್ನೇ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

ಅಧೀಹಿ ಭಗವೋ ಬ್ರಹ್ಮೇತ್ಯುಕ್ತೋಽನ್ನಪ್ರಾಣಪೂರ್ವಕಮ್ ।

ಆಹ ಬ್ರಹ್ಮ ಕಥಂ ತನ್ನ ದ್ವಾರಂ ತದಿತಿ ವಾದಿನಃ ॥

ಉಪಸತ್ತಿಂ ಕಥಂ ವಿದ್ಯುಃ ....... ..............

ಭೃಗುಋಷಿಗಳು ವರುಣದೇವರನ್ನು ಕುರಿತು ಭಗವಂತನನ್ನು ತಿಳಿಸಿರಿ ಎಂದು ಪ್ರಾರ್ಥಿಸಿದರು. ಆವಾಗ ವರುಣದೇವರು ಅನ್ನಪ್ರಾಣಪೂರ್ವಕವಾಗಿ ಬ್ರಹ್ಮನನ್ನೇ ಉಪದೇಶಿಸಿದರು. ಅನ್ನಪ್ರಾಣಾದಿಗಳನ್ನು ದ್ವಾರವೆಂದು ಹೇಳುವ ಅದ್ವೈತಿಗಳು ಗುರೂಪಸತ್ತಿಯನ್ನೇ ತಿಳಿದಿಲ್ಲ. ಈ ಅನುವ್ಯಾಖ್ಯಾನವನ್ನು ಮನಸ್ಸಿನಲ್ಲಿಟ್ಟುಕೊಂಡು ಮತ್ತೊಂದು ದೋಷವನ್ನು 'ಕಿಂಚ ಭೃಗುಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಚತುರ್ಮುಖದೇವರ ಬಳಿ ಇಂದ್ರ ಮತ್ತು ವಿರೋಚನ ಇಬ್ಬರೂ ಪಾಠ ಕೇಳಲು ಬರುತ್ತಾರೆ. ಇಂದ್ರದೇವರು ನಾಲ್ಕುಬಾರಿ ಉಪಸತ್ತಿ ಮಾಡಿ ಪಾಠ ಕೇಳುತ್ತಾರೆ. ಆದರೆ ವಿರೋಚನನು ಪುನಃ ಪುನಃ ಉಪಸತ್ತಿಯನ್ನು ಮಾಡುವುದಿಲ್ಲ. ಅದರಂತೆ

ಇಲ್ಲಿಯೂ ಭೃಗುವು ಉಪಸತ್ತಿಯನ್ನು ಮಾಡಬಾರದಾಗಿತ್ತು. ಛಾಂದೋಗ್ಯದ ಅಷ್ಟಮಾಧ್ಯಾಯದಲ್ಲಿ ಇದರ ವಿವರಣೆ ಇದೆ.



## ಸಾರ

ಅನ್ನಮಯಾದಿಗಳನ್ನು ದ್ವಾರವೆಂದು ಹೇಳಿದರೆ ಐದು ಪ್ರಧಾನದೋಷಗಳನ್ನು ಹೇಳುತ್ತಿದ್ದಾರೆ.

ದೇಹದ ಒಳಗಿರುವ ಆತ್ಮನನ್ನು ತಿಳಿಯುವುದು ಅಷ್ಟು ಸುಲಭವಲ್ಲ. ಅದಕ್ಕೋಸ್ಕರ ಅನ್ನಮಯಾದಿಕೋಶಗಳ ಉಪದೇಶವೆಂದು ಅದ್ವೈತಿಗಳ ವಾದ. ಆದರೆ ಇದು ಅಸಂಗತ. ನಿಮ್ಮ ಪ್ರಕಾರ ಚೈತ್ಯವಂದನವನ್ನು ಧರ್ಮವೆಂದು ಮೊದಲು ಉಪದೇಶಿಸಿ ಅನಂತರ ಜ್ಯೋತಿಷ್ಟೋಮವನ್ನು ಧರ್ಮವೆಂದು ಉಪದೇಶಿಸಬೇಕಾಗುತ್ತದೆ. ವಸ್ತುತಸ್ತು ಬ್ರಹ್ಮನನ್ನು ಅಪರಿಚ್ಛಿನ್ನನೆಂದು ಅದ್ವೈತಿಗಳು ಒಪ್ಪಿದ್ದಾರೆ. ಆದ್ದರಿಂದ ಬ್ರಹ್ಮನು ದೇಹದೊಳಗಿದ್ದಾನೆಂದು ಸಮರ್ಥಿಸುವುದೇ ಕಷ್ಟವಿದೆ.

ಮತ್ತು ನಿರವಯವನಾಗಿರುವ ಬ್ರಹ್ಮನ ತಿಳಿವಳಿಕೆಗಾಗಿ ಸಾವಯವಬ್ರಹ್ಮನ ಉಪದೇಶವು ಅಸಂಗತವಾಗುತ್ತದೆ. ಮತ್ತು ಅನ್ನಮಯಾದಿ ಐದನ್ನೂ ದ್ವಾರವೆನ್ನುವುದರಲ್ಲಿ ಅರ್ಥವೇ ಇಲ್ಲ. ಲೋಕದಲ್ಲಿ ಚಂದ್ರನು ಕಾಣದಿದ್ದಾಗ ಒಂದು ಕೊಂಬೆಯನ್ನು ತೋರಿಸಿ ಚಂದ್ರನನ್ನು ಪರಿಚಯಿಸುತ್ತಾರೆ ಹೊರತು ಅನೇಕ ಕೊಂಬೆಗಳನ್ನು ತೋರಿಸುವುದಿಲ್ಲ. ಹಾಗೆಯೇ ಅನ್ನಮಯಾದಿಗಳಲ್ಲಿ ಒಂದನ್ನು ದ್ವಾರವೆಂದು ಹೇಳಿದರೆ ಸಾಕಲ್ಲವೆ? ಅಷ್ಟೇ ಅಲ್ಲದೇ ಅನ್ನಮಯದ್ವಾರದ ಉಪದೇಶವಾದ ಮೇಲೆ ಪ್ರಾಣಮಯಾದಿ ದ್ವಾರಗಳ ಉಪದೇಶವೇ ಏಕೆ ಮಾಡಬೇಕು? ಒಂದೇ ವಿಧವಾದ ಕ್ರಮದಲ್ಲಿ ಪ್ರಮಾಣವಿಲ್ಲ.

ಮತ್ತು ಅನ್ನಮಯಾದಿಗಳನ್ನು ಜಗತ್ಕಾರಣತ್ವಕ್ಕೆ ದ್ವಾರವೆನ್ನಬೇಕು. ಆದರೆ ಅದ್ವೈತಮತದಲ್ಲಿ ಜಗತ್ಕಾರಣತ್ವವೇ ದ್ವಾರವಾಗಿದೆ. ಒಂದು ದ್ವಾರಕ್ಕೆ ಮತ್ತೊಂದು ದ್ವಾರವನ್ನು ಹೇಳಿದಂತಾಯಿತು.

ಮತ್ತು ಅಪ್ಪನಿಂದ ಉಪದೇಶ ಪಡೆದಾಗ ಭೃಗುಋಷಿಗಳಿಗೆ ಅನ್ನಮಯಾದಿಗಳು ದ್ವಾರವೆಂದು ತಿಳಿಯುವುದಾದರೆ ಅನ್ನಾದಿಗಳನ್ನು ಬ್ರಹ್ಮನೆಂದು ತಿಳಿಯಲಿಲ್ಲವೆಂದಂತಾಯಿತು. ಆದರೆ ಉಪನಿಷತ್ತು ಅನ್ನನನ್ನು ಬ್ರಹ್ಮನೆಂದು ತಿಳಿದರೆಂದು ಹೇಳುತ್ತಿದೆ. ಇದು ತಪ್ಪಾಗುತ್ತದೆ.



## ಭಗವಂತನೇ ಅನ್ನಮಯಾದಿ ಶಬ್ದ ಪ್ರತಿಪಾದ್ಯ

**तात्पर्यचन्द्रिका –**

**अत्रावशिष्टं, ''आत्मन आकाशः'' इत्यादौ ''अन्नात्पुरुषः'' इत्यन्ते वाक्ये हरेरप्याकाशादिनियामकरूपप्रादुर्भावलक्षणजनेरुक्तत्वात् ''स वा एष पुरुषोऽन्न-रसमयः'' इत्यत्र हरेः परामर्शस्वारस्यम्, तथा परेणापि ब्रह्मपरतया स्वीकृतेन**

''रसो वै सः रसं ह्येवायं लब्ध्वाऽऽनन्दी भवति'' इति रसशब्देन सन्निहितपरामर्शस्यैतच्छब्देनैव सिद्धेः व्यवहिताकाशादिकारणब्रह्मपरामर्शिना तच्छब्देन च विशेषणात् प्रकृतान्नमयपरत्वाभावः, तथा ''भृगुर्वै वारुणिः'' इत्युत्तरानुवाके उक्तानाम् अन्नादीनां ब्रह्मत्वं तावदुपेयम्, ''भार्गवी वारुणी विद्या परमे व्योमन् प्रतिष्ठिता'' इति श्रुत्या स्वयमेव ब्रह्मपरत्वोक्तेः ।

''अधीहि भगवो ब्रह्म'' इति ब्रह्मप्रश्नोत्तरत्वात् । ''स तपस्तप्त्वा'' ''अन्नं ब्रह्मेति व्यजानात्'' इति श्रवणानन्तरभाविनिदिध्यासनाख्यतपसाऽपरोक्षीकृतत्वलिङ्गात् ।

''अन्नं ब्रह्म'' इत्यादिब्रह्मशब्दात् ''अन्नाद्ध्येव खल्विमानि भूतानि जायन्ते'' इत्यादिब्रह्मलक्षणाच्च । तत्समाख्यया च अत्राप्यन्नमयादीनां ब्रह्मत्वम् ।

नच तत्र मयटोऽश्रवणात् भिन्नविषयत्वम्, तत्रापि ''एतमन्नमयमात्मानमुपसङ्क्रामति'' इत्यादौ ''एतमानन्दमयमात्मानमुपसङ्क्रामति'' इत्यन्ते मध्ये, तथा ''एतमन्नमयमात्मानमुपसङ्क्रम्य'' इत्यादौ ''एतमानन्दमयमात्मानमुपसङ्क्रम्य'' इत्यन्ते उपसंहारे च तच्छ्रवणात् अत्रापि ''अन्नाद् वै प्रजाः प्रजायन्ते'' इत्यादौ तदश्रवणात् । तत्राप्यन्नमयादीनामब्रह्मत्वे ''एतमन्नमयमात्मानमुपसङ्क्रामति'' इत्यात्मशब्दस्य मुक्तप्राप्यत्वस्य चायोगात् ।

नच 'उपसङ्क्रम्य' इत्यत्र उपशब्दोऽतिक्रमार्थः, अव्ययानामनेकार्थत्वस्यापि प्रयोगानुसारित्वात्, अन्यथा अन्तश्शब्दो बहिरर्थः स्यात् । ''अस्माल्लोकात् प्रेत्य'' इत्यनेनैव शरीराख्यान्नमयत्यागस्योक्तत्वेन ''अन्नमयमात्मानमुपसङ्क्रामति'' इत्यनेनापि तदुक्तौ पुनरुक्तिश्च स्यात् ।

ಅನುವಾದ - ಉಳಿದ ಬಾಧಕಗಳ ಪರಿಹಾರವನ್ನು ಉತ್ತರಪ್ರಸ್ಥಾನದಲ್ಲಿ ತಿಳಿಯಬೇಕು. ಅವುಗಳಲ್ಲಿ ಕೆಲವು ವಿಚಾರಗಳು ಹೀಗಿವೆ - ''ಆತ್ಮನಃ ಆಕಾಶಃ'' ಎಂಬುದರಿಂದ ಪ್ರಾರಂಭಿಸಿ ''ಅನ್ನಾತ್ ಪುರುಷಃ'' ಎಂಬ ವಾಕ್ಯದ ತನಕ ಆಕಾಶಾದಿಗಳ ಉತ್ಪತ್ತಿಯಂತೆ ಭಗವಂತನ ಪ್ರಾದುರ್ಭಾವದ ಬಗ್ಗೆಯೂ ಶ್ರುತಿ ಹೇಳುತ್ತಿದೆ. ಆಕಾಶಾದಿಗಳ ನಿಯಾಮಕರೂಪಕ್ಕೆ ಭಗವಂತನ ಪ್ರಾದುರ್ಭಾವವನ್ನು ಶ್ರುತಿ ಹೇಳುತ್ತಿದೆ. ಆದ್ದರಿಂದ ''ಸ ವಾ ಏಷ ಪುರುಷೋಽನ್ನರಸಮಯಃ''

ಎಂಬಲ್ಲಿ ''ತತ್'' ಶಬ್ದದಿಂದ ಪೂರ್ವಪ್ರಸಕ್ತನಾದ ಭಗವಂತನನ್ನೇ ಪರಾಮರ್ಶಿಸುವುದು ಹೆಚ್ಚು ಸ್ವರಸ.

ಮತ್ತು ''ರಸೋ ವೈ ಸಃ ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತೀ'' ಎಂಬಲ್ಲಿ ರಸಶಬ್ದವನ್ನು ವಿಶೇಷಣವನ್ನಾಗಿ ಶ್ರುತಿ ಹೇಳಿದೆ. ಅದ್ವೈತಿಗಳೂ ಸಹ ರಸಶಬ್ದವನ್ನು ಬ್ರಹ್ಮಪರವೆಂದು ಒಪ್ಪಿದ್ದಾರೆ. ಹಾಗೆಯೇ ''ಸ ವಾ ಏಷ ಪುರುಷೋಽನ್ನರಸಮಯಃ'' ಎಂದು ಸನ್ನಿಹಿತದೇಹವನ್ನು ಪರಾಮರ್ಶ ಮಾಡಲು ಏತತ್ ಶಬ್ದ ಸಾಕು. ತತ್ ಶಬ್ದ ಬೇಡ. ಆದರೂ ಸಹ 'ಸ ವಾ' ಎಂದು ತತ್ ಶಬ್ದವನ್ನು ಶ್ರುತಿ ಹೇಳಿದೆ. ಇದರಿಂದ 'ಆತ್ಮನಃ ಆಕಾಶಃ ಸಂಭೂತಃ' ಎಂಬಲ್ಲಿ ಹೇಳಲ್ಪಟ್ಟ ಆಕಾಶಾದಿಕಾರಣನಾದ ಬ್ರಹ್ಮನ ಪರಾಮರ್ಶವು ಶ್ರುತಿಗೆ ಸಮ್ಮತವಾಗಿದೆ. ಆದ್ದರಿಂದ, ಸಃ = ಆಕಾಶಾದಿಕಾರಣನಾಗಿ ಹೇಳಲ್ಪಟ್ಟ ಈಶಃ = ಪುರುಷಶಬ್ದವಾಚ್ಯನಾದ ದೇಹಾಂತರ್ನಿಯಾಮಕನಾದ ಪ್ರಾದುರ್ಭೂತನಾದ ಭಗವಂತನು ಅನ್ನರಸಮಯನಾಗಿದ್ದಾನೆಂದು ಶ್ರುತಿಯ ಅರ್ಥ. ಆದ್ದರಿಂದ ಪ್ರಾಕೃತ ಅನ್ನಮಯವನ್ನು ವಿವಕ್ಷಿಸಲಾಗದೆಂದು ತಿಳಿಯುತ್ತದೆ.

'ಭೃಗುರ್ವೈ ವಾರುಣಿಃ' ಎಂದು ಪ್ರಾರಂಭವಾಗುವ ಭೃಗುವಲ್ಲಿಯಲ್ಲಿಯಲ್ಲಿರುವ ಅನ್ನಾದಿಗಳನ್ನೂ ಬ್ರಹ್ಮನೆಂದು ಹೇಳಬೇಕು. ಏಕೆಂದರೆ ''ಭಾರ್ಗವೀ ವಾರುಣೀ ವಿದ್ಯಾ ಪರಮೇ ವ್ಯೋಮನ್ ಪ್ರತಿಷ್ಠಿತಾ'' ಎಂದು ಬ್ರಹ್ಮಪರತ್ವವನ್ನು ಶ್ರುತಿಯೇ ಹೇಳುತ್ತಿದೆ. ಅಂದರೆ ಭೃಗು ಮತ್ತು ವರುಣನಿಗೆ ಸಂಬಂಧಪಟ್ಟ ವಿದ್ಯೆಯು ಪರಮೇ ವ್ಯೋಮನ್ = ಬ್ರಹ್ಮನಲ್ಲಿ ಪ್ರತಿಷ್ಠಿತವಾಗಿದೆ, ಅಂದರೆ ಬ್ರಹ್ಮವಿಷಯಕವಾಗಿದೆ. ಮತ್ತು ''ಅಧೀಹಿ ಭಗವೋ ಬ್ರಹ್ಮ'' ಎಂದು ಬ್ರಹ್ಮನ ಬಗ್ಗೆ ಪ್ರಶ್ನೆ ಇರುವುದರಿಂದ ಉತ್ತರವು ಬ್ರಹ್ಮನ ಬಗ್ಗೆಯೇ ಇರಬೇಕು. ಅಷ್ಟೇ ಅಲ್ಲದೆ ನಿಖರವಾಗಿ ''ಸ ತಪಸ್ತಪ್ತ್ವಾ ಅನ್ನಂ ಬ್ರಹ್ಮೇತಿ ವ್ಯಜಾನಾತ್'' ಎಂದು ಹೇಳಿದೆ. ಮೊದಲು ವರುಣನ ಮೂಲಕ ಅನ್ನವಿಷಯದಲ್ಲಿ ಶ್ರವಣ, ನಿದಿಧ್ಯಾಸನರೂಪವಾದ ತಪಸ್ಸು; ತನ್ಮೂಲಕವಾದ ಅನ್ನಾದಿಗಳ ಅಪರೋಕ್ಷವನ್ನು ಶ್ರುತಿ ಹೇಳಿದೆ. ಇದು ಪ್ರಾಕೃತ ಅನ್ನದಲ್ಲಿ ಕೂಡುವುದಿಲ್ಲ. ''ಅನ್ನಂ ಬ್ರಹ್ಮೇತಿ''ಎಂದು ಶ್ರುತಿಯು ಬ್ರಹ್ಮನನ್ನೇ ಹೇಳಿರುವಾಗ ಪುನಃ ಪ್ರಾಕೃತ ಅನ್ನಪರವಾಗಿ ಹೇಳುವುದು ತಪ್ಪಾಗುತ್ತದೆ. ''ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ'' ಇತ್ಯಾದಿಯಾಗಿ ಜಗಜ್ಜನ್ಮಾದಿಕಾರಣತ್ವವೆಂಬ ಬ್ರಹ್ಮನ ಲಕ್ಷಣವೂ ಅನ್ನಾದಿಗಳಲ್ಲಿ ಕೇಳಿಸುತ್ತಿದೆ. ಈ ಎಲ್ಲಾ ಕಾರಣಗಳಿಂದ ಉತ್ತರಾನುವಾಕದಲ್ಲಿ (ಭೃಗುವಲ್ಲಿಯಲ್ಲಿ) ಹೇಳಿದ ಅನ್ನಾದಿಗಳೆಲ್ಲವೂ ಬ್ರಹ್ಮನೆಂದೇ ನಿರ್ಣಯವಾಗುತ್ತದೆ. ಭೃಗುವಲ್ಲಿಯ ಸಮಾಖ್ಯಾದಿಂದ ಬ್ರಹ್ಮವಲ್ಲಿಯಲ್ಲಿ ಕೇಳಿಸುತ್ತಿರುವ ಅನ್ನಾದಿಗಳು ಬ್ರಹ್ಮನೇ ಆಗಬೇಕು.

ಪ್ರಶ್ನೆ - ಭೃಗುವಲ್ಲಿಯಲ್ಲಿ ಅನ್ನಾದಿಶಬ್ದಗಳಷ್ಟೇ ಶ್ರುತವಾಗಿವೆ. ಮಯಟ್ ಪ್ರತ್ಯಯವು ಶ್ರುತವಾಗಿಲ್ಲ. ಹೀಗೆ ಶಬ್ದಗಳು ಬೇರೆ ಬೇರೆಯಾದ್ದರಿಂದ ಅರ್ಥವೂ ಬೇರೆ ಬೇರೆಯಾಗಬೇಕಲ್ಲವೇ? ಹೀಗಿರುವಾಗ ಸಮಾಖ್ಯಾಪ್ರಮಾಣವನ್ನು ಹೇಗೆ ಹೇಳುತ್ತೀರಿ?

ಉತ್ತರ - ಹಾಗೇನಿಲ್ಲ. ಭೃಗುವಲ್ಲಿಯಲ್ಲಿಯೂ ಮಯಟ್‌ಪ್ರತ್ಯಯವು ಕೇಳಿಸುತ್ತಿದೆ. ''ಏತಮನ್ನಮಯಮಾತ್ಮಾನಮುಪಸಂಕ್ರಾಮತಿ''ಎಂಬಲ್ಲಿಂದ ಪ್ರಾರಂಭಿಸಿ ''ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ'' ಎಂಬಲ್ಲಿಯ ತನಕ ಮಯಟ್‌ಪ್ರತ್ಯಯವನ್ನು ಹೇಳಿದ್ದಾರೆ. ಭೃಗುವಲ್ಲಿಯ ಮಧ್ಯದಲ್ಲಿ ಈ ವಾಕ್ಯಗಳು ಕೇಳಿಸುತ್ತಿವೆ. ಕೊನೆಯಲ್ಲಿಯೂ ''ಏತಮನ್ನಮಯಮಾತ್ಮಾನಮುಪಸಂಕ್ರಮ್ಯ'' ಎಂದು ಪ್ರಾರಂಭವಾಗಿ ''ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ'' ಎಂಬಲ್ಲಿಯ ತನಕ ಉಪಸಂಕ್ರಮಣವು ಕೇಳಿಸುತ್ತಿದೆ. ಅಷ್ಟೇ ಅಲ್ಲದೆ ಬ್ರಹ್ಮವಲ್ಲಿಯಲ್ಲಿಯೂ ''ಅನ್ನಾದ್ವೈ ಪ್ರಜಾಃ ಪ್ರಜಾಯಂತೇ'' ಇತ್ಯಾದಿಯಾಗಿ ಮಯಟ್‌ಪ್ರತ್ಯಯವು ಕೇಳಿಸುತ್ತಿಲ್ಲ. ಈ ಎರಡು ಸ್ಥಳಗಳಲ್ಲಿ ಹೇಳಿದ ಅನ್ನಮಯಾದಿಗಳು ಬ್ರಹ್ಮನಾಗಲೇಬೇಕು. ಇಲ್ಲವಾದರೆ ''ಏತಮನ್ನಮಯಮಾತ್ಮಾನಮುಪ-ಸಂಕ್ರಾಮತಿ'' ಎಂಬ ಆತ್ಮಶಬ್ದಪ್ರಯೋಗವು ತಪ್ಪಾಗುತ್ತದೆ. 'ಉಪಸಂಕ್ರಾಮತಿ' ಎಂಬ ಮುಕ್ತಪ್ರಾಪ್ಯತ್ವವೂ ಸಹ ತಪ್ಪಾಗುತ್ತದೆ.

ಪ್ರಶ್ನೆ - 'ಉಪಸಂಕ್ರಮ್ಯ' ಇತ್ಯಾದಿ ಶಬ್ದಗಳಿಗೆ ಅತಿಕ್ರಮಣ ಎಂಬರ್ಥವನ್ನು ಹೇಳಿ ಅನ್ನಮಯಾದಿಕೋಶಗಳನ್ನು ದಾಟುತ್ತಾನೆಂಬ ಅರ್ಥವು ಸ್ವರಸವಲ್ಲವೇ?

ಉತ್ತರ - ಅವ್ಯಯಗಳಿಗೆ ಅನೇಕಾರ್ಥಗಳನ್ನು ಹೇಳುವುದು ತಪ್ಪಲ್ಲ. ಆದರೆ ಲೋಕಪ್ರಯೋಗವನ್ನು ಅನುಸರಿಸಿ ಅರ್ಥ ಹೇಳಬೇಕು. ಪ್ರಕೃತ ಅತಿಕ್ರಮಾಣಾರ್ಥದಲ್ಲಿ ಉಪಶಬ್ದದ ಪ್ರಯೋಗವು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ. ಲೋಕಪ್ರಯೋಗವನ್ನು ಅನುಸರಿಸದೆ ಅರ್ಥ ಹೇಳುವುದಾದಲ್ಲಿ ''ಅಂತಃ = ಒಳಗೆ'' ಎಂಬ ಅವ್ಯಯಕ್ಕೆ ''ಬಹಿಃ = ಹೊರಗೆ'' ಎಂಬರ್ಥವನ್ನು ಹೇಳಬೇಕಾದೀತು.

ಮತ್ತೊಂದು ಪ್ರಬಲ ಬಾಧಕ - ಕೋಶಪರವಾಗಿ ಅರ್ಥೈಸುವುದಾದರೆ ''ಅಸ್ಮಾಲ್ಲೋಕಾತ್ ಪ್ರೇತ್ಯ'' ಎಂಬ ವಾಕ್ಯದಿಂದಲೇ ಶರೀರವೆಂಬ ಅನ್ನಮಯಕೋಶದ ಅತಿಕ್ರಮಣವನ್ನು ಹೇಳಿದ್ದಾಯಿತು. ಪುನಃ ''ಅನ್ನಮಯಮಾತ್ಮಾನಮುಪಸಂಕ್ರಾಮತಿ'' ಎಂದು ಅನ್ನಮಯಕೋಶದ ತ್ಯಾಗವನ್ನೇ ಹೇಳುವುದು ಪುನರುಕ್ತವಲ್ಲವೇ?

**ಕಠಿಣಪದಾರ್ಥ -**

''ಅತ್ರಾವಶಿಷ್ಟಮ್'' ಉತ್ತರಪ್ರಸ್ಥಾನದಾವವಗಂತವ್ಯಂ ಎಂಬಲ್ಲಿ ಅನ್ವಯ. ಭಾರ್ಗವೀ = ಶ್ರೋತೃವಾದ ಭೃಗುವಿಗೆ ಸಂಬಂಧಿಸಿದ. ವಾರುಣಿ = ವಕ್ತೃವಾದ ವರುಣನಿಗೆ ಸಂಬಂಧಿಸಿದ. ವ್ಯೋಮನ್ = ವ್ಯೋಮನಿ = ಅಚ್ಛೇದ್ಯನಾದ ಭಗವಂತನಲ್ಲಿ, ಅಧೀಹಿ = ಉಪದೇಶಿಸು, ''ಅನ್ನಾದ್ಧ್ಯೇವ'' ಬ್ರಹ್ಮಲಕ್ಷಣಾ ಚ ಬ್ರಹ್ಮತ್ವಮುಪೇಯಮ್ ಎಂದು ಹಿಂದಕ್ಕೆ ಅನ್ವಯ, ತತ್ರ = ಭೃಗುವಲ್ಲಿಯಲ್ಲಿ, ''ತತ್ರಾಪಿ'' = ಉಪಸಂಹಾರೇ ಮಯಟ್‌ಶ್ರವಣಾತ್ ಎಂದು ಅನ್ವಯ, ತತ್ರಾಪಿ = ಮಧ್ಯದಲ್ಲಿ ಮತ್ತು ಕೊನೆಯಲ್ಲಿ, ತದುಕ್ತೌ = ದೇಹತ್ಯಾಗವನ್ನು ಹೇಳಿದರೆ.

**ಪರಿಪೂರ್ಣಚಂದ್ರಿಕಾ**

**प्रकाशः –**

ब्रह्मशब्दोदिते तस्मिन्नात्मशब्दं प्रयुज्य च ।
तस्मादाकाशसृष्टिं च प्रोवाचात्र चतुर्विधाम् ।।

इत्यादि,

इति तं रसशब्देन विशिनष्टि शरीरगम् ।।

इत्यन्तमनुव्याख्यानं हृदि कृत्वाऽऽह – **आत्मन इति** ।।

''आकाशस्सम्भूतः'' इत्यादेराकाशपदवाच्यं भूताकाश-तदभिमानि-तद्देह- तत् त्रितयान्तर्नियामकरूपचतुष्टयमात्मनः सम्भूतम्, तस्माच्चतुष्टयादाकाशाद् वायुशब्दितं चतुष्टयं सम्भूतमित्येवमर्थः । तत्र सम्भवो नाम हरेः प्रादुर्भावः. अभिमानिनोऽभिमानविशेषः, देहस्य भूतस्य च परिणाम इत्येवंरूपेणार्थस्याभिमतत्वात्, पुरुषपदेन च देहतदभिमानिजीवतन्नियामकानां विवक्षितत्वात् ''एष पुरुषः'' इति पुरुषपदमुख्यार्थस्य हरेरेव सन्निहितस्य परामर्शसम्भवादित्यर्थः । वक्ष्यते चैतत् ''कारणत्वेन चाकाशादिषु'' इत्यत्र पुरुषपदेन त्रितयनिर्देशेऽपि परमात्ममात्रपरामर्शः,

बहूनां सह निर्देश एकयाऽभिधयैव तु ।
तयैवाभिधया तेषां परामृश्यैकमुच्यते ।।

इति टीकास्थस्मृत्युक्तदिशा युज्यत इति भावः । 'परेणापि' इत्यस्य 'स्वीकृतेन रसशब्देनान्नरसमय इति विशेषणात्' इत्यन्वयः । ''भृगोश्चैतद् वदिष्यति'' इत्यनुव्याख्यां हृदि कृत्वा, अन्नमयादेर्ब्रह्मत्वे साधकान्तरमाह – **तथेति** ।। 'तत्समाख्यया चात्रापि अन्नमयादीनां ब्रह्मत्वम्' इत्यन्वयः ।। **भार्गवीति** ।। श्रोतृवक्तृतया भृगुवरुणसम्बन्धिनी । 'व्योमन्' । अच्छेद्यत्वादिना व्योम्नि भगवति, ''सुपां सुलुक्'' इति सप्तम्या लुकि ''न ङिसम्बुद्ध्योः'' इति नलोपाभावः ।

अधीहि भगवो ब्रह्मेत्युक्तोऽन्नप्राणपूर्वकम् ।

इत्यादि हृदि कृत्वाऽऽह – **अधीहीति** ।। अध्यापयेत्यर्थः । ''तपसैवापरोक्षितम्'' इत्यनुव्याख्यानोक्तमाह – **स तप इति** ।।

यतो भूतानि जायन्त इत्याद्यैर्लक्षणैस्स्वयम् ।
लक्षितं गुरुणा ।

इत्येतद्धृदि कृत्वाऽऽह – **अन्नाद्यैवेति** ।। 'ब्रह्मलक्षणाच्च ब्रह्मत्वमुपेयम्' इति पूर्वेणान्वयः । समाख्यात्वं साधयति – **नचेत्यादिना** ।। 'तत्र' भृगुवल्ल्याम् ।

प्राप्यत्वेन मयट्प्रोक्तेर्न तत्राप्यन्यदुच्यते ।

इत्यनुव्याख्यां हृदि कृत्वाऽऽह – **तत्रापीति** ।। 'उपसंहारे मयट्श्रवणात्' इत्यन्वयः । तदनुरोधेन प्राणादिष्वपि ग्राह्यत्वादिति भावः ।

अयमर्थः – 'अन्नरसमयः' इत्युपक्रमे मध्ये उपसंहारे च मयडन्तानां श्रवणादन्नादीनामन्नमयादित्वमुपेयमिति । उपक्रमे तु स्पष्टम् । मध्ये उपसंहारे च दर्शयति – **एतमन्नमयमिति** ।। 'आदौ' 'अन्ते' इति बहुव्रीहिः पञ्चानामपि ग्रहणाय । यथा भृगुवल्ल्या अन्नमयादेरेव श्रवणं, तथा ब्रह्मवल्ल्यामप्यन्नमयादीन् प्रत्युदाहृतश्लोकेषु अन्नादेरेव श्रवणात् तस्याप्यन्नमयादितोऽन्यत्वप्रसङ्गः, तत्र मयट्परिकल्पनेनानन्यत्वे अत्रापि सममिति भावेनाह – **अत्रापि** । ब्रह्मवल्ल्यामपीति ।।

ननु मध्ये उपसंहारे च मयडन्ततया श्रुतानां अब्रह्मत्वात्, कथं तदनुरोधेनान्नादीनामन्नमयादित्वमुक्त्वा ब्रह्मत्वमुच्यते इत्यतः, ''प्राप्यत्वेन'' इति वाक्ये 'तत्रापि' इत्यस्य प्राप्यस्थानेऽपीत्यर्थमुपेत्याह – **तत्रापीति** ।। मध्ये उपसंहारे चेत्यर्थः । आत्मशब्दस्य ''स्वशब्दात्'' इत्यत्र ब्रह्मनिष्ठताया वक्ष्यमाणत्वादिति भावः ।

योगमन्नमयाद्यैर्यत्फलत्वेनास्य शंसति ।

इत्यनुव्याख्यानोक्तमाह – **मुक्तप्राप्यत्वस्येति** ।। ''स य एवं विदस्माल्लोकात्प्रेत्य'' इति पूर्ववाक्ये ज्ञानेन लोकशब्दितदेहादुत्तीर्णेन मुक्तेन 'उपसङ्क्रामति, उपसङ्क्रम्य'' इति च प्राप्यत्वश्रवणेन तदयोगादित्यर्थः । नन्वव्ययानामनेकार्थत्वात् 'उपसङ्क्रम्य' इत्यस्यातिक्रम्येत्यर्थोपपत्त्या तेषां कोशत्वेऽपि नानुपपत्तिरित्यतः,

अतिक्रमं वदन्तं तमुपशब्दो निवारयेत् ।
इत्याद्यनुव्याख्याऽभिमतमाह – **नचेति** ।।

मृतावेव परित्यागः कृतो ह्यन्नमयस्य च ।

इत्युक्तं दोषान्तरमाह – **अस्मादिति** ।। 'तदुक्तौ' देहत्यागोक्तौ ।

**गुरुराजीयम्** – नन्वन्नमयादीनां ब्रह्मत्वे स वा एष इति परामर्शास्वारस्यम् । सन्निहितान्नविकारपुरुषशब्दवाच्यशरीरपरामर्शं विहाय व्यवहितात्मपरामर्शकत्वाङ्गीकारादित्यत आह – **अत्रावशिष्टमिति** ।। अत्रावशिष्टमुत्तरप्रस्थानादवगन्तव्यमित्यन्वयः । एतच्च सविस्तरमुक्तमुत्तरप्रस्थान इति टीकां वा व्याचष्टे । अत्रावशिष्टमित्यादिनोत्तरप्रस्थानादवगन्तव्यमित्यन्तेन । अस्तु वात्मनो व्यवहितत्वम् । तथापि तत्परामर्श एव युक्तः तच्छब्दैतच्छब्दबलादित्याह – **तथेति** ।।

ननु तच्छब्दस्यान्यवहितपरामर्शकत्वमेव किं न स्यादित्यत उक्तम् – **सन्निहितपरामर्शस्येति** ।। अन्यथैतच्छब्दो व्यर्थ इति भावः । एवं बाधकाभावात् साधकसद्भावाच्चान्नमयादीनां ब्रह्मत्वमित्युक्तम् । इदानीं न केवलं ब्रह्मशब्दमात्रेण तेषां ब्रह्मत्वमपि तूत्तरानुवाकसमाख्ययापीत्याह – **तथेति** ।। ननु सत्यमुत्तरानुवाकोक्तान्नादीनां ब्रह्मत्वे तत्समाख्यानादेषां ब्रह्मत्वं वक्तव्यम् । तदेव नास्ति । तथा च निर्णीतस्थले समानोक्तेरेव समाख्यत्वेन प्रकृते तदभावादित्यत आह – **भृगुर्वा इति** ।। नन्वस्त्वन्नमयादीनां ब्रह्मत्वम् । समाख्या तु न युक्ता । तत्रान्नादीनामेव श्रुतत्वेन मयटोऽश्रुतत्वेन समानोक्तेरेवाभावादित्याशङ्क्य निराकरोति – **नचेति** ।। समाख्यात्वमाक्षिप्य संमतौ समाख्योक्ता । विमतौ त्वेकमेव स्थानं नार्थभेदकल्पनमर्हति । शन्नोमित्रादिभिर्वाक्यैर्मुक्तगीतावसानकैरिति वचनादित्यभिप्रेत्य मयट्श्रवणाश्रवणयोरप्रयोजकत्वं तावदविशेषोक्तयोपपादयति – **तत्रापीत्यादिना** ।।

मुक्तप्राप्यत्वोपक्रमोपसंहारकप्रमाणप्रस्तुतनिर्णेतव्योत्तरभागत्वात् तत्रेति परामृश्यत इति ज्ञेयम् । तथापि भृगुवल्ल्यामादौ नान्नमयादीनां श्रवणमित्यत आह – **अत्रापीति** ।। आदावश्रवणमुभयत्रापि तुल्यमिति भावः।

ननु तर्ह्युभयत्रापि न ब्रह्मपरत्वम् । किन्तु कोशपरत्वमेवेत्यत आह – **उभयत्रापीति** ।। अत्रापीति क्वचित्पाठः । अत्रापि ब्रह्मवल्लीभृगुवल्ल्योरित्यर्थः ।

ವಿವರಣೆ - ಅದ್ವೈತಿಗಳು ಹೇಳಿದ ಬಾಧಕಗಳಲ್ಲಿ ಕೆಲವಷ್ಟೆ ಪರಿಹಾರವಾಗುತ್ತವೆ ಹೊರತು ಎಲ್ಲವೂ ಪರಿಹಾರವಾಗುವುದಿಲ್ಲ. ಅನ್ನಮಯಾದಿಗಳನ್ನು ಬ್ರಹ್ಮನೆಂದರೆ ಅನುಪಪತ್ತಿ ಇದ್ದೇ ಇದೆ. ಅದು ಹೀಗೆ -

''ಓಷಧೀಭ್ಯೋಽನ್ನಂ ಅನ್ನಾತ್ಪುರುಷಃ'' ಎಂದು ಓಷಧಿಕಾರ್ಯವಾಗಿರುವ ಅನ್ನವಿಕಾರವೆನಿಸಿದ ದೇಹವನ್ನು ಪುರುಷಪದದದಿಂದ ಹೇಳಲಾಗಿದೆ. ಆ ದೇಹವನ್ನೇ ''ಸ ವಾ ಏಷ ಪುರುಷಃ'' ಎಂದು ತತ್ ಪದದಿಂದ ಪರಾಮರ್ಶಿಸಲಾಗಿದೆ. ಹೀಗೆ ಪರಾಮರ್ಶಿಸಿ 'ಅನ್ನರಸಮಯಃ' ಎಂದು ಪ್ರಕೃತವಾದ ಅನ್ನಮಯತ್ವವು ಹೇಳಲ್ಪಟ್ಟಿದೆ. ಇದು ಈಶ್ವರನಲ್ಲಿ ಕೂಡುವುದಿಲ್ಲ. ''ಆತ್ಮನ ಆಕಾಶಃ ಸಂಭೂತಃ'' ಎಂಬಲ್ಲಿರುವ ಆತ್ಮನನ್ನು ಪರಾಮರ್ಶಿಸುತ್ತೇವೆಂದು ಹೇಳಬಾರದು. ಪೂರ್ವಪ್ರಸಕ್ತವಾದದ್ದನ್ನೇ ಪರಾಮರ್ಶಿಸಲು ಬರುವಾಗ ವ್ಯವಹಿತವಾದದ್ದರ ಅನ್ವಯ ಕೂಡುವುದಿಲ್ಲ. ಮತ್ತು ಭೃಗುವಲ್ಲಿ ಹೇಳಿದ ಅನ್ನಾದಿಗಳು ಬ್ರಹ್ಮವೆನ್ನಲು ವಿಶೇಷಕಾರಣವಿಲ್ಲ. ಅಲ್ಲಿ ಮಯಟ್‌ಪ್ರತ್ಯಯವು ಕೇಳಿಸದೇ ಇರುವುದರಿಂದ ಅನ್ನಮಯಾದಿಗಳಿಂದ ಭಿನ್ನವೆಂಬ ಪ್ರತೀತಿಯೇ ಬರುತ್ತದೆ. ಒಂದು ವೇಳೆ ಅನ್ನಾದಿಗಳು ಬ್ರಹ್ಮವಾದಲ್ಲಿ ಅನ್ನಾದಿಗಳನ್ನು ತಿಳಿದ ಮೇಲೆ ''ತದ್ವಿಜ್ಞಾಯ ಪುನರೇವ ವರುಣಂ ಉಪಸಸಾರ'' ಎಂದು ಪುನಃ ಪುನಃ ವರುಣನ ಉಪಸತ್ತಿಗೆ ಅರ್ಥವೇ ಇಲ್ಲವಾಗುತ್ತದೆ. ಹೀಗೆ ಹಲವುವಿಧವಾದ ಬಾಧಕಗಳು ಹಾಗೇ ಉಳಿಯುತ್ತವೆ. ಇವುಗಳಲ್ಲಿ ಕೆಲವು ಬಾಧಕಗಳನ್ನು ಪ್ರಕೃತ ಗ್ರಂಥಕಾರರು ಪರಿಹರಿಸುತ್ತಿದ್ದಾರೆ. ಮತ್ತು ''ಯದವಾದಿ ಸ ವಾ ಏಷ ಇತ್ಯನ್ಯಪರಾಮರ್ಶೋ ನಾನ್ನಾತ್ ಪುರುಷ ಇತ್ಯುಕ್ತಪರಾಮರ್ಶಃ'' ಇತ್ಯಾದಿ ಟೀಕೆಯನ್ನು ವಿವರಿಸುವುದಕ್ಕಾಗಿಯೂ ''ಅತ್ರಾವಶಿಷ್ಟಮಿತಿ'' ಇತ್ಯಾದಿ ಗ್ರಂಥವು ಹೊರಟಿದೆ.

'ಅತ್ರಾವಶಿಷ್ಟಮ್' ಎಂಬುದಕ್ಕೆ ಮುಂದಿನ ಮೂಲದಲ್ಲಿರುವ ''ಉತ್ತರಪ್ರಸ್ಥಾನಾದಾವಗಂತವ್ಯಂ'' ಎಂಬಲ್ಲಿ ಅನ್ವಯ ಮಾಡಬೇಕು.

''ಆತ್ಮನಃ ಆಕಾಶ ಸಂಭೂತಃ'' ಇತ್ಯಾದಿವಾಕ್ಯಗಳಿಂದ ಕೇವಲ ಆಕಾಶಾದಿಗಳ ಉತ್ಪತ್ತಿಯನ್ನಷ್ಟೇ ಹೇಳುತ್ತಿಲ್ಲ. ''ಭೂತಂ ಭೂತಾಭಿಮಾನೀ ಚ ತದ್ದೇಹೋಂತರ್ನಿಯಾಮಕಃ'' ಎಂಬಂತೆ ಭಗವಂತನ ಪ್ರಾದುರ್ಭಾವವು ಹೇಳಲ್ಪಟ್ಟಿದೆ. ಹೀಗೆ ಎಲ್ಲೆಡೆ ಭಗವಂತನು ಪ್ರಸಕ್ತನಾಗಿರುವುದರಿಂದ ''ಸ ವಾ ಏಷ ಪುರುಷೋಽನ್ನರಸಮಯಃ'' ಎಂಬಲ್ಲಿ ಭಗವಂತನನ್ನು ಪರಾಮರ್ಶಿಸುವುದೇ ಸ್ವರಸ. ಈ ವಿಷಯವನ್ನು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

ಬ್ರಹ್ಮಶಬ್ದೋದಿತೇ ತಸ್ಮಿನ್ನಾತ್ಮಶಬ್ದಂ ಪ್ರಯುಜ್ಯ ಚ ।
ತಸ್ಮಾದಾಕಾಶಸೃಷ್ಟಿಂ ಚ ಪ್ರೋವಾಚಾತ್ರ ಚತುರ್ವಿಧಾಮ್ ॥

''ಸತ್ಯಂ ಜ್ಞಾನಮನಂತಂ ಬ್ರಹ್ಮ'' ಎಂಬಲ್ಲಿ ಬ್ರಹ್ಮಶಬ್ದದಿಂದ ಯಾರು ಪ್ರತಿಪಾದ್ಯನೋ ಅವನಲ್ಲೇ ಆತ್ಮಶಬ್ದವನ್ನು ಹೇಳಿದ್ದಾರೆ. ಆದ್ದರಿಂದ ಮುಂದೆ ನಾಲ್ಕುವಿಧವಾದ ಆಕಾಶಾದಿಸೃಷ್ಟಿಯನ್ನು ಹೇಳಿದ್ದಾರೆ. ಈ ಅನುವ್ಯಾಖ್ಯಾನದ ಶ್ಲೋಕದಿಂದ ಆರಂಭಿಸಿ ''ಇತಿ ತಂ ರಸಶಬ್ದೇನ ವಿಶಿನಷ್ಟಿ ಶರೀರಗಂ'' ಎಂಬ ಅನುವ್ಯಾಖ್ಯಾನ ಶ್ಲೋಕದ ತನಕ ಆತ್ಮನಃ ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

ಅಂದರೆ ಆಕಾಶಃ ಸಂಭೂತಃ ಎಂದು ಹೇಳಿದಾಗ ಆಕಾಶಪದವಾಚ್ಯವಾದದ್ದು ಒಟ್ಟು ನಾಲ್ಕು. ೧) ಭೂತಾಕಾಶ ೨) ಭೂತಾಕಾಶದ ಅಭಿಮಾನಿದೇವತೆ ೩) ಅಭಿಮಾನಿದೇವತೆಯ ದೇಹ, ೪) ಈ ಮೂರಕ್ಕೂ ನಿಯಾಮಕವಾದ ಭಗವಂತನರೂಪ, ಆಕಾಶಶಬ್ದಪ್ರತಿಪಾದ್ಯವಾದ ಈ ನಾಲ್ಕರಿಂದ ವಾಯುಶಬ್ದಪ್ರತಿಪಾದ್ಯವಾದ ನಾಲ್ಕು ಹುಟ್ಟಿದವು, ಎಂದು ಉಪನಿಷತ್ತು ಹೇಳುತ್ತಿದೆ.

ಇಲ್ಲಿ ಸಂಭವಶಬ್ದವು ಒಂದೊಂದರಲ್ಲಿ ಒಂದೊಂದು ಬಗೆಯ ಉತ್ಪತ್ತಿಯನ್ನು ಹೇಳುತ್ತಿದೆ - ಭಗವಂತನಲ್ಲಿ ಪ್ರಾರ್ದುಭಾವರೂಪವಾದ ಅಭಿಮಾನಿದೇವತೆಗೆ ದೇಹದ ಮೇಲಿನ ಅಭಿಮಾನರೂಪವಾದ, ದೇಹಕ್ಕೆ ಮತ್ತು ಆಕಾಶಾದಿಭೂತಗಳಿಗೆ ಪರಿಣಾಮರೂಪವಾದ ಉತ್ಪತ್ತಿಯನ್ನು ತಿಳಿಯಬೇಕು. ಆದರೆ ಪುರುಷಪದವು ಮೂರನ್ನಷ್ಟೇ ಹೇಳುತ್ತದೆ - ಪುರುಷದೇಹ, ದೇಹದ ಅಭಿಮಾನಿಯಾದ ಜೀವ, ಜೀವನಿಯಾಮಕನಾದ ಶ್ರೀಹರಿ, ಎಂದು. ಈ ಮೂರರಲ್ಲಿ ಪುರುಷಪದದ ಮುಖ್ಯನಾದವನು ಶ್ರೀಹರಿಯೇ ಆಗಿದ್ದಾನೆ. ಶ್ರೀಹರಿಯೇ ಸನ್ನಿಹಿತನೂ ಆಗಿದ್ದಾನೆ. ಆದ್ದರಿಂದ ಶ್ರೀಹರಿಯ ಪರಾಮರ್ಶವೇ ಅತ್ಯಂತ ಸಮಂಜಸವಾಗಿದೆ. ''ಕಾರಣತ್ವೇನ ಚಾಕಾಶಾದಿಷು'' ಎಂಬ ನಾಲ್ಕನೇ ಪಾದದ ಸೂತ್ರದಲ್ಲಿ ಹೆಚ್ಚಿನ ಮಾಹಿತಿ ಸಿಗುತ್ತದೆ.

ಪುರುಷಪದದಿಂದ ಮೂರನ್ನು ವಿವಕ್ಷಿಸಿ ಒಂದನ್ನಷ್ಟೇ ಹೇಗೆ ಸ್ವಿಕರಿಸುವುದು ಮೂರನ್ನೂ ಸ್ವೀಕರಿಸಬೇಕಲ್ಲವೇ? ಎಂಬ ಪ್ರಶ್ನೆಗೆ ಟೀಕೆಯಲ್ಲಿ ಉದಾಹರಿಸಿದ ಸ್ಮೃತಿಯೇ ಉತ್ತರವಾಗಿದೆ.

ಬಹೂನಾಂ ಸಹ ನಿರ್ದೇಶ ಏಕಯಾಽಭಿಧಯೈವ ತು ।
ತಯೈವಾಭಿಧಯಾ ತೇಷಾಂ ಪರಾಮೃಶ್ಯೈಕಮುಚ್ಯತೇ ॥

ಒಂದೇ ಶಬ್ದದಿಂದ ಅನೇಕಾರ್ಥಗಳನ್ನು ನಿರ್ದೇಶಿಸಿದ್ದರೂ ಒಂದು ಅರ್ಥವನ್ನು ಪರಾಮರ್ಶಿಸುವುದು ಕಂಡಿದೆ, ಎಂದು. ''ಭೃಗೋಶ್ಚೈತದ್ ವದಿಷ್ಯತಿ'' ಎಂಬ ಅನುವ್ಯಾಖ್ಯಾನವನ್ನು ಮನಸ್ಸಿನಲ್ಲಿಟ್ಟುಕೊಂಡು ಅನ್ನಮಯಾದಿಗಳು ಬ್ರಹ್ಮ ಎನ್ನಲು ಮತ್ತೊಂದು ಸಾಧಕವನ್ನು ಹೇಳುತ್ತಿದ್ದಾರೆ 'ತಥಾ' ಇತ್ಯಾದಿ ಗ್ರಂಥದಿಂದ.

''ವ್ಯೋಮನ್'' ಎಂಬ ಪದವು ''ವ್ಯೋಮನಿ'' ಎಂಬ ಸಪ್ತಮ್ಯರ್ಥದಲ್ಲಿದೆ. ವಸ್ತುತಸ್ತು ಉಪನಿಷತ್ತಿನಲ್ಲಿ ''ಪರಮೇ ವ್ಯೋಮನಿ'' ಎಂದು ಇರಬೇಕಿತ್ತು. ಆದರೆ ''ಸುಪಾಂ ಸು ಲುಕ್'' ಇತ್ಯಾದಿ ಸೂತ್ರದಿಂದ ಸಪ್ತಮೀ ವಿಭಕ್ತಿಯು ಲುಕ್ ಆಗಿದ್ದರಿಂದ ವ್ಯೋಮನ್ ಎಂದಾಗಿದೆ. ವ್ಯಾಕರಣದ ಪ್ರಕಾರ ''ನಲೋಪಃ ಪ್ರಾತಿಪದಿಕಾಂತಸ್ಯ'' ಎಂಬ ಸೂತ್ರದಿಂದ ಪ್ರಾತಿಪದಿಕದ ಕೊನೆಯಲ್ಲಿರುವ ನಕಾರಕ್ಕೆ ಲೋಪವಾಗಬೇಕು. ಆದರೆ ''ನಙಿ ಸಂಬುದ್ಧ್ಯೋಃ'' ನಙಿ ಮತ್ತು ಸಂಬುದ್ಧಿಗಳು ಪರದಲ್ಲಿದಾಗ ನಲೋಪವನ್ನು ಸೂತ್ರವು ನಿಷೇಧಿಸಿದೆ. ಪ್ರಕೃತ ವ್ಯೋಮನ್ ಎಂಬಲ್ಲಿ 'ನಙಿ' ಪ್ರತ್ಯಯವು ಪರದಲ್ಲಿರುವುದರಿಂದ ನಲೋಪವಾಗಿಲ್ಲ. ವ್ಯೋಮನ್ ಎಂಬ ಉಪನಿಷತ್ತಿನ ಪ್ರಯೋಗವು ಸಾಧುವೇ ಆಗಿದೆ.

''ಅಧೀಹಿ ಭಗವೋ ಬ್ರಹ್ಮೇತ್ಯುಕ್ತೋನ್ನಪ್ರಾಣಪೂರ್ವಕಮ್'' ಎಂಬ ಅನುವ್ಯಾಖ್ಯಾನವನ್ನು 'ಅಧೀಹಿ' ಇತ್ಯಾದಿಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ''ತಪಸೈವಾಪರೋಕ್ಷಿತಮ್'' ಇತ್ಯಾದಿ ಅನುವ್ಯಾಖ್ಯಾನವನ್ನು ''ಸ ತಪಃ'' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ''ಯತೋ ಭೂತಾನಿ ಜಾಯಂತೇ ಇತ್ಯಾದ್ಯೈರ್ಲಕ್ಷಣೈಃ ಸ್ವಯಮ್ ಲಕ್ಷಿತಮ್ ಗುರುಣಾ''ಇತ್ಯಾದಿ ಅನುವ್ಯಾಖ್ಯಾನವನ್ನು ''ಅನ್ನಾದ್ಧ್ಯೇವ'' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಸಮಾಖ್ಯಾಪ್ರಮಾಣವನ್ನು ''ನಚ'' ಇತ್ಯಾದಿವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ''ಪ್ರಾಪ್ಯತ್ವೇನ ಮಯಟ್‌ಪ್ರೋಕ್ತೇರ್ನ ತತ್ರಾಪ್ಯನ್ಯದುಚ್ಯತೇ'' ಮುಕ್ತಪ್ರಾಪ್ಯತ್ವಲಿಂಗದಿಂದ ಮಯಟ್‌ಪ್ರತ್ಯಯವನ್ನೇ ಹೇಳಿದ್ದಾರೆ. ಆದ್ದರಿಂದ ಬೇರೆಯವರು ವಾಚ್ಯರಾಗುವುದಿಲ್ಲ ಎಂಬ ಅನು-ವ್ಯಾಖ್ಯಾನವನ್ನು ಮನಸ್ಸಿನಲ್ಲಿಟ್ಟುಕೊಂಡು ''ತತ್ರಾಪಿ'' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

*ಆನಂದಮಯಾಧಿಕರಣ*

ಇಷ್ಟು ಅಭಿಪ್ರಾಯ - ಅನ್ನರಸಮಯ ಎಂಬ ಉಪಕ್ರಮದಲ್ಲಿ ಮತ್ತು ಮಧ್ಯದಲ್ಲಿ ಉಪಸಂಹಾರದಲ್ಲೂ ಸಹ ಮಯಡಂತವಾದ ಶಬ್ದಗಳು ಕೇಳಿಸುತ್ತಿರುವುದರಿಂದ ಅನ್ನಾದಿಗಳನ್ನೂ ಕೂಡ ಅನ್ನಮಯಾದಿಗಳೆಂದು ಅಂಗೀಕರಿಸಬೇಕು. ಉಪಕ್ರಮದಲ್ಲಿ ಮಯಟ್‌ಪ್ರತ್ಯಯವು ಸ್ಪಷ್ಟವಾಗಿ ಕೇಳಿಸುತ್ತಿದೆ. ಆದರೆ ಮಧ್ಯದಲ್ಲಿ ಮತ್ತು ಕೊನೆಯಲ್ಲಿ ಸ್ಪಷ್ಟವಾಗಿ ಮಯಟ್‌ಪ್ರತ್ಯಯವು ಕೇಳಿಸದಿರುವುದರಿಂದ ''ಏತಮನ್ನಮಯಮ್'' ಎಂದು ಗ್ರಂಥಕಾರರು ಸ್ಪಷ್ಟಪಡಿಸುತ್ತಿದ್ದಾರೆ.

''ಆದಾವಂತೇ'' ಎಂಬುದು ಬಹುವ್ರಿಹೀಸಮಾಸ. ಅನ್ನಮಯವೇ ಆದಿಯಾಗಿವುಳ್ಳದ್ದು ಆನಂದ-ಮಯವೇ ಕೊನೆಯಾಗಿವುಳ್ಳದ್ದು ಎಂದು ಅರ್ಥ. ಇದರಿಂದ ಐದರ ಸಂಗ್ರಹವಾಗುತ್ತದೆ. ಯಾವರೀತಿಯಾಗಿ ಭೃಗುವಲ್ಲಿಯಲ್ಲಿ ಅನ್ನಾದಿಶಬ್ದಗಳು ಕೇಳಿಸುತ್ತಿವೆಯೋ; ಅದರಂತೆ ಬ್ರಹ್ಮವಲ್ಲಿಯಲ್ಲಿಯೂ ಅನ್ನಮಯಾದಿ-ಗಳನ್ನು ಕುರಿತು ಉದಾಹರಿಸಿರುವ ಶ್ಲೋಕಗಳಲ್ಲಿ ಅನ್ನಾದಿಗಳೇ ಕೇಳಿಸುತ್ತವೆ. ಈ ಅನ್ನಾದಿಗಳೂ ಸಹ ಅನ್ನಾದಿಮಯಾದಿಗಳಿಗಿಂತ ಭಿನ್ನವಾಗಬೇಕಾದೀತು. ಬ್ರಹ್ಮವಲ್ಲಿಯಲ್ಲಿರುವ ಅನ್ನಾದಿಶಬ್ದಗಳಲ್ಲಿ ಮಯಟ್ ಪ್ರತ್ಯಯವನ್ನು ಪರಿಕಲ್ಪಿಸಿ ಅನ್ನಮಯಾದಿಗಳಿಗಿಂತ ಐಕ್ಯವನ್ನು ವಿವಕ್ಷಿಸಿದರೆ ಭೃಗುವಲ್ಲಿಯಲ್ಲಿರುವ ಅನ್ನಾದಿಗಳು ಅನ್ನಮಯಾದಿಗಳನ್ನೇ ಹೇಳುತ್ತಿವೆಂದು ನಿರ್ಣಯವಾಗುತ್ತದೆ.

ಮಧ್ಯದಲ್ಲಿ ಹಾಗು ಕೊನೆಯಲ್ಲಿ ಕೇಳಿಸಲ್ಪಟ್ಟ ಮಯಡಂತಶಬ್ದಗಳೂ ಸಹ ಬ್ರಹ್ಮನನ್ನು ಹೇಳುತ್ತಿಲ್ಲ. ಹೀಗಿರುವಾಗ ಇದರ ಸಮಾಖ್ಯಾದಿಂದ ಅನ್ನಾದಿಶಬ್ದಗಳು ಅನ್ನಮಯಾದಿಗಳನ್ನು ಹೇಳಿ ಬ್ರಹ್ಮತ್ವವನ್ನು ಸಮರ್ಥಿಸುತ್ತವೆಂಬುದು ಹೇಗೆ ಸರಿಯಾಗುತ್ತದೆ? ಈ ಪ್ರಶ್ನೆಗೆ ''ತತ್ರಾಪಿ'' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಮಧ್ಯದಲ್ಲಿ ಮತ್ತು ಕೊನೆಯಲ್ಲಿ ಮುಕ್ತಪ್ರಾಪ್ಯತ್ವಲಿಂಗವು ಸ್ಪಷ್ಟವಾಗಿರುವುದರಿಂದ ಕೋಶಾದಿಪರವಾಗಿ ಅರ್ಥೈಸಲು ಸಾಧ್ಯವೇ ಇಲ್ಲ. ಆತ್ಮಶಬ್ದ ಮೊದಲಾದ ಇತರಶಬ್ದಗಳ ಆಧಾರದಿಂದಲೂ ಬ್ರಹ್ಮನೇ ಅನ್ನಮಯಾದಿಶಬ್ದಗಳಿಂದ ಪ್ರತಿಪಾದ್ಯನೆಂದು ಸ್ಪಷ್ಟವಾಗುತ್ತದೆ.

''ಯೋಗಮನ್ನಮಯಾದ್ಯೈರ್ಯತ್ಫಲತ್ವೇನಾಸ್ಯ ಶಂಸತಿ'' ಎಂಬುದಾಗಿ ಅನ್ನಮಯಾದಿಗಳನ್ನು ಜ್ಞಾನದ ಫಲವೆಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಇದು ಕೋಶಾದಿಗಳಲ್ಲಿ ಕೂಡುವುದಿಲ್ಲವೆಂದು ''ಮುಕ್ತಪ್ರಾಪ್ಯತ್ವಸ್ಯ'' ಎಂಬ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. ''ಸ ಯ ಏವಂ ವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ'' ಎಂದು ಜ್ಞಾನವನ್ನು ಹೊಂದಿ ಲೋಕವನಿಸಿದ ದೇಹವನ್ನು ದಾಟಿದ ಮುಕ್ತನಿಂದ ''ಉಪಸಂಕ್ರಾಮತಿ'' ''ಉಪಸಂಕ್ರಮ್ಯ'' ಎಂದು ಪ್ರಾಪ್ಯತ್ವವನ್ನು ಶ್ರುತಿ ಸ್ಪಷ್ಟವಾಗಿ ಹೇಳುತ್ತಿದೆ. ಇದು ಕೋಶಾದಿಗಳಲ್ಲಿ ಖಚಿತವಾಗಿ ಕೂಡುವುದಿಲ್ಲ. ಅವ್ಯಯಗಳಿಗೆ ಅನೇಕಾರ್ಥ ಹೇಳುವುದು ತಪ್ಪಲ್ಲ. ಉಪಸಂಕ್ರಮ್ಯ ಎಂದರೆ ಅತಿಕ್ರಮಣ ಎಂಬರ್ಥವನ್ನು ಹೇಳಬಹುದು. ಈ ಅರ್ಥವು ಕೋಶಾದಿಗಳಲ್ಲಿ ಸಿದ್ಧವಾಗಿದೆಯಲ್ಲ? ಎಂಬ ಪ್ರಶ್ನೆ ಬಂದರೆ ''ಅತಿಕ್ರಮಂ ವದಂತಂ ತಮುಪಶಬ್ದೋ ನಿವಾರಯೇತ್'' ಎಂಬ ಅನುವ್ಯಾಖ್ಯಾನಕ್ಕೆ ಸಮ್ಮತವಾದ ಉತ್ತರವನ್ನು 'ನಚ' ಇತ್ಯಾದಿವಾಕ್ಯದಿಂದ ಉತ್ತರ ನೀಡುತ್ತಿದ್ದಾರೆ. ''ಮೃತಾವೇವ ಪರಿತ್ಯಾಗಃ ಕೃತೋ ಹ್ಯನ್ನಮಯಸ್ಯ ಚ'' ಎಂಬಂತೆ ಹಿಂದೆ ಪ್ರಸಕ್ತವಾದ ಪ್ರೇತ್ಯಶಬ್ದದಿಂದಲೇ ಅನ್ನಮಯಕೋಶದ ಅತಿಕ್ರಮಣವನ್ನು ಹೇಳಿದ್ದಾಯಿತು. ಪುನಃ ಉಪಸಂಕ್ರಾಮತಿ ಎಂಬ ವಾಕ್ಯದಿಂದ ಅತಿಕ್ರಮಣವನ್ನೇ ಹೇಳಿದರೆ ಪುನರುಕ್ತಿ ಬರುತ್ತದೆ ಎಂದು ಮತ್ತೊಂದು ದೋಷವನ್ನು 'ಅಸ್ಮಾತ್' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

*ಪರಿಪೂರ್ಣಚಂದ್ರಿಕಾ*



ಸಾರ

'ಆತ್ಮನ ಆಕಾಶಃ ಸಂಭೂತಃ' ಎಂದು ಪರಮಾತ್ಮನಿಂದ ಆಕಾಶದ ಸೃಷ್ಟಿ ಎಂದು ಹೇಳಿದ್ದಾರೆ. ಎಲ್ಲ ಪದಾರ್ಥಗಳ ಹುಟ್ಟಿನಲ್ಲಿ. ಆ ಪದಾರ್ಥಗಳ ಒಳಗೆ ಪರಮಾತ್ಮನ ಆವಿರ್ಭಾವವೂ, ಅವುಗಳ ನಿಯಂತ್ರಣಕ್ಕಾಗಿ. ಆದರಿಂದ 'ಪುರುಷ' ಎಂಬ ಪರಮಾತ್ಮನ ಹುಟ್ಟಿನ ಗುಟ್ಟನ್ನು ಹೇಳಿದಂತಾಯಿತು. ವರುಣ ಹೇಳಿದ, ಭೃಗು ಕೇಳಿ ಸಾಕ್ಷಾತ್ಕರಿಸಿಕೊಂಡ ಈ ವಿದ್ಯೆ ಬ್ರಹ್ಮನನ್ನು ಪ್ರತಿಪಾದಿಸುತ್ತದೆ ಎಂದು ಸ್ವಯಂ ವೇದವೇ ಹೇಳಿದೆ. 'ಅನ್ನಂ ಬ್ರಹ್ಮ' ಎಂದೂ ವೇದದ್ದೇ ಮಾತು. 'ಅನ್ನವೇ ಎಲ್ಲ ಜೀವಜಾತಗಳನ್ನು ಸೃಷ್ಟಿಸುತ್ತದೆ' ಎಂಬ ಮಾತು ಆಲಂಕಾರಿಕವಾಗಬೇಕಿಲ್ಲ. 'ಅನ್ನ ಎಂದರೆ ಬ್ರಹ್ಮ'ವೆಂದು ತಿಳಿಯಬೇಕು ಎಂದಿರುವುದರಿಂದ. 'ಏತವ ಽನ್ನಮಯಮಾತ್ಮಾನಮುಪಸಂಕ್ರಾಮತಿ' 'ಮುಕ್ತನು ಅನ್ನಮಯನ ಬಳಿ ಸಾಗುತ್ತಾನೆ ಎಂದು ವೇದ ವಾಣಿ. 'ಉಪ' ಎನ್ನುವ ಶಬ್ದಕ್ಕೆ 'ದಾಟಿ' ಎನ್ನುವ ಅರ್ಥ ಸಾಹಿತ್ಯದ ಯಾವ ಪ್ರಕಾರದಲ್ಲಿಯೂ ಇಲ್ಲ.



## ಇಲ್ಲಿ ಮಾಡಿದ ಅದ್ವೈತನಿರಾಸ ಕೇವಲ ದಿಕ್ಪ್ರದರ್ಶನ

**तात्पर्यचन्द्रिका –**

**अविरुद्धं चान्नादिशब्दैरन्नमयादिप्रत्यायनम्, ''ज्योतिषा यजेत'' इत्यत्र ज्योतिश्शब्देन ज्योतिष्टोमस्येव** [१]।

---

(१) **शङ्करभाष्यम्** – इदं त्विह वक्तव्यम् – 'स वा एष पुरुषोऽन्नरसमयः' । 'तस्माद्वा एतस्मादन्नरसमयात् अन्योऽन्तर आत्मा प्राणमयः' तस्मात् 'अन्योऽन्तर आत्मा मनोमयः' तस्मात् 'अन्योन्तर आत्मा विज्ञानमयः' (तै. २।१, २, ३, ४) इति च विकारार्थे मयट्प्रवाहे सत्यानन्दमय एवाकस्मादर्धजरतीयन्याथेन कथमिव मयटः प्राचुर्यार्थत्वं ब्रह्मविषयत्वं चाश्रीयत इति । मान्त्रवर्णिकब्रह्माधिकारादिति चेत्, न । अन्नमयादीनामपि तर्हि ब्रह्मत्वप्रसङ्गः ।

अत्राह – युक्तमन्नमयादीनामब्रह्मत्वं, तस्मात्तस्मादान्तरस्यान्तरस्यान्यस्यान्यस्यात्मन उच्यमानत्वात्, आनन्दमयात्तु न कश्चिदन्य आन्तर आत्मोच्यते, तेनानन्दमयस्य ब्रह्मत्वम्, अन्यथा प्रकृतहानाप्रकृतप्रक्रियाप्रसङ्गादिति । अत्रोच्यते – यद्यप्यन्नमयादिभ्य इवानन्दमयादन्योऽन्तर आत्मेति न श्रूयते तथापि नानन्दमयस्य ब्रह्मत्वं, यत आनन्दमयं प्रकृत्य श्रूयते – 'तस्य प्रियमेव शिरः । मोदो दक्षिणः पक्षः । प्रमोद उत्तरः पक्षः । आनन्द आत्मा । ब्रह्म पुच्छं प्रतिष्ठा' (तै. २।५) इति । तत्र यद्ब्रह्म मन्त्रवर्णे प्रकृतम् – 'सत्यं ज्ञानमनन्तं ब्रह्म' इति, तदिह 'ब्रह्म पुच्छं प्रतिष्ठा' इत्युच्यते । तद्विजिज्ञाप-

यिषयैवान्नमयादय आनन्दमयपर्यन्ताः पञ्च कोशाः कल्प्यन्ते । तत्र कुतः प्रकृतहानाप्रकृतप्रक्रियाप्रसङ्गः । नन्वानन्दमयस्यावयवत्वेन 'ब्रह्म पुच्छं प्रतिष्ठा' इत्युच्यते, अन्नमयादीनामिव 'इदं पुच्छं प्रतिष्ठा' इत्यादि । तत्र कथं ब्रह्मणः स्वप्रधानत्वं शक्यं विज्ञातुम् । प्रकृतत्वादिति ब्रूमः । नन्वानन्दमयावयवत्वेनापि ब्रह्मणि विज्ञानमाने न प्रकृतत्वं हीयते, आनन्दमयस्य ब्रह्मत्वादिति । अत्रोच्यते – तथा सति तदेव ब्रह्मानन्दमय आत्मावयवी, तदेव च ब्रह्मपुच्छं प्रतिष्ठावयव इत्यसामञ्जस्यं स्यात् । अन्यतरपरिग्रहे तु युक्तं 'ब्रह्म पुच्छं प्रतिष्ठा' इत्यत्रैव ब्रह्मनिर्देश आश्रयितुं, ब्रह्मशब्दसंयोगात् । नानन्दमयवाक्ये, ब्रह्मशब्दसंयोगाभावादिति । अपिच 'ब्रह्म पुच्छं प्रतिष्ठा' इत्युक्त्वेदमुच्यते – 'तदप्येष श्लोको भवति । असन्नेव स भवति । असद्ब्रह्मेति वेद चेत् । अस्ति ब्रह्मेति चेद्वेद । सन्तमेनं ततो विदुरिति' (तै.२।६।) अस्मिंश्च श्लोकेऽननुकृष्यानन्दमयं, ब्रह्मण एव भावाभाववेदनयोर्गुणदोषाभिधानाद्गम्यते 'ब्रह्म पुच्छं प्रतिष्ठा' इत्यत्र ब्रह्मण एव स्वप्रधानत्वमिति । न चानन्दमयस्यात्मनो भावाभावशङ्कायुक्ता, प्रियमोदादि-विशेषस्यानन्दमयस्य सर्वलोकप्रसिद्धत्वात् । कथं पुनः स्वप्रधानं सद्ब्रह्म, आनन्दमयस्य पुच्छत्वेन निर्दिश्यते – 'ब्रह्म पुच्छं प्रतिष्ठा' इति । नैष दोषः । पुच्छवत्पुच्छं, प्रतिष्ठा परायणमेकनीडं लौकिकस्यानन्दजातस्य ब्रह्मानन्द इत्येतदनेन विवक्ष्यते, नावयवत्वं, 'एतस्यैवानन्दस्यान्यानि भूतानि मात्रमुपजीवन्ति' (बृह ४।३।३२) इति श्रुत्यन्तरात् । अपिच आनन्दमयस्य ब्रह्मत्वे प्रियाद्यवयवत्वेन सविशेषं ब्रह्माभ्युपगन्तव्यम् । निर्विशेषं तु ब्रह्म वाक्यशेषे श्रूयते, वाङ्मनसयोरगोचरत्वाभिधानात् – 'यतो वाचो निवर्तन्ते । अप्राप्य मनसा सह । आनन्दं ब्रह्मणो विद्वान् । न बिभेति कुतश्चनेति' (तै २।९) । अपिच आनन्दप्रचुर इत्युक्ते दुःखास्तित्वमपि गम्यते प्राचुर्यस्य लोके प्रतियोग्यल्पत्वापेक्षत्वात् । तथा च सति, 'यत्र नान्यत्पश्यति नान्यच्छृणोति नान्यद्विजानाति स भूमा' (छा ७।२४।१) इति भूम्नि ब्रह्मणि तद्व्यतिरिक्ताभावश्रुतिरुपरुध्येत । प्रतिशरीरं च प्रियादिभेदादानन्दमयस्यापि भिन्नत्वम् । ब्रह्म तु न प्रतिशरीरं भिद्यते, 'सत्यं ज्ञानमनन्तं ब्रह्म' (तैत्ति. २।१) इत्यानन्त्यश्रुतेः, 'एको देवः सर्वभूतेषु गूढः सर्वव्यापी सर्वभूतान्तरात्मा' (श्वे. ६।११) इति च श्रुत्वन्तरात् । न चानन्दमयस्याभ्यासः श्रूयते । प्रातिपादिकार्थमात्रमेव हि सर्वत्राभ्यस्यते – 'रसो वै सः, रसꣳह्येवायं लब्ध्वाऽनन्दी भवति, को ह्येवान्यात्कः प्राण्यात्, यदेष आकाश आनन्दो न स्यात्' । 'सैषानन्दस्य भीमाꣳसा भवति' । 'आनन्दं ब्रह्मणो विद्वान् न बिभेति कुतश्चनेति' (तै. २।७,८,९) 'आनन्दो ब्रह्मेति व्यजानात्' (तै. ६।६) इति च । यदिच आनन्दमयशब्दस्य ब्रह्मविषयत्वं निश्चितं भवेत्, तत उत्तरेष्वानन्दमात्रप्र-योगेष्वप्यानन्दमयाभ्यासः कल्प्येत । न

त्वानन्दमयस्य ब्रह्मत्वमस्ति, प्रियशिरस्त्वादिभिर्हेतुभिरित्यवोचाम । तस्माच्छ्रुत्यन्तरे 'विज्ञानमानन्दं ब्रह्म' (बृ. ३।९।२८) इत्यानन्दप्रातिपदिकस्य ब्रह्मणि प्रयोगदर्शनात्, 'यदेष आकाश अनन्दो न स्यात्' इत्यादिर्ब्रह्मविषयः प्रयोगो न त्वानन्दमयाभ्यास इत्यवगन्तव्यम् । यस्त्वयं मयडन्तस्यैवानन्दशब्दस्याभ्यासः– 'एतमानन्दमयमात्मानमुपसंक्रामति' (तै. २।८) इति, न तस्य ब्रह्मविषयत्वमस्ति, विकारात्मनामेवान्नमयादीनामनात्मनामुपसंक्रमितव्यानां प्रवाहे पठितत्वात् ।

नन्वानन्दमयस्योपसंक्रमितव्यस्यान्नमयादिवदब्रह्मत्वे सति नैव विदुषो ब्रह्मप्राप्तिफलं निर्दिष्टं भवेत् । नैष दोषः । आनन्दमयोपसंक्रमणनिर्देशेनैव पुच्छप्रतिष्ठाभूतब्रह्मप्राप्तेः फलस्य निर्दिष्टत्वात् । 'तदप्येष श्लोको भवति । यतो वाचो निवर्तन्ते' इत्यादिना च प्रपञ्चयमानत्वात् । या त्वानन्दमयसंनिधाने 'सोऽकामयत बहु स्यां प्रजायेयेति' इयं श्रुतिरुदाहृता सा 'ब्रह्म पुच्छं प्रतिष्ठा' इत्यनेन संनिहिततरेण ब्रह्मणा संबध्यमानानन्दमयस्य ब्रह्मतां प्रतिबोधयति । तदपेक्षत्वाच्चोत्तरस्य ग्रन्थस्य 'रसो वै सः' इत्यादेर्नानन्दमयविषयता । ननु 'सोऽकामयत' इति ब्रह्मणि पुंलिङ्गनिर्देशो नोपपद्यते । नायं दोषः । 'तस्माद्वा एतस्मादात्मन आकाशः संभूतः' इत्यत्र पुंलिङ्गेनाप्यात्मशब्देन ब्रह्मणः प्रकृतत्वात् । या तु भार्गवी वारुणी विद्या 'आनन्दो ब्रह्मेति व्यजानात्' इति, तस्यां मयडश्रवणात्, प्रियशिरस्त्वाद्यश्रवणाच्च युक्तमानन्दस्य ब्रह्मत्वम् । तस्मादणुमात्रमपि विशेषमनाश्रित्य न स्वत एव प्रियशिरस्त्वादि ब्रह्मण उपपद्यते । न चेह सविशेषं ब्रह्म प्रतिपिपादयिषितं, वाङ्मनसगोचरातिक्रमश्रुतेः । तस्मादन्नमयादिष्विवानन्दमयेऽपि विकारार्थ एव मयड्विज्ञेयो न प्राचुर्यार्थः । सूत्राणित्वेवं व्याख्येयानि – 'ब्रह्म पुच्छं प्रतिष्ठा' इत्यत्र किमानन्दमयावयवत्वेन ब्रह्म विवक्ष्यत उत स्वप्रधानत्वेनेति । पुच्छशब्दादवयवत्वेनेति प्राप्त उच्यते – 'आनन्दमयोऽभ्यासात्' । आनन्दमय आत्मेत्यत्र 'ब्रह्म पुच्छं प्रतिष्ठा' इति स्वप्रधानमेव ब्रह्मोपदिश्यते, अभ्यासात् । 'असन्नेव स भवति' इत्यस्मिन्निगमनश्लोके ब्रह्मण एव केवलस्याभ्यस्यमानत्वात् । 'विकारशब्दान्नेति चेन्न प्राचुर्यात्' । विकारशब्देनावयवशब्दोऽभिप्रेतः । पुच्छमित्यवयवशब्दान्न स्वप्रधानत्वं ब्रह्मण इति यदुक्तं, तस्य परिहारो वक्तव्यः । अत्रोच्यते – नायं दोषः, प्राचुर्यादप्यवयवशब्दोपपत्तेः । प्राचुर्यं प्रायापत्तिः, अवयवप्राये वचनमित्यर्थः । अन्नमयादीनां हि शिरआदिषु पुच्छान्तेष्ववयवेषूक्तेष्वानन्दमयस्यापि शिरआदीन्यवयवान्तराण्युक्त्वावयवप्रायापत्त्या 'ब्रह्म पुच्छं प्रतिष्ठा' इत्याह, नावयवविवक्षया । यत्कारणम्भ्यासादिति स्वप्रधानत्वं ब्रह्मणः समर्थितम् । 'तद्धेतुव्यपदेशाच्च' । सर्वस्य विकारजातस्य सानन्दमयस्य कारणत्वेन ब्रह्म व्यपदिश्यते –'इद ँ सर्वमसृजत । यदिदं किञ्च' (तै. २।६) इति । न च कारणं सत् ब्रह्म

स्वविकारस्यानन्दमयस्य मुख्यया वृत्त्यावयव उपपद्यते । अपराण्यपि सूत्राणि यथासंभवं पुच्छवाक्यनिर्दिष्टस्यैव ब्रह्मण उपपादकानि द्रष्टव्यानि ।।१९।।

**भामतीव्याख्या** – स्वमतपरिग्रहार्थमेकेदेशिमतं दूषयति – **इदं त्विह वक्तव्यमिति** । एष तावदुत्सर्गो यत् – 'ब्रह्म पुच्छं प्रतिष्ठेति ब्रह्मशब्दात्प्रतीयते । विशुद्धं ब्रह्म विकृतं त्वानन्दमयशब्दतः ।।' तत्र किं पुच्छपदसमभिव्याहारात् अन्नमयादिषु चास्यावयवपरत्वेन प्रयोगात्, इहाप्यवयवपरत्वात्पुच्छपदस्य, तत्समानाधिकरणं ब्रह्मपदमपि स्वार्थत्यागेन कथंचिदवयवपरं व्याख्यायताम् । आनन्दमयपदं चान्नमयादिविकारवाचिप्रायपठितं विकारवाचि वा, कथंचित्प्रचुरानन्दवाचि वा, ब्रह्मण्यप्रसिद्धं कयाचिद्वृत्त्या ब्रह्मणि व्याख्यायताम् । आनन्दपदाभ्यासेन च ज्योतिष्पदेनेव ज्योतिष्टोम आनन्दमयो लक्ष्यतां, उतानन्दमयपदं विकारार्थमस्तु, ब्रह्मपदं च ब्रह्मण्येव स्वार्थेऽस्तु, आनन्दपादभ्यासश्च स्वार्थे, पुच्छपदमात्रमवयवप्रायलिखितमधिकरणपरतया व्याक्रियतामिति कृतबुद्धय एव विदांकुर्वन्तु । तत्र 'प्रायपाठपरित्यागो मुख्यत्रितयलङ्घनम् । पूर्वस्मिन्नुत्तरे पक्षे प्रायपाठस्य बाधनम् ।।' पुच्छपदं हि वालधौ मुख्यं सदानन्दमयावयवे गौणमेवेति मुख्यशब्दार्थ-लङ्घनमवयवपरतायामधिकरणपरतायां च तुल्यम् । अवयवप्रायेलखबाधश्च विकार-प्रायलेखबाधेन तुल्यः । ब्रह्मपदमानन्दमयपदमानन्दपदमिति त्रितयलङ्घनं त्वधिकम् । तस्मान्मुख्यत्रितयलङ्घनादसाधीयान्पूर्वः पक्षः । मुख्यत्रयानुगुण्येन तूत्तर एव पक्षो युक्तः । अपि चानन्दमयपदस्य ब्रह्मार्थत्वे, 'ब्रह्म पुच्छम्' इति न समञ्जसम् । नहि तदेवाव यव्यवयवश्चेति युक्तम् । आधारपरत्वे च पुच्छशब्दस्य, प्रतिष्ठेत्येतदप्युपपन्नतरं भवति । आनन्दमयस्य चान्तरत्वमन्नमयादिकोशापेक्षया । ब्रह्मणस्त्वान्तरत्वमानन्दमयादर्थाद्गम्यत इति न श्रुत्योक्तम् । एवं चान्नमयादिवदानन्दमयस्य प्रियाद्यवयवयोगो युक्तः । वाङ्मनसागोचरे तु परब्रह्मण्युपाधिमन्तर्भाव्य प्रियाद्यवयवयोगः, पाचुर्यं च, क्लेशेन व्याख्यायेयाताम् । तथा च मान्त्रवर्णिकस्य ब्रह्मण एव 'ब्रह्म पुच्छं प्रतिष्ठा' इति स्वप्रधानस्याभिधानात्, तस्यैवाधिकारो नानन्दयमयस्येति । 'सोऽकामयत' इत्याद्या अपि श्रुतयो ब्रह्मविषया नानन्दमयविषया इत्यर्थसंक्षेपः । सुगममन्यत् । **सूत्राणि त्वेवं व्याख्येयानीति** । वेदसूत्रयोर्विरोधे 'गुणे त्वन्याय्यकल्पना, इति सूत्राण्यन्यथा नेतव्यानि । आनन्दमयशब्देन तद्वाक्यस्थ'ब्रह्म पुच्छं प्रतिष्ठा' इत्येतद्गतं ब्रह्मपदमुप-लक्ष्यते । एतदुक्तं भवति – आनन्दमय इत्यादिवाक्ये यत् 'ब्रह्म पुच्छं प्रतिष्ठा' इति ब्रह्मपदं तत्स्वप्रधानमेवेति । यत्तु ब्रह्माधिकरणमिति वक्तव्ये 'ब्रह्म पुच्छम्' इत्याह श्रुतिः, तत्कस्य हतोः, पूर्वमवयवप्रधानप्रयोगात्तत्प्रयोगस्यैव बुद्धौ संनिधानात् तेनापि चाधिकरणलक्षणोपपत्तेरिति ।।

ಪರಿಪೂರ್ಣಚಂದ್ರಿಕಾ

अन्नादीनां ब्रह्मत्वेऽपि "तद्विज्ञाय, पुनरेव वरुणं पितरमुपससार, अधीहि भगवो ब्रह्मेति" इति पुनरुपसत्तिस्तु, एकं रूपं निदिध्यासनेन साक्षात् कृत्य रूपान्तरस्य गुणान्तरविशिष्टतया निदिध्यासनार्थमनुज्ञामादातुम् । तत्र 'अनुजानीहि' इति वक्तव्ये यत् 'अधीहि' इत्याह, तद्विनयातिशयादित्यादिकमुत्तरप्रस्थानादवगन्तव्यम् ।

"अन्नमयप्राणमयमनोमयविज्ञानमयानन्दमया मे शुद्ध्यन्ताम्" इति शुद्धिप्रार्थनवाक्ये तु ब्रह्मशब्दाभावात्, तल्लक्षणाभावात्, ज्ञानिनस्तत्प्राप्तिकथनाभावात्, रसशब्देन विशेषणाभावेन "अथैष ज्योतिरथैष विश्वज्योतिरथैष सर्वज्योतिः" इत्यादाविव संज्ञाभेदात्, "कुण्डपायिनामयने मासमग्निहोत्रं जुहोति" इत्यादाविव प्रकरणभेदात्, शुद्धिप्रार्थनलिङ्गाच्चान्नमयादयो न ब्रह्म, किन्तु कोशाः ।

अत्र तु कोशान्तर्गतभगवन्मूर्तिविशेषाः । "अन्योऽन्तरः" इत्यन्यत्वान्तरत्वाद् युक्तिस्त्वधिष्ठानभूतकोशानामन्यत्वादन्तरत्वात् भगवतो बहुरूपत्वाद् विशेषसद्भावात् "अनन्योऽप्यन्यशब्देन" इत्यादिभाष्योदाहृतस्मृतिबलाच्च युक्ता ।

तस्माच्छ्रुतिविरोधाभावात् सूत्राण्यन्यथा नेयानि ।

'अनन्तशाखातत्त्वार्थविदा सूत्रकृतेरितम् ।
कूपमण्डूकवत् स्वल्पवाक्यज्ञोऽन्यथयेत् कथम् ।।'

उक्तं च ब्रह्मसूत्राणां निश्चितत्वम् – 'ब्रह्मसूत्रपदैश्चैव हेतुमद्भिर्विनिश्चितैः' इत्यादौ ।।

सूत्रास्वारस्यं तु परैरेव स्वीकृतम् । यच्चोक्तं – शुद्धब्रह्मपरमेतदिति, तन्न, "कामात्" इत्यादिसूत्रे "सोऽकामयत" "भीषाऽस्मात्" इत्यादिश्रुतौ च कामादिगुणविशिष्टस्यैवोक्तेः।

किञ्च – निर्विशेषज्ञानस्य सविशेषज्ञानाधीनत्वादादौ निर्विशेषोक्तिरयुक्ता । अत्र च "भेदव्यपदेशात्" इत्यनेनैक्यनिषेधादभेदप्रतिकूलता स्फुटैवेति ।

ಅನುವಾದ - ಭೃಗುವಲ್ಲಿಯಲ್ಲಿರುವ ಅನ್ನಾದಿಶಬ್ದಗಳಿಂದ ಅನ್ನಮಯಾದಿಗಳು ಪ್ರತಿಪಾದ್ಯರಾಗುತ್ತಾರೆ. ಇದೇನು ತಪ್ಪಲ್ಲ. ಜ್ಯೋತಿಷ್ಟೋಮಪ್ರಕರಣದಲ್ಲಿ ''ಜ್ಯೋತಿಷಾ ಯಜೇತ'' ಎಂದು ಕೇಳಿಸುತ್ತದೆ. ಜ್ಯೋತಿಷ್ಟೋಮಶಬ್ದದ ಏಕದೇಶವಾದ ಜ್ಯೋತಿಷ್‌ಶಬ್ದವು ಜ್ಯೋತಿಷ್ಟೋಮವನ್ನು ಪ್ರತಿಪಾದಿಸುವುದು ಕಂಡಿದೆ. ಅದರಂತೆ ಅನ್ನಮಯಾದಿಶಬ್ದಗಳ ಏಕದೇಶವಾದ ಅನ್ನಾದಿಶಬ್ದಗಳಿಂದ ಅನ್ನಮಯಾದಿಗಳನ್ನು ತಿಳಿಯಬಹುದು.

ಪ್ರಶ್ನೆ - ಅನ್ನಾದಿಗಳನ್ನು ಬ್ರಹ್ಮನೆಂದು ಹೇಳುತ್ತಿದ್ದೀರಿ. ಹಾಗಾದರೆ ''ತದ್ವಿಜ್ಞಾಯ ಪುನರೇವ ವರುಣಂ ಪಿತರಮುಪಸಸಾರ ಅಧೀಹಿ ಭಗವೊ ಬ್ರಹ್ಮೇತಿ'' ಎಂದು ವರುಣನನ್ನು ಪುನಃ ಪುನಃ ಉಪಸತ್ತಿ ಮಾಡಿದ್ದು ತಪ್ಪಾಗುತ್ತದಲ್ಲವೇ?

ಉತ್ತರ - ಪುನಃ ಪುನಃ ಉಪಸತ್ತಿ ಮಾಡಿದ ಕೂಡಲೇ ಅನ್ನಾದಿಗಳನ್ನು ಬ್ರಹ್ಮರಲ್ಲವೆಂದು ಹೇಳಲಾಗದು. ಭೃಗುಋಷಿಯು ಗುರುವಾದ ವರುಣರಿಂದ ಉಪದಿಷ್ಟರಾಗಿ ಅನ್ನಾದಿ ಒಂದೊಂದೇ ರೂಪಗಳನ್ನು ನಿಧಿಧ್ಯಾಸನ ಮಾಡಿ ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಪುನಃ ಬೇರೆ ರೂಪದ ಸಾಕ್ಷಾತ್ಕಾರಕ್ಕಾಗಿ ಬೇರೆ ಗುಣಗಳಿಂದ ವಿಶಿಷ್ಟನಾದ ಬ್ರಹ್ಮನ ನಿಧಿಧ್ಯಾಸನ ಮಾಡಲು ಅಪೇಕ್ಷಿಸುತ್ತಾರೆ. ಅದಕ್ಕೋಸ್ಕರ ಬ್ರಹ್ಮನ ಇತರ ಗುಣಗಳ ಉಪದೇಶವನ್ನು ಗುರುಗಳಿಂದ ಉಪದೇಶ ಪಡೆಯಬೇಕಾಗಿದೆ. ಬ್ರಹ್ಮನಲ್ಲಿರುವ ಇನ್ನೂ ಹೆಚ್ಚಿನ ಗುಣಗಳನ್ನು ತಿಳಿದು ಉಪಾಸನೆ ಮಾಡಬೇಕಾಗಿದೆ. ಮತ್ತು ಅದಕ್ಕಾಗಿ ಗುರುಗಳ ಅನುಜ್ಞೆಯನ್ನು ಪಡೆಯಬೇಕಾಗಿದೆ. ಈ ಕಾರಣಕ್ಕೋಸ್ಕರ ಭೃಗುಋಷಿಗಳು ತಂದೆಯಾದ ವರುಣರ ಬಳಿ ಪುನಃ ಪುನಃ ಉಪಸತ್ತಿಯನ್ನು ಮಾಡುತ್ತಿದ್ದಾರೆ.

ಪ್ರಶ್ನೆ - ಹಾಗಾದಲ್ಲಿ ಅನುಜಾನೀಹಿ = ಅನುಜ್ಞೆ ನೀಡಿರಿ ಎಂದು ಹೇಳಬೇಕು. ಆದರೆ ಭೃಗುಋಷಿಗಳು ಅಧೀಹಿ = ಅಧ್ಯಾಪನ ಮಾಡಿರಿ ಎಂದು ಹೇಳುತ್ತಿದ್ದಾರೆ. ಭೃಗುಋಷಿಗಳಿಗೆ ಅನುಜ್ಞಾ ಸ್ವೀಕಾರವೇ ಉದ್ದೇಶವಾಗಿದ್ದಲ್ಲಿ ಅಧೀಹಿ ಎಂಬ ಪ್ರಯೋಗವು ಅಪ್ರಸ್ತುತವಲ್ಲವೇ?

ಉತ್ತರ - ವಸ್ತುತಸ್ತು ಅನುಜಾನೀಹಿ ಎಂದೇ ಹೇಳಬೇಕು. ಆದರೂ ಸಹ ವಿನಿಮಯದ ಪರಾಕಾಷ್ಠದಿಂದ ಅಧೀಹಿ ಎನ್ನುತ್ತಿದ್ದಾರೆ. ಬ್ರಹ್ಮನನ್ನು ತಿಳಿದಿದ್ದರೂ ತಿಳಿದಿಲ್ಲವೆಂದು ಗುರುಗಳಿಗೆ ಬಾಗಿದ್ದಾರೆ. ಆದ್ದರಿಂದ ಅಧೀಹಿ ಎಂಬ ಪ್ರಯೋಗವು ತಪ್ಪಲ್ಲ.

ಇಲ್ಲಿಯ ತನಕ ಮಾಡಿದ ಅದ್ವೈತನಿರಾಸವು ಕೇವಲ ದಿಕ್‌ಪ್ರದರ್ಶನ. ಇನ್ನೂ ಹೆಚ್ಚಿನ ಮಾಹಿತಿಗಳನ್ನು ಉತ್ತರಪ್ರಸ್ಥಾನವಾದ ಅನುವ್ಯಾಖ್ಯಾನ ಮತ್ತು ನ್ಯಾಯಸುಧೆಯನ್ನು ನೋಡಿ ತಿಳಿಯಬೇಕು.

ಆಕ್ಷೇಪ - ಅನ್ನಮಯ ಪ್ರಾಣಮಯ ಇತ್ಯಾದಿ ಶಬ್ದಗಳು ಮಹಾನಾರಾಯಣೋಪನಿಷತ್ತಿನಲ್ಲಿಯೂ ಕೇಳಿಸುತ್ತಿದೆ. ಆದ್ದರಿಂದ ಈ ಶಬ್ದಗಳು ಬ್ರಹ್ಮನನ್ನು ಪ್ರತಿಪಾದಿಸಲಿ?

ಸಮಾಧಾನ - ತೈತ್ತಿರೀಯೋಪನಿಷತ್ತಿನಲ್ಲಿರುವ ಅನ್ನಮಯಾದಿಶಬ್ದಗಳು ಬ್ರಹ್ಮನನ್ನು ಪ್ರತಿಪಾದಿಸುತ್ತವೆ. ಆದರೆ ಮಹಾನಾರಾಯಣೋಪನಿಷತ್ತಿನಲ್ಲಿರುವ ಅನ್ನಮಯಾದಿಶಬ್ದಗಳು ಬ್ರಹ್ಮನನ್ನು ಹೇಳಲಾರವು. ಈ ವಿಷಯದಲ್ಲಿ ಒಟ್ಟು ಏಳು ಕಾರಣಗಳನ್ನು ಹೇಳಬಹುದು

೧) ''ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಾ ಮೇ ಶುದ್ಧ್ಯಂತಾಮ್'' ಎಂದು ದೇಹದ ಶುದ್ಧಿಯ ಬಗ್ಗೆ ಪ್ರಾರ್ಥಿಸುವ ವಾಕ್ಯವು ಮಹಾ-ನಾರಾಯಣೋಪನಿಷತ್ತಿನಲ್ಲಿ ಕೇಳಿಸುತ್ತಿದೆ. ಆದರೆ ಇಲ್ಲಿ ಎಲ್ಲಿಯೂ ಬ್ರಹ್ಮಶಬ್ದವು ಕೇಳಿಸುತ್ತಿಲ್ಲ

೨) ಈ ಪ್ರಕರಣದಲ್ಲಿ ಜಗಜ್ಜನ್ಮಾದಿಕಾರಣತ್ವವೆಂಬ ಬ್ರಹ್ಮನ ಲಕ್ಷಣವು ಕೇಳಿಸುತ್ತಿಲ್ಲ.

೩) ಜ್ಞಾನಿಯು ಅನ್ನಮಯಾದಿಗಳನ್ನು ಹೊಂದುತ್ತಾನೆಂಬ ಬ್ರಹ್ಮಪ್ರಾಪ್ತಿಯು ಕೇಳಿಸುತ್ತಿಲ್ಲ.

೪) ಬ್ರಹ್ಮಪ್ರಾಪಕವಾದ ರಸಶಬ್ದವೂ ಸಹ ಎಲ್ಲಿಯೂ ವಿಶೇಷಣವಾಗಿಲ್ಲ.

೫) ''ಅಥೈಷ ಜ್ಯೋತಿರಥೈಷ ವಿಶ್ವಜ್ಯೋತಿರಥೈಷ ಸರ್ವಜ್ಯೋತಿಃ'' ಎಂಬ ಶ್ರುತಿಯಲ್ಲಿರುವ ಜ್ಯೋತಿ ಎಂಬ ಶಬ್ದವೇ ಬೇರೆ ''ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ'' ಎಂಬಲ್ಲಿರುವ ಜ್ಯೋತಿಷ್ಟೋಮಶಬ್ದವೇ ಬೇರೆ ಸಂಜ್ಞಾಭೇದದಿಂದ ಅರ್ಥಭೇದವನ್ನು ಈ ಶ್ರುತಿಯಲ್ಲಿ ಒಪ್ಪಿದ್ದಾರೆ. ಆದರಂತೆ ರಸಶಬ್ದದ ವಿಶೇಷಣದಿಂದ ಕೂಡಿರುವ ಅನ್ನಮಯಾದಿಶಬ್ದಗಳೇ ಬೇರೆ, ರಸಶಬ್ದದ ವಿಶೇಷಣವಿಲ್ಲದ ಅನ್ನಮಯಾದಿಗಳೇ ಬೇರೆ. ಹೀಗೆ ಸಂಜ್ಞಾಭೇದದಿಂದ ಭೇದವು ಸಿದ್ಧವಾಗುತ್ತದೆ.

೬) ಪ್ರಕರಣಭೇದದಿಂದಲೂ ಮಹಾನಾರಾಯಣೋಪನಿಷತ್ತಿನಲ್ಲಿರುವ ಅನ್ನಮಯಾದಿಗಳು ಬ್ರಹ್ಮವಲ್ಲವೆಂದು ತಿಳಿಯುತ್ತದೆ. 'ಕುಂಡಪಾಯಿನಾ' ಎಂಬ ತಂತ್ರವಿಶೇಷದಲ್ಲಿ ''ಮಾಸಮಗ್ನಿಹೋತ್ರಂ ಜುಹೋತಿ'' ಎಂಬ ವಾಕ್ಯವಿದೆ. ನಿತ್ಯಾಗ್ನಿಹೋತ್ರವಿಧಾಯಕವಾದ ಪ್ರಕರಣಕ್ಕಿಂತ ಬೇರೆ ಪ್ರಕರಣದಲ್ಲಿ ಈ ವಾಕ್ಯವು ಇದೆ. ಆದ್ದರಿಂದ ನಿತ್ಯಾಗ್ನಿಹೋತ್ರದಲ್ಲಿ ಮಾಸವೆಂಬ ಕಾಲವಿಶೇಷವನ್ನು ಈ ವಾಕ್ಯವು ವಿಧಿಸುತ್ತಿಲ್ಲ. ಹೊರತಾಗಿ ಬೇರೊಂದು ಯಾಗವನ್ನೇ ವಿಧಿಸುತ್ತಿದೆಯೆಂದು ಪೂರ್ವಮೀಮಾಂಸೆಯಲ್ಲಿ ಸಿದ್ಧಾಂತ ಮಾಡಿದ್ದಾರೆ. ಅದರಂತೆ ಪ್ರಕೃತ ತೈತ್ತಿರೀಯೋಪನಿಷತ್ತು ಎಂಬ ಪ್ರಕರಣಕ್ಕಿಂತ ಮಹಾನಾರಾಯಣೋಪನಿಷತ್ತು ಎಂಬ ಪ್ರಕರಣವು ಬೇರೆಯೇ ಆಗಿದೆ. ಆದ್ದರಿಂದ ಎರಡು ಪ್ರಕರಣಗಳು ಬೇರೆ ಬೇರೆ ವಿಷಯಗಳನ್ನೇ ಪ್ರತಿಪಾದಿಸಬೇಕು.

೭) ಮಹಾನಾರಾಯಣೋಪನಿಷತ್ತಿನಲ್ಲಿ ಅನ್ನಮಯಾದಿಗಳು ಶುದ್ಧವಾಗಲಿ ಎಂಬ ಪ್ರಾರ್ಥನೆ ಇದೆ. ಅನ್ನಮಯಾದಿಗಳು ಬ್ರಹ್ಮವಾದಲ್ಲಿ ಶುದ್ಧಪ್ರಾರ್ಥನೆಯು ತಪ್ಪಾಗುತ್ತದೆ. ಈ ಕಾರಣದಿಂದಲೂ ಮಹಾನಾರಾಯಣೋಪನಿಷತ್ತಿನಲ್ಲಿ ಪ್ರಸಕ್ತವಾದ ಅನ್ನಮಯಾದಿಗಳು ಬ್ರಹ್ಮವಲ್ಲ. ಕೋಶಗಳೇ ಆಗಿವೆ.

ತೈತ್ತಿರೀಯೋಪನಿಷತ್ತಿನಲ್ಲಿ ಅನ್ನಮಯಾದಿಕೋಶಗಳೊಳಗಿರುವ ಅನಿರುದ್ಧಾದಿಭಗವನ್‌ಮೂರ್ತಿ-

*ಆನಂದಮಯಾಧಿಕರಣ*

ವಿಶೇಷದ ಬಗ್ಗೆ ವರ್ಣಿಸಲಾಗಿದೆ. ಅನ್ನಮಯಾದಿಗಳೆಲ್ಲವೂ ಭಗವಂತನಾದರೆ ''ಅನ್ಯೋಂತರ'' ಇತ್ಯಾದಿಯಾಗಿ ಒಂದರೊಳಗೆ ಮತ್ತೊಂದು ಹೇಳಿದ್ದು ಹೇಗೆ ಕೂಡುತ್ತದೆ; ಮತ್ತು ಭೇದವನ್ನು ಹೇಳಿದ್ದು ಹೇಗೆ ಕೂಡುತ್ತದೆ? ಭಗವಂತನ ಮೂರ್ತಿಗಳಲ್ಲಿ ಅಂತತ್ವವನ್ನಾಗಲಿ ಅನ್ಯತ್ವವನ್ನಾಗಲಿ ಹೇಳಲು ಬರುವುದಿಲ್ಲ. ಆದರೆ ಭಗವಂತನಿಗೆ ಅಧಿಷ್ಠಾನವಾದ ಕೋಶಗಳಲ್ಲಿ ಅನ್ಯತ್ವವನ್ನು ಮತ್ತು ಅಂತತ್ವವನ್ನು ಹೇಳಬಹುದು. ಅಧಿಷ್ಠಾನವಾದ ಈ ಕೋಶಗಳಲ್ಲಿರುವ ಅನ್ಯತ್ವವನ್ನು ಮತ್ತು ಅಂತತ್ವವನ್ನು ಭಗವಂತನಲ್ಲಿ ಲಕ್ಷಣಯಾ ಪ್ರಯೋಗಿಸಲಾಗಿದೆ. ಭಗವಂತನಿಗೆ ಅನೇಕ ರೂಪಗಳಿರುವುದರಿಂದ ಅನ್ಯಥಾ ಅಧಿಷ್ಠಾನವು ತಪ್ಪಾಗುವುದಿಲ್ಲ. ಅಥವಾ ವಿಶೇಷದ ಫಲದಿಂದ ಭಗವಂತನು ಅಭಿನ್ನನಾಗಿದ್ದರೂ ಭೇದವ್ಯವಹಾರಕ್ಕೂ ವಿಷಯನಾಗುತ್ತಾನೆ. ''ಅನನ್ಯೋಽಪ್ಯನ್ಯಶಬ್ದೇನ'' ಎಂದು ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯವು ಈ ವಿಷಯವನ್ನು ಬೆಂಬಲಿಸುತ್ತದೆ. ಈ ಎಲ್ಲ ಕಾರಣಗಳಿಂದ ಶ್ರುತಿವಿರೋಧವು ಬರಲು ಸಾಧ್ಯವೇ ಇಲ್ಲ. ಶ್ರುತಿವಿರೋಧದ ಭಯದಿಂದ ಸೂತ್ರಗಳನ್ನು ಬೇರೆ ರೀತಿಯಾಗಿ ವ್ಯಾಖ್ಯಾನಿಸಬಾರದು.

ಅನಂತಶಾಖಾತತ್ತ್ವಾರ್ಥವಿದಾ ಸೂತ್ರಕೃತೇರಿದಮ್ ।
ಕೂಪಮಂಡೂಕವತ್ಸ್ವಲ್ಪವಾಕ್ಯಜ್ಞೋಽನ್ಯಥಯೇತ್ ಕಥಮ್ ॥ ೧ ॥

ಸೂತ್ರಕಾರರು ಅನಂತಶಾಖೆಗಳ ತತ್ವವನ್ನು ತಿಳಿದವರಲ್ಲಿ ಅಗ್ರೇಸರರು. ಇಂತಹ ಸರ್ವಜ್ಞರಿಂದ ಹೇಳಿದ್ದನ್ನು ಅಲ್ಲಗಳೆಯುವ ಅಧಿಕಾರ ನಿನಗಿಲ್ಲ. ನೀನಾದರೂ ಬಾವಿಯನ್ನೇ ಪ್ರಪಂಚವೆಂದು ತಿಳಿದ ಕಪ್ಪೆಯಂತೆ ಕೆಲವೇ ವಾಕ್ಯಗಳನ್ನು ತಿಳಿದವನಾಗಿದ್ದಿ.

ಬ್ರಹ್ಮಸೂತ್ರಗಳಿಗೆ ಅನ್ಯಾರ್ಥ ಮಾಡಬಾರದು. ನಿಶ್ಚಯವಾದ ವಿಷಯವನ್ನಷ್ಟೇ ಹೇಳಲು ಹೊರಟಿವೆ. ''ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ'' ವಿದ್ವಾಂಸರು ಬ್ರಹ್ಮಸೂತ್ರಗಳಿಂದಲೇ ನಿಶ್ಚಯಜ್ಞಾನ ಹೊಂದುತ್ತಾರೆಂದು ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನೇ ಗೀತೆಯಲ್ಲಿ ಹೇಳಿದ್ದಾನೆ. ಆದರೆ 'ಆನಂದಮಯೋಽಭ್ಯಾಸಾತ್' ಎನ್ನುವ ಸೂತ್ರಕ್ಕೆ ಅಸ್ವರಸವಾದ ಅರ್ಥವನ್ನೇ ಮಾಡಬೇಕೆಂದು ಶಂಕರಾಚಾರ್ಯರು ಭಾಷ್ಯದಲ್ಲಿ ಹೇಳಿದ್ದಾರೆ. ಇದು ತಪ್ಪಲ್ಲವೇ?

ಮತ್ತು ಶಂಕರಭಾಷ್ಯದಲ್ಲಿ ಅಧಿಷ್ಠಾನನಾಗಿ ಹೇಳಲ್ಪಟ್ಟವನು ಶುದ್ಧಬ್ರಹ್ಮನು. ತೈತ್ತಿರೀಯೋಪನಿಷತ್ತು ಶುದ್ಧಬ್ರಹ್ಮಪರವಾಗಿದೆ ಎಂದು ಹೇಳಲಾಗಿದೆ. ಇದು ಸಹ ತಪ್ಪು. ''ಕಾಮಾಚ್ಚ ನಾನುಮಾನಾಕ್ಷೇಪಾತ್'' ಎಂಬ ಸೂತ್ರದಲ್ಲಿ ಮತ್ತು ''ಸೋಽಕಾಮಯತ'' ''ಭೀಷಾಸ್ಮಾತ್'' ಮುಂತಾದ ಸ್ಮೃತಿಗಳಲ್ಲಿ ಕಾಮಾದಿಗುಣಗಳನ್ನು ಹೇಳಲಾಗಿದೆ. ಶುದ್ಧಬ್ರಹ್ಮನಲ್ಲಿ ಈ ಗುಣಗಳನ್ನು ಹೇಳುವುದು ಅಸಾಧ್ಯ. ಮತ್ತು ನಿರ್ವಿಶೇಷಜ್ಞಾನ ಬಂದರಷ್ಟೇ ಬರಲು ಸಾಧ್ಯ. ಮೊದಲು ಸವಿಶೇಷನನ್ನು ಹೇಳಿ ಅನಂತರ ನಿರ್ವಿಶೇಷನನ್ನು ಹೇಳಬೇಕು. ಆದರೆ ನೀವು ನಿರ್ವಿಶೇಷನೇ ಮೊದಲು ಪ್ರತಿಪಾದ್ಯನಾಗಿದ್ದಾನೆಂದು ಹೇಳುತ್ತಿದ್ದೀರಿ ಇದು ಹೇಗೆ ಸರಿ? ಅದ್ವೈತಿಗಳು ಎದುರಿಸಬೇಕಾದ ಮತ್ತೊಂದು ಪ್ರಬಲದೋಷ -

'ಭೇದವ್ಯಪದೇಶಾತ್' ಎಂಬ ಇದೇ ಅಧಿಕರಣದ ಸೂತ್ರವು ಸುಸ್ಪಷ್ಟವಾಗಿ ಐಕ್ಯವನ್ನು ನಿಷೇಧಿಸುತ್ತಿದೆ. ಅದ್ವೈತಿಗಳ ಐಕ್ಯಸಮರ್ಥನೆಗೆ ಈ ಸೂತ್ರವು ಮಾರಕವಾಗಿದೆ ಎನ್ನುವುದರಲ್ಲಿ ಸಂಶಯವೇ ಇಲ್ಲ.

### ಕಠಿಣಪದಾರ್ಥ

ತದ್‌ವಿಜ್ಞಾಯ = ಬ್ರಹ್ಮನನ್ನು ತಿಳಿದು, ಪಿತರಂ ವರುಣಂ = ತಂದೆಯಾದ ವರುಣನನ್ನು, ಅಧೀಹಿ = ಅಧ್ಯಯನ ಮಾಡಿಸು, ಉತ್ತರಪ್ರಸ್ಥಾನಾದೌ = ಅನುವ್ಯಾಖ್ಯಾನ ಮತ್ತು ನ್ಯಾಯಸುಧೆಯಲ್ಲಿ, ಶುದ್ಧ್ಯಂತಾಮ್ = ಶುದ್ಧವಾಗಲಿ, ತಲ್ಲಕ್ಷಣಾಭಾವಾತ್ = ಬ್ರಹ್ಮನ ಲಕ್ಷಣ ಇಲ್ಲದ್ದರಿಂದ, ತತ್‌ಪ್ರಾಪ್ತಿ = ಬ್ರಹ್ಮನ ಹೊಂದುವಿಕೆಯನ್ನು ಕುಂಡಪಾಯಿನಾಮಯನೇ = ಕುಂಡದಿಂದ ಸೋಮರಸವನ್ನು ಕುಡಿಯುವ ಋತ್ವಿಜರು. ಅವರು ಸೇರಿ ನಡೆಸುವ ಸತ್ರವಿಶೇಷ, ವಿಶೇಷತದ್‌ಭಾವಾತ್ = ಭಗವಂತನ ಸ್ವರೂಪಸಾಮರ್ಥ್ಯರೂಪವಾದ ವಿಶೇಷವಿರುವುದರಿಂದ, ಉಕ್ತಮ್ = ಭಗವದ್‌ಗೀತೆಯಲ್ಲಿ ಹೇಳಿದೆ.

**प्रकाशः** – ननूपसंहारे अन्नमयादेः श्रवणेपि कथमन्नादिशब्देन तदर्थप्रत्यायनं, तत्र मयट्प्रत्ययस्याधिकत्वात्, अन्यथा मयटः स्वार्थिकत्वापत्तेरित्यतः सुधोक्तमाह – **अविरुद्धमिति** ॥

यथा ज्योतिष्टोमप्रकरणे "वसन्ते वसन्ते ज्योतिषा यजेत" इत्यत्र ज्योतिश्शब्देन ज्योतिष्टोमस्यैकदेशोत्कीर्तनेन समग्रशब्दलक्षणया प्रत्यायनम्, तद्वदन्नादिशब्दैरप्येकदेशोत्कीर्तनेनान्नमयादिशब्दलक्षणया तदर्थप्रत्यायनमविरुद्धमिति भावः ।

यत्तु पस्पशाह्निककैयटे – "सिद्धेशब्दार्थसम्बन्धे" इत्येतद्भाष्यव्याख्यावसरे एकदेशोत्कीर्तनेन प्रतीतस्य समग्रशब्दस्य नार्थप्रत्यायकत्वं, उच्चार्यमाणस्यैवार्थप्रत्यायकत्वात् । किन्तु समग्रशब्दस्य संज्ञात्वेन विनियोगकाले तदवयवा अपि संज्ञात्वेनार्थाद्विनियुज्यन्त इत्येकदेशस्यापि वाचकत्वमेव । "ठाजादावूर्ध्वं द्वितीयादचः" इति सूत्रे "विनाऽपि प्रत्ययं पूर्वोत्तरपदयोर्वा लोपो वक्तव्यः" इति वार्तिके 'देवदत्तो दत्तः' इत्यादौ पञ्चमाध्याये लोपविधानसामर्थ्याद्वर्णानां न वाचकत्वप्रसङ्ग इत्युक्तं, तन्न, अनुच्चार्यमाणस्यापि मनसाऽनुसंहितस्य शब्दस्यार्थप्रत्यायकत्वानुभवस्य सर्वसिद्धत्वात् । राजपुरुषादिशब्दार्थवाचकत्वस्य राजादिशब्देऽदर्शनाच्च । तदुक्तं सुधायां – "अत एव न प्रत्येकं वाचकत्वं, किन्त्वधिकारबलादेकदेशोत्कीर्तनेन समग्रशब्दलक्षणामङ्गीकृत्य निमित्ताभिधेयैक्यमङ्गीकरणीयम्" इत्यादि ।

ननूक्तमन्त्रादीनां ब्रह्मत्वे तज्ज्ञानिनः पुनरुपसरणायोग इत्यतः,

............. पश्चात्तपस्यैवापरोक्षतः ।
दृष्ट्वैकैकस्वरूपं तु समस्तोक्तानुदर्शनम् ।
इच्छताज्ञां गुरोः प्राप्य ...............।

इत्यनुव्याख्यां हृदि कृत्वोपसत्तेरन्यथोपपत्तिमाह – **अन्नादीनामिति** ।। इत्यादिकमिति । आदिपदेन ''तस्येदमेव शिरः'' इत्यादिप्रत्यक्षनिर्देशादेः,

इदमित्येव निर्देशो वस्त्रप्रावृतवद्विभोः ।

इत्याद्यनुव्याख्योक्तं समाधानं ग्राह्यम् ।

नन्वेवमुत्तरस्यां नारायणोपनिषदि श्रुतानामपि तथात्वं स्यादित्यत आह – **अन्नमयेति** ।। **रसशब्देनेति** ।। ''अन्नरसमयः'' इत्युपक्रमात् ''रसो वै सः'' इत्युपसंहाराच्च रसशब्दविशेषणस्य पञ्चस्वप्यभिप्रेतत्वेन, एते अन्नरसमय-प्राणरसमयादयः, ते तु केवलमन्नमयादय इति संज्ञाभेदादित्यर्थः । एतेन ''नन्वन्न-मयप्राणमयमनोमयविज्ञानमयाऽनन्दमया मे शुध्यन्ताम्'' इत्यादि टीका विवृता ।

दृष्टान्तेनैतदेवोपपादयति – **अथैष इति** ।। संज्ञाधिकरणमुक्तमाद्यसूत्रे । तत्र यथा ज्योतिष्टोम शब्दात् ज्योतिरादिशब्दानां भेदेन कर्मभेदस्तथाऽत्रापीत्यर्थः । 'अन्नरसमयः' इत्यत्रेव प्राणमयादावपि 'प्राणरसमयः' इत्यादिरूपेण रसशब्देन विशेषणस्यात्र टीकायां व्यक्तत्वा-त्संज्ञाभेद इति भावः ।

प्रकरणभेदेन भेदे दृष्टान्तमाह – **कुण्डपायिनामिति** ।। कुण्डेन पिबन्तीति कुण्ड-पायिनः । तेषामयनं नाम सत्रविशेषः । **मासमिति** । अत्यन्तसंयोगे द्वितीया ।

द्वितीयस्य तृतीये पादे ''प्रकरणान्तरे प्रयोजनान्यत्वम्'' इति एकादशेऽधिकरणे ''मासमग्निहोत्रं' इति वाक्ये नैयमिकाग्निहोत्रमेव मासे विधीयते अथ कर्मान्तरमिति विशये, अनुपादेयमासोद्देशेन कर्मोपादानेऽप्यप्राप्तो मासो विधीयत इति प्राप्ते, असन्निहितस्य नैयमिकस्य स्वतो बुद्धिस्थत्वाभावात् तन्नामककर्मान्तरविधिरिति सिद्धान्तितम् ।

ಪರಿಪೂರ್ಣಚಂದ್ರಿಕಾ

तत्र यथा नित्याग्निहोत्रमासाग्निहोत्रयोः प्रकरणभेदाद्भेदः, तथाऽत्रापि शुद्धिप्रार्थनप्रकरणब्रह्मप्रकरणयोर्भेदात् भेद इत्यर्थः।

यदत्र कश्चिदाह – तर्ह्यनुवाकद्वयस्यापि भिन्नप्रकरणत्वात्, संज्ञाभेदाच्चार्थभेदः स्यादिति, तद्दूरीकृतं बोध्यम्, ब्रह्मप्रश्नोत्तरत्वादिना तस्यापि ब्रह्मप्रकरणत्वात् । अन्ते मयटः श्रवणेनादावपि तस्य ग्राह्यत्वस्य प्रागेवोक्ततया संज्ञाभेदस्याप्यभावात् । एतदर्थमेव भाष्यटीकयोरनुक्तमपि भृगुवल्ल्याः समाख्यात्वमनुव्याख्यानोक्तं प्राग्दर्शितम् ।

**मूर्तिविशेषा इति** ।। तैत्तिरीयभाष्योदाहृतप्रमाणानुरोधेनानिरुद्धप्रद्युम्नसङ्कर्षणवासुदेवनारायणा अन्नमयादिकोशान्तर्गतास्तच्छब्दवाच्या इत्यर्थः । ननु पञ्चानां ब्रह्मत्वे "अन्योऽन्तर आत्मा प्राणमयः" "अन्योऽन्तर आत्मा मनोमयः" इत्यादिनोक्तमन्यत्वादिकं कथं, तस्यैकत्वाद्व्याप्तत्वाच्चेत्यत आह – **अन्योन्तर इतीति** ।।

**अधिष्ठानेति** ।। एतच्च समाधानं "तत्तत्कोशगतं तन्नियामकं ब्रह्मचैतन्यमेवोच्यते" इति टीकोक्त्या लभ्यत इति भावः । तथा च स्थानगतं स्थानिन्युपचर्यत इत्युक्तं भवति । वक्ष्यते चैतत्सूत्रकृता "हृद्यपेक्षया तु मनुष्याधिकारत्वात्" इत्यत्र, "न स्थानतोऽपि" इत्यस्य भाष्येऽपि "अभेदेऽपि भेदव्यपदेशः स्थानभेदादैश्वर्ययोगाच्च युज्यते" इत्यादि । "बहुरूपत्वाच्चाविरोधः" इति भाष्यदिशा मुख्यमेवार्थमाह – **भगवतो बहुरूपत्वादिति** ।। बहुत्वादन्यान्यत्वमणुरूपतया अन्तरत्वं च मुख्यमेवेति भावः ।

यद्वा बहुरूपत्वादन्तरत्वं पञ्चत्वसंख्या च मुख्येति ध्येयम् । अन्यत्वं च मुख्यमिति तु 'अभिन्नोपि विशेषेणैवान्य इत्युदितो हरिः' इत्यनुव्याख्यानोक्तमाह – **विशेषेति** ।। स्वरूपसामर्थ्यलक्षणविशेषसद्भावादित्यर्थः । अन्याय्यं चान्यथा नयनमित्याह – **अनन्तेति** ।। तदुक्तं सुधायां – "अनेकशाखाविदामेवात्र सम्यगधिकार इति ज्ञापनाय वाधूलशाखेत्याद्युक्तम्" इति ।। **उक्तं चेति** ।। गीतायाम् । 'निश्चितत्वं' अबाधितार्थनिश्चयजनकत्वम् । तदुक्तं ऐतरेयभाष्ये –

''नच सूत्रेषु निश्चितार्थस्यौपचारिकत्वं वक्तुं युज्यते, निर्णयात्मकत्वात्तेषाम्'' इत्यादि ।। **कामादिति** ।।

इदं प्रकरणं प्रधानपरं किं न स्यादित्याशङ्कानिरासाय 'कामात्' इति सूत्रम् । तस्यार्थः – ''सोऽकामयत'' इति श्रुत्या योऽभिहितः कामः, तस्माच्चेतनपरं, नानुमानिकप्रधानपरमिति त्वयोक्तेरिति भावः । **किञ्चेति** ।।

निर्विशेषं परं ब्रह्म साक्षात्कर्तुमनीश्वराः ।
ये मन्दास्तेऽनुकम्प्यन्ते सविशेषनिरूपणैः ।।

इति त्वदुक्तेरिति भावः । यद् भास्करप्रभृतिभिरद्वैत्येकदेशिभिर्वर्णितं, अन्नमयादयश्चत्वारः कोशाः, आनन्दमयस्तु ब्रह्मेति, तत्पञ्चानां कोशत्वादिना परेणैव पूर्वपक्षयित्वा दूषितमिति, नेह दूषितम् । यद्वा पञ्चानां ब्रह्मत्वसाधक-युक्तिकलापस्योक्त्यैव तदपि निरस्तमिति । यद्वा – ''न च पृथक्कल्पना युक्ता'' इति भाष्यटीकयोः,

एतेन मयटश्चैव द्वैविध्येनार्थकल्पनात् ।
तदन्येषां मतमपि सत्संसत्सु न भासते ।।

इत्यनुव्याख्यानादौ स्पष्टं निरासात्, केषांचिन्मतस्याग्रे निरस्यत्वात् तन्निरासेनैव निरस्तत्वान्न पृथङ्निरस्तम् ।

**गुरुराजीयम्** – नन्वन्नादिशब्दानामन्नमयादिषु रूढेरभावान्न तैस्तत्साधन-मित्यत आह – **अन्नादीनामिति** ।। ननु यद्यनुज्ञामादातुमुपसत्तिस्तर्ह्यनुजानीहीति वक्तव्यम् । अधीहीत्युक्तिस्तु न युज्यत इत्यत आह – **तत्रेति** ।। अवशिष्टं तु सुधातोऽवगन्तव्यमिति भावः । ननु यद्येवमन्नमयादीनां ब्रह्मत्वं तर्हि नारायणोपनिषदि शुद्धिप्रार्थनवाक्ये श्रुतानामप्यन्नमयादीनां ब्रह्मत्वं स्यात् । अविशेषात् । अन्यथैषामपि न स्यादित्यत आह – **अन्नमयेति** ।। संज्ञाभेदात् । अन्नादीनामन्नमयादीनां चेति शेषः । अथैष इत्येतत्तु प्रथमाधिकरण एव विवृतम् । तथा च साधकाभावाद्बाधकसद्भावाच्च न तेषां ब्रह्मत्वम् । स्थानद्वयोक्तानां तूभयसद्भावाद्ब्रह्मत्वमिति भावः । भगवन्मूर्तिविशेषा इत्येव वक्तव्ये यत्कोशान्तर्गता इत्याह तद्वक्ष्यमाणानुपपत्तिशङ्कानिराससूचनार्थमिति ज्ञातव्यम् ।

नन्वेवमन्नमयादीनां ब्रह्मत्वे अन्योन्तर आत्मेत्ययुक्तम् । ब्रह्मणश्चाभिन्नत्वेन व्याप्तत्वेन चान्यत्वान्तरत्वयोरभावादित्यत आह – **अन्यइति** ।।

यद्वा ननु नान्नमयादीनां ब्रह्मत्वं सम्भवति । तेषामन्योन्तर आत्मेत्यन्यत्वान्तरत्वयोरुक्तत्वात् । ब्रह्मणश्च निर्भेदत्वस्य न स्थानतोपीत्यधिकरणे प्रतिपादितत्वेनान्यत्वादेरसम्भवादित्यत आह – **अन्यइति** ।। तथाच कोशगतान्यत्वान्तरत्वे तदन्तर्गते ब्रह्मण्युपचर्येते इति भावः । तर्ह्युपचार एव न मुख्यावृत्तिरित्यत आह – **भगवत इति** ।। एवं च यत्परेणोक्तं श्रुतिसूत्राण्यन्यथा योज्यानीति तन्न । उक्तरीत्या श्रुत्यादिविरोधाभावादित्याह – **भगवत इति** ।। **तस्मादिति** ।।

ननु मया युक्त्यैव व्याख्यायन्त इत्यत आह – **अनन्ततेति** ।। ननु सूत्राण्यनिर्णीतत्वादेव व्याख्यायन्त इत्यत आह – **उक्तं चेति** ।। नन्वस्याधिकरणस्यैतदुपनिषदुक्तशुद्धब्रह्मपरत्वात्सूत्रास्वारस्यमङ्गीकर्तव्यमित्यत आह – **यच्चोक्तमिति** ।। ननु श्रुतेरनुवादपरत्वात्सूत्रस्यान्यथा योजनीयत्वाच्च शुद्धपरत्वहानिरित्यत आह – **किञ्चेति** ।।

ವಿವರಣೆ - ಆಕ್ಷೇಪ - ಉಪಸಂಹಾರದಲ್ಲಿ ಅನ್ನಮಯಾದಿಶಬ್ದಗಳು ಕೇಳಿಸಲಿ. ಆದರೆ ಅನ್ನಾದಿಶಬ್ದಗಳು ಅನ್ನಮಯಾದಿಗಳನ್ನೇ ಏಕೆ ಹೇಳಬೇಕು. ಉಪಸಂಹಾರದಲ್ಲಿ ಮಯಟ್ಪ್ರತ್ಯಯವು ಅಧಿಕವಾಗಿದೆ ಎಂದಷ್ಟೇ ಭಾವಿಸಬೇಕು. ಇಲ್ಲವಾದಲ್ಲಿ ಸ್ವಾರ್ಥದಲ್ಲಿ ಮಯಟ್ಪ್ರತ್ಯಯವನ್ನು ಹೇಳಿದಂತಾಗುತ್ತದೆ. ಸ್ವಾರ್ಥದಲ್ಲಿ ಹೇಳುವ ಪ್ರತ್ಯಯಕ್ಕೆ ವೈಯ್ಯರ್ಥವೇ ಬರುತ್ತದೆ. ಆದ್ದರಿಂದ ಅನ್ನಾದಿಶಬ್ದಗಳು ಅನ್ನಮಯಾದ್ಯರ್ಥವನ್ನು ಹೇಳುವುದಿಲ್ಲ.

ಸಮಾಧಾನ - ಸುಧೆಯಲ್ಲಿ ಹೇಳಿದ ಪರಿಹಾರವನ್ನೇ 'ಅವಿರುದ್ಧಂ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. "ನಾಮ್ನೈಕದೇಶೇ ನಾಮಗ್ರಹಣಮ್" ಎಂಬ ನ್ಯಾಯದಂತೆ ನಾಮದ ಏಕದೇಶವನ್ನು ಗ್ರಹಣ ಮಾಡಿದರೂ ಸಂಪೂರ್ಣ ನಾಮವನ್ನು ವಿವಕ್ಷಿಸುವುದು ಲೋಕದಲ್ಲಿ ಕಂಡಿದೆ. ಲೋಕದಲ್ಲಿಯೂ ಭೀಮಸೇನ ಎನ್ನುವ ಬದಲು ಕೇವಲ ಭೀಮ ಎನ್ನುತ್ತಾರೆ. ಈ ರೀತಿಯಾದ ಪ್ರಯೋಗವು ಲೋಕದಲ್ಲಿ ಅಷ್ಟೇ ಅಲ್ಲ ವೇದದಲ್ಲೂ ಕಾಣಿಸುತ್ತದೆ. ಜ್ಯೋತಿಷ್ಟೋಮಪ್ರಕರಣದಲ್ಲಿ "ವಸಂತೇ ವಸಂತೇ ಜ್ಯೋತಿಷಾ ಯಜೇತ" ಎಂದು ಹೇಳಿದೆ. ಇಲ್ಲಿರುವ ಜ್ಯೋತಿಷ್ ಶಬ್ದವು ಜ್ಯೋತಿಷ್ಟೋಮಶಬ್ದದ ಏಕದೇಶವಾಗಿದೆ. ಈ ಜ್ಯೋತಿಷ್ ಶಬ್ದದಿಂದ ಸಮಗ್ರವಾದ ಜ್ಯೋತಿಷ್ಟೋಮಶಬ್ದದಲ್ಲಿ ಲಕ್ಷಣಾ ಮಾಡಬೇಕು. ಆದ್ದರಿಂದ "ಜ್ಯೋತಿಷಾ ಯಜೇತ" ಎಂದರೆ "ಜ್ಯೋತಿಷ್ಟೋಮೇನ ಯಜೇತ" ಎಂದು ಅರ್ಥ. ಇದರಂತೆ ಅನ್ನಾದಿಶಬ್ದಗಳು ಅನ್ನಮಯಾದಿಶಬ್ದಗಳ ಏಕದೇಶವಾಗಿವೆ. ಈ ಅನ್ನಾದಿಶಬ್ದಗಳಿಗೆ ಅನ್ನಮಯಾದಿಶಬ್ದಗಳಲ್ಲಿ ಲಕ್ಷಣಾ

ಮಾಡಬೇಕು. ಆವಾಗ ಅನ್ನಮಯಾದಿಶಬ್ದಗಳಿಂದ ತಿಳಿಯುವ ಅರ್ಥವೇ ಅನ್ನಾದಿಶಬ್ದಗಳಿಂದಲೂ ತಿಳಿಯುತ್ತದೆ. ಹಾಗಾಗಿ ಅನ್ನಾದಿಶಬ್ದಗಳ ಅರ್ಥಕ್ಕೂ ಅನ್ನಮಯಾದಿಶಬ್ದಗಳ ಅರ್ಥಕ್ಕೂ ಏನೂ ವ್ಯತ್ಯಾಸವಿಲ್ಲ. (ಒಂದು ಶಬ್ದಕ್ಕೆ ಮತ್ತೊಂದು ಶಬ್ದದಲ್ಲಿ ಲಕ್ಷಣಾವನ್ನು ಮಾಡಿ ಈ ಸಮಾಧಾನವನ್ನು ಹೇಳಿದ್ದಾರೆ. ಹೀಗೆ ಶಬ್ದಲಕ್ಷಣ ಮಾಡುವುದು ಮೀಮಾಂಸಕರಲ್ಲಿ ಕಂಡಿದೆ.)

ಆಕ್ಷೇಪ - ಮಹಾಭಾಷ್ಯದ ವ್ಯಾಖ್ಯಾನವಾದ ಕೈಯ್ಯಟದಂತೆ ಮೇಲಿನ ಸಮಾಧಾನವು ತಪ್ಪಾಗುತ್ತದೆ. ಏಕದೇಶಶಬ್ದಕ್ಕೆ ಸಮಗ್ರಶಬ್ದದಲ್ಲಿ ಲಕ್ಷಣಾಮಾಡಿ ಸಮಗ್ರಶಬ್ದದಿಂದ ಅರ್ಥವನ್ನು ತಿಳಿಯಬೇಕೆಂದು ಹೇಳುತ್ತಿದ್ದೀರಿ. ಆದರೆ ಪಸ್ಪಶಾಹ್ನಿಕದಲ್ಲಿರುವ ''ಸಿದ್ಧೇ ಶಬ್ದಾರ್ಥಸಂಬಂಧೇ'' ಎಂಬ ಸೂತ್ರಭಾಷ್ಯಕ್ಕೆ ವ್ಯಾಖ್ಯಾನ ಮಾಡುವಾಗ ಕೈಯ್ಯಟದಲ್ಲಿ ಹೀಗೆ ಹೇಳಿದೆ - ಇದು ಸರಿಯಲ್ಲ. ಜ್ಯೋತಿಷ್ಟೋಮವೆಂಬ ಶಬ್ದವು ಒಂದು ಯಾಗಕ್ಕೆ ಸಂಜ್ಞೆಯಾಗಿದೆ. ಅದರ ಏಕದೇಶವಾದ ಜ್ಯೋತಿ ಎಂಬ ಶಬ್ದವೂ ಸಹ ಯಾಗದ ಸಮಗ್ರಸಂಜ್ಞೆಯಾಗುತ್ತದೆ. ಆದ್ದರಿಂದ ಏಕದೇಶಶಬ್ದಕ್ಕೆ ಸ್ವತಃ ಅರ್ಥವನ್ನು ಪ್ರತಿಪಾದಿಸುತ್ತಿರುವಾಗ ಪುನಃ ಸಮಗ್ರಶಬ್ದದಲ್ಲಿ ಲಕ್ಷಣಾ ಮಾಡಬೇಕಾಗಿಲ್ಲ. ಮತ್ತು ''ರಾಜಾದಾವೂರ್ಧ್ವಂ ದ್ವಿತೀಯಾದಚಃ'' ಎಂಬ ಸೂತ್ರದಲ್ಲಿ ''ವಿನಾಪಿ ಪ್ರತ್ಯಯಂ ಪೂರ್ವೋತ್ತರಪದಯೋರ್ವಾ ಲೋಪೋ ವಕ್ತವ್ಯಃ'' ಪ್ರತ್ಯಯ ಇಲ್ಲದಿದ್ದರೂ ಕೂಡ ಪೂರ್ವ ಮತ್ತು ಉತ್ತರಪದಗಳಿಗೆ ಲೋಪವನ್ನು ಹೇಳಬಹುದು. 'ದೇವದತ್ತಃ' ಎಂಬಲ್ಲಿ ಉತ್ತರಪದವಾದ ದತ್ತಃ ಎಂದರೂ ಸಾಕು; ದೇವದತ್ತನ ಬೋಧವು ಬರುತ್ತದೆ. ಹೀಗೆ ಪಂಚಮಾಧ್ಯಾಯದಲ್ಲಿ ಪೂರ್ವ ಮತ್ತು ಉತ್ತರಪದಗಳಿಗೆ ಲೋಪವನ್ನು ವಿಧಿಸಿದ್ದರಿಂದ ನಾಮದ ಏಕದೇಶವು ಅರ್ಥಪ್ರತ್ಯಾಯಕವೆಂದು ತಿಳಿಯುತ್ತದೆ. ಈ ವಾರ್ತಿಕದಿಂದ ಪೂರ್ವ ಮತ್ತು ಉತ್ತರವರ್ಣಗಳಿಗೆ ವಾಚಕತ್ವ ಇಲ್ಲವೆಂದು ತಿಳಿಯಬೇಕು. ರಾಮಃ ಎಂಬಲ್ಲಿ ಪೂರ್ವವರ್ಣವಾದ ರಾ ಎಂಬ ಅಕ್ಷರದಿಂದಾಗಲಿ ಮಾ ಎಂಬ ಉತ್ತರ ಅಕ್ಷರದಿಂದಾಗಲಿ ಶ್ರೀರಾಮನ ಜ್ಞಾನವು ಬರುವುದಿಲ್ಲ. ಪೂರ್ವ ಮತ್ತು ಉತ್ತರ ಪದಗಳಿಂದಷ್ಟೇ ಸಂಪೂರ್ಣ ಶಬ್ದದ ಅರ್ಥವು ತಿಳಿಯುತ್ತದೆ.

ಸಮಾಧಾನ - ಕೆಲವು ಶಬ್ದಗಳನ್ನು ಉಚ್ಚರಿಸದಿದ್ದರೂ ಅರ್ಥಪ್ರತ್ಯಾಯಕವಾಗುವುದು ಅನುಭವಸಿದ್ಧವಾಗಿದೆ. ಭರತನಾಟ್ಯದಲ್ಲಿ ಮಾಡುವ ಹಾವಭಾವದಿಂದಲೇ ಸಮಗ್ರ ಕಥೆಯನ್ನು ತಿಳಿಯುತ್ತೇವೆ. ಮೂಕನ ಕೈ ಸಂಜ್ಞೆಯಿಂದಲೇ ಮೂಕನ ಮನಸ್ಸಿನಲ್ಲಿರುವುದನ್ನು ತಿಳಿಯುತ್ತೇವೆ. ಆದ್ದರಿಂದ ಅರ್ಥವನ್ನು ತಿಳಿಯಬೇಕಾದರೆ ಶಬ್ದವನ್ನು ಉಚ್ಚಾರ ಮಾಡಲೇಬೇಕೆಂಬ ನಿಯಮವಿಲ್ಲ. ಮತ್ತು ಏಕದೇಶಶಬ್ದವು ಸಮಗ್ರಶಬ್ದದ ಅರ್ಥಕ್ಕೆ ವಾಚಕವಾಗುವುದಾದಲ್ಲಿ ಮತ್ತೊಂದು ಅನುಪಪತ್ತಿ ಬರುತ್ತದೆ. ರಾಜಪುರುಷಶಬ್ದವು ರಾಜಭಟನ ವಾಚಕವಾಗಿದೆ. ರಾಜಪುರುಷಶಬ್ದದ ಏಕದೇಶವಾದ ರಾಜಶಬ್ದವೂ ಸಹ ರಾಜಭಟನನ್ನೇ ಹೇಳುತ್ತದೆ. ಸೀತಾಪತಿ ಶಬ್ದವು ಶ್ರೀರಾಮನನ್ನು ಹೇಳುತ್ತದೆ. ಇದರ ಏಕದೇಶವಾದ ಸೀತಾಶಬ್ದವೂ ಸಹ ಶ್ರೀರಾಮನನ್ನು ಹೇಳುತ್ತದೆ. ಆದ್ದರಿಂದ ಏಕದೇಶಶಬ್ದಕ್ಕೆ ಸಮಗ್ರಶಬ್ದಾರ್ಥದ ವಾಚಕತ್ವ ಹೇಳುವುದು ತಪ್ಪಾಗುತ್ತದೆ. ಇದನ್ನೇ ಸುಧೆಯಲ್ಲಿ ಹೀಗೆ ಹೇಳಿದ್ದಾರೆ. ''ಅತ ಏವ ನ ಪ್ರತ್ಯೇಕಂ ವಾಚಕತ್ವಮ್ । ಕಿಂ ತ್ವಧಿಕಾರಬಲಾದೇಕದೇಶೋತ್ಕೀರ್ತನೇನ ಸಮಗ್ರಶಬ್ದಲಕ್ಷಣಾಮಂಗೀಕೃತ್ಯ ನಿಮಿತ್ತಭಿಯೈಕ್ಯ ಅಂಗೀ-ಕರಣೀಯಮ್'' ಆದ್ದರಿಂದಲೇ ''ಸಮಗ್ರ ಶಬ್ದದ ಏಕದೇಶಕ್ಕೆ ಪ್ರತ್ಯೇಕವಾಗಿ ವಾಚಕತ್ವವನ್ನು ಅಂಗೀಕರಿಸಬಾರದು. ಹೊರತಾಗಿ ಆಯಾ ಸಂದರ್ಭವನ್ನು ಅನುಸರಿಸಿ ಏಕದೇಶಶಬ್ದವಿದ್ದಲ್ಲಿ ಸಮಗ್ರಶಬ್ದದಲ್ಲಿ

ಲಕ್ಷಣಾ ಮಾಡಬೇಕು. ಸಮಗ್ರಶಬ್ದದ ಪ್ರವೃತ್ತಿನಿಮಿತ್ತಕ್ಕೂ ಮತ್ತು ಸಮಗ್ರಶಬ್ದದ ಅರ್ಥಕ್ಕೂ ಏಕದೇಶಶಬ್ದದ ಪ್ರವೃತ್ತಿ ನಿಮಿತ್ತದಿಂದ ಮತ್ತು ಏಕದೇಶಶಬ್ದದ ಅರ್ಥದಿಂದ ಐಕ್ಯವನ್ನು ಅಂಗೀಕರಿಸಬೇಕು.'' ಮುಂತಾದ ಮಾತುಗಳನ್ನು ಸುಧೆಯಲ್ಲಿ ಹೇಳಿದ್ದಾರೆ. ಇದರ ಆಧಾರದಿಂದ ಏಕದೇಶಶಬ್ದಕ್ಕೆ ಸಮಗ್ರಶಬ್ದದಲ್ಲಿ ಲಕ್ಷಣಾ ಮಾಡಬಾರದೆಂಬ ಕೈಯ್ಯಟನ ಅಭಿಪ್ರಾಯವು ಸರಿಯಲ್ಲವೆಂದು ತಿಳಿಯುತ್ತದೆ.

ಆಕ್ಷೇಪ - ಅನ್ನಮಯಾದಿಗಳನ್ನು ಬ್ರಹ್ಮನೆಂದು ಹೇಳುತ್ತಿದ್ದೀರಿ. ಹಾಗಾದಲ್ಲಿ ಅನ್ನಾದಿಗಳ ಜ್ಞಾನದಿಂದಲೇ ಬ್ರಹ್ಮನನ್ನು ತಿಳಿದಂತಾಯಿತು. ಆದರೆ ಉಪನಿಷತ್ತಿನಲ್ಲಿ ಅನ್ನಾದಿಗಳನ್ನು ಉಪದೇಶ ಮಾಡಿದ ಮೇಲೂ ಪುನಃ ಪುನಃ ಉಪಸತ್ತಿಯನ್ನು ಮಾಡಲಾಗಿದೆ. ಅಂದರೆ ಅನ್ನಾದಿಗಳು ಬ್ರಹ್ಮನಲ್ಲವೆಂದು ಅರ್ಥವೇ?

ಸಮಾಧಾನ - ಈ ಆಕ್ಷೇಪಕ್ಕೆ ಅನುವ್ಯಾಖ್ಯಾನದಲ್ಲಿ ಸ್ವರಸವಾದ ಉತ್ತರವನ್ನು ಹೇಳಿದ್ದಾರೆ - ''ಪಶ್ಚಾತ್ತಪಸ್ಯೈವಾಪರೋಕ್ಷತಃ । ದೃಷ್ಟ್ವೈಕೈಕಂ ಸ್ವರೂಪಂ ತು ಸಮಸ್ತೋಕ್ತಾನುದರ್ಶನಮ್ ಇಚ್ಛಾತಾಽಽಜ್ಞಾಂ ಗುರೋಃ ಪ್ರಾಪ್ಯ'' ''ತಪಸ್ಸಿನಿಂದ ಒಂದೊಂದೇ ರೂಪಗಳನ್ನು ಅಪರೋಕ್ಷೀಕರಿಸಿಕೊಂಡ ಭೃಗುವು ಮುಂದಿನ ರೂಪಗಳ ಅಪರೋಕ್ಷಕ್ಕಾಗಿ ಗುರುವಿನ ಉಪಸತ್ತಿಯನ್ನು ಮಾಡಿದ್ದಾನೆ.'' ಈ ಅನುವ್ಯಾಖ್ಯಾನವನ್ನು ಮನಸ್ಸಿನಲ್ಲಿಟ್ಟುಕೊಂಡು ಅನ್ನಾದೀನಾಮ್ ಇತ್ಯಾದಿ ವಾಕ್ಯದಿಂದ ಉಪಸತ್ತಿಗೆ ಅನ್ಯಥೋಪಸತ್ತಿಯನ್ನು ಹೇಳುತ್ತಿದ್ದಾರೆ. ಗ್ರಂಥದಲ್ಲಿ ''ಇತ್ಯಾದಿಕಮ್'' ಇಲ್ಲಿರುವ ಆದಿಪದದಿಂದ ಇದನ್ನು ತಿಳಿಯಬೇಕು. ''ತಸ್ಯೇದಮೇವ ಶಿರಃ'' ಅನ್ನಮಯಾದಿಗಳಲ್ಲಿ ಇದಂ ಶಬ್ದವನ್ನು ಪ್ರಯೋಗಿಸಲಾಗಿದೆ. ಪ್ರತ್ಯಕ್ಷಸಿದ್ಧವಾದ ವಸ್ತುವಿನಲ್ಲಿ ಮಾತ್ರ ಇದಂ ಶಬ್ದವನ್ನು ಪ್ರಯೋಗಿಸುತ್ತಾರೆ. ಅನ್ನಯಮಾದಿಗಳನ್ನು ನೀವು ಬ್ರಹ್ಮನೆಂದು ಹೇಳಿದರೆ ಬ್ರಹ್ಮನು ಕಣ್ಣಿಗೆ ಕಾಣಿಸದೇ ಇರುವುದರಿಂದ ಇದಂ ಶಬ್ದವು ತಪ್ಪಾಗುತ್ತದೆ. ಆದ್ದರಿಂದ ಅನ್ನಮಯಾದಿಕೋಶಗಳನ್ನೇ ಹೇಳಬೇಕು. ಅನ್ನಮಯಾದಿಕೋಶಗಳು ಕಣ್ಣಿಗೆ ಕಾಣಿಸುತ್ತಿರುವುದರಿಂದ ಇದಂಶಬ್ದಪ್ರಯೋಗವು ಸರಿಹೊಂದುತ್ತದೆ. ಈ ಆಕ್ಷೇಪಕ್ಕೂ ಅನುವ್ಯಾಖ್ಯಾನದಲ್ಲಿ ಉತ್ತರಿಸಿದ್ದಾರೆ. ''ಇದಮಿತ್ಯೇವ ನಿರ್ದೇಶೋ ವಸ್ತ್ರಾವೃತವದ್ವಿಭೋಃ'' ಬಟ್ಟೆಯನ್ನು ತೋರಿಸಿ ಇದು ತೊಡೆಯೆಂದು ಹೇಳುತ್ತಾರೆ. ಅದರಂತೆ ಅನ್ನವಿಕಾರವಾದ ಶಿರಸ್ಸನ್ನು ತೋರಿಸಿ ಶಿರಸ್ಸಿನ ಒಳಗಿರುವ ಭಗವಂತನನ್ನು ''ಇದಂಶಿರಃ'' ಎಂದು ಶ್ರುತಿ ಹೇಳುತ್ತಿದೆ. ಹೀಗೆ ಲೋಕವ್ಯವಹಾರವನ್ನು ಅನುಸರಿಸಿಯೇ ಶ್ರುತಿಯನ್ನು ಅನುಸರಿಸಬಹುದು. ರಂಗನಾಥನ ಪ್ರತಿಮೆಯನ್ನು ತೋರಿಸಿ ''ಅಯಂ ರಂಗನಾಥಃ'' ಎಂಬ ಪ್ರಯೋಗವನ್ನು ಪ್ರತಿಯೊಬ್ಬರೂ ಮಾಡುತ್ತಾರೆ. ಅಲ್ಲಿ ಪ್ರತಿಮೆಯೇ ರಂಗನಾಥನಲ್ಲ. ಪ್ರತಿಮೆಯ ಒಳಗಿರುವ ರಂಗನಾಥನನ್ನು ಉದ್ದೇಶಿಸಿ ಇದಂಶಬ್ದ ಪ್ರಯೋಗವು ಕಂಡಿದೆ. ಆದ್ದರಿಂದ ಶ್ರುತಿಯಲ್ಲಿರುವ ಇದಂ ಶಬ್ದದಿಂದ ಅನ್ನಾದಿಕೋಶಗಳನ್ನೇ ವಿವಕ್ಷಿಸಬೇಕಾಗಿಲ್ಲ.

ಆಕ್ಷೇಪ - ತೈತ್ತಿರೀಯೋಪನಿಷತ್ತಿನಲ್ಲಿರುವ ಅನ್ನಮಯಾದಿಶಬ್ದಗಳು ಕೋಶಪರವಲ್ಲ ವಿಷ್ಣು-ಪರವಾಗಿವೆಯೆಂದು ಹೇಳುತ್ತಿದ್ದೀರಿ. ಹಾಗಾದಲ್ಲಿ ತೈತ್ತಿರಿಯೋಪನಿಷತ್ತಿನ ಮುಂದಿರುವ ಮಹಾನಾರಾ-ಯಣೋಪನಿಷತ್ತಿನಲ್ಲಿರುವ ಇದೇ ಅನ್ನಮಯಾದಿಕೋಶಗಳು ಕೇಳಿಸುತ್ತಿವೆ. ಇವುಗಳು ಕೋಶಪರವಲ್ಲ ವಿಷ್ಣುಪರವಲ್ಲವೆಂದು ಆಗಬೇಕಾದೀತು?

ಸಮಾಧಾನ - ಈ ಆಕ್ಷೇಪಕ್ಕೆ ಅನ್ನಮಯ ಇತ್ಯಾದಿವಾಕ್ಯದಿಂದ ಏಳು ಬಗೆಯ ಸಮಾಧಾನವನ್ನು ಹೇಳುತ್ತಿದ್ದಾರೆ. ತೈತ್ತಿರೀಯೋಪನಿಷತ್ತಿನ ಪ್ರಾರಂಭದಲ್ಲಿ ''ಅನ್ನರಸಮಯಃ'' ಎಂದು ಇದೆ. ಕೊನೆಯಲ್ಲಿ ''ರಸೋ ವೈ ಸಃ'' ಎಂದಿದೆ. ಹೀಗೆ ರಸಶಬ್ದದ ಪ್ರಯೋಗವು ಇರುವುದರಿಂದ ಅನ್ನಮಯಾದಿಶಬ್ದಗಳನ್ನು ಅನ್ನರಸಮಯ ಪ್ರಾಣರಸಮಯ ಮನೋರಸಮಯ ಎಂದು ತಿಳಿಯಬೇಕಾಗುತ್ತದೆ. ಹೀಗೆ ಐದರಲ್ಲೂ ರಸಶಬ್ದದ ವಿಶೇಷಣವಿರುವುದರಿಂದ ಅನ್ನಮಯಾದಿ ಐದನ್ನು ಬ್ರಹ್ಮನೆಂದು ಒಪ್ಪುವ ಅನಿವಾರ್ಯತೆ ಇದೆ. ಆದರೆ ಮಹಾನಾರಾಯಣೋಪನಿಷತ್ತಿನ ಪ್ರಾರಂಭದಲ್ಲಾಗಲಿ ಕೊನೆಯಲ್ಲಿಯಾಗಲಿ ಮಧ್ಯದಲ್ಲಾಗಲಿ ಎಲ್ಲಿಯೂ ರಸಶಬ್ದವು ಕೇಳಿಸುತ್ತಿಲ್ಲ. ಆದ್ದರಿಂದ ತೈತ್ತಿರಿಯೋಪನಿಷತ್ತಿನಲ್ಲಿ ಅನ್ನರಸಮಯ ಮೊದಲಾದ ಶಬ್ದಗಳು ಬೇರೆ ಮಹಾನಾರಾಯಣೋಪನಿಷತ್ತಿನಲ್ಲಿ ತಿಳಿಸುತ್ತಿರುವ ಅನ್ನಮಯಾದಿಶಬ್ದಗಳೇ ಬೇರೆ. ಶಬ್ದಗಳು ಬೇರೆ ಬೇರೆಯಾದ್ದರಿಂದ ಅರ್ಥವು ಬೇರೆ ಬೇರೆಯಾಗುತ್ತದೆ. ಗ್ರಂಥಕಾರರು ಪ್ರಕೃತವಾಕ್ಯದಿಂದ ''ನನು ಅನ್ನಮಯಪ್ರಾಣಮಯಮನೋಮಯವಿಜ್ಞಾನಮಯಾನಂದಮಯಾ ಮೇ ಶುದ್ಧ್ಯಂತಾಮ್'' ಎಂಬ ಟೀಕಾವಾಕ್ಯವನ್ನು ವ್ಯಾಖ್ಯಾನಿಸಿದ್ದಾರೆ.

ದೃಷ್ಟಾಂತದಿಂದ ಇದೇ ವಿಷಯವನ್ನು 'ಅಥೈಷ' ಇತ್ಯಾದಿವಾಕ್ಯದಿಂದ ಪುಷ್ಟೀಕರಿಸುತ್ತಿದ್ದಾರೆ. ಪೂರ್ವಮೀಮಾಂಸೆಯ ಸಂಜ್ಞಾಧಿಕರಣದಲ್ಲಿ ಸಂಜ್ಞಾಭೇದದಿಂದ ಅರ್ಥಭೇದವನ್ನು ಸಮರ್ಥಿಸಿದ್ದಾರೆ. ಸಂಜ್ಞಾಧಿಕರಣದಲ್ಲಿ ಜ್ಯೋತಿಷ್ಟೋಮಶಬ್ದಕ್ಕೂ 'ಅಥೈಷಜ್ಯೋತಿಃ' ಎಂಬಲ್ಲಿ ಹೇಳಿದ ಜ್ಯೋತಿರಾದಿಶಬ್ದಗಳಿಗೂ ಭೇದವಿರುವುದರಿಂದ ಕರ್ಮಭೇದವನ್ನು ಹೇಳಿದ್ದಾರೆ. ಅದರಂತೆ ಇಲ್ಲಿಯೂ ಸಹ ಅನ್ನಶಬ್ದಕ್ಕೂ ಅನ್ನಮಯಾದಿಶಬ್ದಗಳಿಗೂ ವ್ಯತ್ಯಾಸವಿರುವುದರಿಂದ ಅದರ ಅರ್ಥದಲ್ಲಿಯೂ ವ್ಯತ್ಯಾಸವನ್ನು ಒಪ್ಪಬೇಕು. 'ಅನ್ನರಸಮಯಃ' ಎಂಬಲ್ಲಿ ರಸಶಬ್ದವಿದೆ. ಆದರೆ ಪ್ರಾಣಮಯಾದಿಗಳಲ್ಲಿ ರಸಶಬ್ದ ಕೇಳಿಸದಿರುವುದರಿಂದ ಪ್ರಾಣಮಯಾದಿಗಳನ್ನು ಬ್ರಹ್ಮನೆಂದು ಹೇಗೆ ಹೇಳುವುದು? ಎಂಬ ಆಕ್ಷೇಪಕ್ಕೂ ಈಗ ಅವಕಾಶವಿಲ್ಲ. ಅನ್ನಮಯಯೆಂಬಲ್ಲಿ ರಸಶಬ್ದವು ಹೇಗೆ ವಿಶೇಷಣವಾಗುತ್ತದೋ ಅದರಂತೆ 'ಪ್ರಾಣಮಯಃ' ಇತ್ಯಾದಿ ಸ್ಥಳದಲ್ಲಿಯೂ ರಸಶಬ್ದವು ವಿಶೇಷಣವಾಗುತ್ತದೆಂದು ಟೀಕೆಯಲ್ಲಿ ಹೇಳಿದ್ದಾರೆ. ಆದ್ದರಿಂದ ಮಹಾನಾರಾಯಣೋಪನಿಷತ್ತಿನಲ್ಲಿರುವ ಅನ್ನಮಯಾದಿಶಬ್ದಗಳೇ ಬೇರೆ; ರಸಶಬ್ದದ ವಿಶೇಷಣದಿಂದ ಕೂಡಿರುವ ತೈತ್ತಿರೀಯೋಪನಿಷತ್ತಿನಲ್ಲಿರುವ ಅನ್ನಮಯಾದಿಶಬ್ದಗಳೇ ಬೇರೆ. ಪೂರ್ವಮೀಮಾಂಸೆಯ ನ್ಯಾಯದಂತೆ ಸಂಜ್ಞಾಭೇದದಿಂದ ಅರ್ಥಭೇದವನ್ನು ಒಪ್ಪಬೇಕು.

ಪ್ರಕರಣಭೇದದಿಂದ ಅರ್ಥದಲ್ಲಿ ಭೇದವನ್ನು ಹೇಳಬೇಕು. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ಕುಂಡಪಾಯಿನಾಧಿಕರಣವೇ ದೃಷ್ಟಾಂತವಾಗಿದೆ. ಕುಂಡಪಾಯಿನ ಶಬ್ದಕ್ಕೆ ಋತ್ವಿಜರು ಎಂದು ಅರ್ಥ. ''ಕುಂಡೇ ಪಿಬಂತೀತಿ ಕುಂಡಪಾಯಿನಃ'' ಕುಂಡದಿಂದ ಸೋಮರಸಾದಿಗಳನ್ನು ಕುಡಿಯುತ್ತಾರಾದ್ದರಿಂದ ಋತ್ವಿಜರು ಕುಂಡಪಾಯಿಗಳೆಂದು ಕರೆಸಿಕೊಳ್ಳುತ್ತಾರೆ. ಕುಂಡಪಾಯಿನರು ಸೇರಿ ನಡೆಸುವ ಸತ್ರವಿಶೇಷವನ್ನು ವಿವಕ್ಷಿಸಬೇಕು. ''ಮಾಸಂ ಅಗ್ನಿಹೋತ್ರಂ'' ಎಂದು ಗ್ರಂಥಕಾರರು ಹೇಳಿದ್ದಾರೆ. ಇಲ್ಲಿರುವ 'ಮಾಸಂ' ಎಂಬ ಶಬ್ದಕ್ಕೆ ಒಂದು ದಿವಸವೂ ತಪ್ಪದೆ ಆಚರಿಸುವ ತಿಂಗಳಲ್ಲಿ 'ಅತ್ಯಂತಸಂಯೋಗೇ ದ್ವಿತೀಯಾ' ಎಂದು ದ್ವಿತೀಯಾವಿಭಕ್ತಿ ಬಂದಿದೆ. ಇಲ್ಲವಾದಲ್ಲಿ ಮಾಸೇ ಎಂದು ಸಪ್ತಮೀ ವಿಭಕ್ತಿ ಬರಬೇಕಿತ್ತು.

''ಪ್ರಕರಣಾಂತರೇ ಪ್ರಯೋಜನಾನ್ಯತ್ವಮ್'' (೨-೩-೧೧)

''ಮಾಸಂ ಅಗ್ನಿಹೋತ್ರಮಿತಿ'' ಎಂಬ ವಾಕ್ಯದಲ್ಲಿ ಪ್ರತಿನಿತ್ಯ ಮಾಡಬೇಕಾದ ನಿಯತ ಅಗ್ನಿಹೋತ್ರವೇ ಮಾಸವಿಶೇಷದಲ್ಲಿ ವಿಧಿಸ್ಪಟ್ಟಿದೆಯೋ? ಅಥವಾ ಬೇರೆ ಕರ್ಮವೇ ವಿಧಿಸಲ್ಪಟ್ಟಿದೆಯೋ? ಎಂದು ಸಂಶಯ.

ಪೂರ್ವಪಕ್ಷ - ''ಮಾಸಂ ಅಗ್ನಿಹೋತ್ರಂ'' ಎಂಬ ವಾಕ್ಯದಲ್ಲಿ ಅಗ್ನಿಹೋತ್ರವನ್ನು ವಿಧಿಸುತ್ತಿಲ್ಲ. ಏಕೆಂದರೆ ''ಯಾವಜ್ಜೀವಂ ಅಗ್ನಿಹೋತ್ರಂ ಜುಹೋತಿ'' ಎಂಬ ವಾಕ್ಯದಿಂದಲೇ ಅಗ್ನಿಹೋತ್ರವು ವಿಧಿಸಲ್ಪಟ್ಟಿದೆ. ಅದನ್ನೇ ಈ ವಾಕ್ಯವು ವಿಧಿಸುವುದು ಅನಾವಶ್ಯಕ. ಹೊರತಾಗಿ ಅಪ್ರಾಪ್ತವಾದ ಮಾಸವನ್ನು ವಿಧಿಸುತ್ತಿದೆ. ವಸ್ತುತಃ ಈ ವಾಕ್ಯವು ಮಾಸವು ಸ್ವರ್ಗಾದಿಗಳಂತೆ ಉಪಾದೇಯವಲ್ಲ. ಅನುಪಾದೇಯವಾದ ಮಾಸವನ್ನು ಉದ್ದೇಶಿಸಿ ಕರ್ಮವನ್ನು ವಿಧಿಸುತ್ತಿದೆಂದು ಹೇಳಬೇಕು. ಆದರೂ ಸಹ ಅಗ್ನಿಹೋತ್ರದಲ್ಲಿ ಕಾಲವಿಶೇಷವನ್ನು ವಿಧಿಸುತ್ತಿದೆಂದು ಹೇಳಬೇಕು. ಹೊರತು ಕರ್ಮಾಂತರವನ್ನು ವಿಧಿಸುತ್ತಿಲ್ಲ.

ಸಿದ್ಧಾಂತ - ನಿಯಮಸಿದ್ಧವಾದ ನಿತ್ಯಾಗ್ನಿಹೋತ್ರವನ್ನು ಈ ಪ್ರಕರಣದಲ್ಲಿ ಹೇಳಿಯೇ ಇಲ್ಲ. ನಿತ್ಯಾಗ್ನಿಹೋತ್ರವು ಅಸನ್ನಿಹಿತವಾಗಿದೆ. ಅದು ಬುದ್ಧಿಸ್ಥವಾಗಲು ಸಾಧ್ಯವಿಲ್ಲ. ಆದ್ದರಿಂದ 'ಮಾಸಂ ಅಗ್ನಿಹೋತ್ರಂ' ಎಂಬ ವಾಕ್ಯವು ನಿತ್ಯಾಗ್ನಿಹೋತ್ರದಲ್ಲಿ ಕಾಲವಿಶೇಷವನ್ನು ವಿಧಿಸುತ್ತದೆಂದು ಹೇಳಬಾರದು. ಹೊರತಾಗಿ ಅದೇ ಶಬ್ದವುಳ್ಳ ಬೇರೊಂದು ಧರ್ಮವನ್ನೇ ಪ್ರತ್ಯೇಕವಾಗಿ ವಿಧಿಸುತ್ತಿದೆಂದು ಹೇಳಬೇಕು.

ಇಲ್ಲಿ ನಿತ್ಯಾಗ್ನಿಹೋತ್ರ ಮತ್ತು ಮಾಸಾಗ್ನಿಹೋತ್ರಗಳು ಬೇರೆ ಬೇರೆ ಪ್ರಕರಣಗಳಲ್ಲಿರುವುದರಿಂದ ಹೇಗೆ ಭಿನ್ನ ಭಿನ್ನ ಕರ್ಮಗಳಾಗುತ್ತವೋ ಅದರಂತೆ ತೈತ್ತಿರೀಯೋಪನಿಷತ್ತಿನಲ್ಲಿ ಪ್ರಸಕ್ತವಾದ ಬ್ರಹ್ಮಪ್ರಕರಣವೇ ಬೇರೆ ಮಹಾನಾರಾಯಣೋಪನಿಷತ್ತಿನಲ್ಲಿ ಪ್ರಸಕ್ತವಾದ ಶುದ್ಧಿಪ್ರಾರ್ಥನಾಪ್ರಕರಣವೇ ಬೇರೆ. ಈ ಎರಡು ಪ್ರಕರಣವೂ ಭಿನ್ನ ಭಿನ್ನವಾದ್ದರಿಂದ ಮಹಾನಾರಾಯಣೋಪನಿಷತ್ತಿನ ಅನ್ನಮಯಾದಿಶಬ್ದಗಳು ಕೋಶಪರವಾಗುತ್ತವೇ ಹೊರತು ಬ್ರಹ್ಮಪರವಾಗುವುದಿಲ್ಲ.

ಕೆಲವರ ಆಕ್ಷೇಪ - ತೈತ್ತಿರೀಯೋಪನಿಷತ್ತು ಹಾಗೂ ಮಹಾನಾರಾಯಣೋಪನಿಷತ್ತು ಬೇರೆ ಬೇರೆ ಪ್ರಕರಣಗಳಾದ್ದರಿಂದ ಬೇರೆ ಬೇರೆ ಅರ್ಥವನ್ನು ಹೇಳುತ್ತದೆಂದು ಹೇಳಿದಿರಿ. ಹಾಗಾದಲ್ಲಿ ಬ್ರಹ್ಮವಲ್ಲಿ ಮತ್ತು ಭೃಗುವಲ್ಲಿಗಳು ಬೇರೆ ಬೇರೆ ಪ್ರಕರಣಗಳಾದ್ದರಿಂದ ಬೇರೆ ಬೇರೆ ಅರ್ಥಗಳನ್ನೇ ಪ್ರತಿಪಾದಿಸಬೇಕಾದೀತು?

ಸಮಾಧಾನ - ಈ ಆಕ್ಷೇಪಕ್ಕೆ ಈಗ ಅವಕಾಶವಿಲ್ಲ. ಬ್ರಹ್ಮನ ಬಗ್ಗೆ ಪ್ರಶ್ನೆ ಹಾಗು ಉತ್ತರಗಳಿರುವುದರಿಂದ ಭೃಗುವಲ್ಲಿಯು ಬ್ರಹ್ಮಪ್ರಕರಣವಾಗಿದೆ. ಮತ್ತು ಅರ್ಥದಲ್ಲಿ ಭೇದ ಬರಬೇಕಾದರೆ ಸಂಜ್ಞಾಭೇದವಿರಬೇಕು. ಬ್ರಹ್ಮವಲ್ಲಿ ಹಾಗು ಭೃಗುವಲ್ಲಿಗಳಲ್ಲಿ ಅನ್ನಮಯಾದಿಗಳು ಸಮಾನವಾಗಿವೆ. ವಸ್ತುತಃ ಭೃಗುವಲ್ಲಿಯಲ್ಲಿ ಕೆಲವೆಡೆ ಮಯಟ್ ಪ್ರತ್ಯಯವು ಕೇಳಿಸದಿರಬಹುದು. ಆದರೆ ಭೃಗುವಲ್ಲಿಯ ಕೊನೆಯಲ್ಲಿ ಮಯಟ್ ಪ್ರತ್ಯಯವು ಶ್ರುತವಾದ್ದರಿಂದ ಮೊದಲಿರುವ ಅನ್ನಾದಿಶಬ್ದಗಳಿಂದ ಅನ್ನಮಯಾದಿಗಳನ್ನು ವಿವಕ್ಷಿಸಬೇಕೆಂದು ಈ ಹಿಂದೆ ಸಮರ್ಥಿಸಿದ್ದೇವೆ. ಆದ್ದರಿಂದ ಸಂಜ್ಞಾಭೇದಕ್ಕೆ ಅವಕಾಶವಿಲ್ಲ. ಮಹಾನಾರಾಯಣೋಪನಿಷತ್ತಿನಂತೆ ಭೃಗುವಲ್ಲಿಯಲ್ಲಿಯೂ ಆಕ್ಷೇಪ ಮಾಡಬಾರದೆಂದು ಗ್ರಂಥಕಾರರು ಮೊದಲೇ ಭೃಗುವಲ್ಲಿಯ ಸಮಾಖ್ಯಾನವನ್ನು ಹೇಳಿದರು. ವಸ್ತುತಃ ಭಾಷ್ಯದಲ್ಲಾಗಲಿ ಟೀಕೆಯಲ್ಲಾಗಲಿ ಭೃಗುವಲ್ಲಿಯ ಸಮಾಖ್ಯಾನವನ್ನು

ಹೇಳಿಲ್ಲ. ಅನುವ್ಯಾಖ್ಯಾನದಲ್ಲಷ್ಟೇ ಹೇಳಿದ್ದಾರೆ. ಆದರೂ ಸಹ ಈ ಸಂಜ್ಞೆ ಬರಬಾರದೆಂದು ಅನುವ್ಯಾಖ್ಯಾನದ ಆಧಾರದಿಂದ ಮೊದಲೇ ಸಮಾಖ್ಯಾಪ್ರಮಾಣವನ್ನು ಸಮರ್ಥಿಸಿದ್ದಾರೆ.

ತೈತ್ತಿರೀಯಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣದಂತೆ ಅನ್ನಮಯಕೋಶದಲ್ಲಿ ಅನಿರುದ್ಧ, ಪ್ರಾಣಮಯಕೋಶದಲ್ಲಿ ಪ್ರದ್ಯುಮ್ನ, ಮನೋಮಯಕೋಶದಲ್ಲಿ ಸಂಕರ್ಷಣ, ವಿಜ್ಞಾನಮಯಕೋಶದಲ್ಲಿ ವಾಸುದೇವ, ಆನಂದಮಯಕೋಶದಲ್ಲಿ ನಾರಾಯಣ ಎಂದು ಕೋಶಗಳಲ್ಲಿರುವ ಭಗವದ್‌ರೂಪಗಳನ್ನು ತಿಳಿಯಬೇಕು.

ಆಕ್ಷೇಪ - ಅನ್ನಮಯಾದಿ ಐದನ್ನೂ ಕೂಡ ಬ್ರಹ್ಮನೆಂದು ಹೇಗೆ ಹೇಳುತ್ತೀರಿ? ''ಅನ್ಯೋಽಂತರ ಆತ್ಮಾ ಪ್ರಾಣಮಯಃ, ಅನ್ಯೋಽಂತರ ಆತ್ಮಾ ಮನೋಮಯಃ'' ಇತ್ಯಾದಿಯಾಗಿ ಅನ್ಯಾರ್ಥವು ಶ್ರುತವಾಗಿದೆ. ಎಲ್ಲವೂ ಬ್ರಹ್ಮವಾದಲ್ಲಿ ಭೇದವನ್ನು ಹೇಗೆ ಕೂಡಿಸುವುದು? ಬ್ರಹ್ಮನಾದರೂ ಒಬ್ಬನೇ ಆಗಿದ್ದಾನೆ. ಮತ್ತು ಸರ್ವತ್ರ ವ್ಯಾಪ್ತನಾದ ಬ್ರಹ್ಮನಲ್ಲಿ ಅಂತರರ್ಥ ಹೇಳುವುದು ತಪ್ಪಾಗುತ್ತದೆ.

ಸಮಾಧಾನ - ಈ ಆಕ್ಷೇಪಕ್ಕೆ 'ಅನ್ಯೋಽಂತರ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಬ್ರಹ್ಮನಿಗೆ ಅಧಿಷ್ಠಾನವಾದ ಕೋಶಗಳು ಭಿನ್ನ ಭಿನ್ನವಾದ್ದರಿಂದ ಅವುಗಳ ನಿಯಾಮಕನಾದ ಬ್ರಹ್ಮನಲ್ಲಿಯೂ ಸಹ ಅನ್ಯತ್ವವ್ಯವಹಾರವು ಬಂದಿದೆ. ಅನ್ನಮಯಾದಿಗಳು ಭಿನ್ನವೆಂದರೆ ಕೋಶಗಳು ಭಿನ್ನವೆಂದು ಅರ್ಥ. ಬ್ರಹ್ಮನು ಭಿನ್ನನೆಂದು ಅರ್ಥವಲ್ಲ. ಆದ್ದರಿಂದ ಸ್ಥಾನದಲ್ಲಿರುವ ಭೇದವನ್ನು ಸ್ಥಾನಿಯಲ್ಲಿ ಔಪಚಾರಿಕವಾಗಿ ಶ್ರುತಿ ಹೇಳುತ್ತಿದೆ. ಇದನ್ನೇ ಟೀಕೆಯಲ್ಲಿ ''ತತ್ತತ್ಕೋಶಗತಂ ತತ್ತನ್ನಿಯಾಮಕಂ ಬ್ರಹ್ಮಚೈತನ್ಯಮೇವೋಚ್ಯತೇ'' ಎಂದು ಹೇಳಿದ್ದಾರೆ. ಸೂತ್ರಕಾರರೂ ಕೂಡ ''ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್'' ಎಂಬ ಸೂತ್ರದಲ್ಲಿ ಭಗವಂತನಿಗೆ ಅಂಗುಷ್ಠಪರಿಮಾಣವನ್ನು ಹೇಳಿದ್ದಾರೆ. ಇಲ್ಲಿ ಹೃದಯವು ಅಂಗುಷ್ಠದಷ್ಟು ಇರುವುದರಿಂದ ಒಳಗಿರುವ ಭಗವಂತನನ್ನು ಅಂಗುಷ್ಠನೆಂದು ಹೇಳಿದ್ದಾರೆ.

ಮತ್ತು 'ನ ಸ್ಥಾನತೋಪಿ' ಎಂಬ ಸೂತ್ರದ ಭಾಷ್ಯದಲ್ಲಿಯೂ ಆಚಾರ್ಯರು ಹೀಗೆ ಹೇಳಿದ್ದಾರೆ. ''ಅಭೇದೇಪಿ ಭೇದಾದ್ಯೈಶ್ವರ್ಯಯೋಗಾಚ್ಚ ಯುಜ್ಯತೇ'' ಭಗವಂತನ ವಿಶ್ವ ತೈಜಸ ಎಲ್ಲರೂಪಗಳಿಗೂ ಅಭೇದವಿದೆ. ಆದರೂ ಕೂಡ ರೂಪಗಳ ಅಧಿಷ್ಠಾನವೂ ಭಿನ್ನ ಭಿನ್ನವಾದ್ದರಿಂದ ಭಗವಂತನ ರೂಪಗಳಲ್ಲಿ ಔಪಚಾರಿಕವಾಗಿ ಭೇದವ್ಯವಹಾರ ಮಾಡಲಾಗುತ್ತದೆ, ಎಂದು.

ಹೀಗೆ ಅನ್ಯೋಽಂತರ ಮುಂತಾದ ಶಬ್ದಗಳಿಗೆ ಲಕ್ಷಣಾ ಮಾಡಬೇಕು. ''ಬಹುರೂಪತ್ವಾಚ್ಚಾऽವಿರೋಧಃ'' ಎಂಬ ಭಾಷ್ಯದಂತೆ ಮುಖ್ಯಾರ್ಥವನ್ನೇ ಸ್ವೀಕರಿಸಿ 'ಭಗವತೋ ಬಹುರೂಪತ್ವಾತ್' ಇತ್ಯಾದಿಯಾಗಿ. ಭಗವಂತನ ರೂಪಗಳು ಅನೇಕವಾದ್ದರಿಂದ (ವಿಶೇಷದ ಬಲದಿಂದ) ಭೇದವನ್ನು ಮುಖ್ಯವಾಗಿಯೇ ಹೇಳಬಹುದು. ಅಣುರೂಪವಾಗಿರುವುದರಿಂದ ಅಂತರರ್ಥತ್ವವನ್ನೂ ಮುಖ್ಯವಾಗಿಯೇ ಹೇಳಬಹುದು. ಭಗವಂತನು ವ್ಯಾಪ್ತನಾದ್ದರಿಂದ ಅನ್ಯತ್ವಾದಿಗಳನ್ನು ಹೇಳುವುದು ಅಸಾಧ್ಯವಲ್ಲವೆ? ಎಂಬ ಪ್ರಶ್ನೆಗೆ ಭಗವತೋ ಬಹುರೂಪತ್ವಾತ್ ಎಂಬ ವಾಕ್ಯದಿಂದ ಉತ್ತರಿಸಿದರು. ಇದರಂತೆ ಭಗವಂತನು ಒಬ್ಬನೇ ಆಗಿರುವುದರಿಂದ ಅಂತರರ್ಥತ್ವಾದಿಗಳನ್ನು ಹೇಗೆ ಹೇಳುವುದು? ಎಂಬ ಪ್ರಶ್ನೆಗೂ ಈ ವಾಕ್ಯದಿಂದಲೇ ಉತ್ತರಿಸುತ್ತಿದ್ದಾರೆ. ಈ ಅರ್ಥದಲ್ಲಿ ಭಗವತಃ ಬಹುರೂಪತ್ವವತ್ ಅಂತರತ್ವ ಪಂಚತ್ವಸಂಖ್ಯಾ ಚ ಮುಖ್ಯಾ'' ಎಂದು

ಅನ್ವಯಿಸಬೇಕು. ಅನ್ಯತ್ವವು ಮುಖ್ಯವೆನ್ನಲು ''ಅಭಿನ್ನೋಽಪಿ ವಿಶೇಷೇಣೈವಾನ್ಯ ಇತ್ಯುದಿತೋ ಹರಿಃ'' ''ಅಭಿನ್ನನಾಗಿದ್ದರೂ ವಿಶೇಷಬಲದಿಂದ ಭೇದವ್ಯವಹಾರಕ್ಕೆ ವಿಷಯನಾಗಿದ್ದಾನೆ'' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ್ದನ್ನೇ ಸಮರ್ಥಿಸುತ್ತಿದ್ದಾರೆ ವಿಶೇಷ ಇತ್ಯಾದಿವಾಕ್ಯದಿಂದ. ಶ್ರುತಿವಿರೋಧ ಬಂದಾಗ ಸೂತ್ರಗಳಿಗೆ ಅನ್ಯಾರ್ಥವನ್ನು ಕಲ್ಪಿಸಬೇಕೆಂದು ಈ ಅಧಿಕರಣದ ಶಂಕರಭಾಷ್ಯವು ಸಮರ್ಥಿಸಿದೆ. ಶಂಕರಭಾಷ್ಯದ ನಿಲುವನ್ನು ಅಪಹಾಸ್ಯ ಮಾಡುತ್ತಾ ಗ್ರಂಥಕಾರರು ಶ್ಲೋಕದಲ್ಲಿ ನಿರಾಕರಿಸುತ್ತಿದ್ದಾರೆ. ''ಅನೇಕಶಾಖಾವಿದಾಮೇವಾತ್ರ ಸಮ್ಯಗಧಿಕಾರ ಇತಿ ಜ್ಞಾಪನಾಯ ವಾಧೂಲಶಾಖೇತ್ಯಾದ್ಯುಕ್ತಮ್'' ಅನೇಕ ಶಾಖೆಗಳನ್ನು ಬಲ್ಲವರಷ್ಟೇ ನಿಜವಾದ ಅಧಿಕಾರಿಗಳು ಎಂದು ತಿಳಿಸಲು ವಾಧೂಲಶಾಖೆಯನ್ನು ಉದಾಹರಿಸಿದ್ದಾರೆ. ಈ ಸುಧಾವಾಕ್ಯವನ್ನೇ ಶ್ಲೋಕದಲ್ಲಿ ವ್ಯಾಖ್ಯಾನಿಸಿದ್ದಾರೆ.

ಸೂತ್ರಗಳು ನಿಶ್ಚಿತವಾದ ಅರ್ಥವನ್ನೇ ಹೇಳುತ್ತವೆ ಎಂಬುದಕ್ಕೆ ಗೀತೆಯ ಮಾತು ಆಧಾರವಾದಂತೆ ಶ್ರೀಮದಾಚಾರ್ಯರ ಐತರೇಯಭಾಷ್ಯವೂ ಆಧಾರವಾಗಿದೆ. ''ನಚ ಸೂತ್ರೇಷು ನಿಶ್ಚಿತಾರ್ಥಸ್ಯೋಪಚಾರಿಕತ್ವಂ ವಕ್ತುಂ ಯುಜ್ಯತೇ । ನಿರ್ಣಯಾತ್ಮಕತ್ವಾತ್ತೇಷಾಮ್'' ''ಸೂತ್ರಗಳು ವೇದಾರ್ಥನಿರ್ಣಯಕ್ಕೋಸ್ಕರ ಹೊರಟಿವೆ. ಆದ್ದರಿಂದ ಗೌಣಾರ್ಥವನ್ನು ಮಾಡಬಾರದು.'' ''ಕಾಮಾಚ್ಚ ನಾನುಮಾನಾಪೇಕ್ಷಾ'' ಎಂಬ ಸೂತ್ರವನ್ನು ಅದ್ವೈತಿಗಳು ಹೀಗೆ ವ್ಯಾಖ್ಯಾನಿಸುತ್ತಾರೆ. ತೈತ್ತಿರೀಯೋಪನಿಷತ್ತಿನ ಪ್ರಕರಣವು ಪ್ರಧಾನಪರವಾಗಬಹುದು ಎಂಬ ಆಶಂಕೆಯನ್ನು ನಿರಾಕರಿಸಲು 'ಕಾಮಾತ್' ಎಂಬ ಸೂತ್ರವು ಹೊರಟಿದೆ. ''ಸೋಽಕಾಮಯತ'' ಎಂಬ ಶ್ರುತಿಯಿಂದ ಪ್ರತಿಪಾದಿಸಲ್ಪಟ್ಟ ಕಾಮನೆಯು ಚೇತನನಲ್ಲಿ ಇರುತ್ತದೆ ಹೊರತು ಅನುಮಾನಸಿದ್ಧವಾದ ಪ್ರಧಾನಪರವಾಗುವುದಿಲ್ಲ ಎಂದು ಅದ್ವೈತಿಗಳು ಹೇಳುವ ಸೂತ್ರಾರ್ಥ.

ನಿರ್ವಿಶೇಷಂ ಪರಂ ಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಾಃ ।
ಯೇ ಮಂದಾಸ್ತೇಽನುಕಂಪ್ಯಂತೇ ಸವಿಶೇಷನಿರೂಪಣೈಃ ॥

ನಿರ್ವಿಶೇಷನಾದ ಪರಬ್ರಹ್ಮನನ್ನು ತಿಳಿಯಲು ಪಾಮರರು ಅಸಮರ್ಥರಾಗುತ್ತಾರೆ. ಅಂತಹ ಪಾಮರರಿಗೋಸ್ಕರ ಸವಿಶೇಷಬ್ರಹ್ಮನ ನಿರೂಪಣೆಯು ಶ್ರುತಿಗಳಲ್ಲಿ ಹೇಳಲ್ಪಟ್ಟಿದೆ.

ಇದು ಅದ್ವೈತಿಗಳ ನಿಲುವು. ಇದರಿಂದ ಸವಿಶೇಷಬ್ರಹ್ಮನ ನಿರೂಪಣೆಯ ಅನಂತರವೇ ನಿರ್ವಿಶೇಷಬ್ರಹ್ಮನ ನಿರೂಪಣೆಯು ಹೆಚ್ಚು ಸಂಗತವೆಂದು ತಿಳಿಯಬಹುದು.

ಅದ್ವೈತಿಗಳಲ್ಲೇ ಕೆಲವರಾದ ಭಾಸ್ಕರ ಮೊದಲಾದವರು ಹೀಗೆ ಹೇಳುತ್ತಾರೆ - ಅನ್ನಮಯಾದಿ ನಾಲ್ಕು ಕೋಶಗಳಾಗಿವೆ. ಆನಂದಮಯನು ಮಾತ್ರ ಪರಬ್ರಹ್ಮನು ಎಂದು. ಇವರ ಈ ನಿಲುವನ್ನು ಪ್ರತ್ಯೇಕವಾಗಿ ನಿರಾಕರಿಸಬೇಕಾಗಿಲ್ಲ. ಅದ್ವೈತಿಗಳು ಐದನ್ನೂ ಕೋಶವೆಂದು ಪೂರ್ವಪಕ್ಷ ಮಾಡಿ ನಿರಾಕರಿಸಿದ್ದಾರೆ. ಅದ್ವೈತಿಗಳೇ ಭಾಸ್ಕರರನ್ನು ನಿರಾಕರಿಸಿದ ಮೇಲೆ ಪುನಃ ನಾವು ನಿರಾಕರಿಸಬೇಕಾಗಿಲ್ಲ, ಅಥವಾ ಅನ್ನಮಯಾದಿ ಐದೂ ಸಹ ಬ್ರಹ್ಮನೆಂಬ ವಿಷಯದಲ್ಲಿ ಅನೇಕ ಸಾಧಕಯುಕ್ತಿಗಳನ್ನು ಇದುವರೆಗೂ ಹೇಳಿದ್ದೇವೆ. ಈ ಸಾಧಕಯುಕ್ತಿಗಳಿಂದಲೇ ಅನ್ನಮಯಾದಿ ನಾಲ್ಕು ಕೋಶಗಳಾಗುವುದಿಲ್ಲವೆಂದು ಭಾಸ್ಕರರ ಮತವು ನಿರಾಕೃತವಾಗುತ್ತದೆ. ಅಥವಾ ''ನಚ ಪೃಥಕ್ಕಲ್ಪನಾ ಯುಕ್ತಾ'' ಎಂಬ ಭಾಷ್ಯದ ಟೀಕೆಯಲ್ಲಿ ಭಾಸ್ಕರರ ಮತವನ್ನು ಅತ್ಯಂತ ಸ್ಪಷ್ಟವಾಗಿ ಖಂಡಿಸಲಾಗಿದೆ. ಮತ್ತು

ಏತೇನ ಮಯಟಶ್ಚೈವ ದ್ವೈವಿಧ್ಯೇನಾರ್ಥಕಲ್ಪನಾತ್ ।
ತದನ್ಯೇಷಾಂ ಮತಮಪಿ ಸತ್ ಸಂಸತ್ಸು ನ ಭಾಸತೇ ॥

ಮಯಟ್‌ಪ್ರತ್ಯಯಕ್ಕೆ ಎರಡು ಅರ್ಥಗಳನ್ನು ಒಪ್ಪುವ ಭಾಸ್ಕರ ಮೊದಲಾದವರು ಸಭೆಯಲ್ಲಿ ಶೋಭಿಸಲಾರರು ಎಂದು ಅನುವ್ಯಾಖ್ಯಾನದಲ್ಲಿಯೂ ಸ್ಪಷ್ಟವಾಗಿಯೇ ಭಾಸ್ಕರರನ್ನು ನಿರಾಕರಿಸಿದ್ದಾರೆ. ಪ್ರಕೃತ ಗ್ರಂಥಕಾರರು ಮುಂದೆ ರಾಮಾನುಜಮತವನ್ನು ನಿರಾಕರಿಸುತ್ತಾರೆ. ಆದರಿಂದಲೇ ಭಾಸ್ಕರರ ಮತವು ನಿರಾಕರಿಸಿದಂತಾಗುತ್ತದೆಂದು ಇಲ್ಲಿ ಪ್ರತ್ಯೇಕವಾಗಿ ನಿರಾಕರಿಸಿಲ್ಲ.




ಅನ್ನ ಎಂದರೆ ಅನ್ನಮಯ. ಜ್ಯೋತಿಷಾ ಎನ್ನುವುದು ಜ್ಯೋತಿಷ್ಟೋಮ ಎನ್ನುವುದರ ಸಂಕ್ಷೇಪ ಹೇಗೋ ಹಾಗೆ. ಅನ್ನ ಎಂಬ ಬ್ರಹ್ಮನನ್ನೂ ತಿಳಿದೂ ಮತ್ತೆ ತಂದೆ ಬಳಿ ಬಂದಿದ್ದು ಇನ್ನೊಂದು ರೂಪದ ಉಪಾಸನೆಗಾಗಿ. ಮಹಾನಾರಾಯಣಉಪನಿಷತ್ತಿನ 'ಅನ್ನಮಯ' ಮೊದಲಾದವುಗಳು ಬ್ರಹ್ಮವಲ್ಲ. ಮೊದಲನೆಯ ಕಾರಣ. ಅದನ್ನೊಳಗೊಂಡ ಸೂಕ್ತ ಶುದ್ಧಿಗಾಗಿ ಮಾಡುವ ಪ್ರಾರ್ಥನೆಯಾಗಿದೆ. ಎರಡನೆಯದಾಗಿ 'ಬ್ರಹ್ಮ' ಎಂದು ಹೇಳಿಲ್ಲ. ಆದರಿಂದ ಅವು ಕೋಶಗಳೇ.

ಅನ್ನಮಯನಿಗಿಂತ ಪ್ರಾಣಮಯ ಅನ್ಯ ಎಂದು ಹೇಳಿರುವುದು ವಿಶೇಷವನ್ನಾಧರಿಸಿ. ಕೃಷ್ಣನೇ ಗೀತೆಯಲ್ಲಿ ನಿರ್ಣಾಯಕ ಎಂದು ಕೊಂಡಾಡಿರುವ ಬ್ರಹ್ಮಸೂತ್ರಗಳನ್ನು ಉಪೇಕ್ಷಿಸುವುದು ತಪ್ಪು. ಸೂತ್ರಗಳು ಅಪರಬ್ರಹ್ಮವನ್ನು ಹೇಳುತ್ತದೆ, ಅಪರ ಮೋಕ್ಷವನ್ನು ಸಹ ಎನ್ನುವವರು ವ್ಯಾಖ್ಯಾನಿಸಲೇಬಾರದಿತ್ತು.



## ರಾಮಾನುಜರ ಅಧಿಕರಣದ ವಿಮರ್ಶೆ

**तात्पर्यचन्द्रिका–**

**केचित्तु – ''तस्यैष एव शारीर आत्मा'' इति शारीरत्वेन जीव एवानन्दमय इति प्राप्ते, ''सैषाऽऽनन्दस्य'' इत्यारभ्य निरतिशयदशाशिरस्कस्यानन्दस्याभ्यासात्, तस्य चानन्तदुःखमिश्रपरिमितसुखलवभागिनि जीवेऽनुपपत्तेः तदाश्रय आनन्दमयः परमात्मा, विज्ञानमयस्तु जीवः, अन्नमयादयस्तु त्रयः कोशाः इति सिद्धान्त इत्याहुः[1] ।**

(१) रामानुजभाष्यम् –

तैत्तिरीया अधीयते 'स वा एष पुरुषोऽन्नरसमयः' (तै.२-१-१) इति प्रकृत्य 'तस्माद्वा

**तन्न, पूर्वपक्षिणाऽपि जीवतयाऽनङ्गीकृतप्राणमयादिसाधारणेन शारीरत्वेन जीवत्वशङ्कानुदयात् । श्रूयते हि प्राणमयादावपि "तस्यैष एव" इति शारीरत्वम् । सिद्धान्तोऽप्ययुक्तः, आनन्दमयस्य ब्रह्मत्वे ब्रह्मणः पुच्छत्वाद्यनुपपत्तीनाम-परिहारात् ।**

---

एतस्माद्विज्ञानमयात् । अन्योऽन्तर आत्माऽऽनन्दमयः' (तै. २-५-१) इति । तत्र सन्देहः, किमयमानन्दमयो बन्धमोक्षभागिनः प्रत्यगात्मनो जीवशब्दाभिलपनीयादन्यः परमात्मा; उत स एव ? इति । किं युक्तम्? प्रत्यगात्मेति । कुतः? 'तस्यैष एव शारीर आत्मा' (तै.२-५-१) इत्यानन्दमयस्य शारीरत्वश्रवणात्; शारीरो हि शरीरसम्बन्धी जीवात्मा ।। एवञ्च 'सत्यं ज्ञानमनन्तं ब्रह्म' (तै. २-१-१) इति विकारास्पदजडपरिच्छिन्न-वस्त्वन्तरव्यावृत्तस्यासुखाद्व्यावृत्तिरानन्दमय इत्युपदिश्यते । ततश्चाखण्डैकरसानन्दरूपे ब्रह्मण्यानन्दमय इति मयट् प्राणमय इव स्वार्थिको द्रष्टव्यः । तस्मादविद्यापरिकल्पित-विविधविचित्रदेवादिभेदभिन्नस्य जीवात्मनः स्वाभाविकं रूपमखण्डैकरसं सुखैकतानमानन्दमय इत्युच्यत इत्यानन्दमयः प्रत्यगात्मा ।।

एवं प्राप्ते प्रचक्ष्महे - आनन्दमयोऽभ्यासात् । आनन्दमयः परमात्मा । कुतः? अभ्यासात् । 'सैषानन्दस्य मीमांसा भवति' (तै. २-८-१) इत्यारभ्य । 'यतो वाचो निर्वतन्ते' (तै. २-९-१) इत्येवमन्तेन वाक्येन शतगुणितोत्तरक्रमेण निरतिशयदशाशिरस्कः अभ्यस्यामान आनन्दः अनन्ददुःखमिश्रपरिमितसुखलवभागिनि जीवात्मन्यसम्भवन्निखिल-हेयप्रत्यनीकं कल्याणैकतानं सकलेतरविलक्षणं परमात्मानमेव स्याश्रयमावेदयति । यथाह 'तस्माद्वा एतस्माद्विज्ञानमयात् । अन्योऽन्तर आत्मा आनन्दमयः' (तै. २-५-१) इति । विज्ञानमयो हि जीवः, न बुद्धिमात्रम्, मयट्-प्रत्ययेन व्यतिरेकप्रतीतेः । प्राणमयेत्वगत्या स्वार्थकता आश्रीयते । इह तु तद्वतो जीवस्य सम्भवान्नानर्थक्यं न्याय्यम् । बद्धो मुक्तश्च प्रत्यगात्मा ज्ञातैवेत्यभ्यधिष्महि । प्राणमयादौ च मयडर्थसम्भवोऽनन्तरमेव वक्ष्यते । कथं तर्हि विज्ञानमयविषयश्लोके 'विज्ञानं यज्ञं तनुते' (तै. २-५-१) इति केवलविज्ञान-शब्दोपादानमुपपद्यते । ज्ञातुरेवात्मनः स्वरूपमपि स्वप्रकाशतया विज्ञानमित्युच्यत इति न दोषः, ज्ञानैकनिरूपणीयत्वाच्च ज्ञातुः स्वरूपस्य । स्वरूपनिरूपणधर्मशब्दा हि धर्ममुखेन धर्मिस्वरूपमपि प्रतिपादयन्ति, गवादिशब्दवत् । 'कृत्यल्युटो बहुलम्' (पा. अ. ३-३-११३) इति वा कर्त्तरि ल्युडाश्रीयते । नन्द्यादित्वं वाऽऽश्रित्य 'नन्दिग्रहि' इत्यादिना कर्त्तरि ल्युः । अत एव च 'विज्ञानं यज्ञं तनुते कर्माणि तनुतेऽपि च' (तै. २-५-१) इति यज्ञादिकर्तृत्वं विज्ञानस्य श्रूयते । बुद्धिमात्रस्य हि न कर्तृत्वं सम्भवति । अचेतनेषु हि चेतनोपकरणभूतेषु विज्ञानमयात्प्राचीनेष्वन्नमयादिषु न चेतनधर्मभूतं कर्तृत्वं श्रूयते ।

ब्रह्मस्वरूपमेव शिरःपक्षपुच्छादिना रूप्यत इति चेत्, रूपणं यद्यध्यासः, तर्हि श्रुतेरप्रामाण्यमतिप्रसङ्गश्च । यदि तु सदृशतयोक्तिः, तदा मुख्यार्थत्यागः सादृश्याभावश्च । न हि ब्रह्मस्वरूपं शिर आदिसदृशम् ।

किञ्च विज्ञानमयस्य जीवत्वे,

विज्ञानं देवास्सर्वे ब्रह्म ज्येष्ठमुपासते ।
विज्ञानं ब्रह्म चेद्वेद तस्माच्चेन्न प्रमाद्यति ।
शरीरे पाप्मनो हित्वा सर्वान् कामान् समश्नुते ।

इत्यादेरयोगः । ''विज्ञानं यज्ञं तनुते'' इत्यादिकं तु ब्रह्मणस्सर्वकर्तृत्वात्, ''यज्ञभृद्यज्ञकृद्यज्ञी'' इत्यादेश्च युक्तम् । अन्नमयादेः कोशत्वं च निरस्तम् ।

नन्वन्नमयाद्युपदेशानन्तरं ''अन्योऽन्तर आत्मा'' इत्युक्तेः, आनन्दमयोपदेशानन्तरं तु तदनुक्तेरानन्दमय एव ब्रह्म, न त्वन्नमयादय इति चेत्, तर्हि छान्दोग्ये ''यो वै भूमा तत्सुखम्'' इति भूमोपदेशानन्तरं ''अथात आत्मादेशः'' इत्युक्तेः, तदनन्तरं च अन्यानुक्तेर्भूमा ब्रह्म न स्यात् । ''यत्र नान्यत्पश्यति'' इत्यादिब्रह्मलिङ्गात् भूम्नो ब्रह्मत्वे तु, अन्नमयादिरपि ब्रह्मशब्दाभ्यासादिना ब्रह्मास्तु ।

ननूत्तरानुवाके अन्नप्राणमनोविज्ञानज्ञानानन्तरं ''तद्विज्ञाय पुनरेव वरुणं पितरमुपससार'' इति पुनरुपसत्तिवत् ''आनन्दो ब्रह्मेति व्यजानात्'' इति आनन्दज्ञानानन्तरं पुनरुपसत्तेरभावेन आनन्दस्य ब्रह्मत्वात् अन्नप्राणमनोविज्ञानानन्तरं श्रुतेनाऽऽनन्देन अन्नमयप्राणमयमनोमयविज्ञानमयानन्तरं श्रुतस्याऽऽनन्दमयस्य स्थानप्रमाणेनाभेदादानन्दमय एव ब्रह्म, अन्नमयादयस्तु तद्द्वारभूता इति चेत्, न, अन्नादीनां द्वारत्वेऽपि पुनरुपसत्त्ययोगस्योक्तत्वात् ।

किञ्चैवं छान्दोग्ये ''यथा सोम्य मधु मधुकृतो निस्तिष्ठन्ति'' इत्यादेरनन्तरं ''भूय एव मा भगवान् विज्ञापयतु'' इति श्रवणात्तत्रोक्तमब्रह्म, ''पुरुषं सोम्योत हस्तगृहीतम्'' इत्यादेरनन्तरं तदश्रवणात्तत्रोक्तमेव ब्रह्म स्यात् । ''यथा सोम्य

**मधु'' इत्यादौ ''ऐतदात्म्यमिदं सर्वं'' इत्यादिब्रह्मलिङ्गादिना तत्रोक्तस्य ब्रह्मत्वे तु अत्रापि ''अन्नं ब्रह्मेति व्यजानात् । अन्नाद्ध्येव खल्विमानि भूतानि जायन्ते'' इति ब्रह्मश्रुत्यादिना अन्नादिकमपि ब्रह्मास्तु ।**

ಅನುವಾದ - ರಾಮಾನುಜರು ಆನಂದಮಯಾಧಿಕರಣದ ಶರೀರವನ್ನು ಹೀಗೆ ರಚಿಸಿದ್ದಾರೆ - ''ತಸ್ಯೈಷ ಏವ ಶಾರೀರ ಆತ್ಮಾ'' ಈ ಶ್ರುತಿಯಲ್ಲಿ ಶಾರೀರತ್ವವೆಂಬ ಹೇತುವು ಶ್ರುತವಾಗಿದೆ. ಶಾರೀರತ್ವಹೇತುವು ಜೀವನಲ್ಲಷ್ಟೇ ಕೂಡುತ್ತದೆ. ಬ್ರಹ್ಮನಲ್ಲಿ ಕೂಡುವುದಿಲ್ಲ. ಆದ್ದರಿಂದ ಆನಂದಮಯನೂ ಸಹ ಜೀವನೇ ಆಗುತ್ತಾನೆ ಹೊರತು ಬ್ರಹ್ಮನಾಗುವುದಿಲ್ಲ. ಇಷ್ಟು ಪೂರ್ವಪಕ್ಷ.

''ಸೈಷಾನಂದಸ್ಯ'' ಎಂಬ ಶ್ರುತಿಯಿಂದ ಆರಂಭಿಸಿ ನಿರತಿಶಯವಾದ ಆನಂದವನ್ನು ಹೇಳುವ ಆನಂದಮಯಶಬ್ದವನ್ನು ಅನೇಕ ಬಾರಿ ಶ್ರುತಿಯು ಹೇಳುತ್ತಿದೆ. ಇಂತಹ ಆನಂದಮಯಶಬ್ದವು ಅನಂತ ದುಃಖದಿಂದ ಬಳಲುತ್ತಿರುವ ಸ್ವಲ್ಪವಷ್ಟೇ ಸುಖವನ್ನು ಅನುಭವಿಸುವ ಜೀವನನ್ನು ಹೇಳಲಾರದು. ಆದ್ದರಿಂದ ನಿರತಿಶಯವಾದ ಆನಂದಕ್ಕೆ ಆಶ್ರಯನಾದ ಪರಮಾತ್ಮನೇ ಆನಂದಮಯನಾಗುತ್ತಾನೆ. ಜೀವನು ವಿಜ್ಞಾನಯಮನಾಗಿದ್ದಾನೆ. ಅನ್ನಮಯ, ಪ್ರಾಣಮಯ, ಮನೋಮಯ, ಇವು ಮೂರು ಕೋಶಗಳಾಗಿವೆ. ಇಷ್ಟು ಸಿದ್ಧಾಂತ.

ರಾಮಾನುಜರ ಈ ಅಧಿಕರಣರಚನೆಯು ಸರಿಯಿಲ್ಲ. ಮೊದಲು ಪೂರ್ವಪಕ್ಷವೇ ತಪ್ಪು. ''ಆನಂದಮಯಃ ಜೀವ ಏವ ಶಾರೀರತ್ವಾತ್'' ಎಂದು ಶಾರೀರತ್ವಹೇತುವಿನಿಂದ ಜೀವನನ್ನು ಆನಂದಮಯನೆಂದು ಸಾಧಿಸಿದರೆ ಅನುಮಾನಕ್ಕೆ ವ್ಯಭಿಚಾರ ಬರುತ್ತದೆ. ಶಾರೀರತ್ವಹೇತುವು ಪ್ರಾಣಮಯಾದಿಗಳಲ್ಲಿಯೂ ಸಾಧಾರಣವಾಗಿದೆ. ಆದರೆ ಪ್ರಾಣಮಯಾದಿಗಳನ್ನು ಜೀವರೆಂದು ಪೂರ್ವಪಕ್ಷಿಗಳು ಅಂಗೀಕರಿಸಿಲ್ಲ. ಹೀಗೆ ಶಾರೀರತ್ವಹೇತುವಿಗೆ ಪ್ರಾಣಮಯಾದಿಗಳಲ್ಲಿ ವ್ಯಭಿಚಾರ ಬರುವುದರಿಂದ ಆನಂದಮಯನು ಜೀವನಾಗುತ್ತಾನೆಂಬ ಪೂರ್ವಪಕ್ಷವೇ ಹುಟ್ಟುವುದಿಲ್ಲ. ''ತಸ್ಯೈಷ ಏವ'' ಇತ್ಯಾದಿಯಾಗಿ ಪ್ರಾಣಮಯಾದಿಗಳಲ್ಲಿ ಶಾರೀರತ್ವವನ್ನು ಶ್ರುತಿಯೇ ಸ್ಪಷ್ಟವಾಗಿ ಹೇಳುತ್ತಿದೆ.

ಇನ್ನು ಸಿದ್ಧಾಂತವು ಸರಿಯಲ್ಲ. ಆನಂದಮಯನನ್ನು ಬ್ರಹ್ಮನೆಂದು ಸಿದ್ಧಾಂತ ಮಾಡಿದ್ದೀರಿ. ಆದರೆ ಶ್ರುತಿಯು ಬ್ರಹ್ಮನನ್ನು ಆನಂದಮಯನ ಪುಚ್ಛವೆಂದು ಹೇಳುತ್ತಿದೆಯಲ್ಲ? ಈ ಗೊಂದಲವನ್ನು ಪರಿಹಾರಮಾಡದೆ ಸಿದ್ಧಾಂತದ ನಿಲುವು ಹೇಗೆ ಆಗುತ್ತದೆ.

ಆಕ್ಷೇಪ - ಶ್ರುತಿಯು ಬ್ರಹ್ಮಸ್ವರೂಪವನ್ನೇ ಶಿರಸ್ಸು, ಪಕ್ಷ, ಪುಚ್ಛ, ಇತ್ಯಾದಿಯಾಗಿ. ನಿರೂಪಿಸುತ್ತದೆ. ಹಾಗಾಗಿ ಆನಂದಮಯನ ಪುಚ್ಛ, ಹಾಗೂ ಆನಂದಮಯ ಎರಡು ಸಹ ಬ್ರಹ್ಮಸ್ವರೂಪಗಳೇ ಆಗಿವೆಯಲ್ಲವೆ?

ಸಮಾಧಾನ - 'ನಿರೂಪಿಸುತ್ತಿದೆ' ಎಂಬ ಶಬ್ದಕ್ಕೆ ಏನು ಅರ್ಥ? ಶಿರಸ್ಸು ಮೊದಲಾವುಗಳನ್ನು

ಬ್ರಹ್ಮನಲ್ಲಿ ಅಧ್ಯಸ್ತವೆಂದು ಹೇಳುತ್ತಿದೆಂದರೆ ಶ್ರುತಿಗೆ ಅಪ್ರಾಮಾಣ್ಯ ಬರುತ್ತದೆ. ಮತ್ತು ಬ್ರಹ್ಮಲಿಂಗಗಳನ್ನು ಜೀವನಲ್ಲಿಯೂ ಅಧ್ಯಾಸ ಮಾಡಬಹುದು. ಆದ್ದರಿಂದ ಯಾವುದೇ ಅಧಿಕರಣದಲ್ಲಿ ಸಿದ್ಧಾಂತ ಸ್ಥಾಪನೆಯೇ ಆಗದಿರಬೇಕಾದೀತು ಎಂಬ ಅತಿಪ್ರಸಂಗ ಬರುತ್ತದೆ. ಒಂದು ವೇಳೆ (ಬ್ರಹ್ಮ ಸ್ವರೂಪವು ಶಿರಸ್ಸು ಮೊದಲಾದವುಗಳಂತೆ ಇದೆ ಎಂಬ ಸಾದೃಶ್ಯಾರ್ಥವನ್ನು) ಹೇಳಿದರೆ, ಮುಖ್ಯಾರ್ಥವನ್ನು ಬಿಟ್ಟಂತಾಗುತ್ತದೆ. ಅಷ್ಟೇ ಅಲ್ಲದೆ ಬ್ರಹ್ಮನಿಗೂ ಶಿರಸ್ಸಿಗೂ ಯಾವುದೇ ವಿಧದಲ್ಲಿಯೂ ಸಾದೃಶ್ಯವನ್ನು ನಿಮ್ಮಿಂದ ಉಪಪಾದಿಸಲಾಗದು.

ವಿಜ್ಞಾನಮಯನನ್ನು ಜೀವನೆಂದು ಹೇಗೆ ಹೇಳುವಿರಿ? ಏಕೆಂದರೆ ''ವಿಜ್ಞಾನಂ ದೇವಾಃ ಸರ್ವೇ ಬ್ರಹ್ಮ ಜ್ಯೇಷ್ಠಮುಪಾಸತೇ'' ''ವಿಜ್ಞಾನಂ ಬ್ರಹ್ಮ ಚೇದ್ವೇದ ತಸ್ಮಾಚ್ಚೇನ್ನ ಪ್ರಮಾದ್ಯತಿ'' ''ಶರೀರೇ ಪಾಪ್ಮನೋ ಹಿತ್ವಾ ಸರ್ವಾನ್ ಕಾಮಾನ್ ಸಮಶ್ನುತೇ'' (ಎಲ್ಲ ದೇವತೆಗಳು ಬ್ರಹ್ಮನನ್ನು ವಿಜ್ಞಾನಯಮನೆಂದು ಜ್ಯೇಷ್ಠನೆಂದು ಉಪಾಸನೆ ಮಾಡುತ್ತಾರೆ. ಬ್ರಹ್ಮನನ್ನು ವಿಜ್ಞಾನಮಯನೆಂದು ಉಪಾಸನೆ ಮಾಡಿದರೆ ಅಯಥಾರ್ಥಜ್ಞಾನವನ್ನು ಹೊಂದುವುದಿಲ್ಲ. ಮತ್ತು ಸಕಲಪಾಪಗಳಿಂದ ಮುಕ್ತನಾಗಿ ಮೋಕ್ಷವನ್ನೇ ಹೊಂದುತ್ತಾನೆ.) ಈ ಶ್ರುತಿಯು ಪರಮಾತ್ಮನನ್ನೇ ವಿಜ್ಞಾನಮಯನೆಂದು ಹೇಳುತ್ತಿದೆ. ಜೀವನನ್ನು ವಿಜ್ಞಾನಮಯನೆಂದು ಹೇಳಿದರೆ ಇದು ತಪ್ಪಾಗುತ್ತದೆ. ''ವಿಜ್ಞಾನಂ ಯಜ್ಞಂ ತನುತೇ'' ಈ ಶ್ರುತಿಯಲ್ಲಿ ವಿಜ್ಞಾನಮಯನಲ್ಲಿ ಯಜ್ಞಕರ್ತೃತ್ವವು ಕೇಳಿಸುತ್ತದೆ. ಯಜ್ಞಕರ್ತೃತ್ವವು ಜೀವನಲ್ಲಷ್ಟೇ ಕೂಡುತ್ತದೆಂದು ಪ್ರಶ್ನಿಸಬಾರದು. ಬ್ರಹ್ಮನು ಸರ್ವಕರ್ತೃವಾದ್ದರಿಂದ ಯಜ್ಞಕರ್ತೃವೂ ಆಗುತ್ತಾನೆ. ವಿಷ್ಣುಸಹಸ್ರನಾಮವು ಭಗವಂತನನ್ನು ''ಯಜ್ಞಭೃದ್ಯಜ್ಞಕೃದ್ಯಜ್ಞೀ'' ಎಂದು ಯಜ್ಞಕೃತ್ ಎನ್ನುತ್ತಿದೆ. ಪ್ರಕೃತ ಶ್ರುತಿಯೂ ಸಹ ಭಗವಂತನಲ್ಲಿರುವ ಯಜ್ಞಕರ್ತೃತ್ವಗುಣವನ್ನು ಪ್ರಶಂಸಿಸುತ್ತದೆ. ಆದ್ದರಿಂದ ಯಜ್ಞಕರ್ತೃತ್ವಗುಣದಿಂದ ಜೀವನನ್ನು ವಿಜ್ಞಾನಮಯನೆಂದು ಸಾಧಿಸಲಾಗದು. ಇನ್ನು ಅನ್ನಮಯ, ಪ್ರಾಣಮಯ, ಮನೋಮಯಗಳು ಕೋಶಗಳಾಗಲಾರದೆಂದು ಈ ಹಿಂದೆ ನಿರಾಕರಿಸಿದ್ದಾಗಿದೆ.

ಆಕ್ಷೇಪ - ಅನ್ನಮಯಾದಿಗಳನ್ನು ಉಪದೇಶಿಸಿದ ಅನಂತರದಲ್ಲಿ ''ಅನ್ಯೋಂತರ ಆತ್ಮಾ'' ಎಂದು ಅನ್ಯತ್ವವನ್ನು ಮತ್ತು ಅಂತರತ್ವವನ್ನು ಹೇಳುತ್ತಿದೆ. ಕೊನೆಯಲ್ಲಿ ಎಲ್ಲರಿಗಿಂತ ಭಿನ್ನನಾದ ಮತ್ತು ಎಲ್ಲರ ಒಳಗಿರುವ ಆನಂದಮಯನು ಶ್ರುತನಾಗಿದ್ದಾನೆ. ಆನಂದಮಯನನ್ನು ಉಪದೇಶಿಸಿದ ಮೇಲೆ 'ಅನ್ಯೋಽಂತರ ಆತ್ಮಾ' ಎಂದು ಅನ್ಯತ್ವವನ್ನಾಗಲೀ ಅಂತರತ್ವವನ್ನಾಗಲೀ ಬೇರೆ ಯಾರಲ್ಲಿಯೂ ಹೇಳಿಲ್ಲ. ಆದ್ದರಿಂದ ಆನಂದಮಯನೇ ಬ್ರಹ್ಮನಾಗುತ್ತಾನೆ ಹೊರತು ಅನ್ನಮಯಾದಿಗಳು ಬ್ರಹ್ಮವಾಗುವುದಿಲ್ಲ.

ಸಮಾಧಾನ - ಹಾಗಾದರೆ ಛಾಂದೋಗ್ಯದಲ್ಲಿ ''ಯೋ ವೈ ಭೂಮಾ ತತ್ಸುಖಮ್'' ಎಂದು ಭೂಮನನ್ನು ಉಪದೇಶಿಸಲಾಗಿದೆ. ಅನಂತರ ''ಅಥಾತಃ ಆತ್ಮಾದೇಶಃ'' ಎಂದು ಆತ್ಮನ ಉಪದೇಶವು

ಕೇಳಿಸುತ್ತಿದೆ. ಮುಂದೆ ಬೇರೆ ಯಾವ ಉಪದೇಶವೂ ಕೇಳಿಸುತ್ತಿಲ್ಲ. ಹಾಗಾಗಿ ಆತ್ಮನೇ ಬ್ರಹ್ಮನಾಗಿದ್ದಾನೆ ಹೊರತು ಭೂಮನು ಬ್ರಹ್ಮನಲ್ಲ ಎಂದಾಗಬೇಕಾದೀತು.

ಆಕ್ಷೇಪ - ''ಯತ್ರ ನಾನ್ಯತ್ಪಶ್ಯತಿ'' ಬ್ರಹ್ಮನ ಲಿಂಗವನ್ನು ಹೇಳುತ್ತಿರುವುದರಿಂದ ಭೂಮನು ಬ್ರಹ್ಮನಾಗುತ್ತಾನಲ್ಲವೇ?

ಸಮಾಧಾನ - ಬ್ರಹ್ಮಲಿಂಗ ಇರುವುದರಿಂದ ಭೂಮನನ್ನು ಬ್ರಹ್ಮನೆಂದು ನಿರ್ಣಯಿಸಿದರೆ ಅನ್ನಮಯಾದಿಪ್ರಕರಣದಲ್ಲಿಯೂ ಬ್ರಹ್ಮಶಬ್ದದ ಅಭ್ಯಾಸವು ಶ್ರುತವಾಗಿದೆ. ಬ್ರಹ್ಮತ್ವನಿರ್ಣಯತ್ವಕ್ಕೆ ಬ್ರಹ್ಮಶಬ್ದದ ಅಭ್ಯಾಸವು ಪ್ರಬಲವಾದ ಲಿಂಗವಾಗಿದೆ. ಇದರಿಂದ ಅನ್ನಮಯಾದಿಗಳನ್ನು ಬ್ರಹ್ಮರೆಂದು ನಿರ್ಣಯಿಸಬಹುದಲ್ಲವೆ?

ಆಕ್ಷೇಪ - ಉತ್ತರಾನುವಾಕವಾದ ಭೃಗುವಲ್ಲಿಯಲ್ಲಿ ಅನ್ನ ಪ್ರಾಣ ಮನಸ್ಸುಗಳನ್ನು ತಿಳಿದ ಮೇಲೆ ಭೃಗುಋಷಿಯು ಪುನಃ ಪುನಃ ತಂದೆಯ ಉಪಸತ್ತಿಯನ್ನು ಮಾಡಿದನೆಂದು ''ತದ್ವಿಜ್ಞಾಯ ಪುನರೇವ ವರುಣಂ ಪಿತರಮುಪಸಸಾರ'' ಎಂದು ಕೇಳಿಸುತ್ತಿದೆ. ಆದರೆ ''ಆನಂದೋ ಬ್ರಹ್ಮೇತಿ ವ್ಯಜಾನಾತ್'' ಎಂದು ಆನಂದನನ್ನು ತಿಳಿದಮೇಲೆ ಪುನಃ ಉಪಸತ್ತಿಯು ಶ್ರುತವಾಗಿಲ್ಲ. ಇದರಿಂದ ಆನಂದನಷ್ಟೇ ಬ್ರಹ್ಮನಾಗಿದ್ದಾನೆ. ಅನ್ನ, ಪ್ರಾಣ, ಮನಸ್ಸು, ವಿಜ್ಞಾನ ಇವುಗಳು ಬ್ರಹ್ಮವಾಗುವುದಿಲ್ಲ. ಈ ಆನಂದಶ್ರುತಿಯ ಮುಂದೆ ಪುನಃ ಅನ್ನಮಯ ಪ್ರಾಣಮಯ, ಮನೋಮಯ, ವಿಜ್ಞಾನಮಯಗಳು ಶ್ರುತವಾಗಿವೆ. ಅನಂತರ ಆನಂದಮಯವು ಶ್ರುತವಾಗಿದೆ. ಹಿಂದೆ ಹೇಳಿದ ಅನ್ನಾದಿಕ್ರಮದಲ್ಲಿಯೇ ಈ ಅನ್ನಮಯಾದಿಗಳು ಹೇಳಲ್ಪಟ್ಟವೆ. ಅನ್ನಾದಿಗಳ ಕ್ರಮದಲ್ಲಿಯೇ ಅನ್ನಮಯಾದಿಗಳನ್ನು ಹೇಳಿದ್ದರಿಂದ ಬೇರೆ ಬೇರೆಯಲ್ಲವೆಂದು ತಿಳಿಯುತ್ತವೆ. ಹಿಂದೆ ಹೇಳಿದ ಆನಂದನು ಇಲ್ಲಿ ಹೇಳಿದ ಆನಂದಮಯನು ಸ್ಥಾನಪ್ರಾಮಾಣ್ಯದಿಂದ ಒಬ್ಬನೇ ಎಂದು ತಿಳಿಯುತ್ತದೆ. ಪುನರುಪಸತ್ತಿ ಇಲ್ಲದ್ದರಿಂದ ಆನಂದನನ್ನು ಬ್ರಹ್ಮನೆಂದು ಹೇಳಿದರೆ ಇಲ್ಲಿಯ ಆನಂದಮಯನೂ ಸಹ ಬ್ರಹ್ಮನೆಂದೇ ಹೇಳಿದಂತಾಗುತ್ತದೆ. ಹೀಗೆ ಸ್ಥಾನಪ್ರಮಾಣದಿಂದ ಅನ್ನಮಯಾದಿ ನಾಲ್ಕು ಬ್ರಹ್ಮವಲ್ಲ ಆನಂದಮಯನು ಮಾತ್ರ ಬ್ರಹ್ಮನಾಗಿದ್ದಾನೆ. ಬ್ರಹ್ಮನಾದ ಆನಂದಮಯನನ್ನು ತಿಳಿಯಲು ಅನ್ನಮಾಯಾದಿ ನಾಲ್ಕು ಕೇವಲ ದ್ವಾರಗಳಾಗಿವೆ.

ಸಮಾಧಾನ - ಅನ್ನಾದಿಗಳನ್ನು ದ್ವಾರವೆಂದು ಒಪ್ಪಿದರೂ ಸಹ ಪುನಃ ಪುನಃ ಮಾಡುವ ಉಪಸತ್ತಿಯು ಕೂಡುವುದಿಲ್ಲ. ಒಂದನ್ನೇ ದ್ವಾರವೆಂದು ಹೇಳಿ ಬ್ರಹ್ಮನನ್ನು ಪರಿಚಯಿಸಲು ಬರುವಾಗ ನಾಲ್ಕನ್ನು ದ್ವಾರವೆಂದು ಹೇಳುವುದರಲ್ಲಿ ಅರ್ಥವೇ ಇಲ್ಲ. ಈ ವಿಷಯವನ್ನು ಈ ಹಿಂದೆ ಅದ್ವೈತಮತದ ನಿರಾಸಸಂದರ್ಭದಲ್ಲಿಯೇ ವಿವರಿಸಿದ್ದೇವೆ. ಮತ್ತೊಂದು ಸಮಸ್ಯೆಯನ್ನು ನೀವು ಎದುರಿಸಬೇಕಾಗುತ್ತದೆ - ಬ್ರಹ್ಮನನ್ನು ಪರಿಚಯಿಸಲು ಛಾಂದ್ಯೋಗ್ಯದಲ್ಲಿ ಒಂಬತ್ತು ದೃಷ್ಟಾಂತಗಳನ್ನು ಹೇಳಿದ್ದಾರೆ. ''ಯಥಾ ಸೋಮ್ಯ ಮಧು ಮಧುಕೃತೋ ನಿಸ್ತಿಷ್ಠನ್ತಿತಿ'' ಎಂದು ಭಗವಂತನನ್ನು ಪರಿಚಯಿಸಿದ ಮೇಲೆ ''ಭೂಯ ಏವ ಭಗವಾನ್ ವಿಜ್ಞಾಪಯತು'' ಎಂದು ಶ್ವೇತಕೇತುವು

ಭಗವಂತನನ್ನು ತಿಳಿಸಿರೆಂದು ಪುನಃ ಪ್ರಾರ್ಥಿಸಿದ್ದಾನೆ. ಅವನ ಪ್ರಾರ್ಥನೆಯಂತೆ ಉದ್ದಾಲಕರು ಒಂಬತ್ತು ದೃಷ್ಟಾಂತಗಳಿಂದ ಒಂಬತ್ತು ಬಗೆಯಲ್ಲಿ ಭಗವಂತನನ್ನು ಪರಿಚಯಿಸಿದ್ದಾರೆ. ಒಂದೊಂದು ದೃಷ್ಟಾಂತಗಳಿಂದ ಭಗವಂತನನ್ನು ಪರಿಚಯಿಸಿದ ಮೇಲೆಯೂ ಪುನಃ ಭಗವಂತನನ್ನು ಪರಿಚಯಿಸಿದರೆಂದು ಶ್ವೇತಕೇತುವು ಪ್ರಾರ್ಥಿಸಿದ್ದಾನೆ. ಅಂತಿಮವಾಗಿ ''ಪುರುಷಂ ಸೋಮ್ಯೋತ ಹಸ್ತಗೃಹೀತಮ್'' ಎಂದು ಒಂಬತ್ತನೆಯ ಬಗೆಯಲ್ಲಿ ಭಗವಂತನನ್ನು ಪರಿಚಯಿಸಿದ ಮೇಲೆ ಶ್ವೇತಕೇತುವಿನ ಪ್ರಾರ್ಥನೆಯು ಮತ್ತೆ ಕಾಣಿಸುವುದಿಲ್ಲ. ಇಲ್ಲಿಯೂ ಸಹ ಕೊನೆಯವಾಕ್ಯ ಮಾತ್ರ ಬ್ರಹ್ಮಪರವಾಗಿದೆ. ಉಳಿದವುಗಳು ಬ್ರಹ್ಮಪರವಲ್ಲ ಎಂದಾಗಬೇಕಾದೀತು.

ಆಕ್ಷೇಪ - ಹಿಂದೆ ''ಯಥಾ ಸೋಮ್ಯ ಮಧು'' ಇವೇ ಮೊದಲಾದ ಎಂಟು ದೃಷ್ಟಾಂತಗಳಲ್ಲಿ ''ಐತದಾತ್ಮ್ಯಮಿದಂ ಸರ್ವಮ್'' ಇತ್ಯಾದಿಯಾಗಿ ಬ್ರಹ್ಮಲಿಂಗಗಳು ಕೇಳಿಸುತ್ತಿವೆ. ಆದ್ದರಿಂದ ಎಲ್ಲವೂ ಬ್ರಹ್ಮಪರವಾಗುತ್ತವಲ್ಲ?

ಸಮಾಧಾನ - ಹಾಗಾದಲ್ಲಿ ''ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ'' ಎಂದು ಬ್ರಹ್ಮಶ್ರುತ್ಯಾದಿಗಳು ಅನ್ನಾದಿಪ್ರಕರಣದಲ್ಲಿಯೂ ಕೇಳಿಸುತ್ತಿದೆ. ನಿಮ್ಮ ನ್ಯಾಯದಂತೆ ಅನ್ನಾದಿಗಳೂ ಸಹ ಬ್ರಹ್ಮನೆಂದೇ ಸಿದ್ಧವಾಗುತ್ತವೆ.

### ಕಠಿಣಪದಾರ್ಥ

ಕೇಚಿತ್ = ರಾಮಾನುಜರು, ಸಾಧಾರಣೇನ = ಶಾರೀರತ್ವಹೇತುವಿಗೆ ಪ್ರಾಣಮಯಾದಿಗಳಲ್ಲಿ ವ್ಯಭಿಚಾರ ಬರುವುದರಿಂದ ಪೂರ್ವಪಕ್ಷವು ಹುಟ್ಟುವುದಿಲ್ಲ, ಅತಿಪ್ರಸಂಗಶ್ಚ = ಬ್ರಹ್ಮನ ಲಿಂಗಗಳನ್ನೂ ಜೀವನಲ್ಲಿ ಅಧ್ಯಾಸ ಮಾಡಬಹುದಾದ್ದರಿಂದ ಯಾವುದೇ ಅಧಿಕರಣದಲ್ಲಿ ಸಿದ್ಧಾಂತಸ್ಥಾಪನೆಯು ಆಗದಿರಬೇಕಾದೀತು ಎಂಬ ಅತಿಪ್ರಸಂಗವು ಇದೆ, ಇತ್ಯಾದೇ = ಬ್ರಹ್ಮಶಬ್ದವು ಜ್ಯೇಷ್ಠತ್ವವು, ಸರ್ವದೇವೋಪಾಸ್ಯತ್ವವೂ, ಮುಕ್ತಿಹೇತುತ್ವವು, ಕೂಡದಿರಬೇಕಾದೀತು, ಸ್ಥಾನಪ್ರಮಾಣೇನ = ಸ್ಥಾನವೆಂಬ ಪ್ರಮಾಣದಿಂದ, ತದಶ್ರವಣಾತ್ = ಭೂಯಏವ ಎಂಬ ಪ್ರಾರ್ಥನೆಯು ಕೇಳಿಸದಿರುವುದರಿಂದ.

**प्रकाशः – रामानुजमतं निराकरोति – केचित्त्विति ।। साधारणेनेति ।।** तथा च हेतोर्व्यभिचारान्न पूर्वपक्षोदय इत्यर्थः ।। **अतिप्रसङ्गश्चेति ।।** ब्रह्मलिङ्गानामपि जीवे अध्याससम्भवेन कुत्रापि सिद्धान्तोन्मेषो न स्यादिति भावः ।। **विज्ञानं देवा इति ।। इत्यादेरिति ।।** ब्रह्मशब्दस्य ज्येष्टत्वस्य सर्वदेवोपास्यत्वस्य मुक्तिहेतुत्वस्यायोग इत्यर्थः । यज्ञादिकर्मकर्तृत्वरूपजीवलिङ्गस्य गतिमाह – **विज्ञानमिति ।।**

यज्ञभृद्यकृद्यज्ञी यज्ञभुग्यज्ञसाधनः ।

इति भारतोक्तेरित्यर्थः । यदपि त्रयाणां कोशत्वमिति, तदपि नेत्याह – **अन्नमयादेरिति** ।। **ब्रह्म न स्यादिति** ।। तथा च भूमाधिकरणविरोध इति भावः । आनन्दमयमात्रस्य ब्रह्मत्वे साधकान्तरमाशङ्क्य निराह – **ननूत्तरेति** ।। **स्थान-प्रमाणेति** ।। यथा सङ्ख्याम्नानरूपेणेत्यर्थः ।। **उक्तत्वादिति** । ''भृगवर्वरुणोपदिष्टानां द्वारत्वं न वेति चेत्'' इत्यादिनेति भावः । उपलक्षणमेतत् । अन्यथोपपत्तेरुक्तत्वादिति ध्येयम् । प्रतिबन्द्या च पुनरुपसत्तिं समाधत्ते – **किञ्चैवमिति** ।। ''मधु मधुकृतः निस्तिष्ठन्ति नानात्ययानां वृक्षाणां रसानां समवहारमेकतां गमयन्ति । ते यथा तत्र न विवेकं लभन्ते'' इति दृष्टान्तपूर्वं ''एवमेव खलु सोम्येमाः प्रजास्सदायतनाः सति सम्पद्य न विदुः'' इत्युद्दालकोपदिष्टेऽपि ब्रह्मणि श्वेतकेतुर्विशेषजिज्ञासया ''भूय एव मा भगवान्विज्ञापयतु'' इति बहुकृत्वः पुनःपुनः पृष्टवानिति तत्रोद्दालकेनोक्तमब्रह्म स्यादिति भावः । 'तदश्रवणात्' ''भूय एव'' इति पुनः प्रार्थनस्याश्रवणादित्यर्थः ।

**गुरुराजीयम्** – ननु पञ्चानां ब्रह्मत्वमित्ययुक्तम् । आनन्दमयस्यैव ब्रह्मत्वाद्विज्ञानमयस्य जीवत्वादन्नादीनां तु कोशत्वादिति रामानुजीयाः । तन्मतं दूषयितुमनुवदति – **केचित्त्विति** ।। **सैषानन्दस्येत्यारभ्येति** ।। **उपलक्षणं चैतत्** । यतो वाचो निवर्तन्त इत्यनेनेत्यपि द्रष्टव्यम् । तदाश्रयः निरतिशयदशाशिरस्का-नन्दाश्रय इत्यर्थः । अत्र पूर्वपक्षस्यायुक्तत्वादधिकरणारम्भो न युक्त इत्याह – **पूर्वपक्षिणापीति** ।। तथा च शारीरत्वस्यान्नमयेपि विद्यमानत्वाद्व्यभिचारित्वेन न तेन पूर्वपक्षकरणं युक्तमिति भावः । ननु न शारीरत्वं प्राणमयादेरित्यत आह – **श्रूयते हीति** ।। ननु न पुच्छत्वाद्यनुपपत्तिः । प्रियादिवाक्यैर्ब्रह्मस्वरूपस्यैव शिरआदिविशिष्टत्वेन निरूपणादिति शङ्कते – **ब्रह्मेति** ।। निरूपणमध्यासो वा सादृश्योक्तिर्वा ।

नाद्य इत्याह – **रूपणं हीति** ।। **अप्रामाण्यमिति** ।। अध्यस्तार्थ-प्रतिपादकत्वादिति भावः ।। **अतिप्रसङ्गश्चेति** ।। अन्नमयादेरपि शिरःपक्षपुच्छादिना रूपेणाध्यस्तत्वेन तस्याप्यानन्दमयवद्ब्रह्मत्वापत्त्या कोशत्वोक्तिरयुक्तेत्यति-प्रसङ्गश्चेत्यर्थः ।

द्वितीयं प्रत्याह – **यदि त्विति** ।। सादृश्यमपि नास्तीत्याह – **सादृश्येति** ।। नन्वेवं विज्ञानं यज्ञं तनुत इत्यत्र विज्ञानमयस्य कर्मकर्तृत्वं प्रतीयते । तच्च विज्ञानमयस्य ब्रह्मत्वेऽयुक्तम् । तस्य कर्तृत्वाद्यभावादित्यत आह – **विज्ञानमिति** ।। अस्तु तर्हि तस्य ब्रह्मत्वमन्नमयादेस्तु कोशत्वमेवेत्यत आह – **अन्नमयादेरिति** ।। नन्वन्नमयादयो न ब्रह्म । तदनन्तरं ब्रह्मोद्देशात् । यदनन्तरं यदुपदिश्यते तत्तन्न भवति । यथा शाखोपदेशानन्तरं चन्द्रोपदेशाच्च चन्द्रः शाखेति । तथाचान्नमयादयो न ब्रह्म । किं त्वानन्दमय एवेत्याशयेन शङ्कते – **नन्विति** ।। **तर्हीति** ।। तदनन्तरं ब्रह्मोद्देशादिति हेतोर्व्यभिचारित्वान्न तेन ब्रह्मत्वाभावसाधनं युक्तमिति भावः । **पुनरुपसत्त्ययोगस्येति** ।। भृगुर्वरुणोपदिष्टानां द्वारत्वं न वेत्ति चेत्तर्हि पुनरुपसत्त्ययोगः । वेत्ति चेन्नानन्दं ब्रह्मेति व्यजानादिति प्रयोगः स्यादित्युक्तत्वादित्यर्थः ।

ವಿವರಣೆ - ರಾಮಾನುಜರ ಆನಂದಮಯಾಧಿಕರಣಶರೀರವನ್ನು ಇಲ್ಲಿ ನಿರಾಕರಿಸುತ್ತಿದ್ದಾರೆ.

ಯಜ್ಞಾದಿಕರ್ತೃತ್ವವು ಜೀವಲಿಂಗವಾಗಿದೆ ಎಂಬುದನ್ನು 'ವಿಜ್ಞಾನ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. "ಯಜ್ಞಭೃದ್ಯಜ್ಞಕೃದ್ಯಜ್ಞೀ ಯಜ್ಞಭುಗ್ಯಜ್ಞಸಾಧನಃ" ಎಂಬ ಮಹಾಭಾರತದ ಮಾತಿನಿಂದ ಯಜ್ಞಕರ್ತೃತ್ವವು ಪರಮಾತ್ಮನ ಲಿಂಗವೇ ಆಗಿದೆ. ಅನ್ನಮಯ, ಪ್ರಾಣಮಯ, ಮನೋಮಯಶಬ್ದಗಳು ಕೋಶಪರವಾಗಿವೆ ಎಂಬ ರಾಮಾನುಜರ ಆಶಯವನ್ನು "ಅನ್ನಮಯಾದೇಃ" ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಕೇವಲ ಆನಂದಮಯನು ಬ್ರಹ್ಮನಾದಲ್ಲಿ ಇರುವ ಮತ್ತೊಂದು ಸಾಧಕವನ್ನು "ನನು ಉತ್ತರಾನುವಾಕ್ಯೇ" ಎಂಬ ವಾಕ್ಯದಿಂದ ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ. ಅನ್ನಾದಿಗಳು ದ್ವಾರವಾದಲ್ಲಿ ಪುನರುಪಸತ್ತಿಯು ಕೂಡುವುದಿಲ್ಲವೆಂದು ಈ ಹಿಂದೆಯೇ ಹೇಳಿದ್ದೇವೆ. ವರುಣರಿಂದ ಉಪದಿಷ್ಟರಾದ ಭೃಗುಋಷಿಗಳು ಅನ್ನಮಯಾದಿಗಳನ್ನು ದ್ವಾರವೆಂದು ತಿಳಿಯುತ್ತಾರೋ ಇಲ್ಲವೋ? ಇತ್ಯಾದಿ ವಿಕಲ್ಪ ಮಾಡಿ ನಿರಾಕರಿಸಿದ್ದಾಗಿದೆ.

ಉಪಲಕ್ಷಣಯಾ ಮತ್ತೊಂದು ದೋಷವನ್ನು ತಿಳಿಯಬೇಕು. ದ್ವಾರವನ್ನು ಹೇಳದೆಯೂ ಬ್ರಹ್ಮನನ್ನು ಪರಿಚಯಿಸಬಹುದೆಂದು ಹಿಂದೆಯೇ ಹೇಳಿದ್ದೇವೆ. ಪ್ರತಿಬಂಧಮೂಲಕವಾಗಿ ಪುನರುಪಸತ್ತಿ 'ಕಿಂಚ ಏವಮ್' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. ಛಾಂದ್ಯೋಗ್ಯದಲ್ಲಿ ಶ್ರುತಿಯು ಹೀಗಿದೆ. "ಮಧುಮಧುಕೃತೋ ನಿಸ್ತಿಷ್ಠಂತಿ" ಬೇರೆ ಬೇರೆ ವೃಕ್ಷಗಳ ರಸವನ್ನು ಮಧುಕರವು ಒಂದೆಡೆ ಸಂಗ್ರಹಿಸಿದಾಗ ಎಲ್ಲಾ ವೃಕ್ಷದ ರಸವು ಒಂದೇ ಎಂದು ತಿಳಿಯುತ್ತೇವೆ. ಆ ವೃಕ್ಷರಸಗಳಲ್ಲಿರುವ ಭೇದವನ್ನು ತಿಳಿಯಲಾರೆವು ಎಂದು ದೃಷ್ಟಾಂತವನ್ನು ಶ್ರುತಿಯೇ ಹೇಳಿದೆ. ಮುಂದೆ "ಏವಮೇವ ಖಲು ಸೌಮ್ಯೇಮಾಃ ಪ್ರಜಾಃ ಸತಿ ಸಂಪದ್ಯ ನ ವಿದುಃ" (ಮಧುವಿನಂತೆ ಈ ಎಲ್ಲ ಪ್ರಜೆಗಳು ಒಟ್ಟಿಗೆ ಸೇರಿದಾಗ ಪ್ರಜೆಗಳಲ್ಲಿರುವ ಭೇದವು ತಿಳಿಯುವುದಿಲ್ಲ.) ಹೀಗೆ ಅನೇಕ ಬಾರಿ ಶ್ವೇತಕೇತುವು ಉಪದಿಷ್ಟನಾಗಿದ್ದಾನೆ. ಮತ್ತು ಅನೇಕಬಾರಿ ಪ್ರಶ್ನೆಯನ್ನೂ ಮಾಡಿದ್ದಾನೆ. ಇವೆಲ್ಲವು ಸಹ ಬ್ರಹ್ಮನೆಂದಾಗದಿರಬೇಕಾದೀತು.



ಕೆಲವರು 'ಅನ್ನಮಯ, ಪ್ರಾಣಮಯ, ಮನೋಮಯ ಎಂಬ ಮೊದಲ ಮೂರು ಶಬ್ದಗಳು ಜಡಶರೀರದ ಭಾಗವಾದ ಕೋಶಗಳನ್ನು ಹೇಳುತ್ತವೆ. ವಿಜ್ಞಾನಮಯನೆಂದರೆ ಜೀವ. ಆನಂದಮಯನೆಂದರೆ ಬ್ರಹ್ಮ' ಎಂದರು. ಕೆಲವರು 'ನಾಲ್ಕು ಕೋಶಗಳು. ಆನಂದಮಯನೆಂದರೆ ಬ್ರಹ್ಮ' ಎಂದರು. ವಿಜ್ಞಾನಮಯ ಎಂದರೆ ಜೀವನಲ್ಲ. ಜೀವನನ್ನು ವಿಜ್ಞಾನಪೂರ್ಣ ಎಂದು ದೇವತೆಗಳು ಉಪಾಸನೆ ಮಾಡುವುದಿಲ್ಲ. ಜೀವನನ್ನು ಉಪಾಸಿಸಿದವ ಪಾಪರಹಿತನಾಗಿ ಮುಕ್ತನಾಗುವುದಿಲ್ಲ. ವಸ್ತುವೊಂದನ್ನು ತಿಳಿಯಲು ಒಂದು ದ್ವಾರ ಸಾಕು. ಹಲವು ದ್ವಾರಗಳೇಕೆಬೇಕು? ತೈತ್ತಿರೀಯ ಉಪನಿಷತ್ತಿನಲ್ಲಿ ಮಾಡಿದ ತರ್ಕವನ್ನೇ ಛಾಂದೋಗ್ಯ ಉಪನಿಷತ್ತಿನಲ್ಲಿ ಮಾಡಿ. ಇಲ್ಲವೆಂದಾದರೆ ಛಾಂದೋಗ್ಯದಲ್ಲಿನ ಅರ್ಥದ ಸರಣಿಯನ್ನು ತೈತ್ತಿರೀಯಕ್ಕೆ ಅಳವಡಿಸಿ. 'ಅನ್ನಂ ಬ್ರಹ್ಮೇತಿ ವ್ಯಜಾನಾತ್' ಎಂಬ ಉಪನಿಷತ್ತಿನ ಮಾತಿನಿಂದಲೂ 'ಅನ್ನಮಯ' ಮೊದಲಾದವುಗಳು ಪರಮಾತ್ಮನ ರೂಪವಿಶೇಷಗಳೆಂದು ಗೊತ್ತಾಗುತ್ತದೆ.



## ರಾಮಾನುಜ ಮತ್ತು ಯಾದವಪ್ರಕಾಶಮತ ನಿರಾಕರಣೆ

**तात्पर्यचन्द्रिका –**

**किचाद्यसूत्रे यदि भास्करमत इवाऽऽनन्दमात्राभ्यासो हेतुः, तदा ब्रह्मत्वासिद्धिः, तस्य जीवेऽपि सम्भवात् । निरतिशयत्वविशिष्टस्य चाभ्यासोऽसिद्धः । शतगुणितोत्तरक्रमेण गुणितत्वं तु नाभ्यासशब्दस्याभिधेयम् ।**

**यत्तु ब्रह्मशब्दाभ्यासो हेतुरिति यादवप्रकाशीयं मतम्, तदप्ययुक्तम्, तन्मते ब्रह्मत्वेनानङ्गीकृतविज्ञानमयादावपि ब्रह्मशब्दाभ्यासस्य सत्त्वात् । द्वितीयसूत्रं चायुक्तम्, प्रायपाठबाधात् ।**

**ननु प्राणमय एव विकारार्थत्वं त्यक्तमिति चेत्तर्हि तत्र मयटः स्वार्थिकत्वाद्वैयर्थ्यम् । विज्ञानमयेऽपि तत्प्रसङ्गश्च ।**

**यच्चोक्तं – विज्ञानमये मयट् सम्बन्धोऽर्थः, वैयर्थ्यादप्यमुख्यार्थत्वस्य ज्यायस्त्वादिति,**

**तन्न, अन्नमये विकारार्थः, प्राणमयमनोमययोः स्वार्थिकः, विज्ञानमये सम्बन्धार्थः, आनन्दमये प्राचुर्यार्थ इति वैरूप्यप्रसङ्गात् ।**

**नच प्राणमयादावपि सम्बन्धार्थता, प्राणादेः प्राणादिसम्बन्धाभावात् । प्राणशब्दस्य अप्रसिद्धार्थत्वे तु वरं परमात्मपरत्वम् । एवं सूत्रान्तरेष्वप्यनुपपत्ति-रूह्या ।**

ಅನುವಾದ - ರಾಮಾನುಜರು ಸೂತ್ರಾರ್ಥವನ್ನು ಹೀಗೆ ಹೇಳುತ್ತಾರೆ - ಬ್ರಹ್ಮನು ಆನಂದಮಯನಾಗಿದ್ದಾನೆ. ಆನಂದಶಬ್ದದ ಅಭ್ಯಾಸವಿರುವುದರಿಂದ ಎಂದು. ಇದು ತಪ್ಪು. ಭಾಸ್ಕರರು ಹೇಳುವಂತೆ ಸೂತ್ರಾರ್ಥವನ್ನು ನೀವು ಹೇಳಿದಂತಾಯಿತು. ಆನಂದಶಬ್ದದ ಅಭ್ಯಾಸದಿಂದ ಬ್ರಹ್ಮತ್ವವು ಸಿದ್ಧವಾಗುವುದಿಲ್ಲ. ಜೀವನಲ್ಲಿಯೂ ಆನಂದವಿರುವುದರಿಂದ ಭಾಸ್ಕರರಿಗೆ ಹೇಳಿದ ವ್ಯಭಿಚಾರವು ರಾಮಾನುಜರಿಗೂ ತಪ್ಪಿದ್ದಲ್ಲ.

ಆಕ್ಷೇಪ - ಕೇವಲ ಆನಂದದ ಅಭ್ಯಾಸವನ್ನಷ್ಟೇ ಹೇತುವನ್ನಾಗಿ ಹೇಳುತ್ತಿಲ್ಲ. ನಿರತಿಶಯತ್ವವಿಶಿಷ್ಟವಾದ ಆನಂದವನ್ನೇ ಹೇತು ಮಾಡಿದ್ದೇವೆ. ಜೀವನಲ್ಲಿ ಕೇವಲ ಆನಂದವಿದ್ದರೂ ನಿರತಿಶಯವಾದ ಆನಂದವು ಇಲ್ಲದ ಕಾರಣ ವ್ಯಭಿಚಾರವೂ ಬರುವುದಿಲ್ಲ.

ಸಮಾಧಾನ - ನಿರತಿಶಯತ್ವವಿಶಿಷ್ಟವಾದ ಆನಂದಶಬ್ದದ ಅಭ್ಯಾಸವು ಹೇತುವಾದರೆ ವ್ಯಭಿಚಾರ ಬಾರದಿರಬಹುದು. ಆದರೆ ಸ್ವರೂಪಾಸಿದ್ಧಿದೋಷ ಬರುತ್ತದೆ. ತೈತ್ತಿರೀಯದಲ್ಲಿ ಅನೇಕಬಾರಿ ನಿರತಿಶಯವಾದ ಆನಂದವನ್ನು ಹೇಳಿಯೇ ಇಲ್ಲ. ''ಯತೋ ವಾಚೋ ನಿವರ್ತಂತೇ'' ಎಂದು ಒಮ್ಮೆ ಮಾತ್ರ ನಿರತಿಶಯವಾದ ಆನಂದವು ಕೇಳಿಸುತ್ತದೆ. ಆದ್ದರಿಂದ ಪಕ್ಷದಲ್ಲಿಯೇ ಹೇತುವು ಅಸಿದ್ಧವಾಗಿದೆ.

ಆಕ್ಷೇಪ - ಶತಮೊದಲಾದ ಗುಣಗಳಿಂದ ಉತ್ತರೋತ್ತರ ಅಧಿಕವಾದ ಗುಣಗಳು ಬ್ರಹ್ಮನಲ್ಲಿ ಇದೆ. ಇದನ್ನೇ ಸೂತ್ರದಲ್ಲಿರುವ ಅಭ್ಯಾಸಶಬ್ದವು ಹೇಳುತ್ತಿದೆ. ಇದು ಬ್ರಹ್ಮನಲ್ಲಿ ಮಾತ್ರ ಇರುವುದರಿಂದ ವ್ಯಭಿಚಾರಕ್ಕಾಗಲಿ ಸ್ವರೂಪಾಸಿದ್ಧಿಗಾಗಲಿ ಅವಕಾಶವಿಲ್ಲ.

ಸಮಾಧಾನ - ಅಭ್ಯಾಸಶಬ್ದಕ್ಕೆ ''ಪುನಃ ಪುನಃ ಹೇಳುವಿಕೆ'' ಎಂಬರ್ಥವನ್ನು ಹೇಳಬಹುದೇ ಹೊರತು ''ಶತಗುಣಿತೋತ್ತರಕ್ರಮೇಣ ಗುಣಿತತ್ವಂ'' ಎಂಬರ್ಥವನ್ನು ಹೇಳುವುದು ಅಪ್ರಾಮಾಣಿಕ.

ಯಾದವಪ್ರಕಾಶರ ಮತ - ಬ್ರಹ್ಮನು ಆನಂದಮಯನಾಗಿದ್ದಾನೆ. ಬ್ರಹ್ಮಶಬ್ದದ ಅಭ್ಯಾಸ-ವಿರುವುದರಿಂದ ಎಂದು ಸೂತ್ರಕ್ಕೆ ಅರ್ಥ. ಆದ್ದರಿಂದ ಅದ್ವೈತಿಗಳಿಗೆ ಬಂದ ದೋಷವಾಗಲಿ ರಾಮಾನುಜರಿಗೆ ಬಂದ ದೋಷವಾಗಲಿ ನಮಗೆ ಬರುವುದಿಲ್ಲ.

ನಿರಾಕರಣೆ - ಬ್ರಹ್ಮಶಬ್ದಾಭ್ಯಾಸವನ್ನು ನಮ್ಮಂತೆ ನಿಮಗೆ ಹೇತು ಮಾಡಲು ಸಾಧ್ಯವಿಲ್ಲ. ಯಾದವಪ್ರಕಾಶರ ಮತದಲ್ಲಿ ಆನಂದಮಯನನ್ನಷ್ಟೇ ಬ್ರಹ್ಮನೆಂದು ಹೇಳಿದ್ದಾರೆ. ಆದರೆ ಬ್ರಹ್ಮನೆಂದು ಅಂಗೀಕರಿಸದ ವಿಜ್ಞಾನಮಯಾದಿಗಳಲ್ಲಿಯೂ ಬ್ರಹ್ಮಶಬ್ದಾಭ್ಯಾಸವು ಉಪನಿಷತ್ತಿನಲ್ಲಿ ಕೇಳಿಸುತ್ತದೆ.

ಆದ್ದರಿಂದ ವ್ಯಭಿಚಾರವು ಇವರಿಗೂ ತಪ್ಪಿದ್ದಲ್ಲ. ಮತ್ತು ಇವರ ಪ್ರಕಾರ ''ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್'' ಎಂಬ ಎರಡನೆಯ ಸೂತ್ರವು ತಪ್ಪಾಗುತ್ತದೆ. ಏಕೆಂದರೆ ಈ ಸೂತ್ರದಲ್ಲಿ ಅನ್ನಮಯಾದಿ ಐದೂ ಶಬ್ದಗಳಲ್ಲಿರುವ ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯಾರ್ಥವನ್ನು ಸಮರ್ಥಿಸ-ಲಾಗಿದೆ. ಅನ್ನಮಯಾದಿಶಬ್ದಗಳಲ್ಲಿರುವ ಮಯಟ್‌ಪ್ರತ್ಯಯಕ್ಕೆ ವಿಕಾರಾರ್ಥವನ್ನು ಒಪ್ಪಿದ್ದೀರಿ. ಈಗ ಆನಂದಮಯಶಬ್ದದಲ್ಲಿರುವ ಮಯಟ್‌ಪ್ರತ್ಯಯಕ್ಕಷ್ಟೇ ಪ್ರಾಚುರ್ಯಾರ್ಥವನ್ನು ಹೇಳುತ್ತಿದ್ದೀರಿ. ಒಂದೊಂದೆಡೆ ಒಂದೊಂದು ಅರ್ಥವನ್ನು ಮಾಡಿದರೆ ಪ್ರಾಯಪಾಠವಿರೋಧವು ಬರುತ್ತದೆ.

ಆಕ್ಷೇಪ - ಅನ್ನಮಯನಲ್ಲಷ್ಟೇ ವಿಕಾರಾರ್ಥವನ್ನು ಹೇಳುತ್ತೇವೆ. ಪ್ರಾಣಮಯಾದಿಗಳಲ್ಲಿ ವಿಕಾರಾರ್ಥವನ್ನು ನಾವು ಹೇಳುವುದಿಲ್ಲವಲ್ಲ?

ಸಮಾಧಾನ - ಹಾಗಾದರೆ ಪ್ರಾಣಮಯ ಎಂಬಲ್ಲಿರುವ ಮಯಟ್‌ಪ್ರತ್ಯಯಕ್ಕೆ ಸ್ವಾರ್ಥವೇ ಅರ್ಥವೆನ್ನಬೇಕು. ಸ್ವಾರ್ಥದಲ್ಲಿ ಹೇಳುವ ಮಯಟ್‌ಪ್ರತ್ಯಯಕ್ಕೆ ವೈಯ್ಯರ್ಥ್ಯವನ್ನು ಈ ಹಿಂದೆಯೇ ಹೇಳಿದ್ದೇವೆ. ಮತ್ತು ವಿಜ್ಞಾನಮಯಶಬ್ದದಲ್ಲಿಯೂ ಸಹ ಮಯಟ್‌ಪ್ರತ್ಯಯಕ್ಕೆ ಸ್ವಾರ್ಥವನ್ನೇ ಹೇಳಬೇಕು. ಆದ್ದರಿಂದ ವಿಜ್ಞಾನಮಯ ಎಂಬ ಶಬ್ದದಲ್ಲಿರುವ ಮಯಟ್ ಪ್ರತ್ಯಯಕ್ಕೂ ವೈಯ್ಯರ್ಥ್ಯ ಬರುತ್ತದೆ.

ಆಕ್ಷೇಪ - ಪ್ರಾಣಮಯಶಬ್ದದಲ್ಲಿ ಮಾತ್ರ ಮಯಟ್‌ಪ್ರತ್ಯಯವೂ ಸ್ವಾರ್ಥದಲ್ಲಿ ಬಂದಿದೆ. ವಿಜ್ಞಾನಮಯಶಬ್ದದಲ್ಲಿರುವ ಮಯಟ್‌ಪ್ರತ್ಯಯಕ್ಕೆ ಸಂಬಂಧಾರ್ಥವನ್ನು ಹೇಳುತ್ತೇವೆ. ಸ್ವಾರ್ಥವನ್ನು ಹೇಳಿದರೆ ವೈಯ್ಯರ್ಥ್ಯ ಬರುತ್ತದೆ. ಆದರೆ ಸಂಬಂಧಾರ್ಥವನ್ನು ಹೇಳಿದರೆ ಕೇವಲ ಅಮುಖ್ಯಾರ್ಥ ಮಾಡಿದಂತಾಗುತ್ತದೆ. ಅಮುಖ್ಯಾರ್ಥವು ವೈಯ್ಯರ್ಥ್ಯದಂತೆ ದೊಡ್ಡ ದೋಷವಲ್ಲ.

ಸಮಾಧಾನ - ಇದು ತಪ್ಪು. ನಿಮ್ಮ ಪ್ರಕಾರ ಅನ್ನಮಯನಲ್ಲಿ ವಿಕಾರಾರ್ಥವು ಪ್ರಾಣಮಯ ಮನೋಮಯರಲ್ಲಿ ಸ್ವಾರ್ಥವನ್ನು ವಿಜ್ಞಾನಮಯನಲ್ಲಿ ಸಂಬಂಧಾರ್ಥವನ್ನು ಆನಂದಮಯನಲ್ಲಿ ಪ್ರಾಚುರ್ಯಾರ್ಥವನ್ನು ಹೇಳಿದಂತಾಯಿತು. ಹೀಗೆ ಹೇಳಿದಾಗ ಪ್ರತಿಯೊಂದೆಡೆಯೂ ಮಯಟ್ ಪ್ರತ್ಯಯಕ್ಕೆ ವಿಲಕ್ಷಣವಾದ ಅರ್ಥವನ್ನು ಅಂಗೀಕರಿಸಿದಂತಾಯಿತು.

ಆಕ್ಷೇಪ - ಪ್ರಾಣಮಯನಲ್ಲಿಯೂ ವಿಜ್ಞಾನಮಯನಲ್ಲಿ ಹೇಳಿದಂತೆ ಸಂಬಂಧಾರ್ಥವನ್ನೇ ಹೇಳುತ್ತೇವೆ. ಸ್ವಾರ್ಥವನ್ನು ಹೇಳುವುದಿಲ್ಲ. ಅನ್ನಮಯನಲ್ಲಷ್ಟೇ ವಿಕಾರಾರ್ಥವನ್ನು ಹೇಳುತ್ತೇವೆ.

ಸಮಾಧಾನ - ಪ್ರಾಣಮಯಾದಿಗಳಲ್ಲಿ ಸಂಬಂಧಾರ್ಥವನ್ನು ಹೇಗೆ ಹೇಳುತ್ತೀರಿ? ಪ್ರಾಣನಿಗೆ ಅಪಾನಾದಿಗಳಿಂದ ಯಾವುದೇ ವಿಧವಾದ ಸಂಬಂಧವು ಇರುವುದಿಲ್ಲ. ಮತ್ತು ಪ್ರಾಣಾದಿಶಬ್ದಗಳಿಗೆ ಹೀಗೆ ಅಪ್ರಸಿದ್ಧವಾದ ಅರ್ಥವನ್ನು ಹೇಳುವುದಕ್ಕಿಂತ ಪ್ರಸಿದ್ಧನಾದ ಪರಮಾತ್ಮನೆಂಬ ಅರ್ಥವನ್ನೇ ಹೇಳುವುದು ಎಲ್ಲರೀತಿಯಿಂದಲೂ ಸಮಂಜಸವಾಗುತ್ತದೆ. ಇದರಂತೆ ಮುಂದಿನ ಸೂತ್ರಗಳಲ್ಲಿಯೂ

ಅನುಪಪತ್ತಿಯನ್ನು ಯಾದವಪ್ರಕಾಶೀಯರು ಎದುರಿಸಬೇಕಾಗುತ್ತದೆ. ಆ ಅನುಪಪತ್ತಿಗಳನ್ನು ಶಿಷ್ಯಂದಿರೂ ಸಹ ಸ್ವತಃ ತಾವೇ ಊಹಿಸಿಕೊಳ್ಳಬೇಕು.

**ಕಠಿಣಪದಾರ್ಥ**

ಆದ್ಯಸೂತ್ರೇ = 'ಆನಂದಮಯೋಽಭ್ಯಾಸಾತ್' ಎಂಬ ಸೂತ್ರದಲ್ಲಿ, ತಸ್ಯ = ಕೇವಲ ಆನಂದಕ್ಕೆ, ಅಸಿದ್ಧಃ = ನಿರತಿಶಯತ್ವ ವಿಶಿಷ್ಟವಾದ ಆನಂದದ ಅಭ್ಯಾಸವು ಶ್ರುತಿಯಲ್ಲಿ ಹೇಳಲ್ಪಟ್ಟಿಲ್ಲ, ಪ್ರಾಯಪಾಠಭೇದಾತ್ = ಆನಂದಮಯ ಶಬ್ದವನ್ನು ಬಿಟ್ಟು ಬೇರೆಡೆ ವಿಕಾರಾರ್ಥ ಹೇಳಿದ್ದರಿಂದ ಪ್ರಾಯಪಾಠವಿರೋಧ ಬರುತ್ತದೆ. ವೈರೂಪ್ಯಪ್ರಸಂಗಾತ್ = ಒಂದೊಂದು ಕಡೆ ಒಂದೊಂದು ಅರ್ಥವನ್ನು ಹೇಳಿದಂತಾಗುತ್ತದೆ.

**प्रकाशः** – सूत्रार्थमपि निराचिकीर्षुः 'अभ्यासात्' इति किमानन्दमात्राभ्यासोऽत्र हेतुः, निरतिशयत्वविशिष्टो वेति हृदि कृत्वा, क्रमेण निराह – **किञ्चेति** ।। **असिद्ध इति** ।। ''यतो वाचो निवर्तन्ते'' इत्यत्र तादृशस्य सकृदेव श्रवणादिति भावः । ''सैषाऽऽनन्दस्य'' इत्यारभ्य उत्तरोत्तराधिक्येनाऽऽनन्दस्याभ्यासोऽस्तीत्यत आह – **शतेति** ।।

**प्रायपाठेति** ।। ''विकारशब्दान्नेति चेत्'' इत्यस्य त्वयाऽऽनन्दमयमात्रविषयत्वे नोक्त्या इतरेषु विकारार्थत्वस्वीकारादिति भावः । ननु सम्बन्धे मयटो नानुशासनमित्यत आह – **वैयर्थ्यादिति** ।। **ऊह्येति** ।। तथा हि – ''तद्धेतुव्यपदेशाच्च'' इत्यस्य ''एष ह्येवानन्दयाति'' इति जीवानन्दहेतुत्वव्यपदेशादानन्दमयो ब्रह्म । न हि स्वस्यैव स्वानन्दहेतुत्वं युक्तमित्यर्थ उक्तः । स न युक्तः, जीवानन्दहेतुत्वेनानन्दमयस्य जीवभेदसिद्धावपि ब्रह्मत्वासिद्धेः अब्रह्मणोपि वनितादेर्जीवानन्दहेतुत्वदृष्टेः । आद्यसूत्रानन्तर्यप्रसङ्गाच्च ।

यदपि – ''सत्यं ज्ञानमनन्तं ब्रह्म'' इति मन्त्रवर्णोदितं ब्रह्मैव, ''तस्माद्वा एतस्मादात्मनः'' इत्यारभ्य 'आनन्दमयः' इति गीयत इति मान्त्रवर्णिकसूत्रार्थ इति,

तदपि न, मान्त्रवर्णिकब्रह्मणः आनन्दमय इव भाष्याद्युक्तदिशा अन्नमयादिष्वपि गीयमानत्वेन तेषामब्रह्मत्वायोगात् ।

यदपि – नेतरो जीवो मान्त्रवर्णिक इति मन्तव्यम्, ''ब्रह्मणा विपश्चिता'' इत्युक्तविपश्चित्त्वरूपसार्वज्ञ्यानुपपत्तेरिति पञ्चसूत्रार्थ इति,

तदपि न, अन्नमयादीनामब्रह्मत्वेऽप्युक्तविपश्चित्त्वानुपपत्तेतुल्यत्वात् ।

यद्यपि – ''भीषाऽस्माद्वातः'' इत्यादिना प्रशासितव्यवर्गाद्वायुसूर्यादेरानन्दमयस्य प्रशासितृत्वेन भेदव्यपदेशादानन्दमयो ब्रह्मेति षष्ठार्थ इति,

तदपि न, ''ब्रह्मविदाप्नोति'' इत्युपक्रान्तब्रह्मविषयस्य भेदव्यपदेशस्यान्नमयादिसाधारणत्वात् ।

यदपि – ''सोऽकामयत'' इत्यारभ्य ''स इदं सर्वमसृजत'' इति कामादेव सर्गश्रवणात्, अस्यानन्दमयस्य सृष्टौ नानुमानिकप्रधानापेक्षाऽस्तीति सप्तमार्थ इति,

तदपि न, अनुमानपदस्य लक्षणाप्रसङ्गात् । भेदसूत्रानन्तर्यहेत्वभावाच्च । 'कामादेव सर्गश्रवणात्' इत्याद्याध्याहारप्रसङ्गाच्च ।

यदपि – ''रसो वै सः रसꣳह्येवायं लब्ध्वाऽऽनन्दी भवति'' इति शास्त्रं रसशब्दनिर्दिष्टे अस्मिन्नानन्दमये अस्य जीवस्य तल्लाभादानन्दयोग शास्तीति त्यष्टमार्थ'' इति,

तदप्यचारु, ''रसꣳह्येवायं'' इति शास्त्रमपि ''अन्नरसमयः'' इति रसशब्दनिर्दिष्टे अन्नमय एव जीवस्यानन्दमययोगं शास्तीति तस्यैव ब्रह्मत्वापत्तेरित्यूहनीयेत्यर्थः ।

एतेन – यत्केनचित्प्रलपितं – पूर्वाधिकरणे जगत्कारणत्वं प्रधाने नातिव्याप्तमित्युक्तम्, इदानीं जीवे नातिव्याप्तमिति वक्तुम् इदमारभ्यते । तथाहि – अयमानन्दमयः जीवोऽथ शिव इति विशये मयटो विकारार्थतया ''आनन्दो ब्रह्म'' इति श्रुत्या आनन्द रूपब्रह्मकार्यतया जीवस्य तद्विकारत्वसम्भवात्, ''आनन्दमया मे शुध्यन्तां'' इत्युक्तशुद्धिप्रार्थनसम्भवाच्च जीव एव आनन्दमयः । अयं च ''आत्मन आकाशः'' इति भूतादिहेतुत्वेनोक्तात्मैव । ''अन्योऽन्तर आत्माऽऽनन्दमयः'' इति श्रवणादस्यैव भूतादिकारणत्वमिति प्राप्ते,

''सैषाऽऽनन्दस्य'' इत्यारभ्य मानुषादिप्रजापतिपर्यन्तं तत्तदानन्दस्य उपर्युपरि शतगुणत्वमभिधाय ''स एको ब्रह्मण आनन्दः'' इति ब्रह्मानन्दस्य निरतिशयत्वेनाभ्यासात्, शुद्धस्यापि शिवस्य घनापगमेन चन्द्रस्य प्रसाद इव मलापनयनेन

शुद्धिसम्भवाच्च शिव एवानन्दमयः । विज्ञानमयस्तु जीव एव । ''ब्रह्म पुच्छं प्रतिष्ठा'' इति च ब्रह्मशब्दस्य प्रणवपरत्वात्, तस्य च शिववाचकत्वात्, 'ब्रह्म' प्रणवः 'प्रतिष्ठा' शिवस्य वाचकतयाऽऽधार इत्यर्थतयोपपन्नम् । मयट् प्राचुर्यार्थ इति । यथोक्तं –

आकाशादेः कारणमानन्दमयस्तु जीवः स्यात् ।
यदयं ब्रह्मविकारो ब्रह्माधारश्च शोध्यश्च ।
निरतिशयानन्दयुतो ब्रह्मैव प्रचुरता तु मयडर्थः ।
पुच्छं ब्रह्म प्रणवः शुद्धिश्च विरोध्यपगमो विधुवत् ।।

इति । तन्निरस्तं, त्वन्मते पूर्वाधिकरण एव तन्निष्ठसूत्रे जीवेऽतिव्याप्ते-र्निरासात् । यथोक्तं – ''तर्हि जीवोऽस्तु, तन्न, तन्निष्ठस्यामृतोक्तेः । न हि शिवमपहायान्यनिष्ठा विमुक्त्यै'' इत्यादि । पूर्वपक्षोऽप्ययुक्तः, जीवे ब्रह्मविकारत्वस्य दुर्वचत्वात् । ''विज्ञानं ब्रह्म'' इति श्रुत्या विज्ञानरूपब्रह्मकार्यतया तद्विकारत्वस्य पूर्वपक्षिणा जीवेत्वेनानङ्गीकृते बुद्धित्वेनाङ्गीकृते विज्ञानमये व्याभिचाराच्च । आनन्दमयेन जीवशुद्धिप्रार्थने सति 'मे' इत्यस्मच्छब्दायोगाच्च । आनन्दमयकोशस्य शुद्धिप्रार्थनालाभाच्च । ''आत्मा मे शुद्ध्यन्ताम्'' इत्यस्य वैयर्थ्याच्च ।

सिद्धान्तोऽप्ययुक्तः, निरतिशयानन्दाभ्यासस्योक्तरीत्याऽसिद्धेः । विकारार्थ-मयट्प्रायपाठविरोधाच्च । ब्रह्मशब्दस्य पूर्णत्वार्थकस्य प्रणवे अप्रसिद्धेश्च । प्रणवार्थत्वेऽपि तस्य विष्णुवाचिताया मूलग्रन्थेषु तत्र तत्र समर्थनाच्च ।

........ ......... ....ब्रह्मसृष्ट्या तु बृंहयत् ।
पुच्छं प्रधानवायौ च ब्रह्माख्ये संस्थितं सदा ।।

इति वचनविरोधाच्च । ''पुच्छं सङ्कर्षणः प्रोक्तः'' इति भाष्योदाहृतवचन-विरोधाच्च । 'तस्मिन्नानन्दरूपोऽसौ स्थितो नारायणः सदा' इति स्मृतेरानन्दमयस्य विष्णुत्वाच्च । अस्य प्रकरणस्य तैत्तिरीयभाष्यादौ विष्णुपरत्वेन प्रमाणेनैव व्याख्यातत्वाच्च । आत्मब्रह्मादिशब्दानां मुक्तगम्यत्वादिलिङ्गानां च भाष्यादौ तत्र तत्र विष्ण्वेकनिष्ठत्वस्य समर्थनाच्च । शिवपरत्वस्य ''नेतरः'' इत्यत्र सूत्रकृतैव

निरासाच्च । यत्त्वन्नमयादयः पञ्चापि न कोशाः, किन्तु ब्रह्मविष्णुरुद्रेश्वरसदाशिव-संज्ञाः पञ्च चेतना इत्यादिजल्पनं, तत्प्रमाणशून्यं प्रमाणविरुद्धं च ।

यदपि ''नेतरः'' इत्यादिसूत्रचतुष्टयमधिकरणान्तरं कृत्वा, ''यतः प्रसूता जगतः प्रसूती'' इति वाक्यमुदाहृत्य चतुर्मुखपरत्वं पूर्वपक्षयित्वा, शिवपरत्वेन सिद्धान्त इत्युक्तं, तदपि न, तथात्वे ''नेतरः'' इति निषेधरूपेण सूत्रविन्यासायोगेन पूर्वशेषत्वस्यैवौचित्यात् । ''यतः प्रसूता'' इत्यादेर्भाष्यादौ विष्णुपरत्वसमर्थनस्य प्रागेवास्माभिः प्रदर्शितत्वात् । एवमन्यत्तदीयदुर्भाषणदूषणमूहनीयम् ।

**गुरुराजीयम्** – ननु द्वारत्वज्ञानेपि विशेषजिज्ञासया पुनरुपसत्तिरित्यत आह – **किञ्चेति** ।। **तस्येति** ।। आनन्दमात्रस्येत्यर्थः । ननु निरतिशयत्वविशिष्टा-नन्दाभ्यासो हेतुः । तथा च न व्यभिचार इत्यत आह – **निरतिशयत्वेति** ।। ननु शतगुणितत्वविशिष्टत्वमेवाभ्यासशब्दार्थः । तस्य च प्रकृतेपि सत्त्वान्नाभ्यासस्या-सिद्धत्वमित्यत आह – **शतगुणितेति** ।।

ननु नानन्दशब्दाभ्यासो हेतुः । किन्तु ब्रह्मशब्दाभ्यासः । तस्यानन्दमय एव सत्त्वादन्यत्र चासत्त्वादानन्दमयस्यैव ब्रह्मत्वं नान्येषामिति यादवप्रकाशीयं मतमनुवदति – **यत्त्विति** ।। विज्ञानमयादौ व्यभिचारान्न तेन ब्रह्मत्वसमर्थनमुचित-मित्याह – **त्वन्मत इति** ।। **प्रायपाठेति** ।। अन्नमयादौ मयटो विकारार्थत्वमानन्दमये च प्राचुर्यार्थत्वमिति प्रायपाठविरोध इत्यर्थः । ननु यद्यन्नमयादिचतुष्टये विकारार्थत्वमानन्दमय एव प्राचुर्यार्थत्वमित्यङ्गीकारः स्यात्तर्हि प्रायपाठविरोधः स्यात् । नचैवम् । प्राणमये विकारार्थत्वस्य त्यक्तत्वादित्याशङ्क्ते ।। **नन्विति** ।। एवं हि प्राचुर्यार्थत्वस्यासम्भवाद्विकारार्थत्वस्य स्वयमेव त्यक्तत्वात्स्वार्थिकत्वं वक्तव्यम् । एवं च वैयर्थ्यं स्यादित्याह – **तर्हीति** ।।

ननु सम्बन्धार्थत्वे लक्षणा स्यादित्यत आह – **वैयर्थ्यादिति** ।। ननु प्राणशब्देनान्नस्यैव गृहीतत्वात्तस्य मयटा सम्बन्धबाधान्नानुपपत्तिरित्यत आह – **अप्रसिद्धार्थत्वे त्विति** ।। उक्तन्यायमन्यत्राप्यतिदिशति ।। **एवमिति** ।।

ವಿವರಣೆ - ರಾಮಾನುಜರು ಹೇಳುವ ಸೂತ್ರಾರ್ಥವನ್ನು ಪ್ರಕೃತ ನಿರಾಕರಿಸುತ್ತಿದ್ದಾರೆ. ಸೂತ್ರದಲ್ಲಿರುವ 'ಅಭ್ಯಾಸಾತ್' ಎಂಬ ಹೇತುವಿನಿಂದ ಆನಂದಮಾತ್ರಾಭ್ಯಾಸವನ್ನು ಹೇತುವನ್ನಾಗಿ ಮಾಡುತ್ತೀರೋ? ಅಥವಾ

ನಿರತಿಶಯತ್ವ ವಿಶಿಷ್ಟವಾದ ಆನಂದಮಾತ್ರಾಭ್ಯಾಸವನ್ನು ಹೇತುವನ್ನಾಗಿ ಮಾಡುತ್ತೀರೋ? ಎಂದು ವಿಕಲ್ಪಿಸಿ ಕ್ರಮವಾಗಿ 'ಕಿಂಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

'ಸೈಷಾನಂದಸ್ಯ' ಎಂದು ಪ್ರಾರಂಭಿಸಿ, ಆನಂದದ ಉತ್ತರೋತ್ತರಾಧಿಕ್ಯವನ್ನು ಉಪನಿಷತ್ತು ಹೇಳುತ್ತಿದೆ. ಇದೇ ಅಭ್ಯಾಸ ಶಬ್ದಕ್ಕೆ ಅರ್ಥ. ಹಾಗಾಗಿ ಆನಂದದ ಅಭ್ಯಾಸವನ್ನು ಹೇಳಬಹುದಲ್ಲವೆ? ಎಂಬ ಆಕ್ಷೇಪಕ್ಕೆ ಶತಗುಣಿತ ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಗ್ರಂಥದಲ್ಲಿರುವ ಪ್ರಾಯಪಾಠಬಾಧವನ್ನು ಹೀಗೆ ತಿಳಿಯಬೇಕು. ''ವಿಕಾರಶಬ್ದಾನ್ನೇತಿಚೇನ್ನ'' ಎಂಬ ಸೂತ್ರವನ್ನು ರಾಮಾನುಜರು ಆನಂದಮಯ-ಮಾತ್ರವಿಷಯಕವೆಂದು ಹೇಳುತ್ತಾರೆ. ಉಳಿದ ಅನ್ನಮಯಾದಿಶಬ್ದಗಳಿಗೆ ವಿಕಾರಾರ್ಥವನ್ನು ಒಪ್ಪಿದ್ದಾರೆ. ಎಲ್ಲೆಡೆ ಇರುವ ಮಯಟ್‌ಪ್ರತ್ಯಯಕ್ಕೆ ಒಂದೇ ಅರ್ಥವನ್ನು ಒಪ್ಪದ ಕಾರಣ ಪ್ರಾಯಪಾಠಬಾಧವು ಬರುತ್ತದೆ. ಸಂಬಂಧಾರ್ಥದಲ್ಲಿ ಮಯಟ್‌ಪ್ರತ್ಯಯವನ್ನು ಯಾವ ಕೋಶಗಳೂ ಹೇಳಿಲ್ಲವಲ್ಲ? ಎಂಬ ಪ್ರಶ್ನೆಗೆ ವೈಯ್ಯರ್ಥ್ಯಾತ್ವಾತ್ ಎಂದು ಉತ್ತರಿಸುತ್ತಿದ್ದಾರೆ.

''ಆನಂದಮಯೋಽಭ್ಯಾಸಾತ್'' ಎಂಬ ಸೂತ್ರದಲ್ಲಿರುವ ಅನುಪಪತ್ತಿಯನ್ನು ಗ್ರಂಥಕಾರರು ತೋರಿಸಿದರು. ಉಳಿದ ಸೂತ್ರಗಳಲ್ಲಿರುವ ಅನುಪಪತ್ತಿಯನ್ನು ಸ್ವತಃ ಊಹಿಸಿಕೊಳ್ಳಬೇಕು ಅದು ಹೀಗೆ - ''ತದ್ಧೇತುವ್ಯದೇಶಾಚ್ಚ'' ಸೂತ್ರದ ಅನುಪಪತ್ತಿ - ''ಏಷಹ್ಯೇವಾನಂದ ಯಾತಿ'' ಎಂಬ ಶ್ರುತಿಯು ಜೀವನ ಆನಂದಕ್ಕೆ ಕಾರಣನಾದವನ ಬಗ್ಗೆ ಹೇಳುತ್ತಿದೆ. ಆದ್ದರಿಂದ ಆನಂದಮಯನು ಬ್ರಹ್ಮನೇ ಆಗುತ್ತಾನೆ ಹೊರತು ಜೀವನಲ್ಲ. ಜೀವನು ತನ್ನ ಆನಂದಕ್ಕೆ ತಾನೇ ಕಾರಣನಾಗಲಾರ ಎಂದು ಹೇಳಿದ್ದಾರೆ. ಇದು ತಪ್ಪು. ಜೀವ ಆನಂದಕ್ಕೆ ಕಾರಣನಾದ್ದರಿಂದ ಆನಂದಮಯನು ಜೀವನಿಗಿಂತ ಭಿನ್ನವೆಂದು ಈ ಸೂತ್ರದಿಂದ ಸಿದ್ಧನಾಗುತ್ತಾನೆಯೇ ಹೊರತು ಬ್ರಹ್ಮನೆಂದಲ್ಲ. ಜೀವನ ಆನಂದಕ್ಕೆ ಕಾರಣನಾದ ಮಾತ್ರದಿಂದ ಬ್ರಹ್ಮನೇಕೆ ಆಗಬೇಕು. ಮತ್ತು ಬ್ರಹ್ಮರಲ್ಲದ ವರಾಂಗನೆಯರೂ ಸಹ ಜೀವರ ಆನಂದಕ್ಕೆ ಕಾರಣರಾಗಿರುವುದು ಕಂಡಿದೆ. ಮತ್ತು ನಿಮ್ಮ ಪ್ರಕಾರ ಮೊದಲನೆಯ ಸೂತ್ರದ ಅನಂತರ ಹೇಳಬೇಕು.

''ಮಾಂತ್ರವರ್ಣಿಕಮೇವ ಚ ಗೀಯತೇ'' ಸೂತ್ರದ ಅನುಪಪತ್ತಿ - ''ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ'' ಎಂಬ ಮಂತ್ರವರ್ಣದಲ್ಲಿ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ. ಈ ಬ್ರಹ್ಮನೇ ''ತಸ್ಮಾದ್ವಾ ಏತಸ್ಮಾದಾತ್ಮನಃ'' ಎಂಬುದರಿಂದ ಪ್ರಾರಂಭಿಸಿ ''ಆನಂದಮಯ ಇತಿ ಗೀಯತೇ'' ಇಲ್ಲಿಯ ತನಕ ಪ್ರತಿಪಾದ್ಯನಾಗಿದ್ದಾನೆ. ಇಷ್ಟು ''ಮಾಂತ್ರವರ್ಣಿಕಮೇವಚ ಗೀಯತೇ'' ಎಂಬ ಸೂತ್ರವು ಹೇಳುತ್ತಿದೆ ಎಂದು ಯಾದವಪ್ರಕಾಶರು ಹೇಳುತ್ತಾರೆ. ಇದು ತಪ್ಪು. ಮಂತ್ರವರ್ಣದಲ್ಲಿ ಆನಂದಮಯನು ಪ್ರತಿಪಾದ್ಯನಾದ್ದರಿಂದ ಬ್ರಹ್ಮನೆನ್ನುತ್ತಿದ್ದೀರಿ. ಅನ್ನಮಯಾದಿಗಳು ಸಹ ಭಾಷ್ಯದಿಗಳಲ್ಲಿ ಹೇಳಿದಂತೆ ಮಂತ್ರವರ್ಣದಿಂದ ಪ್ರತಿಪಾದ್ಯರಾಗಿದ್ದಾರೆ. ಹಾಗಾದರೆ ಅನ್ನಮಯಾದಿಗಳು ಏಕೆ ಬ್ರಹ್ಮರಾಗುವುದಿಲ್ಲ. ನೀವು ಆನಂದಮಯನನ್ನು ಮಾತ್ರ ಬ್ರಹ್ಮವೆನ್ನುತ್ತೀರಿ ಅನ್ನಮಯಾದಿ ನಾಲ್ಕನ್ನು ಬ್ರಹ್ಮವಲ್ಲವೆನ್ನುತ್ತೀರಿ; ಇದು ತಪ್ಪಲ್ಲವೆ?

''ನೇತರೋಽನುಪಪತ್ತೇಃ'' ಸೂತ್ರದ ಅನುಪಪತ್ತಿ - ಬ್ರಹ್ಮನಿಂದ ಇತರನಾದ ಜೀವನು ಮಂತ್ರವರ್ಣಪ್ರತಿಪಾದ್ಯನಲ್ಲ. ''ಬ್ರಹ್ಮಣಾ ವಿಪಶ್ಚಿತಾ'' ಎಂಬುದಾಗಿ ಸಾರ್ವಜ್ಞವನ್ನು ಹೇಳುವ ವಿಪಶ್ಚಿತಾ ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ. ಜೀವನು ಸರ್ವಜ್ಞನಲ್ಲದ ಕಾರಣ ಈ ಮಂತ್ರವರ್ಣದಿಂದ

ಪ್ರತಿಪಾದ್ಯನಾಗಲಾರ. ಇಷ್ಟು ''ನೇತರೋಽನುಪಪತ್ತೇಃ'' ಸೂತ್ರದ ಅರ್ಥವೆನ್ನುತ್ತಾರೆ. ಇದೂ ಸಹ ತಪ್ಪು. ಅನ್ನಮಯಾದಿಗಳು ಬ್ರಹ್ಮರಾಗದಿದ್ದರೂ ಸಹ ವಿಪಶ್ಚಿತ್ತ್ವದ ಅನುಪಪತ್ತಿಯು ಸಮಾನವಾಗಿದೆ. ಆದರೆ ನೀವು ಆನಂದಮಯನನ್ನು ಮಾತ್ರ ಬ್ರಹ್ಮನೆಂದು ಸಾಧಿಸುತ್ತಿದ್ದೀರಿ.

''ಭೇದವ್ಯಪದೇಶಾತ್'' ಸೂತ್ರಾರ್ಥದ ಅನುಪಪತ್ತಿ - ''ಭೀಷಾಸ್ಮಾದ್ವಾತಃ ಪವತೇ'' ಇತ್ಯಾದಿ ಶ್ರುತಿಯಲ್ಲಿ ವಾಯು, ಸೂರ್ಯಾದಿಗಳು ಪ್ರಶಾಸಿತರೆಂದು (ನಿಯಮ್ಯರೆಂದು) ಹೇಳಿದೆ. ಆನಂದಮಯನು ಪ್ರಶಾಸಿತೃ (ನಿಯಾಮಕ) ಎಂದು ಹೇಳಲಾಗಿದೆ. ಇದರಿಂದ ಆನಂದಮಯನು ವಾಯುಸೂರ್ಯಾದಿಗಳಿಗಿಂತ ಭಿನ್ನನೆಂದು ತಿಳಿಯುತ್ತದೆ. ಆದ್ದರಿಂದ ಆನಂದಮಯನು ಬ್ರಹ್ಮನಾಗಿದ್ದಾನೆಂದು ಭೇದವ್ಯದೇಶಸೂತ್ರವು ಸಮರ್ಥಿಸುತ್ತಿದೆ ಎನ್ನುತ್ತಾರೆ. ಇದು ತಪ್ಪು. ''ಬ್ರಹ್ಮವಿದಾಪ್ನೋತಿ'' ಇಲ್ಲಿಂದ ಪ್ರಾರಂಭಿಸಿ ಸಂಪೂರ್ಣ ಪ್ರಕರಣವು ಬ್ರಹ್ಮನನ್ನೇ ಪ್ರತಿಪಾದಿಸುತ್ತಿದೆ. ಈ ಬ್ರಹ್ಮಪ್ರಕರಣದಲ್ಲಿ ಅನ್ನಮಯಾದಿಗಳು ಪ್ರತಿಪಾದ್ಯರಾಗಿದ್ದಾರೆ. ವಾಯುಸೂರ್ಯಾದಿಗಳ ಭೇದವ್ಯಪದೇಶಗಳು ಅನ್ನಮಯಾದಿಗಳಲ್ಲಿಯೂ ಸಾಧಾರಣವಾಗುತ್ತದೆ. ಭೇಧವ್ಯಪದೇಶ ಹೇತುವಿನಿಂದ ಆನಂದಮಯನು ಬ್ರಹ್ಮನಾಗುವುದಾದರೆ ಅನ್ನಮಯಾದಿಗಳೂ ಸಹ ಬ್ರಹ್ಮರಾಗುತ್ತಾರೆ.

''ಕಾಮಾಚ್ಚ ನಾನುಮಾನಾಪೇಕ್ಷ'' ಸೂತ್ರದ ಅನುಪಪತ್ತಿ - ''ಸೋಽಕಾಮಯತ'' ಇಲ್ಲಿಂದ ಪ್ರಾರಂಭಿಸಿ ''ಸ ಇದಂ ಸರ್ವಮಸೃಜತ'' ಇಲ್ಲಿಯ ತನಕ ಸ್ವಇಚ್ಛೆಯಿಂದಲೇ ಆನಂದಮಯನು ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಅನುಮಾನಸಿದ್ಧವಾದ ಪ್ರದಾನವನ್ನು ಅಪೇಕ್ಷಿಸಲಾರ ಎಂದು ಸೂತ್ರಾರ್ಥವನ್ನು ಹೇಳುತ್ತಾರೆ. ಇದು ಸರಿಯಲ್ಲ. ಅನುಮಾನಪದಕ್ಕೆ ಪ್ರದಾನದಲ್ಲಿ ಲಕ್ಷಣಾ ಮಾಡಬೇಕಾಗುತ್ತದೆ. ಮತ್ತು ಭೇದಸೂತ್ರದ ಆನಂತರ್ಯವನ್ನು ಈ ಸೂತ್ರಕ್ಕೆ ಹೇಳಲಾಗುವುದಿಲ್ಲ. ಮತ್ತು ''ಕಾಮಾದೇವ ಸರ್ಗಶ್ರವಣಾತ್'' ಎಂಬ ಪದವನ್ನು ಅಧ್ಯಾಹಾರ ಮಾಡಬೇಕಾಗುತ್ತದೆ.

''ಅಸ್ಮಿನ್ನಸ್ಯಚ ತದ್ಯೋಗಂ ಶಾಸ್ತಿ'' ಸೂತ್ರದ ಅನುಪಪತ್ತಿ - ''ರಸೋ ವೈ ಸಃ ರಸಂ ಹ್ಯೇವಾಯಮ್ ಲಬ್ಧ್ವಾಽನಂದೀ ಭವತಿ'' ಈ ಶ್ರುತಿಯು ರಸಶಬ್ದವಾಚ್ಯನಾದ ಆನಂದಮಯನನ್ನು ಜೀವನು ಹೊಂದುತ್ತಾನೆ. ಆನಂದಮಯನನ್ನು ಹೊಂದಿ ಜೀವನು ಆನಂದರೂಪನಾಗುತ್ತಾನೆ. ಹೀಗೆ ಹೇಳಿದ್ದರಿಂದ ಆನಂದಮಯನು ಬ್ರಹ್ಮನೇ ಆಗಬೇಕೆಂದು ಈ ಸೂತ್ರದ ಅರ್ಥ. ಇದೂ ಸಹ ತಪ್ಪು. ''ರಸಂ ಹ್ಯೇವಾಯಂ'' ಎಂಬ ಶ್ರುತಿಯು ''ಅನ್ನರಸಮಯಃ'' ಎಂದು ರಸಶಬ್ದನಿರ್ದಿಷ್ಟನಾದ ಅನ್ನಮಯನಲ್ಲೇ ಜೀವನ ಪ್ರಾಪ್ತಿಯನ್ನು ಹೇಳುತ್ತಿದೆ. ಅನ್ನಮಯನು ಆನಂದರೂಪನಾಗಿದ್ದಾನೆ. ಇವನನ್ನು ಹೊಂದಿ ಜೀವನೂ ಸಹ ಆನಂದರೂಪನಾಗುತ್ತಾನೆ. ಹೀಗೂ ಕೂಡ ಸೂತ್ರಕ್ಕೆ ಅರ್ಥೈಸಲು ಬರುತ್ತದೆ. ಯಾವಕಾರಣದಿಂದ ಆನಂದಮಯನನ್ನು ಬ್ರಹ್ಮನೆನ್ನುತ್ತೀರೋ ಅದೇ ಕಾರಣದಿಂದ ಅನ್ನಮಯನು ಬ್ರಹ್ಮನಾಗುತ್ತಾನೆ. ಆದರೆ ಆನಂದಮಯನನ್ನು ಮಾತ್ರ ನೀವು ಬ್ರಹ್ಮನೆನ್ನುವುದು ತಪ್ಪಾಗುತ್ತದೆ. ಹೀಗೆ ಎಂಟೂ ಸೂತ್ರಗಳಲ್ಲಿರುವ ಅನುಪಪತ್ತಿಯನ್ನು ತಿಳಿಯಬೇಕು.

## ಶೈವಮತ ನಿರಾಸ

ಶೈವರು ಆನಂದಮಯಾಧಿಕರಣವನ್ನು ಹೀಗೆ ರಚಿಸುತ್ತಾರೆ - ಹಿಂದಿನ ಈಕ್ಷತ್ಯಧಿಕರಣದಲ್ಲಿ ಬ್ರಹ್ಮನ ಜಗತ್ಕಾರಣತ್ವ ಲಕ್ಷಣಕ್ಕೆ ಪ್ರಧಾನದಲ್ಲಿ ಅತಿವ್ಯಾಪ್ತಿ ಬರುವುದಿಲ್ಲವೆಂದು ಸಮರ್ಥಿಸಿದ್ದಾಯಿತು. ಈ

ಅಧಿಕರಣದಲ್ಲಿ ಜಗತ್ಕಾರಣತ್ವಲಕ್ಷಣಕ್ಕೆ ಜೀವನಲ್ಲಿ ಅತಿವ್ಯಾಪ್ತಿ ಬರುವುದಿಲ್ಲವೆಂದು ಸಮರ್ಥಿಸುತ್ತಿದ್ದಾರೆ. ಅದು ಹೀಗೆ - ಈ ಆನಂದಮಯನು ಜೀವನೋ? ಅಥವಾ ರುದ್ರನೋ? ಎಂದು ಸಂಶಯ. ಇಲ್ಲಿರುವ ಮಯಟ್ಪ್ರತ್ಯಯವು ವಿಕಾರಾರ್ಥವನ್ನು ಹೊಂದಿದ್ದರಿಂದ 'ಆನಂದೋ ಬ್ರಹ್ಮ' ಎಂಬ ಶ್ರುತಿಯು ಬ್ರಹ್ಮನನ್ನು ಹೇಳುತ್ತಿದೆ. ಆನಂದರೂಪನಾದ ಬ್ರಹ್ಮನ ವಿಕಾರನು ಜೀವನಾಗಿದ್ದಾನೆ. ಹಾಗಾಗಿ ಬ್ರಹ್ಮನು ಆನಂದನಾಗಿದ್ದಾನೆ. ಜೀವನು ಆನಂದಮಯನಾಗಿದ್ದಾನೆ. ಮತ್ತು "ಆನಂದಮಯಾ ಮೇ ಶುದ್ಧ್ಯಂತಾಮ್" ಎಂದು ಆನಂದಮಯನಲ್ಲಿ ಶುದ್ಧಿಪ್ರಾರ್ಥನೆಯು ಕೇಳಿಸುತ್ತಿರುವುದರಿಂದ ಜೀವನೇ ಆನಂದಮಯನಾಗುತ್ತಾನೆ. ಇಂತಹ ಜೀವನೇ "ಆತ್ಮನಃ ಆಕಾಶಃ" ಎಂದು ಭೂತಾದಿಕಾರಣನಾಗಿ ಹೇಳಲ್ಪಟ್ಟಿದ್ದಾನೆ. "ಅನ್ಯೋಽಂತರ ಆತ್ಮಾನಂದಮಯಃ" ಎಂಬಲ್ಲಿ ಅನ್ಯತ್ವ ಅಂತರತ್ವಗಳು ಕೇಳಿಸುತ್ತಿರುವುದರಿಂದ ಜೀವನೇ ಪ್ರತಿಪಾದ್ಯನಾಗಬೇಕು. ಭೂತಾದಿಕಾರಣನೂ ಆನಂದಮಯನೂ ಜೀವನೇ ಆಗಬೇಕು. ಇಷ್ಟು ಪೂರ್ವಪಕ್ಷ.

"ಸೈಷಾನಂದಸ್ಯ" ಇತ್ಯಾದಿಯಾಗಿ ಮನುಷ್ಯರಿಂದ ಪ್ರಾರಂಭಿಸಿ ಪ್ರಜಾಪತಿಯ ತನಕ ಅವರವರ ಆನಂದದಲ್ಲಿ ಉತ್ತರೋತ್ತರ ಆಧಿಕ್ಯವನ್ನು ಉಪನಿಷತ್ತು ಹೇಳುತ್ತಿದೆ. ಅನಂತರ ಕೊನೆಯಲ್ಲಿ "ಸ ಏಕೋ ಬ್ರಹ್ಮಣ ಆನಂದಃ" ಎಂದು ನಿರತಿಶಯ ವಿಶಿಷ್ಟವಾದ ಆನಂದವು ಬ್ರಹ್ಮನ ಆನಂದವೆಂದು ವರ್ಣಿಸುತ್ತಿದೆ. ಬ್ರಹ್ಮನೆಂದರೆ ಶುದ್ಧಸ್ವರೂಪನಾದ ಶಿವನು. ಯಾವರೀತಿಯಾಗಿ ಮೋಡಗಳು ಹೋದನಂತರ ಚಂದ್ರನು ಶುದ್ಧರೂಪನಾಗಿ ತೋರುವನೋ ಅದರಂತೆ ಶಿವನೂ ಸಹ ಅನೇಕ ದೋಷಗಳಿಂದ ದೂರನಾಗಿ ಶುದ್ಧನಾಗಿದ್ದಾನೆ. ಆದ್ದರಿಂದ ಶಿವನು ಆನಂದಮಯನಾಗಿದ್ದಾನೆ. ಜೀವನು ವಿಜ್ಞಾನಮಯನಾಗಿದ್ದಾನೆ. "ಬ್ರಹ್ಮಪುಚ್ಛಮ್ ಪ್ರತಿಷ್ಠಾ" ಇಲ್ಲಿರುವ ಬ್ರಹ್ಮಶಬ್ದವು ಪ್ರಣವಪರವಾಗಿದೆ. ಪ್ರಣವವು ಶಿವನನ್ನು ಪ್ರತಿಪಾದಿಸುತ್ತದೆ. ಆದ್ದರಿಂದ ಪ್ರಾಚುರ್ಯಾರ್ಥದಲ್ಲಿ ಮಯಟ್ಪ್ರತ್ಯಯವನ್ನು ಹೇಳಬೇಕು. ಇದನ್ನು ಶೈವರು ಹೀಗೆ ಹೇಳಿದ್ದಾರೆ. "ಆಕಾಶಾದೇಃ ಕಾರಣಮಾನಂದಮಯಸ್ತು ಜೀವಃ ಸ್ಯಾತ್ । ಯದಯಂ ಬ್ರಹ್ಮವಿಕಾರೋ ಬ್ರಹ್ಮಾಧಾರಶ್ಚ ಶೋಧ್ಯಶ್ಚ । ನಿರತಿಶಯಾನಂದಯುತೋ ಬ್ರಹ್ಮೈವ ಪ್ರಚುರತಾ ತು ಮಯಡರ್ಥಃ । ಪುಚ್ಛಂ ಬ್ರಹ್ಮ ಪ್ರಣವಃ ಶುದ್ಧಿಶ್ಚ ವಿರೋಧ್ಯಪಗಮೋ ವಿಧುವತ್" ಇಷ್ಟು ಸಿದ್ಧಾಂತ.

ಶೈವರ ಈ ಅಧಿಕರಣಶರೀರವು ಅಸಾಧುವಾಗಿದೆ. ಹಿಂದಿನ ಈಕ್ಷತ್ಯಧಿಕರಣದಲ್ಲಿ ಪ್ರಕೃತಿಗೆ ಜಗತ್ ಕಾರಣತ್ವವನ್ನು ನಿರಾಸ ಮಾಡಿದಂತೆ ಜೀವನ ಜಗತ್ಕಾರಣತ್ವವನ್ನು ಶೈವರು ನಿರಾಕರಿಸಿದ್ದಾರೆ. ಹೀಗಿರುವಾಗ ಈಕ್ಷತ್ಯಧಿಕರಣವು ಪ್ರಧಾನದಲ್ಲಿ ಬರುವ ಅತಿವ್ಯಾಪ್ತಿಯನ್ನು, ಆನಂದಮಯಾಧಿಕರಣವು ಜೀವನಲ್ಲಿ ಬರುವ ಅತಿವ್ಯಾಪ್ತಿಯನ್ನು ಪರಿಹರಿಸುತ್ತಿದೆ ಎನ್ನುವುದು ತಪ್ಪು. "ತನ್ನಿಷ್ಠಸ್ಯ ಮೋಕ್ಷೋಪದೇಶಾತ್" ಎಂಬ ಸೂತ್ರವು ಜಗತ್ಕಾರಣನಲ್ಲಿ ಆಸಕ್ತನಾದವನಿಗೆ ಮೋಕ್ಷದ ಫಲವನ್ನು ಹೇಳಿದೆ. ಜೀವನಲ್ಲಿ ಆಸಕ್ತನಾದವನಿಗೆ ಮೋಕ್ಷವು ದೊರೆಯದ ಕಾರಣ ಜೀವನು ಜಗತ್ಕಾರಣನಾಗಲಾರ. ಶಿವನನ್ನು ಬಿಟ್ಟು ಬೇರೆಯವರಲ್ಲಿ ಆಸಕ್ತನಾದವನಿಗೆ ಮೋಕ್ಷವು ದೊರೆಯುವುದಿಲ್ಲವೆಂಬ ಪೂರ್ವಪಕ್ಷವು ತಪ್ಪು. ಯಾವ ಮತದವರೂ ಸಹ ಜೀವನನ್ನು ಬ್ರಹ್ಮನ ವಿಕಾರವೆಂದು ಅಂಗೀಕರಿಸಿರುವುದಿಲ್ಲ. ಆದ್ದರಿಂದ ಜೀವನನ್ನು ಬ್ರಹ್ಮವಿಕಾರವೆಂದು ಹೇಗೆ ಪೂರ್ವಪಕ್ಷ ಮಾಡುತ್ತೀರಿ.

ಆಕ್ಷೇಪ - ಬ್ರಹ್ಮನ ವಿಕಾರವೆಂದರೆ ಬ್ರಹ್ಮನಿಂದ ಹುಟ್ಟುತ್ತಾನೆಂದು ಅರ್ಥ. ಜೀವನು ಬ್ರಹ್ಮಕಾರ್ಯ-ನಾಗುತ್ತಾನೆ; ಹೊರತು ಬ್ರಹ್ಮನ ಪರಿಣಾಮವೆಂದು ನಾವು ಹೇಳುವುದಿಲ್ಲ.

ಸಮಾಧಾನ - "ಆನಂದಮಯಃ ಜೀವ ಏವ ಆನಂದರೂಪಬ್ರಹ್ಮಕಾರ್ಯತಯಾ ಬ್ರಹ್ಮವಿಕಾರತ್ವಾತ್" ಎಂದು ಅನುಮಾನವನ್ನು ಪ್ರಯೋಗಿಸಿದಂತಾಯಿತು. ಈ ಅನುಮಾನಕ್ಕೆ ವಿಜ್ಞಾನಮಯನಲ್ಲಿ ವ್ಯಭಿಚಾರ ಬರುತ್ತದೆ. "ವಿಜ್ಞಾನಂ ಬ್ರಹ್ಮೇತಿ" ಎಂಬ ಶ್ರುತಿಯಿಂದ ವಿಜ್ಞಾನಮಯನು ವಿಜ್ಞಾನರೂಪನಾದ ಬ್ರಹ್ಮನ ಕಾರ್ಯನಾದ್ದರಿಂದ ಬ್ರಹ್ಮನ ವಿಕಾರವೆಂದು ಶೈವರು ಒಪ್ಪಿದ್ದಾರೆ. ಆದರೆ ಆ ವಿಜ್ಞಾನಮಯನು ಜೀವನಲ್ಲ ಬುದ್ಧಿಯೆಂದಿದ್ದಾರೆ. ಆದ್ದರಿಂದ ಬ್ರಹ್ಮಕಾರ್ಯತಯಾ ಬ್ರಹ್ಮವಿಕಾರತ್ವವು ವಿಜ್ಞಾನಮಯನಲ್ಲಿ ಇದೆ. ಆದರೆ ಜೀವತ್ವವೆಂಬ ಸಾಧ್ಯವು ಇಲ್ಲದ ಕಾರಣ ವ್ಯಭಿಚಾರ ಬರುತ್ತದೆ.

ಆನಂದಮಯಶಬ್ದದಿಂದ ಶಿವನನ್ನು ತೆಗೆದುಕೊಳ್ಳಲು ಬರುವುದಿಲ್ಲ. "ಆನಂದಮಯಾ ಮೇ ಶುಧ್ಯಂತಾಮ್" ಎಂದು ಆನಂದಮಯನಲ್ಲಿ ಶುದ್ಧಿಪ್ರಾರ್ಥನೆಯು ಕೇಳಿಸುತ್ತಿದೆ. ಜೀವನು ಆನಂದಮಯನಾದರೆ ಇದು ತಪ್ಪಾಗುತ್ತದೆಂದು ಪೂರ್ವಪಕ್ಷದಲ್ಲಿ ಹೇಳಿದ್ದರು. ಇದೂ ಸಹ ತಪ್ಪು. ಜೀವನು ಆನಂದಮಯನಾದರೂ ಸಹ ಶುದ್ಧಿಪ್ರಾರ್ಥನೆಯು ಕೂಡುವುದಿಲ್ಲ. ಆವಾಗ 'ಮೇ' ಎಂಬ ಶಬ್ದದ ಅರ್ಥವನ್ನು ನಿಖರವಾಗಿ ಹೇಳಿದಂತಾಗುವುದಿಲ್ಲ ಮತ್ತು ಅನ್ನಮಯಾದಿಗಳಲ್ಲಿರುವ ಶುದ್ಧಿಪ್ರಾರ್ಥನೆಯು ಅನ್ನಮಯಾದಿಕೋಶಪರವಾಗಿದೆಯೆಂದು ಈಗ ಆನಂದಮಯನನ್ನು ಜೀವನೆಂದು ಹೇಳಿದ್ದರಿಂದ ಆನಂದಮಯಕೋಶಕ್ಕೆ ಶುದ್ಧಪ್ರಾರ್ಥನೆಯನ್ನು ಸಲ್ಲಿಸಿದಂತಾಗುವುದಿಲ್ಲ.

ಮತ್ತು "ಆತ್ಮಾ ಮೇ ಶುಧ್ಯಂತಾಂ" ಎಂಬ ಮುಂದಿನ ವಾಕ್ಯವೂ ಅರ್ಥವಿಲ್ಲದಂತಾಗುತ್ತದೆ. ಆನಂದ-ಮಯಶುದ್ಧಿಪ್ರಾರ್ಥನೆಯಿಂದಲೇ ಆತ್ಮನು ಸಿದ್ಧವಾಗಿರುವಾಗ ಪುನಃ ಈ ವಾಕ್ಯವು ಅನಾವಶ್ಯಕ.

ಶೈವರ ಸಿದ್ಧಾಂತವೂ ಸಹ ಅರ್ಥಹೀನವಾಗಿದೆ. ನಿರತಿಶಯವಾದ ಆನಂದಾಭ್ಯಾಸವನ್ನು ಹೇತು ಮಾಡಲಾಗದೆಂದು ರಾಮಾನುಜರ ನಿರಾಕರಣೆ ಸಂದರ್ಭದಲ್ಲಿಯೇ ನಿರಾಕರಿಸಿದ್ದಾಗಿದೆ. ಮತ್ತು ಆನಂದಮಯಶಬ್ದದಲ್ಲಿರುವ ಮಯಟ್‌ಪ್ರತ್ಯಯಕ್ಕೆ ಮಾತ್ರ ಪ್ರಾಚುರ್ಯಾರ್ಥವನ್ನು ಹೇಳುತ್ತಾರೆ. ಎಲ್ಲೆಡೆ ಇರುವ ಮಯಟ್‌ಪ್ರತ್ಯಯಕ್ಕೆ ವಿಕಾರಾರ್ಥವನ್ನು ಒಪ್ಪಿ ಇಲ್ಲಿ ಮಾತ್ರ ಪ್ರಾಚುರ್ಯಾರ್ಥವನ್ನು ಹೇಳಿದರೆ ಪ್ರಾಯಪಾಠವಿರೋಧ ಬರುತ್ತದೆ.

ಬ್ರಹ್ಮಶಬ್ದವು ಪ್ರಣವದಲ್ಲಿ ಪ್ರಸಿದ್ಧವಾಗಿದೆಂಬ ವಿಚಾರವು ಸರಿಯಲ್ಲ. ಪೂರ್ಣತ್ವಾರ್ಥದಲ್ಲಿ ಪ್ರಸಿದ್ಧವಾಗಿದೆ ಹೊರತು ಕೇವಲ ಪ್ರಣವ ಎಂಬರ್ಥದಲ್ಲಿ ಪ್ರಸಿದ್ಧವಾಗಿಲ್ಲ. ಒಂದು ವೇಳೆ ಪ್ರಣವಾರ್ಥವನ್ನು ಹೇಳಿದರೂ ಸಹ ಶಿವನು ಪ್ರಣವಪ್ರತಿಪಾದ್ಯನಲ್ಲ. ಆಚಾರ್ಯರು ಅನೇಕ ಕಡೆ ಉದಾಹರಿಸುವ ವಚನಗಳಿಂದ ವಿಷ್ಣುಮಾತ್ರನು ಪ್ರಣವಪ್ರತಿಪಾದ್ಯನಾಗಿದ್ದಾನೆ. ಮತ್ತು ಪ್ರಣವ ಎಂಬರ್ಥವನ್ನು ಹೇಳಿದರೆ "ಬ್ರಹ್ಮ ಸೃಷ್ಟ್ಯಾ ತು ಬೃಂಹಯತ್ । ಪುಚ್ಛಂ ಪ್ರಧಾನವಾಯೌ ಚ ಬ್ರಹ್ಮಾಖ್ಯೇ ಸಂಸ್ಥಿತಂ ಸದಾ" ಇತ್ಯಾದಿ ವಚನವಿರೋಧವು ಬರುತ್ತದೆ. ಪುಚ್ಛನೆನಿಸಿದ ಪ್ರಧಾನವಾಯುವಿನಲ್ಲಿ. ಬ್ರಹ್ಮನು ಪ್ರತಿಷ್ಠಿತನಾಗಿದ್ದಾನೆಂದು ಈ ಶ್ರುತಿಯು ಹೇಳುತ್ತಿದೆ. ಭಗವಂತನ ಸಂಕರ್ಷಣರೂಪವೂ ಸಹ ಪುಚ್ಛವೇ ಆಗಿದೆಯೆಂದು "ಪುಚ್ಛಂ ಸಂಕರ್ಷಣಃ ಪ್ರೋಕ್ತಃ" ಎಂಬ ಸ್ಮೃತಿಯು ಸ್ಪಷ್ಟವಾಗಿಯೇ ಹೇಳುತ್ತಿದೆ. ಈ ಪ್ರಮಾಣವಚನಗಳ ವಿರೋಧವನ್ನು ಶೈವರು ಎದುರಿಸಬೇಕಾಗುತ್ತದೆ. "ತಸ್ಮಿನ್ನಾನಂದರೂಪೋಽಸೌ ಸ್ಥಿತೋ ನಾರಾಯಣಃ ಸದಾ" ಎಂಬ ಸ್ಮೃತಿಯಂತೆ ಆನಂದಮಯನು ವಿಷ್ಣುವೆಂದು ತಿಳಿಯುವುದರಿಂದ ಜೀವನು ಆನಂದಮಯನಾಗಲಾರ.

ಅಷ್ಟೇ ಅಲ್ಲದೆ ತೈತ್ತಿರೀಯಪ್ರಕರಣವು ವಿಷ್ಣುಪರವೇ ಆಗಿದೆಯೆಂದು ತೈತ್ತಿರೀಯಭಾಷ್ಯದಲ್ಲಿ ಶ್ರೀಮದಾಚಾರ್ಯರು ಪ್ರಮಾಣಬದ್ಧವಾಗಿ ಸಮರ್ಥಿಸಿದ್ದಾರೆ. ಆತ್ಮಾ, ಬ್ರಹ್ಮಾದಿಶಬ್ದಗಳು ಮತ್ತು ಮುಕ್ತಗಮ್ಯತ್ವಾದಿಲಿಂಗಗಳು ಕೇವಲ ವಿಷ್ಣುನಿಷ್ಠಗಳಾಗಿವೆ ಎಂದು ಭಾಷ್ಯಕಾರರು ಅನೇಕ ಕಡೆ ಸಮರ್ಥಿಸಿದ್ದಾರೆ. ಸ್ವತಃ ಸೂತ್ರಕಾರರೇ ''ನೇತರೋऽನುಪಪತ್ತೇಃ'' ಎಂಬಲ್ಲಿ ಶಿವಪರತ್ವನನ್ನು ನಿರಾಕರಿಸಿದ್ದಾರೆ. ಆದ್ದರಿಂದ ಶೈವರ ಅಧಿಕರಣವು ಅನಂತದೋಷ ದುಷ್ಟವಾಗಿದೆ.

ಕೆಲವರ ಅಧಿಕರಣಶರೀರ - ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಈ ಐದುಶಬ್ದಗಳಿಂದ ಕ್ರಮವಾಗಿ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಶಿವ, ಸದಾಶಿವ ಈ ಐದು ಚೇತನರು ಪ್ರತಿಪಾದ್ಯರಾಗಿದ್ದಾರೆ.

ಇವರ ಮಾತುಗಳು ವ್ಯರ್ಥವಾಗಿವೆ. ಪ್ರಮಾಣಶೂನ್ಯವು ಪ್ರಮಾಣವಿರುದ್ಧವೂ ಆದ ಇವರ ಮತವನ್ನು ಪ್ರತ್ಯೇಕವಾಗಿ ನಿರಾಕರಿಸಬೇಕಾಗಿಲ್ಲ. ಇನ್ನು ''ನೇತರಃ'' ಇತ್ಯಾದಿ ನಾಲ್ಕು ಸೂತ್ರಗಳು ಪ್ರತ್ಯೇಕ ಅಧಿಕರಣವೆಂದೇ ಹೇಳುತ್ತಾರೆ. ''ಯತಃ ಪ್ರಸೂತಾ ಜಗತಃ ಪ್ರಸೂತೀ'' ಎಂಬ ವಾಕ್ಯವನ್ನು ಉದಾಹರಿಸಿ ಚತುರ್ಮುಖಪರವೆಂದು ಪೂರ್ವಪಕ್ಷ ಮಾಡಿ ಶಿವಪರವೆಂದು ಸಿದ್ಧಾಂತ ಮಾಡಿದ್ದಾರೆ. ಇದೂ ಸಹ ತಪ್ಪು. ಯಾವುದೇ ಅಧಿಕರಣದ ಪ್ರಥಮಸೂತ್ರವು ಪ್ರತಿಜ್ಞಾರೂಪವಾದ್ದರಿಂದ ವಿಧಿರೂಪವಾಗಿರುತ್ತದೆ. ಆದರೆ 'ನೇತರಃ' ಎಂಬುದು ನಿಷೇಧರೂಪವಾದುದರಿಂದ ಅಧಿಕರಣದ ಪ್ರಥಮಸೂತ್ರವೆಂದು ಹೇಳಲಾಗದು. ಆನಂದಮಯಾಧಿಕರಣದ ಗುಣಸೂತ್ರವೆಂದೇ ಹೇಳಬೇಕು. ಮತ್ತು 'ಯತಃ ಪ್ರಸೂತಾ' ಎಂಬ ಶ್ರುತಿಯನ್ನು ವ್ಯಾಖ್ಯಾನಿಸುವಾಗ ಭಾಷ್ಯಾದಿಗಳಲ್ಲಿ ಅತ್ಯಂತ ಸ್ಪಷ್ಟವಾಗಿ ವಿಷ್ಣುಪರತ್ವವನ್ನು ಈ ಹಿಂದೆಯೇ ಸಮರ್ಥಿಸಿದ್ದಾರೆ. ಹೀಗೆ ಇತರ ಮತೀಯರ ಸಿದ್ಧಾಂತರಚನೆಯಲ್ಲಿ ಅರ್ಥವಿಲ್ಲದ ದುರ್ಭಾಷಣಗಳು ಇನ್ನೂ ಬಹಳಷ್ಟು ಇವೆ. ಅವುಗಳಲ್ಲಿರುವ ತಪ್ಪುಗಳನ್ನು ಶಿಷ್ಯಂದಿರು ಸ್ವತಃ ತಾವೇ ಊಹಿಸಿಕೊಳ್ಳಬೇಕು.




'ಆನಂದಮಯೋऽಭ್ಯಾಸಾತ್' ಎನ್ನುವ ಸೂತ್ರದಲ್ಲಿ ಬ್ರಹ್ಮಶಬ್ದದ ಪುನರಾವೃತ್ತಿಯನ್ನು ಹೇಳಿದ್ದು. ಆನಂದ ಶಬ್ದದಲ್ಲಿ. ವೇದದಿಂದಲೇ ಇದು ಗೊತ್ತಾಗುತ್ತದೆ. 'ಮಯಟ್' ಎಂಬ ಪ್ರತ್ಯಯವುಳ್ಳ ಐದು ಶಬ್ದಗಳಿವೆ. ಅವುಗಳಲ್ಲಿ 'ಅನ್ನ, ಪ್ರಾಣ, ಮನಸ್' ಇವುಗಳ ಜೊತೆಗಿರುವ ಮಯಟ್ ಪ್ರತ್ಯಯ ವಿಕಾರ ಎಂಬರ್ಥನೀಡುತ್ತದೆ. 'ವಿಜ್ಞಾನಮಯ' ಎಂಬಲ್ಲಿ ಸಂಬಂಧ ಎನ್ನುವರ್ಥವನ್ನೂ, 'ಆನಂದಮಯ' ಎನ್ನುವಲ್ಲಿ ಪ್ರಾಚುರ್ಯ ಎನ್ನುವರ್ಥ ನೀಡುತ್ತದೆ' ಎಂಬುದಕ್ಕೆ ಆಧಾರವೇ ಇಲ್ಲ. 'ನ, ಪ್ರಾಚುರ್ಯಾರ್ಥತ್ವಾತ್' ಎನ್ನುವ ಸೂತ್ರ ಸರ್ವತೋಮುಖವಲ್ಲ ಎಂದೊಪ್ಪಿದರೆ, ವ್ಯಾಖ್ಯಾನಿಸುವುದಕ್ಕೆ ಅಯೋಗ್ಯ ಎಂದೊಪ್ಪಿಕೊಳ್ಳಬೇಕು. 'ಸರ್ವತೋಮುಖ' ಎಂದೊಪ್ಪಿದರೆ ನಮ್ಮ ವ್ಯಾಖ್ಯಾನವನೇ ತಪ್ಪು ಎಂದೊಪ್ಪಬೇಕು.

## ಶ್ರುತಿಲಿಂಗಾದಿ ಆರು ಪ್ರಮಾಣಗಳಿಂದ ಸಿದ್ಧಾಂತದ ಅಧಿಕರಣವು ಬಲಿಷ್ಠವಾಗಿದೆ

**तात्पर्यचन्द्रिका –**

तस्मात् –

ब्रह्मशब्दात् समस्तात्तृत्वादिलिङ्गाच्च वाक्यतः ।
पूर्वोत्तरस्मान्मन्त्रस्थब्रह्मप्रकरणादपि ।।

भृगुवल्लीसमाख्यानात् मुक्तगीतावसानकात् ।
स्थानप्रमाणतश्चैव पञ्चानां ब्रह्मता स्थिता ।।

उक्तं हि तैत्तिरीयभाष्ये –
शन्नोमित्रादिभिर्वाक्यैस्तैरेव हरिमस्तुवत् ।
मुक्तगीतावसानैस्तु स्तुतस्तेन जनार्दनः ।।

इति अस्य स्थानस्य ब्रह्मपरत्वम् । तथा –

ब्रह्मप्रश्नोत्तराद्ब्रह्मलक्षणाद्ब्रह्मशब्दतः ।
विज्ञातत्वाच्च तपसा मुक्तगम्यत्वतस्तथा ।।
वाधूलीयसमाख्यानात् अनुव्याख्यानिरूपितात् ।
भृगुवल्ल्यदितस्यान्नप्राणादेर्ब्रह्मता स्थिता ।।

उक्ता ह्यनुव्याख्याने समाख्या – 'तच्च वाधूलशाखायामष्टरूपमुदाहृतम्' इति

ಅನುವಾದ - ನಮ್ಮ ಅಧಿಕರಣವು ಶ್ರುತ್ಯಾದಿ ಆರು ಪ್ರಮಾಣಗಳಿಗಿಂತ ಬಲಿಷ್ಠವಾಗಿದೆ. ಅದು ಹೀಗೆ -

ಬ್ರಹ್ಮಶಬ್ದಾತ್ಸಮಸ್ತಾತ್ತೃತ್ವಾದಿಲಿಂಗಾಚ್ಚ ವಾಕ್ಯತಃ ।
ಪೂರ್ವೋತ್ತರಸ್ಮಾನ್ಮಂತ್ರಸ್ಥಬ್ರಹ್ಮಪ್ರಕರಣಾದಪಿ ॥
ಭೃಗುವಲ್ಲೀಸಮಾಖ್ಯಾನಾತ್ ಮುಕ್ತಗೀತಾವಸಾನಕಾತ್ ।
ಸ್ಥಾನಪ್ರಮಾಣತಶ್ಚೈವ ಪಂಚಾನಾಂ ಬ್ರಹ್ಮತಾ ಸ್ಥಿತಾ ॥

೧) ಬ್ರಹ್ಮಶಬ್ದವಿರುವುದರಿಂದ, ಸಮಸ್ತ ಅತ್ತೃತ್ವವೇ ಮೊದಲಾದ ಲಿಂಗಗಳಿರುವುದರಿಂದ, ಹಿಂದಿನ ಮುಂದಿನ ವಾಕ್ಯಗಳ ಬಲದಿಂದ, ಮಂತ್ರದಲ್ಲಿರುವ ಬ್ರಹ್ಮಪ್ರಕರಣದಿಂದಲೂ ಸಹ,

ಭೃಗುವಲ್ಲಿಯ ಸಮಾಖ್ಯಾದಿಂದ, ಮುಕ್ತರ ಹಾಡಿನಲ್ಲಿ ಪರ್ಯಾವಸಾನ ಆಗುವ ಸ್ಥಾನಪ್ರಮಾಣದಿಂದ ಹೀಗೆ ಆರು ಪ್ರಮಾಣಗಳು ಅನ್ನಮಯಾದಿ ಐದನ್ನು ಬ್ರಹ್ಮನೆಂದು ನಿರ್ಣಯಿಸುತ್ತಿವೆ.

ಇದನ್ನೇ ತೈತ್ತಿರೀಯಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ.

ಶನ್ನೋ ಮಿತ್ರಾದಿಭಿರ್ವಾಕ್ಯೈಸ್ತೈರೇವ ಹರಿಮಸ್ತುವತ್ ।
ಮುಕ್ತಗೀತಾವಸಾನೈಸ್ತು ಸ್ತುತಸ್ತೇನ ಜನಾರ್ದನಃ

ಶನ್ನೋಮಿತ್ರಾದಿ ವಾಕ್ಯಗಳಿಂದ ಪ್ರಾರಂಭಿಸಿ ಮುಕ್ತರ ಹಾಡಿನ ತನಕ ವರುಣರು ಜನಾರ್ದನನಾದ ಭಗವಂತನನ್ನು ಸ್ತೋತ್ರ ಮಾಡಿದ್ದಾರೆ.

ಈ ಮಾತಿನಿಂದ ಬ್ರಹ್ಮನ ವಿಷಯದಲ್ಲಿ ಸ್ಥಾನವು ಪ್ರಮಾಣವಾಗಿದೆಯೆಂದು ತಿಳಿಯುತ್ತದೆ. ಮತ್ತು

ಬ್ರಹ್ಮಪ್ರಶ್ನೋತ್ತರಾದ್‌ಬ್ರಹ್ಮಲಕ್ಷಣಾದ್‌ಬ್ರಹ್ಮಶಬ್ದತಃ ।
ವಿಜ್ಞಾತತ್ವಾಚ್ಚ ತಪಸಾ ಮುಕ್ತಗಮ್ಯತ್ವತಸ್ತಥಾ ॥ ೨ ॥
ವಾಧೂಲೀಯಸಮಾಖ್ಯಾನಾದನುವ್ಯಾಖ್ಯಾನಿರೂಪಿತಾತ್ ।
ಭೃಗುವಲ್ಲ್ಯುದಿತಸ್ಯಾನ್ನಪ್ರಾಣಾದೇರ್ಬ್ರಹ್ಮತಾ ಸ್ಥಿತಾ ॥ ೨ ॥

ಬ್ರಹ್ಮನನ್ನು ಕುರಿತು ಮಾಡಿದ ಪ್ರಶ್ನೆಗೆ ಬ್ರಹ್ಮನ ಲಕ್ಷಣವನ್ನು ಹೇಳಿದ್ದಾರೆ. ಮತ್ತು ಪ್ರತಿಯೊಂದೆಡೆಯೂ ಬ್ರಹ್ಮಶಬ್ದವನ್ನು ಹೇಳಿದ್ದಾರೆ. ತಪಸ್ಸಿನಿಂದ ಸಾಕ್ಷಾತ್ಕಾರ ಮಾಡಿಕೊಂಡಿದ್ದಾರೆ. ಅದರಂತೆ ಮುಕ್ತಗಮ್ಯತ್ವವನ್ನು ಹೇಳಿದ್ದಾರೆ. ಮತ್ತು ವಾಧೂಲಶಾಖೆಯ ಸಮಾಖ್ಯಾವಿರುವುದರಿಂದ ಅನುವ್ಯಾಖ್ಯಾನದಲ್ಲಿ ನಿರೂಪಿಸಲ್ಪಟ್ಟಂತೆ ಭೃಗುವಲ್ಲಿಯಲ್ಲಿ ಹೇಳಲ್ಪಟ್ಟ ಅನ್ನಪ್ರಾಣದಿಗಳು ಪ್ರಾಣರೇ ಆಗುತ್ತಾರೆ.

ಈ ಸಮಾಖ್ಯಾವನ್ನೇ ಅನುವ್ಯಾಖ್ಯಾನದಲ್ಲಿ ''ತಚ್ಚ ವಾಧೂಲಶಾಖಾಯಾಮಷ್ಟರೂಪಮುದಾಹೃತಮ್'' (ಇದನ್ನು ಅಷ್ಟರೂಪಗಳನ್ನಾಗಿ ವಾಧೂಲಶಾಖೆಯಲ್ಲಿ ಉದಾಹರಿಸಿದ್ದಾರೆ.) ಎಂದು ಹೇಳಿದ್ದಾರೆ.

**प्रकाशः** – एवं परमतानि निरस्य स्वाभिमताधिकरणप्रमेयं श्रुत्यादिप्रमाण-षट्कपूर्वकं सङ्गृह्याह – **तस्मादिति** ।। मतान्तराणामसम्भवादित्यर्थः । सौत्रसाधकस्य श्रौतसाधकान्तरोपलक्षणत्वादनेकसाधकोक्तिः । तदुक्तं ''कम्पनात्'' इत्यत्र टीकायां – ''तदविहायैव लिङ्गान्तरस्याप्युक्तत्वात् । एतदन्यत्राप्यनुसन्धेयम्'' इति ।।

**ब्रह्मशब्दादिति** ।। ''येऽन्नं ब्रह्मोपासते'' ''ये प्राणं ब्रह्मोपासते'' ''आनन्दं ब्रह्मणो विद्वान्'' ''विज्ञानं ब्रह्म चेद्वेद'' ''अस्ति ब्रह्मेति चेद्वेद'' इति पञ्चस्वपि

प्रकरणेषु प्रत्येकं ब्रह्मशब्दश्रवणादित्यर्थः । 'ब्रह्मणः शब्दः' इत्यपि विगृह्य, आत्मशब्दादित्यपि ध्येयम् । 'लिङ्गाच्च' इति एकवचनं समुदायाभिप्रायेण ।

तथा हि – अन्नमये "अद्यतेऽत्ति च भूतानि" इति सर्वात्तृत्वरूपसंहर्तृत्वं सर्वाद्यत्वरूपसर्वोपजीव्यत्वं, "अन्नं हि भूतानां ज्येष्ठम्" इति ज्येष्ठत्वम्, "सर्वं वै तेऽन्नमाप्नुवन्ति" इत्युपासकप्राप्यत्वं इत्यादीनि लिङ्गानि,

तथा प्राणमये "प्राणं देवा अनुप्राणन्ति" इति सर्वदेवादिचेष्टकत्वं, "सर्वमेव त आयुर्यन्ति ये प्राणं ब्रह्मोपासते" इति सर्वायूरूपमोक्षहेतुज्ञानविषयत्वमित्यादीनि,

मनोमये च "यतो वाचो निवर्तन्ते" इति वाङ्मनसागोचरत्वं, "न बिभेति कदाचन" इति भयाभावरूपमुक्तिहेतुवेदनविषयत्वमित्यादीनि,

विज्ञानमये च "विज्ञानं देवास्सर्वे ब्रह्म ज्येष्ठमुपासते" इति सर्वदेवोपास्यत्वं ज्येष्ठत्वं, "तस्माच्चेन्न प्रमाद्यति" "शरीरे पाप्मनो हित्वा" इत्युक्तमुक्तिहेतुत्वमित्यादीनि,

आनन्दमये च "सोऽकामयत" इति सङ्कल्पपूर्वकं सर्वस्रष्टृत्वं, "अस्ति ब्रह्मेति चेद्वेद सन्तमेनं ततो विदुः" इत्युक्तमुक्तिहेतुज्ञानविषयत्वं चेत्यादीनि लिङ्गानि सन्ति । अतो 'लिङ्गात्' लिङ्गसमुदायादित्यर्थः ।

"स्वादिष्वसर्वनामस्थाने" इति सूत्रेण "उरः प्रभृतिभ्यः कप्" इत्युक्तकप्रत्ययावधिषु स्वादिषु पूर्वस्य पदत्वविधानात् इह च त्वप्रत्यये परतः पूर्वस्य पदत्वान्न यतिभङ्गः शङ्कनीयः । उक्तं च सुधायां – "इत्यादिनाऽध्यायेन वदत्यजः" इत्यत्र । **वाक्यत इति** ।। "को ह्येवान्यात्कः प्राण्यात् यदेष आकाश आनन्दो न स्यात्" इत्याकाशाख्यविष्णोरानन्दमयत्वरूपपूर्णानन्दत्वे विश्वचेष्टकत्वहेतुप्रतिपादक वाक्यादिति तृतीयसूत्रार्थः । एतच्चानन्दमयासाधारणम् ।

यद्वा – "अन्नाद्वै प्रजाः प्रजायन्ते" "प्राणं देवा अनुप्राणन्ति" "यतो वाचो निवर्तन्ते" "विज्ञानं यज्ञं तनुते" "असन्नेव स भवति" "सोऽकामयत" इत्यादिरूपात् प्रतिप्रकरणमन्नमयादिमहिमप्रतिपादकवाक्यादित्यर्थः । न ह्यन्नमया-

ಭೃಗುವಲ್ಲಿಯ ಸಮಾಖ್ಯಾದಿಂದ, ಮುಕ್ತರ ಹಾಡಿನಲ್ಲಿ ಪರ್ಯಾವಸಾನ ಆಗುವ ಸ್ಥಾನಪ್ರಮಾಣದಿಂದ ಹೀಗೆ ಆರು ಪ್ರಮಾಣಗಳು ಅನ್ನಮಯಾದಿ ಐದನ್ನು ಬ್ರಹ್ಮನೆಂದು ನಿರ್ಣಯಿಸುತ್ತಿವೆ.

ಇದನ್ನೇ ತೈತ್ತಿರೀಯಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ.

ಶನ್ನೋ ಮಿತ್ರಾದಿಭಿರ್ವಾಕ್ಯೈಸ್ತೈರೇವ ಹರಿಮಸ್ತುವತ್ ।

ಮುಕ್ತಗೀತಾವಸಾನೈಸ್ತು ಸ್ತುತಸ್ತೇನ ಜನಾರ್ದನಃ

ಶನ್ನೋಮಿತ್ರಾದಿ ವಾಕ್ಯಗಳಿಂದ ಪ್ರಾರಂಭಿಸಿ ಮುಕ್ತರ ಹಾಡಿನ ತನಕ ವರುಣರು ಜನಾರ್ದನನಾದ ಭಗವಂತನನ್ನು ಸ್ತೋತ್ರ ಮಾಡಿದ್ದಾರೆ.

ಈ ಮಾತಿನಿಂದ ಬ್ರಹ್ಮನ ವಿಷಯದಲ್ಲಿ ಸ್ಥಾನವು ಪ್ರಮಾಣವಾಗಿದೆಯೆಂದು ತಿಳಿಯುತ್ತದೆ. ಮತ್ತು

ಬ್ರಹ್ಮಪ್ರಶ್ನೋತ್ತರಾದ್‌ಬ್ರಹ್ಮಲಕ್ಷಣಾದ್‌ಬ್ರಹ್ಮಶಬ್ದತಃ ।

ವಿಜ್ಞಾತತ್ವಾಚ್ಚ ತಪಸಾ ಮುಕ್ತಗಮ್ಯತ್ವತಸ್ತಥಾ ॥ ೧ ॥

ವಾಧೂಲೀಯಸಮಾಖ್ಯಾನಾದನುವ್ಯಾಖ್ಯಾನಿರೂಪಿತಾತ್ ।

ಭೃಗುವಲ್ಲ್ಯುದಿತಸ್ಯಾನ್ನಪ್ರಾಣಾದೇರ್ಬ್ರಹ್ಮತಾ ಸ್ಥಿತಾ ॥ ೨ ॥

ಬ್ರಹ್ಮನನ್ನು ಕುರಿತು ಮಾಡಿದ ಪ್ರಶ್ನೆಗೆ ಬ್ರಹ್ಮನ ಲಕ್ಷಣವನ್ನು ಹೇಳಿದ್ದಾರೆ. ಮತ್ತು ಪ್ರತಿಯೊಂದೆಡೆಯೂ ಬ್ರಹ್ಮಶಬ್ದವನ್ನು ಹೇಳಿದ್ದಾರೆ. ತಪಸ್ಸಿನಿಂದ ಸಾಕ್ಷಾತ್ಕಾರ ಮಾಡಿಕೊಂಡಿದ್ದಾರೆ. ಅದರಂತೆ ಮುಕ್ತಗಮ್ಯತ್ವವನ್ನು ಹೇಳಿದ್ದಾರೆ. ಮತ್ತು ವಾಧೂಲಶಾಖೆಯ ಸಮಾಖ್ಯಾವಿರುವುದರಿಂದ ಅನುವ್ಯಾಖ್ಯಾನದಲ್ಲಿ ನಿರೂಪಿಸಲ್ಪಟ್ಟಂತೆ ಭೃಗುವಲ್ಲಿಯಲ್ಲಿ ಹೇಳಲ್ಪಟ್ಟ ಅನ್ನಪ್ರಾಣದಿಗಳು ಪ್ರಾಣರೇ ಆಗುತ್ತಾರೆ.

ಈ ಸಮಾಖ್ಯಾವನ್ನೇ ಅನುವ್ಯಾಖ್ಯಾನದಲ್ಲಿ ''ತಚ್ಚ ವಾಧೂಲಶಾಖಾಯಾಮಷ್ಟರೂಪ-ಮುದಾಹೃತಮ್'' (ಇದನ್ನು ಅಷ್ಟರೂಪಗಳನ್ನಾಗಿ ವಾಧೂಲಶಾಖೆಯಲ್ಲಿ ಉದಾಹರಿಸಿದ್ದಾರೆ.) ಎಂದು ಹೇಳಿದ್ದಾರೆ.

**प्रकाशः – एवं परमतानि निरस्य स्वाभिमताधिकरणप्रमेयं श्रुत्यादिप्रमाण-षट्कपूर्वकं सङ्गृह्णाह – तस्मादिति ।।** मतान्तराणामसम्भवादित्यर्थः । सौत्रसाधकस्य श्रौतसाधकान्तरोपलक्षणत्वादनेकसाधकोक्तिः । तदुक्तं ''कम्पनात्'' इत्यत्र टीकायां – ''तदविहायैव लिङ्गान्तरस्याप्युक्तत्वात् । एतदन्यत्राप्यनुसन्धेयम्'' इति ।।

**ब्रह्मशब्दादिति ।।** ''येऽन्नं ब्रह्मोपासते'' ''ये प्राणं ब्रह्मोपासते'' ''आनन्दं ब्रह्मणो विद्वान्'' ''विज्ञानं ब्रह्म चेद्वेद'' ''अस्ति ब्रह्मेति चेद्वेद'' इति पञ्चस्वपि

प्रकरणेषु प्रत्येकं ब्रह्मशब्दश्रवणादित्यर्थः । 'ब्रह्मणः शब्दः' इत्यपि विगृह्य, आत्मशब्दादित्यपि ध्येयम् । 'लिङ्गाच्च' इति एकवचनं समुदायाभिप्रायेण ।

तथा हि – अन्नमये "अद्यतेऽत्ति च भूतानि" इति सर्वात्तृत्वरूपसंहर्तृत्वं सर्वाद्यत्वरूपसर्वोपजीव्यत्वं, "अन्नं हि भूतानां ज्येष्ठम्" इति ज्येष्ठत्वम्, "सर्वं वै तेऽन्नमाप्नुवन्ति" इत्युपासकप्राप्यत्वं इत्यादीनि लिङ्गानि,

तथा प्राणमये "प्राणं देवा अनुप्राणन्ति" इति सर्वदेवादिचेष्टकत्वं, "सर्वमेव त आयुर्यन्ति ये प्राणं ब्रह्मोपासते" इति सर्वायूरूपमोक्षहेतुज्ञानविषयत्वमित्यादीनि,

मनोमये च "यतो वाचो निवर्तन्ते" इति वाङ्मनसागोचरत्वं, "न बिभेति कदाचन" इति भयाभावरूपमुक्तिहेतुवेदनविषयत्वमित्यादीनि,

विज्ञानमये च "विज्ञानं देवास्सर्वे ब्रह्म ज्येष्ठमुपासते" इति सर्वदेवोपास्यत्वं ज्येष्ठत्वं, "तस्माच्चेन्न प्रमाद्यति" "शरीरे पाप्मनो हित्वा" इत्युक्तमुक्तिहेतुत्वमित्यादीनि,

आनन्दमये च "सोऽकामयत" इति सङ्कल्पपूर्वकं सर्वस्रष्टृत्वं, "अस्ति ब्रह्मेति चेद्वेद सन्तमेनं ततो विदुः" इत्युक्तमुक्तिहेतुज्ञानविषयत्वं चेत्यादीनि लिङ्गानि सन्ति । अतो 'लिङ्गात्' लिङ्गसमुदायादित्यर्थः ।

"स्वादिष्वसर्वनामस्थाने" इति सूत्रेण "उरः प्रभृतिभ्यः कप्" इत्युक्तकप्रत्ययावधिषु स्वादिषु पूर्वस्य पदत्वविधानात् इह च त्वप्रत्यये परतः पूर्वस्य पदत्वान्न यतिभङ्गः शङ्कनीयः । उक्तं च सुधायां – "इत्यादिनाऽध्यायेन वदत्यजः" इत्यत्र । **वाक्यत इति** ।। "को ह्येवान्यात्कः प्राण्यात् यदेष आकाश आनन्दो न स्यात्" इत्याकाशाख्यविष्णोरानन्दमयत्वरूपपूर्णानन्दत्वे विश्वचेष्टकत्वहेतुप्रतिपादक वाक्यादिति तृतीयसूत्रार्थः । एतच्चानन्दमयासाधारणम् ।

यद्वा – "अन्नाद्वै प्रजाः प्रजायन्ते" "प्राणं देवा अनुप्राणन्ति" "यतो वाचो निवर्तन्ते" "विज्ञानं यज्ञं तनुते" "असन्नेव स भवति" "सोऽकामयत" इत्यादिरूपात् प्रतिप्रकरणमन्नमयादिमहिमप्रतिपादकवाक्यादित्यर्थः । न ह्यन्नमया-

दीनामब्रह्मत्वे तन्महिमोक्तिपरब्रह्मश्रुतिलिङ्गोपेतवाक्यसमभिव्याहारो युज्यत इति भावः । 'मन्त्रस्थं' "सत्यं ज्ञानमनन्तं ब्रह्म" इति मन्त्रवर्णप्रतिपादितमेव

ब्रह्मवित्परमाप्नोतीति यत्प्रथमसूचितम् ।
तदेव मन्त्रवर्णेन सत्यं ज्ञानमनन्तवत् ।
लक्षितं तत्र सत्यत्वं सृष्ट्याऽन्नप्राणयोरपि ।
उक्तं ज्ञानं तु मनसा विज्ञानेनाप्युदीरितम् ।
अनन्तत्वं तथाऽऽनन्दमयवाचाऽप्युदाहृतम् ।।

इत्यनुव्याख्यानोक्तदिशा "तस्माद्वा एतस्मात्" इत्यादिना ग्रन्थेन 'गीयते' इति पूर्वस्मात्, "यतो वाचो निवर्तन्ते" इत्युत्तरस्मात् मन्त्रवर्णस्थब्रह्मणः प्रकरणादिति मान्त्रवर्णिकसूत्रार्थः ।

यद्वा – "पूर्वोत्तरस्मात्" इति वाक्यविशेषणम् । "तस्माद्वा एतस्मात्" इति पूर्ववाक्यात्, "स य एवं विदस्माल्लोकात्प्रेत्य । एतमन्नमयमात्मानमुपसङ्क्रामति" इत्युत्तरवाक्याच्चेत्यर्थः । "तस्माद्वै" इत्यत्र भूतकारणत्वेनोक्तात्मान एव "स वा एषः" इति परामृश्यान्नमयादित्वोक्तेः । तदुक्तं –

परामृशति तस्यैव पञ्चरूपत्ववित्तये ।
त्यक्त्वा भूतादिकं सर्वं स वा एष इति श्रुतिः ।
स इत्यात्मपदोद्दिष्ट एष जीवशरीरगः ।।

इति,

योगमन्नमयाद्यैर्यत्फलत्वेनास्य शंसति ।

इति च । तथा चान्नमयादेरब्रह्मत्वे ब्रह्मपरपूर्वोत्तरवाक्यसमभिव्याहारो न स्यादित्यर्थः । तेन "अस्मिन्नस्य च" इति सूत्रार्थोऽपि सङ्गृहीतो भवति । 'मन्त्रस्थ' इत्यस्य तु मान्त्रवर्णिकब्रह्मप्रकरणादपीति प्रागुक्त एवार्थः ।। भृगुवल्लीति ।। "अन्नं ब्रह्मेति व्यजानात्" इत्यादौ श्रुतान्नादेरन्नमयादेश्चैकत्वस्य प्रागेवोक्तत्वादिति भावः ।। मुक्तगीतेति ।। "एतत्साम गायन्नास्ते । हा३ु हा३ु हा३ु" इत्यादिमुक्तकर्तृकगानान्तात् "अनेकप्रकरणजातं स्थानम्" इति

''शब्दादेव'' इत्यत्र वक्ष्यमाणलक्षणात् स्थानप्रमाणाच्च इत्यर्थः । 'ब्रह्मतैव' इत्यन्वयः । श्रुतिलिङ्गवाक्यप्रकरणानां ब्रह्मनिष्ठता भाष्यादौ स्पष्टा, इहापि प्रागुक्तप्राया । स्थानसमाख्ययोस्तु तां क्रमेणाह – उक्तं हीत्यादिना ।। 'ब्रह्मपरत्वं' इत्यन्वयः ।। **अस्तुवदिति** ।।

भृगुः पञ्चात्मकं पूर्णमन्नादिमयमच्युतम् ।
मुक्तगीतावसानैस्तु स्तुतस्तेन जनार्दनः ।
सुप्रीतः प्रददौ ज्ञानं स्वात्मभक्तिं च शाश्वतीम् ।।

इति स्मृत्येत्यर्थः ।। **ब्रह्मप्रश्नेति** ।। ''भृगुर्वै वारुणिः वरुणं पितरमुपससार । अधीहि भगवो ब्रह्मेति । तस्मा एतत्प्रोवाच । अन्नं प्राणं चक्षुः श्रोत्रं मनो वाचम्'' इत्यनेन ब्रह्माध्यापयेति भृगुणा पृष्टेन वरुणेन ब्रह्मप्रश्नस्योत्तरत्वेनोक्तत्वश्रवणादित्यर्थः । अब्रह्मत्वेऽसङ्गतिः स्यात् । न च द्वारत्वेन सङ्गतिः, निरस्तत्वादिति भावः । ''यतो वा इमानि भूतानि जायन्ते'' इति साधारण्येन, ''अन्नाद्ध्येव खल्विमानि भूतानि जायन्ते'' ''प्राणाद्ध्येव'' इत्यादिना विशिष्य च उक्तात् सृष्टि स्थितिसंहारमोक्षहेतुत्वरूपलक्षणसमुदायादित्यर्थः । ''अन्नं ब्रह्म'' इति ''प्राणो ब्रह्म'' इति ''मनो ब्रह्म'' इत्यादि प्रत्येकं ब्रह्मशब्दश्रवणादित्यर्थः । ''स तपोऽतप्यत । स तपस्तप्त्वा । अन्नं ब्रह्मेति व्यजानात्'' ''स तपस्तप्त्वा । प्राणो ब्रह्मेति व्यजानात्'' ''स तपस्तप्त्वा । मनो ब्रह्मेति व्यजानात्'' इत्यादिनोक्तात् श्रवणानन्तरभाविना निदिध्यासनाख्यतपसा 'व्यजानात्' इत्यपरोक्षीकृतत्वलिङ्गादित्यर्थः । न हि कोशादेः स्वभावसिद्धज्ञानस्य साक्षात्काराय तपोऽपेक्षितमिति भावः ।।

**मुक्तेति** ।। ''स य एवं विदस्माल्लोकात्प्रेत्यैतमन्नमयमात्मानमुपसङ्क्रम्य'' इत्यादिना अन्नप्राणादिपञ्चकज्ञानिनः 'लोकात्' देहात्प्रेत्येति मुक्तत्वमुक्त्वा प्राप्यत्वस्योक्तेरित्यर्थः । न चान्यज्ञानेनान्यप्राप्तिर्युक्तेत्यन्नादेरपि ब्रह्मत्वमिति भावः ।

'अनुव्याख्यानिरूपितात् समाख्यानात्' इत्युक्तम्, तद्दर्शयति – **उक्तेति** ।। तस्यार्थः – ननु ब्रह्मवल्ल्यामनुक्तं ''चक्षुः श्रोत्रं मनो वाचम्'' इति त्रितय-

मधिकमुपात्तं, विज्ञानानन्दौ च नोक्तौ । तथा च शब्दभेदात् सङ्ख्याभेदात् भृगुवल्ली कथं समाख्या स्यादिति शङ्कायामनुक्तावपि विज्ञानानन्दावध्याहार्यौ, तत्रोक्तं चक्षुरादित्रयं ब्रह्मवल्ल्यामपि ग्राह्यम्, आवापोद्वापाभ्यां ब्रह्मप्रतिपादनस्य शाखानां स्वभावत्वात् । तथा च स्थानद्वये अष्टौ रूपाणि सम्पद्यन्ते, अतो न भिन्नार्थत्वमिति । कुत इत्यतः समाख्याबलादिति भावेन, "तच्च वाधूलशाखायां" इत्युक्तमिति । वाधूलशाखावाक्यं तु "तस्माद्वा एतस्मादन्नरसमयादन्योऽन्तर आत्मा वाङ्मयतस्माद्वा एतस्माद्वाङ्मयादन्योऽन्तर आत्मा श्रोत्रमयस्तस्मात् प्राणमयस्तस्माद्विज्ञानमयस्तस्मादानन्दमय । इति हि" इति तत्त्वप्रदीपोक्तं बोध्यम् ।

**गुरुराजीयम्** – इदानीमुपसंहारमुखेन कारिकाभ्यामन्नमयादिपञ्चकस्य ब्रह्मत्वसाधक-हेतून्सङ्गृह्णाह – **तस्मादिति** ।। वाक्यतः पूर्वोत्तरस्मादिति । रसो वै सः । रसꣳ ह्येवायं लब्ध्वानन्दी भवति । यतो वाच इत्याद्युदाहृतवाक्यजातादित्यर्थः । मुक्तगीतावसानकात्स्थानप्रमाणत इति सम्बन्धः । तथा च मुक्तगीतावसानकस्यास्यैकस्थानत्वेन तत्रोक्तान्नमयादीनामपि ब्रह्मत्वमिति भावः ।

नन्वस्य मुक्तगीतावसानकस्यैकस्थानत्वमेवासिद्धम् । तथात्वेपि वा ब्रह्मपरत्वं कुत इत्यत उभयत्र सङ्गतिमाह – **उक्तं हीति** ।। शन्नो मित्रादिभिर्वाक्यैस्तैरेव हरिमस्तुवदित्यस्य शेषभूतं भृगुः पञ्चात्मकं पूर्णमन्नादिमयमच्युतमिति वाक्यम् । तथा मुक्तगीतावसानैस्तु स्तुतस्तेन जनार्दन इत्यस्य शेषभूतं सुप्रीतः प्रददौ ज्ञानं स्वात्मभक्तिं च शाश्वतीमिति चोत्तरवाक्यं चात्र द्रष्टव्यम् । तेन विवक्षितार्थलाभः । अनुव्याख्यानिरूपितादिति प्रत्येकं सम्बध्यते ।

ವಿವರಣೆ :- ಇಲ್ಲಿಯ ತನಕ ಪರಮತೀಯರ ಅಧಿಕರಣಶರೀರವನ್ನು ನಿರಾಕರಿಸಿದ್ದಾಯಿತು. ಈಗ ಸಿದ್ಧಾಂತದ ಅಧಿಕರಣಪ್ರಮೇಯವು ಶ್ರುತ್ಯಾದಿ ಆರು ಪ್ರಮಾಣಗಳಿಂದ ಬಲಿಷ್ಠವಾಗಿದೆಯೆಂದು "ತಸ್ಮಾದ್" ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. ಸೂತ್ರಕಾರರು ಸೂತ್ರದಲ್ಲಿ ಶ್ರುತಿಲಿಂಗಾದಿ ಆರು ಪ್ರಮಾಣಗಳನ್ನು ಹೇಳಿಲ್ಲವಲ್ಲ? ಎಂಬ ಪ್ರಶ್ನೆ ಬರುತ್ತದೆ. ಸೂತ್ರಕಾರರು ಬ್ರಹ್ಮಶ್ರುತಿಯನ್ನು ಮತ್ತು ಬ್ರಹ್ಮಪ್ರಕರಣವನ್ನು ಹೇಳಿದ್ದಾರೆ. ಇದರಿಂದ ಉಳಿದ ಸಾಧಕಪ್ರಮಾಣಗಳನ್ನು ಉಪಲಕ್ಷಣಯಾ ಇಟ್ಟುಕೊಳ್ಳಬೇಕು. ಕಂಪಾನಾಧಿಕರಣದಲ್ಲಿ ಹೀಗೆಯೇ "ತದವಿಹಾಯ್ಯೈವ ಲಿಂಗಾಂತರಸ್ಯಾಪ್ಯುಕ್ತತ್ವಾತ್ । ಏತದನ್ಯತ್ರಾಪ್ಯನುಸಂಧೇಯಮ್" ಎಂದು ಹೇಳಿದ್ದಾರೆ. "ಪ್ರಾಣೇ ಏಜತಿ ನಿಃಸೃತಂ" ಎಂದು ಜಗಚ್ಚೇಷ್ಟಕತ್ವಲಿಂಗವನ್ನು ಸೂತ್ರಕಾರರು ಹೇಳಿದ್ದಾರೆ. ಆದರೆ ಆ ಶ್ರುತಿಯ ಪ್ರಕರಣದಲ್ಲಿ ಇನ್ನೂ ಅನೇಕ ಲಿಂಗಗಳಿವೆ. ಅದನ್ನೆಲ್ಲಾ

ಸೂತ್ರಕಾರರು ಉಪಲಕ್ಷಣಯಾ ವಿವಕ್ಷಿಸಿದ್ದಾರೆ. ಬೇರೆ ಅಧಿಕರಣದಲ್ಲಿಯೂ ಹೀಗೆಯೇ ತಿಳಿಯಬೇಕೆಂದು ಟೀಕೆಯಲ್ಲಿ ಹೇಳಿದ್ದಾರೆ.

೧) ಶ್ರುತಿಪ್ರಮಾಣ - ''ಯೇನ್ನಂ ಬ್ರಹ್ಮೋಪಾಸತೇ, ಯೇ ಪ್ರಾಣಂ ಬ್ರಹ್ಮೋಪಾಸತೇ, ಆನಂದಂ ಬ್ರಹ್ಮಣೋ ವಿದ್ವಾನ್, ವಿಜ್ಞಾನಂ ಬ್ರಹ್ಮ ಚೇದ್ವೇದ, ಅಸ್ತಿ ಬ್ರಹ್ಮೇತಿ ಚೇತ್'' ಹೀಗೆ ಐದು ಪ್ರಕರಣಗಳಲ್ಲಿಯೂ ಬ್ರಹ್ಮಶಬ್ದ ಶ್ರುತವಾಗಿದೆ. ಆದ್ದರಿಂದ ಅನ್ನಮಯಾದಿ ಐದೂ ಕೂಡ ಬ್ರಹ್ಮನೇ ಆಗಬೇಕು. ಅಥವಾ ಗ್ರಂಥದಲ್ಲಿರುವ ''ಬ್ರಹ್ಮಶಬ್ದಾತ್'' ಎಂಬ ಪದಕ್ಕೆ ''ಬ್ರಹ್ಮಣಃ ಶಬ್ದಃ ತಸ್ಮಾತ್'' ಎಂದು ವಿಗ್ರಹ ಮಾಡಬಹುದು. ಇವಾಗ ಬ್ರಹ್ಮವಾಚಕವಾದ ಆತ್ಮಶಬ್ದವು ಅನ್ನಮಯಾದಿಗಳಲ್ಲಿ ಶ್ರುತವಾದ್ದರಿಂದ ಅನ್ನಮಯಾದಿಗಳು ಬ್ರಹ್ಮವೇ ಆಗುತ್ತವೆ.

೨) ಲಿಂಗಪ್ರಮಾಣ - ಲಿಂಗಪ್ರಮಾಣ ಸಮುದಾಯಭಿಪ್ರಾಯದಲ್ಲಿ ಲಿಂಗಾತ್ ಎಂಬ ಏಕವಚನ ಪ್ರಯೋಗವಿದೆ. ಅನ್ನಮಯನಲ್ಲಿ ''ಅದ್ಯತೇತ್ತಿ ಚ ಭೂತಾನಿ'' ಎಂದು ಸರ್ವಾತ್ತೃತ್ವರೂಪವಾದ ಸಂಹರ್ತೃತ್ವರೂಪವು ಸರ್ವಾದ್ಯತ್ವರೂಪವಾದ ಸರ್ವೋಪಜೀವ್ಯತ್ವವೆಂಬ ಲಿಂಗವು ಶ್ರುತವಾಗಿದೆ. ''ಅನ್ನಂ ಹಿ ಭೂತಾನಾಂ ಜ್ಯೇಷ್ಠಮ್'' ಎಂದು ಜ್ಯೇಷ್ಠತ್ವಲಿಂಗವು ''ಸರ್ವಂ ವೈ ತೇಽನ್ನಮಾಪ್ನುವಂತಿ'' ಎಂಬ ಉಪಾಸಕಪ್ರಾಪ್ಯತ್ವವೇ ಮೊದಲಾದ ಲಿಂಗಗಳು ಕೇಳಿಸುತ್ತಿವೆ.

ಇದರಂತೆ ಪ್ರಾಣಮಯನಲ್ಲಿ ''ಪ್ರಾಣಂ ದೇವಾ ಅನುಪ್ರಾಣಂತಿ'' ಎಂದು ಸರ್ವದೇವಾದಿ-ಚೇಷ್ಟಕತ್ವಾದಿಲಿಂಗವು ''ಸರ್ವಮೇತ ಆಯುರ್ಯಂತಿ ಯೇ ಪ್ರಾಣಂ ಬ್ರಹ್ಮೋಪಾಸತೇ'' ಎಂದು ಸರ್ವಾಯುರೂಪವಾದ ಮೋಕ್ಷಹೇತುಜ್ಞಾನವಿಷಯತ್ವವೇ ಮೊದಲಾದ ಲಿಂಗಗಳು ಶ್ರುತವಾಗಿವೆ. ಈ ಲಿಂಗಗಳು ಬ್ರಹ್ಮನಲ್ಲಷ್ಟೇ ಕೂಡುವುದರಿಂದ ಪ್ರಾಣಮಯನೂ ಬ್ರಹ್ಮನೇ ಆಗುತ್ತಾನೆ.

ಮನೋಮಯನಲ್ಲಿ ''ಯತೋ ವಾಚೋ ನಿವರ್ತಂತೇ'' ಎಂದು ವಾಙ್ಮನಸಾಗೋಚರತ್ವವು ''ನ ಬಿಭೇತಿ ಕುತಶ್ಚನ' ಎಂದು ಭಯಾಭಾವರೂಪವಾದ ಮೋಕ್ಷಕಾರಣಬ್ರಹ್ಮಜ್ಞಾನವಿಷಯತ್ವವೇ ಮೊದಲಾದ ಲಿಂಗಗಳು ಕೇಳಿಸುತ್ತಿವೆ.

ವಿಜ್ಞಾನಮಯನಲ್ಲಿ ''ವಿಜ್ಞಾನಂ ದೇವಾಸ್ಸರ್ವೇ ಬ್ರಹ್ಮಜ್ಯೇಷ್ಠಮುಪಾಸತೇ'' ಎಂದು ಸರ್ವದೇವೋ-ಪಾಸ್ಯತ್ವವು ಮತ್ತು ಜೇಷ್ಠತ್ವಲಿಂಗವು ಶ್ರುತವಾಗಿವೆ. ''ತಸ್ಮಾಚ್ಚೇನ್ನ ಪ್ರಮಾದ್ಯತಿ । ಶರೀರೇ ಪಾಪ್ಮನೋ ಹಿತ್ವಾ'' ಎಂದು ಮುಕ್ತಿಹೇತುತ್ವ ಮೊದಲಾದ ಲಿಂಗಗಳು ಕೇಳಿಸುತ್ತಿವೆ.

ಆನಂದಮಯನಲ್ಲಿ ''ಸೋಽಕಾಮಯತ'' ಎಂದು ಸಂಕಲ್ಪಪೂರ್ವವಾದ ಸರ್ವಕರ್ತೃತ್ವವು ಮತ್ತು ಸರ್ವಾಂತರತ್ವಲಿಂಗವೂ ಕೇಳಿಸುತ್ತಿದೆ. ''ಅಸ್ತಿ ಬ್ರಹ್ಮೇತಿ ಚೇದ್ವೇದ ಸಂತಮೇನಂ ತತೋ ವಿದುಃ'' ಎಂಬಲ್ಲಿ ಮುಕ್ತಿಹೇತುಬ್ರಹ್ಮಜ್ಞಾನವಿಷಯತ್ವವೇ ಮೊದಲಾದ ಲಿಂಗಗಳು ಹೇಳಲ್ಪಟ್ಟಿವೆ. ಹೀಗೆ ಅನ್ನಮಯನಿಂದ ಪ್ರಾರಂಭಿಸಿ ಆನಂದಮಯನ ತನಕ ಅನೇಕ ಲಿಂಗಗಳು ಶ್ರುತವಾಗಿರುವುದರಿಂದ ಲಿಂಗಾತ್ ಎಂಬ ಪದಕ್ಕೆ ಲಿಂಗಸಮುದಾಯದಿಂದ ಎಂಬರ್ಥವನ್ನು ತಿಳಿಬೇಕು.

ವ್ಯಾಕರಣ ವಿಚಾರ - ''ಬ್ರಹ್ಮಶಬ್ದಾತ್ಸಮಸ್ತಾತ್ತ್ವತ್ವಾದಿಲಿಂಗಾಚ್ಚ ವಾಕ್ಯತಃ'' ಇಲ್ಲಿ ''ಬ್ರಹ್ಮಶಬ್ದಾತ್ ಸಮಸ್ತಾತ್ತ್ವ'' ಎಂಬುದು ಮೊದಲನೆಯ ಪಾದ ''ತ್ವಾದಿಲಿಂಗಾಚ್ಚ ವಾಕ್ಯತಃ'' ಎಂಬುದು ಎರಡನೆಯ ಪಾದ.

ಅತೃತ್ವಾದಿ ಎಂಬ ಪದದ ಅರ್ಧವು ಹಿಂದಿನ ಪಾದದಲ್ಲಿ ಸೇರಿದ್ದರಿಂದ ''ಯತಿಭಂಗ'' ದೋಷವು ಬರುತ್ತದೆ. ಯಾವುದೇ ಛಂದಸ್ಸಿನಲ್ಲಾಗಲಿ ಯಾವುದೇ ವೃತ್ತದಲ್ಲಾಗಲಿ ಪದಮಧ್ಯದಲ್ಲಿ ಪಾದಸಮಾಪ್ತಿಯಾದರೆ ಅದನ್ನು ಯತಿಭಂಗವೆನ್ನುತ್ತಾರೆ. ಪ್ರಕೃತ ಗ್ರಂಥಕಾರರ ಶ್ಲೋಕದಲ್ಲಿಯೂ ಈ ದೋಷವು ಸ್ಪಷ್ಟವಾಗಿ ಗೋಚರಿಸುತ್ತಿದೆಯೆಂಬ ಭ್ರಾಂತಿಯು ಬರುತ್ತದೆ. ಆದರೆ ಎರಡು ಕಾರಣಗಳಿಂದ ಇಲ್ಲಿ ಯತಿಭಂಗವು ದೋಷವಾಗುವುದಿಲ್ಲ. ೧) ಯತಿಭಂಗದೋಷವು ಕಾವ್ಯಗಳಲ್ಲಷ್ಟೇ ದೋಷವಾಗುತ್ತದೆ. ಶಾಸ್ತ್ರಗಳಲ್ಲಿ ದೋಷವಾಗುವುದಿಲ್ಲವೆಂದು ಗೀತಾಭಾಷ್ಯದ ಮಂಗಳಶ್ಲೋಕಕ್ಕೆ ವ್ಯಾಖ್ಯಾನ ಮಾಡಿದಂತೆ ಇಲ್ಲಿಯೂ ತಿಳಿಯಬೇಕು. ೨) ವ್ಯಾಕರಣದ ಪ್ರಕಾರವೂ ಸಹ ಇಲ್ಲಿ ಯತಿಭಂಗವು ಆಗಿಯೇ ಇಲ್ಲ. ಏಕೆಂದರೆ ಸಮಸ್ತಾತೃತ್ವ ಎಂಬುದಕ್ಕೆ ಪದಸಂಜ್ಞೇ ಇದ್ದಂತೆ ಸಮಸ್ತಾತೃ ಎಂಬುದಕ್ಕೂ ಪದಸಂಜ್ಞಾ ಇದೆ. ''ಸ್ವಾದಿಷ್ವಸರ್ವನಾಮಸ್ಥಾನೇ'' ಎಂಬ ಸೂತ್ರವು ಪದಸಂಜ್ಞೆಯನ್ನು ವಿಧಿಸುತ್ತಿದೆ. ಸ್ವಾದಿಪ್ರತ್ಯಯಗಳು ಮತ್ತು ಸರ್ವನಾಮ ಸಂಜ್ಞೆಯನ್ನು ಹೊಂದದ ಪ್ರತ್ಯಯಗಳು ಪರದಲ್ಲಿ ಇದ್ದಾಗ ಪೂರ್ವಕ್ಕೆ ಪದಸಂಜ್ಞಾ ಬರುತ್ತದೆಂದು ಈ ಸೂತ್ರ ಹೇಳುತ್ತಿದೆ. ಸ್ವಾದಿಪ್ರತ್ಯಯಗಳು ಎಂದರೆ ''ಉರಃ ಪ್ರಭೃತಿಭ್ಯಃ ಕಪ್'' ಎಂಬ ಸೂತ್ರದಲ್ಲಿ ಹೇಳಿದ ಕಪ್ ಪ್ರತ್ಯಯದ ತನಕ ಇರುವ ಎಲ್ಲ ಪ್ರತ್ಯಯಗಳನ್ನು ವಿವಕ್ಷಿಸಬೇಕು. ಪ್ರಕೃತ ತ್ವಪ್ರತ್ಯಯವು ಸ್ವಾದಿಪ್ರತ್ಯಯಗಳಲ್ಲಿ ಸೇರುವುದರಿಂದ ಪೂರ್ವದಲ್ಲಿರುವ ಅತೃ ಎಂಬ ಶಬ್ದಸ್ವರೂಪಕ್ಕೂ ಪದಸಂಜ್ಞೆಯನ್ನು ಈ ಸೂತ್ರವು ಹೇಳಿದೆ. ಹೀಗೆ ಪದದ ಕೊನೆಯಲ್ಲಿಯೇ ಪಾದವು ಪೂರ್ತಿಯಾದ್ದರಿಂದ ಯತಿಭಂಗವನ್ನು ಶಂಕಿಸಲಾಗದು. ಸುಧೆಯಲ್ಲಿಯೂ ಸಹ ''ಇತ್ಯಾದಿನಾಽಧ್ಯಾಯೇನ ವದತ್ಯಜಃ'' ಎಂಬಲ್ಲಿಯೂ ಯತಿಭಂಗವನ್ನು ಶಂಕಿಸಬಾರದೆಂದು ಹೇಳಿದ್ದಾರೆ. ''ಇತ್ಯಾದಿನಾ'' ಎಂಬಲ್ಲಿ ನಾ ಎಂಬುದು ತೃತೀಯಾವಿಭಕ್ತಿಯ ಏಕವಚನವಾದ ಟಾ ಪ್ರತ್ಯಯಕ್ಕೆ ಬಂದಿರುವ ಆದೇಶವಾಗಿದೆ. ಸು, ಔ, ಜಸ್, ಅಂ, ಔಟ್, ಈ ಐದು ಪ್ರತ್ಯಯಗಳಿಗಷ್ಟೇ ಸರ್ವನಾಮಸ್ಥಾನಸಂಜ್ಞೆಯು ಇರುತ್ತದೆ. ಟಾ ಪ್ರತ್ಯಯಕ್ಕೆ ಸರ್ವನಾಮಾಸಂಜ್ಞೆಯು ಇರುವುದಿಲ್ಲ. ಸರ್ವನಾಮಸಂಜ್ಞೆಯು ಇಲ್ಲದ ಪ್ರತ್ಯಯವು ಪರದಲ್ಲಿರುವುದರಿಂದ ಇತ್ಯಾದಿ ಎಂಬ ಶಬ್ದಸ್ವರೂಪಕ್ಕೂ ಪದಸಂಜ್ಞೆಯು ಬರುತ್ತದೆ. ಆದ್ದರಿಂದ ''ಇತ್ಯಾದಿನಾಧ್ಯಾಯೇನ ವದತ್ಯಜಃ'' ಎಂಬ ಅನುವ್ಯಾಖ್ಯಾನ ಶ್ಲೋಕದಲ್ಲಿ ಯತಿಭಂಗದೋಷವು ಇರುವುದಿಲ್ಲ.

೩) ವಾಕ್ಯಪ್ರಮಾಣ : ''ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾದ್ಯದೇಷ ಆಕಾಶ ಆನಂದೋ ನ ಸ್ಯಾತ್'' ಎಂಬ ವಾಕ್ಯವು ಆಕಾಶನೆಂಬ ವಿಷ್ಣುವು ಆನಂದಮಯಸ್ವರೂಪವಾದ ಪೂರ್ಣಾನಂದನಾಗಿದ್ದಾನೆ, ಈ ವಿಷಯದಲ್ಲಿ ವಿಶ್ವಚೇಷ್ಟಕತ್ವವೆಂಬ ಹೇತುವನ್ನು ಪ್ರತಿಪಾದನೆ ಮಾಡುತ್ತಿದೆ. ಈ ವಾಕ್ಯವೆಂಬ ಪ್ರಮಾಣವನ್ನೇ ''ತದ್ಧೇತುವ್ಯಪದೇಶಾತ್'' ಎಂಬ ಸೂತ್ರವು ಹೇಳುತ್ತಿದೆ. ಈ ವಾಕ್ಯಪ್ರಮಾಣವು ಕೇವಲ ಆನಂದಮಯನಲ್ಲಷ್ಟೇ ಇದೆ ಹೊರತು ಅನ್ನಮಯಾದಿಗಳಲ್ಲಿ ಇರುವುದಿಲ್ಲ. ಅಥವಾ ಬೇರೆ ವಾಕ್ಯಪ್ರಮಾಣಗಳಿಂದ ಅನ್ನಮಯಾದಿಸಾಧಾರಣವಾದ ವಾಕ್ಯಪ್ರಮಾಣವನ್ನು ಹೇಳಬಹುದು. ''ಅನ್ನಾದ್ವೈ ಪ್ರಜಾಃ ಪ್ರಜಾಯಂತೇ; ಪ್ರಾಣಂ ದೇವಾ ಅನುಪ್ರಾಣಂತಿ; ಯತೋ ವಾಚೋ ನಿವರ್ತಂತೇ; ವಿಜ್ಞಾನಂ ಯಜ್ಞಂ ತನುತೇ; ಅಸನ್ನೇವ ಸ ಭವತಿ; ಸೋಽಕಾಮಯತ'' ಇತ್ಯಾದಿ ವಾಕ್ಯವು ಅನ್ನಮಯಾದಿಗಳ ಮಹಿಮೆಯನ್ನು ಪ್ರತಿಪಾದಿಸುತ್ತಿವೆ. ಇಂತಹ ಮಹಿಮಾಪ್ರತಿಪಾದಕವಾದ ವಾಕ್ಯಗಳು ಪ್ರತಿಯೊಂದು ಪ್ರಕರಣಗಳಲ್ಲಿಯೂ ಕಾಣಸುತ್ತವೆ. ಆ ವಾಕ್ಯಗಳನ್ನೆಲ್ಲಾ ಇಲ್ಲಿ ಪ್ರಮಾಣವನ್ನಾಗಿ ವಿವಕ್ಷಿಸಬೇಕು. ಅನ್ನಮಯಾದಿಗಳು ಬ್ರಹ್ಮವಾಗದಿದ್ದರೆ

ಅನ್ನಮಯಾದಿಗಳ ಮಹಿಮೆಯನ್ನು ಹೇಳುವ ವಾಕ್ಯಗಳಲ್ಲಿ ಬ್ರಹ್ಮಶಬ್ದವನ್ನು ಬ್ರಹ್ಮನ ಲಿಂಗ ಮೊದಲಾದವುಗಳನ್ನು ಮುಂದಿನ ವಾಕ್ಯಗಳಲ್ಲಿ ಹೇಳಿದ್ದು ತಪ್ಪಾಗುತ್ತದೆ.

೪) ಪ್ರಕರಣಪ್ರಮಾಣ - ಮಂತ್ರದಲ್ಲಿರುವ 'ಸತ್ಯಂ ಜ್ಞಾನಂ ಅನಂತಮ್' ಎಂಬ ವಾಕ್ಯದಿಂದ ಪ್ರತಿಪಾದಿತನಾದ ಬ್ರಹ್ಮನೇ ಮುಂದಿನ ಅನ್ನಮಯಾದಿಪ್ರಕರಣಗಳಿಂದ ಪ್ರತಿಪಾದ್ಯನಾಗಿದ್ದಾನೆ.

ಬ್ರಹ್ಮವಿತ್ಪರಮಾಪ್ನೋತೀತಿ ಯತ್ ಪ್ರಥಮಸೂಚಿತಮ್ ।
ತದೇವ ಮಂತ್ರವರ್ಣೇನ ಸತ್ಯಂ ಜ್ಞಾನಮನಂತವತ್ ।
ಲಕ್ಷಿತಂ ತತ್ರ ಸತ್ಯತ್ವಂ ಸೃಷ್ಟ್ಯಾನ್ನಪ್ರಾಣಯೋರಪಿ ।
ಉಕ್ತಂ ಜ್ಞಾನಂ ತು ಮನಸಾ ವಿಜ್ಞಾನೇನಾಪ್ಯುದೀರಿತಮ್ ।
ಅನಂತತ್ವಂ ತಥಾನಂದಮಯವಾಚಾಪ್ಯುದಾಹೃತಮ್ ॥

''ಬ್ರಹ್ಮವಿತ್ಪರಮಾಪ್ನೋತಿ'' ಎಂದು ಪ್ರಕರಣದ ಪ್ರಾರಂಭದಲ್ಲಿ ಹೇಳಲ್ಪಟ್ಟವನು ಪರಬ್ರಹ್ಮನೇ ಆಗಿದ್ದಾನೆ. ಈ ಪರಬ್ರಹ್ಮನು 'ಸತ್ಯಂ ಜ್ಞಾನಂ ಅನಂತಂ' ಎಂಬ ಮಂತ್ರದಿಂದ ಸತ್ಯತ್ವಾದಿ ಲಕ್ಷಣವುಳ್ಳವನಾಗಿ ಹೇಳಲ್ಪಟ್ಟಿದ್ದಾನೆ. ಈ ಲಕ್ಷಣಗಳಲ್ಲಿ ಸತ್ಯತ್ವಲಕ್ಷಣವು ಸೃಷ್ಟಿಪ್ರಕರಣದಿಂದಲೂ ಮತ್ತು ಅನ್ನಮಯ ಪ್ರಾಣಮಯಪ್ರಕರಣಗಳಿಂದಲೂ ವಿವರಿಸಲ್ಪಟ್ಟಿರುತ್ತವೆ. ಜ್ಞಾನಸ್ವರೂಪ ಎಂಬ ಲಕ್ಷಣವು ಮನೋಮಯಪ್ರಕರಣದಿಂದ ಮತ್ತು ವಿಜ್ಞಾನಮಯಪ್ರಕರಣದಿಂದ ವಿವರಿಸಲ್ಪಟ್ಟಿದೆ. ಅನಂತತ್ವ ಎಂಬ ಲಕ್ಷಣವು ಆನಂದಮಯಪ್ರಕರಣದಿಂದ ಮತ್ತು ಮುಂದಿನ ವಾಕ್ಯದಿಂದಲೂ ವಿವರಿಸಲ್ಪಟ್ಟಿದೆ.

ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಸಮಗ್ರ ಪ್ರಕರಣವು ಬ್ರಹ್ಮನ ಪ್ರಕರಣವೆಂದು ತಿಳಿಯುತ್ತದೆ. ''ತಸ್ಮಾದ್ವಾ ಏತಸ್ಮಾದ್'' ಇತ್ಯಾದಿಯಾದ ಮೊದಲಿನ ಪ್ರಕರಣದಿಂದ ಮತ್ತು ಮುಂದಿರುವ ''ಯತೋ ವಾಚೋ ನಿವರ್ತಂತೇ'' ಎನ್ನುವ ಮುಂದಿನ ವಾಕ್ಯಗಳಿಂದಲೂ ಮಂತ್ರವರ್ಣದಿಂದ ಉಕ್ತವಾದ ಬ್ರಹ್ಮಲಕ್ಷಣಗಳನ್ನೇ ವಿವರಣೆ ಮಾಡುತ್ತಿವೆ. ಅಥವಾ ಗ್ರಂಥದಲ್ಲಿರುವ ''ಪೂರ್ವೋತ್ತರಸ್ಮಾತ್'' ಎಂಬಲ್ಲಿ ವಿಶೇಷಣ ಮಾಡಬೇಕು. ''ತಸ್ಮಾದ್ವಾ ಏತಸ್ಮಾದ್'' ಎಂಬ ಪೂರ್ವವಾಕ್ಯವು ಮತ್ತು ''ಸ ಯ ಏವಂ ವಿತ್ । ಅಸ್ಮಾಲ್ಲೋಕಾತ್ಪ್ರೇತ್ಯ । ಏತಮನ್ನಮಯಮಾತ್ಮಾನಮುಪಸಂಕ್ರಾಮತಿ'' ಎಂಬ ಉತ್ತರವಾಕ್ಯವು ಬ್ರಹ್ಮನನ್ನೇ ಹೇಳುತ್ತಿದೆ. ''ತಸ್ಮಾದ್ವಾ'' ವಾಕ್ಯದಲ್ಲಿ ಭೂತಕಾರಣತ್ವೇನ ಆತ್ಮನು ಹೇಳಲ್ಪಟ್ಟಿದ್ದಾನೆ. ಈ ಆತ್ಮನನ್ನೇ ''ಸ ವಾ ಏಷ ಪುರುಷಃ'' ಎಂದು ಪರಾಮರ್ಶಿಸಿ ಅನ್ನಮಯಾದಿರೂಪನಾಗಿ ಪ್ರಶಂಸಿಸಲಾಗಿದೆ. ಹೀಗೆ ಸಂಪೂರ್ಣ ಪ್ರಕರಣವು ಬ್ರಹ್ಮನನ್ನೇ ಪ್ರತಿಪಾದಿಸುತ್ತಿದೆ. ಇದನ್ನೇ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

ಪರಾಮೃಶತಿ ತಸ್ಯೈವ ಪಂಚರೂಪತ್ವವಿತ್ತಯೇ ।
ತ್ಯಕ್ತ್ವಾ ಭೂತಾದಿಕಂ ಸರ್ವಂ ಸ ವಾ ಏಷ ಇತಿ ಶ್ರುತಿಃ ।
ಸ ಇತ್ಯಾತ್ಮಪದೋದ್ದಿಷ್ಟ ಏಷ ಜೀವಶರೀರಗಃ ॥

(ಸ ವಾ ಏಷ ಎಂಬ ಶ್ರುತಿಯು ಆಕಾಶಾದಿ ಭೂತಗಳನ್ನು ಪರಾಮರ್ಶಿಸುತ್ತಿಲ್ಲ. ಭಗವಂತನಿಗೆ ಪಂಚರೂಪತ್ವವನ್ನು ತಿಳಿಯುವುದಕ್ಕಾಗಿ ಭಗವಂತನನ್ನೇ ಪರಾಮರ್ಶಿಸುತ್ತಿದೆ. ಜೀವರ ಶರೀರದಲ್ಲಿ ಇದ್ದುಕೊಂಡು ಆತ್ಮನೆಂದು ಕರೆಸಿಕೊಳ್ಳುವ ಬ್ರಹ್ಮನು ಪ್ರಸ್ತುತನೇ ಆಗಿದ್ದಾನೆ.)

ಬ್ರಹ್ಮನನ್ನು ಪ್ರತಿಪಾದಿಸುವುದು ಶಾಖೆಗಳ ಸ್ವಭಾವವಾಗಿದೆ. ಒಟ್ಟು ಬ್ರಹ್ಮವಲ್ಲಿ ಮತ್ತು ಭೃಗುವಲ್ಲಿಗಳಲ್ಲಿ ಭಗವಂತನ ಎಂಟು ರೂಪಗಳು ಪ್ರತಿಪಾದಿತವಾಗಿವೆ. ಆದ್ದರಿಂದ ಬ್ರಹ್ಮವಲ್ಲಿ ಮತ್ತು ಭೃಗುವಲ್ಲಿಯಲ್ಲಿ ಒಂದೇ ವಿಷಯವನ್ನು ಪ್ರತಿಪಾದಿಸಲಾಗಿದೆ. ಹಾಗಾಗಿ ಸುಲಭವಾಗಿ ಸಮಾಖ್ಯಾ ಪ್ರಮಾಣವನ್ನು ಹೇಳಬಹುದು. ಈ ಅಭಿಪ್ರಾಯದಿಂದಲೇ ಗ್ರಂಥಕಾರರು "ತಚ್ಚ ವಾಧೂಲಶಾಖಾಯಾಮ್" ಎಂದು ಹೇಳಿದ್ದಾರೆ. ವಾಧೂಲಶಾಖೆಯ ಮಾತು ಹೀಗಿದೆ - "ತಸ್ಮಾದ್ವಾ ಏತಸ್ಮಾದನ್ನರಸಮಯಾತ್ । ಅನ್ಯೋಂತರ ಆತ್ಮಾ ವಾಂಙ್ಮಯಃ । ತಸ್ಮಾದ್ವಾ ಏತಸ್ಮಾದ್ವಾಂಙ್ಮಯಾತ್ । ಅನ್ಯೋಂತರ ಆತ್ಮಾ ಚಕ್ಷುರ್ಮಯಃ । ತಸ್ಮಾದ್ವಾ ಏತಸ್ಮಾಚ್ಚಕ್ಷುರ್ಮಯಾತ್ । ಅನ್ಯೋಂತರ ಆತ್ಮಾ ಶ್ರೋತ್ರಮಯಃ । ತಸ್ಮಾತ್ಪ್ರಾಣಮಯಃ । ತಸ್ಮಾನ್ಮನೋಮಯಃ ತಸ್ಮಾದ್ವಿಜ್ಞಾನಮಯಃ । ತಸ್ಮಾದಾನಂದಮಯ ಇತಿ" ಇಲ್ಲಿ ಒಟ್ಟು ಎಂಟು ರೂಪಗಳು ಹೇಳಲ್ಪಟ್ಟಿವೆ. ಇದನ್ನು ತತ್ವಪ್ರದೀಪಕಾರರು ಉಲ್ಲೇಖಿಸಿದ್ದಾರೆ.




ತೈತ್ತಿರೀಯಸಂಹಿತೆ ಯಜುರ್ವೇದದ ಸಂಹಿತೆಗಳಲ್ಲೊಂದು. ತೈತ್ತಿರೀಯ ಸಂಹಿತೆಯ ಸಾರ ತೈತ್ತಿರೀಯ ಉಪನಿಷತ್ತು. ಈ ಉಪನಿಷತ್ತಿನಲ್ಲಿ ಏನು ಹೇಳುತ್ತಾರೆಂದು ತಿಳಿದರೆ, ತನ್ಮೂಲಕ ಸಮಗ್ರ ಸಂಹಿತೆಯನ್ನೇ ತಿಳಿಯಬಹುದು. ಆರಣ್ಯಕಭಾಗವಾಗಿ ಕಾಣುವ ಉಪನಿಷತ್ತಿನಲ್ಲಿ ಐದು ಶಬ್ದಗಳು ಪ್ರಧಾನವಾಗಿವೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಎಂದು.

ತೈತ್ತಿರೀಯ ಉಪನಿಷತ್ತು ಪರಮಾತ್ಮನ ಏಳುರೂಪಗಳನ್ನು ಹೇಳುತ್ತಿದೆ. ಅದರಲ್ಲಿ ಅನ್ನಮಯ ಮೊದಲಾದ ಐದು ಶಬ್ದಗಳು ಪರಮಾತ್ಮನ ಐದುರೂಪಗಳನ್ನು ಪ್ರತಿಪಾದಿಸುತ್ತಿವೆ.

೧. ಎಲ್ಲ ಶಬ್ದಗಳ ಜೊತೆಯಲ್ಲಿ 'ಬ್ರಹ್ಮ' ಎಂಬ ಶಬ್ದವಿರುವುದರಿಂದ.

೨. 'ಎಲ್ಲವನ್ನು ತಿನ್ನುವ ಅನ್ನಮಯ' ಎಂದಿರುವುದರಿಂದ. (ಅದ್ಯತೇ = ತಿನ್ನಲ್ಪಡುತ್ತಾನೆ, ಅತ್ತಿ ಚ = ತಿನ್ನುತ್ತಾನೆ ಕೂಡ ಎಂದು ಉಪನಿಷತ್ತು ಹೇಳುತ್ತದೆ. ನಾವು ತಿನ್ನುವ ಅನ್ನ ನಮ್ಮನ್ನು ತಿನ್ನುವುದಿಲ್ಲ. ಅದರಿಂದ ಎಲ್ಲರಿಗೂ ಅನ್ನ ಒದಗಿಸಿ ಸಲಹುವ ಪ್ರಳಯಕಾಲದಲ್ಲಿ ಎಲ್ಲರನ್ನು ತಿನ್ನುವವನೇ ಅನ್ನಮಯ)

೩. ಪ್ರಕರಣದಲ್ಲಿರುವ ವಾಕ್ಯಗಳಿಂದ.

೪. 'ಬ್ರಹ್ಮನನ್ನು ತಿಳಿದವನೇ ಮುಕ್ತನಾಗುತ್ತಾನೆಂದು' ಹೇಳಿ ಅವನ ಬಗೆಗೇ ಉಪನಿಷತ್ತು ಹೇಳಬೇಕಾಗಿರುವುದರಿಂದ ಮತ್ತು ಹೇಳಿದ್ದರಿಂದ.

೫. ಉಪನಿಷತ್ತಿನ ಕೊನೆಯ ಭಾಗವಾದ ಭೃಗುವಲ್ಲಿಯಲ್ಲಿ 'ಹಿಂದೆ ಹೇಳಿದ ವಿದ್ಯೆಗೆ' ಪರಮಾತ್ಮನೇ ಪ್ರತಿಪಾದ್ಯವೆಂದಿರುವುದರಿಂದ.

೬. 'ಅಹಮನ್ನಂ, ಅಹಮನ್ನಾದಂ' ಎಂದು ಮುಕ್ತ ಬ್ರಹ್ಮ ತನ್ನ ಬಗೆಗೆ ಹೇಳಿಕೊಂಡಿದ್ದರಿಂದ.

೭. ದೇವರ ಬಗೆಗೆ ಹೇಳಿ ಎಂದು ಮಗನಾದ ಭೃಗುವು ತಂದೆಯಾದ ವರುಣನ ಬಳಿ ಕೇಳಿದ್ದರಿಂದ.

೮. ಭೃಗುವು ವರುಣನಿಂದ ಬ್ರಹ್ಮನ ಗುಣಗಳನ್ನು ತಿಳಿದ ಎಂದು ಉಪನಿಷತ್ತು ಹೇಳಿದ್ದರಿಂದ.

೯. ಅನುವ್ಯಾಖ್ಯಾನದಲ್ಲಿ ಹೇಳಿದ ವಾಧೂಲ ಶಾಖೆ ಸಂವಾದದಿಂದ.

*ಪರಿಪೂರ್ಣಚಂದ್ರಿಕಾ*

ಅನ್ನಮಯ ಮೊದಲಾದ ಶಬ್ದಗಳು ಕೋಶವನ್ನೇ ಹೇಳುವುದೇ ಇಲ್ಲ. ಪರಮಾತ್ಮನ ಗುಣಗರ್ಭಗಳಾದ ಐದುರೂಪಗಳನ್ನು ಹೇಳುತ್ತವೆ.



## ಬ್ರಹ್ಮನ ಅನೇಕ ಗುಣಗಳನ್ನು ಪ್ರತಿಪಾದಿಸಲು ಅನೇಕ ಶಬ್ದಗಳು

**तात्पर्यचन्द्रिका –**

**एवञ्च यथा "दाक्षायणयज्ञेन यजेत" "साकंप्रस्थायीयेन यजेत" इत्यादौ दाक्षायणयज्ञसाकंप्रस्थायीयादिशब्दाः प्रकृत एव दर्शपूर्णमासयागे आवृत्त्यादि-गुणविध्यर्थाः न तु ततोऽतिरिक्तकर्मविधिपराः, यथा वा भूमाधिकरणे ब्रह्मत्वेन निर्णीतात् "सत्यं त्वेव जिज्ञासितव्यम्" इति छान्दोग्योक्तात्सत्यादुपरि श्रुताः "विज्ञानं त्वेव विजिज्ञासितव्यं" "मतिस्त्वेव विजिज्ञासितव्या" इति विज्ञान-मतिश्रद्धानिष्ठाकृत्यादिशब्दाः पूर्वोक्ते सत्याख्ये ब्रह्मणि गुणविध्यर्थाः न तु वस्त्वन्तरपराः, एवमन्नमयादिशब्दा अपि प्रकृते ब्रह्मणि सर्वोपजीव्यत्वादि-गुणविशेषविधानार्थाः, न तु वस्त्वन्तरपरा इति ब्रह्मैव नारायणवासुदेवाद्याख्यानन्द-मयादिपञ्चरूपमिति ।**

ಅನುವಾದ - ಅನ್ನಮಯಾದಿಶಬ್ದಗಳು ಭಿನ್ನ ಭಿನ್ನವಾದ್ದರಿಂದ ಅರ್ಥವೂ ಸಹ ಭಿನ್ನ ಭಿನ್ನವೇ ಆಗಬೇಕು ಎಂದು ಆಕ್ಷೇಪಿಸಬಾರದು. ಬ್ರಹ್ಮನಲ್ಲಿ ಈ ಶಬ್ದಗಳು ಗುಣವಿಶೇಷವನ್ನು ಸಾಧಿಸುತ್ತಿವೆ. ಆದ್ದರಿಂದ ಎಲ್ಲಾ ಶಬ್ದಗಳು ಬ್ರಹ್ಮನನ್ನೇ ಪ್ರತಿಪಾದಿಸುತ್ತವೆ. ಈ ವಿಷಯದಲ್ಲಿ ಪೂರ್ವಮೀಮಾಂಸೆ ಮತ್ತು ಉತ್ತರಮೀಮಾಂಸೆಯ ಅಧಿಕರಣಗಳು ದೃಷ್ಟಾಂತಗಳಾಗಿವೆ. "ದಾಕ್ಷಾಯಣಯಜ್ಞೇನ ಯಜೇತ ಸಾಕಂಪ್ರಸ್ಥಾಯೀಯೇನ ಯಜೇತ" ಇತ್ಯಾದಿ ವಾಕ್ಯದಲ್ಲಿ ದಾಕ್ಷಾಯಣಯಜ್ಞ ಮತ್ತು ಸಾಕಂಪ್ರಸ್ಥಾಯೀಯ ಶಬ್ದಗಳು ದರ್ಶಪೂರ್ಣಮಾಸಯಾಗದಲ್ಲಿ ಆವೃತ್ತಿ ಸಾಕಂಪ್ರಸ್ಥಾಯ ಮೊದಲಾದ ಗುಣಗಳನ್ನು ವಿಧಿಸುತ್ತವೆ. ಹೊರತು ಅತಿರಿಕ್ತವಾದ ಯಾವುದೇ ಕರ್ಮವನ್ನು ವಿಧಿಸುತ್ತಿಲ್ಲ. ಇದರಂತೆ ಅನ್ನಮಯಾದಿಶಬ್ದಗಳೂ ಸಹ ಬ್ರಹ್ಮನಲ್ಲಿ ವಿಶೇಷಗುಣಗಳನ್ನಷ್ಟೇ ವಿಧಿಸುತ್ತದೆ ಹೊರತು ಬ್ರಹ್ಮನಿಗಿಂತ ಅತಿರಿಕ್ತವಾದ ಪದಾರ್ಥವನ್ನು ಪ್ರತಿಪಾದಿಸುತ್ತಿಲ್ಲ.

ಉತ್ತರಮೀಮಾಂಸೆಯ ಭೂಮಾಧಿಕರಣವು ಈ ವಿಷಯದಲ್ಲಿ ಸಂವಾದಿಯಾಗಿದೆ. ಭೂಮಾಧಿಕರಣದಲ್ಲಿ "ಸತ್ಯಂ ತ್ವೇವ ಜಿಜ್ಞಾಸಿತವ್ಯಮ್" ಎಂಬ ಛಾಂದೋಗ್ಯದ ಮಾತಿನಲ್ಲಿರುವ ಸತ್ಯಶಬ್ದಾರ್ಥವನ್ನು ವಿಚಾರ ಮಾಡಲಾಗಿದೆ. ಈ ವಾಕ್ಯದ ಮುಂದೆ "ವಿಜ್ಞಾನಂ ತ್ವೇವ ವಿಜಿಜ್ಞಾಸಿತವ್ಯಂ

**गुरुराजीयम् –** अथैष ज्योतिरित्यादौ संज्ञाभेदेन कर्मभेदवदत्राप्यन्नमयादिरूपसंज्ञाभेदात् पञ्चानामपि भेद एवास्तु । तथा च तेषां कथं ब्रह्मत्वमित्यत आह **– एवं चेति** ।। न च तर्ह्यथैष ज्योतिरित्यत्रापि कर्मभेदो न स्यादिति वाच्यं यत्र संज्ञाभेदस्य प्रकृतगुणार्थत्वाभावः तत्रैव संज्ञया कर्मभेद इति भावः । प्रयोजनमाह **– यथेत्यादि** ।। लिङ्गाच्चेति सूत्रे श्रवणावृत्तेः कर्तव्यत्वे अन्नं प्राणं चक्षुः श्रोत्रं मनो वाचमिति पूर्वोक्तः अन्नं ब्रह्म प्राणो ब्रह्मेत्यादिरूपोऽसकृदुपदेशो लिङ्गम् । मनननिदिध्यासनावृत्त्योस्तु कर्तव्यत्वे पुनरुपसत्त्यादिकं लिङ्गमिति द्रष्टव्यम् । तेन भाष्ये त्रितयावृत्तौ लिङ्गानुपदेशाट्टीकायां त्रितयावृत्तेः कर्तव्यत्वे लिङ्गप्रतिपादकत्वोक्तिरनुपपन्नेति निरस्तम् ।

ವಿವರಣೆ - ಯಜತಿ, ದಧಾತಿ, ಜುಹೋತಿ, ಈ ಶಬ್ದಗಳು ಬೇರೆ ಬೇರೆಯಾಗಿರುವುದರಿಂದ ಒಂದೊಂದು ಶಬ್ದಗಳ ಅರ್ಥವೂ ಸಹ ಬೇರೆ ಬೇರೆಯೇ ಆಗಿರುತ್ತದೆ. ಇದರಂತೆ ಅನ್ನಮಯ, ಪ್ರಾಣಮಯ. ಮನೋಮಯ, ಈ ಶಬ್ದಗಳು ಬೇರೆ ಬೇರೆಯಾದ್ದರಿಂದ ಅರ್ಥವನ್ನೂ ಸಹ ಬೇರೆ ಬೇರೆ ಹೇಳುವುದೇ ನ್ಯಾಯ. ಆದ್ದರಿಂದ ಅನ್ನಮಯಾದಿ ಐದು ಶಬ್ದಗಳಲ್ಲಿ ಒಂದು ಶಬ್ದವಷ್ಟೇ ಬ್ರಹ್ಮನನ್ನು ಪ್ರತಿಪಾದಿಸುತ್ತದೆ. ಉಳಿದ ಶಬ್ದಗಳು ಬೇರೆ ಬೇರೆ ಅರ್ಥವನ್ನು ಪ್ರತಿಪಾದಿಸುತ್ತವೆಂಬ ಆಕ್ಷೇಪಕ್ಕೆ 'ಏವಂ ಚ' ಇತ್ಯಾದಿವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅನ್ನಮಯಾದಿ ಐದು ಶಬ್ದಗಳೂ ಸಹ ಬ್ರಹ್ಮನನ್ನೇ ಪ್ರತಿಪಾದಿಸುತ್ತವೆ. ಒಂದು ಶಬ್ದವು ಮುಖ್ಯವಾಗಿ ಬ್ರಹ್ಮನನ್ನು ಪ್ರತಿಪಾದಿಸಿದಾಗ ಉಳಿದ ನಾಲ್ಕು ಶಬ್ದಗಳೂ ಬ್ರಹ್ಮನಲ್ಲಿರುವ ಗುಣವಿಶೇಷಗಳನ್ನು ಪ್ರಶಂಸಿಸುತ್ತಿವೆ. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ಮತ್ತು ಉತ್ತರಮೀಮಾಂಸೆಯ ದೃಷ್ಟಾಂತವನ್ನು 'ಯಥಾ' ಇತ್ಯಾದಿವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

"ಅಯನೇಷು ಚೋದನಾಂತರಂ ಸಂಜ್ಞೋಪಬಂಧಾತ್"[1] (೨-೩-೪)

---

(१) भाट्टसङ्ग्रहः –

**अथ चतुर्तं दाक्षायणादीनां गुणताधिकरणम् (सूत्राणि ५-११)**

**अयनेषु चोदनान्तरं संज्ञोपसंबन्धात् ।। ५ ।।**

**(अगुणाच्च कर्मचोदना ।।६।। समाप्तं च फले वाक्यम् ।।७।। विकारो वा प्रकरणात् ।।८।। लिङ्गदर्शनाच्च ।।९।। गुणात्संज्ञोपसंबन्धः ।।१०।। समाप्तिरविशिष्टा ।।११।।)**

आधानादिवदपूर्वकर्मविधित्वामाशङ्क्य निरासादत्रापवादिकी **सङ्गतिः** । दर्शपूर्णमासप्रकरणे "दाक्षायणयज्ञेन स्वर्गकामो यजेत" इति "सांकप्रस्थायीयेन यजेत पशुकामः" इति च श्रुतम् । तत्र **सन्देहः** दाक्षायणादिशब्देन कर्मान्तरविधिरुत दर्शपूर्णमासयोरेव फलाय गुणविधिरिति दाक्षायणादिशब्दितस्य कस्याचिद्गुणस्याप्रसिद्धेः उद्भिदादिशब्दवद्यजिसामानाधिकरण्वेन कर्मनामत्वात् 'अथैष ज्योतिः' इत्यादिवत् संज्ञाभेदात् कर्मान्तरमिति

ದರ್ಶಮಾಸಪೂರ್ಣಮಾಸಗಳಲ್ಲಿ ಹೀಗೆ ಕೇಳುತ್ತಿದೆ. ದಾಕ್ಷಾಯಣಯಜ್ಞೇನ ಸ್ವರ್ಗಕಾಮೋ ಯಜೇತ ಸಾಕಂಪ್ರಸ್ಥಾಯೀಯೇನ ಯಜೇತ ಪಶುಕಾಮಃ'' ಇದು ಈ ಅಧಿಕರಣದ ವಿಷಯವಾಕ್ಯ. ಇಲ್ಲಿ ದಾಕ್ಷಾಯಣವೇ ಮೊದಲಾದ ಬೇರೆ ಕರ್ಮವನ್ನೇ ವಿಧಿಸಲಾಗಿದೆಯೋ? ಅಥವಾ ದರ್ಶಪೂರ್ಣ-ಮಾಸಗಳಲ್ಲಿಯೇ ಫಲಕ್ಕೋಸ್ಕರ ಗುಣವನ್ನು ವಿಧಾನ ಮಾಡಲಾಗಿದೆಯೋ? ಎಂದು ಸಂಶಯ.

ಪೂರ್ವಪಕ್ಷ : ದಧಿ ಮೊದಲಾದ ಗುಣಗಳು ಹೇಗೆ ಪ್ರಸಿದ್ಧವಾಗಿವೆಯೋ ಅದರಂತೆ ದಾಕ್ಷಾಯಣ ಮೊದಲಾದ ಗುಣಗಳು ಪ್ರಸಿದ್ಧವಾಗಿಲ್ಲ. ಮತ್ತು ''ಉದ್ಭಿದಾ ಯಜೇತ ಪಶುಕಾಮಃ'' ''ಉದ್ಭಿನ್ನಾಮಕ-ಯಾಗೇನ ಪಶುಂ ಭಾವಯೇತ್'' ಎಂದು ಇದರರ್ಥ. ಇಲ್ಲಿ ಉದ್ಭಿದಾ ಎಂಬುದು ತೃತೀಯಾವಿಭಕ್ತಿಯಲ್ಲಿದೆ. 'ಯಾಗೇನ' ಎಂಬುದು ತೃತೀಯಾವಿಭಕ್ತಿಯಲ್ಲಿದೆ. ಆದ್ದರಿಂದ ಯಜ್ ಧಾತುವಿನ ಸಾಮಾನಾಧಿಕರಣ್ಯವು ''ಉದ್ಭಿತ್'' ಶಬ್ದಕ್ಕೆ ಇದೆ. ಎಲ್ಲಿ ಯಜ್ ಧಾತುವಿನ ಸಾಮಾನಾಧಿಕರಣ್ಯವಿರುತ್ತದೋ ಅವೆಲ್ಲವೂ ಯಾಗದ ನಾಮಧೇಯಗಳೇ ಆಗುತ್ತವೆ. ''ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ'' ''ದರ್ಶಪೂರ್ಣ-ಮಾಸಾಭ್ಯಾಂ'' ಇತ್ಯಾದಿ ಸ್ಥಳಗಳಲ್ಲಿ ಯಜ್‌ಧಾತುವಿನ ಸಾಮಾನಾಧಿಕರಣ್ಯವಿರುವುದರಿಂದ ಯಾಗದ ನಾಮಧೇಯವಾಗಿರುವುದು ಕಂಡಿದೆ. ಪ್ರಕೃತ ''ದಾಕ್ಷಾಯಣಯಜ್ಞೇನ ಸ್ವರ್ಗಕಾಮೋ ಯಜೇತ'' ಎಂಬಲ್ಲಿಯೂ ಯಜ್ ಧಾತುವಿನ ಸಾಮಾನಾಧಿಕರಣ್ಯವಿರುವುದರಿಂದ ದಾಕ್ಷಾಯಣವು ಯಾಗದ ನಾಮಧೇಯವಾಗುತ್ತವೆ. ಮತ್ತು 'ದಾಕ್ಷಾಯಣಯಜ್ಞೇನ' ಎಂಬುದು ಒಂದು ನಾಮಧೇಯ; ಸಾಕಂಪ್ರಸ್ಥಾಯಿ ಎಂಬುದು ಮತ್ತೊಂದು ನಾಮಧೇಯ. ಹೀಗೆ ನಾಮಗಳಲ್ಲಿ ಭೇದವಿರುವುದರಿಂದ ಕರ್ಮವೂ ಸಹ ಭಿನ್ನವಾಗುತ್ತದೆ. ಮತ್ತು ಯಜೇತ ಶಬ್ದದ ಅಭ್ಯಾಸವಿರುವುದರಿಂದ ಇದು ಕರ್ಮಾಂತರವಿಧಾಯಕವಾಗಿದೆ. ''ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ'' ''ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ'' ಎಂಬಲ್ಲೆಲ್ಲಾ ಇರುವ ಅಭ್ಯಾಸವು ಇಲ್ಲಿಯೂ ಇರುತ್ತದೆ. ಅದೇ 'ಯಜೇತ' ಪದವು ಇಲ್ಲಿಯೂ ಇರುವುದರಿಂದ ಕರ್ಮಾಂತರವಿಧಾಯಕವೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಇಷ್ಟು ಪೂರ್ವಪಕ್ಷ.

---

**पूर्वः पक्षः** । तदुक्तं **सूत्रे, अयनेषु** अयनादिशब्दयुक्तेषु 'दाक्षयाणयज्ञेन' इत्यादिवाक्येषु **चोदनान्तरं** कर्मान्तरविधानं स्यात् । कुतः? **संज्ञोपसम्बन्धादिति । सिद्धान्तस्तु** दाक्षायणादिशब्दस्य गुणवाचितया लोकतोऽप्रसिद्धत्वेपि दक्षस्य पुनरावृत्तावनलसस्य सम्बन्धि दाक्षमिति वा दक्षस्य यजमानस्य इमे दाक्षा ऋत्विजः, तेषां तत्कर्तृकमिति यावत्, अयनमावृत्तिर्यस्य तेन यज्ञेन प्रकृतदर्शपौर्णमासाख्येनेति निरुक्त्या 'द्वे पौर्णमास्ये यजेत द्वे अमावास्ये' इति वाक्यशेषाच्च, प्रकृते कर्मणि 'दध्नेन्द्रियकामस्य' इत्यत्रेव फलायावृत्तिरूपगुणविधिः । तथा अमावास्यायागे द्वौ द्वौ दोहौ संपाद्य चतसृणां दधिपयसोः कुम्भीनां सहप्रस्थानं सांकप्रस्थायी तद्युक्तः साकंप्रस्थायीयः इत्यवयव्युत्पत्त्या ''सह कुम्भीभिरभिक्रामं जुहोति'' इति वाक्यशेषेण च सहप्रस्थानलक्षणगुणस्य फलाय विधिरिति न कर्मान्तरमिति । **फलन्तु, पूर्वपक्षे** दाक्षायणज्ञादेः पृथगेव प्रयोगः । **सिद्धान्ते तु** दर्शादेरेवाऽवृत्त्यादिना प्रयोग इति ।

ಸಿದ್ಧಾಂತ : ಈ ವಾಕ್ಯವು ಕರ್ಮಾಂತರವಿಧಾಯಕವಲ್ಲ. ಗುಣವಿಧಾಯಕವೇ ಆಗಿದೆ. ''ದ್ವೇ ಪೌರ್ಣಮಾಸ್ಯೌ ದ್ವೇ ಅಮಾವಾಸ್ಯೇ ಸಹ ಕುಂಭೀಭಿರಭಿಕ್ರಾಮತೀ'' ಈ ವಾಕ್ಯಶೇಷದ ಬಲದಿಂದ ''ದಾಕ್ಷಾಯಣಯಜ್ಞೇನ ಯಜೇತ'' ಎಂಬ ವಾಕ್ಯಕ್ಕೆ ಆವೃತ್ಯಾ ಯಜೇತ ಎಂದು ಅರ್ಥ. ''ಸಹಕುಂಭೀಭಿ ಅಭಿಕ್ರಾಮತೀ'' ಎಂಬ ವಾಕ್ಯಕ್ಕೆ ಸಹಪ್ರಸ್ಥಾನ ಎಂದರ್ಥ. ಈ ಎರಡು ಅರ್ಥಗಳು ಗುಣಪರತ್ವದಲ್ಲಿಯೇ ಪರ್ಯವಸಾನವಾಗುತ್ತವೆ. ಆದ್ದರಿಂದ ಕರ್ಮಾಂತರದ ವಿಧಾನವನ್ನು ಈ ವಾಕ್ಯದಿಂದ ಹೇಳಲಾಗದು. ಮತ್ತು ಫಲವೂ ಸಹ ಶ್ರುತವಾಗಿದೆ. ಇದರಂತೆ ಬೇರೆ ಶ್ರುತಿಯು ಇಲ್ಲದ ಕಾರಣ ಫಲಕ್ಕೋಸ್ಕರ ಗುಣವನ್ನು ಇಲ್ಲಿ ವಿಧಿಸಲಾಗಿದೆ ಎಂದು ಸಿದ್ಧಾಂತ.

ಇಲ್ಲಿ ದರ್ಶಪೂರ್ಣಮಾಸಕ್ಕಿಂತ ಬೇರೆ ಕರ್ಮವು ದಾಕ್ಷಾಯಣಶಬ್ದವು ಹೇಳುತ್ತಿದೆಯೆಂದು ತೋರುತ್ತದೆ. ಆದರೆ ದಾಕ್ಷಾಯಣಶಬ್ದಕ್ಕೆ ಕರ್ಮಾಂತರಪರದ ಅರ್ಥವನ್ನು ಮಾಡಬಾರದು. ಹೊರತಾಗಿ ಆವೃತ್ತಿ ಎಂಬರ್ಥವನ್ನು ಹೇಳಬೇಕು. ಅದು ಹೀಗೆ - ''ದಕ್ಷಸ್ಯ ಇಮೇ ದಾಕ್ಷಾಃ'' ಸಮರ್ಥರಿಗೆ ಸಂಬಂಧಪಟ್ಟಿದ್ದು = ಯಾಗೀಯಪ್ರಯೋಗಗಳು. ಯಾಗೀಯಪ್ರಯೋಗಗಳಿಗೆ ಆಶ್ರಯವಾದದ್ದು ದಾಕ್ಷಾಯಣ. ಇದನ್ನೇ ಆವೃತ್ತಿಯೆನ್ನುತ್ತಾರೆ. ಈ ಆವೃತ್ತಿಯಿಂದ ಕೂಡಿರುವಂತಹದ್ದು ಪ್ರಕೃತವಾದ ದರ್ಶಪೂರ್ಣಮಾಸಾತ್ಮಕವಾದ ಯಾಗ. ಅಂದರೆ ದಕ್ಷಸಂಬಂಧಿಯಾದ ಋತ್ವಿಕ್‌ಕರ್ತೃಕವಾದ ಆವೃತ್ತಿಯು ಯಾವುದರಲ್ಲಿ ಇದೆಯೋ ಅದು ದಾಕ್ಷಾಯಣಯಜ್ಞ. ಅದನ್ನೇ ದರ್ಶಪೂರ್ಣಮಾಸಯಾಗವೆನ್ನುತ್ತಾರೆ. ಉದಾಹರಣೆ - ಅಮಾವಾಸ್ಯಾ ಯಾಗದಲ್ಲಿ ಮೊಸರಿನ ಎರಡು ಪಾತ್ರೆಗಳು, ಹಾಲಿನ ಎರಡು ಪಾತ್ರೆಗಳು. ಒಟ್ಟು ನಾಲ್ಕು ಈ ಪಾತ್ರೆಗಳನ್ನು ತೆಗೆದುಕೊಂಡು ಹೋಗಬೇಕೆಂದು ''ಸಹಕುಂಭೀಭಿಃ ಅಭಿಕ್ರಾಮತಿ'' ಎಂಬ ವಾಕ್ಯ ಹೇಳುತ್ತಿದೆ. ಈ ಸಹಪ್ರಸ್ಥಾನದಿಂದ ಕೂಡಿರುವ ದರ್ಶಯಾಗವು ''ಸಾಕಂ ಪ್ರಸ್ಥಾಯೀಯ'' ಎಂಬ ವ್ಯುತ್ಪತ್ತಿಯಂತೆ ಸ್ವರ್ಗ ಪಶು ಮೊದಲಾದ ಫಲಕ್ಕೋಸ್ಕರ ಆವೃತ್ತಿಯನ್ನು ಮತ್ತು ''ಸಾಕಂ ಪ್ರಸ್ಥಾಯೀಯ'' ಮೊದಲಾದ ಗುಣಗಳನ್ನು ಹೇಳುತ್ತಿದೆ. ಆದ್ದರಿಂದ 'ದಾಕ್ಷಾಯಣ ಯಜ್ಞೇನ ಸ್ವರ್ಗಕಾಮೋ ಯಜೇತ' ಇತ್ಯಾದಿವಾಕ್ಯವು ಗುಣವಿಧಾಯಕವೇ ಆಗಿದೆ. ಕರ್ಮಾಂತರವಿಧಾಯಕವಾಗಿಲ್ಲ.

ಇದರಂತೆ ಪ್ರಕೃತದಲ್ಲಿ ಗುಣವಿಶೇಷವಿಧಾಯಕವೆಂದೇ ಅನ್ನಮಯಾದಿಶಬ್ದಗಳನ್ನು ಹೊಂದಿಸಬೇಕು. ಇದನ್ನು ಅನುವ್ಯಾಖ್ಯಾನವೂ ಸಮ್ಮತಿಸಿದೆ -

ಭೋಗ್ಯತ್ವಮತ್ರ ಚಾದ್ಯತ್ವಮುಪಜೀವ್ಯತಯಾ ಹರೇಃ।
ಮಹಾಭೋಕ್ತಾ ಮಹಾಭೋಗ್ಯ ಇತ್ಯರ್ಥೋಽನ್ನಮಯೇ ಭವೇತ್ ।
ಮಹಾಪ್ರಾಣೋ ಮಹಾಬೋಧೋ ಮಹಾವಿಜ್ಞಾನವಾನಪಿ।

(''ಅದ್ಯತೇ ಅತ್ತಿ ಚ ಭೂತಾನಿ'' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅದ್ಯತ್ವವು ಭೋಗ್ಯತ್ವ-ರೂಪವಾಗಿದೆ. ಈ ಭೋಗ್ಯತ್ವರೂಪವು ಸರ್ವಭೂತಗಳಿಂದ ಉಪಜೀವಿಸಲ್ಪಡತಕ್ಕವನು ಎಂಬ ಕಾರಣದಿಂದ ಹರಿಯಲ್ಲಿ ಯುಕ್ತವಾಗುತ್ತದೆ. ಮಹಾಭೋಕ್ತಾಃ = ಸಮಸ್ತಭೂತಸಂಹಾರಕನು, ಮಹಾಭೋಗಃ = ಸರ್ವಭೂತೋಪಜೀವನು ಎಂಬುದು ಅನ್ನಮಯಶಬ್ದದ ಅರ್ಥ. ಇದು ಹರಿಯಲ್ಲಿ ಯುಕ್ತವಾಗುತ್ತದೆ. ಮಹಾಪ್ರಾಣಃ = ಮಹಾವ್ಯಾಪಾರವುಳ್ಳವನು. ಮಹಾಬೋಧಃ = ಸಾಮಾನ್ಯವಾಗಿ ಮಹಾಜ್ಞಾನವುಳ್ಳವನು,

ಮಹಾವಿಜ್ಞಾನವಾನ್ = ಮಹಾವಿಶೇಷ ಜ್ಞಾನವುಳ್ಳವನು ಹೀಗೆ ಕ್ರಮವಾಗಿ ಪ್ರಾಣಮಯ, ಮನೋಮಯ, ವಿಜ್ಞಾನಮಯ, ಈ ಶಬ್ದಗಳಿಗೆ ಅರ್ಥವಿರುತ್ತದೆ. ಇದರಂತೆ ಮಹಾ ಆನಂದವುಳ್ಳವನು ಎಂಬರ್ಥವನ್ನು ಆನಂದಮಯಶಬ್ದಕ್ಕೆ ತಿಳಿಯಬೇಕು.

ಈ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಸರ್ವರಿಗೂ ಉಪಜೀವ್ಯನಾಗಿದ್ದಾನೆಂಬ ಅನೇಕ ಗುಣಗಳನ್ನು ಅನ್ನಮಯಾದಿಶಬ್ದಗಳು ವಿಧಿಸುತ್ತಿವೆ. ಹೀಗೆ ಗುಣವಿಧಾಯಕವಾಗುವ ಅನ್ನಮಯಾದಿಶಬ್ದಗಳು ವ್ಯರ್ಥವಾಗುವುದಿಲ್ಲ.

ಪೂರ್ವಮೀಮಾಂಸಾಧಿಕರಣದ ದೃಷ್ಟಾಂತದಂತೆ ಉತ್ತರಮೀಮಾಂಸೆಯ ದೃಷ್ಟಾಂತವನ್ನೂ ಈ ವಿಷಯದಲ್ಲಿ ಹೇಳಬಹುದು -

''ಭೂಮಾ ಸಂಪ್ರಸಾದಾತ್ ಅಧ್ಯುಪದೇಶಾತ್'' (೧-೩-೨)

ಛಾಂದೋಗ್ಯದಲ್ಲಿ ಪ್ರಾಣನು ಭಾರತೀದೇವಿಗಿಂತ ಗುಣದಲ್ಲಿ ಉತ್ತಮನೆಂದು ಮುಂದಿನ ದೇವತೆಗಳು ಹಿಂದಿನ ದೇವತೆಗಳಿಂಗಿತ ಶ್ರೇಷ್ಠವೆಂಬ ತಾರತಮ್ಯವನ್ನು ಹೇಳಲಾಗಿದೆ. ''ಯೋ ವೈ ಭೂಮಾ ತತ್ಸುಖಮ್ । ನಾಲ್ಪೇ ಸುಖಮಸ್ತೀತಿ'' ಯಾರು ಗುಣಪೂರ್ಣನೋ ಅವನೇ ಸುಖಪೂರ್ಣನು ಅವನಲ್ಲಿ ಅಲ್ಪಸುಖವು ಇರುವುದಿಲ್ಲವೆಂಬ ಮಾತಿದೆ. ಇಲ್ಲಿರುವ ''ಭೂಮಾ'' ಶಬ್ದದಿಂದ ಪ್ರತಿಪಾದ್ಯನಾದವನು ಮುಖ್ಯಪ್ರಾಣನು ಅಥವಾ ವಿಷ್ಣುವು ಎಂದು ಸಂಶಯ. ಪ್ರಾಣನ ಪ್ರಕರಣವಾದ್ದರಿಂದ ಪ್ರಾಣನ ಅನಂತರ ಮತ್ತೊಬ್ಬನ ಬಗ್ಗೆ ಪ್ರಶ್ನೆಯನ್ನಾಗಲಿ ಉತ್ತರವನ್ನಾಗಲಿ ಹೇಳದಿರುವುರಿಂದ ಪ್ರಾಣನೇ ಭೂಮನಾಗಿದ್ದಾನೆ ಎಂದು ಪೂರ್ವಪಕ್ಷ. ''ಯೋ ವೈ ಭೂಮಾ ತತ್ಸುಖಮ್'' ಎಂಬಲ್ಲಿ ವಿಶೇಷಣವಿಲ್ಲದ ಸುಖಶಬ್ದವನ್ನು ಹೇಳಿದ್ದರಿಂದ ಪೂರ್ಣಸುಖವನ್ನೇ ಹೇಳುತ್ತಿದೆ. ''ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ''ಎಂಬಲ್ಲಿ ತುಶಬ್ದದಿಂದ ಪ್ರಾಣನಿಗಿಂತ ಉತ್ತಮತ್ವವನ್ನು ಸೂಚಿಸಿಲಾಗಿದೆ. ಪ್ರಾಣನಿಗಿಂತ ಉತ್ತಮನಾದವನು ವಿಷ್ಣುವೇ ಆಗುತ್ತಾನೆಂದು ಸಿದ್ಧಾಂತ.

ಇಲ್ಲಿ ವಸ್ತುತಃ ಭೂಮನನ್ನು ವಿಷ್ಣುವೆಂದಿದ್ದಾರೆ. ಸತ್ಯಪದಾರ್ಥವನ್ನು ವಿಷ್ಣುವೆಂದು ಹೇಳಿಲ್ಲ. ಆದರೂ ಸಹ ''ಸತ್ಯೇನಾತಿವದತಿ'' ಎಂಬ ವಾಕ್ಯದಲ್ಲಿರುವ ತು ಶಬ್ದವು ಸತ್ಯಪದಾರ್ಥವು ಎಲ್ಲದಕ್ಕಿಂತ ಶ್ರೇಷ್ಠವೆಂದು ಹೇಳುತ್ತಿದೆ. ಶ್ರೇಷ್ಠನಾದವನು ವಿಷ್ಣುವೆಂದು ಸಿದ್ಧವಾದ ಮೇಲೆ ಸತ್ಯಪದಾರ್ಥದಿಂದ ಅಭಿನ್ನನಾದ ಭೂಮನೂ ಸಹ ವಿಷ್ಣುವೇ ಆಗುತ್ತಾನೆಂದು ನಿರ್ಣಯಿಸಬಹುದು.

''ವ್ಯತಿಹಾರೋ ವಿಶಿಂಷಂತಿ ಹೀತರವತ್''(೩-೩-೩೮) ''ಏಷತು ವಾ ಅತಿವದತಿ ಯಃ ಸತ್ಯೇನಾತಿ-ವದತಿ'' ಈ ಶ್ರುತಿಯಲ್ಲಿ ಸತ್ಯಪದದಿಂದ ವಿಷ್ಣುವಿಗೆ ಉತ್ತಮತ್ವವನ್ನು ಹೇಳುತ್ತಿಲ್ಲ. ''ಅಸ್ತಿಭಗವಃ ಪ್ರಾದ್ ಭೂಯಃ''ಎಂದು ಪ್ರಶ್ನೆ ಮತ್ತು ಉತ್ತರಗಳು ಇಲ್ಲದಿರುವುದರಿಂದ ಪ್ರಕರಣಭೇದವನ್ನು ಕಲ್ಪಿಸಲಾಗದು. ಹಾಗಾಗಿ ಸತ್ಯಪದವಾಚ್ಯನಾದವನು ಪ್ರಾಣನೇ ಆಗಿದ್ದಾನೆ. ಇಷ್ಟು ಪೂರ್ವಪಕ್ಷ.

ವಿಷ್ಣುವು ಉತ್ತಮನಲ್ಲವೆಂಬುದು ಸರಿಯಲ್ಲ. ಮೇಲಿನ ಶ್ರುತಿಯಲ್ಲಿ ಸತ್ಯಪದದಿಂದ ವಿಷ್ಣುವೇ ವಾಚ್ಯನಾಗುತ್ತಾನೆ. ಪ್ರಶ್ನಾದಿಗಳನ್ನು ಹೇಳದಿದ್ದರೂ ಅಧ್ಯಾಹಾರ ಮಾಡಬೇಕು. ''ಸ ವಾ ಏಷ ಏವಂ

ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ ಅತಿವಾದೀ ಭವತಿ ಈ ಶ್ರುತಿಯಲ್ಲಿ ಯಾರು ಪ್ರಾಣನನ್ನು ಹೇಳುತ್ತಾನೊ ಅವನು ಶ್ರೇಷ್ಠವಸ್ತುವನ್ನು ಹೇಳುವವನಾಗುತ್ತಾನೆ. ಆದ್ದರಿಂದ ಆವನನ್ನು ಅತಿವಾದಿ ಎನ್ನಲಾಗಿದೆ. ''ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ'' ಈ ಶ್ರುತಿಯಲ್ಲಿ ಸತ್ಯನಾಮಕ ವಿಷ್ಣುವನ್ನು ಶ್ರೇಷ್ಠನೆಂದು ಹೇಳುವವನಿಗೆ ಅತಿವಾದಿತ್ವವನ್ನು ಹೇಳುವಾಗ ತು ಎಂಬ ವಿಶೇಷಣವನ್ನೇ ಹೇಳಲಾಗಿದೆ. ಇದು ಪ್ರಾಣನಿಗಿಂತ ಸತ್ಯನು ಉತ್ತಮನೆಂದು ತಿಳಿಸುತ್ತಿದೆ. ಇದರಿಂದ ಪ್ರಾಣ ಮತ್ತು ಸತ್ಯಗಳು ಭಿನ್ನವೆಂದು ತಿಳಿಯುತ್ತದೆ. ಆದ್ದರಿಂದ ಸತ್ಯಪದದಿಂದ ಪ್ರತಿಪಾದ್ಯನಾದ ವಿಷ್ಣುವೇ ಸರ್ವೋತ್ತಮನಾಗಿದ್ದಾನೆ.

ಹೀಗೆ ''ವ್ಯತಿಹಾರೋ ವಿಶಿಂಷಂತಿ ಹಿ'' ಎಂಬ ಅಧಿಕರಣದಲ್ಲಿ ವಿಚಾರ ಮಾಡಿದ್ದಾರೆ. ಆದರೂ ಕೂಡ ಈ ಅಧಿಕರಣವು ಭೂಮಾಧಿಕರಣದ ಆಕ್ಷೇಪಕ್ಕೆ ಉತ್ತರಿಸುತ್ತಿರುವುದರಿಂದ ಪ್ರಕೃತ ಭೂಮಾಧಿ ಕರಣದ ಸಂದರ್ಭದಲ್ಲಿಯೇ ನಿರೂಪಿಸಿದ್ದಾರೆ. ಈ ವಿಷಯದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಭೂಮಾಧಿ ಕರಣದಲ್ಲಿ ತಿಳಿಯೋಣ.

''ಸೈವ ಹಿ ಸತ್ಯಾದಯಃ'' (೩-೩-೩೯)

ಸತ್ಯಪದವಾಚ್ಯನಾದ ವಿಷ್ಣುವು ಪ್ರಾಣನಿಗಿಂತ ಉತ್ತಮನೋ? ಅಥವಾ ಬೇರೆಯವರು ಉತ್ತಮರೋ ಎಂದು ಸಂಶಯ.

''ಸತ್ಯ, ವಿಜ್ಞಾನ, ಮತಿ, ಶ್ರದ್ಧಾ, ನಿಷ್ಠಾ, ಕೃತಿ, ಭೂಮ, ಅಹಂಕಾರ, ಆತ್ಮಾ, ಇವುಗಳಿಗೆ ಪರಸ್ಪರ ಅಭೇದವನ್ನು ಹೇಳಿಲ್ಲ. ಆದರೂ ಸಹ ಅಭೇದ ಹೇಳುವುದಾರೆ ಪ್ರಾಣನಿಂದಲೂ ಅಭೇದ ಹೇಳಬೇಕಾಗುತ್ತದೆ. ಆದ್ದರಿಂದ ಇವುಗಳಿಗೆ ಅನಿವಾರ್ಯವಾಗಿ ಭೇದವನ್ನೇ ಹೇಳಬೇಕು. ಆವಾಗ ವಿಜ್ಞಾನಾದಿಗಳಿಗೆ ಸತ್ಯಪದವಾಚ್ಯನಾದ ವಿಷ್ಣುವಿಗಿಂತ ಉತ್ತಮತ್ವವನ್ನು ಹೇಳಿದಂತಾಗುತ್ತದೆ. ಆದ್ದರಿಂದ ವಿಷ್ಣುವಿಗೆ ನಿರುಪಚರಿತವಾದ ಸರ್ವೋತ್ತಮತ್ವವನ್ನು ಹೇಳಲಾಗದು. ಇಷ್ಟು ಪೂರ್ವಪಕ್ಷ.

ಅನೇಕರು ಪ್ರಾಣನಿಗಿಂತ ಉತ್ತಮರಿದ್ದಾರೆನ್ನುವುದು ತಪ್ಪು. ಸತ್ಯದಿಂದ ಅಹಂಕಾರದವರೆಗೂ ಹೇಳಲ್ಪಟ್ಟವರು ಬೇರೆ ಯಾರೂ ಅಲ್ಲ. ಆತ್ಮಶಬ್ದವಾಚ್ಯನಾದ ಪರಮಾತ್ಮನಲ್ಲಿರುವ ಗುಣಗಳನ್ನೇ ಈ ಶಬ್ದಗಳು ಪ್ರಶಂಸಿಸುತ್ತಿವೆ. ಆದ್ದರಿಂದ ಅವುಗಳಿಗೆ ಅಭೇದವನ್ನೇ ಹೇಳಬೇಕು. ಹೀಗೆ ಪರಮಾತ್ಮನ ಗುಣಗಳಾದ ಸತ್ಯಾದಿಗಳಲ್ಲವೂ ಪರಮಾತ್ಮನ ಸ್ವರೂಪವೇ ಆಗಿರುವುದರಿಂದ ಪ್ರಾಣನಿಗಿಂತ ಉತ್ತಮನಾದವನು ಪರಮಾತ್ಮನೇ ಆಗಿರುತ್ತಾನೆ. ಇಷ್ಟು ಸಿದ್ಧಾಂತ.

ಇದರಂತೆ ಪ್ರಕೃತದಲ್ಲಿಯೂ ಬ್ರಹ್ಮನಲ್ಲಿರುವ ಗುಣಗಳನ್ನೇ ಅನ್ನಮಯಾದಿಶಬ್ದಗಳು ಪ್ರತಿಪಾದಿಸುತ್ತಿವೆ. ಆದ್ದರಿಂದ ಅನ್ನಮಯಾದಿ ಐದು ಶಬ್ದಗಳಿಂದ ಪ್ರತಿಪಾದ್ಯನಾದವನು ಬ್ರಹ್ಮನೊಬ್ಬನೇ ಆಗುತ್ತಾನೆ. ಯಾವುದೇ ಕಾರಣದಿಂದಲೂ ಶಬ್ದಗಳು ಭಿನ್ನಭಿನ್ನವಾದ್ದರಿಂದ ಅರ್ಥದಲ್ಲಿಯೂ ಭೇದವನ್ನು ನಿಮಗೆ ಆಕ್ಷೇಪಿಸಲಾಗದು. ಭಗವಂತನಲ್ಲಿರುವ ಗುಣಗಳನ್ನು ಪ್ರತಿಪಾದಿಸುವುದರಿಂದ ಒಂದೇ ವಿಷಯವನ್ನು ಪ್ರತಿಪಾದಿಸಿದಂತಾಗುತ್ತದೆ. ಇದರಂತೆ ಭಗವಂತನ ರೂಪವಿಶೇಷಗಳನ್ನು ಪ್ರತಿಪಾದಿಸುವುದರಿಂದಲೂ ಒಬ್ಬನನ್ನೇ ಪ್ರತಿಪಾದಿಸಿ-ದ್ದಾಗುತ್ತದೆಂದೂ ಸಹ ತಿಳಿಯಬಹುದು. ಯಾವರೀತಿಯಾಗಿ ಭಗವಂತನಿಗೂ ಅವನ ಗುಣಗಳಿಗೂ ಭೇದ ಇರುವುದಿಲ್ಲವೋ ಆದರಂತೆ ಭಗವಂತನಿಗೂ ಅವನ ಉಳಿದ ರೂಪಗಳಿಗೂ ಭೇದ ಇರುವುದಿಲ್ಲ. ಈ

ವಿಷಯದಲ್ಲಿರುವ ಹೆಚ್ಚಿನ ಮಾಹಿತಿಯನ್ನು ಗುಹಾಧಿಕರಣದಲ್ಲಿ ತಿಳಿಸುವವರಿದ್ದೇವೆ. ಒಟ್ಟು ಇಲ್ಲಿಯ ತನಕ ಪ್ರತಿಪಾದಿಸಿದ ಸಿದ್ಧಾಂತ - ಆನಂದಮಯಾಧಿಕರಣಶರೀರವು ಯಾವುದೇ ವಿಧದ ದೋಷವಿಲ್ಲದ್ದು ಅತ್ಯಂತ ಸಂಗತವೂ ಮಹಾಪ್ರಯೋಜನವುಳ್ಳದ್ದು ಬಹಳ ಅರ್ಥವುಳ್ಳದ್ದೂ ಎಂದು.

ವಿಶೇಷ ವಿಚಾರ - ಆನಂದಮಯಾಧಿಕರಣದಲ್ಲಿ ಪ್ರತಿಪಾದಿಸಿದ ಅನ್ನಮಯಾದಿ ಐದು ಶಬ್ದಗಳು ಭಗವಂತನ ಗುಣಗಳನ್ನು ಪ್ರತಿಪಾದಿಸುವಂತೆ ಭಗವಂತನ ಅನಿರುದ್ಧಾದಿ ರೂಪವಿಶೇಷಗಳನ್ನೂ ಸಹ ಪ್ರತಿಪಾದಿಸುತ್ತವೆ. ಅನ್ನಮಯ - ಅನಿರುದ್ಧ, ಪ್ರಾಣಮಯ - ಪ್ರದ್ಯುಮ್ನ, ಮನೋಮಯ - ಸಂಕರ್ಷಣ, ವಿಜ್ಞಾನಮಯ - ವಾಸುದೇವ, ಆನಂದಮಯ - ನಾರಾಯಣ. ಹೀಗೆ ಅನ್ನಮಯಾದಿಶಬ್ದಗಳಿಂದ ಅನಿರುದ್ಧಾದಿಶಬ್ದಗಳು ಕ್ರಮವಾಗಿ ಪ್ರತಿಪಾದ್ಯಗಳಾಗಿವೆ. ವಸ್ತುತಃ ಗ್ರಂಥಕಾರರೇ ಈ ಹಿಂದೆ ಹೇಳಿದಂತೆ ಚಕ್ಷುಸ್, ಶ್ರೋತ್ರಂ, ವಾಕ್, ಈ ಮೂರು ಶಬ್ದಗಳೂ ಸಹ ಭಗವಂತನ ರೂಪವಿಶೇಷಗಳನ್ನು ಪ್ರತಿಪಾದಿಸುತ್ತಿವೆ. ಒಟ್ಟು ಭಗವಂತನ ಎಂಟು ರೂಪಗಳು ತೈತ್ತಿರೀಯಪ್ರಕರಣಗಳಿಂದ ಪ್ರತಿಪಾದ್ಯಗಳಾಗಿವೆ. ಆದರೆ ಚಕ್ಷುರಾದಿಪದಗಳಿಂದ ಪ್ರತಿಪಾದ್ಯರಾದ ರೂಪಗಳ ಬಗ್ಗೆ ಎಲ್ಲಿಯೂ ಮಾಹಿತಿ ಸಿಗುವುದಿಲ್ಲ. ತೈತ್ತಿರೀಯಭಾಷ್ಯಕ್ಕೆ ವ್ಯಾಖ್ಯಾನಿಸುವ ಶ್ರೀನಿವಾಸತೀರ್ಥರು ಚಕ್ಷುರಾದಿ ಪದಗಳಿಂದ ಪ್ರತಿಪಾದ್ಯವಾದ ರೂಪಗಳ ವಿಷಯದಲ್ಲಿ "ಮಹಾಂತಃ ಪ್ರಷ್ಟವ್ಯಾಃ" ಎಂದು ಜ್ಞಾನಿಗಳನ್ನೇ ಕೇಳಬೇಕು; ನಮಗೆ ಗೊತ್ತಿಲ್ಲವೆಂದು ಹೇಳಿದ್ದಾರೆ. ಕೆಲವೊಮ್ಮೆ ಇಂತಹ ಸಂದೇಹಗಳು ಶಾಸ್ತ್ರಗಳಲ್ಲಿ ಅನೇಕ ಕಡೆ ಬರುತ್ತವೆ. ಟೀಕಾರಾಯರೂ ಸಹ ಪ್ರತಿಯೊಂದು ದಿಕ್ಕುಗಳ ವಿಷಯದಲ್ಲಿ ಭಗವಂತನ ರೂಪಗಳನ್ನು ಹೇಳುತ್ತಾ ಅಂತರದಿಕ್ಕಿಗೆ ಭಗವಂತನ ಯಾವರೂಪವೆಂದು ತಿಳಿಯುತ್ತಿಲ್ಲ. ದೊಡ್ಡವರನ್ನೇ ಕೇಳಬೇಕು ಎಂದು ಹೇಳಿದ್ದಾರೆ.




. ಬೇರೆ ಬೇರೆ ಶಬ್ದಗಳಿಂದ ಹೇಳಿದ ಮಾತ್ರಕ್ಕೆ ಬೇರೆ ಬೇರೆ ವಿಷಯಗಳನ್ನೇ ಹೇಳಬೇಕೆಂಬ ನಿಯಮವಿಲ್ಲ. ಜೈಮಿನಿಮುನಿಗಳ ಸೂತ್ರವೂ ಸಾಕ್ಷಿ. ಬೇರೆ ಬೇರೆ ಆಯಾಮಗಳನ್ನು ಬೇರೆ ಬೇರೆ ಶಬ್ದಗಳು ಹೇಳಬಹುದು. ಬ್ರಹ್ಮಸೂತ್ರಗಳು 'ಸತ್ಯ' ಮೊದಲಾದ ಬೇರೆ ಬೇರೆ ಗುಣಗಳನ್ನು ಒಬ್ಬನೇ ಬ್ರಹ್ಮನಲ್ಲಿ ಸಮನ್ವಯಿಸುವುದು ಕಂಡಿದೆ.

• • • • •

## ಟೀಕೆಯಲ್ಲಿರುವ ಕಠಿಣ ಪದಾರ್ಥ

**तात्पर्यचन्द्रिका –**

**टीकाऽक्षरार्थस्तु – श्रुत्यधिकरणसङ्गती दर्शयतीति ।। येन केनचित् पूर्वाधिकरणेन तद्विषयश्रुत्या च सङ्गतिरेवापेक्षितेति, आद्यसूत्रेण तद्विषयवाक्येन चाक्षेपिकी सङ्गतिरस्तीत्यर्थः । यद्वा – पूर्वपक्षे आद्यसूत्रे तद्विषयवाक्योक्त-**

जिज्ञासाऽऽक्षेपात् सिद्धान्ते च तत्समाधानात् तत्सङ्गती स्त इति प्रयोजनवानयं विचार इत्यर्थः । अत एवोत्तरत्र टीकायां ''किमर्थमानन्दमयस्य विष्णुत्वसमर्थनम्'' इति प्रश्नः, ''ब्रह्मजिज्ञासासिद्ध्यर्थम्'' इति परिहारश्च । एवमुत्तरत्रापि सङ्गतिटीका द्वेधा व्याख्येया ।।

तस्मादुद्भूत इति ।। शरीरिस्थानीयात्तदान्तरान्नारायणाख्यादानन्दमयाच्छरीर-स्थानीयो बाह्यो वासुदेवाख्यो विज्ञानमयः प्रादुर्भूत इत्यर्थः ।।

इन्द्रबृहस्पत्यादीनामपि सूर्याधिष्ठातृत्वादिनेति ।। तेषां सूर्यादुत्तमतया तन्नियामकत्वेनावस्थानं तदधिष्ठातृत्वम् । आदिशब्देन ''स एक इन्द्रस्यानन्दः'' ''स एको बृहस्पतेरानन्दः'' इतीन्द्रश्रुत्यादिकं विवक्षितम् । आनन्दप्रचुर इति यद्युच्यत इति ।। प्राचुर्यस्य विशेषणतायामनानन्दाप्राप्तेः 'परैरप्यङ्गीकृतत्वात्' 'प्रचुरानन्दत्वात्' इति वदता भाष्यकृता यथा 'प्रचुरानन्दः' इत्युक्तावनानन्दाप्राप्तिः, तथा श्रुतिसूत्रानुसारेण 'आनन्दमयः' इति प्राचुर्यस्य विशेष्यत्वेनोक्तावपि तदप्राप्तिः, 'प्रकाशप्रचुरो रविः' इत्युक्तेऽपि सवितर्यन्धकारलेशा प्रतीतेरिति सूचितमित्यर्थः । ''ननु विस्मृतकण्ठमणिः'' इति सिद्धान्तग्रन्थे 'ननु' इत्यस्य 'इत्येवोच्यते ननु' इत्यन्वयः । विमतानि शरीराणीति ।। शरीरत्वहेतोः जीवानामन्योन्यमभेद-साधकत्वेऽपि विशिष्टरूपस्याभेदायोगेन शुद्धस्य शुद्धेनाभेदे वक्तव्ये शुद्धस्यैव ब्रह्मत्वात् ब्रह्माभेदोऽपि सेत्स्यतीति भावः ।।

।। इति श्रीब्रह्मण्यतीर्थपूज्यश्रीपादशिष्यव्यासतीर्थविरचिता
तात्पर्यचन्द्रिकायाम् आनन्दमयाधिकरणं सम्पूर्णम् ।।६।।

ಅನುವಾದ - ಟೀಕೆಯಲ್ಲಿ ಕೆಲವು ಕಠಿಣಪದಗಳ ಅರ್ಥವು ಹೀಗಿದೆ - ''ಶ್ರುತ್ಯಧಿಕರಣಸಂಗತೀ ದರ್ಶಯತಿ'' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ತೋರಿಸಬೇಕಾಗಿಲ್ಲ. ಯಾವುದೇ ಅಧಿಕರಣದಿಂದಲೂ ಸಂಗತಿಯನ್ನು ತೋರಿಸಬಹುದು ಎಂಬ ಅಭಿಪ್ರಾಯದಿಂದ ಪ್ರಥಮಸೂತ್ರದ ''ತದ್ವಿಜಿಜ್ಞಾಸಸ್ವ ತದ್ಬ್ರಹ್ಮ'' ಎಂಬ ವಿಷಯವಾಕ್ಯದಿಂದ ಆನಂದಮಯಾಧಿಕರಣಕ್ಕೆ ನೇರವಾಗಿ ಆಕ್ಷೇಪಿಕೀಸಂಗತಿಯನ್ನು

ಹೇಳಬಹುದೆಂದು ಟೀಕೆಗೆ ಅರ್ಥ. ಅಥವಾ ಈ ಆನಂದಮಯಾಧಿಕರಣದ ಪೂರ್ವಪಕ್ಷದಲ್ಲಿ ಜಿಜ್ಞಾಸಾಸೂತ್ರದ ವಿಷಯವಾಕ್ಯದಲ್ಲಿ ಹೇಳಿರುವ ಜಿಜ್ಞಾಸೆಯನ್ನು ಆಕ್ಷೇಪಿಸಲಾಗಿದೆ. ಸಿದ್ಧಾಂತದಲ್ಲಿ ಈ ಆಕ್ಷೇಪವನ್ನು ಸಮಾಧಾನ ಮಾಡಿದ್ದರಿಂದ ಜಿಜ್ಞಾಸಾಧಿಕರಣದಿಂದ ಸಂಗತಿಯನ್ನು ತಿಳಿಯಬೇಕು. ಇದರಿಂದ ಈ ಅಧಿಕರಣದ ಪೂರ್ವಪಕ್ಷ ಮತ್ತು ಸಿದ್ಧಾಂತವು ಪ್ರಯೋಜನವುಳ್ಳದ್ದಾಗಿವೆ. ಆದ್ದರಿಂದ ಸಂಗತಿ ತೋರಿಸುವುದರಲ್ಲಿ ತಾತ್ಪರ್ಯವಿಲ್ಲ. ಪ್ರಯೋಜನ ತೋರಿಸುವುದರಲ್ಲಷ್ಟೇ ತಾತ್ಪರ್ಯವೆಂದು ತಿಳಿಯಬಹುದು. ಪ್ರಯೋಜನ ಹೇಳುವುದರಲ್ಲಿಯೇ ತಾತ್ಪರ್ಯವಿರುವುದರಿಂದ ಮುಂದಿನ ಟೀಕೆಯು ''ಕಿಮರ್ಥಮಾನಂದಮಯಸ್ಯ ವಿಷ್ಣುತ್ವಸಮರ್ಥನಮ್?'' (ಆನಂದಮಯನಿಗೆ ವಿಷ್ಣುತ್ವ-ವನ್ನು ಏಕೆ ಸಮರ್ಥಿಸಬೇಕು?) ಎಂದು ಪ್ರಶ್ನಿಸಿ ಬ್ರಹ್ಮಜಿಜ್ಞಾಸಾಸಿದ್ಧ್ಯರ್ಥಂ (ಬ್ರಹ್ಮಜಿಜ್ಞಾಸೆಯ ಸಿದ್ಧಿಗಾಗಿ) ಎಂದು ಉತ್ತರಿಸಿದೆ. ಹೀಗೆ ಜಿಜ್ಞಾಸಾಧಿಕರಣದಿಂದ ಪ್ರಯೋಜನವನ್ನಷ್ಟೇ ಈ ಅಧಿಕರಣದಲ್ಲಿ ತೋರಿಸಿದ್ದಾರೆ. ಹೊರತು ಸಂಗತಿ ತೋರುವುದರಲ್ಲಿ ಅಭಿಪ್ರಾಯವಿಲ್ಲ. ಅವ್ಯವಹಿತ-ವಾದ ಈಕ್ಷತ್ಯಧಿಕರಣದಲ್ಲಿರುವ ಸಂಗತಿ ತೊರಿಸುವುದೇ ಹೆಚ್ಚು ಸ್ವರಸ ಇದರಂತೆ ಮುಂದಿನ ಅಧಿಕರಣಗಳ ಸಂಗತಿ ಟೀಕೆಯನ್ನು ಎರಡು ಪ್ರಕಾರದಲ್ಲಿ ವ್ಯಾಖ್ಯಾನಿಸಬೇಕು.

''ತಸ್ಮಾದ್‌ಉದ್‌ಭೂತ'' ಎಂಬ ಟೀಕೆಗೆ ಹೀಗೆ ಅರ್ಥ. ಶರೀರಿಸ್ಥಾನದಲ್ಲಿ ಒಳಗಡೆ ನಾರಾಯಣ-ನಿದ್ದಾನೆ. ಈ ನಾರಾಯಣನೇ ಆನಂದಮಯನು ಈ ಆನಂದಮಯನ ಶರೀರಸ್ಥಾನದಲ್ಲಿರುವ ಬಾಹ್ಯವಾದ ಭಗವಂತನರೂಪ ವಾಸುದೇವ ಇವನೇ ವಿಜ್ಞಾನಮಯನು. ಒಳಗಿನ ರೂಪವಾದ ನಾರಾಯಣನೆಂಬ ಆನಂದಮಯನಿಂದ ಹೊರಗಿನ ರೂಪವಾದ ಬಾಹ್ಯರೂಪವಾದ ವಾಸುದೇವನೆಂಬ ರೂಪವು ಪ್ರಾದುರ್ಭೂತವಾಗಿದೆ ಎಂದು ಟೀಕೆಗೆ ಅರ್ಥ.

'''ಇಂದ್ರಬೃಹಸ್ಪತ್ಯಾದೀನಾಮಪಿ ಸೂರ್ಯಾಧಿಷ್ಠಾತೃತ್ವಾದಿನೇತಿ'' (ಇಂದ್ರಬೃಹಸ್ಪತ್ಯಾದಿಗಳೂ ಸಹ ಸೂರ್ಯನಿಗೆ ಅಧಿಷ್ಠಾನರಾಗಿದ್ದಾರೆ. ಇದು ಟೀಕೆಯ ಮಾತು. ಇದರ ಅರ್ಥ ಹೀಗಿದೆ - ಇಂದ್ರಬೃಹಸ್ಪಾತ್ಯಾದಿಗಳು ಸೂರ್ಯನಿಗಿಂತ ಉತ್ತಮರಾಗಿದ್ದಾರೆ. ಸೂರ್ಯನಿಗೆ ನಿಯಾಮಕರಾಗಿದ್ದಾರೆ. ಆದ್ದರಿಂದ ಸೂರ್ಯನಿಗೆ ಅಧಿಷ್ಠಾನರಾಗಿದ್ದಾರೆ. ಟೀಕೆಯಲ್ಲಿರುವ ಆದಿಶಬ್ದದಿಂದ ''ಸ ಏಕ ಇಂದ್ರಸ್ಯಾನಂದಃ ಸ ಏಕೋ ಬೃಹಸ್ಪತೇರಾನಂದಃ'' ಎಂಬ ಇಂದ್ರಶ್ರುತ್ಯಾದಿಗಳನ್ನೂ ಸಹ ವಿವಕ್ಷಿಸಬೇಕು. ಈ ಶ್ರುತಿಯಲ್ಲಿ ಇಂದ್ರಾದಿಗಳಲ್ಲಿ ಆನಂದಶಬ್ದವನ್ನು ಪ್ರಯೋಗಿಸಿದ್ದರಿಂದ ಇಂದ್ರಾದಿಗಳೂ ಸಹ ಆನಂದಮಯರಾಗುತ್ತಾರೆ.

''ಆನಂದಪ್ರಚುರಃ ಇತಿ ಯದ್ಯುಚ್ಯತೇ'' (ಆನಂದಪ್ರಚುರನೆಂದು ಹೇಳುವುದಾದರೆ ಎಂಬ ಟೀಕೆಗೆ ಹೀಗೆ ಅರ್ಥ. ಪ್ರಾಚುರ್ಯವು ವಿಶೇಷಣವಾದರೆ ದುಃಖವು ಪ್ರಾಪ್ತವಾಗುವುದಿಲ್ಲವೆಂದು ಅದ್ವೈತಿಗಳು ಅಂಗೀಕರಿಸಿದ್ದಾರೆ. ಆದ್ದರಿಂದ ''ಪ್ರಚುರಾನಂದತ್ವಾತ್'' ಎಂದು ಹೇಳುವ ಭಾಷ್ಯಕಾರರಿಂದ 'ಪ್ರಚುರಾನಂದಃ' ಎಂದಾಗ ದುಃಖವು ಹೇಗೆ ಪ್ರಾಪ್ತವಾಗುವುದಿಲ್ಲವೋ ಅದರಂತೆ

ಶ್ರುತಿಸೂತ್ರಗಳಿಗೆ ಅನುಸಾರಿಯಾಗಿ 'ಆನಂದಮಯಃ' ಎಂದು ಪ್ರಾಚುರ್ಯವನ್ನು ವಿಶೇಷ್ಯವನ್ನಾಗಿ ಹೇಳಿದರೂ ದುಃಖವು ಪ್ರಾಪ್ತವಾಗುವುದಿಲ್ಲ. ''ಪ್ರಚುರಪ್ರಕಾಶಃ ರವಿಃ'' ಎಂದು ಹೇಳಿದಾಗ ಸೂರ್ಯನಲ್ಲಿ ಅಂಧಕಾರಲೇಶದ ಪ್ರತೀತಿಯು ಹೇಗೆ ಬರುವುದಿಲ್ಲವೋ ಅದರಂತೆ ''ಪ್ರಕಾಶಪ್ರಚುರಃ ರವಿಃ'' ಎಂದು ಹೇಳಿದಾಗಲೂ ಅಂಧಕಾರಲೇಶದ ಪ್ರತೀತಿಯು ಬರುವುದಿಲ್ಲ.

''ನನು ವಿಸ್ಮೃತಕಂಠಮಣಿರಿತಿ'' ಎಂಬ ಸಿದ್ಧಾಂತದ ಟೀಕೆಯಲ್ಲಿ 'ನನು' ಎಂಬ ಪದಕ್ಕೆ ಆಕ್ಷೇಪ ಎಂಬರ್ಥವನ್ನು ''ಇತ್ಯೇವ ಉಚ್ಯತೇ ನನು'' ಹೀಗೆಯೇ ಹೇಳಬೇಕಲ್ಲವೇ ! ಎಂದು ನಿಶ್ಚಯಾರ್ಥವನ್ನು ಹೇಳಬೇಕು.

''ವಿಮತಾನಿ ಶರೀರಾಣೀತಿ''(ವಿಮತವಾದ ಶರೀರಗಳು ಎಂಬ ಟೀಕೆಗೆ ಹೀಗರ್ಥ - ''ಶರೀರತ್ವ ಹೇತೋರ್ಜೀವಾನಾಮನ್ಯೋನ್ಯಮಭೇದಸಾಧಕತ್ವೇಪಿ'' ಶರೀರತ್ವದಿಂದ ಜೀವರಿಗೆ ಪರಸ್ಪರವಾದ ಅಭೇದವು ಅರ್ಥವಾಗುತ್ತವೆ. ಆದರೆ ಬ್ರಹ್ಮನಿಗೂ ಮತ್ತು ಜೀವರಿಗೂ ಅಭೇದವು ಸಿದ್ಧವಾಗುವುದಿಲ್ಲ ಎಂಬ ಸಂಶಯ ಬರುತ್ತದೆ. ಆದರೆ ಶುದ್ಧಬ್ರಹ್ಮನಿಂದ ಶುದ್ಧಬ್ರಹ್ಮನಿಗೆ ಅಭೇದವನ್ನು ಹೇಳಿದಾಗ ಶುದ್ಧನೇ ಬ್ರಹ್ಮನಾಗಿದ್ದರಿಂದ ಬ್ರಹ್ಮಾಭೇದವೂ ಕೂಡ ಸಿದ್ಧವಾಗುತ್ತದೆಂದು ಅಭಿಪ್ರಾಯ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಆನಂದಮಯಾಧಿಕರಣವು ಸಂಪೂರ್ಣವಾಯಿತು.

* * * *

**प्रकाशः** – ''विप्रकीर्णनानाशाखा'' इति प्रागुक्तमनुरुध्य व्याचष्टे – **येन केनचिदिति** ।। ''चिन्ताफलमात्रमुक्तम्'' इत्युक्तिमनुरुद्ध्याह – **यद्वेति** ।। नन्वेवं पूर्वोक्तदिशा ''गौणश्चेत्'' इत्यादिसूत्रचतुष्टयोक्ताक्षेपसमाधानाभ्यामप्यस्य फलवत्त्वसम्भवे न व्यवहितेन फलवत्त्वोक्तिरर्थवती, अनन्तरसङ्गतिश्च स्वरसा भवतीति, भाष्ये जिज्ञासाधिकरणेन तदुक्तिर्न स्वरसेति चेन्न, अव्यवहिताक्षेपस्यापि जिज्ञासाक्षेपं विना अपर्यवसानेन तदाक्षेपपर्यन्तत्वात्, साक्षात्तदाक्षेपसम्भवे गौणसूत्राद्याक्षेपद्वारा तदाक्षेपस्य वक्रत्वादिति भावः । विषयवाक्यार्थोक्त्यवसरे ''तस्य पुरुषविधताम् । अन्वयं पुरुषविधः'' इत्यस्य अस्यानन्दमयस्य पुरुषाकारतानुसारेणायं विज्ञानमयः पुरुषाकारः तस्मादुद्भूत इत्यर्थ उक्तः । तत्र कोशात्कोशस्योद्भव इति भ्रान्तिं वारयन्,

देहदेहिवदेवासौ पञ्चधाऽवस्थितो हरिः ।

**बहिस्स्थो देहवद्विष्णुरन्तस्स्थो देहिवत्स्मृतः ।**
**अन्तर्व्याप्तिविशेषेण न त्वशक्तत्वतो बहिः ।**
**सर्वेऽपि पुरुषाकार उत्तरात्पूर्वसंभवः ।**

इति तैत्तिरीयभाष्यानुरोधेनार्थमाह – **तस्मादुद्भूत इतीति** ।। 'तदान्तरात्' तदन्तर्विद्यमानात् । सूर्याधिष्ठातृत्वद्वस्योपनिषद्यनुक्तत्वाद्दुर्गमं तद्वाक्यं व्याचष्टे – **इन्द्रेति** ।। "आनन्दप्रचुर इति यद्युच्यते तदा 'ब्राह्मणप्रचुरो ग्रामः' इत्यादिवदनानन्दस्यापि प्राप्तेः 'प्रचुरानन्दः' इति विपरीतसमासः कृतः" इति टीका न युक्ता, 'यत्तु प्राचुर्यस्य विशेषणत्वे" इत्यादिना तस्य दूषितत्वादित्यतस्तां विवृणोति – **आनन्दप्रचुर इतीति** ।। शङ्कालिङ्गस्य 'ननु' इत्यस्य परिहारवाक्ये अन्वयं घटयति – **ननु विस्मृतेति** ।। ननु शरीरत्वानुमानेन प्रतिशरीरं जीवाभेदस्य सिद्धिः, न तु जीवानां ब्रह्माभेदस्य । अतः प्रागुक्तमात्मत्वानुमानमेव प्रयोज्यमित्यतः, सुधोक्तमेवोत्तरमाह – **विमतानीति** ।। शिष्टमुपन्यासमुखेन विवृतमिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे आनन्दमयाधिकरणं सम्पूर्णम् ।।६।।**

**गुरुराजीयम्** – ननु श्रुत्यधिकरणसङ्गती दर्शयतीति टीकायामुक्तम् । तदयुक्तम् । भाष्येऽव्यवहितपूर्वाधिकरणविषयवाक्याभ्यां श्रुत्यधिकरणसङ्गत्योरप्रदर्शनादित्यत आह – **येनकेनचिदिति** ।। अव्यवहिताधिकरणसङ्गतिःस्फुटत्वाच्छिष्यैरेवोह्या । जिज्ञासा कर्तव्येति भाष्यं तु चिन्ताफलमात्रप्रदर्शकमिति यत्पूर्वमुक्तं तदनुरोधेन टीकाग्रन्थं योजयति – **यद्वेति** ।। प्रयोजनवानेवायं विचार इति ।। तथा च भाष्यं प्रयोजनमात्रपरं न सङ्गतिपरमिति भावः ।। **एवमुत्तरत्रेति** ।। यत्र व्यवहिताधिकरणेन सङ्गतिरुक्ताऽस्ति तत्रेत्यर्थः । नन्वयं पुरुष इत्येतट्टीकायां तस्मादुद्भूत इति व्याख्यातम् । तदनुपपन्नम् । आनन्दमयविज्ञानमययोर्द्वयोरपि ब्रह्मत्वेनोत्पादकोत्पाद्यभावायोगात् । किञ्च विज्ञानमयादानन्दमयस्यैवोत्पत्तिः किं न स्यात् । नियामकाभावादित्यत आह – **शरीरीति** ।। तथा चोद्भूतशब्दस्य प्रादुर्भावार्थत्वान्नोत्पाद्योत्पादकभावः । तस्मादुद्भूत इत्येतत्तस्य पुरुषविधतामित्यस्य तात्पर्यकथनपरमिति ज्ञातव्यम् । इन्द्रबृहस्पत्यादीति टीकायामिन्द्रादेः सूर्याधि-

**षातृत्वमुक्तम् । तदनुपपन्नं प्रमाणा-भावादित्यत आह – तेषामिति ।। इन्द्रश्रुत्यादिकं विवक्षितमिति । ते ये शतमिन्द्रस्यानन्दा इत्यादिशतानन्दसामानाधिकरण्येनेन्द्रादि-श्रुतेः श्रवणाच्छतानन्दानन्दमयशब्दयोरेकार्थत्वात्तेषां प्राप्तिरिति ज्ञेयम् । सुधाविरोध परिहारायोक्तानुपपत्तिपरिहाराय च व्याचष्टे ।। आनन्दप्रचुर इतीति ।। आनन्दप्रचुर इत्यत्र परैरङ्गीकृतत्वादिति शेषं प्रचुरानन्द इत्यभिधाने चेत्यत्र इवेति शेषं तथाऽनन्दप्रचुर इति शेषं च प्रपूर्य व्याचष्टे – प्राचुर्यस्येत्यादि ।। अनेनानन्दप्रचुर इति यथाऽभिधाने ब्राह्मणप्रचुरो ग्राम इत्यादिवदनानन्दस्यापि प्राप्तेः परैः शङ्कितत्वात् तथा प्रचुरानन्द इत्यभिधाने च पूर्णानन्द इत्येव प्रतीतेश्च परैरङ्गीकृतत्वाद्विपरीतसमासः कृतः । कथं प्रचुरानन्द इत्युक्तिवदानन्दप्रचुर इत्युक्तावपि पूर्णानन्द इत्येव प्रतीतेः । अन्यथा प्रकाशप्रचुरो रविरित्यत्रा-प्यंन्धकारलेशप्रतीत्यापत्तेः परोक्तं नेत्येवं टीका योजितेति द्रष्टव्यम् । ननु विस्मृतेत्यादेः शङ्काग्रन्थत्वनिरासायाह – नन्वित्यादि ।। ननु शरीरत्वेनाभेदसाधन-मयुक्तम् । तेन जीवानामन्योन्यमभेदसिद्धावपि शुद्धब्रह्मभेदासिद्धेरित्यत आह – शरीरत्वेति ।।**

**।। इति श्रीकेशवभट्टारकेण विरचितायां भावदीपिकायाम्**
**आनन्दमयाधिकरणं सम्पूर्णम् ।।**

ವಿವರಣೆ - ಭಿನ್ನ ಭಿನ್ನವಾದ ಅನೇಕಶಾಖೆಗಳಲ್ಲಿರುವ ವಿಷಯವಾಕ್ಯವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗುತ್ತದೆ. ಇದನ್ನು ಗ್ರಂಥಕಾರರು ಮೊದಲೇ ಹೇಳಿದ್ದರು. ಅದನ್ನು ಅನುಸರಿಸಿ "ಯೇನ ಕೇನಚಿತ್" ಎಂಬ ಮಾತಿನಿಂದ ಗ್ರಂಥಕಾರರು ಈ ಹಿಂದೆ ಜಿಜ್ಞಾಸಾಧಿಕರಣದಿಂದ ಆನಂದಮಯಾಧಿಕರಣಕ್ಕೆ ಪ್ರಯೋಜವನ್ನಷ್ಟೇ ಹೇಳಿದ್ದರು. ಸಂಗತಿಯನ್ನು ಹೇಳಿರಲಿಲ್ಲ. ಅದನ್ನು ಅನುಸರಿಸಿ 'ಯದ್ವಾ' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

ಆಕ್ಷೇಪ - ಹಿಂದಿನ ಅಧಿಕರಣದಲ್ಲಿರುವ "ಗೌಣಶ್ಚೇನ್ನಾತ್ಮಶಬ್ದಾತ್" ಇತ್ಯಾದಿ ನಾಲ್ಕು ಸೂತ್ರಗಳ ಆಕ್ಷೇಪ ಸಮಾಧಾನಗಳಿಂದಲೇ ಈ ಆನಂದಮಯಾಧಿಕರಣಕ್ಕೆ ಪ್ರಯೋಜನವನ್ನು ಹೇಳಬಹುದು. ವ್ಯವಹಿತವಾದ ಜಿಜ್ಞಾಸಾಧಿಕರಣದಿಂದ ಪ್ರಯೋಜನವನ್ನು ಹೇಳುವುದರಲ್ಲಿ ಅರ್ಥವಿಲ್ಲ. ಹಿಂದಿನ ಅಧಿಕರಣದಲ್ಲಿರುವ ಸೂತ್ರಗಳಿಂದ ಪ್ರಯೋಜನ ತೋರಿಸಿದಾಗ ಅನಂತರಸಂಗತಿಯನ್ನು ತಿಳಿಯುವುದು ಸುಲಭವಾಗುತ್ತದೆ. ಹಾಗಾಗಿ ಭಾಷ್ಯದಲ್ಲಿ ಜಿಜ್ಞಾಸಾಧಿಕರಣದಿಂದ ತೋರಿಸಿರುವ ಪ್ರಯೋಜನವು ಅಸ್ವರಸವಲ್ಲವೇ?

ಸಮಾಧಾನ - ಅವ್ಯವಹಿತವಾದ ಹಿಂದಿನ ಅಧಿಕರಣದಿಂದ ಮಾಡಿಕೊಂಡ ಆಕ್ಷೇಪವು ಜಿಜ್ಞಾಸಾಧಿಕರಣದ ಆಕ್ಷೇಪವಿಲ್ಲದೆ ಪರ್ಯವಸಾನವಾಗದು. ಆಕ್ಷೇಪದ ಪರ್ಯವಸಾನಕ್ಕೆ ಜಿಜ್ಞಾಸೆಯ

ಆಕ್ಷೇಪವು ಅನಿವಾರ್ಯ. ಆದಕ್ಕೋಸ್ಕರ ನೇರವಾಗಿ ಜಿಜ್ಞಾಸೆಯನ್ನು ಆಕ್ಷೇಪಿಸಿದ್ದು ಸುಲಭ, ಮತ್ತು ನೇರ ಮಾರ್ಗ. ಗೌಣಾದಿ ಸೂತ್ರಗಳಿಂದ ಆಕ್ಷೇಪ ಮಾಡಿಕೊಂಡು ಪುನಃ ಜಿಜ್ಞಾಸೆಯನ್ನು ಆಕ್ಷೇಪಿಸುವುದು ವಕ್ರಮಾರ್ಗ.ಆದ್ದರಿಂದ ಪ್ರಕೃತ ಗ್ರಂಥಕಾರರು ಜಿಜ್ಞಾಸಾಧಿಕರಣದಿಂದ ಪ್ರಯೋಜನ ತೋರಿಸಿದ್ದು ಸಾಧುವಾಗಿದೆ.

ವಿಷಯವಾಕ್ಯದ ಅರ್ಥವನ್ನು ಹೇಳುವಾಗ ಟೀಕೆಯಲ್ಲಿ ಹೀಗೆ ಹೇಳಿದ್ದಾರೆ - ''ತಸ್ಯ ಪುರುಷವಿಧತಾಮ್. ಅನ್ವಯಂ ಪುರುಷವಿಧಃ'' ಎಂಬ ಮಾತಿಗೆ ಪುರುಷನ ರೂಪವುಳ್ಳ ಆನಂದಮಯನಿಂದ ಪುರುಷನ ರೂಪವುಳ್ಳ ವಿಜ್ಞಾನಮಯನು ಹುಟ್ಟಿದ್ದಾನೆಂದು. ಈ ಅರ್ಥವನ್ನು ನೋಡಿದಾಗ ಆನಂದಮಯಕೋಶದಿಂದ ವಿಜ್ಞಾನಮಯಕೋಶವು ಹುಟ್ಟಿತೆಂಬ ಭ್ರಾಂತಿ ಬರುತ್ತದೆ. ಇದನ್ನು ಈ ವಾಕ್ಯದಿಂದ ನಿರಾಕರಿಸಿದ್ದಾರೆ. ತೈತ್ತಿರೀಯಾಭಾಷ್ಯದಲ್ಲಿ ಅನುಗುಣವಾದ ಅರ್ಥವನ್ನು ''ತಸ್ಮಾದ್ ಉದ್‌ಭೂತ'' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ.

ದೇಹದೇಹಿವದೇವಾಸೌ ಪಂಚಧಾಽವಸ್ಥಿತೋ ಹರಿಃ।
ಬಹಿಸ್ಥೋ ದೇಹವದ್ವಿಷ್ಣುರಂತಸ್ಥೋ ದೇಹಿವತ್ಸ್ಮೃತಃ।
ಅಂತರ್ವ್ಯಾಪ್ತಿವಿಶೇಷೇಣ ನತ್ವಶಕ್ತತ್ವತೋ ಬಹಿಃ।
ಸರ್ವೇಽಪಿ ಪುರುಷಾಕಾರ ಉತ್ತರಾತ್ಪೂರ್ವಸಂಭವಃ॥

ಹೀಗೆ ತೈತ್ತೀರೀಯಭಾಷ್ಯಕ್ಕೆ ಅನುಸಾರವಾಗಿ ಅರ್ಥವನ್ನು ವಿವರಿಸುತ್ತಾರೆ. ''ತದಂತರಾತ್'' ಎಂಬ ಮಾತಿಗೆ ''ಒಳಗಡೆ ಇರುವುದರಿಂದ'' ಎಂಬರ್ಥವನ್ನು ಹೇಳಲಾಗದು. ಉಪನಿಷತ್ತಿನಲ್ಲಿ ಈ ಅರ್ಥವು ಹೇಳದ ಕಾರಣ ದುರ್ಗಮವಾಗಿದೆ ಎಂಬ ಸಂಶಯಕ್ಕೆ ಇಂದ್ರ ಬೃಹಸ್ಪತಿ ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

''ಆನಂದಪ್ರಚುರ ಇತಿ ಯದ್ಯುಚ್ಯತೇ ತದಾ ಬ್ರಾಹ್ಮಣಪ್ರಚುರೋ ಗ್ರಾಮ ಇತ್ಯಾದಿವದನಾಂದಸ್ಯಾಪಿ ಪ್ರಾಪ್ತೇಃ ಪ್ರಚುರಾನಂದ ಇತಿ ವಿಪರೀತಸಮಾಸಃ ಕೃತಃ'' (ಆನಂದಮಯಶಬ್ದಕ್ಕೆ ''ಆನಂದಪ್ರಚುರ'' ಎಂಬರ್ಥ ಹೇಳಿದರೆ ''ಬ್ರಾಹ್ಮಣಪ್ರಚುರಃ ಗ್ರಾಮಃ'' ಎಂಬಂತೆ ದುಃಖವು ಪ್ರಾಪ್ತವಾಗುತ್ತದೆ. ಆದಕ್ಕೋಸ್ಕರ ''ಪ್ರಚುರಾನಂದಃ'' ಎಂದು ವಿಪರೀತಸಮಾಸವನ್ನು ಮಾಡಬೇಕು.) ಈ ಟೀಕೆಯು ಅಯುಕ್ತವಾಗುತ್ತದೆ. ಮತ್ತು ''ಯತ್ತು ಪ್ರಾಚುರ್ಯಾತ್ ವಿಶೇಷಣತ್ವೇ'' ಎಂಬ ವಾಕ್ಯದಿಂದಲೂ ಇದನ್ನು ದೂಷಿಸಿದ್ದಾರೆಂಬ ಆಕ್ಷೇಪವನ್ನು ಪರಿಹರಿಸುತ್ತಾ ಟೀಕೆಯ ಮಾತುಗಳಿಗೆ ''ಆನಂದಪ್ರಚುರಃ'' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

''ನನು'' ಎಂಬುದು ಎಲ್ಲೆಡೆ ಆಕ್ಷೇಪಸೂಚಕವಾಗಿರುತ್ತದೆ. ಆದರೆ ''ನನು ವಿಸ್ಮೃತ'' ಇತ್ಯಾದಿ ಟೀಕೆಯಲ್ಲಿ ಆಕ್ಷೇಪ ಸೂಚಕವಾಗಿಲ್ಲ. ಪರಿಹಾರವಾಕ್ಯದಲ್ಲಿ 'ನನು' ಎಂಬ ಪದಕ್ಕೆ ಅನ್ವಯವನ್ನು ತಿಳಿಯಬೇಕೆಂದು ''ನನು ವಿಸ್ಮೃತ'' ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ.

ಶರೀರತ್ವಾನುಮಾನದಿಂದ ಜೀವರಿಗೆ ಪರಸ್ಪರ ಅಭೇದವು ಸಿದ್ಧವಾಗುತ್ತದೆ. ಹೊರತು ಬ್ರಹ್ಮನಿಗೂ ಜೀವರಿಗೂ ಅಭೇದವು ಸಿದ್ಧವಾಗುವುದಿಲ್ಲ. ಆದ್ದರಿಂದ ಹಿಂದೆ ಹೇಳಿದ ಆತ್ಮತ್ವಾನುಮಾನವೇ ಪ್ರಯೋಜ್ಯವಾಗಿದೆ

ಎಂಬ ಆಕ್ಷೇಪಕ್ಕೆ ಸುಧೆಯಲ್ಲಿ ಹೇಳಿದ ಉತ್ತರವನ್ನೇ "ವಿಮತಾನಿ" ಇತ್ಯಾದಿ ಗ್ರಂಥದಿಂದ ಸ್ಪಷ್ಟಪಡಿಸುತ್ತಿದ್ದಾರೆ. ಟೀಕೆಯಲ್ಲಿ ಕಠಿಣಪದಗಳು ಇಷ್ಟೇ ಅಲ್ಲ ಇನ್ನೂ ಬಹಳಷ್ಟು ಇವೆ. ಅವುಗಳ ಅರ್ಥವನ್ನು ಗ್ರಂಥಕಾರರು ಈ ಹಿಂದೆ ಉಪನ್ಯಾಸಮುಖದಲ್ಲೇ ವಿವರಿಸಿರುತ್ತಾರೆ. ಶಿಷ್ಯರು ಅದನ್ನು ಗಮನಿಸಬೇಕು.

**ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಆನಂದಮಯಾಧಿಕರಣವು ಮುಕ್ತಾಯವಾಯಿತು.**

* * * * * * *




ಆನಂದಮಯಾಧಿಕರಣದ ಭಾಷ್ಯ ಟೀಕೆಗೆ ಎರಡು ಆಯಾಮಗಳಿವೆ. ಆನಂದಮಯ ಬ್ರಹ್ಮ ಆಗದೇ ಹೋದರೆ ವಿಚಾರವೇ ಅಸಂಗತ. ಆನಂದಮಯಬ್ರಹ್ಮ ಆದರೆ ಬ್ರಹ್ಮ ಯಾರು? ನಾರಾಯಣನೋ? ಸೂರ್ಯನಿಗಿಂತ ಎತ್ತರದ ಸ್ತರದಲ್ಲಿರುವ ಬೇರೆಲ್ಲ ದೇವತೆಗಳೋ? ಎಂಬ ಪ್ರಶ್ನೆಗೆ ಭಾಷ್ಯದ ಉತ್ತರವನ್ನು ನಿರೂಪಿಸುವುದೇ ಆಗಿದೆ.

ಮಯಟ್ ಶಬ್ದಕ್ಕೆ ಬಹಳ ಎಂದರ್ಥವಾದರೆ ಆನಂದಮಯನೆಂದರೆ ಬಹಳ ಆನಂದವುಳ್ಳವ ಎಂದಾಗುತ್ತದೆ. ಸ್ವಲ್ಪ ದುಃಖವಿರುತ್ತದೆ ಎಂದು ತಾನೆ? ಎಂಬ ಪ್ರಶ್ನೆಗೆ ಉತ್ತರ. 'ಪ್ರಚುರಪ್ರಕಾಶೋ ರವಿಃ' ಎಂಬುದಾಗಿದೆ. ಸೂರ್ಯನಲ್ಲಿ ಸ್ವಲ್ಪವೂ ಕತ್ತಲಿಲ್ಲದಿರುವುದಾದರೂ, ಬೆಳಕೇ ಸೂರ್ಯನಾದರೂ, ಬೆಳಕಿನ ಮೊತ್ತವೇ ಸೂರ್ಯ ಎಂದಂತೆ. ದುಃಖವಿಲ್ಲದಿದ್ದರೂ, ಜ್ಞಾನಕ್ಕಾಗಿ 'ಆನಂದಮಯ' ಎಂಬುದು ಸಂಗತ.

* * * *

॥ ಇತಿ ಶಮ್ ॥

# ಆನಂದಮಯಾಧಿಕರಣ

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣಪಂಚಿಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿಃ,
ಸೂತ್ರಾರ್ಥರತ್ನಾವಳಿಃ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## आनन्दमयाधिकरणम्

**न्यायविवरणम् – न चाऽवयवत्वविरोधः ''नेह नानाऽस्ति किञ्चन'' इति श्रुतेरवयवाद्यभेदात् ॥६॥**

'ಬ್ರಹ್ಮನೇ ಆನಂದಮಯ ಎಂದಾದರೆ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂದು ಆನಂದಮಯನ ಅವಯವ ಬ್ರಹ್ಮ ಎಂದು ಹೇಳಿದ ಅವಯವತ್ವವಿರೋಧ ಬರುತ್ತದಲ್ಲವೇ? ಎಂದರೆ ''ನೇಹ ನಾನಾಸ್ತಿ ಕಿಂಚನ'' ಎಂದು ಶ್ರುತಿ ಇರುವುದರಿಂದ ಬ್ರಹ್ಮನ ಅವಯವ - ಅವಯವಿ ಮುಂತಾದವುಗಳಿಗೆ ಅಭೇದವಿದೆ. ಆದ್ದರಿಂದ 'ಒಂದೇ ವಸ್ತು ತಾನೇ ಅವಯವ ತಾನೇ ಅವಯವಿ' ಎನ್ನಲು ಹೇಗೆ ಸಾಧ್ಯ? ಎಂಬ ವಿರೋಧಕ್ಕೆ ಅವಕಾಶವಿಲ್ಲ

न्यायविवरणटीका – ॐ आनन्दमयोऽभ्यासात् ॐ ॥ न चाऽवयवत्वेति ॥ ब्रह्मपुच्छमित्युक्तम्, ब्रह्म तावत्परमेश्वरः । ''असन्नेव स भवती''त्यादिना तदवगमात् । आनन्दमयोऽपि चेत्परमेश्वरःस्यात्तदा स्वयमेव स्वस्याऽवयव इत्युक्तं स्यात् । स्वस्य स्वाऽवयवत्वं च विरुद्धम् । यो यस्याऽवयवः, स तस्माद्भिद्यत इति तयोर्भिन्नयोरेव दर्शनात् ।

न च ब्रह्मणोऽन्याऽवयवत्वमयुक्तम् । कोशाद्यानन्दमयाऽश्रयो ब्रह्मेत्यर्थाङ्गीकारात् । एकस्याऽऽश्रयाऽऽश्रयिभावोऽपि विरुद्ध एवेति – नेहेति ॥ अवयवाद्यभेदादिति ॥ अवयवाऽवयविनोर्भेदाऽभावात् । अयमाशयः परमेश्वरे हि भेदं निराकुर्वन्ती श्रुतिः प्राप्तिमपेक्षते । प्राप्तिश्चाऽवयवाऽवयव्यादिभावेनैव । अन्यथा, निरवयवत्वाद्येव ब्रूयात् । तथा च, अवयवाऽवयव्यादिभावमङ्गीकृत्य, निराकुर्वन्ती तस्य विरोधमपि निराकरोतीति ॥६॥

ಅರ್ಥ - 'ಬ್ರಹ್ಮಪುಚ್ಛಂ' ಎಂದು ಹೇಳಿದೆ. ಅಲ್ಲಿ ಬ್ರಹ್ಮನೆಂದರೆ ಪರಮಾತ್ಮನೇ. 'ಅಸನ್ನೇವ ಸ ಭವತಿ' ಎಂಬ ವಾಕ್ಯದಿಂದ ಇದು ತಿಳಿಯುತ್ತದೆ. ಆನಂದಮಯನೂ ಪರಮಾತ್ಮನೇ ಎಂದು ಹೇಳುವುದಾದರೆ ತಾನೇ ತನ್ನ ಅವಯವ ಎಂದು ಹೇಳಿದಂತಾಗುತ್ತದೆ. ಆದರೆ 'ತಾನೇ ತನ್ನ ಅವಯವ' ಎನ್ನುವುದು ವಿರುದ್ಧ. 'ಯಾವುದು ಯಾವುದರ ಅವಯವವಾಗಿದೆಯೋ ಅದು ಅದಕ್ಕಿಂತ ಭಿನ್ನ' ಎಂದು ಅವಯವ ಅವಯವಿಗಳೆರಡೂ ಬೇರೆ ಬೇರೆಯಾಗಿಯೇ ಲೋಕದಲ್ಲಿ ಕಂಡಿದೆ.

ಬ್ರಹ್ಮನು (ಸ್ವಪ್ರಧಾನ) ಮತ್ತೊಂದಕ್ಕೆ ಅವಯವ (ಅಪ್ರಧಾನ) ಎನ್ನುವುದು ಕೂಡುವುದಿಲ್ಲ. ಏಕೆಂದರೆ. ಆನಂದಮಯಕೋಶ ಮುಂತಾದವುಗಳಿಗೆ ಬ್ರಹ್ಮನು ಆಶ್ರಯ ಎಂದು ಅಂಗೀಕಾರ ಮಾಡಿದ್ದೀರಿ. ಒಂದೇ ವಸ್ತುವಿಗೆ ಆಶ್ರಯಆಶ್ರಯಿಭಾವವು ವಿರುದ್ಧವಲ್ಲವೇ. ಇದಕ್ಕೆ ಉತ್ತರವಾಗಿ ''ನೇಹ'' ಎಂಬುದಾಗಿ ಹೇಳಿದ್ದಾರೆ. ಅವಯವಿ ಅವಯವಿಗಳಿಗೆ ಭೇದವಿಲ್ಲ.

ಇದು ಅಭಿಪ್ರಾಯ -- ಪರಮಾತ್ಮನಲ್ಲಿ ಭೇದವಿಲ್ಲವೆಂದು ಶ್ರುತಿ ನಿರಾಕರಿಸುತ್ತಿದೆ. ಹೀಗೆ ಶ್ರುತಿಯು ನಿರಾಕರಿಸಬೇಕಾದರೆ ಭೇದದ ಪ್ರಸಕ್ತಿ ಇರಬೇಕು. ಆ ಭೇದದ ಪ್ರಸಕ್ತಿಯು ಶ್ರುತಿಯು ಅವಯವಅವಯವಿಭಾವವನ್ನು ಬ್ರಹ್ಮನಿಗೆ ಹೇಳಿದ್ದರಿಂದಲೇ ತಿಳಿಯುತ್ತದೆ ಹೊರತು ಬೇರೆ ಯಾವ ಪ್ರಮಾಣದಿಂದಲ್ಲ. ಭೇದದ ಪ್ರಸಕ್ತಿ ಇಲ್ಲದಿದ್ದರೆ ಬ್ರಹ್ಮನನ್ನು ನಿರವಯವ ಎಂದೇ ಹೇಳಬೇಕಾಗಿತ್ತು. ಆದ್ದರಿಂದ ಅವಯವ ಅವಯವಿಭಾವವನ್ನು ಅಂಗೀಕರಿಸಿ ಭೇದದ ನಿರಾಕರಣೆಯನ್ನು ಮಾಡುತ್ತದೆ ಎಂದಾದರೆ ಅದಕ್ಕೆ ಬರುವ ವಿರೋಧವನ್ನೂ ಸಹ ನಿರಾಕರಿಸುತ್ತದೆ.

**ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣಟೀಕೆಯ ಕನ್ನಡಾನುವಾದದಲ್ಲಿ ಆನಂದಮಯಾಧಿಕರಣವು ಸಮಾಪ್ತವಾಯಿತು.**

* * * * *

श्रीमदानन्दतीर्थभगवत्पादाचार्यविरचितम्

# अणुभाष्यम्

## आनन्दमयाधिकरणम्

**अणुभाष्यम् – .....पूर्णानन्दः ....**

ವಿಷ್ಣುವು ಪೂರ್ಣಾನಂದನಾಗಿದ್ದಾನೆ.

श्री राघवेन्द्रतीर्थविरचिता

# तत्वमञ्जरी

## आनन्दमयाधिकरणम्

अथैतदध्यायाद्यर्थस्य भाष्ये स्फुटत्वादत्रापि तत्तत्पादान्ते कथनादादावनुक्तिः । यद्वा एतदध्यायाद्यर्थोक्तिपरतया 'प्रसिद्धैरन्यवस्तुषु उच्यते विष्णुरेवैकः सर्वैः सर्वगुणत्वतः' इत्येतत्पादान्तिमत्रिपादीमादावप्याकृष्य योज्यम् । तथाहि वैदिकाः शब्दास्तावद्विविधाः विष्णौ तदन्यत्रप्रसिद्धभेदात् । अन्यत्रप्रसिद्धापि अन्यत्र अन्यत्रापि अन्यत्रैवप्रसिद्ध भेदेन त्रिविधाः । ते त्रिविधा अपि अन्यवस्तुषु प्रसिद्धैरितिसामान्योक्त्या गृह्यन्ते । तथाचान्यवस्तुषु प्रसिद्धैः सर्वैस्त्रिविधैर्नामलिङ्गात्मकैः शब्दैरिति शेषः । एको विष्णुरेवोच्यते । प्राक्समन्वयादित्युक्तमेवात्राध्याये प्रपञ्चयतीत्यर्थः । विष्णौ प्रसिद्धा इत्यत्रापि तत्र, तत्रापि, तत्रैव इति त्रैविध्यसम्भवेऽपि तत्रापीत्युक्तानां अन्यत्रापीत्यनेन सङ्गृहीतत्वात्, तत्र तत्रैवेत्यवान्तरभेदस्य तेषामव्युत्पाद्यसमन्वयत्वेनाविवक्षितत्वादैकविध्यमिति ध्येयम् ।

ಈ ಅಧ್ಯಾಯಪ್ರತಿಪಾದ್ಯವಾದ ವಿಷಯ ಮತ್ತು ಪಾದಪ್ರತಿಪಾದ್ಯವಿಷಯಗಳು ಭಾಷ್ಯದಲ್ಲಿ ಸ್ಪಷ್ಟವಾಗಿರುವುದರಿಂದ ಮತ್ತು ಈ ಅಣುಭಾಷ್ಯದಲ್ಲಿಯೂ ಆಯಾ ಪಾದಗಳ ಕೊನೆಯಲ್ಲಿ ಹೇಳಿದ್ದರಿಂದ ಪ್ರಾರಂಭದಲ್ಲಿ ಹೇಳಿಲ್ಲ.

ಪರಿಪೂರ್ಣಚಂದ್ರಿಕಾ

ಅಥವಾ 'ಪ್ರಸಿದ್ಧೈರನ್ಯವಸ್ತುಷು ಉಚ್ಯತೇ ವಿಷ್ಣುರೇವೈಕಃ ಸರ್ವೈಃ ಸರ್ವಗುಣತ್ವತಃ' ಎನ್ನುವ ಈ ಪಾದದ ಕೊನೆಯಲ್ಲಿ ಬರುವ ಶ್ಲೋಕದ ಮೂರು ಪಾದಗಳನ್ನು ಮೊದಲಿಗೆ ಇಟ್ಟುಕೊಂಡು ಈ ಅಧ್ಯಾಯದ ಮತ್ತು ಪಾದಗಳ ಪ್ರತಿಪಾದ್ಯವಿಷಯಪರವಾಗಿ ವ್ಯಾಖ್ಯಾನಿಸಬೇಕು. ಹೇಗೆಂದರೆ --

ವೈದಿಕಶಬ್ದಗಳು ವಿಷ್ಣುವಿನಲ್ಲಿ ಪ್ರಸಿದ್ಧಶಬ್ದಗಳು ಮತ್ತು ವಿಷ್ಣುವನ್ನು ಬಿಟ್ಟು ಬೇರೆಕಡೆಯಲ್ಲಿ ಪ್ರಸಿದ್ಧಶಬ್ದಗಳು ಎಂದು ಎರಡು ರೀತಿಯಾಗಿವೆ. ಅನ್ಯತ್ರಪ್ರಸಿದ್ಧಶಬ್ದಗಳು, ಅನ್ಯತ್ರಾಪಿಪ್ರಸಿದ್ಧಶಬ್ದಗಳು, ಅನ್ಯತ್ರೈವಪ್ರಸಿದ್ಧಶಬ್ದಗಳು ಎಂದು ಮೂರು ವಿಧವಾಗಿವೆ. ಈ ಮೂರುವಿಧ ಶಬ್ದಗಳೂ ಕೂಡ 'ಅನ್ಯವಸ್ತುಷು ಪ್ರಸಿದ್ಧೈಃ' ಎಂದು ಸಾಮಾನ್ಯವಾಗಿ ಹೇಳಿದ ವಾಕ್ಯದಿಂದ ಹೇಳಲ್ಪಡುತ್ತವೆ. 'ಅನ್ಯವಸ್ತುಷು ಪ್ರಸಿದ್ಧೈಃ ಸರ್ವೈಃ' ಅನ್ಯವಸ್ತುಗಳಲ್ಲಿ ಪ್ರಸಿದ್ಧವಾದ ಮೂರುವಿಧಗಳಾದ ನಾಮಾತ್ಮಕ ಮತ್ತು ಲಿಂಗಾತ್ಮಕಶಬ್ದಗಳಿಂದ ಎಂದು ಅಭಿಪ್ರಾಯ. ಏಕಃ ವಿಷ್ಣುರೇವೋಚ್ಯತೇ = ಮುಖ್ಯವಾಗಿ ವಿಷ್ಣುವೊಬ್ಬನೇ ಹೇಳಲ್ಪಡುತ್ತಾನೆ. ಹಿಂದಿನ ಅಧಿಕರಣದಲ್ಲಿ ಸಮನ್ವಯಾತ್ ಎಂದು ಹೇಳಿದ್ದನ್ನು ಈ ಅಧಿಕರಣದಲ್ಲಿ ವಿಸ್ತಾರವಾಗಿ ಹೇಳುತ್ತಾರೆ.

ವಿಷ್ಣುವಿನಲ್ಲಿ ಪ್ರಸಿದ್ಧವಾದ ಶಬ್ದಗಳು ತತ್ರಪ್ರಸಿದ್ಧಶಬ್ದಗಳು, ತತ್ರಾಪಿಪ್ರಸಿದ್ಧಶಬ್ದಗಳು ತತ್ರೈವಪ್ರಸಿದ್ಧಶಬ್ದಗಳು ಎಂದು ಮೂರು ರೀತಿಯಾಗಿದ್ದರೂ ತತ್ರಾಪಿಪ್ರಸಿದ್ಧಶಬ್ದಗಳು ಅನ್ಯತ್ರಾಪಿಪ್ರಸಿದ್ಧಶಬ್ದಗಳಲ್ಲಿ ಸೇರುತ್ತವೆ. ಇನ್ನು ತತ್ರಪ್ರಸಿದ್ಧಶಬ್ದಗಳು ಮತ್ತು ತತ್ರೈವಪ್ರಸಿದ್ಧಶಬ್ದಗಳಲ್ಲಿ ಅವಾಂತರಭೇದವಿದ್ದರೂ ಅವುಗಳನ್ನು ಸಮನ್ವಯ ಮಾಡಬೇಕಿಲ್ಲವಾದ್ದರಿಂದ ತತ್ರಪ್ರಸಿದ್ಧಶಬ್ದಗಳು ಎಂದು ಒಂದೇ ವಿಧವಾಗಿ ಹೇಳಿದ್ದಾರೆ.

**ननूक्तसर्वकर्तृत्वरूपब्रह्मलक्षणस्यातिव्याप्तिवारणाय कारणवाक्यानामेव प्रतिज्ञातः समन्वयः । स एवोत्तरत्र प्रपञ्चनीयः । नत्वशेषवैदिकशब्दसमन्वय इत्यत उक्तम् सर्वगुणत्वत इति । सर्वे गुणा यस्य तस्य भावस्तस्मै । 'आद्यादिभ्य उपसङ्ख्यानम्' इति तसिः । ब्रह्मशब्दोक्तगुणपूर्णत्वार्थमित्यर्थः । तथाच वक्ष्यति । अतोऽनन्तगुणो यच्छब्दा योगवृत्तय इति उक्तं चानुभाष्ये ।**

जन्माद्यस्येति सूत्रेण गुणसर्वस्वसिद्धये ।
ब्रह्मणो लक्षणं प्रोक्तं शास्त्रमूलं यतस्ततः ।।
अन्वयः सर्वशब्दानां गुणसर्वस्ववेदकः । इति

ಸರ್ವಕರ್ತೃತ್ವರೂಪವಾದ ಬ್ರಹ್ಮನ ಲಕ್ಷಣಕ್ಕೆ ಅತಿವ್ಯಾಪ್ತಿಪರಿಹಾರ ಮಾಡುವುದಕ್ಕಾಗಿ ಜಗತ್ಕಾರಣವನ್ನು ಹೇಳುವ ವೇದವಾಕ್ಯಗಳ ಸಮನ್ವಯವನ್ನು ಬ್ರಹ್ಮನಲ್ಲಿ ಸಮನ್ವಯಸೂತ್ರದಿಂದ ಸೂತ್ರಕಾರರು ಪ್ರತಿಜ್ಞೆ ಮಾಡಿದ್ದಾರೆ. ಆದ್ದರಿಂದ ಅದನ್ನೇ ಮುಂದಿನ ಸೂತ್ರಗಳಲ್ಲಿ ವಿಸ್ತಾರವಾಗಿ ಹೇಳಬೇಕೇ ಹೊರತು, ಸಕಲವೈದಿಕಶಬ್ದಗಳ ಸಮನ್ವಯವನ್ನಲ್ಲ. ಎಂದರೆ ''ಸರ್ವಗುಣತ್ವತಃ'' ಎಂದು ಉತ್ತರಿಸುತ್ತಾರೆ. ಸಕಲಗುಣಗಳು ಯಾವುದರಲ್ಲಿದೆಯೋ ಅದೇ ಸರ್ವಗುಣ. ಅದರ ಧರ್ಮವೇ ಸರ್ವಗುಣತ್ವ. ತಸ್ಮೈ = ಸರ್ವಗುಣತ್ವಕ್ಕೋಸ್ಕರ. ಇಲ್ಲಿ 'ಆದಾದಿಭ್ಯಃ ಉಪಸಂಖ್ಯಾನಮ್' ಎಂಬ ಸೂತ್ರದಿಂದ ತಸಿಪ್ರತ್ಯಯ ಬಂದು

ಸರ್ವಗುಣತ್ವತಃ ಎಂದು ರೂಪವಾಗಿದೆ. ಬ್ರಹ್ಮಶಬ್ದದಿಂದ ಹೇಳಲ್ಪಡುವ ಗುಣಪೂರ್ಣತ್ವಕ್ಕೋಸ್ಕರ ಎಂದು ಅಭಿಪ್ರಾಯ. ಇದನ್ನು ಮುಂದೆ 'ಅತೋಽನಂತಗುಣಃ ಯಚ್ಛಬ್ದಾ ಯೋಗವೃತ್ತಯಃ' (ಯಾವ ಕಾರಣದಿಂದ ಶಬ್ದಗಳು ಯೋಗವೃತ್ತಿಗಳುಳ್ಳವುಗಳೋ ಆದ್ದರಿಂದ ಅನಂತಗುಣವುಳ್ಳವನು) ಎಂದು ಹೇಳುತ್ತಾರೆ. ಇದನ್ನು ಅನುವ್ಯಾಖ್ಯಾನದಲ್ಲಿ —

'ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ।
ಬ್ರಹ್ಮಣೋ ಲಕ್ಷಣಂ ಪ್ರೋಕ್ತಂ ಶಾಸ್ತ್ರಮೂಲಂ ಯತಸ್ತತಃ।
ಅನ್ವಯಃ ಸರ್ವಶಬ್ದಾನಾಂ ಗುಣಸರ್ವಸ್ವವೇದಕಃ''

(ಯಾವ ಕಾರಣದಿಂದ ಗುಣಪೂರ್ಣತ್ವಸಿದ್ಧಿಗೋಸ್ಕರ 'ಜನ್ಮಾದ್ಯಸ್ಯ ಯತಃ' ಎನ್ನುವ ಸೂತ್ರದಿಂದ ಶಾಸ್ತ್ರದಲ್ಲಿ ಬ್ರಹ್ಮನ ಲಕ್ಷಣವನ್ನು ಹೇಳಿದ್ದಾರೋ ಆ ಕಾರಣದಿಂದ ಸಕಲಗುಣಪೂರ್ಣತ್ವವನ್ನು ಸಕಲಶಬ್ದಗಳ ಸಮನ್ವಯವು ಹೇಳುತ್ತದೆ) ಎಂದು ಹೇಳಿದ್ದಾರೆ.

एतत्पादार्थमाह ।। **प्रसिद्धैरिति** ।। नामात्मकैः शब्दैरिति शेषः ।

ಈ ಪಾದದ ಪ್ರತಿಪಾದ್ಯವಿಷಯವನ್ನು 'ಪ್ರಸಿದ್ಧೈಃ' ಎನ್ನುವುದರಿಂದ ಹೇಳುತ್ತಾರೆ. 'ನಾಮಾತ್ಮಕಶಬ್ದಗಳಿಂದ' ಎಂದು ಶೇಷಪೂರಣೆ ಮಾಡಿಕೊಳ್ಳಬೇಕು.

ननु विष्णुरेव विजिज्ञास्य इत्युक्तम् । तद्ब्रह्मेत्युक्तजिज्ञास्यब्रह्मणः ब्रह्म पुच्छं प्रतिष्ठेत्यानन्दमयस्य पादाख्यावयवत्वोक्तेरानन्दमयस्य च विकारार्थमयडन्तशब्दोक्तत्वेनाब्रह्मत्वादब्रह्मावयवस्याजिज्ञास्यत्वादवयविनाऽवयवजिज्ञासायोगाच्च इत्यत उक्तम् । ॐ आनन्दमयोऽभ्यासादित्यादिसूत्राष्टकम् ।। तदर्थः ।। **पूर्णानन्द इति** ।।

'ವಿಷ್ಣುರೇವ ವಿಜಿಜ್ಞಾಸ್ಯಃ' ಎಂದು ಹೇಳಿದಿರಿ. ಆದರೆ 'ತದ್ ಬ್ರಹ್ಮ' ಎಂದು ಹೇಳಿದ ಜಿಜ್ಞಾಸ್ಯನಾದ ಬ್ರಹ್ಮನು 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂದು ಶ್ರುತಿಯಲ್ಲಿ ಆನಂದಮಯನ ಪಾದವೆಂಬ ಅವಯವ ಎಂದು ಹೇಳಿದ್ದಾರೆ. ಆದರೆ ವಿಕಾರಾರ್ಥಕ ಮಯಡಂತವುಳ್ಳ ಶಬ್ದದಿಂದ ಹೇಳಿದ್ದರಿಂದ ಆನಂದಮಯನು ಬ್ರಹ್ಮನಲ್ಲ. ಹಾಗಾಗಿ ಬ್ರಹ್ಮನ ಅವಯವವಲ್ಲವಾದ್ದರಿಂದ ಜಿಜ್ಞಾಸ್ಯತ್ವವೂ ಕೂಡುವುದಿಲ್ಲ. ಮತ್ತು ಅವಯವಿಯನ್ನು ಬಿಟ್ಟು ಕೇವಲ ಅವಯವ ಜಿಜ್ಞಾಸೆ ಮಾಡುವುದೂ ಸರಿಯಲ್ಲ ಎಂದರೆ 'ಆನಂದಮಯೋಽಭ್ಯಾಸಾತ್' ಇತ್ಯಾದಿ ಎಂಟುಸೂತ್ರಗಳನ್ನು ಹೇಳುತ್ತಾರೆ. ಅದರ ಅಭಿಪ್ರಾಯವೇ 'ಪೂರ್ಣಾನಂದ ಎನ್ನುವುದು.

**प्रसिद्धैरन्यवस्तुषु । उच्यते विष्णुरेवैकः सर्वैः सर्वगुणत्वतः** ।। इति अत्रोत्तरत्र च प्रतिपदमन्वेति ।

'ಪ್ರಸಿದ್ಧೈರನ್ಯವಸ್ತುಷು' 'ಉಚ್ಯತೇ ವಿಷ್ಣುರೇವೈಕಃ ಸರ್ವೈಃ ಸರ್ವಗುಣತ್ವತಃ' ಎನ್ನುವುದನ್ನು ಈ ಅಧಿಕರಣದಲ್ಲೂ, ಮುಂದಿನ ಅಧಿಕರಣಗಳಲ್ಲೂ ಇಟ್ಟುಕೊಳ್ಳಬೇಕು.

*ಪರಿಪೂರ್ಣಚಂದ್ರಿಕಾ*

विष्णुरेवेति वर्तमानेऽपि तत्रैवकारस्य पूर्वं मुख्यवृत्त्यैव न लक्षणयेत्यर्थलाभाय 'सम्'पदेनान्विततया विष्णुपदेनान्वयविच्छेदात् । तत्तु समन्वयादित्यतः तत्त्वित्यस्याध्यायपरिसमाप्ति प्रतिनयं प्रायेणानुवृत्तिरितिसूचनार्थत्वात् । पञ्चाधिकरण्या अध्यायपादबहिर्भावद्योतनार्थत्वाच्च विष्णुरेवेति पुनरुक्तिः ।

ಅಣುಭಾಷ್ಯದ 'ವಿಷ್ಣುರೇವ ವಿಜಿಜ್ಞಾಸ್ಯಃ' ಎಂಬಲ್ಲಿ ಮೊದಲಿಗೇ 'ವಿಷ್ಣುರೇವ' ಎನ್ನುವುದು ಇದ್ದರೂ; ಪುನಃ ಇಲ್ಲಿ 'ಉಚ್ಯತೇ ವಿಷ್ಣುರೇವೈಕಃ' ಎಂದು ಪುನಃ ವಿಷ್ಣುರೇವ ಎಂದು ಹೇಳಿದ್ದು ಏಕೆಂದರೆ (ಅದನ್ನೇ ಅನುವೃತ್ತಿ ಮಾಡಿಕೊಳ್ಳಲು ಬರುವಾಗ ಪುನಃ ಕಂಠತಃ ಹೇಳಿದ್ದು ಏಕೆ? ಎಂಬಭಿಪ್ರಾಯ), 'ವಿಷ್ಣುರೇವ ವಿಜಿಜ್ಞಾಸ್ಯಃ' ಎಂಬಲ್ಲಿರುವ ಏವಕಾರವು 'ಮುಖ್ಯವೃತ್ತಿಯಿಂದಲೇ ವಿಷ್ಣುವು ವಾಚ್ಯ ಹೊರತು ಲಕ್ಷಣಾವೃತ್ತಿಯಿಂದಲ್ಲ ಎಂಬರ್ಥವನ್ನು ಹೇಳುವುದಕ್ಕೋಸ್ಕರ. 'ಸಮನ್ವಯಾತ್' ಎಂಬಲ್ಲಿನ 'ಸಮ್ 'ಪದದೊಂದಿಗೆ ಅನ್ವಯ ಮಾಡಿದ್ದರಿಂದ 'ವಿಷ್ಣುಃ' ಎಂಬ ಪದದೊಂದಿಗೆ ಅನ್ವಯವನ್ನು ಮಾಡಿಲ್ಲ. ಆದ್ದರಿಂದ ಅದನ್ನು ಅನುವೃತ್ತಿ ಮಾಡಿಕೊಳ್ಳಲು ಬರುವುದಿಲ್ಲವಾದ್ದರಿಂದ ಪುನಃ ಇಲ್ಲಿ ವಿಷ್ಣುರೇವ ಎಂದು ಹೇಳಿದ್ದಾರೆ.

ಅಲ್ಲದೆ 'ತತ್ತು ಸಮನ್ವಯಾತ್' ಎಂಬಲ್ಲಿನ 'ತತ್ ತು' ಎಂಬ ಪದವು ಈ ಅಧ್ಯಾಯ ಮುಗಿಯುವವರೆಗಿನ ಪ್ರತಿಯೊಂದು ಅಧಿಕರಣಗಳಲ್ಲಿಯೂ ಪ್ರಾಯಶಃ ಅನುವೃತ್ತವಾಗುತ್ತದೆ ಎನ್ನುವುದನ್ನು ಸೂಚಿಸಲು ಪುನಃ ಇಲ್ಲಿ ಹೇಳಿರುವರು. ಮತ್ತು ಜಿಜ್ಞಾಸಾದಿ ಪ್ರಾರಂಭದ ಐದು ಅಧಿಕರಣಗಳು ಈ ಅಧ್ಯಾಯ ಮತ್ತು ಪಾದಗಳಲ್ಲಿ ಸೇರುವುದಿಲ್ಲ (ಇಡೀ ಶಾಸ್ತ್ರಕ್ಕೆ ಪೀಠರೂಪವಾಗಿವೆ) ಎಂಬುದನ್ನು ತಿಳಿಸಲು ಅಲ್ಲಿ ಹೇಳಿದ ಪದವನ್ನು ಅನುವೃತ್ತಿ ಮಾಡಿಕೊಳ್ಳದೇ ಪ್ರತ್ಯೇಕವಾಗಿ ಹೇಳಿದ್ದಾರೆ.

आनन्दमयशब्दार्थभूतः पूर्णानन्द एकः । स्वावयवादिनाऽभिन्नो विष्णुरेव । तथाचान्यवस्तुषु प्रसिद्धैरानन्दमयप्रकरणस्थैरानन्दमयतद्विशेषणैः सर्वैः शब्दैरेको विष्णुरेवोच्यते । नतु विकारी कश्चित्प्रकृत्यादिः । येन तस्य जिज्ञास्यताऽयुक्ता स्यादित्यर्थः । आनन्दमयशब्दार्थस्य पूर्णानन्दस्य विष्णुत्वे तत्पदवाच्यत्वस्यावश्यकत्वादितिभावः ।

ಆನಂದಮಯಶಬ್ದವಾಚ್ಯನು ಮತ್ತು ಪೂರ್ಣಾನಂದನು ಬೇರೆಯಲ್ಲ; ಒಂದೇ. ತನ್ನ ಅವಯವಾದಿಗಳಿಂದ ಅಭಿನ್ನನಾದ ವಿಷ್ಣುವೇ ಅವೆರಡಾಗಿದ್ದಾನೆ. ಆದ್ದರಿಂದ ಬೇರೆ ವಸ್ತುಗಳಲ್ಲಿ ಪ್ರಸಿದ್ಧಗಳಾದ ಆನಂದಮಯಪ್ರಕರಣದಲ್ಲಿ ಬಂದ ಆನಂದಮಯ ಮತ್ತು ಅದಕ್ಕೆ ವಿಶೇಷಣಗಳಾದ ಎಲ್ಲಾ ಶಬ್ದಗಳಿಂದಲೂ ವಿಷ್ಣು ಒಬ್ಬನೇ ವಾಚ್ಯನಾಗಿದ್ದಾನೆ; ಹೊರತು ವಿಕಾರವುಳ್ಳ ಪ್ರಕೃತಿಮೊದಲಾದವುಗಳಲ್ಲ. ಹಾಗಾಗಿದ್ದಲ್ಲಿ ವಿಷ್ಣುವಿನ ಜಿಜ್ಞಾಸೆಯು ಸರಿಯಲ್ಲ ಎಂದಾಗುತ್ತಿತ್ತು. ಆನಂದಮಯಶಬ್ದಾರ್ಥವಾದ ಪೂರ್ಣಾನಂದವು ವಿಷ್ಣುವೆನ್ನುವುದಾದರೆ ಆನಂದಮಯಪದವಾಚ್ಯನು ಅವನೇ ಆಗಬೇಕು ಎಂದಭಿಪ್ರಾಯ.

एक इत्युक्त्या 'नेह नानास्ति किञ्चन' इत्यादिश्रुतेरचिन्त्यशक्त्याऽवयवाय-वविनोरैक्यान्नावयवत्वविरोध इति सूचितम् । एवेति 'नेतर' इत्यादेरर्थः ।

ಇಲ್ಲಿ (ವಿಷ್ಣುರೇವೈಕಃ' ಎಂಬಲ್ಲಿ) 'ಏಕ' ಎಂಬ ಪದದಿಂದ 'ನೇಹ ನಾನಾಸ್ತಿ ಕಿಂಚನ' ಎನ್ನುವ ಶ್ರುತಿಯಲ್ಲಿ ಹೇಳಿದಂತೆ ಭಗವಂತನ ಅಚಿಂತ್ಯಶಕ್ತಿಯಿಂದ ಅವನ ಅವಯವ ಮತ್ತು ಅವಯವಿಗಳಿಗೆ ಐಕ್ಯವಿರುವುದರಿಂದ 'ಬ್ರಹ್ಮಪುಚ್ಛಂ' ಎಂದು ಆನಂದಮಯನ ಅವಯವತ್ವ ಹೇಳಿರುವುದಕ್ಕೆ ವಿರೋಧವಿಲ್ಲ ಎನ್ನುವುದನ್ನು ಸೂಚಿಸಿದೆ. 'ಏವ' ಎಂಬ ಪದದಿಂದ 'ನೇತರೋऽನುಪಪತ್ತೇಃ' ಇತ್ಯಾದಿ ಸೂತ್ರಗಳ ಅರ್ಥವನ್ನು ಸೂಚಿಸಿದ್ದಾರೆ.

अत्र पूर्णानन्द इत्युक्त्या प्राचुर्यादितिसूत्रोक्तो मयटः प्राचुर्यार्थो दर्शितः । तत्र व्याख्येयपदानुरोधेनानन्दपूर्ण इति वाच्येऽप्येवमुक्तिः प्राचुर्यस्य विशेष्यत्वे विरोधिलेशधीसत्वेऽपि न विशेषणत्वमिति परैरभ्युपेतत्वात् विष्णोरानन्दप्राचुर्ये ब्राह्मणप्रचुरो ग्राम इत्यत्राल्पशूद्रसत्त्वप्रतीतिरिव विष्णावनानन्दलेशधीरपि स्यादिति शङ्कानिरासाय । तन्निरासप्रकारश्च यथा विशेषणत्वे विरोधिप्रसक्तिर्नास्ति तथा विशेष्यत्वेऽपि नक्षत्रादिस्थतेजोल्पत्वापेक्षया प्रकाशप्रचुरो रविरितिवत् जीवगत-सुखाल्पत्वापेक्षयानन्दप्रचुर इत्युक्तेऽपि दोषभावादिति ।

ಅಣುಭಾಷ್ಯದಲ್ಲಿ 'ಪೂರ್ಣಾನಂದಃ' ಎಂದು ಹೇಳಿದ್ದರಿಂದ 'ಪ್ರಾಚುರ್ಯಾತ್' ಎಂದು ಸೂತ್ರದಲ್ಲಿ ಹೇಳಿದ ಮಯಟ್‌ಪ್ರತ್ಯಯವು ಪ್ರಾಚುರ್ಯಾರ್ಥಕ ಎನ್ನುವುದನ್ನು ತೋರಿಸಿದಂತಾಯಿತು. ಹಾಗೆಯೇ ವ್ಯಾಖ್ಯೇಯವಾದ ಸೂತ್ರದಲ್ಲಿ ಆನಂದಮಯ ಎಂದಿರುವುದರಿಂದ ಅದರ ವ್ಯಾಖ್ಯಾನವಾದ ಅಣುಭಾಷ್ಯದಲ್ಲಿಯೂ 'ಆನಂದಪೂರ್ಣ' ಎಂದು ಹೇಳಬೇಕಾಗಿತ್ತು. ಆದರೂ 'ಪೂರ್ಣಾನಂದ' ಎಂದು ಹೇಳಿದ್ದು ಮಯಟ್‌ಪ್ರತ್ಯಯದ ಅರ್ಥವಾದ ಪ್ರಾಚುರ್ಯವು ವಿಶೇಷ್ಯಪದವಾದರೆ ಅದಕ್ಕೆ ವಿರುದ್ಧವಾದದ್ದು ಸ್ವಲ್ಪವಿದೆ ಎಂದರ್ಥ ದೊರೆಯುತ್ತದೆ. ವಿಶೇಷಣವಾಚಕಪದವಾದರೆ ಹಾಗೆ ಅರ್ಥ ಬರುವುದಿಲ್ಲ ಎಂದು ಪರರು (ಮಾಯಾವಾದಿಗಳು) ಒಪ್ಪಿರುವುದರಿಂದ, ವಿಷ್ಣುವು ಆನಂದಪ್ರಚುರ ಎಂದಾಗ 'ಬ್ರಾಹ್ಮಣಪ್ರಚುರೋ ಗ್ರಾಮಃ' ಎಂಬಲ್ಲಿ ಶೂದ್ರರ ಅಲ್ಪತ್ವವು ಹೇಗೆ ತಿಳಿಯುತ್ತದೋ ಹಾಗೆ ವಿಷ್ಣುವಿನಲ್ಲಿ ಅನಾನಂದದ (ದುಃಖದ) ಅಲ್ಪತ್ವದ ಜ್ಞಾನವು ಬರುತ್ತದೆ ಎಂಬ ಶಂಕೆಯನ್ನು ನಿರಾಕರಣೆ ಮಾಡಲು ಹಾಗೆ ಹೇಳಿದ್ದು.

ಈ ರೀತಿ ಹೇಳಿದಾಗ ಹಿಂದಿನ ಶಂಕೆಯು ಹೇಗೆ ನಿರಾಕೃತವಾಗುತ್ತದೆ? ಎಂದರೆ ಪ್ರಾಚುರ್ಯವನ್ನು ವಿಶೇಷಣವನ್ನಾಗಿ ಮಾಡಿದಾಗ ಹೇಗೆ ಅದರ ವಿರೋಧಿಯ ಪ್ರಸಕ್ತಿ ಬರುವುದಿಲ್ಲವೋ ಹಾಗೆಯೇ ವಿಶೇಷ್ಯವನ್ನಾಗಿ ಹೇಳಿದಾಗಲೂ ನಕ್ಷತ್ರ ಮೊದಲಾದವುಗಳಲ್ಲಿರುವ ಸ್ವಲ್ಪ ಪ್ರಕಾಶಕ್ಕಿಂತಲೂ ಬಹಳ ಪ್ರಕಾಶವುಳ್ಳವನು ಎನ್ನುವ 'ಪ್ರಕಾಶಪ್ರಚುರೋ ರವಿಃ' ಎನ್ನುವ ವಾಕ್ಯದಂತೆ ಜೀವನಲ್ಲಿರುವ ಸ್ವಲ್ಪ ಸುಖಕ್ಕಿಂತಲೂ ಹೆಚ್ಚಿನ ಆನಂದವುಳ್ಳವನು ಎಂದು ಹೇಳಿದರೆ ಏನೂ ದೋಷವಿಲ್ಲ.

ननु सप्तभिर्नयैः सप्तनामसमन्वयसिद्धावपि समन्वयसूत्राभिमतसर्ववेदगताशेषनामसमन्वयासिद्ध्या ब्रह्मपदेनाभिमतानन्तगुणवत्त्वं प्रधानलक्षणं न सिध्येदित्यतो वा ।

ननु मयटः प्राचुर्यार्थत्वमभ्युपेत्य पूर्णानन्दस्यानन्दमयशब्दार्थत्वोक्तिरयुक्ता विकारार्थान्नमयादिप्रायपाठविरोधादित्यतो वाप्युक्तम् - **अन्यवस्तुष्वित्यादि** ।

''ಅನ್ಯವಸ್ತುಷು'' ಇತ್ಯಾದಿ ಅಣುಭಾಷ್ಯಕ್ಕೆ ಮತ್ತೊಂದು ರೀತಿಯ ಪೀಠಿಕೆಯನ್ನು ಕೊಡುತ್ತಾರೆ. ಅನ್ನಮಯಾದಿ ಏಳು ಅಧಿಕರಣಗಳಿಂದ ಏಳು ನಾಮಗಳ ಸಮನ್ವಯ ಸಿದ್ಧವಾದರೂ 'ಸಮನ್ವಯಾತ್' ಎಂಬ ಸೂತ್ರಕ್ಕೆ ಅಭಿಮತವಾದ ಸಕಲವೇದಗತವಾದ ಎಲ್ಲಾ ನಾಮಗಳ ಸಮನ್ವಯ ಸಿದ್ಧವಾಗುವುದಿಲ್ಲವಾದ್ದರಿಂದ ಅನಂತಗುಣವತ್ವರೂಪ ಪ್ರಧಾನಲಕ್ಷಣವು ಸಿದ್ಧವಾಗುವುದಿಲ್ಲವಲ್ಲ? (ಎಂದರೆ -- 'ಅನ್ಯವಸ್ತುಷು ಪ್ರಸಿದ್ಧೈಃ' ಎಂದು ಹೇಳುತ್ತಾರೆ.)

ಅಥವಾ ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯಾರ್ಥವನ್ನು ಸ್ವೀಕರಿಸಿ 'ಆನಂದಮಯ'ಶಬ್ದಕ್ಕೆ ಪೂರ್ಣಾನಂದವುಳ್ಳವನು ಎಂದು ಅರ್ಥ ಹೇಳುವುದು ಸರಿಯಲ್ಲ. ಏಕೆಂದರೆ ವಿಕಾರಾರ್ಥಕವಾದ ಅನ್ನಮಯಾದಿ ಪ್ರಾಯಪಾಠ(ಒಂದೇ ಸರಣಿ)ದ ವಿರೋಧವು ಬರುತ್ತದೆ ಎಂದರೆ ''ಅನ್ಯವಸ್ತುಷು'' ಎಂಬಿತ್ಯಾದಿಯಾಗಿ ಹೇಳುತ್ತಾರೆ.

शब्दैरिति शेषः । **'अन्यवस्तुषु = कोशादिषु प्रसिद्धैः सर्वैर्गुणि**सामान्यवाचकैरन्नमयादिभिः शब्दैरुच्यते । **विष्णुरेवैक इति** किं विकारेण नेत्याह – **सर्वगुणत्वतः** । पूर्णत्वादिरूपगुणत्वतः । 'सर्वपूर्णमिहोच्यते' इत्युक्तेः । अन्नमयप्राणमयमनोमयविज्ञानमयेष्वपि प्राचुर्याङ्गीकारात्, 'अद्यतेऽत्ति च' इत्यादिवाक्यशेषोक्तयोगेन 'महाभोक्ता महाभोग्य इत्यर्थोऽन्नमये भवेत् । 'महाप्राणो महाबोधो महाविज्ञानवानपि' इत्याद्यनुभाष्योक्तप्रवृत्तिनिमित्तवत्त्वेन तैः शब्दैरुच्यत इति । तर्हि तेषामप्यनेकत्वादयमप्यनेकः किं नेत्याह – **एक इति** ।। 'न स्थानतोऽपीति' न्यायादिति भावः ।

'ಶಬ್ದೈಃ' (ಶಬ್ದಗಳಿಂದ) ಎನ್ನುವುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅನ್ಯವಸ್ತುಷು = ಕೋಶಾದಿಗಳಲ್ಲಿ, ಪ್ರಸಿದ್ಧೈಃ = ಪ್ರಸಿದ್ಧಗಳಾದ, ಸರ್ವೈಃ = ಗುಣವುಳ್ಳವಂತಹ ವಸ್ತುಗಳನ್ನು ಹೇಳುವ ಅನ್ನಮಯಾದಿಶಬ್ದಗಳಿಂದ, ಉಚ್ಯತೇ = ಹೇಳಲ್ಪಡುತ್ತಾನೆ, ವಿಷ್ಣುರೇವೈಕಃ = ವಿಷ್ಣುವೊಬ್ಬನೇ.

ವಿಕಾರಿಯಾದ್ದರಿಂದ ಅನ್ನಮಯಾದಿಶಬ್ದಗಳಿಂದ ವಾಚ್ಯನಲ್ಲ; ಹೊರತು ಸರ್ವಗುಣತ್ವತಃ = ಪೂರ್ಣತ್ವಾದಿ ಗುಣವುಳ್ಳವನಾದ್ದರಿಂದ ಎಂದು ''ಸರ್ವಗುಣತ್ವತಃ'' ಎಂಬುದರಿಂದ ಹೇಳುತ್ತಾರೆ.

ಸರ್ವಗುಣಃ ಎನ್ನುವುದಕ್ಕೆ ಪೂರ್ಣಗುಣ ಎಂಬರ್ಥವು ಹೇಗೆ ಎಂದರೆ 'ಸರ್ವಂ ಪೂರ್ಣಮಿಹೋಚ್ಯತೇ' (ಇಹ = ಇಲ್ಲಿ, ಸರ್ವಂ = ಸರ್ವ ಎನ್ನುವುದನ್ನು, ಪೂರ್ಣಂ = ಪೂರ್ಣ ಎಂದು ಉಚ್ಯತೇ = ಹೇಳಲ್ಪಡುತ್ತದೆ) ಎಂಬ ಪ್ರಮಾಣವಿದೆ. ಹೀಗಾಗಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಇವುಗಳಲ್ಲಿರುವ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯಾರ್ಥವನ್ನೇ ಒಪ್ಪಿದ್ದೇವೆ. ಮತ್ತು 'ಅದ್ಯತೇಽತ್ತಿ ಚ' ಇತ್ಯಾದಿಯಾಗಿ ಅನ್ನಮಯಾದಿಗಳನ್ನು ಹೇಳುವ ಸಂದರ್ಭದಲ್ಲಿ ವಾಕ್ಯಶೇಷವಿರುವುದರಿಂದ

ಮಹಾಭೋಕ್ತಾ ಮಹಾಭೋಗ್ಯ ಇತ್ಯರ್ಥೋಽನ್ನಮಯೀ ಭವೇತ್ ।
ಮಹಾಪ್ರಾಣೋ ಮಹಾಬೋಧೋ ಮಹಾವಿಜ್ಞಾನವಾನಪಿ ॥

ಎನ್ನುವ ಅನುವ್ಯಾಖ್ಯಾನದಲ್ಲಿ ಹೇಳಿದ ಪ್ರವೃತ್ತಿನಿಮಿತ್ತವಿರುವುದರಿಂದಲೂ ಅನ್ನಮಯಾದಿಶಬ್ದಗಳಿಂದ ಹೇಳಲ್ಪಡುತ್ತಾನೆ ಎಂದು ಅರ್ಥ.

ಹಾಗಾದರೆ ಅನ್ನಮಯಾದಿಗಳು ಅನೇಕ(ಐದು) ಆಗಿರುವುದರಿಂದ ಬ್ರಹ್ಮನು ಕೂಡಾ ಅನೇಕನಾಗಿದ್ದಾನೆಯೇ? ಎಂದರೆ "ಏಕಃ" ಎಂಬುದರಿಂದ ಉತ್ತರಿಸುತ್ತಾರೆ. 'ನ ಸ್ಥಾನತೋಽಪಿ' ಎನ್ನುವ ಸೂತ್ರದಲ್ಲಿ ಹೇಳಿದಂತೆ ಭಗವಂತನಲ್ಲಿ ಭೇದವಿಲ್ಲ; ಅವನು ಒಬ್ಬನೇ (ಹೇಳಿದ ನ್ಯಾಯದಂತೆ) ಎಂದು ಅಭಿಪ್ರಾಯ.

कथमेकोऽनेकैरुच्यते । उच्यत एव । **सर्वगुणत्वतः** । सर्वं गुणभूतम् अप्रधानं नियम्यं यस्य तस्य भावः तस्मात् । सर्वस्य तत्तन्त्रत्वात् । 'शरीररूपकविन्यस्तगृहीतेः' इतिन्यायेनान्नमयादितत्तत्कोशगततत्तन्नियन्तृरूपाणामेव तैस्तैः शब्दैरुच्यमानत्वेन तेषामनेकत्वेन तत्तद्गतस्याप्यनेकैरुक्तिसम्भवात् ।

हृदयाकाशस्याङ्गुष्ठमात्रत्वेन तद्गतरूपस्याङ्गुष्ठमात्रपदेनोक्तिवत् । व्यक्तमेतदग्रे 'हृद्यपेक्षया' इत्यत्र । एतेनान्यत्वान्तरत्वशरीरत्वाद्युक्तिरपि समाहिता । यथोक्तम् 'न स्थानतोऽपि परस्य' इत्येतन्नयभाष्ये, 'अभेदेऽपि भेदव्यपदेशः स्थानभेदात्' इति ।

तर्ह्युपचार एव नेत्याह – **सर्वगुणत्वतः** । सर्वसङ्ख्यारूपगुणवत्त्वात् । गुहानयानुव्याख्याने 'द्वित्वञ्चैकस्य युज्यत' इत्युक्तेर्भेदाभोवेऽपि तत्प्रतिनिधिना विशेषेण तद्रूपेष्वेकत्वसङ्ख्योपपत्तिरिति ।

ಒಬ್ಬನೇ ಅನೇಕ ಶಬ್ದಗಳಿಂದ ಹೇಗೆ ಹೇಳಲ್ಪಡುತ್ತಾನೆ? ಎಂಬೀ ಪ್ರಶ್ನೆಗೆ 'ಸರ್ವಗುಣತ್ವತಃ' ಎಂದು ಉತ್ತರಿಸುತ್ತಾರೆ. ಯಸ್ಯ = ಯಾವ ಭಗವಂತನಿಗೆ, ಸರ್ವಂ = ಎಲ್ಲವೂ, ಗುಣಭೂತಂ = ಅಪ್ರಧಾನವಾಗಿದೆ ನಿಯಮ್ಯವಾಗಿವೆ. ಅವನು ಸರ್ವಗುಣ, ಅವನ ಧರ್ಮವೇ ಸರ್ವಗುಣತ್ವ. ಸಕಲವಸ್ತುಗಳೂ ಅವನ

ಅಧೀನಗಳೇ ಆಗಿವೆ (ಆದ್ದರಿಂದ ಸಕಲಶಬ್ದಗಳಿಂದ ಒಬ್ಬನೇ ಹೇಳಲ್ಪಡುತ್ತಾನೆ). 'ಶರೀರರೂಪಕವಿನ್ಯಸ್ತಗೃಹೀತೇಃ' ಎನ್ನುವ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ಆಯಾಯ ಅನ್ನಮಯಾದಿಕೋಶದಲ್ಲಿರುವ ಆಯಾ ಕೋಶನಿಯಾಮಕವಾದ ಭಗವದ್ರೂಪಗಳು ಆಯಾ ಅನ್ನಮಯಾದಿಗಳಿಂದ ಹೇಳಲ್ಪಡುತ್ತವೆಯಾದ್ದರಿಂದ ಆ ರೂಪಗಳು ಅನೇಕಗಳಾದ್ದರಿಂದ ಅನ್ನಮಯಾದಿಗತನಾದ ಭಗವಂತನನ್ನು ಅನೇಕವಾಗಿ ವ್ಯವಹರಿಸಿರುವುದು ಕೂಡುತ್ತದೆ.

ಹೃದಯಾಕಾಶವು ಅಂಗುಷ್ಠಮಾತ್ರಪರಿಮಾಣವುಳ್ಳದ್ದರಿಂದ ಅಲ್ಲಿರುವ ಪರಮಾತ್ಮನನ್ನು ಅಂಗುಷ್ಠಮಾತ್ರ ಎಂದು ಹೇಳುವಂತೆ ಅನೇಕವಸ್ತುಗಳಲ್ಲಿರುವ ಪರಮಾತ್ಮನು ಅನೇಕವಾಗಿ ವ್ಯವಹರಿಸಲ್ಪಡುತ್ತಾನೆ. ಇದು ಮುಂದೆ 'ಹೃದ್ಯಪೇಕ್ಷಯಾ' ಎಂಬ ಸೂತ್ರದಲ್ಲಿ ಸ್ಪಷ್ಟವಾಗುತ್ತದೆ.

ಹೀಗೆ ಹೇಳಿದ್ದರಿಂದ ಆ ಪ್ರಕರಣದಲ್ಲಿ ಆನಂದಮಯಾದಿಗಳಿಗೆ ಹೇಳಿದ 'ಅನ್ಯತ್ವ' 'ಅಂತರತ್ವ' 'ಶರೀರತ್ವ' ಮುಂತಾದವುಗಳನ್ನು ಸಮರ್ಥಿಸಿದಂತಾಯಿತು. ಇದನ್ನು 'ನ ಸ್ಥಾನತೋಽಪಿ ಪರಸ್ಯ' ಎಂಬಲ್ಲಿಯ ಭಾಷ್ಯದಲ್ಲಿ 'ಅಭೇದೇಽಪಿ ಭೇದವ್ಯಪದೇಶಃ ಸ್ಥಾನಭೇದಾತ್' (ಅಭೇದವಿದ್ದರೂ ಸ್ಥಾನಭೇದದಿಂದ ಭೇದವ್ಯಪದೇಶ) ಎಂದು ಹೇಳಿದ್ದಾರೆ.

ಎಲ್ಲಾ ಸಂಖ್ಯಾರೂಪವಾದ ಗುಣವುಳ್ಳವನಾದ್ದರಿಂದ ಔಪಚಾರಿಕವಲ್ಲ. ಗುಹಾಧಿಕರಣದ ಅನುವ್ಯಾಖ್ಯಾನದಲ್ಲೂ 'ದ್ವಿತ್ವಂ ಚೈಕಸ್ಯ ಯುಜ್ಯತೇ' 'ಒಬ್ಬನಿಗೇ ದ್ವಿತ್ವವು ಕೂಡುತ್ತದೆ' ಎಂದು ಹೇಳಿದ್ದರಿಂದ. ಭೇದವಿಲ್ಲದಿದ್ದರೂ ಭೇದಪ್ರತಿನಿಧಿಯಾದ 'ವಿಶೇಷ'ವಿರುವುದರಿಂದ ಆ ರೂಪಗಳಲ್ಲಿ ಏಕತ್ವವು ಕೂಡುತ್ತದೆ.

**ननु भवेदेतत्सर्वं विष्णोरन्नमयादिशब्दवाच्यत्वे । तदेव निर्बीजमिति चेन्न निर्बीजम् । सर्वगुणत्वतः । मुक्तिहेतुवेदनत्व-मुक्तप्राप्यत्व-ज्येष्ठत्व-देवोपास्यत्व-जगच्चेष्टकत्वादितत्तत्प्रकरणस्थसर्वगुणत्वात् ।। सर्वैरुच्यत इति ।। उपलक्षणं चैतत् । ब्रह्मात्मशब्दाभ्यां चेत्यपि ध्येयम् ।**

ನೀವು ಹೇಳಿದ ಇದೆಲ್ಲವೂ ವಿಷ್ಣುವು ಅನ್ನಮಯಾದಿಶಬ್ದಗಳಿಂದ ವಾಚ್ಯನು ಎಂದು ಸಿದ್ಧವಾದರೆ ಸರಿಯಾಗುತ್ತದೆ. ಆದರೆ ಅದೇ ಹೇಗೆ ಕೂಡುತ್ತದೆ? ಎಂದರೆ "ಸರ್ವಗುಣತ್ವತಃ" ಎಂಬುದಾಗಿ ಅದಕ್ಕೆ ಕಾರಣವನ್ನು ಹೇಳುತ್ತಾರೆ. ಸರ್ವಗುಣತಃ = ಎಂದರೆ ಅನ್ನಮಯಾದಿಪ್ರಕರಣಗಳಲ್ಲಿ ಹೇಳಿದ ಮೋಕ್ಷಕ್ಕೆ ಕಾರಣವಾದ ಜ್ಞಾನರೂಪತ್ವ, ಮುಕ್ತಪ್ರಾಪ್ಯತ್ವ, ಜ್ಯೇಷ್ಠತ್ವ, ದೇವೋಪಾಸ್ಯತ್ವ, ಜಗಚ್ಚೇಷ್ಟಕತ್ವ ಮೊದಲಾದ ಎಲ್ಲಾ ಗುಣವುಳ್ಳವನಾದ್ದರಿಂದ. "ಸರ್ವೈರುಚ್ಯತೇ" ಸಕಲಶಬ್ದಗಳಿಂದ ಹೇಳಲ್ಪಡುತ್ತಾನೆ. ಮೇಲೆ ಹೇಳಿದ ಸರ್ವಗುಣತ್ವ ಎನ್ನುವುದು ಉಪಲಕ್ಷಣ. ಹಾಗಾಗಿ ಬ್ರಹ್ಮಶಬ್ದ ಮತ್ತು ಆತ್ಮಶಬ್ದವಿರುವುದರಿಂದಲೂ ವಿಷ್ಣುವು ಅನ್ನಮಯಾದಿಗಳಿಂದ ವಾಚ್ಯನು ಎಂದು ತಿಳಿಯಬೇಕು.

**मयटस्तादात्म्यार्थत्वेऽप्युपपत्तेर्नपूर्णत्वरूप्राचुर्यार्थत्वं बीजवदित्यपि प्रयुक्तम् । 'आकाश आनन्दो न स्यात्' 'को ह्येवान्यात्कः प्राण्यात्' इत्युक्तपूर्णानन्दत्व-**

साधकसर्वचेष्टकत्वगुणवत्त्वादिति । एतेन 'तद्धेतु' 'मान्त्रवर्णिक' 'अस्मिन्नस्य च' इति सूत्रत्रयार्थो दर्शितः ।

"ಸರ್ವಗುಣತ್ವತಃ" ಎಂದು ಹೇಳಿದ್ದರಿಂದ ಮಯಟ್‌ಪ್ರತ್ಯಯಕ್ಕೆ ತಾದಾತ್ಮ್ಯರೂಪ ಅರ್ಥವನ್ನು ಸ್ವೀಕರಿಸಿದರೂ ಯುಕ್ತವಾಗುತ್ತಿರುವಾಗ ಪ್ರಾಚುರ್ಯಾರ್ಥವನ್ನು ಸ್ವೀಕರಿಸಲು ಕಾರಣವಿಲ್ಲ ಎನ್ನುವುದಕ್ಕೂ ಉತ್ತರಿಸಿದಂತಾಗುತ್ತದೆ. 'ಆಕಾಶ ಆನಂದೋ ನ ಸ್ಯಾತ್' 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್' ಇತ್ಯಾದಿಯಾಗಿ ಹೇಳಿದ ಪೂರ್ಣಾನಂದತ್ವಸಾಧಕ ಸರ್ವಚೇಷ್ಟಕತ್ವಗುಣವುಳ್ಳವನಾದ್ದರಿಂದ ಪ್ರಾಚುರ್ಯಾರ್ಥವನ್ನೇ ಸ್ವೀಕರಿಸಬೇಕು. ಸರ್ವಗುಣತ್ವ ಎನ್ನುವುದಕ್ಕೆ ಹೀಗೆ ವ್ಯಾಖ್ಯಾನ ಮಾಡಿದ್ದರಿಂದ 'ತದ್ಧೇತುವ್ಯಪದೇಶಾತ್' 'ಮಾಂತ್ರವರ್ಣಿಕಮೇವ ಚ ಗೀಯತೇ' 'ಅಸ್ಮಿನ್ನಸ್ಯ ಚ' ಇತ್ಯಾದಿ ಮೂರು ಸೂತ್ರಗಳ ಅರ್ಥವನ್ನು ಹೇಳಿದಂತಾಯಿತು.

तर्ह्यन्नमयादयः सर्वेपि कुतो नोच्यन्ते सूत्र इति चेन्न । सर्वगुणत्वतः । 'अल्पाक्षरमसन्दिग्धम्' इति सूत्रलक्षणत्वेनोक्ताल्पाक्षरत्वादिसर्वगुणत्वाद् बादरायणीयसूत्रजातस्येत्यर्थः । कथं तर्हि सर्वैरुच्यत इति चेन्न । सर्वगुणत्वतः । सर्वेषामन्नमयादीनां गुणत्वादुपसर्जनत्वादुपलक्ष्यत्वादिति यावत् । 'तदशिष्यं संज्ञाप्रमाणत्वात्' इतिवदयं निर्देशः । एतच्चाग्रेऽपि ध्येयम् ।

ಅನ್ನಮಯಾದಿ ಐದೂ ಪರಮಾತ್ಮನೆನ್ನುವುದಾದರೆ ಸೂತ್ರದಲ್ಲಿ ಆ ಐದನ್ನೂ ಏಕೆ ಹೇಳಿಲ್ಲ? ಎಂದರೆ ಅದಕ್ಕೂ 'ಸರ್ವಗುಣತ್ವತಃ' ಎಂದೇ ಉತ್ತರ. ವೇದವ್ಯಾಸರ ಬ್ರಹ್ಮಸೂತ್ರಗಳು 'ಅಲ್ಪಾಕ್ಷರಮಸಂದಿಗ್ಧಮ್' ಇತ್ಯಾದಿ ಸೂತ್ರಲಕ್ಷಣವೆಂದು ಹೇಳಲ್ಪಡುವ ಸಕಲಗುಣವುಳ್ಳವುಗಳಾದ್ದರಿಂದ ಐದನ್ನೂ ಸೂತ್ರದಲ್ಲಿ ಹೇಳಿಲ್ಲ. (ಅಲ್ಪಾಕ್ಷರತ್ವಕ್ಕೋಸ್ಕರ ಐದನ್ನೂ ಹೇಳದೇ ಒಂದನ್ನೇ ಹೇಳಿದ್ದಾರೆ). ಹಾಗಿದ್ದರೆ ಅನ್ನಮಯಾದಿ ಐದರಿಂದಲೂ ಭಗವಂತನೇ ಹೇಳಲ್ಪಡುತ್ತಾನೆನ್ನುವುದು ಹೇಗೆ ಕೂಡುತ್ತದೆ? ಎಂದರೆ ಅದಕ್ಕೂ 'ಸರ್ವಗುಣತ್ವತಃ' ಎಂಬುದಾಗಿಯೇ ಉತ್ತರ. ಸರ್ವೇಷಾಂ = ಅನ್ನಮಯಾದಿ ನಾಲ್ಕು, ಗುಣತ್ವಾತ್ = ಉಪಸರ್ಜನಗಳಾದ್ದರಿಂದ. ಅಂದರೆ ಉಪಲಕ್ಷ್ಯಗಳಾದ್ದರಿಂದ ಎಂದು ತಾತ್ಪರ್ಯ. 'ತದಶಿಷ್ಯಂ ಸಂಜ್ಞಾಪ್ರಮಾಣತ್ವಾತ್' ಎಂಬಂತೆ ಈ ರೀತಿಯಾಗಿ ಹೇಳಿದ್ದಾರೆ. ಇದನ್ನು ಮುಂದಿನ ಸೂತ್ರಗಳಲ್ಲೂ ಅನುಸಂಧಾನ ಮಾಡಿಕೊಳ್ಳಬೇಕು.

तर्हि प्राथमिकान्नमय एवेतरोपलक्षणत्वेनोच्यतामित्यतोऽपि सर्वगुणत्वतः । सर्वं गुणभूतम् अप्रधानं यस्य तस्य भावस्तस्मात् । सर्वापेक्षयास्यानन्दमयशब्दस्य 'तत्रानन्दादयो गुणाः ईशस्यैवेति निर्णीताः' इत्युपासनापादीयानुभाष्यसुधयोरुक्त-दिशा माङ्गलिकत्वेन प्राधान्यात्पूर्णानन्दवाचिन एवोक्तिरित्यर्थः ।

ಪರಿಪೂರ್ಣಚಂದ್ರಿಕಾ

ಹೀಗೆ ಒಂದನ್ನು ಮಾತ್ರ ಸೂತ್ರದಲ್ಲಿ ಹೇಳಿ ಉಳಿದ ನಾಲ್ಕು ಉಪಲಕ್ಷಣವೆನ್ನುವುದಾದರೆ ಪ್ರಾರಂಭದಲ್ಲಿರುವುದರಿಂದ ಅನ್ನಮಯನನ್ನೇ ಸೂತ್ರದಲ್ಲಿ ಹೇಳಿ ಉಪಲಕ್ಷಣವಾಗಿ ಆನಂದಮಯಾದಿಗಳನ್ನು ಹೇಳಬಹುದಿತ್ತಲ್ಲವೇ? ಎಂದರೆ ಅದಕ್ಕೂ 'ಸರ್ವಗುಣತ್ವತಃ' ಎಂಬುದಾಗಿಯೇ ಉತ್ತರ. ಯಾವುದಕ್ಕೆ ಸರ್ವಂ = ಎಲ್ಲವೂ (ಉಳಿದ ನಾಲ್ಕೂ), ಗುಣಭೂತಮ್ = ಅಪ್ರಧಾನಗಳೋ ಅದು ಸರ್ವಗುಣ. ಅದರ ಧರ್ಮವೇ ಸರ್ವಗುಣತ್ವ. ಅನ್ನಮಯಾದಿ ಸಕಲಶಬ್ದಗಳಿಗಿಂತ ಆನಂದಮಯಶಬ್ದವು 'ತತ್ರಾನಂದಾದಯೋ ಗುಣಾಃ । ಈಶಸ್ಯೈವೇತಿ ನಿರ್ಣೀತಾಃ' ಎಂದು ಉಪಾಸನಾಪಾದದ ಅನುಭಾಷ್ಯವ್ಯಾಖ್ಯಾನಸಂದರ್ಭದಲ್ಲಿ ಸುಧಾದಲ್ಲಿ ಹೇಳಿದಂತೆ ಮಂಗಲಕರವಾದ್ದರಿಂದ ಪ್ರಧಾನವಾಗಿದೆ. ಆದ್ದರಿಂದ ಪೂರ್ಣಾನಂದವನ್ನು ಹೇಳುವ ಆನಂದಮಯಶಬ್ದವನ್ನೇ ಸೂತ್ರದಲ್ಲಿ ಹೇಳಿದೆ.

कुतोऽस्य माङ्गलिकत्वम् । **सर्वगुणत्वतः** । सुखमेव मे स्यादिति निखिलापेक्षितत्वेन सर्वान् प्रति गुणत्वादनुगुणत्वान्निरुपाधिकेष्टत्वात् तद्वाच्यसुखस्येत्यर्थः । ब्रह्मानन्दस्यापि तादृशानन्दप्रदोपासनाविषयत्वेन सर्वान् प्रतीष्टत्वात् । यद्वा सर्वगुणत्वात् । 'गुणानाञ्च परार्थत्वादसम्बन्धः समत्वात् स्यात्' इत्यादौ जैमिनीये उपकारके गुणपदयोगात्पूर्वोत्तरसर्वनयोपकारकत्वादित्यर्थः । तथाहि । पूर्वोक्तजिज्ञासाऽऽक्षेपसमाधिहेतुत्वात्, तथा-

नाल्पे सुखमिति प्रोक्त्यैवानन्दमयतोक्तितः ।
अनन्तत्वं सुनिर्णीतं पूर्णानन्दो हि नाल्पके ।।

इत्यनुव्याख्यानोक्तेः 'यो वै भूमा तत्सुखं नाल्पे सुखमस्ति' इति श्रुत्युक्तदिशा पूर्णगुणस्यैव पूणोनन्दत्वेन विष्णोरत्र पूर्णानन्दत्वोक्तौ तस्यैव 'अथ कस्मादुच्यते' इत्यादिना ब्रह्मशब्दाद्युक्तानन्तगुणवत्त्वसिद्ध्या विष्णोरेव जिज्ञास्यत्वोपपादकत्वात् । तथा पूर्वनये शङ्काप्रापिकाया 'यतो वाचो निवर्तन्ते' इत्यादिश्रुतेः 'आनन्दं ब्रह्मणो विद्वान्' इत्युक्तानन्दस्यापरिच्छिन्नत्वेन कात्स्न्येन वागाद्यविषयत्वमेव न तु सर्वथेत्यर्थलाभाच्च पूर्वोपकारकत्वं 'अदृश्येनात्म्ये' इत्यादिना भाष्योक्तदिशोत्तर-नयारंभार्थत्वादुत्तरोपकारकत्वमित्याद्यूह्यम् । अत्रानन्दमय इत्येव वाच्ये पूर्णज्ञानादे-रुपलक्षणत्वेन पूर्णानंदस्योक्तिः समन्वीयमानशब्दानां यौगिकत्वसूचनाय । एवमग्रेऽपि ।।६।।

ಆನಂದಮಯಶಬ್ದ ಮಂಗಳಕರ ಎಂದಿರಿ. ಅದು ಹೇಗೆ ಎಂದರೆ ಅದನ್ನೂ 'ಸರ್ವಗುಣತ್ವತಃ' ಎಂಬ ಪದ ಹೇಳುತ್ತದೆ. 'ಸುಖವು ನನಗೆ ಇರಲಿ' ಎಂದು ಎಲ್ಲರೂ ಅಪೇಕ್ಷಿಸುವುದರಿಂದ ಸರ್ವ = ಎಲ್ಲರನ್ನೂ

ಕುರಿತು, ಗುಣತ್ವಾತ್, ಅನುಗುಣವಾದ್ದರಿಂದ, ನಿರುಪಾಧಿಕ ಇಷ್ಟವಾದ್ದರಿಂದ ಮತ್ತು ಬ್ರಹ್ಮಾನಂದವೂ ಕೂಡ ಅಂತಹ ಎಲ್ಲರೂ ಅಪೇಕ್ಷಿಸುವ ಆನಂದಪ್ರದವಾದ್ದರಿಂದ ಉಪಾಸನಾವಿಷಯವಾಗಿರುವುದರಿಂದ ಪ್ರಧಾನವಾಗಿದೆ. ಹಾಗಾಗಿ ಆನಂದಮಯಶಬ್ದವು ಮಾಂಗಲಿಕವಾಗಿದೆ.

ಅಥವಾ 'ಗುಣಾನಾಂ ಚ ಪರಾರ್ಥತ್ವಾದಸಂಬಂಧಃ ಸಮತ್ವಾತ್ ಸ್ಯಾತ್' ಇತ್ಯಾದಿ ಪೂರ್ವಮೀಮಾಂಸಾ ಸೂತ್ರದಲ್ಲಿ ಉಪಕಾರಕವಾದ್ದರಲ್ಲಿ ಗುಣಪದವನ್ನು ಬಳಸಿದ್ದರಿಂದ ಪೂರ್ವಾಧಿಕರಣ ಮತ್ತು ಅನಂತರದ ಎಲ್ಲಾ ಅಧಿಕರಣಗಳಿಗೆ ಉಪಕಾರಕವಾದ್ದರಿಂದ ಅದನ್ನು ಸೂತ್ರದಲ್ಲಿ ಹೇಳಿದ್ದಾರೆ.

ಅದು ಹೀಗೆ — ಹಿಂದಿನ ಜಿಜ್ಞಾಸಾಧಿಕರಣದ ಜಿಜ್ಞಾಸೆಯ ಮೇಲೆ ಬರುವ ಆಕ್ಷೇಪಗಳಿಗೆ ಸಮಾಧಾನರೂಪವಾಗಿದೆ. ಹಾಗೆಯೇ

ನಾಲ್ಪೇ ಸುಖಮಿತಿ ಪ್ರೋಕ್ತ್ಯೈವಾನಂದಮಯತೋಕ್ತಿತಃ ।
ಅನಂತತ್ವಂ ಸುನಿರ್ಣೀತಂ ಪೂರ್ಣಾನಂದೋ ಹಿ ನಾಲ್ಪಕೇ ॥

ಎಂದು ಅನುವ್ಯಾಖ್ಯಾನದ ಹೇಳಿದಂತೆ 'ಯೋ ವೈ ಭೂಮಾ ತತ್ ಸುಖಮ್' ಎಂದು ಶ್ರುತಿಯಲ್ಲಿ ಹೇಳಿದಂತೆ ಪೂರ್ಣಗುಣವುಳ್ಳವನೇ ಪೂರ್ಣಸುಖವುಳ್ಳವನಾದ್ದರಿಂದ ವಿಷ್ಣುವಿಗೆ ಇಲ್ಲಿ ಪೂರ್ಣಾನಂದತ್ವವನ್ನು ಹೇಳಿದರೆ ಅವನಿಗೆ 'ಅಥ ಕಸ್ಮಾದುಚ್ಯತೇ' ಇವೇ ಮೊದಲಾದ ಶ್ರುತಿಯಲ್ಲಿ ಹೇಳಿದ ಬ್ರಹ್ಮಶಬ್ದದಿಂದ ಉಕ್ತವಾದ ಅನಂತಗುಣವತ್ವವು ಸಿದ್ಧವಾಗಿರುವುದರಿಂದ ವಿಷ್ಣುವೇ ಜಿಜ್ಞಾಸ್ಯ ಎನ್ನುವುದನ್ನು ಸಮರ್ಥಿಸುತ್ತದೆ.

ಹಾಗೆಯೇ ಈಕ್ಷತ್ಯಧಿಕರಣದಲ್ಲಿ ಶಂಕೆಯನ್ನು ಸಮರ್ಪಿಸುವ 'ಯತೋ ವಾಚೋ ನಿವರ್ತಂತೇ' ಎನ್ನುವ ಶ್ರುತಿಗೆ 'ಆನಂದಂ ಬ್ರಹ್ಮಣೋ ವಿದ್ವಾನ್' ಎಂದು ಹೇಳಿದ ಆನಂದವು ಅಪರಿಚ್ಛಿನ್ನವಾದ್ದರಿಂದ ವಾಗಾದಿ ಇಂದ್ರಿಯಗಳಿಗೆ ಸಂಪೂರ್ಣವಾಗಿ ವಿಷಯವಾಗುವುದಿಲ್ಲ; ಹೊರತು ಸರ್ವಥಾ ಅವಿಷಯನಲ್ಲ ಎಂದು ಅರ್ಥ ಸಿದ್ಧಿಸುವುದರ ಮೂಲಕ ಹಿಂದಿನ ಅಧಿಕರಣಕ್ಕೆ ಉಪಕಾರಕವಾಗಿದೆ. ಮತ್ತು 'ಅದೃಶ್ಯೇಽನಾತ್ಮ್ಯೇ' ಇತ್ಯಾದಿ ಭಾಷ್ಯದಲ್ಲಿ ಹೇಳಿದ ರೀತಿಯಿಂದ ಮುಂದಿನ ಅಧಿಕರಣಗಳ ಆರಂಭಕ್ಕೆ ಕಾರಣವಾಗುತ್ತದೆ ಇತ್ಯಾದಿಯಾಗಿ ಊಹಿಸಿಕೊಳ್ಳಬೇಕು.

ಇಲ್ಲಿ ಆನಂದಮಯ ಇಷ್ಟೇ ಹೇಳಬೇಕಿದ್ದರೂ ಪೂರ್ಣಜ್ಞಾನ ಮೊದಲಾದವುಗಳಿಗೆ ಉಪಲಕ್ಷಣವನ್ನಾಗಿ ಪೂರ್ಣಾನಂದವನ್ನು ಹೇಳಿದ್ದು ಮುಂದೆ ಸಮನ್ವಯ ಮಾಡುವ ಶಬ್ದಗಳು ಯೌಗಿಕವಾಗಿವೆ ಎಂದು ಸೂಚಿಸುವುದಕ್ಕಾಗಿ. ಹೀಗೆ ಮುಂದೆಯೂ ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
ತತ್ವಮಂಜರಿಯ ಕನ್ನಡಾನುವಾದದಲ್ಲಿ ಆನಂದಮಾಯಾಧಿಕರಣವು ಮುಗಿಯಿತು.

* * * * *

।।श्रीः ।।

श्रीराघवेन्द्रतीर्थविरचिता

# तन्त्रदीपिका

## ।। ॐ आनन्दमयोऽभ्यासात् ॐ ।। १-१-१२

अत्र नये गुणिसामान्यवाचका गुणवाचकाश्च नामात्मकाः शब्दास्समन्वीयन्ते । तत्त्विति आध्यायपरिसमाप्ति साध्यार्पकतया प्रतिनयं प्रायेण अनुवर्तते । आनन्दमय इत्युपलक्षणम् । तैत्तिरीये श्रुता आनन्दमयादयः पञ्च तत्तु तदेव ब्रह्मैव । आनन्दमयादिशब्दवाच्यं ब्रह्मैवेत्यर्थः ।

एवमग्रेऽपि प्रतिनयमर्थो ध्येयः । कुतः अभ्यासात्? अत्राभ्यासशब्देन तदेकदेशोऽसकृदुक्तिमात्रं गृह्यते । प्रतिप्रकरणं ''येऽन्नं ब्रह्मोपासते'' इत्यादिरूपेण ब्रह्मशब्दश्रवणादित्यर्थः । यद्वा ''अन्योन्तर आत्मा'', ''एतमन्नमयामात्मानमुपसङ्क्रमति'', ''एतमन्नमयमात्मानमुपसङ्क्रम्य'' इति प्रतिप्रकरणं त्रिः श्रवणादात्मशब्दाभ्यासादित्यर्थः ।

यद्वा ''अन्नं ब्रह्मेति व्यजानात्'' इत्युत्तरानवाके ब्रह्मशब्दसत्त्वात् द्विः श्रवणेन ब्रह्मशब्दाभ्यासादेवेत्यर्थः ।। उत्तरं कल्पद्वयं चन्द्रिकोक्तम् ।

श्रुतौ अन्नमयस्यादित्वेऽप्यानन्दमयस्येतरोपलक्षकत्वेनोक्तिः जिज्ञासाक्षेपकावयवत्वादिपूर्वपक्षहेतोः सत्त्वात् सर्वापेक्षितानन्दवाचित्वाच्च । आद्यकल्पे ब्रह्मशब्दादिति वाच्येऽभ्यासादित्युक्तिर्विज्ञानानन्दमययोः सोऽप्यस्तीति सूचनाय ।।

ತಂತ್ರದೀಪಿಕಾ

ಅನುವಾದ -- "ತತ್ತು ಸಮನ್ವಯಾತ್" ಎಂದು ಪ್ರತಿಜ್ಞೆ ಮಾಡಿದ ಸಕಲಶಬ್ದಗಳ ಸಮನ್ವಯವನ್ನು ಈ ಅಧ್ಯಾಯದ ಮುಂದಿನ ಭಾಗದಿಂದ ತೋರಿಸುತ್ತಾರೆ. ವೈದಿಕಶಬ್ದಗಳು ಅನ್ಯತ್ರಪ್ರಸಿದ್ಧ, ಉಭಯತ್ರಪ್ರಸಿದ್ಧ ಮತ್ತು ಅನ್ಯತ್ರೈವಪ್ರಸಿದ್ಧ ಎಂದು ಮೂರುವಿಧವಾಗಿವೆ. ಅಲ್ಲದೆ ಆ ಮೂರುವಿಧಶಬ್ದಗಳೂ ನಾಮಾತ್ಮಕ ಮತ್ತು ಲಿಂಗಾತ್ಮಕ ಎಂದು ಒಂದೊಂದೂ ಪ್ರತ್ಯೇಕವಾಗಿ ಎರಡು ವಿಧವಾಗಿವೆ. ಅವುಗಳಲ್ಲಿ ಅನ್ಯತ್ರಪ್ರಸಿದ್ಧಗಳಾದ ನಾಮಾತ್ಮಕಶಬ್ದಗಳ ಸಮನ್ವಯವನ್ನು ಮೊದಲನೆಯ ಪಾದದಲ್ಲಿ ಹೇಳುತ್ತಾರೆ.

ಈ ಅಧಿಕರಣದಲ್ಲಿ ಗುಣಸಾಮಾನ್ಯವಾಚಕವಾದ ಶಬ್ದಗಳು ಮತ್ತು ಗುಣವಾಚಕವಾದ ಶಬ್ದಗಳ ಸಮನ್ವಯವನ್ನು ಹೇಳುತ್ತಾರೆ. 'ತತ್ತು ಸಮನ್ವಯಾತ್' ಎಂಬ ಸೂತ್ರದಿಂದ 'ತತ್ ತು' ಎಂಬ ಪದಗಳು ಈ ಅಧ್ಯಾಯದ ಕೊನೆಯವರೆಗೂ ಸಾಧ್ಯಾಂಶದ ಉಪಸ್ಥಾಪನೆಗಾಗಿ ಪ್ರಾಯಶಃ ಪ್ರತಿಸೂತ್ರದಲ್ಲಿ ಅನುವೃತ್ತಿಯಾಗುತ್ತವೆ.

ಇಲ್ಲಿ ಆನಂದಮಯ ಎನ್ನುವುದು ಉಪಲಕ್ಷಣ. ತೈತ್ತಿರೀಯೋಪನಿಷತ್ತಿನಲ್ಲಿ ಶ್ರುತವಾದ (ಹೇಳಲ್ಪಟ್ಟ) ಆನಂದಮಯ ಮೊದಲಾದ ಐದು ತತ್ತು = ಆ ಬ್ರಹ್ಮನೇ. ಆನಂದಮಯಾದಿಶಬ್ದವಾಚ್ಯನು ಬ್ರಹ್ಮನೇ ಎಂದರ್ಥ. ಹೀಗೆ ಆನಂದಮಯಾದಿಗಳು ಬ್ರಹ್ಮ ಎಂದರೆ ಬ್ರಹ್ಮಶಬ್ದಾಭ್ಯಾಸವಿರುವುದರಿಂದ. ಇಲ್ಲಿ ಅಭ್ಯಾಸಪದದಿಂದ 'ಏಕಪ್ರಕಾರ ಅಸಕೃದುಕ್ತಿಃ' ಎಂದರ್ಥವಿಟ್ಟುಕೊಳ್ಳದೆ ಅದರ ಒಂದಂಶವಾದ 'ಅಸಕೃದುಕ್ತಿ' ಎಂದಷ್ಟೇ ಸ್ವೀಕರಿಸಬೇಕು. ಪ್ರತಿಪ್ರಕರಣದಲ್ಲಿಯೂ 'ಯೇಽನ್ನಂ ಬ್ರಹ್ಮೋಪಾಸತೇ' ಇತ್ಯಾದಿಯಾಗಿ ಬ್ರಹ್ಮಶಬ್ದವು ಶ್ರುತವಾದ್ದರಿಂದ (ಆನಂದಮಯಾದಿಶಬ್ದವಾಚ್ಯನು ಬ್ರಹ್ಮನೇ) ಎಂದರ್ಥ. ಹೀಗೆ ಮುಂದೆಯೂ ಕೂಡ ಪ್ರತಿ ಅಧಿಕರಣದಲ್ಲಿ ಅನ್ವಯಾರ್ಥವನ್ನು ತಿಳಿಯಬೇಕು. ಏಕೆ ಆನಂದಮಯಾದಿಗಳು ಬ್ರಹ್ಮ ಎಂದರೆ ಬ್ರಹ್ಮಶಬ್ದಾಭ್ಯಾಸವಿರುವುದರಿಂದ. ಇಲ್ಲಿ ಅಭ್ಯಾಸಪದದಿಂದ 'ಏಕಪ್ರಕಾರ ಅಸಕೃದುಕ್ತಿಃ' ಎಂದರ್ಥವಿಟ್ಟುಕೊಳ್ಳದೆ ಅದರ ಒಂದಂಶವಾದ ಅಸಕೃದುಕ್ತಿ ಎಂದಷ್ಟೇ ಸ್ವೀಕರಿಸಬೇಕು. ಪ್ರತಿಪ್ರಕರಣದಲ್ಲಿಯೂ ಯೇಽನ್ನಂ ಬ್ರಹ್ಮೋಪಾಸತೇ' ಇತ್ಯಾದಿಯಾಗಿ ಬ್ರಹ್ಮಶಬ್ದವು ಶ್ರುತವಾದದ್ದರಿಂದ (ಆನಂದಮಯಾದಿಶಬ್ದವಾಚ್ಯನು ಬ್ರಹ್ಮ).

ಅಥವಾ 'ಅನ್ಯೋಽಂತರಾತ್ಮಾ' 'ಏತಮನ್ನಮಯಮಾತ್ಮಾನಮುಪಸಂಕ್ರಾಮತಿ' 'ಏತಮನ್ನಮಯಮಾತ್ಮಾನಮುಪಸಂಕ್ರಮ್ಯ' ಎಂದು ಪ್ರತಿಪ್ರಕರಣದಲ್ಲಿ ಮೂರು ಬಾರಿ ಹೇಳಿದ್ದರಿಂದ 'ಆತ್ಮಶಬ್ದಾಭ್ಯಾಸಾತ್' ಎಂದಿಟ್ಟುಕೊಳ್ಳಬಹುದು.

ಅಥವಾ 'ಅನ್ನಂ ಬ್ರಹ್ಮೇತಿ ವ್ಯಜಾನಾತ್' ಎಂದು ಮುಂದಿನ ಅನುವಾಕದಲ್ಲಿ ಬ್ರಹ್ಮಶಬ್ದವಿದೆ. ಹೀಗೆ ಎರಡು ಬಾರಿ ಬ್ರಹ್ಮಶಬ್ದ ಶ್ರುತವಾದದ್ದರಿಂದ ಬ್ರಹ್ಮಶಬ್ದಾಭ್ಯಾಸದಿಂದಲೇ ಎಂದರ್ಥ. ಕೊನೆಯಲ್ಲಿ ಹೇಳಿದ ಎರಡು ಪ್ರಕಾರಗಳು ಚಂದ್ರಿಕಾಗ್ರಂಥದಲ್ಲಿ ಹೇಳಿದವುಗಳು.

ಶ್ರುತಿಯಲ್ಲಿ ಅನ್ನಮಯಶಬ್ದವು ಮೊದಲಿದ್ದರೂ ಅದನ್ನು ಬಿಟ್ಟು ಸೂತ್ರದಲ್ಲಿ ಆನಂದಮಯಶಬ್ದವನ್ನು ಸ್ವೀಕರಿಸಿ ಅದನ್ನು ಉಳಿದ ಶಬ್ದಗಳಿಗೆ ಉಪಲಕ್ಷಣ ಎಂದು ಹೇಳಿದ್ದಾರೆ. ಅದಕ್ಕೆ ಕಾರಣ ''ಜಿಜ್ಞಾಸೆಯನ್ನು ಮಾಡಬಾರದು ಎಂದು ಆಕ್ಷೇಪಿಸುವ ಅವಯವತ್ವಹೇತುವು ಆನಂದಮಯನ ಪ್ರಕರಣದಲ್ಲಿ ಮಾತ್ರವಿದೆ. ಮತ್ತು ಆ ಶಬ್ದ ಎಲ್ಲರೂ ಆಕ್ಷೇಪಿಸುವ ಆನಂದವನ್ನು ಹೇಳುತ್ತದೆ. ಆದ್ದರಿಂದ ಆನಂದಮಯಶಬ್ದವನ್ನು ಸೂತ್ರದಲ್ಲಿ ಹೇಳಿದ್ದು.

'ಅಭ್ಯಾಸಾತ್' ಎನ್ನುವುದಕ್ಕೆ ಮೂರು ರೀತಿ ಅಭಿಪ್ರಾಯವನ್ನು ಹಿಂದೆ ತಿಳಿಸಿದೆ. ಅದರಲ್ಲಿ ಮೊದಲನೆಯ ಪಕ್ಷದಲ್ಲಿ ಬ್ರಹ್ಮಶಬ್ದಾತ್ ಎಂದು ಹೇಳುವುದರ ಬದಲು ಬ್ರಹ್ಮಶಬ್ದಾಭ್ಯಾಸಾತ್ ಎಂದು ಹೇಳಿದ್ದು ಏಕೆಂದರೆ 'ವಿಜ್ಞಾನಮಯ ಮತ್ತು ಆನಂದಮಯ ಈ ಎರಡೂ ಪ್ರಕರಣದಲ್ಲಿ ಬ್ರಹ್ಮಶಬ್ದವಿದೆ' ಎಂದು ತಿಳಿಸಲು.

ಪರಿಪೂರ್ಣಚಂದ್ರಿಕಾ

उक्तमाक्षिप्य समाधत्ते -

**।। ॐ विकारशब्दान्नेति चेन्न प्राचुर्यात् ॐ ।। १-१-१३**

विकारार्थकमयट्शब्दादन्नमयादिर्न ब्रह्मेति चेन्न । प्राचुर्यात् प्राचुर्यार्थत्वादत्र मयट्शब्दजातस्येत्यर्थः । शब्दादिति समुदायाभिप्रायम् । विकारेति प्राचुर्यादिति च बाधकान्तरतत्समाध्योरुपलक्षणम् । समन्वेयशब्दगतत्वादस्य स्वशब्देनोक्तिः ।।

ವಿಕಾರಾರ್ಥಕಮಯಟ್‌ಪ್ರತ್ಯಯವಿರುವುದರಿಂದ 'ಅನ್ನಮಯಾದಿ'ಗಳು ಬ್ರಹ್ಮನಲ್ಲ. 'ಪ್ರಾಚುರ್ಯಾತ್' ಎಂದರೆ ಮಯಟ್‌ಪ್ರತ್ಯಯಗಳಿಗೆ ಪ್ರಾಚುರ್ಯ ಎಂದರ್ಥವಾದ್ದರಿಂದ ಎಂದರ್ಥ. ಹಾಗಾದರೆ ಶಬ್ದಾತ್ ಎಂದು ಏಕವಚನ ಏಕೆ? ಎಂದರೆ ಸಮುದಾಯಏಕವಚನ ಎಂದಿಟ್ಟುಕೊಳ್ಳಬೇಕು. 'ವಿಕಾರ' ಮತ್ತು 'ಪ್ರಾಚುರ್ಯಾತ್' ಎಂಬ ಎರಡು ಪದಗಳು ಅನ್ನಮಯಾದಿಗಳು ಬ್ರಹ್ಮ ಎಂದರೆ ಬರುವ ಬಾಧಕ ಮತ್ತು ಅದರ ಪರಿಹಾರಕ್ಕೆ ಉಪಲಕ್ಷಣಗಳಾಗಿವೆ. ವಿಕಾರ ಮತ್ತು ಪ್ರಾಚುರ್ಯ ಎನ್ನುವ ಎರಡು ಪದಗಳು ಸಮನ್ವಯಗೊಳಿಸುತ್ತಿರುವ ಅನ್ನಮಯಾದಿಶಬ್ದಗಳಲ್ಲಿರುವುದರಿಂದ ಅವುಗಳನ್ನು ಆಯಾ ಪದಗಳಿಂದಲೇ ಸೂತ್ರದಲ್ಲಿ ಹೇಳಿದೆ.

आनन्दमयामात्रस्य ब्रह्मत्वे मयटः प्राचुर्यार्थत्वे च हेत्वन्तरमाह -

**।। ॐ तद्धेतुव्यपदेशाच्च ॐ ।। १-१-१४**

आनन्दमयस्तत्त्विति वर्तते । मयट् प्राचुर्यार्थ इति च । तस्य विष्णोस्तत्र पूर्णानन्दत्वे "को ह्येवान्यात्" इति लोकचेष्टकत्वाख्यहेतुव्यपदेशादित्यर्थः । सौत्रं तदिति पदं तन्त्रम् । यद्यानन्दमयो न ब्रह्म, मयट् च न प्राचुर्यार्थस्तदा आकाशाख्यविष्णोः पूर्णानन्दत्वे हेतुं न ब्रूयादिति भावः ।।

ಆನಂದಮಯನನ್ನು ಬ್ರಹ್ಮನೆನ್ನಲು ಮತ್ತು ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯ ಎಂದರ್ಥ ಹೇಳಲು ಮತ್ತೊಂದು ಯುಕ್ತಿಯನ್ನು ಹೇಳುತ್ತಾರೆ.

ಆನಂದಮಯಃ, ತತ್, ತು ಎಂಬ ಪದಗಳು ಅನುವೃತ್ತವಾಗುತ್ತವೆ. ಮಯಟ್ ಪ್ರತ್ಯಯವು ಪ್ರಾಚುರ್ಯಾರ್ಥದಲ್ಲಿದೆ ಎಂದಿಟ್ಟುಕೊಳ್ಳಬೇಕು. ತಸ್ಯ = ಆ ವಿಷ್ಣುವಿಗೆ, ತತ್ರ = ಪೂರ್ಣಾನಂದವುಳ್ಳವನು ಎನ್ನುವ ವಿಷಯದಲ್ಲಿ 'ಕೋ ಹ್ಯೇವಾನ್ಯಾತ್' ಎಂದು ಜಗಚ್ಚೇಷ್ಟಕತ್ವಹೇತುವನ್ನು ಹೇಳಿದ್ದರಿಂದ ಎಂದು ಅಭಿಪ್ರಾಯ. ಸೂತ್ರದಲ್ಲಿರುವ ತತ್ ಎಂಬ ಪದವನ್ನು ತಂತ್ರದಿಂದ ತಸ್ಯ ತಸ್ಮಿನ್ ಎಂಬುದಾಗಿ ಎರಡು ಬಾರಿ ಇಟ್ಟುಕೊಳ್ಳಬೇಕು. ಒಂದುವೇಳೆ ಆನಂದಮಯನು ಬ್ರಹ್ಮನಲ್ಲವೆಂದಾದರೆ ಮಯಟ್‌ಪ್ರತ್ಯಯವು ಪ್ರಾಚುರ್ಯ ಎಂಬರ್ಥವುಳ್ಳದ್ದಲ್ಲವಾದರೆ ಆಗ ಆಕಾಶನಾಮಕನಾದ ವಿಷ್ಣುವಿಗೆ ಪೂರ್ಣಾನಂದತ್ವವಿಷಯದಲ್ಲಿ ಶ್ರುತಿಯು ಹೇತುವನ್ನು ಹೇಳಬಾರದಿತ್ತು ಎಂದಭಿಪ್ರಾಯ.

इतश्चानन्दमयादयः पञ्चापि ब्रह्मेत्याह -

**।। ॐ मान्त्रवर्णिकमेव च गीयते ॐ ।। १-१-१५**

आनन्दमयादिर्ब्रह्मेति वर्तते । चो यत इत्यर्थे । किञ्चेति समुच्चये वा । मन्त्रवर्णः ''सत्यं ज्ञानमनन्तं'' इति वेदः तेन प्रोक्तं मान्त्रवर्णिकम् । मन्त्रवर्णेन लक्षणवत्तयोक्तं परं ब्रह्मैवान्नमयादिशब्दपञ्चकेन गीयते । यतोऽतश्च पञ्चापि ब्रह्मैवेत्यर्थः । सत्यज्ञानानन्तपदानामन्नमयादिशब्दानां चार्थानुसन्धाने एकार्थत्व-प्रतीतेरिति भावः । एतेनाभ्यासादित्युक्तब्रह्मशब्दोऽमुख्य इति निरस्तम् । मान्त्रवर्णिकपरब्रह्मण एवात्र गानादिति ।।

ಮತ್ತೊಂದು ಕಾರಣದಿಂದಲೂ ಆನಂದಮಯಾದಿಗಳು ಐದೂ ಬ್ರಹ್ಮನೆಂದು ಹೇಳುತ್ತಾರೆ. ಆನಂದಮಯಾದಿಃ, ಬ್ರಹ್ಮ ಎನ್ನುವ ಪದಗಳು ಅನುವೃತ್ತವಾಗುತ್ತವೆ. ಇಲ್ಲಿ 'ಚ'ಎನ್ನುವ ಶಬ್ದವು 'ಯತಃ' (ಯಾವಕಾರಣದಿಂದ) ಎಂಬರ್ಥದಲ್ಲಿದೆ. ಅಥವಾ 'ಕಿಂಚ' ಎಂಬರ್ಥದಲ್ಲಿದ್ದು ಸಮುಚ್ಚಯವನ್ನು ಹೇಳುತ್ತಿದೆ. 'ಮಾಂತ್ರವರ್ಣಿಕ' ಎಂದರೆ ಮಂತ್ರವರ್ಣ, ಅಂದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎನ್ನುವ ವೇದಮಂತ್ರವು. ಅದರಿಂದ ಹೇಳಲ್ಪಟ್ಟಿದ್ದು ಮಾಂತ್ರವರ್ಣಿಕ. ಯಾವಕಾರಣದಿಂದ ಮಂತ್ರವರ್ಣದಲ್ಲಿ ಸತ್ಯಜ್ಞಾನಾದಿಲಕ್ಷಣವುಳ್ಳವನನ್ನಾಗಿ ಯಾವ ಪರಬ್ರಹ್ಮನನ್ನು ಹೇಳಿದೆಯೋ ಆ ಬ್ರಹ್ಮನೇ ಅನ್ನಮಯಾದಿ ಐದು ಶಬ್ದಗಳಿಂದಲೂ ಹೇಳಲ್ಪಡುತ್ತಾನೆ. ಆದ್ದರಿಂದ ಅನ್ನಮಯಾದಿ ಐದೂ ಬ್ರಹ್ಮನೇ. ಸತ್ಯ, ಜ್ಞಾನ, ಅನಂತ ಎಂಬ ಪದಗಳ ಮತ್ತು ಅನ್ನಮಯಾದಿ ಐದೂ ಪದಗಳ ಅರ್ಥವನ್ನು ವಿಮರ್ಶಿಸಿದಾಗ ಅವುಗಳಿಗೆ ಒಂದೇ ಅರ್ಥವಿರುವುದು ತಿಳಿಯುತ್ತದೆ ಎಂದಭಿಪ್ರಾಯ.

ಹೀಗೆ ಹೇಳಿದ್ದರಿಂದ 'ಅಭ್ಯಾಸಾತ್' ಎಂದು ಹೇಳಿದ ಬ್ರಹ್ಮಶಬ್ದವೂ ಕೂಡ ಅಮುಖ್ಯಾರ್ಥವುಳ್ಳದ್ದು. (ಅಂದರೆ ಬ್ರಹ್ಮಶಬ್ದಕ್ಕೆ ಜೀವ ಮೊದಲಾದವರು ಎಂದರ್ಥ). ಆದ್ದರಿಂದ ನೀವು ಹೇಳುವ ಪ್ರಮೇಯವನ್ನು ಸಾಧಿಸುವುದಿಲ್ಲ ಎನ್ನುವುದು ಕೂಡ ನಿರಾಕೃತವಾಗುತ್ತದೆ. ಏಕೆಂದರೆ ಮಂತ್ರವರ್ಣದಲ್ಲಿ ಬ್ರಹ್ಮಶಬ್ದಮುಖ್ಯಾರ್ಥವಾದ ಪರಬ್ರಹ್ಮನನ್ನೇ ಹೇಳುತ್ತಿರುವುದು. ಆದ್ದರಿಂದ ತತ್ ಸಮಾನಾರ್ಥವಾದ ಅನ್ನಮಯಾದಿಗಳೂ ಪರಬ್ರಹ್ಮರೇ ಆದ್ದರಿಂದ ಮೊದಲಿನ ಪ್ರಶ್ನೆಗೆ ಅವಕಾಶವಿಲ್ಲ.

विरिञ्चादिरेव किं नेत्यत आह -

**।। ॐ नेतरोऽनुपपत्तेः ॐ ।। १-१-१६**

आनन्दमयादिरिति वर्तते । इतरस्तदितरो विष्णिवतरश्चतुर्मुखादिर्न भवति । कुतः? ''ब्रह्मविदाप्नोति परम्'' इत्युक्तमुक्तिहेतुज्ञानविषयत्वस्यानुपपत्तेः । तस्यैवा-

न्नमयादित्वेनोक्तत्वादित्यर्थः । ''विभाषा गुणेऽस्त्रियाम्'' इत्यत्र विभाषा गुण इति योगविभागोक्तेरनुपपत्तेरिति साधु । एवमग्रेऽपि ।।

ಚತುರ್ಮುಖಬ್ರಹ್ಮಾದಿಗಳು ಆನಂದಮಯಶಬ್ದವಾಚ್ಯರು ಏಕಾಗಬಾರದು? ಎಂದರೆ 'ನೇತರೋಽನು-ಪಪತ್ತೇಃ' ಎಂಬ ಸೂತ್ರ ಉತ್ತರಿಸುತ್ತದೆ.

ಅನ್ನಮಯಾದಿಃ ಎನ್ನುವುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಇತರಃ = ಅವನಿಗಿಂತ ಬೇರೆಯವನಾದ, ವಿಷ್ಣುವಿಗಿಂತ ಭಿನ್ನರಾದ ಚತುರ್ಮುಖಬ್ರಹ್ಮಾದಿಗಳು, ನ = ಆನಂದಮಯಶಬ್ದವಾಚ್ಯರಲ್ಲ. ಏಕೆಂದರೆ 'ಬ್ರಹ್ಮವಿದಾಪ್ನೋತಿ ಪರಮ್' ಎಂದು ಹೇಳಿದ ಮೋಕ್ಷಕ್ಕೆ ಕಾರಣವಾದ ಜ್ಞಾನವಿಷಯತ್ವವು ಅವರಲ್ಲಿ ಬರುವುದಿಲ್ಲವಾದ್ದರಿಂದ 'ಬ್ರಹ್ಮವಿದಾಪ್ನೋತಿ ಪರಮ್' ಎಂದು ಯಾರನ್ನು ಹೇಳಿದ್ದಾರೋ, ಅವನನ್ನೇ ಅನ್ನಮಯಾದಿಶಬ್ದಗಳಿಂದ ಹೇಳಿದ್ದಾರೆ. ಹಾಗಾಗಿ ಅವರುಗಳು ಆನಂದಮಯಶಬ್ದವಾಚ್ಯರಲ್ಲ.

'ವಿಭಾಷಾ ಗುಣೇಽಸ್ತ್ರಿಯಾಂ' (ಪಾ.ಸೂ.೨/೩/೫) ಎಂಬ ಸೂತ್ರದಲ್ಲಿ 'ವಿಭಾಷಾ ಗುಣೇ' ಎಂದು ಸೂತ್ರವನ್ನು ವಿಭಾಗಿಸಿರುವುದರಿಂದ 'ಅನುಪಪತ್ತೇಃ' ಎಂದು ಹೇಳಿರುವುದು ಸಾಧುವಾಗಿದೆ. (ಇಲ್ಲದಿದ್ದರೆ ಸ್ತ್ರೀಲಿಂಗವಾದ್ದರಿಂದ ಪಂಚಮೀವಿಭಕ್ತಿ ಹೇಗೆ ಎಂಬ ಪ್ರಶ್ನೆ ಬರುತ್ತಿತ್ತು). ಹೀಗೆಯೇ ಮುಂದಿನ ಸೂತ್ರಗಳಲ್ಲೂ ತಿಳಿಯಬೇಕು.

**इतश्चैवमित्याह -**

**।। ॐ भेदव्यपदेशाच्च ॐ ।। १-१-१७**

आनन्दमयो नेतर इति वर्तते । आनन्दमयाद्भेदव्यपदेशाच्चानन्दमयो नेतर इत्यर्थः । ''स एको ब्रह्मण आनन्दः'' इत्यादिना विरिञ्चादेः परिमितानन्दत्वमुक्त्वा ''यतो वाच'' इत्यानन्दमयस्य पूर्णानन्दत्वोक्तेरिति भावः ।

सुधायां तु आनन्दमयादेर्विरिञ्चादित्वं युज्यते । मुक्तिहेतुज्ञानत्वादिब्रह्मधर्माणां ब्रह्माभेदाज्जीवानां कथञ्चिदुपपत्तेरित्याशङ्कायां ''भेदव्यपदेशाच्च'' इति सूत्रम् । तत्र चशब्दो न केवलमितर आनन्दमयादिर्नेति किन्तु ब्रह्माभिन्नश्च नेत्यर्थे ''स यश्चायं पुरुषे । यश्चासावादित्ये'' इत्यादावधिष्ठातृत्वादिना ब्रह्मभेदस्य व्यपदेशादिति व्याख्यातम् ।।

ಮತ್ತೊಂದು ಕಾರಣದಿಂದಲೂ ಆನಂದಮಯಶಬ್ದವಾಚ್ಯರು ಚತುರ್ಮುಖಾದಿಗಳು ಅಲ್ಲ ಎಂದು ಹೇಳುತ್ತಾರೆ. 'ಆನಂದಮಯ' ಮತ್ತು 'ನೇತರಃ' ಎಂಬ ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆನಂದಮಯನಿಂದ ಬೇರೆಯವರಿಗೆ ಭೇದವನ್ನು ಹೇಳಿದ್ದರಿಂದ ಆನಂದಮಯಶಬ್ದವಾಚ್ಯರು ಬೇರೆಯವರಲ್ಲ ಎಂದು ಅಭಿಪ್ರಾಯ. 'ಸ ಏಕೋ ಬ್ರಹ್ಮಣ ಆನಂದಃ' ಇವೇ ಮೊದಲಾದವುಗಳಿಂದ

ಚತುರ್ಮುಖಬ್ರಹ್ಮಾದಿದೇವತೆಗಳಿಗೆ ಪರಿಮಿತವಾದ ಆನಂದವನ್ನು ಹೇಳಿ, 'ಯತೋ ವಾಚೋ' ಎಂದು ಆನಂದಮಯನಿಗೆ ಅಪರಿಮಿತವಾದ ಆನಂದವನ್ನು ಹೇಳಿದ್ದಾರೆಂದು ಭಾವ.

ಸುಧಾದಲ್ಲಿ ಚತುರ್ಮುಖಾದಿಗಳಿಗೆ ಆನಂದಮಯವು ಕೂಡುತ್ತದೆ. ಏಕೆಂದರೆ ಮುಕ್ತಿಹೇತುಜ್ಞಾನವಿಷಯತ್ವವೆಂಬ ಬ್ರಹ್ಮನ ಧರ್ಮವು ಬ್ರಹ್ಮನಿಂದ ಅಭಿನ್ನರಾದ ಅವರಿಗೆ ಕೂಡುತ್ತದಲ್ಲವೆ? ಎಂದು ಸಂದೇಹ ಬಂದರೆ "ಭೇದವ್ಯಪದೇಶಾಚ್ಚ" ಎಂಬ ಸೂತ್ರ ಹೊರಟಿದೆ. ಅಲ್ಲಿರುವ ಚಶಬ್ದವು ಬೇರೆಯವರು ಆನಂದಮಯರಲ್ಲ ಎಂದಷ್ಟೇ ಅಲ್ಲ. ಕಿಂತು ಬ್ರಹ್ಮನಿಂದ ಅಭಿನ್ನರೂ ಅಲ್ಲ (ಎಂದು ಸೂಚಿಸುತ್ತಿದೆ.) 'ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ' ಎನ್ನುವ ಶ್ರುತಿಯಲ್ಲಿ ಜೀವನು ಅಧಿಷ್ಠಾನ. ಬ್ರಹ್ಮನು ಅಧಿಷ್ಠಾತೃವು ಎಂದು ಜೀವಬ್ರಹ್ಮರಿಗೆ ಭೇದವನ್ನು ಹೇಳಿದ್ದಾರೆಂದು ವ್ಯಾಖ್ಯಾನಿಸಲ್ಪಟ್ಟಿದೆ.

**नन्वस्त्वानन्दमयादिर्ब्रह्म । तद्भेदो विरिञ्चादेर्न युक्तः । शरीरत्वात्मत्वाद्यनुमानविरोधादित्यत आह -**

**।। ॐ कामाच्च नानुमानापेक्षा ॐ ।। १-१-१८**

**चोऽवधारणे । अदृष्टेऽर्थे शुष्कानुमानापेक्षा न कार्या । कामात् कामचारित्वादेवेत्यर्थः । प्रत्यक्षस्याद्वैतेऽप्रसरात् श्रुतेश्च "तद्गुणसारत्वात्" इत्यत्र निरस्यत्वादनुमानमेवाशङ्क्य प्रत्युक्तम् ।**

ಆನಂದಮಯಶಬ್ದವಾಚ್ಯನು ಬ್ರಹ್ಮನೇ ಆಗಲಿ. ಆದರೆ ಚತುರ್ಮುಖಾದಿಗಳಿಗೆ ಬ್ರಹ್ಮನಿಂದ ಭೇದವಿದೆ ಎನ್ನುವುದು ಸರಿಯಲ್ಲ. ಏಕೆಂದರೆ ಶರೀರತ್ವಾನುಮಾನದಿಂದ ವಿರೋಧ ಬರುತ್ತದೆ. ('ಸರ್ವಾಣಿ ಶರೀರಾಣಿ ಮದ್ಭೋಗಾಯತನಾನಿ, ಶರೀತತ್ವಾತ್' = ಎಲ್ಲಾ ಶರೀರಗಳು ನನ್ನ ಭೋಗಕ್ಕೆ ಸಾಧನಗಳು; ಶರೀರವಾಗಿರುವುದರಿಂದ) ಎಂದರೆ, "ಕಾಮಾಚ್ಚ ನಾನುಮಾನಾಪೇಕ್ಷಾ" ಎಂಬ ಸೂತ್ರವು ಹೊರಟಿದೆ.

ಇಲ್ಲಿ ಚಶಬ್ದವು ಅವಧಾರಣಾರ್ಥಕದಲ್ಲಿದೆ. ಪ್ರತ್ಯಕ್ಷವಲ್ಲದ ಪದಾರ್ಥದ ವಿಷಯದಲ್ಲಿ ಶುಷ್ಕವಾದ (ಪ್ರತ್ಯಕ್ಷ, ಆಗಮಗಳ ಸಹಕಾರವಿಲ್ಲದ) ಅನುಮಾನವನ್ನು ಪ್ರಯೋಗಿಸಬಾರದು. ಏಕೆಂದರೆ ಕಾಮಾತ್ = ಕಾಮಚಾರಿಯಾದ್ದರಿಂದ (ಯಾವವಿಷಯದಲ್ಲೂ ಪ್ರಯೋಗಿಸಬಹುದಾದ್ದರಿಂದ) ಎಂದು ಅಭಿಪ್ರಾಯ. ಪ್ರತ್ಯಕ್ಷವು ಅದ್ವೈತವಿಷಯದಲ್ಲಿ ಅಸಮರ್ಥವಾದುದರಿಂದ, ಮತ್ತು ಶ್ರುತಿಯನ್ನು 'ತದ್ಗುಣಸಾರತ್ವಾತ್' ಎಂಬಲ್ಲಿ ನಿರಾಕರಣೆ ಮಾಡುವುದರಿಂದ, ಅನುಮಾನದಿಂದ ಅಭೇದವನ್ನು ಆಶಂಕಿಸಿ ಇಲ್ಲಿ ನಿರಾಕರಣೆ ಮಾಡಿದ್ದಾರೆ.

**ननूक्तभेदोऽसत्य एवातो न दोष इत्यत आह -**

**।। ॐ अस्मिन्नस्य च तद्योगं शास्ति ॐ ।। १-१-१९**

**चशब्दो युक्तिसमुच्चये । श्रुतिर्मुक्तावपीति शेषः । अस्मिन् प्रकरणे । अस्येतरस्य**

जीवस्य । तेनानन्दमयादिरूपेण ब्रह्मणा सह योगं सम्बन्धं मुक्तावपि ''सोऽश्नुते'' इति श्रुतिः शास्ति यतोऽत ऐक्यायोगादानन्दयादिर्नेतर इत्यर्थः । न केवलं भेदव्यपदेशात् किन्तु मुक्तावपि भेदाक्षेपकतद्योगशासनाच्चेति चार्थः । तदानीन्तनो भेदो नासत्य इति भावः ।

यद्वा इतश्चानन्दमयादिर्ब्रह्मेत्याह – **अस्मिन्निति** ।। अस्मिन् प्रकरणे । अस्य ''स य एवं वित्'' इत्युक्तस्य ब्रह्मविदस्तद्योगं तैरन्नमयादिभिर्योगं प्राप्तिं फलत्वेन ''एतमन्नमयमात्मानम्'' इति श्रुतिः शास्ति यतोऽतश्चानन्दमयादिर्ब्रह्मैवेत्यर्थः । न हि ब्रह्मज्ञानादन्यप्राप्तिर्युक्तेति भावः ।।६।।

ನೀವು ಹೇಳಿದ ಭೇದವು ಮಿಥ್ಯಾಭೂತವಾದದ್ದು. ಆದುದರಿಂದ ನೀವು ಹೇಳಿದ ದೋಷವು ಬರುವುದಿಲ್ಲ ಎಂದರೆ 'ಅಸ್ಮಿನ್ನಸ್ಯ ಚ' ಎಂಬ ಸೂತ್ರ ಹೊರಟಿದೆ.

ಇಲ್ಲಿ 'ಚ'ಶಬ್ದವು ಯುಕ್ತಿಯನ್ನು ಸಮುಚ್ಚಯ ಮಾಡುತ್ತಿದೆ. 'ಶ್ರುತಿಯು ಮುಕ್ತಿಯಲ್ಲಿಯೂ(ಶಾಸ್ತಿ)' ಎಂದು ಶೇಷಪೂರಣೆ ಮಾಡಿಕೊಳ್ಳಬೇಕು. ಯಾವಕಾರಣದಿಂದ ಅಸ್ಮಿನ್ = ಈ ಪ್ರಕರಣದಲ್ಲಿ, ಅಸ್ಯ = ಇತರನಾದ ಜೀವನ, ತತ್ = ಅವನಿಂದ ಆನಂದಮಯರೂಪನಾದ ಬ್ರಹ್ಮನಿಂದ, ಯೋಗಂ = ಸಂಬಂಧವನ್ನು ಮುಕ್ತಿಯಲ್ಲಿಯೂ ಕೂಡ 'ಸೋಽಶ್ನುತೇ' ಎಂಬ ಶ್ರುತಿಯು ಹೇಳುತ್ತದೋ, ಆ ಕಾರಣದಿಂದ ಅಭೇದವು(ಮುಕ್ತಿಯಲ್ಲಿಯೂ) ಕೂಡುವುದಿಲ್ಲವಾದ್ದರಿಂದ ಆನಂದಮಯಾದಿಗಳು ಚತುರ್ಮುಖಬ್ರಹ್ಮಾದಿಗಳಲ್ಲ ಎಂದು ಅಭಿಪ್ರಾಯ. ಕೇವಲ ಭೇದವ್ಯಪದೇಶ ಇದೆ ಎಂದು ಮಾತ್ರವಲ್ಲ; ಕಿಂತು ಮುಕ್ತಿಯಲ್ಲಿಯೂ ಭೇದಸಾಪೇಕ್ಷವಾದ ಸಂಬಂಧವನ್ನು ಶ್ರುತಿಯು ಹೇಳಿದ್ದರಿಂದ ಎಂದರ್ಥ. ಆ ಕಾಲದಲ್ಲಿರುವ (ಮೋಕ್ಷದಲ್ಲಿರುವ) ಭೇದವು ಅಸತ್ಯ (ಮಿಥ್ಯಾ) ಅಲ್ಲ ಎಂಬುದು ಭಾವ.

ಅಥವಾ ಈ ಕಾರಣದಿಂದ(ಲೂ) ಆನಂದಮಯಶಬ್ದವಾಚ್ಯನು ಬ್ರಹ್ಮ ಎಂದು ಹೇಳುತ್ತಾರೆ "ಅಸ್ಮಿನ್" ಎಂಬ ಸೂತ್ರದಿಂದ. ಅಸ್ಮಿನ್ = ಈ ಪ್ರಕರಣದಲ್ಲಿ, ಯಾವ ಕಾರಣದಿಂದ, ಅಸ್ಯ = 'ಸ ಯ ಏವಂ ವಿತ್' ಎಂದು ಹೇಳಿದ ಬ್ರಹ್ಮನ ಜ್ಞಾನಿಗೆ, ತದ್ಯೋಗಂ = ತೈಃ ಆ ಅನ್ನಮಯಾದಿಗಳ, ಯೋಗ = ಪ್ರಾಪ್ತಿಯು ಫಲವೆಂಬುದಾಗಿ 'ಏತಮನ್ನಮಯಮಾತ್ಮಾನಮುಪಸಂಕ್ರಮ್ಯ' ಎಂದು ಶ್ರುತಿಯು ಹೇಳುತ್ತದೋ, ಆ ಕಾರಣದಿಂದ ಅನ್ನಮಯಾದಿಗಳು ಬ್ರಹ್ಮನು ಎಂದರ್ಥ. ಏಕೆಂದರೆ ಬ್ರಹ್ಮನ ಜ್ಞಾನದಿಂದ (ಬ್ರಹ್ಮನ ಪ್ರಾಪ್ತಿಯಾಗಬೇಕು ಹೊರತು) ಬೇರೆಯವರ ಪ್ರಾಪ್ತಿಯು ಯುಕ್ತವಲ್ಲ ಎಂದು ಅಭಿಪ್ರಾಯ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಆನಂದಮಯಾಧಿಕರಣವು ಸಮಾಪ್ತವಾಯಿತು.

* * * * *

श्रीराघवेन्द्रयतिकृता

# न्यायमुक्तावलिः

## आनन्दमयाद्यधिकरणम्

**।। ॐ आनन्दमयोऽभ्यासात् ॐ ।। ६ ।।**

।। ॐ विकारशब्दान्नेति चेन्न प्राचुर्यात् ॐ ।। ।। ॐ तद्धेतुव्यपदेशाच्च ॐ ।। ।।ॐ मान्त्रवर्णिकमेव च गीयते ॐ ।। ।। ॐ नेतरोऽनुपपत्तेः ॐ ।। ।। ॐ भेदव्यपदेशाच्च ॐ ।। ।। ॐ कामाच्च नानुमानापेक्षा ॐ ।। ।। ॐ अस्मिन्नस्य च तद्योगं शास्ति ॐ ।।

सर्वापेक्षितानन्दप्रदोपासनाविषयपूर्णानन्दत्वरूपमहागुणस्य प्रथमं वाच्यत्वाद्वा, आत्मशब्दाद्गौणात्मनिरासः प्रागुक्तोऽयुक्तः तस्य अब्रह्मणि गौणात्मन्यानन्दमयादौ एतमानन्दमयमात्मानमिति श्रवणादिति पूर्वोक्ताक्षेपेण पूर्वपक्षप्रवृत्तेः आक्षेपिकी वा सङ्गतिः । तैत्तेरीये 'स वा एष पुरुषोऽन्नरसमयः' (तै. २-४) इत्यादिना श्रुताः गुणिसामान्यवाचकाः अन्नमयप्राणमयमनोमयविज्ञानमयानन्दमयशब्दाः आनन्द-विज्ञानादिगुणसामान्यवाचकाः विषयः । तदर्थः किं चतुर्मुखादिर्विष्ण्वन्यः कश्चिदुत विष्णुरिति सन्देहः । विष्णोरन्य इति पूर्वः पक्षः ।।

ನ್ಯಾಯಮುಕ್ತಾವಲಿ

ಈ ಅಧಿಕರಣಕ್ಕೆ ಎಲ್ಲರಿಂದಲೂ ಅಪೇಕ್ಷಿತವಾದ ಆನಂದವನ್ನು ಕೊಡುವ ಉಪಾಸನೆಗೆ ವಿಷಯವಾದ ಪೂರ್ಣಾನಂದತ್ವರೂಪ ಮಹಾಗುಣವನ್ನು ಮೊದಲು ಹೇಳಬೇಕಾದ್ದರಿಂದ ಅಥವಾ,

ಆತ್ಮಶಬ್ದವಿರುವುದರಿಂದ ಈಕ್ಷಣೀಯನಾದವನು ಗೌಣಾತ್ಮನಲ್ಲ ಎಂದು ಹಿಂದಿನ ಅಧಿಕರಣದಲ್ಲಿ ನಿರಾಕರಣೆ ಮಾಡಿದುದು ಸರಿಯಲ್ಲ. ಆ ಆತ್ಮಶಬ್ದವನ್ನು ಬ್ರಹ್ಮನಲ್ಲದ ಗೌಣಾತ್ಮನಲ್ಲಿ 'ಏತಮಾನಂದಮಯವ 'ಾತ್ಮಾನಮುಪಸಂಕ್ರಮ್ಯ' ಎಂದು ಪ್ರಯೋಗಿಸಿರುವುದರಿಂದ ಎಂದು ಹಿಂದಿನ ಅಧಿಕರಣದಲ್ಲಿ ಹೇಳಿದ ವಿಷಯವನ್ನು ಆಕ್ಷೇಪಿಸಿ ಪೂರ್ವಪಕ್ಷವು ಪ್ರವೃತ್ತವಾದ್ದರಿಂದ ಆಕ್ಷೇಪಿಕೀಸಂಗತಿ.

ತೈತ್ತಿರೀಯೋಪನಿಷತ್ತಿನಲ್ಲಿ 'ಸ ವಾ ಏಷ ಪುರುಷೋಽನ್ನರಸಮಯಃ' ಇತ್ಯಾದಿಯಾಗಿ ಹೇಳಲ್ಪಟ್ಟ ಗುಣಿಸಾಮಾನ್ಯವಾಚಕಗಳಾದ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಶಬ್ದಗಳು ಮತ್ತು ಗುಣಸಾಮಾನ್ಯವಾಚಕಗಳಾದ ಆನಂದವಿಜ್ಞಾನಮೊದಲಾದ ಶಬ್ದಗಳು ಈ ಅಧಿಕರಣಕ್ಕೆ

ವಿಷಯಗಳು. ಅದಕ್ಕೋಸ್ಕರ ಚತುರ್ಮುಖಬ್ರಹ್ಮಾದಿಗಳು ವಿಷ್ಣುವಿಗಿಂತ ಭಿನ್ನರೋ ಅಥವಾ ವಿಷ್ಣುವೋ ಎಂದು ಸಂದೇಹ. ವಿಷ್ಣುವಿಗಿಂತ ಭಿನ್ನರೆಂದು ಪೂರ್ವಪಕ್ಷ.

तथाहि । अन्नमयादीनां विकारार्थकमयट्प्रत्यययुक्तत्वात् ब्रह्मणश्च 'निर्विकारोऽक्षरः शुद्ध' इत्युक्त्या निर्विकारत्वात् तदनभिमानित्वाच्च,

प्राचुर्यार्थत्वेऽपि तस्य विजातीयाल्पत्वनिरूप्यत्वेन ब्रह्मणि दुःखादिलेशाप्रसक्त्या तदयोगात्,

तादात्म्यार्थस्य मयटो वैयर्थ्येन पराहतत्वात् 'अन्नात्पुरुष' (तै. २-३) इति अन्नविकारं पुरुषशब्दोक्तं देहं प्रकृत्य 'स वा एष पुरुषोऽन्नरसमयः' इत्युक्तत्वात्, 'तस्येदमेव शिरः अयं दक्षिणः पक्षः अयमुत्तरः पक्षः अयमात्मा इदं पुच्छं प्रतिष्ठा' इति शिरोबाह्वाद्यवयवानां प्रत्यक्षत्वेन निर्देशाच्च अन्नमये मयटः विकारार्थत्वेऽवश्यंभाविनि द्वैविध्यायोगेन सर्वत्र विकारार्थत्वस्यैव न्याय्यत्वाच्च;

ಪೂರ್ವಪಕ್ಷದ ಪ್ರಕಾರವು ಹೀಗಿದೆ — ಅನ್ನಮಯಾದಿಶಬ್ದಗಳು ವಿಕಾರಾರ್ಥಕವಾದ ಮಯಟ್ ಪ್ರತ್ಯಯವುಳ್ಳವುಗಳಾಗಿದ್ದರಿಂದ, ಬ್ರಹ್ಮನಾದರೂ 'ನಿರ್ವಿಕಾರೋಽಕ್ಷರಃ ಶುದ್ಧಃ' ಎನ್ನುವ ಶ್ರುತಿಯ ಮಾತಿನಂತೆ ನಿರ್ವಿಕಾರನಾಗಿದ್ದಾನೆ. ಮತ್ತು ಅನ್ನಮಯಾದಿಗಳ ಅಭಿಮಾನಿಯೂ ಆಗಿಲ್ಲ.

ಇನ್ನು ಪ್ರಾಚುರ್ಯ ಎಂದರ್ಥವಿಟ್ಟುಕೊಂಡರೂ, ಪ್ರಾಚುರ್ಯವೆನ್ನಬೇಕಾದರೆ ಯಾವುದರ ಪ್ರಾಚುರ್ಯವನ್ನು ಹೇಳಬೇಕೋ ಅದಕ್ಕೆ ವಿರುದ್ಧವಾದದ್ದು ಸ್ವಲ್ಪವಿದ್ದರೆ ಮಾತ್ರ ಅದಕ್ಕಿಂತಲೂ ಇದು ಪ್ರಚುರ ಎಂದು ಹೇಳಲು ಸಾಧ್ಯ. ಹಾಗಾಗಿ ಬ್ರಹ್ಮನಲ್ಲಿ ಸ್ವಲ್ಪ ದುಃಖಾದಿಗಳನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ ಆ ಅರ್ಥವನ್ನು ಸ್ವೀಕರಿಸಲು ಬರುವುದಿಲ್ಲ.

ಇನ್ನು ಮಯಟ್‌ಪ್ರತ್ಯಯಕ್ಕೆ ತಾದಾತ್ಮ್ಯರೂಪ ಅರ್ಥವನ್ನು ಹೇಳೋಣವೆಂದರೆ ಅದು ವ್ಯರ್ಥವಾದ್ದರಿಂದ ನಿರಾಕೃತವಾಗಿದೆ. ಅಲ್ಲದೆ 'ಅನ್ನಾತ್ ಪುರುಷಃ' ಎಂದು ಅನ್ನವಿಕಾರವಾದ ಪುರುಷಶಬ್ದದಿಂದ ಹೇಳಲ್ಪಡುವ ದೇಹವನ್ನು ಹೇಳಿ 'ಸ ವಾ ಏಷ ಪುರುಷೋಽನ್ನರಸಮಯಃ' ಎಂದು ಹೇಳಿದ್ದಾರೆ. 'ತಸ್ಯೇದಮೇವ ಶಿರಃ, 'ಅಯಂ ದಕ್ಷಿಣಃ ಪಕ್ಷಃ ಅಯಮುತ್ತರಃ ಪಕ್ಷಃ ಅಯಮಾತ್ಮಾ ಇದಂ ಪುಚ್ಛಂ ಪ್ರತಿಷ್ಠಾ' ಇತ್ಯಾದಿಯಾಗಿ ತಲೆ, ಕೈ, ಕಾಲು ಮುಂತಾದ ಅವಯವಗಳನ್ನು ಪ್ರತ್ಯಕ್ಷ ನಿರ್ದೇಶಮಾಡಿದ್ದಾರೆ. ಮತ್ತು ಅನ್ನಮಯನಲ್ಲಿ ಶ್ರುತವಾದ ಮಯಟ್‌ಪ್ರತ್ಯಯವು (ಅನ್ನವಿಕಾರ ಎಂಬರ್ಥದಲ್ಲಿ) ವಿಕಾರಾರ್ಥಕ ಎಂದೇ ಹೇಳಬೇಕು. ಅಲ್ಲಿ ವಿಕಾರಾರ್ಥವನ್ನು ಒಪ್ಪಿದ ಮೇಲೆ ಒಂದೇ ಸರಣಿಯಲ್ಲಿರುವ ಮಯಟ್‌ಪ್ರತ್ಯಯಕ್ಕೆ ಎರಡು ರೀತಿಯ ಅರ್ಥಕಲ್ಪನೆಯು ಸರಿಯಲ್ಲ. ಆದ್ದರಿಂದ ಎಲ್ಲ ಕಡೆ ವಿಕಾರಾರ್ಥವನ್ನಿಟ್ಟುಕೊಳ್ಳುವುದೇ ಉಚಿತ.

किञ्च 'अन्योऽन्तर आत्मा प्राणमयः' इत्यादिनैतेऽन्यान्यत्वादिना, 'तस्यैष एव

शरीर आत्मा' इति शरीरशरीरिभावेन चोच्यन्ते, एते च पञ्च कोशाः ब्रह्म तु एकमेवाद्वितीयमित्यादेः निर्भेदमेकं च, 'अशरीरः प्रज्ञात्मा' इत्युक्तेरशरीरं च,

आनन्दमये च 'तस्य प्रियमेव शिरः मोदो दक्षिणः पक्षः प्रमोद उत्तरः पक्षः आनन्द आत्मा ब्रह्म पुच्छं प्रतिष्ठा' इति ब्रह्मण आनन्दमयपादाख्यावयवतयोक्तेः आनन्दमयो न ब्रह्म द्वयोर्ब्रह्मत्वविरोधात्, अवयवावयविनोरैक्यायोगात् । तस्मात् कोशा एव वा सर्वविकारात्मवेन प्रकृतिर्वा विकाराभिमानित्वात् लक्ष्मीर्वा जीवो वा अन्यो वा यः कश्चिद्भाष्योक्तदिशा एतैः शब्दैरुच्यते । न सर्वथा विष्णुरिति ।।

ಅಲ್ಲದೆ 'ಅನ್ಯೋಽಂತರ ಆತ್ಮಾ ಪ್ರಾಣಮಯಃ' ಇತ್ಯಾದಿಯಾಗಿ ಪರಸ್ಪರಭಿನ್ನರಾಗಿ ಪ್ರಾಣಮಾದಿಗಳು ಹೇಳಲ್ಪಟ್ಟಿದ್ದಾರೆ.

'ತಸ್ಯೈಷ ಏವ ಶಾರೀರ ಆತ್ಮಾ' ಎಂಬುದಾಗಿ ಅವರಲ್ಲಿ ಶರೀರಶರೀರಿಭಾವವೂ ಶ್ರುತವಾಗಿದೆ.

ಅಲ್ಲದೆ ಈ ಅನ್ನಮಯಾದಿಗಳು ಕೋಶಗಳು ಐದು ಆಗಿವೆ. ಬ್ರಹ್ಮನಾದರೂ 'ಏಕಮೇವಾದ್ವಿತೀಯಂ' ಇತ್ಯಾದಿ ಶ್ರುತಿಯಿಂದ ಭೇದರಹಿತನಾಗಿದ್ದಾನೆ. ಮತ್ತು ಒಬ್ಬನೇ ಆಗಿದ್ದಾನೆ. 'ಅಶರೀರಃ ಪ್ರಜ್ಞಾತ್ಮಾ' ಎಂದು ಶ್ರುತಿಯಿರುವುದರಿಂದ ಶರೀರರಹಿತನೂ ಆಗಿದ್ದಾನೆ. (ಆದ್ದರಿಂದ ಆನಂದಮಯಾದಿಗಳು ಬ್ರಹ್ಮರಲ್ಲ).

ಆನಂದಮಯಪ್ರಕರಣದಲ್ಲಿ 'ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂದು ಬ್ರಹ್ಮನು ಆನಂದಮಯನ ಪಾದವೆಂಬ ಅವಯವವಾಗಿ ಹೇಳಲ್ಪಟ್ಟಿದ್ದಾನೆ. ಆನಂದಮಯನೂ ಬ್ರಹ್ಮನೆನ್ನಲು ಬರುವುದಿಲ್ಲ. ಏಕೆಂದರೆ ಆನಂದಮಯ ಮತ್ತು ಅವನ ಪುಚ್ಛ ಎರಡೂ ಬ್ರಹ್ಮನೆಂದರೆ ಅವಯವ-ಅವಯವಿಗಳಿಗೆ ಐಕ್ಯವನ್ನು ಹೇಳಿದಂತಾಗುತ್ತದೆ. ಅದು ಸರಿಯಲ್ಲ. ಆದ್ದರಿಂದ ಅನ್ನಮಯಾದಿಶಬ್ದಗಳಿಂದ ಭಾಷ್ಯದಲ್ಲಿ ಹೇಳಿದಂತೆ ಕೋಶಗಳು ಹೇಳಲ್ಪಡುತ್ತವೆ. ಅಥವಾ ಸರ್ವವಿಕಾರಾತ್ಮಕವಾದ ಪ್ರಕೃತಿ ಅಥವಾ ವಿಕಾರಾಭಿಮಾನಿಯಾದ್ದರಿಂದ ಜೀವನಾಗಲೀ ಅವನಿಗಿಂತ ಅತಿರಿಕ್ತನಾದ ಮತ್ತೊಬ್ಬನಾಗಲೀ ಹೇಳಲ್ಪಡುತ್ತವೆ ಹೊರತು ವಿಷ್ಣುವಲ್ಲ ಎಂದು ಪೂರ್ವಪಕ್ಷ.

**सिद्धान्तस्तु** ।। अन्नमयादयः पञ्चापि ब्रह्मैव । 'येऽन्नं ब्रह्मोपासते, ये प्राणं ब्रह्मोपासते, आनन्दं ब्रह्मणो विद्वान्, विज्ञानं ब्रह्म चेद्वद, अस्ति ब्रह्म इति चेद्वेद' इति पञ्चस्वपि प्रत्येकं ब्रह्मशब्दश्रवणात् विज्ञानानन्दमययोस्तदभ्यासाच्च । अन्योऽन्तरआत्मा प्राणमयः एतमन्नमयमात्मानमित्येवंरूपेण पञ्चस्वपि आत्मशब्दाभ्यासाच्च ।

तथान्नमये 'अद्यतेऽत्ति च भूतानि' इत्यादिना सर्वोपजीव्यत्वसर्वसंहर्तृत्व-ज्येष्ठत्वोपासकप्राप्यत्वादिलिङ्गम् । प्राणमये च 'प्राणं देवा अनुप्राणन्ति' इत्यादिना

सर्वदेवादिचेष्टकत्वं सर्वायूरूपमोक्षहेतुज्ञानविषयत्वमित्यपि लिङ्गम् । मनोमये च 'यतो वाचो निवर्तन्त' इत्यादिना अवाङ्मनसगोचरत्वभयाभावरूपमुक्तिहेतुवेदन-विषयत्वादिलिङ्गम् । विज्ञानमये च 'विज्ञानं देवाः सर्वे, ब्रह्म ज्येष्ठमुपासते' इत्यादिना सर्वदेवोपास्यत्वज्येष्ठत्वमुक्तिहेतुत्वोपासकप्राप्यत्वादिलिङ्गम् । आनन्दमये च 'सोऽकामयतेत्' इत्यादिना सङ्कल्पपूर्वकं स्रष्टृत्वं सर्वान्तर्यामित्वं मुक्तिहेतु-ज्ञानविषयत्वमित्यादिलिङ्गम् ।

तथा 'को ह्येवान्यात् कः प्राण्याद्यदेष आकाश आनन्दो न स्यादित्' इत्या-नन्दशब्दितपूर्णानन्दत्वरूपानन्दमयत्वे विश्वचेष्टकत्वस्य हेतुत्वम् ।

ಸಿದ್ಧಾಂತವು ಹೀಗಿದೆ —

ಅನ್ನಮಯಾದಿ ಐದೂ ಬ್ರಹ್ಮನೇ. ಏಕೆಂದರೆ 'ಯೇಽನ್ನಂ ಬ್ರಹ್ಮೋಪಾಸತೇ' 'ಯೇ ಪ್ರಾಣಂ ಬ್ರಹ್ಮೋಪಾಸತೇ' 'ಆನಂದಂ ಬ್ರಹ್ಮಣೋ ವಿದ್ವಾನ್' 'ವಿಜ್ಞಾನಂ ಬ್ರಹ್ಮ ಚೇದ್ವೇದ' 'ಅಸ್ತಿ ಬ್ರಹ್ಮೇತಿ ಚೇದ್ವೇದ' ಎಂದು ಐದು ಪ್ರಕರಣಗಳಲ್ಲಿಯೂ ಪ್ರತ್ಯೇಕವಾಗಿ ಬ್ರಹ್ಮಶಬ್ದವು ಶ್ರುತವಾಗಿದೆ. ಮತ್ತು ವಿಜ್ಞಾನಮಯ ಮತ್ತು ಆನಂದಮಯಪ್ರಕರಣದಲ್ಲಿ ಬ್ರಹ್ಮಶಬ್ದದ ಅಭ್ಯಾಸವೂ ಇದೆ. ಮತ್ತು 'ಅನ್ಯೋಽಂತರಾತ್ಮಾ ಪ್ರಾಣಮಯಃ' 'ಏತಮನ್ನಮಯಮಾತ್ಮಾನಮ್' ಈ ರೀತಿಯಾಗಿ ಐದು ಪ್ರಕರಣಗಳಲ್ಲೂ ಆತ್ಮಶಬ್ದದ ಅಭ್ಯಾಸವಿದೆ. ಹಾಗೆಯೇ ಅನ್ನಮಯಪ್ರಕರಣದಲ್ಲಿ ಅದ್ಯತೇಽತ್ತಿ ಚ ಭೂತಾನಿ' ಇತ್ಯಾದಿಶ್ರುತಿಯಿಂದ ಸರ್ವೋಪಜೀವ್ಯತ್ವ, ಸರ್ವಸಂಹರ್ತೃತ್ವ, ಜ್ಯೇಷ್ಠತ್ವ, ಉಪಾಸಕಪ್ರಾಪ್ಯತ್ವ ಮುಂತಾದ ಬ್ರಹ್ಮನ ಲಿಂಗಗಳಿವೆ.

ಪ್ರಾಣಮಯಪ್ರಕರಣದಲ್ಲಿ 'ಪ್ರಾಣಂ ದೇವಾಃ ಅನುಪ್ರಾಣಂತಿ' ಇತ್ಯಾದಿ ಶ್ರುತಿಯಿಂದ ಸಕಲದೇವಾದಿಚೇಷ್ಟಕತ್ವ, ಸರ್ವಾಯೂರೂಪಮೋಕ್ಷಹೇತುಜ್ಞಾನವಿಷಯತ್ವಲಿಂಗಗಳು

ಮನೋಮಯನಲ್ಲಿ 'ಯತೋ ವಾಚೋ ನಿವರ್ತಂತೇ' ಇತ್ಯಾದಿ ಶ್ರುತಿಯಿಂದ ಅವಾಙ್ ಮನಸಗೋಚರತ್ವ' ಭಯಾಭಾವರೂಪಮುಕ್ತಿಹೇತುಜ್ಞಾನವಿಷಯತ್ವ ಲಿಂಗಗಳು;

ವಿಜ್ಞಾನಮಯನಲ್ಲಿ 'ವಿಜ್ಞಾನಂ ದೇವಾಃ ಸರ್ವೇ ಬ್ರಹ್ಮ ಜ್ಯೇಷ್ಠಮುಪಾಸತೇ' ಇತ್ಯಾದಿಶ್ರುತಿಯಿಂದ 'ಸರ್ವದೇವೋಪಾಸ್ಯತ್ವ' 'ಜ್ಯೇಷ್ಠತ್ವ' 'ಮುಕ್ತಿಹೇತುತ್ವ' 'ಉಪಾಸಕಪ್ರಾಪ್ಯತ್ವ' ಮುಂತಾದಲಿಂಗಗಳು;

ಹಾಗೆಯೇ ಆನಂದಮಯನಲ್ಲಿ 'ಸೋಽಕಾಮಯತ' ಇತ್ಯಾದಿಶ್ರುತಿಯಿಂದ 'ಸಂಕಲ್ಪಪೂರ್ವಕ ಸ್ರಷ್ಟೃತ್ವ' 'ಸರ್ವಾಂತರ್ಯಾಮಿತ್ವ' 'ಮುಕ್ತಿಹೇತುಜ್ಞಾನವಿಷಯತ್ವ' ಇತ್ಯಾದಿಲಿಂಗಗಳು ಶ್ರುತವಾಗಿವೆ.

ಅದರಂತೆಯೇ 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್' ಎಂದು ಆನಂದಶಬ್ದದಿಂದ ಹೇಳಲ್ಪಟ್ಟ ಪೂರ್ಣಾನಂದತ್ವರೂಪ ಆನಂದಮಯತ್ವವನ್ನು ಕುರಿತು ವಿಶ್ವಚೇಷ್ಟಕತ್ವವನ್ನು ಹೇತುವನ್ನಾಗಿ ಹೇಳಿದೆ.

पञ्चानामपि 'स य एवंवित्' इत्युक्तब्रह्मविदा 'एतमन्नमयमात्मानमुपसङ्क्रामति' इति फलत्वेन प्राप्यत्वोक्तेः, ब्रह्मवित्प्राप्यत्वं श्रुतमिति पञ्चस्वपि लिङ्गबाहुल्यात् 'ब्रह्मविदाप्नोतिपरम्' इति उक्तब्रह्मणि 'सत्यं ज्ञानमनन्तं ब्रह्म' इति मन्त्रवर्णोक्तलक्षणस्य एतैः शब्दैर्व्याख्यानेन ब्रह्मप्रकरणत्वात् । 'भृगुर्वै वारुणिः' इत्यादिभृगुवल्लीसमाख्यानात् ।

शन्नोमित्रादिभिः वाक्यैस्तैरेव हरिमस्तुवत् ।
मुक्तगीतावसानैस्तु स्तुतस्तेन जनार्दनः

इति स्मृत्या (तै.भा.१-१) ब्रह्मपरत्वेन निर्णीतोपनिषद्रूपस्थानमध्यपतितत्वाच्च । ब्रह्मात्मशब्दादेर्भाष्योदाहृतश्रुत्यादिभिः विष्णावेकनिष्ठत्वाद्भृगुवल्ल्याः समाख्यानत्वस्य मूलग्रन्थेषु समर्थनात् ।

ಅನ್ನಮಯಾದಿ ಐದನ್ನೂ 'ಸ ಯ ಏವಂವಿತ್' ಎಂಬಲ್ಲಿ ಹೇಳಿದ ಬ್ರಹ್ಮನನ್ನು ತಿಳಿದವನಿಗೆ 'ಏತಮನ್ನಮಯಮಾತ್ಮಾನಮುಪಸಂಕ್ರಾಮತಿ' ಎಂದು ಫಲವನ್ನಾಗಿ ಹೇಳುವುದರ ಮೂಲಕ ಬ್ರಹ್ಮಜ್ಞಾನಿಯಿಂದ ಪ್ರಾಪ್ಯತ್ವವನ್ನು ಹೇಳಿದೆ. ಹೀಗೆ ಬ್ರಹ್ಮನ ಲಿಂಗಗಳು ಬಹಳವಿರುವುದರಿಂದ 'ಬ್ರಹ್ಮವಿದಾಪ್ನೋತಿ ಪರಮ್' ಎಂದು ಹೇಳಿದ ಬ್ರಹ್ಮನ, 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಮಂತ್ರವರ್ಣದಲ್ಲಿ ಹೇಳಿದ, ಲಕ್ಷಣವನ್ನು ಈ ಆನಂದಮಯಾದಿಶಬ್ದಗಳಿಂದ ವ್ಯಾಖ್ಯಾನ ಮಾಡಿದ್ದರಿಂದ ಅನ್ನಮಯಾದಿಗಳನ್ನು ಹೇಳುವ ಈ ಪ್ರಕರಣವು ಬ್ರಹ್ಮನ ಪ್ರಕರಣ. ಇದಕ್ಕೆ 'ಭೃಗುರ್ವೈ ವಾರುಣಿಃ' ಇತ್ಯಾದಿಯಾಗಿ ಭೃಗುವಲ್ಲಿಯ ಸಮಾಖ್ಯಾವೂ ಇದೆ.

ಶನ್ನೋಮಿತ್ರಾದಿಭಿರ್ವಾಕ್ಯೈಸ್ತೈರೇವ ಹರಿಮಸ್ತುವತ್ ।
ಮುಕ್ತಗೀತಾವಸಾನೈಸ್ತು ಸ್ತುತಸ್ತೇನ ಜನಾರ್ದನಃ ॥ (ತೈ.ಭಾ. ೧/೧)

ಎನ್ನುವ ಸ್ಮೃತಿಯಿಂದ ಈ ಉಪನಿಷತ್ತು ಬ್ರಹ್ಮಪರ ಎಂದು ನಿರ್ಣಯಿಸಲ್ಪಟ್ಟಿದೆ. ಅಂತಹ ಉಪನಿಷತ್ತಿನ ಮಧ್ಯದಲ್ಲಿ ಆನಂದಮಯಾದಿಗಳನ್ನು ಹೇಳುವ ಪ್ರಕರಣವಿರುವುದರಿಂದ ಶ್ರುತ್ಯರ್ಥನಿರ್ಣಾಯಕವಾದ ಉಪನಿಷತ್‌ರೂಪವಾದ ಸ್ಥಾನವೆಂಬ ಲಿಂಗವೂ ಇದೆ. ಬ್ರಹ್ಮಶಬ್ದ, ಆತ್ಮಶಬ್ದವಿದ್ದಮಾತ್ರಕ್ಕೆ ಅದು ಬ್ರಹ್ಮನ ಪ್ರಕರಣ ಎಂದು ಹೇಗೆ ನಿರ್ಣಯಿಸುತ್ತೀರಿ? ಎಂದರೆ ಬ್ರಹ್ಮಶಬ್ದ ಮತ್ತು ಆತ್ಮಶಬ್ದ ಈ ಎರಡೂ ಶಬ್ದಗಳು ವಿಷ್ಣುವಿನಲ್ಲಿ ಮಾತ್ರ ಇರುವಂಥಹವು ಎಂದು ಭಾಷ್ಯದಲ್ಲಿ ಹೇಳಿದ ಶ್ರುತಿಸ್ಮೃತಿಗಳಿಂದ ಸಿದ್ಧವಾಗಿದೆ. ಮತ್ತು ಭೃಗುವಲ್ಲಿಯು ಸಮಾಖ್ಯಾರೂಪವಾಗಿದೆ ಎಂದು ಮೂಲಗ್ರಂಥಗಳಲ್ಲಿ ಸಮರ್ಥನೆ ಮಾಡಿದ್ದಾರೆ.

नच मयट्प्रत्ययायोगः । तस्य सजातीयजीवगतसुखाल्पत्वनिरूप्यतया प्राचुर्यार्थत्वेनोपपत्तेः । उक्तं च 'विजातीयसमानाधिकरणाल्पं यथा तथा । सजातीयविभिन्नाधिकरणाल्पं निरूपकम्' इति ॥

ಮಯಟ್‌ಪ್ರತ್ಯಯವು ಅನ್ನಮಯಾದಿಗಳನ್ನು ಬ್ರಹ್ಮನೆನ್ನಲು ಬಾಧಕ ಎನ್ನುವುದೂ ಸರಿಯಲ್ಲ. ಮಯಟ್ ಪ್ರತ್ಯಯವು ಬ್ರಹ್ಮನಿಗೆ ಸಜಾತೀಯನಾದ ಜೀವನಲ್ಲಿರುವ ಅಲ್ಪಸುಖಜ್ಞಾಪ್ಯವಾದ ಪ್ರಾಚುರ್ಯಾರ್ಥಕ ಎಂದಿಟ್ಟುಕೊಳ್ಳಬಹುದು. ಇದನ್ನು ಚಂದ್ರಿಕೆಯಲ್ಲಿ 'ವಿಜಾತೀಯಸಮಾನಾಧಿಕರಣಾಲ್ಪಂ ಯಥಾ ತಥಾ ಸಜಾತೀಯವಿಭಿನ್ನಾಧಿಕರಣಾಲ್ಪಂ ನಿರೂಪಕಮ್' ಎಂದು ಹೇಳಿದ್ದಾರೆ.

अन्यत्वान्तरत्वाद्युक्तिरपि अधिष्ठानभूतकोशानामन्यत्वादन्तरत्वात् शरीरित्वाद्, ब्रह्मणो बहुरूपत्वात्, विशेषसत्त्वात्, 'अनन्योऽप्यन्यशब्देन' इत्यादिस्मृतिबलाच्च युज्यते । कथं तर्हि 'स वा एषः' इति देहपरामर्श इति चेन्न । 'आत्मन आकाशः' इत्यादौ 'अन्नात् पुरुषः' इत्यन्ते वाक्ये हरेरप्याकाशादिनियामकरूपस्य प्रादुर्भावरूपजनेरुक्तेः । पुरुषपदेन हरेरपि प्रकृततया तत्परामर्शात् ।

ಅನ್ನಮಯಾದಿಗಳಲ್ಲಿ ಪರಸ್ಪರ ಅನ್ಯತ್ವ, ಮತ್ತು ಅಂತರತ್ವವನ್ನು ಹೇಳಿದ್ದರಿಂದ ಐದೂ ಬ್ರಹ್ಮನೆನ್ನಲು ಬರುವುದಿಲ್ಲವೆಂದು ಹೇಳುವುದು ಸರಿಯಲ್ಲ. ಬ್ರಹ್ಮನಿಗೆ ಅಧಿಷ್ಠಾನಭೂತವಾಗಿರುವ ಅನ್ನಮಯಾದಿಕೋಶಗಳು ಬ್ರಹ್ಮನಿಗೆ ಶರೀರದಂತಿವೆ. ಆ ಅಧಿಷ್ಠಾನಭೂತಕೋಶಗಳಲ್ಲಿ ಭೇದವಿರುವುದರಿಂದ ಅನ್ಯತ್ವ, ಅಂತರತ್ವಗಳು ಕೂಡುತ್ತವೆ. ಅಥವಾ ಬ್ರಹ್ಮನು ಬಹುರೂಪವುಳ್ಳವನಾಗಿದ್ದಾನೆ. ಮತ್ತು ವಿಶೇಷವೆಂಬ ಪದಾರ್ಥ(ಅಭೇದವಿದ್ದರೂ ಭೇದವ್ಯವಹಾರಹೇತು)ವುಳ್ಳವನಾಗಿದ್ದಾನೆ. ಮತ್ತು 'ಅನನ್ಯೋಽಪ್ಯನ್ಯಶಬ್ದೇನ' ಎಂಬ ಸ್ಮೃತಿಯಿರುವುದರಿಂದಲೂ ಅಭಿನ್ನನಾದ ಭಗವಂತನಲ್ಲಿ ಭೇದವ್ಯವಹಾರವು ಕೂಡುತ್ತದೆ.

ಸರಿ; ನೀವು ಹೇಳಿದಂತೆ ಭಗವಂತನೇ ಅನ್ನಮಯಾದಿಗಳೆನ್ನುವುದಾದರೆ 'ಸ ವಾ ಏಷ ಪುರುಷಃ' ಎಂದು ದೇಹದ ಪರಾಮರ್ಶೆ ಮಾಡುವುದು ಹೇಗೆ ಕೂಡುತ್ತದೆ? ಎನ್ನುವುದೂ ಸರಿಯಲ್ಲ. 'ಆತ್ಮನಃ ಆಕಾಶಃ ಸಂಭೂತಃ' ಎಂದು ಪ್ರಾರಂಭಿಸಿ 'ಅನ್ನಾತ್ ಪುರುಷಃ' ಎಂಬಲ್ಲಿಯವರೆಗಿನ ವಾಕ್ಯಗಳಲ್ಲಿ ಭಗವಂತನ ಆಕಾಶಾದಿ ನಿಯಾಮಕರೂಪಗಳಿಗೂ ಪ್ರಾದುರ್ಭಾವರೂಪವಾದ ಜನನವನ್ನು ಹೇಳಿದೆ. ಆದ್ದರಿಂದ 'ಪುರುಷ'ಪದದಿಂದ ದೇಹಮಾತ್ರವಲ್ಲ; ವಿಷ್ಣುವು ಪ್ರಕೃತನಾದ್ದರಿಂದ ಅವನ ಪರಾಮರ್ಶೆಯನ್ನೂ ಮಾಡಿದ್ದಾರೆ.

यद्वक्ष्यति ''कारणत्वेन चाकाशादिषु'' इत्यादि (ब्र.सू. १-४-१५) । प्रकृतान्नमयदेहव्यावृत्त्यर्थमेव रसशब्देन स इति व्यवहितात्मपरामर्शिना तच्छब्देन च विशेषणात् अन्यथैषोऽन्नमय इत्येतावता पूर्तेः । तस्येदमेव शिरः इति प्रत्यक्षनिर्देशस्य वस्त्रप्रावृतजानुनीदश्वान्वितिवदुपपत्तेः । आनन्दमयतदवयवयोर्द्वयोरपि पूर्णत्वरूपब्रह्मत्वस्य अन्यत्र समर्थनेनावयवत्वविरोधाभावाच्च । अतः साधकसत्त्वाद्बाधकाभावाच्च पञ्चाप्यनिरुद्धादिब्रह्मरूपाण्येव कोशस्थानीति । प्रयोजनं तु ब्रह्मण आनन्दमयावयवत्वात् अवयविनं विनाऽवयवजिज्ञासाऽयोगादिति जिज्ञासाक्षेपसमाधाने ।।६।।

ಇದನ್ನೇ ಮುಂದೆ ನಾಲ್ಕನೇ ಪಾದದ 'ಕಾರಣತ್ವೇನ ಚಾಕಾಶಾದಿಷು' ಎಂಬ ಸೂತ್ರದಲ್ಲಿ ನಿರೂಪಿಸಿದ್ದಾರೆ. ಹಿಂದೆ ಪ್ರಕೃತವಾದ ದೇಹದ ಪರಾಮರ್ಶೆಯನ್ನು ವ್ಯಾವೃತ್ತಿ ಮಾಡುವುದಕ್ಕೋಸ್ಕರ ರಸಶಬ್ದವನ್ನು ಮತ್ತು ದೂರದಲ್ಲಿರುವ ಆತ್ಮಶಬ್ದವನ್ನು ಪರಾಮರ್ಶೆ ಮಾಡುವ ಸಃ' ಎಂದು ತಚ್ಛಬ್ದವನ್ನು ವಿಶೇಷಣ ಮಾಡಿದ್ದಾರೆ. ಇಲ್ಲದಿದ್ದರೆ 'ಏಷೋಽನ್ನಮಯಃ' ಎಂದಿಷ್ಟೇ ಹೇಳಿದ್ದರೆ ಸಾಕಾಗಿತ್ತು.

ಹಾಗೆಯೇ 'ತಸ್ಯೇದಮೇವ ಶಿರಃ' ಎಂದು ಅಪ್ರತ್ಯಕ್ಷನಾದ ಬ್ರಹ್ಮನನ್ನು ಕುರಿತು ಪ್ರತ್ಯಕ್ಷನಿರ್ದೇಶಮಾಡಿದ್ದು ಹೇಗೆ? ಎನ್ನುವುದೂ ಸರಿಯಲ್ಲ. ವಸ್ತ್ರದಿಂದ ಪ್ರಾವೃತವಾದ ಮೊಣಕಾಲನ್ನು ತೋರಿಸಿ ಇದು ಮೊಣಕಾಲು ಎಂದು ಹೇಳುವಂತೆ ಪ್ರತ್ಯಕ್ಷವಾದ ಶರೀರದಲ್ಲಿರುವ ಪರಮಾತ್ಮನನ್ನು ನಿರ್ದೇಶಮಾಡುವುದು ಕೂಡುತ್ತದೆ.

ಆನಂದಮಯ ಮತ್ತು ಅವನ ಅವಯವ ಈ ಎರಡೂ ಕೂಡ ಪೂರ್ಣತ್ವರೂಪಬ್ರಹ್ಮತ್ವವುಳ್ಳವುಗಳು ಎಂದು ಬೇರೆ ಗ್ರಂಥದಲ್ಲಿ (ಅನುವ್ಯಾಖ್ಯಾನ, ಸುಧಾದಿಗ್ರಂಥಗಳಲ್ಲಿ) ಸಮರ್ಥನೆ ಮಾಡಿದ್ದರಿಂದ ಅವಯವತ್ವವಿರೋಧವು ಬರುವುದಿಲ್ಲ. ಆದ್ದರಿಂದ ಬ್ರಹ್ಮನೆನ್ನಲು ಸಾಧಕಪ್ರಮಾಣಗಳಿರುವುದರಿಂದ ಮತ್ತು ಬಾಧಕಗಳು ಇಲ್ಲದ್ದರಿಂದ ಅನ್ನಮಯಾದಿ ಐದು ಕೋಶಗಳಲ್ಲಿರುವ ರೂಪಗಳು ಬ್ರಹ್ಮನದ್ದೇ ಆದ ಅನಿರುದ್ಧಾದಿಪಂಚರೂಪಗಳು.

ಆನಂದಮಯನು ಬ್ರಹ್ಮನೆಂದು ಸಮರ್ಥನೆ ಮಾಡಿದ್ದರ ಪ್ರಯೋಜನವೇನೆಂದರೆ ಬ್ರಹ್ಮನು ಆನಂದಮಯನ ಅವಯವವಾಗಿದ್ದಾನೆ. ಆದ್ದರಿಂದ ಅವಯವಿಯಾದ ಆನಂದಮಯನನ್ನು ಬಿಟ್ಟು ಅವಯವವಾದ ಬ್ರಹ್ಮನ ಜಿಜ್ಞಾಸೆಯು ಕೂಡುವುದಿಲ್ಲ ಎಂದು ಜಿಜ್ಞಾಸಾಸೂತ್ರದ ಮೇಲೆ ಬರುವ ಆಕ್ಷೇಪವನ್ನು ಪರಿಹರಿಸಲಾಗುವುದು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ನ್ಯಾಯಮುಕ್ತಾವಲಿಯ ಕನ್ನಡಾನುವಾದದಲ್ಲಿ ಆನಂದಮಯಾಧಿಕರಣವು ಸಮಾಪ್ತವಾಯಿತು.

* * * * *

# सूत्रार्थरत्नावलिः

## ।। ॐ आनन्दमयोऽभ्यासात् ॐ ।। १-१-१२

नन्वानन्दमयश्चतुर्मुखावभिन्नौ । नामसाङ्कर्यात् । विद्यते खलु चतुर्मुखनिष्ठो ब्रह्मशब्द आनन्दमये । आनन्दमयमधिकृत्य 'अस्ति ब्रह्म'(तै.उ.२/६/१) इति ब्रह्मशब्दश्रवणात्, आनन्दमयसमानार्थकशतानन्दनाम च हिरण्यगर्भे वर्तते । रुद्रो वाऽऽनन्दमयः । 'यश्चासावादित्ये' (तै.उ.२/८/५) इत्यानन्दमयस्य सूर्ये प्रोक्तत्वेन सूर्यान्तर्गतत्वस्य च रुद्रलिङ्गत्वात् । सूर्याधिष्ठातृत्वेन्द्रलिङ्गत्वादिन्द्रो वा । बृहस्पतिलिङ्गाद् बृहस्पतिर्वा । 'सोऽकामयत' इति (तै.उ.२/६/२) स्वाभिमन्यमानस्य बहुभावकामित्वात् चित्प्रकृतिर्वा । बहुभावादचित् प्रकृतिर्वा । तत्तद्देहगतसर्वाजीवा वा । 'अन्नरसमयः' (तै.उ.२/१/३) इत्युक्तजीवप्रायपाठात् । अन्नमयादीनामन्नादिविकाराभिमानित्वेन जीवस्य वक्तव्यत्वात् । नच ब्रह्मशब्दो बाधकः । 'ब्रह्माणि जीवाः सर्वेऽपि' इति ब्रह्मशब्दश्रवणात् । – इति प्राप्ते समादधत् सूत्रमाह –

ॐ आनन्दमयोभ्यासात् इति ।। अस्यार्थः ।। आनन्दमयादिशब्दवाच्यो विष्णुरेव न प्रकृत्यादिः । कुतः? अभ्यासात् । प्रतिप्रकरणमानन्दमयादौ ब्रह्मशब्दश्रवणादित्यर्थः ।

एवंच 'असन्नेव स भवति । असद् ब्रह्मेति चेद् वेद । अस्ति ब्रह्मेति चेद् वेद' इत्यादि श्रुतिस्मृतिषु ब्रह्मशब्दस्य विष्णावेव परममुख्यत्वस्योक्तत्वात् । अनन्दमयशब्दवाच्योऽपि विष्णुरेवेति सिद्धम् ।

## ।। ॐ विकारशब्दान्नेति चेन्न प्राचुर्यात् ॐ ।। १-१-१३

नन्वत्र 'विकारार्थकमयट्शब्दप्रयोगात्, जडप्रकृतेर्विकारात्मकत्वात्, चेतनप्रकृत्यादीनां च विकाराभिमानित्वात् प्रकृत्यादीनामेव आनन्दमयशब्दवाच्यत्वं स्यात्, नतु परमात्मनः । तस्याविकारित्वात् अनभिमानित्वात्' – इति प्राप्ते तन्निरासार्थमुक्तमाक्षिप्य समादधत् सूत्रमाह –

ॐ विकारशब्दान्नेति चेन्न प्राचुर्यात् इति ।। अस्यार्थः ।। विकारशब्दात्

विकारार्थकमयट्शब्दात् । अनन्दमयादिर्विष्णुर्नेति चेन्न, कुतः? प्राचुर्यात् मयट्-शब्दस्य प्राचुर्यपदोक्तपूर्णत्वाभिधायकत्वादित्यर्थः ।

एवंच मयट्शब्दस्य प्रचुरानन्दत्वात् । अन्नमयादीनामपि ब्रह्मत्वेन तद्गतमयटो विकारार्थकत्वाभावात् । न चान्नमयादिशब्दानामन्नमयादिप्राचुर्यार्थकत्वेऽल्पार्थता । 'अद्यतेऽत्ति च'(तै.उ.२/२/२) इत्यादिना सर्वभूतोपजीव्यत्व-सर्वात्तृत्वयोरेव अन्नमयशब्दार्थत्वात् । उपजीव्यत्वमेव आद्यत्वम् इत्याशयात् । प्रायपठितमयटामर्थ-द्वयकल्पनानौचित्यात् आनन्दादिस्वरूपे हरौ 'प्रचुरप्रकाशो रविः' इतिवद् विशेषेण तथा व्यवहारस्योपपत्तेरानन्दमयादिः विष्णुरेवेति सिद्धम् ॥

**॥ ॐ तद्धेतुव्यपदेशाच्च ॐ ॥ १-१-१४**

आनन्दमयस्य विष्णुत्वे हेत्वन्तररूपं प्राचुर्यमेव मयडर्थ इत्यत्र च हेतुं प्रतिपादयत् सूत्रमुपन्यस्यति ॥

ॐ तद्धेतुव्यपदेशाच्चेति ॥ अस्यार्थः । चः समुच्चये । तस्य आनन्दमयस्य विष्णुत्वे लोकचेष्टकत्वाख्यहेतोः व्यपदेशात् । 'को ह्येवान्यात्' इति (तै.२/७) श्रुतावुक्तत्वाच्च आनन्दमयो विष्णुरेव इत्यर्थः ।

एवंच न केवलं ब्रह्मशब्दाभ्यासात् किन्त्वानन्दमयप्रकरणे विष्णोरानन्दपूर्णत्वेन आनन्दमयत्वे प्राचुर्यस्यैव मयडर्थत्वे च लोकचेष्टकत्वाख्य हेतूक्तेश्चानन्दपूर्णत्वेनैव आनन्दमयशब्दवाच्यो विष्णुरेवेति सिद्धम् ।

**॥ ॐ मान्त्रवर्णिकमेव च गीयते ॐ ॥ १-१-१५**

ननु ब्रह्मशब्दस्यापरब्रह्मणि जीवेऽप्युपपत्तेः । तस्य परब्रह्मणि मुख्यत्वेपि विष्णो-रानन्दमयत्वोक्त्यादिना बाधकेनामुख्यार्थस्यैव ग्रहणोपपत्तेरिति प्राप्ते सूत्रमाह –

ॐ मान्त्रवर्णिकमेव च गीयत इति ॥ अस्यार्थः । यतः मान्त्रवर्णिकं 'सत्यं ज्ञानमनन्तं ब्रह्म' इति (तै.उ) मन्त्रवर्णोक्तिं ब्रह्म । गीयते आनन्दमयादिशब्दैः प्रतिपाद्यते । अत आनन्दमयादिशब्दवाच्यं ब्रह्मैवेत्यर्थः ।

एवंच सत्यज्ञानादिशब्दानामन्नमयादिशब्दानां चानुसन्धाने सत्येकार्थत्वप्रतीतेः । न चानन्दमयस्यैव ब्रह्मत्वे ब्रह्मणस्तत्पुच्छत्वोक्तिविरोधः । 'स शिरः स दक्षिणः' (चतुर्वेद-शिखायाम्) श्रुत्याऽवयविन एवावयत्वोक्तेः आनन्दमयादिशब्दवाच्यं ब्रह्मैवेति सिद्धम् ।

## ।। ॐ नेतरोऽनुपपत्तेः ॐ ।। १-१-१६

ननु 'ब्रह्मशब्दस्य साधारणत्वात् । तद्धेतुव्यपदेशस्य विष्णुनिष्ठतया स्पष्टमप्रतिभानात् । मन्त्रवर्णसमाख्यायाश्चान्यलिङ्गादिभ्यो दुर्बलत्वेन सावकाशत्वात् । अनन्यथासिद्धहेत्वन्तरस्य चाभावात् । आनन्दमयादयो विरिञ्चादय एव स्युः' इति प्राप्ते, सूत्रमवतारयति –

ॐ नेतरोऽनुपपत्तेरिति ।। अस्यार्थः । इतरः चतुर्मुखादिः न । कुतः? अनुपपत्तेः 'ब्रह्मविदाप्नोति परम्' (तै.उ.२/१/१) मोक्षजनकज्ञानविषयत्वायोगादित्यर्थः ।

एवंच ब्रह्मशब्दशतानन्दत्वाष्टमूर्तित्वबहुभावादिरूपोक्तप्रापकेन अन्नमयादिशब्दैः विरिञ्चादिरेव नोच्यते । विष्णान्यविरिञ्चादिज्ञानात् मोक्षानुपपत्तेः । 'ब्रह्मविदाप्नोति परम्' इति श्रुतौ आनन्दमयादेर्मुक्तिहेतुज्ञानविषयत्वोक्तेरानन्दमयादिशब्दवाच्यो विष्णुरेवेति सिद्धम् ।

## ।। ॐ भेदव्यपदेशाच्च ॐ ।। १-१-१७

हेत्वन्तरेण ब्रह्मादीनामानन्दमयत्वं पराकुर्वत् सूत्रमुपन्यस्यति ।

ॐ भेदव्यपदेशाच्चेति । अस्यार्थः । चतुर्मुखादेरानन्दमयस्य भेदकधर्मोक्तेश्च नानन्दमयः इतर इत्यर्थः ।

एवं च 'ते ये शतम्' इत्यत्र (तै.उ.२/४/८) विरिञ्चस्य रुद्राच्छतगुणानन्दत्वोक्तेः आनन्दमयस्य च 'यतो वाचः'(तै.उ.२/४/१) इत्यादिनाऽपरिमितानन्दत्वोक्तेः रुद्रस्य विरिञ्चाच्छतांशोनानन्दत्वोक्तेः । बृहस्पत्यादीनामुत्तरोत्तरापेक्षया शतांशोनानन्दत्वोक्तेः । अदृश्यत्वादौ प्रकृत्याद्ययोग्यस्वातन्त्र्यादिभेदकधर्मश्रवणात् । ब्रह्मादिजीवसमुदायस्य 'स यश्चायम्' (तै.२/८) इत्यत्रापकृष्टोत्कृष्टसर्वजीवस्थितिरूपभेदकधर्मोक्तेः । 'तत्वमसि' इत्यादि (छां. ६/८) श्रुतीनामर्थान्तरकल्पनाच्च । जीवेश्वरयोर्भेदस्य स्थापितत्वात् आनन्दमयादिर्विष्णुरेवेति सिद्धम् ।

## ।। ॐ कामाच्च नानुमानापेक्षा ॐ ।। १-१-१८

ननु भेदोक्तेः श्रुतिविरोधाभावेऽपि 'जीवो ब्रह्माभिन्नः चेतनत्वात् ब्रह्मवत्' 'भेदो मिथ्या भेदत्वात् चन्द्रभेदवत्' 'विमतानि शरीराणि मद्भोगायतनानि शरीरमत्वात् शरीरवत्' इत्याद्यनुमानविरोधः स्यादेव – इति प्राप्ते सूत्रमवतारयति –

ॐ कामाच्च नानुमानापेक्षेति ।। अस्यार्थः – अद्वैतश्रुत्यनुकूलानुमानस्याभावात् । केवलानुमानस्य च कामात् । इच्छामनुसृत्य प्रवृत्तत्वात् । नानुमानापेक्षा, अतीन्द्रियार्थविषये शुष्कानुमानापेक्षा न कार्या इत्यर्थः ।

एवं च प्रत्यक्षादिविरुद्धस्य श्रुतिसाहाय्यरहितस्य चानुमानस्य तत्त्वज्ञानं प्रति कारणत्वाभावात् । 'ईश्वरो न स्वतन्त्रः चेनत्वात् देवदत्तवत्' इत्यपि अनुमातुं शक्यत्वात् । प्रत्यक्षादिविरुद्धस्यापि प्रमाणत्वे चेतनत्वादेरपि प्रामाण्यं स्यादविशेषात् इति विपक्षेबाधकतर्कस्य सम्भवात् । 'यथा काम' इति स्कान्दवाक्ये केवलानुमानस्य कामगामित्वेनोक्तत्वात् । जीवेशयोर्भेदस्य सिद्धत्वेनानन्दमयादिः ब्रह्मैवेति सिद्धम् ।

**।। ॐ अस्मिन्नस्य च तद्योगं शास्ति ॐ ।। १-१-१९**

नन्वस्तु, आनन्दमयेन ब्रह्मणा हिरण्यगर्भादिजीवानां भेदः । तथाऽपि स व्यावहारिको न पारमार्थिको मुक्तावपि । उदाहृतश्रुतीनां सांसारिकभेदपरत्वोपपत्तेरिति प्राप्ते सूत्रमाह –

ॐ अस्मिन्नस्य च तद्योगं शास्तीति ।। अस्यार्थः – युक्तिसमुच्चये चशब्दः । यतः अस्मिन् आनन्दमयप्रकरणे मोक्षेऽपि अस्य जीवस्य तद्योगम् आनन्दमयादीनां सम्बन्धं शास्ति श्रुतिः प्रतिपादयति । अतोऽपि आनन्दमयादिर्ब्रह्मैव न देहादिरित्यर्थः ।

एवं च 'अनिलयनेऽभयम्' (तै.२/७) इत्येतदानन्दमयम् (तै.२/८) इत्यादिषु ब्रह्मज्ञानिना सर्वज्ञेन ज्ञातेनैव चतुर्मुखेन च सह स्वयोग्यकामानां मुक्तौ प्राप्तेः । देहादुत्क्रान्तजीवस्य पूर्णानन्दस्य परमात्मनः समीपप्रापकत्वोक्तेश्च । जीवेशयोर्भेदः पारमार्थिक इति सिद्ध्या आनन्दमयादिर्ब्रह्मैवेति सिद्धम् ।।

**।। इति सूत्रार्थरत्नावळ्याम् आनन्दमयाधिकरणम् ।।**

।। इति परिपूर्णचन्द्रिकायाम् आनन्दमयाधिकरणम् ।।

**।। श्रीमध्वेशार्पणमस्तु ।।**

ॐ कामाच्च नानुमानापेक्षेति ।। अस्यार्थः – अद्वैतश्रुत्यनुकूलानुमानस्याभावात् । केवलानुमानस्य च कामात् । इच्छामनुसृत्य प्रवृत्तत्वात् । नानुमानापेक्षा, अतीन्द्रियार्थविषये शुष्कानुमानापेक्षा न कार्या इत्यर्थः ।

एवं च प्रत्यक्षादिविरुद्धस्य श्रुतिसाहाय्यरहितस्य चानुमानस्य तत्त्वज्ञानं प्रति कारणत्वाभावात् । 'ईश्वरो न स्वतन्त्रः चेनत्वात् देवदत्तवत्' इत्यपि अनुमातुं शक्यत्वात् । प्रत्यक्षादिविरुद्धस्यापि प्रमाणत्वे चेतनत्वादेरपि प्रामाण्यं स्यादविशेषात् इति विपक्षेबाधकतर्कस्य सम्भवात् । 'यथा काम' इति स्कान्दवाक्ये केवलानुमानस्य कामगामित्वेनोक्तत्वात् । जीवेशयोर्भेदस्य सिद्धत्वेनानन्दमयादिः ब्रह्मैवेति सिद्धम् ।

## ।। ॐ अस्मिन्नस्य च तद्योगं शास्ति ॐ ।। १-१-१९

नन्वस्तु, आनन्दमयेन ब्रह्मणा हिरण्यगर्भादिजीवानां भेदः । तथाऽपि स व्यावहारिको न पारमार्थिको मुक्तावपि । उदाहृतश्रुतीनां सांसारिकभेदपरत्वोपपत्तेरिति प्राप्ते सूत्रमाह –

ॐ अस्मिन्नस्य च तद्योगं शास्तीति ।। अस्यार्थः – युक्तिसमुच्चये चशब्दः । यतः अस्मिन् आनन्दमयप्रकरणे मोक्षेऽपि अस्य जीवस्य तद्योगम् आनन्दमयादीनां सम्बन्धं शास्ति श्रुतिः प्रतिपादयति । अतोऽपि आनन्दमयादिर्ब्रह्मैव न देहादिरित्यर्थः ।

एवं च 'अनिलयनेऽभयम्' (तै.२/७) इत्येतदानन्दमयम् (तै.२/८) इत्यादिषु ब्रह्मज्ञानिना सर्वज्ञेन ज्ञातेनैव चतुर्मुखेन च सह स्वयोग्यकामानां मुक्तौ प्राप्तेः । देहादुत्क्रान्तजीवस्य पूर्णानन्दस्य परमात्मनः समीपप्रापकत्वोक्तेश्च । जीवेशयोर्भेदः पारमार्थिक इति सिद्ध्या आनन्दमयादिर्ब्रह्मैवेति सिद्धम् ।।

।। इति सूत्रार्थरत्नावळ्याम् आनन्दमयाधिकरणम् ।।

।। इति परिपूर्णचन्द्रिकायाम् आनन्दमयाधिकरणम् ।।

।। श्रीमध्वेशार्पणमस्तु ।।

# ಅಂತಸ್ಥತ್ವಾಧಿಕರಣ

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ,
ಸತ್ತರ್ಕದೀಪಾವಳೀ, ತತ್ವಪ್ರಕಾಶಿಕಾ,
ಭಾವದೀಪ, ವಾಕ್ಯಾರ್ಥಮಂಜರೀ

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

# ಬ್ರಹ್ಮಮೀಮಾಂಸಾಶಾಸ್ತ್ರ

## ಆನಂದಮಯಾಧಿಕರಣ

**१)ॐ।। अन्तस्तद्धर्मोपदेशात् ।।ॐ (२०)**

ಅರ್ಥ -- 'ಸಮುದ್ರಾಂತಸ್ಥತ್ವ' ಎಂಬ ಧರ್ಮವು ವಿಷ್ಣುವಿನಲ್ಲಿ ಮಾತ್ರ ಅಸಾಧಾರಣವಾಗಿದೆಯೆಂದು ತೈತ್ತಿರೀಯಶ್ರುತಿ ಹೇಳಿದೆ. ಆದ್ದರಿಂದ 'ಅಂತಃಪ್ರವಿಷ್ಟಂ ಕರ್ತಾರಮೀಶಮ್' ಎಂಬ ಶ್ರುತಿಯಲ್ಲಿ ಅಂತಸ್ಥನೆಂದು ಪ್ರತಿಪಾದ್ಯನಾದವನು ವಿಷ್ಣುವೇ ಹೊರತು ಇಂದ್ರಾದಿಗಳಲ್ಲ.

* * * *

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – अन्तः 'अन्तः प्रविष्टम्' इति हृदयान्तः श्रुतं ब्रह्मैव न इन्द्रादिः । कुतः? तद्धर्मोपदेशात् तस्मिन्नन्तः श्रुते क्षीराब्धिमध्यवर्तित्व, प्रलयोदधिस्थितत्व, ब्रह्माण्डवीर्यत्वादिरूपविष्णुधर्माणाम् 'अन्तःसमुद्रे' इत्यादौ श्रुतत्वादित्यर्थः ।।

'ಅಂತಃಪ್ರವಿಷ್ಟಮ್' ಎಂಬ ತೈತ್ತಿರೀಯಶ್ರುತಿಯಲ್ಲಿ ಹೃದಯದ ಒಳಗಡೆ ಸನ್ನಿಹಿತನೆಂದು ಶ್ರುತನಾದವನು ವಿಷ್ಣುವೇ ಹೊರತು ಇಂದ್ರಾದಿಗಳಲ್ಲ. ಏಕೆಂದರೆ ತದ್ಧರ್ಮೋಪದೇಶಾತ್ = ಕ್ಷೀರಸಮುದ್ರಶಾಯಿತ್ವ, ಪ್ರಳಯಸಮುದ್ರಸ್ಥಿತತ್ವ, ಬ್ರಹ್ಮಾಂಡವೀರ್ಯತ್ವ ಮೊದಲಾದ ವಿಷ್ಣುಧರ್ಮಗಳು ಆ ಪ್ರಕರಣದಲ್ಲಿ ಶ್ರುತವಾದ್ದರಿಂದ..

* * * *

## श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

## ಅನೇಕನಾಮಗಳ ಸಮನ್ವಯಕ್ಕಾಗಿ ಅಂತಸ್ಥತ್ವವೆಂಬ ಲಿಂಗಸಮನ್ವಯ

**भाष्यम् – 'अदृश्येऽनात्म्ये' इत्युक्तम् । तच्चादृश्यत्वम् –**

**'अन्तः प्रविष्टं कर्तारमेतम् । अन्तश्चन्द्रमसि मनसा चरन्तम् । सहैव सन्तं न विजानन्ति देवाः' (तै. आ. ३-११.)**

**इत्यन्तःस्थस्य कस्यचिदुच्यते । स च –**

**'इन्द्रो राजा' (तै.आ.३-११-६) 'सप्त युञ्जन्ति' (तै.आ.३.११.८)**

**इत्यादिभिरन्यः प्रतीयते । तस्मात् स एवाऽनन्दमय इति न मन्तव्यम् ॥**

ಹಿಂದಿನ ಆನಂದಮಯಾಧಿಕರಣದಲ್ಲಿ 'ಅದೃಶ್ಯೇऽನಾತ್ಮ್ಯೇ' ಎಂದು ಆನಂದಮಯನಲ್ಲಿ ಅದೃಶ್ಯತ್ವಗುಣವನ್ನು ಸಮರ್ಥಿಸಲಾಯಿತು. ಆದರೆ ಈ ಅದೃಶ್ಯತ್ವಧರ್ಮವು ತೈತ್ತಿರೀಯ ಆರಣ್ಯಕದಲ್ಲಿ ಶರೀರಾಂತಸ್ಥನಿಗೆ ಹೇಳಲ್ಪಟ್ಟಿದೆ. ''ಹೃದಯದಲ್ಲಿರುವ ಸರ್ವಕರ್ತೃವಾದ ಆನಂದಮಯನನ್ನು ಮತ್ತು ಚಂದ್ರನ ಅಂತರ್ಯಾಮಿಯಾಗಿ ಸ್ವೇಚ್ಛೆಯಿಂದ ಸಂಚರಿಸುವವನನ್ನು ಮತ್ತು ಕೂಡಿಕೊಂಡೇ ನಮ್ಮೆಲ್ಲರ ಜೊತೆಗೆ ಇರುವವನನ್ನು ದೇವತೆಗಳೂ ಸಹ ತಿಳಿಯಲಾರರು'' ಇತ್ಯಾದಿಯಾಗಿ ಯಾರೋ ಒಬ್ಬ ಅಂತಸ್ಥನಿಗೆ ಆನಂದಮಯತ್ವವು ಹೇಳಲ್ಪಟ್ಟಿದೆ. ಆ ಅಂತಸ್ಥನು ಯಾರೆಂಬುದನ್ನು ಶ್ರುತಿಯೇ ಹೇಳಿದೆ ''ಪ್ರಕಾಶಮಾನನಾದ ಇಂದ್ರನು'' ಅಥವಾ 'ಏಳು ಕುದುರೆಗಳುಳ್ಳ ರಥಿಕನು' ಇತ್ಯಾದಿಯಾಗಿ. ಆದ್ದರಿಂದ ವಿಷ್ಣುವಿಗಿಂತ ಬೇರೆಯಾದ ವ್ಯಕ್ತಿಯೇ ಆನಂದಮಯನೆಂದು ತೋರುತ್ತಾನೆ; ಹೀಗೆ ತಿಳಿಯಬಾರದು.

ಪ್ರತಿಪದಾರ್ಥ – ಈ ಅಧಿಕರಣದಲ್ಲಿ ಅಧಿದೈವಗತವಾದ ಅನ್ಯತ್ರಪ್ರಸಿದ್ಧವಾದ ಇಂದ್ರಾದಿನಾಮಗಳನ್ನು ವಿಷ್ಣುವಿನಲ್ಲಿ ಸಮರ್ಥಿಸುವುದಕ್ಕಾಗಿ ಅಂತಃಸ್ಥತ್ವವೆಂಬ ಲಿಂಗಸಮನ್ವಯವನ್ನು ಮಾಡುತ್ತಿದ್ದಾರೆ. ಹಿಂದಿನ ಅಧಿಕರಣದಿಂದ ಮತ್ತು ವಿಷಯವಾಕ್ಯದಿಂದ ಸಂಗತಿಯನ್ನು ತೋರಿಸಲು ಹೊರಟಿದ್ದಾರೆ.

ಅದೃಶ್ಯೇऽನಾತ್ಮ್ಯೇ = ಆನಂದಮಯನು ಅದೃಶ್ಯನು ಮತ್ತೊಬ್ಬ ನಿಯಾಮಕ-ನಿಲ್ಲದವನು, ಇತ್ಯುಕ್ತಮ್ = ಎಂದು ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟಿದೆ. ಅದೃಶ್ಯತ್ವಮ್ = ಈ ಅದೃಶ್ಯತ್ವವು, ಅಂತಃಪ್ರವಿಷ್ಟಂ = ಹೃದಯದಲ್ಲಿರುವ, ಕರ್ತಾರಮ್ = ಸರ್ವಕರ್ತೃವಾದ, ಏತಮ್ = ಈ ಆನಂದಮಯನನ್ನು; ಚಂದ್ರಮಸಿ

= ಚಂದ್ರನ, ಅಂತಃ = ಒಳಗಡೆ, ಮನಸಾ = ಸ್ವೇಚ್ಛೆಯಿಂದ, ಚರಂತಂ = ಸಂಚರಿಸುವವನನ್ನು; ಸಹೈವ = ಜೊತೆಗೆ ಕೂಡಿಕೊಂಡೇ, ಸಂತಂ = ಇರುವ ಆನಂದಮಯನನ್ನು, ದೇವಾಃ = ದೇವತೆಗಳೂ ಸಹ, ನ ವಿಜಾನಂತಿ = ತಿಳಿಯಲಾರರು, ಇತಿ = ಈ ಪ್ರಕಾರದಲ್ಲಿ, ಕಸ್ಯಚಿತ್ = ಯಾರೋ ಒಬ್ಬ, ಅಂತಸ್ಥಸ್ಯ = ಅಂತಸ್ಥನಾದ ವ್ಯಕ್ತಿಗೆ, ಉಚ್ಯತೇ = ಆನಂದಮಯತ್ವವು ಹೇಳಲ್ಪಟ್ಟಿದೆ.

ಸ ಚ = ಅಂತಹ ವ್ಯಕ್ತಿಯು ಯಾರೆಂದರೆ, ಇಂದ್ರೋ ರಾಜಾ = ಪ್ರಕಾಶಮಾನನಾದ ಇಂದ್ರನು; ಅಥವಾ 'ಸಪ್ತ ಯುಂಜಂತಿ' = ಏಳು ಕುದುರೆಗಳಿಂದ ರಥವನ್ನು ಯೋಜಿಸುವವನು, ಇತ್ಯಾದಿಭಿಃ = ಇವೇ ಮೊದಲಾದ ಪ್ರಮಾಣಗಳಿಂದ, ಅನ್ಯಃ = ಬೇರೊಬ್ಬನು, ಪ್ರತೀಯತೇ = ತಿಳಿಯಲ್ಪಡುತ್ತಾನೆ.

ತಸ್ಮಾತ್ = ಆದ್ದರಿಂದ, ಸ ಏವ = ಆ ಬೇರೊಬ್ಬನೇ, ಆನಂದಮಯಃ = ಆನಂದಮಯನೆನಿಸುತ್ತಾನೆ.

ಇತಿ = ಈ ರೀತಿಯಾಗಿ, ನ ಮಂತವ್ಯಮ್ = ತಿಳಿಯಬಾರದು[१].

---

(१) भाष्यदीपिका– अत्राधिकरणे अधिदैवगतान्यत्रप्रसिद्धेन्द्रादिनामसमन्वयसिद्ध्यर्थं देहान्तःस्थत्वरूपलिङ्गसमन्वयः क्रियत इति शास्त्राध्यायपादसङ्गतयः सिद्धा इत्याशयेन पूर्वाधिकरणतद्विषयवाक्यसङ्गती दर्शयति - अदृश्य इति ।। पूर्वाधिकरणोदाहृते 'अदृश्ये अनात्म्ये' इति वाक्ये आनन्दमयस्य कात्स्न्र्येनाज्ञेयत्वरूपमदृश्यत्वमुक्तमित्यर्थः । ततः किमित्यत आह - तच्चेति ।। चशब्द एवार्थे ।। तथा च यत्पूर्वोक्तमदृश्यत्वं तदेव 'अन्तःप्रविष्टम्' इति वाक्ये न विजानन्तीत्यनेन कस्यचिदन्तःस्थस्योच्यते । देवाज्ञेयत्वात् कैमुत्येन प्रतिपाद्यत इत्यर्थः । अनेनान्तःस्थत्वमुखेनादृश्यत्वानन्दमयत्वयोरन्यनिष्ठत्वाक्षेपात् पूर्वाधिकरणेनास्याऽक्षेपिकी सङ्गतिरुक्ता भवति । हृदयगुहान्तःप्रविष्टं जगत्कर्तारं चन्द्रमस्यन्तर्मनसा स्वेच्छया चरन्तं सहैव स्थितम् एतं देवास्तत्त्वाभिमानिनः कात्स्न्र्येन न विजानन्तीति श्रुत्यर्थः । पूर्वपक्षे त्वियमन्यपरा ।,

तत्र सयुक्तिकं पूर्वपक्षमाह – स चेति ।। चशब्दोऽवधारणे । अन्य इत्यावर्तते । तथा च सोऽन्तस्स्थो विष्णोः 'अन्यः' अन्य एव भवेत्, कुतः? 'इन्द्रो राजा' इत्यादि-वाक्यैर्यतोऽन्योऽन्तःस्थतया प्रतीयत अत इति योजना । आदिशब्देन –

'अपां नेतारं भुवनस्य गोपाम् । त्वष्टारं रूपाणि विकुर्वन्तं विपश्चितम् ।
ब्रह्मेन्द्रमग्निं जगतः प्रतिष्ठां दिव आत्मानं सवितारं बृहस्पतिम् ।
चतुर्होतारं प्रदिशोऽनुक्लृप्तं वाचो वीर्यं तपसाऽन्वविन्दत् ।।'

इत्यादि वरुणत्वष्ट्रग्न्यादिप्रापकतत्तच्छ्रुतिलिङ्गघटिततैत्तिरीयवाक्यानि गृह्यन्ते ।

पूर्वपक्षफलमाह – तस्मादिति ।। इदं चाऽवर्तते । प्रसज्यत इति शेषः । तथा च 'तस्मात्' अन्तःस्थस्य विष्ण्वन्यत्वात् 'सः' अदृश्योऽन्य एव प्रसज्यते ।

## ಸಂಗತಿ ಹಾಗೂ ಸಂಶಯ

**तत्वप्रकाशिका – अत्र परमात्मन्यन्यत्रप्रसिद्धेन्द्रादिनामसमन्वयसिद्ध्यर्थमन्तःस्थत्वलिङ्गसमन्वयसमर्थनादस्ति शास्त्रादिसङ्गतिः । श्रुत्यधिकरणसङ्गती दर्शयति – अदृश्य इति ।। 'अदृश्येऽनात्म्येऽनिरुक्ते' इत्यानन्दमयस्य यददृश्यत्वमुक्तं तच्च 'अन्तःप्रविष्टम्' इति वाक्ये कस्यचिदन्तःप्रविष्टस्य 'सहैव सन्तं न विजानन्ति देवाः' इत्युच्यते । सोऽन्तस्थो निर्णेयो भवति । तस्य विष्णोरन्यत्वऽदृश्यत्वं च तस्यैवेत्यानन्दमयस्यान्यत्वप्रसङ्गात् । सोऽन्तःस्थो विषयः । विष्णुरन्यो वेति**

---

तस्मादन्यस्यादृश्यत्वात् 'सोऽन्य एव' इन्द्राद्यन्यतम आनन्दमयः प्रसज्यते न विष्णुरिति योजना । राजा य इन्द्रो जगतः 'ईशे' ईष्टे जगदीश्वरत्वेन वर्तत इत्यर्थः । यस्मादीशे ईष्टे तस्माज्जगतो राजेति वा । एतदुत्तरस्य 'सप्तहोता' इति पदस्य सप्त बुद्धीन्द्रियाणि विषयेषु जीवेन जुहोतीति सप्तहोता । विषयानिन्द्रियैः जीवेन वेत्यर्थः।

'सप्त युञ्जन्ति' इति वाक्ये आद्यार्धस्य 'सप्त' छन्दांसि गायत्र्यादीनि अश्वरूपाणि 'एकचक्रं' सूर्यरथं प्रति स्वात्मानं युञ्जन्ति रथे युक्तानि भवन्तीत्यर्थः । सप्तच्छन्दोऽभिमानिना पृथग्वेदाभिमानी सप्तच्छन्दोनामा एकः प्रधानोऽश्वोऽस्ति । 'छन्दोऽभिमानिना पृथग्वेदाभिमानी सप्तच्छन्दोनामा सप्तस्वेकोऽस्ति' इति तत्त्वप्रदीपोक्तेः । अत एव 'सप्त युञ्जन्ति . . एको अश्वो वहति सप्तनामा' इत्यनयोर्न विरोधः । सूर्यरथचक्रस्य स्थितिमाह - त्रिनाभीति ।। त्रिरावृत्तमासचतुष्टयात्मकनाभित्रयोपेतम् 'अजरं' सदा दृढम् अर्वशब्दितेभ्यो वाजिभ्यो दूरस्थत्वादनर्वं चक्रं सूर्यरथस्यास्तीत्यर्थः । चक्रस्य मानसोत्तरगिरिशिखरवलयपरिवर्तित्वाद् अर्वतां मेरुमानसोत्तरमध्याकाशगामित्वाद् दूरस्थत्वं युक्तम् । येन 'यत्र' चक्रे 'इमा' इमानि विश्वानि सर्वाणि भुवनानि 'तस्थुः' स्थिता इत्युत्तरार्धस्यार्थः । जगतः 'प्रतिष्ठाम्' आश्रयं 'चतुर्होतारम्' अन्तःकरणचतुष्टये विषयाणां होतारं 'प्रदिशः' प्रतिदिशम् 'अनुक्लप्तं' व्यवस्थितं 'वाचः' वेदस्य 'वीर्यं' सारं मुख्यार्थम् 'इन्द्रम् अग्निं' 'दिवो' देव्याः 'आत्मानं' स्वामिनं वायुं 'सवितारं बृहस्पतिं' 'ब्रह्मा' हिरण्यगर्भः तपसा 'अन्वविन्दत्' लब्धवानित्यर्थः । सिद्धान्तयति – इतीति ।।

कुतो न मन्तव्यमित्यतस्तत्र हेतुत्वेन सूत्रमुपन्यस्य व्याचष्टे – अन्तरिति ।। सूत्रेऽन्तरित्युद्देश्यभागेऽपेक्षितं पदमध्याहृत्य दर्शयति – श्रूयमाण इति ।। अन्तस्स्थत्वेन श्रुत्योच्यमान इत्यर्थः । विधेयसमर्पकस्यानुवृत्तस्य तत्तु, इत्यस्यार्थमाह – विष्णुरेवेति ।

**सन्देहः । अदृश्यत्वलिङ्गमिन्द्रादिश्रुतिश्च प्राबल्याद्यविवेकेन[१] सन्देहबीजमिति भावः ।**

ಈ ಅಧಿಕರಣದಲ್ಲಿ ಭಗವಂತನನ್ನು ಬಿಟ್ಟು ಬೇರೆಕಡೆ ಪ್ರಸಿದ್ಧವಾದ ಇಂದ್ರ ಮೊದಲಾದ ನಾಮಗಳನ್ನು ಭಗವಂತನಲ್ಲಿ ಸಮನ್ವಯ ಮಾಡಲು ಅಂತಸ್ಥತ್ವಾದಿಲಿಂಗದ ಸಮನ್ವಯ ಮಾಡುವುದರಿಂದ ಶಾಸ್ತ್ರ, ಅಧ್ಯಾಯ, ಪಾದ ಇವುಗಳ ಸಂಗತಿ ಇದೆ. (ವೇದಾರ್ಥನಿರ್ಣಾಯಕ-ನ್ಯಾಯರೂಪವಾಗಿರುವುದರಿಂದ ಶಾಸ್ತ್ರಸಂಗತಿ. ಸಮನ್ವಯ ಮಾಡುವುದರಿಂದ ಅಧ್ಯಾಯಸಂಗತಿ. ಅನ್ಯತ್ರಪ್ರಸಿದ್ಧನಾಮಸಮನ್ವಯಕ್ಕೋಸ್ಕರ ಹೇಳಿದ್ದರಿಂದ ಪಾದಸಂಗತಿ). ಶ್ರುತಿ ಮತ್ತು ಅಧಿಕರಣ-ಸಂಗತಿ ಇವುಗಳನ್ನು "ಅದೃಶ್ಯೇ" ಎನ್ನುವುದರಿಂದ ಹೇಳುತ್ತಾರೆ.

'ಅದೃಶ್ಯೇಽನಾತ್ಮ್ಯೇಽನಿರುಕ್ತೇ' ಎಂದು ಆನಂದಮಯನಿಗೆ ಅದೃಶ್ಯತ್ವವನ್ನು ಹೇಳಿತ್ತು; ಆ ಅದೃಶ್ಯತ್ವವು 'ಅಂತಃಪ್ರವಿಷ್ಟಮ್' ಎಂಬ ವಾಕ್ಯದಲ್ಲಿ ಅಂತಃಪ್ರವಿಷ್ಟನಾದ (ಒಳಗೆ ಇರುವ) ಯಾರೋ ಒಬ್ಬನಿಗೆ 'ಸಹೈವ ಸಂತಂ ನ ವಿಜಾನಂತಿ ದೇವಾಃ' (ಒಟ್ಟಿಗೆ ಇರುವವನನ್ನು ದೇವತೆಗಳು ತಿಳಿಯುವುದಿಲ್ಲ) ಎಂದು ಹೇಳುತ್ತಾರೆ. ಆದ್ದರಿಂದ ಆ ಅಂತಸ್ಥನು ಯಾರು? ಎಂದು ನಿರ್ಣಯ ಮಾಡಬೇಕು. ಒಂದು ವೇಳೆ ಅವನು ವಿಷ್ಣುವಿಗಿಂತಲೂ ಭಿನ್ನನೆಂದಾದರೆ ಅದೃಶ್ಯನೂ ಬೇರೆಯವನೇ ಎಂದಾಗಿ ಆನಂದಮಯನೂ ಬೇರೆಯವನೇ ಆಗುತ್ತಾನೆ. ಅದಕ್ಕೋಸ್ಕರ ಅಂತಸ್ಥನೇ ಈ ಅಧಿಕರಣದ ವಿಷಯ. ವಿಷ್ಣುವೋ ಅಥವಾ ಬೇರೊಬ್ಬನೋ? ಎಂದು ಸಂದೇಹ. ಅದೃಶ್ಯತ್ವಾದಿಲಿಂಗ[२] ಮತ್ತು 'ಇಂದ್ರ' ಮೊದಲಾದ ಶ್ರುತಿ ಇವುಗಳಲ್ಲಿ ಯಾವುದು ಪ್ರಬಲ, ಯಾವುದು ದುರ್ಬಲ ಎಂದು ತೀರ್ಮಾನವಿಲ್ಲದಿರುವುದೇ ಸಂದೇಹಕ್ಕೆ ಕಾರಣ ಎಂದಭಿಪ್ರಾಯ.

## ಯುಕ್ತಿಬದ್ಧಪೂರ್ವಪಕ್ಷ

**तत्वप्रकाशिका – तत्र सयुक्तिकं पूर्वपक्षयति – स चेति ।। सोऽन्तःस्थोऽन्य इन्द्रादिः स्यात् । 'इन्द्रो राजा जगतो य ईशे' इतीन्द्रश्रुतेः । 'सप्त युञ्जन्ति**

---

(१) प्राबल्याद्यविवेकेनेति ।। 'श्रुतिलिङ्गम्' इति वाक्ये पूर्वं पूर्वं बलीयः स्यात्' इत्युक्त-श्रुतिलिङ्गगतजातिकृतप्राबल्यदौर्बल्याविवेकेनेति वा, 'नामानि सर्वाणि' इत्यादिना इन्द्रादिश्रुतीनां विष्णौ यत् सावकाशत्वलक्षणं दौर्बल्यम् 'अतर्क्यं तर्क्यमज्ञेयम्' इत्युक्तरीत्या 'विवक्षितगुणोपपत्तेः' इत्यादिवक्ष्यमाणरीत्या च यददृश्यत्वलिङ्गस्य विष्णोरन्यत्र निरवकाशत्वलक्षणं प्राबल्यं चोक्तं तयोरविवेकेनेत्यर्थः । –(भावबोधः)

(२) अदृश्यत्वादिलिङ्गस्यातर्क्यं तर्क्यमहेयमित्युक्तदिशा । – (वाक्यार्थमुक्तावली)

**रथमेकचक्रम्' इति सूर्यलिङ्गात् । 'अपां नेतारम्' इति वरुणलिङ्गात् । 'त्वष्टारꣳ रूपाणि विकुर्वन्तम्' इति त्वष्टृश्रुतेः । 'ब्रह्मेन्द्रम्' इत्यादिश्रुतिलिङ्गेभ्यश्च ।**

**न चेन्द्रादिशब्दा अन्यत्र नेतुं शक्यन्ते, तेषां देवेष्वेव रूढत्वात् तेषामैश्वर्यादिशब्दप्रवृत्तिनिमित्तवत्त्वाच्च ।**

ಈ ವಿಷಯದಲ್ಲಿ ಯುಕ್ತಿಯಿಂದ ಕೂಡಿದ ಪೂರ್ವಪಕ್ಷವನ್ನು ಮಾಡುತ್ತಾರೆ ''ಸ ಚ'' ಇತ್ಯಾದಿ ವಾಕ್ಯದಿಂದ. ಆ ಅಂತಸ್ಥನಾದವನು (ಇಂದ್ರೋ ರಾಜಾ ಜಗತೋ ಯ ಈಶೇ) ಎಂದು ಶ್ರುತಿಯಿರುವುದರಿಂದ ವಿಷ್ಣುವಿಗಿಂತ ಬೇರೆಯಾದ ಇಂದ್ರನೇ; ಅಥವಾ 'ಸಪ್ತ ಯುಂಜಂತಿ ರಥಮೇಕಚಕ್ರಂ' ಎಂದು ಸೂರ್ಯನ ಲಿಂಗವಿರುವುದರಿಂದ ಸೂರ್ಯನೇ; ಅಥವಾ 'ಅಪಾಂ ನೇತಾರಂ' ಎಂದು ವರುಣನ ಲಿಂಗವಿರುವುದರಿಂದ ವರುಣನೇ; ಅಥವಾ 'ತ್ವಷ್ಟಾರಂ ರೂಪಾಣಿ ವಿಕುರ್ವಂತಮ್' ಎಂದು ತ್ವಷ್ಟೃವಿನ ಶ್ರುತಿ ಇರುವುದರಿಂದ ತ್ವಷ್ಟೃವೇ; ಅಥವಾ 'ಬ್ರಹ್ಮೇಂದ್ರಮ್' ಎಂದು ಶ್ರುತಿ ಇರುವುದರಿಂದ ಬ್ರಹ್ಮನೋ ಅಥವಾ ಇಂದ್ರನೋ. ಹೀಗೆ ಶ್ರುತಿ ಮತ್ತು ಲಿಂಗಗಳಿರುವುದರಿಂದ ಅಂತಸ್ಥನಾದವನು ಬೇರೆಯವನೇ.

ಇದಲ್ಲದೆ ಶ್ರುತಿಯಲ್ಲಿರುವ ಇಂದ್ರಾದಿಶಬ್ದಗಳನ್ನು ಇಂದ್ರಾದಿಗಳನ್ನು ಬಿಟ್ಟು ಬೇರೆಕಡೆ (ಭಗವಂತನಿಗೆ) ಹೇಳಲು ಬರುವುದಿಲ್ಲ. ಆ ಶಬ್ದಗಳು ಇಂದ್ರಾದಿದೇವತೆಗಳಲ್ಲೇ ರೂಢವಾಗಿವೆ ಮತ್ತು ಆಯಾ ಶಬ್ದಗಳ ಪ್ರವೃತ್ತಿನಿಮಿತ್ತಗಳಿಂದಲೂ (ಐಶ್ವರ್ಯ ಮುಂತಾದ ಪ್ರವೃತ್ತಿನಿಮಿತ್ತ) ಅವರಲ್ಲೇ ರೂಢವಾಗಿವೆ.

## ಪೂರ್ವಪಕ್ಷದ ಫಲ

**तत्वप्रकाशिका – न चादृश्यत्वलिङ्गेनान्तःस्थो विष्णुः, श्रुत्यादिभ्यो लिङ्गमात्रस्य दुर्बलत्वात् । अतोऽन्यपरश्रुत्यादिबलादन्तःस्थोऽन्य एवेत्यर्थः ।**

**पूर्वपक्षफलमाह – तस्मादिति ।। यतोऽन्तःस्थोऽन्यस्तत एवादृश्यत्वं चान्यस्य तस्माददृश्यत्वयुक्तानन्दमयोऽपि कश्चिदिन्द्राद्यन्यतमः । तथा चान्यावयवस्य ब्रह्मणो न पृथक् जिज्ञास्यतेत्यर्थः । सिद्धान्तयति – इतीति ।।**

ಅದೃಶ್ಯತ್ವಲಿಂಗವಿರುವುದರಿಂದ ಅಂತಸ್ಥನಾದವನು ವಿಷ್ಣುವೇ ಎಂದು ಹೇಳುತ್ತೇವೆಂದರೆ ಶ್ರುತಿಗಿಂತಲೂ ಲಿಂಗವು ದುರ್ಬಲವಾಗಿದೆ. ಆದ್ದರಿಂದ ಭಗವದಿತರರಾದ ಇಂದ್ರಾದಿಗಳ ಪರವಾದ ಶ್ರುತಿಗಳ ಬಲದಿಂದ ಅಂತಸ್ಥನಾದವನು ವಿಷ್ಣ್ವಿತರನೇ (ಬೇರೆಯವನೇ) ಎಂದಭಿಪ್ರಾಯ.

ಪೂರ್ವಪಕ್ಷದ ಫಲವನ್ನು "ತಸ್ಮಾತ್" ಎಂಬಿತ್ಯಾದಿಯಾಗಿ ಹೇಳುತ್ತಾರೆ. 'ಹೀಗೆ ಅಂತಸ್ಥನು ವಿಷ್ಣುವಲ್ಲ, ಬೇರೆಯವರಾದ್ದರಿಂದ ಅದೃಶ್ಯತ್ವವುಳ್ಳವನೂ ಬೇರೆಯವನೇ. ಹಾಗಾಗಿ ಅದೃಶ್ಯತ್ವವುಳ್ಳ ಆನಂದಮಯನೂ ಇಂದ್ರಾದಿದೇವತೆಗಳಲ್ಲಿ ಯಾರಾದರೋ ಒಬ್ಬನು ಆಗಿದ್ದಾನೆ. ಆದ್ದರಿಂದ ಅಂತಹ ಬೇರೆಯವರ ಅವಯವವಾದ ಬ್ರಹ್ಮನ ಪ್ರತ್ಯೇಕವಾದ ಜಿಜ್ಞಾಸೆಯು ಕೂಡುವುದಿಲ್ಲ' -- ಎಂದು. ಸಿದ್ಧಾಂತವನ್ನು "ಇತಿ" ಎನ್ನುವುದರಿಂದ ತಿಳಿಸುತ್ತಿದ್ದಾರೆ.

भावदीपः – ॐ।। अन्तस्तद्धर्मोपदेशात् ।। ॐ परमात्मनीति समन्वयेति अन्यत्रप्रसिद्धेन्द्रादिनामेति चोक्त्या क्रमेण शास्त्राध्यायपादेष्वन्तर्भावः । 'सिद्ध्यर्थम्' इत्युक्त्या फलतः एव पादान्तर्भावः न साक्षात् । साक्षात् तु लिङ्गस्येति सूचितम् । लिङ्गसमन्वयोक्तेस्तु कृत्यमन्ते व्यक्तम् ।

'ಪರಮಾತ್ಮನಲ್ಲಿ' 'ಸಮನ್ವಯ' ಮತ್ತು 'ಅನ್ಯತ್ರಪ್ರಸಿದ್ಧ ಇಂದ್ರಾದಿನಾಮ' ಎಂದು ಹೇಳಿದ್ದರಿಂದ ಕ್ರಮವಾಗಿ ಶಾಸ್ತ್ರಾಂತರ್ಭಾವ, ಅಧ್ಯಾಯಾಂತರ್ಭಾವ ಮತ್ತು ಪಾದಾಂತರ್ಭಾವಗಳನ್ನು ಹೇಳಿದಂತಾಗುತ್ತದೆ. "ಸಿದ್ಧ್ಯರ್ಥಂ" ಎಂದು ಹೇಳಿದ್ದರಿಂದ ಸಾಕ್ಷಾತ್ತಾಗಿ ಪಾದದಲ್ಲಿ ಅಂತರ್ಭಾವವಿರುವುದಿಲ್ಲ; ಕಿಂತು ಅಂತಃ ಸ್ಥತ್ವಲಿಂಗಸಮನ್ವಯದ ಫಲವಾಗಿ ಪಾದಾಂತರ್ಭಾವ ಎಂದು ಹೇಳಿದಂತಾಗುತ್ತದೆ. ಲಿಂಗಕ್ಕೆ ಸಾಕ್ಷಾತ್ ಅಂತರ್ಭಾವವಿದೆ ಎಂದು ತಿಳಿಸಿದ್ದಾರೆ. ಲಿಂಗಸಮನ್ವಯದ ಕೃತ್ಯವನ್ನು ಮುಂದೆ ಕೊನೆಯಲ್ಲಿ ಸ್ಪಷ್ಟವಾಗಿ ಹೇಳುತ್ತಾರೆ.

भावदीपः – सङ्गतिपरत्वेन तावद् भाष्यं विवरितुमुक्तम् इत्यन्तस्यार्थमाह – **अदृश्य इति** ।। 'अनिरुक्ते' इत्यन्तोक्तिः 'अदृश्यत्वमज्ञेयत्वं न त्वप्रत्यक्षत्वम् अनिरुक्तेर्ज्ञानाभावाहेतुकत्वात्' इति द्योतनाय । अन्यथाऽसङ्गतेः ।

तच्चेत्यादेरुच्यते इत्यन्तस्यार्थमाह – **तच्चेति** ।। **इत्युच्यत इति** ।। 'देवा अपि न जानन्ति किमु अन्यः' इति कैमुत्येन सर्वाज्ञेयत्वरूपमदृश्यत्वमुच्यत इत्यर्थः । अदृश्यत्वं = कार्त्स्न्येनाज्ञेयत्वम् ।

भाष्ये 'इति न मन्तव्यम्' इत्यतः प्राक् 'प्रसज्यते' इति संयोज्य तदन्तभाष्यस्य सङ्गत्यर्थतया तात्पर्यमाह – **तस्य विष्णोरिति** ।। **अन्यत्व इति** ।। 'स च इन्द्रो राजा' इत्यादिभाष्यवाक्योक्तेन्द्रादिश्रुत्या इन्द्रादित्व इत्यर्थः । 'प्रसङ्गात्' इत्यस्य 'सोऽन्तस्थो निर्णेयो भवति' इति पूर्वेण भाष्येऽध्याहृतसाध्येनानन्वयः । तथा च पूर्वाधिकरणतद्विषयवाक्याभ्याम् आक्षेपिकीसङ्गतिरेतदधिकरणैतद्विषयवाक्ययोरिति भावः ।।

ಭಾಷ್ಯವನ್ನು ಸಂಗತಿಪರವಾಗಿ ವ್ಯಾಖ್ಯಾನಿಸಲು 'ಉಕ್ತಮ್' ಎಂಬಲ್ಲಿನವರೆಗಿನ ಅಭಿಪ್ರಾಯವನ್ನು "ಅದೃಶ್ಯೇ" ಎಂಬಿತ್ಯಾದಿಯಾಗಿ ಹೇಳುತ್ತಾರೆ. 'ಅನಿರುಕ್ತೇ' ಎಂದು ಅನಿರುಕ್ತದವರೆಗೂ ಪ್ರತೀಕವನ್ನು ಹಿಡಿದಿದ್ದು ಏಕೆಂದರೆ 'ಅದೃಶ್ಯತ್ವವೆಂದರೆ ಅಜ್ಞೇಯತ್ವ ಎಂದರ್ಥವೇ ಹೊರತು ಅಪ್ರತ್ಯಕ್ಷ ಎಂದಲ್ಲ; ಏಕೆಂದರೆ ಅವನ ಜ್ಞಾನವಿಲ್ಲದ್ದರಿಂದ ಅನಿರುಕ್ತನಾಗಿದ್ದಾನೆ ಹೊರತು ಅವನ ಪ್ರತ್ಯಕ್ಷವಿಲ್ಲದ್ದರಿಂದಲ್ಲ' ಎಂದು ತಿಳಿಸಲೋಸುಗ. ಹಾಗಿಲ್ಲದಿದ್ದರೆ ಅಲ್ಲಿಯವರೆಗೂ ಪ್ರತೀಕಗ್ರಹಣಮಾಡುವುದು ಅಸಂಗತವಾಗುತ್ತದೆ.

'ತಚ್ಚ' ಎನ್ನುವುದರಿಂದ 'ಉಚ್ಯತೇ' ಎನ್ನುವವರೆಗಿನ ಅಭಿಪ್ರಾಯವನ್ನು "ತಚ್ಚ" ಎಂಬ ಭಾಗದಿಂದ ಹೇಳುತ್ತಾರೆ. ದೇವತೆಗಳೇ ತಿಳಿಯುವುದಿಲ್ಲ; ಹಾಗಿರುವಾಗ ಬೇರೆಯವರು ತಿಳಿಯಲು ಸಾಧ್ಯವೇ? ಎಂದು ಕೈಮುತ್ಯನ್ಯಾಯವನ್ನು ಸರ್ವಾಜ್ಞೇಯತ್ವರೂಪವಾದ ಅದೃಶ್ಯತ್ವವನ್ನು ಹೇಳುತ್ತಾರೆ ಎಂದರ್ಥ. ಇಲ್ಲಿ ಅದೃಶ್ಯತ್ವವೆಂದರೆ 'ಸಂಪೂರ್ಣವಾಗಿ ಜ್ಞಾನವಿಷಯನಲ್ಲ' ಎಂದರ್ಥ.

ಭಾಷ್ಯದಲ್ಲಿ 'ಇತಿ ನ ಮಂತವ್ಯಮ್' ಎನ್ನುವುದಕ್ಕೆ ಮೊದಲು 'ಪ್ರಸಜ್ಯತೇ' ಎಂದು ಸೇರಿಸಿ, ಅಲ್ಲಿಯವರೆಗೂ ಇರುವ ಭಾಷ್ಯದ ಸಂಗತಿಯ ಅರ್ಥಕ್ಕೋಸ್ಕರ ತಾತ್ಪರ್ಯವನ್ನು 'ತಸ್ಯ ವಿಷ್ಣೋಃ' ಎನ್ನುವುದರಿಂದ ಹೇಳುತ್ತಾರೆ. ಅನ್ಯತ್ವೇ = 'ಸ ಚ ಇಂದ್ರೋ ರಾಜಾ' ಇವೇ ಮೊದಲಾದ ಭಾಷ್ಯದಲ್ಲಿ ಹೇಳಿದ ಶ್ರುತಿಯಿಂದ ಇಂದ್ರಾದಿದೇವತೆಗಳು ಎಂದು ಸ್ವೀಕರಿಸಿದರೆ. ಪ್ರಸಂಗಾತ್ ಎನ್ನುವುದಕ್ಕೆ 'ಸೋಽಂತಸ್ಥೋ ನಿರ್ಣೇಯೋ ಭವತಿ' ಎಂದು ಟೀಕೆಯಲ್ಲಿ ಮೊದಲಿಗೆ ಇರುವ ಭಾಷ್ಯದಲ್ಲಿ ಅಧ್ಯಾಹಾರ ಮಾಡಿದ ಸಾಧ್ಯದ ಜೊತೆಗೆ ಅನ್ವಯ. ಆದ್ದರಿಂದ ಹಿಂದಿನ ಅಧಿಕರಣ ಮತ್ತು ವಿಷಯವಾಕ್ಯಗಳಿಂದ ಈ ಅಧಿಕರಣ ಮತ್ತು ವಿಷಯವಾಕ್ಯಗಳಿಗೆ ಆಕ್ಷೇಪಿಕೀಸಂಗತಿ ಎಂದು ಅಭಿಪ್ರಾಯ.

भावदीपः – स इति ।। 'अन्तः प्रविष्टम्' इत्यादिश्रुत्युक्त इत्यर्थः । अन्यः प्रतीयते इति भाष्योक्तेराह – **अन्यो वेतीति ।। प्राबल्यादिति ।।** श्रुतिः प्रबला लिङ्गं दुर्बलम् इत्यविवेकेनेति वा । श्रुतेः श्रुतित्वेन, लिङ्गस्य निरवकाशत्वेन प्राबल्यात् किं तयोः प्रबलम्? इत्यविवेकेनेति वाऽर्थः ।

ಟೀಕೆಯಲ್ಲಿನ "ಸಃ" ಎಂಬಂಶಕ್ಕೆ 'ಅಂತಃಪ್ರವಿಷ್ಟಮ್' ಎಂಬಿತ್ಯಾದಿ ಶ್ರುತಿಯಲ್ಲಿ ಹೇಳಿದವನು ಎಂದರ್ಥ. 'ಅನ್ಯಃ ಪ್ರತೀಯತೇ' ಎಂದು ಭಾಷ್ಯದಲ್ಲಿ ಹೇಳಿದ್ದನ್ನು "ಅನ್ಯೋ ವಾ" ಇತ್ಯಾದಿಯಾಗಿ ಹೇಳಿದ್ದಾರೆ.

"ಪ್ರಾಬಲ್ಯಾತ್" ಎಂಬ ಟೀಕೆಯ ಭಾಗಕ್ಕೆ -- ಶ್ರುತಿಯು ಪ್ರಬಲ, ಲಿಂಗವು ದುರ್ಬಲ ಎಂಬ ವಿವೇಚನೆ ಇಲ್ಲದಿದ್ದಾಗ, ಅಥವಾ ಶ್ರುತಿಯಾದ್ದರಿಂದ ಶ್ರುತಿಯು ಪ್ರಬಲ, ಲಿಂಗವು ನಿರವಕಾಶವಾದ್ದರಿಂದ ಪ್ರಬಲ ಹೀಗಿರುವಾಗ ಯಾವುದು ಪ್ರಬಲ ಎಂಬ ವಿವೇಚನೆ ಇಲ್ಲದಿದ್ದಾಗ ಎಂದು "ವಾ"ಪದದ ಅರ್ಥ.

भावदीपः – 'स च' इत्यारभ्य 'प्रतीयते' इत्यन्तं भाष्यं पूर्वपक्षतद्युक्तिपरतयाऽपि व्याचष्टे – **सोऽन्तस्थोऽन्य इत्यादिना ।।** जगतो य ईशो ईष्टे स्वामीत्यर्थः ।

सूर्येति ।। सप्ताश्वत्वैकचक्ररथत्वरूपलिङ्गद्वयादित्यर्थः । भाष्यस्थादिपदार्थमाह – अपामिति ।। अब्नेतृत्वलिङ्गादित्यर्थः । अस्य चैकत्वेऽपि अन्ते श्रवणात् परप्राबल्यन्यायेन विष्णुलिङ्गात् पूर्वस्मात् प्राबल्यमिति भावः ।

'ಸ ಚ' ಎಂದಾರಂಭಿಸಿ 'ಪ್ರತೀಯತೇ' ಎನ್ನುವವರೆಗಿನ ಭಾಷ್ಯವನ್ನು ''ಸೋಽಂತಸ್ಥೋಽನ್ಯಃ'' ಎಂಬಿತ್ಯಾದಿ ಟೀಕಾಭಾಗದಿಂದ ಪೂರ್ವಪಕ್ಷ ಮತ್ತು ಅದನ್ನು ಸಮರ್ಥಿಸುವ ಯುಕ್ತಿಯ ಪರವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಜಗತೋ ಯ ಈಶೇ' ಎಂಬಲ್ಲಿ ಈಶೇ ಎಂಬ ಪದಕ್ಕೆ ಈಷ್ಟೇ ಎಂದರ್ಥ. ಅಂದರೆ ಸ್ವಾಮಿಯಾಗಿರುವವನು ಎಂದಭಿಪ್ರಾಯ. ''ಸೂರ್ಯಲಿಂಗಾತ್'' ಎಂಬಂಶಕ್ಕೆ 'ಏಳುಕುದುರೆಗಳಿರುವಿಕೆ, ಏಕಚಕ್ರವುಳ್ಳ ರಥವಿರುವಿಕೆ ಎಂಬ ಎರಡು ಲಿಂಗಗಳಿಂದ' ಎಂದರ್ಥ. ಭಾಷ್ಯದಲ್ಲಿರುವ 'ಆದಿ'ಶಬ್ದದ ಅರ್ಥವನ್ನು ''ಅಪಾಂ'' ಎನ್ನುವುದರಿಂದ ಹೇಳುತ್ತಾರೆ. 'ನೀರನ್ನು ಪ್ರೇರೇಪಿಸುವ ಲಿಂಗದಿಂದ' (ಅಬ್ ನೇತೃತ್ವಲಿಂಗಾತ್) ಎಂದರ್ಥ. ಈ ಲಿಂಗವು ಒಂದೇ ಆಗಿದ್ದರೂ ಕೊನೆಯಲ್ಲಿ ಶ್ರುತವಾದ್ದರಿಂದ ಮೊದಲಿನದಕ್ಕಿಂತ ನಂತರದ್ದು ಪ್ರಬಲ ಎಂಬ ನ್ಯಾಯದಿಂದ ಮೊದಲಿರುವ ವಿಷ್ಣುಲಿಂಗಕ್ಕಿಂತಲೂ ಪ್ರಬಲವಾಗಿದೆ.

भावदीपः – विष्णुलिङ्गेभ्य इन्द्रादिश्रुतिलिङ्गयोः प्राबल्याय वा अग्न्यादयोऽप्यत्र ग्राह्या इति भावेन वा –

> ब्रह्मेन्द्रमग्निं जगतः प्रतिष्ठां दिव आत्मानं सवितारं बृहस्पतिम् ।
> चतुर्होतारं प्रदिशोऽनुक्लृप्तं वाचो वीर्यं तपसाऽन्वविन्दत् ।।'

इत्यादिशब्दानाम् अन्यविषयत्वमिति न्यायविवरणमत्र योजयति – ब्रह्मेन्द्रमिति ।। तथा च इन्द्रश्रुतेर्जात्याऽभ्यासेन च सूर्यलिङ्गस्य च सवितृश्रुत्यनुगृहीतत्वेन प्राबल्यमिति भावः । एतेन ब्रह्मश्रुत्या विष्णुः किं नेति निरस्तम् । ब्रह्मा तपसाऽन्वविन्दत् इति सुधोक्तदिशा वाक्यशेषस्य क्रियापेक्षितकर्त्रर्पकत्वेन प्रथमान्तपुल्लिङ्गत्वेन विरिञ्चपरत्वादिति । उक्तश्रुत्यादेः सावकाशत्वेन दौर्बल्यनिरासाय

> ........ देवानां तत्र शक्तताम् आशङ्क्य ।
> तत्र रूढिं च तच्छब्दानामपि स्वयम् ।

इत्यनुभाष्यमत्रव्यावर्त्य शङ्कापूर्वं योजयति – न चेति ।। 'तत्र रूढिं च तच्छब्दानाम्' इत्यस्यार्थः ''देवेष्विति'' । 'देवानां तत्र शक्तताम्' इत्यंशस्य तत्रैश्वर्यादिरूपशब्दप्रवृत्तिनिमित्तवत्तायां शक्तताम् इत्यर्थकस्य तात्पर्यं – तेषामिति ।।

ವಿಷ್ಣುಲಿಂಗಗಳಿಗಿಂತಲೂ ಇಂದ್ರಾದಿಗಳ ಶ್ರುತಿ ಮತ್ತು ಲಿಂಗಗಳು ಪ್ರಬಲವಾಗಿವೆ ಎನ್ನುವುದಕ್ಕೆ; ಅಥವಾ ಅಗ್ನ್ಯಾದಿದೇವತೆಗಳನ್ನು ಇಲ್ಲಿ ಸ್ವೀಕರಿಸಬೇಕು. ಇದನ್ನು

'ಬ್ರಹ್ಮೇಂದ್ರಾಗ್ನಿಂ ಜಗತಃ ಪ್ರತಿಷ್ಠಾಂ ದಿವ ಆತ್ಮಾನಂ ಸವಿತಾರಂ ಬೃಹಸ್ಪತಿಮ್ ।
ಚತುರ್ಹೋತಾರಂ ಪ್ರದಿಶೋನುಕ್ಲೃಪ್ತಂ ವಾಚೋ ವೀರ್ಯಂ ತಪಸಾಽನ್ವವಿಂದತ್ ॥'
ಇತ್ಯಾದಿಶಬ್ದಾನಾಮ್ ಅನ್ಯವಿಷಯತ್ವಮ್'

......... ಇವೇ ಮೊದಲಾದ ಪ್ರಮಾಣಗಳಿಂದ ಈ ಶ್ರುತಿಯು ಬೇರೆಯವರನ್ನು ಹೇಳುತ್ತಿದೆ ಎಂಬ ನ್ಯಾಯವಿವರಣವನ್ನು ಇಲ್ಲಿ ''ಬ್ರಹ್ಮೇಂದ್ರ'' ಎಂಬಿತ್ಯಾದಿಯಾಗಿ ಯೋಜನೆಯನ್ನು ತೋರಿಸುವುದರ ಮೂಲಕ ತಿಳಿಸುತ್ತಾರೆ. ಆದುದರಿಂದ ಇಂದ್ರಶ್ರುತಿಯು ಸ್ವಭಾವತಃ ಮತ್ತು ಅಭ್ಯಾಸ ಇರುವುದರಿಂದ ಪ್ರಬಲ; ಸೂರ್ಯಲಿಂಗವು ಸವಿತೃಶ್ರುತಿ ಇರುವುದರಿಂದ ಪ್ರಬಲ ಎಂದಭಿಪ್ರಾಯ. ಹೀಗೆ ಹೇಳಿದ್ದರಿಂದ ಬ್ರಹ್ಮಶ್ರುತಿ ಇರುವುದರಿಂದ ವಿಷ್ಣುವು ಏಕಾಗಬಾರದು? ಎನ್ನುವುದನ್ನು ನಿರಾಕರಣೆ ಮಾಡಿದಂತಾಯಿತು. 'ಬ್ರಹ್ಮಾ ತಪಸಾಽಽನ್ವವಿಂದತ್' ಎಂಬಲ್ಲಿ ಸುಧೆಯಲ್ಲಿ ಹೇಳಿದಂತೆ ವಾಕ್ಯಶೇಷವು 'ಅನ್ವವಿಂದತ್' ಎಂಬ ಕ್ರಿಯೆಯಿಂದ ಅಪೇಕ್ಷಿತವಾದ ಕರ್ತೃವನ್ನು ಹೇಳುತ್ತದೆಯಾದ್ದರಿಂದ; ಮತ್ತು ಪ್ರಥಮಾವಿಭಕ್ತ್ಯಂತವಾದ ಪುಲ್ಲಿಂಗಪದವಾದ್ದರಿಂದ ಬ್ರಹ್ಮಶಬ್ದವು ಚತುರ್ಮುಖಬ್ರಹ್ಮನನ್ನು ಹೇಳುತ್ತದೆ ಹೊರತು ವಿಷ್ಣುವನ್ನಲ್ಲ. ಹೀಗಾಗಿ ಬ್ರಹ್ಮಶ್ರುತಿ ಇರುವುದರಿಂದ ವಿಷ್ಣುವೆಂದು ಶಂಕೆ ಮಾಡಲು ಬರುವುದಿಲ್ಲ. ಹಿಂದೆ ಹೇಳಿದ ಶ್ರುತಿ ಮುಂತಾದವುಗಳು ಸಾವಕಾಶಗಳಾದ್ದರಿಂದ ದುರ್ಬಲವಾಗಿವೆ ಎಂಬುದನ್ನು ನಿರಾಕರಣೆ ಮಾಡಲು --

'..... ದೇವಾನಾಂ ತತ್ರ ಶಕ್ತತಾಮ್ ।
ಆಶಂಕ್ಯ ತತ್ರ ರೂಢಿಂ ಚ ತಚ್ಛಬ್ದಾನಾಮಪಿ ಸ್ವಯಮ್ ॥

ಎಂಬ ಅನುವ್ಯಾಖ್ಯಾನವನ್ನು ಇಲ್ಲಿ ಪೂರ್ವಪಕ್ಷಸಹಿತವಾಗಿ ''ಸಚ'' ಎಂಬಿತ್ಯಾದಿಯಾಗಿ ಯೋಜನೆಯನ್ನು ಮಾಡುತ್ತಾರೆ. 'ತತ್ರ ರೂಢಿಂ ಚ ತಚ್ಛಬ್ದಾನಾಮ್' ಎಂಬೀ ಅನುವ್ಯಾಖ್ಯಾನದ ಅರ್ಥವನ್ನು ''ದೇವೇಷು'' ಎಂಬಿತ್ಯಾದಿಯಾಗಿ ಹೇಳುತ್ತಾರೆ. ದೇವತೆಗಳಲ್ಲಿ ಐಶ್ವರ್ಯ ಮೊದಲಾದ ಇಂದ್ರಾದಿಶಬ್ದಗಳ ಪ್ರವೃತ್ತಿ-ನಿಮಿತ್ತವಿರುವುದರಿಂದ ಇಂದ್ರಾದಿಪದಗಳ ಶಕ್ತಿಯು ದೇವತೆಗಳಲ್ಲಿ ಇದೆ ಎಂಬರ್ಥವುಳ್ಳ 'ದೇವಾನಾಂ ತತ್ರ ಶಕ್ತತಾಮ್' ಎಂಬುದರ ಅಭಿಪ್ರಾಯವನ್ನು ''ತೇಷಾಮ್'' ಎಂಬಿತ್ಯಾದಿಯಾಗಿ ಹೇಳುತ್ತಾರೆ.

भावदीपः – भाष्ये 'स एव' इत्यवधारणादन्य इत्यत्राप्यन्य एव इति संयोज्यमिति भावेन तदवधारणव्यावर्त्यमाह – न चेति ।। अदृश्यत्वेति ।। सिद्धान्तीयलिङ्गानामप्युपलक्षणम् । अतो लिङ्गमात्रस्येत्याह – न त्वेकस्येति ।। एतेन तेषां बहुत्वेन प्राबल्यमिति निरस्तम् । श्रुतित्वरूपस्वभावप्राबल्यस्य बलत्वादिति । तदप्याह श्रुत्यादिभ्यः' इति श्रुतिग्रहणेन । अत इति ।। 'निर्बाध-रूढियोगसद्भावादन्यपरा' इत्यर्थः ।

ಭಾಷ್ಯದಲ್ಲಿ 'ಸ ಏವ' ಎಂದು ಅವಧಾರಣೆಯಿರುವುದರಿಂದ 'ಅನ್ಯಃ' ಎಂಬಲ್ಲೂ 'ಅನ್ಯ ಏವ' ಎಂದಿಟ್ಟುಕೊಳ್ಳಬೇಕು ಎನ್ನುವ ಅಭಿಪ್ರಾಯದಿಂದ ಆ ಅವಧಾರಣೆಯಿಂದ ನಿರಾಕರಣೆ ಮಾಡಲ್ಪಡುವುದನ್ನು "ನ ಚ" ಎಂಬಂಶದಿಂದ ಹೇಳುತ್ತಾರೆ. ಅದೃಶ್ಯತ್ವೇತಿ -- ಸಿದ್ಧಾಂತದಲ್ಲಿ ಹೇಳುವ ಲಿಂಗಗಳನ್ನು ಉಪಲಕ್ಷಣದಿಂದ ಇಟ್ಟುಕೊಳ್ಳಬೇಕು. ಆದುದರಿಂದ ಲಿಂಗಮಾತ್ರಸ್ಯ ಎಂದು ಹೇಳುತ್ತಿದ್ದಾರೆ. ಹೀಗೆ ಹೇಳಿದ್ದರಿಂದ 'ಲಿಂಗಗಳು ಬಹಳ ಇರುವುದಿಂದ ಅವುಗಳಿಗೆ ಪ್ರಾಬಲ್ಯವಿದೆ' ಎನ್ನುವುದನ್ನು 'ಶ್ರುತಿತ್ವರೂಪವಾದ ಸ್ವಭಾವತಃ ಪ್ರಾಬಲ್ಯವಿರುವುದರಿಂದ' ಅವುಗಳು ಲಿಂಗಗಳಾದ್ದರಿಂದ ದುರ್ಬಲವಾಗಿವೆ ಎಂದು ನಿರಾಕರಣೆ ಮಾಡಿದಂತಾಯಿತು. ಶ್ರುತಿತ್ವರೂಪವಾದ ಪ್ರಾಬಲ್ಯವನ್ನು "ಶ್ರುತ್ಯಾದಿಭ್ಯಃ" ಎಂಬಲ್ಲಿ 'ಶ್ರುತಿ' ಎಂದು ಹೇಳುವುದರ ಮೂಲಕ ತಿಳಿಸಿದ್ದಾರೆ. 'ಬಾಧಕವಿಲ್ಲದ ರೂಢಿ ಮತ್ತು ಯೋಗವಿರುವುದರಿಂದ ಅನ್ಯಪರ' ಎಂಬರ್ಥವನ್ನು "ಅತಃ" ಎಂಬಂಶದಿಂದ ಹೇಳಿದ್ದಾರೆ.

**भावदीपः – पूर्वपक्षस्य नानाकोटित्वात् सन्देहादविशेषः स्यादित्यत आह – अन्य एवेति ।। इन्द्रादिप्रापकाणां बलाबलनिर्णयेनेन्द्र एवेत्याद्यनिर्णयेऽपीह विष्णोरन्य एव यः कश्चित् सर्वथा विष्णुर्न इति विष्ण्वन्यत्वेन निर्धारणसम्भवादिति भावः । अत एव संशयेऽपि 'अन्य' इत्येवोक्तम् । एवमन्यत्राप्यनेककोटिकस्थले बोध्यम् ।**

**सङ्गतिपरतया तात्पर्यतो व्याख्यातमपि भाष्यशेषं पूर्वाक्षेपबीजं वदन् फलपरत्वेनापि व्याचष्टे – पूर्वपक्षेति ।। तदाक्षेपस्यापि किं फलम्? इत्यत पूर्वभाष्योक्तमाह – तथा चेति ।।**

ಪೂರ್ವಪಕ್ಷದಲ್ಲಿ ನಾನಾ ಕೋಟಿಗಳಿರುವುದರಿಂದ ಅದು ಸಂದೇಹಕ್ಕಿಂತ ಭಿನ್ನವಾಗಲಿಲ್ಲ. ಆದ್ದರಿಂದ ಅದು ವಿರೋಧಿಯಾಗುವುದಿಲ್ಲ; ಎಂದರೆ "ಅನ್ಯ ಏವ" ಎಂಬಿತ್ಯಾದಿಯಾಗಿ ಹೇಳುತ್ತಾರೆ. ಅಂದರೆ ಇಂದ್ರಾದಿದೇವತೆಗಳನ್ನು ತಿಳಿಸುವ ಶ್ರುತಿಲಿಂಗಗಳಲ್ಲಿ ಬಲಾಬಲವನ್ನು ನಿರ್ಣಯಿಸಲು ಸಾಧ್ಯವಿಲ್ಲದ್ದರಿಂದ 'ಇಂದ್ರನೇ ಆ ಶ್ರುತಿಯಿಂದ ವಾಚ್ಯ' ಎಂಬಿತ್ಯಾದಿಯಾಗಿ ನಿರ್ಣಯಿಸಲು ಆಗದಿದ್ದರೂ, ವಿಷ್ಣುವಿಗಿಂತ ಭಿನ್ನನಾದ ಯಾರೋ ಒಬ್ಬನು ಆ ಶ್ರುತಿಯಿಂದ ವಾಚ್ಯನು ಹೊರತು ಸರ್ವಥಾ ವಿಷ್ಣುವಲ್ಲ ಎಂದು 'ವಿಷ್ಣುವಿಗಿಂತ ಬೇರೆಯವನು' ಎಂದು ನಿರ್ಧಾರ ಮಾಡಲಿಕ್ಕೆ ಬರುತ್ತದೆಂದಭಿಪ್ರಾಯ. ಆದುದರಿಂದಲೇ ಸಂಶಯದಲ್ಲಿಯೂ 'ಬೇರೆಯವನೇ' ಎಂದು ಹೇಳಿದ್ದಾರೆ. ಹೀಗೆ ಅನೇಕ ಕೋಟಿಗಳುಳ್ಳಂತಹ ಬೇರೆ ಕಡೆ ಬರುವ ಪೂರ್ವಸ್ಥಳಗಳಲ್ಲಿ ತಿಳಿಯಬೇಕು.

ಹಿಂದೆ ಸಂಗತಿಪರತಯಾ ಭಾಷ್ಯದ ಒಂದು ಭಾಗವನ್ನು ತಾತ್ಪರ್ಯತಃ ವ್ಯಾಖ್ಯಾನಿಸಲಾಗಿತ್ತು. ಹಾಗಿದ್ದರೂ ಉಳಿದ ಭಾಷ್ಯದ ಭಾಗವನ್ನು ಹಿಂದಿನ ಆಕ್ಷೇಪಕ್ಕೆ ಬೀಜವನ್ನು(ಕಾರಣವನ್ನು) ಹೇಳುತ್ತಾ, ಫಲಪರವಾಗಿಯೂ "ಪೂರ್ವಪಕ್ಷ" ಎಂಬಂಶದಿಂದ ವ್ಯಾಖ್ಯಾನಮಾಡುತ್ತಿದ್ದಾರೆ. ಆ ರೀತಿ ಆಕ್ಷೇಪಕ್ಕಾದರೂ ಏನು ಫಲ? ಎನ್ನುವುದಕ್ಕೆ "ತಥಾ ಚ" ಎಂಬುದಾಗಿ ಹಿಂದಿನ ಭಾಷ್ಯವಾಕ್ಯದಲ್ಲಿ ಹೇಳಿದ್ದನ್ನು ತಿಳಿಸುತ್ತಿದ್ದಾರೆ.

**वाक्यार्थमञ्जरी – नामासमन्वयसिध्यर्थमिति** ।। अत एव तत्पादान्तर्भाव इति भावः । अदृश्यत्वाद्यभिधायि पदं नास्तीत्यत आह – **सहैवेति** ।। स्वैःसहैवेत्यर्थः ॥ श्रुतेः स्वभावतःप्राबल्याल्लिङ्गास्यापि वक्ष्यमाणरीत्या निरवकाशत्वेन श्रुतितः प्राबल्यादन्यतरनिर्णय एव स्यान्न संदेह इत्यत उक्तं – **प्राबल्याद्यविवेकेनेति** ।। ईशे ईष्टा स्वामी यः तं न विजानन्तीत्यन्वयः ।

**सूर्यलिङ्गादिति** ।। एकचक्ररथं प्रति सप्तनामाऽश्वः सम्बध्यत इति सप्ताश्ववत्वैकचक्ररुथित्वरूपादित्यर्थः ॥ **वरुणलिङ्गादिति** ।। जलनियामकत्वरुपादित्यर्थः ॥ **त्वष्टारमिति** ।। रूपाणि विविधतया कुर्वन्तं त्वष्टारं निचिक्युरित्यन्वयः ॥

**ब्रह्मेन्द्रमित्यादिरिति** ।। "ब्रह्मेन्द्रमग्निं जगतः प्रतिष्ठान्दिव आत्मानं सवितारं बृहस्पतिम्" इत्यादीत्यर्थः । अत्र दिव आत्मत्वं वायुलिङ्गम् ॥ योगेनैतेषां विष्णुपरत्वमित्यत आह – **नचेति** ।। तेषामित्यादि । तथाच योगरूढिभ्यां योगमात्रस्य बाध इति भावः । पृथक् स्वातन्त्र्येण ॥

'ನಾಮಸಮನ್ವಯಸಿದ್ಧ್ಯರ್ಥಂ' ಎಂದು ಇದೆ. ಅಂದರೆ ಯಾವ ಕಾರಣದಿಂದ ಅನ್ಯತ್ರ-ಪ್ರಸಿದ್ಧವಾದ ನಾಮಾತ್ಮಕವಾದ ಶಬ್ದಗಳ ಸಮನ್ವಯ ಮಾಡುತ್ತಿದ್ದಾರೋ ಆ ಕಾರಣದಿಂದಲೇ ಈ ಪಾದದಲ್ಲಿ ಅಂತರ್ಭಾವವಾಗುತ್ತದೆಂದು ಭಾವ. ಅಂತಸ್ಥನಾದವನ ವಿಷಯದಲ್ಲಿ ಸಂದೇಹಕ್ಕೆ ಕಾರಣವೇ ಇಲ್ಲ. ಏಕೆಂದರೆ ಶ್ರುತಿಗಳು ಸ್ವಭಾವತಃ ಪ್ರಬಲವಾಗಿವೆ. ಲಿಂಗಗಳೂ ಸಹ ಮುಂದೆ ಹೇಳುವ ರೀತಿಯಾಗಿ ನಿರವಕಾಶವಾಗಿರುವುದರಿಂದ ಎರಡರಲ್ಲಿ ಒಂದು ನಿರ್ಣಯವಾಗಲೇಬೇಕೆಂಬ ಆಕ್ಷೇಪಕ್ಕೆ 'ಪ್ರಾಬಲ್ಯಾದ್ಯವಿವೇಕೇನ' ಎಂದು ಉತ್ತರವನ್ನು ಹೇಳಿದ್ದಾರೆ.

ಭಾಷ್ಯದಲ್ಲಿ ಉದಾಹರಿಸಿರುವ ತೈತ್ತಿರೀಯ ಆರಣ್ಯಕಕ್ಕೆ ಅನ್ವಯವು 'ಈಶೋ ಈಷ್ಟಾ-ಸ್ವಾಮೀ ಯಃ ತಂ ನ ವಿಜಾನಂತಿ' ಎಂಬುದಾಗಿ ತಿಳಿಯಬೇಕು. ಅದೃಶ್ಯತ್ವವೇ ಮೊದಲಾದ ಲಿಂಗಗಳನ್ನು ಹೇಳುವ ಪದವೇ ಇಲ್ಲವಲ್ಲವೆಂಬ ಶಂಕಾವನ್ನು ಪರಿಹಾರ ಮಾಡಲು 'ಸಹೈವ' ಎಂದು ಹೇಳಿದ್ದಾರೆ. 'ಸ್ವೈಃ' ಎಂದರೆ ಸಹೈವ ಎಂದು ಅರ್ಥ.

'ಸೂರ್ಯಲಿಂಗಾತ್' ಎಂದರೆ ಒಂದು ಚಕ್ರದ ರಥಕ್ಕೆ ಏಳು ಕುದುರೆಗಳನ್ನು ಸಂಬಂಧ ಮಾಡುತ್ತಾರೆಂದು ಸಪ್ತಾಶ್ವವತ್ವ ಏಕಚಕ್ರರಥಿತ್ವ ರೂಪವಾದ ಲಿಂಗ ಎಂದರ್ಥ. 'ವರುಣಲಿಂಗಾತ್'? ಎಂದರೆ ಜಲನಿಯಾಮಕತ್ವ ರೂಪ ಎಂದರ್ಥ. ತ್ವಷ್ಟೃಶ್ರುತಿಗೆ ಅನ್ವಯವು 'ರೂಪಾಣಿ ವಿವಿಧತಯಾ ಕುರ್ವಂತಂ ತ್ವಷ್ಟಾರಂ ನಿಚಿಕ್ಯುಃ' ಎಂದು ತಿಳಿಯಬೇಕು. 'ಬ್ರಹ್ಮೇಂದ್ರಮಿತ್ಯಾದಿ' ಎಂದು ಇದೆ. 'ಬ್ರಹ್ಮೇಂದ್ರಮಗ್ನಿಂ ಜಗತಃ ಪ್ರತಿಷ್ಠಾಂ ದಿವ ಆತ್ಮಾನಂ ಸವಿತಾರಂ ಬೃಹಸ್ಪತಿಂ' ಇವೇ ಮೊದಲಾದ ಶ್ರುತಿಗಳು. ಈ ಶ್ರುತಿಯಲ್ಲಿ 'ದಿವಃ' ಆತ್ಮತ್ವವು ವಾಯುವಿನ ಲಿಂಗ. ಈ ಶೃತಿಗಳಲ್ಲಿರುವ ಲಿಂಗಗಳನ್ನು ಯೋಗದಿಂದ ವಿಷ್ಣುವಿನ ಪರವಾಗಿ ಅರ್ಥ ಮಾಡಬಹುದಲ್ಲವೆ? ಎಂದು ಪ್ರಶ್ನೆ ಮಾಡಿದರೆ 'ನ ಚ' ಎಂಬ ವಾಕ್ಯದಿಂದ ಉತ್ತರ ಕೊಡುತ್ತಿದ್ದಾರೆ. 'ತೇಷಾಂ' ಇತ್ಯಾದಿ ವಾಕ್ಯಗಳ

ಅಭಿಪ್ರಾಯ ಯೋಗ ರೂಢಿಗಳಿಂದ ಈ ಲಿಂಗಗಳು ದೇವತೆಗಳ ಪರವಾಗಿರುವುದರಿಂದ ಕೇವಲ ಯೋಗಾರ್ಥವು ಬಾಧ್ಯವಾಗುತ್ತದೆಂದು. ಪೃಥಕ್ ಎಂದರೆ ಸ್ವಾತಂತ್ರ್ಯೇಣ ಎಂದರ್ಥ.

## ಹೃದಯದಲ್ಲಿರುವವನು ವಿಷ್ಣುಮಾತ್ರ

**सू - ॐ ।। अन्तस्तद्धर्मोपदेशात् ।। ॐ ।। २० ।।**

**अन्तः श्रूयमाणो विष्णुरेव । 'अन्तस्समुद्रे मनसा चरन्तम् । ब्रह्मान्वविन्दद् दशहोतारमर्णे' (तै.उ. ३-११-१.) 'समुद्रे अन्तः कवयो विचक्षते मरीचीनां पदमिच्छन्ति वेधसः' (तै.आ. ३-११-११.) 'यस्याण्डकोशं शुष्ममाहुः' (तै.आ. ३-११-४.) इत्यादितद्धर्मोपदेशात् ।**

**स हि क्षीरसमुद्रशायी । तस्य च वीर्यमण्डकोशः[१] ।**

---

(१) भाष्यदीपिका– तैत्तिरीयोपनिषद्गतभिन्नभिन्नवाक्योदाहरणपूर्वकं हेत्वंशं व्याचष्टे – अन्तरिति ।। इत्यादीति ।। तस्य धर्मास्तद्धर्माः, तेषामुपदेशो वचनम् इत्यादिरूपश्चासौ तद्धर्मोपदेशश्च इत्यादितद्धर्मोपदेशः तस्मादित्यर्थः । यद्वा – लुप्तविभक्तिकोऽयं निर्देशः । तथा चेत्यादेरुपदेशादित्यर्थः । समुदायैकवचनमेतत् ।

अनेन 'अन्तःप्रविष्टम्' इति वाक्ये 'अन्तःश्रूयमाणः' हृदयान्तस्स्थत्वेन श्रुत्युक्तो विष्णुरेव, न त्वन्यः । कुतः? तस्य विष्णोर्धर्माणां क्षीरप्रलयाब्धिस्थत्वब्रह्मज्ञेयत्वब्रह्मतपोलभ्यत्वब्रह्माण्डवीर्यत्वादिरूपाणां 'तस्मिन्' अन्तःश्रुते तेनान्तरित्यादिना 'उपदेशात्' उक्तत्वादिति सूत्रार्थ उक्तो भवति । उपदेशादित्यन्तस्य सूत्रस्य तस्मादन्य एवेति न मन्तव्यमित्यनेनान्वयः। 'ब्रह्मा' वर्तमानचतुर्मुखः 'समुद्रे' प्रलयाब्धौ क्षीराब्धौ च 'अन्तरर्णे' जले क्षीरे च 'मनसा' स्वेच्छया सञ्चरन्तं 'दशहोतारं' ज्ञानकर्माख्यदशेन्द्रियेषु विषयहोतारं तत्तद्विषयस्थापकं दशेन्द्रियाणि जीवेन विषयेषु जुह्वतं वा विष्णुम् 'अन्वविन्दत्' व्यजानात् ।

'कवयः' ज्ञानिनः 'समुद्रे' क्षीरप्रलयाब्ध्योरन्तःस्थितं विचक्षते जानन्ति । 'वेधसः' भूतभविष्यद्ब्रह्माणः 'मरीचिर्मितरुक्त्वतः' इति छान्दोग्यभाष्योक्तेः । प्रमितरुक्त्वनिमित्तात् मरीचिपदोक्तानां जीवानां पदम् आश्रयं विष्णुम् इच्छन्ति प्रार्थयन्ति । तत्त्वप्रदीपरीत्या 'कवयः' सन्तः 'वेधसो' विचक्षते विचक्षणाय ज्ञानाय मरीचीनां पदं विष्णुम् इच्छन्तीत्येकान्वयो वा । कवयः 'अण्डकोशं' ब्रह्माण्डाख्यस्थानं 'यस्य' विष्णोः 'शुष्मं' वीर्यं तदुपादानकमाहुरिति श्रुत्यर्थः । विरिञ्चिवाक्यस्यास्य 'प्राण उल्बं तेन

ಹೃದಯಾಂತಸ್ಥನಾದವನೆಂದು ಸ್ಮೃತನಾದವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ, ವಿಷ್ಣುವಿನ ಅಸಾಧಾರಣಧರ್ಮಗಳು ಆ ಪ್ರಕರಣದಲ್ಲಿ ಹೀಗೆ ಕೇಳಿಸುತ್ತಿವೆ – ''ಪ್ರಳಯಸಮುದ್ರ ಹಾಗೂ ಕ್ಷೀರಸಮುದ್ರಗಳಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತಾ, ಎಲ್ಲ ಜೀವಿಗಳ ಹತ್ತು ಇಂದ್ರಿಯಗಳಿಗೆ ವಿಷಯಭೋಗವನ್ನು ಉಂಟುಮಾಡುವವನನ್ನು ಚತುರ್ಮುಖ ಬ್ರಹ್ಮದೇವರು ತಿಳಿದರು''.

ಮತ್ತು ''ಪ್ರಳಯಕ್ಷೀರಸಮುದ್ರಗಳ ಮಧ್ಯದಲ್ಲಿ ಜ್ಞಾನಿಗಳು ಸಕಲಜೀವರಿಗೆ ಆಶ್ರಯನಾದ ವ್ಯಕ್ತಿಯನ್ನು ಕಾಣುತ್ತಾರೆ; ಮುಕ್ತರಾದ ಬ್ರಹ್ಮರೂ ಅವನನ್ನು ಇಚ್ಛಿಸುತ್ತಾರೆ'' ಮತ್ತು ''ಬ್ರಹ್ಮಾಂಡವನ್ನು ಯಾರ ವೀರ್ಯವೆಂದು ಹೇಳುತ್ತಾರೋ''

ಇವೇ ಮೊದಲಾದ ಅನೇಕ ಶ್ರುತಿಗಳಿಂದ ಕ್ಷೀರಸಮುದ್ರಶಾಯಿತ್ವ, ಪ್ರಳಯಸಮುದ್ರಸ್ಥಿತತ್ವ, ಬ್ರಹ್ಮಾಂಡವೀರ್ಯತ್ವ, ಚತುರ್ಮುಖತಪ್ರೋಲಭ್ಯತ್ವ ಮೊದಲಾದ ಧರ್ಮಗಳು ವಿಷ್ಣುವಿನಲ್ಲಿ ಮಾತ್ರ ಬರುವುದರಿಂದ ವಿಷ್ಣುವೇ ಆನಂದಮಯನಾಗುತ್ತಾನೆ. ಏಕೆಂದರೆ, ವಿಷ್ಣುವೇ ಕ್ಷೀರಸಮುದ್ರಶಾಯಿಯಾಗಿದ್ದಾನೆ. ವಿಷ್ಣುವಿನ ರೇತಸ್ಸೇ ಬ್ರಹ್ಮಾಂಡಕೋಶವಾಗಿದೆ.

ಇತರರನ್ನು ಆನಂದಮಯರೆಂದು ಏಕೆ ತಿಳಿಯಬಾರದು? ಎಂಬ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ.

ಅಂತಃ = ಹೃದಯಾಂತಸ್ಥನಾಗಿ, ಶ್ರೂಯಮಾಣಃ = ಶ್ರುತಿಯಲ್ಲಿ ಪ್ರತಿಪಾದ್ಯನಾದವನು, ವಿಷ್ಣುರೇವ = ವಿಷ್ಣುವೇ ಆಗಿದ್ದಾನೆ. ಏಕೆಂದರೆ ಅರ್ಣೇ = ಅಗಾಧವಾದ, ಸಮುದ್ರೇ = ಕ್ಷೀರಸಮುದ್ರದಲ್ಲಿ ಮತ್ತು ಪ್ರಳಯಸಮುದ್ರದಲ್ಲಿ, ಅಂತಃ = ಒಳಗಡೆ, ಮನಸಾ = ಸ್ವೇಚ್ಛೆಯಿಂದ, ಚರಂತಂ = ವಿಹರಿಸುವ, ದಶಹೋತಾರಂ = ಹತ್ತು ಇಂದ್ರಿಯಗಳಿಗೆ ವಿಷಯಸುಖವನ್ನು ನೀಡುವವನನ್ನು, ಬ್ರಹ್ಮ = ಚತುರ್ಮುಖ ಬ್ರಹ್ಮದೇವರು, ಅನ್ವವಿಂದದ್ = ತಿಳಿದರು.

---

क्लृप्तोऽमृतेनाहमस्मि' इति वाक्यशेषः । तस्य 'उल्बं' जरायुः 'प्राणः' अन्तःप्रावरणं येन सहैव जायते । 'तेन' अमृतेन 'अहं' क्लृप्तोऽस्मीत्यर्थस्तत्त्वप्रदीपेऽभिहितः ।
क्षीरसमुद्रस्थत्वस्य विष्णुलिङ्गत्वं कुत इत्यत आह – स हीति ।। 'सः' विष्णुः हिशब्देन लोकप्रसिद्धत्वादिति हेतुः सूचितः । अस्तु विष्णोः क्षीराब्धिस्थत्वं लिङ्गं; प्रसिद्धत्वात्, तथाऽपि प्रलयार्णवस्थत्वस्य ब्रह्माण्डवीर्यत्वस्य च कुतो विष्णुधर्मत्वमित्यतस्तयोर्विष्णुधर्मत्वे प्रमाणं वक्तुं प्रतिजानीते – तस्येति ।। 'अण्डकोशः' ब्रह्माण्डाख्यस्थानं 'तस्य' विष्णोर्वीर्यमित्यर्थः । चशब्दात् सः प्रलयसमुद्रशायीति प्रतिज्ञा सूच्यते । तस्यैवेत्यवधारणे वा चशब्दः । तथात्वे प्रतिज्ञान्तरमुपलक्षणीयम् । अत एव प्रलयाब्धिशायित्वे 'आपो नाराः' इति पश्चात् प्रमाणोपन्यासः श्रुतावण्डकोशशब्दश्रवणेऽपि प्रत्ययस्य स्वार्थिकत्वाद् तत्त्यागेनाण्डकोश इत्येवानूदितम् । श्रुतावपि तथैव छेदो वा ।

ಮತ್ತು ಕವಯಃ = ಜ್ಞಾನಿಗಳು, ಅಂತಃ ಸಮುದ್ರೇ = ಕ್ಷೀರಸಮುದ್ರ ಹಾಗೂ ಪ್ರಳಯಸಮುದ್ರದ ಮಧ್ಯದಲ್ಲಿ, ನೆಲೆಸಿರುವ, ಮರೀಚೀನಾಂ = ಅಲ್ಪಜ್ಞಾನಿಗಳಾದ ಜೀವರಿಗೆ, ಪದಮ್ = ಆಶ್ರಯನಾದ ವ್ಯಕ್ತಿಯನ್ನು, ವಿಚಕ್ಷತೇ = ತಿಳಿಯುತ್ತಾರೆ, ವೇಧಸಃ = ಹಿಂದಿನ ಈಗಿನ ಮುಂದಿನ ಚತುರ್ಮುಖ ಬ್ರಹ್ಮದೇವರುಗಳೆಲ್ಲರೂ, ಇಚ್ಛಂತಿ = ಅವನನ್ನೇ ಇಚ್ಛಿಸುತ್ತಾರೆ.

ಮತ್ತು ಯಸ್ಯ = ಯಾರ, ಶುಷ್ಮಂ = ವೀರ್ಯವನ್ನಾಗಿ, ಅಂಡಕೋಶಂ = ಬ್ರಹ್ಮಾಂಡವನ್ನು, ಆಹುಃ = ಹೇಳುತ್ತಾರೋ'

ಇವೇ ಮೊದಲಾದ ಶ್ರುತಿಪ್ರಮಾಣಗಳಿಂದ, ತದ್ಧರ್ಮೋಪದೇಶಾತ್ = ಸಮುದ್ರಸ್ಥಿತತ್ವ ಮೊದಲಾದ ಲಿಂಗಗಳನ್ನು ಹೇಳಿರುವುದರಿಂದ, ಅಂತಸ್ಥನಾದವನು ವಿಷ್ಣುವೇ ಆಗಿದ್ದಾನೆ.

ಸ ಹಿ = ಅಂತಹ ಆನಂದಮಯನಾದ ವಿಷ್ಣುವಾದರೂ, ಕ್ಷೀರಸಮುದ್ರಶಾಯೀ = ಕ್ಷೀರಸಮುದ್ರದಲ್ಲಿ ಮಲಗಿದ್ದಾನೆ. ತಸ್ಯ ಚ = ಅವನ, ವೀರ್ಯಂ = ರೇತಸ್ಸೇ, ಅಂಡಕೋಶಃ = ಬ್ರಹ್ಮಾಂಡವು.

## ಬ್ರಹ್ಮಾಂಡವೀರ್ಯತ್ವ ಕ್ಷೀರಸಮುದ್ರಶಾಯಿತ್ವಾದಿ ಲಿಂಗಗಳು

**तत्वप्रकाशिका – तत्र हेत्वाकाङ्क्षायां सूत्रमुपन्यस्य व्याचष्टे – अन्तरिति ।। समुद्रेऽन्तरर्णे जले यथेष्टं चरन्तं दशेन्द्रियेषु विषयहोतारं ब्रह्म व्यजानात् । मरीचीनां जीवानामाश्रयं वेधसो भूतभविष्यद् ब्रह्माण इच्छन्ति । 'ब्रह्माण्डकोशं यस्य वीर्यमाहुः' इति समुद्रस्थत्वब्रह्माण्डवीर्यत्वादिविष्णुलिङ्गानामन्तःप्रविष्टनिष्ठतयोपदेशात् 'अन्तःप्रविष्टं कर्तारम्' इत्यन्तःश्रूयमाणो विष्णुरेव । ततश्च तस्यैवादृश्यत्वमानन्दमयत्वं चेति नान्यस्य तन्मन्तव्यमित्यर्थः । अत्र समुद्रस्थत्वं नाम क्षीराब्धिशायित्वं प्रलयसमुद्रशायित्वं च विवक्षितम् । समुद्रस्थत्वादेर्विष्णुधर्मत्वं कुत इत्यत आह – स इति ।।**

ಸಿದ್ಧಾಂತದ ವಿಷಯದಲ್ಲಿ ಯುಕ್ತಿಯು ಯಾವುದು? ಎಂದರೆ ಸೂತ್ರವನ್ನು ಹೇಳಿ ವ್ಯಾಖ್ಯಾನವನ್ನು ''ಅಂತಃ'' ಎಂಬುದಾಗಿ ವ್ಯಾಖ್ಯಾನಮಾಡುತ್ತಾರೆ. ಸಮುದ್ರಜಲದಲ್ಲಿ ಯಥೇಷ್ಟವಾಗಿ ಸಂಚರಿಸುವ ಹತ್ತು ಇಂದ್ರಿಯಗಳಲ್ಲಿ ವಿಷಯಪದಾರ್ಥಗಳನ್ನು ಹೋಮಿಸುವವನನ್ನು (ವಿಷಯಹೋತಾರಂ) ಚತುರ್ಮುಖಬ್ರಹ್ಮನು ತಿಳಿದನು. ಮರೀಚೀನಾಂ = ಜೀವರಿಗೆ ಆಶ್ರಯನಾದ, ವೇಧಸಃ = ಭೂತಭವಿಷ್ಯತ್ ಬ್ರಹ್ಮರುಗಳು ಇಚ್ಛಿಸುತ್ತಾರೆ. 'ಬ್ರಹ್ಮಾಂಡಕೋಶಂ ಯಸ್ಯ ವೀರ್ಯಮಾಹುಃ' ಎಂಬುದಾಗಿ ಸಮುದ್ರಸ್ಥತ್ವ, ಬ್ರಹ್ಮಾಂಡವೀರ್ಯತ್ವ ಮುಂತಾದ ವಿಷ್ಣುಲಿಂಗಗಳನ್ನು ಅಂತಃಪ್ರವಿಷ್ಟನಲ್ಲಿ ಹೇಳಿದ್ದರಿಂದ 'ಅಂತಃಪ್ರವಿಷ್ಟಂ ಕರ್ತಾರಂ' ಎಂದು ಅಂತಸ್ಥತ್ವೇನ ವಿಷ್ಣುವೇ ಹೇಳಲ್ಪಟ್ಟಿದ್ದಾನೆ.

ಆದ್ದರಿಂದ ಅವನಿಗೇ ಅದೃಶ್ಯತ್ವವನ್ನು ಮತ್ತು ಆನಂದಮಯತ್ವವನ್ನು ಹೇಳಿರುವುದು; ಬೇರೆಯವರಿಗೆ ಆ ಲಿಂಗಗಳನ್ನು ಹೇಳಿಲ್ಲ. ಇಲ್ಲಿ ಸಮುದ್ರಸ್ಥತ್ವ ಎಂದರೆ ಕ್ಷೀರಾಬ್ಧಿಶಾಯಿತ್ವ ಮತ್ತು ಪ್ರಲಯಸಮುದ್ರಶಾಯಿತ್ವಗಳು ವಿವಕ್ಷಿತವಾಗಿವೆ. ಸಮುದ್ರಸ್ಥತ್ವಾದಿಗಳು ವಿಷ್ಣುವಿನ ಧರ್ಮವು ಹೇಗಾಗುತ್ತವೆ? ಎಂಬ ಪ್ರಶ್ನೆಗೆ ''ಸಃ'' ಎಂಬುದಾಗಿ ಉತ್ತರಿಸುತ್ತಿದ್ದಾರೆ.

भावदीपः – **श्रुत्यर्थोक्तिपूर्वं हेत्वर्थं व्यञ्जयन् व्यवहितत्वाद् भाष्ये** हेतुसाध्यान्वयमाह – **समुद्र इति ।। वीर्यत्वादीत्यादिपदेन ब्रह्मज्ञेयत्वब्रह्मतपो-**लभ्यत्वादेर्ग्रहः । 'तद्धर्म' इत्यत्र तदिति तन्त्रं **षष्ठ्यन्तं सप्तम्यन्तं चेत्युपेत्यार्थमाह** – **विष्णुलिङ्गानामन्तःप्रविष्टनिष्ठतयेति ।। समन्वयसूत्रात्** 'तत्तु' इति पदं **साध्यार्पकं** सत् अध्यायसमाप्तिप्रतिनयमनुवर्तत इति भावेन 'विष्णुरेव' इत्युक्तिः । **एवमग्रे** ज्ञेयम् । वक्ष्यमाणभाष्यानुगुण्यादाह – **अत्रेति** ।।

ಶ್ರುತಿಯ ಅರ್ಥವನ್ನು ಹೇಳುವುದರ ಮೂಲಕ ಹೇತುವಿನ ಅರ್ಥವನ್ನು ಪ್ರಕಟಪಡಿಸುತ್ತಾ, ಭಾಷ್ಯದಲ್ಲಿರುವ ಹೇತು ದೂರದಲ್ಲಿರುವುದರಿಂದ ಮತ್ತು ಸಾಧ್ಯದಲ್ಲಿ ಅನ್ವಯವನ್ನು ''ಸಮುದ್ರ'' ಎಂಬಿತ್ಯಾದಿಯಾಗಿ ತೋರಿಸುತ್ತಾರೆ. 'ಸಮುದ್ರಸ್ಥತ್ವಬ್ರಹ್ಮಾಂಡವೀರ್ಯತ್ವಾದಿ' ಎಂಬಲ್ಲಿನ 'ಆದಿ'ಪದದಿಂದ ಬ್ರಹ್ಮಜ್ಞೇಯತ್ವ, ಬ್ರಹ್ಮತಪೋಲಭ್ಯತ್ವಗಳನ್ನು (ಚತುರ್ಮುಖಬ್ರಹ್ಮರಿಂದ ತಿಳಿಯಲ್ಪಡುವಿಕೆ, ಚತುರ್ಮುಖ-ಬ್ರಹ್ಮನ ತಪದಿಂದ ಸಿಗುವಿಕೆ) ಸ್ವೀಕರಿಸಬೇಕು. ಸೂತ್ರದಲ್ಲಿನ 'ತದ್ಧರ್ಮ' ಎಂಬಲ್ಲಿ 'ತತ್' ಎಂಬುದನ್ನು ತಂತ್ರದಿಂದ ಷಷ್ಠೀವಿಭಕ್ತ್ಯಂತವಾಗಿ, ಸಪ್ತಮೀ ವಿಭಕ್ತ್ಯಂತವಾಗಿ ಸ್ವೀಕರಿಸಿ ಅದರ ಅರ್ಥವನ್ನು ''ವಿಷ್ಣು-ಲಿಂಗಾನಾಮಂತಃಪ್ರವಿಷ್ಟನಿಷ್ಠತಯಾ'' ಎಂಬುದಾಗಿ ಹೇಳಿದ್ದಾರೆ. ಸಮನ್ವಯಸೂತ್ರದಿಂದ 'ತತ್ ತು' ಎಂಬ ಪದವು ಎಲ್ಲಾ ಸೂತ್ರಗಳಲ್ಲಿ ಸಾಧ್ಯವನ್ನು ಹೇಳುತ್ತಾ ಈ ಅಧ್ಯಾಯದ ಪರಿಸಮಾಪ್ತಿಯವರೆಗೆ ಅನುವೃತ್ತವಾಗಿದೆ ಎಂಬಭಿಪ್ರಾಯದಿಂದ ''ವಿಷ್ಣುರೇವ'' ಎಂದು ಹೇಳಿದ್ದಾರೆ. ಹೀಗೆಯೇ ಮುಂದಿನ ಅಧಿಕರಣಗಳಲ್ಲೂ ಇಟ್ಟುಕೊಳ್ಳಬೇಕು. ಮುಂದೆ ಹೇಳಲ್ಪಡುವ ಭಾಷ್ಯಾನುಸಾರಿಯಾಗಿ ''ಅತ್ರ'' ಎಂದು ಹೇಳುತ್ತಿದ್ದಾರೆ.

## ವಿಷ್ಣುವಿನ ಅಸಾಧಾರಣವಾದ ಲಿಂಗಗಳು

**भाष्यम् –**

**'सोऽभिध्याय शरीरात् स्वात् सिसृक्षुर्विविधाः प्रजाः ।**
**अप एव ससर्जाऽदौ तासु वीर्यमवासृजत् ।**
**तदण्डमभवद्धैमं सहस्रांशुसमप्रभम् ।**
**यस्मिन् जज्ञे स्वयं ब्रह्मा सर्वलोकपितामहः ।**

**आपो नारा इति प्रोक्ता आपो वै नरसूनवः ।**
**अयनं तस्य ताः पूर्वं तेन नारायणः स्मृतः ।।' इति व्यासस्मृतेः।**

ಆ ವಿಷ್ಣುವು ಆಲೋಚಿಸಿ, ತನ್ನ ಶರೀರದಿಂದ ಅನೇಕವಿಧವಾದ ಜೀವಿಗಳನ್ನು ಸೃಷ್ಟಿಸಲು ಇಚ್ಛಿಸಿದನು. ಮೊದಲು ನೀರನ್ನು ಸೃಷ್ಟಿಮಾಡಿ ಅದರಲ್ಲಿ ತನ್ನ ವೀರ್ಯವನ್ನು ಹಾಕಿದನು. ಆ ವೀರ್ಯವೇ ಸುವರ್ಣಾತ್ಮಕವಾದ ಸೂರ್ಯನಂತೆ ಪ್ರಕಾಶಿಸುವ ಬಂಗಾರದ ಬ್ರಹ್ಮಾಂಡವಾಯಿತು. ಆ ಬ್ರಹ್ಮಾಂಡದಲ್ಲಿ ಎಲ್ಲ ಜೀವಿಗಳಿಗೂ ಪಿತಾಮಹನಾದ ಚತುರ್ಮುಖಬ್ರಹ್ಮದೇವರು ಹುಟ್ಟಿದರು. ಮತ್ತು

ನರನೆಂಬ ವಿಷ್ಣುವಿನಿಂದ ಹುಟ್ಟಿದ್ದರಿಂದ ನೀರು ನಾರಾ ಎನಿಸಿಕೊಂಡಿದೆ. ಪ್ರಳಯಕಾಲದಲ್ಲಿ ಆ ನೀರೇ ಪರಮಾತ್ಮನಿಗೆ ಆಶ್ರಯವಾದ್ದರಿಂದ ವಿಷ್ಣುವು ನಾರಾಯಣ ಎನಿಸಿದ್ದಾನೆ. ಹೀಗೆ ವ್ಯಾಸಸ್ಮೃತಿ ಹೇಳಿದ್ದರಿಂದ ಬ್ರಹ್ಮಾಂಡವೀರ್ಯತ್ವಾದಿಗಳು ವಿಷ್ಣುವಿನ ಧರ್ಮವೇ ಆಗಿವೆ.

ಕ್ಷೀರಸಮುದ್ರಶಾಯಿತ್ವ ಎಂಬ ಲಿಂಗವು ವಿಷ್ಣುವಿನಲ್ಲಿ ಪ್ರಸಿದ್ಧವಾದ ಲಿಂಗವೆಂದು ಒಪ್ಪೋಣ. ಆದರೆ ಪ್ರಳಯಸಮುದ್ರಸ್ಥಿತತ್ವ ಬ್ರಹ್ಮಾಂಡವೀರ್ಯತ್ವಗಳು ವಿಷ್ಣುವಿನ ಧರ್ಮಗಳೆಂದು ಏಕೆ ಒಪ್ಪಬೇಕು ಎಂಬ ಪ್ರಶ್ನೆಗೆ ಪ್ರಮಾಣಪುರಃಸರವಾಗಿ ಉತ್ತರಿಸುತ್ತಿದ್ದಾರೆ[೧] .

---

(१) भाष्यदीपिका – 'सः' वासुदेवाद् जातो विष्णुः 'स्वात्' स्वकीयाच्छरीरात् विविधाः प्रजाः 'सिसृक्षुः' स्रष्टुमिच्छुः 'अभिध्याय' विचिन्त्य 'आदौ' अण्डसृष्टेः पूर्वमेव 'अपः' तदावरणरूपाः ससर्ज । तास्वप्सु वीर्यम् 'अवासृजत्' न्यधात् मायाद्वारेति शेषः । 'हैमं' हिरण्यात्मकं 'सहस्रांशुसमप्रभं' सूर्यसमप्रकाशं 'तत्' वीर्यं ब्रह्माण्डाख्यमभवत् । 'यस्मिन्' अण्डे 'सर्वलोकपितामहः' ब्रह्मा चतुर्मुखः 'स्वयं' स्वतन्त्राद् हरेः साक्षाज्जज्ञे इत्यर्थः । यतः आपः 'नरसूनवः' नरस्य विष्णोः सूनवः । 'विष्णुर्नरो नाशात् परो यतः' इति भागवततात्पर्योक्तेः । अतो नासः प्रोक्ताः येन कारणेन 'पूर्वं' प्रलये 'ताः' आपः तस्य विष्णोरयनं 'तेन सः नारायणः स्मृतः' तच्छब्दवाच्यत्वेन स्मृत्युक्त इत्यर्थः ।

यद्यपि - 'पुरुषोऽण्डं विनिर्भिद्य यदादौ स विनिर्गतः ।
आत्मनोऽयनमन्विच्छन्नपोऽस्राक्षीच्छुचिः शुचीः ।।' इति भागवते ।
'अण्डं प्रविष्टो यो विष्णुः सोऽण्डं भित्त्वा प्रकाशितः ।
सोऽपोऽसृजत्ततो नाराः . . . . ।।'

इति भागवततात्पर्ये चाण्डसृष्ट्यनन्तरम् अप्सृष्टिरुच्यते । तथाऽपि सा बहिःसृष्टेरन्याऽऽन्तरेति न विरोधः । इतीत्यस्य 'तस्य च वीर्यमण्डकोशः, स हि प्रलयसमुद्रशायी यतः' इति पूर्वेणान्वयः ।

ಸಃ = ವಿಷ್ಣುವು, ಅಭಿಧ್ಯಾಯ = ಯೋಚಿಸಿ, ಸ್ವಾತ್ = ತನ್ನ, ಶರೀರಾತ್ = ಶರೀರದಿಂದ, ವಿವಿಧಾಃ = ನಾನಾವಿಧವಾದ, ಪ್ರಜಾಃ = ಜೀವಿಗಳನ್ನು, ಸಿಸೃಕ್ಷುಃ = ಸೃಷ್ಟಿಮಾಡಲು ಇಚ್ಛಿಸಿದವನಾಗಿ, ಆದೌ = ಮೊದಲು, ಅಪ ಏವ = ನೀರನ್ನೇ, ಸಸರ್ಜ = ಸೃಷ್ಟಿಮಾಡಿದನು. ತಾಸು = ಆ ನೀರಿನಲ್ಲಿ, ವೀರ್ಯಂ = ತನ್ನ ವೀರ್ಯ-ವನ್ನು, ಅವಾಸೃಜತ್ = ಹಾಕಿದನು. ತತ್ = ಆ ರೇತಸ್ಸೇ, ಹೈಮಂ = ಸುವರ್ಣಾತ್ಮಕ-ವಾದ, ಸಹಸ್ರಾಂಶುಸಮಪ್ರಭಮ್ = ಸಾವಿರಸೂರ್ಯರಂತೆ ಕಂಗೊಳಿಸುವ ಕಾಂತಿಯುಳ್ಳ, ಅಂಡಂ = ಬ್ರಹ್ಮಾಂಡವಾಗಿ, ಅಭೂತ್ = ಆಯಿತು. ಯಸ್ಮಿನ್ = ಯಾವ ಬ್ರಹ್ಮಾಂಡದಲ್ಲಿ, ಸರ್ವಲೋಕಪಿತಾಮಹಃ = ಸಮಸ್ತಜೀವರಿಗೆ ಪಿತಾಮಹ-ರೆನಿಸಿದ, ಬ್ರಹ್ಮ = ಚತುರ್ಮುಖಬ್ರಹ್ಮದೇವರು, ಸ್ವಯಂ = ಸ್ವತಃ, ಜಜ್ಞೇ = ಹುಟ್ಟಿದರು.

ಮತ್ತು ಆಪಃ = ನೀರು, ನಾರಾಃ ಇತಿ ಪ್ರೋಕ್ತಾಃ = ನಾರಾ ಎಂದು ಕರೆಸಿಕೊಂಡಿದೆ, ಏಕೆಂದರೆ ಆಪೋ ವೈ = ನೀರುಗಳೇ, ನರಸೂನವಃ = ಹರಿಯ ಮಕ್ಕಳಂತೆ ಇರುವವುಗಳು, ಪೂರ್ವಂ = ಪ್ರಳಯಕಾಲದಲ್ಲಿ, ತಾಃ = ಆ ನೀರುಗಳೇ, ತಸ್ಯ = ಆ ಪರಮಾತ್ಮನಿಗೆ, ಅಯನಂ = ಆಶ್ರಯವಾದವುಗಳು, ತೇನ = ಆ ಕಾರಣದಿಂದ, ನಾರಾಯಣಃ = ನಾರಾಯಣನೆಂಬ ಹೆಸರಿನಿಂದ, ಸ್ಮೃತಃ = ವಿಷ್ಣುವು ಪ್ರಸಿದ್ಧನಾಗಿದ್ದಾನೆ. ಇತಿ = ಹೀಗೆ, ವ್ಯಾಸಸ್ಮೃತೇಃ = ವ್ಯಾಸಸ್ಮೃತಿಯಲ್ಲಿ ಹೇಳಿದ್ದರಿಂದ, ಬ್ರಹ್ಮಾಂಡವೀರ್ಯತ್ವಾದಿಗಳು ವಿಷ್ಣುವಿನ ಧರ್ಮವೇ ಆಗಿವೆ.

## ಪ್ರಲಯಾರ್ಣವಸ್ಥತ್ವ ಮತ್ತು ಬ್ರಹ್ಮಾಂಡವೀರ್ಯತ್ವಗಳು ವಿಷ್ಣುವಿನ ಲಿಂಗಗಳು

**तत्वप्रकाशिका – अस्तु विष्णोः क्षीरसमुद्रशायित्वं लिङ्गम्, प्रसिद्धत्वात् । प्रलयार्णवस्थत्वस्य ब्रह्मण्डवीर्यत्वस्य च कुतो विष्णुधर्मत्वमित्यत आह – स इति ।।**

ಪ್ರಸಿದ್ಧವಾಗಿರುವುದರಿಂದ ಕ್ಷೀರಸಮುದ್ರಶಾಯಿತ್ವಲಿಂಗ ವಿಷ್ಣುವಿನದ್ದೇ ಎಂದು ಒಪ್ಪೋಣ. ಆದರೆ ಪ್ರಲಯಾರ್ಣವಸ್ಥತ್ವ ಹಾಗೂ ಬ್ರಹ್ಮಾಂಡವೀರ್ಯತ್ವಗಳು ವಿಷ್ಣುವಿನ ಧರ್ಮಗಳು ಹೇಗಾಗುತ್ತವೆ? ಎಂಬ ಪ್ರಶ್ನೆಗೆ ''ಸಃ'' ಎಂಬಿತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

भावदीपः – **'हि'शब्दार्थमनुवदति – प्रसिद्धत्वादिति ।। प्रलयेति ।।** 'आपो नारा' इत्यत्र तत् प्रतीतेरिति भावः ।

'ಹಿ'ಶಬ್ದಾರ್ಥವನ್ನು ''ಪ್ರಸಿದ್ಧತ್ವಾತ್'' ಎಂಬುದಾಗಿ ಅನುವಾದಿಸುತ್ತಿದ್ದಾರೆ. ''ಪ್ರಲಯೇತಿ'' - 'ಆಪೋ ನಾರಾ' ಎಂಬ ಶ್ರುತಿಯಲ್ಲಿ ಅದು ತಿಳಿಯುತ್ತದೆ ಎಂದು ಭಾವ.

## ಪ್ರಮಾಣಗಳು

**भाष्यम् –**

**'अहं तत्तेजो रश्मीन्नारायणं पुरुषं जातमग्रतः ।**
**पुरुषात् प्रकृतिर्जगदण्डम्' इति चतुर्वेदशिखायाम् ॥२०॥**

ಅಹೇಯನಾದ, ಸೂರ್ಯಾದಿತೇಜೋಮಯವಸ್ತುಗಳಲ್ಲಿ ಅಂತರ್ಯಾಮಿಯಾಗಿ ಪ್ರೇರಕನಾಗಿ ಪ್ರಕಾಶಿಸುವ, ಪೂರ್ಣವಾದ ಷಡ್ಗುಣಗಳುಳ್ಳ, ದೋಷದೂರನಾದ, ನಾರಾಯಣನು ಪ್ರಳಯಕಾಲದಲ್ಲಿ ಒಬ್ಬನೇ ಇದ್ದನು. ಪುರುಷರೂಪನಾದ ಆ ನಾರಾಯಣನಿಂದ ಚಿತ್ಪ್ರಕೃತಿಯು ಹುಟ್ಟಿತು. ಅನಂತರ ಬ್ರಹಾಂಡವು ಹುಟ್ಟಿತು. ಹೀಗೆ ಚತುರ್ವೇದಶಿಖಾ ಎಂಬ ಗ್ರಂಥದಲ್ಲಿ ಹೇಳಲ್ಪಟ್ಟಿದೆ(೧).

ಮತ್ತೊಂದು ಪ್ರಮಾಣದಿಂದಲೂ ಬ್ರಹ್ಮಾಂಡವೀರ್ಯತ್ವ, ಪ್ರಳಯಸ್ಥಿತತ್ವಧರ್ಮಗಳು ವಿಷ್ಣುವಿನದ್ದೇ ಆಗಿವೆ ಎಂದು ಸಮರ್ಥಿಸುತ್ತಿದ್ದಾರೆ.

ಅಹಂ = ಅಹೇಯನಾದ, ತತ್ತೇಜಃ = ಸೂರ್ಯಾದಿ ತೇಜೋಮಯವಸ್ತುಗಳಲ್ಲಿ, ರಶ್ಮೀನ್ = ಅಂತಸ್ಥನಾಗಿ ಪ್ರೇರಕನಾಗಿ ಪ್ರಕಾಶಿಸುವ, ಪುರುಷಂ = ಪೂರ್ಣವಾದ ಷಡ್ಗುಣಗಳುಳ್ಳ, ನಾರಾಯಣಂ = ದೋಷದೂರನಾದ ನಾರಾಯಣನು, ಅಗ್ರತಃ = ಪ್ರಳಯಕಾಲದಲ್ಲಿ, ಜಾತಮ್ = ಇದ್ದನು. ಪುರುಷಾತ್ = ಪುರುಷರೂಪನಾದ ಆ ನಾರಾಯಣನಿಂದ, ಪ್ರಕೃತಿಃ = ಚಿತ್ ಪ್ರಕೃತಿಯು, ಜಗದಂಡಂ = ಜಗತ್ತೆನಿಸಿದ

---

(१) भाष्यदीपिका – इतश्च ब्रह्माण्डजनकवीर्यत्वं प्रलयस्थत्वं च तस्यैव ज्ञायत इत्याह - अहमिति ॥ 'त्रिपुरुषं मायाबीजमजायत' इति वाक्यशेषः । तदिति व्याप्तिवचनोऽसर्वनामशब्दः । अथवा सर्वनामशब्दः, अत एव टीकायां तदहेयमिति व्युत्क्रमः कृतः । तथा च तत्प्रसिद्धं व्याप्तं वा 'अहम्' अहेयं रतिः शं च मितमस्येति रश्मिर्जीवः तमिन्दयति प्रेरयतीति रश्मीद् जीवप्रेरकं, 'इन्द प्रेरणे' इति धातोरयं दकारान्तः शब्दः । अनुकृत्यधिकरणे तु - इन्धी दीप्ताविति धातुव्याख्यानाद् रश्मीद् भगवदपेक्षया रश्मिरूपाणाम् अल्पानां सूर्यादितेजसां प्रकाशकमिति व्याख्यातम्, तत्र धकारान्तोऽग्नीच्छब्दवदयं शब्दो ज्ञातव्यः । 'तेजः' जगत्प्रकाशकं 'पुरुषं' पूर्णषड्गुणं नारायणं तदाख्यं ब्रह्म तेज इति वा । 'अग्रतः' प्रलये 'जातं' स्थितं तस्मान्नारायणाख्यपुरुषात् 'अग्रतः' प्रथमं 'प्रकृतिः' चेतना जायते गच्छतीति जगद् जीवसमुदायः, जातमित्यस्योभयत्र यथायोग्यं सम्बन्धः । जनिश्च यथायोग्या ग्राह्या । पश्चात् 'अण्डं च' 'त्रिपुरुषं' ब्रह्मवायुरुद्राख्यपुरुषत्रययुक्तं 'मायाबीजं' प्रकृत्युपादानकम् अजायतेति तत्त्वप्रदीपदिशा श्रुत्यर्थः । चतुर्वेदशिखायाम् इत्यस्य वचनादित्यध्याहारेण तस्येत्यनेनान्वयः ।

ಬ್ರಹ್ಮಾಂಡವು, ಜಾತವಮ್ = ಹುಟ್ಟಿತು. ಇತಿ = ಈ ರೀತಿಯಾಗಿ, ಚತುರ್ವೇದ-ಶಿಖಾಯಾಮ್ = ಚತುರ್ವೇದಶಿಖಾ ಎಂಬ ಗ್ರಂಥದಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಪ್ರಳಯಸಮುದ್ರಸ್ಥಿತತ್ವ, ಹಾಗೂ ಬ್ರಹ್ಮಾಂಡವೀರ್ಯತ್ವಗಳು ವಿಷ್ಣುವಿನ ಧರ್ಮಗಳೇ ಆಗಿವೆ.

## ನಾರಾಯಣನಿಂದಲೇ ಚಿತ್‌ಪ್ರಕೃತಿಬ್ರಹ್ಮಾಂಡಗಳ ಹುಟ್ಟು

**तत्वप्रकाशिका – तदहेयं रश्मिप्रेरकं पूर्णषड्गुणं नारायणाख्यं तेजः प्रलये स्थितं तस्मात् पुरुषात् प्रकृतिश्चेतना जगत् ब्रह्माण्डं च जातमित्यर्थः ।।२०।।**

''ಅಹೇಯನಾದ ರಶ್ಮಿಪ್ರೇರಕನಾದ, ಪೂರ್ಣಷಡ್ಗುಣಗಳಿಂದ ತುಂಬಿದ ಆ ನಾರಾಯಣನೆಂಬ ಆ ಜ್ಯೋತಿಯು ಪ್ರಳಯದಲ್ಲಿ ಇದೆ. ಆ ತೇಜೋರೂಪನಾದ ಪುರುಷನಿಂದಲೇ ಪ್ರಕೃತಿಃ = ಚೇತನಪ್ರಕೃತಿಯು, ಚ = ಮತ್ತು, ಜಗತ್ = ಬ್ರಹ್ಮಾಂಡವು, ಜಾತಂ = ಹುಟ್ಟಿತು'' ಎಂದರ್ಥ.

भावदीपः – स्मृतिः निगदाख्येति श्रुतिमेव व्याचष्टे – तदिति ।। 'अहम्' इत्यस्यार्थः 'अहेयम्' इति । नञुपपदाद् 'ओहाक् त्यागे' इति धातोः कर्मणि डप्रत्यये अहमिति रूपमिति भावः । **रश्मिप्रेरकमिति** ।। रश्मीनिन्धयति दीपयतीति रश्मीत् । अग्नीदितिवत् रश्मिप्रेरकमिति(१) यावत् । 'पुरुष'पदार्थः पूर्णेति । 'जातमग्रतः' इत्यस्यार्थः 'प्रलये स्थितम्' इति । जातमिति पूर्वस्मादनुवृत्तमिति भावः । 'उत्पन्नम्' इत्यर्थः । एतेन 'श्रुतिसन्देहे अनन्यथासिद्धलिङ्गेन निर्णयोपपत्तेः' इति न्यायविवरणोक्तमनन्यथासिद्धत्वमुपपादितं ज्ञेयम् ।।२०।।

ಸ್ಮೃತಿಯು ವ್ಯಾಖ್ಯಾನರೂಪವಾದದ್ದು; ಆದಕ್ಕಾಗಿ ಶ್ರುತಿಯನ್ನೇ ''ತತ್'' ಎಂಬುದಾಗಿ ಹೇಳಿದ್ದಾರೆ. 'ಅಹಂ' ಎಂಬುದರ ಅರ್ಥ ''ಅಹೇಯ'' ಎಂದು. ನಞ್‌ಉಪಪದದಿಂದ 'ಓಹಾಕ್ ತ್ಯಾಗೇ' ಎಂಬ ಧಾತುವಿಗೆ ಕರ್ಮಾರ್ಥದಲ್ಲಿ ಡಪ್ರತ್ಯಯ ಬಂದಾಗ 'ಅಹಂ' ಎಂಬ ರೂಪವು ಸಿದ್ಧವಾಗುತ್ತದೆ. ''ರಶ್ಮಿಪ್ರೇರಕಮ್'' -- ರಶ್ಮಿಗಳನ್ನು ಇಂಧಯತಿ = ಬೆಳಗಿಸುತ್ತಾನಾದ್ದರಿಂದ 'ರಶ್ಮೀತ್'. 'ಅಗ್ನೀತ್' ಎನ್ನುವಂತೆ ರಶ್ಮಿಪ್ರೇರಕ ಎಂದರ್ಥ. 'ಪುರುಷ'ಪದದ ಅರ್ಥ ಪೂರ್ಣ ಎಂದು. 'ಜಾತಮಗ್ರತಃ' ಎಂಬುದರ ಅರ್ಥ 'ಪ್ರಲಯೇ ಸ್ಥಿತಮ್' ಎಂದು. 'ಜಾತಮ್' ಎಂಬುದು ಹಿಂದಿನಿಂದ ಅನುವೃತ್ತಿಮಾಡಿಕೊಂಡಿದ್ದು ಎಂದು ಭಾವ. 'ಉತ್ಪನ್ನನಾದವನು' ಎಂದರ್ಥ. ಹೀಗೆ ಹೇಳಿದ್ದರಿಂದ 'ಶ್ರುತಿಗಳಲ್ಲಿ ಸಂದೇಹ ಬಂದಾಗ ಅನನ್ಯಥಾಸಿದ್ಧವಾದ ಲಿಂಗದಿಂದ ನಿರ್ಣಯ ಮಾಡಬೇಕು' ಎಂದು ನ್ಯಾಯವಿವರಣದಲ್ಲಿ ಹೇಳಿದ ಅನನ್ಯಥಾಸಿದ್ಧತ್ವವು ಉಪಪಾದಿಸಲ್ಪಟ್ಟಿತು ಎಂದು ತಿಳಿಯಬೇಕು.

---

(१) 'रश्मीन्नयति इति रश्मीन् इति द्वितीयाया अलुक्समासाभिप्रेत्यार्थमाह – रश्मिप्रेरकमिति ।। अन्यथा रश्मिन्निति प्रयोगः स्यात् । (गुर्वर्थदीपिका)

**वाक्यार्थमञ्जरी– ॐ अन्तस्तद्धर्मोपदेशात् ॐ** ।। अन्तःप्रविष्टमित्यादौ अन्तःप्रविष्टतया श्रुतं ब्रह्मैव । तस्य ब्रह्मणो धर्माणां समुद्रस्थत्वब्रह्माण्डवीर्यत्वादीनां अन्तःश्रुतेः अन्तःसमुद्रे यस्याण्डकोशमित्यादिनाभिधानादित्यर्थः । होतारं दातारं 'हु दानादानयोः' इति धातोः । बहुवचनं घटयति – **भूतेति** ।।

न चात्र समुद्रस्थत्वं नाम क्षीरसमुद्रशायित्वं वा प्रलयसमुद्रशायित्वं वा? नाद्यः । 'आपो नारा' इति प्रमाणोदाहरणासङ्गतेः । न द्वितीयः । स हि क्षीरसमुद्रशायीति प्रतिज्ञासङ्गतेरित्यत आह – **अत्रेति** ।। भाष्ये **अभिध्याय** ध्यात्वा । 'अहं' इत्यस्यार्थः अहेयमिति । नञुपपदात् 'ओहाक् त्यागे' इत्यस्मात् कर्मणि डप्रत्यय इति भावः । रश्मीनिन्धयति दीपयतीति रश्मीत् । तत्फलितप्रदर्शनं रश्मिप्रेरकमिति ।।

ಸೂತ್ರಾರ್ಥ - 'ಅಂತ: ಪ್ರವಿಷ್ಟಂ' ಇವೇ ಮೊದಲಾದ ಶ್ರುತಿಗಳಲ್ಲಿ ಕೇಳಿಬರುವ ಅಂತಃಪ್ರವಿಷ್ಟನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಅಂತಃ ಶ್ರುತಿಯಲ್ಲಿ 'ಸಮುದ್ರೇ ಯಸ್ಯಾಂಡಕೋಶಂ' ಎಂದು ಬ್ರಹ್ಮನ ಅಸಾಧಾರಣ ಧರ್ಮಗಳಾದ ಸಮುದ್ರಸ್ಥತ್ವ ಮತ್ತು ಬ್ರಹ್ಮಾಂಡವೀರ್ಯತ್ವಾದಿಗಳನ್ನು ಹೇಳಿರುವುದರಿಂದ ಎಂದರ್ಥ.

ಹೋತಾರಂ ಎಂದರೆ ದಾತಾರಂ ಎಂದರ್ಥ. ಏಕೆಂದರೆ 'ಹು' ಧಾತುವಿಗೆ 'ದಾನ ಆದಾನ' ಎಂಬರ್ಥವಿದೆ.

ಶ್ರುತಿಯಲ್ಲಿ ಕೇಳಿಬರುವ ಸಮುದ್ರಸ್ಥತ್ವದಿಂದ ಕ್ಷೀರಸಮುದ್ರಶಾಯಿತ್ವವನ್ನಾಗಲಿ ಅಥವಾ ಪ್ರಳಯಸಮುದ್ರಶಾಯಿತ್ವವನ್ನಾಗಲಿ ಹೇಳಲು ಬರುವುದಿಲ್ಲ. ಕ್ಷೀರಸಮುದ್ರಶಾಯಿತ್ವವನ್ನು ವಿವಕ್ಷಿಸಿದರೆ 'ಆಪೋ ನಾರಾ' ಎಂಬ ಪ್ರಮಾಣದ ಉದಾಹರಣವು ಅಸಂಗತವಾಗುತ್ತದೆ. ಅದರಂತೆ ಪ್ರಳಯಸಮುದ್ರಶಾಯಿತ್ವವನ್ನು ಹೇಳಿದರೆ 'ಸಹಿ ಕ್ಷೀರಸಮುದ್ರಶಾಯಿ' ಎಂಬ ಪ್ರತಿಜ್ಞೆಯು ಅಸಂಗತವಾಗುತ್ತದೆಂದು ಶಂಕಾ ಮಾಡಿದರೆ 'ಅತ್ರ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಭಾಷ್ಯದಲ್ಲಿ ಉದಾಹರಿಸಿರುವ ವ್ಯಾಸಸ್ಮೃತಿಯಲ್ಲಿರುವ 'ಅಭಿಧ್ಯಾಯ' ಎಂದರೆ 'ಧ್ಯಾತ್ವಾ' ಎಂದರ್ಥ. ಅಹಂ ಎಂದರೆ ಅಹೇಯ ಎಂದರ್ಥ.

**ब्रह्ममीमांसाशास्त्रम् –**

### ॐ।। भेदव्यपदेशाच्चान्यः ।।ॐ

ಸೂತ್ರಾರ್ಥ -- ಅಂತಸ್ಥನಾದ ವಿಷ್ಣುವು ಇಂದ್ರಾದಿಗಳಿಂದ ಅಭಿನ್ನನಾಗಿದ್ದಾನೆ ಎನ್ನಬಾರದು. ಇಂದ್ರಾದಿಗಳ ಅಂತರ್ಯಾಮಿಯಾಗಿದ್ದಾನೆಂಬ ಭೇದಕಧರ್ಮವನ್ನು ಹೇಳಿರುವುದರಿಂದ.

सूत्रदीपिका – न केवलमन्तस्थो विष्णुः किन्तु इन्द्रादिभ्योऽन्यश्च । कुतः? भेदव्यपदेशात् तस्य तदन्तर्यामित्वतत्प्रेरकत्वादिरूपभेदकधर्मश्रवणादित्यर्थः ।।

ಅರ್ಥ -- ವಿಷ್ಣುವು ಅಂತಸ್ಥನೆಂದಷ್ಟೇ ಅಲ್ಲ. ಅನ್ಯಶ್ಚ = ಇಂದ್ರಾದಿಗಳಿಗಿಂತ ಭಿನ್ನನೂ ಆಗಿದ್ದಾನೆ. ಏಕೆಂದರೆ ಭೇದವ್ಯಪದೇಶಾತ್ = ಇಂದ್ರಾದ್ಯಂತರ್ಯಾಮಿತ್ವ ತತ್ ಪ್ರೇರಕತ್ವ ಮೊದಲಾದ ಧರ್ಮಗಳು ಕೇಳಿಬರುತ್ತಿರುವುದರಿಂದ.

## ಇಂದ್ರಾದಿಗಳಿಗೆ ವಿಷ್ಣುವಿನಿಂದ ಅಭೇದವಿಲ್ಲ

**भाष्यम् — सू - ॐ ।। भेदव्यपदेशाचान्यः ।। ॐ ।। २१ ।।**

**'इन्द्रस्याऽत्मा निहितः पञ्च होता' 'वायोरात्मानं कवयो निचिक्युः', 'अन्तरादित्ये मनसा चरन्तम्, देवानाꣳ हृदयं ब्रह्मान्वविन्दत्' (तै.आ. ३-११) इत्यादिभेदव्यपदेशात् ।। २१ ।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये अन्तस्स्थत्वाधिकरणम् ।। ७ ।।**

''ದೇವೇಂದ್ರನನ್ನು ಪ್ರೇರಣೆ ಮಾಡುವ, ಸಕಲಜೀವರ ಅಂತರ್ಯಾಮಿಯಾದ, ಪರಮಾತ್ಮನು ಪಂಚೇಂದ್ರಿಯಗಳಿಗೆ ವಿಷಯಸಮರ್ಪಕನಾಗಿದ್ದಾನೆ'',

''ತತ್ವಜ್ಞಾನಿಗಳು ವಾಯುದೇವರಿಗೂ ಪ್ರೇರಕನಾದ ಪರಮಾತ್ಮನನ್ನು ಕಂಡರು''; ''ಸೂರ್ಯನಲ್ಲಿ ಸ್ವೇಚ್ಛೆಯಿಂದ ಸಂಚರಿಸುವ, ದೇವತೆಗಳ ಹೃದಯದಲ್ಲೂ ಸಂಚರಿಸುವ ವಿಷ್ಣುವನ್ನು ಚತುರ್ಮುಖಬ್ರಹ್ಮದೇವರು ನೋಡಿದರು'' ತೈತ್ತಿರೀಯ ಆರಣ್ಯಕದಲ್ಲಿರುವ ಈ ಮಾತುಗಳಿಂದ ಇಂದ್ರಾದಿದೇವತೆಗಳಿಗೂ ವಿಷ್ಣುವಿಗೂ ಭೇದವು ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ಇಂದ್ರಾದಿಗಳಿಗೂ ವಿಷ್ಣುವಿಗೂ ಅಭೇದವನ್ನು ಹೇಳಬಾರದು.

ಪ್ರತಿಪದಾರ್ಥ – ಒಂದು ವೇಳೆ ಸಮುದ್ರಸ್ಥಿತತ್ವ ಮೊದಲಾದ ಲಿಂಗಗಳಿರುವುದರಿಂದ ವಿಷ್ಣುವು ಅಂತಸ್ಥನೆಂದು ಸಮರ್ಥಿಸುವುದಾದರೆ ಅಂತಹ ಅಂತಸ್ಥನಾದ ವಿಷ್ಣುವಿನಿಂದ ಇಂದ್ರಾದಿಗಳಿಗೆ ಅಭೇದವನ್ನೇ ಒಪ್ಪೋಣ. ಏಕೆಂದರೆ, ಇಂದ್ರಾದಿಗಳಲ್ಲಿಯೂ ಇಂತಹ ಅಂತಸ್ಥತ್ವಾದಿ ಧರ್ಮಗಳನ್ನು ಹೇಳುವ ಶ್ರುತಿಗಳಿವೆ. ಶ್ರುತಿಯು ಸ್ವಭಾವತಃ ಪ್ರಬಲವಾಗಿದೆ, ಲಿಂಗವು ನಿರವಕಾಶವಾಗಿ ಪ್ರಬಲವಾಗಿದೆ. ಹೀಗೆ ಎರಡೂ ಪ್ರಮಾಣಗಳೂ ಸಮಬಲವಾಗಿರುವಾಗ ಬಾಧ್ಯಬಾಧಕಭಾವವನ್ನು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ಇಂದ್ರಾದಿಗಳಿಗೆ ವಿಷ್ಣುವಿನಿಂದ ಅಭೇದವನ್ನೇ ಹೇಳಿಬಿಡೋಣ! ಎಂಬ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ[१].

---

(१) भाष्यदीपिका – यद्येवं समुद्रस्थत्वादिलिङ्गादन्तस्स्थो विष्णुः, तर्हि तेनान्तस्स्थेन विष्णुना इन्द्रादीनामभेदोऽत्र विवक्षितोऽस्तु । इन्द्रादिप्रापकश्रुत्यादेरपि सद्भावात् । श्रुत्यादेश्च स्वभावतो लिङ्गस्य निरवकाशतया बलवत्त्वेनान्यतरबाधेनान्यतरपक्षनिर्णया-

ಇಂದ್ರಸ್ಯ = ದೇವೇಂದ್ರನಿಗೆ, ಆತ್ಮಾ = ಪ್ರೇರಕನಾದ, ನಿಹಿತಃ = ಸಕಲಜೀವರ ಅಂತರ್ಯಾಮಿಯಾದ, ಪಂಚಹೋತಾ = ಇಂದ್ರಿಯಗಳಿಗೆ ವಿಷಯ ಸಮರ್ಪಣೆ ಮಾಡುವ ಶ್ರೀಹರಿಯು; ವಾಯೋಃ = ವಾಯುದೇವರಿಗೆ, ಆತ್ಮಾನಂ = ಅಂತಃಪ್ರೇರಕನಾದ ಪರಮಾತ್ಮನನ್ನು, ಕವಯಃ = ಜ್ಞಾನಿಗಳು, ನಿಚಿಕ್ಯುಃ = ಕಂಡರು; ಆದಿತ್ಯೇ = ಸೂರ್ಯನಲ್ಲಿ, ಅಂತಃ = ಅಂತರ್ಯಾಮಿಯಾಗಿ, ಮನಸಾ = ಸ್ವೇಚ್ಛೆಯಿಂದ, ಚರಂತಂ = ಸಂಚರಿಸುವ, ದೇವಾನಾಂ = ದೇವತೆಗಳ, ಹೃದಯಂ = ಹೃದಯದಲ್ಲಿ ಚಲಿಸುವ ವಿಷ್ಣುವನ್ನು, ಬ್ರಹ್ಮಾ = ಚತುರ್ಮುಖಬ್ರಹ್ಮದೇವರು, ಅನ್ವವಿಂದತ್ = ತಿಳಿದರು. ಇತ್ಯಾದಿ = ಇವೇ ಮೊದಲಾದ ಪ್ರಮಾಣಗಳಿಂದ, ಭೇದವ್ಯಪದೇಶಾತ್ = ಇಂದ್ರಾದಿಗಳಿಗಿಂತ ಭೇದಕಧರ್ಮಗಳು ಹೇಳಲ್ಪಟ್ಟಿರುವುದರಿಂದ, ವಿಷ್ಣುವಿಗೆ ಇಂದ್ರಾದಿಗಳಿಗಿಂತ ಐಕ್ಯವನ್ನು ಹೇಳಬಾರದು.

**तत्वप्रकाशिका – ''यद्येवं समुद्रस्थत्वादिलिङ्गादन्तःस्थो विष्णुस्तर्हि तेनान्तःस्थेन विष्णुनेन्द्रादीनामभेदोऽत्रास्तु विवक्षितः, तत्प्रापकश्रुत्यादेरपि सद्भावात् ।**

**नच श्रुत्यादिना लिङ्गबाधेनान्यतरनिर्णयः । लिङ्गस्य निरवकाशत्वात् । नापि लिङ्गेन श्रुत्यादिबाधः । श्रुत्यादेर्बलवत्त्वात् । एवञ्च पक्षद्वयेऽन्योन्यं बाध्यबाधक-**

---

योगात् । एवं च पूर्वोत्तरपक्षद्वयेऽन्योन्यं बाध्यबाधकभावशून्ये सति तदन्यथानुपपत्त्या अन्तःस्थेन विष्णुनेन्द्रादीनामभेदः प्राप्त इत्याशङ्कां परिहरत् सूत्रं पठित्वा व्याचष्टे - भेदेति ।। तैत्तिरीये - 'इन्द्रस्य' इत्येको भेदव्यपदेशः । 'वायोः' इत्यन्यः । 'अन्तः' इत्यपरः । 'देवानाम्' इति चेतरः । आदिशब्देन 'अमृतं देवानामायुः प्रजानामिन्द्रं राजानं सवितारम्' इत्यादिकं गृह्यते । व्यपदेशादित्यस्यान्य इति सौत्रप्रतिज्ञयाऽन्वयः । अनेन सूत्रे विधेयसमुच्चयार्थकचशब्दस्य भिन्नक्रमेणान्वयेन न केवलमन्तश्श्रूयमाणो विष्णुः, किन्त्विन्द्रादिभ्योऽन्यश्च । कुतः ? तस्येन्द्राद्यन्तर्यामित्वतदन्तस्स्थत्वकथनेन तेभ्यो भेदोक्तेरिति सूत्रार्थ उक्तो भवति । अत्र श्रुताविन्द्रशब्दोऽन्यपरः; षष्ठीश्रवणात् । 'इन्द्रो राजा' इत्यादौ तु इन्द्रादिशब्दाः परममुख्यवृत्त्या विष्णुपरा एव, बाधकाभावात् । तथा च मनो विहाय पञ्चसु ज्ञानेन्द्रियेषु शब्दादिविषयहोता तैर्विषयानुभावकः । इन्द्रस्याऽत्मा अन्तर्यामी आदानादिकर्ता वा । सर्वहृदयेषु 'निहितः' सन्निहितः 'कवयः' ज्ञानिनः 'वायोरात्मानं निचिक्युः' ददृशुः आदित्येऽन्तः 'मनसा' स्वेच्छया सञ्चरन्तं विष्णुं कवयोऽन्वविन्दन् । 'ब्रह्मा' चतुर्मुखः देवानां हृद्ययनात् स्थितेः प्रवर्तनाद्वा हृदयं विष्णुम् 'अन्वविन्दत्' अपश्यदिति श्रुत्यर्थः ।

।। इत्यन्तस्स्थत्वाधिकरणम् ।। ७ ।।

**भावशून्ये तदन्यथानुपपत्त्याऽन्तःस्थेन विष्णुनेन्द्रादीनामभेदः प्राप्तः'' इत्याशङ्कां परिहरत् सूत्रमुपन्यस्य व्याचष्टे – भेदेति ॥**

'ಸಮುದ್ರಸ್ಥತ್ವ' ಮೊದಲಾದ ಲಿಂಗಗಳಿಂದ ಅಂತಸ್ಥನು ವಿಷ್ಣುವೆಂದು ನೀವು ಸಮರ್ಥಿಸುವುದಾದಲ್ಲಿ ಹಾಗೆಯೇ ಆಗಲಿ; ಆ ಅಂತಸ್ಥನಾದ ವಿಷ್ಣುವಿಗೆ ಶ್ರುತಿಯಲ್ಲಿ ಹೇಳಿದ ಇಂದ್ರಾದಿದೇವತೆಗಳಿಂದ (ಅಭೇದವನ್ನು ಹೇಳುವ ಶ್ರುತಿಗಳಿರುವುದರಿಂದ) ಅಭೇದವು ವಿವಕ್ಷಿತವಾಗಿದೆ ಎನ್ನೋಣ. 'ಇಂದ್ರಾದಿದೇವತೆಗಳನ್ನು ಹೇಳುವ ಶ್ರುತಿಗಳಿಂದ ವಿಷ್ಣುಪ್ರಾಪಕವಾದ ಲಿಂಗಗಳಿಗೆ ಬಾಧವನ್ನು ಹೇಳಿ ಯಾರಾದರೊಬ್ಬರನ್ನು ಅಂತಸ್ಥನೆಂದು ನಿರ್ಣಯಿಸಬಹುದಲ್ಲವೆ' ಎನ್ನಬಾರದು. ಇಲ್ಲಿ ಲಿಂಗವು ನಿರವಕಾಶವಾಗಿದೆ. ಆದ್ದರಿಂದ ನಿರವಕಾಶವಾದ ಲಿಂಗವನ್ನು ಶ್ರುತಿಯು ಬಾಧಿಸಲಿಕ್ಕೆ ಸಮರ್ಥ-ವಾಗುವುದಿಲ್ಲ. ಹಾಗಿದ್ದಲ್ಲಿ, ಲಿಂಗದಿಂದ ಶ್ರುತಿಗೆ ಬಾಧವನ್ನು ಹೇಳಬಹುದಲ್ಲವೆಂದರೆ ಶ್ರುತಿಯು ಲಿಂಗಕ್ಕಿಂತ ಪ್ರಬಲವಾಗಿರುವುದರಿಂದ ಹಾಗೆ ಹೇಳಲು ಬರುವುದಿಲ್ಲ. ಹೀಗೆ ಎರಡೂ ಪಕ್ಷದಲ್ಲಿ ಪರಸ್ಪರ ಬಾಧ್ಯಬಾಧಕಗಳಾಗುವುದಿಲ್ಲವಾದ್ದರಿಂದ ಬೇರೆ ದಾರಿಯಿಲ್ಲದೆ ಇಂದ್ರಾದಿಸಕಲದೇವತೆಗಳಿಗೆ ವಿಷ್ಣುವಿನಿಂದ ಅಭೇದವು ಪ್ರಾಪ್ತವಾಗುತ್ತದಲ್ಲವೇ? ಎಂಬ ಈ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು ಹೇಳಿ ''ಭೇದ'' ಎಂಬಿತ್ಯಾದಿಯಾಗಿ ವ್ಯಾಖ್ಯಾನಮಾಡುತ್ತಿದ್ದಾರೆ.

**तत्वप्रकाशिका – नात्रान्तःस्थेनेन्द्रादीनामभेदो विवक्षितः शङ्कनीयः, किंत्व-साविन्द्रादिभ्योऽन्यश्च । तस्येन्द्राद्यन्तर्यामित्वतदन्तःस्थत्वकथनेन तेभ्यो भेदव्यपदेशात् । न चोभयप्रापकाऽन्यथानुपपत्त्यैतत्कलप्यम् । लिङ्गेन श्रुत्यादि-बाधोपपत्तेः । न च श्रुत्यादीनां बलवत्त्वेनाबाध्यत्वम्, इन्द्रादिशब्दानां भगवति सावकाशत्वात् लिङ्गानां तु निरवकाशत्वात् । दुर्बलेनापि निरवकाशेन प्रबलस्यापि सावकाशस्य बाधोपपत्तेः ।**

**न चेन्द्रादिषु योगरूढिभ्यां प्रवृत्तत्वात् तच्छब्दानां हरावमुख्यतेति वाच्यम् । परमैश्वर्यादेर्भगवति निरवधिकत्वेन महायोगसम्भवात्, अज्ञरूढितोऽपि विद्वद्रूढेरेव प्राबल्यात्, अन्यगतप्रवृत्तिनिमित्तस्यापि भगवदधीनत्वाच्च तत्रैव मुख्यत्वोपपत्तेरिति भावः ।**

ಈ ಶ್ರುತಿಯಲ್ಲಿ ಅಂತಸ್ಥನಾದ ವಿಷ್ಣುವಿನೊಂದಿಗೆ ಇಂದ್ರಾದಿದೇವತೆಗಳ ಅಭೇದವು ವಿವಕ್ಷಿತವಾಗಿದೆ ಎಂದು ಶಂಕಿಸಬಾರದಂದಷ್ಟೇ ಅಲ್ಲ; ಇಂದ್ರಾದಿದೇವತೆಗಳಿಂದ ಭಿನ್ನನಾಗಿಯೇ (ವಿಷ್ಣುವನ್ನು) ತಿಳಿಯಬೇಕು ಎಂದು ಹೇಳಲಾಗಿದೆ. ಏಕೆಂದರೆ ವಿಷ್ಣುವು ಇಂದ್ರಾದಿಗಳ ಅಂತರ್ಯಾಮಿಯಾಗಿದ್ದಾನೆ,

ಅಂತಸ್ಥನಾಗಿದ್ದಾನೆ ಎಂದು ಹೇಳುವುದರ ಮೂಲಕ ಅವರಲ್ಲಿರುವ ಭೇದವನ್ನು ಶ್ರುತಿಯು ಹೇಳಿದೆ. 'ವಿಷ್ಣು ಮತ್ತು ಇತರ ದೇವತೆಗಳನ್ನು ತಿಳಿಸುವ ಶ್ರುತಿ ಹಾಗೂ ಲಿಂಗಗಳು ಇರುವುದರಿಂದ ಬೇರೆ ದಾರಿ ಇಲ್ಲದೆ ಹೀಗೆ ಕಲ್ಪನೆ ಮಾಡಬೇಕಾಗುತ್ತದೆ' ಎಂದೂ ಹೇಳಬಾರದು. ಲಿಂಗದಿಂದ ಶ್ರುತಿಗೆ ಬಾಧವನ್ನು ಹೇಳಬಹುದು. ಶ್ರುತಿ ಮೊದಲಾದವುಗಳು ಪ್ರಬಲವಾದ್ದರಿಂದ ಬಾಧ್ಯಗಳಾಗುವುದಿಲ್ಲ ಎನ್ನಲು ಬರುವುದಿಲ್ಲ. ಇಂದ್ರ ಮೊದಲಾದ ಶಬ್ದಗಳು ಭಗವಂತನಲ್ಲಿ ಸಾವಕಾಶವಾಗಿವೆ. (ಹಾಗಾಗಿ ಶ್ರುತಿಗಳು ಬಾಧ್ಯಗಳಾಗಬಹುದು). ಲಿಂಗವು ಸ್ವಾಭಾವಿಕವಾಗಿ ಶ್ರುತಿಯಿಂದ ದುರ್ಬಲವಾಗಿದ್ದರೂ, ನಿರವಕಾಶತ್ವ ಪ್ರಯುಕ್ತವಾಗಿ ಪ್ರಬಲವಾದ ಶ್ರುತಿಯನ್ನು ಬಾಧಿಸಲು ಸಮರ್ಥವಾಗುತ್ತದೆ.

ನೀವು ಹೀಗೆ ಬಾಧವನ್ನು ಹೇಳಿದರೂ, ಇಂದ್ರಾದಿಶಬ್ದಗಳು ಯೋಗ ಮತ್ತು ರೂಢಿಯಿಂದ ಪ್ರವೃತ್ತವಾಗಿದ್ದು ಇಂದ್ರಾದಿದೇವತೆಗಳಲ್ಲಿಯೇ ಮುಖ್ಯವಾಗಿವೆ. ಹಾಗಾಗಿ ವಿಷ್ಣುವಿನಲ್ಲಿ ಅಮುಖ್ಯವಾಗಿವೆ. ಹೀಗೆನ್ನಬಾರದು. ಇದು ಸರಿಯಲ್ಲ. ಇಂದ್ರ ಮುಂತಾದ ಶಬ್ದಗಳ ಪ್ರವೃತ್ತಿನಿಮಿತ್ತಗಳಾದ ಪರಮೈಶ್ವರ್ಯ ಮುಂತಾದ ಧರ್ಮಗಳು ಭಗವಂತನಲ್ಲಿ ಪೂರ್ಣವಾಗಿವೆ. ಆದ್ದರಿಂದ ಅವನಲ್ಲಿ ಆಯಾಯ ಶಬ್ದಗಳು ಮಹಾಯೋಗವೃತ್ತಿಯಿಂದ ಪ್ರವೃತ್ತವಾಗಿವೆ. ಮತ್ತು ಇಂದ್ರಾದಿಶಬ್ದಗಳಿಗೆ ಇಂದ್ರಾದಿದೇವತೆಗಳಲ್ಲಿ ಅಜ್ಞರಾದ ಜನರ ರೂಢಿಯಿದ್ದರೂ, ವಿಷ್ಣುವಿನಲ್ಲಿ ವಿದ್ವದ್‌ರೂಢಿಯಿದೆ. ಅಲ್ಲದೆ ಇಂದ್ರಾದಿದೇವತೆಗಳಲ್ಲಿರುವ ಪ್ರವೃತ್ತಿನಿಮಿತ್ತಗಳು ಭಗವದಧೀನಗಳಾಗಿವೆ. ಆದ್ದರಿಂದ ಮೇಲೆ ತಿಳಿಸಿದ ಕಾರಣಗಳಿಂದ ಇಂದ್ರಾದಿಶಬ್ದಗಳನ್ನು ವಿಷ್ಣುವಿನಲ್ಲೇ ಮುಖ್ಯವೆನ್ನಬೇಕು ಎಂದಭಿಪ್ರಾಯ.

## ನಾಮಪಾದದಲ್ಲೇಕೆ ಲಿಂಗಸಮನ್ವಯ

**तत्वप्रकाशिका – आत्मा अन्तर्यामी । निहितः सर्वहृदयेषु । पञ्चहोता पञ्चेन्द्रियेषु विषयहोता । निचिक्युः पश्यन्ति (ददृशुः) । हृद्ययनाद्धृदयम् । न चात्रात्मशब्दः स्वरूपपरः, षष्ठ्या औपचारिकत्वप्रसङ्गात् । तस्मादशेषाधिदैवगत-तत्तच्छब्दवाच्यो हरिरेवान्तःप्रविष्टोऽदृश्योऽतः स एवाऽऽनन्दमय इति सिद्धम् । अत्र लिङ्गसमन्वयसमर्थनं बहुनामसमन्वयसिद्ध्यर्थम् । नामनिर्णयेन लिङ्गनिर्णयेऽपि लिङ्गस्य सङ्गतत्वाद् ग्रहणमिति ।। २१ ।।**

(ಶ್ರೀಟೀಕಾರಾಯರು ಭಾಷ್ಯದಲ್ಲಿನ ಶ್ರುತಿಯ ಅರ್ಥವನ್ನು ಬರೆಯುತ್ತಿದ್ದಾರೆ) ಆತ್ಮಾ = ಅಂತರ್ಯಾಮಿ; ನಿಹಿತಃ = ಸಕಲರ ಹೃದಯಗುಹೆಗಳಲ್ಲಿ, ಪಂಚಹೋತಾ = ಪಂಚೇಂದ್ರಿಯಗಳಲ್ಲಿ ವಿಷಯವನ್ನು ಹೋಮಿಸುವವನನ್ನು, ನಿಚಿಕ್ಯುಃ = ಕಂಡರು. ಹೃದಯದಲ್ಲಿರುವುದರಿಂದ ಹೃದಯ-ಶಬ್ದವಾಚ್ಯನು. ಇಲ್ಲಿ ಆತ್ಮಶಬ್ದಕ್ಕೆ ಸ್ವರೂಪ ಎಂದರ್ಥವಲ್ಲ; ಹಾಗೆ ಹೇಳಿದರೆ ಷಷ್ಠೀವಿಭಕ್ತಿಯು ಔಪಚಾರಿಕವೆಂದಾಗುತ್ತದೆ. ಆದುದರಿಂದ (ಇಂದ್ರಾದಿಶಬ್ದಗಳ ಮುಖ್ಯವಾಚ್ಯನು ವಿಷ್ಣುವಾದ್ದರಿಂದ)

ಆಯಾ ಶಬ್ದಗಳಿಂದ ವಾಚ್ಯನಾದವನು ಶ್ರೀಹರಿಯೇ; ಅವನೇ ಅದೃಶ್ಯನಾಗಿದ್ದಾನೆ. ಆದುದರಿಂದಲೇ ಆನಂದಮಯಶಬ್ದವಾಚ್ಯನೂ ಆಗಿದ್ದಾನೆಂದು ಸಿದ್ಧವಾಗುತ್ತದೆ. ಈ ಅಧಿಕರಣದಲ್ಲಿ ಅನೇಕ ನಾಮಗಳ ಸಮನ್ವಯಕ್ಕೋಸ್ಕರ ಲಿಂಗಸಮನ್ವಯವನ್ನು ಮಾಡಲಾಗಿದೆ. ನಾಮಸಮನ್ವಯದಿಂದ ಲಿಂಗವನ್ನು ನಿರ್ಣಯ ಮಾಡಬಹುದಿತ್ತು. ಆದರೆ ಅಂತಹ ಲಿಂಗವುಳ್ಳವನು ಬೇರೆಯವನಾದರೆ ಅವನೇ ಅದೃಶ್ಯತ್ವವುಳ್ಳವನಾಗಬೇಕು. ಅವನೇ ಆನಂದಮಯನು ಎಂದು ಹಿಂದಿನಿಂದ ಸಂಬಂಧವಿರುವುದರಿಂದ ಲಿಂಗವನ್ನು ಸಮನ್ವಯ ಮಾಡಲಾಗಿದೆ.

भावदीपः – ॐ भेदव्यपदेशाच्चान्यः ॐ ।। कुतोऽभेदः? इत्यतोऽन्यथोपपत्तिमानं वक्तुमाह – **तत् प्रापकेति** ।। **तदन्यथेति** ।। पक्षद्वयप्रापकश्रुतिलिङ्गान्यथानुपपत्त्येत्यर्थः । **अभेदः प्राप्त इति** ।। तथा च इन्द्रबृहस्पत्यादीनां प्रागुक्तभेदव्यपदेशोऽप्ययुक्त इति भावः ।

ಅಭೇದವೇಕೆ? ಎಂದರೆ ಅನ್ಯಥೋಪಪತ್ತಿಗೆ ಪ್ರಮಾಣವನ್ನು ಹೇಳಲು ''ತತ್ ಪ್ರಾಪಕ'' ಎಂಬಿತ್ಯಾದಿಯಾಗಿ ಹೇಳುತ್ತಾರೆ. ''ತದನ್ಯಥಾ'' ಎಂದರೆ 'ವಿಷ್ಣುವೆನ್ನುವ ಮತ್ತು ಇಂದ್ರಾದಿಗಳೆನ್ನುವ ಎರಡೂ ಪಕ್ಷದಲ್ಲಿ ಅದನ್ನು ಸಮರ್ಥಿಸಲು ಬೇಕಾದ ಶ್ರುತಿ ಮತ್ತು ಲಿಂಗಗಳ ಅನ್ಯಥಾನುಪಪತ್ತಿಯಿಂದ (ಬೇರೆ ಕಡೆ ಕೂಡಿಸಲು ಬರದಿರುವುದರಿಂದ) ಎಂದರ್ಥ. ''ಅಭೇದಃ ಪ್ರಾಪ್ತಃ'' ಎಂದು ಹೇಳಿದ್ದರಿಂದ ಇಂದ್ರ, ಬೃಹಸ್ಪತಿ, ಮೊದಲಾದವರಿಗೆ ಹಿಂದೆ ಹೇಳಿದ ಭೇದವ್ಯಪದೇಶವೂ ಕೂಡ ಅಯುಕ್ತವೆಂದು ತಿಳಿಯುತ್ತದೆ.

भावदीपः – नन्वेवमपि विष्णोरन्तःस्थत्वमपरिहार्यमिति वाच्यम् । अनुपहितधर्माणाम् उपहिते सम्भवात् इत्यादिना सुधोक्तदिशा इन्द्रादिरेवान्तःस्थो न तु विष्णुरिति तात्पर्यात् । भाष्यस्य सौत्रप्रतिज्ञयाऽन्वय इति भावेनाऽऽह – **इन्द्रादिभ्योऽन्यश्च इति** ।। न केवलमन्तस्थ इत्यर्थः । सूत्रे चशब्दो भिन्नक्रम इति भावः । भाष्यं योजयति – **तस्येति** ।। आत्मा आदानादिकर्ता स्वामी अन्तर्यामीति यावदिति मत्वाऽऽह – **इन्द्रादीति** ।। 'आदि'पदात् वाय्वादिः । 'अन्तरादित्यः' इत्यस्यार्थः – **तदन्तःस्थत्वेति** ।।

ಹೀಗೆ ಇಂದ್ರಾದಿಗಳಿಗೆ ವಿಷ್ಣುವಿನಿಂದ ಅಭೇದವನ್ನು ಹೇಳಿದರೂ; ವಿಷ್ಣುವು ಅಂತಃಸ್ಥನೆನ್ನುವುದು ಅಪರಿಹಾರ್ಯ ಎಂದು ಭಾವ. 'ಅನುಪಹಿತಧರ್ಮಾಣಾಮ್ ಉಪಹಿತೇ ಸಂಭವಾತ್' ಇತ್ಯಾದಿಯಾಗಿ ಸುಧೆಯಲ್ಲಿ ಹೇಳಿದಂತೆ ಇಂದ್ರಾದಿಗಳೇ ಅಂತಸ್ಥರು ಹೊರತು ವಿಷ್ಣುವಲ್ಲ. ಈ ತಾತ್ಪರ್ಯದಿಂದಲೇ ಭಾಷ್ಯದ ಮಾತು ಹೊರಟಿದೆ. ಸೂತ್ರದಲ್ಲಿರುವ ಪ್ರತಿಜ್ಞೆಯ ಜೊತೆ ಭಾಷ್ಯದ ಮಾತಿಗೆ ಅನ್ವಯ ಹೇಳಬೇಕೆಂಬ ಅಭಿಪ್ರಾಯದಿಂದ 'ಇಂದ್ರಾದಿಭ್ಯೋಽನ್ಯಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿಷ್ಣುವು ಕೇವಲ ಅಂತಃಸ್ಥನು ಮಾತ್ರವಲ್ಲ ಎಂದರ್ಥ. ಸೂತ್ರದಲ್ಲಿರುವ 'ಚ'ಶಬ್ದವು ಭಿನ್ನಕ್ರಮವುಳ್ಳದ್ದು. (ಅಂದರೆ ಭೇದವ್ಯಪದೇಶ ಇರುವುದರಿಂದಲೂ ಅಂತಃಸ್ಥನು ವಿಷ್ಣುವೆಂದು ಹೇತುವನ್ನು ಮಾತ್ರ ಸಮುಚ್ಚಯ ಮಾಡುವುದಲ್ಲ; ಭೇದವ್ಯಪದೇಶವಿರುವುದರಿಂದ ಇಂದ್ರಾದಿದೇವತೆಗಳಿಗಿಂತ ಭಿನ್ನನೂ ಕೂಡ ಎಂದು ಇನ್ನೊಂದು ಸಾಧ್ಯವನ್ನು ಸಮುಚ್ಚಯ ಮಾಡುತ್ತದೆ ಎಂದರ್ಥ). ಭಾಷ್ಯವನ್ನು "ತಸ್ಯ" ಎಂಬಿತ್ಯಾದಿಯಾಗಿ ಯೋಜನೆ ಮಾಡುತ್ತಾರೆ. "ಆತ್ಮಾ - ಆದಾನಾದಿಕರ್ತಾ (ಸ್ವೀಕರಿಸುವುದು ಮೊದಲಾದುವನ್ನು ಮಾಡುವವನು), ಸ್ವಾಮೀ = ಅಂತರ್ಯಾಮಿ" ಎಂದಿಟ್ಟುಕೊಂಡು "ಇಂದ್ರಾದಿ" ಎಂಬುದಾಗಿ ಹೇಳುತ್ತಾರೆ. 'ಆದಿ'ಪದದಿಂದ ವಾಯು ಮೊದಲಾದವರನ್ನೂ ಸ್ವೀಕರಿಸಬೇಕು. 'ಅಂತರಾದಿತ್ಯಃ' ಎಂಬುದರ ಅರ್ಥ 'ತದಂತಃಸ್ಥತ್ವ' ಎಂಬುದಾಗಿ.

भावदीपः – श्रुतिसन्देहे अनन्यथासिद्धलिङ्गत्वेन निर्णयोपपत्तेरिति वाक्यं विवृण्वानः पूर्वकृतचोद्यमनुवदति – **न चेति** ।। लिङ्गस्यान्यथासिद्धत्वोक्त्या सूचितं प्रागसिद्धं श्रुतेः सावकाशत्वं शङ्कापूर्वमाह – **न च श्रुत्यादीनामिति** ।। **सावकाशत्वादिति** ।। विवरिष्यते चैतदनुपदम् । सूर्यादिलिङ्गानां च पादान्त्यप्राणनयन्यायेन सावकाशत्वं ज्ञेयमिति भावः । **निरवकाशत्वादिति** ।। उक्तश्रुतिस्मृतिप्रसिद्धिभ्य इति भावः ।

'ಶ್ರುತಿಗಳಲ್ಲಿ ಸಂದೇಹವಿದ್ದಾಗ ಅನನ್ಯಥಾಸಿದ್ಧವಾದ ಲಿಂಗದಿಂದ ನಿರ್ಣಯ ಮಾಡಬಹುದು' ಎಂಬ ವಾಕ್ಯವನ್ನು ವಿವರಣೆ ಮಾಡುತ್ತಾ ಹಿಂದೆ ಹೇಳಿದ ಅತಿಪ್ರಸಂಗವನ್ನು ಅನುವಾದ ಮಾಡುತ್ತಾರೆ "ನಚ" ಎಂಬಿತ್ಯಾದಿಯಾಗಿ. ಲಿಂಗವು ಅನನ್ಯಥಾಸಿದ್ಧವಾಗಿದೆಯೆಂದು ಹೇಳಿದ್ದರಿಂದ ಸೂಚಿಸಲ್ಪಟ್ಟ ಹಿಂದೆ ಹೇಳದ ಶ್ರುತಿಯು ಸಾವಕಾಶವಾಗಿದೆ ಎನ್ನುವುದನ್ನು ಸಂದೇಹಪೂರ್ವಕವಾಗಿ "ನ ಚ ಶ್ರುತ್ಯಾದೀನಾಂ" ಎಂದು ಹೇಳುತ್ತಾರೆ. ಇದನ್ನು ಹತ್ತಿರದಲ್ಲಿಯೇ ವಿವರಿಸುತ್ತಾರೆ. ಸೂರ್ಯಾದಿಲಿಂಗಗಳು ಪಾದಾಂತ್ಯಪ್ರಾಣಾಧಿಕರಣದಲ್ಲಿ ಹೇಳಿದ ನ್ಯಾಯದಂತೆ ಸಾವಕಾಶತ್ವವಾಗಿವೆ ಎಂದು ತಿಳಿಯಬೇಕು. "ನಿರವಕಾಶತ್ವಾತ್" ಎಂದರೆ ಹಿಂದೆ ಹೇಳಿದ ಶ್ರುತಿಸ್ಮೃತಿಪ್ರಸಿದ್ಧಿಗಳಿಂದ ನಿರವಕಾಶವಾಗಿದೆ ಎಂದಭಿಪ್ರಾಯ.

भावदीपः– अन्यथासिद्धत्वानन्यथासिद्धत्वे श्रुतिलिङ्गयोर्न्यावर्त्यशङ्कापूर्वं सावकाशत्वनिरवकाशत्वपदाभ्यामुक्त्वा समग्रन्यायविवरणवाक्यार्थमाह – **दुर्बलेनापीति** ।। जात्येति भावः ।

ಶ್ರುತಿ ಮತ್ತು ಲಿಂಗಗಳಿಂದ ನಿರಾಕರಿಸಲ್ಪಡುವ ಸಂದೇಹವನ್ನು 'ಸಾವಕಾಶತ್ವ' ಮತ್ತು 'ನಿರವಕಾಶತ್ವ' ಪದಗಳಿಂದ ಹೇಳಿ, ಈಗ ಸಂಪೂರ್ಣ ನ್ಯಾಯವಿವರಣವಾಕ್ಯದ ಅಭಿಪ್ರಾಯವನ್ನು "ದುರ್ಬಲೇನಾಪಿ" ಎಂಬುದರಿಂದ ಹೇಳುತ್ತಾರೆ. 'ಸ್ವಭಾವತಃ(ಜಾತ್ಯಾ) ದುರ್ಬಲವಾಗಿದ್ದರೂ ಎಂದಭಿಪ್ರಾಯ.

भावदीपः– अत्र प्रतिनयमाध्यायपरिसमाप्ति 'तत् तु' इत्यवधारणार्थतु-

शब्दान्त'तत्'पदस्यानुवृत्त्या भाष्ये विष्णुरेवेत्युक्तेर्महायोगविद्वद्रूढिभ्यां हरिरेव तत्शब्दमुख्यार्थ इति द्योतनं फलम् । अन्यथा 'कल्पनोपदेशात्' इति वक्ष्यमाणन्यायेनान्यत्र मुख्यवृत्तेरपि स्वीकारेण प्रतिनयं भाष्ये विष्णुरेवेति सूत्रार्थोक्तेरयोगात् ।

ಈ ಅಧ್ಯಾಯ ಮುಗಿಯುವವರೆಗೂ ಪ್ರತಿಯೊಂದು ಅಧಿಕರಣದಲ್ಲಿಯೂ ಅವಧಾರಣಾರ್ಥಕವಾದ ತುಶಬ್ದವುಳ್ಳ 'ತತ್' ಎಂಬ ಪದದ ಅನುವೃತ್ತಿಯಿರುವುದರಿಂದ ಭಾಷ್ಯದಲ್ಲಿ ವಿಷ್ಣುರೇವ ಎಂದು ಹೇಳಿದ್ದರಿಂದ ಮಹಾಯೋಗ ಮತ್ತು ವಿದ್ವದ್‌ರೂಢಿಗಳಿಂದ ಶ್ರೀಹರಿಯೇ ಆಯಾಯ ಶಬ್ದಗಳ ಮುಖ್ಯಾರ್ಥ ಎಂದು ತೋರಿಸುವುದೇ ಫಲ. ಇಲ್ಲದಿದ್ದರೆ 'ಕಲ್ಪನೋಪದೇಶಾತ್' ಎಂಬಲ್ಲಿ ಹೇಳುವ ನ್ಯಾಯದಿಂದ ವಿಷ್ಣುವನ್ನು ಬಿಟ್ಟು ಬೇರೆಕಡೆ ಶಬ್ದಗಳಿಗೆ ಮುಖ್ಯವೃತ್ತಿಯನ್ನು ಸ್ವೀಕರಿಸಿದ್ದರಿಂದ ಪ್ರತಿಯೊಂದು ಅಧಿಕರಣದ ಭಾಷ್ಯದಲ್ಲಿ 'ವಿಷ್ಣುರೇವ' ಎಂದು ಸೂತ್ರಾರ್ಥವನ್ನು ಹೇಳಿದ್ದು ಅಯುಕ್ತವಾಗುತ್ತದೆ.

भावदीपः– न च विषयवाक्ये कोट्यन्तरस्य प्रतिपाद्यत्वव्युदासाय विष्णुरेवेत्युक्तिरिति युक्तम् । वाक्यविशेषोक्तेरुपलक्षणत्वेन विष्णोराधिदैविकाद्यशेषशब्दमुख्यार्थत्वव्युत्पादने तात्पर्यादिति भावेन विष्णुरेवेत्यवधारणसूचितम् ।

> 'शब्दप्रवृत्तिहेतूनां तस्मिन् मुख्यसमन्वयात् ।
> अन्यार्थेष्वल्पताहेतोस्तन्निमित्तत्वतस्तथा ।
> तद्वाचकत्वं शब्दानाम् ..........'

इत्यानन्दमयनयानुभाष्योक्तं शङ्कापूर्वमाह – न चेन्द्रादिष्विति ।। निरवधिकत्वेनेति ।। 'देवमहिम्नः परमन्तमाप' 'न ते महित्वमन्वश्नुवन्ति' । ब्रह्मेशानादिभिर्दैवैरित्यादेरिति भावः ।

ವಿಷಯವಾಕ್ಯದಲ್ಲಿ ಬೇರೆ ರೀತಿಯ ಪ್ರತಿಪಾದನೆಯನ್ನು ನಿರಾಕರಿಸಲು ಭಾಷ್ಯದಲ್ಲಿ ವಿಷ್ಣುರೇವ ಎಂದು ಹೇಳಿದ್ದು ಎನ್ನುವುದು ಸರಿಯಲ್ಲ. ಒಂದೊಂದು ಅಧಿಕರಣದಲ್ಲಿ ಹೇಳುವ ಪ್ರತ್ಯೇಕವಾದ ವಿಷಯವಾಕ್ಯಗಳು ಉಪಲಕ್ಷಣಗಳಾಗಿವೆ. ಅಧಿದೈವಿಕ ಮೊದಲಾದ ಸಕಲಶಬ್ದಗಳಿಂದಲೂ ಮುಖ್ಯವಾಗಿ ವಿಷ್ಣುವೇ ವಾಚ್ಯನಾಗಿದ್ದಾನೆ ಎಂದು ಸಮರ್ಥನೆ ಮಾಡುವುದೇ ಮುಖ್ಯತಾತ್ಪರ್ಯ ಎಂಬಭಿಪ್ರಾಯದಿಂದ 'ವಿಷ್ಣುರೇವ' ಎಂದು ಅವಧಾರಣೆಯಿಂದ ಮಾಡಲಾಗಿದೆ.

> ಶಬ್ದಪ್ರವೃತ್ತಿಹೇತೂನಾಂ ತಸ್ಮಿನ್ಮುಖ್ಯಸಮನ್ವಯಾತ್ ।
> ಅನ್ಯಾರ್ಥೇಷ್ವಲ್ಪತಾಹೇತೋಸ್ತನ್ನಿಮಿತ್ತತ್ವತಸ್ಥಾ ।
> ತದ್‌ವಾಚಕತ್ವಂ ಶಬ್ದಾನಾಮ್ .......................

(ಶಬ್ದಗಳ ಪ್ರವೃತ್ತಿನಿಮಿತ್ತವು ಮುಖ್ಯವಾಗಿ ವಿಷ್ಣುವಿನಲ್ಲೇ ಇದೆ. ಆವನನ್ನು ಬಿಟ್ಟು ಬೇರೆಕಡೆ ಶಬ್ದಪ್ರವೃತ್ತಿನಿಮಿತ್ತವು ಅಲ್ಪ ಮಾತ್ರ ಇರುವುದಲ್ಲದೇ ಭಗವಂತನ ಅಧೀನವಾಗಿರುವುದು. ಆದ್ದರಿಂದ ಸಕಲಶಬ್ದಗಳಿಂದ ವಿಷ್ಣುವೇ ಮುಖ್ಯವಾಚ್ಯ) ಎಂದು ಆನಂದಮಯಾಧಿಕರಣದ ಅನುವ್ಯಾಖ್ಯಾನದಲ್ಲಿ ಹೇಳಿದ ಶಂಕೆಯನ್ನು ''ನ ಚ ಇಂದ್ರಾದಿಷು'' ಎನ್ನುವುದರಿಂದ ಹೇಳುತ್ತಾರೆ. ''ನಿರವಧಿಕತ್ವೇನ'' ಎಂದರೆ 'ದೇವಮಹಿಮ್ನಃ ಪರಮಂತಮಾಪ' 'ನ ತೇ ಮಹಿತ್ವಮನ್ವಶ್ನುವಂತಿ' 'ಬ್ರಹ್ಮೇಶಾನಾದಿಭಿರ್ದೇವೈಃ' ಇತ್ಯಾದಿಪ್ರಮಾಣಗಳಿಂದ ನಿರವಧಿಕತ್ವವು ಪರಮಾತ್ಮನಲ್ಲಿ ತಿಳಿಯುತ್ತದೆ.

भावदीपः– महायोगेति ।।

'इन्द्रं मित्रं यमिन्द्रं च प्रथमा सङ्कृतिस्तथा ।
नामधाः सर्वदेवानामेक इत्यादिका श्रुतिः'

इति चतुर्थपादीयानुभाष्योक्तविद्वद्रूढेरुपलक्षणम् । आद्यसूत्रभाष्ये 'यो देवानां नामधा' इति श्रुत्या विद्वद्रूढेः साधितत्वादत्र साक्षादनुक्तिः ।

ಇಂದ್ರಂ ಮಿತ್ರಂ ಯಮಿಂದ್ರಂ ಚ ಪ್ರಥಮಾ ಸಂಕೃತಿಸ್ತಥಾ ।
ನಾಮಧಾಃ ಸರ್ವದೇವಾನಾಮೇಕ ಇತ್ಯಾದಿಕಾ ಶ್ರುತಿಃ ।।'

ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ ವಿದ್ವದ್‌ರೂಢಿಯು ಉಪಲಕ್ಷಣವಾಗಿದೆ. ಮೊದಲಿನ ಜಿಜ್ಞಾಸಾಸೂತ್ರಭಾಷ್ಯದಲ್ಲಿ 'ಯೋ ದೇವಾನಾಂ ನಾಮಧಾ' ಎಂಬ ಶ್ರುತಿಯಿಂದ ವಿದ್ವದ್‌ರೂಢಿಯು ವಿಷ್ಣುವಿನಲ್ಲೇ ಎಂದು ಸಮರ್ಥಿಸಿದ್ದರಿಂದ ನೇರವಾಗಿ ಇಲ್ಲಿ ಹೇಳಿಲ್ಲ.

भावदीपः– प्राबल्यादिति ।।

'.............. रूढिर्हि द्विविधा मता ।
अविद्वद्विद्वदास्यैव मुख्या हि विदुषां तु सा' इत्युक्तेरिति भावः ।

महायोगो हि द्विविधः । शब्दप्रवृत्तिनिमित्तपौष्कल्यवत्त्वम् अन्यगतशब्दप्रवृत्तिनिमित्तं प्रति स्वातन्त्र्यं चेति । तत्र द्वितीयमप्यस्तीत्याह – अन्यगतेति ।। 'तं भूतिरिति देवा उपासाञ्चक्रिरे । ते बभूवुः' इति; 'भीषाऽस्माद् वातः पवते' इत्यादेरिति भावः । स्वातन्त्र्यं शब्दप्रवृत्तिनिमित्तमिति तु अग्रे 'तदधीनत्वात्' इत्यत्र व्यक्तम् ।

ಪ್ರಾಬಲ್ಯವು ಹೇಗೆಂದರೆ

'............... ರೂಢಿರ್ಹಿ ದ್ವಿವಿಧಾ ಮತಾ।
ಅವಿದ್ವದ್ವಿದ್ವದಾಪ್ತ್ಯೈವ ಮುಖ್ಯಾ ಹಿ ವಿದುಷಾಂ ತು ಸಾ ॥'

(ರೂಢಿಯು ಎರಡು ವಿಧವಾಗಿದೆ. ಅವಿದ್ವದ್‌ರೂಢಿ, ವಿದ್ವದ್‌ರೂಢಿ ಎಂದು. ಇವುಗಳಲ್ಲಿ ಆಪ್ತಿಮೂಲಕತ್ವ ಇರುವುದರಿಂದ ವಿದ್ವದ್‌ರೂಢಿಯೇ ಮುಖ್ಯ) ಎಂದು ಪ್ರಮಾಣವಿರುವುದರಿಂದ ಎಂದು ಭಾವ.

ಮಹಾಯೋಗವೂ ಎರಡುವಿಧವಾಗಿದೆ. ಬಹಳ(ಹೆಚ್ಚಾಗಿ)ಶಬ್ದಪ್ರವೃತ್ತಿನಿಮಿತ್ತವಿರುವುದು ಮತ್ತು ಮತ್ತೊಬ್ಬರಲ್ಲಿರುವ ಶಬ್ದಪ್ರವೃತ್ತಿನಿಮಿತ್ತವನ್ನು ಕುರಿತು ಸ್ವಾತಂತ್ರ್ಯವಿರುವುದು ಎಂಬುದಾಗಿ. ಆ ಎರಡು ವಿಧಗಳಲ್ಲಿ ಮೊದಲನೆಯದಲ್ಲದೆ ಎರಡನೆಯದೂ ಇದೆ ಎಂದು "ಅನ್ಯಗತಾ" ಎಂಬಂಶದಿಂದ ತಿಳಿಸುತ್ತಿದ್ದಾರೆ. 'ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ । ತೇ ಬಭೂವುಃ' 'ಭೀಷಾಸ್ಮಾದ್ ವಾತಃ ಪವತೇ' ಎಂಬ ಶ್ರುತಿ(ಪ್ರಮಾಣ)ಗಳಿಂದ ಬೇರೆಯವರಲ್ಲಿರುವ ಪ್ರವೃತ್ತಿನಿಮಿತ್ತವು ಭಗವದಧೀನ ಎಂದು ತಿಳಿಯುತ್ತದೆ. 'ಸ್ವಾತಂತ್ರ್ಯಂ ಶಬ್ದಪ್ರವೃತ್ತಿನಿಮಿತ್ತಮ್' (ಸ್ವಾತಂತ್ರ್ಯವೂ ಶಬ್ದಪ್ರವೃತ್ತಿನಿಮಿತ್ತ) ಎನ್ನುವುದು ಮುಂದೆ 'ತದಧೀನತ್ವಾದರ್ಥವತ್' ಎಂಬ ಸೂತ್ರದಲ್ಲಿ ಸ್ಪಷ್ಟವಾಗಿದೆ.

भावदीपः– **मुख्यत्वेति** ।। नन्वेवं 'मुख्यामुख्ययोर्मुख्ये सम्प्रत्ययः' इति न्यायेनैव 'ब्रह्मेन्द्रमग्निम्' इत्यादौ इन्द्रादिशब्दैर्विष्णुग्रहणसिद्धौ तद्धर्मोक्तिव्यर्थेति चेत् सत्यम् । तात्पर्यज्ञानार्थत्वेन वा न्यायविवरणटीकोक्तरीत्याऽभ्युपगमवादेन वा इति ज्ञेयम् । या त्वन्यत्र तात्पर्याभावो हि 'नेतरः' इत्यादिना दर्शितः शक्तिस्तूभयत्र स्यादिति तृतीयपादीयसुधोक्तिः सा तु अभ्यासादितात्पर्यलिङ्गोक्तिसिद्धतात्पर्याभिप्राया । न तु तत् तु इत्यवधारणसिद्धमहायोगादिरूपमुख्यवृत्त्यभिप्रायेत्यविरोधः । एवमग्रेऽप्येतत् सर्वं ध्येयम् ।

ನೀವು ಹೀಗೆ ಮುಖ್ಯವಾಚ್ಯ ಅಮುಖ್ಯವಾಚ್ಯ ಇವುಗಳಲ್ಲಿ ಮುಖ್ಯವಾದದ್ದನ್ನೇ ಸ್ವೀಕರಿಸಬೇಕು' ಎನ್ನುವ ನ್ಯಾಯದಂತೆ 'ಬ್ರಹ್ಮೇಂದ್ರಮಗ್ನಿಮ್' ಮುಂತಾದ ಶ್ರುತಿಗಳಲ್ಲಿ ಇಂದ್ರಾದಿಶಬ್ದಗಳಿಂದ ವಿಷ್ಣುವನ್ನೇ ಸ್ವೀಕರಿಸುವುದಾದರೆ, 'ತದ್ಧರ್ಮೋಪದೇಶಾತ್' ಎಂದು ಅವನ ಲಿಂಗಗಳನ್ನು ಹೇಳಿದ್ದು ವ್ಯರ್ಥವಲ್ಲವೇ? ಎಂದು ಶಂಕಿಸಿದರೆ, ಆಗಲಿ. ಧರ್ಮಗಳನ್ನು ಹೇಳಿದ್ದು ತಾತ್ಪರ್ಯಜ್ಞಾನಕ್ಕಾಗಿ ಅಥವಾ ನ್ಯಾಯವಿವರಣದ ಟೀಕೆಯಲ್ಲಿ ಹೇಳಿದ ಹಾಗೆ ಅಭ್ಯುಪಗಮವಾದವೆಂದಿಟ್ಟುಕೊಳ್ಳಬೇಕು. ಹಾಗಿದ್ದರೆ 'ನೇತರೋಽನುಪಪತ್ತೇಃ' ಇತ್ಯಾದಿ ಸೂತ್ರದಲ್ಲಿ ಹೇಳಿದ್ದು ಮತ್ತು 'ಶಕ್ತಿಸ್ತೂಭಯತ್ರ ಸ್ಯಾತ್' ಎಂದು ತೃತೀಯಪಾದದ ಟೀಕೆಯಲ್ಲಿ ಹೇಳಿದ್ದು ಹೇಗೆ? ಎನ್ನಬಹುದು. ಆದರೆ ಆ ಸೂತ್ರಗಳಲ್ಲಿ ತಾತ್ಪರ್ಯ ಎಂದರೆ ಅಭ್ಯಾಸ ಮುಂತಾದ ತಾತ್ಪರ್ಯಲಿಂಗಗಳಲ್ಲಿ ಸೇರಿರುವ ತಾತ್ಪರ್ಯ ಎಂದರ್ಥ ಹೊರತು 'ತತ್ತು' ಎಂದು ಅವಧಾರಣಮಾಡಿದ್ದರಿಂದ ಸಿದ್ಧವಾದ ಮಹಾಯೋಗ ಮುಂತಾದ ಮುಖ್ಯವೃತ್ತಿಯ ಅಭಿಪ್ರಾಯದಿಂದಲ್ಲ ಎಂದು ತಿಳಿಯಬೇಕು. ಹೀಗಾಗಿ ವಿರೋಧವಿಲ್ಲ. ಹೀಗೆಯೇ ಮುಂದೆ ಕೂಡ ಎಲ್ಲ ಕಡೆಗಳಲ್ಲಿಯೂ ತಿಳಿಯಬೇಕು.

भावदीपः – **हृद्ययनादिति** ।। 'तस्यैतदेव निरुक्तं हृदयमिति । तस्मात् हृदयम्' इति छान्दोग्यश्रुतौ निरुक्तेरिति भावः । भेदव्यपदेशासिद्धिमाशङ्क्य निराह – **नचेति** ।। औपचारिकत्वेत्युपलक्षणम् । 'सहैव सन्तं न विजानन्ति देवाः' इति साहित्यकर्तृकर्मभावादिना स्पष्टं भेदोक्तेः । अत्रैव प्रकरणे आत्मा जनानामित्यन्तर्यामिण्यात्मपदप्रयोगाच्च न स्वरूपपर इति ज्ञेयम् । उक्तदिशेन्द्रादिशब्दानां विष्णौ मुख्यत्वेऽपि यत्र बाधकं तत्र तत्तद्देवतारूपान्यपरत्वमप्यस्त्येव इतीन्द्रस्यात्मेत्यादावन्यः प्रसिद्धेन्द्रादिरर्थो न विरुद्धोऽतोपि न भेदोऽसिद्ध इत्यपि बोध्यम् ।

'ಹೃದ್ಯಯನಾತ್'' - 'ತಸ್ಯೈತದೇವ ನಿರುಕ್ತಂ ಹೃದಯಮಿತಿ । ತಸ್ಮಾತ್ ಹೃದಯಮ್' ಎಂದು ಛಾಂದೋಗ್ಯಶ್ರುತಿಯಲ್ಲಿ ನಿರುಕ್ತಿಯನ್ನು ತೋರಿಸಿದ್ದಾರೆ. ಭೇದವ್ಯಪದೇಶವು ಅಸಿದ್ಧ ಎಂದು ಶಂಕಿಸಿ ನಿರಾಕರಣೆಯನ್ನು ''ನ ಚ'' ಎಂಬಿತ್ಯಾದಿಯಾಗಿ ಮಾಡಿದ್ದಾರೆ. 'ಔಪಚಾರಿಕ' ಎಂಬುದನ್ನು ಉಪಲಕ್ಷಣವಾಗಿ ಇಟ್ಟುಕೊಳ್ಳಬೇಕು. 'ಸಹೈವ ಸಂತಂ ನ ವಿಜಾನಂತಿ ದೇವಾಃ' ಎಂದು ಸಹವೃತ್ತಿಯಲ್ಲಿ ಒಬ್ಬರನ್ನು ಕರ್ತೃವನ್ನಾಗಿ ಮತ್ತೊಬ್ಬರನ್ನು ಕರ್ಮವನ್ನಾಗಿ ಹೇಳುವುದರ ಮೂಲಕ ಸ್ಪಷ್ಟವಾಗಿ ಭೇದವನ್ನು ಹೇಳಿದ್ದಾರೆ. ಈ ಪ್ರಕರಣದಲ್ಲಿಯೇ ಮುಂದೆ 'ಆತ್ಮಾ ಜನಾನಾಮ್' ಎಂದು ಅಂತರ್ಯಾಮಿಯಲ್ಲಿ ಆತ್ಮಶಬ್ದವನ್ನು ಪ್ರಯೋಗಿಸಿದ್ದರಿಂದಲೂ ಆತ್ಮಶಬ್ದವು ಸ್ವರೂಪಪರವಲ್ಲ ಎಂದು ತಿಳಿಯಬೇಕು.

ಹಿಂದೆ ಹೇಳಿದಂತೆ ಇಂದ್ರಾದಿಶಬ್ದಗಳು ವಿಷ್ಣುವಿನಲ್ಲಿ ಮುಖ್ಯವಾಗಿ ಪ್ರವೃತ್ತವಾಗಿವೆ; ಎಲ್ಲಿ ಬಾಧಕವಿದೆಯೋ ಅಲ್ಲಿ ಆ ದೇವತಾರೂಪಗಳನ್ನು ಹೇಳುತ್ತದೆ. ಆದ್ದರಿಂದ 'ಇಂದ್ರಸ್ಯಾತ್ಮಾ' ಮುಂತಾದ ಕಡೆಗಳಲ್ಲಿ ಪ್ರಸಿದ್ಧರಾದ ಇಂದ್ರನೇ ಮೊದಲಾದವರು ಎಂದರ್ಥವನ್ನಿಟ್ಟುಕೊಂಡರೆ ವಿರೋಧವೇನೂ ಇಲ್ಲ. ಆದ್ದರಿಂದಲೂ ಭೇದವು ಅಸಿದ್ಧವಲ್ಲ ಎಂದೂ ತಿಳಿಯಬೇಕು.

भावदीपः– सूत्रस्य विश्वतोमुखत्वं व्यञ्जयन् फलोक्त्या उपसंहरति – **तस्मादिति** ।। निरवकाशलिङ्गसत्वादित्यर्थः । अधिभूताध्यात्मेत्याद्युत्तराधिकरणविषयोपाधीनां न्यायविवरणेऽभिधानात् तुल्यन्यायतया वा

> 'देवतान्तरगाः सर्वे शब्दवृत्तिनिमित्ततः ।
> विष्णुमेव वदन्त्यद्धा ...........'

इति तार्तीयानुभाष्योक्त्या वा लब्धमिति भावः । अधिकं विवक्षुरुक्तमेवानुवदति – **अत्र लिङ्गेति** ।। अत्र लिङ्गसमन्वयो नामान्तःप्रविष्टम् अन्तश्चन्द्रमसि अन्तःप्रविष्टः शास्ता - इत्याद्येतत् प्रकरणस्थान्तःपदोपेतवाक्यतात्पर्यविषयत्वमात्रम् । व्याप्तस्य

हरेरल्पदेशेऽवस्थानमयुक्तमिति चोद्यनिरासेन हरौ तस्य युक्ततासाधनं तु सर्वत्र प्रसिद्धेत्यत्र करिष्यत इति बोध्यम् । 'एतद्भावाभिदं लिङ्गम्' इत्यनुभाष्योक्तेः । वैपरीत्यं कुतो न? इत्यत आह – **नामेति** ।। अन्तःस्थस्याविष्णुत्वे तद्गतत्वेन श्रुतादृश्यत्वस्यान्यनिष्ठत्वेन तद्युक्तानन्दमयोऽप्यन्यः इति पूर्वोक्तरीत्या सङ्गतत्वादित्यर्थः । अर्थान्तराणि त्वस्य चन्द्रिकायामुक्तानि ।

ಸೂತ್ರವು ವಿಶ್ವತೋಮುಖವಾಗಿದೆ. (ಅನೇಕಾರ್ಥಗಳನ್ನು ನಿರ್ಣಯಿಸುತ್ತದೆ) ಎನ್ನುವುದನ್ನು ತೋರಿಸುತ್ತಾ, ಮತ್ತು ಈ ಅಧಿಕರಣದ ಫಲವನ್ನು ಹೇಳುವುದರ ಮೂಲಕ ಉಪಸಂಹಾರವನ್ನು "ತಸ್ಮಾತ್" ಎಂಬಿತ್ಯಾದಿಯಾಗಿ ಮಾಡುತ್ತಿದ್ದಾರೆ. ತಸ್ಮಾತ್ ಎಂದರೆ ನಿರವಕಾಶಲಿಂಗವಿರುವುದರಿಂದ ಎಂದರ್ಥ. ಅಥವಾ 'ಅಧಿಭೂತ, ಅಧ್ಯಾತ್ಮ' ಇತ್ಯಾದಿ ಮುಂದಿನ ಅಧಿಕರಣಗಳ ವಿಷಯಗಳಾದ ಉಪಾಧಿಗಳನ್ನು ನ್ಯಾಯವಿವರಣದಲ್ಲಿ ಹೇಳಿದ್ದರಿಂದ ತತ್ಸಮಾನ ನ್ಯಾಯದಿಂದ ಎಂದರ್ಥ. ಅಥವಾ

'ದೇವಾಂತರಗಾಃ ಸರ್ವೇ ಶಬ್ದವೃತ್ತಿನಿಮಿತ್ತತಃ।
ವಿಷ್ಣುಮೇವ ವದಂತ್ಯದ್ಧಾ ............ ........'

ಎಂದು ಅನುವ್ಯಾಖ್ಯಾನದ ಮೂರನೆಯ ಪಾದದಲ್ಲಿ ಹೇಳಿದಂತೆ ಸಿದ್ಧವಾದುದರಿಂದ ಎಂದರ್ಥ.

ಹೆಚ್ಚಿನ ವಿಷಯವನ್ನು ಹೇಳಲು ಹಿಂದೆ ಹೇಳಿದ್ದನ್ನು "ಅತ್ರ ಲಿಂಗ" ಎಂಬುದಾಗಿ ಅನುವಾದ ಮಾಡುತ್ತಾರೆ. ಇಲ್ಲಿ ಲಿಂಗಸಮನ್ವಯ ಎಂದರೆ 'ಅಂತಃಪ್ರವಿಷ್ಟಮ್' 'ಅಂತಃಶ್ಚಂದ್ರಮಸಿ' 'ಅಂತಃಪ್ರವಿಷ್ಟಃ ಶಾಸ್ತಾ' ಇತ್ಯಾದಿಯಾಗಿ ಈ ಪ್ರಕರಣದಲ್ಲಿ 'ಅಂತಃ'ಪದವುಳ್ಳ ವಾಕ್ಯದ ತಾತ್ಪರ್ಯವಿಷಯತ್ವವು ವಿಷ್ಣುವಿನಲ್ಲಿದೆ ಎಂದು ತಿಳಿಯಬೇಕು.

ವ್ಯಾಪ್ತನಾದ ವಿಷ್ಣುವು ಅಲ್ಪವಾದ ಸ್ಥಳದಲ್ಲಿ ಹೇಗಿರುತ್ತಾನೆ? ಎಂಬ ಆಕ್ಷೇಪವನ್ನು ನಿರಾಸಮಾಡಿ ಅದು ವಿಷ್ಣುವಿಗೆ ಕೂಡುತ್ತದೆಂಬ ಸಮರ್ಥನೆಯನ್ನು 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ ಮಾಡುತ್ತಾರೆ. ಏಕೆಂದರೆ ಅಲ್ಲಿ ಏನು ಹೇಳುತ್ತಾರೆ? ಎಂದು ಹೇಳುವಾಗ ಅನುವ್ಯಾಖ್ಯಾನದಲ್ಲಿ 'ಏತದ್ ಭಾವಾಭಿದಂ ಲಿಂಗಮ್' ಎಂದು ಹೇಳುತ್ತಾರೆ. ಲಿಂಗಸಮನ್ವಯಕ್ಕೋಸ್ಕರ ನಾಮಸಮನ್ವಯ ಎಂದು ವಿಪರೀತವಾಗಿ ಏಕೆ ಹೇಳಬಾರದು? ಎಂದರೆ "ನಾಮ" ಎನ್ನುವುದರಿಂದ ಉತ್ತರಿಸುತ್ತಾರೆ.

ಅಂತಃಸ್ಥನು ಬೇರೆಯವನಾದರೆ ಅವನಲ್ಲಿ ಇದೆಯೆಂದು ಹೇಳಿದ ಅದೃಶ್ಯತ್ವವೂ ಬೇರೆಯವನಲ್ಲಿದೆಯೆಂದಾಗುತ್ತದೆ. ಆದ್ದರಿಂದ ಆ ಅದೃಶ್ಯತ್ವವುಳ್ಳ ಆನಂದಮಯನೂ ಕೂಡ ಬೇರೆಯವನೇ ಎಂದು ಹಿಂದೆ ಹೇಳಿದಂತೆ ಸಂಗತವಾಗುವುದರಿಂದ ಎಂದಭಿಪ್ರಾಯ. ಇದಕ್ಕೆ ಬೇರೆ ರೀತಿಯ ಅರ್ಥಗಳನ್ನು ಚಂದ್ರಿಕಾದಲ್ಲಿ ಹೇಳಲಾಗಿದೆ.

भावदीपः– यत् तु 'अन्तःप्रविष्टवाक्ये अन्तःस्थत्वं न प्राधान्येन श्रुतमिति नेदमुदाहरणं युक्तं सूत्रद्वयस्य परस्परानुपजीविसाध्यद्वयपरत्वे अधिकरणभेद-

प्रसङ्गश्च । द्वितीये चशब्दास्वारस्यं च' इति । तन्न । सुवर्णधर्मानुवाकस्थमेव वाक्यमत्र चिन्त्यम् । न तु त्वदुक्तं 'य एषोऽन्तरादित्यः' इति छान्दोग्यस्थमित्यस्य चन्द्रिकायां व्यक्तत्वात् । प्राधान्येनान्तःस्थत्वाश्रवणस्यासिद्धेश्च । त्वद्वाक्येऽपि तथात्वापाताच्च । परस्परानुपजीविसाध्यद्वयपरत्वस्यासिद्धेश्च । न केवलमन्तःस्थो विष्णुः किं त्वन्यश्चेति भिन्नक्रमेण चशब्दसार्थक्याच्चेत्याद्युक्तम् ।।

।। इति भावदीपे अन्तःस्थत्वाधिकरणम् ।।

ಕೆಲವರು ಇಲ್ಲಿ ಹೀಗೆ ಹೇಳುತ್ತಾರೆ -- ಅಂತಃಪ್ರವಿಷ್ಟಮ್ ಎಂಬ ಶ್ರುತಿಯಲ್ಲಿ ಅಂತಃಸ್ಥತ್ವವನ್ನು ಪ್ರಧಾನವಾಗಿ ಹೇಳಿಲ್ಲ. ಆದ್ದರಿಂದ ಈ ಅಧಿಕರಣದಲ್ಲಿ ಅದನ್ನು ವಿಷಯವಾಕ್ಯ ಎಂದು ಸ್ವೀಕರಿಸಿರುವುದು ಸರಿಯಲ್ಲ. ಮತ್ತು ಎರಡೂ ಸೂತ್ರಗಳು ಪರಸ್ಪರ ಸಂಬಂಧವಿಲ್ಲದ ಎರಡು ರೀತಿಯ ಸಾಧ್ಯಗಳನ್ನು ಸಾಧಿಸುತ್ತವೆ ಎನ್ನುವುದಾದರೆ ಎರಡು ಅಧಿಕರಣವಾಗಬೇಕಾದೀತು. ಮತ್ತು ಎರಡನೆಯ ಸೂತ್ರದಲ್ಲಿರುವ ಚಶಬ್ದವು ಅಸ್ವರಸ ಎಂದಾಗುತ್ತದೆ -- ಎಂದು. ಅದು ಸರಿಯಲ್ಲ. ಈ ಅಧಿಕರಣದಲ್ಲಿ 'ಸುವರ್ಣ-ಧರ್ಮಾನುವಾಕದಲ್ಲಿರುವ ವಾಕ್ಯವನ್ನೇ ವಿಚಾರ ಮಾಡಬೇಕು ಹೊರತು ನೀವು ಹೇಳಿದ 'ಏಷೋಽಂತ-ರಾದಿತ್ಯಃ' ಎಂದು ಛಾಂದೋಗ್ಯೋಪನಿಷತ್ತಿನಲ್ಲಿರುವ ವಾಕ್ಯವಲ್ಲ ಎಂದು ಚಂದ್ರಿಕಾದಲ್ಲಿ ಸ್ಪಷ್ಟವಾಗಿದೆ.

ಮತ್ತು ಅಂತಃಸ್ಥತ್ವವು ಪ್ರಧಾನವಾಗಿ ಶ್ರುತವಾಗಿಲ್ಲ ಎನ್ನುವುದೇ ಅಸಿದ್ಧ. ಹಾಗೆ ಹೇಳುವುದಾದರೆ ನೀವು ಹೇಳಿದ ವಾಕ್ಯದಲ್ಲಿಯೂ ಆ ದೋಷವಿದ್ದೇ ಇದೆ. ಮತ್ತು ಪರಸ್ಪರಸಂಬಂಧವಿಲ್ಲದ ಎರಡು ಸಾಧ್ಯಗಳನ್ನು ಸಮರ್ಥಿಸುತ್ತೇವೆನ್ನುವುದೂ ಅಸಿದ್ಧ. ವಿಷ್ಣುವು ಕೇವಲ ಅಂತಃಸ್ಥನು ಮಾತ್ರವಲ್ಲ. ಕಿಂತು ಭಿನ್ನನೂ ಆಗಿದ್ದಾನೆ ಎಂದು ಭಿನ್ನಕ್ರಮದಿಂದ ಚಶಬ್ದವು ಸಾರ್ಥಕವಾಗಿದೆ; ಇದನ್ನೆಲ್ಲಾ ಈ ಹಿಂದೆ ಹೇಳಿದ್ದೇವೆ.

॥ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಅಂತಃಸ್ಥತ್ವಾಧಿಕರಣವು ಸಮಾಪ್ತವಾಯಿತು ॥

**वाक्यार्थमञ्जरी– ॐ भेदव्यपदेशाच्चान्यः ॐ** ।। तच्च शब्दार्थो विष्णुर्न केवलमन्तःश्रुतःकिन्त्विन्द्रादिभ्योन्यश्च । इन्द्रस्यात्मेत्यादिनान्तर्यामित्वोक्त्या तेभ्यो भेदाभि-धानादित्यर्थः । सावकाशत्वात् । परमैश्वर्यादिति वक्ष्यमाणरीत्या ॥ **विद्वद्रूढेरिति** ।। इन्द्रं मित्रं वरुणमग्निमाहुरिति प्रयोगबाहुल्यश्रवणादिति भावः । किमु महायोगसहिताया इत्येवशब्दः ।

महायोगो द्विविधः प्रवृत्तिनिमित्तपौष्कल्यवत्वं अन्यगतप्रवृत्तिनियामकत्वं च । तत्राद्यमुक्तम्। द्वितीयमाह – **अन्यगतेति** ।। सर्वहृदयेष्विति शेषोक्तिः । अत्र श्रुतौ । तथाच भेदव्यपदेशोऽसिद्ध इति भावः ॥ **औपचारिकत्वेति** ।। षष्ठ्यर्थसम्बन्धस्य भेदव्याप्तत्वेन तदभावे घटस्य स्वरूप-मित्यादिवदिन्द्रस्येत्यादिषष्ठ्यर्थस्य चौपचारिकत्वप्रसङ्गादित्यर्थः । इन्द्रादिनामसमन्वयसिध्यर्थमिति प्रागुक्तमुपपादयितुं स्मारयति – **अत्रेति** ।।

नन्विन्द्रनामसमन्वयकथने तत्प्रकरणपठितसर्वलिङ्गनामसमन्वयः सिध्यतीति किमनेन? इत्यत आह – **नामनिर्णयेनेति** ।। **सङ्गतत्वादिति** ।। अन्तस्थस्य अविष्णुत्वे तद्गतत्वेन श्रुतादृश्यत्वस्यान्यनिष्ठत्वेन तद्युक्तानन्दमयोपि अन्य इति पूर्वोक्तरीत्या सङ्गतत्वादिति भावः ।

अत्र विशेषो भावबोधे बोध्यः ।। **अधिदैवेति**।। देवाधिकाराख्यग्रन्थप्रतिपाद्यदेवेत्यर्थः । तथोक्तम् । अधिदैवतम् । देवाधिकारगं सर्वमिति ।।७।।

**।। इति श्रीशर्कराश्रीनिवासाचार्यविरचितवाक्यार्थमञ्जर्याम् अन्तःस्थत्वाधिकरणम् ।।**

ಸೂತ್ರಾರ್ಥ - ತಚ್ಚ ಶಬ್ದದ ಅರ್ಥ ಹೀಗಿದೆ – ಶ್ರುತಿಗಳಲ್ಲಿ ವಿಷ್ಣುವು ಕೇವಲ ಅಂತಃಸ್ಥನೆಂದು ಮಾತ್ರ ಕೇಳಿಬಂದಿಲ್ಲ ಕಿಂತು ಇಂದ್ರಾದಿಗಳಿಂದ ಭಿನ್ನನೇ ಆಗಿದ್ದಾನೆ. ಏಕೆಂದರೆ 'ಇಂದ್ರಸ್ಯಾತ್ಮಾ' ಇತ್ಯಾದಿ ಶ್ರುತಿಗಳಲ್ಲಿ ಅಂತರ್ಯಾಮಿತ್ವವನ್ನು ಹೇಳಿದ್ದರಿಂದ ಅವರುಗಳಿಂದ ಭೇದವು ಹೇಳಲ್ಪಟ್ಟಿದೆ ಎಂದರ್ಥ.

'ಸಾವಕಾಶತ್ವಾತ್' ಎಂದರೆ ಶ್ರುತಿಗಳಲ್ಲಿರುವ ಇಂದ್ರಾದಿ ಶಬ್ದಗಳಿಗೆ ಭಗವಂತನ ಪರವಾಗಿ ಸಮನ್ವಯ ಮಾಡಲು ಪರಮೈಶ್ವರ್ಯಾದಿಗಳನ್ನು ಮುಂದೆ ಹೇಳುವ ಪ್ರಕಾರವಾಗಿ ಸಾವಕಾಶವಾಗಿದೆ ಎಂದರ್ಥ.

'ವಿದ್ವದ್ರೂಢೇಃ' ಎಂದರೆ 'ಇಂದ್ರಂ ಮಿತ್ರಂ ವರುಣಂ ಅಗ್ನಿಮಾಹುಃ' ಎಂಬ ಪ್ರಯೋಗದ ಬಾಹುಲ್ಯವು ಕಂಡಿದೆ ಎಂದು ಭಾವ.

ಮಾಹಾಯೋಗವು ಪ್ರವೃತ್ತಿನಿಮಿತ್ತದಿಂದ ಪೂರ್ಣವಾಗಿರುವುದು ಮತ್ತು ಅನ್ಯರಲ್ಲಿರುವ ಪ್ರವೃತ್ತಿಗೆ ನಿಯಾಮಾವಾಗಿರುವುದೆಂದು ಎರಡು ವಿಧವಾಗಿದೆ. ಇದರಲ್ಲಿ ಮೊದಲನೆಯದನ್ನು ಹೇಳಿ, ಎರಡನೆಯದನ್ನು 'ಅನ್ಯಗತ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

ಶ್ರುತಿಯಲ್ಲಿ ನಿಹಿತಃ ಎಂದು ಇದೆ. ಎಲ್ಲಿ ಎಂದು ಪ್ರಶ್ನೆ ಬಂದರೆ 'ಸರ್ವಹೃದಯೇಷು' ಎಂದು ಶೇಷವನ್ನು ಹೇಳಿದ್ದಾರೆ. ಅತ್ರ ಎಂದರೆ ಶ್ರುತಿಯಲ್ಲಿ ಎಂದರ್ಥ. ಆದ್ದರಿಂದ ಭೇದವ್ಯಪದೇಶವು ಸಿದ್ಧವಾಯಿತು ಎಂದು ಭಾವ.

'ಔಪಚಾರಿಕತ್ವ' ಎಂದು ಇದೆ. ಅಂದರೆ ಷಷ್ಠಿವಿಭಕ್ತಿಯು ಸಂಬಂಧದ ಅರ್ಥಪರವಾಗಿ-ರುವುದರಿಂದ ಅದು ಭೇದವನ್ನು ಸೂಚನೆ ಮಾಡುತ್ತದೆ. ಇಲ್ಲದಿದ್ದರೆ ಘಟಸ್ಯಾತ್ಮಾ ಎಂಬಲ್ಲಿ ಯಾವರೀತಿಯಾಗಿ ಘಟದ ಸ್ವರೂಪ ಎಂದು ಅರ್ಥವಾಗುತ್ತದೆಯೋ ಅದೇ ರೀತಿಯಾಗಿ 'ಇಂದ್ರಸ್ಯಾತ್ಮಾ' ಎಂಬಲ್ಲಿಯೂ ಸಹ ಇಂದ್ರನ ಸ್ವರೂಪ ಎಂದು ಅರ್ಥ ಮಾಡಿದರೆ 'ಇಂದ್ರಸ್ಯ' ಇವೇ ಮೊದಲಾದ ಷಷ್ಠ್ಯರ್ಥಗಳು ಔಪಚಾರಿಕಪ್ರಯೋಗಗಳಾಗುತ್ತವೆಂದರ್ಥ. ಇಂದ್ರವೇ ಮೊದಲಾದ ನಾಮಗಳ ಸಮನ್ವಯದ ಸಿದ್ಧಿಗೋಸ್ಕರ ಎಂದು ಹಿಂದೆ ಹೇಳಿದ್ದನ್ನು ಉಪಪಾದನೆ ಮಾಡಲು 'ಅತ್ರ' ಎಂದು ಹೇಳಿ ಸ್ಮರಣೆ ಮಾಡಿಸುತ್ತಿದ್ದಾರೆ.

ಇಂದ್ರನಾಮದ ಸಮನ್ವಯವನ್ನು ಹೇಳಿದ್ದರಿಂದ ಆ ಪ್ರಕರಣದಲ್ಲಿ ಪಠಿತವಾದ ಎಲ್ಲಾನಾಮಗಳ ಸಮನ್ವಯವು ಸಿದ್ಧವಾಗುವುದರಿಂದ ಮುಂದೆ ಏನು? ಎಂದು ಪ್ರಶ್ನೆ ಬಂದರೆ 'ನಾಮನಿರ್ಣಯೇನ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

'ಸಂಗತತ್ವಾತ್' ಎಂದು ಇದೆ. ಇದರ ಅಭಿಪ್ರಾಯ ಅಂತಸ್ಥತ್ವಲಿಂಗವನ್ನು ಸಮನ್ವಯ ಮಾಡಿರುವುದು ಸಂಗತವೇ ಆಗಿದೆ; ಏಕೆಂದರೆ ಒಂದು ವೇಳೆ ಅಂತಸ್ಥನು ಅನ್ಯರಾದಲ್ಲಿ ಅವನಲ್ಲಿ ಕೇಳಿಬರುವ ಅದೃಶ್ಯತ್ವವೂ ಸಹ ಅನ್ಯರಲ್ಲಯೇ ಎಂದು ಸಿದ್ಧವಾಗುತ್ತದೆ. ಆಗ ಅದೃಶ್ಯತ್ವಾದಿಗಳನ್ನು ಹೇಳಿದ ಆನಂದಮಯನೂ ಸಹ ಅನ್ಯರೇ ಆಗಬೇಕಾಗುತ್ತದೆ ಆದ್ದರಿಂದ ಹಿಂದಿನ ಅಧಿಕರಣದಿಂದ ಸಂಗತಿ ಇದೆ ಎಂದು ಭಾವ. ಈ ವಿಷಯದಲ್ಲಿನ ವಿಶೇಷವಿಚಾರವನ್ನು ಭಾವಬೋಧದಲ್ಲಿ ತಿಳಿಯಬೇಕು.

॥ಇಲ್ಲಿಗೆ ವಾಕ್ಯಾರ್ಥಮಂಜರಿಯ ಕನ್ನಡಾನುವಾದದಲ್ಲಿ
ಅಂತಸ್ಥತ್ವಾಧಿಕರಣವು ಮುಗಿಯಿತು ॥

# श्रीपद्मनाभतीर्थविरचितसत्तर्कदीपावलिः

**ॐ अन्तस्यद्धर्मोपदेशात् ॐ ॥२०॥**

गताधिकरणेनोत्तराधिकरणस्य सङ्गतिं तावदारभते – **अदृश्य इत्यादिना** । इदमाम्नायते । 'अन्तःप्रविष्टं कर्तारमेतम्' इति । अत्रान्तःस्थितस्य पुरुषस्यानन्दमयधर्मत्वेन तत्प्रकरणपठितमदृश्यत्वं श्रूयते 'सहैव सन्तं न विजानन्ति देवाः' इति । तेनैतद्विचारो गताधिकरणेन सङ्गतः ।

ಹಿಂದಿನ ಆನಂದಮಯಾಧಿಕರಣದಿಂದ ಈ ಅಂತಃಸ್ಥತ್ವಾಧಿಕರಣಕ್ಕೆ ಸಂಗತಿಯನ್ನು 'ಅದೃಶ್ಯೇ' ಎನ್ನು-ವುದರಿಂದ ಹೇಳುತ್ತಾರೆ. ಶ್ರುತಿಯಲ್ಲಿ 'ಅಂತಃಪ್ರವಿಷ್ಟಂ ಕರ್ತಾರಮೇತಮ್' ಎಂದಿದೆ. ಈ ಶ್ರುತಿಯಲ್ಲಿ ಅಂತಸ್ಥನಾದ ಪುರುಷನಿಗೆ, ಆನಂದಮಯಪ್ರಕರಣದಲ್ಲಿ ಆನಂದಮಯನ ಧರ್ಮವೆಂದು ಪ್ರಸಿದ್ಧವಾದ ಅದೃಶ್ಯತ್ವವು 'ಸಹೈವ ಸಂತಂ ನ ವಿಜಾನಂತಿ ದೇವಾಃ' ಎಂದು ಹೇಳಲ್ಪಟ್ಟಿದೆ. ಆದ್ದರಿಂದ ಈ ಅಧಿಕರಣದ ವಿಚಾರವು ಹಿಂದಿನ ಅಧಿಕರಣದಿಂದ ಸಂಗತವಾಗಿದೆ.

अत्र देवैरविज्ञायमनोऽतः प्रविष्टः कर्ता इन्द्रो वा सूर्यो वा अग्न्यादिर्वा भवेत् । अन्तःप्रविष्टस्य कर्तुः प्रकरणे 'इन्द्रो राजा जगतो य ईशे' इतीन्द्रशब्दश्रवणात् । 'सप्त युञ्जन्ति रथमेकचक्रम्' इति सूर्यलिङ्गश्रवणात् । ब्रह्मेन्द्राग्न्यादिशब्दश्रवणात् । अतोऽर्थादानन्दमयोपि इन्द्राद्यन्यतम इति प्रतिक्षिपत्सूत्रमुपन्यस्यति अन्तरिति । व्याचष्टे – **अन्तः श्रूयमाण इत्यादिना** ।

ಈ ಶ್ರುತಿಯಲ್ಲಿ ಹೇಳಲ್ಪಟ್ಟ ದೇವತೆಗಳಿಂದ ತಿಳಿಯದ ಅಂತಃಪ್ರವಿಷ್ಟನಾದ ಕರ್ತೃವು ಇಂದ್ರನೋ, ಸೂರ್ಯನೋ ಅಥವಾ ಅಗ್ನಿಮೊದಲಾದ ದೇವತೆಗಳೋ ಎಂದು ಹೇಳಬಹುದು. ಏಕೆಂದರೆ ಅಂತಃ-ಪ್ರವಿಷ್ಟನಾದ ಕರ್ತೃವಿನ ಪ್ರಕರಣದಲ್ಲಿ 'ಇಂದ್ರೋ ರಾಜಾ ಯ ಈಶೇ' ಎಂದು ಇಂದ್ರಶಬ್ದವು ಶ್ರುತವಾಗಿದೆ. ಮತ್ತು 'ಸಪ್ತ ಯುಂಜಂತಿ ರಥಮೇಕಚಕ್ರಮ್' ಎಂದು ಸೂರ್ಯನ ಲಿಂಗವಿದೆ. ಹಾಗೆಯೇ ಬ್ರಹ್ಮ, ಇಂದ್ರ, ಅಗ್ನಿ ಮೊದಲಾದ ಶಬ್ದಗಳಿವೆ. ಆದ್ದರಿಂದ ಅಂತಃಸ್ಥನು ವಿಷ್ಣುವಲ್ಲವೆಂದಮೇಲೆ ಇದೇ ಅದೃಶ್ಯತ್ವ ಧರ್ಮವಿರುವ ಆನಂದಮಯನೂ ಇಂದ್ರಾದಿ ದೇವತೆಗಳಲ್ಲಿ ಯಾರೋ ಒಬ್ಬನು. ಈ ಪೂರ್ವಪಕ್ಷವನ್ನು ನಿರಾಕರಿಸುವ ಸೂತ್ರವನ್ನು 'ಅಂತಃ' ಎನ್ನುವುದರಿಂದ ಹೇಳಿ; 'ಅಂತಃಶ್ರೂಯಮಾಣಃ' ಎನ್ನುವುದರಿಂದ ವ್ಯಾಖ್ಯಾನ ಮಾಡುತ್ತಾರೆ.

**अयमर्थः । अन्तः प्रविष्टं कर्तारमेतम् इत्येतद्वाक्योक्तो विष्णुरेव तत्प्रकरणवाक्येषु अन्तःसमुद्र इत्यादि विष्णुलिङ्गश्रवणात् । एतच्च विष्णोरेव लिङ्गमित्येतद्व्यासस्मृत्या दर्शयति – सोऽभिध्यायेति । एतदेव श्रुत्यन्तरेण द्रढयति – अहं तत्तेज इति । अहेयत्वादहंनामकं रश्मीनीरयति प्रेरयतीति रश्मीच्छब्दवाच्यम् । 'रश्मीनां मध्ये तपन्तम्' इत्याद्युक्तं जलायनत्वान्नारायणनामकम् एतत्तेजोऽग्र आसीत् तस्मात् पुरुषशब्दाभिधेयातिद्वारा जगदण्डं जातमित्यर्थः । एतेनान्यसिद्धेन विष्णुलिङ्गेन इन्द्रादिश्रुमन्यथासिद्धानां बाधितत्वान्नेन्द्राद्यन्यतमोऽन्तरित्यादिवाक्ये शङ्कनीयः ।**

ಒಟ್ಟು ಅಭಿಪ್ರಾಯವಿಷ್ಟು. 'ಅಂತಃಪ್ರವಿಷ್ಟಕರ್ತಾರಮೇತಮ್' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟವನು ವಿಷ್ಣುವೇ. ಏಕೆಂದರೆ, ಆ ಪ್ರಕರಣದ ವಾಕ್ಯಗಳಲ್ಲಿ 'ಅಂತಃಸಮುದ್ರಸ್ಥತ್ವ' ಮೊದಲಾದ ವಿಷ್ಣುಲಿಂಗಗಳು ಕೇಳಲ್ಪಟ್ಟಿವೆ. 'ಅಂತಃಸಮುದ್ರಸ್ಥತ್ವ' ಮೊದಲಾದವುಗಳು ವಿಷ್ಣುವಿನ ಲಿಂಗಗಳೇ ಎಂಬವುದನ್ನು ವ್ಯಾಸಸ್ಮೃತಿಯ ಆಧಾರದಿಂದ ''ಸೋಽಭಿಧ್ಯಾಯ'' ಎಂಬಿತ್ಯಾದಿಯಾಗಿ ತಿಳಿಸುತ್ತಾರೆ. ಇದನ್ನೇ ''ಅಹಂ ತತ್ತೇಜಃ'' ಎಂಬಿತ್ಯಾದಿ ಶ್ರುತಿಯಿಂದ ದೃಢಪಡಿಸುತ್ತಾರೆ. ಅಹೇಯನಾದ್ದರಿಂದ ಅಹಂಶಬ್ದವಾಚ್ಯನಾದ, ರಶ್ಮಿಗಳನ್ನು ಪ್ರೇರಣೆ ಮಾಡುತ್ತಾನಾದ್ದರಿಂದ ರಶ್ಮೀತ್ ಶಬ್ದವಾಚ್ಯನಾದ, 'ರಶ್ಮಿಗಳ ಮಧ್ಯೆ ಇದ್ದು ತಾಪವನ್ನುಂಟು ಮಾಡುವವನು ಇವನೇ' ಎಂದು ಮೊದಲಾಗಿ ಹೇಳಲ್ಪಡುವ, 'ನೀರಿಗೆ ಆಶ್ರಯನಾದ್ದರಿಂದ ನಾರಾಯಣ ಎಂಬ ಹೆಸರುಳ್ಳ ಈ ತೇಜಸ್ಸೇ ಸೃಷ್ಟಿಯ ಆದಿಯಲ್ಲಿ ಇತ್ತು. ಆ ಪುರುಷಶಬ್ದವಾಚ್ಯವಾದ ತೇಜಸ್ಸಿನಿಂದ ಈ ಬ್ರಹ್ಮಾಂಡ ಹುಟ್ಟಿತು-- ಎಂಬುದಾಗಿ.

ಹೀಗೆ ಹೇಳಿದ್ದರಿಂದ ಅನನ್ಯಥಾಸಿದ್ಧವಾದ ವಿಷ್ಣುವಿನ ಲಿಂಗದಿಂದ ಅನ್ಯಥಾ ಸಿದ್ಧವಾದ ಇಂದ್ರಾದಿ ಶ್ರುತಿಗಳು ಬಾಧಿತವಾದ್ದರಿಂದ 'ಅಂತಃಪ್ರವಿಷ್ಟಂ' ಇತ್ಯಾದಿ ಶ್ರುತಿಯಲ್ಲಿ ಇಂದ್ರಾದಿದೇವತೆಗಳು ಪ್ರತಿಪಾದ್ಯ-ರಾಗಿದ್ದಾರೆಂದು ಸಂದೇಹಪಡಬಾರದು.

**ॐ भेदव्यपदेशाच्चान्यः ॐ ॥२१॥**

इन्द्रादिश्रुतिलिङ्गानि तु इन्द्राद्यन्तर्यामीत्युपपद्यन्ते इत्यतोपीन्द्रादिभ्यो भेदेन तदन्तर्यामिणोऽत्र व्यपदेशात् । स एव विष्णुः प्रतिपाद्यते नत्विन्द्रादिरित्येतत्प्रतिपादकं सूत्रमुपन्यस्य व्याचष्टे **भेदेत्यादिना** । पञ्चेन्द्रियवदेव वृत्तियोगाच्छब्दादिविषयैराहुतिभिर्वा होतरो यष्टारो वा यस्य असौ पञ्चहोता; हृदि अयनत्वाद्धृदयमित्यन्तःप्रविष्टः शास्तोच्यत इत्यर्थः । (१।१।७)

**॥ इति श्रीपद्मनाभतीर्थविरचितायां सत्तर्कदीपावळ्याम्**
**अन्तःस्थत्वाधिकरणम् ॥**

ಇಂದ್ರಾದಿಶ್ರುತಿಲಿಂಗಗಳು ಇಂದ್ರಾದಿಗಳ ಅಂತರ್ಯಾಮಿಯಾದ ವಿಷ್ಣುವಿಷಯಕ ಎಂದು ಕೂಡಿಸಬಹುದು. ಈ ಕಾರಣದಿಂದ ಇಂದ್ರಾದಿಗಳಿಂದ ಭಿನ್ನನನ್ನಾಗಿ ಅವರ ಅಂತರ್ಯಾಮಿಯನ್ನು ಈ ಪ್ರಕರಣದಲ್ಲಿ ಹೇಳಿದ್ದಾರೆ. ಆದ್ದರಿಂದ ವಿಷ್ಣುವೇ ಈ ಶ್ರುತಿಯಲ್ಲಿ ಪ್ರತಿಪಾದ್ಯನಾಗಿದ್ದಾನೆ ಹೊರತು ಇಂದ್ರಾದಿಗಳಲ್ಲ ಎಂದು ಸಮರ್ಥಿಸುವ ಸೂತ್ರವನ್ನು ಹೇಳಿ ''ಭೇದ'' ಎಂಬುದಾಗಿ ವ್ಯಾಖ್ಯಾನ ಮಾಡುತ್ತಾರೆ. ಯಾರನ್ನು ಪಂಚೇಂದ್ರಿಯಗಳಂತೆ ವೃತ್ತಿಸಂಬಂಧದಿಂದ ಶಬ್ದ ಮೊದಲಾದ ವಿಷಯಗಳಿಂದ ಅಥವಾ ಆಹುತಿಗಳಿಂದ ಹೋಮಿಸುತ್ತಾರೋ ಅವನು 'ಪಂಚಹೋತಾ'; ಹೃದಯದಲ್ಲಿ ಆಶ್ರಿತನಾದ್ದರಿಂದ ಹೃದಯ ಎಂದು ಅಂತಃಪ್ರವಿಷ್ಟನಾದ ಶಾಸನಮಾಡುವ ವಿಷ್ಣುವು ಹೇಳಲ್ಪಟ್ಟಿದ್ದಾನೆ.

॥ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯ
ಕನ್ನಡಾನುವಾದದಲ್ಲಿ ಅಂತಃಸ್ಥತ್ವಾಧಿಕರಣವು ಮುಗಿಯಿತು ॥

# ಅಂತಃಸ್ಥತ್ವಾಧಿಕರಣ

## ಭಾಗ - ೨

ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,
ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ,
ಶ್ರೀಭಾಷ್ಯ ಇವುಗಳ ಆಯ್ದ ಭಾಗಗಳು

# ಅಂತಸ್ಥತ್ವಾಧಿಕರಣ ಸಾರ

## ಸಂಗತಿ ಮೊದಲಾದವುಗಳ ನಿರೂಪಣೆ

ಅಂತಸ್ಥತ್ವಾಧಿಕರಣದಲ್ಲಿ 'ಅಂತಸ್ಥತ್ವ' ಲಿಂಗವನ್ನು ಸಮರ್ಥನೆ ಮಾಡುತ್ತಾರೆ. ಒಂದು ಅಂತಸ್ಥತ್ವಲಿಂಗ ಸಮನ್ವಯ ಮಾಡಿದರೆ ಆ ಅಂತಸ್ಥತ್ವ ಪ್ರಕರಣದಲ್ಲಿರುವ ಇಂದ್ರಾದಿ ಅನೇಕ 'ನಾಮಗಳು' ಸಮನ್ವಯವಾಗುತ್ತವೆ. ಅದಕ್ಕೋಸ್ಕರ ಇದು ನಾಮ ಸಮನ್ವಯದ ಪಾದವಾಗಿದ್ದರೂ 'ಲಿಂಗವನ್ನು' ಸಮನ್ವಯ ಮಾಡುತ್ತಾರೆ.. ಹಿಂದಿನ ಅಧಿಕರಣದ ಸಿದ್ಧಾಂತವನ್ನು ಪ್ರಶ್ನಿಸಿ ಈ ಅಧಿಕರಣ ಹೊರಟಿರುವುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ 'ಆಕ್ಷೇಪಿಕೀ' ಸಂಗತಿಯನ್ನು ತಿಳಿಯಬೇಕು.

ಅಥವಾ ಹಿಂದಿನ ಅಧಿಕರಣದಲ್ಲಿ ಆನಂದಮಯನು 'ವಿಷ್ಣು' ಎಂದಿತ್ತು. 'ಆನಂದಮಯ' ಎನ್ನುವ ಶಬ್ದವು ಇಂಥದ್ದೇ ವ್ಯಕ್ತಿಯ ವಿಶೇಷವಾದ ಹೆಸರು ಎಂದೇನಿಲ್ಲ. ಆದ್ದರಿಂದ ವಿಷ್ಣುವೆಂದು ಹೇಳಿದರೆ ತೊಂದರೆಯಿಲ್ಲ. ಆದರೆ 'ಇಂದ್ರಾದಿ' ಶಬ್ದಗಳು ಇಂದ್ರ ಮೊದಲಾದ ದೇವತೆಗಳ ಹೆಸರು ಎಂದು ಪ್ರಸಿದ್ಧಿಯಿರುವುದರಿಂದ ಇಂದ್ರಾದಿ ಶಬ್ದಗಳು ವಿಷ್ಣುವನ್ನು ಹೇಳುತ್ತವೆನ್ನುವುದು ಎಷ್ಟು ಸರಿ? ಎಂದು ಹಿಂದಿನ ಅಧಿಕರಣಕ್ಕಿಂತ ಭಿನ್ನವಾದ ಪೂರ್ವಪಕ್ಷ ಈ ಅಧಿಕರಣದಲ್ಲಿರುವುದರಿಂದ 'ಪ್ರತ್ಯುದಾಹರಣ' ಸಂಗತಿಯನ್ನು ಈ ಅಧಿಕರಣಕ್ಕೆ ತಿಳಿಯಬೇಕು.

## ಭಾಷ್ಯದಲ್ಲಿ ಈ ಅಧಿಕರಣದ ಸಂಗತಿಗಳ ಕಂಠೋಕ್ತ ಹಾಗೂ ಸೂಚನಾಪೂರ್ವಕನಿರೂಪಣೆಗೆ ಕಾರಣೋಕ್ತಿ

ಹಿಂದಿನ ಅಧಿಕರಣದಲ್ಲಿ, ಆನಂದಮಯ ಪ್ರಕರಣದಲ್ಲಿ 'ಬ್ರಹ್ಮ' ಶಬ್ದವಿರುವುದರಿಂದ. ಆನಂದಮಯ ವಿಷ್ಣುವೆನ್ನುವುದಾದರೆ ಈ ಅಧಿಕರಣದಲ್ಲಿ ಅಂತಸ್ಥನ ಪ್ರಕರಣದಲ್ಲಿ ಇಂದ್ರಾದಿ ಶಬ್ದಗಳಿರುವುದರಿಂದ 'ಅಂತಸ್ಥನು' ಇಂದ್ರಾದಿಗಳೇ ಆಗಲಿ. ಬ್ರಹ್ಮಶಬ್ದವಿಲ್ಲದ್ದರಿಂದ ವಿಷ್ಣುವೆನ್ನುವುದು ಸರಿಯಲ್ಲ ಎಂದು ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯವನ್ನು 'ಅಪವಾದಿಸಿ' ಪೂರ್ವಪಕ್ಷ ಮಾಡುವುದರಿಂದ ಈ ಅಧಿಕರಣಕ್ಕೆ 'ಆಪವಾದಿಕೀ' ಸಂಗತಿಯನ್ನು ತಿಳಿಯಬಹುದು.

ಅಥವಾ 'ಮಾಂತ್ರವರ್ಣಿಕ' ಸೂತ್ರದಲ್ಲಿ ಹೇಳಿದ 'ಗುಹಾನಿಹಿತತ್ವ'ವನ್ನಿಟ್ಟುಕೊಂಡು ಆನಂದಮಯನು ಅಂತಸ್ಥನೆಂದರೆ ಆನಂದಮಯನು ಅಂತಸ್ಥನಲ್ಲ ಎಂದು ಪೂರ್ವಪಕ್ಷ ಹೇಳುವುದರಿಂದ ಮತ್ತೊಂದು ರೀತಿಯ 'ಆಕ್ಷೇಪಿಕೀ' ಸಂಗತಿಯನ್ನಿಟ್ಟುಕೊಳ್ಳಬಹುದು.

## ಅಧಿಕರಣದ ಪೂರ್ವಪಕ್ಷದ ಸ್ಪಷ್ಟೀಕರಣ

ಈ ಅಧಿಕರಣದ ಚಿಂತಾ ಮತ್ತು ಪೂರ್ವಪಕ್ಷಗಳು ಹೀಗಿವೆ -

ಅಂತಸ್ಥನು ಇಂದ್ರನೋ? ವಿಷ್ಣುವೋ? ಅದನ್ನು ನಿರ್ಣಯಿಸಲು ಶ್ರುತ್ಯನುಸಾರಿಯಾಗಿ ಲಿಂಗವನ್ನು ಅರ್ಥೈಸಬೇಕೋ ಅಥವಾ ಲಿಂಗಾನುಗುಣವಾಗಿ ಶ್ರುತಿಯನ್ನು ಕೂಡಿಸಬೇಕೋ? ಅದಕ್ಕೋಸ್ಕರ ಶ್ರುತಿಯು

ನಿರವಕಾಶವೋ? ಲಿಂಗವು ನಿರವಕಾಶವೋ? ಬಲಾಬಲ ನಿರ್ಣಯಿಸುವುದು ಯಾವ ಮಾನದಂಡದಿಂದ ಎಂದು ಈ ಅಧಿಕರಣದ ಚಿಂತಾ.

ಇಂದ್ರಾದಿಶ್ರುತಿಗಳಿರುವುದರಿಂದ ಅಂತಸ್ಥನು ಇಂದ್ರಾದಿಗಳಲ್ಲೇ ಒಬ್ಬರು ಎಂದು ಪೂರ್ವಪಕ್ಷ. ಇಲ್ಲೊಂದು ಪ್ರಶ್ನೆ ಬರಬಹುದು. ಇಂದ್ರಾದಿದೇವತೆಗಳಲ್ಲಿ ನಿಶ್ಚಯಿಸಿ ಒಬ್ಬನನ್ನು ಅಂತಸ್ಥನೆನ್ನುವಿರೋ? ಅಥವಾ ಇಂದ್ರಾದಿಗಳಲ್ಲಿ ಯಾರೋ ಒಬ್ಬನೆಂದು ಸಮ್ಮುಗ್ಧವಾಗಿ, ಪೂರ್ವಪಕ್ಷವೋ? ಅಥವಾ ಎಲ್ಲರೂ ಅಂತಸ್ಥರೆಂದು ಪೂರ್ವಪಕ್ಷವೋ? ಮೂರೂ ರೀತಿಯು ಪೂರ್ವಪಕ್ಷವನ್ನು ಹೇಳಲು ಬರುವುದಿಲ್ಲ. ಅನೇಕರನ್ನು ಹೇಳುವ ಶ್ರುತ್ಯಾದಿಗಳು ಇರುವಾಗ ಒಬ್ಬನನ್ನು ನಿರ್ಧರಿಸುವುದು ಕಷ್ಟ. ನಿರ್ಧರಿಸದಿದ್ದರೆ ಅದು ಸಂದೇಹಾತ್ಮಕ ಜ್ಞಾನವಾಗುವುದರಿಂದ ಪೂರ್ವಪಕ್ಷವೆನಿಸುವುದಿಲ್ಲ. ಎಲ್ಲರನ್ನು ಅಂತಸ್ಥರೆಂದರೆ ಅನೇಕ ಈಶ್ವರನನ್ನು ಒಪ್ಪಬೇಕಾಗುತ್ತದೆ ಎಂದರೆ ಮೊದಲ ಪಕ್ಷವನ್ನಿಟ್ಟುಕೊಂಡು ಶ್ರುತಿಯ ಅಭ್ಯಾಸವಿರುವುದರಿಂದ ಇಂದ್ರನು ಅಂತಸ್ಥನು ಎಂದು ನಿರ್ಧರಿಸಿದಾಗ ಯಾವ ಬಾಧಕವೂ ಇಲ್ಲ.

### ಸೂರ್ಯಾದಿಗಳು ಅಂತಸ್ಥರೆಂದು ಪ್ರಬಲವಾಗಿ ಪೂರ್ವಪಕ್ಷದ ನಿರೂಪಣೆ

ಅಥವಾ ನಿರವಕಾಶಲಿಂಗಸಹಿತವಾದ ಸವಿತೃ ಶ್ರುತಿಯಿರುವುದರಿಂದ ಸೂರ್ಯನೆಂದು ನಿರ್ಧರಿಸಿ ಉಳಿದ ಶಬ್ದಗಳನ್ನು ಯೋಗವೃತ್ತಿಯಿಂದ ಅವನಲ್ಲಿ ಕೂಡಿಸಬಹುದು. ಅಥವಾ 'ಪರಕ್ಕಿಂತಲೂ ಪೂರ್ವವು ದುರ್ಬಲ' ಎನ್ನುವ ನ್ಯಾಯವನ್ನನುಸರಿಸಿದಾಗ ವರುಣನ 'ಲಿಂಗ' ಕೊನೆಯಲ್ಲಿರುವುದರಿಂದ ಅದಕ್ಕನುಗುಣವಾಗಿ ವರುಣನು ಅಂತಸ್ಥನೆಂದು ನಿರ್ಧರಿಸಿ ಪೂರ್ವಪಕ್ಷ ಮಾಡಬಹುದು.

ಎರಡನೇ ಪಕ್ಷವನ್ನಿಟ್ಟುಕೊಂಡೂ ಪೂರ್ವಪಕ್ಷ ಮಾಡಬಹುದು. ಈ ಪಕ್ಷದಲ್ಲಿ ಇಂದ್ರನೋ ಸೂರ್ಯನೋ? ಇತ್ಯಾದಿಯಾಗಿ ಅವಾಂತರ ಸಂದೇಹವಿದ್ದರೂ ವಿಷ್ಣುವಿಗಿಂತ ಬೇರೆಯವನು ಎನ್ನುವ ವಿಷಯದಲ್ಲಿ ನಿರ್ಧಾರವಿರುವುದರಿಂದ ಆ ರೀತಿ ಪೂರ್ವಪಕ್ಷ ಮಾಡಿದರೆ ಬಾಧಕವೇನೂ ಇಲ್ಲ. ಹೀಗೆ ಮಾಡಿದಾಗ ವಿಷ್ಣುಲಿಂಗಗಳಿಂದಲೂ ವಿರೋಧವಿಲ್ಲ. ಕೂಲಂಕುಶವಾಗಿ ವಿಚಾರ ಮಾಡಿದಾಗ ವಿಷ್ಣುವಿನ ಶ್ರುತಿಲಿಂಗಗಳಿಗಿಂತಲೂ ಬೇರೆಯವರನ್ನು ಹೇಳುವ ಶ್ರುತಿ ಲಿಂಗಗಳೇ ಪ್ರಬಲವೆನಿಸುತ್ತವೆ.

### ಇಂದ್ರಬೃಹಸ್ಪತಿಗಳನ್ನು 'ಅಂತಸ್ಥ' ಎಂದಿಟ್ಟು ಪೂರ್ವಪಕ್ಷದ ನಿರೂಪಣೆ

ಇಂದ್ರಾದಿ ಸಕಲದೇವತೆಗಳೂ ಅಂತಸ್ಥರು ಎನ್ನುವ ಮೂರನೇ ರೀತಿಯ ಪಕ್ಷವನ್ನಿಟ್ಟುಕೊಂಡೂ ಪೂರ್ವಪಕ್ಷ ಮಾಡಬಹುದು. ಹೇಗೆಂದರೆ - ವಿಷ್ಣುವಿನ ಲಿಂಗಗಳು ನಿರವಕಾಶಗಳಾದ್ದರಿಂದ ಅವುಗಳನ್ನು ಬಿಡಲು ಆಗುವುದಿಲ್ಲ. ಹಾಗೆಯೇ ಇಂದ್ರಾದಿ ಶ್ರುತಿಗಳು ಶ್ರುತಿಗಳಾದ್ದರಿಂದ ಅವುಗಳನ್ನೂ ಕಡೆಗಣಿಸುವಂತೆ ಇಲ್ಲ, ಹಾಗಾಗಿ ಎರಡನ್ನೂ ಕೂಡಿಸಬೇಕಾದ್ದರಿಂದ ವಿಷ್ಣುವೇ ಒದೊಂದು ಉಪಾಧಿಯುಕ್ತನಾದಾಗ ಇಂದ್ರ ಮೊದಲಾದ ಹೆಸರುಗಳಿಂದ ಕರೆಸಿಕೊಳ್ಳುತ್ತಾನೆ ಎಂದು ಅಂಗೀಕರಿಸಿ ಪೂರ್ವಪಕ್ಷವನ್ನು ಮಾಡಿದರೆ ಅನೇಕ ಈಶ್ವರರನ್ನು ಒಪ್ಪಬೇಕಾಗುತ್ತದೆ ಎಂಬ ಬಾಧಕವೂ ಇಲ್ಲ. ಇದಕ್ಕನುಗುಣವಾಗಿ ಶ್ರುತಿ ಸ್ಮೃತಿಗಳೂ ಇವೆ. ಹೀಗೆ ಹೇಳಿದರೆ ವಿಷ್ಣುವು ಅಂತಸ್ಥನೆಂದು ಹೇಳಿದಂತಾಯಿತಲ್ಲ ಎನ್ನಬಾರದು. ಇಂದ್ರಾದಿಗಳೊಂದಿಗೆ ವಿಷ್ಣುವಿಗೆ ಸ್ವರೂಪತಃ ಐಕ್ಯವಿದ್ದರೂ ಆವಿದ್ಯಕ ಭೇದವಿರುವುದರಿಂದ ಇಂದ್ರಾದಿಗಳನ್ನು ಅಂತಸ್ಥರೆಂದು ಹೇಳಿದಾಗ ಅವರಿಗೆ ಮಾತ್ರ ಅಂತಸ್ಥತ್ವವಿದೆಯೇ ಹೊರತು ವಿಷ್ಣುವಿಗಲ್ಲ. ಹೀಗೆ ಮೂರು ರೀತಿಯ ಪೂರ್ವಪಕ್ಷ ಮಾಡಬಹುದು. ಈ ಮೂರನ್ನೂ ಸುಧಾದಲ್ಲಿ ತಿಳಿಸಿದ್ದಾರೆ. ಭಾಷ್ಯ ಟೀಕೆಗಳಲ್ಲಿಯೂ ಸೂಚಿಸಿದ್ದಾರೆ.

ಅಂತಸ್ಥತ್ವಾಧಿಕರಣ

ಸಿದ್ಧಾಂತದ ನಿರೂಪಣೆ

ಸಿದ್ಧಾಂತವು ಹೀಗಿದೆ - ವಾಸ್ತವಿಕವಾಗಿ ಶ್ರುತಿಯು ಲಿಂಗಾದಿಗಳಿಗಿಂತಲೂ ಸ್ವತಃ ಪ್ರಬಲವಾಗಿದೆ. ಆದರೂ ಲಿಂಗವು ನಿರವಕಾಶವಾದಾಗ ಅದೇ ಪ್ರಬಲವಾಗುತ್ತದೆ ಎನ್ನುವುದು ಪೂರ್ವಮೀಮಾಂಸಾಗ್ರಂಥದಲ್ಲಿ ನಿಶ್ಚಿತವಾಗಿದೆ. ಆದ್ದರಿಂದಲೇ ''ಆನರ್ಥಕ್ಯಪ್ರತಿಹತಾನಾಂ ವಿಪರೀತಂ ಬಲಾಬಲಮ್'' ಎಂದು ಬಲಾಬಲವ್ಯವಸ್ಥೆಯನ್ನೇ ವ್ಯತ್ಯಾಸ ಮಾಡಿಕೊಳ್ಳಬೇಕೆಂದು ನಿರ್ದೇಶಿಸಿದ್ದಾರೆ. ಹಾಗಾಗಿ ಶ್ರುತಿಸ್ಮೃತಿಗಳು ಹಾಗೂ ಲೋಕರೂಢಿ ಇವುಗಳಿಂದ ಪರಾಮರ್ಶಿಸಿ ನೋಡಿದಾಗ 'ಸಮುದ್ರಾಂತಸ್ಥತ್ವ' ಮೊದಲಾದ ಲಿಂಗಗಳನ್ನು ಬೇರೆ ದೇವತೆಗಳಲ್ಲಿ ಕೂಡಿಸಲು ಬರುವುದಿಲ್ಲವಾದ್ದರಿಂದ ವಿಷ್ಣುವಿನದ್ದೇ ಲಿಂಗವೆಂದು ಸಿದ್ಧವಾಗುತ್ತದೆ. ಆದ್ದರಿಂದ ನಿರವಕಾಶ ವಿಷ್ಣುಲಿಂಗಗಳಿಂದಾಗಿ ಅಂತಸ್ಥನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

'ಅಂತಸ್ಥ' ಶಬ್ದದ ಪರ್ಯಾಯ ಎಂದೆನಿಸುವ 'ಇಂದ್ರಾದಿ' ಶಬ್ದಗಳು ನಾರಾಯಣನನ್ನು ಹೇಗೆ ಪ್ರತಿಪಾದಿಸುತ್ತವೆ ಎಂಬ ಸಿದ್ಧಾಂತ ನಿರೂಪಣೆ

ಅಲ್ಲದೆ ''ಇಂದ್ರಂ ಮಿತ್ರಮಗ್ನಿಮಾಹುಃ'' ಎನ್ನುವ ಶ್ರುತಿಯಿರುವುದರಿಂದ ಇಂದ್ರಾದಿಶಬ್ದಗಳಿಗೆ ವಿಷ್ಣುವಿನಲ್ಲೇ ವಿದ್ವದ್‌ರೂಢಿಯಿದೆ. ಮತ್ತು ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತಗಳೂ ಸ್ವತಂತ್ರವಾಗಿ, ಪೂರ್ಣವಾಗಿ ವಿಷ್ಣುವಿನಲ್ಲೇ ಇರುವುದರಿಂದ ಮಹಾಯೋಗವೂ ಅವನಲ್ಲೇ ಇದೆ. ಹೀಗಾಗಿ ಇಂದ್ರಾದಿಶ್ರುತಿಗಳು ಮುಖ್ಯವಾಗಿ ವಿಷ್ಣುವನ್ನೇ ಹೇಳುತ್ತವೆ. ಆದ್ದರಿಂದ ಇಂದ್ರ ಮುಂತಾದ ಶ್ರುತಿಗಳಿರುವುದರಿಂದ ಅಂತಸ್ಥನು ಬೇರೆಯವನು ಎನ್ನಲು ಬರುವುದಿಲ್ಲ.

'ಇಂದ್ರಂ ಮಿತ್ರಂ' ಇತ್ಯಾದಿ ಶ್ರುತಿಯು ಹಿಂದೆ ಹೇಳಿದಂತೆ ಇಂದ್ರಾದಿಗಳೊಂದಿಗೆ ವಿಷ್ಣುವಿಗೆ ಐಕ್ಯವನ್ನು ಹೇಳುತ್ತದೆ ಹೊರತು ವಿಷ್ಣುವಿಗೆ ರೂಢಿಯನ್ನಲ್ಲ ಎನ್ನುವಂತಿಲ್ಲ. ಶ್ರುತಿಯಲ್ಲಿ 'ಆಹುಃ' ಎನ್ನುವುದರಿಂದ ಆ ಆ ಶಬ್ದವಾಚ್ಯತ್ವವನ್ನೇ ಹೇಳಿದ್ದಾರೆ. 'ಯೋ ದೇವಾನಾಂ' ಎನ್ನುವ ಶ್ರುತಿ ಮತ್ತು ಸ್ಮೃತಿ ಸಂವಾದವೂ ಇದೆ. ಅಲ್ಲದೆ ಅನೇಕ ಶ್ರುತಿಗಳಲ್ಲಿ ಇಂದ್ರಾದಿದೇವತೆಗಳಿಗೆ ವಿಷ್ಣುವಿನಿಂದ ಭೇದವನ್ನೇ ಹೇಳಿದ್ದಾರೆ. ಹಾಗಾಗಿ ಅಂತಸ್ಥನು ವಿಷ್ಣುವೇ ಆಗಿದ್ದಾನೆ.

ಸೂರ್ಯವರುಣಾದಿ ಲಿಂಗಗಳ ಮೇಲಿರುವ ಪೂರ್ವಪಕ್ಷವೂ ಅಯುಕ್ತ ಎಂಬುದರ ನಿರೂಪಣೆ

ಇಂದ್ರಾದಿ ಶ್ರುತಿ ಮತ್ತು ವಿಷ್ಣುವಿನ ಲಿಂಗ ಇವುಗಳ ಸಮನ್ವಯಕ್ಕೋಸ್ಕರ ವಿಷ್ಣುವಿಗೆ ಇಂದ್ರಾದಿ ದೇವತೆಗಳಿಂದ ಐಕ್ಯವನ್ನು ಒಂದು ವೇಳೆ ಹೇಳುವುದಾದರೆ. 'ಆಕಾಶಾದೇವ ಸಮುತ್ಪದ್ಯಂತೇ'' 'ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ' ಇತ್ಯಾದಿ ಶ್ರುತಿಗಳಲ್ಲಿಯೂ ಅಲ್ಲಿರುವ ಶ್ರುತಿ ಲಿಂಗಗಳ ಸಮನ್ವಯಕ್ಕೋಸ್ಕರ ಮೀಮಾಂಸಾಶಾಸ್ತ್ರದ ಮರ್ಯಾದೆಯನ್ನು ಮೀರಿ ಬೇರೇನನ್ನೋ ಹೇಳಬೇಕಾಗುತ್ತದೆ.

ಹಾಗೆಯೇ 'ಸ ಬ್ರಹ್ಮ ಸ ಶಿವಃ' ಇತ್ಯಾದಿ ಐಕ್ಯವನ್ನು ಹೇಳುವಂತೆ ತೋರುವ ಶ್ರುತಿಗಳಿಗೂ ಆಯಾ ಶಬ್ದವಾಚ್ಯತ್ವವನ್ನೇ ಹೇಳಬೇಕು. ಇಲ್ಲದಿದ್ದರೆ 'ಸೋಽಕ್ಷರಃ' ಎಂದು ಮುಂದಿನ ಭಾಗದಲ್ಲಿ ಪ್ರಸಿದ್ಧವಾದ ಜಡವಾದ ಅಕ್ಷರಗಳೊಂದಿಗೆ ವಿಷ್ಣುವಿಗೆ ಐಕ್ಯವನ್ನು ಹೇಳಬೇಕಾದೀತು. ಐಕ್ಯವನ್ನು ಹೇಳುವಂತೆ ತೋರುವ ಸ್ಮೃತಿಗಳಿಗೂ, ಅವನ ಅಧೀನತ್ವ ನಿಮಿತ್ತವಾಗಿ ಅಥವಾ ಅತ್ಯಂತ ಪ್ರಿಯ ಎನ್ನುವ ಅರ್ಥದಲ್ಲಿ ಹಾಗೆ ಹೇಳುತ್ತವೆ ಎಂದು ಅರ್ಥೈಸಬೇಕು.

ಪರಿಪೂರ್ಣಚಂದ್ರಿಕಾ

ಹೀಗೆ ಇಂದ್ರ ಮುಂತಾದ ಶಬ್ದಗಳು ವಿಷ್ಣುವಿನಲ್ಲಿ ಮುಖ್ಯವಾಗಿದ್ದರೂ ಬಾಧಕವಿದ್ದಾಗ ಆಯಾ ದೇವತೆಗಳನ್ನು ಹೇಳುತ್ತವೆ ಎಂದಿಟ್ಟುಕೊಳ್ಳಬಹುದು. ಲಿಂಗಗಳನ್ನು ಪಾದಾಂತ್ಯ ಪ್ರಾಣಾಧಿಕರಣ ನ್ಯಾಯದಂತೆ ಅಂತರ್ಯಾಮಿ ಪರವಾಗಿ ಅರ್ಥೈಸಿದಾಗ ವಿಷ್ಣುವಿನಲ್ಲೇ ಮುಖ್ಯವಾಗುತ್ತವೆ. ಹಾಗಾಗಿ ಮೂರು ರೀತಿಯ ಪೂರ್ವಪಕ್ಷವೂ ಅನುಚಿತ.

## 'ಭೇದವ್ಯಪದೇಶಾತ್' ಎಂಬ ಸೂತ್ರಾಶಯದ ನಿರೂಪಣೆ

ಹಿಂದೆ ಹೇಳಿದ ಮೂರು ರೀತಿಯ ಪೂರ್ವಪಕ್ಷಗಳಲ್ಲಿ ಮೊದಲಿನೆರಡನ್ನು ಈ ಅಧಿಕರಣದ ಮೊದಲನೆಯ ಸೂತ್ರದಿಂದ ಹಾಗೂ ಮೂರನೆಯ ಪೂರ್ವಪಕ್ಷವನ್ನು ಎರಡನೆಯ ಸೂತ್ರದಿಂದ ನಿರಾಕರಣೆ ಮಾಡಿದ್ದಾರೆ. ಎರಡನೆಯ ಸೂತ್ರದಲ್ಲಿ ಹೇಳಿರುವ ಭೇದವ್ಯಪದೇಶವು ಕೂಡುವುದಿಲ್ಲ. ಏಕೆಂದರೆ ಆ ಸೂತ್ರದ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಲ್ಲಿ ಆತ್ಮಶಬ್ದಕ್ಕೆ ಸ್ವರೂಪವೆಂದು ಅರ್ಥವಿಟ್ಟುಕೊಂಡಾಗ ಐಕ್ಯವ್ಯಪದೇಶವೇ ಯುಕ್ತವಾಗುತ್ತದೆನ್ನುವುದು ಸರಿಯಲ್ಲ. ಹಾಗೆ ಹೇಳಿದರೆ ಅನೇಕ ಶ್ರುತಿಗಳಲ್ಲಿ 'ಆತ್ಮ' ಶಬ್ದವನ್ನು ಅಂತರ್ಯಾಮಿಯಲ್ಲಿ ಬಳಸಿರುವುದು ಕೂಡುವುದಿಲ್ಲ. ಹಾಗಾಗಿ ಇಲ್ಲಿಯೂ ಕೂಡ ಆತ್ಮಶಬ್ದಕ್ಕೆ ಸ್ವರೂಪವೆಂದರ್ಥವಿಟ್ಟುಕೊಳ್ಳದೆ ಅಂತರ್ಯಾಮಿ ಎಂದೇ ಅರ್ಥೈಸಬೇಕು. ಮತ್ತು ಸ್ವರೂಪವೆನ್ನಲು ಬಾಧಕವೂ ಇದೆ. ಹಾಗಾಗಿ ಸೂತ್ರಾರ್ಥ ಸರಿಯಾಗಿಯೇ ಇದೆ.

## ಮಾಯಾವಾದಿಗಳ 'ಅಧಿಕರಣರಚನಾ' ರೀತಿಯ ನಿರೂಪಣೆ

ಮಾಯಾವಾದಿಗಳು ಈ ಅಧಿಕರಣದಲ್ಲಿ ಬೇರೆ ಶ್ರುತಿಯನ್ನು ವಿಷಯವಾಕ್ಯವೆಂದು ಸ್ವೀಕರಿಸಿ. ರೂಪಾದಿ ಜೀವಧರ್ಮವಿರುವುದರಿಂದ ಜೀವನೆಂದು ಪೂರ್ವಪಕ್ಷ ಮಾಡಿ. ಜೀವನಲ್ಲಿ ಇಲ್ಲದಿರುವ ಸರ್ವಪಾಪರಾಹಿತ್ಯ ಸರ್ವಾತ್ಮಕತ್ವ ಮೊದಲಾದ ಗುಣಗಳನ್ನು ಶ್ರುತಿಯು ಹೇಳುತ್ತಿರುವುದರಿಂದ ಇದು ನಿರ್ಗುಣಬ್ರಹ್ಮವಿಷಯ ಎಂದು ಸಿದ್ಧಾಂತ ಮಾಡುತ್ತಾರೆ. ಹಾಗಾದರೆ ಜೀವಧರ್ಮಗಳಾದ ರೂಪಾದಿಗಳನ್ನು ಹೇಗೆ ಬ್ರಹ್ಮನಲ್ಲಿ ಕೂಡಿಸುತ್ತೀರಿ? ಎಂದರೆ ನಿರ್ಗುಣಬ್ರಹ್ಮನಲ್ಲಿ ರೂಪಾದಿಗಳು ಇಲ್ಲದಿದ್ದರೂ. ಮಂದಜನರ ಉಪಾಸನೆಗೋಸ್ಕರ ಸ್ವೀಕರಿಸಿರುವ ರೂಪವಾದ, 'ಸಗುಣ' ಬ್ರಹ್ಮನಲ್ಲಿ ಮಾಯಾಮಯವಾದ ರೂಪಾದಿಗಳು ಇರುವುದರಿಂದ ಕೂಡುತ್ತವೆ. ಅಥವಾ ಎಲ್ಲಾ ಕಾರ್ಯಪ್ರಪಂಚಕ್ಕೆ ಬ್ರಹ್ಮ ಉಪಾದಾನನಾದ್ದರಿಂದ, ಉಪಾದಾನದಿಂದ ಅಭಿನ್ನವಾದ ಕಾರ್ಯ ಪ್ರಪಂಚದಲ್ಲಿರುವ ರೂಪಾದಿಗಳನ್ನಿಟ್ಟುಕೊಂಡು. ಬ್ರಹ್ಮನಲ್ಲಿ ರೂಪಾದಿಗಳ ವ್ಯವಹಾರವು ಕೂಡುತ್ತದೆ. ಶಾಸ್ತ್ರದಲ್ಲಿ ನಿರ್ಗುಣಬ್ರಹ್ಮನ ಉಪಾಸನೆಗೋಸ್ಕರ ಸಗುಣಬ್ರಹ್ಮನ ಉಪದೇಶವಿದೆ ಎಂದು ಹೇಳುತ್ತಾರೆ.

## ರಾಮಾನುಜರ ಅಧಿಕರಣರಚನಾ ರೀತಿಯ ಅನುವಾದ

ರಾಮಾನುಜಭಾಷ್ಯದಲ್ಲಿ ಈ ಅಧಿಕರಣದಲ್ಲಿ ಮಾಯಾವಾದಿಗಳು ಹೇಳುವ ವಿಷಯವಾಕ್ಯವನ್ನಿಟ್ಟುಕೊಂಡು ಅವರು ಹೇಳಿದಂತೆಯೇ ಜೀವನೆಂದು ಪೂರ್ವಪಕ್ಷ ಮಾಡಿ ಶ್ರುತಿಯಲ್ಲಿ ಹೇಳಿದ 'ಪುಂಡರೀಕಾಕ್ಷತ್ವವು' ಜೀವನಿಗೆ ಕೂಡುವುದಿಲ್ಲವಾದ್ದರಿಂದ ಪರಮಾತ್ಮನೆಂದು ಸಿದ್ಧಾಂತ ಮಾಡುತ್ತಾರೆ. ಆದರೆ ಅವರಿಬ್ಬರು ಹೇಳಿದ್ದೂ ಸರಿಯಿಲ್ಲ. ನಾವು ಹೇಳಿದಂತೆ ಆನಂದಮಯಾಧಿಕರಣಕ್ಕೆ ಸಂಗತವಾದ ಭೇದವ್ಯಪದೇಶವಿರುವ ಶ್ರುತಿಯನ್ನು ವಿಷಯವಾಕ್ಯವಾಗಿ ಮಾಡಲು ಬರುವಾಗ ಅವರ ವಾಕ್ಯವನ್ನು ವಿಷಯವಾಕ್ಯವೆನ್ನುವುದು ಸರಿಯಲ್ಲ.

## ಅದ್ವೈತಮತದ ವಿಶೇಷದೋಷಗಳ ನಿರೂಪಣೆ

ಮಾಯಾವಾದಿಗಳ ರೀತಿಯಿಂದ ಈ ಅಧಿಕರಣವನ್ನು ವ್ಯಾಖ್ಯಾನಿಸಿದರೆ ಮತ್ತೊಂದು ದೋಷವನ್ನು

ಹೇಳುತ್ತಾರೆ. ನಿರೂಪನಾದ ಬ್ರಹ್ಮನಲ್ಲಿ ಉಪಾಸನೆಗೋಸ್ಕರ ಕಲ್ಪಿತವಾದ ರೂಪವನ್ನು ಹೇಳುವುದಾದರೆ ಜೀವನಲ್ಲಿಯೂ ಕಲ್ಪಿತವಾದ ಬ್ರಹ್ಮನ ಧರ್ಮಗಳನ್ನಿಟ್ಟುಕೊಂಡು ಕೂಡಿಸಬಹುದು. ಹಾಗಾಗಿ ಅವರ ಸಿದ್ಧಾಂತವೇ ಕೂಡುವುದಿಲ್ಲ. ಅದಕ್ಕೆ ಬ್ರಹ್ಮನಲ್ಲಿ ಕಲ್ಪಿಸಿದ ರೂಪಾದಿಗಳು ವ್ಯಾವಹಾರಿಕವಾದವುಗಳು. ಆದರೆ ಜೀವನಲ್ಲಿ ಕಲ್ಪಿಸುವ 'ಪಾಪರಾಹಿತ್ಯಾದಿಗಳು' ನಮ್ಮ ಸಿದ್ಧಾಂತದಂತೆ ಪ್ರಾತಿಭಾಸಿಕವಾಗುತ್ತವೆ. ಹಾಗಾದಾಗ ಶ್ರುತಿಗೆ ಅಪ್ರಾಮಾಣ್ಯಬರುತ್ತದೆ. ಆದ್ದರಿಂದ ನಾವು ಹೇಳಿದಂತೆಯೇ ಸಿದ್ಧಾಂತ ಮಾಡಬೇಕು ಎಂದು ಹೇಳಬಹುದು. ಆದರೆ ನಿಮ್ಮ ನ್ಯಾಯದಂತೆಯೇ ಬ್ರಹ್ಮನಲ್ಲಿ ಕಲ್ಪಿಸುವ ಧರ್ಮಗಳನ್ನು ಪ್ರಾತಿಭಾಸಿಕ ಎಂದು ಒಪ್ಪುವುದು ಅನಿವಾರ್ಯ. ಮತ್ತು ಶ್ರುತಿಯನ್ನು ಪ್ರಮಾಣವೆನ್ನುವುದಾದರೆ ಶ್ರುತಿಯಲ್ಲಿ ಹೇಳುವ ಧರ್ಮಗಳು ಜೀವನದ್ದಾಗಿರಲಿ ಅಥವಾ ಬ್ರಹ್ಮನದ್ದಾಗಿರಲಿ ಎರಡನ್ನೂ ತಾತ್ವಿಕವೆಂದೇ ಹೇಳಬೇಕು. ಹಾಗಾಗಿ ಜೀವನಲ್ಲಿಯೇ ಈ ಶ್ರುತಿಯನ್ನು ಕೂಡಿಸಬಹುದು.

### ಅದ್ವೈತಿಗಳು ಬ್ರಹ್ಮನ ಗುಣಗಳನ್ನು ಒಪ್ಪಲೇಬೇಕಾದ ಅನಿವಾರ್ಯತೆಯ ನಿರೂಪಣೆ

ಕಾರ್ಯಕಾರಣಗಳಲ್ಲಿ ಅಭೇದವಿರುವುದರಿಂದ ಬ್ರಹ್ಮೋಪಾದಾನಕವಾದ ಕಾರ್ಯದಲ್ಲಿರುವ ರೂಪಾದಿಗಳನ್ನಿಟ್ಟುಕೊಂಡು ಬ್ರಹ್ಮನಲ್ಲಿ ರೂಪಾದಿಗಳ ವ್ಯವಹಾರವಿದೆ ಎಂದರೆ. ಅದೇ ನ್ಯಾಯದಿಂದ ಬ್ರಹ್ಮನ ಧರ್ಮಗಳು ಜೀವನಲ್ಲಿವೆ ಎನ್ನಲು ಬರುತ್ತದೆ. ಬ್ರಹ್ಮನು ಕಾರ್ಯರೂಪ ಪ್ರಪಂಚದ ಅಧಿಷ್ಠಾನ ಎಂದಾಗಿದ್ದರೆ ಕಾರ್ಯದ ಧರ್ಮ ಬ್ರಹನಲ್ಲಿ ಹೇಳಬಹುದು. ಬ್ರಹ್ಮನ ಧರ್ಮ ಕಾರ್ಯದಲ್ಲಿ ಹೇಳಲು ಬರುವುದಿಲ್ಲವೆನ್ನಬಹುದಿತ್ತು. ಮತ್ತು ನಿಮ್ಮ ರೀತಿಯಿಂದ ವ್ಯವಹಾರ ಕೂಡಿಸುವುದಾದರೆ. ಬ್ರಹ್ಮನು ವಿರುದ್ಧವಾದ ಅನೇಕ ಕಾರ್ಯಗಳಿಗೆ ಉಪಾದಾನನಾದ್ದರಿಂದ ಬ್ರಹ್ಮನ ಕುರಿತ ವಾಕ್ಯಗಳಲ್ಲಿ ವಿರೋಧ ಬಂದರೆ ಹೀಗೆಯೇ ಹೇಳಿ ಕೂಡಿಸಲು ಬರುವುದರಿಂದ ಅದಕ್ಕೋಸ್ಕರ ಮೀಮಾಂಸಾ ಶಾಸ್ತ್ರ ಹೊರಟಿದ್ದು ವ್ಯರ್ಥವಾಗುತ್ತದೆ.

### ಅದ್ವೈತಿಗಳ 'ಸವಿಶೇಷ ನಿರ್ವಿಶೇಷ' ಕಲ್ಪನೆಯ ವಿಸ್ತಾರ ನಿರಾಕರಣೆ

ಮೋಕ್ಷಸಾಧನವಾದ ನಿರ್ವಿಶೇಷಜ್ಞಾನಕ್ಕೋಸ್ಕರ ಮಂದರಿಗೆ ಸವಿಶೇಷದ (ಸಗುಣ ಬ್ರಹ್ಮನ) ನಿರೂಪಣೆ ಮಾಡಿದ್ದಾರೆಂದು ಹೇಳುವುದು ಸರಿಯಲ್ಲ. ಶ್ರುತಿಯಲ್ಲಿ ಹೇಳಿರುವ ಫಲವನ್ನು ಬಿಟ್ಟು ಬೇರೆಯದನ್ನು ಕಲ್ಪನೆ ಮಾಡುವುದು ಸರಿಯಲ್ಲ, ಮತ್ತು ಸವಿಶೇಷಬ್ರಹ್ಮನ ಜ್ಞಾನ ನಿರ್ವಿಶೇಷಬ್ರಹ್ಮನ ಜ್ಞಾನಕ್ಕೆ ಎಂದರೆ ವಿಶಿಷ್ಟಜ್ಞಾನಕ್ಕಿಂತಲೂ ಪೂರ್ವದಲ್ಲಿ ವಿಶಿಷ್ಟಜ್ಞಾನವಿರುವುದು ನಿಯಮವಾದ್ದರಿಂದ ನಿರ್ವಿಶೇಷದ ಜ್ಞಾನ ಪೂರ್ವದಲ್ಲಿಯೇ ಬಂದಿದೆ, ಮತ್ತು ಈ ಎರಡು ಜ್ಞಾನಗಳಿಗೆ ನಿಮ್ಮ ಮತದಂತೆ ಕಾರ್ಯಕಾರಣಭಾವವೂ ಕೂಡುವುದಿಲ್ಲ. ಇನ್ನು ಬ್ರಹ್ಮನ ಧ್ಯಾನಕ್ಕೆ ಎಂದು ಹೇಳುವುದಾದರೆ ಧ್ಯಾನವೆಂದರೆ ಅದೂ ಒಂದು ಜ್ಞಾನದ ಪ್ರಕಾರವೇ ಆಗಿದೆಯಾದ್ದರಿಂದ ಹಿಂದಿನ ಪಕ್ಷದಲ್ಲಿ ಹೇಳಿದ ದೋಷಗಳು ಇದ್ದೇ ಇವೆ, ಮತ್ತು ಧ್ಯಾನವನ್ನು ಕಲ್ಪಿಸಿಯೂ ಮಾಡಬಹುದಾದ್ದರಿಂದ ಅದಕ್ಕೋಸ್ಕರ ರೂಪವನ್ನು ಬ್ರಹ್ಮನು ಸ್ವೀಕರಿಸಿದ ಎಂದು ಹೇಳುವುದೂ ಸರಿಯಲ್ಲ. ಸವಿಶೇಷ ಬ್ರಹ್ಮನ ಜ್ಞಾನಕ್ಕೋಸ್ಕರವೇ ನಿರ್ವಿಶೇಷ ಬ್ರಹ್ಮನ ನಿರೂಪಣೆ ಮಾಡಿದ್ದಾರೆಂದೂ ವಿಪರೀತವಾಗಿ ಹೇಳಬಹುದು. ಆದ್ದರಿಂದ ಹೀಗೆ ಹೇಳುವುದು ಸರಿಯಲ್ಲ.

ಈ ಅಧಿಕರಣದಲ್ಲಿ ಮಾಯವಾದಿಗಳ ರೀತಿಯಲ್ಲಿ ಅರ್ಥೈಸಿದಾಗ ಅಂತರಧಿಕರಣದಿಂದ ಗತಾರ್ಥತ್ವವಿದೆ. ನಮ್ಮ ರೀತಿಯಿಂದ ವ್ಯಾಖ್ಯಾನ ಮಾಡಿದರೆ ಇಲ್ಲ ಎನ್ನುವುದನ್ನು ಅಂತರಧಿಕರಣದಲ್ಲಿ ತೋರಿಸಿದೆ.

ಪರಿಪೂರ್ಣಚಂದ್ರಿಕಾ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ अन्तस्थत्वाधिकरणम्

### ಸಂಗತಿ ಮೊದಲಾದವುಗಳ ನಿರೂಪಣೆ

ॐ अन्तस्तद्धर्मोपदेशात् ॐ ।। अत्रान्तस्स्थत्वलिङ्गसमन्वयस्याधिदैवगतेन्द्रादिनामसमन्वयार्थत्वात् पादसङ्गतिरिति टीकायामेवोक्तम् । अनन्तरसङ्गतिस्तु – आनन्दमयधर्मस्यादृश्यत्वस्यान्तस्स्थे श्रवणादन्तस्स्थस्य चाविष्णुत्वादानन्दमयोऽपि न विष्णुरिति पूर्वसिद्धान्ताक्षेपेणेह पूर्वपक्षोत्थानादाक्षेपिकी ।

इयं च "अदृश्येऽनात्म्ये" इत्यादिभाष्य एवोक्ता । न चैतद्भाष्यं "ब्रह्मजिज्ञासा कर्तव्येत्युक्तम्" इत्यानन्दमयाधिकरणभाष्यवत् प्रयोजनप्रदर्शनमात्रपरम्, "अन्तः प्रविष्टं कर्तारम्" "अन्तः प्रविष्टश्शास्ता जनानाम्" इति अन्तस्स्थे श्रुतस्य कर्तृत्वादेः पूर्वपक्षे अन्यनिष्ठत्वेन जन्मादिसूत्राक्षेपस्य, "सर्वे वेदा यत्रैकं भवन्ति" इति अन्तस्स्थे श्रुतस्य सर्ववेदप्रतिपाद्यत्वस्याप्यन्यनिष्ठत्वेन शास्त्रयोनिसमन्वयसूत्राक्षेपस्यापि सम्भवेन प्रयोजनस्यान्यथाऽप्युपपत्तेः ।

यद्वा – युक्तमानन्दमयशब्दो विष्णुपर इति, तस्यार्थविशेषे निरूढ्यभावात् । इन्द्रादिशब्दास्तु अर्थविशेषे निरूढाः नान्यत्र नेतुं शक्याः । उक्तं हि –

पदमज्ञातसम्बन्धं प्रसिद्धैरपृथक्छ्रुतैः ।
निर्णीयते निरूढन्तु न स्वार्थादपनीयते ।।

इति । निरूढोऽप्यन्नशब्दः "अद्यतेऽत्ति च" इति श्रुत्युक्तस्य योगस्य अन्यत्रासम्भवात् ब्रह्मपरः । इन्द्रादिशब्दानां तु इह श्रुतौ योगो नोक्तः ।

**यौगिकार्थश्चैश्वर्यादिः देवतासु सम्भवतीति पूर्वाधिकरणवैषम्येण पूर्वपक्षोत्थानात् सङ्गतिः । आकाशाद्यधिकरणेषु आकाशादिशब्दानामन्यत्र रूढ्या पूर्वपक्षेऽपि तेषामेतदधिकरणानन्तर्ये हेतुर्वक्ष्यते ।**

ಅನುವಾದ - ಓಂ ಅಂತಸ್ತದ್ಧರ್ಮೋಪದೇಶಾತ್ ಓಂ ॥ ''ಅಂತಸ್ಥತ್ವ''ಎಂಬ ಲಿಂಗವನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಈ ಒಂದು ಲಿಂಗವನ್ನು ಸಮನ್ವಯ ಮಾಡುವುದರಿಂದ ಅಧಿದೈವಗತವಾದ ಇಂದ್ರಾದಿ ಸಕಲದೇವತೆಗಳ ನಾಮಗಳನ್ನು ಸಮನ್ವಯ ಮಾಡಿದಂತಾಗುತ್ತದೆ. ಹೀಗೆ ನಾಮಸಮನ್ವಯದಲ್ಲಿ ಪರ್ಯವಸಾನವಾಗುವುದರಿಂದ ನಾಮಪಾದದಲ್ಲಿ ಈ ಅಧಿಕರಣವು ಸಂಗತವಾಗಿದೆ. ಈ ಸಂಗತಿಯನ್ನು ಟೀಕೆಯಲ್ಲಿಯೇ ಹೇಳಿದ್ದಾರೆ. ಹಿಂದಿನ ಅಧಿಕರಣದಿಂದ ಆಕ್ಷೇಪಿಕೀಸಂಗತಿಯನ್ನು ತಿಳಿಯಬೇಕು. ಅದು ಹೀಗೆ - ಅದೃಶ್ಯತ್ವವು ಆನಂದಮಯನ ಧರ್ಮ. ಅದೇ ಅದೃಶ್ಯತ್ವವು ಅಂತಸ್ಥನಲ್ಲೂ ಕೇಳಿಸುತ್ತಿದೆ. ಅಂತಸ್ಥನಾದರೂ ವಿಷ್ಣುವೇ ಆಗಿದ್ದಾನೆನ್ನಲು ಆಧಾರಗಳಿಲ್ಲ. ವಿಷ್ಣುವು ಅಂತಸ್ಥನಾಗದ ಕಾರಣ ಆನಂದಮಯನೂ ಆಗಲಾರ. ಹೀಗೆ ಆನಂದಮಯಾಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಆಕ್ಷೇಪಿಕೀಸಂಗತಿಯು ಸ್ಪಷ್ಟವಾಗುತ್ತದೆ. ಈ ಆಕ್ಷೇಪಿಕೀಸಂಗತಿಯನ್ನು ''ಅದೃಶ್ಯೇऽನಾತ್ಮ್ಯೇ'' ಎಂಬ ಭಾಷ್ಯದಲ್ಲಿ ಹೇಳಿದ್ದಾರೆ.

ಪ್ರಶ್ನೆ - ''ಅದೃಶ್ಯೇऽನಾತ್ಮ್ಯೇ'' ಎಂಬ ಭಾಷ್ಯವು ಆನಂದಮಯಾಧಿಕರಣದಿಂದ ಪ್ರಯೋಜನವನ್ನು ತೋರಿಸಲು ಹೊರಟಿದೆ, ಹೊರತು ಸಂಗತಿ ತೋರಿಸುವುದಕ್ಕಾಗಿ ಅಲ್ಲ. ಯಾವ ರೀತಿಯಾಗಿ ''ಬ್ರಹ್ಮಜಿಜ್ಞಾಸಾ ಕರ್ತವ್ಯೇತ್ಯುಕ್ತಮ್'' ಎಂಬ ಆನಂದಮಯಾಧಿಕರಣಭಾಷ್ಯವು ಜಿಜ್ಞಾಸಾಧಿಕರಣದಿಂದ ಆನಂದಮಯಾಧಿಕರಣಕ್ಕೆ ಪ್ರಯೋಜನವನ್ನಷ್ಟೇ ಹೇಳುತ್ತಿದೆಯೋ, ಅದರಂತೆ ಈ ಅಧಿಕರಣದ ಸಂಗತಿಭಾಷ್ಯವೂ ಕೂಡ ಆನಂದಮಯಾಧಿಕರಣದಿಂದ ಪ್ರಯೋಜನವನ್ನಷ್ಟೇ ಹೇಳುತ್ತಿದೆಯೆಂದು ಏಕೆ ವ್ಯಾಖ್ಯಾನಿಸಬಾರದು?

ಉತ್ತರ - ಹೀಗೆ ಜಿಜ್ಞಾಸಾಧಿಕರಣದಿಂದ ಪ್ರಯೋಜನವನ್ನು ತೋರಿಸುವುದಾದರೆ ಜನ್ಮಾದ್ಯಧಿಕರಣ ಮತ್ತು ಶಾಸ್ತ್ರಯೋನಿತ್ವಾಧಿಕರಣದಿಂದಲೂ ಕೂಡ ಪ್ರಯೋಜನವನ್ನು ತೋರಿಸಬಹುದು. ಹೇಗಂದರೆ ''ಅಂತಃಪ್ರವಿಷ್ಟಂ ಕರ್ತಾರಂ ಅಂತಃಪ್ರವಿಷ್ಟಃ ಶಾಸ್ತಾ ಜನಾನಾಮ್'' ಎಂದು ಅಂತಸ್ಥನಲ್ಲಿ ಕರ್ತೃತ್ವವು ಕೇಳಿಸುತ್ತಿದೆ. ಅಂತಸ್ಥನು ವಿಷ್ಣುವಲ್ಲದ ಕಾರಣ ಜಗತ್ಕರ್ತೃತ್ವವು ವಿಷ್ಣುವಿನಲ್ಲಿ ಹೇಳಲಾಗದು. ಹೀಗೆ ಜನ್ಮಾದಿಸೂತ್ರದಲ್ಲಿ ಹೇಳಿದ ಜಗತ್ಕರ್ತೃತ್ವವನ್ನು ಇಲ್ಲಿ ಆಕ್ಷೇಪಿಸಬಹುದಾದ್ದರಿಂದ ಜನ್ಮಾದಿಸೂತ್ರದಿಂದ ಅಂತಸ್ಥತ್ವಾಧಿಕರಣಕ್ಕೆ ಪ್ರಯೋಜನವನ್ನು ಹೇಳಬಹುದು. ಮತ್ತು ''ಸರ್ವೇ ವೇದಾ ಯತ್ರೈಕಂ ಭವಂತಿ'' ಎಂದು ಅಂತಸ್ಥನಲ್ಲಿ ಸರ್ವವೇದಪ್ರತಿಪಾದ್ಯತ್ವವು ಕೇಳಿಸುತ್ತಿದೆ. ಅಂತಸ್ಥನು ವಿಷ್ಣುವಲ್ಲದ ಕಾರಣ ಸರ್ವವೇದಪ್ರತಿಪಾದ್ಯನು ಬೇರೆಯವನೇ ಆಗುತ್ತಾನೆ. ಹೀಗೆ ಜಿಜ್ಞಾಸಾಧಿಕರಣದಂತೆ ಉಳಿದ

ಅಧಿಕರಣಗಳಿಂದಲೂ ಪ್ರಯೋಜನವನ್ನು ತೋರಿಸಬಹುದಾದ್ದರಿಂದ ನೀವು ಆಕ್ಷೇಪಿಸಿದ ಪ್ರಯೋಜನವು ಅನ್ಯಥಾಸಿದ್ಧವಾಗಿದೆ. ಅಥವಾ ಆನಂದಮಯಶಬ್ದವು ವಿಷ್ಣುಪರವಾಗಲಿ ಯಾವುದೇ ಒಂದು ವಿಶೇಷಾರ್ಥದಲ್ಲಿ ಆನಂದಮಯಶಬ್ದವು ನಿರೂಢವಾಗಿಲ್ಲ. ಆದರೆ ಇಂದ್ರಾದಿಶಬ್ದಗಳು ಇಂದ್ರಾದಿದೇವತೆಗಳಲ್ಲಿ ನಿರೂಢವಾಗಿದ್ದರಿಂದ ಬೇರೆ ಅರ್ಥವನ್ನು ಹೇಳಲಾಗದು. ಇದನ್ನೇ ಮೀಮಾಂಸಾಗ್ರಂಥವಾದ ನಯವಿವೇಕದಲ್ಲಿ ಹೇಳಿದ್ದಾರೆ -

ಪದಮಜ್ಞಾತಸಂಬದ್ಧಂ ಪ್ರಸಿದ್ಧೈರಪೃಥಕ್ಶ್ರುತೈಃ ।
ನಿರ್ಣೀಯತೇ ನಿರೂಢಂ ತು ನ ಸ್ವಾರ್ಥಾದಪನೀಯತೇ ॥

ಯಾವ ಪದದ ಅರ್ಥವು ತಿಳಿದಿರುವುದಿಲ್ಲವೋ ಮತ್ತು ಸಂದಿಗ್ಧವಾಗಿರುತ್ತದೋ ಅಂತಹ ಪದವನ್ನು ವಾಚ್ಯವಾಚಕಭಾವಸಂಬಂಧಪದವುಳ್ಳ ಮತ್ತೊಂದು ಪದದಿಂದ ನಿರ್ಣಯಿಸಬೇಕು. ಅಥವಾ ಸಹಶ್ರುತವಾದ ಶಬ್ದಗಳಿಂದಲೂ ನಿರ್ಣಯಿಸಬಹುದು. (ಪ್ರಕೃತ ಆನಂದಮಯಶಬ್ದದ ಅರ್ಥವನ್ನು ಸಹಶ್ರುತವಾದ ಬ್ರಹ್ಮಾದಿಶಬ್ದಗಳಬಲದಿಂದ ವಿಷ್ಣುವೆಂದು ನಿರ್ಣಯಿಸಬಹುದು) ಆದರೆ ನಿರೂಢವಾದ ಪದದಲ್ಲಿ ಸಂಬಂಧವು ನಿಶ್ಚಿತವಾದ್ದರಿಂದ ಇನ್ನೊಂದು ಪದದಿಂದ ಸ್ವಾರ್ಥವನ್ನು ಬಿಡಬಾರದು.

ಅನ್ನಶಬ್ದವು ಅನ್ನಾದಿಗಳಲ್ಲಿ ರೂಢವಾಗಿರಬಹುದು. ಆದರೆ ''ಅದ್ಯತೇ ಅತ್ತಿ ಚ'' ಇತ್ಯಾದಿ ಶ್ರುತಿಯಲ್ಲಿ ಹೇಳಿದ ಯೋಗವು ಬ್ರಹ್ಮನನ್ನು ಬಿಟ್ಟು ಬೇರೆಲ್ಲಿಯೂ ಬರಲಾರದು. ಆದ್ದರಿಂದ ಅನ್ನಶಬ್ದವು ಬ್ರಹ್ಮಪರವೆಂಬ ವಿಷಯದಲ್ಲಿ ಸಂಶಯವಿಲ್ಲ. ಇದರಂತೆ ಇಂದ್ರಾದಿಶಬ್ದಗಳಲ್ಲಿ ಹೇಳಲಾಗದು. ಯಾವುದೇ ಶ್ರುತಿಯಲ್ಲಿ ಅನ್ನಶಬ್ದಕ್ಕೆ ಹೇಳಿದಂತೆ ಇಂದ್ರಾದಿಶಬ್ದಗಳಿಗೆ ಯೋಗವನ್ನು ಹೇಳಿಲ್ಲ. ''ಪರಮೈಶ್ವರ್ಯ''ವು ಇಂದ್ರಶಬ್ದದ ಪ್ರವೃತ್ತಿನಿಮಿತ್ತವಾಗಿರಬಹುದು. ಇದನ್ನು ಬ್ರಹ್ಮನಂತೆ ಇಂದ್ರನಲ್ಲಿಯೂ ಸಹ ಹೇಳಬಹುದು. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಸಮನ್ವಯ ಮಾಡಿದ ಆನಂದಮಯಾದಿಶಬ್ದಗಳು ಯೌಗಿಕವಾದ್ದರಿಂದ ಬ್ರಹ್ಮಪರವಾಗಬಹುದು. ಆದರೆ ಅನ್ಯತ್ರ ನಿರೂಢವಾದ ಇಂದ್ರಾದಿಶಬ್ದಗಳು ಬ್ರಹ್ಮಪರವಾಗುವುದಿಲ್ಲ. ಹೀಗೆ ಹಿಂದಿನ ಅಧಿಕರಣದಿಂದ ವಿಷಮವಾಗಿ ಪೂರ್ವಪಕ್ಷವು ಹುಟ್ಟುತ್ತದೆ. ಆದ್ದರಿಂದ ಪ್ರತ್ಯುದಾಹರಣರೂಪವಾದ ಸಂಗತಿಯನ್ನು ತಿಳಿಯಬೇಕು.

ಪ್ರಶ್ನೆ - ಆಕಾಶಾಧಿಕರಣವೇ ಮೊದಲಾದ ಅಧಿಕರಣಗಳಿಗೂ ಈ ತರಹದ ಸಂಗತಿಯನ್ನು ಹೇಳಬಹುದಾದ್ದರಿಂದ ಆನಂದಮಯಾಧಿಕರಣದ ಅನಂತರ ಅಂತಸ್ಥತ್ವಾಧಿಕರಣವನ್ನೇ ಏಕೆ ಹೇಳಬೇಕು? ಆಕಾಶಾಧಿಕರಣವನ್ನೇಕೆ ಹೇಳಬಾರದು?

ಉತ್ತರ - ಹೌದು, ಆದರೆ ಆನಂದಮಯಾಧಿಕರಣದ ಅನಂತರ ಅಂತಸ್ಥತ್ವಾಧಿಕರಣವೇ ಸಂಗತವಾಗುತ್ತದೆ. ಅಂತಸ್ಥತ್ವಾಧಿಕರಣದ ಅನಂತರ ಆಕಾಶಾಧಿಕರಣವು ಸಂಗತವಾಗುತ್ತದೆ. ಪ್ರತಿಯೊಂದು ಅಧಿಕರಣಗಳ ಜೋಡಣೆಗಳಲ್ಲಿಯೂ ಹಲವು ಕಾರಣಗಳಿವೆ. ಅದರ ಬಗ್ಗೆ ಆಯಾ ಅಧಿಕರಣಗಳಲ್ಲಿಯೇ ತಿಳಿಯೋಣ.

*ಅಂತಸ್ಥತ್ವಾಧಿಕರಣ*

**ಕಠಿಣಪದಾರ್ಥ**

ಉಕ್ತಂ = ಈ ಅಧಿಕರಣದ ಕೊನೆಯಲ್ಲಿ ಹೇಳಿದ್ದಾರೆ, ಏತದ್‌ಭಾಷ್ಯಮ್ = ಅಂತಸ್ತದ್ಧರ್ಮಾಧಿಕರಣದ ಭಾಷ್ಯವು, ಉಕ್ತಮ್ ಹಿ = ಮೀಮಾಂಸಕರ ನಯವಾರ್ತಿಕದ ಉದ್ಭಿದಧಿಕರಣದಲ್ಲಿ ಹೇಳಲ್ಪಟ್ಟಿದೆ, ಪ್ರಸಿದ್ಧೈಃ = ತಿಳಿಯಲ್ಪಟ್ಟ ವಾಚ್ಯವಾಚಕಭಾವ ಸಂಬಂಧವುಳ್ಳ, ಅಪೃಥಕ್ ಶ್ರುತೈಃ = ಒಟ್ಟಿಗೆ ಕೇಳಿಸಲ್ಪಟ್ಟ, ನಿರೂಢಮ್ = ತಿಳಿಯಲ್ಪಟ್ಟ ಸಂಬಂಧವುಳ್ಳ ಪದವು, ನಿರೂಢೋಽಪಿ = ತಿನ್ನುವ ಅನ್ನದಲ್ಲಿ ರೂಢವಾಗಿದ್ದರೂ, ಅನ್ಯತ್ರ = ತಿನ್ನುವ ಅನ್ನದಲ್ಲಿ, ಸಂಗತಿಃ = ಪ್ರತ್ಯುದಾಹರಣರೂಪವಾದ ಸಂಗತಿಯು.

## ಶ್ರೀರಾಘವೇಂದ್ರತೀರ್ಥವಿರಚಿತ

# ಪ್ರಕಾಶ

**प्रकाशः – ॐ अन्तस्तद्धर्मोपदेशात् ॐ** ।। नन्वस्याधिकरणस्य ब्रह्मसमन्वयपरत्वेन शास्त्राध्यायान्तर्भावरूपसङ्गतिसम्भवेऽपि नात्र पादे निवेशो युज्यते, लिङ्गसमन्वयपरत्वादित्यत आह – **अत्रेति** ।। एतदधिकरणान्त उक्तमित्यर्थः । तथा च तद्व्याख्यानेन स्पष्टीकरिष्याम इति भावः । अनेनाधिदैवगताः सर्वेऽपि शब्दा उदाहरणमित्युक्तं भवति । इदानीं पूर्वाधिकरणसङ्गतिं भाष्यानुव्याख्याऽनुरोधेन चतुर्धाऽऽह – **अनन्तरेति** ।।

यद्यप्येकयैवालं, तथाऽपि विषयव्याप्त्यर्थमनेकसङ्गत्युक्तिरिति ध्येयम् । ''यदाह्येवैष एतस्मिन्नदृश्येऽनात्म्येऽनिरुक्तेऽनिलयनेऽभयं प्रतिष्ठां विन्दते अथ सोऽभयं गतो भवति'' इत्यत्र ''एतस्मिन्'' इति प्रकृतानन्दमयपरामर्शेनोक्तस्यानन्दमयधर्मस्यादृश्यत्वस्य ''अन्तश्चन्द्रमसि मनसा चरन्तं सहैव सन्तं न विजानन्ति देवाः'' इति वाक्ये कैमुत्यन्यायेन देवादिसर्वाज्ञेयत्वेनान्तस्स्थस्य श्रवणादित्यर्थः ।। **अविष्णुत्वादिति** ।। पूर्वपक्षन्यायेनेति भावः ।

नन्वन्तस्स्थस्याविष्णुत्वे आनन्दमयोऽप्यविष्णुरित्ययुक्तं, अन्तस्स्थस्याविष्णुत्वे अन्यत्र प्रसिद्धेन्द्रादिश्रुतिलिङ्गरूपविशेषहेतुवत्तत्र विशेषहेतोरभावादेवानन्दमयस्य तत्रत्यसिद्धान्तन्यायेन विष्णुत्वोपपत्तेः । न चादृश्यत्वं विशेषहेतुः, तस्य द्वयोरप्युपपत्त्या तादृशलिङ्गमात्रेण ''ब्रह्मशब्दात् समस्तात्तृत्वादिलिङ्गाच्च'' इत्याद्युक्तदिशा श्रुत्यादिप्रमाणषट्कावगतविष्णुत्वाक्षेपायोगात् । प्रत्युतोक्तरीत्या विष्णुलिङ्गतयाऽवगतादृश्यत्वेनान्तस्स्थस्यैव विष्णुत्वापत्तेश्च ।

न चान्तस्स्थत्वस्येन्द्रादिनिष्ठत्वेनावगतावन्तस्स्थत्वरूपगुहानिहितत्वस्यानन्दमयनिष्ठतया मान्त्रवर्णिकसूत्रेणोक्तेः वक्ष्यमाणदिशा सोऽप्यन्य एवेत्याक्षिप्यत इति वाच्यम्, तस्याप्युक्तदोषग्रस्तत्वादिति चेन्मैवं, अदृश्यपदेन निरतिशयवैभवस्य विवक्षिततया तस्य च द्विष्ठत्वायोगेनैकस्यैव वक्तव्यत्वात्तस्य चान्यत्र निरूढेन्द्रादिश्रुत्यादिबलेनान्यत्वेन निर्णीतान्तस्स्थनिष्ठतया तल्लिङ्गत्वावगमेन तद्युक्तानन्दमयोऽप्यन्य इत्याक्षेपसम्भवात् । ब्रह्मादिशब्दानां कथंचिदिन्द्रादावेव नेयत्वात् । तथा चावयवावयव्यभेदादिकं न क्लेशेन नेयम् । न च वैपरीत्यं, अत्रेन्द्रादिप्रापकश्रुतिलिङ्गानामन्यत्र निरूढत्वेन विष्णौ निरवकाशत्वात् । एकेन लिङ्गमात्रेणानेकनिरवकाशबाधायोगात् । अत एवोक्तं टीकायां – "न चादृश्यत्वलिङ्गेनान्तस्स्थो विष्णुः, श्रुत्यादिभ्यो लिङ्गमात्रस्य दुर्बलत्वात्" इति ।

किञ्चेन्द्रादीनां विष्णवभिन्नत्वेन विष्णुप्रापकाणां उपहितेन्द्रादाविव इन्द्रादिप्रापकाणामनुपहिते विष्णावयोगात्, काल्पनिकभेदाश्रयणाच्च अन्तस्स्थस्यान्यत्वे अत्रोक्तदिशा आनन्दमयोप्यविष्णुरित्याक्षेपसम्भवात् । प्रागुक्तभेदव्यपदेशस्याप्याक्षेपाच्च ।

केचित्त्वानन्दमयस्याविष्णुत्वशङ्कामात्रेण विष्णुत्वनिश्चयाक्षेपसम्भवात् तदभिप्रायेणेयमाक्षेपोक्तिः । अत एव टीकायां "आनन्दमयस्यान्यत्वप्रसङ्गात्" इति प्रसङ्गशब्द इत्याहुः ।

तेषां पक्षे "स एवानन्दमयः" इति भाष्यं कथं नेयमिति चिन्त्यम् । इयं च नाश्रद्धेयेत्याह – इयं चेति ॥

ननु यद्यानन्दमयाक्षेपकत्वेनास्य तदानन्तर्यं, तर्ह्याकाशाद्यधिकरणानामपि तदानन्तर्यं स्यात्, तेषामपि भाष्ये तदाक्षेपकत्वदर्शनादिति चेन्न, तद्भाष्यस्य फलमात्रपरत्वेन वक्ष्यमाणत्वात् । एतदानन्तर्यहेतोश्च दर्शयिष्यमाणत्वाच्चेति भावः । उक्तसङ्गतिपरत्वं भाष्यस्याक्षिप्य समाधत्ते – नचेति ॥

ननु ब्रह्मजिज्ञास्यमिति भाष्यावतारिकाटीकागतसङ्गतिपदस्यार्थद्वयं प्राग्व्याख्यातम् । तथा च तद्भाष्यवदेतद्भाष्यं प्रयोजनमात्रपरं नेति कथम्? उच्यते – पूर्वत्र प्रयोजनमात्रपरत्वव्याख्यानमेवाभिप्रेतम् । अत एव तत्रैवोपष्टम्भकोक्तिः ।

व्यवहितसङ्गतिपरत्वव्याख्यानं तु अन्यवहितसङ्गतिनिर्बन्धो नावश्यक इत्यर्थस्यावश्य-सूचनीयत्वात् तत्परतयाऽपि योजयितुं शक्यत इति भावेन सङ्गतिपरत्वे अन्यवहितसङ्गतिकथनसंभवे व्यवहितेन तदुक्तिरयुक्तेत्यरुच्यैव ''यद्वा'' इति पक्षान्तरोक्तिरिति । न चैवमतिदेशायोगः, अरुच्यंशतिरोधानेन तदुपपत्तेः ।

यद्वा – अरुचिग्रस्तस्याप्यस्यार्थस्यात्रोक्तिः किमर्थेत्यतोऽत्रानभिप्रेतत्वेऽप्य-न्यत्रोपयोगो भविष्यति, यत्र भाष्ये अन्यवहितपूर्वसङ्गतिरुच्यते तत्रेति भावेनातिदेशोपपत्तेः । अत एव पूर्वतन्त्रे 'कृत्वाचिन्तायाः फलमन्यत्रेति कृत्वाचिन्ताः प्रवर्तन्ते' इति, व्याकरणेऽपि ''नामि'' ''तृजकाभ्यां कर्तरि'' इत्यादौ सनुट्कामादिग्रहणस्य तत्रानुपयोगेऽपि ''नोपधायाः'' इत्यादावुपयोगः ।

यद्वा – अन्यवहितसङ्गतिपरत्वं मात्रपदव्यावर्त्यमिति न कश्चिद्दोषः ।। 'कर्तृत्वादेः' इत्यादिपदेन शास्तृत्वरूपनियामकत्वस्य ग्रहः ।

नन्वत्र कर्तृत्वमेव श्रुतं, न तु सर्वकर्तृत्वम् । तथा च प्रागुक्तसर्वकर्तृत्वाक्षेपः, नियामकत्वाक्षेपो वा कथमिति चेदित्थं – अन्तश्शब्दस्य निरुपपदस्य सर्वान्तःप्रवेशेन सर्वकर्तृत्वलाभाद्वा कर्तृशब्दस्य वा निरुपपदस्य मुख्यकर्तृवाचित्वेन कृत्स्नकर्तुरेव मुख्यकर्तृत्वात्तेन तल्लाभाद्वा, अन्यस्य कतिपयकर्तृत्वे भगवतः सर्वकर्तृत्वायोगादिति वा तदाक्षेपसम्भवात् । तथा 'जनानां' इति बहुवचनस्य सङ्कोचकाभावात् कैमुत्यन्यायेन चेतनाचेतनसर्वशास्तृत्वलाभेन तदाक्षेपसम्भवात् । ''सर्वे वेदाः'' इत्यत्र कैमुत्येन सर्वसदागमवेद्यत्वलाभेन तदाक्षेपसम्भवादिति ।। **अन्यथाऽपीति** ।। अन्यवहिताक्षेपस्यापि व्यवहितजिज्ञासासूत्राक्षेपपर्यन्तत्वेन ततोऽपि व्यवहित-स्यानन्यद्वारा साक्षादाक्षेपसम्भवादिति भावः ।। **उक्तं हीति** ।। उद्भिन्नयवार्तिके ।। **प्रसिद्धैरिति** ।। निर्ज्ञातसम्बन्धैः । 'अपृथक् श्रुतैः' सह श्रुतैः । 'निरूढं' निश्चितसम्बन्धपदम् । पूर्वोक्तेन विरोधं निरस्यति – **निरूढोऽपीति** ।। ओदनादाविति भावः ।। **अन्यत्रेति** ।। प्रसिद्धान्ने असम्भवादित्यर्थः ।

उक्तद्वयवैषम्यं – **इन्द्रेति** ।। **यौगिकार्थश्चेति** ।। ''तमिदन्द्रं सन्तमिन्द्र इत्याचक्षते परोक्षेण'' इत्यैतरेये तथा ''एतमिन्धं सन्तं इन्द्र इत्याचक्षते परोक्षेण'' इति

बृहदारण्यके च योगस्योक्तत्वात् 'इह' इत्युक्तम् । **सङ्गतिरिति** ।। प्रत्युदाहरण-रूपेत्यर्थः । लक्षणं तूक्तम् । अस्योत्तराधिकरणतुल्यत्वादेतदधिकरणस्यैव पूर्वानन्तर्ये को हेतुरित्यत आह – **आकाशादीति** ।।

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम्** – ॐ अन्तस्तद्धर्मोपदेशात् ॐ ।। नन्विदमधिकरणं पादा-सङ्गतम् । तत्रान्तस्स्थत्वलिङ्गसमन्वयस्य क्रियमाणत्वात् । अस्य च नामपादत्वा-दित्यत आह – **अत्रेति** ।। तथा च फलतः पादसङ्गतिरस्तीति नासङ्गतिरिति भावः ।। **प्रयोजनस्यान्यथाप्युपपत्तेरिति** ।। प्रयोजनमात्रपरं चेदत्र भाष्यं स्यात्तर्हि पूर्वाधिकरण इव सूत्रे कण्ठत उक्तं महाप्रयोजनमेवाक्षिपेत् । प्रथमातिक्रमे कारणाभावात् । पूर्वोल्लङ्घनेन षष्ठाधिकरणेऽर्थादुक्तप्रायमदृश्यत्वमेव नाक्षिपे-दित्यर्थः । एवं भाष्योक्तासङ्गतिमुक्त्वाऽनुव्याख्यानोक्तां सङ्गतिमाह – **यद्वेति** ।। **पदमज्ञातसन्दिग्धमित्यादि** ।। उद्भिदधिकरणवार्तिक इति शेषः ।

अयमर्थः । पिकादिपदमर्थविशेषवाचित्वेनाज्ञातमसन्दिग्धं च कोकिलः पिको विदेवनोक्ष इत्यर्थविशेषवाचित्वेन प्रसिद्धैरपृथक् श्रुतिसमानाधिकरणनिर्दिष्टं सदर्थविशेषवाचित्वेन निर्णीयते । यत्त्वर्थविशेषवाचित्वेन निरूढं नियतम् । तत्प्रसिद्धपदसामानाधिकरण्येपि स्वार्थान्नापनीयत इति ।।

ननु रूढत्वादिन्द्रादिशब्दानामन्यपरत्वाभावे अन्नशब्दस्यापि रूढत्वादन्यपरत्वं न स्यादित्यत आह – **रूढोपीति** ।। नन्वेवं रूढानामप्यन्नानामद्यतेत्ति चेत्यादि-श्रुत्युक्तयोगस्यान्यत्रासम्भवेन ब्रह्मपरत्ववत् इन्द्रादिशब्दानां रूढत्वेपि श्रुत्युक्त-योगस्यान्यत्रासम्भवेनेन्द्रादिशब्दानामपि ब्रह्मपरत्वं स्यादित्यतः श्रुत्या योगस्यानुक्तत्वात् विद्यमानस्याप्यन्यत्र सम्भवान्नेन्द्रादिशब्दानां ब्रह्मपरत्वमित्याह – **इन्द्रादिशब्दानां त्विति** ।।

ವಿವರಣೆ – ಆನಂದಮಯಾಧಿಕರಣವನ್ನು ಇಲ್ಲಿಯ ತನಕ ವಿವರಿಸಿದ್ದಾಯಿತು. ಈಗ ಅಂತಸ್ಥತ್ವಾಧಿಕರಣವು ಪ್ರಾರಂಭವಾಗುತ್ತಿದೆ.

### ಅಂತಸ್ಥತ್ವಾಧಿಕರಣ

ಈ ಅಧಿಕರಣದಲ್ಲಿ ಹಿಂದಿನ ಮುಂದಿನ ಅಧಿಕರಣಗಳಂತೆ ನಾಮಾತ್ಮಕಶಬ್ದಗಳ ಸಮನ್ವಯವನ್ನು ಮಾಡುತ್ತಿಲ್ಲ. ಕೇವಲ ಅಂತಸ್ಥತ್ವವೆಂಬ ಒಂದೇ ಲಿಂಗದ ಸಮನ್ವಯವನ್ನು ಸೂತ್ರಕಾರರು ಮಾಡಿದ್ದಾರೆ. ಏನೇ ಆದರೂ ಅಂತಸ್ಥತ್ವಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಿರುವುದರಿಂದ ಶಾಸ್ತ್ರಸಂಗತಿಯನ್ನು ಮತ್ತು ಸಮನ್ವಯರೂಪವಾದ್ದರಿಂದ ಅಧ್ಯಾಯಸಂಗತಿಯನ್ನು ಸುಲಭವಾಗಿ ಹೇಳಬಹುದು. ಆದರೆ ಪ್ರಥಮಪಾದದಲ್ಲಿ ಕೇವಲ ನಾಮಾತ್ಮಕಶಬ್ದಗಳ ಸಮನ್ವಯವನ್ನು ಮಾಡಬೇಕಾದ್ದರಿಂದ ಪಾದಸಂಗತಿಯನ್ನು ಹೇಗೆ ಹೇಳಲು ಸಾಧ್ಯ? ಎಂಬ ಪ್ರಶ್ನೆಗೆ ''ಅತ್ರ'' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ಈ ಅಧಿಕರಣದಲ್ಲಿ ಅಂತಸ್ಥತ್ವವೆಂಬ ಧರ್ಮವನ್ನು ಸಮನ್ವಯ ಮಾಡುತ್ತಿದ್ದರೂ ಸಹ ಅದರಿಂದ ಇಂದ್ರಾದಿ ಅನೇಕ ಆಧಿದೈವಿಕ ನಾಮಪದಗಳನ್ನು ಸಮನ್ವಯ ಮಾಡಿದಂತಾಗುತ್ತದೆ. ಇಂದ್ರಶಬ್ದವನ್ನು ಕೇಳಿದ ಕೂಡಲೇ ನಮಗೆ ದೇವೇಂದ್ರನೇ ಸ್ಮರಣೆಗೆ ಬರುತ್ತಾನೆ. ಹೀಗೆ ಇಂದ್ರಾದಿನಾಮಗಳೆಲ್ಲವೂ ಸಹ ಅನ್ಯತ್ರಪ್ರಸಿದ್ಧಗಳು. ಅನ್ಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದಗಳ ಸಮನ್ವಯವನ್ನು ಮಾಡುವುದರಲ್ಲೇ ಈ ಅಧಿಕರಣದ ತಾತ್ಪರ್ಯವಿರುವುದರಿಂದ ಈ ಅಧಿಕರಣವು ಶಾಸ್ತ್ರ, ಅಧ್ಯಾಯ, ಪಾದಗಳಿಗೆ ಸಂಗತವಾಗಿದೆ. ಇದರಿಂದ ಆಧಿದೈವಿಕ (ದೇವತಾ ವಾಚಿಯಾದ) ಸಕಲಶಬ್ದಗಳು ಈ ಅಧಿಕರಣದ ವಿಷಯವಾಚಿಗಳು. ಹಿಂದಿನ ಆನಂದಮಯಾಧಿಕರಣದ ಸಿದ್ಧಾಂತದ ಮೇಲೆ ಬರುವ ಆಕ್ಷೇಪಕ್ಕೆ ಇದು ಸಮಾಧಾನ ನೀಡುತ್ತಿದೆ. ಇದರಿಂದಲೇ ಪೂರ್ವಾಧಿಕರಣಸಂಗತಿಯು ಸ್ಪಷ್ಟ. ಸ್ಪಷ್ಟವಾದ ದಾರ್ಢ್ಯಕ್ಕೋಸ್ಕರ ಪುನಃ ''ಅನಂತರ'' ಇತ್ಯಾದಿ ಗ್ರಂಥವು ನಾಲ್ಕು ಮುಖಗಳಲ್ಲಿ ಸಂಗತಿಯನ್ನು ವಿವರಿಸಿದೆ. ಭಾಷ್ಯ ಅನುವ್ಯಾಖ್ಯಾನಗಳಲ್ಲಿ ನಾಲ್ಕು ಮುಖಗಳಲ್ಲಿ ಸಂಗತಿಯನ್ನು ವಿವರಿಸಿದೆ. ಭಾಷ್ಯ ಅನುವ್ಯಾಖ್ಯಾನಗಳ ಅಭಿಪ್ರಾಯದ ಪ್ರತಿಬಿಂಬವೇ ಈ ಗ್ರಂಥವಾಗಿದೆ.

ಸಾಮಾನ್ಯವಾಗಿ ಎಲ್ಲೆಡೆ ಒಂದು ಬಗೆಯ ಸಂಗತಿ ತೋರಿಸುವುದು ರೂಢಿಸಿಕೊಂಡ ಪದ್ಧತಿ. ಅಧಿಕರಣಕ್ಕೆ ಒಂದು ಸಂಗತಿ ಇದ್ದರೆ ಸಾಕು. ಅನೇಕ ಸಂಗತಿಯು ಅನಾವಶ್ಯಕ. ಆದರೂ ಅಲ್ಲಲ್ಲಿ ಅನೇಕ ಮುಖಗಳ ಸಂಗತಿಯನ್ನು ತೋರಿಸುವುದುಂಟು. ಇದೇನು ತಪ್ಪಲ್ಲ. ಅಧಿಕರಣದ ವ್ಯಾಪ್ತಿಯ ವಿಶಾಲತೆಗೋಸ್ಕರ ಅನೇಕಮುಖಗಳ ಸಂಗತಿಯು ಪೂರಕವೇ ಆಗುತ್ತದೆ. ''ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ ಅಥ ಸೋಽಭಯಂ ಗತೋ ಭವತಿ'' ಈ ಶ್ರುತಿಯು ಪ್ರಕೃತನಾದ ಆನಂದಮಯನನ್ನು ''ಏತಸ್ಮಿನ್'' ಎಂಬ ಶಬ್ದದಿಂದ ಪರಾಮರ್ಶಿಸಿದೆ. ಆ ಆನಂದಮಯನಲ್ಲಿಯೇ ಅದೃಶ್ಯತ್ವಧರ್ಮವನ್ನು ''ಅಂತಶ್ಚಂದ್ರಮಸಿ ಮನಸಾ ಚರಂತಮ್ । ಸಹೈವ ಸಂತಂ ನ ವಿಜಾನಂತಿ ದೇವಾಃ'' ಎಂಬ ಶ್ರುತಿಯು ಹೇಳುತ್ತಿದೆ. ವಸ್ತುತಃ ಅದೃಶ್ಯತ್ವವು ಇಲ್ಲಿ ಸ್ಪಷ್ಟವಾಗಿ ಕೇಳಿಸುವುದಿಲ್ಲ. ಆದರೆ ಸಕಲದೇವತೆಗಳಿಂದ ತಿಳಿಯಲಾರನೆಂದು ಕೇಳಿಸುತ್ತಿದೆ. ದೇವತೆಗಳಿಂದಲೇ ತಿಳಿಯಲಾರದ ಭಗವಂತನು ಉಳಿದವರಿಂದ ಹೇಗೆ ತಾನೆ ತಿಳಿದಾನು. ಈ ಕೈಮುತ್ಯನ್ಯಾಯದಿಂದ ಅದೃಶ್ಯತ್ವವನ್ನು ಶ್ರುತಿಯು ಭಗವಂತನಲ್ಲಿ ಖಚಿತಪಡಿಸಿದೆ. ಅಂತೂ ಆನಂದಮಯನು ಬ್ರಹ್ಮನಾಗಬೇಕಾದರೆ ಅದೃಶ್ಯನೂ ಬ್ರಹ್ಮನಾಗಬೇಕೆಂಬುದು ಅನಿವಾರ್ಯ. ಅದಕ್ಕಾಗಿ ಈ ಅಧಿಕರಣವು ಅನಿವಾರ್ಯ. ಆವಾಗಷ್ಟೇ ಆನಂದಮಯಾಧಿಕರಣದ ಸಿದ್ಧಾಂತನ್ಯಾಯವು ಸುದೃಢವಾಗಲು ಸಾಧ್ಯ.

ಶಂಕೆ – ಅಂತಸ್ಥನು ವಿಷ್ಣು ಅಲ್ಲವಾದರೆ ಆನಂದಮಯನು ವಿಷ್ಣುವಾಗಲಾರ ಎಂದು ಹೇಳಿದಿರಿ. ಇದು ತಪ್ಪು. ಅಂತಸ್ಥನು ವಿಷ್ಣುವಲ್ಲವೆನ್ನಲು ಅನೇಕ ಕಾರಣಗಳಿವೆ. ಇಂದ್ರ ಮಿತ್ರ ವರುಣ ಮೊದಲಾದ ಶ್ರುತಿಗಳು

ಮತ್ತು "ಸಪ್ತಾಶ್ವರಥಯುಕ್ತತ್ವ" ಮೊದಲಾದ ಲಿಂಗಗಳು ಅನ್ಯತ್ರಪ್ರಸಿದ್ಧವಾಗಿವೆ. ಈ ರೀತಿಯಾಗಿ ಆನಂದಮಯನು ವಿಷ್ಣುವಲ್ಲ ಎನ್ನಲು ವಿಶೇಷಕಾರಣಗಳಿರುವುದಿಲ್ಲ. ಆದ್ದರಿಂದಲೇ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯದಿಂದ ಆನಂದಮಯನು ವಿಷ್ಣುವೆಂದು ನಿರ್ಣಯಿಸಬಹುದು. ಅದೃಶ್ಯತ್ವವು ವಿಷ್ಣುವಿನ ಧರ್ಮವಂತೂ ಅಲ್ಲ. ಬೇರೆ ಇಂದ್ರಾದಿಗಳಲ್ಲಿ ಅದೃಶ್ಯತ್ವವನ್ನು ಶ್ರುತಿಯು ಪ್ರತಿಪಾದಿಸಿದೆ. ಅದೃಶ್ಯತ್ವಧರ್ಮವು ವಿಷ್ಣುವಿನಲ್ಲಿ ಮತ್ತು ಬೇರೆಯವರಲ್ಲಿ ಸಾಧಾರಣವಾಗಿದೆ. ಅದೃಶ್ಯತ್ವವೆಂಬ ಒಂದೇ ಲಿಂಗವು ಅನೇಕ ಲಿಂಗಗಳನ್ನು ವಿರೋಧಿಸಲು ಸಾಧ್ಯವಿಲ್ಲ. "ಬ್ರಹ್ಮಶಬ್ದಾತ್ಸಮಸ್ತಾತ್ಮತ್ವಾದಿಲಿಂಗಾಚ್ಚ" ಎಂದು ಹೇಳಿದಂತೆ ಶ್ರುತ್ಯಾದಿ ಆರು ಪ್ರಮಾಣಗಳಿಂದ ಆನಂದಮಯನು ವಿಷ್ಣುವೆಂದು ನಿರ್ಣಯಿಸಲಾಗಿತ್ತು. ಸುದೃಢವಾದ ಶ್ರುತ್ಯಾದಿ ಆರು ಪ್ರಮಾಣಗಳನ್ನು ದುರ್ಬಲವಾದ ಒಂದು ಲಿಂಗವು ಬಾಧಿಸುವುದಿಲ್ಲ. ಅದೃಶ್ಯತ್ವವು ವಿಷ್ಣುವಿನ ಲಿಂಗವೆಂದು ಈಗಾಗಲೇ ನಿರ್ಣಯಿಸಲಾಗಿದೆ. ಅದೇ ಅದೃಶ್ಯತ್ವವು ಅಂತಸ್ಥನಲ್ಲಿ ಇರುವುದರಿಂದ ಅಂತಸ್ಥನನ್ನು ವಿಷ್ಣುವೆಂದು ನಿರ್ಣಯಿಸುತ್ತದೆ. ಹೊರತು ಇಂದ್ರಾದಿಗಳನ್ನು ಅಂತಸ್ಥನೆಂದು ಸಮರ್ಥಿಸುವುದಿಲ್ಲ.

ಇನ್ನು ಅಂತಸ್ಥತ್ವಲಿಂಗವು ಇಂದ್ರವರುಣಾದಿಗಳಲ್ಲಿ ಇದೆಯೆಂದು ಶ್ರುತಿ ಹೇಳುತ್ತಿದೆ. ಅಂತಸ್ಥತ್ವವೆಂದರೆ ಗುಹಾನಿಹಿತತ್ವ "ಯೋ ವೇದನಿಹಿತಂ ಗುಹಾಯಾಂ" ಈ ಶ್ರುತಿಯನ್ನು ನೋಡಿದಾಗ ಇಂದ್ರ-ವರುಣಾದಿಗಳಲ್ಲಿಯೂ ಗುಹಾನಿಹಿತತ್ವವು ತೋರುತ್ತದೆ. ಯಾವ ವ್ಯಕ್ತಿಯು ಗುಹಾನಿಹಿತನೋ ಅವನೇ ಆನಂದಮಯನಾಗಿದ್ದಾನೆಂದು ಮಾಂತ್ರವರ್ಣಿಕಸೂತ್ರದಲ್ಲಿ ಹೇಳುವವರಿದ್ದಾರೆ. ಅದರ ಪ್ರಕಾರ ಅಂತಸ್ಥನು ಅನ್ಯನಾದ್ದರಿಂದ ಆನಂದಮಯನೂ ಸಹ ಅನ್ಯನಾಗುತ್ತಾನಲ್ಲವೆ? ಎಂದು ಆಕ್ಷೇಪಿಸಬಹುದು. ಆದರೆ ಈ ಆಕ್ಷೇಪವು ಗರ್ಭಸ್ರಾವದಿಂದಲೇ ಬಿದ್ದು ಹೋಗಿದೆ. ಈಗಾಗಲೇ ಹೇಳಿದಂತೆ ಆನಂದಯನು ವಿಷ್ಣುವೆನ್ನಲು ಶ್ರುತ್ಯಾದಿ ಆರು ಪ್ರಮಾಣಗಳು ಬೆಂಬಲಿಸುತ್ತವೆ. ಅವುಗಳನ್ನೆಲ್ಲ ಕೇವಲ ಅಂತಸ್ಥತ್ವಲಿಂಗವು ಬಾಧಿಸಲು ಸಮರ್ಥವಾಗದು. ಹಾಗಾಗಿ ಅಂತಸ್ಥನು ವಿಷ್ಣುವಾಗದಿದ್ದರೆ ಆನಂದಮಯನೂ ಕೂಡ ವಿಷ್ಣುವಾಗಲಾರನು ಎಂಬ ನ್ಯಾಯವನ್ನು ಹೇಗೆ ಸಮರ್ಥಿಸುತ್ತೀರಿ?

ಸಮಾಧಾನ - ಅದೃಶ್ಯತ್ವವೆಂಬ ವಿಶೇಷಹೇತುವೇ ನಮ್ಮ ವಾದದ ಶಕ್ತಿ. ಅದೃಶ್ಯಪದಕ್ಕೆ "ನಿರತಿಶಯವೈಭವ" ಎಂದರ್ಥ. ನಿರತಿಶಯವೈಭವವನ್ನು ಒಬ್ಬನಲ್ಲಷ್ಟೇ ಹೇಳಬಹುದು. ಇಂದ್ರಾದಿಗಳಲ್ಲಾಗಲೀ ವಿಷ್ಣುವಿನಲ್ಲಾಗಲೀ ಅದೃಶ್ಯತ್ವವನ್ನು ಈಗ ನಿಮ್ಮಿಂದ ಆಶಂಕಿಸಲಾಗದು. ಆದ್ದರಿಂದ ಅದೃಶ್ಯತ್ವವು ಇಬ್ಬರಲ್ಲಿಯೂ ಸಮಾನವಾದ್ದರಿಂದ ಪೂರ್ವಪಕ್ಷನ್ಯಾಯವಾಗಲು ಸಾಧ್ಯವಿಲ್ಲ ಎಂಬ ನಿಮ್ಮ ಶಂಕೆಗೆ ಆಸ್ಪದವಿಲ್ಲ. ಒಂದು ವೇಳೆ ಜ್ಞಾನ ಅವಿಷಯತ್ವವೆಂಬ ಅರ್ಥವನ್ನು ಹೇಳಿದ್ದರೆ ಉಭಯರಲ್ಲಿ ಸಮಾನವೆಂದು ತಿಳಿಸಬಹುದಿತ್ತು. ಶ್ರುತಿಯು "ಸಹ್ಯೆವ ಸಂತಂ ನ ವಿಜಾನಂತಿ ದೇವಾಃ" ಎಂದು ಯಾರಿಂದಲೂ ಸಾಕಲ್ಯೇನ ತಿಳಿಯಲಾರ ಎಂದು ಹೇಳಿದೆ. ಇದರಿಂದ ನಿರತಿಶಯವೈಭವವನ್ನು ಸ್ಪಷ್ಟವಾಗಿ ಶ್ರುತಿ ಹೇಳಿದಂತಾಗುತ್ತದೆ. ಈ ನಿರತಿಶಯವೈಭವವು ಇಬ್ಬರಲ್ಲಿ ಪರಸ್ಪರವಿರುದ್ಧ. ಆದ್ದರಿಂದ ಅಂತಸ್ಥನು ಬೇರೆಯವನಾದರೂ ವಿಷ್ಣುವು ಆನಂದಮಯನಾಗಲಿ. ಅದೃಶ್ಯತ್ವವು ಇಬ್ಬರಲ್ಲಿ ಸಮಾನವಾಗಿದ್ದರೂ ಬಾಧಕವಿಲ್ಲವೆಂದು ನೀವು ಹೇಳಿದ್ದು ತಪ್ಪು. ಒಬ್ಬ ವ್ಯಕ್ತಿಯಲ್ಲಷ್ಟೇ ಅದೃಶ್ಯತ್ವವನ್ನು ಹೇಳಬೇಕಾದ್ದರಿಂದ ಹೀಗೆ ಪೂರ್ವಪಕ್ಷ ಬರುತ್ತದೆ - ಅದೃಶ್ಯತ್ವವು ಅಂತಸ್ಥನ ಲಿಂಗವಾಗಿದೆ. ಅಂತಸ್ಥನಲ್ಲಿಯೇ "ಯಮಿಂದ್ರಮಾಹುಃ ವರುಣಂ ಯಮಾಹುಃ" ಇತ್ಯಾದಿಯಾಗಿ ಇಂದ್ರಾದಿಶಬ್ದಗಳು ನಿರೂಢವಾಗಿವೆ. ಇದರಿಂದ ಇಂದ್ರ-

ವರುಣಾದಿಗಳೇ ಅಂತಸ್ಥರಾಗುತ್ತಾರೆ. ಇಂತಹ ಅಂತಸ್ಥರಲ್ಲಿಯೇ ಆನಂದಮಯತ್ವವು ಶ್ರುತವಾದ್ದರಿಂದ ಇಂದ್ರಾದಿಗಳೇ ಆನಂದಮಯರಾಗಬೇಕು. ಆನಂದಮಯಾಧಿಕರಣದಲ್ಲಿ ಸ್ಥಾಪಿಸಿದ ಸಿದ್ಧಾಂತನ್ಯಾಯವು ವಿಷ್ಣುವಿಗೆ ಆನಂದಮಯತ್ವವನ್ನು ಸಮರ್ಥಿಸುವುದಿಲ್ಲ.

ಶಂಕೆ - ಆನಂದಮಯನನ್ನು ವಿಷ್ಣುವೆನ್ನಲು ಬ್ರಹ್ಮಾದಿಶ್ರುತಿಗಳಿರುವಾಗ ಕೇವಲ ಅದೃಶ್ಯತ್ವಲಿಂಗವು ಈ ಶ್ರುತ್ಯಾದಿ ಪ್ರಮಾಣಗಳನ್ನು ಹೇಗೆ ಬಾಧಿಸುತ್ತದೆ?

ಸಮಾಧಾನ - ಆನಂದಮಯನು ಇಂದ್ರಾದಿಗಳೆಂದು ನಿರ್ಣಯವಾದ ಮೇಲೆ ಬ್ರಹ್ಮಶಬ್ದಾದಿಗಳೆಲ್ಲವನ್ನು ಸುಲಭವಾಗಿ ಕೂಡಿಸಬಹುದು. ಇಂದ್ರಾದಿಗಳಲ್ಲಿಯೂ ಕೂಡ ಅಮುಖ್ಯವಾದ ಗುಣಪೂರ್ಣತ್ವಾದಿಗಳನ್ನು ಹೇಳಬಹುದು. ಇಂದ್ರಾದಿಗಳನ್ನು ಬ್ರಹ್ಮನೆಂದು ಹೇಳಿದಾಗ ಅವಯವ ಅವಯವಿಗಳ ಅಭೇದದ ಕ್ಲೇಶವು ಇರುವುದಿಲ್ಲ.

ಶಂಕೆ - ಇಲ್ಲಿರುವ ಅದೃಶ್ಯತ್ವಲಿಂಗದಿಂದ ಆನಂದಮಯನನ್ನು ಇಂದ್ರಾದಿಗಳೆಂದು ಹೇಳುತ್ತಿದ್ದೀರಿ. ಹಾಗಾದಲ್ಲಿ ಆನಂದಮಯನು ವಿಷ್ಣುವೆಂದು ನಿರ್ಣಯವಾದ್ದರಿಂದ ಅವನಲ್ಲಿರುವ ಅದೃಶ್ಯತ್ವವು ವಿಷ್ಣುವಿನ ಲಿಂಗವೇ ಏಕಾಗಬಾರದು? ಈ ವೈಪರೀತ್ಯಶಂಕೆಗೆ ಏನು ಉತ್ತರ?

ಸಮಾಧಾನ - ಇಂದ್ರಾದಿಪ್ರಾಪಕವಾದ ಶ್ರುತಿಲಿಂಗಾದಿಗಳು ಇಂದ್ರಾದಿಗಳಲ್ಲಿ ನಿರೂಢವಾಗಿವೆ. ಹೀಗೆ ಅನ್ಯತ್ರ ನಿರೂಢವಾದ ಇಂದ್ರಾದಿಶ್ರುತಿಗಳನ್ನಾಗಲೀ ಮತ್ತು ಲಿಂಗಗಳನ್ನಾಗಾಲಿ ವಿಷ್ಣುವಿನಲ್ಲಿ ಹೇಳಲಾಗದು. ಅಷ್ಟೇ ಅಲ್ಲದೆ ಒಂದು ಅದೃಶ್ಯತ್ವಲಿಂಗದಿಂದ ಅನೇಕ ನಿರವಕಾಶವಾದ ಶ್ರುತಿಲಿಂಗಾದಿಗಳನ್ನು ಬಾಧಿಸಲು ಸಾಧ್ಯವಿಲ್ಲ. ಆದ್ದರಿಂದಲೇ ಟೀಕೆಯಲ್ಲಿ ಹೀಗೆ ಹೇಳಿದ್ದಾರೆ. ''ನ ಚಾದೃಶ್ಯತ್ವಲಿಂಗೇನಾಂತಸ್ಥೋ ವಿಷ್ಣುಃ । ಶ್ರುತ್ಯಾದಿಭ್ಯೋ ಲಿಂಗಮಾತ್ರಸ್ಯ ದುರ್ಬಲತ್ವಾತ್'' (ಅದೃಶ್ಯತ್ವವೆಂಬ ಒಂದು ಲಿಂಗದಿಂದ ವಿಷ್ಣುವನ್ನು ಅಂತಸ್ಥನೆಂದು ನಿರ್ಣಯಿಸಲಾಗದು. ಕೇವಲ ಲಿಂಗವು ಶ್ರುತ್ಯಾದಿಗಳಿಗಿಂತ ದುರ್ಬಲವಾಗಿದೆ.)

ಮತ್ತು ಅಂತಸ್ಥನು ಅನ್ಯನಾದರೆ ಆನಂದಮಯನನ್ನು ವಿಷ್ಣುವೆಂದು ಹೇಳುವುದು ಅಸಾಧ್ಯ. ಏಕೆಂದರೆ ಇಂದ್ರಾದಿಗಳು ವಿಷ್ಣುವಿಗಿಂತ ಅಭಿನ್ನರಾಗಿದ್ದಾರೆ. ಆದ್ದರಿಂದ ವಿಷ್ಣುಪ್ರಾಪಕವಾದ ಬ್ರಹ್ಮಶಬ್ದಾದಿಗಳನ್ನು ಇಂದ್ರಾದಿಗಳಲ್ಲಿ ಹೇಳುವುದು ಸುಲಭ. ಚೈತನ್ಯಾಂಶದ ವಿವಕ್ಷೆಯಿಂದ ಇಂದ್ರಾದಿಗಳು ಬ್ರಹ್ಮನಿಂದ ಅಭಿನ್ನರಾಗಿದ್ದರೂ ಇಂದ್ರಾದಿಗಳು ಉಪಹಿತರು. ಶುದ್ಧಬ್ರಹ್ಮರೂಪನಾದ ವಿಷ್ಣುವು ಅನುಪಹಿತನು. ಅಂದರೆ ಅನೇಕ ಧರ್ಮಗಳಿಗೆ ಇಂದ್ರಾದಿಗಳು ಆಶ್ರಯರಾಗುತ್ತಾರೆ. ಬ್ರಹ್ಮನು ಅಶ್ರಯನಾಗಲಾರ. ಈ ಅದ್ವೈತಸಿದ್ಧಾಂತವನ್ನು ಅವಲಂಬಿಸಿದಾಗ ಬ್ರಹ್ಮಶಬ್ದವನ್ನು ಇಂದ್ರಾದಿಗಳಲ್ಲಷ್ಟೇ ಹೇಳಬಹುದು. ಅನುಪಹಿತನಾದ ವಿಷ್ಣುವಿನಲ್ಲಿ ಬ್ರಹ್ಮಶಬ್ದಾದಿಗಳನ್ನಾಗಲೀ ಅದೃಶ್ಯತ್ವಲಿಂಗಾದಿಗಳನ್ನಾಗಲೀ ಹೇಳಲು ಹೇಗೆ ಸಾಧ್ಯ? ಆದ್ದರಿಂದ ಇಂದ್ರಾದಿಗಳೇ ಅದೃಶ್ಯರೂ ಅಂತಸ್ಥರೂ ಆನಂದಮಯರೂ ಆಗುತ್ತಾರೆಂಬ ಪೂರ್ವಪಕ್ಷವನ್ನು ಬಲಿಷ್ಠವಾಗಿ ಹೇಳಬಹುದು. ಇಂದ್ರಾದಿಗಳನ್ನು ಅದೃಶ್ಯರೆಂದರೆ ಅವರಿಂದ ಅಭಿನ್ನನಾದ ಬ್ರಹ್ಮನೂ ಕೂಡ ಅದೃಶ್ಯನಾಗುತ್ತಾನಲ್ಲವೇ? ಎಂದು ಪ್ರಶ್ನಿಸಬಾರದು. ಕಾಲ್ಪನಿಕಭೇದ ಇರುವುದರಿಂದ ಇಂದ್ರಾದಿಗಳಷ್ಟೇ ಅಂತಸ್ಥರಾಗುತ್ತಾರೆ. ಈ ಕಾಲ್ಪನಿಕಭೇದದ ಆಧಾರದಿಂದಲೇ ಇಂದ್ರಾದಿಗಳು ಅಂತಸ್ಥರಾದಾಗ

ಆನಂದಮಯನು ವಿಷ್ಣುವಾಗಲಾರ ಎಂಬ ಆಕ್ಷೇಪವನ್ನು ಮಾಡಬಹುದು. ಮತ್ತು ಆನಂದಮಯಾಧಿಕರಣದಲ್ಲಿ ವಾಸ್ತವ ಭೇದವನ್ನು ಹೇಳಿದ ಭೇದವ್ಯಪದೇಶಸೂತ್ರವನ್ನು ಆಕ್ಷೇಪಿಸಬಹುದು.

ಕೆಲವು ವಿದ್ವಾಂಸರ ಅಭಿಪ್ರಾಯ - ಅಂತಸ್ಥತ್ವಾಧಿಕರಣಕ್ಕೆ ಹೀಗೆ ಸಾರ್ಥಕ್ಯ ಹೇಳಬಹುದು. ಕೆಲವು ಶ್ರುತಿಗಳು ಆನಂದಮಯನನ್ನು ವಿಷ್ಣುವೆಂದು ಅನೇಕ ಮುಖಗಳಿಂದ ಸಮರ್ಥಿಸುತ್ತಿವೆ. ಇನ್ನು ಕೆಲವು ಶ್ರುತಿಗಳು ಅಂತಸ್ಥನನ್ನು ಆನಂದಮಯನೆಂದು ಸಮರ್ಥಿಸುತ್ತಿವೆ. ಈ ಎರಡುವಿಧ ಶ್ರುತಿಗಳಲ್ಲಿ ವಿಷ್ಣುತ್ವನಿರ್ಣಾಯಕ ಶ್ರುತಿಗಳೇ ಪ್ರಬಲವಾಗಿವೆ. ಆದರೂ ಸಹ ಆನಂದಮಯನು ವಿಷ್ಣುವಲ್ಲವೆಂಬ ದುರ್ಬಲಶಂಕೆಗೂ ಅವಕಾಶವಿರುವುದರಿಂದ ವಿಷ್ಣುತ್ವನಿಶ್ಚಾಯಕ ಶ್ರುತಿಗಳನ್ನು ಆಕ್ಷೇಪಿಸಬಹುದು. ಆದ್ದರಿಂದಲೇ ಟೀಕೆಯಲ್ಲಿ ''ಆನಂದಮಯಸ್ಯ ಅನ್ಯತ್ವಪ್ರಸಂಗಾತ್'' ಎಂದು ಪ್ರಸಂಗಶಬ್ದವನ್ನು ಬಳಸಿದ್ದಾರೆ. ಹೊರತು ''ಆನಂದಮಯಸ್ಯ ಅನ್ಯತ್ವಾತ್'' ಎಂದು ಹೇಳಲಿಲ್ಲ.

ಇವರ ಅಭಿಪ್ರಾಯವನ್ನು ವಿಮರ್ಶಿಸಬೇಕು. ಇವರಿಗೆ ''ಸ ಏವ ಆನಂದಮಯಃ'' ಎಂಬ ಭಾಷ್ಯವನ್ನು ವ್ಯಾಖ್ಯಾನಿಸಲು ಬರುವುದಿಲ್ಲ. (ರಾಯರು ಇಲ್ಲಿ 'ಚಿಂತ್ಯಮ್' ಎಂಬ ಪದವನ್ನು ಬಳಸಿದ್ದಾರೆ. ಇದು ತುಂಬ ಅಪರೂಪ)

ಶಂಕೆ - ಅದೃಶ್ಯತ್ವಾಧಿಕರಣವು ಆನಂದಮಯಾಧಿಕರಣವನ್ನು ಆಕ್ಷೇಪಿಸಲು ಹೊರಟಿದೆ. ಆದ್ದರಿಂದಲೇ ಆನಂದಮಯಾಧಿಕರಣದ ಆನಂತರ್ಯವು ಸಂಗತವಾಗುತ್ತದೆಂದು ಹೇಳಿದೆ. ಹಾಗಾದರೆ ಆಕಾಶಾಧಿಕರಣವೇ ಮೊದಲಾದವೂ ಸಹ ಆನಂದಮಯಾಧಿಕರಣದ ಅನಂತರವೇ ಬರಬೇಕಾದೀತು? ಭಾಷ್ಯದಲ್ಲಿ ಆನಂದಮಯಾಧಿಕರಣದ ಆಕ್ಷೇಪಕ್ಕೆ ಆಕಾಶಾದಿಗಳು ಹೊರಟಿವೆಯೆಂದು ಹೇಳಿದ್ದಾರಲ್ಲವೇ?

ಸಮಾಧಾನ - ಭಾಷ್ಯವು ಆನಂದಮಯಾಧಿಕರಣದ ಪ್ರಯೋಜನವನ್ನಷ್ಟೇ ಆಕಾಶಾದ್ಯಧಿಕರಣಗಳಿಗೆ ಹೇಳಿದೆ. ಸಂಗತಿಯನ್ನು ಹೇಳಿಲ್ಲ. ಇದರ ಬಗ್ಗೆ ಆಕಾಶಾಧಿಕರಣದಲ್ಲೇ ವಿವರಿಸುತ್ತೇವೆ.

ಶಂಕೆ - ಅಂತಸ್ಥತ್ವಾಧಿಕರಣಕ್ಕೂ ಕೂಡ ಆನಂದಮಯಾಧಿಕರಣದಿಂದ ಪ್ರಯೋಜನವನ್ನು ಹೇಳಬಹುದು. ಸಂಗತಿಯ ಜೊತೆಗೆ ಪ್ರಯೋಜನ ಹೇಳುವುದು ತಪ್ಪಲ್ಲ. ಆನಂದಮಯಾಧಿಕರಣದ ಕೊನೆಯಲ್ಲಿ ಟೀಕಾಕ್ಷರಾರ್ಥವನ್ನು ಹೇಳುವಾಗ ಎರಡು ಅರ್ಥಗಳನ್ನು ಹೇಳಿದ್ದೀರಿ - ''ಶ್ರುತ್ಯಧಿಕರಣಸಂಗತೀ ದರ್ಶಯತೀತಿ ॥ ಯೇನ ಕೇನಚಿತ್ ಪೂರ್ವಾಧಿಕರಣೇನ ತದ್ವಿಷಯಶ್ರುತ್ಯಾ ಚ ಸಂಗತಿರೇವಾಪೇಕ್ಷಿತೇತ್ಯಾದ್ಯಸೂತ್ರೇಣ ತದ್ವಿಷಯವಾಕ್ಯೇನ ಚಾಕ್ಷೇಪಿಕೀ ಸಂಗತಿರಸ್ತೀತ್ಯರ್ಥಃ । ಯದ್ವಾತ್ರ ಪೂರ್ವಪಕ್ಷೇ ಆದ್ಯಸೂತ್ರ-ತದ್ವಿಷಯವಾಕ್ಯೋಕ್ತಜಿಜ್ಞಾಸಾಕ್ಷೇಪಾತ್ ಸಿದ್ಧಾಂತೇ ಚ ತತ್ಸಮಾಧಾನಾತ್ತತ್ಸಂಗತೀ ಸ್ತಃ ಇತಿ ಪ್ರಯೋಜನವಾನಯಂ ವಿಚಾರಃ ಇತ್ಯರ್ಥಃ'' ಹೀಗೆ ಆನಂದಮಯಾಧಿಕಣದಲ್ಲಿ ಸಂಗತಿಶಬ್ದಕ್ಕೆ ಎರಡು ಅರ್ಥಗಳು ಹೇಳಲಾಗಿದೆ. ೧) ಸಂಗತಿ ೨) ಪ್ರಯೋಜನವೆಂಬ ಎರಡುವಿಧವಾದ ಸಂಗತಿಗಳನ್ನು ಆನಂದಮಯಾಧಿಕರಣಕ್ಕೆ ಹೇಳಿದ್ದಾರೆ. ಹೀಗಿರುವಾಗ ಸಂಗತಿಶಬ್ದಕ್ಕೆ ಕೇವಲ ಪ್ರಯೋಜನವೆಂಬರ್ಥವನ್ನು ಅಲ್ಲಿಯೂ ಹೇಳಿಲ್ಲ. ಅಲ್ಲಿಯಂತೆ ಇಲ್ಲಿಯೂ ಕೇವಲ ಪ್ರಯೋಜನಪರವಲ್ಲವೆಂದು ಹೇಗೆ ವ್ಯಾಖ್ಯಾನಿಸುತ್ತಿದ್ದೀರಿ?

ಸಮಾಧಾನ - ಹಿಂದೆ ಗ್ರಂಥಕಾರರು ಎರಡು ಅರ್ಥಗಳನ್ನು ಸಂಗತಿಶಬ್ದಕ್ಕೆ ಹೇಳಿದ್ದೇನೋ ಸತ್ಯ. ಆದರೆ ಸಂಗತಿಶಬ್ದಕ್ಕೆ ಪ್ರಯೋಜನವೆಂಬರ್ಥವೇ ಗ್ರಂಥಕಾರರಿಗೆ ಅಭಿಮತವಾಗಿದೆ. ಆದ್ದರಿಂದಲೇ ಪ್ರಯೋಜನ-

ವೆಂಬರ್ಥದಲ್ಲಿಯೇ ಉಪಷ್ಟಂಭಕವನ್ನು ಹೇಳಿದ್ದಾರೆ - ''ಅತ ಏವ ಉತ್ತರಟೀಕಾಯಮ್'' ಎಂದು ಪ್ರಯೋಜನಾರ್ಥದಲ್ಲಿಯೇ ಸಂವಾದಿ ತೋರಿಸಿದ್ದಾರೆ. ಹಾಗಾದರೆ ವ್ಯವಹಿತಸಂಗತಿಯನ್ನು ಏಕೆ ತೋರಿಸಬೇಕಿತ್ತು? ಜಿಜ್ಞಾಸಾಧಿಕರಣದಿಂದ ಪ್ರಯೋಜವನ್ನಷ್ಟೇ ಹೇಳಬಹುದಿತ್ತಲ್ಲವೆ? ಎಂಬ ಪ್ರಶ್ನೆಯು ಸಹಜ. ಆದರೆ ಯಾವುದೇ ಅಧಿಕರಣಗಳಲ್ಲಿ ಅವ್ಯವಹಿತವಾದ ಪೂರ್ವಾಧಿಕರಣದಿಂದಲೇ ಸಂಗತಿಯನ್ನು ತೋರಿಸಬೇಕೆಂಬುದರಲ್ಲಿಯೇ ಗ್ರಂಥಕಾರರಿಗೆ ನೈರ್ಭರ್ಯವಿದೆ ಎಂಬ ಭ್ರಾಂತಿ ಬರುತ್ತದೆ. ಈ ಭ್ರಾಂತಿಯನ್ನು ಪರಿಹರಿಸುವುದಕ್ಕಾಗಿ ಗ್ರಂಥಕಾರರು ವ್ಯವಹಿತವಾದ ಅಧಿಕರಣಗಳಿಂದಲೂ ಸಂಗತಿಯನ್ನು ತೋರಿಸಬಹುದೆಂದು ಹೇಳಿದ್ದಾರೆ. ಅದಕ್ಕಾಗಿಯೇ ಸಂಗತಿಶಬ್ದಕ್ಕೆ ಸಂಗತಿ ಎಂಬರ್ಥದ ಜೊತೆಗೆ ಪ್ರಯೋಜನವೆಂಬರ್ಥವನ್ನೇ ಹೇಳಿದ್ದು ಸಾರ್ಥಕ.

ಶಂಕೆ - ಸಂಗತಿಶಬ್ದಕ್ಕೆ ಕೇವಲ ಸಂಗತಿ ಎಂಬರ್ಥವನ್ನು ವಿವಕ್ಷಿಸಿ ವ್ಯವಹಿತವಾದ ಅಧಿಕರಣಗಳಿಂದಲೂ ಸಂಗತಿಯನ್ನು ಹೇಳಬಹುದೆಂದು ಅಭಿಪ್ರಾಯ ಪಡುವುದಾದರೆ ವ್ಯವಹಿತವಾದ ಅಧಿಕರಣಗಳಿಂದ ಪ್ರಯೋಜಗಳನ್ನು ಏಕೆ ಹೇಳಬೇಕು? ಪ್ರಕೃತವಾದ ಆನಂದಮಯಾಧಿಕರಣವನ್ನು ಬಿಟ್ಟು ಜಿಜ್ಞಾಸಾಧಿಕರಣದಿಂದಲೇ ನೇರವಾಗಿ ಸಂಗತಿಯನ್ನು ಹೇಳಬಹುದಲ್ಲವೆ?

ಸಮಾಧಾನ - ಸಂಗತಿಶಬ್ದಕ್ಕೆ ಸಂಗತಿ ಎಂಬರ್ಥವನ್ನೇ ವಿವಕ್ಷಿಸಿದರೆ ಅಸ್ವಾರಸ್ಯ ಇದೆ. ಆದ್ದರಿಂದ ಪ್ರಯೋಜನ ಎಂಬರ್ಥವನ್ನು ಹೇಳುವ ''ಯದ್ವಾ'' ಇತ್ಯಾದಿಯಾದ ಪಕ್ಷಾಂತರವನ್ನು ಗ್ರಂಥಕಾರರು ಆಶ್ರಯಿಸಿದ್ದಾರೆ.

ಶಂಕೆ - ಪಕ್ಷಾಂತರವನ್ನು ಆಶ್ರಯಿಸಿ ಪ್ರಯೋಜನಾರ್ಥವನ್ನು ಹೇಳುತ್ತಿದ್ದೀರಿ. ಹಾಗಾದರೆ ಮುಂದಿನ ಅಧಿಕರಣಗಳಲ್ಲಿಯೂ ಹೀಗೆ ಎರಡು ವಿಧವಾದ ಸಂಗತಿಗಳನ್ನು ವಿವಕ್ಷಿಸಬೇಕು. ಗ್ರಂಥಕಾರರ ಅತಿದೇಶವಾಕ್ಯವು ಹೇಗೆ ಸರಿ ಹೊಂದುತ್ತದೆ? ಗ್ರಂಥಕಾರರಿಗೆ ಅವ್ಯವಹಿತವಾದ ಅಧಿಕರಣದಿಂದಲೇ ಸಂಗತಿಯು ವಿವಕ್ಷಿತವಾಗಿ ವ್ಯವಹಿತವಾದ ಅಧಿಕರಣದಿಂದ ಪ್ರಯೋಜನವೆಂಬರ್ಥವೇ ವಿವಕ್ಷಿತವಾದಲ್ಲಿ ಸಂಗತಿ ಮತ್ತು ಪ್ರಯೋಜನಗಳೆರಡನ್ನು ವ್ಯವಹಿತವಾದ ಅಧಿಕರಣದಿಂದ ಭಾವಿಸುವುದು ಅನಾವಶ್ಯಕವಲ್ಲವೆ?

ಸಮಾಧಾನ - ಹಾಗೇನಿಲ್ಲ. ಬೇರೆ ಯಾವುದೇ ಅಧಿಕರಣದಲ್ಲಿ ಅವ್ಯವಹಿತವಾದ ಹಿಂದಿನ ಅಧಿಕರಣದಿಂದ ಸಂಗತಿಯನ್ನು ಹೇಳಿದ್ದಾರೆ. ಆವಾಗ ಸಂಗತಿಶಬ್ದಕ್ಕೆ ಕೇವಲ 'ಸಂಗತಿ' ಎಂದು ಒಂದೇ ಅರ್ಥ. ಒಂದುವೇಳೆ ಆನಂದಮಯಾಧಿಕರಣದಂತೆ ವ್ಯವಹಿತವಾದ ಅಧಿಕರಣದಿಂದ ಟೀಕೆಯಲ್ಲಿ ಸಂಗತಿ ಹೇಳಿದ್ದರೆ ಆವಾಗ ಸಂಗತಿ ಮತ್ತು ಪ್ರಯೋಜನ ಎಂಬ ಎರಡರ್ಥಗಳನ್ನು ವಿವಕ್ಷಿಸಬೇಕು. ಗ್ರಂಥದಲ್ಲಿ ವ್ಯವಹಿತವಾದ ಅಧಿಕರಣದಿಂದ ಸಂಗತಿ ಹೇಳುವುದರಲ್ಲಿ ಗ್ರಂಥಕಾರರಿಗೆ ಅರುಚಿ ಇರಬಹುದು; ಅಂದಮಾತ್ರಕ್ಕೆ ವ್ಯವಹಿತವಾದ ಅಧಿಕರಣದಿಂದ ಸಂಗತಿಯನ್ನು ಹೇಳಬಾರದೆಂದೇನೂ ಇಲ್ಲ. ಅರುಚಿ ಎಂಬ ಅಂಶವನ್ನು ಮುಚ್ಚಿಟ್ಟು ಸಂಗತಿ ಮತ್ತು ಪ್ರಯೋಜನಗಳನ್ನು ಹೇಳಲು ಆತಂಕವಿಲ್ಲ. ಅಥವಾ ಸಂಗತಿಶಬ್ದಕ್ಕೆ ಎರಡು ಅರ್ಥಗಳನ್ನು ಹೇಳಲು ಮತ್ತೊಂದು ಕಾರಣವಿದೆ. ಆನಂದಮಯಾಧಿಕರಣದಲ್ಲಿ ವ್ಯವಹಿತವಾದ ಅಧಿಕರಣದಿಂದ ಸಂಗತಿ ಹೇಳಿದರೆ ಸ್ವಾರಸ್ಯವಿರಬಹುದು. ಆದರೆ ಬೇರೆ ಅಧಿಕರಣಗಳಲ್ಲಿಯೂ ಹೀಗೆಯೇ ಅಸ್ವಾರಸ್ಯವಿರಬೇಕೆಂದೇನು ನಿಯಮವಿಲ್ಲ. ವ್ಯವಹಿತವಾದ ಅಧಿಕರಣದಿಂದ ಸಂಗತಿ ಹೇಳುವುದು

ಸಂಗತವಾಗಬಹುದು. ಈ ಎಲ್ಲಾ ವಿಚಾರಗಳನ್ನು ಮನಸ್ಸಿನಲ್ಲಿಟ್ಟುಕೊಂಡೇ ಗ್ರಂಥಕಾರರು ಎರಡು ಅರ್ಥಗಳನ್ನು ಹೇಳಿದ್ದಾರೆ. ಯಾವ ಅಧಿಕರಣದ ಭಾಷ್ಯದಲ್ಲಿ ಅವ್ಯವಹಿತವಾದ ಪೂರ್ವಾಧಿಕರಣದಿಂದ ಸಂಗತಿ ಹೇಳುತ್ತಾರೋ ಅಲ್ಲಲ್ಲಿ ಸಂಗತಿ ಎಂಬ ಸಹಜ ಅರ್ಥವನ್ನೇ ವಿವಕ್ಷಿಸಬೇಕು. ಆವಾಗ ಅತಿದೇಶವೂ ಸಹ ಸರಿಹೊಂದುತ್ತದೆ.

ಯಾವುದೇ ಒಂದು ವಿಷಯವನ್ನು ಪ್ರಸಂಗ ಬಂದಾಗ ಸಮರ್ಥಿಸಿದರೆ ಅದಕ್ಕೆ ಅಲ್ಲಿಯೇ ಪ್ರಯೋಜನವಿರಬೇಕೆಂದೇನು ನಿಯಮವಿಲ್ಲ. ಮುಂದೆಲ್ಲಾದರೂ ಪ್ರಯೋಜನವಿರಬಹುದು. ಈ ವಿಷಯದಲ್ಲಿ ಪೂರ್ವಮೀಮಾಂಸೆಯು ಉದಾಹರಣೆಯಾಗಿದೆ. ಪೂರ್ವಮೀಮಾಂಸೆಯ ಅಧಿಕರಣಗಳಲ್ಲಿ ಕೆಲವೆಡೆ ಕೃತ್ವಾಚಿಂತೆಯನ್ನು (ಅಂಗಿಕಾರವಾದವನ್ನು) ತೋರಿಸುತ್ತಾರೆ. ಅದಕ್ಕೆ ಇಲ್ಲಿ ಪ್ರಯೋಜನವಿಲ್ಲದಿದ್ದರೂ ಮುಂದೆ ಪ್ರಯೋಜನವಾಗುತ್ತದೆಂದು ಕೃತ್ವಾಚಿಂತೆಯನ್ನು ಮಾಡಿರುತ್ತಾರೆ.

ವ್ಯಾಕರಣದಲ್ಲಿಯೂ ಕೂಡ ''ನಾಮಿ'' (೬-೪-೩) ಎಂಬ ಸೂತ್ರದಲ್ಲಿ ಲ್ಯುಟ್ ಸಹಿತವಾದ ಆಮ್ ಪ್ರತ್ಯಯವನ್ನು ಹೇಳಿದ್ದಾರೆ. ವಸ್ತುತಃ ಇಲ್ಲಿ 'ಆಮಿ' ಎಂದಷ್ಟೇ ಸಾಕಿತ್ತು ಲ್ಯುಟ್ ಗ್ರಹಣಕ್ಕೆ ಯಾವುದೇ ಪ್ರಯೋಜವಿಲ್ಲ. ಆದರೂ 'ನೋಪಧಾಯಾಃ' (೬-೪-೭) ಎಂಬ ಮುಂದಿನ ಸೂತ್ರದಲ್ಲಿ ಪ್ರಯೋಜನವಿದೆ. ಒಂದುವೇಳೆ ಈ ಸೂತ್ರದಲ್ಲಿ ಆಮಿ ಎಂದಷ್ಟೇ ಹೇಳಿದ್ದರೆ ಮುಂದಿನ ಸೂತ್ರದಲ್ಲಿಯೂ ಆಮಿ ಎಂದಷ್ಟೇ ಅನುವೃತ್ತವಾಗುತ್ತಿತ್ತು. ಆವಾಗ ಚರ್ಮಣಾ ವರ್ಮಣಾ ಇತ್ಯಾದಿ ಪ್ರಯೋಗಗಳಲ್ಲಿಯೂ ಕೂಡ ದೀರ್ಘವು ಬಂದು ಅನಿಷ್ಟರೂಪವಾಗುತಿತ್ತು. ಆದ್ದರಿಂದ ನಾಮಿ ಎಂಬ ಸೂತ್ರದಲ್ಲಿ ಲ್ಯುಟ್ ಗ್ರಹಣಕ್ಕೆ ಈ ಸೂತ್ರದಲ್ಲಿ ಪ್ರಯೋಜನವಿಲ್ಲದಿದ್ದರೂ ಮುಂದಿನ 'ನೋಪಧಾಯಾಃ' ಎಂಬ ಸೂತ್ರದಲ್ಲಿ ಪ್ರಯೋಜನವಿದೆ. ಇದರಂತೆ ಪ್ರಕೃತದಲ್ಲೂ ಸಂಗತಿಶಬ್ದಕ್ಕೆ ಸಂಗತಿ ಎಂಬರ್ಥವು ಉಪಯೋಗವಿಲ್ಲದಿದ್ದರೂ ಮುಂದಿನ ಅಧಿಕರಣಗಳಲ್ಲಿ ಉಪಯೋಗವಿರಬಹುದು.

ಅಥವಾ 'ಪ್ರಯೋಜನಪ್ರದರ್ಶನಮಾತ್ರಪರಮ್'' ಇಲ್ಲಿರುವ ಮಾತ್ರಪದದಿಂದ ಅವ್ಯವಹಿತವಾದ ಸಂಗತಿಪರತ್ವವನ್ನು ವ್ಯಾವೃತ್ತಿಮಾಡಲಾಗಿದೆ. ಹಿಂದಿನ ಅರ್ಥದಲ್ಲಿ ಸಂಗತಿಯು ವ್ಯವಹಿತವಾಗಿತ್ತು. ಈಗ ವ್ಯವಹಿತವಾದ ಆ ಸಂಗತಿಯನ್ನು ವ್ಯಾವೃತ್ತಿ ಮಾಡಲಾಗಿದೆ. ಆನಂದಮಯಾಧಿಕರಣಭಾಷ್ಯವು ಅವ್ಯವಹಿತ ಸಂಗತಿಪರವಾಗಿದೆಯಷ್ಟೇ. ಅದರಂತೆ ಈ ಅಧಿಕರಣದ ಭಾಷ್ಯವು ಅಲ್ಲವೆಂದು ಭಾವಿಸಬೇಕು. ಈ ಅರ್ಥದಲ್ಲಿ ಹಿಂದಿನ ಕ್ಲೇಶವೂ ಇರುವುದಿಲ್ಲ.

ಶಂಕೆ - 'ಅಂತಃಪ್ರವಿಷ್ಟಃ' ಇತ್ಯಾದಿ ಶ್ರುತಿಯಲ್ಲಿ ಕರ್ತೃತ್ವವಷ್ಟೇ ಕೇಳಿಸುತ್ತಿದೆ. ಸರ್ವಕರ್ತೃತ್ವವು ಕೇಳಿಸುತ್ತಿಲ್ಲ. ಹೀಗಿರುವಾಗ ಸರ್ವಕರ್ತೃತ್ವವನ್ನಾಗಲಿ; ಸರ್ವನಿಯಾಮಕಕರ್ತೃತ್ವವನ್ನಾಗಲಿ ಹೇಗೆ ಆಕ್ಷೇಪಿಸುತ್ತೀರಿ?

ಸಮಾಧಾನ - ಮೂರುವಿಧದಲ್ಲಿ ಇದಕ್ಕೆ ಉತ್ತರಿಸಬಹುದು. ೧) ಶ್ರುತಿಯಲ್ಲಿ ಉಪಪದವಿಲ್ಲದ ''ಅಂತಃ'' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ''ಇದಕ್ಕೆ ಎಲ್ಲರ ಒಳಗಡೆ ಪ್ರವೇಶಿಸಿದ್ದಾನೆ'' ಎಂದು ಅರ್ಥೈಸಬೇಕು. ಎಲ್ಲರ ಒಳಗಡೆ ಪ್ರವೇಶಿಸಿದ್ದರಿಂದ ಸರ್ವಕರ್ತೃತ್ವವು ಸಿದ್ಧವಾಗುತ್ತದೆ. ೨) ಅಥವಾ ಶ್ರುತಿಯಲ್ಲಿ ಉಪಪದವಿಲ್ಲದ ಕರ್ತೃಶಬ್ದವನ್ನು ಪ್ರಯೋಗಿಸಿದ್ದಾರೆ. ಯಾರು ನಿರುಪಪದ ಕರ್ತೃನಾಗಿರುತ್ತಾನೋ

ಅವನೇ ಮುಖ್ಯಕರ್ತೃ. ಇದರಿಂದಲೂ ಸರ್ವಕರ್ತೃತ್ವವು ಲಾಭವಾಗುತ್ತದೆ. ೩) ಅಥವಾ ಭಗವಂತನಿಗೆ ಬ್ರಹ್ಮಾದಿಗಳ ಕತಿಪಯಕರ್ತೃತ್ವವನ್ನು ಒಪ್ಪಿದರೆ ಭಗವಂತನಿಗೆ ಸರ್ವಕರ್ತೃತ್ವವೂ ಕೂಡುವುದಿಲ್ಲ. ಆದ್ದರಿಂದಲೂ ಶ್ರುತಿಯಲ್ಲಿರುವ ಕರ್ತೃಶಬ್ದವು ಸರ್ವಕರ್ತೃತ್ವವನ್ನೇ ಹೇಳುತ್ತಿದೆ. ಆದ್ದರಿಂದ ಸರ್ವಕರ್ತೃತ್ವವನ್ನು ಆಕ್ಷೇಪಿಸಿದ್ದು ಸಮಂಜಸವಾಗಿದೆ. ಅಷ್ಟೇ ಅಲ್ಲದೆ "ಜನಾನಾಮ್" ಎಂಬ ಬಹುವಚನಪ್ರಯೋಗವಿದೆ. ಸಕಲವಸ್ತುಗಳ ನಿರ್ಮಾಪಕನಾದರೆ ಮಾತ್ರ ಈ ಬಹುವಚನವು ಸಮಂಜಸವಾಗುತ್ತದೆ. ಬಹುವಚನವನ್ನು ಸಂಕೋಚ ಮಾಡಬಾರದ ಕಾರಣ ಚೇತನಾಚೇತನ ಸಕಲ ವಸ್ತುಗಳ ನಿಯಾಮಕತ್ವವು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ. ಆದ್ದರಿಂದಲೂ ಸರ್ವಕರ್ತೃತ್ವವನ್ನಾಗಲಿ ಸರ್ವಶಾಸ್ತೃತ್ವವನ್ನಾಗಲಿ ಆಕ್ಷೇಪಿಸಿದ್ದು ತಪ್ಪಲ್ಲ.

"ಸರ್ವೇ ವೇದಾಃ" ಎಂಬ ಶ್ರುತಿಯಲ್ಲಿ ಸಕಲವೇದಪ್ರತಿಪಾದ್ಯತ್ವವನ್ನಷ್ಟೇ ಹೇಳಲಾಗಿದೆ. ಆದರೆ ಸಕಲವೇದಪ್ರತಿಪಾದ್ಯನಾದವನು ಸಕಲಶಾಸ್ತ್ರಗಳಿಂದಲೂ ಪ್ರತಿಪಾದ್ಯನಾಗುತ್ತಾನೆಂದು ಪ್ರತ್ಯೇಕ ಹೇಳಬೇಕೇನು? ಎಂಬ ಕೈಮುತ್ಯನ್ಯಾಯದಿಂದ ಸಕಲಶಾಸ್ತ್ರಪ್ರತಿಪಾದ್ಯತ್ವವು ಸಿದ್ಧವಾಗುತ್ತದೆ. ಆದ್ದರಿಂದ ಸಕಲಶಾಸ್ತ್ರ ಪ್ರತಿಪಾದ್ಯತ್ವವನ್ನು ಆಕ್ಷೇಪಿಸಿದ್ದು ತಪ್ಪಲ್ಲ.

ಗ್ರಂಥದಲ್ಲಿ "ಅನ್ಯಥಾಪ್ಯುಪಪತ್ತೇಃ" ಎಂದಿದೆ. ಇದರ ಅರ್ಥವನ್ನು ಹೀಗೆ ತಿಳಿಯಬೇಕು. ಜನ್ಮಾದ್ಯಧಿಕರಣದಿಂದ ಅಥವಾ ಶಾಸ್ತ್ರಯೋನಿತ್ವಾಧಿಕರಣದಿಂದ ನೇರವಾಗಿಯೇ ಅಂತಸ್ಥತ್ವಾಧಿಕರಣಕ್ಕೆ ಸಂಗತಿಯನ್ನು ಹೇಳುವುದು ಸುಲಭ. ಜನ್ಮಾದ್ಯಧಿಕರಣಕ್ಕೆ ಅಥವಾ ಶಾಸ್ತ್ರಯೋನಿತ್ವಾಧಿಕರಣಕ್ಕೆ ಸಂಗತಿ ತೋರಿಸಿ ಅದರ ಮೂಲಕ್ಕೆ ಜಿಜ್ಞಾಸಾಧಿಕರಣಕ್ಕೆ ಸಂಗತಿ ತೋರಿಸುವುದು ಗೌರವ. ಜಿಜ್ಞಾಸಾಧಿಕರಣಕ್ಕಿಂತ ಮೊದಲೇ ಇರುವ ಜನ್ಮಾದ್ಯಧಿಕರಣದಿಂದಾಗಲಿ ಶಾಸ್ತ್ರಯೋನಿತ್ವಾಧಿಕರಣದಿಂದಾಗಲಿ ಸಂಗತಿ ತೋರಿಸುವುದು ಲಾಘವ ಎಂದು.

ಗ್ರಂಥದಲ್ಲಿ "ಯೌಗಿಕಾರ್ಥಃ" ಎಂದಿದೆ. ಇದರರ್ಥ ಹೀಗೆ - "ತಮಿದಂ ದ್ರಂ ಸಂತಮಿಂದ್ರಮಿತ್ಯಾಚಕ್ಷತೇ ಪರೋಕ್ಷೇಣ" (ಇದಂ ಪದಾರ್ಥವನ್ನು ದ್ರವಣ ಮಾಡುತ್ತಾನಾದ್ದರಿಂದ ಇಂದ್ರನೆನಿಸಿದ್ದಾನೆ. ವಸ್ತುತಃ "ಇದಂದ್ರ" ಎಂದೇ ಹೇಳಬೇಕು. ಪರೋಕ್ಷಪ್ರಿಯನಾದ್ದರಿಂದ ಇಂದ್ರನೆನ್ನುತ್ತಾರೆ.) ಹೀಗೆ ಐತರೇಯದಲ್ಲಿ ಇಂದ್ರಶಬ್ದದ ಯೋಗವನ್ನು ಹೇಳಿದ್ದಾರೆ. ಮತ್ತು "ಏತಮಿಂಧಂ ಸಂತಂ ಇಂದ್ರ ಇತ್ಯಾಚಕ್ಷತೇ ಪರೋಕ್ಷೇಣ" ಎಂದು ಬೃಹದಾರಣ್ಯಕದಲ್ಲೂ ಸಹ ಇಂದ್ರಶಬ್ದದ ಯೋಗವನ್ನು ಹೇಳಿದ್ದಾರೆ.




ಅಂತಸ್ಥತ್ವಾಧಿಕರಣದಲ್ಲಿ 'ಅಂತಸ್ಥತ್ವ' ಲಿಂಗವನ್ನು ಸಮರ್ಥನೆ ಮಾಡುತ್ತಾರೆ. ಒಂದು ಅಂತಸ್ಥತ್ವಲಿಂಗ ಸಮನ್ವಯ ಮಾಡಿದರೆ ಆ ಅಂತಸ್ಥತ್ವ ಪ್ರಕರಣದಲ್ಲಿರುವ ಇಂದ್ರಾದಿ ಅನೇಕ 'ನಾಮಗಳು' ಸಮನ್ವಯವಾಗುತ್ತವೆ. ಅದಕ್ಕೋಸ್ಕರ ಇದು ನಾಮ ಸಮನ್ವಯದ ಪಾದವಾಗಿದ್ದರೂ 'ಲಿಂಗವನ್ನು' ಸಮನ್ವಯ ಮಾಡುತ್ತಾರೆ. ಹಿಂದಿನ ಅಧಿಕರಣದ ಸಿದ್ಧಾಂತವನ್ನು ಪ್ರಶ್ನಿಸಿ ಈ ಅಧಿಕರಣ ಹೊರಟಿರುವುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ 'ಆಕ್ಷೇಪಿಕೀ' ಸಂಗತಿಯನ್ನು ತಿಳಿಯಬೇಕು.

ಅಥವಾ ಹಿಂದಿನ ಅಧಿಕರಣದಲ್ಲಿ ಆನಂದಮಯನು 'ವಿಷ್ಣು' ಎಂದಿತ್ತು. 'ಆನಂದಮಯ' ಎನ್ನುವ ಶಬ್ದವು ಇಂಥದ್ದೇ ವ್ಯಕ್ತಿಯ ವಿಶೇಷವಾದ ಹೆಸರು ಎಂದೇನಿಲ್ಲ. ಆದ್ದರಿಂದ ವಿಷ್ಣುವೆಂದು ಹೇಳಿದರೆ ತೊಂದರೆಯಿಲ್ಲ. ಆದರೆ 'ಇಂದ್ರಾದಿ' ಶಬ್ದಗಳು ಇಂದ್ರ ಮೊದಲಾದ ದೇವತೆಗಳ ಹೆಸರು ಎಂದು ಪ್ರಸಿದ್ಧಿಯಿರುವುದರಿಂದ ಇಂದ್ರಾದಿ ಶಬ್ದಗಳು ವಿಷ್ಣುವನ್ನು ಹೇಳುತ್ತವೆನ್ನುವುದು ಎಷ್ಟು ಸರಿ? ಎಂದು ಹಿಂದಿನ ಅಧಿಕರಣಕ್ಕಿಂತ ಭಿನ್ನವಾದ ಪೂರ್ವಪಕ್ಷ ಈ ಅಧಿಕರಣದಲ್ಲಿರುವುದರಿಂದ 'ಪ್ರತ್ಯುದಾಹರಣ' ಸಂಗತಿಯನ್ನು ಈ ಅಧಿಕರಣಕ್ಕೆ ತಿಳಿಯಬೇಕು.

• • • • •

## ಭಾಷ್ಯದಲ್ಲಿ ಈ ಅಧಿಕರಣದ ಸಂಗತಿಗಳ ಕಂಠೋಕ್ತ ಹಾಗೂ ಸೂಚನಾಪೂರ್ವಕನಿರೂಪಣೆಗೆ ಕಾರಣೋಕ್ತಿ

### तात्पर्यचन्द्रिका

**यद्वा – यदि ब्रह्मशब्दादानन्दमयो ब्रह्म, तर्हीन्द्रादिशब्दादन्तस्थः इन्द्रादिः, न तु ब्रह्म, तच्छब्दाभावादिति पूर्वसिद्धान्तन्यायेन पूर्वपक्षिते, पूर्वाधिकरणोक्तं श्रुत्यादिनिर्णयमपोद्य लिङ्गेन निर्णय उच्यत इति सङ्गतिः । इदं च सङ्गतिद्वयं –**

**आशङ्क्य तत्र रूढिं च तच्छब्दानामपि स्वयम् ।**
**इत्यनुव्याख्याने रूढिपदतच्छब्दपदप्रयोगात् सूचितम् ।**

**यद्वा – मान्त्रवर्णिकसूत्रे "यो वेद निहितं गुहायां" इत्यानन्दमयस्य अन्तस्थत्वमुक्तम् । तदिहाक्षिप्य समाधीयत इति सङ्गतिः । न च गुहानिहितत्वमन्यत्, अन्तस्स्थत्वं चान्यदिति वाच्यम्, अन्तस्स्थवाक्यशेषे "निहितं गुहासु" इति श्रवणात् । इयं च सङ्गतिरत्रत्येन "अदृश्येऽनात्म्ये" इति भाष्येण, "यो वेद निहितं गुहायामित्युक्तम्" इति ज्योतिरधिकरणभाष्येण च समानन्यायतया सूचिता ।**

**यद्यप्यन्तस्स्थस्येन्द्रादित्वादन्तस्स्थत्वयुक्त आनन्दमयोऽपि इन्द्रादिरेवेति आक्षेप ऋजुः, अन्तस्स्थस्येन्द्रादित्वादन्तस्स्थधर्मेण अदृश्यत्वेन युक्त आनन्दमयोऽपि इन्द्रादिरेवेत्याक्षेपस्तु वक्रः । यथा चान्तस्स्थत्वं वाक्यशेषपर्यालोचनया**

गुहानिहितत्वरूपमिति ज्ञेयमिति विलम्बः, तथा "सहैव सन्तं न विजानन्ति देवाः" इति देवाज्ञेयत्वात् कैमुत्यन्यायेन अदृश्यत्वं ज्ञेयमिति विलम्बः ।

तथाऽप्यदृश्यत्वमुखेनानाक्षेपे अदृश्यत्वेन विष्णुलिङ्गेन विष्णुरेवान्तस्स्थ इति शङ्का स्यात् । सा मा भूत्, अदृश्यत्वस्यापीन्द्रादिधर्मत्वादिति दर्शयितुं वक्राक्षेपमुखा सङ्गतिः कण्ठोक्ता । अन्या तु सूचिता ।

ಅನುವಾದ - ಅಥವಾ ಆಪವಾದಿಕೀ ಸಂಗತಿಯನ್ನೂ ಹೇಳಬಹುದು - ಬ್ರಹ್ಮಶಬ್ದ ಆತ್ಮಶಬ್ದಗಳ ಬಲದಿಂದ ಆನಂದಮಯನನ್ನು ಬ್ರಹ್ಮನೆಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಿದಿರಿ. ಹಾಗಾದರೆ, ಇಂದ್ರಾದಿಶಬ್ದಗಳ ಬಲದಿಂದ ಅಂತಸ್ಥನು ಇಂದ್ರಾದಿಗಳೇ ಆಗಲಿ. ಬ್ರಹ್ಮಶಬ್ದವು ಇಲ್ಲದ ಕಾರಣ ಬ್ರಹ್ಮನು ಅಂತಸ್ಥನಾಗುವುದು ಬೇಡ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಅನುಸರಿಸಿ ಪೂರ್ವಪಕ್ಷವು ಹುಟ್ಟುತ್ತದೆ. ಈ ಪೂರ್ವಪಕ್ಷಕ್ಕೆ ಶ್ರುತ್ಯಾದಿನಿರ್ಣಯವನ್ನು ಅಪವಾದಗೊಳಿಸಿ ನಿರವಕಾಶಲಿಂಗಗಳಿಂದ ಈ ಅಧಿಕರಣವು ಉತ್ತರಿಸುತ್ತದೆ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಅಪವಾದಮಾಡಿ ನಿರವಕಾಶಲಿಂಗದಿಂದ ಉತ್ತರಿಸುತ್ತಿರುವುದರಿಂದ ಆಪವಾದಿಕೀಸಂಗತಿಯನ್ನು ತಿಳಿಯಬೇಕು.

ಪ್ರತ್ಯುದಾಹರಣರೂಪವಾದ ಸಂಗತಿಯನ್ನು ಮತ್ತು ಆಪವಾದಿಕೀಸಂಗತಿಯನ್ನು ಭಾಷ್ಯದಲ್ಲಿ ಹೇಳದಿರಬಹುದು. ಆದರೆ ಅನುವ್ಯಾಖ್ಯಾನದ ಮಾತಿನಿಂದ ಈ ಎರಡು ಸಂಗತಿಗಳು ತಿಳಿಯುತ್ತವೆ - "ಆಶಂಕ್ಯ ತತ್ರ ರೂಢಿಂ ಚ ತಚ್ಛಬ್ದಾನಾಮಪಿ ಸ್ವಯಮ್" (ಇಂದ್ರಾದಿಶಬ್ದಗಳು ಇಂದ್ರಾದಿಗಳಲ್ಲಿ ರೂಢವಾಗಿವೆ. ಹೀಗೆ ಸ್ವತಃ ಸೂತ್ರಕಾರರೇ ಆಶಂಕಿಸಿ "ಅಂತಃ" ಇತ್ಯಾದಿ ಸೂತ್ರದಿಂದ ಪರಿಹರಿಸಿದ್ದಾರೆ.) ಅನುವ್ಯಾಖ್ಯಾನದ ಈ ಮಾತಿನಲ್ಲಿ "ರೂಢಿಮ್" ಮತ್ತು "ತಚ್ಛಬ್ದಾನಾಮ್" ಎಂಬ ಎರಡು ಪದಗಳ ಪ್ರಯೋಗದಿಂದ ಆಪವಾದಿಕೀ ಮತ್ತು ಪ್ರತ್ಯುದಾಹರಣಸಂಗತಿಗಳನ್ನು ಸೂಚಿಸಿದ್ದಾರೆ.

ಅಥವಾ ಮತ್ತೊಂದು ಪ್ರಕಾರದಲ್ಲಿ ಆಕ್ಷೇಪಿಕೀಸಂಗತಿಯನ್ನು ಹೇಳಬಹುದು. ಮಾಂತ್ರವರ್ಣಿಕಸೂತ್ರದಲ್ಲಿ "ಯೋ ವೇದ ನಿಹಿತಂ ಗುಹಾಯಾಂ" ಎಂಬ ಶ್ರುತಿಯು ಆನಂದಮಯನನ್ನು ಅಂತಸ್ಥನೆನ್ನುತ್ತಿದೆಂದು ಹೇಳಿದ್ದಾರೆ. ಅದನ್ನು ಇಲ್ಲಿ ಆಕ್ಷೇಪಿಸಿ ಸಮಾಧಾನವನ್ನು ಹೇಳುತ್ತಿರುವುದರಿಂದ ಆಕ್ಷೇಪಿಕೀಸಂಗತಿಯು ಸ್ಪಷ್ಟ. ಆನಂದಮಯನು ಗುಹಾನಿಹಿತನಾಗಲಿ ಆದರೆ ಅಂತಸ್ಥನು ಆನಂದಮಯನಾಗುವುದು ಬೇಡ, ಎಂದು ಶಂಕಿಸಬಾರದು. ಅಂತಸ್ಥವಾಕ್ಯದಲ್ಲಿಯೇ "ನಿಹಿತಂ ಗುಹಾಯಾಮ್"ಎಂಬ ವಾಕ್ಯಶೇಷವಿದೆ. ಇದು ಗುಹಾನಿಹಿತನನ್ನೇ ಅಂತಸ್ಥನೆಂದು ನಿಖರವಾಗಿ ಹೇಳುತ್ತಿದೆ. ನಾಲ್ಕನೆಯ ಈ ಸಂಗತಿಯನ್ನೂ ಸಹ ಸ್ಪಷ್ಟವಾಗಿ ಆಚಾರ್ಯರು ಹೇಳಿಲ್ಲ.

ಆದರೆ ಈ ಅಧಿಕರಣದ ''ಅದೃಶ್ಯೇನಾತ್ಮ್ಯೇ'' ಎಂಬ ಭಾಷ್ಯವು ಮತ್ತು ''ಯೋ ದೇವ ನಿಹಿತಂ ಗುಹಾಯಾಮಿತ್ಯುಕ್ತಮ್'' ಎಂಬ ಜ್ಯೋತಿರಧಿಕರಣದ ಭಾಷ್ಯವು ಸಮಾನನ್ಯಾಯದಿಂದ ನಾಲ್ಕನೆಯ ಆಕ್ಷೇಪಿಕೀಸಂಗತಿಯನ್ನು ಸೂಚಿಸಿದೆ.

ಪ್ರಶ್ನೆ - ಅಂತಸ್ಥನು ಇಂದ್ರಾದಿಗಳೆಂದು ಶ್ರುತಿ ಹೇಳುತ್ತಿದೆ. ಹಾಗಾಗಿ ಅಂತಸ್ಥನಾದ ಆನಂದ-ಮಯನೂ ಸಹ ಇಂದ್ರಾದಿಗಳೇ ಆಗುತ್ತಾರೆಂದು ಆಕ್ಷೇಪಿಸುವುದು ಸುಲಭ. ಇದು ನೇರಮಾರ್ಗ. ಆದರೆ ಇಂದ್ರಾದಿಗಳು ಅಂತಸ್ಥರಾದ್ದರಿಂದ ಅಂತಸ್ಥತ್ವಧರ್ಮದಿಂದ ಕೂಡಿರುವ ಅದೃಶ್ಯನು ಇಂದ್ರಾದಿಗಳೇ ಆಗುತ್ತಾರೆ. ಅದೃಶ್ಯತ್ವದಿಂದ ಕೂಡಿರುವ ಆನಂದಮಯನೂ ಸಹ ಇಂದ್ರಾದಿಗಳೇ ಆಗುತ್ತಾರೆಂದು ನೀವು ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡುತ್ತಿದ್ದೀರಿ; ಇದು ವಕ್ರವಲ್ಲವೇ? ನೇರಮಾರ್ಗವನ್ನು ಬಿಟ್ಟು ಬಳಸುಮಾರ್ಗವನ್ನು ಅನುಸರಿಸಿದಂತಾಗುವುದಿಲ್ಲವೇ?

ಉತ್ತರ - ಅದೃಶ್ಯತ್ವವನ್ನು ಉಪಯೋಗಿಸದ ಮಾತ್ರದಿಂದ ಆಕ್ಷೇಪವು ಸುಲಭವಾಗುವುದಿಲ್ಲ. ಏಕೆಂದರೆ ಗುಹಾನಿಹಿತನು ಆನಂದಮಯನಾಗಲಿ ಅಂತಸ್ಥನು ಇಂದ್ರನೇ ಆಗಲಿ ಎಂಬ ಆಕ್ಷೇಪ ಬಂದರೆ ''ಯೋ ವೇದ ನಿಹಿತಂ ಗುಹಾಯಾಮ್'' ಎಂಬ ವಾಕ್ಯಶೇಷವನ್ನು ಪರ್ಯಾಲೋಚಿಸಿ ಅಂತಸ್ಥನೇ ಗುಹಾನಿಹಿತನಾಗಿದ್ದಾನೆಂದು ನಿರ್ಣಯಿಸಬೇಕು. ಇಷ್ಟು ಆಲೋಚಿಸುವುದು ವಿಲಂಬ-ವಾಗುತ್ತದೆ.

ಪ್ರಶ್ನೆ - ಈ ವಿಲಂಬವು ಅದೃಶ್ಯತ್ವಪಕ್ಷದಲ್ಲಿಯೂ ಸಮಾನ. ವಿಷ್ಣುವು ಹೇಗೆ ಅದೃಶ್ಯನಾಗುತ್ತಾನೆ? ಎಂಬ ಪ್ರಶ್ನೆ ಬಂದರೆ ''ಸಹ್ಯೈವ ಸಂತಂ ನ ವಿಜಾನಂತಿ ದೇವಾಃ'' ಎಂಬ ವಾಕ್ಯವನ್ನು ನೀವೂ ಸಹ ಪರ್ಯಾಲೋಚಿಸಬೇಕು. ದೇವತೆಗಳಿಂದಲೇ ತಿಳಿಯಲು ಸಾಧ್ಯವಿಲ್ಲನಾದರೆ ಉಳಿದವರಿಂದ ಹೇಗೆ ತಾನೆ ತಿಳಿದಾನು? ಎಂಬ ಕೈಮುತ್ಯನ್ಯಾಯದಿಂದ ಅದೃಶ್ಯತ್ವವನ್ನು ತಿಳಿಯುವುದೂ ವಿಲಂಬವೇ ಆಗಿದೆ. ಆದ್ದರಿಂದ ಇಂದ್ರಾದಿಗಳು ಅಂತಸ್ಥರಾದ್ದರಿಂದ ಅಂತಸ್ಥನೇ ಆದ ಆನಂದಮಯನೂ ಇಂದ್ರಾದಿಗಳೇ ಆಗುತ್ತಾರೆಂಬ ಆಕ್ಷೇಪ ಸುಲಭವಲ್ಲವೇ?

ಉತ್ತರ - ಹೌದು. ಆದರೆ ಅದೃಶ್ಯತ್ವವನ್ನು ಮಧ್ಯದಲ್ಲಿ ಉಪಯೋಗಸದಿದ್ದರೆ ಪೂರ್ವಪಕ್ಷದ ಸ್ಥಾಪನವೇ ಆಗುತ್ತಿರಲಿಲ್ಲ. ಅದೃಶ್ಯತ್ವವೆಂಬ ವಿಷ್ಣುಲಿಂಗವು ಅಂತಸ್ಥನಲ್ಲಿ ಕೇಳಿಸುತ್ತಿರುವುದರಿಂದ ವಿಷ್ಣುವೇ ಅಂತಸ್ಥನಾಗುತ್ತಾನೆಂದು ಶಂಕಿಸಿದರೆ ಪೂರ್ವಪಕ್ಷವನ್ನು ಹೇಗೆ ಮಾಡಲು ಸಾಧ್ಯ? ಈ ಶಂಕೆಯು ಬರಬಾರದೆಂದು ಅದೃಶ್ಯತ್ವಧರ್ಮವನ್ನೂ ಇಂದ್ರಾದಿಗಳಲ್ಲಿ ಆಕ್ಷೇಪಿಸಲಾಗಿದೆ. ಈಗ ಪೂರ್ವಪಕ್ಷವು ಸುದೃಢವಾಗುತ್ತದೆ. ಈ ಪೂರ್ವಪಕ್ಷವು ವಕ್ರವಾಗಿದ್ದರೂ ಸಹ ಬಲಿಷ್ಠವಾದ್ದರಿಂದ ಆಚಾರ್ಯರು ಕಂಠತಃ ಹೇಳಿದ್ದಾರೆ. ಮತ್ತೊಂದನ್ನು ಕೇವಲ ಸೂಚಿಸಿದ್ದಾರೆ.

**ಕಠಿಣಪದಾರ್ಥ**

ಸಂಗತಿಃ = ಆಪವಾದಿಕೀ ಎಂಬ ಸಂಗತಿಯು, ಸಂಗತಿದ್ವಯಮ್ = ಪ್ರತ್ಯುದಾಹರಣ ಮತ್ತು ಆಪವಾದಿಕೀ ಎಂಬೆರಡು ಸಂಗತಿಗಳನ್ನು, ತತ್ರ = ಪುರಂದರಾದಿಗಳಲ್ಲಿ, ತಚ್ಛಬ್ದಾನಾಮ್ = ಇಂದ್ರಾದಿಶಬ್ದಗಳಿಗೆ, ಸ್ವಯಂ = ಸೂತ್ರಕಾರರು, ರೂಢಿಪದತಚ್ಛಬ್ದಪದಪ್ರಯೋಗಾತ್ = ರೂಢಿ ಎಂಬ ಪದವನ್ನು ಮತ್ತು ತಚ್ಛಬ್ದ ಎಂಬ ಪದವನ್ನು ಪ್ರಯೋಗಿಸಿದ್ದರಿಂದ, ಉಕ್ತಮ್ = "ಸತ್ಯಂ ಜ್ಞಾನಮನಂತಂ ಬ್ರಹ್ಮ। ಯೋ ವೇದ ನಿಹಿತಂ ಗುಹಾಯಾಮ್" ಈ ಮಂತ್ರವರ್ಣದಲ್ಲಿ ಹೇಳಿದವನನ್ನೇ ಅನ್ನಮಯಾದಿಪ್ರಕರಣಗಳಿಂದ ವಿವರಿಸಲಾಗಿದೆ, ಅಂತಸ್ಥವಾಕ್ಯಶೇಷೇ = "ಅಂತಃಪ್ರವಿಷ್ಟಂ ಕರ್ತಾರಮೇತಂ ದೇವಾನಾಂ ಬಂಧುಂ ನಿಹಿತಂ ಗುಹಾಸು" ಎಂಬ ವಾಕ್ಯಶೇಷದಲ್ಲಿ, ಕೈಮುತ್ಯಾನ್ಯಾಯೇನ = ದೇವತೆಗಳೇ ತಿಳಿಯದ ಮೇಲೆ ಉಳಿದವರು ಹೇಗೆ ತಾನೇ ತಿಳಿದಾರು ಎಂಬ ನ್ಯಾಯದಿಂದ, ಸಾ = ವಿಷ್ಣುವೇ ಅಂತಸ್ಥನು ಎಂಬ ಶಂಕೆಯು, ಅನ್ಯಾತು = ಅದೃಶ್ಯತ್ವವನ್ನು ಉಪಯೋಗಿಸದ ನೇರವಾದ ಆಕ್ಷೇಪವು.

**प्रकाशः – सङ्गतिरिति ।।** अपवादरूपेत्यर्थः । अत्रापि लक्षणमुक्तम् । एतेन सङ्गतिद्वयकथनेन सुधायां पूर्वपक्षप्रापकेन्द्रादिश्रुतिलिङ्गान्युक्त्वा अनन्तरमुक्ते "अन्नं ब्रह्म" इत्यादिश्रुत्या तद्धेतुव्यपदेशादिलिङ्गेन चातीताधिकरणे निर्णयः कृतः । न चेन्द्रादिश्रुतिरन्यत्र नेतुं शक्यते, पुरन्दरादिषु रूढत्वाद्यौगिकत्वाच्च" इति वाक्ये "अन्नं ब्रह्म" इत्यादि "कृतः" इत्यन्तं वाक्यं पूर्वत्रोत्तरत्र च संयोज्य क्रमेणापवादप्रत्युदाहरणसङ्गतिद्वयपरत्वेन व्याख्येयमित्युक्तं भवति । "तद्धेतुव्यपदेशात्" इत्यादिपदेन "अद्यतेऽत्ति च" इति वाक्यशेषोक्तयोगोऽपि ग्राह्यः । 'तच्छब्दानां' इन्द्रादिशब्दानाम् । 'तत्र' पुरन्दरादिदेवेषु । 'रूढिं च' न केवलं योगं रूढिमपि । 'स्वयमपि' साक्षादपि । विद्वत्सम्बन्धिनीमप्याशङ्क्य स्वयं सूत्रकारः "अन्तः" इति सूत्रेण 'न्यवारयत्' इति वक्ष्यमाणेनान्वयः ।

आक्षेपिकी सङ्गतिमुक्तामपि प्रकारान्तरेणाह – **यद्वेति ।। उक्तमिति ।।** "सत्यं ज्ञानमनन्तं ब्रह्म । यो वेद निहितं गुहायां" इति मन्त्रवर्णोक्तस्यैवान्नमयादिप्रकरणैः प्रपञ्चनादिति भावः ।। **अन्तस्थवाक्यशेष इति ।।** "अन्तः प्रविष्टं कर्तारमेतं देवानां बन्धुं निहितं गुहासु" इति वाक्यशेषे श्रवणादित्यर्थः ।। **समानन्यायतयेति ।।** आनन्दमये श्रुतस्य अदृश्यत्वस्यान्तस्स्थे अन्यस्मिन् श्रवणादानन्दमयोऽपि न विष्णुरितिवदानन्दमये श्रुतान्तस्स्थत्वस्यान्यस्मिन् श्रवणादानन्दमयस्य विष्णुत्वेऽन्तस्थत्वं न युक्तमित्याक्षेपसम्भवादित्यर्थः । तथा ज्योतिरधिकरणे – "यो वेद

निहितं गुहायां'' इत्युक्तं, तच्चाग्निसूक्तगतस्य ''ज्योतिर्हृदय आहितं यत्'' इति ज्योतिषः श्रूयते इत्याक्षिप्तत्वात् सूचितमित्यर्थः । अत्र च तिस्रः सूचिताः, एका तु भाष्यकारैः कण्ठोक्ता । तत्र भाष्यकारस्यानौचित्यमाशङ्क्य परिहरति – **यद्यपीति** ।।

नन्वदृश्यत्वं शीघ्रोपस्थितिकं अन्तस्स्थत्वं विलंबितोपस्थितिकं, अत एवमाश्रितमित्यत आह – **यथा चेति** ।। **कैमुत्येति** ।। देवाविज्ञेयत्वमात्रेणादृश्यत्वा सिद्धेः देवा अपि न जानन्ति किमुतेतर इति सर्वाज्ञेयत्वसिद्ध्या, अदृश्यत्वं बोद्धव्यमित्यर्थः ।। **शङ्केति** ।। लिङ्गमात्रेणेन्द्रादिप्रापकश्रुत्यादिबाधायोगेनावधारणायोगात् ''शङ्का स्यात्'' इत्युक्तम् ।

ननु यथाऽदृश्यत्वमुखेनानाक्षेपे प्राग्विष्णुधर्मतया निर्णीतेन तेनान्तस्स्थो विष्णुरिति शङ्का स्यात् तथाऽन्तस्स्थत्वमुखेनानाक्षेपे प्राग्विष्णुधर्मतया निश्चितेन तेनायमिन्द्रादिर्विष्णुरेवेति शङ्का स्यादिति चेन्न । वैषम्यात् । अन्तस्स्थत्वं हि इह समन्वीयते । तच्चादृश्यत्वादिलिङ्गेन्द्रादिश्रुत्योः प्राबल्याद्यविवेकेन सन्दिह्यत इति न तेन शङ्का स्यात् । प्रबलया पूर्वपक्षयुक्त्या चान्तस्स्थत्वमिन्द्रादेरेवेति शङ्क्यमानत्वाच्चेति । एतेन कर्तृत्वशास्त्रत्वादेरपि पूर्वपक्षे आक्षेप इत्यपि सूचितम् । तेन न कर्तृत्वादिनाऽपि विष्णुत्वशङ्केत्युक्तं भवति ।

**गुरुराजीयम्** – ननु वैषम्येण पूर्वपक्षोत्थानं न सम्भवति । पूर्वाधिकरणे समन्वेतव्यस्यानन्दमयस्यान्यत्र रूढत्वाभाववत् अत्रापि समन्वेतव्यस्यान्तस्स्थत्वस्यान्यत्र रूढत्वाभावात् । तत्रेन्द्रादिशब्दानामन्यत्र रूढत्वेपि पूर्वत्रापि ब्रह्मशब्दस्य ब्रह्मणि प्रसिद्धत्वेन साम्यस्यैव सत्त्वादित्यस्वरसादाह – **यद्वेति** ।। **रूढिपदेति** ।। योगसमुच्चायकचशब्दशिरस्करूढिपदेत्यर्थः । एवं कण्ठतो भाष्योक्तामनुव्याख्योक्तां च सङ्गतिमुक्त्वा एतत्पूर्वाधिकरणीयेन ज्योतिरधिकरणीयेन च समानन्यायतयाऽभिमतां सङ्गतिमाह – **यद्वेति** ।। **समानन्यायतयेति** ।।

अयं भावः । यथान्तस्स्थेऽदृश्यत्वस्य श्रुतत्वादन्तस्स्थस्यान्यत्वे तद्धर्मभूतस्यादृश्यत्वस्याप्यन्यनिष्ठत्वापत्त्याअदृश्यत्वस्यान्यनिष्ठत्वे अदृश्येनात्म्य इत्युक्तस्याप्यन्यनिष्ठत्वापातेन तद्युक्तस्यानन्दमयस्याप्यब्रह्मत्वं स्यादिति यदाऽभिहितं

**ಕಠಿಣಪದಾರ್ಥ**

ಸಂಗತಿಃ = ಅಪವಾದಿಕೀ ಎಂಬ ಸಂಗತಿಯು, ಸಂಗತಿದ್ವಯಮ್ = ಪ್ರತ್ಯುದಾಹರಣ ಮತ್ತು ಅಪವಾದಿಕೀ ಎಂಬೆರಡು ಸಂಗತಿಗಳನ್ನು, ತತ್ರ = ಪುರಂದರಾದಿಗಳಲ್ಲಿ, ತಚ್ಛಬ್ದಾನಾಮ್ = ಇಂದ್ರಾದಿಶಬ್ದಗಳಿಗೆ, ಸ್ವಯಂ = ಸೂತ್ರಕಾರರು, ರೂಢಿಪದತಚ್ಛಬ್ದಪದಪ್ರಯೋಗಾತ್ = ರೂಢಿ ಎಂಬ ಪದವನ್ನು ಮತ್ತು ತಚ್ಛಬ್ದ ಎಂಬ ಪದವನ್ನು ಪ್ರಯೋಗಿಸಿದ್ದರಿಂದ, ಉಕ್ತಮ್ = "ಸತ್ಯಂ ಜ್ಞಾನಮನಂತಂ ಬ್ರಹ್ಮ। ಯೋ ವೇದ ನಿಹಿತಂ ಗುಹಾಯಾಮ್" ಈ ಮಂತ್ರವರ್ಣದಲ್ಲಿ ಹೇಳಿದವನನ್ನೇ ಅನ್ನಮಯಾದಿಪ್ರಕರಣಗಳಿಂದ ವಿವರಿಸಲಾಗಿದೆ, ಅಂತಸ್ಥವಾಕ್ಯಶೇಷೇ = "ಅಂತಃಪ್ರವಿಷ್ಟಂ ಕರ್ತಾರಮೇತಂ ದೇವಾನಾಂ ಬಂಧುಂ ನಿಹಿತಂ ಗುಹಾಸು" ಎಂಬ ವಾಕ್ಯಶೇಷದಲ್ಲಿ, ಕೈಮುತ್ಯಾನ್ಯಾಯೇನ = ದೇವತೆಗಳೇ ತಿಳಿಯದ ಮೇಲೆ ಉಳಿದವರು ಹೇಗೆ ತಾನೇ ತಿಳಿದಾರು ಎಂಬ ನ್ಯಾಯದಿಂದ, ಸಾ = ವಿಷ್ಣುವೇ ಅಂತಸ್ಥನು ಎಂಬ ಶಂಕೆಯು, ಅನ್ಯಾತು = ಅದೃಶ್ಯತ್ವವನ್ನು ಉಪಯೋಗಿಸದ ನೇರವಾದ ಆಕ್ಷೇಪವು.

**प्रकाशः – सङ्गतिरिति ।।** अपवादरूपेत्यर्थः । अत्रापि लक्षणमुक्तम् । एतेन सङ्गतिद्वयकथनेन सुधायां पूर्वपक्षप्रापकेन्द्रादिश्रुतिलिङ्गान्युक्त्वा अनन्तरमुक्ते "अन्नं ब्रह्म" इत्यादिश्रुत्या तद्धेतुव्यपदेशादिलिङ्गेन चातीताधिकरणे निर्णयः कृतः । न चेन्द्रादिश्रुतिरन्यत्र नेतुं शक्यते, पुरन्दरादिषु रूढत्वाद्यौगिकत्वाच्च" इति वाक्ये "अन्नं ब्रह्म" इत्यादि "कृतः" इत्यन्तं वाक्यं पूर्वत्रोत्तरत्र च संयोज्य क्रमेणापवादप्रत्युदाहरणसङ्गतिद्वयपरत्वेन व्याख्येयमित्युक्तं भवति । "तद्धेतुव्यपदेशात्" इत्यादिपदेन "अद्यतेऽत्ति च" इति वाक्यशेषोक्तयोगोऽपि ग्राह्यः । 'तच्छब्दानां' इन्द्रादिशब्दानाम् । 'तत्र' पुरन्दरादिदेवेषु । 'रूढिं च' न केवलं योगं रूढिमपि । 'स्वयमपि' साक्षादपि । विद्वत्सम्बन्धिनीमप्याशङ्क्य स्वयं सूत्रकारः "अन्तः" इति सूत्रेण 'न्यवारयत्' इति वक्ष्यमाणेनान्वयः ।

आक्षेपिकी सङ्गतिमुक्तामपि प्रकारान्तरेणाह – **यद्वेति ।। उक्तमिति ।।** "सत्यं ज्ञानमनन्तं ब्रह्म । यो वेद निहितं गुहायां" इति मन्त्रवर्णोक्तस्यैवान्नमयादिप्रकरणैः प्रपञ्चनादिति भावः ।। **अन्तस्थवाक्यशेष इति ।।** "अन्तः प्रविष्टं कर्तारमेतं देवानां बन्धुं निहितं गुहासु" इति वाक्यशेषे श्रवणादित्यर्थः ।। **समानन्यायतयेति ।।** आनन्दमये श्रुतस्य अदृश्यत्वस्यान्तस्स्थे अन्यस्मिन् श्रवणादानन्दमयोऽपि न विष्णुरितिवदानन्दमये श्रुतान्तस्स्थत्वस्यान्यस्मिन् श्रवणादानन्दमयस्य विष्णुत्वेऽन्तस्थत्वं न युक्तमित्याक्षेपसम्भवादित्यर्थः । तथा ज्योतिरधिकरणे – "यो वेद

निहितं गुहायां'' इत्युक्तं, तच्चाग्निसूक्तगतस्य ''ज्योतिर्हृदय आहितं यत्'' इति ज्योतिषः श्रूयते इत्याक्षिप्तत्वात् सूचितमित्यर्थः । अत्र च तिस्रः सूचिताः, एका तु भाष्यकारैः कण्ठोक्ता । तत्र भाष्यकारस्यानौचित्यमाशङ्क्य परिहरति – **यद्यपीति** ।।

नन्वदृश्यत्वं शीघ्रोपस्थितिकं अन्तस्स्थत्वं विलंबितोपस्थितिकं, अत एवमाश्रितमित्यत आह – **यथा चेति** ।। **कैमुत्येति** ।। देवाविज्ञेयत्वमात्रेणादृश्यत्वा सिद्धेः देवा अपि न जानन्ति किमुतेतर इति सर्वाज्ञेयत्वसिद्ध्या, अदृश्यत्वं बोद्धव्यमित्यर्थः ।। **शङ्केति** ।। लिङ्गमात्रेणेन्द्रादिप्रापकश्रुत्यादिबाधायोगेनावधारणायो गात् ''शङ्का स्यात्'' इत्युक्तम् ।

ननु यथाऽदृश्यत्वमुखेनानाक्षेपे प्राग्विष्णुधर्मतया निर्णीतेन तेनान्तस्स्थो विष्णुरिति शङ्का स्यात् तथाऽन्तस्स्थत्वमुखेनानाक्षेपे प्राग्विष्णुधर्मतया निश्चितेन तेनायमिन्द्रादिर्विष्णुरेवेति शङ्का स्यादिति चेन्न । वैषम्यात् । अन्तस्स्थत्वं हि इह समन्वीयते । तच्चादृश्यत्वादिलिङ्गेन्द्रादिश्रुत्योः प्राबल्याद्यविवेकेन सन्दिह्यत इति न तेन शङ्का स्यात् । प्रबलया पूर्वपक्षयुक्त्या चान्तस्स्थत्वमिन्द्रादेरेवेति शङ्क्यमानत्वाच्चेति । एतेन कर्तृत्वशास्त्रत्वादेरपि पूर्वपक्षे आक्षेप इत्यपि सूचितम् । तेन न कर्तृत्वादिनाऽपि विष्णुत्वशङ्केत्युक्तं भवति ।

**गुरुराजीयम्** – ननु वैषम्येण पूर्वपक्षोत्थानं न सम्भवति । पूर्वाधिकरणे समन्वेतव्यस्यानन्दमयस्यान्यत्र रूढत्वाभाववत् अत्रापि समन्वेतव्यस्यान्तस्स्थत्वस्यान्यत्र रूढत्वाभावात् । तत्रेन्द्रादिशब्दानामन्यत्र रूढत्वेपि पूर्वत्रापि ब्रह्मशब्दस्य ब्रह्मणि प्रसिद्धत्वेन साम्यस्यैव सत्त्वादित्यस्वरसादाह – **यद्वेति** ।। **रूढिपदेति** ।। योगसमुच्चायकचशब्दशिरस्करूढिपदेत्यर्थः । एवं कण्ठतो भाष्योक्तामनुव्याख्योक्तां च सङ्गतिमुक्त्वा एतत्पूर्वाधिकरणीयेन ज्योतिरधिकरणीयेन च समानन्यायतयाऽभिमतां सङ्गतिमाह – **यद्वेति** ।। **समानन्यायतयेति** ।।

अयं भावः । यथान्तस्स्थेऽदृश्यत्वस्य श्रुतत्वादन्तस्स्थस्यान्यत्वे तद्धर्मभूतस्यादृश्यत्वस्याप्यन्यनिष्ठत्वापत्त्याअदृश्यत्वस्यान्यनिष्ठत्वे अदृश्येनात्म्य इत्युक्तस्याप्यन्यनिष्ठत्वापातेन तद्युक्तस्यानन्दमयस्याप्यब्रह्मत्वं स्यादिति यदाऽभिहितं

**तदाऽन्तस्स्थस्येन्द्रादित्वादन्तस्स्थत्वयुक्त आनन्दमयोप्यन्य एवेत्यभिहितप्रायम् । समानन्यायत्वादिति ।**

**नन्वाक्षेपसङ्गतेर्भाष्ये मुखतः सङ्कीर्तनमन्यासां तु सूचनमित्येतद्वैरूप्यं कुत इत्याशङ्क्य, शङ्कान्तरपरिहारार्थं तथाकरणमित्यभिप्रेत्य शङ्कान्तरं दर्शयति – यद्यपीति ॥ अदृश्यत्वस्यापीन्द्रादिधर्मत्वादिति ॥ प्रबलश्रुतिभिर्लिङ्गबाधे प्रामाण्यायेन्द्रादावेव कथञ्चिन्नेयत्वादित्यर्थः । इदं च लिङ्गमात्रोपलक्षणमिति ज्ञेयम् । अत एव टीकायां पूर्वपक्षेऽदृश्यत्वादिलिङ्गबाधोक्तिः ।**

ವಿವರಣೆ - ಆನಂದಮಯಾಧಿಕರಣದಿಂದ ಅಂತಸ್ಥತ್ವಾಧಿಕರಣಕ್ಕೆ ಗ್ರಂಥಕಾರರು ಒಟ್ಟು ನಾಲ್ಕು ಸಂಗತಿಗಳನ್ನು ತೋರಿಸಿದ್ದಾರೆ. ೧) ಆಕ್ಷೇಪಿಕೀ, ೨) ಪ್ರತ್ಯುದಾಹರಣ, ೩) ಆಪವಾದಿಕೀ, ೪) ಪ್ರಕಾರಾಂತರದಿಂದ ಆಕ್ಷೇಪಿಕೀ ಎಂದು. ಇಲ್ಲಿಯ ತನಕ ಆಕ್ಷೇಪಿಕೀ ಮತ್ತು ಪ್ರತ್ಯುದಾಹರಣರೂಪವಾದ ಸಂಗತಿಗಳನ್ನು ತೋರಿಸಿದರು. ಈಗ ಆಪವಾದಿಕೀ ಮತ್ತು ಪ್ರಕಾರಾಂತರದಿಂದ ಆಕ್ಷೇಪಿಕೀ ಸಂಗತಿಗಳನ್ನು ತೋರಿಸುತ್ತಿದ್ದಾರೆ.

''ಯದ್ವಾ ಯದಿ'' ಇತ್ಯಾದಿವಾಕ್ಯದಿಂದ ಆಪವಾದಿಕೀಸಂಗತಿಯನ್ನು ವಿವರಿಸಿದ್ದಾರೆ. ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯದಿಂದಲೇ ಪೂರ್ವಪಕ್ಷ ಮಾಡಿದರೆ, ಆಪವಾದಿಕೀಸಂಗತಿಯು ಬರುತ್ತದೆ. ಇಂದ್ರಶಬ್ದದ ಶ್ರವಣವಿರುವುದರಿಂದ ಅಂತಸ್ಥನು ಇಂದ್ರನೇ ಆಗಲಿ; ಎಂದು ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯದಿಂದ ಪೂರ್ವಪಕ್ಷ ಬರುತ್ತದೆ. ಬ್ರಹ್ಮಶಬ್ದಶ್ರವಣವು ಸಾವಕಾಶವಾಗಿದೆ. ಅಂತಸ್ಥನಲ್ಲಿ ಶ್ರುತವಾದ ಲಿಂಗವು ನಿರವಕಾಶವಾಗಿದೆಯೆಂದು ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಇಲ್ಲಿ ಅಪವಾದ ಮಾಡುತ್ತಾರೆ.

ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯಕ್ಕೆ ವಿಷಮವಾಗಿ ಪೂರ್ವಪಕ್ಷ ಮಾಡಿದರೆ ಪ್ರತ್ಯುದಾಹರಣಸಂಗತಿ ಎನಿಸುತ್ತದೆ. ಹೀಗೆ ಎರಡು ಸಂಗತಿಗಳನ್ನು ಹೇಳಿದ್ದಾರೆಂದು ಸುಧೆಯ ವಾಕ್ಯವನ್ನು ಎರಡು ಬಗೆಯಲ್ಲಿ ವ್ಯಾಖ್ಯಾನಿಸಬೇಕೆಂದು ತಿಳಿಯುತ್ತದೆ. ಅದು ಹೀಗೆ - ಸುಧೆಯಲ್ಲಿ ಪೂರ್ವಪಕ್ಷಪ್ರಾಪಕವಾದ ಇಂದ್ರಾದಿಶ್ರುತಿಗಳನ್ನು ಮತ್ತು ಲಿಂಗಗಳನ್ನು ಹೇಳಿ ಅನಂತರ ಹೀಗೆ ಹೇಳಿದ್ದಾರೆ - ''ಅನ್ನಂ ಬ್ರಹ್ಮೇತ್ಯಾದಿಶ್ರುತ್ಯಾ ತದ್ಧೇತುವ್ಯಪದೇಶಾದಿತಿ ಲಿಂಗೇನ ಚಾತೀತಾಧಿಕರಣೇ ನಿರ್ಣಯಃ ಕೃತಃ । ನಚೇಂದ್ರಾದಿಶ್ರುತಿರನ್ಯತ್ರ ನೇತುಂ ಶಕ್ಯತೇ । ಪುರಂದರಾದಿಷು ರೂಢತ್ವಾದ್ಯೌಗಿಕತ್ವಾಚ್ಚ'' ಈ ವಾಕ್ಯದಲ್ಲಿ ''ಅನ್ನಂ ಬ್ರಹ್ಮ'' ಎಂಬಲ್ಲಿಂದ ಪ್ರಾರಂಭಿಸಿ ''ನಿರ್ಣಯಃ ಕೃತಃ'' ಎಂಬುದರ ತನಕ ಇರುವ ವಾಕ್ಯವನ್ನು ಹಿಂದಿನ ವಾಕ್ಯದ ಜೊತೆಗೆ ಯೋಜಿಸಿದಾಗ ಆಪವಾದಿಕೀಸಂಗತಿ ತಿಳಿಯುತ್ತದೆ. ಮುಂದಿನ ವಾಕ್ಯದ ಜೊತೆಗೆ ಸೇರಿಸಿದಾಗ ಪ್ರತ್ಯುದಾಹರಣಸಂಗತಿ ತಿಳಿಯುತ್ತದೆ. ''ಅನ್ನಂ ಬ್ರಹ್ಮ'' ಎಂಬ ಶ್ರುತಿಯಿಂದ ಮತ್ತು ''ತದ್ಧೇತುವ್ಯಪದೇಶ'' ಎಂಬ ಲಿಂಗದಿಂದ ಹಿಂದಿನ ಅಧಿಕರಣದಲ್ಲಿ ಆನಂದಮಯನನ್ನು ಬ್ರಹ್ಮನೆಂದು ನಿರ್ಣಯಿಸಿದಿರಿ. ಹಾಗಾದರೆ ಅಂತಸ್ಥನಲ್ಲಿ ಇಂದ್ರಾದಿ ಶ್ರುತಿಗಳಿರುವುದರಿಂದ ಮತ್ತು ಅದೃಶ್ಯತ್ವಾದಿ ಲಿಂಗಗಳು ಇಂದ್ರನಲ್ಲಿಯೇ ಕೇಳಿಸುತ್ತಿರುವುದರಿಂದ ಅಂತಸ್ಥನು ಇಂದ್ರನೇ ಆಗಲಿ ಎಂದು ''ಅನ್ನಂ ಬ್ರಹ್ಮ'' ಇತ್ಯಾದಿ ಸುಧಾವಾಕ್ಯವು ಹಿಂದಿನ ವಾಕ್ಯದ ಜೊತೆಗೆ ಸೇರಿದಾಗ ಆಪವಾದಿಕೀಸಂಗತಿಯನ್ನು ಹೇಳುತ್ತದೆ. ಹಿಂದಿನ ಅಧಿಕರಣದಲ್ಲಿ ''ಅನ್ನಂ ಬ್ರಹ್ಮ'' ಇತ್ಯಾದಿ ಶ್ರುತಿಯು ಬ್ರಹ್ಮನಲ್ಲಿ ಯೋಗವನ್ನು

ಹೇಳುತ್ತಿರುವುದರಿಂದ ಬ್ರಹ್ಮಪರವೇ ಆಗುತ್ತದೆ. ಆದರೆ ಇಂದ್ರಾದಿಶ್ರುತಿಯು ಯೋಗವನ್ನು ಹೇಳದ ಕಾರಣ ಪುರಂದರಾದಿಗಳಲ್ಲಿ ರೂಢವಾದ್ದರಿಂದ ಇಂದ್ರಪರವೇ ಆಗುತ್ತದೆಂದು ಮುಂದಿನ ವಾಕ್ಯದ ಜೊತೆಗೆ ಸೇರಿಸಿದಾಗ ಪ್ರತ್ಯುದಾಹರಣಸಂಗತಿಯನ್ನು ಹೇಳುತ್ತಿದೆ. (ಸುಧೆಯಲ್ಲಿರುವ ಒಂದೇ ವಾಕ್ಯಕ್ಕೆ ಎರಡು ಮಜಲಿನ ಅರ್ಥಗಳನ್ನು ಹೇಳಿರುವ ರಾಯರ ಈ ಅದ್ಭುತ ವ್ಯಾಖ್ಯಾನಕೌಶಲ್ಯವನ್ನು ಸಜ್ಜನರು ಗಮನಿಸಬೇಕು.)

ಈ ಎರಡು ಸಂಗತಿಗಳನ್ನು ವಸ್ತುತಃ ಶ್ರೀಮದಾಚಾರ್ಯರು ಸ್ಪಷ್ಟವಾಗಿ ಹೇಳಿಲ್ಲ. ಆದರೆ ಅನುವ್ಯಾಖ್ಯಾನದ ಮಾತಿನಿಂದ ಸೂಚಿಸಿದ್ದಾರೆ.

ಆಕ್ಷೇಪಿಕೀಸಂಗತಿಯನ್ನು ಪ್ರಾರಂಭದಲ್ಲೇ ಹೇಳಿದ್ದಾರೆ. ಆದರೆ ಮತ್ತೊಂದು ಪ್ರಕಾರದಲ್ಲಿ ಈಗ ''ಯದ್ವಾ'' ಇತ್ಯಾದಿಯಾಗಿ ವಿವರಿಸುತ್ತಿದ್ದಾರೆ. ''ಸತ್ಯಂ ಜ್ಞಾನಮನಂತಂ ಬ್ರಹ್ಮ। ಯೋ ವೇದ ನಿಹಿತಂ ಗುಹಾಯಾಮ್'' ಎಂದು ಮಂತ್ರವರ್ಣದಲ್ಲಿ ಪ್ರತಿಪಾದ್ಯವಾದದ್ದನ್ನೇ ಅನ್ನಮಯಾದಿಪ್ರಕರಣಗಳು ವಿವರಿಸುತ್ತವೆಂದು ಮಾಂತ್ರವರ್ಣಿಕಸೂತ್ರದಲ್ಲಿ ಹೇಳಿದ್ದಾರೆ. ಆದ್ದರಿಂದ ಆನಂದಮಯನು ಅಂತಸ್ಥನಾಗಿದ್ದಾನೆಂದು ಆನಂದಮಯಾಧಿಕರಣದಲ್ಲಿ ಪ್ರತಿಪಾದಿಸಲಾಗಿದೆ. ಆದರೆ ಇಂದ್ರಶ್ರುತಿಯು ಇಂದ್ರನನ್ನು ಅಂತಸ್ಥನೆನ್ನುತ್ತಿದೆಯೆಂದು ಇಲ್ಲಿ ಆಕ್ಷೇಪ ಮಾಡಲಾಗಿದೆಯೆಂದು ಆಕ್ಷೇಪಿಕೀಸಂಗತಿಯನ್ನು ತೋರಿಸಿದ್ದಾರೆ. ಪ್ರಾರಂಭದಲ್ಲಿ ಆನಂದಮಯನ ಧರ್ಮವಾದ ಅದೃಶ್ಯತ್ವವು ಅಂತಸ್ಥನಲ್ಲಿ ಕೇಳಿಸುತ್ತಿರುವುದರಿಂದ ಅಂತಸ್ಥನು ವಿಷ್ಣುವಾಗುವುದಿಲ್ಲ. ಆದ್ದರಿಂದ ಆನಂದಮಯನೂ ಸಹ ವಿಷ್ಣುವಾಗುವುದಿಲ್ಲವೆಂದು ಆಕ್ಷೇಪಿಕೀಸಂಗತಿಯನ್ನು ತೋರಿಸಿದ್ದರು. ಹೀಗೆ ಮೊದಲನೆಯ ಆಕ್ಷೇಪಿಕೀಸಂಗತಿಯಿಂದ ನಾಲ್ಕನೆಯ ಆಕ್ಷೇಪಿಕೀಸಂಗತಿಗೆ ವೈಲಕ್ಷಣ್ಯವನ್ನು ತಿಳಿಯಬೇಕು.

''ಅಂತಃ ಪ್ರವಿಷ್ಟಂ ಕರ್ತಾರಮೇತಂ ದೇವಾನಾಂ ಬಂಧುಂ ನಿಹಿತಂ ಗುಹಾಸು'' ಈ ವಾಕ್ಯಶೇಷವು ಅಂತಸ್ಥನನ್ನೇ ಗುಹಾನಿಹಿತನೆಂದು ಸ್ಪಷ್ಟವಾಗಿ ಹೇಳುತ್ತಿದೆ. ಆದ್ದರಿಂದ ಗುಹಾನಿಹಿತನೇ ಬೇರೆ ಅಂತಸ್ಥನೇ ಬೇರೆಯೆಂದು ಆಕ್ಷೇಪಿಸಬಾರದು.

ನಾಲ್ಕನೆಯ ಈ ಸಂಗತಿಯನ್ನು ಸ್ಪಷ್ಟವಾಗಿ ಆಚಾರ್ಯರು ಹೇಳದಿದ್ದರೂ ಈ ಅಧಿಕರಣದ ''ಅದೃಶ್ಯೇನಾತ್ಮ್ಯೇ'' ಎಂಬ ಭಾಷ್ಯದಿಂದ ಸಮಾನನ್ಯಾಯದಿಂದ ಸೂಚಿಸಿದ್ದಾರೆ. ಅದು ಹೀಗೆ - ಆನಂದಮಯನಲ್ಲಿ ಅದೃಶ್ಯತ್ವವು ಕೇಳಿಸುತ್ತಿದೆ. ಇದೇ ಅದೃಶ್ಯತ್ವವು ಬೇರೆ ಅಂತಸ್ಥನಲ್ಲಿಯೂ ಕೇಳಿಸುತ್ತಿದೆ. ಆದ್ದರಿಂದ ಆನಂದಮಯನು ವಿಷ್ಣುವಾಗಲಾರ ಎಂದು ಹೇಳುವಂತೆ ಆನಂದಮಯನಲ್ಲಿ ಶ್ರುತವಾದ ಅಂತಸ್ಥತ್ವವು ಕೇಳಿಸುತ್ತಿರುವುದರಿಂದ ಆನಂದಮಯನು ವಿಷ್ಣುವಾದರೆ ಅಂತಸ್ಥತ್ವವು ವಿಷ್ಣುವಿನಲ್ಲಿ ಕೂಡುವುದಿಲ್ಲವೆಂದು. ಇದರಂತೆ ಜ್ಯೋತಿರಧಿಕರಣದ ''ಯೋ ವೇದ ನಿಹಿತಂ ಗುಹಾಯಾಮಿತ್ಯುಕ್ತಮ್। ತಚ್ಚಾಗ್ನಿಸೂಕ್ತಗತಸ್ಯ ಜ್ಯೋತಿರ್ಹೃದಯ ಆಹಿತಂ ಯದಿತಿ ಜ್ಯೋತಿಷಃ ಶ್ರೂಯತೇ'' ಎಂದು ಭಾಷ್ಯವು ಗುಹಾನಿಹಿತತ್ವವನ್ನು ಜ್ಯೋತಿಯಲ್ಲಿ ಆಕ್ಷೇಪಿಸಿದೆ. ಇದರಂತೆ ಪ್ರಕೃತದಲ್ಲಿಯೂ ಸಮಾನನ್ಯಾಯದಿಂದ ಗುಹಾನಿಹಿತತ್ವವನ್ನು ಇಂದ್ರಾದಿಗಳಲ್ಲಿ ಆಕ್ಷೇಪಿಸಬಹುದೆಂದು ಸ್ಪಷ್ಟವಾಗಿ ತಿಳಿಯುತ್ತದೆ.

ಹೀಗೆ ಒಟ್ಟು ನಾಲ್ಕು ಬಗೆಯ ಸಂಗತಿಗಳನ್ನು ಗ್ರಂಥಕಾರರು ಅತ್ಯಂತ ಹೃದಯಂಗಮವಾಗಿ ಪ್ರತಿಪಾದಿಸಿದ್ದಾರೆ. ಈ ನಾಲ್ಕು ಸಂಗತಿಗಳಲ್ಲಿ ಮೊದಲನೆಯ ಸಂಗತಿಯನ್ನಷ್ಟೇ ಆಚಾರ್ಯರು ಕಂಠತಃ ಹೇಳಿದ್ದಾರೆ. ಉಳಿದ ಮೂರು ಸಂಗತಿಗಳನ್ನು ತಮ್ಮ ವಾಕ್ಯಗಳ ಶೈಲಿಯಿಂದ ಸೂಚಿಸಿದ್ದಾರೆ.

ಆಕ್ಷೇಪ - ಭಾಷ್ಯಕಾರರು ಪ್ರಾರಂಭದ ಸಂಗತಿಯನ್ನು ಕಂಠತಃ ಹೇಳಿದ್ದಾರೆಂದು ಹೇಳಿದಿರಿ. ಈ ಸಂಗತಿಯು ಅನುಚಿತವಾಗಿದೆ. ಇಂದ್ರಾದಿಗಳಲ್ಲಿ ಅಂತಸ್ಥತ್ವವು ಶ್ರುತವಾದ್ದರಿಂದ ಇಂದ್ರಾದಿಗಳೇ ಆನಂದಮಯರಾಗುತ್ತಾರೆಂದು ಹೇಳುವುದು ಬಹಳ ಸುಲಭ. ಮಧ್ಯದಲ್ಲಿ ಅದೃಶ್ಯತ್ವವನ್ನು ಹೇಳಿದ್ದು ಅನುಚಿತ.

ಸಮಾಧಾನ - ಅದೃಶ್ಯತ್ವವನ್ನು ಕೂಡಲೇ ತಿಳಿಯಬಹುದು; ಅಂತಸ್ಥತ್ವವನ್ನು ತಿಳಿಯುವುದು ವಿಲಂಬವಾಗುತ್ತದೆ. ಆದ್ದರಿಂದ ಗ್ರಂಥಕಾರರ ಮಾರ್ಗ ಸರಿ ಇದೆ.

ಆಕ್ಷೇಪ - ಅಂತಸ್ಥತ್ವದಂತೆ ಅದೃಶ್ಯತ್ವವೂ ಸಹ ವಿಲಂಬವಾಗಿಯೇ ತಿಳಿಯುತ್ತದೆ. ದೇವತೆಗಳಿಂದ ತಿಳಿಯಲಾರನೆಂದು ಹೇಳಿದ ಮಾತ್ರಕ್ಕೆ ಅದೃಶ್ಯತ್ವವು ಸಿದ್ಧವಾಗುವುದಿಲ್ಲ. ಹೊರತಾಗಿ ದೇವತೆಗಳೇ ತಿಳಿಯದ ಮೇಲೆ ಉಳಿದವರು ಹೇಗೆ ತಾನೆ ತಿಳಿದಾರು? ಎಂಬ ಕೈಮುತ್ಯನ್ಯಾಯದಿಂದ ಅದೃಶ್ಯತ್ವವನ್ನು ತಿಳಿಯಬೇಕು.

ಸಮಾಧಾನ - ಅದೃಶ್ಯತ್ವವನ್ನು ಪ್ರಯೋಗಿಸದೆ ಆಕ್ಷೇಪ ಮಾಡಿದರೆ ಅದೃಶ್ಯತ್ವವು ವಿಷ್ಣುವಿನ ಲಿಂಗವಾದ್ದರಿಂದ ವಿಷ್ಣುವೇ ಅಂತಸ್ಥನಾಗುತ್ತಾನೆಂದು ಶಂಕೆ ಬರುತ್ತಿತ್ತು. ಆವಾಗ ಪೂರ್ವಪಕ್ಷದ ಸ್ಥಾಪನೆಯೇ ಆಗುತ್ತಿರಲಿಲ್ಲ. ಆದ್ದರಿಂದ ಅದೃಶ್ಯತ್ವವು ವಿಲಂಬವಾಗಿ ತಿಳಿಯುವುದಾದರೂ ಪೂರ್ವಪಕ್ಷದ ಸ್ಥಾಪನೆಗೆ ಅನಿವಾರ್ಯವಾಗಿದೆ.

ಗ್ರಂಥಕಾರರು ''ಶಂಕಾ ಸ್ಯಾತ್'' ಎಂದಿದ್ದಾರೆ. ಲಿಂಗಮಾತ್ರದಿಂದ ಇಂದ್ರಾದಿಪ್ರಾಪಕವಾದ ಶ್ರುತಿಯನ್ನು ಬಾಧಿಸಲಾಗದು. ಆದ್ದರಿಂದ ವಿಷ್ಣುವೇ ಅಂತಸ್ಥನೆಂಬ ನಿರ್ಧಾರ ಮಾಡುವುದು ಕಷ್ಟ. ಅದಕ್ಕೋಸ್ಕರ ''ಶಂಕಾ ಸ್ಯಾತ್'' ಎಂಬ ಪದವನ್ನು ಬಳಸಿದ್ದಾರೆ.

ಆಕ್ಷೇಪ - ಅದೃಶ್ಯತ್ವದ ಮೂಲಕವೇ ಆಕ್ಷೇಪಿಸಬೇಕು. ಇಲ್ಲವಾದರೆ ಹಿಂದಿನ ಅಧಿಕರಣದಿಂದಲೇ ಅದೃಶ್ಯತ್ವವು ವಿಷ್ಣುವಿನ ಧರ್ಮವೆಂದು ನಿಶ್ಚಿತವಾಗಿದೆ. ಇದರಿಂದ ಅಂತಸ್ಥನಾದವನು ವಿಷ್ಣುವೇ ಆಗುತ್ತಾನೆ. ಇಂದ್ರಾದಿಗಳು ಆಗುವುದಿಲ್ಲವೆಂದು ನೀವು ಉತ್ತರಿಸಿದಿರಿ. ಇದರಂತೆ ನಾವು ಸಹ ಹೇಳುತ್ತೇವೆ. ಅಂತಸ್ಥತ್ವಧರ್ಮದ ಮೂಲಕವೇ ಆಕ್ಷೇಪ ಮಾಡಬೇಕು. ಇಲ್ಲದಿದ್ದರೆ ಹಿಂದಿನ ಅಧಿಕರಣದಲ್ಲಿ ಅಂತಸ್ಥತ್ವವು ವಿಷ್ಣುವಿನ ಧರ್ಮವೆಂದು ನಿಶ್ಚಿತವಾಗಿದೆ. ವಿಷ್ಣುಧರ್ಮವೆಂದು ನಿಶ್ಚಿತವಾದ್ದರಿಂದ ಅಂತಸ್ಥನಾದವನು ವಿಷ್ಣುವೇ ಆಗುತ್ತಾನೆ. ಇಂದ್ರಾದಿಗಳು ಆಗುವುದಿಲ್ಲವೆಂದು ಶಂಕೆಯು ಸಮಾನವಾಗಿದೆಯಲ್ಲವೇ?

ಸಮಾಧಾನ - ಅದೃಶ್ಯತ್ವಧರ್ಮಕ್ಕೂ ಅಂತಸ್ಥತ್ವಧರ್ಮಕ್ಕೂ ವೈಷಮ್ಯವಿದೆ. ಅದೃಶ್ಯತ್ವದಂತೆ ಅಂತಸ್ಥತ್ವವನ್ನು ವಿಷ್ಣುಧರ್ಮವೆಂದು ನಿಶ್ಚಯಿಸಲಾಗದು. ಈ ಅಧಿಕರಣದಲ್ಲಿ ಅಂತಸ್ಥತ್ವವನ್ನು ವಿಷ್ಣುಧರ್ಮವೆಂದು ಸಮನ್ವಯ ಮಾಡುವವರಿದ್ದಾರೆ. ಪ್ರಕೃತ ಪಕ್ಷದಲ್ಲಿ ಸೇರಿದ್ದರಿಂದ ಅಂತಸ್ಥತ್ವವು ಸಂದಿಗ್ಧವೇ ಆಗಿದೆ ಹೊರತು ನಿಶ್ಚಿತವಾಗಿಲ್ಲ. ಸಂದಿಗ್ಧವಾದ ಈ ಅಂತಸ್ಥತ್ವದಿಂದ ಪೂರ್ವಪಕ್ಷವನ್ನು ಶಂಕಿಸುವುದು ತಪ್ಪಾಗುತ್ತದೆ. ಅಷ್ಟೇ ಅಲ್ಲದೆ ಪ್ರಬಲವಾದ ಪೂರ್ವಪಕ್ಷಯುಕ್ತಿಯಿಂದ ಅಂತಸ್ಥತ್ವವು ಇಂದ್ರಾದಿಗಳಲ್ಲೇ ಬರುತ್ತದೆಂದು ಪೂರ್ವಪಕ್ಷಕ್ಕೆ ಪೂರಕವೇ ಆಗುತ್ತದೆ.

ಜಿಜ್ಞಾಸಾಧಿಕರಣದಂತೆ ಜನ್ಮಾದ್ಯಧಿಕರಣಗಳಿಂದಲೂ ಸಂಗತಿಯನ್ನು ತೋರಿಸಬಹುದು. ಅದು ಹೀಗೆ - ಆನಂದಮಯಾಧಿಕರಣದಲ್ಲಿ ಹೇಳಲ್ಪಟ್ಟ ಅದೃಶ್ಯತ್ವಧರ್ಮವನ್ನಷ್ಟೇ ವಿಷ್ಣುವಿನ ಧರ್ಮವಲ್ಲವೆಂದು ಇಲ್ಲಿ

ಆಕ್ಷೇಪಿಸುತ್ತಿಲ್ಲ. ಈಕ್ಷತ್ಯಧಿಕರಣದಲ್ಲಿ ಹೇಳಲ್ಪಟ್ಟ ಈಕ್ಷಿತೃತ್ವವನ್ನು, ಸಮನ್ವಯಾಧಿಕರಣದಲ್ಲಿ ಹೇಳಿದ ಸಮನ್ವಯವನ್ನು, ಶಾಸ್ತ್ರಯೋನಿತ್ವಾಧಿಕರಣದಲ್ಲಿ ಹೇಳಲ್ಪಟ್ಟ ಶಾಸ್ತ್ರಯೋನಿತ್ವವನ್ನು, ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಜಗತ್ಕರ್ತೃತ್ವವನ್ನು, ಮತ್ತು ಜಿಜ್ಞಾಸಾಧಿಕರಣದಲ್ಲಿ ಹೇಳಲ್ಪಟ್ಟ ಜಿಜ್ಞಾಸ್ಯತ್ವವನ್ನೂ ಸಹ ಈ ಅಧಿಕರಣದ ಪೂರ್ವಪಕ್ಷಿಯು ಆಕ್ಷೇಪಿಸುತ್ತಿದ್ದಾನೆ. ಆದ್ದರಿಂದ ಕರ್ತೃತ್ವ ಶಾಸ್ತ್ರಯೋನಿತ್ವ ಮೊದಲಾದ ಧರ್ಮಗಳು ಹಿಂದಿನ ಅಧಿಕರಣಗಳಲ್ಲಿ ವಿಷ್ಣುವಿನಲ್ಲಿ ಸಿದ್ಧವಾದ್ದರಿಂದ ವಿಷ್ಣುವೇ ಅಂತಸ್ಥನಾಗುತ್ತಾನೆಂದು ಪೂರ್ವಪಕ್ಷವನ್ನು ಆಕ್ಷೇಪಿಸಲಾಗದು.

ಇಲ್ಲಿಯ ತನಕ ಪ್ರಸಕ್ತವಾದ ಎಲ್ಲಾ ಅಧಿಕರಣಗಳಲ್ಲಿ ಯಾವ ಯಾವ ಧರ್ಮಗಳು ವಿಷ್ಣುವಿನಲ್ಲಿ ನಿರ್ಣಯಿಸಲಾಗಿವೆಯೋ ಆ ಎಲ್ಲಾ ಧರ್ಮಗಳನ್ನೂ ಈ ಅಧಿಕರಣದ ಪೂರ್ವಪಕ್ಷಿಯು ವಿಷ್ಣುವಿನಲ್ಲಿ ಬರಲಾರವೆಂದು ಆಕ್ಷೇಪಿಸುತ್ತಿದ್ದಾನೆ. ಹಾಗಾಗಿ ಅಂತಸ್ಥತ್ವಾಧಿಕರಣದ ಪೂರ್ವಪಕ್ಷವು ಸುದೃಢವಾಗಿದೆ.




ಹಿಂದಿನ ಅಧಿಕರಣದಲ್ಲಿ, ಆನಂದಮಯ ಪ್ರಕರಣದಲ್ಲಿ 'ಬ್ರಹ್ಮ' ಶಬ್ದವಿರುವುದರಿಂದ. ಆನಂದಮಯ ವಿಷ್ಣುವೆನ್ನುವುದಾದರೆ ಈ ಅಧಿಕರಣದಲ್ಲಿ ಅಂತಸ್ಥನ ಪ್ರಕರಣದಲ್ಲಿ ಇಂದ್ರಾದಿ ಶಬ್ದಗಳಿರುವುದರಿಂದ 'ಅಂತಸ್ಥನು' ಇಂದ್ರಾದಿಗಳೇ ಆಗಲಿ. ಬ್ರಹ್ಮಶಬ್ದವಿಲ್ಲದ್ದರಿಂದ ವಿಷ್ಣುವೆನ್ನುವುದು ಸರಿಯಲ್ಲ ಎಂದು ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯವನ್ನು 'ಅಪವಾದಿಸಿ' ಪೂರ್ವಪಕ್ಷ ಮಾಡುವುದರಿಂದ ಈ ಅಧಿಕರಣಕ್ಕೆ 'ಆಪವಾದಿಕೀ' ಸಂಗತಿಯನ್ನು ತಿಳಿಯಬಹುದು.

ಅಥವಾ 'ಮಾಂತ್ರವರ್ಣಿಕ' ಸೂತ್ರದಲ್ಲಿ ಹೇಳಿದ 'ಗುಹಾನಿಹಿತತ್ವ'ವನ್ನಿಟ್ಟುಕೊಂಡು ಆನಂದಮಯನು ಅಂತಸ್ಥನೆಂದರೆ ಆನಂದಮಯನು ಅಂತಸ್ಥನಲ್ಲ ಎಂದು ಪೂರ್ವಪಕ್ಷ ಹೇಳುವುದರಿಂದ ಮತ್ತೊಂದು ರೀತಿಯ 'ಆಕ್ಷೇಪಿಕೀ' ಸಂಗತಿಯನ್ನಿಟ್ಟುಕೊಳ್ಳಬಹುದು.



## ಅಧಿಕರಣದ ಪೂರ್ವಪಕ್ಷದ ಸ್ಪಷ್ಟೀಕರಣ

## तात्पर्यचन्द्रिका

**अत्रान्तस्स्थः किमिन्द्रादिः किं वा विष्णुरिति चिन्ता । तदर्थं किमिन्द्रादिश्रुत्यनुसारेण समुद्रशायित्वादिलिङ्गं नेयम् उत विपरीतमिति । तदर्थं किं श्रुतिर्निरवकाशा लिङ्गं तु सावकाशम् उत विपरीतम् इति । तथा लिङ्गस्य निरवकाशत्वेऽपि किं श्रुतित्वप्रयुक्तं प्राबल्यं बलवत् किं वा निरवकाशत्वप्रयुक्तं प्राबल्यं बलवत् इति ।।**

ಆಕ್ಷೇಪ - ಭಾಷ್ಯಕಾರರು ಪ್ರಾರಂಭದ ಸಂಗತಿಯನ್ನು ಕಂಠತಃ ಹೇಳಿದ್ದಾರೆಂದು ಹೇಳಿದಿರಿ. ಈ ಸಂಗತಿಯು ಅನುಚಿತವಾಗಿದೆ. ಇಂದ್ರಾದಿಗಳಲ್ಲಿ ಅಂತಸ್ಥತ್ವವು ಶ್ರುತವಾದ್ದರಿಂದ ಇಂದ್ರಾದಿಗಳೇ ಆನಂದಮಯರಾಗುತ್ತಾರೆಂದು ಹೇಳುವುದು ಬಹಳ ಸುಲಭ. ಮಧ್ಯದಲ್ಲಿ ಅದೃಶ್ಯತ್ವವನ್ನು ಹೇಳಿದ್ದು ಅನುಚಿತ.

ಸಮಾಧಾನ - ಅದೃಶ್ಯತ್ವವನ್ನು ಕೂಡಲೇ ತಿಳಿಯಬಹುದು; ಅಂತಸ್ಥತ್ವವನ್ನು ತಿಳಿಯುವುದು ವಿಲಂಬವಾಗುತ್ತದೆ. ಆದ್ದರಿಂದ ಗ್ರಂಥಕಾರರ ಮಾರ್ಗ ಸರಿ ಇದೆ.

ಆಕ್ಷೇಪ - ಅಂತಸ್ಥತ್ವದಂತೆ ಅದೃಶ್ಯತ್ವವೂ ಸಹ ವಿಲಂಬವಾಗಿಯೇ ತಿಳಿಯುತ್ತದೆ. ದೇವತೆಗಳಿಂದ ತಿಳಿಯಲಾರನೆಂದು ಹೇಳಿದ ಮಾತ್ರಕ್ಕೆ ಅದೃಶ್ಯತ್ವವು ಸಿದ್ಧವಾಗುವುದಿಲ್ಲ. ಹೊರತಾಗಿ ದೇವತೆಗಳೇ ತಿಳಿಯದ ಮೇಲೆ ಉಳಿದವರು ಹೇಗೆ ತಾನೆ ತಿಳಿದಾರು? ಎಂಬ ಕೈಮುತ್ಯನ್ಯಾಯದಿಂದ ಅದೃಶ್ಯತ್ವವನ್ನು ತಿಳಿಯಬೇಕು.

ಸಮಾಧಾನ - ಅದೃಶ್ಯತ್ವವನ್ನು ಪ್ರಯೋಗಿಸದೆ ಆಕ್ಷೇಪ ಮಾಡಿದರೆ ಅದೃಶ್ಯತ್ವವು ವಿಷ್ಣುವಿನ ಲಿಂಗವಾದ್ದರಿಂದ ವಿಷ್ಣುವೇ ಅಂತಸ್ಥನಾಗುತ್ತಾನೆಂದು ಶಂಕೆ ಬರುತ್ತಿತ್ತು. ಆವಾಗ ಪೂರ್ವಪಕ್ಷದ ಸ್ಥಾಪನೆಯೇ ಆಗುತ್ತಿರಲಿಲ್ಲ. ಆದ್ದರಿಂದ ಅದೃಶ್ಯತ್ವವು ವಿಲಂಬವಾಗಿ ತಿಳಿಯುವುದಾದರೂ ಪೂರ್ವಪಕ್ಷದ ಸ್ಥಾಪನೆಗೆ ಅನಿವಾರ್ಯವಾಗಿದೆ.

ಗ್ರಂಥಕಾರರು ''ಶಂಕಾ ಸ್ಯಾತ್'' ಎಂದಿದ್ದಾರೆ. ಲಿಂಗಮಾತ್ರದಿಂದ ಇಂದ್ರಾದಿಪ್ರಾಪಕವಾದ ಶ್ರುತಿಯನ್ನು ಬಾಧಿಸಲಾಗದು. ಆದ್ದರಿಂದ ವಿಷ್ಣುವೇ ಅಂತಸ್ಥನೆಂಬ ನಿರ್ಧಾರ ಮಾಡುವುದು ಕಷ್ಟ. ಅದಕ್ಕೋಸ್ಕರ ''ಶಂಕಾ ಸ್ಯಾತ್'' ಎಂಬ ಪದವನ್ನು ಬಳಸಿದ್ದಾರೆ.

ಆಕ್ಷೇಪ - ಅದೃಶ್ಯತ್ವದ ಮೂಲಕವೇ ಆಕ್ಷೇಪಿಸಬೇಕು. ಇಲ್ಲವಾದರೆ ಹಿಂದಿನ ಅಧಿಕರಣದಿಂದಲೇ ಅದೃಶ್ಯತ್ವವು ವಿಷ್ಣುವಿನ ಧರ್ಮವೆಂದು ನಿಶ್ಚಿತವಾಗಿದೆ. ಇದರಿಂದ ಅಂತಸ್ಥನಾದವನು ವಿಷ್ಣುವೇ ಆಗುತ್ತಾನೆ. ಇಂದ್ರಾದಿಗಳು ಆಗುವುದಿಲ್ಲವೆಂದು ನೀವು ಉತ್ತರಿಸಿದಿರಿ. ಇದರಂತೆ ನಾವು ಸಹ ಹೇಳುತ್ತೇವೆ. ಅಂತಸ್ಥತ್ವಧರ್ಮದ ಮೂಲಕವೇ ಆಕ್ಷೇಪ ಮಾಡಬೇಕು. ಇಲ್ಲದಿದ್ದರೆ ಹಿಂದಿನ ಅಧಿಕರಣದಲ್ಲಿ ಅಂತಸ್ಥತ್ವವು ವಿಷ್ಣುವಿನ ಧರ್ಮವೆಂದು ನಿಶ್ಚಿತವಾಗಿದೆ. ವಿಷ್ಣುಧರ್ಮವೆಂದು ನಿಶ್ಚಿತವಾದ್ದರಿಂದ ಅಂತಸ್ಥನಾದವನು ವಿಷ್ಣುವೇ ಆಗುತ್ತಾನೆ. ಇಂದ್ರಾದಿಗಳು ಆಗುವುದಿಲ್ಲವೆಂದು ಶಂಕೆಯು ಸಮಾನವಾಗಿದೆಯಲ್ಲವೇ?

ಸಮಾಧಾನ - ಅದೃಶ್ಯತ್ವಧರ್ಮಕ್ಕೂ ಅಂತಸ್ಥತ್ವಧರ್ಮಕ್ಕೂ ವೈಷಮ್ಯವಿದೆ. ಅದೃಶ್ಯತ್ವದಂತೆ ಅಂತಸ್ಥತ್ವವನ್ನು ವಿಷ್ಣುಧರ್ಮವೆಂದು ನಿಶ್ಚಯಿಸಲಾಗದು. ಈ ಅಧಿಕರಣದಲ್ಲಿ ಅಂತಸ್ಥತ್ವವನ್ನು ವಿಷ್ಣುಧರ್ಮವೆಂದು ಸಮನ್ವಯ ಮಾಡುವವರಿದ್ದಾರೆ. ಪ್ರಕೃತ ಪಕ್ಷದಲ್ಲಿ ಸೇರಿದ್ದರಿಂದ ಅಂತಸ್ಥತ್ವವು ಸಂದಿಗ್ಧವೇ ಆಗಿದೆ ಹೊರತು ನಿಶ್ಚಿತವಾಗಿಲ್ಲ. ಸಂದಿಗ್ಧವಾದ ಈ ಅಂತಸ್ಥತ್ವದಿಂದ ಪೂರ್ವಪಕ್ಷವನ್ನು ಶಂಕಿಸುವುದು ತಪ್ಪಾಗುತ್ತದೆ. ಅಷ್ಟೇ ಅಲ್ಲದೆ ಪ್ರಬಲವಾದ ಪೂರ್ವಪಕ್ಷಯುಕ್ತಿಯಿಂದ ಅಂತಸ್ಥತ್ವವು ಇಂದ್ರಾದಿಗಳಲ್ಲೇ ಬರುತ್ತದೆಂದು ಪೂರ್ವಪಕ್ಷಕ್ಕೆ ಪೂರಕವೇ ಆಗುತ್ತದೆ.

ಜಿಜ್ಞಾಸಾಧಿಕರಣದಂತೆ ಜನ್ಮಾದ್ಯಧಿಕರಣಗಳಿಂದಲೂ ಸಂಗತಿಯನ್ನು ತೋರಿಸಬಹುದು. ಅದು ಹೀಗೆ - ಆನಂದಮಯಾಧಿಕರಣದಲ್ಲಿ ಹೇಳಲ್ಪಟ್ಟ ಅದೃಶ್ಯತ್ವಧರ್ಮವನ್ನಷ್ಟೇ ವಿಷ್ಣುವಿನ ಧರ್ಮವಲ್ಲವೆಂದು ಇಲ್ಲಿ

ಆಕ್ಷೇಪಿಸುತ್ತಿಲ್ಲ. ಈಕ್ಷತ್ಯಧಿಕರಣದಲ್ಲಿ ಹೇಳಲ್ಪಟ್ಟ ಈಕ್ಷಿತೃತ್ವವನ್ನು, ಸಮನ್ವಯಾಧಿಕರಣದಲ್ಲಿ ಹೇಳಿದ ಸಮನ್ವಯವನ್ನು, ಶಾಸ್ತ್ರಯೋನಿತ್ವಾಧಿಕರಣದಲ್ಲಿ ಹೇಳಲ್ಪಟ್ಟ ಶಾಸ್ತ್ರಯೋನಿತ್ವವನ್ನು, ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಜಗತ್ಕರ್ತೃತ್ವವನ್ನು, ಮತ್ತು ಜಿಜ್ಞಾಸಾಧಿಕರಣದಲ್ಲಿ ಹೇಳಲ್ಪಟ್ಟ ಜಿಜ್ಞಾಸ್ಯತ್ವವನ್ನೂ ಸಹ ಈ ಅಧಿಕರಣದ ಪೂರ್ವಪಕ್ಷಿಯು ಆಕ್ಷೇಪಿಸುತ್ತಿದ್ದಾನೆ. ಆದ್ದರಿಂದ ಕರ್ತೃತ್ವ ಶಾಸ್ತ್ರಯೋನಿತ್ವ ಮೊದಲಾದ ಧರ್ಮಗಳು ಹಿಂದಿನ ಅಧಿಕರಣಗಳಲ್ಲಿ ವಿಷ್ಣುವಿನಲ್ಲಿ ಸಿದ್ಧವಾದ್ದರಿಂದ ವಿಷ್ಣುವೇ ಅಂತಸ್ಥನಾಗುತ್ತಾನೆಂದು ಪೂರ್ವಪಕ್ಷವನ್ನು ಆಕ್ಷೇಪಿಸಲಾಗದು.

ಇಲ್ಲಿಯ ತನಕ ಪ್ರಸಕ್ತವಾದ ಎಲ್ಲಾ ಅಧಿಕರಣಗಳಲ್ಲಿ ಯಾವ ಯಾವ ಧರ್ಮಗಳು ವಿಷ್ಣುವಿನಲ್ಲಿ ನಿರ್ಣಯಿಸಲಾಗಿವೆಯೋ ಆ ಎಲ್ಲಾ ಧರ್ಮಗಳನ್ನೂ ಈ ಅಧಿಕರಣದ ಪೂರ್ವಪಕ್ಷಿಯು ವಿಷ್ಣುವಿನಲ್ಲಿ ಬರಲಾರವೆಂದು ಆಕ್ಷೇಪಿಸುತ್ತಿದ್ದಾನೆ. ಹಾಗಾಗಿ ಅಂತಸ್ಥತ್ವಾಧಿಕರಣದ ಪೂರ್ವಪಕ್ಷವು ಸುದೃಢವಾಗಿದೆ.




ಹಿಂದಿನ ಅಧಿಕರಣದಲ್ಲಿ, ಆನಂದಮಯ ಪ್ರಕರಣದಲ್ಲಿ 'ಬ್ರಹ್ಮ' ಶಬ್ದವಿರುವುದರಿಂದ. ಆನಂದಮಯ ವಿಷ್ಣುವೆನ್ನುವುದಾದರೆ ಈ ಅಧಿಕರಣದಲ್ಲಿ ಅಂತಸ್ಥನ ಪ್ರಕರಣದಲ್ಲಿ ಇಂದ್ರಾದಿ ಶಬ್ದಗಳಿರುವುದರಿಂದ 'ಅಂತಸ್ಥನು' ಇಂದ್ರಾದಿಗಳೇ ಆಗಲಿ. ಬ್ರಹ್ಮಶಬ್ದವಿಲ್ಲದ್ದರಿಂದ ವಿಷ್ಣುವೆನ್ನುವುದು ಸರಿಯಲ್ಲ ಎಂದು ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯವನ್ನು 'ಅಪವಾದಿಸಿ' ಪೂರ್ವಪಕ್ಷ ಮಾಡುವುದರಿಂದ ಈ ಅಧಿಕರಣಕ್ಕೆ 'ಅಪವಾದಿಕೀ' ಸಂಗತಿಯನ್ನು ತಿಳಿಯಬಹುದು.

ಅಥವಾ 'ಮಾಂತ್ರವರ್ಣಿಕ' ಸೂತ್ರದಲ್ಲಿ ಹೇಳಿದ 'ಗುಹಾನಿಹಿತತ್ವ'ವನ್ನಿಟ್ಟುಕೊಂಡು ಆನಂದಮಯನು ಅಂತಸ್ಥನೆಂದರೆ ಆನಂದಮಯನು ಅಂತಸ್ಥನಲ್ಲ ಎಂದು ಪೂರ್ವಪಕ್ಷ ಹೇಳುವುದರಿಂದ ಮತ್ತೊಂದು ರೀತಿಯ 'ಆಕ್ಷೇಪಿಕೀ' ಸಂಗತಿಯನ್ನಿಟ್ಟುಕೊಳ್ಳಬಹುದು.



## ಅಧಿಕರಣದ ಪೂರ್ವಪಕ್ಷದ ಸ್ಪಷ್ಟೀಕರಣ

### तात्पर्यचन्द्रिका

**अत्रान्तस्थः किमिन्द्रादिः किं वा विष्णुरिति चिन्ता । तदर्थं किमिन्द्रादिश्रुत्यनुसारेण समुद्रशायित्वादिलिङ्गं नेयम् उत विपरीतमिति । तदर्थं किं श्रुतिर्निरवकाशा लिङ्गं तु सावकाशम् उत विपरीतम् इति । तथा लिङ्गस्य निरवकाशत्वेऽपि किं श्रुतित्वप्रयुक्तं प्राबल्यं बलवत् किं वा निरवकाशत्वप्रयुक्तं प्राबल्यं बलवत् इति ।।**

पूर्वपक्षस्तु – अयमन्तस्स्थ इन्द्रादिरेव, इन्द्रादिश्रुतेरिति । नन्विन्द्रादिषु निर्धारित एक एव अन्तस्स्थ इति वा पूर्वः पक्षः, अनिर्धारितो यः कश्चिदिति वा, सर्वोऽपीति वा ।

नाद्यः, अनेकप्रापकसद्भावेन निर्धारणायोगात् । वरुणादिलिङ्गानां इन्द्रादिश्रुतितो दौर्बल्यनिश्चयेऽपि इन्द्रबृहस्पत्यादिश्रुतीनां साम्येनैकस्याः दौर्बल्यानिश्चयात् । योगेन च बृहस्पत्यादिश्रुतेरिन्द्रे सावकाशत्ववत् बृहस्पत्यादावपि इन्द्रश्रुतेस्सावकाशत्वात् ।

न द्वितीयः, निर्धारणाभावे पूर्वपक्षस्य सन्देहादविशेषापातात् । समुद्रस्थत्वादिविष्णुलिङ्गानामपि सत्त्वेन विष्णोरन्य एवेति अवधारणस्याप्यनुपपत्तेश्च । तेषां लिङ्गत्वादेव दौर्बल्यनिश्चये च सूर्यवरुणादिलिङ्गानामपि तन्निश्चयस्स्यात् ।

न तृतीयः, ''अन्तःप्रविष्टश्शास्ता जनानां सर्वात्मा'' इत्यन्तःप्रविष्टे शास्तृत्वादेः श्रवणेन अनेकेश्वरापातादिति चेत्, आद्यस्तावदस्तु । इन्द्र एवान्तस्स्थः, ''इन्द्रो राजा'' ''ब्रह्मेन्द्रमग्निम्'' इत्यादीन्द्रश्रुत्यभ्यासेन ''अपां नेतारं'' इत्यादिवरुणलिङ्गानां बृहस्पत्यादिश्रुतीनां च बाधादित्येकः पूर्वपक्षः ।

ಅನುವಾದ - ಸಂಶಯಕೋಟಿ - ಅಂತಸ್ಥತ್ವಾಧಿಕರಣದಲ್ಲಿ ಅಂತಸ್ಥನಾದವನು ಇಂದ್ರಾದಿಗಳೊ? ಅಥವಾ ವಿಷ್ಣುವೋ? ಎಂದು ಸಂಶಯ. ಈ ಸಂಶಯವು ಪರಿಹಾರವಾಗಬೇಕೆಂದರೆ ಇಂದ್ರಾದಿಶ್ರುತಿಗೆ ಅನುಸಾರಿಯಾಗಿ ಸಮುದ್ರಶಾಯಿತ್ವಾದಿ ಲಿಂಗಗಳನ್ನು ಅರ್ಥೈಸಬೇಕೋ? ಅಥವಾ ಸಮುದ್ರಶಾಯಿತ್ವಾದಿಲಿಂಗಗಳಿಗೆ ಅನುಸಾರಿಯಾಗಿ ಇಂದ್ರಾದಿಶ್ರುತಿಗಳನ್ನು ಅರ್ಥೈಸಬೇಕೋ? ಈ ಸಂಶಯವು ಪರಿಹಾರವಾಗಬೇಕೆಂದರೆ ಶ್ರುತಿಯು ನಿರವಕಾಶ, ಲಿಂಗವು ಸಾವಕಾಶವೆಂದು ಹೇಳಬೇಕೋ? ಅಥವಾ ಲಿಂಗವು ನಿರವಕಾಶ, ಶ್ರುತಿಯು ಸಾವಕಾಶವೆನ್ನಬೇಕೋ? ಇದರಂತೆ, ಲಿಂಗವು ನಿರವಕಾಶವಾದರೂ ಶ್ರುತಿತ್ವಪ್ರಯುಕ್ತವಾಗಿ ಶ್ರುತಿಯು ಪ್ರಬಲವಾಗುತ್ತದೋ? ಅಥವಾ ನಿರವಕಾಶಪ್ರಯುಕ್ತವಾಗಿ ಲಿಂಗವು ಪ್ರಬಲವಾಗುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು.

ಪೂರ್ವಪಕ್ಷ - ಈ ಅಂತಸ್ಥನು ಇಂದ್ರಾದಿಗಳೇ ಆಗುತ್ತಾರೆ. ಇಂದ್ರಾದಿಶ್ರುತಿಗಳೇ ಈ ವಿಷಯದಲ್ಲಿ ಆಧಾರವೆಂದು ಪೂರ್ವಪಕ್ಷ.

ಪ್ರಶ್ನೆ - ಇಂದ್ರಾದಿಗಳನ್ನು ಅಂತಸ್ಥನೆನ್ನುವ ಪೂರ್ವಪಕ್ಷಿಗಳ ಅಭಿಪ್ರಾಯವೇನು? ಇಂದ್ರಾದಿಗಳ

ಮಧ್ಯದಲ್ಲಿ ನಿರ್ಧಾರಮಾಡಿ ಒಬ್ಬನನ್ನೇ ಅಂತಸ್ಥನೆನ್ನುತ್ತೀರೋ? ಅಥವಾ ನಿರ್ಧಾರ ಮಾಡದೆ ಯಾರಾದರೂ ಒಬ್ಬ ಅಂತಸ್ಥನೆನ್ನುತ್ತೀರೋ? ಅಥವಾ ಇಂದ್ರಾದಿ ಎಲ್ಲ ದೇವತೆಗಳನ್ನು ಅಂತಸ್ಥನೆನ್ನುತ್ತೀರೋ? ಮೊದಲನೆಯ ಪಕ್ಷ ತಪ್ಪು. ಅನೇಕ ದೇವತೆಗಳನ್ನು ಅಂತಸ್ಥನೆಂದು ಶ್ರುತಿಗಳು ಹೇಳುತ್ತಿರುವಾಗ ನಿರ್ಧಾರ ಮಾಡಿ ಒಬ್ಬನನ್ನೇ ಅಂತಸ್ಥನೆನ್ನುವುದು ತಪ್ಪಾಗುತ್ತದೆ.

ಅನೇಕ ದೇವತೆಗಳನ್ನು ಅಂತಸ್ಥರೆಂದು ಶ್ರುತಿಗಳು ಹೇಳುತ್ತಿರುವಂತೆ ತೋರಬಹುದು. ಆದರೆ ಇಂದ್ರನನ್ನೇ ನಾವು ನಿರ್ಧಾರ ಮಾಡಿ ಅಂತಸ್ಥನೆನ್ನುತ್ತೇವೆ. ವರುಣಾದಿಲಿಂಗಗಳೆಲ್ಲವೂ ಈ ಇಂದ್ರಶ್ರುತಿಯ ಮುಂದೆ ದುರ್ಬಲವಾಗಿವೆಯೆಂದು ಪೂರ್ವಪಕ್ಷಿಗಳು ಉತ್ತರಿಸಬಹುದು. ಆದರೆ ಇದು ಸರಿಯಲ್ಲ. ಶ್ರುತಿಯು ಇಂದ್ರನನ್ನು ಅಂತಸ್ಥನೆನ್ನುವಂತೆ ಬೃಹಸ್ಪತ್ಯಾದಿಗಳನ್ನು ಅಂತಸ್ಥರೆಂದು ಸಮರ್ಥಿಸುವ ಅನೇಕ ಶ್ರುತಿಗಳಿವೆ. ಹೀಗೆ ಉಳಿದ ದೇವತೆಗಳಲ್ಲಿಯೂ ಶ್ರುತಿಪ್ರಮಾಣವು ಸಮಾನವಾಗಿರುವಾಗ ಇಂದ್ರನನ್ನೇ ಅಂತಸ್ಥನೆಂದು ನಿರ್ಧಾರ ಮಾಡಲು ಸಾಧ್ಯವಿಲ್ಲ. ಮತ್ತು ಕಾರಣವಿಲ್ಲದೆ ಒಂದನ್ನು ಬಿಟ್ಟು ಉಳಿದ ಶ್ರುತಿಗಳನ್ನು ದುರ್ಬಲವೆನ್ನುವುದು ತಪ್ಪಾಗುತ್ತದೆ.

ಬೃಹಸ್ಪತ್ಯಾದಿಗಳಲ್ಲಿ ಶ್ರುತಿಪ್ರಮಾಣವಿರಬಹುದು. ಆದರೆ ಬೃಹಸ್ಪತ್ಯಾದಿಶಬ್ದಗಳಿಗೆ ಯೋಗವನ್ನು ಅಂಗೀಕರಿಸಿ ಇಂದ್ರಪರವಾಗಿ ಅರ್ಥೈಸಬಹುದು. ಬೃಹಸ್ಪತ್ಯಾದಿಶ್ರುತಿಗಳು ಸಾವಕಾಶವಾಗಿವೆ. ಇಂದ್ರಶ್ರುತಿಯು ನಿರವಕಾಶವಾಗಿದೆಯೆಂದು ಪುನಃ ಪೂರ್ವಪಕ್ಷಿಗಳು ಉತ್ತರಿಸಬಹುದು. ಆದರೆ ಇದೂ ಸಹ ಸರಿಯಲ್ಲ. ಇಂದ್ರಾದಿಶಬ್ದಗಳನ್ನೇ ಬೃಹಸ್ಪತ್ಯಾದಿಗಳಲ್ಲಿ ಸಾವಕಾಶ ಮಾಡಲು ಬರುತ್ತದೆ. ಬೃಹಸ್ಪತಿಶ್ರುತಿಯನ್ನೇ ಸಾವಕಾಶ ಮಾಡಬೇಕೆನ್ನಲು ಏನು ವಿನಿಗಮಕ? ಆದ್ದರಿಂದ ಪೂರ್ವಪಕ್ಷಿಗಳಿಗೆ ಇಂದ್ರನನ್ನೇ ಅಂತಸ್ಥನೆಂದು ನಿರ್ಧಾರವಾಗಿ ಹೇಳಲು ಸಾಧ್ಯವಿಲ್ಲ.

ಎರಡನೆಯ ಪಕ್ಷವು ತಪ್ಪು. ನಿರ್ಧಾರ ಮಾಡದೆ ಯಾರನ್ನಾದರೊಬ್ಬನನ್ನು ಅಂತಸ್ಥನೆನ್ನಬೇಕು. ಆವಾಗ ಪೂರ್ವಪಕ್ಷಕ್ಕೂ ಮತ್ತು ಸಂದೇಹಕ್ಕೂ ವ್ಯತ್ಯಾಸವೇ ಇಲ್ಲದಂತಾಗುತ್ತದೆ. ಅನಿರ್ಧಾರಿತವಾಗಿ ಹೇಳುವುದೇ ಸಂದೇಹ. ಈಗ ಪೂರ್ವಪಕ್ಷವನ್ನು ಹಾಗೆ ಮಾಡಿದರೆ ಸಂದೇಹ ಯಾವುದು ಪೂರ್ವಪಕ್ಷ ಯಾವುದೆಂದು ತಿಳಿಯದು. ವಿಷ್ಣುವಿಗಿಂತ ಅನ್ಯನಾದವನೆ ಅಂತಸ್ಥನೆಂದು ಪೂರ್ವಪಕ್ಷದಲ್ಲಿ ಹೇಳುತ್ತೇವೆಂದು ಉತ್ತರಿಸಲಾಗದು. ''ಸಮುದ್ರಸ್ಥತ್ವ'' ಮೊದಲಾದ ವಿಷ್ಣುಲಿಂಗಗಳಿರುವುದರಿಂದ ವಿಷ್ಣುವಿಗಿಂತ ಬೇರೆಯವರೇ ಎಂದು ಖಚಿತವಾಗಿ ಸಮರ್ಥಿಸಲಾಗದು. ಸಮುದ್ರಸ್ಥತ್ವವು ಲಿಂಗವಾದ್ದರಿಂದ ದುರ್ಬಲವಾಗಿದೆಯೆಂದು ಹೇಳಿದರೆ, ಸೂರ್ಯವರುಣಾದಿಲಿಂಗಗಳೂ ಸಹ ಲಿಂಗಗಳಾದ್ದರಿಂದ ಸೂರ್ಯವರುಣಾದಿಗಳನ್ನೂ ಸಹ ಪೂರ್ವಪಕ್ಷದಲ್ಲಿ ಸೇರಿಸಲಾಗದು.

ಇಂದ್ರಾದಿ ಸಕಲದೇವತೆಗಳೂ ಸಹ ಅಂತಸ್ಥರಾಗಿದ್ದಾರೆಂಬ ಮೂರನೇ ಪಕ್ಷವು ತಪ್ಪು. ''ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಂ ಸರ್ವಾತ್ಮಾ'' ಎಂಬ ಶ್ರುತಿಯು ಅಂತಸ್ಥನನ್ನೇ ನಿಯಾಮಕನೆನ್ನುತ್ತಿದೆ. ನೀವು ಎಲ್ಲರನ್ನು ಅಂತಸ್ಥರೆಂದು ಹೇಳಿದರೆ ಪ್ರತಿಯೊಬ್ಬರೂ ನಿಯಾಮಕರಾಗಬೇಕಾಗುತ್ತದೆ. ಹೀಗೆ ಮೂರು ಪಕ್ಷಗಳಲ್ಲಿಯೂ ದೋಷವಿರುವುದರಿಂದ ಪೂರ್ವಪಕ್ಷವನ್ನು ಹೇಗೆ ಮಾಡಲು ಸಾಧ್ಯ?

ಉತ್ತರ - ಮೊದಲನೆಯ ಪಕ್ಷವನ್ನೇ ಹೇಳುತ್ತೇವೆ. ಇಂದ್ರನೇ ಅಂತಸ್ಥನಾಗಿದ್ದಾನೆಂಬ ವಿಷಯದಲ್ಲಿ "ಇಂದ್ರೋ ರಾಜಾ" "ಬ್ರಹ್ಮೇಂದ್ರಮಗ್ನಿಮ್" ಎಂಬ ಇಂದ್ರಶ್ರುತಿಯ ಅಭ್ಯಾಸವೇ ಅಧಾರವಾಗಿದೆ. ಈ ಶ್ರುತಿಯು "ಅಪಾಮ್ ನೇತಾರಮ್" ಇತ್ಯಾದಿ ವರುಣಲಿಂಗಗಳನ್ನು ಬೃಹಸ್ಪತ್ಯಾದಿಶ್ರುತಿಗಳನ್ನು ಬಾಧಿಸುತ್ತದೆ. ಇಷ್ಟು ಮೊದಲನೆಯ ಪೂರ್ವಪಕ್ಷ.

### ಕಠಿಣಪದಾರ್ಥ

ಸಮುದ್ರಶಾಯಿತ್ವಾದಿಲಿಂಗಮ್ = "ಸಮುದ್ರೇಽಂತಃ ಕವಯೋ ವಿಚಕ್ಷತೇ । ಯಸ್ಯಾಂಡಕೋಶಂ ಶುಷ್ಮಮಾಹುಃ" ಇತ್ಯಾದಿಯಾಗಿ ಹೇಳಲ್ಪಟ್ಟ ಲಿಂಗವನ್ನು, ವಿಪರೀತಮ್ = ಲಿಂಗಕ್ಕೆ ಅನುಸಾರಿಯಾಗಿ ಶ್ರುತಿಯನ್ನು ಅರ್ಥೈಸಬೇಕು, ವಿಪರೀತಮ್ = ಲಿಂಗವು ನಿರವಕಾಶ, ಶ್ರುತಿಯು ಸಾವಕಾಶವೆಂದು, ಇಂದ್ರಾದಿರೇವ = ಇಂದ್ರ, ಅಗ್ನಿ, ಬೃಹಸ್ಪತಿ, ಸೂರ್ಯ, ವರುಣ ಇವರೇ ಮೊದಲಾದವರು.

**प्रकाशः** – एवं सङ्गतीर्निरूप्य विषयसंशयटीकां व्यनक्ति – **अत्रेति** ।।

अन्तः प्रविष्टं कर्तारमेतमन्तश्चन्द्रमसि मनसा चरन्तम् ।
सहैव सन्तं न विजानन्ति देवाः

इत्यादिना तैत्तिरीये श्रुतोऽन्तस्स्थो विषय इति ध्येयम् ।। **समुद्रशायित्वादीति** ।। "समुद्रे अन्तः कवयो विचक्षते । यस्याण्डकोशं शुष्ममाहुः" इत्याद्युक्तलिङ्गमित्यर्थः ।। **विपरीतमिति** ।। लिङ्गानुसारेण श्रुतिर्नेयेत्यर्थः ।। **उत विपरीतमिति** ।। लिङ्गं निरवकाशं, श्रुतिः सावकाशेत्यर्थः ।। **तथेति** ।। इयं चिन्ता पूर्वोक्तचिन्तायां न फलफलिभावापन्ना, किन्तु चिन्तान्तरमिति, 'तदर्थं' इत्यनुक्त्वा 'तथा' इत्युक्तम् ।

एतच्चिन्तोक्तिस्तु यथा तृतीयचिन्ता द्वितीयचिन्तोपयुक्ता, तथेयमपि द्वितीयचिन्तोपयुक्तेति तृतीयचिन्तायाः समुच्चयार्थेति ध्येयम् । तथा हि – यदीन्द्रादिश्रुतिर्निरवकाशा, समुद्रान्तस्स्थत्वादिलिङ्गं सावकाशं, यदि वा लिङ्गस्य निरवकाशत्वेऽपि श्रुतित्वप्रयुक्तप्राबल्यमेव बलवत् तदा श्रुत्यनुसारेण लिङ्गस्य सावकाशस्य च निरवकाशस्य वा नेयत्वादन्तस्स्थ इन्द्रादिरिति पूर्वपक्षे फलफलिभावः, यदि च लिङ्गं निरवकाशं, श्रुतिः सावकाशा, निरवकाशत्वप्रयुक्तमेव च प्राबल्यं बलवत्, तदा लिङ्गानुरोधेन सावकाशश्रुतेर्नेयत्वात् अन्तस्स्थो विष्णुरिति सिद्धान्ते फलफलिभावश्च स्फुटत्वान्नोक्तः । एतास्तु चिन्ता आद्यसूत्रसूचिताः ।

ಪರಿಪೂರ್ಣಚಂದ್ರಿಕಾ

द्वितीयसूत्रसूचितास्तु – अन्तस्स्थ इन्द्रादिरुत विष्णुरेव, तदर्थं विष्णुलिङ्गमिन्द्रादौ नेतुं शक्यम् उत नेति, तदर्थमुभयप्रापकश्रुतिलिङ्गसद्भावेन द्वयोरभेद उत "इन्द्रस्यात्मा" इति भेदव्यपदेशाद्भेदः, तदर्थमात्मशब्दः स्वरूपपरः किं वा नियामकपरः, स्वरूपार्थत्वे च 'इन्द्रस्य' इति षष्ठी युज्यते न वेत्याद्या ऊहनीया इति भावः ।

तथा च वक्ष्यत्यभेदपूर्वपक्षम् ।। **अन्तस्थ इन्द्रादिरेवेति** ।। इन्द्राग्निबृहस्पति-सूर्यवरुणादिः ।। **इन्द्रादिश्रुतेरिति** ।। "इन्द्रो राजा जगतो य ईशे" "ब्रह्मेन्द्रमग्निं जगतः प्रतिष्ठां" "दिव आत्मानं बृहस्पतिं" "त्वष्टारं रूपाणि विकुर्वन्तं" इतीन्द्राग्न्यादिश्रुतेरित्यर्थः । उपलक्षणमेतत्, "अपां नेतरं" इत्यादिवरुणलिङ्गादित्यपि ध्येयम् । अत्र टीकोक्तं पूर्वपक्षं त्रेधा साधयितुं विकल्पेनाक्षिपति – **नन्विति** ।। लिङ्गानां दौर्बल्यात् श्रुत्या निर्णयः स्यादित्यत आह – **वरुणादीति** ।। **योगेनेति** ।। बृहस्पतिश्रुतेः बृहतां देवानां पतिः बृहस्पतिरित्यादिरूपेणेन्द्रे कथञ्चिद्योगवृत्त्या-श्रयेण, इन्द्रशब्दस्य स्वाधमापेक्षया ऐश्वर्ययुते बृहस्पतावपि सावकाशत्वसम्भवा-दित्यर्थः ।

नन्विन्द्रादिष्वयमेवान्तस्स्थ इति निर्णयाभावेऽपि विष्णोरन्य एव न तु विष्णुरित्यवधारणं युज्यते । अत एव टीकायां "अन्तस्स्थोऽन्य एव" इत्युक्तमित्यत आह – **समुद्रस्थत्वेति** ।। **सूर्यवरुणादीति** ।। तथा च पुनस्सन्देह एवापन्न इति भावः । सर्वेऽपीति पक्षं निरस्यति – **न तृतीय इति** ।। **शास्तृत्वादेरिति** । आदिपदेन कर्तृत्वसर्ववेद्यत्वादेर्ग्रहः । 'इत्यादि' इत्यादिपदेन "इन्द्रं राजानं सवितारमेतं" "मह्यमिन्द्रो नियच्छतु" "अर्वाङायातु वसुभीरश्मिरिन्द्रः" "सविता मे नियच्छतु" "स न इन्द्रः कामवरं ददातु" "इन्द्रं निचिक्युः परमे व्योमन्" इत्यादेर्ग्रहः । यथा पूर्वाधिकरणे ब्रह्मशब्दाभ्यासेन शरीरित्वविकारार्थत्वाद्यन्यलिङ्गानामन्यथा नयनं, तथेत्यर्थः ।

ननु कथमत्र इन्द्रशब्दाभ्यासान्निर्णयः, "सवितारं बृहस्पतिं" "सवितारमेतं" "सविता मे नियच्छतु" इति सवितृशब्दाभ्यासस्य सत्त्वात्, तथा "अग्निं जगतः प्रतिष्ठां" "मय्ययमग्निर्दधातु" "अग्निस्ताऽअग्रे प्रमुमोक्तु देवः" इत्यग्निशब्दस्य

चाभ्यासादिति चेदयमाशयः – सवित्रादिशब्दाभ्यासापेक्षया इन्द्रादिशब्दानां बाहुल्यात् बहुबाधस्यान्याय्यत्वात्, पूर्वाधिकरणे इन्द्रबृहस्पत्यादीनां सूर्याधिष्ठातृत्वेन प्राप्तिकथनवदिन्द्रस्य "जगतो य ईशे" इति वचनेन सवित्राद्युत्तमत्वेन तदधिष्ठातृत्वेन सवित्रादिशब्दवाच्यत्वसम्भवाच्चेन्द्र इत्यवधारणोपपत्तिः । तथा च श्रुतिः "इन्द्रो वै देवानामोजिष्ठः" इति ॥

**गुरुराजीयम् – विपरीतमिति** ॥ समुद्रशायित्वादिलिङ्गं निरवकाशमिन्द्रादिश्रुतिः सावकाशेति विपरीतमित्यर्थः । वरुणादिप्रापकलिङ्गसद्भावेपि श्रुत्येन्द्र एवेति निर्धारणं भविष्यत्येव । श्रुत्यपेक्षया लिङ्गानां दौर्बल्यस्य निश्चितत्वादित्यत आह – **वरुणादीति** ॥ तथा च न निश्चय इति भावः । ननु बृहस्पत्यादिश्रुतेरपि योगेनेन्द्रे सावकाशत्वान्नानिर्धारणमित्यत आह – **योगेन चेति** ॥ नन्वन्तस्स्थो विष्णुः अन्यो वेति सन्देहे अन्य एवेत्यवधारणेन प्रवृत्तस्य पूर्वपक्षस्य सन्देहाद्विशेषः सम्भवतीत्यतः विष्णोरन्य एवेत्यवधारणमनुपपन्नमित्याह – **समुद्रस्थत्वादीति** ॥ **अनेकेश्वरापातादिति** ॥ न चास्त्वनेकेश्वरापात इति वाच्यम् । अनेकेषां संमत्ययोगेन विमतौ प्रवृत्त्यादिकमेव न स्यादिति भावः । नन्विन्द्र एवान्तस्स्थ इत्यवधारणमयुक्तम् । वरुणादिप्रापकलिङ्गादेः सत्त्वादित्यत आह – **इन्द्र इति** ॥ इन्द्रबृहस्पत्यादिश्रुतीनां श्रुतित्वाविशेषेपीन्द्रश्रुतेरभ्यस्ताया बलवत्त्वादिति भावः ।

ವಿವರಣೆ - ಇಲ್ಲಿಯ ತನಕ ಸಂಗತಿಯನ್ನು ವಿವರಿಸಿದ್ದಾಯಿತು. ಈಗ ವಿಷಯ ಮತ್ತು ಸಂಶಯಗಳನ್ನು ವಿವರಿಸುವ ಟೀಕೆಯನ್ನು "ಅತ್ರ" ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ. "ಅಂತಃಪ್ರವಿಷ್ಟಂ ಕರ್ತಾರಮೇತಮಂತಶ್ಚಂದ್ರಮಸಿ ಮನಸಾ ಚರಂತಮ್ । ಸಹೈವ ಸಂತಂ ನ ವಿಜಾನಂತಿ ದೇವಾಃ" ಹೀಗೆ ತೈತ್ತಿರೀಯದಲ್ಲಿ ಕೇಳಿಸುತ್ತಿರುವ ಅಂತಸ್ಥನೇ ವಿಷಯನಾಗಿದ್ದಾನೆ.

ಗ್ರಂಥಕಾರರು ಒಟ್ಟು ನಾಲ್ಕು ಸಂಶಯ ಕೋಟಿಗಳನ್ನು ತೋರಿಸಿದ್ದಾರೆ. ಇವುಗಳಲ್ಲಿ ಕೊನೆಯ ಸಂಶಯ ಕೋಟಿಯು ಮೂರನೆಯ ಸಂಶಯ ಕೋಟಿಗೆ ಫಲ(ಹೇತು)ರೂಪವಾಗಿ ಇರುವುದಿಲ್ಲ. ಹೊರತಾಗಿ ಮೂರನೆಯ ಸಂಶಯ ಕೋಟಿಯು ಎರಡನೆಯ ಸಂಶಯ ಕೋಟಿಗೆ ಹೇಗೆ ಫಲರೂಪವಾಗಿದೆಯೋ, ಅದರಂತೆ ಇದೂ ಸಹ ಫಲರೂಪವಾಗಿದೆ. ಅದ್ದರಿಂದಲೇ ಗ್ರಂಥಕಾರರು "ತದರ್ಥಮ್"ಎನ್ನದೆ "ತಥಾ" ಎಂದಿದ್ದಾರೆ.

ಪೂರ್ವಪಕ್ಷದ ಫಲಫಲಿಭಾವ ಹೀಗಿದೆ - ಒಂದು ವೇಳೆ ಇಂದ್ರಾದಿಶ್ರುತಿಯು ನಿರವಕಾಶವಾಗಿ "ಸಮುದ್ರಾಂತಸ್ಥತ್ವ" ಮೊದಲಾದ ಲಿಂಗಗಳು ಸಾವಕಾಶವಾದರೆ, ಅಥವಾ ಲಿಂಗವು ನಿರವಕಾಶವಾದರೂ ಸ್ವಭಾವತಃ ಪ್ರಾಬಲ್ಯವನ್ನಿಟ್ಟುಕೊಂಡು ಶ್ರುತಿಯೇ ಬಲಶಾಲಿ ಎನ್ನುವುದಾದರೆ ಆವಾಗ ಶ್ರುತಿಗೆ ಅನುಸಾರಿಯಾಗಿ

ಲಿಂಗವನ್ನು ಅರ್ಥೈಸಬೇಕು. ಆವಾಗ ಲಿಂಗವು ಸಾವಕಾಶವಾದರೂ, ನಿರವಕಾಶವಾದರೂ ದುರ್ಬಲ-ವಾಗುತ್ತದೆ. ಆದ್ದರಿಂದ ಇಂದ್ರಾದಿಗಳೇ ಅಂತಸ್ಥರೆಂದು.

ಸಿದ್ಧಾಂತದ ಫಲಫಲಿಭಾವ - ಒಂದು ವೇಳೆ ಲಿಂಗವು ನಿರವಕಾಶವಾಗಿ, ಶ್ರುತಿಯು ಸಾವಕಾಶವಾದರೆ ನಿರವಕಾಶವಾದದ್ದೇ ಬಲಿಷ್ಠವಾಗುತ್ತದೆ. ಲಿಂಗಕ್ಕೆ ಅನುಸಾರಿಯಾಗಿ ಸಾವಕಾಶವಾದ ಶ್ರುತಿಯನ್ನು ಅರ್ಥೈಸಬೇಕು. ಆವಾಗ ಅಂತಸ್ಥನಾದವನು ವಿಷ್ಣುವೇ ಆಗುತ್ತಾನೆಂದು.

ಗ್ರಂಥಕಾರರು ಹೇಳಿದ ಈ ಸಂಶಯಕೋಟಿಗಳು ಮೊದಲನೆಯ ಸೂತ್ರದಿಂದಷ್ಟೇ ಸೂಚಿತವಾಗಿವೆ. ಎರಡನೆಯ ಸೂತ್ರದಿಂದ ಸೂಚಿಸಿದ ಸಂಶಯಗಳನ್ನು ಹೀಗೆ ತಿಳಿಯಬೇಕು - ೧) ಅಂತಸ್ಥನು ಇಂದ್ರಾದಿಗಳೊ? ಅಥವಾ ವಿಷ್ಣುವೊ? ೨) ಈ ಸಂಶಯವು ಪರಿಹಾರವಾಗಬೇಕೆಂದರೆ ವಿಷ್ಣುಲಿಂಗವನ್ನು ಇಂದ್ರಾದಿಗಳಲ್ಲಿ ಕೊಂಡೊಯ್ಯಲು ಸಾಧ್ಯವಿದೆಯೋ? ಇಲ್ಲವೊ? ಎಂಬ ಸಂಶಯವು ಪರಿಹಾರವಾಗಬೇಕು. ೩) ಈ ಸಂಶಯವು ಪರಿಹಾರವಾಗಬೇಕೆಂದರೆ ಉಭಯರಲ್ಲಿಯೂ ಸಮಾನವಾದ ಶ್ರುತಿಲಿಂಗಗಳು ಇರುವುದರಿಂದ ಇಬ್ಬರಿಗೂ ಅಭೇದವನ್ನು ಹೇಳಬೇಕೋ? ಅಥವಾ ''ಇಂದ್ರಸ್ಯಾತ್ಮಾ'' ಎಂದು ಭೇದವು ಕೇಳಿಸುತ್ತಿರುವುದರಿಂದ ಭೇದವನ್ನು ಹೇಳಬೇಕೋ? ಎಂಬ ಸಂಶಯವು ಪರಿಹಾರವಾಗಬೇಕು. ೪) ಈ ಸಂಶಯವು ಪರಿಹಾರವಾಗಬೇಕೆಂದರೆ ಆತ್ಮಶಬ್ದಕ್ಕೆ ಸ್ವರೂಪ ಎಂದರ್ಥವೋ? ಅಥವಾ ನಿಯಾಮಕವೆಂದರ್ಥವೊ? ಎಂಬ ಸಂಶಯವು ಪರಿಹಾರವಾಗಬೇಕು. ೫) ಈ ಸಂಶಯವು ಪರಿಹಾರವಾಗಬೇಕೆಂದರೆ ಆತ್ಮಶಬ್ದಕ್ಕೆ ಸ್ವರೂಪ ಎಂಬರ್ಥವನ್ನು ಹೇಳಿದಾಗ ಷಷ್ಠೀವಿಭಕ್ತಿಯು ಸರಿಹೊಂದುತ್ತದೋ ಇಲ್ಲವೊ? ಎಂಬ ಸಂಶಯವು ಪರಿಹಾರವಾಗಬೇಕು. ಇದರಂತೆ ಇನ್ನೂ ಅನೇಕ ಸಂಶಯಗಳನ್ನು ಊಹಿಸಿಕೊಳ್ಳಬೇಕು. ಮುಂದೆ ಗ್ರಂಥಕಾರರು ಅಭೇದಪರವಾದ ಪೂರ್ವಪಕ್ಷವನ್ನು ಮಾಡುತ್ತಾರಾದ್ದರಿಂದ ಆದಕ್ಕನುಗುಣವಾಗಿ ಈ ಸಂಶಯಕೋಟಿಗಳನ್ನು ಮೊದಲೇ ಊಹಿಸಿಕೊಳ್ಳಬೇಕು.

''ಇಂದ್ರೋ ರಾಜಾ ಜಗತೋ ಯ ಈಶೇ'' ''ಬ್ರಹ್ಮೇಂದ್ರಮಗ್ನಿಂ ಜಗತಃ ಪ್ರಿತಷ್ಠಾಂ'' ''ದಿವ ಆತ್ಮಾನಗ್ಂ ಸವಿತಾರಂ ಬೃಹಸ್ಪತಿಂ'' ''ತ್ವಷ್ಟಾರಂ ರೂಪಾಣಿ ವಿಕುರ್ವಂತಂ'' ಇವೇ ಮೊದಲಾದ ಇಂದ್ರ, ಅಗ್ನಿ, ಸೂರ್ಯ, ಬೃಹಸ್ಪತಿ, ತ್ವಷ್ಟೃ ಶ್ರುತಿಗಳು ಇರುವುದರಿಂದ ಇಂದ್ರಾದಿಗಳೇ ಅಂತಸ್ಥರಾಗುತ್ತಾರೆಂದು ಪೂರ್ವಪಕ್ಷ. ಉಪಲಕ್ಷಣಯಾ ''ಅಪಾಂ ನೇತಾರಮ್'' ಇತ್ಯಾದಿ ವರುಣಲಿಂಗವನ್ನೂ ಸಹ ತಿಳಿಯಬೇಕು. ಟೀಕೆಯಲ್ಲಿ ಹೇಳಿದ ಪೂರ್ವಪಕ್ಷವನ್ನು ಮೂರು ಬಗೆಯಲ್ಲಿ ಸಾಧಿಸುವುದಕ್ಕಾಗಿ ''ನನು'' ಇತ್ಯಾದಿ ಗ್ರಂಥದಿಂದ ವಿಕಲ್ಪಿಸಿ ಆಕ್ಷೇಪಿಸುತ್ತಿದ್ದಾರೆ.

ಲಿಂಗಗಳು ದುರ್ಬಲಗಳಾದ್ದರಿಂದ ಶ್ರುತಿಯಿಂದ ನಿರ್ಣಯಿಸಬಹುದಲ್ಲವೇ? ಎಂಬ ಪ್ರಶ್ನೆಗೆ ''ವರುಣಾದಿ'' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಯೋಗವೃತ್ತಿಯನ್ನು ಆಶ್ರಯಿಸಿದಾಗ ಬೃಹಸ್ಪತಿಶಬ್ದವು ಇಂದ್ರಪರವಾಗುತ್ತದೆ. ಬೃಹತಾಮ್ = ದೇವತೆಗಳಿಗೆ ಪತಿಃ = ಒಡೆಯನು ಎಂದು. ಇದರಂತೆ ಇಂದ್ರಶಬ್ದವೂ ಸಹ ಯೋಗವೃತ್ತಿಯಿಂದ ಬೃಹಸ್ಪತಿಯನ್ನು ಪ್ರತಿಪಾದಿಸಬಹುದು. ತನಗಿಂತ ಅಧಮದೇವತೆಗಳಲ್ಲಿರುವ ಐಶ್ವರ್ಯಕ್ಕಿಂತ ಹೆಚ್ಚಿನ ಐಶ್ವರ್ಯವು ಬೃಹಸ್ಪತಿಯಲ್ಲಿ ಇರುವ ಪ್ರಯುಕ್ತ ಇಂದ್ರನೆನಿಸುತ್ತಾನೆ.

ಇಂದ್ರಾದಿಗಳಲ್ಲಿ ಇಂತಹವರೇ ಅಂತಸ್ಥರೆಂದು ನಿರ್ಣಯ ಮಾಡಲು ಬರುವುದಿಲ್ಲ, ಆದರೂ ಸಹ

ವಿಷ್ಣುವಿಗಿಂತ ಬೇರೆಯವನೇ ಅಂತಸ್ಥನಾಗಿದ್ದಾನೆ. ವಿಷ್ಣುವು ಅಂತಸ್ಥನಲ್ಲ ಎಂದು ಖಚಿತವಾಗಿ ಹೇಳಬಹುದು. ಆದ್ದರಿಂದಲೇ ಟೀಕೆಯಲ್ಲಿ ಅಂತಸ್ಥನಾದವನು ಬೇರೆಯವನೇ ಆಗಿದ್ದಾನೆಂದು ಹೇಳಿದ್ದಾರೆಂಬ ಪ್ರಶ್ನೆಗೆ ''ಸಮುದ್ರಸ್ಥತ್ವ'' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ''ಇಂದ್ರಂ ರಾಜಾನಂ ಸವಿತಾರಮೇತಂ'' ''ಮಹ್ಯಮಿಂದ್ರೋ ನಿಯಚ್ಛತು'' ''ಅರ್ವಾಙ್ ಆಯಾತು ವಸುಭೀ ರಶ್ಮಿರಿಂದ್ರಃ'' ''ಸವಿತಾ ಮೇ ನಿಯಚ್ಛತು'' ''ಸ ನ ಇಂದ್ರಃ ಕಾಮವರಂ ದದಾತು'' ''ಇಂದ್ರಂ ನಿಚಿಕ್ಯುಃ ಪರಮೇ ವ್ಯೋಮನ್'' ಈ ಶ್ರುತಿಗಳನ್ನು ಗ್ರಂಥಕಾರರು ಹೇಳದಿದ್ದರೂ ಆದಿಪದದಿಂದ ವಿವಕ್ಷಿಸಬೇಕು. ಹಿಂದಿನ ಅಧಿಕರಣದಲ್ಲಿ ಬ್ರಹ್ಮಶಬ್ದಾಭ್ಯಾಸದ ಬಲದಿಂದ ಶರೀರಿತ್ವ, ವಿಕಾರಾರ್ಥತ್ವ, ಮೊದಲಾದ ಲಿಂಗಗಳನ್ನು ಅನ್ಯಥಾ ಅರ್ಥೈಸಬೇಕೆಂದು ಪ್ರತಿಪಾದಿಸಲಾಗಿತ್ತು. ಅದರಂತೆ ಇಲ್ಲಿಯೂ ಸಹ ಇಂದ್ರಶಬ್ದದ ಅಭ್ಯಾಸದಿಂದ ವಿಷ್ಣುಲಿಂಗಗಳನ್ನು ಅನ್ಯಥಾ ಅರ್ಥೈಸಬೇಕು.

ಶಂಕೆ - ಇಂದ್ರಶಬ್ದದ ಅಭ್ಯಾಸದಿಂದ ಇಂದ್ರನನ್ನೇ ಅಂತಸ್ಥನೆಂದು ಹೇಗೆ ನಿರ್ಣಯಿಸುತ್ತೀರಿ? ''ಸವಿತಾರಂ ಬೃಹಸ್ಪತಿಂ'' ''ಸವಿತಾರಮೇತಂ'' ''ಸವಿತಾ ಮೇ ನಿಯಚ್ಛತು'' ಇತ್ಯಾದಿಯಾಗಿ ಸವಿತೃಶಬ್ದದ ಅಭ್ಯಾಸವು ಇರುತ್ತದೆ. ಅದರಂತೆ ''ಅಗ್ನಿಂ ಜಗತಃ ಪ್ರತಿಷ್ಠಾಂ'' ''ಮಯ್ಯಯಮಗ್ನಿರ್ದಧಾತು'' ''ಅಗ್ನಿಸ್ತಾಗ್ಂ ಅಗ್ನೇ ಪ್ರಮುಮೋಕ್ತು ದೇವಃ'' ಎಂದು ಅಗ್ನಿಶಬ್ದದ ಅಭ್ಯಾಸವೂ ಸಹ ಶ್ರುತಿಯಲ್ಲಿ ಕೇಳಿಸುತ್ತಿದೆ. ಹೀಗಿರುವಾಗ ಕೇವಲ ಇಂದ್ರಶಬ್ದದ ಅಭ್ಯಾಸದಿಂದ ಇಂದ್ರನನ್ನು ಮಾತ್ರ ಅಂತಸ್ಥನೆಂದು ಪೂರ್ವಪಕ್ಷವನ್ನು ಹೇಗೆ ಮಾಡುತ್ತೀರೀ?

ಸಮಾಧಾನ - ಸೂರ್ಯಾದಿಗಳಲ್ಲಿ ಅಭ್ಯಾಸವಿರಬಹುದು. ಆದರೆ ಸವಿತ್ರಾದಿಶಬ್ದಗಳ ಅಭ್ಯಾಸಕ್ಕಿಂತ ಇಂದ್ರಾದಿಶಬ್ದಗಳ ಅಭ್ಯಾಸವೇ ಬಹುಲವಾಗಿದೆ. ಬಹುಬಾಧವು ಅನ್ಯಾಯವಾದ್ದರಿಂದ ಇಂದ್ರಶಬ್ದಾಭ್ಯಾಸದ ಆಧಾರದಿಂದ ಇಂದ್ರನನ್ನು ಅಂತಸ್ಥನೆಂದು ಪೂರ್ವಪಕ್ಷ ಮಾಡಲಾಗಿದೆ. ಅಷ್ಟೇ ಅಲ್ಲದೆ ಹಿಂದಿನ ಅಧಿಕರಣದಲ್ಲಿ ಇಂದ್ರ ಬೃಹಸ್ಪತ್ಯಾದಿಗಳಿಗೆ ಸೂರ್ಯಧಿಷ್ಠಾತೃತ್ವೇನ ಪ್ರಾಪ್ತಿಯನ್ನು ಹೇಳಿದಂತೆ ಇಲ್ಲಿಯೂ ಸಹ ಇಂದ್ರನಲ್ಲಿ ''ಜಗತೋ ಯ ಈಶೇ'' ಎಂದು ಕೇಳಿಸುತ್ತಿದೆ. ಜಗತ್ತಿಗೆ ನಿಯಾಮಕನಾದವನು ಸೂರ್ಯಾದಿಗಳಿಗಿಂತ ಉತ್ತಮನಾದ ಇಂದ್ರನೇ ಆಗುತ್ತಾನೆ. ಆದ್ದರಿಂದ ಸವಿತ್ರಾದಿಶಬ್ದಗಳಿಂದಲೂ ಇಂದ್ರನೇ ಪ್ರತಿಪಾದ್ಯನಾಗುತ್ತಾನೆಂದು ನಿಖರವಾಗಿ ಪೂರ್ವಪಕ್ಷ ಮಾಡಬಹುದು. ಇದನ್ನೇ ಶ್ರುತಿಯು ''ಇಂದ್ರೋ ವೈ ದೇವಾನಾಮೋಜಿಷ್ಠಃ'' ಎಂದು ಹೇಳುತ್ತಿದೆ.




ಈ ಅಧಿಕರಣದ ಚಿಂತಾ ಮತ್ತು ಪೂರ್ವಪಕ್ಷಗಳು ಹೀಗಿವೆ -

ಅಂತಸ್ಥನು ಇಂದ್ರನೋ? ವಿಷ್ಣುವೋ? ಅದನ್ನು ನಿರ್ಣಯಿಸಲು ಶ್ರುತ್ಯನುಸಾರಿಯಾಗಿ ಲಿಂಗವನ್ನು ಅರ್ಥೈಸಬೇಕೋ ಅಥವಾ ಲಿಂಗಾನುಗುಣವಾಗಿ ಶ್ರುತಿಯನ್ನು ಕೂಡಿಸಬೇಕೋ? ಅದಕ್ಕೋಸ್ಕರ ಶ್ರುತಿಯು ನಿರವಕಾಶವೋ? ಲಿಂಗವು ನಿರವಕಾಶವೋ? ಬಲಾಬಲ ನಿರ್ಣಯಿಸುವುದು ಯಾವ ಮಾನದಂಡದಿಂದ ಎಂದು ಈ ಅಧಿಕರಣದ ಚಿಂತಾ.

*ಪರಿಪೂರ್ಣಚಂದ್ರಿಕಾ*

ಇಂದ್ರಾದಿಶ್ರುತಿಗಳಿರುವುದರಿಂದ ಅಂತಸ್ಥನು ಇಂದ್ರಾದಿಗಳಲ್ಲೇ ಒಬ್ಬರು ಎಂದು ಪೂರ್ವಪಕ್ಷ. ಇಲ್ಲೊಂದು ಪ್ರಶ್ನೆ ಬರಬಹುದು. ಇಂದ್ರಾದಿದೇವತೆಗಳಲ್ಲಿ ನಿಶ್ಚಯಿಸಿ ಒಬ್ಬನನ್ನು ಅಂತಸ್ಥನೆನ್ನುವಿರೋ? ಅಥವಾ ಇಂದ್ರಾದಿಗಳಲ್ಲಿ ಯಾರೋ ಒಬ್ಬನೆಂದು ಸಮ್ಮುಗ್ಧವಾಗಿ, ಪೂರ್ವಪಕ್ಷವೋ? ಅಥವಾ ಎಲ್ಲರೂ ಅಂತಸ್ಥರೆಂದು ಪೂರ್ವಪಕ್ಷವೋ? ಮೂರೂ ರೀತಿಯು ಪೂರ್ವಪಕ್ಷವನ್ನು ಹೇಳಲು ಬರುವುದಿಲ್ಲ. ಅನೇಕರನ್ನು ಹೇಳುವ ಶ್ರುತ್ಯಾದಿಗಳು ಇರುವಾಗ ಒಬ್ಬನನ್ನು ನಿರ್ಧರಿಸುವುದು ಕಷ್ಟ. ನಿರ್ಧರಿಸದಿದ್ದರೆ ಅದು ಸಂದೇಹಾತ್ಮಕ ಜ್ಞಾನವಾಗುವುದರಿಂದ ಪೂರ್ವಪಕ್ಷವೆನಿಸುವುದಿಲ್ಲ. ಎಲ್ಲರನ್ನು ಅಂತಸ್ಥರೆಂದರೆ ಅನೇಕ ಈಶ್ವರನನ್ನು ಒಪ್ಪಬೇಕಾಗುತ್ತದೆ ಎಂದರೆ ಮೊದಲ ಪಕ್ಷವನ್ನಿಟ್ಟುಕೊಂಡು ಶ್ರುತಿಯ ಅಭ್ಯಾಸವಿರುವುದರಿಂದ ಇಂದ್ರನು ಅಂತಸ್ಥನು ಎಂದು ನಿರ್ಧರಿಸಿದಾಗ ಯಾವ ಬಾಧಕವೂ ಇಲ್ಲ.

• • • • •

## ಸೂರ್ಯಾದಿಗಳು ಅಂತಸ್ಥರೆಂದು ಪ್ರಬಲವಾಗಿ ಪೂರ್ವಪಕ್ಷದ ನಿರೂಪಣೆ

**तात्पर्यचन्द्रिका—**

सूर्य एवान्तस्स्थः ''सप्त युञ्जन्ति रथमेकचक्रम्'' इति निरवकाशलिङ्ग-सहितया ''सवितारं बृहस्पतिम्'' इति सवितृश्रुत्या इन्द्रादिश्रुतीनां स्वोचितैश्वर्यादि-मति सूर्ये सम्भवादित्यन्यः ।

वरुण एवान्तस्स्थः, वरुणलिङ्गस्यान्ते श्रवणात्, पूर्वदौर्बल्यन्यायेन तेनेतर-बाधादित्यपरः, इति पक्षभेदेनावधारणात् । अन्ये तु – यथा सिद्धान्तप्रापक-सद्भावेऽपि तदज्ञानेन पूर्वपक्षः, तथा सूर्यादिप्रापकसद्भावेऽपि तदज्ञानेन इन्द्राद्येकैकावधारणेनानेके पूर्वपक्षा इत्याहुः ।

द्वितीयो वा अस्तु, अन्तस्स्थो विष्णुरन्यो वेति सन्देहे अन्य एवेत्यव-धारणेन प्रवृत्तस्य पूर्वपक्षस्य सन्देहात् विशेषसद्भावात् । सोऽन्य इन्द्र एवेत्यादिनिर्धारणं तु नास्ति, इन्द्रादिप्रापकाणां बलाबलानिश्चयात् । विष्णु-लिङ्गानां त्विन्द्रादिश्रुतिभ्यो दौर्बल्यं निश्चितमिति तदन्यत्वेनावधारणं युक्तम्, विष्णुलिङ्गानां बहुत्वेऽपि बहुत्वप्रयुक्तप्राबल्यस्य स्वभावप्रयुक्तप्राबल्यात् दुर्बलत्वात् । न चैतेषां निरवकाशत्वम्, समुद्रस्थत्वादेर्वरुणादावपि सम्भवात् ।

यद्वा – निरवकाशत्वेऽपि लिङ्गस्य प्रबलया श्रुत्या बाधोऽस्तु । न हि निरवकाशः शशशावको मृगेन्द्रेण न बाध्यते, न वा निरवकाशमिदं रूप्यमिति

**ज्ञानं नेदं रूप्यमित्यनेन न बाध्यते । सूर्यलिङ्गं तु सवितृश्रुत्यनुगृहीतमिति न तस्यापि दौर्बल्यनिश्चयापत्तिः । ''ब्रह्मेन्द्रमग्निम्'' इति ब्रह्मशब्दस्तु ''ब्रह्मान्वविन्दत्'' इत्यादाविव ''तपसाऽन्वविन्दत्'' इत्युत्तरवाक्यस्थक्रियाऽपेक्षितकर्तृसमर्पकत्वेन प्रथमान्ततया पुंलिङ्गत्वाच्च चतुर्मुखपरः, न तु परब्रह्मपरः । ''अपां नेतारम्'' इति वरुणलिङ्गस्य दौर्बल्यनिश्चयेऽपि इन्द्रसवितृबृहस्पत्यादिषु श्रुतत्वाविशेषादनवधारणं युक्तम् ।**

**टीकायां पूर्वपक्षे वरुणलिङ्गोक्तिस्तु – सतीष्वपि इन्द्रादिलिङ्गश्रुतिषु यदि विष्णुलिङ्गादन्तस्स्थो विष्णुस्तर्हि वरुणलिङ्गाद्वरुणोऽपि स्यात् इति सिद्धान्तिनं प्रत्यनिष्टं दर्शयितुम् ।**

ಅನುವಾದ - ಅಥವಾ ಸೂರ್ಯನೇ ಅಂತಸ್ಥನಾಗುತ್ತಾನೆ. ''ಸಪ್ತ ಯುಂಜಂತಿ ರಥಮೇಕಚಕ್ರಮ್'' ಎಂಬ ನಿರವಕಾಶಲಿಂಗವು ಈ ವಿಷಯದಲ್ಲಿ ಆಧಾರವಾಗಿದೆ. ಈ ಲಿಂಗದಿಂದ ಕೂಡಿದ ''ಸವಿತಾರಮ್ ಬೃಹಸ್ಪತಿಮ್'' ಎಂಬ ಸವಿತೃಶ್ರುತಿಯೂ ಸಹ ಸೂರ್ಯನನ್ನು ಅಂತಸ್ಥನೆನ್ನುತ್ತಿದೆ. ಇಂದ್ರಾದಿಶ್ರುತಿಗಳೆಲ್ಲವೂ ಸಹ ತನ್ನ ಯೋಗ್ಯತೆಗೆ ಉಚಿತವಾದ ಐಶ್ವರ್ಯವುಳ್ಳ ಸೂರ್ಯನನ್ನೇ ಪ್ರತಿಪಾದಿಸುತ್ತಿವೆ.

ಅಥವಾ ವರುಣನೇ ಅಂತಸ್ಥನಾಗುತ್ತಾನೆ. ಶ್ರುತಿಯ ಕೊನೆಯಲ್ಲಿ ವರುಣನ ಲಿಂಗವು ಕೇಳಿಸುತ್ತಿದೆ. ಉಪಸಂಹಾರವು ಪ್ರಬಲವಾದ್ದರಿಂದ ಮೊದಲು ಕೇಳಿಸಿರುವ ಶ್ರುತಿಲಿಂಗಾದಿಗಳು ದುರ್ಬಲವಾಗಿವೆ. ಆದ್ದರಿಂದ ವರುಣ ಲಿಂಗದಿಂದ ಉಳಿದೆಲ್ಲವು ಬಾಧಿತವಾಗುತ್ತವೆ. ಹೀಗೆ ಪ್ರತಿಯೊಬ್ಬ ದೇವತೆಗಳ ಪಕ್ಷವನ್ನು ಆಶ್ರಯಿಸಿ ಆಯಾ ದೇವತೆಗಳನ್ನೇ ಅವಧಾರಣದಿಂದ ಅಂತಸ್ಥರೆಂದು ಪೂರ್ವಪಕ್ಷ ಮಾಡಬಹುದು.

ಕೆಲವು ವಿದ್ವಾಂಸರು - ಸಿದ್ಧಾಂತಪ್ರಾಪಕವಾದ ಆಧಾರಗಳಿದ್ದರೂ ಅದನ್ನು ಮರೆತು ಪ್ರತಿಯೊಂದು ಅಧಿಕರಣಗಳಲ್ಲಿ ಪೂರ್ವಪಕ್ಷವನ್ನು ಹೇಗೆ ಮಾಡುತ್ತಾರೋ ಅದರಂತೆ ಸೂರ್ಯಾದಿ ಪ್ರಾಪಕವಾದ ಆಧಾರಗಳಿದ್ದರೂ ಅವುಗಳನ್ನು ಮರೆತು ಇಂದ್ರಾದಿ ಒಬ್ಬೊಬ್ಬ ದೇವತೆಯನ್ನಷ್ಟೇ ವಿವಕ್ಷಿಸಿ ಅವಧಾರಣದಿಂದ ಅನೇಕ ಪೂರ್ವಪಕ್ಷಗಳನ್ನು ಮಾಡಬಹುದು ಎನ್ನುತ್ತಾರೆ.

ಅಥವಾ ಅನಿರ್ಧಾರಿತವೆಂಬ ಎರಡನೆಯ ಪಕ್ಷವನ್ನು ಒಪ್ಪಬಹುದು. ಅಂತಸ್ಥನಾದವನು ವಿಷ್ಣುವೋ ಅಥವಾ ಬೇರೆಯವನೋ? ಎಂದು ಸಂದೇಹ ಬಂದರೆ ಬೇರೆಯವನೇ ಆಗಿದ್ದಾನೆಂದು ಅವಧಾರಣ ಮಾಡುತ್ತೇವೆ. ಈ ಪೂರ್ವಪಕ್ಷದಲ್ಲಿ ಸಂದೇಹದ ಒಂದು ಕೋಟಿಯು ನಿಶ್ಚಿತವಾದ್ದರಿಂದ ಸಂದೇಹಕ್ಕಿಂತ

ಪೂರ್ವಪಕ್ಷವು ಭಿನ್ನವಾಗುತ್ತದೆ. ಸಂದೇಹ ಹಾಗು ಪೂರ್ವಪಕ್ಷಗಳಿಗೆ ಐಕ್ಯವನ್ನು ಆಕ್ಷೇಪಿಸಲಾಗದು. ಬೇರೆಯವನೇ ಅಂತಸ್ಥನಾಗಿದ್ದಾನೆ ಎಂಬ ಈ ಪೂರ್ವಪಕ್ಷದಲ್ಲಿ ಇಂದ್ರಾದಿ ಯಾರನ್ನೂ ಸಹ ಖಚಿತಪಡಿಸಿ ಹೇಳಲಾರೆವು. ಅನೇಕ ದೇವತೆಗಳು ಅಂತಸ್ಥರಾಗಿದ್ದಾರೆಂಬ ವಿಷಯದಲ್ಲಿ ಪ್ರಮಾಣಗಳು ಸಮಾನವಾಗಿವೆ. ಆ ಪ್ರಮಾಣಗಳಲ್ಲಿ ಒಂದನ್ನಷ್ಟೇ ಪ್ರಬಲವೆಂದು ಉಳಿದವುಗಳನ್ನು ದುರ್ಬಲವೆಂದು ನಿಶ್ಚಯಿಸಲಾಗದು. ಆದರೆ ವಿಷ್ಣುಪರವಾದ ಲಿಂಗಗಳೆಲ್ಲವೂ ಇಂದ್ರಾದಿ ಶ್ರುತಿಗಳಿಗಿಂತ ದುರ್ಬಲವಾಗಿದೆ ಎಂದು ನಿಶ್ಚಯವಾಗಿದೆ. ಹಾಗಾಗಿ ವಿಷ್ಣುವನ್ನು ಬಿಟ್ಟು ಬೇರೆಯವರನ್ನೇ ಅಂತಸ್ಥರಾಗಿದ್ದಾರೆಂದು ಖಚಿತವಾಗಿ ಹೇಳಬಹುದು.

ವಸ್ತುತಃ ವಿಷ್ಣುಪರವಾದ ಲಿಂಗಗಳು ಅನೇಕ ಇವೆ. ಆದರೆ ಬಹುತ್ವ ಪ್ರಯುಕ್ತವಾದ ಪ್ರಾಬಲ್ಯಕ್ಕಿಂತ ಸ್ವಭಾವಪ್ರಯುಕ್ತವಾದ ಪ್ರಾಬಲ್ಯವೇ ಹೆಚ್ಚು. ಸ್ವಭಾವತಃ ಪ್ರಬಲವಾದ ಇಂದ್ರಾದಿ ಶ್ರುತಿಗಳಿಂದ ಬಹುತ್ವ ಪ್ರಯುಕ್ತವಾಗಿ ಪ್ರಬಲವೆನಿಸಿದ ವಿಷ್ಣುಲಿಂಗಗಳು ಬಾಧಿತವಾಗುತ್ತವೆ. ಇನ್ನು ವಿಷ್ಣುಲಿಂಗಗಳನ್ನು ನಿರವಕಾಶವೆಂದು ಹೇಳಲಾಗದು. ''ಸಮುದ್ರಸ್ಥತ್ವಾದಿ'' ವಿಷ್ಣುಲಿಂಗಗಳನ್ನು ವರುಣಾದಿಗಳಲ್ಲಿಯೂ ಸಹ ಸಮನ್ವಯ ಮಾಡಬಹುದು. ಅಥವಾ ವಿಷ್ಣುಲಿಂಗಗಳು ನಿರವಕಾಶಗಳೇ ಆದರೂ ಪ್ರಬಲವಾದ ಶ್ರುತಿಯಿಂದ ಬಾಧಿತವಾಗುತ್ತವೆ. ಮೊಲದ ಮರಿಯು ನಿರವಕಾಶವಾಗಿದೆ ಎಂಬ ಮಾತ್ರದಿಂದ ಸಿಂಹದಿಂದ ಬಾಧಿತವಾಗುವುದಿಲ್ಲವೆಂದು ಯಾರೂ ಹೇಳುವುದಿಲ್ಲ. ಅಥವಾ ''ಇದು ಶುಕ್ತಿರೂಪ್ಯ'' ಎಂಬ ಜ್ಞಾನವು ನಿರವಕಾಶವಾದ ಮಾತ್ರದಿಂದ ''ನೇದಮ್ ರೂಪ್ಯಮ್'' ಎಂಬ ಬಾಧಜ್ಞಾನದಿಂದ ಬಾಧಿತವಾಗುವುದಿಲ್ಲವೆಂದು ಯಾರೂ ಹೇಳುವುದಿಲ್ಲ. ಆದರಂತೆ ವಿಷ್ಣುಲಿಂಗಗಳು ನಿರವಕಾಶಗಳಾದರೂ ಇಂದ್ರಾದಿಶ್ರುತಿಗಳಿಂದ ಬಾಧಿತಗಳಾಗಬಹುದು.

ವಿಷ್ಣುವಿನಂತೆ ಸೂರ್ಯನಲ್ಲಿಯೂ ಸಹ ಲಿಂಗವಷ್ಟೇ ತೋರಬಹುದು. ಆದರೆ ಆ ಸೂರ್ಯಲಿಂಗವು ಸವಿತೃಶ್ರುತಿಯಿಂದ ಅನುಗೃಹೀತವಾದ್ದರಿಂದ ಪ್ರಬಲವಾಗಿದೆ. ಇದರಂತೆ ಬ್ರಹ್ಮನಲ್ಲಿ ಶ್ರುತಿಯನ್ನು ಆಧಾರವಾಗಿ ಹೇಳಲಾಗದು. ''ಬ್ರಹ್ಮೇಂದ್ರಮಗ್ನಿಮ್'' ಎಂಬಲ್ಲಿ ಬ್ರಹ್ಮಶಬ್ದವು ಕೇಳಿಸುತ್ತಿರಬಹುದು; ಆದರೆ ಈ ಬ್ರಹ್ಮಶಬ್ದವು ವಿಷ್ಣುವನ್ನು ಪ್ರತಿಪಾದಿಸದು. ''ಬ್ರಹ್ಮಾನ್ವವಿಂದತ್'' ಎಂಬಲ್ಲಿ ಹೇಗೊ ಹಾಗೆ ಇಲ್ಲಿಯೂ ಸಹ ''ತಪಸಾ ಅನ್ವವಿಂದತ್'' ಎಂಬ ಮುಂದಿನ ವಾಕ್ಯದಲ್ಲಿರುವ ಕ್ರಿಯಾಪದಕ್ಕೆ ಅಪೇಕ್ಷಿತವಾದ ಕರ್ತೃವನ್ನು ಈ ಬ್ರಹ್ಮಪದವು ಸಮರ್ಪಿಸುತ್ತದೆ. ಮತ್ತು ಪ್ರಥಮಾವಿಭಕ್ತಿಯಿಂದ ಮತ್ತು ಪುಲ್ಲಿಂಗದಿಂದ ನಿರ್ದಿಷ್ಟವಾದ್ದರಿಂದ ಚತುರ್ಮುಖನನ್ನೇ ಪ್ರತಿಪಾದಿಸುತ್ತದೆ ಹೊರತು ವಿಷ್ಣುವನ್ನು ಪ್ರತಿಪಾದಿಸುವುದಿಲ್ಲ.

ಹಾಗಾದರೆ ''ಅಪಾಂ ನೇತಾರಮ್'' ಎಂದು ವರುಣನಲ್ಲಿ ಕೇವಲ ಲಿಂಗವಷ್ಟೇ ಕೇಳಿಸುತ್ತಿದೆ. ಹಾಗಾಗಿ ವಿಷ್ಣುವಿನಂತೆ ವರುಣನನ್ನೂ ಸಹ ಅಂತಸ್ಥನೆಂದು ಹೇಗೆ ಹೇಳುವುದು? ಎಂಬ ಪ್ರಶ್ನೆ ಬರುತ್ತದೆ. ವರುಣಲಿಂಗವು ದುರ್ಬಲವೆಂದು ನಿಶ್ಚಯವಾದರೂ ತೊಂದರೆ ಇಲ್ಲ. ಇಂದ್ರ, ಸವಿತೃ,

ಬೃಹಸ್ಪತಿ ಮೊದಲಾದವರಲ್ಲಿ ಶ್ರುತಿಪ್ರಮಾಣವು ಸಮಾನವಾಗಿರುವುದರಿಂದ ಅನವಧಾರಣರೂಪವಾದ ಪೂರ್ವಪಕ್ಷವನ್ನು ಮಾಡಬಹುದು. ಟೀಕೆಯ ಪೂರ್ವಪಕ್ಷದಲ್ಲಿ ವರುಣಲಿಂಗವನ್ನು ಹೇಳಿದ್ದು ವರುಣನನ್ನು ಪೂರ್ವಪಕ್ಷದಲ್ಲಿ ಸೇರಿಸುವುದಕ್ಕಾಗಿ ಅಲ್ಲ. ಇಂದ್ರಾದಿ ಪ್ರಾಪಕವಾದ ಶ್ರುತಿಲಿಂಗಾದಿಗಳು ಪ್ರಬಲವಾಗಿರುವಾಗ ವಿಷ್ಣುಲಿಂಗದಿಂದ ಅಂತಸ್ಥನನ್ನು ವಿಷ್ಣುವೆಂದೇ ಹೇಳುವುದಾದರೆ ಆವಾಗ ವರುಣನ ಲಿಂಗವೂ ಸಹ ಇರುವುದರಿಂದ ವರುಣನು ಅಂತಸ್ಥನಾಗಲಿ ಎಂಬ ಅನಿಷ್ಟಾಪಾದನೆಯನ್ನು ಸಿದ್ಧಾಂತಿಗೆ ತೋರಿಸಲು ಹಾಗೆ ಹೇಳಿದ್ದಾರೆ.

### ಕಠಿಣಪದಾರ್ಥ

ನಿರವಕಾಶಲಿಂಗಸಹಿತಯಾ = ಸಪ್ತಾಶ್ವತ್ವ ಮತ್ತು ಏಕಚಕ್ರರಥತ್ವ ಎಂಬ ನಿರವಕಾಶ ಲಿಂಗಗಳಿಂದ ಕೂಡಿದ, ಸೂಚಿತ ಐಶ್ವರ್ಯಾದಿಮತಿ = ತಮ್ಮ ಯೋಗ್ಯತೆಗೆ ಅನುಗುಣವಾದ ಐಶ್ವರ್ಯವನ್ನು ಹೊಂದಿರುವ, ಅಂತೇ ಶ್ರವಣಾತ್= ಪವಿತ್ರಾದಿ ಶ್ರುತಿ ಹಾಗು ಲಿಂಗಗಳಿಗಿಂತ ಕೊನೆಯಲ್ಲಿ ಕೇಳಿಸುವುದರಿಂದ, ಅನ್ಯೇ ತು = ಆಪಾತದೃಷ್ಟಿಯುಳ್ಳ ನಮ್ಮಲ್ಲೇ ಕೆಲವು ವಿದ್ವಾಂಸರು, ತೇಷಾಂ = ವಿಷ್ಣುಲಿಂಗಗಳು.

**प्रकाशः – सप्तेति** ।। सप्ताश्वत्वमेकचक्ररथत्वं च लिङ्गमिति ध्येयम् । यथा द्युभ्वाद्यधिकरणे मुक्तोपसृप्यत्वरूपलिङ्गसहितयाऽऽत्मश्रुत्या विष्णुरिति निर्धारणं तथेति भावः ।। **अन्त इति** ।। ''अपां नेतारं भुवनस्य गोपाम्'' इत्यस्य सवित्रादिश्रुतिलिङ्गापेक्षयाऽन्ते श्रवणादित्यर्थः ।

यद्यपि ''इन्द्रं निचिक्युः'' इतीन्द्रश्रुतेरेतदनन्तरं श्रवणमस्ति, तथाऽपि निरवकाशलिङ्गसन्निधानात्, द्वितीयान्तत्वेन ''अपां नेतारं'' इत्यस्य विशेषणत्वेन सावकाशतोपपत्तेरिति भावः ।। **पूर्वदौर्बल्येति** ।। ''प्रथमेऽश्रवणादिति चेन्न ता एव ह्युपपत्तेः'' इति वक्ष्यमाणन्यायेनेति भावः । ननु पूर्वप्राबल्यमपि जन्माधिकरणे उक्तमिति चेत्सत्यम्, निरवकाशत्वेनैव, न तु स्वत इत्यदोषः । एवं स्वयमितरप्रापकोपमर्देनावधारणेन पूर्वपक्ष उक्तः ।

उत्तानदृशां पक्षमाह – **अन्येत्विति** ।। एकस्मिन्नेव वाक्ये एकप्रापकदर्शनमितरप्रापकादर्शनं चायुक्तमित्यरुचिं सूचयति 'अन्ये तु' इति । अन्यो वेति । टीकायां तथैव संशयप्रदर्शनात्, अस्माभिस्तु अन्यशब्दार्थविवरणाय 'इन्द्रादिः' इत्युक्तमिति भावः । ननु विष्णु-लिङ्गसद्भावात्कथमन्यमेन वा निश्चय इत्यत आह – **विष्णुलिङ्गानामिति** ।। हेतुगर्भमिदं, लिङ्गत्वादेवेत्यर्थः । ननु जात्या श्रुतेः

बलवत्त्वेऽपि वक्ष्यमाणरीत्या लिङ्गानां बहुत्वात् प्राबल्यम् । वक्ष्यते च ''प्राणस्तथा'' इत्यत्र लिङ्गबाहुल्यान्मुख्यप्राण इति पूर्वपक्ष इत्यत आह – **विष्णुलिङ्गानामिति** ।।

> द्विविधं बलवत्त्वं च बहुत्वाच्च स्वभावतः ।
> तयोः स्वभावो बलवानुपजीव्यादिकश्च सः ।

इति वचनादिति भावः । अत एव ''शब्दादेव प्रमितः'' इत्यत्र बहुलिङ्गानामपि वामनश्रुत्या बाधो वक्ष्यत इति भावः । ननु निरवकाशेन लिङ्गेन श्रुतेरपि सावकाशाया बाधोऽस्त्वित्यत आह – **न चेति** ।। समुद्राधिष्ठातृत्वाद्वरुणस्येति भावः ।

''यस्याण्डकोशम्'' इत्युक्त ब्रह्माण्डवीर्यत्वादिलिङ्गाशयेनाह – **यद्वेति** ।। **प्रबलया श्रुत्येति** ।। स्वभावतः प्रबलयेत्यर्थः । स्वभावप्राबल्यादपि निरवकाशत्वप्रयुक्तप्राबल्यस्य बलवत्ताया एतदधिकरणसिद्धान्तात् पूर्वमसिद्धेरिति भावः ।

एवं तर्हि सूर्यस्य पूर्वपक्षे प्राप्तिर्न स्यादित्यतः, श्रुत्या तदुज्जीवनमित्याह – **सूर्यलिङ्गं त्विति** ।।

नन्वेवं ब्रह्मश्रुत्यनुग्रहाद्विष्णुलिङ्गानामुज्जीवनं किं न स्यादित्यतः, ब्रह्मश्रुतिर्नास्त्येवेति भावेनाह – **ब्रह्मेन्द्रमिति** ।। ''वाचो वीर्यं तपसाऽन्वविन्दत्'' इति वाक्यस्था या क्रिया, तदपेक्षयेत्यर्थः। एतत् श्रुत्यर्थो न्यायविवरणटीकायां स्पष्टः। यद्येवं तर्हि वरुणप्राप्तिः पूर्वपक्षे न स्यात्, तथा च यः कश्चिदिति कथमनवधारणमित्यत आह – **अपामिति** ।। तर्हि वरुणप्रापकस्य बलवतोऽभावाद्वरुणलिङ्गाद् वरुणप्राप्तिः कथं टीकायामुक्तेत्यत आह – **टीकायामिति** ।। अत एव सुधायां न तत्प्राप्त्युक्तिरिति भावः ।

**गुरुराजीयम्** – **पक्षभेदेनावधारणादिति** ।। त्वष्टृश्रुतिर्विविधकर्तृत्वादिलिङ्गसहिता । त्वष्टारं रूपाणि विकुर्वन्तमिति । बृहस्पतिश्रुतिरपि वाचो वीर्यमित्युक्तवागाधिपत्यरूपलिङ्गसहितेति ज्ञातव्यम् ।। **अन्येत्विति** ।। उक्तरीत्या तत्प्रापकज्ञानेपि पूर्वपक्षस्योपपादितत्वादज्ञानेन पूर्वपक्षस्यायुक्तत्वादित्यस्वरसबीजमत्र द्रष्टव्यम् ।

ಬೃಹಸ್ಪತಿ ಮೊದಲಾದವರಲ್ಲಿ ಶ್ರುತಿಪ್ರಮಾಣವು ಸಮಾನವಾಗಿರುವುದರಿಂದ ಅನವಧಾರಣರೂಪವಾದ ಪೂರ್ವಪಕ್ಷವನ್ನು ಮಾಡಬಹುದು. ಟೀಕೆಯ ಪೂರ್ವಪಕ್ಷದಲ್ಲಿ ವರುಣಲಿಂಗವನ್ನು ಹೇಳಿದ್ದು ವರುಣನನ್ನು ಪೂರ್ವಪಕ್ಷದಲ್ಲಿ ಸೇರಿಸುವುದಕ್ಕಾಗಿ ಅಲ್ಲ. ಇಂದ್ರಾದಿ ಪ್ರಾಪಕವಾದ ಶ್ರುತಿಲಿಂಗಾದಿಗಳು ಪ್ರಬಲವಾಗಿರುವಾಗ ವಿಷ್ಣುಲಿಂಗದಿಂದ ಅಂತಸ್ಥನನ್ನು ವಿಷ್ಣುವೆಂದೇ ಹೇಳುವುದಾದರೆ ಆವಾಗ ವರುಣನ ಲಿಂಗವೂ ಸಹ ಇರುವುದರಿಂದ ವರುಣನು ಅಂತಸ್ಥನಾಗಲಿ ಎಂಬ ಅನಿಷ್ಟಾಪಾದನೆಯನ್ನು ಸಿದ್ಧಾಂತಿಗೆ ತೋರಿಸಲು ಹಾಗೆ ಹೇಳಿದ್ದಾರೆ.

### ಕಠಿಣಪದಾರ್ಥ

ನಿರವಕಾಶಲಿಂಗಸಹಿತಯಾ = ಸಪ್ತಾಶ್ವತ್ವ ಮತ್ತು ಏಕಚಕ್ರರಥತ್ವ ಎಂಬ ನಿರವಕಾಶ ಲಿಂಗಗಳಿಂದ ಕೂಡಿದ, ಸೂಚಿತ ಐಶ್ವರ್ಯಾದಿಮತಿ = ತಮ್ಮ ಯೋಗ್ಯತೆಗೆ ಅನುಗುಣವಾದ ಐಶ್ವರ್ಯವನ್ನು ಹೊಂದಿರುವ, ಅಂತೇ ಶ್ರವಣಾತ್= ಪವಿತ್ರಾದಿ ಶ್ರುತಿ ಹಾಗು ಲಿಂಗಗಳಿಗಿಂತ ಕೊನೆಯಲ್ಲಿ ಕೇಳಿಸುವುದರಿಂದ, ಅನ್ಯೇ ತು = ಆಪಾತದೃಷ್ಟಿಯುಳ್ಳ ನಮ್ಮಲ್ಲೇ ಕೆಲವು ವಿದ್ವಾಂಸರು, ತೇಷಾಂ = ವಿಷ್ಣುಲಿಂಗಗಳು.

**प्रकाशः – सप्तेति ।।** सप्ताश्वत्वमेकचक्ररथत्वं च लिङ्गमिति ध्येयम् । यथा द्युभ्वाद्यधिकरणे मुक्तोपसृप्यत्वरूपलिङ्गसहितयाऽऽत्मश्रुत्या विष्णुरिति निर्धारणं तथेति भावः ।। **अन्त इति ।।** ''अपां नेतारं भुवनस्य गोपाम्'' इत्यस्य सवित्रादिश्रुतिलिङ्गापेक्षयाऽन्ते श्रवणादित्यर्थः ।

यद्यपि ''इन्द्रं निचिक्युः'' इतीन्द्रश्रुतेरेतदनन्तरं श्रवणमस्ति, तथाऽपि निरवकाशलिङ्गसन्निधानात्, द्वितीयान्तत्वेन ''अपां नेतारं'' इत्यस्य विशेषणत्वेन सावकाशतोपपत्तेरिति भावः ।। **पूर्वदौर्बल्येति ।।** ''प्रथमेऽश्रवणादिति चेन्न ता एव ह्युपपत्तेः'' इति वक्ष्यमाणन्यायेनेति भावः । ननु पूर्वप्राबल्यमपि जन्माधिकरणे उक्तमिति चेत्सत्यम्, निरवकाशत्वेनैव, न तु स्वत इत्यदोषः । एवं स्वयमितरप्रापकोपमर्देनावधारणेन पूर्वपक्ष उक्तः ।

उत्तानदृशां पक्षमाह – **अन्येत्विति ।।** एकस्मिन्नेव वाक्ये एकप्रापकदर्शनमितरप्रापकादर्शनं चायुक्तमित्यरुचिं सूचयति 'अन्ये तु' इति । **अन्यो वेति ।** टीकायां तथैव संशयप्रदर्शनात्, अस्माभिस्तु अन्यशब्दार्थविवरणाय 'इन्द्रादिः' इत्युक्तमिति भावः । ननु विष्णु-लिङ्गसद्भावात्कथमन्यमेन वा निश्चय इत्यत आह – **विष्णुलिङ्गानामिति ।।** हेतुगर्भमिदं, लिङ्गत्वादेवेत्यर्थः । ननु जात्या श्रुतेः

बलवत्त्वेऽपि वक्ष्यमाणरीत्या लिङ्गानां बहुत्वात् प्राबल्यम् । वक्ष्यते च ''प्राणस्तथा'' इत्यत्र लिङ्गबाहुल्यान्मुख्यप्राण इति पूर्वपक्ष इत्यत आह – **विष्णुलिङ्गानामिति** ।।

द्विविधं बलवत्त्वं च बहुत्वाच्च स्वभावतः ।
तयोः स्वभावो बलवानुपजीव्यादिकश्च सः ।

इति वचनादिति भावः । अत एव ''शब्दादेव प्रमितः'' इत्यत्र बहुलिङ्गानामपि वामनश्रुत्या बाधो वक्ष्यत इति भावः । ननु निरवकाशेन लिङ्गेन श्रुतेरपि सावकाशाया बाधोऽस्त्वित्यत आह – **न चेति** ।। समुद्राधिष्ठातृत्वाद्वरुणस्येति भावः ।

''यस्याण्डकोशम्'' इत्युक्त ब्रह्माण्डवीर्यत्वादिलिङ्गाशयेनाह – **यद्वेति** ।। **प्रबलया श्रुत्येति** ।। स्वभावतः प्रबलयेत्यर्थः । स्वभावप्राबल्यादपि निरवकाशत्वप्रयुक्तप्राबल्यस्य बलवत्ताया एतदधिकरणसिद्धान्तात् पूर्वमसिद्धेरिति भावः ।

एवं तर्हि सूर्यस्य पूर्वपक्षे प्राप्तिर्न स्यादित्यतः, श्रुत्या तदुज्जीवनमित्याह – **सूर्यलिङ्गं त्विति** ।।

नन्वेवं ब्रह्मश्रुत्यनुग्रहाद्विष्णुलिङ्गानामुज्जीवनं किं न स्यादित्यतः, ब्रह्मश्रुतिर्नास्त्येवेति भावेनाह – **ब्रह्मेन्द्रमिति** ।। ''वाचो वीर्यं तपसाऽन्वविन्दत्'' इति वाक्यस्था या क्रिया, तदपेक्षयेत्यर्थः। एतत् श्रुत्यर्थो न्यायविवरणटीकायां स्पष्टः। यद्येवं तर्हि वरुणप्राप्तिः पूर्वपक्षे न स्यात्, तथा च यः कश्चिदिति कथमनवधारणमित्यत आह – **अपामिति** ।। तर्हि वरुणप्रापकस्य बलवतोऽभावाद्वरुणलिङ्गाद् वरुणप्राप्तिः कथं टीकायामुक्तेत्यत आह – **टीकायामिति** ।। अत एव सुधायां न तत्प्राप्त्युक्तिरिति भावः ।

**गुरुराजीयम्** – पक्षभेदेनावधारणादिति ।। त्वष्टृश्रुतिर्विविधकर्तृत्वादिलिङ्गसहिता । त्वष्टारं रूपाणि विकुर्वन्तमिति । बृहस्पतिश्रुतिरपि वाचो वीर्यमित्युक्तवागाधिपत्यरूपलिङ्गसहितेति ज्ञातव्यम् ।। अन्येत्विति ।। उक्तरीत्या तत्प्रापकज्ञानेपि पूर्वपक्षस्योपपादितत्वादज्ञानेन पूर्वपक्षस्यायुक्तत्वादित्यस्वरसबीजमत्र द्रष्टव्यम् ।

ಅಂತಸ್ಥತ್ವಾಧಿಕರಣ

नन्विन्द्रादिप्रापकाणां बलाबलानिश्चयादिन्द्र एवेत्यवधारणानुपपत्तिवत् विष्णुप्रापकाणां समुद्रान्तःस्थत्वादिलिङ्गानां सत्त्वाद्विष्णोरन्य एवेत्यवधारणानुपपत्तिरित्यत आह – **विष्णुलिङ्गानामिति** ।। ननु विष्णुलिङ्गानां समुद्रस्थत्वादीनां यदि लिङ्गत्वेन दौर्बल्यं तर्हि तत एव वरुणादिलिङ्गानामपां नेतारमित्यादीनामपि लिङ्गत्वेन दौर्बल्यं स्यात् ।

नच लिङ्गत्वाविशेषेपि ब्रह्मलिङ्गानामेव दुर्बलत्वं निश्चितमिति वाच्यम् । नियामकाभावेन वैपरीत्यस्यापि वक्तुं शक्यत्वात् । तथा च विष्णोरन्य एवेत्यवधारणानुपपत्त्या सन्देहाद् विशेषो न स्यादिति पूर्वदोषस्तदवस्थ एवेत्यस्वरसादाह – **यद्वेति** ।। यदि निरवकाशस्यापि लिङ्गस्य स्वभावप्रबलया श्रुत्या बाधोऽभ्युपगम्यते तर्हि सूर्यलिङ्गादेरपि तथा स्यात् । तथा च सूर्यादेरन्तस्थत्वं न स्यादित्यत आह – **सूर्येति** ।।

ननु सूर्यलिङ्गस्य सवितृश्रुत्यनुगृहीतत्वेन दौर्बल्यनिश्चयाभाववत् ब्रह्मेन्द्र-मग्निमित्यादिब्रह्मश्रुत्यनुगृहीतत्वेन समुद्रस्थत्वादेरपि दौर्बल्याभावनिश्चयसम्भवाद् विष्णोरप्यन्तस्स्थत्वं स्यादित्यत आह – **ब्रह्मेति** ।। समुद्रान्तस्स्थत्वादि-लिङ्गमात्रस्येन्द्रादिश्रुत्यपेक्षया दुर्बलत्वेन विष्णुप्रापकत्वाभावे वरुणलिङ्गस्यापि तथात्वेन कथं तद्बलेन वरुणस्यान्तस्स्थत्वोक्तिरित्यत आह – **अपां नेतारमिति** ।। **वरुणलिङ्गस्येति** ।। तथा च वरुणस्यापि परित्यागेनेन्द्रबृहस्पत्यादिष्वेव मध्ये कश्चिदन्तस्स्थ इत्यर्थः । तत्र हेतुः **श्रुतत्वाविशेषादिति** ।। इन्द्रादिश्रुतिसहितत्वात् इत्यर्थः । तत्प्रापकश्रुतेः सत्त्वादिति वा । न तु लिङ्गस्य श्रुत्युक्तत्वादिति । तथात्वेऽग्नेतृत्वादिलिङ्गस्यापि श्रुत्युक्तत्वादुक्तानुपपत्तिः शङ्क्येतेति भावः। अनेनैक एवेत्यवधारणं किं न क्रियत इति शङ्का निरस्ता । तर्हि टीकायां वरुणलिङ्गोक्तिविरोध इत्यत आह – **टीकायामिति** ।।

ವಿವರಣೆ - ಇಲ್ಲಿಯ ತನಕ ಇಂದ್ರನೇ ಅಂತಸ್ಥನೆಂಬ ಪೂರ್ವಪಕ್ಷ ತೋರಿಸಿದ್ದಾಯಿತು. ಈಗ ಸೂರ್ಯ, ವರುಣ ಮೊದಲಾದವರೇ ಅಂತಸ್ಥರಾಗಿದ್ದಾರೆಂಬ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ. ಸೂರ್ಯನು ಅಂತಸ್ಥನಾಗಿದ್ದಾನೆನ್ನಲು "ಸಪ್ತಾಶ್ವತ್ವ" "ಏಕಚಕ್ರರಥತ್ವ" ಇವುಗಳು ಲಿಂಗವಾಗಿವೆ. ಈ ಲಿಂಗಗಳಿಂದ ಕೂಡಿದ ಸವಿತೃಶ್ರುತಿಯೂ ಕೂಡ ಪ್ರಮಾಣವಾಗಿದೆ. ಯಾವರೀತಿಯಾಗಿ "ಮುಕ್ತೋಪಸೃಪ್ಯತ್ವ" ಲಿಂಗದಿಂದ ಕೂಡಿದ ಆತ್ಮಶ್ರುತಿಯು ವಿಷ್ಣುವಿನ ವಿಷಯದಲ್ಲಿ ಆಧಾರವಾಗುತ್ತದೆಂದು

ದ್ಯುಭ್ವಾದ್ಯಧಿಕರಣದಲ್ಲಿ ಸಮರ್ಥಿಸುತ್ತಾರೋ ಅದರಂತೆ ಇಲ್ಲಿಯೂ ಸಹ ಲಿಂಗಗಳಿಂದ ಕೂಡಿದ ಶ್ರುತಿಯು ಸೂರ್ಯನು ಅಂತಸ್ಥನೆನ್ನಲು ಆಧಾರವಾಗಿದೆ. ''ಅಪಾಂ ನೇತಾರಂ ಭುವನಸ್ಯ ಗೋಪಾಮ್'' ಎಂಬ ವರುಣನ ಲಿಂಗವು ಸವಿತ್ರಾದಿ ಶ್ರುತಿಲಿಂಗಗಳಿಗಿಂತ ಕೊನೆಯಲ್ಲಿ ಕೇಳಿಸುತ್ತಿದೆ. ಪೂರ್ವಕ್ಕಿಂತ ಪರವೇ ಪ್ರಬಲವೆಂದು ಎಲ್ಲರೂ ಅಂಗೀಕರಿಸಿದ್ದರಿಂದ ವರುಣನು ಅಂತಸ್ಥನೆನ್ನಲು ಈ ಲಿಂಗವು ಪ್ರಧಾನವಾಗಿ ಆಧಾರವಾಗುತ್ತದೆ.

ವಸ್ತುತಃ ''ಇಂದ್ರಂ ನಿಚಿಕ್ಯುಃ'' ಎಂಬ ಇಂದ್ರಶ್ರುತಿಯು ''ಅಪಾಂ ನೇತಾರಮ್'' ಎಂಬ ಶ್ರುತಿಯ ಆನಂತರ ಕೇಳಿಸುತ್ತಿದೆ. ಆದರೂ ಸಹ ನಿರವಕಾಶವಾದ ಲಿಂಗದ ಸನ್ನಿಧಾನವಿರುವುದರಿಂದ ದ್ವಿತೀಯಾವಿಭಕ್ತ್ಯಂತವಾಗಿ ಇರುವುದರಿಂದ 'ಅಪಾಂ ನೇತಾರಮ್' ಎಂಬುದಕ್ಕೆ ವಿಶೇಷಣವಾಗುತ್ತದೆ. ಆದ್ದರಿಂದ ಇಂದ್ರಶ್ರುತಿಯು ಸಾವಕಾಶವಾಗುತ್ತದೆ. ವರುಣಲಿಂಗವು ನಿರವಕಾಶವಾದ್ದರಿಂದ ಪ್ರಬಲವಾಗುತ್ತದೆ. ಪೂರ್ವದೌರ್ಬಲ್ಯವನ್ನು, ''ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ'' ಎಂಬ ಮುಂದೆ ಹೇಳುವ ನ್ಯಾಯದಂತೆ ತಿಳಿಯಬೇಕು. ಪೂರ್ವಪ್ರಾಬಲ್ಯವನ್ನು ಜನ್ಮಾಧಿಕರಣದಲ್ಲಿ ಹೇಳಿದ್ದಾರಲ್ಲ? ಎಂದರೆ ಹೌದು. ನಿರವಕಾಶವಾದ ಪ್ರಯುಕ್ತ ಪೂರ್ವಕ್ಕೆ ಪ್ರಾಬಲ್ಯವನ್ನು ಹೇಳಲಾಗಿದೆ. ಹೊರತು ಸ್ವಾಭಾವಿಕವಾದ ಪ್ರಾಬಲ್ಯವು ಇರುವುದಿಲ್ಲ.

ಆಪಾತತಃ ವಿಚಾರ ಮಾಡುವ ವಿದ್ವಾಂಸರ ಪಕ್ಷವನ್ನು ''ಅನ್ಯೇತು'' ಎಂದು ಹೇಳುತ್ತಿದ್ದಾರೆ. ಒಂದೇ ವಾಕ್ಯದಲ್ಲಿ ಒಬ್ಬ ದೇವತೆಗೆ ಸಂಬಂಧಪಟ್ಟ ಆಧಾರವನ್ನು ಗಮನಿಸಿಬೇಕು; ಇತರ ದೇವತೆಗಳಿಗೆ ಸಂಬಂಧಪಟ್ಟ ಆಧಾರಗಳನ್ನು ಗಮನಿಸಬಾರದೆಂಬ ಇವರ ಅಭಿಪ್ರಾಯವು ಅಸ್ವರಸವಾಗಿದೆ. ''ತು'' ಶಬ್ದದಿಂದ ಈ ಅಸ್ವಾರಸ್ಯವನ್ನು ಗ್ರಂಥಕಾರರು ಸೂಚಿಸಿದ್ದಾರೆ.

ಅನಿರ್ಧಾರಿತರಾದ ಯಾರಾದರೊಬ್ಬರನ್ನು ಅಂತಸ್ಥರೆನ್ನಬಹುದೆಂಬ ಎರಡನೆಯ ಪಕ್ಷವೂ ಸಾಧುವೇ ಆಗಿದೆ. ಇದನ್ನು ಗ್ರಂಥಕಾರರು ''ದ್ವಿತೀಯೋ ವಾಽಸ್ತು'' ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ. ಟೀಕೆಯಲ್ಲಿ ''ಅಂತಸ್ಥಃ ವಿಷ್ಣುಃ ಅನ್ಯೋ ವಾ'' ಎಂದು ಸಂದೇಹ ತೋರಿಸಿದ್ದಾರೆ. ಅದಕ್ಕನುಗುಣವಾಗಿ ಈ ಎರಡನೆಯ ಪಕ್ಷವನ್ನು ಹೊಂದಿಸಬಹುದು. ಟೀಕೆಯಲ್ಲಿ ಅನಿರ್ಧಾರಿತಪಕ್ಷವನ್ನು ಸಮ್ಮತಿಸುವುದಕ್ಕಾಗಿ ''ಅನ್ಯೋ ವಾ'' ಎಂದಷ್ಟೇ ಸಾಧಾರಣವಾಗಿ ಹೇಳಿದ್ದಾರೆ. ಇಂದ್ರಾದಿಗಳ ಹೆಸರನ್ನು ಉಲ್ಲೇಖಿಸಿಲ್ಲ. ಗ್ರಂಥಕಾರರು ಅನ್ಯಶಬ್ದಾರ್ಥದ ವಿವರಣೆಗಾಗಿ ''ಇಂದ್ರಾದಿಃ'' ಎಂದಿದ್ದಾರೆ. ವಿಷ್ಣುಲಿಂಗವು ಇರುವುದರಿಂದ ಅನ್ಯರೆಂಬ ಪಕ್ಷವನ್ನು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ ''ವಿಷ್ಣುಲಿಂಗಾನಾಮ್'' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಶ್ರುತಿಯು ಸ್ವಭಾವತಃ ಪ್ರಬಲವಾಗಿದ್ದರೂ ಮುಂದೆ ಹೇಳುವಂತೆ ಬಹುತ್ವಪ್ರಯುಕ್ತವಾದ ಪ್ರಾಬಲ್ಯವನ್ನು ಲಿಂಗಗಳಿಗೂ ಹೇಳಬಹುದಲ್ಲವೇ? ''ಪ್ರಾಣಸ್ತಥಾ'' ಇತ್ಯಾದಿ ಸೂತ್ರದಲ್ಲಿ ಲಿಂಗಬಾಹುಲ್ಯಪ್ರಯುಕ್ತವಾಗಿ ಮುಖ್ಯಪ್ರಾಣನು ಪ್ರಾಣಶಬ್ದವಾಚ್ಯನಾಗಿದ್ದಾನೆಂದು ಪೂರ್ವಪಕ್ಷ ಮಾಡುತ್ತಾರೆ. ಈ ಶಂಕೆಗೆ ''ವಿಷ್ಣುಲಿಂಗಾನಾಮ್'' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

> ದ್ವಿವಿಧಂ ಬಲವತ್ತ್ವಂ ಚ ಬಹುತ್ವಾಚ್ಚ ಸ್ವಭಾವತಃ ।
> ತಯೋಸ್ಸ್ವಭಾವೋ ಬಲವಾನುಪಜೀವ್ಯಾದಿಕಶ್ಚ ಸಃ ।
>
> *ಅಂತಸ್ಥತ್ವಾಧಿಕರಣ*

ಬಲವತ್ತ್ವವು ಎರಡು ವಿಧ. ೧) ಬಹುತ್ವಪ್ರಯುಕ್ತವಾಗಿ ೨) ಸ್ವಭಾವಪ್ರಯುಕ್ತವಾಗಿ. ಇವೆರಡರಲ್ಲಿ ಸ್ವಭಾವಪ್ರಯುಕ್ತವಾದದ್ದೇ ಹೆಚ್ಚು ಶ್ರೇಷ್ಠ.

ಆದ್ದರಿಂದಲೇ ''ಶಬ್ದಾದೇವ ಪ್ರಮಿತಃ'' ಎಂಬ ಸೂತ್ರದಲ್ಲಿ ಬಹು ಲಿಂಗಗಳಿಗೆ ವಾಮನಶ್ರುತಿಯಿಂದ ಬಾಧವನ್ನು ಹೇಳುತ್ತಾರೆ. ಪ್ರಕೃತ ಅನೇಕ ವಿಷ್ಣುಲಿಂಗಗಳಿದ್ದರೂ ಅವುಗಳ ಆಧಾರದಿಂದ ವಿಷ್ಣುವನ್ನು ಅಂತಸ್ಥನೆಂದು ತೀರ್ಮಾನಿಸಲಾಗದು. ಲಿಂಗವು ನಿರವಕಾಶವಾದಾಗ ಸಾವಕಾಶ ಶ್ರುತಿಯನ್ನು ಬಾಧಿಸಬಹುದಲ್ಲವೇ? ಎಂಬ ಪ್ರಶ್ನೆಗೆ ''ನಚ'' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ''ಯಸ್ಯಾಂಡಕೋಶಮ್'' ಎಂಬ ಬ್ರಹ್ಮಾಂಡವೀರ್ಯತ್ವಾದಿಲಿಂಗವು ವಿಷ್ಣುವಿನ ವಿಷಯದಲ್ಲಿ ಪ್ರಬಲವಾದ ಆಧಾರವಾಗಿದೆ ಎಂಬುದನ್ನು ''ಯದ್ವಾ'' ಇತ್ಯಾದಿಯಾಗಿ ನಿರಾಕರಿಸುತ್ತಿದ್ದಾರೆ. ಸ್ವಭಾವತಃ ಪ್ರಬಲವಾದದ್ದಕ್ಕಿಂತ ನಿರವಕಾಶತ್ವಪ್ರಯುಕ್ತವಾದ ಪ್ರಾಬಲ್ಯವು ಶ್ರೇಷ್ಠವೆಂಬುದು ಈ ಅಧಿಕರಣದ ಸಿದ್ಧಾಂತಕ್ಕಿಂತ ಮೊದಲು ನಿರ್ಣಯವಾಗಿಲ್ಲ. ಆದ್ದರಿಂದ ವಿಷ್ಣುಲಿಂಗವನ್ನು ಪ್ರಬಲವೆಂದು ಯಾವುದೇ ಕಾರಣದಿಂದಲೂ ಸಮರ್ಥಿಸಲಾಗದು.

ಶಂಕೆ - ಸಮುದ್ರಾಂತಸ್ಥತ್ವವೇ ಮೊದಲಾದವು ವಿಷ್ಣುಲಿಂಗಗಳಾಗಿವೆ. ಇವುಗಳು ಲಿಂಗವಾದ್ದರಿಂದ ದುರ್ಬಲವಾಗುವುದಾದರೆ 'ಅಪಾಂ ನೇತಾರಮ್'' ಇತ್ಯಾದಿ ವರುಣಾದಿಲಿಂಗಗಳು ಕೂಡ ದುರ್ಬಲವಾಗಬೇಕಾದೀತು. ಬ್ರಹ್ಮಲಿಂಗವಷ್ಟೇ ದುರ್ಬಲವೆಂದು ಹೇಳುವುದು ತಪ್ಪು. ಕಾರಣವಿಲ್ಲದೆ ಬ್ರಹ್ಮಲಿಂಗಗಳು ದುರ್ಬಲವಾಗುವುದಾದರೆ ವರುಣಲಿಂಗಗಳೂ ಸಹ ದುರ್ಬಲವಾಗಬೇಕಾದಿತು. ಆದ್ದರಿಂದ ವಿಷ್ಣುಲಿಂಗದಂತೆ ವರುಣಲಿಂಗಗಳೂ ದುರ್ಬಲವಾಗಿರುವಾಗ ವಿಷ್ಣುವಿಗಿಂತ ಭಿನ್ನರಾದವರೇ ಅಂತಸ್ಥರಾಗಿದ್ದಾರೆಂದು ನಿರ್ಣಯಿಸಲಾಗದು. ಸಮಬಲವಾದ್ದರಿಂದ ಬ್ರಹ್ಮಲಿಂಗ ಮತ್ತು ವರುಣಲಿಂಗಗಳಲ್ಲಿ ಯಾವುದನ್ನು ಪ್ರಬಲವೆನ್ನುತ್ತೀರಿ?

ಸಮಾಧಾನ - ಈ ಶಂಕೆಗೆ ಗ್ರಂಥಕಾರರು ''ಯದ್ವಾ'' ಎಂದು ಮತ್ತೊಂದು ಪಕ್ಷವನ್ನು ಅಂಗೀಕರಿಸಿದ್ದಾರೆ. ವರುಣಶ್ರುತಿಯು ಪ್ರಬಲವಾದ್ದರಿಂದ ನಿರವಕಾಶಲಿಂಗವನ್ನು ಬಾಧಿಸುತ್ತಿದೆ. ಆದ್ದರಿಂದ ವಿಷ್ಣುಲಿಂಗದಂತೆ ವರುಣಲಿಂಗವನ್ನು ದುರ್ಬಲವೆಂದು ಆಕ್ಷೇಪಿಸಿದ್ದಲ್ಲಿ ಅರ್ಥವಿಲ್ಲ.

ಒಂದುವೇಳೆ ನಿರವಕಾಶವಾದ ಲಿಂಗವು ಪ್ರಬಲವಾದ ಶ್ರುತಿಯಿಂದ ಬಾಧಿತವಾಗುವುದಾದರೆ ವಿಷ್ಣುಲಿಂಗದಂತೆ ಸೂರ್ಯಲಿಂಗಾದಿಗಳೂ ಸಹ ಬಾಧಿತಗಳಾಗಬೇಕಾದೀತು. ಆದ್ದರಿಂದ ಸೂರ್ಯಾದಿಗಳ ಅಂತಸ್ಥತ್ವವನ್ನು ಹೇಳಬಾರದೆಂಬ ಪ್ರಶ್ನೆಗೆ ''ಸೂರ್ಯಲಿಂಗಂ ತು'' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಶಂಕೆ - ಸೂರ್ಯಲಿಂಗವು ಸವಿತೃಶ್ರುತಿಯ ಅನುಗ್ರಹವನ್ನು ಹೊಂದಿದೆ. ಆದ್ದರಿಂದ ದುರ್ಬಲವೆಂದು ನಿಶ್ಚಯಿಸಲಾಗದು. ಅದರಂತೆ ಸಮುದ್ರಾಂತಸ್ಥತ್ವ ಮೊದಲಾದ ವಿಷ್ಣುಲಿಂಗಗಳು ''ಬ್ರಹ್ಮೇಂದ್ರಮಗ್ನಿಮ್'' ಇತ್ಯಾದಿ ಶ್ರುತಿಯ ಅನುಗ್ರಹ ಹೊಂದಿರುವುದರಿಂದ ದುರ್ಬಲವೆಂದು ನಿಶ್ಚಯಿಸಲಾಗದು. ಆದ್ದರಿಂದ ಸೂರ್ಯನಂತೆ ವಿಷ್ಣುವೂ ಸಹ ಅಂತಸ್ಥನಾಗಲು ಏನು ತೊಂದರೆ?

ಈ ಪ್ರಶ್ನೆಗೆ 'ಬ್ರಹ್ಮ' ಇತ್ಯಾದಿವಾಕ್ಯದಿಂದ ಉತ್ತರಿಸುತ್ತಿದ್ದಾರೆ. ''ಬ್ರಹ್ಮೇಂದ್ರಮಗ್ನಿಮ್'' ಇತ್ಯಾದಿ ಶ್ರುತಿಯು ವಿಷ್ಣುಪರವಾಗಿದ್ದಲ್ಲಿ ನಿಮ್ಮ ಆಕ್ಷೇಪವು ಸರಿಯಾಗುತ್ತಿತ್ತು; ಆದರೆ ಈ ಶ್ರುತಿಯು ಚತುರ್ಮುಖಬ್ರಹ್ಮಪರವಷ್ಟೇ ಆಗಿದೆ. ಹೀಗೆ ಸಮುದ್ರಾಂತಸ್ಥತ್ವ ಲಿಂಗಕ್ಕೆ ಪ್ರಾಬಲ್ಯವನ್ನು ನಿಶ್ಚಯಿಸಲಾಗದ ಕಾರಣ ಶ್ರುತಿಗಿಂತ

ದುರ್ಬಲವಾಗಿದೆ. ಅದೇ ರೀತಿಯಾಗಿ ವರುಣಲಿಂಗವೂ ಸಹ ದುರ್ಬಲವೆಂದಂತಾಯಿತು. ಹೀಗಿರುವಾಗ ದುರ್ಬಲವಾದ ವರುಣಲಿಂಗದಿಂದ ವರುಣ ಅಂತಸ್ಥನೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ "ಅಪಾಂ ನೇತಾರಂ" ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ವರುಣಲಿಂಗವು ದುರ್ಬಲವಾದರೂ ತೊಂದರೆಯಿಲ್ಲ. ವರುಣನನ್ನು ಬಿಟ್ಟು ಇಂದ್ರ, ಬೃಹಸ್ಪತಿ ಮೊದಲಾದವರ ಮಧ್ಯದಲ್ಲೇ ಒಬ್ಬರನ್ನು ಅಂತಸ್ಥರೆಂದು ಪೂರ್ವಪಕ್ಷ ಮಾಡಬಹುದು. ಈ ವಿಷಯದಲ್ಲಿ "ಶ್ರುತತ್ವಾವಿಶೇಷಾತ್" ಎಂದು ಹೇತುವನ್ನು ಹೇಳಿದ್ದಾರೆ ಅಂದರೆ ಇಂದ್ರಾದಿಶ್ರುತಿಗಳಿಂದ ಸಹಿತವಾಗಿದೆ ಎಂದರ್ಥ ಹೊರತು ಲಿಂಗವು ಶ್ರುತಿಯಿಂದ ಕೂಡಿದೆ ಎಂದರ್ಥವಲ್ಲ. ಹೀಗೆ ವರುಣನನ್ನು ಬಿಟ್ಟು ಪೂರ್ವಪಕ್ಷ ಮಾಡುವುದಾದರೆ ವರುಣಲಿಂಗದಿಂದ ವರುಣನನ್ನು ವಿವಕ್ಷಿಸಬೇಕೆಂದು ಟೀಕೆಯಲ್ಲಿ ಹೇಳಿದ್ದು ಹೇಗೆ ಕೂಡುತ್ತದೆ? ಎಂಬ ಪ್ರಶ್ನೆಗೆ "ಟೀಕಾಯಾಮ್" ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.




ಅಥವಾ ನಿರವಕಾಶಲಿಂಗಸಹಿತವಾದ ಸವಿತೃ ಶ್ರುತಿಯಿರುವುದರಿಂದ ಸೂರ್ಯನೆಂದು ನಿರ್ಧರಿಸಿ ಉಳಿದ ಶಬ್ದಗಳನ್ನು ಯೋಗವೃತ್ತಿಯಿಂದ ಅವನಲ್ಲಿ ಕೂಡಿಸಬಹುದು. ಅಥವಾ 'ಪರಕ್ಕಿಂತಲೂ ಪೂರ್ವವು ದುರ್ಬಲ' ಎನ್ನುವ ನ್ಯಾಯವನ್ನನುಸರಿಸಿದಾಗ ವರುಣನ 'ಲಿಂಗ' ಕೊನೆಯಲ್ಲಿರುವುದರಿಂದ ಅದಕ್ಕನುಗುಣವಾಗಿ ವರುಣನು ಅಂತಸ್ಥನೆಂದು ನಿರ್ಧರಿಸಿ ಪೂರ್ವಪಕ್ಷ ಮಾಡಬಹುದು.

ಎರಡನೇ ಪಕ್ಷವನ್ನಿಟ್ಟುಕೊಂಡೂ ಪೂರ್ವಪಕ್ಷ ಮಾಡಬಹುದು. ಈ ಪಕ್ಷದಲ್ಲಿ ಇಂದ್ರನೋ ಸೂರ್ಯನೋ? ಇತ್ಯಾದಿಯಾಗಿ ಅವಾಂತರ ಸಂದೇಹವಿದ್ದರೂ ವಿಷ್ಣುವಿಗಿಂತ ಬೇರೆಯವನು ಎನ್ನುವ ವಿಷಯದಲ್ಲಿ ನಿರ್ಧಾರವಿರುವುದರಿಂದ ಆ ರೀತಿ ಪೂರ್ವಪಕ್ಷ ಮಾಡಿದರೆ ಬಾಧಕವೇನೂ ಇಲ್ಲ. ಹೀಗೆ ಮಾಡಿದಾಗ ವಿಷ್ಣುಲಿಂಗಗಳಿಂದಲೂ ವಿರೋಧವಿಲ್ಲ. ಕೂಲಂಕಷವಾಗಿ ವಿಚಾರ ಮಾಡಿದಾಗ ವಿಷ್ಣುವಿನ ಶ್ರುತಿಲಿಂಗಗಳಿಗಿಂತಲೂ ಬೇರೆಯವರನ್ನು ಹೇಳುವ ಶ್ರುತಿ ಲಿಂಗಗಳೇ ಪ್ರಬಲವೆನಿಸುತ್ತವೆ.





## ಇಂದ್ರಬೃಹಸ್ಪತಿಗಳನ್ನು 'ಅಂತಸ್ಥ' ಎಂದಿಟ್ಟು ಪೂರ್ವಪಕ್ಷದ ನಿರೂಪಣೆ

### तात्पर्यचन्द्रिका –

**यद्वा – वरुणलिङ्गस्यान्ते श्रवणात् पूर्वदौर्बल्यन्यायेन न तस्यापि दौर्बल्यनिश्चयः । तृतीयो वाऽस्तु, विष्णुलिङ्गानां निरवकाशत्वेन अबाध्यत्वात्, इन्द्रादिश्रुतीनां च श्रुतित्वादेव लिङ्गाबाध्यत्वादुभयानुग्रहार्थं विष्णुरेव तत्तदुपाधिवशादिन्द्रादिसञ्ज्ञां लभते इति वदता पूर्वपक्षिणा इन्द्रादीनां**

विष्णवैक्याङ्गीकारेण अनेकेश्वरापत्त्यभावात् । तथा च श्रुतिः – ''स ब्रह्मा स शिवस्सेन्द्रः सोऽक्षरः'' इत्यादिका ।। स्मृतिश्च – 'अहं भवो भवन्तश्च सर्वं नारायणात्मकम् ।' इत्यादिका ।

न चैवं विष्णोरेवान्तस्स्थत्वापत्तिः, कल्पितभेदस्योपहितस्य प्रसिद्धस्येन्द्रादेरेवान्तस्स्थत्वात्, विष्णुलिङ्गानां च अनुपहितरूपाभिप्रायेणोपपत्तेः । एतच्च पूर्वपक्षत्रयं, सुधायामत्र च पूर्वपक्षे इन्द्रादीनां विष्णवभेदस्याप्युक्तत्वात्, अत्र च टीकायां ''इन्द्रादिस्स्यात्'' इत्युक्त्वा ''इन्द्राद्यन्यतमः'' इत्यप्युक्तत्वात्, आनन्दमयाधिकरणे च हिरण्यगर्भरुद्राद्यनेकप्रापकयुक्ते ''पूर्वपक्षानाह'' इति बहुवचनप्रयोगाच्च टीकाऽभिप्रेतम् । भाष्ये च पक्षत्रयसाधारण्येन ''अन्यः प्रतीयते'' इत्युक्तम् ।

एवमन्यत्राप्यनेकप्रापकयुक्ते पूर्वपक्षो यथासम्भवमूह्यः । एवं च इन्द्रबृहस्पत्यादीनामेवाऽऽनन्दमयत्वात् तेषामानन्दमयात् भेदव्यपदेशोऽप्ययुक्त इति ।।

ಅನುವಾದ - ಅಥವಾ ವರುಣನನ್ನು ಅಂತಸ್ಥನೆನ್ನಬಹುದು. ವಿಷ್ಣುವಿನಲ್ಲಿ ಶ್ರುತವಾದ ಲಿಂಗಕ್ಕಿಂತ ವರುಣನಲ್ಲಿ ಶ್ರುತವಾದ ಲಿಂಗವು ಪ್ರಬಲವಾಗಿದೆ. ಎರಡೂ ಸಹ ಲಿಂಗಗಳೇ ಆದರೂ ವರುಣನ ಲಿಂಗವು ಅಂತ್ಯದಲ್ಲಿ ಕೇಳಿಸುತ್ತಿರುವುದಿಂದ ಪ್ರಬಲವಾಗಿದೆ. ಪೂರ್ವದೌರ್ಬಲ್ಯನ್ಯಾಯದಂತೆ ವರುಣಲಿಂಗಕ್ಕಿಂತ ಪೂರ್ವದಲ್ಲಿ ಶ್ರುತವಾದ್ದರಿಂದ ದುರ್ಬಲವಾಗುತ್ತದೆ ಹೊರತು ವರುಣ ಲಿಂಗವು ದುರ್ಬಲವೆಂದು ನಿಶ್ಚಯವಾಗುವುದಿಲ್ಲ.

ಅಥವಾ ಪ್ರತಿಯೊಬ್ಬರು ಸಹ ಅಂತಸ್ಥರಾಗುತ್ತಾರೆಂಬ ಮೂರನೆಯ ಪಕ್ಷವೇ ಇರಲಿ. ವಿಷ್ಣುಲಿಂಗಗಳು ನಿರವಕಾಶವಾದ್ದರಿಂದ ಬಾಧ್ಯಗಳಾಗುವುದಿಲ್ಲ. ಇಂದ್ರಾದಿಶ್ರುತಿಗಳಂತೂ ಶ್ರುತಿಗಳಾದ್ದರಿಂದ ಲಿಂಗದಿಂದ ಬಾಧ್ಯಗಳಾಗುವುದಿಲ್ಲ. ಈ ವಿಷ್ಣುಲಿಂಗ ಮತ್ತು ಇಂದ್ರಾದಿಶ್ರುತಿ ಎರಡನ್ನೂ ಕೂಡಿಸಬೇಕೆಂದೇ ವಿಷ್ಣು ಹಾಗು ಇಂದ್ರಾದಿಗಳಿಗೆ ಅಭೇದವನ್ನು ಹೇಳಬೇಕು. ಒಬ್ಬನೇ ವಿಷ್ಣುವು ಆಯಾ ಉಪಾಧಿಗಳ ಅಧೀನವಾಗಿ ಇಂದ್ರ, ಸೂರ್ಯ, ವರುಣಾದಿ ಹೆಸರನ್ನು ವಿಷ್ಣುವು ಪಡೆಯುತ್ತಾನೆ. ಹೀಗೆ ಹೇಳುವ ಪೂರ್ವಪಕ್ಷಿಯು ಇಂದ್ರಾದಿಗಳಿಗೆ ವಿಷ್ಣುವಿನಿಂದ ಐಕ್ಯವನ್ನು ಅಂಗೀಕರಿಸಿದ್ದಾನೆ. ಆದ್ದರಿಂದ ಅನೇಕ ಈಶ್ವರರನ್ನು ಒಪ್ಪಬೇಕೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಎಲ್ಲ ದೇವತೆಗಳಿಗೆ ಐಕ್ಯವಿದೆಯೆಂದು ಶ್ರುತಿಯೇ ಹೇಳುತ್ತಿದೆ. ''ಸ ಬ್ರಹ್ಮಾ ಸ ಶಿವಃ ಸೇಂದ್ರಃ ಸೋಽಕ್ಷರಃ'' (ಬ್ರಹ್ಮ, ಶಿವ, ಇಂದ್ರ, ಅಕ್ಷರ ಎಲ್ಲವೂ ಸಹ ವಿಷ್ಣುವೇ) ಎಂದು. ಸ್ಮೃತಿಯೂ ಸಹ

''ಅಹಂ ಭವೋ ಭವಂತಶ್ಚ ಸರ್ವಂ ನಾರಾಯಣಾತ್ಮಕಮ್'' ಇತ್ಯಾದಿಯಾಗಿ ಎಲ್ಲವನ್ನು ವಿಷ್ಣುರೂಪವೆನ್ನುತ್ತಿದೆ. ಹೀಗೆ ಐಕ್ಯವಿರುವುದಾದರೆ ಇಂದ್ರಾದಿಗಳು ಅಂತಸ್ಥರಾದಾಗ ವಿಷ್ಣುವು ಅಂತಸ್ಥನಾಗುತ್ತಾನೆಂದು ಆಕ್ಷೇಪಿಸಬಾರದು. ಕಲ್ಪಿತಭೇದವಿರುವುದರಿಂದ ಉಪಹಿತವಾದ ಇಂದ್ರಾದಿಗಳೇ ಅಂತಸ್ಥರಾಗುತ್ತಾರೆ. ಈ ವಿಷಯದಲ್ಲಿ ಶ್ರುತಿಪ್ರಸಿದ್ಧಿಯೂ ಸಹ ಕಾರಣವಾಗಿದೆ. ಶ್ರುತಿಪ್ರಸಿದ್ಧಿಯಿಲ್ಲದ ಅನುಪಹಿತವಾದ ವಿಷ್ಣುವು ಅಂತಸ್ಥನಾಗಲಾರ. ಸಮುದ್ರಾಂತಸ್ಥವನ್ನು ಹೇಳುವ ಶ್ರುತಿಗಳನ್ನು ಅನುಪಹಿತರೂಪದಿಂದ ಕೂಡಿಸಬೇಕು. ಆದ್ದರಿಂದ ಮೂರೂ ಪಕ್ಷಗಳನ್ನು ಪೂರ್ವಪಕ್ಷ ಮಾಡುತ್ತೇವೆ.

ಇಲ್ಲಿಯ ತನಕ ಮೂರು ಬಗೆಯ ಪೂರ್ವಪಕ್ಷಗಳನ್ನು ತೋರಿಸಿದ್ದಾಯಿತು. ಈ ಪೂರ್ವಪಕ್ಷಗಳು ಭಾಷ್ಯಕಾರರಿಗೆ ಮತ್ತು ಟೀಕಾಕಾರರಿಗೆ ಸಮ್ಮತವೇ ಆಗಿದೆ. ಸುಧೆಯಲ್ಲಿ ಮತ್ತು ಟೀಕೆಯಲ್ಲಿ ಪೂರ್ವಪಕ್ಷ ಮಾಡುವಾಗ ಇಂದ್ರಾದಿಗಳಿಗೆ ವಿಷ್ಣುವಿನಿಂದ ಅಭೇದವನ್ನು ಹೇಳಿದ್ದಾರೆ. ಇದರಿಂದ ಮೂರನೆಯ ಪೂರ್ವಪಕ್ಷವು ಸಮ್ಮತವೆಂದು ತಿಳಿಯುತ್ತದೆ.

ಅಷ್ಟೇ ಅಲ್ಲದೆ ಟೀಕೆಯಲ್ಲಿ ''ಇಂದ್ರಾದಿಃ ಸ್ಯಾತ್'' ಎಂದು ಹೇಳಿ ''ಇಂದ್ರಾದನ್ಯತಮಃ'' ಎಂದೂ ಹೇಳಿದ್ದಾರೆ. ''ಇಂದ್ರಾದಿಃ ಸ್ಯಾತ್'' ಎಂಬ ಮಾತಿನಿಂದ ಇಂದ್ರಾದಿಗಳಲ್ಲಿ ಒಬ್ಬರು ಮಾತ್ರ ಅಂತಸ್ಥರಾಗುತ್ತಾರೆಂಬ ಮೊದಲನೆಯ ಅವಧಾರಣ ಪಕ್ಷವು ಸೂಚಿತವಾಗಿದೆ. ''ಇಂದ್ರಾದನ್ಯತಮಃ'' ಎಂಬ ಮಾತಿನಿಂದ ಇಂದ್ರಾದಿಗಳ ಮಧ್ಯದಲ್ಲಿ ಯಾರು ಬೇಕಾದರೂ ಅಂತಸ್ಥರಾಗಬಹುದೆಂಬ ಎರಡನೆಯ ಅವಧಾರಣಪಕ್ಷವನ್ನು ಸೂಚಿಸಿದ್ದಾರೆ.

ಇನ್ನು ಭೇದವ್ಯಪದೇಶಸೂತ್ರದಿಂದಲೇ ಅಭೇದಪಕ್ಷವು ಸ್ಪಷ್ಟವಾಗಿಯೇ ತಿಳಿಯುತ್ತದೆ. ಆನಂದಮಯಾಧಿಕರಣದಲ್ಲಿ ಹಿರಣ್ಯಗರ್ಭ, ರುದ್ರ ಮೊದಲಾದ ಅನೇಕರನ್ನು ಉಪೋದ್ಬಲಿಸುವ ಯುಕ್ತಿಯನ್ನು ಹೇಳುವಾಗ ''ಪೂರ್ವಪಕ್ಷಾನಾಹ'' ಎಂದು ಬಹುವಚನವನ್ನು ಪ್ರಯೋಗಿಸಿದ್ದಾರೆ. ಬಹುವಚನದಿಂದ ಮೂರಕ್ಕಿಂತ ಹೆಚ್ಚು ಪೂರ್ವಪಕ್ಷಗಳನ್ನು ಮಾಡಬೇಕೆಂದು ತಿಳಿಯುತ್ತದೆ. ಹಾಗಾಗಿ ಈ ಅಧಿಕರಣದಲ್ಲಿ ಮಾಡಿದ ಮೂರು ಪೂರ್ವಪಕ್ಷಗಳು ಟೀಕಾರಾಯರಿಗೆ ಸಮ್ಮತವಾಗಿದೆ ಎಂದು ತಿಳಿಯುತ್ತದೆ.

ಟೀಕಾರಾಯರಿಗಷ್ಟೇ ಅಲ್ಲ ಭಾಷ್ಯಕಾರರಿಗೂ ಸಮ್ಮತವಾಗಿದೆ. ಆದ್ದರಿಂದಲೇ ಮೂರು ಪಕ್ಷಗಳನ್ನು ಸಮ್ಮತಿಸುವಂತೆ ''ಅನ್ಯಃ ಪ್ರತೀಯತೇ'' ಎಂದು ಸಾಮಾನ್ಯ ಶಬ್ದವನ್ನು ಪ್ರಯೋಗಿಸಿದ್ದಾರೆ. ''ಅನ್ಯಃ'' ಎಂಬ ಶಬ್ದವು ಇಂದ್ರಾದಿಗಳಲ್ಲಿ ಒಬ್ಬರಷ್ಟೇ ಅಂತಸ್ಥರಾದರೆ ಸರಿಹೊಂದುತ್ತದೆ. ಅಥವಾ ಯಾರಾದರೊಬ್ಬರು ಅಂತಸ್ಥರಾದರೂ 'ಅನ್ಯಃ' ಎಂಬ ಶಬ್ದವು ಸರಿಯಾಗುತ್ತದೆ. ಅಥವಾ ಇಂದ್ರಾದಿಗಳೆಲ್ಲರೂ ಅಂತಸ್ಥರಾದರೂ ಕೂಡ ''ಅನ್ಯಃ ಪ್ರತೀಯತೇ'' ಎಂದು ಹೇಳಬಹುದು.

ಹೀಗೆ ಅನೇಕ ಪ್ರಾಪಕವಾದ ಯುಕ್ತಿಗಳಿದ್ದಾಗ ಉಳಿದ ಅಧಿಕರಣಗಳಲ್ಲಿಯೂ ಯಥಾಯೋಗ್ಯವಾಗಿ ಈ ತರಹದ ಪೂರ್ವಪಕ್ಷಗಳನ್ನು ಊಹಿಸಿಕೊಳ್ಳಬೇಕು. ಆದ್ದರಿಂದ ಇಂದ್ರ ಬೃಹಸ್ಪತ್ಯಾದಿಗಳೇ

ಆನಂದಮಯರಾಗುತ್ತಾರೆ. ಇಂದ್ರಾದಿಗಳು ಆನಂದಮಯರಾದ್ದರಿಂದ ಭೇದವ್ಯಪದೇಶವನ್ನು ಹೇಳಿದ್ದು ಸಹ ತಪ್ಪಾಗುತ್ತದೆ.

ಕಠಿಣ ಪದಾರ್ಥ

ಅಂತೇ ಶ್ರವಣಾತ್ = ವಿಷ್ಣುಲಿಂಗಾದಿಗಳಿಗಿಂತ ಕೊನೆಯಲ್ಲಿ ಕೇಳಿಸುತ್ತಿರುವುದರಿಂದ, ತೃತೀಯಃ = ಎಲ್ಲರೂ ಅಂತಸ್ಥರಾಗಲಿ ಎಂಬ ಮೂರನೆಯ ಪಕ್ಷವು, ಉಭಯ ಅನುಗ್ರಹಾರ್ಥಮ್ = ವಿಷ್ಣುಲಿಂಗ ಹಾಗು ಇಂದ್ರಾದಿ ಶ್ರುತಿಗಳೆರಡನ್ನೂ ಹೊಂದಿಸುವುದಕ್ಕಾಗಿ, ಉಪಾಧಿವಶಾತ್ = ಪುರಂದರ ಮೊದಲಾದ ದೇವತಾಶರೀರ ಅಧೀನವಾಗಿ, ಕಲ್ಪಿತಭೇದಶ್ಚ = ಆವಿದ್ಯಕಭೇದವು, ಉಪಹಿತಸ್ಯ = ಉಪಾಧಿವಿಶಿಷ್ಟನಾದ, ಅನುಪಹಿತ = ಶುದ್ಧಚೈತನ್ಯ.

**प्रकाशः** – यद्येवं, टीकायां इन्द्रादिप्रापकतुल्यकक्ष्यतया वरुणलिङ्गोक्तिरयुक्तेत्यत आह – **यद्वेति** ।। एवं यः कश्चिदित्यनवधारणपक्षं समर्थ्येदानीं भेदव्यपदेशसूत्रव्यावर्त्यं सर्वेऽपीति तृतीय पक्षं वदन्ननेकेश्वरापातादित्युक्तदोषं निरस्यन्नाह – **तृतीयो वाऽस्त्विति ।। उभयानुग्रहार्थमिति ।।**

ननु भेदमाश्रित्योभयपरत्वेऽपि विष्णुतदितरप्रापकाणामुपपत्तेर्नाभेदः सिद्ध्यतीति चेत्, किं मुख्यवृत्त्योभयपरत्वमुतामुख्यवृत्त्या उत मुख्यामुख्योभयवृत्त्या । नाद्यः, वाक्यभेदादिप्रसङ्गेनासम्भवात् । पादान्त्यप्राणनये त्वगत्या वाक्यभेदोपगमः पूर्वपक्षे । न द्वितीयः, क्वचिन्मुख्यत्वस्य वक्तव्यत्वात् । तृतीयेऽपि किमिन्द्रादावमुख्यत्वम् विष्णौ मुख्यत्वम्, उत विपरीतम्?

नाद्यः, इन्द्रादौ निरूढश्रुत्यादिविरोधात् । न द्वितीयः, तस्याभेदपक्षाश्रयणं विनाऽयोगात् । मुख्यवृत्त्योपहितेन्द्रादिपरत्वेऽपि अमुख्यवृत्त्याऽनुपहितविष्णुपरत्वसम्भवात् । अन्यथाऽनेकशास्त्रत्वापत्तेरिति भावः ।

इन्द्रादीनां विष्ण्वैक्येऽर्थापत्तिमुक्त्वा श्रुतिस्मृती चाह – **तथा चेति** ।। एवं तर्हि सिद्धान्तिनो नानिष्टमित्यत आह – **न चैवमिति** ।। 'एवम्' इन्द्रादीनां विष्ण्वैक्ये ।। **कल्पितेति** ।। तथा च स्वरूपाभेदेपि विष्णोरिन्द्रादेश्चाविद्यकभेदस्यापि सत्त्वेन विष्णोर्नेति निरासोपपत्तेरिति भावः । 'उपहितस्य' उपाधिविशिष्टस्य । इतरप्रापकसद्भावात् कुत एतदित्यत आह – **विष्ण्विति** ।। उपहितधर्माणां चानुपहिते शुद्धे अयोगादिति भावः ।।

ಪರಿಪೂರ್ಣಚಂದ್ರಿಕಾ

एतच्चेति ।। 'टीकाभिप्रेतम्' इत्यन्वयः । कथं टीकाद्वयपूर्वपक्षे पक्षत्रयमभिप्रेतम्? इत्यत आह – **विष्णवभेदस्यापीति** ।। सुधायामिन्द्रादिप्रापकाणां प्राबल्यसमर्थने-नावधारणपक्षस्य, सर्वसाधारण्येन प्राबल्यसमर्थनेन चानवधारणपक्षस्य चावगतेः स्पष्टत्वान्नोक्तः । टीकायां पक्षद्वयं ज्ञापकोक्त्या दर्शयति – **अत्र चेति** ।। **एव-मन्यत्रापीति** ।। आनन्दमयाधिकरणे अतीते, पादान्त्यप्राणाधिकरणे, द्युभ्वाद्यधिकरणे ''मांसादिभौमं यथा शब्दमितरयोश्च'' इत्यादिवक्ष्यमाणाधिकरणेष्वित्यर्थः । पूर्वतन्त्रेऽपि निवीताद्यधिकरणेष्वनेककोटिकपूर्वपक्षः प्रसिद्ध इति भावः । पादान्त्य-प्राणनयादौ नाभेदपूर्वपक्षः, किन्तु वाक्यभेदेन, अत उक्तं – **यथासम्भवमिति** ।। तथा च तत्र तत्र वक्ष्यामः ।

आद्यपक्षद्वये आनन्दमयसूत्रमाक्षेप्यमिति स्पष्टं टीकातोऽवगम्यते । अभेदपूर्वपक्षे तु नेति सुधोक्तमेवाक्षेप्यं दर्शयति – **एवं चेति** ।।

एतेनैतत्परास्तम्, अभेदेनेह पूर्वपक्षो न युक्तः, तथात्वे प्राचीन-भेदव्यपदेशविरोधादिति । तस्यासम्प्रतिपत्तेरिति ।

अत्राह कश्चित् श्रुत्यादिप्रमाणषट्केन विष्णुत्वेन निर्णीतस्यानन्दमयस्य कथ-मेकेनादृश्यत्वेनान्यगतेन लिङ्गेनान्यत्वाध्यवसायः, ''त्यजेदेकं कुलस्यार्थे'' इति न्यायेन लिङ्गस्यैव बाध्यत्वात् । न चैकेनापि निरवकाशेन बहूनां प्रतिबन्ध इति वाच्यम्, श्रुत्यादेरपि निरवकाशतायाः उक्तत्वादिति ।

अत्राहुः – इन्द्रादिप्रापकप्राबल्येनान्यस्यान्तस्स्थत्वे अवश्यं वाच्ये, तत्र श्रुतम-दृश्यत्वमन्यत्र निरवकाशमिति तस्मिन्निरवकाशेऽन्यप्रापके सहकारिणि सत्यानन्द-मयस्य विष्णुत्वे प्रागुक्तानि बाधकानि मूर्धानमाधुन्वत इत्यनेकबाधकोपेतत्वेन न विष्णुरित्यवधारणोपपत्तिः । नच श्रुत्यादिविरोधः, तेषामभावाभिमानात्, भावे वा अन्यथयितव्यत्वाभिमानात्, अत्रत्यानामिन्द्रादिप्रापकाणां प्राबल्याभिमानात् । एवमुत्तरत्रापि द्रष्टव्यम् ।

केचित्तु – निश्चयाभावेऽपि आनन्दमयोऽप्यन्यः किं न स्यात्, सन्देहेनापि 'विष्णुरेव' इत्यवधारणप्रतिबन्धसिद्धेः । भाष्ये ''तस्मात्स एवानन्दमयः'' इत्येवकारस्य 'तस्मादेव' इति सम्बन्ध इत्याहुः ।

**गुरुराजीयम्** – टीकास्वारस्यानुरोधेन पक्षान्तरमाह – **यद्वेति** ।। तर्हीन्द्रादिसमकक्ष्यत्वेन वरुणोक्तिरयुक्तेत्यतो वा आह – **यद्वेति** ।। **पूर्वदौर्बल्यन्यायेनेति** ।। ''पूर्वापरयोरविरोधे पूर्वदौर्बल्यं प्रकृतिवत्'' इति न्यायेनेत्यर्थः ।। **एतच्चेति** ।। आद्येनोक्तत्वादित्यन्तेन तृतीयपूर्वपक्षस्य टीकासुधासंमतत्वमुक्तम् । द्वितीयेनोक्तत्वादित्यन्तेनान्यतमस्यां तस्स्थत्वमिति द्वितीयपूर्वपक्षस्य टीकासंमतत्वमुक्तं वेदितव्यम् । पूर्वपक्षानिति आनन्दमयाधिकरणे विष्णुपक्षे बाधकबाहुल्यात् तत्र विष्णुत्वानिर्धारणस्य सुलभत्वात्तत्रायं विवेको न कृतः । द्वितीयसूत्रव्यावर्त्यामाशङ्कामाह – **एवं चेति** ।।

ವಿವರಣೆ - ಇಂದ್ರ, ಸೂರ್ಯ ಬೃಹಸ್ಪತಿ ಮೊದಲಾದವರು ಅಂತಸ್ಥರಾಗುತ್ತಾರೆ. ವರುಣನು ಅಂತಸ್ಥನಾಗದಿದ್ದರೂ ಸಹ ಪೂರ್ವಪಕ್ಷ ಮಾಡಬಹುದು. ಇಂದ್ರಾದಿವಿಷಯಗಳಲ್ಲಿರುವ ಶ್ರುತಿಲಿಂಗಾದಿಗಳು ಪ್ರಬಲವಾಗಿವೆ. ವರುಣನ ಲಿಂಗವು ದುರ್ಬಲವಾಗಿದೆಯೆಂದು ಇಲ್ಲಿಯತನಕ ಹೇಳಿದ್ದಾಯಿತು. ಹೀಗೆ ವರುಣನನ್ನು ಬಿಟ್ಟು ಪೂರ್ವಪಕ್ಷ ಮಾಡುವುದಾದರೆ ಟೀಕೆಯಲ್ಲಿ ಇಂದ್ರಾದಿಗಳು ಅಂತಸ್ಥರೆನ್ನಲು ಹೇಳಿರುವ ಪ್ರಮಾಣದಷ್ಟೇ ಪ್ರಾಬಲ್ಯವನ್ನು ವರುಣನಲ್ಲಿಯೂ ಸಹ ಟೀಕಾರಾಯರು ಹೇಳಿದ್ದಾರೆ. ಈಗ ವರುಣನನ್ನು ಬಿಟ್ಟು ಪೂರ್ವಪಕ್ಷ ಮಾಡುವುದಾದರೆ, ಟೀಕೆಯಲ್ಲಿ ಹೇಳಿದ ವರುಣನ ಲಿಂಗವು ತಪ್ಪಾಗುವುದಿಲ್ಲವೇ? ಎಂಬ ಪ್ರಶ್ನೆಗೆ ''ಯದ್ವಾ'' ಗ್ರಂಥದಿಂದ ಉತ್ತರಿಸಿದ್ದಾರೆ.

ವರುಣಲಿಂಗವು ಕೊನೆಯಲ್ಲಿ ಶ್ರುತವಾದ್ದರಿಂದ ವಿಷ್ಣುಲಿಂಗಕ್ಕಿಂತ ಪ್ರಬಲವಾಗಿದೆ. ಆದ್ದರಿಂದ ವರುಣನೂ ಕೂಡ ಅಂತಸ್ಥನಾಗಬಹುದೆಂದು ಮತ್ತೊಂದು ಬಗೆಯಲ್ಲಿ ಪೂರ್ವಪಕ್ಷ ಮಾಡಿದ್ದಾರೆ. ಹೀಗೆ ಯಾರಾದರೊಬ್ಬರು ಅಂತಸ್ಥರಾಗಬಹುದೆಂಬ ಅನಿರ್ಧಾರಿತಪಕ್ಷವನ್ನು ಇಷ್ಟರ ತನಕ ಸಮರ್ಥಿಸಿದ್ದಾಯಿತು. ಪ್ರಕೃತ ಇಂದ್ರಾದಿ ಸಕಲದೇವತೆಗಳೂ ಸಹ ಅಂತಸ್ಥರಾಗುತ್ತಾರೆಂಬ ಮೂರನೆಯ ಪಕ್ಷವನ್ನು ''ತೃತಿಯೋ ವಾಸ್ತು'' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. ಈ ಪಕ್ಷವು ಭೇದವ್ಯಪದೇಶಸೂತ್ರದಿಂದ ನಿರಸ್ತವಾಗಿದೆ. ಇಂದ್ರಾದಿ ಸಕಲದೇವತೆಗಳು ಅಂತಸ್ಥರಾದರೆ ಅನೇಕ ಈಶ್ವರರನ್ನು ಒಪ್ಪಬೇಕಾಗುತ್ತದೆಂಬ ದೋಷವನ್ನು ಗ್ರಂಥಕಾರರು ''ವಿಷ್ಣುಲಿಂಗಾನಾಮ್'' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ವೇದವನ್ನು ಆಶ್ರಯಿಸಿ ಉಭಯಪರತ್ವವನ್ನು ಒಪ್ಪಿದರೂ ಸಹ ವಿಷ್ಣು ಹಾಗು ಇತರಪ್ರಾಪಕತ್ವವು ಉಪಪನ್ನವಾಗುತ್ತದೆ. ಇದರಿಂದ ಅಭೇದವು ಸಿದ್ಧಿಸುವುದಿಲ್ಲವಲ್ಲ? ಎಂದು ಪ್ರಶ್ನಿಸಿದರೆ ಹೀಗೆ ವಿಕಲ್ಪಿಸುತ್ತಾರೆ. ಮುಖ್ಯವೃತ್ತಿಯಿಂದ ಉಭಯಪರತ್ವವನ್ನು ಹೇಳುತ್ತೀರೊ? ಅಥವಾ ಅಮುಖ್ಯವೃತ್ತಿಯಿಂದ ಉಭಯಪರತ್ವವನ್ನು ಹೇಳುತ್ತೀರೋ? ಅಥವಾ ಮುಖ್ಯವೃತ್ತಿ ಮತ್ತು ಅಮುಖ್ಯವೃತ್ತಿ ಎರಡರಿಂದಲೂ ಉಭಯಪರತ್ವವನ್ನು ಹೇಳುತ್ತಿರೋ?

ಮೊದಲನೆಯ ಪಕ್ಷವನ್ನು ಒಪ್ಪಲಾಗದು. ಇಂದ್ರ ಹಾಗು ವಿಷ್ಣು ಇಬ್ಬರನ್ನೂ ವಾಕ್ಯವು ಮುಖ್ಯವಾಗಿ ಪ್ರತಿಪಾದಿಸುವುದಾದರೆ ವಾಕ್ಯಭೇದಾದಿದೋಷವು ಬರುತ್ತದೆ. ಅಂತಿಮಪ್ರಾಣಾಧಿಕರಣದಲ್ಲಿ ಒಂದೇ

ವಾಕ್ಯದಿಂದ ಪ್ರಾಣ ಹಾಗು ಇಂದ್ರಾದಿಗಳನ್ನು ಪ್ರತಿಪಾದ್ಯರೆಂದು ಅಂಗೀಕರಿಸಿದ್ದಾರಲ್ಲ? ಎಂದರೆ ಅಲ್ಲಿ ಪೂರ್ವಪಕ್ಷ ಮಾಡಲು ಬೇರೆ ಗತಿ ಇಲ್ಲದ ಕಾರಣ ಅನಿವಾರ್ಯವಾಗಿ ವಾಕ್ಯಭೇದ ದೋಷವನ್ನು ಸಹಿಸಬೇಕು. ಆದರೆ ಪ್ರಕೃತ ಅಂತಹ ಸ್ಥಿತಿಯೇನು ಇರುವುದಿಲ್ಲ.

ಎರಡನೆಯ ಪಕ್ಷವನ್ನೂ ಒಪ್ಪಲಾಗದು. ವಿಷ್ಣು ಇಂದ್ರ ಮೊದಲಾದವರಲ್ಲೂ ಅಮುಖ್ಯವೃತ್ತಿಯನ್ನು ಹೇಳಲಾಗದು. ಎಲ್ಲಾದರೂ ಒಂದಡೆ ಮುಖ್ಯವೃತ್ತಿಯನ್ನು ಹೇಳಲೇಬೇಕಾಗುತ್ತದೆ. ಮೂರನೇ ಪಕ್ಷದಲ್ಲಿ ಇಂದ್ರಾದಿಗಳಲ್ಲಿ ಮುಖ್ಯ ಅಮುಖ್ಯ ವೃತ್ತಿಯನ್ನು ಒಪ್ಪಿ, ವಿಷ್ಣುವಿನಲ್ಲಿ ಮುಖ್ಯವೃತ್ತಿಯನ್ನು ಹೇಳುತ್ತೀರೋ,

ಅಥವಾ ವಿಷ್ಣುವಿನಲ್ಲಿ ಅಮುಖ್ಯವೃತ್ತಿಯನ್ನು ಒಪ್ಪಿ, ಇಂದ್ರಾದಿಗಳಲ್ಲಿ ಮುಖ್ಯವೃತ್ತಿಯನ್ನು ಹೇಳುತ್ತೀರೋ? ಮೊದಲನೆಯದು ತಪ್ಪು. ಇಂದ್ರಾದಿಗಳಲ್ಲಿ ಶ್ರುತಿಯು ನಿರೂಢವಾದ್ದರಿಂದ ಅಮುಖ್ಯವೃತ್ತಿಯನ್ನು ಒಪ್ಪಲಾಗದು. ಎರಡನೆಯದ್ದನ್ನೂ ಒಪ್ಪಲಾಗದು. ವಿಷ್ಣುವಿನಲ್ಲಿ ಅಮುಖ್ಯವೃತ್ತಿಯನ್ನು ಇಂದ್ರನಲ್ಲಿ ಮುಖ್ಯವೃತ್ತಿಯನ್ನು ಹೇಳಬೇಕಾದರೆ ಇಂದ್ರ ಹಾಗು ವಿಷ್ಣು ಇಬ್ಬರಿಗೂ ಅಭೇದವನ್ನು ಒಪ್ಪಲೇಬೇಕಾಗುತ್ತದೆ. ಅಭೇದವನ್ನು ಒಪ್ಪಿದಾಗ ಉಪಹಿತನಾದ ಇಂದ್ರನು ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗುತ್ತಾನೆ. ಅನುಪಹಿತನಾದ ವಿಷ್ಣುವು ಅಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗುತ್ತಾನೆಂದು ಹೇಳಬಹುದು. ಹೀಗೆ ಒಪ್ಪದಿದ್ದರೆ ಶಾಸ್ತ್ರಭೇದರೂಪದೋಷವು ಬರುತ್ತದೆ. ಹೀಗೆ ಅರ್ಥಾಪತ್ತಿಯಿಂದ ಇಂದ್ರ ಹಾಗು ವಿಷ್ಣುವಿಗೆ ಅಭೇದವನ್ನು ಗ್ರಂಥಕಾರರು ಹೇಳಿದ್ದಾರೆ. ಅಷ್ಟೇ ಅಲ್ಲದೆ ಅಭೇದವಿಷಯದಲ್ಲಿ ಶ್ರುತಿ ಸ್ಮೃತಿಪ್ರಮಾಣಗಳು ಇವೆ ಎಂದು "ತಥಾ ಚ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಇಂದ್ರಾದಿಗಳ ಅಭೇದವಿಷಯದಲ್ಲಿ ಶ್ರುತಿ ಸ್ಮೃತಿಪ್ರಮಾಣಗಳು ಇರುವುದಾದರೆ ಸಿದ್ಧಾಂತಿಗಳಿಗೆ ಈ ಪೂರ್ವಪಕ್ಷವು ಹೇಗೆ ಅಧಿಷ್ಠಾನವಾಗುತ್ತದೆ? ಎಂಬ ಪ್ರಶ್ನೆಗೆ "ನ ಚೈವಮ್" ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಸ್ವರೂಪತಃ ಇಂದ್ರ ಹಾಗೂ ವಿಷ್ಣುವಿಗೆ ಅಭೇದವಿದ್ದರೂ ಕಲ್ಪಿತವಾದ ಭೇದವಿದೆ. ಆದ್ದರಿಂದ ಕಲ್ಪಿತ ಭೇದವನ್ನು ವಿವಕ್ಷಿಸಿ ಇಂದ್ರನೇ ಅಂತಸ್ಥನಾಗುತ್ತಾನೆ. ವಿಷ್ಣುವು ಅಂತಸ್ಥನಾಗಲಾರನೆಂದು ಪೂರ್ವಪಕ್ಷ ಮಾಡಬಹುದು. ಇಂದ್ರನು ಉಪಹಿತನಾಗಿದ್ದಾನೆ. ವಿಷ್ಣುವು ಅನುಪಹಿತನಾಗಿದ್ದಾನೆ. ಅನುಪಹಿತನಾದ ವಿಷ್ಣುವಿನಲ್ಲಿರುವ ಸಮುದ್ರಾಂತಸ್ಥತ್ವಲಿಂಗಗಳು ಉಪಹಿತನಾದ ಇಂದ್ರನಲ್ಲಿ ಹೇಳಬಹುದು. ಆದರೆ ಉಪಹಿತನಾದ ಇಂದ್ರನಲ್ಲಿರುವ ಅಂತಸ್ಥತ್ವಾದಿ ಧರ್ಮಗಳನ್ನು ಅನುಪಹಿತನಾದ ವಿಷ್ಣುವಿನಲ್ಲಿ ಬರುವುದಿಲ್ಲ. ಈ ಸೂಕ್ಷ್ಮವನ್ನು ಗಮನಿಸಬೇಕು.

ಇಲ್ಲಿಯ ತನಕ ಮೂರು ಬಗೆಯಲ್ಲಿ ಪೂರ್ವಪಕ್ಷವನ್ನು ಮಾಡಿದ್ದಾಯಿತು. ಟೀಕೆಗೆ ಹಾಗು ಸುಧಾಗ್ರಂಥಕ್ಕೆ ಈ ಮೂರು ಪೂರ್ವಪಕ್ಷಗಳು ಹೇಗೆ ಸಮ್ಮತವಾಗಿವೆ? ಎಂಬ ಪ್ರಶ್ನೆಗೆ "ವಿಷ್ಣ್ವಭೇದಸ್ಯಾಪಿ" ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಸುಧಾಗ್ರಂಥದಲ್ಲಿ ಅಭೇದಪಕ್ಷವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ ಅವಧಾರಣ ಪಕ್ಷವನ್ನಾಗಲಿ ಅನವಧಾರಣ ಪಕ್ಷವನ್ನಾಗಲೀ ಸ್ಪಷ್ಟವಾಗಿ ಹೇಳಿಲ್ಲ. ಇಂದ್ರಾದಿಪ್ರಾಪಕಗಳು ಪ್ರಬಲವಾಗಿರುವುದರಿಂದ ಅವಧಾರಣ ಪಕ್ಷವನ್ನು ಪ್ರತ್ಯೇಕವಾಗಿ ಹೇಳಿಲ್ಲ. ಮತ್ತು ಸಕಲ ದೇವತೆಗಳ ಸಾಧಾರಣವಾದ ಯುಕ್ತಿಗಳನ್ನು ಪ್ರಬಲವೆಂದು ಸಮರ್ಥಿಸಿದ್ದರಿಂದ ಅನವಧಾರಣ ಪಕ್ಷವನ್ನೂ ಕೂಡ ವಿಶೇಷವಾಗಿ ಹೇಳಿಲ್ಲ. ಸ್ಪಷ್ಟವಾದ ಪಕ್ಷಗಳನ್ನು ಬಿಟ್ಟು ಅಸ್ಪಷ್ಟವಾದ ಅಭೇದ ಪಕ್ಷವನ್ನು ಹೇಳಿದ್ದಾರೆ.

ಟೀಕೆಯಲ್ಲಿ ಮೊದಲೆರಡು ಪಕ್ಷಗಳನ್ನು ತಮ್ಮ ವಾಕ್ಯದ ವಿನ್ಯಾಸದಿಂದಲೇ ಸೂಚಿಸಿದ್ದಾರೆ. ಅದನ್ನು ಗ್ರಂಥಕಾರರು ''ಅತ್ರಚ'' ಇತ್ಯಾದಿವಾಕ್ಯದಿಂದ ವಿವರಿಸಿದ್ದಾರೆ.

ಈ ಅಂತಸ್ಥತ್ವಾಧಿಕರಣದಲ್ಲಿ ಅವಧಾರಣವಾದ ಮತ್ತು ಅನವಧಾರಣವಾದ ಮತ್ತು ಅಭೇದಪರವಾದ ಮೂರು ಬಗೆಯ ಪೂರ್ವಪಕ್ಷಗಳನ್ನು ತೋರಿಸಿದ್ದಾರೆ. ಇದೇ ಬಗೆಯಲ್ಲಿ ಮೂರುವಿಧ ಪೂರ್ವಪಕ್ಷವನ್ನು ಬೇರೆ ಅಧಿಕರಣದಲ್ಲಿಯೂ ಸಹ ಯಥೋಚಿತವಾಗಿ ಊಹಿಸಿಕೊಳ್ಳಬೇಕು. ಹಿಂದಿನ ಆನಂದಮಯಾಧಿಕರಣದಲ್ಲಿ ಮತ್ತು ಅಂತಿಮಪ್ರಾಣಾಧಿಕರಣದಲ್ಲಿ ದ್ಯುಭ್ವಾದ್ಯಧಿಕರಣದಲ್ಲಿ ಮತ್ತು ''ಮಾಂಸಾದಿಭೌಮಂ ಯಥಾಶಬ್ದಮಿತರಯೋಶ್ಚ'' ಇತ್ಯಾದಿ ಅಧಿಕರಣಗಳಲ್ಲಿ ಇದೇ ರೀತಿಯಾದ ಮೂರು ಬಗೆಯ ಪೂರ್ವಪಕ್ಷಗಳನ್ನು ಊಹಿಸಿಕೊಳ್ಳಬೇಕು. ಪೂರ್ವಮೀಮಾಂಸೆಯಲ್ಲಿಯೂ ಸಹ ನಿವೀತಾದ್ಯಧಿಕರಣದಲ್ಲಿ ಅನೇಕ ಕೋಟಿಯುಳ್ಳ ಪೂರ್ವಪಕ್ಷವನ್ನು ಮಾಡಿದ್ದಾರೆ. ಇದೂ ಸಹ ಪ್ರಕೃತಕ್ಕೆ ಸಂವಾದಿಯಾಗಿದೆ.

ವಸ್ತುತಸ್ತು ಅಂತಿಮಪ್ರಾಣಾಧಿಕರಣದಲ್ಲಿ ಅಭೇದಪರವಾದ ಪೂರ್ವಪಕ್ಷವನ್ನು ಮಾಡಿಯೇ ಇಲ್ಲ. ಕೇವಲ ವಾಕ್ಯಭೇದದಿಂದಷ್ಟೇ ಪೂರ್ವಪಕ್ಷವನ್ನು ಮಾಡಿದ್ದಾರೆ. ಹಾಗಾಗಿ ಮೂರು ಬಗೆಯ ಪೂರ್ವಪಕ್ಷವನ್ನು ಆನಂದಮಯಾಧಿಕರಣಗಳಲ್ಲಿ ಹೇಳಬಹುದೇ ಹೊರತು ಅಂತಿಮಪ್ರಾಣಾಧಿಕರಣದಲ್ಲಿ ಹೇಳಲಾಗದು. ಆದರೂ ಸಹ ಎರಡು ಬಗೆಯ ಪೂರ್ವಪಕ್ಷವನ್ನೂ ಹೇಳಬಹುದು. ಅದಕ್ಕೋಸ್ಕರವೇ ಗ್ರಂಥಕಾರರು ''ಯಥಾಸಂಭವಂ'' ಎಂದಿದ್ದಾರೆ. ಹೆಚ್ಚಿನ ಮಾಹಿತಿಯನ್ನು ಆಯಾ ಅಧಿಕರಣಗಳ ಸಂದರ್ಭದಲ್ಲೇ ತಿಳಿಸುತ್ತೇವೆ.

ಮೊದಲೆರಡು ಪೂರ್ವಪಕ್ಷಗಳಿಂದ ಆನಂದಮಯಸೂತ್ರವು ಆಕ್ಷಿಪ್ತವಾಗುತ್ತದೆಂದು ಟೀಕೆಯಿಂದ ಸ್ಪಷ್ಟವಾಗಿ ತಿಳಿಸುತ್ತಾರೆ. ಆದರೆ ಅಭೇದಪೂರ್ವಪಕ್ಷದಿಂದ ಆನಂದಮಯಸೂತ್ರವನ್ನು ಆಕ್ಷೇಪಿಸಲು ಸಾಧ್ಯವಿಲ್ಲ. ಅದಕ್ಕೋಸ್ಕರ ಗ್ರಂಥಕಾರರು ನೇರವಾಗಿ ಭೇದವ್ಯಪದೇಶಸೂತ್ರವೇ ಆಕ್ಷಿಪ್ತವಾಗುತ್ತದೆಂದು ಹೇಳಿದ್ದಾರೆ.

ಶಂಕೆ – ಅಭೇದವನ್ನು ಒಪ್ಪಿ ಪೂರ್ವಪಕ್ಷ ಮಾಡುವುದು ಸರಿಕಾಣುವುದಿಲ್ಲ. ಹಾಗೆ ಮಾಡಿದರೆ ಹಿಂದೆ ಪ್ರಸಕ್ತವಾದ ಭೇದವ್ಯಪದೇಶಸೂತ್ರದಿಂದ ವಿರೋಧ ಬರುತ್ತದಲ್ಲವೇ?

ಸಮಾಧಾನ – ಅಭೇದಪರವಾಗಿ ಪೂರ್ವಪಕ್ಷ ಮಾಡವವನು ಭೇದವ್ಯಪದೇಶಸೂತ್ರದಲ್ಲಿ ಹೇಳಿದುದನ್ನು ಅಂಗೀಕರಿಸಲಾರ. ಹಾಗಾಗಿ ಭೇದವ್ಯಪದೇಶಸೂತ್ರದಿಂದ ವಿರೋಧ ಬರುವುದಿಲ್ಲ.

ಕೆಲವರು ಹೀಗೆ ಹೇಳುತ್ತಾರೆ – ಶ್ರುತ್ಯಾದಿ ಆರು ಪ್ರಮಾಣಗಳಿಂದ ಆನಂದಮಯನೇ ವಿಷ್ಣುವಾಗಿದ್ದಾನೆಂದು ನಿರ್ಣಯವಾಗಿದೆ. ಇದನ್ನು ಕೇವಲ ಒಂದೇ ಲಿಂಗದಿಂದ ಅಲ್ಲಗಳೆಯುವುದು ಸಾಧ್ಯವಿಲ್ಲ. ''ತ್ಯಜೇದೇಕಂ ಕುಲಸ್ಯಾರ್ಥೇ'' ಕುಲದ ರಕ್ಷಣೆಗೋಸ್ಕರ ಒಬ್ಬನನ್ನು ಬಿಡಬೇಕೆಂಬ ನ್ಯಾಯದಂತೆ ಶ್ರುತ್ಯಾದಿ ಆರು ಪ್ರಮಾಣಗಳ ರಕ್ಷಣೆಗೋಸ್ಕರ ಲಿಂಗವನ್ನು ಕೈ ಬಿಡಬೇಕು. ಲಿಂಗವು ಒಂದೇ ಆಗಿದ್ದರೂ ಸಹ ನಿರವಕಾಶವಾದ್ದರಿಂದ ಶ್ರುತ್ಯಾದಿ ಆರು ಪ್ರಮಾಣಗಳನ್ನು ಬಾಧಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಆನಂದಮಯನ ವಿಷಯದಲ್ಲಿ ಹೇಳಿದ ಶ್ರುತ್ಯಾದಿ ಪ್ರಮಾಣಗಳೂ ಸಹ ನಿರವಕಾಶವಾಗಿ ಬಲಿಷ್ಠವೇ ಆಗಿವೆ.

ಕೆಲವರ ಸಮಾಧಾನ - ಇಂದ್ರಾದಿ ಪ್ರಾಪಕವಾದ ಪ್ರಮಾಣಗಳು ಬಲಿಷ್ಠವಾದ್ದರಿಂದ ಇಂದ್ರಾದಿಗಳಿಗೆ ಅಂತಸ್ಥರೆಂದು ಅವಶ್ಯವಾಗಿ ಹೇಳಬೇಕು. ಈ ವಿಷಯದಲ್ಲಿ ಶ್ರುತವಾದ ಅದೃಶ್ಯತ್ವವು ಬೇರೆಯವರಲ್ಲಿ ನಿರವಕಾಶವಾಗಿದೆ. ನಿರವಕಾಶವಾದ ಈ ಅದೃಶ್ಯತ್ವ ಪ್ರಮಾಣವು ಇಂದ್ರಾದಿಗಳಲ್ಲಿ ಪ್ರಬಲವಾಗಿರುವುದರಿಂದ ವಿಷ್ಣುವನ್ನು ಆನಂದಮಯನೆಂದು ತೀರ್ಮಾನಿಸಲಾಗದು. ಆದ್ದರಿಂದ ವಿಷ್ಣುವು ಆನಂದಮಯನೆನ್ನಲು ಹಿಂದೆ ಯಾವ ವಿಷ್ಣುಬಾಧಕಗಳನ್ನು ಹೇಳಿದ್ದಾರೋ ಆ ಬಾಧಕಗಳೂ ಸಹ ಈ ನಿರವಕಾಶಲಿಂಗದಿಂದ ಬಲಿಷ್ಠವಾಗುತ್ತವೆ. ಹೀಗೆ ಅನೇಕ ಬಾಧಕಗಳು ಇರುವುದರಿಂದ ವಿಷ್ಣುವನ್ನು ಆನಂದಮಯನೆಂದು ನಿಶ್ಚಯಿಸುವುದು ಕಷ್ಟ. ಶ್ರುತ್ಯಾದಿಗಳ ವಿರೋಧವನ್ನು ಶಂಕಿಸಬಾರದು. ಆನಂದಮಯನು ವಿಷ್ಣುವೆನ್ನಲು ಶ್ರುತಿಗಳೇ ಇರುವುದಿಲ್ಲ. ಆಪಾತತಃ ಶ್ರುತಿಗಳು ವಿಷ್ಣುವನ್ನೂ ಆನಂದಮಯನೆಂದು ಹೇಳಿದರೂ, ಬೇರೆ ಅರ್ಥವನ್ನು ಹೇಳಬೇಕು. ಇಂದ್ರಾದಿವಿಷಯಗಳಲ್ಲಿರುವ ಪ್ರಮಾಣಗಳು ಬಲಿಷ್ಠವಾದ್ದರಿಂದ. ಹೀಗೆ ಉಳಿದ ಅಧಿಕರಣಗಳಲ್ಲಿಯೂ ತಿಳಿಯಬೇಕು.

ಕೆಲವು ವಿದ್ವಾಂಸರು - ನಿಶ್ಚಾಯಕಪ್ರಮಾಣ ಇಲ್ಲದ್ದರಿಂದ ಆನಂದಮಯನು ಬೇರೆ ಯಾರಾದರೂ ಏಕೆ ಆಗಬಾರದು? ಎಂಬ ಸಂದೇಹ ಬರುತ್ತದೆ. ಸಂದೇಹ ಬಂದರೂ ಸಹ ಆನಂದಮಯನು ವಿಷ್ಣುವೇ ಎಂದು ನಿಶ್ಚಯಿಸಲಾಗದು ಹಾಗಾದರೆ ಭಾಷ್ಯದಲ್ಲಿ ''ತಸ್ಮಾತ್ಸ ಏವಾನಂದಮಯಃ'' ಎಂದು ಏವಕಾರವನ್ನು ಹೇಳಿದ್ದಾರಲ್ಲ? ಎಂದರೆ ಅದಕ್ಕೆ 'ತಸ್ಮಾತ್' ಎಂಬುದರ ಜೊತೆಗೆ ಅನ್ವಯ ಮಾಡಬೇಕು. ''ತಸ್ಮಾತ್ಸ ಏವಾನಂದಮಯಃ'' (ಆದ್ದರಿಂದಲೇ ವಿಷ್ಣುವು ಆನಂದಮಯನು) ಹೀಗೆ ಅಭಿಪ್ರಾಯ ಪಡುತ್ತಾರೆ. ಇಲ್ಲಿಗೆ ಅಂತಸ್ಥತ್ವಾಧಿಕರಣದ ಪೂರ್ವಪಕ್ಷವು ಮುಗಿಯಿತು.

## ಸಾರ

ಇಂದ್ರಾದಿ ಸಕಲದೇವತೆಗಳೂ ಅಂತಸ್ಥರು ಎನ್ನುವ ಮೂರನೇ ರೀತಿಯ ಪಕ್ಷವನ್ನಿಟ್ಟುಕೊಂಡೂ ಪೂರ್ವಪಕ್ಷ ಮಾಡಬಹುದು. ಹೇಗೆಂದರೆ - ವಿಷ್ಣುವಿನ ಲಿಂಗಗಳು ನಿರವಕಾಶಗಳಾದ್ದರಿಂದ ಅವುಗಳನ್ನು ಬಿಡಲು ಆಗುವುದಿಲ್ಲ. ಹಾಗೆಯೇ ಇಂದ್ರಾದಿ ಶ್ರುತಿಗಳು ಶ್ರುತಿಗಳಾದ್ದರಿಂದ ಅವುಗಳನ್ನೂ ಕಡೆಗಣಿಸುವಂತೆ ಇಲ್ಲ, ಹಾಗಾಗಿ ಎರಡನ್ನೂ ಕೂಡಿಸಬೇಕಾದ್ದರಿಂದ ವಿಷ್ಣುವೇ ಒದೊಂದು ಉಪಾಧಿಯುಕ್ತನಾದಾಗ ಇಂದ್ರ ಮೊದಲಾದ ಹೆಸರುಗಳಿಂದ ಕರೆಸಿಕೊಳ್ಳುತ್ತಾನೆ ಎಂದು ಅಂಗೀಕರಿಸಿ ಪೂರ್ವಪಕ್ಷವನ್ನು ಮಾಡಿದರೆ ಅನೇಕ ಈಶ್ವರರನ್ನು ಒಪ್ಪಬೇಕಾಗುತ್ತದೆ ಎಂಬ ಬಾಧಕವೂ ಇಲ್ಲ. ಇದಕ್ಕನುಗುಣವಾಗಿ ಶ್ರುತಿ ಸ್ಮೃತಿಗಳೂ ಇವೆ. ಹೀಗೆ ಹೇಳಿದರೆ ವಿಷ್ಣುವು ಅಂತಸ್ಥನೆಂದೇ ಹೇಳಿದಂತಾಯಿತಲ್ಲ ಎನ್ನಬಾರದು. ಇಂದ್ರಾದಿಗಳೊಂದಿಗೆ ವಿಷ್ಣುವಿಗೆ ಸ್ವರೂಪತಃ ಐಕ್ಯವಿದ್ದರೂ ಆವಿದ್ಯಕ ಭೇದವಿರುವುದರಿಂದ ಇಂದ್ರಾದಿಗಳನ್ನು ಅಂತಸ್ಥರೆಂದು ಹೇಳಿದಾಗ ಅವರಿಗೆ ಮಾತ್ರ ಅಂತಸ್ಥತ್ವವಿದೆಯೇ ಹೊರತು ವಿಷ್ಣುವಿಗಲ್ಲ. ಹೀಗೆ ಮೂರು ರೀತಿಯ ಪೂರ್ವಪಕ್ಷ ಮಾಡಬಹುದು. ಈ ಮೂರನ್ನೂ ಸುಧಾದಲ್ಲಿ ತಿಳಿಸಿದ್ದಾರೆ. ಭಾಷ್ಯ ಟೀಕೆಗಳಲ್ಲಿಯೂ ಸೂಚಿಸಿದ್ದಾರೆ.

## ಸಿದ್ಧಾಂತದ ನಿರೂಪಣೆ

**तात्पर्यचन्द्रिका –**

**सिद्धान्तस्तु –**

**लिङ्गादिभ्यो बलवती श्रुतिर्यद्यपि च स्वतः ।**
**अवकाशोज्झितैर्लिङ्गैः सावकाशा तु बाध्यते ॥**

**यद्यपि "ऐन्द्र्या गार्हपत्यमुपतिष्ठते" इत्यादौ श्रुत्या लिङ्गबाधेन श्रुतेरुत्सर्गतो बलवत्त्वम् । तथाऽपि यथा "श्येनेनाभिचरन् यजेत" इत्यादौ श्येनशब्दोऽन्यत्र रूढोऽपि "यथा वै श्येनो निपत्यादत्ते" इति वाक्यशेषोक्तस्य श्येनसादृश्यस्य श्येनेऽनुपपत्त्या यागपरः, तथा समुद्रान्तस्स्थत्वादीनामन्यत्रासम्भवात् इन्द्रादि-शब्दा विष्णुपरा एव ।**

**लोके स्मृतौ श्रुतौ चैव विष्णुलिङ्गतया स्थितम् ।**
**समुद्रान्तरवस्थानपूर्वकं कथमन्यगम् ॥**

**श्रुत्यादिकं च भाष्ये उदाहृतम् । एवञ्च "आनर्थक्यप्रतिहतानां विपरीतं बलाबलम्" इति न्यायेन निरवकाशलिङ्गेन वैदिकतया सर्वथा बाधायोग्येन सावकाशश्रुतिबाधः । तदेतदभिप्रेत्योक्तं न्यायविवरणे – "श्रुतिसन्देहे अनन्यथा-सिद्धलिङ्गेन निर्णयोपपत्तेः" इति ।**

ಅನುವಾದ - ಅಂತಸ್ಥತ್ವಾಧಿಕರಣದ ಸಿದ್ಧಾಂತ ಹೀಗಿದೆ -
ಲಿಂಗಾದಿಭ್ಯೋ ಬಲವತೀ ಶ್ರುತಿರ್ಯದ್ಯಪಿ ಚ ಸ್ವತಃ ।
ಅವಕಾಶೋಜ್ಝಿತೈರ್ಲಿಂಗೈಃ ಸಾವಕಾಶಾ ತು ಬಾಧ್ಯತೇ ॥

ವಸ್ತುತಸ್ತು ಶ್ರುತಿಯು ಲಿಂಗಾದಿಗಳಿಗಿಂತ ಸ್ವಭಾವತಃ ಪ್ರಬಲವಾಗಿದೆ. ಆದರೆ ಅದೇ ಶ್ರುತಿಯ ಸಾವಕಾಶವಾಗಿದ್ದರೆ ನಿರವಕಾಶಲಿಂಗವು ಬಾಧಿತವಾಗುತ್ತದೆ. ಶ್ರುತಿಯು ಲಿಂಗಾದಿಗಳನ್ನು ಸಹಜವಾಗಿ ಬಾಧಿಸುತ್ತದೆನ್ನಲು ಉದಾಹರಣೆ ಹೀಗಿದೆ - "ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ" ಎಂಬ ಶ್ರುತಿಯು ಸ್ವಾಭಾವಿಕವಾಗಿ ಬಲಿಷ್ಠವಾಗಿದೆ. ಆದ್ದರಿಂದ ಅರ್ಥಪ್ರಕಾಶನಸಾಮರ್ಥ್ಯವೆಂಬ ಲಿಂಗವನ್ನು ಬಾಧಿಸುತ್ತದೆ. ಹೀಗೆ ಅನೇಕ ಕಡೆ ಶ್ರುತಿಯು ಲಿಂಗವನ್ನು ಬಾಧಿಸುವುದಾದರೂ ಸಹ ಕೆಲವಡೆ ಲಿಂಗವು ನಿರವಕಾಶವಾಗಿ ಶ್ರುತಿಯು ಸಾವಕಾಶವಾಗಿದ್ದಾಗ ಶ್ರುತಿಯೇ ಲಿಂಗದಿಂದ ಬಾಧಿತವಾಗುತ್ತದೆ.

ಅದು ಹೀಗೆ - ''ಶ್ಯೇನೇನಾಭಿಚರನ್ಯಜೇತ'' ಎಂಬ ಶ್ರುತಿಯಲ್ಲಿರುವ ಶ್ಯೇನಶಬ್ದವು ಬೇರೆಡೆ (ಗಿಡುಗದಲ್ಲಿ)ರೂಢವಾಗಿದೆ. ಆದರೆ ''ಯಥಾ ವೈ ಶ್ಯೇನೋ ನಿಪಾತ್ಯಾದತ್ತೇ'' ಎಂಬ ವಾಕ್ಯಶೇಷದಲ್ಲಿ ಶ್ಯೇನಸಾದೃಶ್ಯಲಿಂಗವು ಹೇಳಲ್ಪಟ್ಟಿದೆ. ಶ್ಯೇನದ ಸಾದೃಶ್ಯವನ್ನು ಹೇಳಿದ ಕಾರಣ ಶ್ಯೇನಶಬ್ದವು ಯಾಗಪರವೆಂದು ಹೇಳಬೇಕು. ಇಲ್ಲಿ ಶ್ಯೇನಸಾದೃಶ್ಯ ಎಂಬ ಲಿಂಗದಿಂದ ಶ್ಯೇನಶ್ರುತಿಯು ಬಾಧಿತವಾಗಿದೆ. ಇದರಂತೆ ಸಮುದ್ರಾಂತಸ್ಥತ್ವಲಿಂಗವೇ ಮೊದಲಾದವುಗಳು ವಿಷ್ಣುವನ್ನು ಬಿಟ್ಟು ಬೇರೆಡೆ ಬಾರದ ಕಾರಣ ನಿರವಕಾಶಗಳಾಗಿವೆ. ಇವುಗಳಿಂದ ಸಾವಕಾಶವಾದ ಇಂದ್ರಾದಿಶ್ರುತಿಗಳು ಬಾಧಿತವಾಗುತ್ತವೆ.

ಲೋಕೇ ಸ್ಮೃತೌ ಶ್ರುತೌ ಚೈವ ವಿಷ್ಣುಲಿಂಗತಯಾ ಸ್ಥಿತಮ್ ।
ಸಮುದ್ರಾಂತರವಸ್ಥಾನಪೂರ್ವಕಂ ಕಥಮನ್ಯಗಮ್ ॥ ೨ ॥

ಸಮುದ್ರಾಂತಸ್ಥತ್ವವೆಂಬುದು ವಿಷ್ಣುವಿನ ಲಿಂಗವೆಂಬುದು ಲೋಕದಲ್ಲಿ ಶ್ರುತಿಯಲ್ಲಿ ಮತ್ತು ಸ್ಮೃತಿಯಲ್ಲಿ ಪ್ರಸಿದ್ಧವಾಗಿದೆ. ಈ ಲಿಂಗವನ್ನು ಬೇರೆ ಯಾರಲ್ಲೂ ಹೇಳಲಾಗದು.

ಶ್ರುತಿಸ್ಮೃತಿಗಳನ್ನು ಭಾಷ್ಯದಲ್ಲಿ ಉದಾಹರಿಸಿದ್ದಾರೆ. ಈ ವಿಷಯವನ್ನು ಮೀಮಾಂಸಾಸೂತ್ರವೂ ಸಮ್ಮತಿಸುತ್ತದೆ. ''ಆನರ್ಥಕ್ಯಪ್ರತಿಹತಾನಾಂ ವಿಪರೀತಂ ಬಲಾಬಲಂ'' ಎಂಬ ಪೂರ್ವಮೀಮಾಂಸಾ ನ್ಯಾಯವು ಒಂದು ವೇಳೆ ಶಬ್ದಕ್ಕೆ ಯಾವುದೇ ಅರ್ಥವನ್ನು ಹೇಳಲು ಬಾರದಿದ್ದಾಗ (ನಿರವಕಾಶವಾದಾಗ) ಶ್ರುತಿಗಿಂತ ಲಿಂಗವೇ ಪ್ರಬಲವಾಗುತ್ತವೆ. (ಶ್ರುತಿಲಿಂಗಗಳ ಬಲಾಬಲವು ವ್ಯತ್ಯಾಸವಾಗುತ್ತದೆ.) ಹಾಗಾಗಿ ನಿರವಕಾಶಲಿಂಗದಿಂದ ಶ್ರುತಿಗೆ ಸಂಪೂರ್ಣ ಬಾಧವನ್ನು ಹೇಳಬಾರದು. ಸಾವಕಾಶವಾದ ಶ್ರುತಿಗಷ್ಟೇ ಬಾಧವನ್ನು ಹೇಳಬೇಕು. ಈ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ '' ಶ್ರುತಿಸಂದೇಹೇಽನನ್ಯಥಾಸಿದ್ಧಲಿಂಗೇನ ನಿರ್ಣಯೋಽಪಪತ್ತೇಃ'' ಶ್ರುತಿಯಲ್ಲಿ ಸಂದೇಹ ಬಂದಾಗ ಅನನ್ಯಥಾಸಿದ್ಧವಾದ ಲಿಂಗದಿಂದ ನಿರ್ಣಯ ಮಾಡಬೇಕು ಎಂದು.

### ಕಠಿಣಪದಾರ್ಥ

ಸ್ವತಃ = ಸ್ವಾಭಾವಿಕವಾಗಿ, ಅವಕೋಶೋಜ್ಝಿತೈಃ = ನಿರವಕಾಶವಾದ, ಐಂದ್ರ್ಯಾ = ಇಂದ್ರಪ್ರತಿಪಾದಕ ಮಂತ್ರದಿಂದ, ಉಪತಿಷ್ಠತೇ = ಸ್ತೋತ್ರ ಮಾಡಬೇಕು, ಉತ್ಸರ್ಗತಃ = ಸ್ವಾಭಾವಿಕವಾಗಿ, ಶ್ಯೇನೇನ = ಶ್ಯೇನ ಎಂಬ ಲೋಕರೂಢಿಯಲ್ಲಿ, ಆನರ್ಥ್ಯಕ್ಯಪ್ರತಿಹತಾನಾಮ್ = ನಿರವಕಾಶಲಿಂಗವು ಶ್ರುತಿಗೆ ಬಾಧಕವಾಗದಿದ್ದರೆ ಲಿಂಗಕ್ಕೆ ವೈಯ್ಯರ್ಥ್ಯ ಬರುತ್ತದೆ, ಆ ಸಂದರ್ಭದಲ್ಲಿ, ವಿಪರೀತಮ್ ಬಲಾಬಲಂ = ಶ್ರುತಿಗಿಂತ ಲಿಂಗವೇ ಪ್ರಬಲವಾಗುತ್ತದೆ, ಅನನ್ಯಥಾಸಿದ್ಧಲಿಂಗೇನ = ನಿರವಕಾಶವಾದ ಲಿಂಗದಿಂದ.

**प्रकाशः** – ''लिङ्गेन श्रुत्यादिबाधोपपत्तेः'' इत्यादिटीकोक्तं सिद्धान्तन्यायं सङ्गृह्णाति –लिङ्गादिभ्य इति ।। वाक्यप्रकरणादिकमादिपदार्थः । यद्यपि लिङ्गमेव

प्रकृतं, तथाऽपि कैमुत्यन्यायसिद्धानुवादः । चोऽवधारणे । 'स्वत एव' जात्यैवेति सम्बध्यते ।। **लिङ्गैरिति** ।। "समुद्रे अन्तः कवयो विचक्षते" "यस्याण्डकोशं शुष्ममाहुः" "ब्रह्मा तपसाऽन्वविन्दत्" इति समुद्रान्तस्स्थत्वब्रह्माण्डवीर्यत्व-ब्रह्मतपोलभ्यत्वादिलिङ्गैरित्यर्थः । 'सावकाशा' इन्द्रादिश्रुतिरित्यर्थः । पूर्वार्धं दृष्टान्तोक्त्या विशदयति – **यद्यपीति** ।। श्रुतिलिङ्गविरोधाधिकरणं प्राग्विवृतम् । 'श्रुत्या' 'ऐन्द्र्या' इति गार्हपत्यशेषत्वबोधकतृतीयाश्रुत्या, इन्द्रप्रकाशनसामर्थ्य-रूपलिङ्गबाधेनेत्यर्थः । उत्तरार्धं दृष्टान्तोक्त्या विवृणोति – **तथाऽपीति** ।।

आद्याध्याये नामपादे "तद्व्यपदेशं च" इति चतुर्थेऽधिकरणे चिन्तितम् । "श्येनेनाभिचरन्यजेत" इत्यत्र श्येनशब्दः किं गुणविधिः किं वा कर्मनामेति विशये, लोके द्रव्यविशेषपरत्वेनात्यन्तनिरूढत्वात् काम्यगुणेनोत्पत्तिशिष्टस्यापि नित्यस्य सोमस्य बाधसम्भवेन ज्योतिष्टोमेऽभिचारार्थो गुणविधिः, अथवा मत्वर्थलक्षणाऽऽश्रयणेन विशिष्टकर्मान्तरविधिः ।

नच "यथा वै श्येनो निपत्यादत्ते एवमयं द्विषन्तं भ्रातृव्यं निपत्यादत्ते" इति वाक्यशेषदर्शितक्रियासामान्येन गौण्या कर्मपरत्वम्, लक्षितलक्षणापर्यवसायिन्या गौण्या लक्षणातो जघन्यत्वादिति प्राप्ते, गुणविधौ तस्यैव स्तोतव्यत्वात्, स्वस्य स्वात्मना सादृश्यायोगेन वाक्यशेषानुपपत्तेः, गौरवेण विशिष्टविध्ययोगाच्च कर्मनामत्वमिति । एवं चेन्द्रादिषूत्सृष्टस्यापि श्रुतिप्राबल्यस्य यथा श्येनादिषु वाक्यशेषोपस्थापितानन्यथासिद्धलिङ्गबलेनापवादो न दोषाय, तथा प्रकृतेऽपीति वाक्यार्थः । ननु विषमोऽयमुपन्यासः, दृष्टान्त इवात्र लिङ्गानां निरवकाशत्वा-भावादित्यत आह – **लोक इति** ।।

क्षीराब्धिशायित्वस्य नारायणे लोकप्रसिद्धत्वादिति भावः। यथोक्तं भाष्ये – "प्रसिद्धत्वात्सूचितत्वात्" इति । साध्यभागमध्याहृत्य "न हि निरवकाशः" इत्यादिनोक्तं दोषं निरस्यन् उत्तरार्धाक्षरार्थमाह – **एवं चेति** ।।

यदि श्रुत्यादिषु पूर्वपूर्वसिद्धार्थस्वीकारः, उत्तरोत्तरं च प्रमाणमनर्थकं स्यात्, तथा च विपरीतो भवतीति बलाबलाधिकरणवार्तिकोक्तन्यायेनेत्यर्थः । निरवकाशबाध

इव तर्ह्यप्रमाणतैव स्यादित्यत आह – **वैदिकतयेति** ।। उक्तं प्रमेयं समूलमित्याह – **तदेतदिति** ।। 'सन्देहे' सावकाशत्वे इत्यर्थः । एतेन ''लिङ्गेन श्रुत्यादिबाधोपपत्तेः'' इत्यादिटीका विवृता, न्यायविवरणमूला चेत्युक्तं भवति ।

**गुरुराजीयम्** – विष्णुरेवान्तस्स्थः । समुद्रस्थत्वादिलिङ्गानां सत्त्वात् । न चेन्द्रादिश्रुत्या तद्बाध इत्याह – **लिङ्गादिभ्य इति** ।। ननु समुद्रस्थत्वादेर्वरुणादावपि सम्भवात्कथं निरवकाशत्वमित्यत आह – **लोक इत्यादिना** ।। विपरीतं बलाबलमिति न्यायेनेति ।। यदि श्रुत्यादिषु पूर्वपूर्वप्रमाणसिद्धार्थस्वीकारः तर्ह्युत्तरोत्तरं प्रमाणमनर्थकं स्यात् । तथा च विपरीतबाधो भवतीति बलाबलाधिकरणे वार्तिकोक्तन्यायेनेत्यर्थः ।। **आनर्थक्येति** ।। यदि निरवकाशमपि लिङ्गं श्रुतिबाधकं न स्यात्तदा लिङ्गस्यानर्थक्यं स्यादिति तत्र विपरीतं बलाबलम् । लिङ्गमेव श्रुत्यपेक्षया प्रबलमिति विपरीतमित्यर्थः ।

ವಿವರಣೆ - ಇಲ್ಲಿಯ ತನಕ ಅಂತಸ್ಥತ್ವಾಧಿಕರಣದ ಪೂರ್ವಪಕ್ಷವನ್ನು ತೋರಿಸಿದ್ದಾಯಿತು. ಇನ್ನು ಮುಂದೆ ಸಿದ್ಧಾಂತವನ್ನು ತೋರಿಸುತ್ತಿದ್ದಾರೆ. "ಲಿಂಗೇನ ಶ್ರುತ್ಯಾದಿಬಾಧೋಪಪತ್ತೇಃ'' ಇತ್ಯಾದಿ ಟೀಕಾವಾಕ್ಯದಲ್ಲಿ ಸಿದ್ಧಾಂತನ್ಯಾಯವನ್ನು ಹೇಳಿದ್ದಾರೆ. ಅದನ್ನೇ ಪ್ರಕೃತ ಗ್ರಂಥಕಾರರು "ಲಿಂಗಾದಿಭ್ಯಃ'' ಎಂಬ ಶ್ಲೋಕದಿಂದ ಸಂಗ್ರಹಿಸುತ್ತಿದ್ದಾರೆ.

''ಸಮುದ್ರೇಽಂತಃ ಕವಯೋ ವಿಚಕ್ಷತೇ'' ''ಯಸ್ಯಾಂಡಕೋಶಂ ಶುಷ್ಮಮಾಹುಃ'' ''ಬ್ರಹ್ಮಾ ತಪಸಾಽನ್ವವಿಂದತ್'' ಈ ಶ್ರುತಿಯಲ್ಲಿ ಸಮುದ್ರಾಂತಸ್ಥ, ಬ್ರಹ್ಮಾಂಡವೀರ್ಯತ್ವ, ಬ್ರಹ್ಮತಪೋಲಭ್ಯತ್ವ, ಮೊದಲಾದ ಲಿಂಗಗಳನ್ನು ಅಂತಸ್ಥನಲ್ಲಿ ಹೇಳಲಾಗಿದೆ. ಈ ಲಿಂಗಗಳು ನಿರವಕಾಶವಾದ್ದರಿಂದ ಬಲಿಷ್ಠವಾಗಿವೆ. ಆದರೆ ಇಂದ್ರಾದಿಗಳಲ್ಲಿ ಪ್ರಸಿದ್ಧವಾದ ಶ್ರುತಿಗಳು ಸಾವಕಾಶವಾಗಿವೆ. ಸ್ವಾಭಾವಿಕವಾಗಿ ಶ್ರುತಿಯು ಬಲಿಷ್ಠವಾಗಿದ್ದರೂ ಸಾವಕಾಶವಾದಾಗ ನಿರವಕಾಶಲಿಂಗಗಳಿಂದ ಬಾಧಿತವಾಗುತ್ತವೆ.

ಲಿಂಗಾದಿಗಳಿಗಿಂತ ಶ್ರುತಿಯು ಪ್ರಬಲವಾಗಿದೆ ಎನ್ನಲು ಅನೇಕ ಉದಾಹರಣೆಗಳಿವೆ - ಅವುಗಳಲ್ಲಿ ಒಂದನ್ನಷ್ಟೇ ವಿಚಾರ ಮಾಡುವುದಾದರೆ ''ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ'' ಎಂಬ ಶ್ರುತಿಯಿಂದ ಲಿಂಗಬಾಧವನ್ನು ಒಪ್ಪಿದ್ದಾರೆ. (ಐಂದ್ರ್ಯಾ = ಇಂದ್ರಪ್ರತಿಪಾದಕವಾದ ಮಂತ್ರದಿಂದ ಗಾರ್ಹಪತ್ಯಾಗ್ನಿಯನ್ನು ಉಪಸತ್ತಿಮಾಡಬೇಕು.) ಈ ಮಂತ್ರಕ್ಕೆ ಇಂದ್ರನನ್ನು ಪ್ರಕಾಶಿಸುವ ಸಾಮರ್ಥ್ಯವಿದೆ. ಅರ್ಥಪ್ರಕಾಶನಸಾಮರ್ಥ್ಯವೇ ಲಿಂಗ. ಆದ್ದರಿಂದ ಈ ಮಂತ್ರವು ಲಿಂಗರೂಪವಾಗಿದೆ. ಲಿಂಗಬಲದಿಂದ ಈ ಮಂತ್ರವನ್ನು ಕೇವಲ ಇಂದ್ರನನ್ನು ಸೋತ್ರ ಮಾಡುವುದಕ್ಕಾಗಿ ವಿನಿಯೋಗಿಸಬೇಕೆಂದು ತಿಳಿಯುತ್ತದೆ. ಆದರೆ ಬ್ರಾಹ್ಮಣವಾಕ್ಯವು ''ಐಂದ್ರೀ'' ಮಂತ್ರದಿಂದ ಅಗ್ನಿಯನ್ನು ಸೋತ್ರ ಮಾಡಬೇಕೆಂದು ಹೇಳುತ್ತಿದೆ. ಐಂದ್ರೀ ಲಿಂಗ ಹೇಳುವಂತೆ ಮಂತ್ರದಿಂದ ಇಂದ್ರನನ್ನು ಸ್ತೋತ್ರ ಮಾಡಬೇಕೋ? ಅಥವಾ ಬ್ರಾಹ್ಮಣವಾಕ್ಯ ಹೇಳುವಂತೆ ಅಗ್ನಿಯನ್ನು ಸ್ತೋತ್ರ ಮಾಡಬೇಕೋ? ಎಂದು ಸಂಶಯ ಬರುತ್ತದೆ.

ಗಾರ್ಹಪತ್ಯಶಬ್ದವು ಯೋಗದಿಂದ ಇಂದ್ರನನ್ನು ಪ್ರತಿಪಾದಿಸುತ್ತದೆ. ಇದರ ಬಲದಿಂದ ಐಂದ್ರೀಮಂತ್ರವು ಇಂದ್ರಪರವಾಗುತ್ತದೆಂದು ಪೂರ್ವಪಕ್ಷ. ಐಂದ್ರ್ಯಾ ಎಂಬ ಪದವು ತೃತೀಯಾವಿಭಕ್ತ್ಯಂತವಾಗಿದೆ. ದ್ವಿತೀಯಯಾಂತವಾದದ್ದು ಶೇಷಿಯೆಂದು ತೃತೀಯಾವಿಭಕ್ತ್ಯಂತವಾದದ್ದು ಶೇಷವೆಂದು ತಿಳಿಸುತ್ತದೆ. ಇದರಿಂದ ಗಾರ್ಹ್ಯಪತ್ಯನಿಗೆ ಐಂದ್ರ್ಯಮಂತ್ರವು ಶೇಷವೆಂದಂತಾಯಿತು. ಈ ತೃತೀಯಾವಿಭಕ್ತಿಯಿಂದ ಇಂದ್ರಪ್ರಕಾಶನಸಾಮರ್ಥ್ಯರೂಪವಾದ ಲಿಂಗವು ಬಾಧಿತವಾಗುತ್ತದೆಂದು ಸಿದ್ಧಾಂತ.

ಮೊದಲನೇ ಅಧ್ಯಾಯದ ನಾಮಪಾದದ "ತದ್ವ್ಯಪದೇಶಂ ಚ" ಎಂಬ ನಾಲ್ಕನೇ ಅಧಿಕರಣದಲ್ಲಿ ಹೀಗೆ ವಿಚಾರ ಮಾಡಿದ್ದಾರೆ - "ಶ್ಯೇನೇನಾಭಿಚರನ್ಯಜೇತಾ"[1] ಎಂಬಲ್ಲಿ ಶ್ಯೇನಶಬ್ದವು ಜ್ಯೋತಿಷ್ಟೋಮ ಎಂಬ ಯಾಗದಲ್ಲಿ ಶ್ಯೇನ ಎಂಬ (ಗಿಡುಗ) ಎಂಬ ದ್ರವ್ಯವನ್ನು ವಿಧಿಸುತ್ತಿದೆಯೋ? ಅಥವಾ ಹೊಸದೊಂದು ಯಾಗವನ್ನು ವಿಧಿಸುತ್ತಿದೆಯೋ? ಎಂದು ಸಂಶಯ.

ಪೂರ್ವಪಕ್ಷ - ಲೋಕದಲ್ಲಿ ಶ್ಯೇನಶಬ್ದವು ಗಿಡುಗಪಕ್ಷಿಯಲ್ಲೇ ಪ್ರಸಿದ್ಧವಾಗಿದೆ. ಲೋಕಪ್ರಸಿದ್ಧಿಗೆ ಅನುಸಾರಿಯಾಗಿ ದ್ರವ್ಯವಿಧಾಯಕವೆಂದೇ ಹೇಳಬೇಕು. ವಸ್ತುತಸ್ತು ಜ್ಯೋತಿಷ್ಟೋಮಯಾಗದಲ್ಲಿ ಸೋಮ ಎಂಬ ದ್ರವ್ಯವು ಮೊದಲೇ ಪ್ರಾಪ್ತವಾಗಿದೆ. ಪ್ರಥಮತಃ ಯಾವ ವಾಕ್ಯವು ದ್ರವ್ಯವನ್ನು ವಿಧಿಸುತ್ತದೋ ಅದು

---

(१) भाट्टसङ्ग्रहः –

**अथ पञ्चमं श्येनादिशब्दानां यागनामधेयताधिकरणम्**

**तद्व्यपदेशाच्च ॥ ५ ॥**

पूर्ववैषम्येणेह शङ्कनात्प्रत्युदाहरण**सङ्गतिः** । 'श्येनेनाभिचरन् यजेत' इत्यादौ श्रुतः श्येनादिशब्दः किं गुणपरः, उत नामधेयं इति **सन्देहः** । पूर्वत्राग्निहोत्रशब्दस्य यौगिकत्वाद्युक्तं कर्मनामत्वम् । श्येनशब्दस्य तु पक्षिविशेषे रूढत्वेन कर्मणि वर्तितुमशक्यत्वात् नामत्वपक्षे द्रव्यदेवतयोरभावेन यागस्वरूपस्यैवानवगतेश्च कस्य नामेदं श्येनपदं स्यात् । रूढस्यापि श्येनशब्दस्य गुणपरत्वे चित्रादिवाक्य इवानेकगुणविधानाभावेन वाक्यभेददोषस्याभावात् ज्योतिष्टोमे नित्यमुत्पत्तिशिष्टमपि सोमं काम्यत्वाद्बाधित्वा सोमस्य स्थाने पक्षिरूपः काम्यगुणो विधीयत इति **प्राप्ते** 'यथा वै श्येनो निपत्यादत्ते एवमयं द्विषन्तं भ्रातृव्यं निपत्यादत्ते' इति वाक्यशेषोपात्तोपमानोपमेयभावस्य पक्षिण्येकस्मिन्नयोगादुपमानभूतपक्षिणो गुणस्य निपत्यादानरूपस्योपमेये कर्मणि सत्त्वात् गौण्या वृत्त्या श्येनशब्दस्याभिचारकर्मनामत्वमिति **सिद्धान्तः** । एवं 'सन्दंशेनाभिचरन् यजेत' 'गवाऽभिचर्यमाणो यजेत' इत्यत्रापि **सन्दंशगोशब्दयो**र्यागनामत्वं ध्येयम् । 'यथा सन्दंशेन दुरादानमादत्ते' 'यथा गावो गोपायन्ति' इति वाक्यशेषाभ्यामुपमानोपमेयभावाभिधानात् । तथा च सूत्रम् ॥ **तदित्यादि** ॥ **तेन** प्रसिद्धेन श्येनादिना यस्य सादृश्यव्यपदेशस्तत्कर्मैव । न द्रव्यम् । अतस्तद्वाचिपदं कर्मनामधेयमिति । **फलन्तु** उत्पत्तिशिष्टसोमाबाधनं व्यक्तम् ॥ ५ ॥

॥ इति पञ्चमं श्येनादिशब्दानां यागनामधेयताधिकरणम् ॥

ಉತ್ಪತ್ತಿಶಿಷ್ಟ ವಾಕ್ಯವೆನಿಸುತ್ತದೆ. ಈ ವಾಕ್ಯದಿಂದ ಸೋಮದ್ರವ್ಯವು ನಿತ್ಯವಾಗಿ ಪ್ರಾಪ್ತವಾಗಿದೆ. ಪುನಃ ಅದೇ ಯಾಗದಲ್ಲಿ ಶ್ಯೇನವೆಂಬ ಮತ್ತೊಂದು ದ್ರವ್ಯವನ್ನು ವಿಧಿಸುವುದು ಅನಾವಶ್ಯಕ. ಆದರೆ ಶತ್ರುವಧವನ್ನು ಇಚ್ಛಿಸುವ ವ್ಯಕ್ತಿಯು ಶ್ಯೇನದಿಂದ ಯಾಗ ಮಾಡಬೇಕು ಎಂಬ ವಾಕ್ಯವು ಹೊರಟಿದೆ. ಇಲ್ಲಿ ಅಭಿಚಾರವೆಂಬ ಕಾಮ್ಯಗುಣದಿಂದ ಮತ್ತು ಲೋಕಪ್ರಸಿದ್ಧಿಯಿಂದಲೂ ಉತ್ಪತ್ತಿಶಿಷ್ಟವಾಕ್ಯವು ಬಾಧಿತವಾಗುತ್ತದೆ. ಆದ್ದರಿಂದ 'ಶ್ಯೇನೇನ' ಎಂಬ ವಾಕ್ಯವು ಗುಣವಿಧಾಯಕವೇ ಹೊರತು ಕರ್ಮವಿಧಾಯಕವಲ್ಲ.

ಅಥವಾ ಶ್ಯೇನಶಬ್ದಕ್ಕೆ ಮತ್ವರ್ಥದಲ್ಲಿ ಲಕ್ಷಣಾ ಮಾಡಬೇಕು. ಆವಾಗ ''ಶ್ಯೇನವತಾ ಯಾಗೇನ ಅಭಿಚಾರಮ್ ಭಾವಯೇತ್'' ಎಂದು ವಿಶಿಷ್ಟವಾದ ಕರ್ಮಾಂತರವಿಧಾಯಕವೆಂದು ಹೇಳಬಹುದು. ಇನ್ನು ''ಯಥಾ ವೈ ಶ್ಯೇನೋ ನಿಪತ್ಯಾದತ್ತೇ ಏವಮಯಂ ದ್ವಿಷಂತಂ ಭ್ರಾತೃವ್ಯಂ ನಿಪತ್ಯಾದತ್ತೇ'' ಯಾವ ರೀತಿಯಾಗಿ ಗಿಡುಗವು ಹಾರಿ ಆಹಾರವನ್ನು ತಿನ್ನುತ್ತದೋ ಅದರಂತೆ ಈ ಯಾಗವೂ ಸಹ ದ್ವೇಷಿಸುವ ಸಹೋದರನನ್ನು ಸಂಹರಿಸುತ್ತಿದೆ ಎಂದು ವಾಕ್ಯಶೇಷವಿದೆ. ಇದನ್ನು ನೋಡಿದಾಗ ಶ್ಯೇನಶಬ್ದವು ಕ್ರಿಯಾ ಸಾಮ್ಯವನ್ನಷ್ಟೇ ಯಾಗದಲ್ಲಿ ಹೇಳುತ್ತದೆ. ಆವಾಗ ಗೌಣವೃತ್ತಿಯಿಂದ ಕರ್ಮಪರತ್ವವನ್ನು ಹೇಳಿದಂತಾಗುತ್ತದೆ. ಹೀಗೆ ಕರ್ಮಪರತ್ವವನ್ನೇ ಹೇಳಲ್ಪಡುವಾಗ ಗುಣಪರವೆಂದು ಏಕೆ ಹೇಳಬೇಕು? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಇಷ್ಟು ಉತ್ತರ - ಶ್ಯೇನಶಬ್ದಕ್ಕೆ ಕರ್ಮದಲ್ಲಿ ಗೌಣೀವೃತ್ತಿಯನ್ನು ಹೇಳುವುದಕ್ಕಿಂತ ಮತ್ವರ್ಥದಲ್ಲಿ ಲಕ್ಷಣಾವನ್ನು ಆಶ್ರಯಿಸಿ ವಿಶಿಷ್ಟವಾದ ಕರ್ಮಾಂತರದ ವಿಧಾಯಕವೆನ್ನುವುದೇ ಒಳ್ಳೆಯದು. ಏಕೆಂದರೆ ಗೌಣೀವೃತ್ತಿಯು ಲಕ್ಷಿತಲಕ್ಷಣಾದಲ್ಲಿ ಪರ್ಯವಸಾನವಾಗುತ್ತದೆ. ಆದ್ದರಿಂದ ಕೇವಲ ಲಕ್ಷಣಾಕ್ಕಿಂತ ಗೌಣಿವೃತ್ತಿಯು ನೀಚವೆಂದಂತಾಯಿತು. ಹಾಗಾಗಿ ವಿಶಿಷ್ಟಕರ್ಮಾಂತರವಿಧಾಯಕವೆನ್ನುವುದೇ ಹೆಚ್ಚು ಸ್ವರಸ.

ಸಿದ್ಧಾಂತ - ಶ್ಯೇನಶಬ್ದವು ಕರ್ಮದ ಹೆಸರೆಂದೇ ಹೇಳಬೇಕು. ಗುಣವಿಧಿಯೆಂಬ ಪಕ್ಷದಲ್ಲಿ ಶ್ಯೇನಯಾಗವನ್ನು ಸ್ತೋತ್ರ ಮಾಡಬೇಕು. ಆವಾಗ ವಾಕ್ಯಶೇಷದಿಂದ ಸ್ತೋತ್ರ ಮಾಡುವುದು ಅನುಪಪನ್ನವಾಗುತ್ತದೆ. ಏಕೆಂದರೆ ಶ್ಯೇನಯಾಗಕ್ಕೆ ತನ್ನಿಂದಲೇ ಸಾದೃಶ್ಯವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ವಾಕ್ಯಶೇಷವನ್ನು ಹೊಂದಿಸುವುದು ಕಷ್ಟವಾಗುತ್ತದೆ. ಶ್ಯೇನಶಬ್ದಕ್ಕೆ ಯಾಗವೆಂಬ ಅರ್ಥವನ್ನು ಹೇಳಿದಾಗ ಗಿಡಗವು ಹಾರಿ ಆಹಾರವನ್ನು ಸ್ವೀಕರಿಸುವಂತೆ ಶ್ಯೇನಯಾಗವು ಶತ್ರುಗಳನ್ನು ಸಂಹಾರ ಮಾಡುತ್ತದೆಂದು ಸುಲಭವಾಗಿ ಹೇಳಬಹುದು. ಮತ್ತು ಎರಡನೆಯ ಪೂರ್ವಪಕ್ಷವೂ ಸರಿಯಲ್ಲ. ಕೇವಲ ಕರ್ಮವಿಧಿಯೆಂದೇ ಹೇಳಲು ಬರುವಾಗ ಗುಣವಿಶಿಷ್ಟವಾದ ಕರ್ಮವಿಧಿಯೆಂಬುದು ಗೌರವವಾಗಿದೆ. ಆದ್ದರಿಂದ ಕೇವಲ ಕರ್ಮದ ಹೆಸರೆಂದೇ ಹೇಳಬೇಕು.

ಅದರಂತೆ ಪ್ರಕೃತದಲ್ಲಿಯೂ ತಿಳಿಯಬೇಕು - 'ಶ್ಯೇನೇನ' ಎಂಬ ವಾಕ್ಯದಲ್ಲಿ ವಾಕ್ಯಶೇಷದಿಂದ ತಿಳಿಯುವ ಶ್ಯೇನಸಾದೃಶ್ಯತ್ವವೆಂಬ ಲಿಂಗವು ಸಿದ್ಧವಾಗಿದೆ. ಇದರ ಬಲದಿಂದ ಶ್ಯೇನಶ್ರುತಿಯು ಬೇರಡೆ ಪ್ರಸಿದ್ಧವಾಗಿದ್ದರೂ ಬಾಧಿತವಾಗುತ್ತಿದೆ. ಹೀಗೆ ಲಿಂಗದಿಂದ ಶ್ರುತಿಬಾಧವಿರುವುದು ಕೆಲವೆಡೆ ಕಂಡಿದೆ. ಅದರಂತೆ ಪ್ರಕೃತದಲ್ಲಿಯೂ ಸಮುದ್ರಾಂತಸ್ಸತ್ವಲಿಂಗಗಳಿಂದ ಇಂದ್ರಾದಿಶ್ರುತಿಗಳು ಬಾಧಿತವಾಗಬಹುದು.

ನೀವು ನೀಡಿದ ದೃಷ್ಟಾಂತವು ವಿಷಮವಾಗಿದೆ. ದೃಷ್ಟಾಂತದಲ್ಲಿ ಹೇಳಿದ ಲಿಂಗವು ನಿರವಕಾಶವಾಗಿದೆ. ಆದರೆ ವಿಷ್ಣುವಿನಲ್ಲಿ ಇರುವ ಲಿಂಗಗಳು ನಿರವಕಾಶವಾಗಿಲ್ಲ ಎಂಬ ಪ್ರಶ್ನೆಗೆ 'ಲೋಕೇ' ಇತ್ಯಾದಿ ಶ್ಲೋಕದಿಂದ

ಉತ್ತರಿಸುತ್ತಿದ್ದಾರೆ. ಕ್ಷೀರಾಬ್ಧಿಶಾಯಿತ್ವಲಿಂಗವು ಲೋಕದಲ್ಲಿ ವಿಷ್ಣುವಿನಲ್ಲಷ್ಟೇ ಪ್ರಸಿದ್ಧವಾಗಿದೆ. ಇದನ್ನೇ ಭಾಷ್ಯದಲ್ಲಿ ''ಪ್ರಸಿದ್ಧತ್ವಾತ್ ಸೂಚಿತತ್ವಾತ್'' ಎಂದಿದ್ದಾರೆ. ಸಾಧ್ಯದ ಭಾಗವನ್ನು ಅಧ್ಯಾಹಾರ ಮಾಡಿ ''ಇತ್ಯಾದಿಯಾಗಿ ಹೇಳಿದ ದೋಷವನ್ನು ನಿರಾಸ ಮಾಡುತ್ತಾ ಉತ್ತರಭಾಗದ ಅರ್ಥವನ್ನು ಸ್ಪಷ್ಟಪಡಿಸುತ್ತಿದ್ದಾರೆ ''ಏವಂ ಚ'' ಇತ್ಯಾದಿ ವಾಕ್ಯದಿಂದ.

ಒಂದುವೇಳೆ ಶ್ರುತ್ಯಾದಿಗಳಲ್ಲಿ ಮೊದಲೇ ಸಿದ್ಧವಾದ ಅರ್ಥವನ್ನು ಸ್ವೀಕರಿಸಿದರೆ ಮುಂದಿನ ಅರ್ಥಗಳೆಲ್ಲವೂ ವ್ಯರ್ಥವಾಗಬೇಕಾದೀತು. ಹೀಗೆ ಆನರ್ಥ್ಯಕ್ಯಪ್ರತಿಬದ್ಧವಾದಾಗ ವಿಪರೀತವಾಗಿ ಶ್ರುತಿಗಿಂತ ಲಿಂಗವೇ ಪ್ರಬಲವಾಗುತ್ತದೆ. ನಿರವಕಾಶದಿಂದ ಬಾಧ ಹೇಳಿದರೆ ಸಂಪೂರ್ಣವಾಗಿ ಅಪ್ರಮಾಣವೇ ಆಗಲಿ ಎಂಬ ಪ್ರಶ್ನೆಗೆ ವೈದಿಕವಾದ ಅರ್ಥಕ್ಕೆ ಸರ್ವಥಾ ಬಾಧ ಹೇಳಬಾರದೆಂದು ''ವೈದಿಕತಯಾ'' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಈ ಎಲ್ಲ ಪ್ರಮೇಯವು ಆಚಾರ್ಯರಿಗೆ ಸಮ್ಮತವಾಗಿದೆ ಎಂದು ''ತದೇತತ್'' ಎಂಬ ವಾಕ್ಯದಿಂದ ನ್ಯಾಯವಿವರಣವನ್ನು ಉಲ್ಲೇಖಿಸುತ್ತಿದ್ದಾರೆ. ಹೀಗೆ ಹೇಳಿದ್ದರಿಂದ ''ಲಿಂಗೇನ ಶ್ರುತ್ಯಾದಿಬಾಧೋಪಪತ್ತೇಃ'' ಇತ್ಯಾದಿ ಟೀಕೆಯನ್ನು ವಿವರಿಸಿದಂತಾಯಿತು. ಮತ್ತು ಈ ಟೀಕೆಯು ನ್ಯಾಯವಿವರಣವನ್ನು ವ್ಯಾಖ್ಯಾನಿಸುತ್ತಿದೆ ಎಂದಂತಾಯಿತು




ಸಿದ್ಧಾಂತವು ಹೀಗಿದೆ -

ವಾಸ್ತವಿಕವಾಗಿ ಶ್ರುತಿಯು ಲಿಂಗಾದಿಗಳಿಗಿಂತಲೂ ಸ್ವತಃ ಪ್ರಬಲವಾಗಿದೆ. ಆದರೂ ಲಿಂಗವು ನಿರವಕಾಶವಾದಾಗ ಅದೇ ಪ್ರಬಲವಾಗುತ್ತದೆ ಎನ್ನುವುದು ಪೂರ್ವಮೀಮಾಂಸಾಗ್ರಂಥದಲ್ಲಿ ನಿಶ್ಚಿತವಾಗಿದೆ. ಆದ್ದರಿಂದಲೇ ''ಆನರ್ಥಕ್ಯಪ್ರತಿಹತಾನಾಂ ವಿಪರೀತಂ ಬಲಾಬಲಮ್'' ಎಂದು ಬಲಾಬಲವ್ಯವಸ್ಥೆಯನ್ನೇ ವ್ಯತ್ಯಾಸ ಮಾಡಿಕೊಳ್ಳಬೇಕೆಂದು ನಿರ್ದೇಶಿಸಿದ್ದಾರೆ. ಹಾಗಾಗಿ ಶ್ರುತಿಸ್ಮೃತಿಗಳು ಹಾಗೂ ಲೋಕರೂಢಿ ಇವುಗಳಿಂದ ಪರಾಮರ್ಶಿಸಿ ನೋಡಿದಾಗ 'ಸಮುದ್ರಾಂತಸ್ಥತ್ವ' ಮೊದಲಾದ ಲಿಂಗಗಳನ್ನು ಬೇರೆ ದೇವತೆಗಳಲ್ಲಿ ಕೂಡಿಸಲು ಬರುವುದಿಲ್ಲವಾದ್ದರಿಂದ ವಿಷ್ಣುವಿನದ್ದೇ ಲಿಂಗವೆಂದು ಸಿದ್ಧವಾಗುತ್ತದೆ. ಆದ್ದರಿಂದ ನಿರವಕಾಶ ವಿಷ್ಣುಲಿಂಗಗಳಿಂದಾಗಿ ಅಂತಸ್ಥನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.



## 'ಅಂತಸ್ಥ' ಶಬ್ದದ ಪರ್ಯಾಯ ಎಂದೆನಿಸುವ 'ಇಂದ್ರಾದಿ' ಶಬ್ದಗಳು ನಾರಾಯಣನನ್ನು ಹೇಗೆ ಪ್ರತಿಪಾದಿಸುತ್ತವೆ ಎಂಬ ಸಿದ್ಧಾಂತ ನಿರೂಪಣೆ

## तात्पर्यचन्द्रिका

**किञ्च – ''इन्द्रं मित्रं वरुणमग्निमाहुः'' इत्यादिश्रुत्या इन्द्रादिशब्दानां विष्णावेव विद्वद्रूढेस्सत्त्वेन इन्द्रादिशब्दप्रवृत्तिनिमित्तस्य परमैश्वर्यादेः विष्णावेव अनन्या-**

धीनत्वनिरवधिकत्वाभ्यां मुख्यतः सम्भवेन महायोगस्यापि सत्त्वेन च इन्द्रादिश्रुतिर्विष्णावेव मुख्या ।

नच ''इन्द्रं मित्रम्'' इत्यादिवाक्यमिन्द्राद्यभेदपरम्, 'आहुः' इति तत्तच्छब्द-वाच्यत्वस्यैवोक्तेः । ''सप्तार्धगर्भा भुवनस्य रेतो विष्णोस्तिष्ठन्ति प्रदिशा विधर्मणि'' इति वाक्यशेषे भेदोक्तेश्च । ''यो देवानां नामधाः'' इति श्रुत्यन्तरसंवादाच्च । ''सोऽन्तकस्स रुद्रः स प्राणभृत् स प्राणनायकः स ईशो यो हरिः'' इति श्रुत्यन्तरे अभेदविवक्षायां ''स रुद्रः'' इत्यनेन ''स ईशः'' इत्यस्य पौनरुक्त्यापत्त्या तच्छब्दवाच्यताया एव विवक्षणीयत्वाच्च ।

''स प्रथमस्सङ्कृतिर्विश्वकर्मा स प्रथमो मित्रो वरुणो अग्निः । स प्रथमो बृहस्पतिः'' इति श्रुत्यन्तरे प्रथमपदेन भेदप्रतीतेश्च । ''यमिन्द्रमाहुर्वरुणं यमाहुर्यं मित्रमाहुर्यमु सत्यमाहुः'' इति श्रुत्यन्तरे ''यो देवानां देवतमस्तस्मै त्वा तेभ्यस्त्वा'' भेदोक्तेश्च ।

''भीषाऽस्माद्वातः पवते'' इति ''भयादस्याग्निस्तपति'' इति च श्रुत्यन्तरे भेदोक्तेश्च ।

'न तु नारायणादीनां नाम्नामन्यत्र सम्भवः ।
अन्यनाम्नां गतिर्विष्णुरेक एव प्रकीर्तितः ।' इति स्मृतेश्च ।।

ಅನುವಾದ - ಮತ್ತು ''ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ'' ಇತ್ಯಾದಿ ಶ್ರುತಿಯಂತೆ ಇಂದ್ರಾದಿಶಬ್ದಗಳು ಕೇವಲ ವಿಷ್ಣುವಿನಲ್ಲಿ ವಿದ್ವದ್‌ರೂಢಿಯಿಂದ ಪ್ರಸಿದ್ಧವಾಗಿವೆ. ಅಷ್ಟೇ ಅಲ್ಲದೇ ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತಗಳೆನಿಸಿದ ಪರಮೈಶ್ವರ್ಯಾದಿಗಳು ವಿಷ್ಣುವಿನಲ್ಲಿ ಸ್ವತಂತ್ರವಾಗಿವೆ. ಮತ್ತು ನಿರವಧಿಕವಾಗಿವೆ. ಆದ್ದರಿಂದ ಮಹಾಯೋಗದಿಂದಲೂ ಸಹ ಇಂದ್ರಾದಿಶಬ್ದಗಳು ಮುಖ್ಯವಾಗಿ ವಿಷ್ಣುವನ್ನೇ ಪ್ರತಿಪಾದಿಸುತ್ತವೆ.

''ಇಂದ್ರಂ ಮಿತ್ರಂ'' ಎಂಬ ಶ್ರುತಿಯಂತೆ ಇಂದ್ರ, ವಿಷ್ಣು ಮೊದಲಾದವರಿಗೆ ಅಭೇದವು ತಿಳಿಯುತ್ತಿದೆಯಲ್ಲ? ಎಂದು ಪ್ರಶ್ನಿಸಬಹುದು. ಆದೇ ಶ್ರುತಿಯಲ್ಲಿ ''ಆಹುಃ'' ಎಂಬ ಪದದಿಂದ ಶಬ್ದಗಳಿಂದ ಭಗವಂತನು ವಾಚ್ಯನಾಗುತ್ತಾನೆಂದು ಹೇಳಿದ್ದಾರೆ.

ಅಷ್ಟೇ ಅಲ್ಲದೆ "ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ" ಎಂಬ ವಾಕ್ಯಶೇಷದಲ್ಲಿ ಇಂದ್ರಾದಿಗಳಿಗೂ ಮತ್ತು ವಿಷ್ಣುವಿಗೂ ಸ್ಪಷ್ಟವಾಗಿ ಭೇದವನ್ನು ಹೇಳಲಾಗಿದೆ. ಮತ್ತು "ಯೋ ದೇವಾನಾಂ ನಾಮಧಾ" ಸಕಲದೇವತೆಗಳ ಹೆಸರನ್ನು ಭಗವಂತನೆ ಧರಿಸಿದ್ದಾನೆಂಬ ಮತ್ತೊಂದು ಶ್ರುತಿಯ ಸಂವಾದವು ಇದೆ. ಮತ್ತು "ಸೋಽಂತಕಃ ಸ ರುದ್ರಃ ಸ ಪ್ರಾಣಭೃತ್ಸಃ ಪ್ರಾಣನಾಯಕಃ ಸ ಈಶೋ ಯೋ ಹರಿಃ" ಎಂಬ ಮತ್ತೊಂದು ಶ್ರುತಿಯಲ್ಲಿ ರುದ್ರ, ವಿಷ್ಣು ಮೊದಲಾದವರಿಗೆ ಅಭೇದವನ್ನು ವಿವಕ್ಷಿಸಿದರೆ ರುದ್ರ ಎಂಬ ಪದದಿಂದಲೇ ವಿಷ್ಣು ಎಂದು ಹೇಳಿದಂತಾಯಿತು. ಪುನಃ 'ಈಶಃ' ಎಂಬ ಪದದಿಂದ ಅವನನ್ನೇ ಹೇಳಿದಾಗ ಪುನರುಕ್ತಿದೋಷವು ಬರುತ್ತದೆ. ಇದು ಪರಿಹಾರವಾಗಬೇಕೆಂದರೆ ರುದ್ರ ವಿಷ್ಣು ಮೊದಲಾದವರಿಗೆ ಐಕ್ಯವನ್ನು ಅಂಗೀಕರಿಸದೆ ರುದ್ರಾದಿಪದಗಳಿಂದೆಲ್ಲಾ ಭಗವಂತನೊಬ್ಬನೇ ಪ್ರತಿಪಾದ್ಯನಾಗುತ್ತಾನೆಂದು ಹೇಳಬೇಕು. ಮತ್ತು "ಸ ಪ್ರಥಮಃ ಸಂಕೃತಿರ್ವಿಶ್ವಕರ್ಮಾ ಸ ಪ್ರಥಮೋ ಮಿತ್ರೋ ವರುಣೋ ಅಗ್ನಿಃ । ಸ ಪ್ರಥಮೋ ಬೃಹಸ್ಪತಿಃ" ಈ ಶ್ರುತಿಯಲ್ಲಿ ಎಲ್ಲ ದೇವತೆಗಳಿಗಿಂತ ಭಗವಂತನು ಪ್ರಥಮನಾಗಿದ್ದಾನೆಂದು ಹೇಳಲಾಗಿದೆ. ಇದರಿಂದಲೂ ಭೇದವು ಸ್ಪಷ್ಟವಾಗುತ್ತದೆ.

ಮತ್ತು "ಯಮಿಂದ್ರಮಾಹುರ್ವರುಣಂ ಯಮಾಹುರ್ಯಂ ಮಿತ್ರಮಾಹುರ್ಯಮು ಸತ್ಯಮಾಹುಃ" ಎಂಬ ಶ್ರುತಿಯಲ್ಲಿ 'ಆಹುಃ' ಎಂಬ ಪದದಿಂದ ಭೇದವನ್ನು ಹೇಳಿದ್ದಾರೆ "ಯೋ ದೇವಾನಾಂ ದೇವತಮಸ್ತಸ್ಮೈ ತ್ವಾ ತೇಭ್ಯಸ್ತ್ವಾ" ಎಂಬ ಶ್ರುತಿಯಲ್ಲಿಯೂ ಸಹ ಸಕಲದೇವತೆಗಳಿಗೂ ಭಗವಂತನು ದೇವತೆಯಾಗಿದ್ದಾನೆ ಎಂದು ಹೇಳಿದ್ದರಿಂದ ಭೇದವು ತಿಳಿಯುತ್ತದೆ. "ಭೀಷಾಸ್ಮಾದ್ವಾತಃಪವತೇ" ಮತ್ತು ಭಯಾದಸ್ಯಾಗ್ನಿಸ್ತಪತಿ" ಎಂಬ ಶ್ರುತಿಯಲ್ಲಿ ಸಕಲದೇವತೆಗಳು ಭಗವಂತನಿಗೆ ಹೆದರುತ್ತಾರೆಂದು ಹೇಳಿದ್ದರಿಂದ ಭೇದವು ಸ್ಪಷ್ಟವಾಗುತ್ತದೆ. ಮತ್ತು

"ನತು ನಾರಾಣಾದೀನಾಂ ನಾಮ್ನಾಮನ್ಯತ್ರ ಸಂಭವಃ"

"ಅನ್ಯನಾಮ್ನಾಂ ಗತಿರ್ವಿಷ್ಣುರೇಕ ಏವ ಪ್ರಕೀರ್ತಿತಃ"

ಭಗವಂತನಲ್ಲಿ ಪ್ರಸಿದ್ಧವಾದ ನಾರಾಯಣ ಮೊದಲಾದ ನಾಮಗಳು ಬೇರೆ ಯಾರಲ್ಲಿಯೂ ಬರುವುದಿಲ್ಲ. ಆದರೆ ಬೇರೆಯವರಲ್ಲಿ ಪ್ರಸಿದ್ಧವಾದ ರುದ್ರ ಮೊದಲಾದ ನಾಮಗಳಿಂದ ವಿಷ್ಣು ಒಬ್ಬನೇ ಪ್ರತಿಪಾದ್ಯನಾಗುತ್ತಾನೆ. ಈ ಸ್ಮೃತಿವಾಕ್ಯದಿಂದಲೂ ಸಕಲ ದೇವತೆಗಳಿಂದ ಭಗವಂತನು ಭಿನ್ನನಾಗಿದ್ದಾನೆಂದು ನಿಖರವಾಗಿ ತಿಳಿಯುತ್ತದೆ.

**प्रकाशः** – अत्र श्येनयागदृष्टान्तकथनेन तत्रेवात्रापि इन्द्रादिश्रुतेः विष्णावमुख्यत्वं प्रतीतम् । तन्निवारयितुमाह – **किञ्चेति** ।। यद्वा लिङ्गेन श्रुतिबाध उक्तः । सोऽपि नात्यन्तम् । यथोत्सर्गस्य सर्वविषयकत्वभ्रान्तौ सत्यामपवादेन भ्रान्तिनिरास-पूर्वकमुत्सर्गविषयः स्वतः सिद्ध एवापवादविषयभिन्नो ज्ञाप्यते, तद्वद्विष्णौ

मुख्यत्वमन्यत्र मुख्यत्वभ्रान्तिनिरासेन ज्ञाप्यत इति भावेन श्रुतेर्हरावेव मुख्यवृत्तिरित्याह – **किञ्चेति** ।।

वस्तुतस्तु – ननु यथा लिङ्गानां निरवकाशत्वं, तथेन्द्रादिश्रुतीनामित्यतो भगवत्येव महायोगविद्वद्रूढ्योर्भावेन तत्रैव मुख्यत्वेन हरौ निरवकाशत्वमित्यतो भगवत्येव महायोगविद्वद्रूढ्योर्भावेन तत्रैव मुख्यत्वमिति भावेन,

इन्द्रं मित्रं यमिन्द्रं च प्रथमः सङ्कतिस्तथा ।
नामधाः सर्वदेवानामेक इत्यादिका श्रुतिः ।

इति चतुर्थपादीयानुव्याख्यां हृदि कृत्वा ''न चेन्द्रादिषु'' इत्यादिटीकां विवरीतुमाह –**किञ्चेति** ।

इन्द्रं मित्रं वरुणमग्निमाहुरथो दिव्यः स सुपर्णो गरुत्मान् ।
एकं सद्विप्रा बहुधा वदन्त्यग्निं यमं मातरिश्वानमाहुः ।।

इति श्रुत्येत्यर्थः ।। **विष्णावेवेति** ।। वामनसूक्तत्वेन प्रसिद्धेरस्य सूक्तस्य ''सप्तार्धगर्भा'' इति पूर्ववाक्ये प्रस्तुतस्य विष्णोरेवान्वयाच्चेति भावः। **विद्वदिति** ।। 'आहुः प्राज्ञाः' इति विदुषां प्रयोगबाहुल्यरूपरूढेः प्रतीयमानत्वादिति भावः । अज्ञरूढ्यपेक्षया प्राज्ञरूढेः प्राबल्यस्य जन्माधिकरणोक्तदिशा यववराहाद्यधिकरणसिद्धत्वादिति ध्येयम् ।।

**अनन्याधीनत्वेति** ।। अन्यगतं प्रति स्वातन्त्र्येणेत्युपलक्ष्यते । न ते विष्णो जायमानो न जातो देव महिम्नः परमन्तमाप। इत्यादिश्रुत्यादिसिद्धत्वादिति भावः । नात्र श्रुतौ रूढिरुच्यते, किन्त्वभेद इत्यत आह – **न चेति** ।। भुवनस्य 'रेतः' रतिप्रदस्य, विष्णोः 'प्रदिशा' आज्ञया, 'आर्द्धगर्भाः' आसमन्तादृद्धं ब्रह्माण्डं तद्गर्भाणि 'सप्त' महाभूतमहदहङ्काररतत्त्वानि तदभिमानिनः, 'विधर्मणि' विविधधारणकर्मणि, तिष्ठन्तीति विष्णुना भेदोक्तेरित्यर्थः ।

।। **य इति** ।। ''अजस्य नाभावध्येकमर्पितं'' इत्युक्तपद्मनाभो विष्णुरेव । विश्वकर्मसूक्ते, यो देवानां 'नामधाः' नामवाच्यतया तद्धारकः एक एवेति समाख्याबलाच्चेन्द्रादिशब्दवाच्यतैवार्थ इत्यर्थः ।। **सोऽन्तक इति** ।। द्युभ्वाद्यधिकरणे

भाष्यकृदुदाहृतश्रुत्यन्तर इत्यर्थः । ''स प्रथमो बृहस्पतिश्चिकित्वान् । तस्मा इन्द्राय सुतमा जुहोमि'' इति याजुषश्रुतौ ''स प्रथमो विश्वकर्मा'' इत्याद्युक्त्या अप्रथमोऽपि कश्चन विश्वकर्मादिः प्राप्तः, अन्यथा 'प्रथमः' इत्यस्य व्यर्थत्वात् । तथा च कथमभेद इत्यर्थः ।

यमिन्द्रमाहुर्वरुणं यमाहुर्यं मित्रमाहुर्यमु सत्यमाहुः।
यो देवानां देवतमस्तपोजास्तस्मै त्वा तेभ्यस्त्वा ।।

इति याजुषश्रुतावेवं यमिन्द्रादिशब्दवाच्यमाहुः । किं तैरभेदेन, नेत्याह – **यो देवानामिति** ।। इन्द्रादीनां श्रेष्ठतमस्तन्नियामकस्तत्स्वामी तस्मै देवतमाय तेभ्यो देवेभ्यश्च त्वा सोमं सुनोमीत्याद्युक्तेः । तत्राभेदविवक्षायां 'देवतमः' इति 'तस्मै तेभ्यः' इति च भेदोक्तिरयुक्तेत्यर्थः ।

उक्तं चैतरेयभाष्ये – ''यमिन्द्रमाहुः'' इत्याद्युक्त्वा – ''तस्मै त्वा तेभ्यस्त्वा'' इति भेदावगमाच्च'' इति । तथा चाथर्वणभाष्योक्ता ब्रह्माण्डस्मृतिः –

यमिन्द्रमाहुर्वरुणं यमाहुर्यम्मित्रमाहुर्यमु सत्यमाहुः ।
यो देवानां देवतमो जनित्रं वायोस्तस्मै सोममेभ्यो जुहोमि ।।

इति ।। **भीषाऽस्माद्वातः पवते इति** ।। 'अस्मात्' अस्य परमात्मनः, 'भीषा' भयेन, वायुसूर्याग्न्यादयः स्वस्वव्यापारान् कुर्वन्तीति तैत्तिरीयश्रुतावानन्दमयादिशब्दार्थत्वेन प्रकृतस्य विष्णोर्वाय्वादिभिर्भेदोक्तेः ।

भयादस्याग्निस्तपति भयात्तपति सूर्यः ।

इत्यादिकाठकश्रुतौ ''कम्पनात्'' इत्यत्र विष्ण्वर्थत्वेन निर्णेष्यमाणवज्रशब्देन प्रकृतस्य परमात्मनो देवानां च भेदोक्तेश्चेत्यर्थः । तथा च ''इन्द्रं मित्रं'' इत्यादिश्रुतिजातं तच्छब्दवाच्यत्वमेव विष्णोराह, न त्वभेदमिति स्थितम् ।

ननु यथा इन्द्रादिशब्दवाच्यत्वं विष्णोस्तथा नारायणादिशब्दवाच्यत्वमप्यस्य स्यात् । तथा चानिर्णय इत्यत आह – **न त्विति** ।। वामनस्मृतेरित्यर्थः । एतेन 'इन्द्रमित्यादिना तेषां भगवति विद्वद्रूढिसद्भावस्य सिद्धत्वात्' इति सुधावाक्यं समर्थितं भवति ।

ಪರಿಪೂರ್ಣಚಂದ್ರಿಕಾ

नन्वेवमिन्दादिश्रुतीनां विष्णावेव महायोगविद्वद्रूढिभ्यां मुख्यत्वे 'मुख्यामुख्ययोर्मुख्ये सम्प्रत्ययः' इति न्यायेन इन्द्रादिश्रुतिभिर्मुख्यार्थस्य विष्णोरेव ग्रहणसिद्धौ सूत्रे निरवकाशलिङ्गोक्तिर्व्यर्थेति चेत्सत्यम्, 'सति चैवमभ्युपगमवादेनैव तद्धर्मोपदेशादित्युक्तम्'' इति न्यायविवरणटीकायामेवोक्त्याऽभ्युपगमवादेन वा, 'मुख्ये संप्रत्ययः' इत्युत्सर्गस्य ''इन्द्रस्यात्मा'' इत्यादाविव अपवादकं नास्ति, प्रत्युत तत्साधकमेवास्तीति वक्तुं वा तदुक्तिरिति भावः ।

एतच्च महायोगविद्वद्रूढिसमर्थनं समन्वयसूत्रात् 'तत्तु' इत्यनुवृत्तेः तत्र तु शब्दस्यावधारणार्थत्वात् अन्तस्स्थो विष्णुरेवेत्युक्त्याऽन्यत्राज्ञरूढ्यल्पयोगयोः सत्वेन तद्व्यवच्छेदायोगान्महायोगविद्वद्रूढ्योरेवान्यत्र व्यवच्छेद्यत्वादिन्द्रादिश्रुतीनां विष्णौ महायोगविद्वद्रूढ्योः सूचितत्वाच्चेति ध्येयम् ।

**गुरुराजीयम्** – ननु समुद्रान्तस्स्थितत्वादेर्निरवकाशत्वेपि न विष्णोरन्तस्स्थत्वं युज्यते । इन्द्रादिप्रापकेन्द्रादिश्रुतीनां त्रेधा प्राबल्यवत्त्वेन ततोपि बलवत्त्वेनेन्द्रादेरेवान्तस्स्थत्वौचित्यात् । किञ्चेन्द्रादिशब्दानां विष्णुपरत्वं हि योगेन वक्तव्यम् । तत्रेन्द्रादिषु रूढेः सत्वाद्रूढेश्च योगापेक्षया बलवत्त्वाद्रूढ्येन्द्रादिपरत्वेन तेषामेवान्तस्स्थत्वादित्यत आह – **किञ्चेति** ।।

नन्विन्द्रादिशब्दानां विष्णौ विद्वद्रूढिसद्भावे किं मानमित्यत उक्तम् – **इन्द्रमिति** ।। न चात्र रूढिः केनोक्तेति वाच्यम् । प्रयोगबाहुल्यकथनपरस्याप्याहुरित्यस्यैव रूढिप्रदर्शकत्वात् । तथा च महायोगविद्वद्रूढिभ्यामिन्द्रादिश्रुतयो विष्णावेव मुख्या इति तस्यैवान्तस्स्थत्वमिति भावः ।

नन्विन्द्रमिति वाक्यस्येन्द्रादीनां विष्णुभेदपरत्वान्न तेन तच्छब्दवाच्यत्वसिद्धिरित्याशङ्क्य निषेधति ।। **न चेति** ।। **आहुरितीति** ।। वचनक्रियां प्रति शब्दस्यैव कर्मत्वादिति भावः । आहुरित्येतदिंद्राद्यभेद आर्यसंमतिप्रदर्शनपरं किं न स्यादित्यत आह – **सप्तार्धेति** ।। तत्र सकलाधारत्वस्योक्तत्वादिति भावः ।

श्रुत्यन्तरसंवादेनाप्याहुरित्यस्य तच्छब्दवाच्यत्वप्रदर्शनपरत्वमित्याह – **य इति** ।। तत्तन्नामवाच्यत्व उपोद्बलकं श्रुत्यन्तरं चाह – **सोऽन्तक इति** ।।

**प्रथमेति ।। तथा च द्वितीयोऽन्यो रुद्रोऽस्तीति प्रतीयत इति भावः । यमिन्द्रमित्यादि तस्मैत्वेत्यादि । अत्र ये त्वामिन्द्रमाहुः एवं वरुणमित्यादि । यश्च देवानां देवतमस्तस्मै तेभ्यश्च मयि महदिंद्रियमस्त्विति योजना ।**

**यद्वा यमिन्द्रमित्याहुस्तस्मै तुभ्यं त्वामेवोपगता इति भगवदधीनत्वमुच्यते । षष्ठीचतुर्थीभ्यां परमात्मनः सकाशात्तेषां भयकथनेन भेदस्य प्रतीतेरिति भावः ।**

ವಿವರಣೆ - ಹಿಂದೆ ಗ್ರಂಥಕಾರರು ಶ್ಯೇನಯಾಗದ ದೃಷ್ಟಾಂತವನ್ನು ಹೇಳಿದರು. ಅಲ್ಲಿ ಶ್ಯೇನಶಬ್ದವು ಅಮುಖ್ಯವಾಗಿ ಯಾಗವನ್ನು ಹೇಳುತ್ತದೆ. ಹಾಗಾದರೆ ಅದರಂತೆ ಇಂದ್ರಾದಿಶಬ್ದಗಳೂ ಸಹ ವಿಷ್ಣುವಿನಲ್ಲಿ ಅಮುಖ್ಯವಾಗಿ ಬರುತ್ತದೆಂಬ ಪ್ರತೀತಿ ಬರುತ್ತದೆ. ಅದನ್ನು ಪರಿಹರಿಸುವುದಕ್ಕಾಗಿ ''ಕಿಂಚ'' ಇತ್ಯಾದಿ ಗ್ರಂಥವು ಹೊರಟಿದೆ.

ಅಥವಾ ಲಿಂಗಶ್ರುತಿಯು ಬಾಧಿತವಾಗುತ್ತದೆಂದು ಹಿಂದೆ ಹೇಳಿದರು. ಬಾಧವೆಂದ ಕೂಡಲೇ ಅತ್ಯಂತ ಬಾಧವೆಂದೇ (ಅಮುಖ್ಯವಾಗಿ ಭಗವಂತನಲ್ಲಿ ಬರುತ್ತದೆಂಬ) ಪ್ರತೀತಿ ಬರುತ್ತದೆ. ಆದರೆ ಭಗವಂತನ ವಿಷಯದಲ್ಲಿ ಅತ್ಯಂತ ಬಾಧವನ್ನು ಹೇಳಬಾರದು. ಯಾವರೀತಿಯಾಗಿ ''ನ ಹಿಂಸ್ಯಾತ್ ಸರ್ವಾ ಭೂತಾನಿ'' ಎಂಬ ವಾಕ್ಯವನ್ನು ನೋಡಿದಾಗ ಯಾವ ಹಿಂಸೆಯನ್ನು ಮಾಡಬಾರದೆಂದು ತಿಳಿಯುತ್ತದೆ. ಆವಾಗ ''ಅಗ್ನಿಷೋಮೀಯಂ ಪಶುಮಾಲಭೇತ'' ಎಂಬ ಶ್ರುತಿಯು ಯಾಗೀಯಹಿಂಸೆಯನ್ನು ಮಾಡಬಹುದೆಂದು ಅಪವಾದವಾಗಿ ಹೇಳುತ್ತದೆ. ಆದ್ದರಿಂದ ಉತ್ಸರ್ಗವಾಕ್ಯವೆನಿಸಿದ ''ನ ಹಿಂಸ್ಯಾತ್'' ಎಂಬ ವಾಕ್ಯಕ್ಕೆ ಅಪವಾದ ವಿಷಯವೆನಿಸಿದ ಯಾಗೀಯ ಹಿಂಸೆಯನ್ನು ಬಿಟ್ಟು ಉಳಿದ ಹಿಂಸೆಯನ್ನಷ್ಟೇ ಮಾಡಬಾರದೆಂದು ತಿಳಿಯುತ್ತದೆ. ಅದರಂತೆ ಇಂದ್ರಾದಿಶಬ್ದಗಳು ವಿಷ್ಣುವಿನಲ್ಲಿ ಮುಖ್ಯವಾಗಿವೆ ಎಂದು ಹೇಳಿದ್ದರಿಂದ ಇಂದ್ರಾದಿಗಳಲ್ಲಿಯೂ ಮುಖ್ಯವಾಗಿವೆ ಎಂಬ ಭ್ರಾಂತಿಯನ್ನು ನಿರಾಸ ಮಾಡಿದಂತಾಗುತ್ತದೆ. ಲಿಂಗದಿಂದ ಶ್ರುತಿಬಾಧವೆಂದರೆ ಇಂದ್ರಾದಿಗಳಲ್ಲಿ ಮುಖ್ಯವೃತ್ತಿಯನ್ನು ಹೇಳಲಾಗದೆಂದಷ್ಟೇ ಅರ್ಥ. ಭಗವಂತನಲ್ಲೇ ಮುಖ್ಯವೃತ್ತಿಯನ್ನು ಹೇಳಬೇಕೆಂದು ''ಕಿಂಚ'' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

''ಕಿಂಚ'' ಎಂಬ ವಾಕ್ಯಕ್ಕೆ ಎರಡು ಬಗೆಯಲ್ಲಿ ಅವತಾರಿಕೆಯನ್ನು ಹೇಳಿ ಮೂರನೇ ಬಗೆಯ ಅವತಾರಿಕೆಯನ್ನು ಹೇಳುತ್ತಿದ್ದಾರೆ. ವಿಷ್ಣುವಿಷಯಕವಾದ ಲಿಂಗಗಳನ್ನು ನಿರವಕಾಶವೆಂದು ಹೇಗೆ ಹೇಳುತ್ತೀರೋ, ಅದರಂತೆ ಇಂದ್ರಾದಿಶ್ರುತಿಗಳೂ ಸಹ ಇಂದ್ರಾದಿಗಳಲ್ಲಿ ಯೋಗ ಮತ್ತು ರೂಢಿಗಳಿಂದ ಬಲಿಷ್ಠವಾಗಿವೆ. ಆದ್ದರಿಂದ ವಿಷ್ಣುವಿಷಯಕವಾದ ಲಿಂಗವು ಬಲಿಷ್ಠವಾದಂತೆ ಇಂದ್ರಾದಿಶ್ರುತಿಗಳೂ ಸಹ ಬಲಿಷ್ಠವಾಗಿವೆ. ಇಂದ್ರಾದಿಶಬ್ದಗಳಿಂದ ಇಂದ್ರಾದಿಗಳೇ ಮುಖ್ಯವಾಗಿ ಪ್ರತಿಪಾದ್ಯರಾಗುತ್ತಾರೆ. ಇಂದ್ರಾದಿ ಶಬ್ದಗಳು ಹರಿಯಲ್ಲಿ ಅವಕಾಶವನ್ನು ಹೊಂದಿಲ್ಲವಲ್ಲ? ಎಂಬ ಪ್ರಶ್ನೆಗೆ ಮಹಾಯೋಗ ಮತ್ತು ವಿದ್ವದ್ ರೂಢಿಗಳು ಭಗವಂತನಲ್ಲಷ್ಟೇ ಇರುವುದರಿಂದ ಭಗವಂತನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗುತ್ತಾನೆ. ಇದನ್ನೇ ಆಚಾರ್ಯರು ನಾಲ್ಕನೇ ಪಾದದ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

''ಇಂದ್ರಂ ಮಿತ್ರಂ ಯಮಿಂದ್ರಂ ಚ ಪ್ರಥಮಸ್ಸಂಕೃತಿಸ್ತಥಾ ।
ನಾಮಧಾಃ ಸರ್ವದೇವಾನಾಮೇಕ ಇತ್ಯಾದಿಕಾ ಶ್ರುತಿಃ।

ಈ ಶ್ಲೋಕದಲ್ಲಿ ಉದಾಹರಿಸಿದ ಅನೇಕ ಶ್ರುತಿಗಳ ಬಲದಿಂದ ಭಗವಂತನೇ ಸಕಲ ದೇವತೆಗಳ ಹೆಸರುಗಳಿಂದ ವಾಚ್ಯನಾಗಿದ್ದಾನೆಂದು ತಿಳಿಯುತ್ತದೆ. ಈ ಅನುವ್ಯಾಖ್ಯಾನಶ್ಲೋಕವನ್ನು ಮತ್ತು 'ನಚೇಂದ್ರಾದಿ' ಇತ್ಯಾದಿ ಟೀಕೆಯನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ.

''ಇಂದ್ರಂ ಮಿತ್ರಂ ವರುಣಂ'' ಎಂಬ ಸಂಪೂರ್ಣ ಶ್ರುತಿಯು ಹೀಗಿದೆ - ''ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಸ್ಸ ಸುಪರ್ಣೋ ಗರುತ್ಮಾನ್ । ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ'' ಎಂದು. ಗ್ರಂಥಕಾರರು 'ವಿಷ್ಣಾವೇವ' ಎಂದಿದ್ದಾರೆ. ವಾಮನಸೂಕ್ತವೆಂದು ಪ್ರಸಿದ್ಧವಾದ ಇದರಲ್ಲಿ 'ಸಪ್ತಾರ್ಧಗರ್ಭ' ಎಂಬ ಪೂರ್ವವಾಕ್ಯದಲ್ಲಿ ವಿಷ್ಣುವು ಪ್ರಸಕ್ತನಾಗಿದ್ದಾನೆ. ಇಲ್ಲಿ ಪ್ರಸಕ್ತನಾದ ವಿಷ್ಣುವೇ ಮುಂದಿನ ವಾಮನಸೂಕ್ತದಲ್ಲಿಯೂ ಪ್ರಸಕ್ತನಾಗುತ್ತಾನೆ. ಮತ್ತು ವಾಮನಸೂಕ್ತವು ಸ್ವತಃ ವಿಷ್ಣುಪರವೇ ಆಗಿದೆ.

'ಇಂದ್ರಮಾಹುಃ' ಎಂಬಲ್ಲಿರುವ 'ಆಹುಃ' ಎಂಬ ಶಬ್ದದಿಂದ ವಿದ್ವಾಂಸರ ಪ್ರಯೋಗಬಾಹುಲ್ಯರೂಪವಾದ ರೂಢಿಯನ್ನು ವಿವಕ್ಷಿಸಬೇಕು. ಅಜ್ಞರೂಢಿಗಿಂತಲೂ ಪ್ರಾಜ್ಞರೂಢಿಯು ಪ್ರಬಲವಾಗಿದೆ ಎಂದು ಜನ್ಮಾದ್ಯಧಿಕರಣದಲ್ಲಿ ಹೇಳಿದ್ದಾರೆ. ''ನ ತೇ ವಿಷ್ಣೋ'' ಎಂಬ ಶ್ರುತಿಯಲ್ಲಿ ರೂಢಿಯನ್ನು ಹೇಳದೆ ಅಭೇದವನ್ನು ಹೇಳಿದ್ದಾರಲ್ಲ? ಎಂಬ ಪ್ರಶ್ನೆಗೆ ''ನ ಚ ಇಂದ್ರಮ್'' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

'ಸಪ್ತಾರ್ಧಗರ್ಭ' ಎಂಬ ಶ್ರುತಿಯ ಅರ್ಥ ಹೀಗಿದೆ - ಭುವನಸ್ಯ = ಭೂಮಿಗೆ ರೇತಃ = ಸಂತೋಷವನ್ನು ಕೊಡುವ ವಿಷ್ಣೋಃ = ವಿಷ್ಣುವಿನ ಪ್ರದಿಶಾ = ಆಜ್ಞೆಯಿಂದ ಅರ್ಧಗರ್ಭಾಃ = ಬ್ರಹ್ಮಾಂಡದ ಗರ್ಭದಲ್ಲಿರುವ ಏಳು ಮಹಾಭೂತಗಳು ಮತ್ತು ಮಹತ್ತತ್ವ ಅಹಂಕಾರತತ್ವ ಮತ್ತು ತದಭಿಮಾನಿ ದೇವತೆಗಳು ವಿಧರ್ಮಣಿ = ಅನೇಕವಿಧವಾದ ಧಾರಣಾದಿಕರ್ಮಗಳಲ್ಲಿ, ತಿಷ್ಠಂತಿ = ತೊಡಗುತ್ತಾರೆ. ಈ ಶ್ರುತಿಯಿಂದ ವಿಷ್ಣುವಿಗೂ ಮತ್ತು ದೇವತೆಗಳಿಗೂ ಭೇದವು ಸ್ಪಷ್ಟವಾಗಿ ತಿಳಿಯುತ್ತದೆ.

''ಯೋ ದೇವಾನಾಂ ನಾಮಧಾ'' ಎಂಬ ಶ್ರುತಿಗೆ ಹೀಗೆ ಅರ್ಥ - 'ಅಜಸ್ಯ ನಾಭೌ ಮಧ್ಯೇಕ' ಎಂಬ ಶ್ರುತಿ ಹೇಳಿದ ಪದ್ಮನಾಭನಾದ ವಿಷ್ಣುವೇ ವಿಶ್ವಕರ್ಮಸೂಕ್ತವಾದ 'ಯೋ ದೇವಾನಾಂ' ಎಂಬ ಶ್ರುತಿಯಿಂದಲೂ ಪ್ರತಿಪಾದ್ಯನಾಗಿದ್ದಾನೆ. ಯಃ = ಯಾವ ವಿಷ್ಣುವು, ದೇವಾನಾಂ = ದೇವತೆಗಳ, ನಾಮಧಾಃ = ಹೆಸರುಗಳಿಂದ ಪ್ರತಿಪಾದ್ಯನಾಗಿ ಹೆಸರನ್ನು ಧಾರಣೆ ಮಾಡಿದ, ಏಕ ಏವ = ಏಕೈಕ ವ್ಯಕ್ತಿಯಾಗಿದ್ದಾನೆ. ಈ ಸಮಾಖ್ಯಾಬಲದಿಂದ ಇಂದ್ರಾದಿಶಬ್ದಗಳಿಂದ ಭಗವಂತನೇ ವಾಚ್ಯನಾಗುತ್ತಾನೆಂದು ತಿಳಿಯುತ್ತದೆ. ದ್ಯುಭ್ವಾದ್ಯಧಿಕರಣದ ಭಾಷ್ಯದಲ್ಲಿ ಉದಾಹರಿಸಿದ ಮತ್ತೊಂದು ಶ್ರುತಿಯನ್ನು ''ಸೋಽಂತಕಃ'' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ''ಸ ಪ್ರಥಮೋ ಬೃಹಸ್ಪತಿಶ್ಚಿಕಿತ್ವಾನ್ ತಸ್ಮಾ ಇಂದ್ರಾಯ ಸುತಮಾಜುಹೋಮಿ'' ಎಂಬ ಯಜುರ್ವೇದದ ಶ್ರುತಿಯಲ್ಲಿ ವಿಷ್ಣುವನ್ನು ಮೊದಲಿಗನಾದ ವಿಶ್ವಕರ್ಮನೆಂದು ಹೇಳಲಾಗಿದೆ. ಇದರಿಂದ ಎರಡನೆಯವನಾದ ಮತ್ತೊಬ್ಬ ವಿಶ್ವಕರ್ಮ ಇದ್ದಾನೆಂದು ತಿಳಿಯುತ್ತದೆ. ಇಲ್ಲದಿದ್ದರೆ ಪ್ರಥಮ ಎಂಬ ಪದವು ವ್ಯರ್ಥವಾಗಬೇಕಾದೀತು. ಇದರಿಂದ ಭೇದವೇ ತಿಳಿಯುತ್ತದೆ ಹೊರತು ಅಭೇದವಲ್ಲ.

*ಅಂತಸ್ಥತ್ವಾಧಿಕರಣ*

''ಯಮಿಂದ್ರಮಾಹುರ್ವರುಣಂ ಯಮಾಹುರ್ಯಂ ಮಿತ್ರಮಾಹುರ್ಯಮು ಸತ್ಯಮಾಹುಃ । ಯೋ ದೇವಾನಾಂ ದೇವತಮಸ್ತಪೋಜಾಸ್ತಸ್ಮೈ ತ್ವಾ ತೇಭ್ಯಸ್ತ್ವಾ'' ಎಂಬ ಯಾಜುಷಶ್ರುತಿಯಲ್ಲಿ ಇಂದ್ರಾದಿ ಶಬ್ದವಾಚಿತ್ವವನ್ನು ಹೇಳಿದ್ದಾರೆ. ಹಾಗಾದರೆ ಇಂದ್ರಾದಿಗಳಿಂದ ವಿಷ್ಣುವಿಗೆ ಅಭೇದವಿದೆಯೇ? ಎಂಬ ಪ್ರಶ್ನೆಗೆ 'ಯೋ ದೇವಾನಾಂ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ಇಂದ್ರಾದಿಗಳಿಗಿಂತ ಶ್ರೇಷ್ಠನಾಗಿದ್ದಾನೆ ಎಂದು ಇಂದ್ರಾದಿಗಳಿಗೆ ನಿಯಾಮಕನಾಗಿದ್ದಾನೆಂದು ಮತ್ತು ಸ್ವಾಮಿಯಾಗಿದ್ದಾನೆ ಎಂದು ಶ್ರುತಿಯು ಹೇಳುತ್ತಿದೆ. ಮತ್ತು ''ತೇಭ್ಯಃ ದೇವೇಭ್ಯಶ್ಚ'' ಇತ್ಯಾದಿ ಶ್ರುತಿಯು ಹೇಳಿದೆ. ಒಂದುವೇಳೆ ಅಭೇದವು ವಿವಕ್ಷಿತವಾಗಿದ್ದಲ್ಲಿ 'ದೇವತಮ', ತಸ್ಮೈ, ತೇಭ್ಯಃ, ಇತ್ಯಾದಿ ಪದಗಳು ಭೇದವನ್ನು ಹೇಳಿದ್ದು ಅಯುಕ್ತವಾದೀತು. ಇದನ್ನೇ ಐತರೇಯ ಭಾಷ್ಯದಲ್ಲಿ ''ಯಮಿಂದ್ರಮಾಹುರಿತ್ಯಾದ್ಯುಕ್ತ್ವಾ ತಸ್ಮೈ ತ್ವಾ ತೇಭ್ಯಸ್ತ್ವೇತಿ ಭೇದಾವಗಮಾಚ್ಚ'' (ಯಮೀಂದ್ರಮಾಹು ಇತ್ಯಾದಿಯಾಗಿ ಹೇಳಿ ಮುಂದೆ ತಸ್ಮೈ ತ್ವಾ ತೇಭ್ಯಸ್ತ್ವಾ ಎಂದು ಹೇಳಿದ್ದರಿಂದ ಭೇದವು ತಿಳಿಯುತ್ತದೆ) ಆದ್ದರಿಂದ ಅಥರ್ವಣಭಾಷ್ಯದಲ್ಲಿ ಹೇಳಿದ್ದ ಬ್ರಹ್ಮಾಂಡಸ್ಮೃತಿಯು ಭೇದಪರವೇ ಆಗಿದೆ. ಬ್ರಹ್ಮಾಂಡ ಸ್ಮೃತಿಯು ಹೀಗಿದೆ -

ಯಮಿಂದ್ರಮಾಹುರ್ವರುಣಂ ಯಮಾಹುರ್ಯಂ ಮಿತ್ರಮಾಹುರ್ಯಮು ಸತ್ಯಮಾಹುಃ ।
ಯೋ ದೇವಾನಾಂ ದೇವತಮೋ ಜನಿತ್ರಂ ವಾಯೋಽಸಸ್ಮೈ ಸೋಮಮೇಭ್ಯೋ ಜುಹೋಮಿ ॥

'ಭೀಷಾಸ್ಮಾತ್' ಎಂಬ ಶ್ರುತಿಗೆ ಹೀಗೆ ಅರ್ಥ - ತಸ್ಮಾತ್. ಈ ಪರಮಾತ್ಮನ ಭೀಷಾ = ಹೆದರಿಕೆಯಿಂದ ವಾತಃ ಪವತೇ = ವಾಯುವು ಬೀಸುತ್ತಾನೆ, ಭೀಷಾ = ಈ ಪರಮಾತ್ಮನ ಹೆದರಿಕೆಯಿಂದ, ಸೂರ್ಯ = ಸೂರ್ಯನು, ಉದೇತಿ = ಉದಯಿಸುತ್ತಾನೆ, ಭಯಾದ್ = ಈ ಪರಮಾತ್ಮನ ಭಯದಿಂದ, ಇಂದ್ರಶ್ಚಾಗ್ನಿಶ್ಚ = ಇಂದ್ರ ಅಗ್ನಿ ಮೊದಲಾದವರು ತಮ್ಮ ತಮ್ಮ ವ್ಯಾಪಾರದಲ್ಲಿ ತೊಡಗುತ್ತಾರೆ. ಈ ಶ್ರುತಿಯು ಆನಂದಮಯಶಬ್ದದ ಅರ್ಥವನ್ನು ವಿವರಿಸುವಾಗ ತೈತ್ತರೀಯದಲ್ಲಿ ಪ್ರಸಕ್ತವಾಗಿದೆ. ಆದ್ದರಿಂದ ಈ ಶ್ರುತಿಪ್ರತಿಪಾದ್ಯನು ವಿಷ್ಣುವೇ ಆಗಬೇಕು. ಸಕಲದೇವತೆಗಳು ಹೆದರುವುದರಿಂದ ಭೇದವು ಸಿದ್ಧವಾಗುತ್ತದೆ.

ಮತ್ತು ''ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ'' ಇತ್ಯಾದಿಯಾಗಿ ಕಾಠಕ ಶ್ರುತಿಯಲ್ಲಿ ಇದೇ ವಿಷಯವೇ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಕಂಪನಾಧಿಕರಣದಲ್ಲಿಯೂ ಸಹ ವಜ್ರಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥಿಸಿ ಅಂತಹ ವಿಷ್ಣುವಿನಿಂದ ಸಕಲದೇವತೆಗಳಿಗೆ ಭೇದವನ್ನು ಹೇಳಿದ್ದಾರೆ. ಆದ್ದರಿಂದ ಇಂದ್ರಂ ಮಿತ್ರಂ ಇತ್ಯಾದಿ ಸಕಲಶ್ರುತಿಗಳು ಇಂದ್ರಾದಿಸಕಲಶಬ್ದಗಳಿಂದ ಭಗವಂತನು ವಾಚ್ಯನಾಗುತ್ತಾನೆಂದು ಹೇಳುತ್ತಿವೆ. ಹೊರತು ಅಭೇದವನ್ನು ಹೇಳುತ್ತಿಲ್ಲವೆಂದು ಅನೇಕ ಪ್ರಮಾಣಗಳಿಂದ ನಿರ್ಣಯವಾಯಿತು.

ಇಂದ್ರಾದಿಶಬ್ದಗಳಿಂದ ವಿಷ್ಣು ಪ್ರತಿಪಾದ್ಯನಾದಂತೆ ನಾರಾಯಣಾದಿಶಬ್ದಗಳಿಂದ ಇಂದ್ರಾದಿಗಳೇಕೆ ಪ್ರತಿಪಾದ್ಯರಾಗಬಾರದು? ಎಂಬ ಪ್ರಶ್ನೆಗೆ 'ನತು' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಈ ವಾಕ್ಯದಿಂದ ''ಇಂದ್ರಮಿತ್ಯಾದಿನಾ ತೇಷಾಂ ಭಗವತಿ ವಿದ್ವದ್ರೂಢಿಸದ್ಭಾವಸ್ಯ ಸಿದ್ಧತ್ವಾತ್'' (ಇಂದ್ರಂ ಇತ್ಯಾದಿ ಶ್ರುತಿಗಳಿಂದ ಭಗವಂತನಲ್ಲಿ ವಿದ್ವದ್ರೂಢಿಯನ್ನು ಸಮರ್ಥಿಸಿದಂತಾಯಿತು.) ಎಂಬ ಸುಧಾವಾಕ್ಯವನ್ನು ಸಮರ್ಥಿಸಿದಂತಾಯಿತು.

ಪರಿಪೂರ್ಣಚಂದ್ರಿಕಾ

ಶಂಕೆ - ಸೂತ್ರಕಾರರು ಸಮುದ್ರಾಂತಸ್ಥತ್ವವೇ ಮೊದಲಾದ ಲಿಂಗಗಳನ್ನು ಏಕೆ ಹೇಳಿದ್ದಾರೆ? ಇಂದ್ರಾದಿಶಬ್ದಗಳು ವಿಷ್ಣುವಿನಲ್ಲಷ್ಟೇ ಮಹಾಯೋಗ ಮತ್ತು ವಿದ್ವದ್ರೂಢಿಗಳಿಂದ ಮುಖ್ಯವಾಗಿವೆ ಎಂದು ಹೇಳಿದಿರಿ. ''ಮುಖ್ಯಾಮುಖ್ಯಯೋಃ ಮುಖ್ಯೇ ಸಂಪ್ರತ್ಯಯಃ'' ಎಂಬ ನ್ಯಾಯದಂತೆ ಇಂದ್ರಾದಿಶ್ರುತಿಗಳಿಂದ ಮುಖ್ಯವಾಗಿ ವಿಷ್ಣುವನ್ನೇ ಸ್ವೀಕರಿಸಲು ಬರುವಾಗ ಪುನಃ ನಿರವಕಾಶವಾದ ಲಿಂಗಗಳನ್ನು ಹೇಳಿದ್ದು ವ್ಯರ್ಥವಲ್ಲವೆ?

ಸಮಾಧಾನ - ನ್ಯಾಯವಿವರಣದ ಟೀಕೆಯಲ್ಲಿ ಅಭ್ಯುಪಗಮವಾದದಿಂದ 'ತದ್ಧರ್ಮೋಪದೇಶಾತ್ ಎಂದಿದ್ದಾರೆ. ಅದರಂತೆ ಇಲ್ಲಿಯೂ ಸಹ ಲಿಂಗಗಳನ್ನು ಅಭ್ಯುಪಗಮಾತ್ ಎಂದು ಹೇಳಿದ್ದಾರೆಂದು ತಿಳಿಯಬೇಕು. ''ಮುಖ್ಯಾಮುಖ್ಯಯೋರ್ಮುಖ್ಯೇ ಸಂಪ್ರತ್ಯಯಃ'' ಎಂಬ ನ್ಯಾಯವು ಸಾಪವಾದವಾಗಿದೆ.

ಅಥವಾ ಯಾವರೀತಿಯಾಗಿ 'ಇಂದ್ರಸ್ಯಾತ್ಮಾ' ಎಂಬ ಶ್ರುತಿಯಲ್ಲಿ ಅಪವಾದವಿರುವ ಕಾರಣ ಇಂದ್ರಪದಕ್ಕೆ ಪುರಂದರನೆಂದು ಅರ್ಥೈಸುವಂತೆ ಪ್ರಕೃತದಲ್ಲಿ ಅಂತಹ ಅಪವಾದವು ಕಾಣಿಸುತ್ತಿಲ್ಲ. ಇಲ್ಲಿ ಮಹಾಯೋಗ ವಿದ್ವದ್ರೂಢಿಯನ್ನು ಸಮರ್ಥಿಸಿದ್ದು ''ತತ್ತು ಸಮನ್ವಯಾತ್'' ಎಂಬಲ್ಲಿರುವ ತತ್ತು ಎಂಬ ಪದವು ಅನುವೃತ್ತವಾದ್ದರಿಂದ ಸೂತ್ರದಲ್ಲಿರುವ ''ತತ್ತು'' ಎಂಬುದು ಅವಧಾರಣ ಅರ್ಥದಲ್ಲಿದೆ. ಇದರಿಂದ ಅಂತಸ್ಥನಾದವನು ವಿಷ್ಣುವೇ ಎಂದು ತಿಳಿಯುತ್ತದೆ. ಬೇರೆಡೆ ಇರುವ ಅಜ್ಞರೂಢಿ ಮತ್ತು ಅಲ್ಪಯೋಗಗಳನ್ನು ಈ ಏವಕಾರದಿಂದ ವ್ಯವಚ್ಛೇದ ಮಾಡಲು ಸಾಧ್ಯವಿಲ್ಲ. ಹೊರತಾಗಿ ವಿದ್ವದ್‌ರೂಢಿಗಳನ್ನಷ್ಟೇ ವ್ಯವಚ್ಛೇದ ಮಾಡಿದಂತಾಗುತ್ತದೆ. ಬೇರೆ ಕಡೆ ಮಹಾಯೋಗ ವಿದ್ವದ್‌ರೂಢಿಗಳನ್ನು ವ್ಯವಚ್ಛೇದ ಮಾಡಿದಾಗ ಇಂದ್ರಾದಿಶ್ರುತಿಗಳಿಗೆ ವಿಷ್ಣುವಿನಲ್ಲಿ ಸಹಜವಾಗಿ ಮಹಾಯೋಗ ಮತ್ತು ವಿದ್ವದ್‌ರೂಢಿಗಳನ್ನು ಹೇಳಿದಂತಾಗುತ್ತದೆ. ಈ ವಿಷಯವು 'ತತ್ತು' ಎಂಬುದರ ಅನುವೃತ್ತಿಯಿಂದಷ್ಟೇ ತಿಳಿಯುತ್ತದೆ.



## ಸಾರ

ಅಲ್ಲದೆ ''ಇಂದ್ರಂ ಮಿತ್ರಮಗ್ನಿಮಾಹುಃ'' ಎನ್ನುವ ಶ್ರುತಿಯಿರುವುದರಿಂದ ಇಂದ್ರಾದಿಶಬ್ದಗಳಿಗೆ ವಿಷ್ಣುವಿನಲ್ಲೇ ವಿದ್ವದ್‌ರೂಢಿಯಿದೆ. ಮತ್ತು ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತಗಳೂ ಸ್ವತಂತ್ರವಾಗಿ, ಪೂರ್ಣವಾಗಿ ವಿಷ್ಣುವಿನಲ್ಲೇ ಇರುವುದರಿಂದ ಮಹಾಯೋಗವೂ ಅವನಲ್ಲೇ ಇದೆ. ಹೀಗಾಗಿ ಇಂದ್ರಾದಿಶ್ರುತಿಗಳು ಮುಖ್ಯವಾಗಿ ವಿಷ್ಣುವನ್ನೇ ಹೇಳುತ್ತವೆ. ಆದ್ದರಿಂದ ಇಂದ್ರ ಮುಂತಾದ ಶ್ರುತಿಗಳಿರುವುದರಿಂದ ಅಂತಸ್ಥನು ಬೇರೆಯವನು ಎನ್ನಲು ಬರುವುದಿಲ್ಲ.

'ಇಂದ್ರಂ ಮಿತ್ರಂ' ಇತ್ಯಾದಿ ಶ್ರುತಿಯು ಹಿಂದೆ ಹೇಳಿದಂತೆ ಇಂದ್ರಾದಿಗಳೊಂದಿಗೆ ವಿಷ್ಣುವಿಗೆ ಐಕ್ಯವನ್ನು ಹೇಳುತ್ತದೆ ಹೊರತು ವಿಷ್ಣುವಿಗೆ ರೂಢಿಯನ್ನಲ್ಲ ಎನ್ನುವಂತಿಲ್ಲ. ಶ್ರುತಿಯಲ್ಲಿ 'ಆಹುಃ' ಎನ್ನುವುದರಿಂದ ಆ ಆ ಶಬ್ದವಾಚ್ಯತ್ವವನ್ನೇ ಹೇಳಿದ್ದಾರೆ. 'ಯೋ ದೇವಾನಾಂ' ಎನ್ನುವ ಶ್ರುತಿ ಮತ್ತು ಸ್ಮೃತಿ ಸಂವಾದವೂ ಇದೆ. ಅಲ್ಲದೆ ಅನೇಕ ಶ್ರುತಿಗಳಲ್ಲಿ ಇಂದ್ರಾದಿದೇವತೆಗಳಿಗೆ ವಿಷ್ಣುವಿನಿಂದ ಭೇದವನ್ನೇ ಹೇಳಿದ್ದಾರೆ. ಹಾಗಾಗಿ ಅಂತಸ್ಥನು ವಿಷ್ಣುವೇ ಆಗಿದ್ದಾನೆ.



## ಸೂರ್ಯವರುಣಾದಿ ಲಿಂಗಗಳ ಮೇಲಿರುವ ಪೂರ್ವಪಕ್ಷವೂ ಅಯುಕ್ತ ಎಂಬುದರ ನಿರೂಪಣೆ

### तात्पर्यचन्द्रिका

यदि च श्रुतिलिङ्गयोरनुग्रहायाभेदः, तर्हि ''आकाशादेव समुत्पद्यन्ते'' इति आकाश-श्रुतेः कारणत्वादिरूपलिङ्गस्य च अनुग्रहाय आकाशब्रह्मणोः, तथा – ''कदाचन स्तरीरसि नेन्द्र'' इति मन्त्रस्थस्य इन्द्रप्रकाशनसामर्थ्यरूपलिङ्गस्य ''ऐन्द्र्या गार्हपत्यमुपतिष्ठते'' इति द्वितीयाश्रुतेश्च अविरोधाय ''इन्द्रगार्हपत्ययोः, तथा व्रीहियवशास्त्रयोः षोडशिग्रहणाग्रहण-शास्त्रयोश्च अविरोधाय व्रीहियवयोर्ग्रहणा-ग्रहणयोश्च विरुद्धांशत्यागेनैक्यं च स्यादिति बहुविप्लवापत्तिः ।

''स ब्रह्म'' इत्यादिश्रुतिरपि तत्तच्छब्दप्रवृत्तिनिमित्तोक्तिमुखेन तत्तच्छब्द-समन्वयपरा, न तु प्रसिद्धदेवाभेदपरा । अन्यथा ''सोऽक्षरः'' इत्युक्ते ब्रह्म प्रसिद्धाकाराद्यक्षरात्मकं स्यात् । ''अहं भवः'' इत्यादिस्मृतिरपि,

पुरुष एवेदं सर्वं भूतं भव्यं भवच्च यत् ।
इत्युच्यते तदीयत्वात् न तु सर्वस्वरूपतः ।।

इत्यादिस्मृतिवशात् तदीयत्वपरा वा,

यस्तान् द्वेष्टि स मां द्वेष्टि यस्ताननु स मामनु ।
ऐकात्म्यमागतं विद्धि पाण्डवैर्धर्मसंश्रयैः ।

इत्यादिवदत्यन्तप्रियत्वाभिप्राया वा द्रष्टव्या । इन्द्रादीनां ब्रह्मणोऽन्यत्वं स्वीकृत्य वाक्यस्येन्द्रादिपरत्वाङ्गीकारे तु अर्थैकत्वाभावाद्वाक्यभेदस्स्यात् । एवञ्च –

अग्नीन्द्रादिश्रुतिर्नानामार्गा लिङ्गैर्हि वैष्णवैः ।
नीतैककण्ठ्यं नो चेत्तत् कलहं को निवारयेत् ।।

इन्द्राग्न्यादिशब्दानां ब्रह्मणि परममुख्यत्वेऽपि यत्र बाधकं तत्र तत्तद्देवतापरत्वं

**युक्तमेव । पादान्त्यप्राणाधिकरणन्यायेन च सूर्यवरुणादिलिङ्गमपि तत्तदन्तर्गत-भगवत्येव मुख्यमिति त्रिविधः पूर्वपक्षोऽप्ययुक्तः ।**

ಅನುವಾದ - ಇಂದ್ರನಲ್ಲಿ ಪ್ರಸಿದ್ಧವಾದ ಶ್ರುತಿ ಹಾಗು ವಿಷ್ಣುವಿನಲ್ಲಿ ಪ್ರಸಿದ್ಧವಾದ ಲಿಂಗ ಇವೆರಡನ್ನು ಸಾಧಿಸಲು ಅಭೇದವನ್ನು ಹೇಳುವುದಾದರೆ ಆವಾಗ ಅನೇಕ ಅನುಪಪತ್ತಿಗಳು ಬರುತ್ತವೆ. ''ಆಕಾಶಾದೇವ ಸಮುತ್ಪದ್ಯಂತೇ'' ಎಂಬ ಶ್ರುತಿಯು ಆಕಾಶವನ್ನು ಹೇಳುತ್ತಿದೆ. ಜಗತ್ ಕಾರಣತ್ವಲಿಂಗವು ಬ್ರಹ್ಮನನ್ನು ಹೇಳುತ್ತಿದೆ. ಇವೆರಡಕ್ಕೆ ವಿರೋಧ ಬರಬಾರದೆಂದು ಆಕಾಶ ಹಾಗು ಬ್ರಹ್ಮರಿಗೆ ಅಭೇದವನ್ನು ಒಪ್ಪಬೇಕಾದೀತು. ಅದರಂತೆ ಪೂರ್ವಮೀಮಾಂಸೆಯಲ್ಲಿ ಉದಾಹರಿಸುವ ''ಕದಾಚನ ಸ್ತರೀರಸಿ ನೇಂದ್ರ'' ಎಂಬ ಮಂತ್ರದಲ್ಲಿ ಇಂದ್ರಪ್ರಕಾಶನಸಾಮರ್ಥ್ಯಲಿಂಗವು ಇಂದ್ರನನ್ನು ಹೇಳುತ್ತಿದೆ. ''ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ'' ಎಂಬ ದ್ವಿತೀಯಾ ಶ್ರುತಿಯು ಅಗ್ನಿಯನ್ನು ಹೇಳುತ್ತಿದೆ. ಈ ಎರಡು ವಾಕ್ಯಗಳಿಗೆ ವಿರೋಧ ಬರಬಾರದೆಂದರೆ ಇಂದ್ರ ಹಾಗು ಗಾರ್ಹಪತ್ಯಾಗ್ನಿಗೆ ಅಭೇದವನ್ನು ಒಪ್ಪಬೇಕಾದೀತು. ಅದರಂತೆ ವ್ರೀಹಿಶಾಸ್ತ್ರ ಹಾಗು ಯವಶಾಸ್ತ್ರಗಳಲ್ಲಿ ಬರುವ ವಿರೋಧದ ಪರಿಹಾರಕ್ಕಾಗಿ ವ್ರೀಹಿ, ಯವಗಳಿಗೆ ಅಭೇದವನ್ನು ಒಪ್ಪಬೇಕಾದೀತು. ಮತ್ತು ಷೋಡಶಿಗ್ರಹಣ, ಅಗ್ರಹಣಗಳಿಗೆ ವಿರೋಧವನ್ನು ಪರಿಹರಿಸುವುದಕ್ಕಾಗಿಯೇ ಅಭೇದವನ್ನು ಒಪ್ಪಬೇಕಾದೀತು. ವಿರುದ್ಧಾಂಶವನ್ನು ಬಿಟ್ಟಾಗ ಇವುಗಳಿಗೆ ಅಭೇದ ಹೇಳುವುದು ಕಷ್ಟವಲ್ಲ. ಹೀಗೆ ಅನೇಕ ಬಾಧಕಗಳು ಬರುತ್ತವೆ.

''ಸ ಬ್ರಹ್ಮಾ ಸ ಶಿವಃ'' ಎಂಬ ಶ್ರುತಿಯೂ ಸಹ ಅಭೇದವನ್ನು ಹೇಳುತ್ತಿಲ್ಲ. ಆಯಾ ಶಬ್ದಗಳ ಪ್ರವೃತ್ತಿ ನಿಮಿತ್ತವನ್ನು ಹೇಳುವ ಮೂಲಕ ಬ್ರಹ್ಮಾದಿಶಬ್ದಗಳ ಸಮನ್ವಯವನ್ನಷ್ಟೇ ಹೇಳುತ್ತಿದೆ ಹೊರತು ಬ್ರಹ್ಮಾದಿದೇವತೆಗಳಿಗೆ ಅಭೇದವನ್ನು ಹೇಳಲು ಹೊರಟಿಲ್ಲ. ಶ್ರುತಿಗೆ ಹೀಗೆ ಅರ್ಥ ಹೇಳದಿದ್ದಲ್ಲಿ ''ಸೋಽಕ್ಷರಃ'' ಎಂದು ಶ್ರುತಿಯಲ್ಲೇ ಇರುವುದರಿಂದ ಬ್ರಹ್ಮನಿಗೆ ಅಕಾರಾದಿ ಅಕ್ಷರಗಳಿಂದ ಅಭೇದವನ್ನು ಹೇಳಬೇಕಾದೀತು. ಮತ್ತು ''ಅಹಂ ಭವಃ'' ಎಂಬ ಶ್ರುತಿಯಲ್ಲಿ ಅಭೇದವನ್ನು ಹೇಳಿಲ್ಲ.

ಪುರುಷ ಏವೇದಂ ಸರ್ವಂ ಭೂತಂ ಭವ್ಯಂ ಭವಚ್ಚ ಯತ್ ।
ಇತ್ಯುಚ್ಯತೇ ತದೀಯತ್ವಾನ್ನ ತು ಸರ್ವಸ್ವರೂಪತಃ ।

ಶ್ರುತಿಯಲ್ಲಿ ಪುರುಷನೇ ಸಮಗ್ರಜಗತ್ ಎಂಬ ಮಾತಿದೆ. ಈ ಮಾತಿಗೆ ಸಮಗ್ರಜಗತ್ ಬ್ರಹ್ಮನ ಅಧೀನವೆಂದು ಅರ್ಥ. ಭಗವಂತನ ಅಧೀನವೆಂದೇ ಅರ್ಥ ಹೊರತು ಭಗವಂತನ ಸ್ವರೂಪ ಎಂದು ಅರ್ಥವಲ್ಲ. ಇದರಂತೆ 'ಅಹಂ ಭವಃ' ಎಂಬ ಶ್ರುತಿಗೂ ರುದ್ರಾದಿಗಳು ಭಗವಂತನ ಅಧೀನವೆಂದು.

ಯಸ್ತ್ವಾನ್ ದ್ವೇಷ್ಟಿ ಸ ಮಾಂ ದ್ವೇಷ್ಟಿ ಯಸ್ತ್ವಾನನು ಸ ಮಾಮನು ।
ಐಕಾತ್ಮ್ಯಮಾಗತಂ ವಿದ್ಧಿ ಪಾಂಡವೈರ್ಧರ್ಮಸಂಶ್ರಯೈಃ ।

ಯಾರು ಪಾಂಡವರನ್ನು ದ್ವೇಷಿಸುತ್ತಾರೋ ಅವರು ನನ್ನ (ಕೃಷ್ಣನನ್ನು) ದ್ವೇಷಿಸಿದಂತೆ ಯಾರು ಪಾಂಡವರನ್ನು ಅನುಸರಿಸುತ್ತಾರೋ ಅವರು ನನ್ನನ್ನು ಅನುಸರಿಸಿದಂತೆ ಏಕೆಂದರೆ ಧರ್ಮನಿಷ್ಠರಾದ ಪಾಂಡವರೆಂದರೆ ನಾನೇ ಎಂದು ತಿಳಿ.

ಇವೇ ಮೊದಲಾದ ಮಾತುಗಳನ್ನು ಗಮನಿಸಿದಾಗ ಅತ್ಯಂತ ಪ್ರೀತಿಪಾತ್ರವಾದ ವಸ್ತುವಿನಲ್ಲಿ ಅಭೇದಪ್ರಯೋಗವು ಅನೇಕ ಕಡೆ ಕಾಣಿಸುತ್ತದೆ. ಒಂದುವೇಳೆ ಬ್ರಹ್ಮನಿಗಿಂತ ಇಂದ್ರಾದಿಗಳು ಭಿನ್ನರೆಂದು ಅಂಗೀಕರಿಸಿ ವಾಕ್ಯವು ಇಂದ್ರ ಪರವಾಗಿದೆ ಎಂದು ಹೇಳಿದರೆ ವಾಕ್ಯಕ್ಕೆ ಒಂದು ಅರ್ಥ ಹೇಳಿದಂತಾಗುವುದಿಲ್ಲ. ಹಾಗಾಗಿ ವಾಕ್ಯಭೇದದೋಷ ಬರುತ್ತದೆ. ಆದ್ದರಿಂದ -

ಅಗ್ನೀಂದ್ರಾದಿಶ್ರುತಿರ್ನಾನಾ ಮಾರ್ಗಾಲಿಂಗೈರ್ಹಿ ವೈಷ್ಣವೈಃ ।
ನೀತೈಕಕಂಠ್ಯಂ ನೋ ಚೇತ್ತತ್ಕಲಹಂ ಕೋ ನಿವಾರಯೇತ್ ॥ ೧ ॥

ಅಗ್ನಿಶ್ರುತಿ ಇಂದ್ರಶ್ರುತಿ ಇವುಗಳೆಲ್ಲವೂ ಸಹ ಅನೇಕ ಬಗೆಯಲ್ಲಿ ಏಕಕಂಠದಿಂದ ವಿಷ್ಣುವನ್ನೇ ಕೊಂಡಾಡುತ್ತವೆ. ಹಾಗಾಗದಿದ್ದಲ್ಲಿ ಅಗ್ನಿ ಇಂದ್ರ ಮೊದಲಾದವರೆಲ್ಲರೂ ಸಹ ಸರ್ವೋತ್ತಮರಾಗುವ ಪ್ರಸಂಗ ಬರುತ್ತದೆ. ಆವಾಗ ಅವರ ಜಗಳವನ್ನು ಬಿಡುಸುವವರಾರು?

ಇಂದ್ರ ಅಗ್ನಿ ಮೊದಲಾದ ಶಬ್ದಗಳು ಬ್ರಹ್ಮನಲ್ಲಿ ಪರಮಮುಖ್ಯವೃತ್ತಿಯಿಂದ ಇದ್ದರೂ ಸಹ ಎಲ್ಲಿ ಬಾಧಕವಿರುತ್ತದೋ ಆವಾಗ ಅಯಾ ದೇವತೆಗಳನ್ನು ಪ್ರತಿಪಾದಿಸುತ್ತವೆಂದು ಹೇಳಲೇಬೇಕು. ಪಾದಾಂತ್ಯಪ್ರಾಣಾಧಿಕರಣನ್ಯಾಯದಂತೆಯೂ ಸೂರ್ಯಲಿಂಗ ವರುಣಲಿಂಗಾದಿಗಳು ಅಯಾ ದೇವತೆಗಳ ಅಂತರ್ಯಾಮಿಯಾದ ಭಗವಂತನಲ್ಲೇ ಮುಖ್ಯವಾಗಿ ಕೂಡುತ್ತವೆ. ಹೀಗೆ ಮೂರವಿಧ ಪೂರ್ವಪಕ್ಷಗಳು ಅಯುಕ್ತವಾಗಿವೆ.

### ಕಠಿಣಪದಾರ್ಥ

ಅನುಗ್ರಹಾಯ = ಹೊಂದಿಸುವುದಕ್ಕೋಸ್ಕರ. ವಿರುದ್ಧಾಂಶತ್ಯಾಗೇನ = ಆಕಾಶತ್ವ ಬ್ರಹ್ಮತ್ವ, ಇಂದ್ರತ್ವ ಗಾರ್ಹಪತ್ಯ, ವ್ರೀಹಿತ್ವ ಯವತ್ವ ಮೊದಲಾದ ಧರ್ಮಗಳನ್ನು ಬಿಟ್ಟು, ನಾನಾ ಮಾರ್ಗಾ = ನಾನಾರ್ಥಪ್ರತಿಪಾದಕವಾದ, ತ್ರಿವಿಧಪೂರ್ವಪಕ್ಷೋಽಪಿ = ಅನವಧಾರಣ, ಅವಧಾರಣ, ಅಭೇದಪರವಾದ ಮೂರುವಿಧ ಪೂರ್ವಪಕ್ಷಗಳೂ ಸಹ.

**प्रकाशः** – एवं निरवकाशलिङ्गेनेन्द्रादिशब्दानां भगवति मुख्यत्वे चान्तस्स्थो विष्णुरेवेत्याद्यसूत्राभिप्रेतत्वेनाद्यपूर्वपक्षं निरस्य द्वितीयपूर्वपक्षमग्रे निरसिष्यन् इदानीमभेदरूपतृतीयपूर्वपक्षं द्वितीयसूत्राभिप्रेतबाधकोक्त्या निरसितुं, किमुभय-प्रापकश्रुतिलिङ्गप्राबल्यान्यथानुपपत्त्या द्वयोरभेद उच्यते उत "स ब्रह्म" इत्यादिशा स्वान्तराविरोधायेति विकल्पौ हृदि कृत्वा आद्यमनिष्टकथनेन निरस्यति – यदि चेति ॥

**आकाशब्रह्मणोरिति** ।। उत्तराधिकरणे हि "आकाश इति होवाच सर्वाणि ह वा इमानि भूतान्याकाशादेव समुत्पद्यन्ते" इत्यत्राकाशशब्दो भूताकाशपर इति प्राप्ते, कारणत्वादिलिङ्गात् ब्रह्मपर इत्युच्यते । तन्न स्यात् । तत्रापि श्रुतिलिङ्गोभयानुग्रहाय तयोः "'ऐक्यं स्यात्' इत्यन्वयः । 'कारणत्वादि' इति पररीत्येति ध्येयम् । ऐन्द्र्यधिकरणं ग्रहणाधिकरणं चोक्तम् ।। **कदाचनेति**।।

यद्यपि "निवेशनः सङ्गमनो वसूनाम्" इति 'ऐन्द्र्या गार्हपत्यमुपतिष्ठते" इत्यग्निप्रकरणस्थं वाक्यं शाबरभाष्यादावुदाहृतं तथाऽप्यग्निहोत्रप्रकरणे महोपस्थानेषु "ऐन्द्र्या गार्हपत्यमुपतिष्ठते" इति वाक्यदर्शनादेतन्मन्त्रोपन्यासः ।।

**व्रीहियवेति** ।। द्वादशे तृतीयपादे "एकार्थास्तु विकल्पेरन्समुच्चये ह्यावृत्तिः स्यात्" इति चतुर्थेऽधिकरणे चिन्तितं "व्रीहिभिर्यजेत" इत्यादौ विकल्पसमुच्चयसन्देहे सर्वाङ्गोपसंहारप्रयोगवचनानुग्रहायाष्टदोषनिदानविकल्पपरिहाराय च ज्योतिष्टोमवदभ्यासमाश्रित्य समुच्चयः, मिश्रैर्वा याग इति प्राप्ते, एकार्थानामेकस्मिन्नुपकारेऽन्योन्यानपेक्षया विनियुक्तानां विकल्पः स्यात् । ज्योतिष्टोमे हि द्रव्यदेवतासंयोगानामदृष्टार्थानां प्रकरणेन युगपद्ग्रहणादभ्यासो न्याय्यः । व्रीहियवौ तु वाक्यद्वयेनान्योन्यनैरपेक्ष्येण पुरोडाशप्रकृतिद्रव्यतया विधीयमानौ प्रयोगवचनं पर्यायेण गृह्णाति, न युगपत् । येन तद्बलात्प्रधानावृत्तिः स्यात् । मिश्रत्वमपि निरपेक्षविधानादेवा युक्तमेवेत्यगत्या विकल्पाश्रयणमिति ।

तथा चायमर्थः – यदि श्रुतिलिङ्गयोरन्यतराबाधेनोभयानुग्रहायाभेदाश्रयणं, तदाऽऽकाशब्रह्मणोराकाशत्वब्रह्मत्वरूपधर्मत्यागेन, तथा मन्त्रब्राह्मणयोर्लिङ्गश्रुत्योरनुग्रहायेन्द्रगार्हपत्ययोरिन्द्रत्वगार्हपत्यत्वरूपधर्मत्यागेन विशेष्यैक्यं स्यात्, न तु लिङ्गेन श्रुतिबाधो वा श्रुत्या लिङ्गबाधो वा स्यात् । यदि शास्त्रद्वयाविरोधायाभेदाश्रयणं, तदा व्रीहियवयोर्ग्रहणाग्रहणयोः व्रीहित्वादिधर्मत्यागेनैक्यं स्यात्, न तु विकल्पाश्रयणेन पाक्षिको बाधः । तथा च सर्वमीमांसा उन्मूल्येतेति । "स ब्रह्म" इत्यादिशास्त्रान्तराविरोधायेति द्वितीयं निराह – **स ब्रह्मेति** ।। स्मृतेर्द्वेधाऽभिप्रायमाह – **अहं भव इति** ।। **यद्भूतादि**, इदं सर्वं पुरुष एवोत्युच्यते । तदीयत्वादेव, न त्वभेदादित्यर्थः ।

ಯಾರು ಪಾಂಡವರನ್ನು ದ್ವೇಷಿಸುತ್ತಾರೋ ಅವರು ನನ್ನ (ಕೃಷ್ಣನನ್ನು) ದ್ವೇಷಿಸಿದಂತೆ ಯಾರು ಪಾಂಡವರನ್ನು ಅನುಸರಿಸುತ್ತಾರೋ ಅವರು ನನ್ನನ್ನು ಅನುಸರಿಸಿದಂತೆ ಏಕೆಂದರೆ ಧರ್ಮನಿಷ್ಠರಾದ ಪಾಂಡವರೆಂದರೆ ನಾನೇ ಎಂದು ತಿಳಿ.

ಇವೇ ಮೊದಲಾದ ಮಾತುಗಳನ್ನು ಗಮನಿಸಿದಾಗ ಅತ್ಯಂತ ಪ್ರೀತಿಪಾತ್ರವಾದ ವಸ್ತುವಿನಲ್ಲಿ ಅಭೇದಪ್ರಯೋಗವು ಅನೇಕ ಕಡೆ ಕಾಣಿಸುತ್ತದೆ. ಒಂದುವೇಳೆ ಬ್ರಹ್ಮನಿಗಿಂತ ಇಂದ್ರಾದಿಗಳು ಭಿನ್ನರೆಂದು ಅಂಗೀಕರಿಸಿ ವಾಕ್ಯವು ಇಂದ್ರ ಪರವಾಗಿದೆ ಎಂದು ಹೇಳಿದರೆ ವಾಕ್ಯಕ್ಕೆ ಒಂದು ಅರ್ಥ ಹೇಳಿದಂತಾಗುವುದಿಲ್ಲ. ಹಾಗಾಗಿ ವಾಕ್ಯಭೇದದೋಷ ಬರುತ್ತದೆ. ಆದ್ದರಿಂದ -

ಅಗ್ನೀಂದ್ರಾದಿಶ್ರುತಿರ್ನಾನಾ ಮಾರ್ಗಾಲಿಂಗೈರ್ಹಿ ವೈಷ್ಣವೈಃ ।
ನೀತ್ವೈಕಕಂಠ್ಯಂ ನೋ ಚೇತ್ತತ್ಕಲಹಂ ಕೋ ನಿವಾರಯೇತ್ ॥ ೧ ॥

ಅಗ್ನಿಶ್ರುತಿ ಇಂದ್ರಶ್ರುತಿ ಇವುಗಳೆಲ್ಲವೂ ಸಹ ಅನೇಕ ಬಗೆಯಲ್ಲಿ ಏಕಕಂಠದಿಂದ ವಿಷ್ಣುವನ್ನೇ ಕೊಂಡಾಡುತ್ತವೆ. ಹಾಗಾಗದಿದ್ದಲ್ಲಿ ಅಗ್ನಿ ಇಂದ್ರ ಮೊದಲಾದವರೆಲ್ಲರೂ ಸಹ ಸರ್ವೋತ್ತಮರಾಗುವ ಪ್ರಸಂಗ ಬರುತ್ತದೆ. ಆವಾಗ ಅವರ ಜಗಳವನ್ನು ಬಿಡುಸುವವರಾರು?

ಇಂದ್ರ ಅಗ್ನಿ ಮೊದಲಾದ ಶಬ್ದಗಳು ಬ್ರಹ್ಮನಲ್ಲಿ ಪರಮಮುಖ್ಯವೃತ್ತಿಯಿಂದ ಇದ್ದರೂ ಸಹ ಎಲ್ಲಿ ಬಾಧಕವಿರುತ್ತದೋ ಆವಾಗ ಅಯಾ ದೇವತೆಗಳನ್ನು ಪ್ರತಿಪಾದಿಸುತ್ತವೆಂದು ಹೇಳಲೇಬೇಕು. ಪಾದಾಂತ್ಯಪ್ರಾಣಾಧಿಕರಣನ್ಯಾಯದಂತೆಯೂ ಸೂರ್ಯಲಿಂಗ ವರುಣಲಿಂಗಾದಿಗಳು ಅಯಾ ದೇವತೆಗಳ ಅಂತರ್ಯಾಮಿಯಾದ ಭಗವಂತನಲ್ಲೇ ಮುಖ್ಯವಾಗಿ ಕೂಡುತ್ತವೆ. ಹೀಗೆ ಮೂರವಿಧ ಪೂರ್ವಪಕ್ಷಗಳು ಅಯುಕ್ತವಾಗಿವೆ.

### ಕಠಿಣಪದಾರ್ಥ

ಅನುಗ್ರಹಾಯ = ಹೊಂದಿಸುವುದಕ್ಕೋಸ್ಕರ. ವಿರುದ್ಧಾಂಶತ್ಯಾಗೇನ = ಆಕಾಶತ್ವ ಬ್ರಹ್ಮತ್ವ, ಇಂದ್ರತ್ವ ಗಾರ್ಹಪತ್ಯ, ವ್ರೀಹಿತ್ವ ಯವತ್ವ ಮೊದಲಾದ ಧರ್ಮಗಳನ್ನು ಬಿಟ್ಟು, ನಾನಾ ಮಾರ್ಗಾ = ನಾನಾರ್ಥಪ್ರತಿಪಾದಕವಾದ, ತ್ರಿವಿಧಪೂರ್ವಪಕ್ಷೋಽಪಿ = ಅನವಧಾರಣ, ಅವಧಾರಣ, ಅಭೇದಪರವಾದ ಮೂರುವಿಧ ಪೂರ್ವಪಕ್ಷಗಳೂ ಸಹ.

**प्रकाशः** – एवं निरवकाशलिङ्गेनेन्द्रादिशब्दानां भगवति मुख्यत्वे चान्तस्स्थो विष्णुरेवेत्याद्यसूत्राभिप्रेतत्वेनाद्यपूर्वपक्षं निरस्य द्वितीयपूर्वपक्षमग्रे निरसिष्यन् इदानीमभेदरूपतृतीयपूर्वपक्षं द्वितीयसूत्राभिप्रेतबाधकोक्त्या निरसितुं, किमुभय-प्रापकश्रुतिलिङ्गप्राबल्यान्यथानुपपत्त्या द्वयोरभेद उच्यते उत "स ब्रह्म" इत्यादिशा स्वान्तराविरोधायेति विकल्पौ हृदि कृत्वा आद्यमनिष्टकथनेन निरस्यति – यदि चेति ॥

**आकाशब्रह्मणोरिति** ।। उत्तराधिकरणे हि ''आकाश इति होवाच सर्वाणि ह वा इमानि भूतान्याकाशादेव समुत्पद्यन्ते'' इत्यत्राकाशशब्दो भूताकाशपर इति प्राप्ते, कारणत्वादिलिङ्गात् ब्रह्मपर इत्युच्यते । तन्न स्यात् । तत्रापि श्रुतिलिङ्गोभयानुग्रहाय तयोः ''ऐक्यं स्यात्' इत्यन्वयः । 'कारणत्वादि' इति पररीत्येति ध्येयम् । ऐन्द्र्यधिकरणं ग्रहणाधिकरणं चोक्तम् ।। **कदाचनेति**।।

यद्यपि ''निवेशनः सङ्गमनो वसूनाम्'' इति 'ऐन्द्र्या गार्हपत्यमुपतिष्ठते'' इत्यग्निप्रकरणस्थं वाक्यं शाबरभाष्यादावुदाहृतं तथाऽप्यग्निहोत्रप्रकरणे महोपस्थानेषु ''ऐन्द्र्या गार्हपत्यमुपतिष्ठते'' इति वाक्यदर्शनादेतन्मन्त्रोपन्यासः ।।

**व्रीहियवेति** ।। द्वादशे तृतीयपादे ''एकार्थास्तु विकल्पेरन्समुच्चये ह्यावृत्तिः स्यात्'' इति चतुर्थेऽधिकरणे चिन्तितं ''व्रीहिभिर्यजेत'' इत्यादौ विकल्पसमुच्चयसन्देहे सर्वाङ्गोपसंहारप्रयोगवचनानुग्रहायाष्टदोषनिदानविकल्पपरिहाराय च ज्योतिष्टोमवदभ्यासमाश्रित्य समुच्चयः, मिश्रैर्वा याग इति प्राप्ते, एकार्थानामेकस्मिन्नुपकारेऽन्योन्यानपेक्षया विनियुक्तानां विकल्पः स्यात् । ज्योतिष्टोमे हि द्रव्यदेवतासंयोगानामदृष्टार्थानां प्रकरणेन युगपद्ग्रहणादभ्यासो न्याय्यः । व्रीहियवौ तु वाक्यद्वयेनान्योन्यनैरपेक्ष्येण पुरोडाशप्रकृतिद्रव्यतया विधीयमानौ प्रयोगवचनं पर्यायेण गृह्णाति, न युगपत् । येन तद्बलात्प्रधानावृत्तिः स्यात् । मिश्रत्वमपि निरपेक्षविधानादेवा युक्तमेवेत्यगत्या विकल्पाश्रयणमिति ।

तथा चायमर्थः – यदि श्रुतिलिङ्गयोरन्यतराबाधेनोभयानुग्रहायाभेदाश्रयणं, तदाऽऽकाशब्रह्मणोराकाशत्वब्रह्मत्वरूपधर्मत्यागेन, तथा मन्त्रब्राह्मणयोर्लिङ्गश्रुत्योरनुग्रहायेन्द्रगार्हपत्ययोरिन्द्रत्वगार्हपत्यत्वरूपधर्मत्यागेन विशेष्यैक्यं स्यात्, न तु लिङ्गेन श्रुतिबाधो वा श्रुत्या लिङ्गबाधो वा स्यात् । यदि शास्त्रद्वयाविरोधायाभेदाश्रयणं, तदा व्रीहियवयोर्ग्रहणाग्रहणयोः व्रीहित्वादिधर्मत्यागेनैक्यं स्यात्, न तु विकल्पाश्रयणेन पाक्षिको बाधः । तथा च सर्वमीमांसा उन्मूल्येतेति । ''स ब्रह्म'' इत्यादिशास्त्रान्तराविरोधायेति द्वितीयं निराह – **स ब्रह्मेति** ।। स्मृतेर्द्वेधाऽभिप्रायमाह – **अहं भव इति** ।। **यद्भूतादि**, इदं सर्वं पुरुष एवोत्युच्यते । तदीयत्वादेव, न त्वभेदादित्यर्थः ।

ಅಂತಸ್ಥತ್ವಾಧಿಕರಣ

एवमवधारणपूर्वपक्षमभेदपूर्वपक्षं च निरस्याधुनाऽनवधारणेनेन्द्राद्यनेकपरत्वरूपद्वितीयपक्षं निरस्यति – **इन्द्रादीनामिति** ।। **अर्थैकत्वाभावादिति** ।। ''अर्थैकत्वादेकं वाक्यं साकाङ्क्षं चेद्विभागे स्यात्'' इति सूत्रकृता जैमिनिना एकवाक्यताया अर्थैकत्वनिबन्धनत्वोक्तेरिति भावः । यद्यप्ययमादावेव दूष्यः, तथाऽपि स्फुटदोषत्वादभेदपक्षदूषणस्य प्राक्सङ्गतत्वाद्वाऽन्ते दूषितः ।

ननु तर्ह्यभेदपक्षस्य दूषितत्वादिन्द्रादिप्रापकाणां बलाबलानिश्चयात् कथमेकवाक्यतेत्याशङ्क्य वैष्णवत्वेनैकवाक्यतामाह – **एवं चेति** ।। 'नानामार्गा' नानार्थप्रतिपादिका, अग्नीन्द्रादिश्रुतिः र्विष्णुलिङ्गैः 'ऐककण्ठ्यम्' विष्णुरूपैकार्थप्रतिपादकतां, नीता न चेत् 'अग्नीन्द्रादिश्रुतिकलहं' अहमिन्द्रमेवेति विवादं 'को निवारयेत्' न कोऽपीत्यर्थः । ननु यदीन्द्रशब्दमुख्यवाच्यो हरिरेव, तर्हि ''इन्द्रस्यात्मा निहितः पञ्चहोता'' इत्यत्रेन्द्रस्य विष्णुत्वे पुरन्दरान्तर्यामित्वेन अत्र भेदव्यपदेशोऽसिद्धस्स्यादित्यत आह – **इन्द्राग्न्यादीति** ।। अत्रात्मपदोक्तान्तर्यामिणोऽन्यस्य श्रवणेनेन्द्रः पुरन्दर एवेति भावः ।

ननु एकचक्रत्वादिसूर्यादिलिङ्गानां का गतिः । नच तान्यप्रमाणानि, वैदिकत्वादित्यत आह – **पादान्त्येति** ।। स्पष्टं चाग्रेऽधिकरणशरीरम् । नच तेनैवेदं गतार्थमिति वाच्यं, निरवकाशश्रुतिसत्त्वे अन्तर्यामिगतत्वायोगादितीह पूर्वपक्षकरणात् । यद्वा – तत्र बाधकादन्तर्यामिगतत्वाङ्गीकारेऽपि, नेह तथात्वं, बाधकाभावान्निरूढश्रुतिसत्त्वाच्चाभेदेनाप्युपपत्तेरिति पूर्वपक्षकरणादिति भावः ।

**गुरुराजीयम्** – नन्विन्द्रादिश्रुतीनां विष्णुपरत्ववद्विष्ण्वादिनाम्नामपि रुद्रादिपरत्वं किं न स्यादित्यत आह – **यदि चेति** ।। अथवा तृतीयं पूर्वपक्षं निषेधति – **यदि चेति** ।।

ननु दृष्टान्तदार्ष्टान्तिकयोर्वैषम्यम् । आकाशादेर्ब्रह्माभेदे प्रमाणाभावेन तत्र श्रुतिलिङ्गयोरुभयोरविरोधायाकाशादेर्ब्रह्माभेदस्यासम्भवेपि प्रकृते स ब्रह्मा स शिवः स हरिः सेन्द्र इत्यादेरेव जीवब्रह्माभेदे प्रमाणत्वेन तत्र श्रुतिलिङ्गयोरुभयोरनुग्रहायेन्द्रादेर्ब्रह्माभेदोऽङ्गीकार्य इत्यत आह – **स ब्रह्मेतीति** ।। **प्रसिद्धेति** ।। प्रसिद्धं यदकारेकाररूपमक्षरं तदात्मकं स्यादित्यर्थः । तथापि स्मृत्या जीवब्रह्माभेदो भविष्यतीत्यत आह – **अहमित्यादि** ।।

नन्वस्त्विन्द्रादीनां ब्रह्मणो भेदः । तथापि वाक्यमिदमिन्द्रादिपरमेव किं न स्यादित्यत आह – **इन्द्रादीनामिति** ।। यद्वा द्वितीयं पूर्वपक्षं निषेधति – **इन्द्रादीनामिति** ।। **अग्नीन्द्रादिश्रुतिरिति** ।। अग्निश्चेन्द्रादयश्चाग्नीन्द्रादयः तेषां श्रुतिरित्यर्थः । एवं च ''घ्यन्तादजाद्यदन्तं पदं परम्'' इत्यस्याप्राप्तेर्नाग्निशब्दस्य परनिपात इति ज्ञेयमित्याहुः । एवमिन्द्रादिशब्दानां विष्णावेव विद्वद्रूढिमहायोगयोः सत्त्वेन विष्णावेव मुख्यमित्युक्तम् ।

तदयुक्तम् । तथात्व इन्द्रादिशब्दानां कुत्रापि प्रसिद्धेन्द्रादिपरत्वं न स्यात् । तथा च भेदव्यपदेशाद्यसिद्धिः । इन्द्रस्यात्मेत्यादावपि ब्रह्मपरत्वप्राप्तेरित्यत आह – **इन्द्राग्न्यादिशब्दानामिति** ।। **बाधकमिति** ।। मुख्यया वृत्त्या ब्रह्मपरत्वेप्यमुख्य-वृत्त्याऽन्यपरत्वाभावेऽनुपपद्यमानत्वरूपं बाधकं यत्र तत्रैवेत्यर्थः ।

ननु निरवकाशसमुद्रान्तस्स्थत्वादिलिङ्गबाधितत्वेनेन्द्रादिशब्दानां प्रसिद्धेन्द्रादे-रन्तस्स्थत्वसाधकाभावेपि सप्ताश्वयुक्तरथोपेतत्वादिरूपलिङ्गस्य निरवकाशत्वेन साधकत्वं स्यादेवेत्यतस्तस्यापि सावकाशत्वं दर्शयति – **पादान्त्येति** ।। यथेन्द्रादि-श्रुतिर्विष्णावेव मुख्या एवं लिङ्गमपि विष्णावेव मुख्यमिति योजना ।

ವಿವರಣೆ - ಇಲ್ಲಿಯ ತನಕ ನಿರವಕಾಶಲಿಂಗಾದಿಗಳಿಂದ ಇಂದ್ರಾದಿಶಬ್ದಗಳಿಗೆ ಭಗವಂತನಲ್ಲಿ ಮುಖ್ಯಪ್ರತಿಪಾದ್ಯತ್ವವನ್ನು ಹೇಳಿದಂತಾಯಿತು. ಇದರಿಂದ ಅಂತಸ್ಥನಾದವನು ವಿಷ್ಣುವೇ ಆಗಿದ್ದಾನೆಂಬ ಮೊದಲನೆಯ ಸೂತ್ರದ ಪ್ರಮೇಯವು ಸಮರ್ಥಿತವಾಯಿತು. ಮತ್ತು ಪ್ರಥಮ ಪೂರ್ವಪಕ್ಷವನ್ನು ನಿರಾಕರಿಸಿದಂತಾಯಿತು.

ಎರಡನೆಯ ಪೂರ್ವಪಕ್ಷವನ್ನು ಮುಂದೆ ನಿರಾಕರಣೆ ಮಾಡುವವರಿದ್ದಾರೆ. ಈಗ ಅಭೇದರೂಪವಾದ ಮೂರನೇ ಪಕ್ಷವನ್ನು ನಿರಾಕರಿಸಬೇಕಾಗಿದೆ. ಇದರಿಂದ ಎರಡನೆಯ ಸೂತ್ರದ ಪ್ರಮೇಯವನ್ನು ಸಾಧಿಸಿದಂತಾಗುತ್ತದೆ. ಅದಕ್ಕೋಸ್ಕರ ಉಭಯಪ್ರಾಪಕವಾದ ಶ್ರುತಿಲಿಂಗಾದಿಗಳು ಪ್ರಾಬಲ್ಯದ ಅನ್ಯಾಥಾ ಉಪಪತ್ತಿಯಿಂದ ಆಕಾಶ ಹಾಗು ವಿಷ್ಣುವಿಗೆ ಅಭೇದವನ್ನು ಹೇಳುತ್ತಾರೋ? ಅಥವಾ ಸ ಬ್ರಹ್ಮ ಇತ್ಯಾದಿ ಶಾಸ್ತ್ರಾಂತರದ ವಿರೋಧ ಬರಬಾರದೆಂಬ ಕಾರಣದಿಂದ ಅಭೇದ ಹೇಳುತ್ತೀರೋ? ಹೀಗೆ ಎರಡು ವಿಕಲ್ಪಗಳನ್ನು ಮಾಡಿ ಮೊದಲನೆಯ ಪಕ್ಷಕ್ಕೆ ಅನಿಷ್ಟವನ್ನು ಹೇಳುವ ಮೂಲಕವಾಗಿ 'ಯದಿ ಚ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

ಮುಂದಿನ ಆಕಾಶಾಧಿಕರಣದಲ್ಲಿ "ಆಕಾಶ ಇತಿ ಹೋವಾಚ ಸರ್ವಾಣಿ ಹವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ" ಇಲ್ಲಿರುವ ಆಕಾಶಶಬ್ದವು ಭೂತಾಕಾಶಪರವೆಂದು ಪೂರ್ವಪಕ್ಷ ಬಂದರೆ ಕಾರಣತ್ವಲಿಂಗದಿಂದ ಪರಬ್ರಹ್ಮಪರವೆಂದು ಸಿದ್ಧಾಂತ ಮಾಡಲಾಗಿದೆ. ನಿಮ್ಮ ಪ್ರಕಾರ ಇದೂ ಕೂಡ

ತಪ್ಪಾದೀತು. ಏಕೆಂದರೆ ಶ್ರುತಿಯು ಭೂತಾಕಾಶಪರವಾಗಿದೆ. ಲಿಂಗವು ಪರಬ್ರಹ್ಮಪರವಾಗಿದೆ. ಎರಡನ್ನು ಹೊಂದಿಸುವುದಕ್ಕಾಗಿ ಭೂತಾಕಾಶಕ್ಕೆ ಮತ್ತು ವಿಷ್ಣುವಿಗೂ ಐಕ್ಯವನ್ನು ಹೇಳಿದರೆ ಆಯಿತೆಂಬ ಆಕ್ಷೇಪವನ್ನು ಗ್ರಂಥಕಾರರು ಮಾಡಿದ್ದಾರೆ.

ವಸ್ತುತಸ್ತು ಸಿದ್ಧಾಂತ ಪ್ರಕಾರ ಪರರ ರೀತಿಯ ಲಿಂಗಗಳು ಆಕಾಶಾಧಿಕರಣದಲ್ಲಿ ಹೇಳಲಾಗಿದೆ. ಆದರೆ ಇಲ್ಲಿ ಗ್ರಂಥಕಾರರು ಕಾರಣತ್ವವನ್ನು ಆಕಾಶಾದಿಲಿಂಗವೆಂದಿದ್ದಾರಲ್ಲ? ಎಂದರೆ ಅದ್ವೈತಮತವನ್ನು ಅನುಸರಿಸಿ ಹಾಗೆ ಹೇಳಿದ್ದಾರೆ. ಹೊರತು ಸಿದ್ಧಾಂತದ ಪ್ರಕಾರವಲ್ಲ. ಪೂರ್ವಪಕ್ಷದ ಸಂದರ್ಭದಲ್ಲಿ ಅದ್ವೈತಮತವನ್ನು ಇಟ್ಟುಕೊಳ್ಳುವುದು ತಪ್ಪೇನಲ್ಲ.

ವಸ್ತುತಸ್ತು "ನಿವೇಶನಸ್ಸಂಗಮನೋ ವಸೂನಾಮಿತ್ಯೈಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ" ಈ ಶ್ರುತಿಯು ಅಗ್ನಿಪ್ರಕರಣದಲ್ಲಿ ಶ್ರುತವಾಗಿದೆ. ಇದನ್ನೇ ಶಾಬರಭಾಷ್ಯದಲ್ಲಿ ಉದಾಹರಿಸಲಾಗಿದೆ. ಗ್ರಂಥಕಾರರು ಉದಾಹರಿಸಿದ ಐಂದ್ರ್ಯಾ ಗಾರ್ಹಮುಪತಿಷ್ಠತೇ' ಎಂಬ ವಾಕ್ಯವನ್ನು ಶಾಬರಭಾಷ್ಯದಲ್ಲಿ ಉದಾಹರಿಸಿಲ್ಲ. ಆದರೂ ಸಹ ಅಗ್ನಿಹೋತ್ರಪ್ರಕರಣದಲ್ಲೇ ಇರುವ 'ಮಹೋಪಸ್ಥಾನ' ಪ್ರಕರಣದಲ್ಲಿ 'ಐಂದ್ರ್ಯಾ ಗಾರ್ಹಮುಪತಿಷ್ಠತೇ" ಎಂಬ ವಾಕ್ಯವು ಕೇಳಿಸುತ್ತಿದೆ. ಹಾಗಾಗಿ ಗ್ರಂಥಕಾರರು ಇಲ್ಲಿ ಉದಾಹರಿಸಿದ್ದಾರೆ.

ಪ್ರಯೋಜನೈಕ್ಯ ಗುಣಾನಾಮ್ ವಿಕಲ್ಪಾಧಿಕರಣ

ಏಕಾರ್ಥಾಸ್ತು ವಿಕಲ್ಪೇರನ್ ಸಮುಚ್ಚಯೇ ಹ್ಯಾವೃತ್ತಿಃ ಸ್ಯಾತ್ ಪ್ರಧಾನಸ್ಯ. (೧೨-೩-೪)

"ವ್ರೀಹಿಭಿರ್ಯಜೇತ" "ಯವೈರ್ಯಜೇತ"[1] ಈ ಎರಡು ಶ್ರುತಿಗಳನ್ನು ನೋಡಿದಾಗ ವ್ರೀಹಿಯಿಂದ

---

(१) भाट्टसङ्ग्रहः –

**अथ चतुर्थं प्रयोजनैक्ये गुणानां विकल्पाधिकरणम् (सूत्राणि १०-१५)**

**एकार्थास्तु विकल्पेरन् समुच्चये ह्यावृत्तिः स्यात्प्रधानस्य ।। १० ।।**

**(अभ्यस्येतार्थवत्त्वादिति चेत् ।। ११ ।। नाश्रुतित्वात् ।। १२ ।। सति चाभ्यासाशास्त्रत्वात् ।। १३ ।। विकल्पवच्च दर्शयति ।। १४ ।। कालान्तरेऽर्थवत्त्वं स्यात् ।। १५ ।।)**

पूर्ववैषम्येण शङ्कात्सङ्गतिः । "व्रीहिभिर्यजेत" "यवैर्यजेत" इत्यादिषु किं विकल्पः, उत समुच्चय इति संदेहे, पूर्वत्राधारणाक्रियैक्येनोर्ध्वतादीनां समुच्चय इवात्रापि यागरूप-कार्यैक्यात्सर्वापङ्गोसंहारिप्रयोगवचनानुग्रहाच्च समुच्चयः । न चैवं गुणानुरोधेनायुक्ता प्रधानावृत्तिः प्रसज्यत इति शङ्क्यम् । ज्योतिष्टोमे "ऐन्द्रवायवं गृह्णाति" "मैत्रावरुणं गृह्णाति" इत्यादिना विहितानां ग्रहाणां युगपदभ्यासमाश्रित्य समुच्चयसंपादनवददोषत्वाद् व्रीहियवमेलनेन यागकृतिसंभवाच्चेति **प्राप्ते सिद्धान्तः**, ज्योतिष्टोमे हि "ऐन्द्रवायवं गृह्णाति" इत्यादिभिर्वाक्यैर्ग्रहणेनैन्द्रवायवादिदेवतासंबन्धं कुर्यादिति द्रव्यदेवतासंयोगा विधीयन्ते । ते च प्रयाजादिवददृष्टार्था इत्यपर्यायग्राहिणा प्रकरणेन युगपद्गृह्यन्ते । यागश्च विना देवतासंबन्धं ग्रहणमात्रेण न शक्यते सम्पादयितुमिति युक्तं । तत्र बलात्प्रधानाभ्यासेन

ಹೋಮ ಮಾಡಬೇಕೆ? 'ಯವೆ'ಯಿಂದ ಹೋಮ ಮಾಡಬೇಕೆ? ಅಥವಾ ಯಾವುದಾದರೂ ಒಂದರಿಂದ ಯಾಗ ಮಾಡಿದರೆ ಸಾಕೋ? ಅಥವಾ ವ್ರೀಹಿ ಯವ ಎರಡರಿಂದಲೂ ಯಾಗ ಮಾಡಬೇಕೋ? ಎಂದು ಸಂಶಯ ಬರುತ್ತದೆ.

ಪೂರ್ವಪಕ್ಷ - ವ್ರೀಹಿ ಮತ್ತು ಯವ ಎರಡರ ಸಮುಚ್ಚಯದಿಂದಲೇ ಯಾಗ ಮಾಡಬೇಕು ಹೊರತು ವಿಕಲ್ಪವನ್ನು ಆಶ್ರಯಿಸಬಾರದು. 'ವ್ರೀಹಿಭಿರ್ಯಜೇತ' 'ಯವೈರ್ಯಜೇತ' ಈ ಎರಡೂ ವಾಕ್ಯಗಳು ಕರ್ಮಪ್ರಯೋಗವನ್ನು ತಿಳಿಸುವ ವಚನಗಳು ಮತ್ತು ಯಾಗದ ಎಲ್ಲ ಅಂಗಗಳನ್ನು ಉಪಸಂಹಾರ ಮಾಡುವ ವಾಕ್ಯಗಳು ಆಗಿವೆ. ಆದ್ದರಿಂದ 'ವ್ರೀಹಿ' ಎಂಬ ಪ್ರಯೋಗ 'ಯವ' ಎಂಬ ಪ್ರಯೋಗ ಎರಡನ್ನೂ ಇಟ್ಟುಕೊಳ್ಳಬೇಕು. ಎರಡನ್ನು ಇಟ್ಟುಕೊಂಡು ಅನುಗ್ರಹಿಸಬೇಕು. ಅಷ್ಟೇ ಅಲ್ಲದೆ ಎರಡನ್ನು ಇಟ್ಟುಕೊಳ್ಳದಿದ್ದರೆ ವಿಕಲ್ಪವನ್ನು ಆಶ್ರಯಿಸಬೇಕಾಗುತ್ತದೆ. ವಿಕಲ್ಪವು ಅಷ್ಟದೋಷಗಳಿಂದ ದುಷ್ಟವಾಗಿದೆ.

ವ್ರೀಹಿ ಹಾಗೂ ಯವ ಎಂಬ ಎರಡು ಅಂಗಗಳಿರುವುದರಿಂದ ಯಾಗವನ್ನೇ ಆವೃತ್ತಿ ಮಾಡೋಣವೆಂದೂ ಹೇಳಲಾಗದು. ಪ್ರಧಾನವನ್ನು ಅನುಸರಿಸಿ ಗುಣವನ್ನು ಆವೃತ್ತಿ ಮಾಡಬಹುದೇ ಹೊರತು ಗುಣವನ್ನು ಅನುಸರಿಸಿ ಪ್ರಧಾನವನ್ನು ಆವೃತ್ತಿ ಮಾಡುವುದು ತಪ್ಪಾಗುತ್ತದೆ. ಅಥವಾ ಜ್ಯೋತಿಷ್ಟೋಮ ಯಾಗದಲ್ಲಿ 'ಐಂದ್ರವಾಯವಂ ಗೃಹ್ಣಾತಿ', 'ಮೈತ್ರಾವರುಣಂ ಗೃಹ್ಣಾತಿ' ಇತ್ಯಾದಿಯಾಗಿ ವಿಹಿತವಾದ ಗ್ರಹಣಗಳನ್ನು ಒಟ್ಟಿಗೆ ಮಾಡುವಂತೆ ಇಲ್ಲಿಯೂ ಸಹ ವ್ರೀಹಿ ಹಾಗು ಯವಗಳನ್ನು ಒಟ್ಟಿಗೆ ಸೇರಿಸಿ ಯಾಗವನ್ನು ಮಾಡಬಹುದು. ವ್ರೀಹಿ ಯವಗಳ ಮಿಶ್ರಣದಿಂದ ಪುರೋಡಾಶವನ್ನು ತಯಾರಿಸುವುದೇನು ಕಷ್ಟವಲ್ಲ. ಎರಡು ದ್ರವ್ಯಗಳನ್ನು ಮಿಶ್ರಣ ಮಾಡಿ ಹೋಮಿಸಿದಾಗ ಒಂದೇ ಯಾಗವಾಗುತ್ತದೆ. ಆವೃತ್ತಿಯ ದೋಷ ಬರುವುದಿಲ್ಲ. ಹೀಗೆ ವ್ರೀಹಿ ಹಾಗೂ ಯವಗಳ ಸಮುಚ್ಚಯದಿಂದಲೇ ಯಾಗವನ್ನು ಮಾಡಬೇಕು. ಆದ್ದರಿಂದ ಈ ಪಕ್ಷದಲ್ಲಿ ಪ್ರಧಾನಯಾಗ ಆವೃತ್ತಿ ಮಾಡಬೇಕೆಂಬ ದೋಷಕ್ಕೆ ಪ್ರಸಕ್ತಿಯಿಲ್ಲ.

ಸಿದ್ಧಾಂತ - ಸಮುಚ್ಚಯವನ್ನು ಆಶ್ರಯಿಸದೆ ವಿಕಲ್ಪವನ್ನು ಆಶ್ರಯಿಸಬೇಕು. ಎರಡು ಪದಾರ್ಥಗಳಿಗೆ ಒಂದೇ ಪ್ರಯೋಜನವಿದ್ದು ಅನ್ಯೋನ್ಯನಿರಪೇಕ್ಷ ಆಗಿದ್ದರೆ ಅಲ್ಲಿಮಾತ್ರ ವಿಕಲ್ಪವನ್ನು ಆಶ್ರಯಿಸಬಹುದು.

---

सर्वेषां देवतासंबन्धानां संपादनम् । व्रीहियवौ तु न यागार्थतया विधीयेते । येनैन्द्र-वाय्वादिवत्प्रकरणेन युगपद्ग्रहणं स्यात् । किन्तु यदाग्नेयादिवाक्यान्तरविहितयागानुवा-देनोत्पत्तिशिष्टपुरोडाशप्रकृतिद्रव्यतया द्वाभ्यां वाक्याभ्यां विधीयेते । अत एकद्रव्येण कार्यसिद्धेर्द्रव्यान्तरस्य निवृत्तिः । प्रयोगवचनमपि पुरोडाशप्रकृतिद्रव्यतया व्रीहियवौ गृह्णदेकैकमेव पर्यायेण गृह्णाति । न तु युगपदुभयम् । अन्योन्यनिरपेक्षवाक्यद्वयेन विधानात् । अत एव न मिश्रत्वमपि । तस्माद्विकल्पः । तदाह **सूत्रे, समुच्चये गुणानुरोधेन प्रधानस्यावृत्तिः स्यात्** । अत **एकार्था व्रीहयो विकल्पेरन्निति** ।
यद्यप्यत्र विकल्पस्थलेऽन्योपकारार्थं कृतेनान्यस्योपकारसिद्धिरूपप्रसङ्गो नास्ति । तथाप्यन्येन कार्यसिद्धेरन्यस्य निवृत्तिरित्येतावतैव साम्येनात्र निवेश इत्याहुः ।

इति चतुर्थं प्रयोजनैक्ये गुणानां विकल्पाधिकरणम् (सूत्राणि १०-१५)

*ಅಂತಸ್ಥತ್ವಾಧಿಕರಣ*

ಬೇರೆ ಬೇರೆ ಪ್ರಯೋಜನಕ್ಕೋಸ್ಕರ ವಾಕ್ಯಗಳು ವಿಹಿತವಾಗಿದ್ದರೆ ವಿಕಲ್ಪವು ಅನಾವಶ್ಯಕ. ಪ್ರಕೃತ ಯಾಗನಿಷ್ಪತ್ತಿಯೆಂಬ ಒಂದೇ ಪ್ರಯೋಜನಕ್ಕೋಸ್ಕರ ಯವ ಹಾಗು ವ್ರೀಹಿ ಎಂಬ ಎರಡು ಪದಾರ್ಥಗಳು ವಿಹಿತವಾಗಿವೆ. ಅನ್ಯೋನ್ಯನಿರಪೇಕ್ಷವೂ ಆಗಿದೆ. ಆದ್ದರಿಂದ ವ್ರೀಹಿಯಿಂದಲೂ ಹೋಮಿಸಬಹುದು. ಯವದಿಂದಲೂ ಹೋಮಿಸಬಹುದೆಂಬ ವಿಕಲ್ಪವು ತಪ್ಪಾಗುವುದಿಲ್ಲ.

ಹಾಗಾದರೆ ಜ್ಯೋತಿಷ್ಟೋಮ ಪ್ರಕರಣದಲ್ಲಿ 'ಐಂದ್ರವಾಯವಂ ಗೃಹ್ಣಾತಿ', 'ಮೈತ್ರಾವರುಣಂ ಗೃಹ್ಣಾತಿ' ಎಂದು ಅಭ್ಯಾಸವನ್ನು ಹೇಳಿದ್ದಾರಲ್ಲ? ಎಂದರೆ ಜ್ಯೋತಿಷ್ಟೋಮ ಪ್ರಕರಣಕ್ಕೂ 'ವ್ರೀಹಿಯವ' ಪ್ರಕರಣಕ್ಕೂ ಬಹಳಷ್ಟು ವ್ಯತ್ಯಾಸವಿದೆ. ಜ್ಯೋತಿಷ್ಟೋಮ ಪ್ರಕರಣದಲ್ಲಿ 'ಐಂದ್ರವಾಯವಂ ಗೃಹ್ಣಾತಿ' ಎಂದು ಮಿತ್ರಾವರುಣಾದಿದೇವತೆಗಳ ಸಂಬಂಧವನ್ನು ಸೋಮಂ ಗೃಹ್ಣಾತಿ ಎಂದು ಸೋಮದ್ರವ್ಯದ ಸಂಬಂಧವನ್ನು ಹೇಳಲಾಗಿದೆ. ಇದನ್ನು ಹೇಳಿದ್ದು ಕೇವಲ ಅದೃಷ್ಟ ಪ್ರಯೋಜನಕ್ಕೋಸ್ಕರ. ಹೀಗೆ ದ್ರವ್ಯ ಹಾಗು ದೇವತೆಗಳನ್ನು ಪ್ರತ್ಯೇಕವಾಗಿ ಹೇಳಿದ್ದರಿಂದ ಇದು ಹೊಸ ಯಾಗವೆಂದು ತಿಳಿಯುತ್ತದೆ. ವಾಯವಂ ಎಂಬಲ್ಲಿ ತದ್ಧಿತಪ್ರತ್ಯಯವಿರುವುದರಿಂದ ದ್ರವ್ಯಕ್ಕೂ ದೇವತೆಗೂ ಪರಸ್ಪರ ಸಂಬಂಧವು ತಿಳಿಯುತ್ತದೆ. ದೃಷ್ಟ ಪ್ರಯೋಜನಕ್ಕೋಸ್ಕರ ಈ ಸಂಬಂಧವನ್ನು ಹೇಳುವ ಅವಶ್ಯಕತೆಯಿಲ್ಲ.

ಹೀಗೆ ಅದೃಷ್ಟಪ್ರಯೋಜನಕ್ಕಾಗಿ ಹೇಳಿರುವ 'ಐಂದ್ರವಾಯವಂ ಗೃಹ್ಣಾತಿ' 'ಮೈತ್ರಾವರುಣಂ ಗೃಹ್ಣಾತಿ' ಎಂಬ ಎರಡು ವಾಕ್ಯಗಳನ್ನು ಏಕಕಾಲದಲ್ಲಿಯೂ ಉಚ್ಚರಿಸಬಹುದು. ಇದೇ ವಾಕ್ಯವನ್ನು ಮೊದಲು ಹೇಳಬೇಕೆಂಬ ನಿಯಮವಿಲ್ಲದ ಕಾರಣ ಅಭ್ಯಾಸವನ್ನು ಕಲ್ಪಿಸಬಹುದು. ಆದರೆ ಪ್ರಕೃತ ವ್ರೀಹಿ ಹಾಗೂ ಯವಗಳನ್ನು ಅದೃಷ್ಟಕ್ಕೋಸ್ಕರ ಹೇಳಿಲ್ಲ; ಕೇವಲ ಯಜ್ಞದಲ್ಲಿ ಉಪಯೋಗಿಸುವ ಪುರೋಡಾಶದ್ರವ್ಯದ ನಿಷ್ಪತ್ತಿಗಾಗಿ ಹೇಳಿದ್ದಾರೆ.

'ವ್ರೀಹಿಭಿರ್ಯಜೇತ' ಎಂದರೆ ವ್ರೀಹಿ ಎಂಬ ಉಪಾದಾನಕಾರಣದಿಂದ ಪುರೋಡಾಶದ್ರವ್ಯವನ್ನು ನಿರ್ಮಾಣ ಮಾಡಿ ಯಾಗವನ್ನು ಮಾಡಬೇಕೆಂದರ್ಥ. 'ಯವೈರ್ಯಜೇತ' ಎಂದರೆ ಯವದಿಂದ ಪುರೋಡಾಶ ಮಾಡಿ ಯಾಗವನ್ನು ಮಾಡಬೇಕೆಂದರ್ಥ. ಹೀಗೆ ಎರಡೂ ವಾಕ್ಯಗಳು ಪುರೋಡಾಶದ್ರವ್ಯದ ನಿಷ್ಪತ್ತಿ ಎಂಬ ದೃಷ್ಟ ಪ್ರಯೋಜನವನ್ನೇ ಹೇಳುತ್ತಿರುವಾಗ ಏಕಕಾಲದಲ್ಲಿ ಎರಡನ್ನು ಹೇಳಲಾಗದು. ಎರಡೂ ಪ್ರಯೋಜನಗಳನ್ನು ಪರ್ಯಾಯವಾಗಿ ಗ್ರಹಿಸಬೇಕೇ ಹೊರತು ಒಟ್ಟಿಗೆ ಸ್ವೀಕರಿಸಲು ಸಾಧ್ಯವಿಲ್ಲ. ಯವ ಗ್ರಹಣವಾಗಿದ್ದಲ್ಲಿ ಯಜ್ಞದ ಆವೃತ್ತಿಯನ್ನು ಕಲ್ಪಿಸಿ ಸಮುಚ್ಚಯಪಕ್ಷವನ್ನು ಸ್ಥಾಪಿಸಬಹುದಿತ್ತು. ಆದರೆ ಕ್ರಮವಾಗಿ ದ್ರವ್ಯವನ್ನು ವಿಧಿಸಿದ್ದರಿಂದ ವಿಕಲ್ಪವನ್ನು ಆಶ್ರಯಿಸಬೇಕು. ಮತ್ತು ಎರಡೂ ದ್ರವ್ಯಗಳನ್ನು ಮಿಶ್ರಣ ಮಾಡಿ ಹೋಮಿಸಬೇಕೆಂಬ ಕಲ್ಪನೆಯೂ ಸಹ ಅಸಮಂಜಸವಾಗಿದೆ. ಒಂದು ವೇಳೆ ಎರಡೂ ದ್ರವ್ಯಗಳು ಸಾಪೇಕ್ಷಿತವಾಗಿದ್ದಲ್ಲಿ ಹಾಗೆ ಶಂಕಿಸಬಹುದು. ಶ್ರುತಿಯು ನಿರಪೇಕ್ಷಿತವಾಗಿ ವಿಧಿಸುತ್ತಿರುವುದರಿಂದ ಅತ್ಯವಶ್ಯವಾಗಿ ವಿಕಲ್ಪವನ್ನೇ ಆಶ್ರಯಿಸಬೇಕು.

ಒಟ್ಟು ಇಷ್ಟು ಅಭಿಪ್ರಾಯ - ಒಂದು ವೇಳೆ ಶ್ರುತಿ ಹಾಗೂ ಲಿಂಗಗಳಿಗೆ ವಿರೋಧ ಬಂದಾಗ ಒಂದಕ್ಕೆ ಬಾಧವನ್ನು ಹೇಳದೆ ಎರಡನ್ನು ಹೊಂದಿಸಬೇಕೆಂಬ ವಾದ ಮಾಡಿದರೆ, ಆಕಾಶ ಹಾಗೂ ಬ್ರಹ್ಮರಲ್ಲಿರುವ ಆಕಾಶತ್ವ ಮತ್ತು ಬ್ರಹ್ಮತ್ವಧರ್ಮವನ್ನು ತ್ಯಾಗಮಾಡಿ ಆಕಾಶಬ್ರಹ್ಮರಿಗೆ ಅಭೇದವನ್ನು ಹೇಳಬೇಕಾಗುತ್ತದೆ.

ಮತ್ತು ಅಷ್ಟೇ ಅಲ್ಲದೆ ಮಂತ್ರಬ್ರಾಹ್ಮಣಗಳಿಗೆ ಮತ್ತು ಲಿಂಗಶ್ರುತಿಗಳಿಗೆ ಅನುಗ್ರಹ ಮಾಡುವುದಕ್ಕೋಸ್ಕರ ಇಂದ್ರ ಮತ್ತು ಗಾರ್ಹಪತ್ಯದಲ್ಲಿರುವ ಇಂದ್ರತ್ವ ಮತ್ತು ಗಾರ್ಹಪತ್ಯ ಧರ್ಮಗಳನ್ನು ಬಿಟ್ಟು ಸ್ವರೂಪತಃ ಐಕ್ಯವನ್ನು ಹೇಳಬೇಕಾಗುತ್ತದೆ. ಹೊರತು ಲಿಂಗದಿಂದ ಶ್ರುತಿಬಾಧವನ್ನು ಹೇಳುವುದಾಗಲಿ ಶ್ರುತಿಯಿಂದ ಲಿಂಗಕ್ಕೆ ಬಾಧ ಹೇಳುವುದಾಗಲಿ ತಪ್ಪಾಗುತ್ತದೆ.

ಈಗ ತಾನೇ ಉದಾಹರಿಸಿದ ಪೂರ್ವಮೀಮಾಂಸೆಯ ದೃಷ್ಟಾಂತದಂತೆ ಒಂದುವೇಳೆ ಎರಡು ಶಾಸ್ತ್ರಗಳಿಗೆ ವಿರೋಧ ಬರಬಾರದೆಂದು ಅಭೇದ ಹೇಳಿದರೆ ಆವಾಗ ವ್ರೀಹಿ ಹಾಗು ಯವಗಳ ಸ್ವೀಕರಿಸುವಿಕೆ ಹಾಗು ಸ್ವೀಕರಿಸದೇ ಇರುವಿಕೆ (ಗ್ರಹಣ ಮತ್ತು ಅಗ್ರಹಣಗಳಿಗೆ) ವಿರೋಧ ಬರಬಾರದೆಂದು ವ್ರೀಹಿತ್ವ ಹಾಗೂ ಯವತ್ವ ಧರ್ಮಗಳನ್ನು ತ್ಯಾಗ ಮಾಡಿ ಎರಡಕ್ಕೂ ಐಕ್ಯವನ್ನು ಹೇಳಬೇಕಾದೀತು. ಪೂರ್ವಮೀಮಾಂಸೆಯಲ್ಲಿ ವಿಕಲ್ಪವನ್ನು ಆಶ್ರಯಿಸಿ ಸ್ಥಾಪಿಸಿದ ಸಿದ್ಧಾಂತವು ತಪ್ಪಾದೀತು. ವ್ರೀಹಿ ಯವಗಳಿಗೆ ಐಕ್ಯವನ್ನು ಒಪ್ಪಿದ ಮೇಲೆ ಪುನಃ ವಿಕಲ್ಪವನ್ನು ಏಕೆ ಆಶ್ರಯಿಸಬೇಕು? ನಿಮ್ಮ ಪ್ರಕಾರ ಪೂರ್ವಮೀಮಾಂಸಕರ ನಿಲುವೇ ತಲಕೆಳಗಾದೀತು.

'ಸ ಬ್ರಹ್ಮ' ಇತ್ಯಾದಿ ಶ್ರುತಿಗಳಿಗೆ ವಿರೋಧ ಬರಬಾರದೆಂದು ವಿಷ್ಣು ಇಂದ್ರ ಮೊದಲಾದವರಿಗೆ ಅಭೇದವನ್ನು ಒಪ್ಪಬೇಕೆಂಬ ಎರಡನೆಯ ಪಕ್ಷವನ್ನು 'ಸ ಬ್ರಹ್ಮ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. 'ಅಹಂ ಭವಃ' ಎಂಬ ಶ್ಲೋಕದಲ್ಲಿ ಭೂತಾದಿ ಸಮಸ್ತಪದಾರ್ಥಗಳನ್ನು ಭಗವಂತನ ಸ್ವರೂಪವೆಂದು ಹೇಳಲಾಗಿದೆ. ಭಗವಂತನ ಅಧೀನವಾದ್ದರಿಂದಷ್ಟೇ ಹಾಗೆ ಹೇಳಿದ್ದಾರೆ ಹೊರತು ಭೂತಾದಿಗಳಿಗೂ ಮತ್ತು ಭಗವಂತನಿಗೂ ಅಭೇದವಿದೆಯೆಂಬ ಅಭಿಪ್ರಾಯದಿಂದಲ್ಲ.

ಇಲ್ಲಿಯ ತನಕ ಅವಧಾರಣಪೂರ್ವಪಕ್ಷವನ್ನು ಮತ್ತು ಅಭೇದಪೂರ್ವಪಕ್ಷವನ್ನು ನಿರಾಕರಿಸಿದ್ದಾಯಿತು. ಈಗ ಇಂದ್ರಾದಿದೇವತೆಗಳ ಮಧ್ಯದಲ್ಲಿ ಯಾರಾದರೂ ಒಬ್ಬರು ಅಂತಸ್ಥರಾಗಬಹುದೆಂಬ ಎರಡನೆಯ ಅನವಧಾರಣಪೂರ್ವಪಕ್ಷವನ್ನು 'ಇಂದ್ರಾದೀನಾಂ' ಎಂಬ ಪೂರ್ವಪಕ್ಷದಿಂದ ನಿರಾಕರಿಸುತ್ತಿದ್ದಾರೆ. ''ಅರ್ಥೈಕತ್ವಾದೇಕಂ ವಾಕ್ಯಂ ಸಾಕಾಂಕ್ಷಂ ಚೇದ್ವಿಭಾಗೇ ಸ್ಯಾತ್'' ಎಂಬ ಸೂತ್ರದಲ್ಲಿ ಜೈಮಿನಿ ಋಷಿಗಳು ಏಕವಾಕ್ಯತ್ವವು ಅರ್ಥೈಕ್ಯವನ್ನೇ ಪ್ರಯೋಜನವಾಗಿವುಳ್ಳದೆಂದು ಹೇಳಿದ್ದಾರೆ. ಅದನ್ನೇ ಗ್ರಂಥಕಾರರ ಅರ್ಥೈಕ್ಯವಿಲ್ಲದ ಕಾರಣ ವಾಕ್ಯಭೇದವನ್ನು ಆಶಂಕಿಸಿದ್ದಾರೆ.

ಶಂಕೆ - ೧) ಅವಧಾರಣಪೂರ್ವಪಕ್ಷ ೨) ಅನವಧಾರಣಪೂರ್ವಪಕ್ಷ ೩) ಅಭೇದಪೂರ್ವಪಕ್ಷ ಈ ಕ್ರಮದಲ್ಲಿ ಪೂರ್ವಪಕ್ಷವನ್ನು ರಚಿಸಲಾಗಿತ್ತು. ಈ ಕ್ರಮದಲ್ಲಿಯೇ ಸಿದ್ಧಾಂತವನ್ನು ಸ್ಥಾಪಿಸಬೇಕು. ಆದರೆ ಸಿದ್ಧಾಂತ ಮಾಡುವಾಗ - ೧) ಅಭೇದಪೂರ್ವಪಕ್ಷನಿರಾಕರಣೆ ೨) ಅವಧಾರಣಪೂರ್ವಪಕ್ಷನಿರಾಕರಣೆ ೩) ಅನವಧಾರಣಪೂರ್ವಪಕ್ಷನಿರಾಕರಣೆ ಎಂಬ ಕ್ರಮವನ್ನು ಅನುಸರಿಸಿದ್ದಾರೆ. ಇದು ತಪ್ಪಲ್ಲವೆ?

ಸಮಾಧಾನ - ವಸ್ತುತಸ್ತು ನೀವು ಹೇಳಿದಂತೆ ಪೂರ್ವಪಕ್ಷದ ಕ್ರಮದಲ್ಲಿಯೇ ಸಿದ್ಧಾಂತವನ್ನು ಸ್ಥಾಪಿಸಬೇಕು. ಆದರೂ ಸಹ ಬುದ್ಧಿಯ ಅನುಕೂಲಕ್ಕೋಸ್ಕರ ಗ್ರಂಥಕಾರರು ಕ್ರಮವನ್ನು ವ್ಯತ್ಯಾಸ ಮಾಡಿದ್ದಾರೆ. ನಿರವಕಾಶಲಿಂಗದಿಂದ ವಿಷ್ಣುವೇ ಅಂತಸ್ಥನಾಗುತ್ತಾನೆಂದು ಹೇಳಿದಾಗ ಉಭಯ ಅನುಗ್ರಹಕ್ಕಾಗಿ ಅಭೇದವನ್ನೇ ಹೇಳೋಣವೆಂಬ ಪ್ರಶ್ನೆಯು ಮೊದಲೇ ಬರುತ್ತದೆ. ಇದಕ್ಕೆ ಉತ್ತರಿಸುವುದಕ್ಕಾಗಿ ಅಭೇದ ಪೂರ್ವಪಕ್ಷವನ್ನು ಮೊದಲು ನಿರಾಕರಿಸಿದ್ದಾರೆ. ಅನಿರ್ಧಾರಿತವಾಗಿ ಯಾರು ಬೇಕಾದರೂ

ಅಂತಸ್ಥರಾಗಬಹುದೆಂಬ ಪಕ್ಷದಲ್ಲಿ ವಾಕ್ಯಭೇದಾದಿದೋಷಗಳು ಬಹಳ ಸ್ಪಷ್ಟ ಮತ್ತು ಸುಲಭ. ಆದ್ದರಿಂದ ಅನಿರ್ಧಾರಿತ ಪಕ್ಷವನ್ನು ಕೊನೆಯಲ್ಲಿ ನಿರಾಕರಿಸಿದ್ದಾರೆ. ಹೀಗೆ ಪರಸ್ಪರ ಸಂಗತಿ ಇರುವ ಕಾರಣ ಸಿದ್ಧಾಂತದಲ್ಲಿ ಅನುಸರಿಸಿದ ಕ್ರಮವು ಸಮಂಜಸವೇ ಆಗಿದೆ.

ಶಂಕೆ - ಹಾಗಾದರೆ ಅಭೇದಪೂರ್ವಪಕ್ಷವನ್ನು ದೂಷಣೆ ಮಾಡಿದ್ದರಿಂದ ಮತ್ತು ಇಂದ್ರಾದಿಪ್ರಾಪಕವಾದ ಶ್ರುತಿಲಿಂಗಾದಿಗಳಿಗೆ ಬಲಾಬಲವನ್ನು ನಿಶ್ಚಿಯಿಸಲಾಗದ ಕಾರಣ ಏಕವಾಕ್ಯತ್ವವನ್ನು ಹೇಗೆ ನಿಶ್ಚಯಿಸುತ್ತೀರಿ?

ಸಮಾಧಾನ - ವಸ್ತುತಃ ಕೆಲವು ಶ್ರುತಿಗಳು ಇಂದ್ರಾದಿಗಳನ್ನು ಇನ್ನು ಕೆಲವು ವಿಷ್ಣುವನ್ನು ಪ್ರತಿಪಾದಿಸುತ್ತವೆಂದು ನಾವು ಹೇಳಿದ್ದರೆ ಏಕವಾಕ್ಯತ್ವಕ್ಕೆ ಭಂಗ ಬರುತ್ತಿತ್ತು. ಆದರೆ ಸಕಲ ಶ್ರುತಿಸ್ಮೃತಿಗಳು ವಿಷ್ಣು ಒಬ್ಬನನ್ನೇ ಪ್ರತಿಪಾದಿಸುತ್ತವೆಂದು ಹೇಳುವುದರಿಂದ ಏಕವಾಕ್ಯತ್ವಕ್ಕೆ ಭಂಗವಿಲ್ಲ. ಅಗ್ನಿ ಇಂದ್ರ ಮೊದಲಾದ ಶ್ರುತಿಗಳು ಆಪಾತತಃ ಅಗ್ನಿ ಮೊದಲಾವುಗಳನ್ನು ಪ್ರತಿಪಾದಿಸುವಂತೆ ಕಂಡರೂ ನಿರವಕಾಶವಾದ ವಿಷ್ಣುಲಿಂಗಗಳಿಂದ ವಿಷ್ಣು ಒಬ್ಬನನ್ನೇ ಹೃದಯದಿಂದ ಹೊಗಳುತ್ತವೆ. ಅಗ್ನಿಶ್ರುತಿಯು ''ನಾನು ಅಗ್ನಿಯನ್ನೇ ಪ್ರತಿಪಾದಿಸುತ್ತೇನೆ'' ಎನ್ನುತ್ತದೆ. ಇಂದ್ರಶ್ರುತಿಯು ''ನಾನು ಇಂದ್ರನನ್ನೇ ಪ್ರತಿಪಾದಿಸುತ್ತೇನೆ'' ಎನ್ನುತ್ತದೆ ಹೀಗೆ ಶ್ರುತಿಗಳಿಗೆ ಬರುವ ಪರಸ್ಪರ ಜಗಳವನ್ನು ಯಾರು ತಾನೇ ಪರಿಹರಿಸುತ್ತಾರೆ. ಯಾರಿಂದಲೂ ಪರಿಹರಿಸಲು ಸಾಧ್ಯವಿಲ್ಲ. ಅದಕ್ಕೋಸ್ಕರ ಅನಿವಾರ್ಯವಾಗಿ ಎಲ್ಲಾ ಶ್ರುತಿಗಳು ಏಕಕಂಠದಿಂದ ವಿಷ್ಣುವನ್ನೇ ಪ್ರತಿಪಾದಿಸುತ್ತವೆಂದು ಹೇಳಬೇಕು.

ಶಂಕೆ - ಒಂದು ವೇಳೆ ಇಂದ್ರಾದಿಶಬ್ದಗಳಿಂದ ಮುಖ್ಯವಾಗಿ ಭಗವಂತನೇ ಪ್ರತಿಪಾದ್ಯನಾದರೆ ಆವಾಗ ''ಇಂದ್ರಸ್ಯಾತ್ಮಾ ನಿಹಿತಃ ಪಂಚಹೋತಾ'' ಎಂಬ ಶ್ರುತಿಯು ಇಂದ್ರನಿಗೂ ವಿಷ್ಣುವಿಗೂ ಭೇದವನ್ನು ಹೇಳದಿರಬೇಕಾದೀತು. ಆತ್ಮಶಬ್ದವು ಇಂದ್ರನ ಅಂತರ್ಯಾಮಿಯಾಗಿ ವಿಷ್ಣುವನ್ನು ಹೇಳುತ್ತಿದೆ. ಆದ್ದರಿಂದ ಅಧಿಷ್ಠಾನನಾದ ಇಂದ್ರನಿಗೂ ಅಂತರ್ಯಾಮಿಯಾದ ವಿಷ್ಣುವಿಗೂ ಭೇದವು ಸಿದ್ಧವಾಗುತ್ತದೆಂದು ಭೇದವ್ಯಪದೇಶಸೂತ್ರದಲ್ಲಿ ಈ ಶ್ರುತಿಯನ್ನು ಉಲ್ಲೇಖಿಸಿದ್ದಾರೆ. ಅದು ತಪ್ಪಾದೀತಲ್ಲವೇ?

ಸಮಾಧಾನ - ಈ ಶಂಕೆಗೆ ಇಂದ್ರಾಗ್ನ್ಯಾದಿ ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಪ್ರತಿಯೊಂದು ಶಬ್ದಗಳಿಂದ ಮುಖ್ಯವಾಗಿ ವಿಷ್ಣುವೇ ಪ್ರತಿಪಾದ್ಯನಾಗಿದ್ದರೂ ಬಾಧವಿದ್ದಾಗ ಕೆಲವೊಮ್ಮೆ ದೇವತಾಪರತ್ವವನ್ನು ಅಂಗೀಕರಿಸಬೇಕಾಗುತ್ತದೆ. ಪ್ರಕೃತ ''ಇಂದ್ರಸ್ಯಾತ್ಮಾ'' ಎಂಬ ಶ್ರುತಿಯಲ್ಲಿ ಅಂತರ್ಯಾಮಿವಿಷಯಕವಾದ ಆತ್ಮಶಬ್ದವಿರುವುದರಿಂದ ಇಂದ್ರ ಪದಕ್ಕೆ ಪುರಂದರ ಎಂಬರ್ಥವನ್ನೇ ಹೇಳಬೇಕು.

ಶಂಕೆ - ಹಾಗಾದರೆ ಸಕಲ ಶಬ್ದಗಳು ವಿಷ್ಣು ಪರವೇ ಆದರೆ ಸೂರ್ಯಾದಿಶಬ್ದಗಳಿಗೆಲ್ಲಾ ವಿಷ್ಣುವೆಂದೇ ಅರ್ಥವಾಯಿತು. ಆವಾಗ ಏಕಚಕ್ರತ್ವಾದಿ ಸೂರ್ಯಾದಿ ಲಿಂಗಗಳನ್ನು ಅಪ್ರಮಾಣವೆಂದೂ ಹೇಳಲಾಗದು. ಪರಮಪ್ರಮಾಣವಾದ ವೇದಾದಿಗಳಲ್ಲಿಯೇ ಸೂರ್ಯಾದಿಲಿಂಗಗಳು ಹೇಳಲ್ಪಟ್ಟಿವೆ.

ಸಮಾಧಾನ - ಈ ಶಂಕೆಗೆ 'ಪಾದಾಂತ್ಯ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಪಾದಾಂತ್ಯ ಪ್ರಾಣಾಧಿಕರಣದಲ್ಲಿ ಸೂರ್ಯಾದಿಲಿಂಗಗಳೂ ಸಹ ಅಂತರ್ಯಾಮಿಯಾದ ಭಗವಂತನಲ್ಲಿಯೇ ಮುಖ್ಯವಾಗಿವೆ ಎಂದು ಸಮರ್ಥಿಸಲಾಗಿದೆ. ಹೆಚ್ಚಿನ ವಿಚಾರವನ್ನು ಅಲ್ಲಿಯೇ ತಿಳಿಯಬೇಕು.

*ಪರಿಪೂರ್ಣಚಂದ್ರಿಕಾ*

ಶಂಕೆ - ಪಾದಾಂತ್ಯಪ್ರಾಣಾಧಿಕರಣದಲ್ಲೇ ಸೂರ್ಯಾದಿಲಿಂಗಗಳೆಲ್ಲವೂ ವಿಷ್ಣುಪರವೆಂದು ನಿರ್ಣಯವಾಗುವಾಗ ಅದೇ ವಿಷಯವನ್ನು ಈ ಅಧಿಕರಣದಲ್ಲಿ ಹೇಳಿದರೆ ಪುನರುಕ್ತಿ ಬರುತ್ತದಲ್ಲವೇ?

ಸಮಾಧಾನ - ಹಾಗೇನಿಲ್ಲ. ಇಂದ್ರಾದಿಗಳಲ್ಲಿ ನಿರವಕಾಶಶ್ರುತಿಯಿರುವುದರಿಂದ ಅಂತರ್ಯಾಮಿಪರವಾಗುವುದಿಲ್ಲ ಎಂದು ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡಲಾಗಿದೆ. ಆದರೆ ಪಾದಾಂತ್ಯಪ್ರಾಣಾಧಿಕರಣದಲ್ಲಿ ನಿರವಕಾಶಲಿಂಗಗಳಿರುವುದರಿಂದ ಅಂತರ್ಯಾಮಿಪರವಾಗುವುದಿಲ್ಲವೆಂದು ಪೂರ್ವಪಕ್ಷ ಮಾಡಲಾಗಿದೆ. ಹೀಗೆ ಅಧಿಕರಣದ ಪೂರ್ವಪಕ್ಷಗಳಲ್ಲಿ ವ್ಯತ್ಯಾಸವಿರುವುದರಿಂದ ಅದಕ್ಕೆ ಅನುಗುಣವಾದ ಸಿದ್ಧಾಂತವನ್ನು ಸ್ಥಾಪಿಸಬೇಕು. ಹಾಗಾಗಿ ಪುನರುಕ್ತಿಗೆ ಅವಕಾಶವಿಲ್ಲ.

ಅಥವಾ ಪಾದಾಂತ್ಯಪ್ರಾಣಾಧಿಕರಣದಲ್ಲಿ ಬಾಧಕಗಳಿರುವುದರಿಂದ ಅಂತರ್ಯಾಮಿಗತತ್ವವನ್ನು ಅಂಗೀಕರಿಸಿದರೂ ಇಲ್ಲಿ ಅಂಗೀಕರಿಸಬೇಕಿಲ್ಲ ಎಂದರೆ ಇಂದ್ರಾದಿಶಬ್ದಗಳು ಇಂದ್ರಾದಿಗಳನ್ನು ಪ್ರತಿಪಾದಿಸಲು ಯಾವ ಬಾಧಕಗಳೂ ಕಾಣಿಸುತ್ತಿಲ್ಲ. ನಿರೂಢವಾದ ಶ್ರುತಿಯು ಇದಕ್ಕೆ ಆಧಾರವಾಗಿದೆ.

ಮತ್ತು ಇಂದ್ರಶ್ರುತಿಯು ಇಂದ್ರನನ್ನು ಪ್ರತಿಪಾದಿಸಿದರೂ ಇಂದ್ರ ವಿಷ್ಣು ಮೊದಲಾದವರಿಗೆ ಅಭೇದವನ್ನು ಒಪ್ಪಿದಾಗ ಯಾವ ಸಮಸ್ಯೆಯೂ ಕಾಣಿಸುವುದಿಲ್ಲ. ಆದ್ದರಿಂದ ಅಧಿಕರಣದ ಪೂರ್ವಪಕ್ಷಿಯು ಶಂಕಿಸುತ್ತಾನೆ. ಆದ್ದರಿಂದ ಪಾದಾಂತ್ಯಪ್ರಾಣಾಧಿಕರಣದ ಪೂರ್ವಪಕ್ಷಕ್ಕೂ ಅಂತಸ್ಥತ್ವಾಧಿಕರಣದ ಪೂರ್ವಪಕ್ಷಕ್ಕೂ ವೈಲಕ್ಷಣ್ಯವಿರುವುದರಿಂದ ಗತಾರ್ಥತ್ವದೋಷವು ಬರುವುದಿಲ್ಲ.




ಇಂದ್ರಾದಿ ಶ್ರುತಿ ಮತ್ತು ವಿಷ್ಣುವಿನ ಲಿಂಗ ಇವುಗಳ ಸಮನ್ವಯಕ್ಕೋಸ್ಕರ ವಿಷ್ಣುವಿಗೆ ಇಂದ್ರಾದಿ ದೇವತೆಗಳಿಂದ ಐಕ್ಯವನ್ನು ಒಂದು ವೇಳೆ ಹೇಳುವುದಾದರೆ. 'ಆಕಾಶಾದೇವ ಸಮುತ್ಪದ್ಯಂತೇ'' 'ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ' ಇತ್ಯಾದಿ ಶ್ರುತಿಗಳಲ್ಲಿಯೂ ಅಲ್ಲಿರುವ ಶ್ರುತಿ ಲಿಂಗಗಳ ಸಮನ್ವಯಕ್ಕೋಸ್ಕರ ಮೀಮಾಂಸಾಶಾಸ್ತ್ರದ ಮರ್ಯಾದೆಯನ್ನು ಮೀರಿ ಬೇರೇನನ್ನೋ ಹೇಳಬೇಕಾಗುತ್ತದೆ.

ಹಾಗೆಯೇ 'ಸ ಬ್ರಹ್ಮ ಸ ಶಿವಃ' ಇತ್ಯಾದಿ ಐಕ್ಯವನ್ನು ಹೇಳುವಂತೆ ತೋರುವ ಶ್ರುತಿಗಳಿಗೂ ಆಯಾ ಶಬ್ದವಾಚ್ಯತ್ವವನ್ನೇ ಹೇಳಬೇಕು. ಇಲ್ಲದಿದ್ದರೆ 'ಸೋಽಕ್ಷರಃ' ಎಂದು ಮುಂದಿನ ಭಾಗದಲ್ಲಿ ಪ್ರಸಿದ್ಧವಾದ ಜಡವಾದ ಅಕ್ಷರಗಳೊಂದಿಗೆ ವಿಷ್ಣುವಿಗೆ ಐಕ್ಯವನ್ನು ಹೇಳಬೇಕಾದೀತು. ಐಕ್ಯವನ್ನು ಹೇಳುವಂತೆ ತೋರುವ ಸ್ಮೃತಿಗಳಿಗೂ, ಅವನ ಆಧೀನತ್ವ ನಿಮಿತ್ತವಾಗಿ ಅಥವಾ ಅತ್ಯಂತ ಪ್ರಿಯ ಎನ್ನುವ ಅರ್ಥದಲ್ಲಿ ಹಾಗೆ ಹೇಳುತ್ತವೆ ಎಂದು ಅರ್ಥೈಸಬೇಕು.

ಹೀಗೆ ಇಂದ್ರ ಮುಂತಾದ ಶಬ್ದಗಳು ವಿಷ್ಣುವಿನಲ್ಲಿ ಮುಖ್ಯವಾಗಿದ್ದರೂ ಬಾಧಕವಿದ್ದಾಗ ಆಯಾ ದೇವತೆಗಳನ್ನು ಹೇಳುತ್ತವೆ ಎಂದಿಟ್ಟುಕೊಳ್ಳಬಹುದು. ಲಿಂಗಗಳನ್ನು ಪಾದಾಂತ್ಯ ಪ್ರಾಣಾಧಿಕರಣ ನ್ಯಾಯದಂತೆ ಅಂತರ್ಯಾಮಿ ಪರವಾಗಿ ಅರ್ಥೈಸಿದಾಗ ವಿಷ್ಣುವಿನಲ್ಲೇ ಮುಖ್ಯವಾಗುತ್ತವೆ. ಹಾಗಾಗಿ ಮೂರು ರೀತಿಯ ಪೂರ್ವಪಕ್ಷವೂ ಅನುಚಿತ.

---

ಅಂತಸ್ಥತ್ವಾಧಿಕರಣ

'ಭೇದವ್ಯಪದೇಶಾತ್' ಎಂಬ ಸೂತ್ರಾಶಯದ ನಿರೂಪಣೆ

**तात्पर्यचन्द्रिका**

**तत्राद्यद्वितीयौ प्रथमसूत्रेण निरस्तौ, तृतीयस्तु द्वितीयेनेति द्रष्टव्यम् ।**

**नच "इन्द्रस्यात्मा" इत्यादावात्मशब्दः स्वरूपपरः । तथा च सूत्रोक्तो भेदव्यपदेशोऽसिद्ध इति शङ्क्यम्, "सहैव सन्तं न विजानन्ति देवाः" इति साहित्यकर्मकर्तृभावादिना भेदव्यपदेशात् । षष्ठ्या औपचारिकत्वापाताच्च । इन्द्रादिशब्दवाच्ये उपहिते परमात्माभेदस्य परेणाप्यनङ्गीकृतत्वेनेन्द्रादिप्रातिपदिकेऽपि लक्षणापाताच्च ।**

**अत्रैव प्रकरणे "आत्मा जनानाम्" इत्यन्तर्यामिणि आत्मशब्दप्रयोगाच्च । नच तत्राप्यात्मशब्दस्स्वरूपपरः, अस्मिन्नेव प्रकरणे "शास्ता जनानाम्" इत्यस्यायोगात् । तत्रैव च प्रकरणे "सर्वात्मा" इति च अत्यन्तायुक्तं स्यात्, ज्ञानादिरूपस्य ब्रह्मणः तद्विरुद्धजडरूपतायाः केनाप्यनङ्गीकृतत्वात् ।**

**तस्मात् "इन्द्रस्यात्मा" इत्यादौ आत्मशब्दो न स्वरूपवाची, किन्तु शरीरप्रतिसम्बन्धिवाची, तत्र तस्य प्रयोगबाहुल्यात् । तथा च "इन्द्रस्यात्मा" इत्यादिश्रुतिः इन्द्रादेरीश्वरशरीरस्थानीयत्वाभिप्राया । "इन्द्रो राजा" इत्यादाविन्द्रशब्दस्य ब्रह्मपरत्वेऽपि "इन्द्रस्यात्मा" इत्यादौ अन्यपरता च बाधकबलाद्युक्ता ॥**

ಅನುವಾದ - ಮೂರುವಿಧ ಪೂರ್ವಪಕ್ಷಗಳ ಮಧ್ಯದಲ್ಲಿ ಮೊದಲೆರಡು ಪೂರ್ವಪಕ್ಷಗಳನ್ನು 'ಅಂತಸ್ತದ್ಧರ್ಮೋಪದೇಶಾತ್' ಎಂಬ ಮೊದಲನೆಯ ಸೂತ್ರದಿಂದ ನಿರಾಕರಿಸಿದ್ದಾರೆ. ಮೂರನೆಯ ಪೂರ್ವಪಕ್ಷವನ್ನು ಎರಡನೆಯ 'ಬೇಧವ್ಯಪದೇಶಾತ್' ಸೂತ್ರದಿಂದ ನಿರಾಕರಿಸಿದ್ದಾರೆಂದು ತಿಳಿಯಬೇಕು.

'ಇಂದ್ರಸ್ಯಾತ್ಮಾ' ಎಂಬ ಶ್ರುತಿಯಿಂದ ಭೇದವನ್ನು ಹೇಳಬೇಕಾಗಿಲ್ಲ. ಇಲ್ಲಿರುವ ಆತ್ಮಶಬ್ದಕ್ಕೆ ಅಂತರ್ಯಾಮಿ ಎಂಬರ್ಥವನ್ನಷ್ಟೇ ವಿವಕ್ಷಿಸಿದರೆ ಭೇದವನ್ನು ಹೇಳಿದಂತಾಗುತ್ತದೆ ಆದರೆ ಸ್ವರೂಪವೆಂಬರ್ಥವನ್ನು ಹೇಳುವುದರಿಂದ ಅಭೇದವನ್ನೇ ಹೇಳಬಹುದು. ಆದ್ದರಿಂದ ಸೂತ್ರದಲ್ಲಿ

ಹೇಳಲ್ಪಟ್ಟ ಭೇದವ್ಯಪದೇಶವು ಅಸಿದ್ಧವಲ್ಲವೇ? ಎಂದು ಶಂಕಿಸಬಾರದು. ಎಂದರೆ ''ಸಹೈವ ಸಂತಂ ನ ವಿಜಾನಂತಿ ದೇವಾಃ'' ಎಂದು ಅದೇ ಶ್ರುತಿ ಮುಂದೆ ಹೇಳುತ್ತಿದೆ. 'ಸಹೈವ ಸಂತಂ' ಎಂದು ಸಾಹಿತ್ಯವನ್ನು ದೇವತೆಗಳು ಅಂತಸ್ಥನನ್ನು ತಿಳಿಯುವುದಿಲ್ಲ ಎಂದು ಹೇಳಿದ್ದರಿಂದ ಅಂತಸ್ಥನಲ್ಲಿ ಪರಮತ್ವವನ್ನು ಹೇಳಿ 'ದೇವಾಃ' ಎಂದು ಕರ್ತೃತ್ವವನ್ನು ಶ್ರುತಿ ಹೇಳಿದೆ. ಅಭೇದವಿದ್ದರೆ ಸಾಹಿತ್ಯವನ್ನಾಗಲಿ ಅಂತಸ್ಥನನ್ನು ದೇವತೆಗಳು ತಿಳಿಯಲಾರರು ಎಂದು ಹೇಳಲಾಗದು. ಇದರಿಂದ ಶ್ರುತಿಯು ಭೇದವನ್ನೇ ಹೇಳಿದಂತಾಗುತ್ತದೆ. ಮತ್ತು 'ಇಂದ್ರಸ್ಯ' ಎಂಬಲ್ಲಿರುವ ಷಷ್ಠಿಗೆ ಔಪಚಾರಿಕವಾದ ಅರ್ಥವನ್ನು ಅಭೇದಪಕ್ಷದಲ್ಲಿ ಒಪ್ಪಬೇಕಾಗುತ್ತದೆ.

ಇಂದ್ರನಿಗೂ ವಿಷ್ಣುವಿಗೂ ಅಭೇದವನ್ನು ಹೇಳುವುದಾದರೆ ಇಂದ್ರಾದಿಶಬ್ದಗಳಿಗೆ ಲಕ್ಷಣಾ ಮಾಡಬೇಕಾಗುತ್ತದೆ. ಏಕೆಂದರೆ ಇಂದ್ರಾದಿಶಬ್ದಗಳಿಂದ ಮುಖ್ಯವಾಗಿ ವಾಚ್ಯನಾದವನು ಉಪಹಿತನಾದ ಪುರಂದರನು. ಈ ಉಪಹಿತನಾದ ಪುರಂದರನಿಗೂ ಪರಮಾತ್ಮನಿಗೂ ಅಭೇದವನ್ನು ಪರರೂ ಸಹ ಅಂಗೀಕರಿಸುವುದಿಲ್ಲ. ಆದ್ದರಿಂದ ಸಕಲಧರ್ಮವಿಶಿಷ್ಟನಾದ ಪುರಂದರನನ್ನು ಇಂದ್ರಶಬ್ದದಿಂದ ಪ್ರತಿಪಾದ್ಯನೆಂದು ಹೇಳದೆ ಶುದ್ಧಚೈತನ್ಯವನ್ನೇ ಪ್ರತಿಪಾದ್ಯನೆನ್ನಬೇಕು. ಹಾಗಾಗಿ ಲಕ್ಷಣಾ ಮಾಡಬೇಕಾಗುತ್ತದೆ.

ಅಷ್ಟೇ ಅಲ್ಲದೆ ಇದೇ ಪ್ರಕರಣದಲ್ಲಿಯೇ 'ಆತ್ಮಾ ಜನಾನಾಂ' ಎಂದು ಸಕಲ ಜನರಿಗೂ ಅಂತರ್ಯಾಮಿಯಾಗಿದ್ದಾನೆಂದು ಆತ್ಮಶಬ್ದವನ್ನು ಪ್ರಯೋಗಿಸಲಾಗಿದೆ. ಇಲ್ಲಿರುವ ಆತ್ಮಶಬ್ದಕ್ಕೆ ಸ್ವರೂಪೆಂಬರ್ಥವನ್ನು ಹೇಳಬಹುದಲ್ಲ? ಎಂದರೆ ಅದೇ ಪ್ರಕರಣದಲ್ಲಿ ''ಶಾಸ್ತಾ ಜನಾನಾಮ್'' ಎಂದು ಸಕಲ ಜನರನ್ನು ಶಾಸನ ಮಾಡುತ್ತಾನೆಂಬ ಮಾತಿದೆ. ಆತ್ಮಶಬ್ದವು ಸ್ವರೂಪ ಪರವಾದರೆ ಈ ಶಾಸನವು ಕೊಡುವುದಿಲ್ಲ. ಅಷ್ಟೇ ಅಲ್ಲದೆ ಇದೇ ಪ್ರಕರಣದಲ್ಲಿಯೇ 'ಸರ್ವಾತ್ಮಾ' ಎಂಬ ಮಾತು ಕೇಳಿಸುತ್ತಿದೆ. ಒಂದು ವೇಳೆ ಆತ್ಮಶಬ್ದಕ್ಕೆ ಅಭೇದವೆಂಬ ಅರ್ಥವನ್ನು ಹೇಳಿದರೆ. ಸಕಲಪದಾರ್ಥಗಳಿಂದ ಅಭೇದವನ್ನು ಹೇಳಬೇಕಾದೀತು. ಆದರೆ ಬ್ರಹ್ಮನು ಜ್ಞಾನಾದಿರೂಪನಾಗಿದ್ದಾನೆ. ತದ್‌ವಿರುದ್ಧವಾದ ಜಡರೂಪತ್ವವನ್ನು ಬ್ರಹ್ಮನಿಗೆ ಯಾರೂ ಒಪ್ಪುವುದಿಲ್ಲ. ಆದ್ದರಿಂದ ''ಇಂದ್ರಸ್ಯಾತ್ಮಾ'' ಎಂಬಲ್ಲಿರುವ ಆತ್ಮಶಬ್ದಕ್ಕೆ ಸ್ವರೂಪವೆಂಬರ್ಥವನ್ನು ಹೇಳಬಾರದು; ಹೊರತಾಗಿ ಶರೀರಕ್ಕೆ ಪ್ರತಿಸಂಬಂಧಿಯಾದ ಶರೀರಿ (ಅಂತರ್ಯಾಮಿ) ಎಂಬರ್ಥವನ್ನೇ ಹೇಳಬೇಕು. ಈ ವಿಷಯದಲ್ಲಿಯೇ ಬಹುಲಪ್ರಯೋಗವು ಕಾಣಿಸುತ್ತದೆ. ಆದ್ದರಿಂದ 'ಇಂದ್ರಸ್ಯಾತ್ಮಾ' ಎಂಬ ಶ್ರುತಿಯು ಇಂದ್ರಾದಿದೇವತೆಗಳು ವಿಷ್ಣುವಿಗೆ ಶರೀರದ ಸ್ಥಾನದಲ್ಲಿದ್ದಾರೆಂಬ ಅಭಿಪ್ರಾಯದಲ್ಲಿದೆ.

'ಇಂದ್ರೋ ರಾಜಾ' ಇತ್ಯಾದಿ ಶ್ರುತಿಯಲ್ಲಿ ಇಂದ್ರಶಬ್ದವು ಬ್ರಹ್ಮನನ್ನು ಹೇಳುತ್ತದೆ. ಆದರೆ 'ಇಂದ್ರಸ್ಯಾತ್ಮಾ' ಎಂಬ ಇಂದ್ರಶಬ್ದವು ಬಾಧಕವಶಾತ್ ಪುರಂದರನನ್ನೇ ಪ್ರತಿಪಾದಿಸುತ್ತದೆ.

## ಅಂತಸ್ಥತ್ವಾಧಿಕರಣ

**ಕಠಿಣಪದಾರ್ಥ -**

ತತ್ರ = ಮೂರುವಿಧ ಪೂರ್ವಪಕ್ಷಗಳ ಮಧ್ಯದಲ್ಲಿ, ಪ್ರಥಮಸೂತ್ರೇಣ = 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಿಂದ, ತೃತೀಯಸ್ತು = ಭೇದಪರವಾದ ಮೂರನೆಯ ಪೂರ್ವಪಕ್ಷ, ದ್ವಿತೀಯೇನ = 'ಭೇದವ್ಯಪದೇಶಾಚ್ಚಾನ್ಯಃ' ಎಂಬ ಎರಡನೆಯ ಸೂತ್ರದಿಂದ, ಆದ್ಯದ್ವಿತೀಯೌ = ಅವಧಾರಣ ಪೂರ್ವಪಕ್ಷ, ಹಾಗು ಅನವಧಾರಣಪೂರ್ವಪಕ್ಷವೆಂಬ ಮೊದಲೆರಡು ಕಲ್ಪಗಳನ್ನು, ಷಷ್ಠ್ಯಾಃ = ಸಂಬಂಧವಾಚಕವಾದ ಷಷ್ಠಿಗೆ, ಔಪಚಾರಿಕತ್ವಾತ್ = ಗೌಣಾರ್ಥವನ್ನು ಮಾಡಬೇಕಾದೀತು, ಉಪಹಿತೇ = ಉಪಾಧಿವಿಶಿಷ್ಟನಾದ, ಲಕ್ಷಣಾಪಾತಾತ್ = ಶುದ್ಧಬ್ರಹ್ಮನಲ್ಲಿ ಲಕ್ಷಣಾವನ್ನು ಮಾಡಬೇಕಾದೀತು, ಆತ್ಮಾ = ನಿಯಾಮಕನು, ಶಾಸ್ತಾ = ನಿಯಾಮಕನು. ಶರೀರಪ್ರತಿಸಂಬಂಧಿವಾಚಿ = ಶರೀರಕ್ಕೆ ಪ್ರತಿಸಂಬಂಧಿಯಾದ ಶರೀರೀ ಎಂಬ ಸಂಬಂಧವನ್ನು ಹೇಳುತ್ತದೆ.

**प्रकाशः** – उक्तं पूर्वपक्षनिरासं सूत्रारूढं करोति – **तत्रेति** ।। समुद्रान्तस्स्थत्वादि-विष्णुधर्मोपदेशादन्तस्स्थो विष्णुरित्यक्त्या इन्द्र एवेत्याद्यवधारणपक्षस्य, इन्द्राद्यन्यतमः स्यादित्यनवधारणपक्षस्य च निरासप्रतीतेरिति भावः ।

द्वितीयसूत्रार्थं समर्थयितुमाह – **न चेति** ।। 'इन्द्रस्य' इति षष्ठ्या इत्यर्थः । आत्मशब्दस्य स्वरूपार्थत्वे प्रत्ययास्वारस्यमुक्त्वा प्रातिपदिकास्वारस्यमाह – **इन्द्रादीति** ।। "समासीन आत्मा जनानाम्" इत्यत्रात्मशब्दस्यान्तर्यामिपरत्वात् तदेकप्रकरणे श्रुतस्य स्वरूपार्थत्वमन्याय्यमित्याह – **अत्रैवेति** ।। "शास्ता जनानाम्" इति स्वरूपत्वे शास्तृत्वायोगादिति भावः । अयुक्ततामेवाह – **ज्ञानादीति** ।। तथा च श्रुत्यर्थं निष्कृष्याह – **तस्मादिति** ।। इन्द्रशब्दस्यात्र प्रकरणे विष्णुपरत्वात् कथमेवमित्यतः प्रागुक्तमेव स्मारयति – **इन्द्रो राजेति** ।।

**बाधकबलादिति** ।। नियम्यत्वरूपादित्यर्थः । यथा "बहुगणवतुडति सङ्ख्या" इत्यत्र संज्ञापरस्यापि सङ्ख्याशब्दस्य "ष्णान्ता षट्" इत्यत्र संज्ञिपरत्वं तद्वत्, यथा वा "आत्मनः आकाशस्सम्भूतः" इत्यत्र भूतपरत्वेऽप्याकाशशब्दस्य "यदेष आकाशः" इति वाक्ये ब्रह्मपरता तद्वत्, यथा वा "दहरोऽस्मिन्नन्तर आकाशः" इत्यत्राकाशशब्दस्य भूतपरत्वेऽपि इत्यनुव्याख्यानेन तुल्यन्यायतया सूचितम् । "बाधकबलात्" इत्युक्त्यैव "नह्येकशब्देन द्विरुक्तेन भेदश्रुतिं विना वस्तुद्वयं कुत्रचिदुच्यने" इति तार्तीयकगीताभाष्यविरोधोऽप्यपोढः ।

ननु "अव्यक्तात्पुरुषः परः" इत्यादाववरत्वादिबाधके सत्यपि तदधीनत्व-न्यायेनान्यगतावरत्वं प्रति स्वातन्त्र्येण निमित्तेन 'अव्यक्तात्' इत्यादिपञ्चम्यन्तादि-पदवाच्यत्वं विष्णोर्वक्ष्यते, तथेहाप्यन्यगतनियम्यत्वं प्रति स्वातन्त्र्येण "इत्यादिषष्ठ्यन्तपदवाच्यत्वं युक्तम्" । एवं च न मुख्यार्थत्यागः, एक-प्रकरणस्थस्यार्थान्तरपरत्वदोषोऽपि नेति चेन्न,

'अव्यक्तात्' इत्यस्याब्रह्मत्वे "अनाद्यनन्तं महतः परं ध्रुवं" इत्युत्तरवाक्य-स्याप्यब्रह्मपरत्वं स्यात्, महत्परत्वलिङ्गात् । तच्चानिष्टं, मुक्तिहेतुत्वश्रवणात्तत्रेति कथञ्चिद्बाधकनिरासेन 'अव्यक्तात्' इत्यस्य ब्रह्मपरत्वमुपेतम् । न चेह 'इन्द्रस्य' इत्यादेरब्रह्मपरत्वे बाधकमस्ति । इन्द्रादिपदप्रवृत्तिरूपगुणलाभस्य "इन्द्रो राजा" इत्यादिवाक्यगतेन्द्रादिपदसमन्वयेनैव सिद्धेः । "इन्द्रो राजा" इत्यादिवाक्यस्थ इन्द्रादिशब्दसमन्वयमात्रेणैव अदृश्यत्वमुखकृतपूर्वाक्षेपसमाधानसिद्धेश्च । न चैवं "अनेन जीवेनात्मना" इत्यादिवाक्यस्थजीवशब्दसमन्वयेनैव तच्छब्दप्रवृत्तिगुण-लाभात् "जीवा एव तु दुःखिनः" इत्यादिवाक्यस्थजीवादिशब्दसमन्वयो न स्यादिति वाच्यम्, "स बद्धः स दुःखी स बद्धयति स दुःखयति" इति विशेषवचनात् । इह तथा नियामकाभावादिति । यद्वा – सर्ववेदगतसर्वशब्दवाच्यत्वसिद्ध्यै तत्रापि विष्ण्वङ्गीकारेऽप्यदोषः । अत एव 'अन्यपरता' इत्युक्तं, न तु 'अन्यमात्रपरता' इति ।

**गुरुराजीयम्** – ननु पूर्वपक्षत्रयनिरासः प्रथमसूत्रेण प्रतीयत इत्यत आह – **तत्रेति** ।। अत्राद्यद्वितीयावित्यनेनाकाङ्क्षाक्रमानुसारिपूर्वपक्षनिरासकत्वं सूत्रक्रमनिमित्तं चोक्तं भवति ।

ननु भाष्ये इन्द्रस्यात्मेति भेदव्यपदेशोदाहरणमयुक्तम् । तत्रात्मशब्दस्य स्वरूपपरत्वेन तेन भेदासिद्धेरित्याशङ्क्य निराकरोति – **न चेति** ।। **सहैवेति** ।। अत्र देवा इति देवानां कर्तृत्वस्य सन्तमित्यन्तस्थस्य कर्मत्वस्योक्तत्वात् उत्सर्गतः कर्तृकर्मणोर्भेदस्याङ्गीकृतत्वात्परेणाप्येकस्यैव कर्तृकर्मभावस्यानभ्युपगमेन तथा साहित्यस्यापि भेदव्याप्तत्वेन भेदसिद्धेरित्यर्थः । कर्मकर्तृभावादिनेत्यत्रादिपदेन ज्ञातृज्ञेयभावोऽज्ञातृत्वमज्ञेयत्वं च गृह्यते ।। **षष्ठ्या इति** ।। सम्बन्धषष्ठ्या

वक्तव्यसम्बन्धस्य च भेदव्याप्तत्वेन स्वरूपत्वे घटस्य स्वरूपमित्यादिवदौपचारिकत्वं स्यादिति भावः ।

किंचेन्द्रादेर्विशिष्टत्वाद् विशिष्टस्य शुद्धभेदानङ्गीकारादिन्द्रप्रातिपदिके लक्षणा स्वीकर्तव्या । तथा च लक्षणापत्तिरूपो दोषश्च स्यादित्याह – **इन्द्रादीति** ।। सकृच्छतस्यात्मशब्दस्य क्वचित्स्वपरत्वं क्वचिदन्तर्यामिपरत्वमित्ययुक्तं चेत्याह – **अत्रैवेति** ।। जनानां विशिष्टत्वाद् विशिष्टस्य शुद्धेनाभेदस्य बाधितत्वाज्जनपदेन लक्षणा स्वीकर्तव्येति दोषे सत्येव दोषान्तरमाह – **अस्मिन्नेवेति** ।।

एवं च सिद्धमर्थमाह – **तथा चेति** ।। **बाधकबलादिति** ।। इन्द्रस्यात्मेत्यत्रेन्द्रशब्दस्य ब्रह्मपरत्वे आत्मशब्दोक्तं स्वामित्वं तस्यैव वक्तव्यम् । न च स्वस्यैव स्वनियामकत्वं सम्भवतीति भावः ।

ವಿವರಣೆ - ಇಲ್ಲಿಯ ತನಕ ಮೂರುವಿಧ ಪೂರ್ವಪಕ್ಷವನ್ನು ನಿರಾಕರಿಸಿದ್ದಾಯಿತು. ಇದು ಸೂತ್ರಕಾರರಿಗೂ ಸಮ್ಮತವಾಗಿದೆಯೆಂದು 'ತತ್ರ' ಇತ್ಯಾದಿ ಗ್ರಂಥದಿಂದ ಸೂತ್ರಾರೂಢ ಮಾಡುತ್ತಿದ್ದಾರೆ. 'ಸಮುದ್ರಾಂತಸ್ಥತ್ವ'ವೇ ಮೊದಲಾದ ವಿಷ್ಣುಧರ್ಮಗಳಿರುವುದರಿಂದ ಅಂತಸ್ಥನು ವಿಷ್ಣುವೇ ಆಗುತ್ತಾನೆಂದು ಹೇಳಲಾಗಿದೆ. ಇದರಿಂದ ಇಂದ್ರನೇ ಅಂತಸ್ಥನೆಂಬ ಅವಧಾರಣಪೂರ್ವಪಕ್ಷವು ಅಥವಾ ಇಂದ್ರಾದಿಗಳ ಮಧ್ಯದಲ್ಲಿ ಯಾರೊಬ್ಬರೂ ಅಂತಸ್ಥರಾಗಬಹುದೆಂಬ ಅನವಧಾರಣಪೂರ್ವಪಕ್ಷವನ್ನು ನಿರಾಕರಿಸಿದಂತಾಯಿತು. ಎರಡನೆಯ ಭೇದವ್ಯಪದೇಶಸೂತ್ರವನ್ನು 'ನ ಚ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ.

ಆತ್ಮಶಬ್ದಕ್ಕೆ ಸ್ವರೂಪ ಎಂಬರ್ಥವನ್ನು ಹೇಳಿದರೆ 'ಇಂದ್ರಸ್ಯ' ಎಂಬಲ್ಲಿರುವ ಪ್ರತ್ಯಯದ ಅರ್ಥವು ಅಸ್ವರಸವಾಗುತ್ತದೆಂದು ಹೇಳಿ ಪ್ರಾತಿಪದಿಕ ಅರ್ಥವು ಅಸ್ವರಸವಾಗುತ್ತದೆಂದು 'ಇಂದ್ರಾದಿ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. "ಸಮಾಸೀನ ಆತ್ಮಾ ಜನಾನಾಮ್" ಎಂಬಲ್ಲಿರುವ ಆತ್ಮಶಬ್ದಕ್ಕೆ ಅಂತರ್ಯಾಮಿಪರತ್ವವನ್ನು ಹೇಳುವುದು ಅನಿವಾರ್ಯ. ಇಲ್ಲಿರುವ ಆತ್ಮಶಬ್ದಕ್ಕೆ ಅಂತರ್ಯಾಮಿತ್ವವನ್ನು ಹೇಳಿದ ಮೇಲೆ ಅದೇ ಪ್ರಕರಣದಲ್ಲಿರುವ 'ಇಂದ್ರಾಸ್ಯಾತ್ಮಾ' ಎಂಬಲ್ಲಿರುವ ಆತ್ಮಶಬ್ದಕ್ಕೂ ಅಂತರ್ಯಾಮಿತ್ವವನ್ನೇ ಹೇಳಬೇಕು. 'ಶಾಸ್ತಾ ಜನಾನಾಮ್' ಎಂಬಲ್ಲಿ ಹೇಳಿದ ಶಾಸ್ತೃತ್ವವೂ ಕೂಡಬೇಕಾದರೆ ಸ್ವರೂಪಾರ್ಥವನ್ನು ಹೇಳಬಾರದು. ಇದನ್ನೇ 'ಜ್ಞಾನಾದಿ' ಎಂಬ ಗ್ರಂಥವು ವಿವರಿಸಿದೆ. ಒಟ್ಟು 'ಇಂದ್ರಾಸ್ಯಾತ್ಮಾ' ಎಂಬ ಶ್ರುತಿಯ ಅರ್ಥವನ್ನು ತಸ್ಮಾತ್ ಎಂಬ ಗ್ರಂಥವು ಸಂಗ್ರಹಿಸಿದೆ. ಇಂದ್ರ ಶಬ್ದಕ್ಕೆ ವಿಷ್ಣುವೆಂದು ಹೇಳಿದರೆ ಇಂದ್ರನ ಅಂತರ್ಯಾಮಿ ಎಂದು ಹೇಳುವುದು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ ಹಿಂದಿನ ಮೂಲದಲ್ಲಿ ಹೇಳಿದ ಉತ್ತರವನ್ನೇ 'ಇಂದ್ರೋ ರಾಜಾ' ಇತ್ಯಾದಿ ಗ್ರಂಥದಿಂದ ಸ್ಮರಿಸುತ್ತಿದ್ದಾರೆ. 'ಇಂದ್ರಸ್ಯಾತ್ಮಾ' ಎಂಬ ಶ್ರುತಿಯೂ ಆತ್ಮಶಬ್ದನಿಯಾಮಕತ್ವವನ್ನು ಹೇಳುತ್ತಿದೆ. ಇಂದ್ರನು ನಿಯಮ್ಯನೆಂದು ಆತ್ಮಸ್ವರೂಪನಾದ ವಿಷ್ಣುವು ನಿಯಾಮಕನೆಂದು ಶ್ರುತಿಯು ಹೇಳುತ್ತಿರುವುದರಿಂದ ಅನಿವಾರ್ಯವಾಗಿ ಇಂದ್ರಶಬ್ದಕ್ಕೆ ಪುರಂದರನೆಂಬ ಅರ್ಥವನ್ನು ಒಪ್ಪಬೇಕು.

ಇಂದ್ರಾದಿಶಬ್ದಗಳು ಬಾಧಕವಿದ್ದಾಗ ಪುರಂದರಾದಿಗಳನ್ನು ಪ್ರತಿಪಾದಿಸುತ್ತವೆ. ಒಂದು ಕಡೆ ಶಬ್ದವು ಮುಖ್ಯವಾಗಿದ್ದರೂ ಬೇರೆ ಸ್ಥಳದಲ್ಲಿ ಅದೇ ಶಬ್ದವು ಬಾಧಕವಿದ್ದರೆ ಅಮುಖ್ಯಾರ್ಥವನ್ನು ಪ್ರತಿಪಾದಿಸುತ್ತವೆ.

ಉದಾಹರಣೆ - 'ಬಹುಗಣವತುಡತಿಸಂಖ್ಯಾ' (೧-೧-೨೩) ಎಂಬ ಪಾಣಿನೀಸೂತ್ರದಲ್ಲಿರುವ ಸಂಖ್ಯಾಶಬ್ದಕ್ಕೆ ಸಂಖ್ಯಾ ಎಂಬ ಹೆಸರು ಎಂಬರ್ಥ. 'ಬಹು' ಎಂಬ ಶಬ್ದಕ್ಕೆ ಗಣವೆಂಬ ಶಬ್ದಕ್ಕೆ ವತು ಡತಿಪ್ರತ್ಯಯಗಳಿಗೂ ಸಂಖ್ಯಾ ಎಂಬ ಹೆಸರನ್ನು ಈ ಸೂತ್ರವು ವಿಧಿಸುತ್ತಿದೆ. ಇದರ ಮುಂದಿರುವ ಸೂತ್ರ 'ಷ್ಣಾಂತಾಃಷಟ್' (೧-೧-೨೪) ಷಕಾರಾಂತವಾದ ನ ಕಾರಂತವಾದ ಶಬ್ದಗಳಿಗೆ ಷಟ್ ಎಂಬ ಸಂಜ್ಞೆಯನ್ನು ವಿಧಿಸುತ್ತಿದೆ. ಹಿಂದಿನ ಸೂತ್ರದಿಂದ ಈ ಸೂತ್ರದಲ್ಲಿ ಸಂಖ್ಯಾಶಬ್ದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಸಂಖ್ಯಾಶಬ್ದಕ್ಕೆ ಸಂಖ್ಯಾವಾಚಕಶಬ್ದವೆಂದರ್ಥ. ಆದರೆ ಹಿಂದಿನ ಸೂತ್ರದಲ್ಲಿ ಸಂಖ್ಯಾಶಬ್ದಕ್ಕೆ ಸಂಖ್ಯಾವಾಚಕಶಬ್ದವೆಂದರ್ಥವಲ್ಲ. 'ಸಂಖ್ಯಾ' ಎಂಬುದೇ ಒಂದು ಸಂಜ್ಞೆಯಾಗಿದೆ. ಹೀಗೆ ಸಂಖ್ಯಾಎಂಬ ಒಂದೇ ಶಬ್ದವು ಒಂದೆಡೆ ಸಂಜ್ಞಾಪರವಾಗಿದೆ. ಮತ್ತೊಂದೆಡೆ ಸಂಖ್ಯಾವಾಚಕ ಶಬ್ದಪರವಾಗಿದೆ.

ಇದರಂತೆ ಎರಡನೆಯ ಉದಾಹರಣೆ - 'ಆತ್ಮನಃ ಆಕಾಶಸ್ಸಂಭೂತಃ' ಎಂಬಲ್ಲಿರುವ ಆಕಾಶ ಶಬ್ದಕ್ಕೆ ಭೂತಾಕಾಶವೆಂದರ್ಥ. ಆದರೆ 'ಯದೇಶ ಆಕಾಶ' ವೆಂಬಲ್ಲಿ ಅದೇ ಆಕಾಶಶಬ್ದವು ಬ್ರಹ್ಮಪರವಾಗಿದೆ. ಹೀಗೆ ಒಂದೇ ಆಕಾಶಶಬ್ದವು ಸ್ಥಳಭೇದದಿಂದ ಭೂತಾಕಾಶಪರವಾಗಿಯೂ ಮತ್ತೊಂದೆಡೆ ಬ್ರಹ್ಮಪರವಾಗಿಯೂ ಇದೆ.

ಮೂರನೆಯ ಉದಾಹರಣೆ - 'ದಹರೋऽಸ್ಮಿನ್ನಂತರ ಆಕಾಶಃ' ಎಂಬಲ್ಲಿರುವ ಆಕಾಶಬ್ದವು ಹೃದಯದಲ್ಲಿರುವ ಸೂಕ್ಷ್ಮ ಆಕಾಶವನ್ನು ಹೇಳುತ್ತಿರುವುದರಿಂದ ಭೂತಾಕಾಶಪರವಾಗಿದೆ. ಆದರೆ ''ಯಾವಾನ್ವಾ ಅಯಮಾಕಾಶಃ'' ಎಂಬ ಅದೇ ಮುಂದಿನ ವಾಕ್ಯದಲ್ಲಿ ಆಕಾಶಶಬ್ದವು ಬ್ರಹ್ಮಪರವಾಗಿದೆ.

ನಾಲ್ಕನೆಯ ಉದಾಹರಣೆ - ''ಅಕ್ಷರಾತ್ಪರತಃ ಪರಃ'' ಎಂಬಲ್ಲಿರುವ ಅಕ್ಷರಶಬ್ದವು ಜಡಪ್ರಕೃತಿಯನ್ನು ಹೇಳುತ್ತಿದೆ. (ವಸ್ತುತಃ ಅಕ್ಷರಶಬ್ದವು ಮೂರು ಬಗೆಯಾಗಿದೆ. ಉತ್ತಮಾಕ್ಷರ, ಮಧ್ಯಮಾಕ್ಷರ, ಅಧಮಾಕ್ಷರವೆಂದು. ಅಧಮಾಕ್ಷರವೆನಿಸಿದ ಜಡಪ್ರಕೃತಿಗಿಂತಲೂ ಮಧ್ಯಮಾಕ್ಷರವೆನಿಸಿದ ಚಿತ್‌ಪ್ರಕೃತಿಯು ಶ್ರೇಷ್ಠ. ಅದಕ್ಕಿಂತಲೂ ಉತ್ತಮಾಕ್ಷರವೆನಿಸಿದ ವಿಷ್ಣುವು ಶ್ರೇಷ್ಠ. ಇದನ್ನೇ ''ಅಕ್ಷರಾತ್ಪರತಃ ಪರಃ'' ಎಂದು ಹೇಳುತ್ತಿದೆ.) ಆದರೆ ''ಅಕ್ಷರಾತ್ಸಂಭವತೀಹ ವಿಶ್ವಂ'' ಎಂಬಲ್ಲಿ ಅಕ್ಷರಶಬ್ದವು ಬ್ರಹ್ಮನನ್ನೇ ಪ್ರತಿಪಾದಿಸುತ್ತಿದೆ. ಇದನ್ನೇ ಅನುವ್ಯಾಖ್ಯಾನದಲ್ಲಿ ''ತಥಾಪ್ಯೇತದ್ವಿರೋಧೇ ತು ತದ್ವಾಚಿತ್ವಮಪೋದ್ಯತೇ'' ಎಂಬ ಅನುವ್ಯಾಖ್ಯಾನದಲ್ಲಿ ಬಾಧಕ ಬಂದಾಗ ತದ್ವಾಚಿತ್ವವನ್ನು ಬಿಡಬೇಕು ಎಂದಿದ್ದಾರೆ. ಇದರಂತೆ ಪ್ರಕೃತದಲ್ಲಿಯೂ ಕೂಡ ಇಂದ್ರಶಬ್ದವು ಬ್ರಹ್ಮಪರವಾದರೂ ಕೂಡ 'ಇಂದ್ರಸ್ಯಾತ್ಮಾ' ಎಂಬಲ್ಲಿ 'ನಿಯಮ್ಯತ್ವ' ಬಾಧವಿರುವುದರಿಂದ ಪುರಂದರನನ್ನೇ ಪ್ರತಿಪಾದಿಸುತ್ತದೆ.

''ನ ಹ್ಯೇಕಶಬ್ದೇನ ದ್ವಿರುಕ್ತೇನ ಭೇದಶ್ರುತಿಂ ವಿನಾ ವಸ್ತುದ್ವಯಂ ಕುತ್ರಚಿದುಚ್ಯತೇ'' ಒಂದು ಶಬ್ದವನ್ನು ಎರಡು ಬಾರಿ ಹೇಳಿದಾಗ ಬಾಧಕವಿಲ್ಲದಿದ್ದಾಗ ಎರಡೂ ಅರ್ಥಗಳನ್ನು ಹೇಳುವುದು ಎಲ್ಲಿಯಾದರೂ ಕಂಡಿದೆಯೆ? ಹೀಗೆ ಗೀತಾಭಾಷ್ಯದಲ್ಲಿ ನಿರೂಪಿಸಿದ್ದಾರೆ. ಗೀತಾಭಾಷ್ಯದ ಮೇಲೆ ಬರುವ ಶಂಕೆಯನ್ನು ಈಗ ನಿವಾರಿಸಿದಂತಾಯಿತು.

*ಅಂತಸ್ಥತ್ವಾಧಿಕರಣ*

ಪ್ರಶ್ನೆ - ''ಅವ್ಯಕ್ತಾತ್ ಪುರುಷಃ ಪರಃ'' ಇತ್ಯಾದಿ ಸ್ಥಳದಲ್ಲಿ ಅವ್ಯಕ್ತಶಬ್ದದಿಂದ ವಿಷ್ಣುವು ವಾಚ್ಯನಾಗಿದ್ದಾನೆನ್ನಲು 'ಅವರತ್ವಾದಿ'ಗಳು ಬಾಧಕಗಳಾಗಿವೆ. ಆದರೂ ಕೂಡ 'ತದಧೀನತ್ವಭಾವ'ದಿಂದ ಪ್ರಕೃತ್ಯಾದಿಗಳಲ್ಲಿರುವ 'ಅವರತ್ವ'ವನ್ನು ಕುರಿತು ಭಗವಂತನು ನಿಯಾಮಕನಾಗಿದ್ದರಿಂದ ಸ್ವಾಂತ್ರತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಪಂಚಮ್ಯಂತ್ಯವಾದ ''ಅವ್ಯಕ್ತಾತ್'' ಎಂಬ ಪದದಿಂದ ಭಗವಂತನು ವಾಚ್ಯನಾಗಿದ್ದಾನೆಂದು ಮುಂದೆ ನೀವೇ ಹೇಳುತ್ತಿರಿ. ಅದರಂತೆ ಪ್ರಕೃತದಲ್ಲಿಯೂ ಕೂಡ ''ಇಂದ್ರಸ್ಯ ಆತ್ಮಾ'' ಎಂಬಲ್ಲಿ ಇಂದ್ರಶಬ್ದದಿಂದ ನಿಯಮ್ಯತ್ವವು ತಿಳಿಯುತ್ತಿದೆ. ಇಂದ್ರಶಬ್ದದಿಂದ ಭಗವಂತನು ವಾಚ್ಯನೆನ್ನಲು ಬಾಧಕವಾಗಿದೆ. ಆದರೂ ಕೂಡ ಇಂದ್ರಾದಿಗಳಲ್ಲಿರುವ ನಿಯಮ್ಯತ್ವವನ್ನು ಕುರಿತು ಭಗವಂತನು ನಿಯಾಮಕನಾದ್ದರಿಂದ
ತದಧೀನತ್ವನ್ಯಾಯದಿಂದ (ಸ್ವಾತಂತ್ರ್ಯವೆಂಬ ಪ್ರವೃತ್ತಿಯ ನಿಮಿತ್ತದಿಂದ) ಷಷ್ಠ್ಯಂತವಾದ ಇಂದ್ರಶಬ್ದದಿಂದ ಭಗವಂತನು ವಾಚ್ಯನಾಗುತ್ತಾನೆ. ಆದ್ದರಿಂದ ಇಂದ್ರಶಬ್ದಕ್ಕೆ ಮುಖ್ಯಾರ್ಥವನ್ನು ಬಿಡಬೇಕಾಗಿಲ್ಲ. ವಿಷ್ಣು ಪ್ರಕರಣದಲ್ಲಿ ಪ್ರಸಕ್ತವಾದ್ದರಿಂದ ಬೇರೆ ಅರ್ಥವನ್ನು ಆಶ್ರಯಿಸಬೇಕೆಂಬ ದೋಷವು ಇರುವುದಿಲ್ಲವಲ್ಲ?

ಸಮಾಧಾನ - 'ಅವ್ಯಕ್ತಾತ್ ಪುರುಷಃ ಪರಃ' ಎಂಬುದಕ್ಕೂ ಮತ್ತು 'ಇಂದ್ರಸ್ಯ ಆತ್ಮಾ' ಎಂಬುದಕ್ಕೂ ಬಹಳ ವ್ಯತ್ಯಾಸವಿದೆ. ಅವ್ಯಕ್ತಶಬ್ದಕ್ಕೆ ಬ್ರಹ್ಮಪರತ್ವನ್ನು ಅಂಗೀಕರಿಸುವುದು ಅನಿವಾರ್ಯ. ಏಕೆಂದರೆ ''ಅನಾದ್ಯನಂತಂ ಮಹತಃ ಪರಂ ಧ್ರುವಮ್'' ''ವಿಚಾಯ್ಯರ್ೇತಮ್'' ''ಮೃತ್ಯುಮುಖಾತ್ ಪ್ರಮುಚ್ಯತೇ'' (ಆದಿ ಅಂತ್ಯಗಳಿಲ್ಲದ ಮಹತ್ತತ್ವಕ್ಕಿಂತಲೂ ಶ್ರೇಷ್ಠವಾದವನನ್ನು ತಿಳಿದರೆ ಮೋಕ್ಷವೇ ಲಭಿಸುತ್ತದೆ.) ಎಂಬ ಶ್ರುತಿಯು ಅವ್ಯಕ್ತದ ಜ್ಞಾನದಿಂದ ಮೋಕ್ಷವನ್ನೇ ಹೇಳುತ್ತದೆ. ಒಂದು ವೇಳೆ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಅವ್ಯಕ್ತಶಬ್ದದಿಂದ ಬ್ರಹ್ಮನು ವಾಚ್ಯನಾಗನೆಂದರೆ ಮುಂದಿನ ಈ ವಾಕ್ಯದಿಂದಲೂ ಬ್ರಹ್ಮನು ವಾಚ್ಯನಾಗದಿರಬೇಕಾದೀತು. ಆದರೆ 'ಮಹತ್‌ಪರತ್ವ' ಲಿಂಗದಿಂದ ಮತ್ತು 'ಮುಕ್ತಿಹೇತುತ್ವ' ಲಿಂಗದಿಂದ ಮುಂದಿನ ವಾಕ್ಯವು ಬ್ರಹ್ಮಪರವೆಂಬುದು ಶತಸ್ಸಿದ್ಧವಿಚಾರ.

ಆದ್ದರಿಂದ ಹಿಂದಿರುವ ಅವ್ಯಕ್ತಶಬ್ದಕ್ಕೂ ಹೇಗಾದರೂ ಬ್ರಹ್ಮಪರತ್ವವನ್ನು ಒಪ್ಪಲೇಬೇಕು. ಆದರೆ 'ಇಂದ್ರಸ್ಯಾತ್ಮಾ' ಎಂಬಲ್ಲಿ ಇಂದ್ರಶಬ್ದವು ಬ್ರಹ್ಮಪರವಾಗದಿದ್ದರೆ ಯಾವುದೇ ಬಾಧಕವು ಇರುವುದಿಲ್ಲ. ಇಂದ್ರಶಬ್ದದ ಪ್ರವೃತ್ತಿನಿಮಿತ್ತವೆನಿಸಿದ 'ಪರಮೈಶ್ವರ್ಯವು' ಭಗವಂತನಲ್ಲಿ ಸಿದ್ಧಿಸುವುದಿಲ್ಲವಲ್ಲ? ಎಂಬ ಆತಂಕ ಬೇಡ. 'ಇಂದ್ರೋ ರಾಜಾ' ಎಂಬಲ್ಲಿರುವ ಇಂದ್ರಶಬ್ದದ ಸಮನ್ವಯದಿಂದಲೂ ಪರಮೈಶ್ವರ್ಯವು ಭಗವಂತನಲ್ಲಿ ಸಿದ್ಧವಾಗುತ್ತದೆ. ಮತ್ತು ಪ್ರಕೃತ ಪೂರ್ವಪಕ್ಷವು ಅದೃಶ್ಯತ್ವಮುಖದಿಂದ ಮಾಡಲ್ಪಟ್ಟ ಪೂರ್ವಪಕ್ಷವೂ ಕೂಡ 'ಇಂದ್ರೋ ರಾಜಾ' ಎಂಬಲ್ಲಿರುವ ಇಂದ್ರಶಬ್ದದ ಸಮನ್ವಯದಿಂದಲೂ ಸಿದ್ಧವಾಗುತ್ತದೆ. ಅದಕ್ಕೋಸ್ಕರ ಇಂದ್ರಸ್ಯಾತ್ಮಾ ಎಂಬಲ್ಲಿರುವ ಇಂದ್ರಶಬ್ದದ ಸಮನ್ವಯವನ್ನೇ ಮಾಡಬೇಕಾಗಿಲ್ಲ.

ಪ್ರಶ್ನೆ - ಹಾಗಾದರೆ ''ಅನೇನ ಜೀವೇನಾತ್ಮನಾ'' ಎಂಬ ವಾಕ್ಯದಲ್ಲಿರುವ ಜೀವಶಬ್ದದ ಸಮನ್ವಯದಿಂದಲೇ ಜೀವಶಬ್ದದಿಂದ ತಿಳಿಯುವ ಪ್ರಾಣಧಾರಕತ್ವಗುಣವು ಸಿದ್ಧವಾಗುತ್ತದೆ. ಪುನಃ ''ಜೀವಾ ಏವ ತು ದುಃಖಿನಃ'' ಎಂಬಲ್ಲಿರುವ ಜೀವಶಬ್ದಗಳನ್ನು ಸಮನ್ವಯ ಮಾಡಬೇಕಾಗಿಲ್ಲ. ಆದರೆ ಸೂತ್ರಕಾರರು ಇದನ್ನು ಸಮನ್ವಯ ಮಾಡಿದ್ದಾರಲ್ಲ?

ಸಮಾಧಾನ - ಇದೂ ಸಹ ತಪ್ಪು. ''ಸ ಬದ್ಧಸ್ಸದುಃಖೀ ಸ ಬದ್ಧಯತಿ ಸ ದುಃಖಯತಿ'' (ಮತ್ತೊಬ್ಬರನ್ನು ಬಂಧಿಸುತ್ತಾನೆ ಮತ್ತೊಬ್ಬರಿಗೆ ದುಃಖವನ್ನು ನೀಡುತ್ತಾನೆ ಆದ್ದರಿಂದ ಪರಮಾತ್ಮನು ಬದ್ಧ, ದುಃಖೀ ಇತ್ಯಾದಿ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ.) ಹೀಗೆ ವಿಶೇಷಪ್ರಮಾಣವಿರುವುದರಿಂದ 'ಜೀವಾ ಏವ ತು ದುಃಖಿನಃ' ಎಂಬಲ್ಲಿರುವ ಜೀವಶಬ್ದದಿಂದ ಭಗವಂತನು ವಾಚ್ಯನಾಗುತ್ತಾನೆ. ಆದರೆ 'ಇಂದ್ರಸ್ಯಾತ್ಮಾ' ಎಂಬಲ್ಲಿ ಇಂದ್ರಶಬ್ದದಿಂದ ಭಗವಂತನು ವಾಚ್ಯನೆನ್ನಲು ಯಾವುದೇ ವಿಶೇಷಪ್ರಮಾಣಗಳಿರುವುದಿಲ್ಲ.

ಅಥವಾ 'ಇಂದ್ರಸ್ಯಾತ್ಮಾ' ಎಂಬಲ್ಲಿರುವ ಇಂದ್ರಶಬ್ದದಿಂದಲೂ ಭಗವಂತನನ್ನು ವಾಚ್ಯನೆನ್ನೋಣ ಏನು ತಪ್ಪು? ಇದರಿಂದ ಸರ್ವವೇದಗಳಲ್ಲಿರುವ ಸಕಲಶಬ್ದಗಳಿಂದ ಭಗವಂತನು ವಾಚ್ಯನಾಗಿದ್ದಾನೆಂದು ಮಹಾಗುಣದ ಸಿದ್ಧಿಗೆ ಅನುಕೂಲವೇ ಆಗುತ್ತದೆ. ಈ ಸೂಕ್ಷ್ಮವನ್ನೇ ಮನಸ್ಸಿನಲ್ಲಿಟ್ಟುಕೊಂಡು ಗ್ರಂಥಕಾರರು 'ಅನ್ಯಪರತಾ' (ಬೇರೆಯವರನ್ನು ಹೇಳುತ್ತದೆ) ಎಂದಿದ್ದಾರೆ ಹೊರತು 'ಅನ್ಯಮಾತ್ರಪರತಾ' (ಬೇರೆಯವರನ್ನಷ್ಟೇ ಹೇಳುತ್ತದೆ.) ಎಂದು ಹೇಳಿಲ್ಲ.




ಹಿಂದೆ ಹೇಳಿದ ಮೂರು ರೀತಿಯ ಪೂರ್ವಪಕ್ಷಗಳಲ್ಲಿ ಮೊದಲಿನೆರಡನ್ನು ಈ ಅಧಿಕರಣದ ಮೊದಲನೆಯ ಸೂತ್ರದಿಂದ ಹಾಗೂ ಮೂರನೆಯ ಪೂರ್ವಪಕ್ಷವನ್ನು ಎರಡನೆಯ ಸೂತ್ರದಿಂದ ನಿರಾಕರಣೆ ಮಾಡಿದ್ದಾರೆ. ಎರಡನೆಯ ಸೂತ್ರದಲ್ಲಿ ಹೇಳಿರುವ ಭೇದವ್ಯಪದೇಶವು ಕೂಡುವುದಿಲ್ಲ. ಏಕೆಂದರೆ ಆ ಸೂತ್ರದ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಲ್ಲಿ ಆತ್ಮಶಬ್ದಕ್ಕೆ ಸ್ವರೂಪವೆಂದು ಅರ್ಥವಿಟ್ಟುಕೊಂಡಾಗ ಐಕ್ಯವ್ಯಪದೇಶವೇ ಯುಕ್ತವಾಗುತ್ತದೆನ್ನುವುದು ಸರಿಯಲ್ಲ. ಹಾಗೆ ಹೇಳಿದರೆ ಅನೇಕ ಶ್ರುತಿಗಳಲ್ಲಿ 'ಆತ್ಮ' ಶಬ್ದವನ್ನು ಅಂತರ್ಯಾಮಿಯಲ್ಲಿ ಬಳಸಿರುವುದು ಕೂಡುವುದಿಲ್ಲ. ಹಾಗಾಗಿ ಇಲ್ಲಿಯೂ ಕೂಡ ಆತ್ಮಶಬ್ದಕ್ಕೆ ಸ್ವರೂಪವೆಂದರ್ಥವಿಟ್ಟುಕೊಳ್ಳದೆ ಅಂತರ್ಯಾಮಿ ಎಂದೇ ಅರ್ಥೈಸಬೇಕು. ಮತ್ತು ಸ್ವರೂಪವೆನ್ನಲು ಬಾಧಕವೂ ಇದೆ. ಹಾಗಾಗಿ ಸೂತ್ರಾರ್ಥ ಸರಿಯಾಗಿಯೇ ಇದೆ.



• • • • •

## ಮಾಯಾವಾದಿಗಳ 'ಅಧಿಕರಣರಚನಾ' ರೀತಿಯ ನಿರೂಪಣೆ

### तात्पर्यचन्द्रिका

**अन्ये तु –''य एषोऽन्तरादित्ये हिरण्मयः पुरुषो दृश्यते'' ''य एषोऽन्तरक्षिणि पुरुषो दृश्यते'' इत्यक्ष्यादित्ययोरन्तस्स्थः प्रतीयते[१]। स विद्याकर्मातिशयलब्धैश्वर्यः**

---

(१) शाङ्करभाष्यम् –
इदमाम्नायते – 'अथ य एषोऽनन्तरादित्ये हिरण्मयः पुरुषो दृश्यते हिरण्यश्मश्रुर्हिरण्यकेश आप्रणखात्सर्व एव सुवर्णः' 'तस्य यथा कप्यासं पुण्डरीकमेवमक्षिणी तस्योदिति नाम स

एष सर्वेभ्यः पाप्मभ्य उदित उदिते ह वै सर्वेभ्यः पाप्मभ्यो य एवं वेद' 'इत्यधिदैवतम्' (छा.१।६।६,७,८) । 'अथाध्यात्मम्' 'अथ य एषोऽन्तरक्षिणि पुरुषो दृश्यते' (छा.१।७।१,५) इत्यादि । तत्र संशयः – किं विद्याकर्मातिशयवशात्प्राप्तोत्कर्षः कश्चित् संसारी सूर्यमण्डले चक्षुषि चोपास्यत्वेन श्रूयते किंवा नित्यसिद्धः परमेश्वर इति । किं तावत्प्राप्तं, संसारीति । कुतः, रूपवत्त्वश्रवणात् । आदित्यपुरुषे तावत् 'हिरण्यश्मश्रुः' इत्यादि रूपमुदाहृतम् । अक्षिपुरुषेऽपि तदेवातिदेशेन प्राप्यते – 'तस्यैतस्य तदेव रूपं यदमुष्य रूपम्' इति । नच परमेश्वरस्य रूपवत्त्वं युक्तम्, 'अशब्दमस्पर्शमरूपमव्ययम्' (का. १।३।१५) इति श्रुतेः, आधारश्रवणाच्च – 'य एषोऽन्तरादित्ये' 'य एषोऽन्तरक्षिणि' इति । न ह्यनाधारस्य स्वमहिमप्रतिष्ठस्य सर्वव्यापिनः परमेश्वरस्याधार उपदिश्येत । 'स भगवः कस्मिन्प्रतिष्ठित इति स्वे महिम्नि' (छा. ७।२४।१) इति, 'आकाशवत्सर्वगतश्च नित्यः' इति च श्रुती भवतः । ऐश्वर्यमर्यादाश्रुतेश्च । 'स एष ये चामुष्मात्पराञ्चो लोकास्तेषां चेष्टे देवकामानां च' (छा. १।६।८) इत्यादित्यपुरुषस्यैश्वर्यमर्यादा । 'स एष ये चैतस्मादर्वाञ्चो लोकास्तेषां चेष्टे मनुष्यकामानां च' (छा. १।७।६) इत्यक्षिपुरुषस्य । न च परमेश्वरस्य मर्यादावदैश्वर्यं युक्तम्, 'एष सर्वेश्वर एष भूताधिपतिरेव भूतपाल एष सेतुर्विधरण एषां लोकानामसंभेदाय' (बृ. ४।४।२२) इत्यविशेषश्रुतेः । तस्मान्नक्ष्यादित्ययोरन्तः परमेश्वर इत्येवं प्राप्ते ब्रूमः – 'अन्तस्तद्धर्मोपदेशात्' इति 'य एषोऽन्तरादित्ये' 'य एषोऽन्तरक्षिणि' इति च श्रूयमाणः पुरुषः परमेश्वर एव, न संसारी । कुतः, तद्धर्मोपदेशात् । तस्य हि परमेश्वरस्य धर्मा इहोपदिष्टाः । तद्यथा – 'तस्योदिति नाम' इति श्रावयित्वा अस्यादित्यपुरुषस्य नाम 'स एष सर्वेभ्यः पाप्मभ्य उदितः' इति सर्वपाप्मापगमेन निर्वक्ति । तदेव च कृतनिर्वचनं नामाक्षिपुरुषस्याप्यतिदिशति –'यन्नाम तन्नाम' इति । सर्वपाप्मापगमश्च परमात्मन एव श्रूयते – 'य आत्माऽपहतपाप्मा' (छा. ८।७।१) इत्यादौ । तथा चाक्षुषे पुरुषे 'सैवर्क्तत्साम तदुक्थं तद्यजुस्तद्ब्रह्म' इत्यृक्सामाद्यात्मकतां निर्धारयति । सा च परमेश्वरस्योपपद्यते, सर्वकारणत्वात् सर्वात्मकत्वोपपत्तेः । पृथिव्यग्न्याद्यात्मके चाधिदैवतं ऋक्सामे, वाक्प्राणाद्यात्मके चाध्यात्ममनुक्रम्याह – 'तस्यर्क्च साम च गेष्णौ' 'इत्यधिदैवतम्' । तथाध्यात्ममपि – 'यावमुष्य गेष्णौ तौ गेष्णौ' इति । तच्च सर्वात्मन एवोपपद्यते । 'तद्य इमे वीणायां गायन्त्येतं ते गायन्ति तस्मात्ते धनसनयः' (छा. १।७।६) इति च लौकिकेष्वपि गानेष्वस्यैव गीयमानत्वं दर्शयति । तच्च परमेश्वरपरिग्रहे घटते, 'यद्यद्विभूतिमत्सत्त्वं श्रीमदूर्जितमेव वा । तत्तदेवावगच्छ त्वं मम तेजोंऽशसंभवम्' (१०।४१) इति भगवद्गीतादर्शनात् । लोककामेशितृत्वमपि निरङ्कुशं श्रूयमाणं परमेश्वरं गमयति । यत्तूक्तं

हिरण्यश्मश्रुत्वादिरूपश्रवणं परमेश्वरे नोपपद्यत इति, अत्र ब्रूमः – स्यात्परमेश्वरस्यापीच्छावशान्मायामयं रूपं साधकानुग्रहार्थम् । 'माया ह्येषा मया सृष्टा यन्मां पश्यसि नारद । सर्वभूतगुणैर्युक्तं मैवं मां ज्ञातुमर्हसि' इति स्मरणात् । अपिच यत्र तु निरस्तसर्वनिवशेषं पारमेश्वरं रूपमुपदिश्यते, भवति तत्र शास्त्रम् – 'अशब्दमस्पर्शमरूपमव्ययम्' इत्यादि । सर्वकरणत्वात्तु विकारधर्मैरपि कैश्चिद्विशिष्टः परमेश्वर उपास्यत्वेन निर्दिश्यते – 'सर्वकर्मा सर्वकामः सर्वगन्धः सर्वरसः' (छा. ३।१४।२) इत्यादिना । तथा हिरण्यश्मश्रुत्वादिनिर्देशोऽपि भविष्यति । यदप्याधारश्रवणान्न परमेश्वर इति, अत्रोच्यते – स्वमहिमप्रतिष्ठस्याप्याधारविशेषोपदेश उपासनार्थो भविष्यति, सर्वगतत्वाद्ब्रह्मणो व्योमवत्सर्वान्तरत्वोपपत्तेः । ऐश्वर्यमर्यादाश्रवणमप्यध्यात्माधिदैवतविभागापेक्षमुपासनार्थमेव । तस्मात्परमेश्वर एवाक्ष्यादित्ययोरन्तरुपदिश्यते ।। २० ।।

**भामतीव्याख्या** – पूर्वस्मिन्नधिकरणेऽपास्तसमस्तविशेषब्रह्मप्रतिपत्त्यर्थमुपायतामात्रेण पञ्च कोशा उपाधयः स्थिताः, नतु विवक्षिताः । ब्रह्मैव तु प्रधानं 'ब्रह्म पुच्छं प्रतिष्ठा' इति ज्ञेयत्वेनोपक्षिप्तमिति निर्णीतम् । संप्रति तु ब्रह्म विवक्षितोपाधिभेदमुपास्यत्वेनोपक्षिप्यते, नतु विद्याकर्मातिशयलब्धोत्कर्षो जीवात्मादित्यपदवेदनीय इति निर्णीयते । तत्र 'मर्यादाधारूपाणि संसारिणि परे नतु । तस्मादुपास्यः संसारी कर्मानधिकृतो रविः ।।' 'हिरण्यश्मश्रु' इत्यादिरूपश्रवणात्, 'य एषोऽन्तरादित्ये' 'य एषोऽन्तरक्षिणि' इति चाधारभेदश्रवणात्, 'ये चामुष्मात्पराञ्चो लोकास्तेषां चेष्टे देवकामानां च' इत्यैश्वर्यमर्यादाश्रुतेश्च संसार्येव कार्यकारणसङ्घातात्मको रूपादिसम्पन्न इहोपस्यः, नतु परमात्मा 'अशब्दमस्पर्शम्' इत्यादिश्रुतिभिः अपास्तसमस्तरूपश्च, 'स्वे महिम्नि' इत्यादिश्रुतिभिरपाकृताधारश्च, 'एष सर्वेश्वरः' इत्यादिश्रुतिभिरधिगतनिर्मर्यादैश्वर्यश्च शक्य उपास्यत्वेनेह प्रतिपत्तुम् । सर्वपाप्मविरहश्चादित्य पुरुषे सम्भवति, शास्त्रस्य मनुष्याधिकारतया देवतायाः पुण्यपापयोरनधिकारात् । रूपादिमत्त्वान्यथानुपपत्त्या च कार्यकारणात्मके जीवे उपास्यत्वेन विवक्षिते यत्तावदृगाद्यात्मकतयास्य सर्वात्मकत्वं श्रूयते तत्कथञ्चिदादित्यपुरुषस्यैव स्तुतिरिति आदित्यपुरुष एवोपास्यो न परमात्मेत्येवं प्राप्तम् । अनाधारत्वे च नित्यत्वं सर्वगतत्वं च हेतुः अनित्यं हि कार्यं कारणाधारमिति नानाधारं, नित्यमप्यसर्वगतं यत्तस्मादधरभावेनास्थितं तदेव तस्योत्तरस्याधार इति नानाधारं, तस्मादुभयमुक्तम् । एवं प्राप्तेऽभिधीयते – 'अन्तस्तद्धर्मोपदेशात्' ।

'सार्वात्म्यसर्वदुरितविरहाभ्यामिहोच्यते ।
ब्रह्मैवाव्यभिराचारिभ्यां सर्वहेतुर्विकारवत् ।।'

नामनिरुक्तेन हि सर्वपाप्मापादानतयास्योदय उच्यते । न चादित्यस्य देवतायाः

कश्चित्संसारी, न तु परमात्मा, ''हिरण्यश्मश्रुः'' इत्यादौ रूपादिश्रवणात्, परमात्मनश्चारूपत्वेन श्रुतत्वादिति प्राप्ते, परमात्मैवेति सिद्धान्तः, आदित्यवाक्ये ''सर्वेभ्यः पाप्मभ्य उदितः'' इति श्रुतस्य सर्वपापराहित्यस्य, अक्षिवाक्ये ''सैवर्क् तत्साम'' इत्यादौ श्रुतस्य सार्वात्म्यस्य च संसारिण्यसम्भवात् । रूपादिकन्तु नीरूपेऽपि सविशेषब्रह्मणि साधकानुग्रहार्थमैच्छिकमुपास्यं मायामयमस्ति ।

यद्वा – सर्वस्य कार्यजातस्य ब्रह्मोपादानकत्वादुपादेयस्य चोपादानादनन्यत्वात्, कार्यशरीरगतरूपादिभिर्ब्रह्म व्यपदिश्यते । मुमुक्षुं प्रति सविशेषनिरूपणं च मोक्ष-साधननिर्विशेषब्रह्मज्ञानार्थम् । यथोक्तम् –

---

कर्मानधिकारेऽपि सर्वपाप्मविरहः प्राग्भवीयधर्माधर्मरूपपाप्मसंभवे सति । न चैतेषां प्राग्भवीयो धर्म एवास्ति न पाप्मेति साम्प्रतम् । विद्याकर्मातिशयसमुदाचारेऽप्यनादि-भवपरम्परोपार्जितानां पाप्मनामपि प्रसुप्तानां सम्भवात् । नच श्रुतिप्रामाण्यादादित्य-शरीराभिमानिनः सर्वपाप्मविरह इति युक्तं, ब्रह्मविषयत्वेनाप्यस्याः प्रामाण्योपपत्तेः । नच विनिगमनाहेत्वभावः, तत्र तत्र सर्वपाप्मविरहस्य भूयोभूयो ब्रह्मण्येव श्रवणात् । तस्यैव चेह प्रत्यभिज्ञायमानस्य विनिगमनाहोतोर्विद्यमानत्वात् । अपिच सार्वात्म्यं जगत्कारणस्य ब्रह्मण एवोपपद्यते, कारणादभेदात्कार्यजातस्य, ब्रह्मणश्च जगत्काणत्वात् । आदित्य-शरीरभिमानिनस्तु जीवात्मनो न जगतकारणत्वम् । नच मुख्यार्थसम्भवे प्राशस्त्यलक्षणया स्तुत्यर्थता युक्ता । रूपवत्त्वं चास्य परानुग्रहाय कायनिर्माणेन वा, तद्विकारतया वा सर्वस्य कार्यजातस्य, विकारस्य च विकारवतोऽनन्यत्वात्तादृशरूपभेदेनोपदिश्यते, यथा 'सर्वगन्धः सर्वरसः' इति । नच ब्रह्मनिर्मितं मायारूपमनुवदच्छास्त्रमाशास्त्रं भवति, अपितु तां कुर्वत्, इति नाशास्त्रत्वप्रसङ्गः । यत्र तु ब्रह्म निरस्तसमस्तोपाधिभेदं ज्ञेयत्वेनोपक्षिप्यते, तत्र शास्त्रम् – 'अशब्दमस्पर्शमरूपमव्ययम्' इति प्रवर्तते । तस्माद्रूपवत्त्वमपि परमात्मन्युपपद्यते । एतेनैव मर्यादाधारभेदावपि व्याख्यातौ । अपि चादित्यदेहाभिमानिनः संसारिणोऽन्तर्यामी भेदेनोक्तः, स एवान्तरादित्य इत्यन्तः श्रुतिसाम्येन प्रत्यभिज्ञायमानो भवितुमर्हति । **तस्मात्ते धनसनय इति** । धनवन्तो विभूतिमन्त इति यावत् । कस्मात्पुनर्विभूतिमत्त्वं परमेश्वरपरिग्रहे घटत इत्यत आह – **यद्यद्विभूतिमदिति** । सर्वात्मकत्वेऽपि विभूतिमत्स्वेव परमेश्वरस्वरूपाभिव्यक्तिः, न त्वविद्यातमःपिहितपरमेश्वर-स्वरूपेष्वविभूतिमत्स्वित्यर्थः । **लोककामेशितृत्वमपीति** । अतोऽत्यन्तापारार्थ्यन्यायेन निरङ्कुशमैश्वर्यमित्यर्थः ॥२०॥

**निर्विशेषं परं ब्रह्म साक्षात्कर्तुमनीश्वराः ।**
**ये मन्दास्तेऽनुकम्प्यन्ते सविशेषनिरूपणैः ॥**
**इत्यादीत्याहुः ।**

ಅನುವಾದ - ಅದ್ವೈತಿಗಳ ಅಧಿಕರಣಶರೀರ ಹೀಗಿದೆ - ''ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ'' ''ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ'' ಈ ವಿಷಯವಾಕ್ಯದಲ್ಲಿ ಅಕ್ಷಿ ಹಾಗು ಆದಿತ್ಯರಲ್ಲಿ ಅಂತಸ್ಥನು ಶ್ರುತನಾಗಿದ್ದಾನೆ. ಈ ಅಂತಸ್ಥನು ಪರಮಾತ್ಮನೋ? ಅಥವಾ ಜೀವನೋ? ಎಂದು ಸಂಶಯ. ವಿದ್ಯೆಯ ಸಂಪಾದನೆ ಹಾಗು ಸತ್ಕರ್ಮದ ಅನುಷ್ಠಾನದಿಂದ ಸಂಸಾರಿಜೀವನೇ ಉನ್ನತಮಟ್ಟವನ್ನು ಪಡೆದು ಅಕ್ಷಿ ಹಾಗು ಆದಿತ್ಯರಲ್ಲಿ ಸ್ಥಿತನಾಗಿದ್ದಾನೆ. ಹೊರತು ಪರಮಾತ್ಮನಲ್ಲ. ಪರಮಾತ್ಮನಿಗಾದರೂ ಯಾವುದೇ ರೂಪವಿರುವುದಿಲ್ಲ. ಆದರೆ ಶ್ರುತಿಯು ''ಹಿರಣ್ಯಶ್ಮಶ್ರು'' ಎಂದು ರೂಪವನ್ನು ವರ್ಣಿಸುತ್ತಿದೆ. ಇಷ್ಟು ಪೂರ್ವಪಕ್ಷ.

ಪರಮಾತ್ಮನೇ ಅಕ್ಷಿಯಲ್ಲಿಯೂ ಆದಿತ್ಯನಲ್ಲಿಯೂ ಸ್ಥಿತನಾಗಿದ್ದಾನೆಂದು ಸಿದ್ಧಾಂತ. ಏಕೆಂದರೆ ಆದಿತ್ಯವಾಕ್ಯದಲ್ಲಿ ''ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ'' ಎಂದು ಸರ್ವಪಾಪರಾಹಿತ್ಯವು ಹೇಳಲ್ಪಟ್ಟಿದೆ. ಅಕ್ಷಿವಾಕ್ಯದಲ್ಲಿಯೂ ಕೂಡ ''ಸೈವ ಋಕ್ ತತ್ಸಾಮ'' ಎಂಬಲ್ಲಿ ಸಕಲ ಆತ್ಮಸ್ವರೂಪನೆಂದು ಹೇಳಲ್ಪಟ್ಟಿದೆ. ಇವೆರಡನ್ನು ಸಂಸಾರಿ ಜೀವನಲ್ಲಿ ಹೇಳಲು ಸಾಧ್ಯವಿಲ್ಲ. 'ಹಿರಣ್ಯಶ್ಮಶ್ರು' ಎಂಬ ರೂಪವನ್ನು ಶ್ರುತಿಯು ಹೇಳಿದೆಯಲ್ಲ? ಎಂದರೆ, ಅದು ಕೇವಲ ಸವಿಶೇಷಬ್ರಹ್ಮನಲ್ಲಿ ಇರುವಂತಹದ್ದು ಯಾವುದೇ ರೂಪವಿಲ್ಲದ ಶುದ್ಧಬ್ರಹ್ಮನು ಸಾಧಕರನ್ನು ಅನುಗ್ರಹಿಸುವುದಕ್ಕೋಸ್ಕರ ಮತ್ತು ಉಪಾಸನೆಗೆ ಅನುಗ್ರಹಿಸುವುದಕ್ಕೋಸ್ಕರ ಮಾಯಮಯರೂಪವನ್ನು ಸ್ವೀಕರಿಸುತ್ತಾನೆ. ಆ ರೂಪವನ್ನಷ್ಟೇ ಶ್ರುತಿಯು ವರ್ಣಿಸಿದೆ.

ಅಥವಾ ಸಕಲಕಾರ್ಯಗಳಿಗೆ ಬ್ರಹ್ಮನು ಉಪಾದಾನನಾದ್ದರಿಂದ ಹಿರಣ್ಯಶ್ಮಶ್ರುವಿಗೂ ಉಪಾದಾನನಾಗಿದ್ದಾನೆ. ಉಪಾದಾನ ಹಾಗು ಉಪಾದೇಯಗಳಿಗೆ ಅಭೇದವಿರುವುದರಿಂದ ಕಾರ್ಯವಾದ ಶರೀರದಲ್ಲಿನ ಹಿರಣ್ಯಶ್ಮಶ್ರುವನ್ನೇ ಶ್ರುತಿಯು ಕಾರಣನಾದ ಬ್ರಹ್ಮನಲ್ಲಿ ಹೇಳುತ್ತಿದೆ ಮುಮುಕ್ಷುವನ್ನು ಕುರಿತು. ಹೀಗೆ ಸವಿಶೇಷಬ್ರಹ್ಮನನ್ನು ಉಪದೇಶಿಸುವುದು ತಪ್ಪಲ್ಲ. ಮೋಕ್ಷಕ್ಕೆ ಸಾಧನವಾದ ನಿರ್ವಿಶೇಷಬ್ರಹ್ಮನ ಜ್ಞಾನಕ್ಕೆ ಇದು ಅನುಕೂಲವೇ ಆಗಿದೆ. ಇದನ್ನೇ ಹೀಗೆ ಹೇಳಿದ್ದಾರೆ -

ನಿರ್ವಿಶೇಷಂ ಪರಂ ಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಾಃ ।
ಯೇ ಮಂದಾಸ್ತೇಽನುಕಂಪ್ಯಂತೇ ಸವಿಶೇಷನಿರೂಪಣೈಃ ॥

ನಿರ್ವಿಶೇಷನಾದ ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಮಂದಜನರಿಗೆ ಸಾಮರ್ಥ್ಯವಿಲ್ಲ. ಆದಕ್ಕೋಸ್ಕರ ಸವಿಶೇಷಬ್ರಹ್ಮನನ್ನು ನಿರೂಪಿಸುವ ಮೂಲಕ ಶ್ರುತಿಗಳು ಮಂದರ ಬಗ್ಗೆ ಅನುಕಂಪ ತೋರಿಸುತ್ತಿವೆ. ಇತ್ಯಾದಿಯಾಗಿ ಅದ್ವೈತಿಗಳು ಹೇಳುತ್ತಾರೆ.

ಕಠಿಣಪದಾರ್ಥ

ಅನ್ಯೇ = ಅದ್ವೈತಿಗಳು, ವಿದ್ಯಾಕರ್ಮಾತಿಶಯಲಬ್ಧೈಶ್ವರ್ಯಃ = ವಿದ್ಯೆ ಹಾಗು ಕರ್ಮಗಳ ಅತಿಶಯದಿಂದ ಹೊಂದಿದ ಐಶ್ವರ್ಯವುಳ್ಳ, ಸಾಧಕ ಅನುಗ್ರಹಾರ್ಥಂ = ಸಾಧನೆಯಲ್ಲಿ ತೊಡಗಿದವರ ಉದ್ಧಾರಕ್ಕೋಸ್ಕರ.

**प्रकाशः** – एवं स्वमतेऽधिकरणशरीरं सूत्रार्थं च समर्थ्य परमतं प्रत्याख्यातुमनुवदति **–अन्ये त्विति** ।। छान्दोग्ये आद्येऽध्याये श्रूयते ''य एषोऽन्तरादित्ये हिरण्मयः पुरुषो दृश्यते, हिरण्यश्मश्रुर्हिरण्यकेश आप्रणखात् सर्व एव सुवर्णस्तस्य यथा ''कप्यासं पुण्डरीकमेवमक्षिणी तस्योदिति नाम स एष सर्वेभ्यः पाप्मभ्य उदितः उदेति ह वै सर्वेभ्यः पाप्मभ्यो य एवं वेद इत्यधिदैवतमथाध्यात्मं य एषोऽन्तरक्षिणि पुरुषो दृश्यते'' इत्यादि । अत्र किमादित्यमण्डलादिस्थो हिरण्मयः पुरुषो विद्याकर्मवशात्प्राप्तैश्वर्यः कश्चित्संसारी उत परमात्मेति संशये, 'हिरण्यश्मश्रुः' इत्यादिरूपस्य, ''य एषोऽन्तरादित्ये'' इत्याद्याधारस्य, ''ये चामुष्मात् पराञ्चो लोकास्तेषां चेष्टे'' इति सावधिकैश्वर्यमर्यादायाश्च श्रवणात्तेषां च ''अरूपमस्पर्शं'' इति श्रुत्या अरूपे, ''स्वे महिम्नि'' इति श्रुत्याऽऽधाररहिते, ''एष सर्वेश्वरः'' इति श्रुत्या निरवधिकैश्वर्ये परमात्मन्यसम्भवात् ।

यथोक्तं भामत्यां –

मर्यादाधाररूपाणि संसारिणि परे तु न ।
तस्मादुपास्यस्संसारी कर्मानधिकृतो रविः ।।

इति एवं प्राप्ते, आदित्यवाक्ये ''सर्वेभ्यः पाप्मभ्यः'' इति सर्वपापराहित्यस्य, अक्षिवाक्ये ''सैव ऋक् तत्साम'' इत्यादौ सार्वात्म्यस्य परमात्मधर्मस्योपदेशात्तयोश्च ''अपहतपाप्मा'' इत्यादिश्रुत्या नित्यशुद्धे सर्वोपादानतया सर्वाभिन्ने परमात्मनीवान्यत्रायोगात्, ''य आदित्ये तिष्ठन्य अदित्यादन्तरो यमादित्यो न वेद'' इति आदित्यदेवतायाः परमेश्वराद्भेदोपदेशाच्च संसारिणोऽन्यः परमात्मैवान्तस्स्थ इति सिद्धान्त इत्यर्थः ।

ननु तर्हि रूपादिकमनुपपन्नमित्यतस्तदुक्तं द्वेधा परिहारमनुवदति – **रूपादिकं त्विति** ।। **साधकेति** ।। साधनानुष्ठातारः 'साधकाः' इत्यर्थः । नन्वेवं मुमुक्षुं प्रति

सविशेषनिरूपणमनर्थकमित्यत आह – **मुमुक्षुमिति** ।।

**गुरुराजीयम्** – ननु तर्हि परमात्मनो रूपरहितत्वाद्रूपप्रतिपादकश्रुतिविरुद्धेत्यत आह – **रूपादिकं त्विति** ।। मायामयं रूपं तत्र किमर्थमङ्गीकर्तव्यमित्यत आह – **साधकेति** ।। भक्तानामनुग्रहार्थमित्यर्थः । रूपप्रतिपादकश्रुतेर्गत्यन्तरमाह – **यद्वेति** ।।

ननु सविशेषज्ञानस्य मोक्षासाधनत्वान्मुमुक्षुं प्रति तदुपदेशो न युक्त इत्यत आह – **मुमुक्षुं प्रतीति** ।।

ವಿವರಣೆ - ಇಲ್ಲಿಯ ತನಕ ಸಿದ್ಧಾಂತದ ಪ್ರಕಾರ ಅಧಿಕರಣಶರೀರವನ್ನು ಮತ್ತು ಸೂತ್ರಾರ್ಥವನ್ನು ತೋರಿಸಿದ್ದಾಯಿತು. ಪ್ರಕೃತ ಅದ್ವೈತಿಗಳು ಹೇಳುವ ಸೂತ್ರಾರ್ಥವನ್ನು ಮತ್ತು ಅಧಿಕರಣಶರೀರವನ್ನು ನಿರಾಕರಣ ಮಾಡುವುದಕ್ಕಾಗಿ ಅನುವಾದ ಮಾಡುತ್ತಿದ್ದಾರೆ.

ಛಾಂದೋಗ್ಯದ ಪ್ರಥಮಾಧ್ಯಾಯದಲ್ಲಿ ವಿಷಯವಾಕ್ಯ ಹೀಗಿದೆ - "ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ, ಹಿರಣ್ಯಶ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ಸರ್ವ ಏವ ಸುವರ್ಣಸ್ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವ ಯಕ್ಷಣೀ ತಸ್ಯೋದಿತಿನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತಃ ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ । ಇತ್ಯಧಿದೈವತಮ್ । ಅಥಾಧ್ಯಾತ್ಮಮ್ । ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ" ಈ ವಿಷಯವಾಕ್ಯದಲ್ಲಿ ಆದಿತ್ಯಮಂಡಲಾದಿಗಳಲ್ಲಿರುವ ಹಿರಣ್ಮಯಪುರುಷನು ವಿದ್ಯೆ ಹಾಗು ಸತ್ಕರ್ಮದಿಂದ ಐಶ್ವರ್ಯವನ್ನು ಪಡೆದಿರುವ ಯಾರೋ ಒಬ್ಬ ಸಂಸಾರಿಜೀವಿಯೋ? ಅಥವಾ ಪರಮಾತ್ಮನೋ? ಎಂದು ಸಂಶಯ.

ಸಂಸಾರಿಜೀವನೆಂದು ಪೂರ್ವಪಕ್ಷ. ಏಕೆಂದರೆ "ಹಿರಣ್ಯಶ್ಮಶ್ರು" ಇತ್ಯಾದಿಯಾಗಿ ಹಿರಣ್ಯಶ್ಮಶ್ರು ಮೊದಲಾದ ರೂಪವನ್ನು ಶ್ರುತಿ ವರ್ಣಿಸಿದೆ. ಮತ್ತು "ಯ ಏಷೋಽಂತರಾದಿತ್ಯೇ" ಆಧಾರವು ಕೇಳುತ್ತಿದೆ. ಮತ್ತು ಯೇಚಾಮುಷ್ಮಾತ್ಪರಾಂಚೋ ಲೋಕಾಸ್ತೇಷಾಂ ಚೇಷ್ಟೇ" ಎಂಬುದಾಗಿ ಇರುವಂತಹ ಐಶ್ವರ್ಯಕ್ಕೆ ಸೀಮೆಯನ್ನು ಹೇಳುತ್ತಿದೆ. ಈ ಧರ್ಮಗಳನ್ನು ಜೀವನಲ್ಲಷ್ಟೇ ಹೇಳಲು ಸಾಧ್ಯ. ನಿರ್ಧರ್ಮಕನಾದ ಬ್ರಹ್ಮನಲ್ಲಿ ಈ ಯಾವ ಧರ್ಮಗಳನ್ನೂ ಹೇಳಲಾಗದು. ಏಕೆಂದರೆ "ಅರೂಪಮಸ್ಪರ್ಶಮ್" ಎಂಬ ಶ್ರುತಿಯು ಬ್ರಹ್ಮನಿಗೆ ರೂಪ ಸ್ಪರ್ಶ ಮೊದಲಾದ ಗುಣಗಳು ಇಲ್ಲವೆನ್ನುತ್ತಿದೆ. ಮತ್ತು "ಸ್ವೇ ಮಹಿಮ್ನಿ" ಎಂಬ ಶ್ರುತಿಯು ಬ್ರಹ್ಮನಿಗೆ ಯಾವುದೇ ಆಧಾರವಿಲ್ಲವೆನ್ನುತ್ತಿದೆ. "ಏಷಃಸರ್ವೇಶ್ವರಃ" ಎಂಬ ಶ್ರುತಿಯು ಪರಮಾತ್ಮನಲ್ಲಿ ನಿರವಧಿಕಐಶ್ವರ್ಯವನ್ನು ಹೇಳುತ್ತಿದೆ. ಹಾಗಾಗಿ ವಿಷಯವಾಕ್ಯದಲ್ಲಿ ಹೇಳಿದ ಯಾವುದೇ ಗುಣಗಳು ಬ್ರಹ್ಮನಲ್ಲಿ ಬಾರದ ಕಾರಣ ಬ್ರಹ್ಮನು ವಿಷಯವಾಕ್ಯದಿಂದ ಪ್ರತಿಪಾದ್ಯನಾಗಲಾರ. ಇದನ್ನೇ ಭಾಮತಿಯು ಹೇಳಿದೆ. -

ಮರ್ಯಾದಾಧಾರರೂಪಾಣಿ ಸಂಸಾರಿಣಿ ಪರೇ ತು ನ ।
ತಸ್ಮಾದುಪಾಸ್ಯಸ್ಸಂಸಾರೀ ಕರ್ಮಾನಧಿಕೃತೋ ರವಿಃ ॥
*ಅಂತಸ್ಥತ್ವಾಧಿಕರಣ*

ಎಂದು. ಸೀಮೆಯಿಂದ ಕೂಡಿರುವ ಮತ್ತು ಆಧಾರದಿಂದ ಕೂಡಿರುವ ರೂಪಗಳನ್ನು ಸಂಸಾರಿಯಾದ ಜೀವನಲ್ಲಷ್ಟೇ ಹೇಳಲು ಸಾಧ್ಯ. ಆದ್ದರಿಂದ ಉಪಾಸ್ಯನಾದವನು ಸಂಸಾರಿಯೇ ಆಗುತ್ತಾನೆ. ಕರ್ಮದಲ್ಲಿ ಅಧಿಕಾರವಿಲ್ಲದ ಸಂಸಾರಿಯಾಗಿರುವ ಸೂರ್ಯನನ್ನು ಉಪಾಸನೆ ಮಾಡಬೇಕೆಂದೇ ಶ್ರುತಿಯ ಅಭಿಪ್ರಾಯ. ಇಷ್ಟು ಪೂರ್ವಪಕ್ಷ.

ಸಿದ್ಧಾಂತ – ಆದಿತ್ಯವಾಕ್ಯದಲ್ಲಿ ''ಸರ್ವೇಭ್ಯಃ ಪಾಪ್ಮಭ್ಯಃ'' ಎಂದು ಸರ್ವಪಾಪರಾಹಿತ್ಯವನ್ನು ಹೇಳಲಾಗಿದೆ. ಮತ್ತು ''ಸೈವ ಋಕ್ ತತ್ ಸಾಮ'' ಎಂಬ ಶ್ರುತಿಯು ಸರ್ವಸ್ವರೂಪವೆಂದು ಹೇಳುತ್ತಿದೆ. ಈ ಧರ್ಮಗಳು ಕೇವಲ ಪರಮಾತ್ಮನಲ್ಲಿ ಹೇಳಲಷ್ಟೇ ಸಾಧ್ಯ. ಪರಮಾತ್ಮನು 'ಅಪಹತಪಾಪ್ಮಾ' ಎಂಬ ಶ್ರುತಿಸಿದ್ಧನಾದ್ದರಿಂದ ಸರ್ವಪಾಪರಹಿತನಾಗುತ್ತಾನೆ. ಸಕಲವಸ್ತುಗಳಿಗೆ ಉಪಾದನಾಕಾರಣನಾದ್ದರಿಂದ ಸರ್ವಸ್ವರೂಪನೆನಿಸುತ್ತಾನೆ. ಅಷ್ಟೇ ಅಲ್ಲದೇ ''ಯ ಆದಿತ್ಯೇ ತಿಷ್ಠನ್ನಾದಿತ್ಯಾದನ್ತರೋಽಯಮಾದಿತ್ಯೋ ನ ವೇದ'' ಈ ಶ್ರುತಿಯು ಪರಮಾತ್ಮನು ಸಂಸಾರಿಯಾದ ಆದಿತ್ಯನಿಗಿಂತ ಅತ್ಯಂತ ಭಿನ್ನನೆಂದು ಹೇಳುತ್ತಿದೆ. ಈ ಎಲ್ಲಾ ಕಾರಣಗಳಿಂದ ಸಂಸಾರಿಜೀವನಿಗಿಂತ ಅತ್ಯಂತಭಿನ್ನನಾದ ಪರಮಾತ್ಮನೇ ಅಂತಸ್ಥನಾಗುತ್ತಾನೆಂದು ಸಿದ್ಧಾಂತ.

ಹಾಗಾದರೆ ನಿರ್ಗುಣನಾದ ಪರಮಾತ್ಮನಲ್ಲಿ ರೂಪ ಸ್ಪರ್ಶ ಮೊದಲಾದ ಗುಣಗಳನ್ನು ಹೇಳಲು ಹೇಗೆ ಸಾಧ್ಯ? ಎಂಬ ಶಂಕೆಗೆ ಎರಡು ಬಗೆಯಲ್ಲಿ 'ರೂಪಾದಿಕಂ ತು' ಇತ್ಯಾದಿವಾಕ್ಯದಲ್ಲಿ ಉತ್ತರಿಸುತ್ತಿದ್ದಾರೆ.

ಹಾಗಾದರೆ ಮುಮುಕ್ಷುವಿಗೆ ಸವಿಶೇಷಬ್ರಹ್ಮನ ನಿರೂಪಣೆ ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ಮುಮುಕ್ಷುಂ ಪ್ರತಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.




ಮಾಯಾವಾದಿಗಳು ಈ ಅಧಿಕರಣದಲ್ಲಿ ಬೇರೆ ಶ್ರುತಿಯನ್ನು ವಿಷಯವಾಕ್ಯವೆಂದು ಸ್ವೀಕರಿಸಿ. ರೂಪಾದಿ ಜೀವಧರ್ಮವಿರುವುದರಿಂದ ಜೀವನೆಂದು ಪೂರ್ವಪಕ್ಷ ಮಾಡಿ. ಜೀವನಲ್ಲಿ ಇಲ್ಲದಿರುವ ಸರ್ವಪಾಪರಾಹಿತ್ಯ ಸರ್ವಾತ್ಮಕತ್ವ ಮೊದಲಾದ ಗುಣಗಳನ್ನು ಶ್ರುತಿಯು ಹೇಳುತ್ತಿರುವುದರಿಂದ ಇದು ನಿರ್ಗುಣಬ್ರಹ್ಮವಿಷಯ ಎಂದು ಸಿದ್ಧಾಂತ ಮಾಡುತ್ತಾರೆ. ಹಾಗಾದರೆ ಜೀವಧರ್ಮಗಳಾದ ರೂಪಾದಿಗಳನ್ನು ಹೇಗೆ ಬ್ರಹ್ಮನಲ್ಲಿ ಕೂಡಿಸುತ್ತೀರಿ? ಎಂದರೆ ನಿರ್ಗುಣಬ್ರಹ್ಮನಲ್ಲಿ ರೂಪಾದಿಗಳು ಇಲ್ಲದಿದ್ದರೂ. ಮಂದಜನರ ಉಪಾಸನೆಗೋಸ್ಕರ ಸ್ವೀಕರಿಸಿರುವ ರೂಪವಾದ, 'ಸಗುಣ' ಬ್ರಹ್ಮನಲ್ಲಿ ಮಾಯಾಮಯವಾದ ರೂಪಾದಿಗಳು ಇರುವುದರಿಂದ ಕೂಡುತ್ತವೆ. ಅಥವಾ ಎಲ್ಲಾ ಕಾರ್ಯಪ್ರಪಂಚಕ್ಕೆ ಬ್ರಹ್ಮ ಉಪಾದಾನನಾದ್ದರಿಂದ, ಉಪಾದಾನದಿಂದ ಅಭಿನ್ನವಾದ ಕಾರ್ಯ ಪ್ರಪಂಚದಲ್ಲಿರುವ ರೂಪಾದಿಗಳನ್ನಿಟ್ಟುಕೊಂಡು. ಬ್ರಹ್ಮನಲ್ಲಿ ರೂಪಾದಿಗಳ ವ್ಯವಹಾರವು ಕೂಡುತ್ತದೆ. ಶಾಸ್ತ್ರದಲ್ಲಿ ನಿರ್ಗುಣಬ್ರಹ್ಮನ ಉಪಾಸನೆಗೋಸ್ಕರ ಸಗುಣಬ್ರಹ್ಮನ ಉಪದೇಶವಿದೆ ಎಂದು ಹೇಳುತ್ತಾರೆ.



## ರಾಮಾನುಜರ ಅಧಿಕರಣರಚನಾ ರೀತಿಯ ಅನುವಾದ

**तात्पर्यचन्द्रिका –**

**केचित्तु इदमेव वाक्यमुदाहृत्यैवमेव च पूर्वपक्षयित्वा "तस्य यथा कप्यासं पुण्डरीकमेवमक्षिणी" इति श्रुतपुण्डरीकाक्षत्वं सिद्धान्तयुक्तिमाहुः[1] ।**

---

(१) रामानुजभाष्यम् –

इदमाम्नायते छान्दोग्ये- 'य एषोऽन्तरादित्ये हिरण्मयः पुरुषो दृश्यते हिरण्यश्मश्रुर्हिरण्य-केश आप्रणखात् सर्व एव सुवर्णः । तस्य यथा कप्यासं पुण्डरीकमेवमक्षिणी । तस्योदिति नाम । स एष सर्वेभ्यः पाप्मभ्य उदितः । उदेति ह वै सर्वेभ्यः पाम्पभ्यो य एवं वेद । तस्यर्क्च साम च गेष्णौ इत्यधिदैवतम्', (छा. १-६-६) 'अथाध्यात्मम्, । अथ य एषोऽन्तरक्षिणि पुरुषो दृश्यते सैवर्क् तत् साम तदुक्थ्यं तद्यजुस्तद्ब्रह्म । तस्यैतस्य तदेव रूपम्, यदमुष्य रूपम् । यावमुष्य गेष्णौ, तौ गेष्णौ । यन्नाम, तन्नाम' (छा. १-७-१-५) इति ।।

तत्र सन्दिह्यते - किमयम् अक्ष्यादित्यमण्डलान्तर्वर्ती पुरुषः पुण्योपचयनिमित्तैश्वर्यः आदित्यादिशब्दाभिलप्यो जीव एव, आहोस्वित् तदतिरिक्तः परमात्मेति । किं युक्तम् । उपचितपुण्यो जीव एवेति । कुतः । सशरीरत्वश्रवणात् । शरीरसम्बन्धो हि जीवानामेव सम्भवति । कर्मानुगुणप्रियाप्रिययोगाय हि शरीरसम्बन्धः । अत एव हि कर्मसम्बन्धरहितस्य मोक्षस्य प्राप्यत्वमशरीरत्वेनोच्यते, 'न ह वै सशरीरस्य सतः प्रियाप्रिययोरपहतिरस्ति । अशरीरं वा व सन्तं न प्रियाप्रिये स्पृशतः' (छा. ८-१२-१) इति । सम्भवति च पुण्यातिशयात् ज्ञानाधिक्यं शक्त्याधिक्यञ्च । अत एव लोककामेशत्वादि तस्यैवोपपद्यते । तत एव चोपास्यत्वं फलदायित्वञ्च; पापक्षपणकरत्वेन मोक्षोपयोगित्वञ्च । मनुष्येष्वप्युपचितपुण्याः केचित् ज्ञानशक्त्यादिभिरधिकतरा दृश्यन्ते; ततश्च सिद्धगन्धर्वादयः; ततश्च देवाः; ततश्चेन्द्रादयः । अतो ब्रह्मादिष्वन्यतम एवैकैकस्मिन् कल्पे पुण्यविशेषेणैव-म्भूतमैश्वर्य प्राप्तो जगत्सृष्ट्याद्यपि करोतीति । जगत्काणत्वजगदन्तरात्मत्वादिवाक्यम् अस्मिन्नेवोपचित पुण्यविशेषे सर्वज्ञे सर्वशक्तौ वर्तते । अतो न जीवादतिरिक्तः परमात्मा नाम कश्चिदस्ति । एवञ्च सति, 'अस्थूलमनण्वह्रस्वम्' (बृ.५-८-८) इत्यादयो जीवात्मनः स्वरूपाभिप्राया भवन्ति । मोक्षशास्त्राण्यपि तत्स्वरूपतत्प्राप्त्युपायोपदेशपराणि इति ।।

।। सिद्धान्तः ।।

एवं प्राप्ते अभिधीयते अन्तस्तद्धर्मोपदेशात् । अन्तरादित्ये अन्तरक्षिणि च यः पुरुषः प्रतीयते, स जीवादन्यः परमात्मैव । कुतः । तद्धर्मोपदेशात् । जीवेष्वसम्भवन्

**तदुभयमपि न, अस्मद्रीत्या आनन्दमयाधिकरणाक्षेपाय अदृश्यत्वादिगुणयुक्तस्य स्वप्रकरणस्थभेदव्यपदेशवतश्च वाक्यस्योदाहरणत्वसम्भवे तद्रहितस्य तदयोगात् । उक्तं हि त्वयैव – ''य आदित्यमन्तरो यमयति इति श्रुत्यन्तरे भेदव्यपदेशात्'' इति ।**

ಅನುವಾದ - ರಾಮಾನುಜರು ಹೀಗೆ ಹೇಳುತ್ತಾರೆ - ಅದ್ವೈತಿಗಳು ಹೇಳುವ ವಿಷಯವಾಕ್ಯವನ್ನೇ ಇವರೂ ಸಹ ಉದಾಹರಿಸುತ್ತಾರೆ. ಮತ್ತು ಅದ್ವೈತಿಗಳು ಹೇಳುವಂತೆ ಪೂರ್ವಪಕ್ಷ ಮಾಡುತ್ತಾರೆ. ಆದರೆ ಸಿದ್ಧಾಂತದಲ್ಲಿ ಸ್ವಲ್ಪ ವ್ಯತ್ಯಾಸವಿದೆ ''ತಸ್ಯ ಯಥಾ ಕಪ್ಯಾಸಂ ಪುಂಡರೀಕಂ'' ಎಂಬ ಶ್ರುತಿಯು ಅಂತಸ್ಥನಲ್ಲಿ ಪುಂಡರೀಕಾಕ್ಷತ್ವಗುಣವನ್ನು ಹೇಳುತ್ತಿದೆ. ಪರಮಾತ್ಮನು ಪುಂಡರೀಕಾಕ್ಷನೆಂದು ಪ್ರಸಿದ್ಧನಾದ್ದರಿಂದ ಅವನನ್ನೇ ಅಂತಸ್ಥನೆನ್ನಬೇಕು. ಹೀಗೆ ಪುಂಡರೀಕಾಕ್ಷತ್ವವನ್ನು ಸಿದ್ಧಾಂತಯುಕ್ತಿಯನ್ನಾಗಿ ಹೇಳುತ್ತಾರೆ.

ಇವರಿಬ್ಬರ ಅಧಿಕರಣಶರೀರವು ಸರಿಯಲ್ಲ. ನಾವು ಉದಾಹರಿಸಿದ ವಿಷಯವಾಕ್ಯವನ್ನು ಇಟ್ಟುಕೊಂಡಾಗ ಅದೃಶ್ಯತ್ವಗುಣದ ಮೂಲಕವಾಗಿ ಅನಂದಮಯಾಧಿಕರಣವನ್ನು ಆಕ್ಷೇಪಿಸುವುದು ಸುಲಭ. ಆನಂದಮಯಾಧಿಕರಣವನ್ನು ಆಕ್ಷೇಪಿಸಬೇಕಾದರೆ ಅದೃಶ್ಯತ್ವಗುಣವನ್ನು ಹೇಳುವ ವಿಷಯವಾಕ್ಯವನ್ನೇ ಉದಾಹರಿಸಬೇಕಲ್ಲವೇ? ಅಷ್ಟೇ ಅಲ್ಲದೆ ನಾವು ಉದಾಹರಿಸುವ ವಿಷಯವಾಕ್ಯದಲ್ಲಿ ಸ್ಪಷ್ಟವಾಗಿ ಭೇದವ್ಯಪದೇಶವಿದೆ. ನೀವು ಭೇದವ್ಯಪದೇಶಕ್ಕೋಸ್ಕರ ವಾಕ್ಯಾಂತರವನ್ನು ಉದಾಹರಿಸುತ್ತೀರಿ. ಭೇದವ್ಯಪದೇಶ ಮಾಡಿರುವ ವಿಷಯವಾಕ್ಯವನ್ನೇ ಉದಾಹರಿಸಲು ಬರುವಾಗ ಭೇದವ್ಯಪದೇಶವಿಲ್ಲದ ವಿಷಯವಾಕ್ಯವನ್ನು ಉದಾಹರಿಸುವುದು ಸರಿಯಲ್ಲವೆಂದು ನೀವೇ ಹೇಳಿದ್ದೀರಿ. ''ಯ ಆದಿತ್ಯಮಂತರೋ ಯಮಯತೀತಿ ಶ್ರುತ್ಯಂತರೇ ಭೇದವ್ಯಪದೇಶಾತ್'' ಎಂದು ಬೇರೆ ಶ್ರುತಿಯಲ್ಲಿ ಭೇದವ್ಯಪದೇಶವು (ಆದಿತ್ಯನನ್ನು ಪ್ರೇರೇಪಿಸುತ್ತಾನಾದ್ದರಿಂದ ಬೇರೆ ಶ್ರುತಿಯಲ್ಲಿ ಭೇದವು ಹೇಳಲ್ಪಟ್ಟಿದೆ) ಎಂದು.

**प्रकाशः – दूषणसौकर्याय रामानुजमतमपि पूर्वसाम्यादत्रैवानुवदति – केचित्त्विति ।। ''हिरण्यश्मश्रुः'' इत्यादिशरीरित्वश्रवणाज्जीव एवान्तस्स्थस्तस्यैव स्वकर्मफलभोगाय शरीरयोगोपपत्तेरिति प्राप्ते,**

---

तदतिरिक्तस्यैव परमात्मनो धर्मोऽयम् अपहतपाप्मत्वादिः 'स एष सर्वेभ्यः पाप्मभ्य उदितः' (छा. १-६-७) इत्यादिनोपदिश्यते । अपहतपाप्मत्वं ह्यपहतकर्मत्वम्; कर्म-वश्यतागन्धरहितत्वमित्यर्थः । कर्माधीनसुखदुःखभागित्वेन कर्मवश्या हि जीवाः । अतोऽपहतपाप्मत्वं जीवादन्यस्य परमात्मन एव धर्मः ।।

सर्वपापराहित्यपुण्डरीकाक्षत्वादिलिङ्गात्परमात्मा, ''हिरण्यश्मश्रुः'' इत्यादिना उक्तस्य ''आदित्यवर्णं तमसः परस्तात्'' इत्यादिश्रुतेरप्राकृतशरीरस्य परमपुरुषे सम्भवात्, ''य आदित्ये तिष्ठन् य आत्मनि तिष्ठन्'' इति भेदव्यपदेशाच्चेत्याहुरित्यर्थः ।

उदाहरणानौचित्येन मतद्वयमपि निरस्यति – **तदुभयमपि नेति** ।। 'आक्षेपाय' तदाक्षेपेण पूर्वपक्षोत्थानाय । 'तद्रहितस्य' पूर्वाक्षेपकलिङ्गरहितस्य भेदव्यपदेशरहितस्य च उदाहरणत्वायोगादित्यर्थः । स्वप्रकरणे स्वभेदव्यपदेशो नेत्येतदुभयसम्मतमित्याह – **उक्तमिति** ।। 'त्वया' इति वादिद्वयं प्रत्युच्यते । तथा च श्रुत्यधिकरणसङ्गत्योरभावादयुक्तोऽयं विचार इति भावः ।

**गुरुराजीयम्** – प्रायेणैकार्थत्वेन दूषणसाम्यात्केचिन्मतमप्युपन्यस्यति – **केचित्त्विति** ।। किमत्रानन्दमयाधिकरणसङ्गतस्वप्रकरणस्थभेदव्यपदेशवतो वाक्यस्योदाहरणत्वासम्भवाद् वाक्यान्तरोदाहरणमुत विशेषयुक्तिलाभार्थम् । न द्वितीयः । तददर्शनात् । नाद्य इत्याह – **अस्मद्रीत्येति** ।। न मदुदाहृतेपि भेदव्यपदेशोस्त्येवेत्यत आह – **उक्तं हीति** ।।

ವಿವರಣೆ - ವಸ್ತುತಸ್ತು ಅದ್ವೈತಮತವನ್ನು ನಿರಾಕರಿಸಿದ ಮೇಲೆ ರಾಮಾನುಜಮತವನ್ನು ಅನುವಾದ ಮಾಡಬೇಕು. ಆದರೆ ಇಲ್ಲಿ ಗ್ರಂಥಕಾರರು ನಿರಾಕರಣೆಗೆ ಅನುಕೂಲವಾಗುವುದಕ್ಕೋಸ್ಕರ ಇಲ್ಲಿಯೇ ಅನುವಾದ ಮಾಡುತ್ತಿದ್ದಾರೆ. ವಿಷಯವಾಕ್ಯದಲ್ಲಿ 'ಹಿರಣ್ಯಶ್ಮಶ್ರುಃ' ಇತ್ಯಾದಿಯಾದ ಜೀವಲಿಂಗವು ಕೇಳಿಸುವುದರಿಂದ ಜೀವನೇ ಅಂತಸ್ಥನಾಗುತ್ತಾನೆ. ಅಂತಹ ಜೀವನೇ ತನ್ನ ಕರ್ಮದ ಫಲವನ್ನು ಅನುಭವಿಸುವುದಕ್ಕೋಸ್ಕರ ಶರೀರಸಂಬಂಧಾದಿಗಳು ಕೂಡುತ್ತವೆಂದು ಪೂರ್ವಪಕ್ಷ.

ಸರ್ವಪಾಪರಾಹಿತ್ಯ ಮತ್ತು ಪುಂಡರೀಕಾಕ್ಷತ್ವ ಇತ್ಯಾದಿ ಲಿಂಗಗಳಿರುವುದರಿಂದ ಪರಮಾತ್ಮನೇ ಅಂತಸ್ಥನಾಗುತ್ತಾನೆ. 'ಹಿರಣ್ಯಶ್ಮಶ್ರುಃ' ಇತ್ಯಾದಿಯಾಗಿ ಹೇಳಲ್ಪಟ್ಟ ''ಆದಿತ್ಯವರ್ಣಂ ತಮಸಃ ಪರಸ್ತಾತ್'' ಇತ್ಯಾದಿ ಶ್ರುತಿಯಲ್ಲಿ ಅಪ್ರಾಕೃತಶರೀರವನ್ನು ಹೇಳಲಾಗಿದೆ. ಇದು ಪರಮಪುರುಷನಲ್ಲಿ ಕೂಡುತ್ತದೆ ಹೊರತು ಜೀವನಲ್ಲಿ ಕೂಡುವುದಿಲ್ಲ.

ಮತ್ತು ''ಯ ಆದಿತ್ಯೇ ತಿಷ್ಠನ್ ಯ ಆತ್ಮನಿ ತಿಷ್ಠನ್'' ಎಂದು ಸ್ಪಷ್ಟವಾಗಿ ಸಂಸಾರಿಜೀವನಿಂದ ಪರಮಾತ್ಮನಿಗೆ ಭೇದವು ಕೇಳಿಸುತ್ತಿದೆ. ಹೀಗೆ ರಾಮಾನುಜರು ಮಾಡಿದ ಅಧಿಕರಣಶರೀರ.

ಅದ್ವೈತಿಗಳಿಗೂ ರಾಮಾನುಜರಿಗೂ ಇಷ್ಟು ವ್ಯತ್ಯಾಸ. ಅದ್ವೈತಿಗಳು ರೂಪಿತ್ವಲಿಂಗದಿಂದ ಪೂರ್ವಪಕ್ಷ ಮಾಡಿದ್ದಾರೆ. ರಾಮಾನುಜರು ಶರೀರಿತ್ವಲಿಂಗದಿಂದ ಪೂರ್ವಪಕ್ಷ ಮಾಡಿದ್ದಾರೆ. ಆದರೆ ಇವರಿಬ್ಬರೂ

ಉದಾಹರಿಸಿದ ವಿಷಯವಾಕ್ಯಗಳು ಅನುಚಿತವಾಗಿವೆ. ಇವರಿಬ್ಬರ ನಿರಾಕರಣೆಯನ್ನು 'ತದುಭಯಮಪಿ ನ' ಎಂಬ ವಾಕ್ಯದಿಂದ ಮಾಡಿದ್ದಾರೆ. ನೀವು ಉದಾಹರಿಸಿದ ವಿಷಯವಾಕ್ಯದಿಂದ ಆನಂದಮಯಾಧಿಕರಣವನ್ನು ಆಕ್ಷೇಪಿಸುವುದೇ ಕಷ್ಟ. ಅಂದರೆ ಆನಂದಮಯಾಧಿಕರಣದ ಪೂರ್ವಪಕ್ಷವೇ ಹುಟ್ಟಲಾರದು ಎಂದು ಅರ್ಥ. ಏಕೆಂದರೆ ಆನಂದಮಯಾಧಿಕರಣವನ್ನು ಆಕ್ಷೇಪಿಸುವ ಲಿಂಗವಾಗಲಿ ಭೇದವ್ಯಪದೇಶವನ್ನು ಹೇಳುವ ಲಿಂಗವಾಗಲಿ ಕಾಣಿಸುತ್ತಿಲ್ಲ. ಈ ವಿಷಯವಾಕ್ಯದಲ್ಲಿ ಭೇದವ್ಯಪದೇಶವಿಲ್ಲವೆಂದು ಇಬ್ಬರೂ ಅಂಗೀಕರಿಸಿದ್ದಾರೆಂದು "ಉಕ್ತಮ್" ಎಂಬ ವಾಕ್ಯದಿಂದ ಹೇಳಿದ್ದಾರೆ. ಹೀಗೆ ವಿಷಯವಾಕ್ಯವೇ ಸರಿಯಿಲ್ಲದ ಕಾರಣ ಶ್ರುತಿಸಂಗತಿ ಅಧಿಕರಣಸಂಗತಿಗಳನ್ನು ಹೇಳಲಾಗದು.




ರಾಮಾನುಜಭಾಷ್ಯದಲ್ಲಿ ಈ ಅಧಿಕರಣದಲ್ಲಿ ಮಾಯಾವಾದಿಗಳು ಹೇಳುವ ವಿಷಯವಾಕ್ಯವನ್ನಿಟ್ಟುಕೊಂಡು ಅವರು ಹೇಳಿದಂತೆಯೇ ಜೀವನೆಂದು ಪೂರ್ವಪಕ್ಷ ಮಾಡಿ ಶ್ರುತಿಯಲ್ಲಿ ಹೇಳಿದ 'ಪುಂಡರೀಕಾಕ್ಷತ್ವವು' ಜೀವನಿಗೆ ಕೂಡುವುದಿಲ್ಲವಾದ್ದರಿಂದ ಪರಮಾತ್ಮನೆಂದು ಸಿದ್ಧಾಂತ ಮಾಡುತ್ತಾರೆ. ಆದರೆ ಅವರಿಬ್ಬರು ಹೇಳಿದ್ದೂ ಸರಿಯಿಲ್ಲ. ನಾವು ಹೇಳಿದಂತೆ ಆನಂದಮಯಾಧಿಕರಣಕ್ಕೆ ಸಂಗತವಾದ ಭೇದವ್ಯಪದೇಶವಿರುವ ಶ್ರುತಿಯನ್ನು ವಿಷಯವಾಕ್ಯವಾಗಿ ಮಾಡಲು ಬರುವಾಗ ಅವರ ವಾಕ್ಯವನ್ನು ವಿಷಯವಾಕ್ಯವೆನ್ನುವುದು ಸರಿಯಲ್ಲ.





## ಅದ್ವೈತಮತದ ವಿಶೇಷದೋಷಗಳ ನಿರೂಪಣೆ

**तात्पर्यचन्द्रिका –**

**किञ्च –**

**नीरूपेऽपि च रूपादि यद्युपास्त्यर्थमुच्यते ।**
**जीवेऽपि पाप्माभावादि तर्ह्युपास्त्यर्थमुच्यताम् ।।**

**ननु जीवे पाप्मनो व्यावहारिकत्वात्तद्राहित्यं प्रातिभासिकम्, ब्रह्मणि तु नीरूपत्वस्य तात्त्विकत्वात् रूपं व्यावहारिकम् । नच व्यावहारिकविषयत्वेन प्रामाण्यसम्भवे श्रुतेः प्रातिभासिकविषयत्वं युक्तमिति चेन्न,**

**त्वन्मत उपास्यस्य नामादौ ब्रह्मत्वादेः प्रातिभासिकत्वनियमेनात्रापि तथैव युक्तत्वात् । त्वन्मते चोपासनावाक्यस्य तत्कर्तव्यतामात्रपरत्वेन अर्थपरत्वा-**

भावात् । कर्तव्यतायां च व्यावहारिकप्रातिभासिकविभागाभावात् । श्रुतौ श्रद्धालुना श्रुत्योर्विषयभेदेन तात्त्विकविषयत्वस्यैव वक्तव्यत्वाच्च ।

नच हिरण्यश्मश्रुत्वादिकमन्यतः प्राप्तम्, येन तद्वाक्यमनुवादकं सत्तत्रा-तात्पर्यादप्रमाणं न स्यात् ।

किञ्च – जीवे पाप्मादेर्व्यावहारिकत्वेऽपि तद्राहित्यश्रुतिस्त्वम्पदलक्ष्यशुद्ध-रूपाभिप्राया पारमार्थिकविषयैवास्तु । नच शुद्धं रूपं ब्रह्मैवेति ब्रह्मविषयत्व-मेवेति । वाच्यं, त्वया अस्य वाक्यस्य सविशेषाशुद्धब्रह्मविषयत्वाङ्गीकारात् ।

ಅನುವಾದ - ಮತ್ತು

ನೀರೂಪೇಽಪಿ ಚ ರೂಪಾದಿ ಯದ್ವ್ಯುಪಾಸ್ತ್ಯರ್ಥಮುಚ್ಯತೇ ।
ಜೀವೇಽಪಿ ಪಾಪ್ಮಾಭಾವಾದಿ ತರ್ಹ್ಯುಪಾಸ್ತ್ಯರ್ಥಮುಚ್ಯತಾಮ್ ॥ ೧ ॥

ಬ್ರಹ್ಮನಲ್ಲಿ ಯಾವುದೇ ರೂಪವಿಲ್ಲದ್ದರೂ ಸಹ ಉಪಾಸನೆಗೋಸ್ಕರ ಶ್ರುತಿಗಳಲ್ಲಿ ರೂಪಾದಿಗಳ ವರ್ಣನೆಯು ಕಾಣಿಸುತ್ತದೆಂದು ಅದ್ವೈತಿಗಳು ಹೇಳುವುದಾದರೆ. ಜೀವನಲ್ಲಿಯೂ ಸಹ ಪಾಪರಾಹಿತ್ಯಾದಿ ಧರ್ಮಗಳನ್ನು ಉಪಾಸನೆಗೋಸ್ಕರ ಹೇಳಲಿ.

ಶಂಕೆ - ಜೀವನಲ್ಲಿ ಪಾಪಾದಿಗಳು ವ್ಯಾವಹಾರಿಕವಾಗಿವೆ. ಆದ್ದರಿಂದ ಅವುಗಳ ಅಭಾವವು ಪ್ರಾತಿಭಾಸಿಕವಾಗಿವೆ. ಆದರೆ ಬ್ರಹ್ಮನಲ್ಲಿ ನೀರೂಪತ್ವವು ತಾತ್ವಿಕವಾಗಿರುವುದರಿಂದ ರೂಪವು ವ್ಯಾವಹಾರಿಕ. ಆದ್ದರಿಂದ ವ್ಯಾವಹಾರಿಕವಿಷಯತ್ವೇನ ಶ್ರುತಿಗೆ ಪ್ರಾಮಾಣ್ಯವನ್ನು ಹೇಳಲು ಬರುವಾಗ ಪ್ರತಿಭಾಸಿಕವಿಷಯತ್ವವನ್ನು ಹೇಳುವುದು ಸರಿಯಲ್ಲ.

ಸಮಾಧಾನ - ನಿಮ್ಮ ಮತದಲ್ಲಿ ನಾಮಾದಿಗಳಲ್ಲಿ ಬ್ರಹ್ಮತ್ವವನ್ನು ಉಪಾಸನೆ ಮಾಡುತ್ತೀರಿ. ನಾಮಾದಿಗಳು ಜಡವಾದ್ದರಿಂದ ಅವುಗಳಲ್ಲಿರುವ ಜಡತ್ವವೂ ಕೂಡ ಪ್ರಾತಿಭಾಸಿಕವೆಂದೇ ಒಪ್ಪುತ್ತೀರಿ. ಆದರೆಂತೆ ಪ್ರಕೃತದಲ್ಲಿಯೂ ಪ್ರಾತಿಭಾಸಿಕವಾದ ಸರ್ವಪಾಪರಾಹಿತ್ಯವನ್ನು ಜೀವನಲ್ಲಿ ಆರೋಪ ಮಾಡಿ ಉಪಾಸನೆ ಮಾಡಬಹುದು.

ಮತ್ತು ನಿಮ್ಮ ಮತದಲ್ಲಿ ಉಪಾಸನಾವಾಕ್ಯಕ್ಕೆ ಕೇವಲ ಉಪಾಸನೆಯ ಕರ್ತೃತ್ವಕ್ಕಷ್ಟೇ ತಾತ್ಪರ್ಯವೆಂದು ಹೇಳುತ್ತೀರಿ. ಹೊರತು ಆಯಾ ವಾಕ್ಯಗಳ ಅರ್ಥದಲ್ಲಿ ತಾತ್ಪರ್ಯವಿದೆಯೆಂದು ಒಪ್ಪುವುದಿಲ್ಲ. ಉಪಾಸನಾಕರ್ತೃತ್ವದಲ್ಲಾದರೂ ವ್ಯಾವಹಾರಿಕ ಅಥವಾ ಪ್ರಾತಿಭಾಸಿಕವೆಂಬ ವಿಭಾಗವು ಇರುವುದಿಲ್ಲ. ಕೇವಲ ಉಪಾಸನೆಯ ವಿಷಯದಲ್ಲಷ್ಟೇ ವ್ಯಾವಹಾರಿಕತ್ವವನ್ನು ಅಥವಾ ಪ್ರಾತಿಭಾಸಿಕತ್ವವನ್ನು ಹೇಳಬಹುದು. ಒಂದುವೇಳೆ ಶ್ರುತಿಯ ಪ್ರಾಮಾಣ್ಯವಿಷಯದಲ್ಲಿ ನಿಮಗೆ ಅಷ್ಟು

ಶ್ರದ್ಧೆ ಇರುವುದಾದರೆ, ರೂಪಶ್ರುತಿಗೂ ಮತ್ತು ಅರೂಪಶ್ರುತಿಗೂ ವಿಷಯಭೇದವನ್ನು ಅಂಗೀಕರಿಸಿ ಎರಡೂ ವಿಷಯಗಳು ತಾತ್ವಿಕ ವಿಷಯವೆಂದೇ ಹೇಳಬೇಕು. ಆವಾಗ ಮಾತ್ರ ಶ್ರುತಿಗೆ ಪ್ರಾಮಾಣ್ಯ ಬರಲು ಸಾಧ್ಯ.

ಒಂದು ವೇಳೆ ಹಿರಣ್ಯಶ್ಮಶ್ರುತ್ವ ಮೊದಲಾದವುಗಳು ಬೇರೆ ಪ್ರಮಾಣದಿಂದ ಪ್ರಾಪ್ತವಾಗಿದ್ದರೆ ಆವಾಗ ಪ್ರಕೃತ ಶ್ರುತಿಯು ಅದನ್ನು ಅನುವಾದ ಮಾಡುತ್ತಿದೆ ಎಂದು ಹೇಳಬೇಕು. ಆದರೆ ಬೇರೆ ಯಾವುದೇ ಪ್ರಮಾಣದಿಂದಲೂ ಪ್ರಾಪ್ತವಾಗಿಲ್ಲ. ಒಂದುವೇಳೆ ಅನುವಾದಕವಾಗಿದ್ದರೆ ಹಿರಣ್ಯಶ್ಮಶ್ರುತ್ವಾದಿಗಳಲ್ಲಿ ತಾತ್ಪರ್ಯ ಇರುತ್ತಿರಲಿಲ್ಲ. ಆದ್ದರಿಂದ ಅಪ್ರಾಮಾಣ್ಯದೋಷವು ಬರುವುದಿಲ್ಲವೆಂದು ಹೇಳಬಹುದು.

ಮತ್ತು ಜೀವನಲ್ಲಿ ಪಾಪಗಳು ವ್ಯಾವಹಾರಿಕವಾಗಿವೆ. ಆದರೂ ಸಹ ಅವುಗಳ ರಾಹಿತ್ಯಗಳನ್ನು ತ್ವಂ ಪದದಿಂದ ಲಕ್ಷಿತನಾದ ಶುದ್ಧಬ್ರಹ್ಮನಲ್ಲಿ ಹೇಳಬಹುದು. ಆದ್ದರಿಂದ ಪಾಪರಾಹಿತ್ಯವನ್ನು ಪಾರಮಾರ್ಥಿಕವಿಷಯವನ್ನೇ ಒಪ್ಪಬಹುದು ಎಂದು ಹೇಳಬಾರದು. ಏಕೆಂದರೆ ಶುದ್ಧರೂಪನಾದ ಬ್ರಹ್ಮನೆಂದು ಹೇಳಿದರೆ ಶ್ರುತಿಗೆ ಬ್ರಹ್ಮವಿಷಯತ್ವವನ್ನು ಒಪ್ಪಿದಂತಾಯಿತು. ಆದರೆ ನಿಮ್ಮ ಮತದಲ್ಲಿ ಈ ವಾಕ್ಯಕ್ಕೆ ಸವಿಶೇಷನಾದ ಅಶುದ್ಧಬ್ರಹ್ಮನು ವಿಷಯನೆಂದು ಒಪ್ಪಲಾಗಿದೆ.

### ಕಠಿಣಪದಾರ್ಥ

ನಾಮಾದೌ = ನಾಮಬ್ರಹ್ಮೇತ್ಯುಪಾಸೀತ ಎಂಬಲ್ಲಿ, ಶ್ರುತ್ಯೋಃ = ನೀರೂಪತ್ವ ಮತ್ತು ಸರೂಪತ್ವ ಹೇಳುವ ಎರಡೂ ಶ್ರುತಿಗಳಿಗೆ, ವಿಷಯಭೇದೇನ = ಪ್ರಾಕೃತ ಮತ್ತು ಅಪ್ರಾಕೃತ ವಿಷಯಭೇದದಿಂದ

**प्रकाशः** – एवं साधारणेन मतद्वयं निरस्य, प्रातिस्विकरूपेणाप्यद्वैतिमतं निरसितुं, तन्मते सिद्धान्ते रूपादेर्या द्वेधागतिरुक्ता तत्राद्ये तावद्दोषमाह – **किञ्चेति** ।। **उच्यतामिति** ।। अविद्यमानारोपस्योभयत्र तुल्यत्वात् । तथा च सिद्धान्तानुत्थितिरिति भावः। ''रोगाख्यायां ण्वुल् बहुलम्'' इति बहुलग्रहणाद्वा, ''क्तिन्नाबादिभ्यः'' इति क्तिन्नन्तत्वेन वा 'उपास्ति' इति साधु ।

वैषम्यमाशङ्क्य निरस्यति – **नन्विति** ।। ततश्च किमित्यत आह – **नचेति** ।। **नामादाविति** ।। ''नाम ब्रह्मेत्युपासीत'' इत्युक्तनामादावित्यर्थः । यदपि व्यावहारिकपरत्वलाभायेत्थमुक्तिरिति, तदयुक्तं वैषम्यकथनमित्याह – **त्वन्मते चेति** ।।

'श्रुत्योः' नीरूपत्वसरूपत्वश्रुत्योः, 'विषयभेदेन' प्राकृताप्राकृतादिविषयभेदेनेत्यर्थः । नतु व्यावहारिकरूपविषयत्वेनाप्रामाण्यमित्यर्थः ।

### ಪರಿಪೂರ್ಣಚಂದ್ರಿಕಾ

ननु मिथ्यारूपविषयत्वेऽपि नाप्रामाण्यं, तत्र तात्पर्याभावादित्यत आह – **नचेति** ।।

**गुरुराजीयम्** – ननूदाहृतेपि वाक्येऽपहतपाप्मत्वादीनां ब्रह्मलिङ्गानां सत्त्वात्तैरन्तस्थस्य ब्रह्मत्वनिर्णयसम्भवेन तदुदाहरणं युक्तमेवेत्यत आह –**किञ्चेति** ।। तथा चापहतपाप्मत्वस्य जीवेऽपि सम्भवान्न तेन ब्रह्मत्वनिश्चय इति भावः ।

ननु जीवस्य कल्पितत्वेन तत्र पापराहित्यस्य पारमार्थिकत्वासम्भवेन प्रतियोगितन्निवृत्त्योर्वैलक्षण्यस्यावश्यकत्वेन पापराहित्यप्रतियोगिभूतपापस्य व्यावहारिकत्वेन तन्निवृत्तिरूपस्य पापराहित्यस्य व्यावहारिकत्वासम्भवेन प्रातिभासिकत्वस्य वक्तव्यत्वेन जीवे पापराहित्यमुपास्त्यर्थं वक्तुमशक्यम् । तथा सति श्रुतेरतत्वावेदकत्वं स्यादित्याशङ्क्ते – **नन्विन्विति** ।। तथात्वे नीरूपे ब्रह्मणि रूपमप्युपास्त्यर्थं न वक्तुं शक्यम् । तस्यापि प्रातिभासिकत्वेन श्रुतेरप्रामाण्यापातादित्यत आह – **ब्रह्मणि त्विति** ।।

किञ्च उपासनावाक्यानामुपासनाकर्तव्यत्वे तात्पर्यस्य विद्यमानत्वेनोपासनाविषयीभूतेऽर्थे प्रातिभासिकव्यावहारिकभेदसद्भावेपि तत्रोपासनावाक्यानां तात्पर्याभावात् तत्तात्पर्य विषयीभूतोपासनाकर्तव्यतायाश्च सर्वत्र व्यावहारिकत्वेन तत्र तात्पर्यवतां वाक्यानां प्रामाण्यसम्भवेन जीवे पापराहित्यस्य प्रातिभासिकत्वेपि न दोष इत्याशयेनाह – **त्वन्मत इति** ।।

किञ्च ब्रह्मणि रूपस्य व्यावहारिकत्वेप्यतात्विकत्वेन तत्प्रतिपादकवाक्यानामप्रामाण्यापत्त्या रूपस्य व्यावहारिकत्वं परित्यज्य तात्विकत्वमेवाभ्युपेयम् । न चैवं विरोधः । रूपवत्तदभावस्यापि तात्विकत्वाभ्युपगमादिति वाच्यम् । एकविषयत्वे हि विरोधः । प्रकृते च रूपवदेव किञ्चिद्वस्तु हिरण्यश्मश्रुरित्यादिवाक्येन प्रतिपाद्यते रूपाभावप्रतिपादकेन च तादृशं वस्त्विति विषयभेदाभ्युपगमेन विरोधाभावात् ।

तस्माद्रूपादेर्व्यावहारिकत्वाभ्युपगमेऽप्रामाण्यतादवस्थ्यमेवेत्यभिप्रायेण दूषणान्तरमाह – **श्रुतौ श्रद्धालुनेति** ।। न रूपादिश्रुतेस्तात्विकरूपादिपरत्वं कल्प्यम् । प्रयोजनाभावात् । न चैव रूपप्रतिपादकवाक्यानामप्रामाण्यं स्यादिति वाच्यम् । तेषामनुवादकत्वेन तात्पर्याभावादित्यत आह – **नचेति** ।।

तथा च मानान्तरप्राप्त्यभावेन रूपप्रतिपादकवाक्यानामनुवादकत्वं न सम्भवतीति तत्र तात्पर्येऽवश्यं वाच्ये अतात्विकार्थपरत्वेनाप्रामाण्यं स्यादेवेति तत्परिहारार्थं रूपादेर्व्यावहारिकत्वमेव परित्यज्यतामिति भावः । यदुक्तं जीवगत-पापाभावविषयत्वे श्रुतेः प्रातिभासिकविषयत्वेनाप्रामाण्यं स्यादिति तद्दूषयति – **किञ्चेति ।।**

ननु जीवस्य विशिष्टत्वात्तत्र तात्त्विकपापराहित्यं न सम्भवतीत्यत आह – **त्वं पदेति ।।** ननु शुद्धरूपस्य ब्रह्मत्वात्तद्विषयत्वे ब्रह्मविषयत्वमेव स्यादित्याशङ्क्य निषेधति – **नचेति ।।**

ವಿವರಣೆ - ಇಲ್ಲಿಯ ತನಕ ಸಾಧಾರಣದೋಷದಿಂದ ರಾಮಾನುಜಮತವನ್ನು ಮತ್ತು ಅದ್ವೈತಮತವನ್ನು ನಿರಾಕರಿಸಿದ್ದಾಯಿತು. ಪ್ರಕೃತ ಅದ್ವೈತಮತವನ್ನು ವಿಶೇಷದೋಷದಿಂದ ನಿರಾಕರಣೆ ಮಾಡುತ್ತಿದ್ದಾರೆ. ಅದ್ವೈತಿಗಳು ತಮ್ಮ ಸಿದ್ಧಾಂತದಲ್ಲಿ ಬ್ರಹ್ಮನಲ್ಲಿರುವ ರೂಪವನ್ನು ಹೇಳುವ ವಾಕ್ಯಗಳಿಗೆ ಎರಡುವಿಧವಾದ ಸಮಾಧಾನವನ್ನು ಹೇಳಿದ್ದಾರೆ. ಅವುಗಳಲ್ಲಿ ಮೊದಲನೆಯ ಸಮಾಧಾನಕ್ಕೆ 'ಕಿಂಚ' ಇತ್ಯಾದಿ ದೋಷಗಳನ್ನು ಹೇಳುತ್ತಿದ್ದಾರೆ.

ಉಪಾಸನೆಗೋಸ್ಕರ ಅವಿದ್ಯಮಾನವಾದ ಆರೋಪವನ್ನು ಹೇಳುವುದಾದರೆ ಜೀವನಲ್ಲಿಯೂ ಸಹ ಬ್ರಹ್ಮನಲ್ಲಿರುವ ಧರ್ಮಗಳನ್ನು ಉಪಾಸನೆಗೋಸ್ಕರ ಆರೋಪಿಸಬೇಕಾದೀತು. ಆದ್ದರಿಂದ ಅದ್ವೈತಿಗಳ ಸಿದ್ಧಾಂತವೇ ನಿಲ್ಲಲು ಸಾಧ್ಯವಿಲ್ಲ.

ಗ್ರಂಥಕಾರರು ಉಪಾಸ್ತಿ ಎಂದು ಪ್ರಯೋಗಿಸಿದ್ದಾರೆ. ಉಪ + ಆಸ್ + ಶಬ್ದದ ಮೇಲೆ ಕ್ತಿನ್ + ಪ್ರತ್ಯಯ ಬಂದರೆ ಉಪಾಸ್ ಎಂಬ ಶಬ್ದವು ಸಿದ್ಧವಾಗುತ್ತದೆ. "ರೋಗಾಖ್ಯಾಯಾಂ ಣ್ವುಲ್ ಬಹುಲಂ" ಎಂಬ ಸೂತ್ರದಲ್ಲಿ ಬಹುಲ ಶಬ್ದವನ್ನು ಪ್ರಯೋಗಿಸಿದ್ದರಿಂದ ಕ್ತಿನ್ ಪ್ರತ್ಯಯವು ಬಂದಿದೆ.

ಬ್ರಹ್ಮನಿಗೂ ಮತ್ತು ಜೀವನಿಗೂ ಇರುವ ವೈಷಮ್ಯವನ್ನು ಆಶಂಕಿಸಲು 'ನನು' ಇತ್ಯಾದಿ ಗ್ರಂಥವು ಹೊರಟಿದೆ. ಮಿಥ್ಯಾರೂಪವು ವಿಷಯವಾದರೂ ಶ್ರುತಿಗೆ ಅಪ್ರಾಮಾಣ್ಯದೋಷವು ಬರುವುದಿಲ್ಲ. ಏಕೆಂದರೆ ಮಿಥ್ಯಾರೂಪದಲ್ಲಿ ಶ್ರುತಿಗೆ ತಾತ್ಪರ್ಯವಿರುವುದಿಲ್ಲ ಎಂಬ ಶಂಕೆಗೆ 'ನಚ ಶುದ್ಧಮ್' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.




ಮಾಯಾವಾದಿಗಳ ರೀತಿಯಿಂದ ಈ ಅಧಿಕರಣವನ್ನು ವ್ಯಾಖ್ಯಾನಿಸಿದರೆ ಮತ್ತೊಂದು ದೋಷವನ್ನು ಹೇಳುತ್ತಾರೆ. ನಿರೂಪನಾದ ಬ್ರಹ್ಮನಲ್ಲಿ ಉಪಾಸನೆಗೋಸ್ಕರ ಕಲ್ಪಿತವಾದ ರೂಪವನ್ನು ಹೇಳುವುದಾದರೆ ಜೀವನಲ್ಲಿಯೂ ಕಲ್ಪಿತವಾದ ಬ್ರಹ್ಮನ ಧರ್ಮಗಳನ್ನಿಟ್ಟುಕೊಂಡು ಕೂಡಿಸಬಹುದು. ಹಾಗಾಗಿ ಅವರ

ಸಿದ್ಧಾಂತವೇ ಕೂಡುವುದಿಲ್ಲ. ಅದಕ್ಕೆ ಬ್ರಹ್ಮನಲ್ಲಿ ಕಲ್ಪಿಸಿದ ರೂಪಾದಿಗಳು ವ್ಯಾವಹಾರಿಕವಾದವುಗಳು. ಆದರೆ ಜೀವನಲ್ಲಿ ಕಲ್ಪಿಸುವ 'ಪಾಪರಾಹಿತ್ಯಾದಿಗಳು' ನಮ್ಮ ಸಿದ್ಧಾಂತದಂತೆ ಪ್ರಾತಿಭಾಸಿಕವಾಗುತ್ತವೆ. ಹಾಗಾದಾಗ ಶ್ರುತಿಗೆ ಅಪ್ರಾಮಾಣ್ಯಬರುತ್ತದೆ. ಆದ್ದರಿಂದ ನಾವು ಹೇಳಿದಂತೆಯೇ ಸಿದ್ಧಾಂತ ಮಾಡಬೇಕು ಎಂದು ಹೇಳಬಹುದು. ಆದರೆ ನಿಮ್ಮ ನ್ಯಾಯದಂತೆಯೇ ಬ್ರಹ್ಮನಲ್ಲಿ ಕಲ್ಪಿಸುವ ಧರ್ಮಗಳನ್ನು ಪ್ರಾತಿಭಾಸಿಕ ಎಂದು ಒಪ್ಪುವುದು ಅನಿವಾರ್ಯ. ಮತ್ತು ಶ್ರುತಿಯನ್ನು ಪ್ರಮಾಣವೆನ್ನುವುದಾದರೆ ಶ್ರುತಿಯಲ್ಲಿ ಹೇಳುವ ಧರ್ಮಗಳು ಜೀವನದ್ದಾಗಿರಲಿ ಅಥವಾ ಬ್ರಹ್ಮನದ್ದಾಗಿರಲಿ ಎರಡನ್ನೂ ತಾತ್ವಿಕವೆಂದೇ ಹೇಳಬೇಕು. ಹಾಗಾಗಿ ಜೀವನಲ್ಲಿಯೇ ಈ ಶ್ರುತಿಯನ್ನು ಕೂಡಿಸಬಹುದು.



• • • • •

## ಅದ್ವೈತಿಗಳು ಬ್ರಹ್ಮನ ಗುಣಗಳನ್ನು ಒಪ್ಪಲೇಬೇಕಾದ ಅನಿವಾರ್ಯತೆಯ ನಿರೂಪಣೆ

### तात्पर्यचन्द्रिका

**यच्च – उपादानं ब्रह्म कार्यकारणयोरभेदात् कार्यगतधर्मैर्व्यपदिश्यत इत्युक्तम्, तन्न । स्वर्णे कटकत्वादेरिव कटकादावपि स्वर्णत्वव्यवहारेण ब्रह्मधर्मैः कार्य एव व्यपदेशापातात् ।**

**न चैतदधिकरणप्रतिपाद्यं सविशेषं ब्रह्म शरीरादिभ्रमाधिष्ठानम्, येनाधिष्ठान एव आरोप्यधर्मव्यवहारः, न तु विपरीतमिति शङ्क्येत । कथं च अधिष्ठाने ब्रह्मणि पापराहित्याद्यसाधारणरूपेण भासमाने तत्राध्यस्तगतधर्मव्यवहारः ।**

**किञ्चैवं ब्रह्मणो विरुद्धधर्माधिकरणनानाकार्योपादानतया ब्रह्मविषयक-वाक्यविरोधः काप्यपरिहार्यः स्यात् ।**

ಅನುವಾದ - ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆ. ಕಾರ್ಯ ಮತ್ತು ಕಾರಣಗಳಿಗೆ ಅಭೇದವಿರುವುದರಿಂದ ಕಾರ್ಯದಲ್ಲಿರುವ ಧರ್ಮಗಳನ್ನು ಕಾರಣನಾದ ಬ್ರಹ್ಮನಲ್ಲಿ ಹೇಳಬಹುದು. (ಉಪಾದೇಯವಾದ ಶರೀರಗಳಲ್ಲಿರುವ 'ಹಿರಣ್ಯಶ್ಮಶ್ರು' ಇತ್ಯಾದಿಗಳನ್ನು ಉಪಾದಾನಬ್ರಹ್ಮನಲ್ಲಿ ಹೇಳಬಹುದು.) ಎಂದು ಹಿಂದೆ ಅದ್ವೈತಿಗಳು ಹೇಳಿದ್ದರು.

ಇದು ತಪ್ಪು. ಕಾರಣವಾದ ಸುವರ್ಣದಲ್ಲಿ ಕಾರ್ಯದಲ್ಲಿರುವ ಕಟಕತ್ವವನ್ನು(ಕಡಗದಲ್ಲಿರುವ) ಧರ್ಮವನ್ನು ವ್ಯವಹರಿಸಲಾಗುತ್ತದೆ. ಅದರಂತೆ ಕಾರಣತ್ವದಲ್ಲಿರುವ ಸುವರ್ಣತ್ವವನ್ನು ಕಾರ್ಯದಲ್ಲಿಯೂ ಲೌಕಿಕರು ವ್ಯವಹರಿಸುತ್ತಾರೆ. ಅದರಂತೆ ಕಾರ್ಯಧರ್ಮವನ್ನು ಬ್ರಹ್ಮನಲ್ಲಿ ವ್ಯವಹರಿಸುವಂತೆ ಬ್ರಹ್ಮಧರ್ಮವನ್ನು ಕಾರ್ಯದಲ್ಲಿ ವ್ಯವಹರಿಸಬಹುದು. (ಬ್ರಹ್ಮನಲ್ಲಿರುವ

ಸರ್ವಪಾಪರಾಹಿತ್ಯಾದಿಗಳನ್ನು ಜೀವನಲ್ಲಿಯೂ ಹೇಳಬಹುದಾದ್ದರಿಂದ ಜೀವನೇ ಅಂತಸ್ಥನಾಗುತ್ತಾನೆ.)

ಈ ಅಧಿಕರಣದಿಂದ ಪ್ರತಿಪಾದ್ಯನಾದವನು ಸವಿಶೇಷಬ್ರಹ್ಮನೆಂದು ಅದ್ವೈತಿಗಳೇ ಒಪ್ಪಿದ್ದಾರೆ. ಇಂತಹ ಸವಿಶೇಷಬ್ರಹ್ಮನು ಶರೀರಾದಿಭ್ರಮಕ್ಕೆ ಅಧಿಷ್ಠಾನನಾಗುವುದಿಲ್ಲ. ಒಂದುವೇಳೆ ಅಧಿಷ್ಠಾನನಾಗಿದ್ದರೆ ಆರೋಪ್ಯದಲ್ಲಿರುವ ಧರ್ಮವನ್ನು ವ್ಯವಹರಿಸಬಹುದಿತ್ತು. ಆದರೆ ಸವಿಶೇಷಬ್ರಹ್ಮನು ಆರೋಪ್ಯನೇ ಆಗಿರುವುದರಿಂದ ಅವನಲ್ಲಿ ಅಧಿಷ್ಠಾನಧರ್ಮವನ್ನು ವ್ಯವಹರಿಸಲು ಸಾಧ್ಯವಿಲ್ಲ.

ಮತ್ತು ಅಧಿಷ್ಠಾನಭೂತನಾದ ಬ್ರಹ್ಮನಲ್ಲಿ ಪಾಪರಾಹಿತ್ಯಾದಿ ಅಸಾಧಾರಣ ಧರ್ಮಗಳು ಈಗಾಗಲೇ ತೋರುತ್ತಿರುವುದರಿಂದ ಪುನಃ ಅಧ್ಯಸ್ತದಲ್ಲಿರುವ ಧರ್ಮವನ್ನು ವ್ಯವಹರಿಸಲು ಆಗುವುದಿಲ್ಲ.
ಅಧಿಷ್ಠಾನದಲ್ಲಿ ಯಾವುದೇ ಧರ್ಮವು ತೋರದಿದ್ದಾಗ ಮಾತ್ರ ಅಧ್ಯಸ್ತಧರ್ಮವನ್ನು ಆರೋಪಿಸಲು ಸಾಧ್ಯ.

ಮತ್ತು ಬ್ರಹ್ಮನು ವಿರುದ್ಧಧರ್ಮಗಳಿಗೆ ಅಧಿಕರಣಗಳಾದ ಅನೇಕ ಕಾರಣಗಳಿಗೆ ಉಪಾದಾನನಾಗಿದ್ದಾನೆಂದು ನೀವೇ ಒಪ್ಪುತ್ತಿದ್ದೀರಿ. ಹಾಗಾದರೆ ಬ್ರಹ್ಮವಿಷಯಕವಾದ ಶ್ರುತಿಗಳಿಗೆ ಬರುವ ಪರಸ್ಪರವಿರೋಧವನ್ನು ಏಕೆ ಪರಿಹರಿಸಬೇಕು. ವಿರುದ್ಧವಾದ ಅನೇಕ ಧರ್ಮಗಳನ್ನು ಬ್ರಹ್ಮನಲ್ಲಿ ಆರೋಪಿಸಬಹುದೆಂದು ನೀವೇ ಹೇಳಿದ್ದೀರಿ.

**प्रकाशः** – रूपादेराद्यां गत्युक्तिं निरस्य द्वितीयामनूद्य निरस्यति – **यच्चेति** ।। **ब्रह्मधर्मैरिति** ।। तथा च पापराहित्यादिब्रह्मधर्माणां ब्रह्मकार्ये जीवेऽपि सम्भवेनास्मिन्नपि परिहारे सिद्धान्तानुन्मेष इति भावः । ननु –

समारोप्यस्य धर्मेण विषयो रूपवान्भवेत् ।
विषयस्य तु रूपेण समारोप्यं न रूपवत् ।।

इत्यद्वैतिभिरङ्गीकारेण अधिष्ठान एवारोप्यधर्मव्यपदेश इति कथमेवमापादनमित्यत आह – **न चेति** ।। 'ब्रह्म' इत्यन्तमनुवादः । अत्र प्रतिपाद्यस्याधिष्ठानत्वमेव नेत्युक्तं अङ्गीकृत्याप्याह – **कथं चेति** ।। 'भासमाने' अत्र वाक्ये प्रतीयमाने । किञ्चैवं सति मीमांसामात्रोच्छेद इत्याह – **किञ्चैवमिति** ।।

**गुरुराजीयम्** – कार्यकारणयोरभेदेपि न कार्यगतधर्मैः कारणं व्यपदिश्यते । किन्तु कारणगतैरेव धर्मैः कार्यं व्यपदिश्यते । तथा लोके दृष्टत्वात् । तथा च ब्रह्मधर्मैर्जगत्येव व्यपदेशः स्यादित्याह – **स्वर्ण इति** ।।

स्यादेतत् । यदि स्वर्णस्येव ब्रह्मणः परिणामिकारणत्वमभ्युपगम्येत । न चैवम् । शुक्ते रजतारोपाधिष्ठानत्ववत्सविशेषब्रह्मणः शरीरभ्रमाधिष्ठानत्वरूप-कारणत्वस्याभ्युपगमात् । तथा चाध्यस्तगतैर्धर्मैस्तदधिष्ठानं यथा व्यपदिश्यते नैवमधिष्ठानधर्मेणाध्यस्तम् । तथा च प्रकृतेप्यध्यस्तशरीरादिगतरूपादिना तदधिष्ठानस्य ब्रह्मणो व्यपदेशसम्भवेपि न ब्रह्मगतेन पापादिराहित्येन जीवव्यपदेश इत्यत आह – **नचेति** ।। सविशेषमिति हेतुगर्भं विशेषणम् । स्वयं कल्पितस्य शरीरादिभ्रमाधिष्ठानत्वायोगादिति भावः ।

किञ्च ब्रह्मणोऽध्यस्तगतरूपाद्यारोपानुपपत्तिः । असाधारणाधिष्ठानभूतब्रह्म-ज्ञानसद्भावात् । अन्यथा तस्य कदापि निवृत्तिर्न स्यात् । नच पापराहित्येन ब्रह्मज्ञाने पापारोपासम्भवेपि नीरूपत्वेन तज्ज्ञानाभावाद्रूपारोपः सम्भवतीति वाच्यम् । पापाराहित्येपि शुद्धत्वस्यैव प्रयोजकत्वान्निर्विशेषत्वेन ज्ञानस्यावश्यकत्वेन तज्ज्ञाने विद्यमाने रूपाद्यारोपानुपपत्तिरित्याह – **कथं चेति** ।।

किञ्च ब्रह्मणः कारणत्वाकारणत्वप्रतिपादकवाक्यविरोधोपि न परिहार्यः । तत्राऽपि ब्रह्मणोपि कारणोपादानत्वेन कारणधर्माणां ब्रह्मणि व्यपदेशोपपत्तेरित्याह – **किञ्चैवमिति** ।।

ವಿವರಣೆ - ಬ್ರಹ್ಮನಲ್ಲಿರುವ ರೂಪಾದಿಗಳಿಗೆ ಅದ್ವೈತಿಗಳ ಮೊದಲನೆಯ ಸಮಾಧಾನವನ್ನು ನಿರಾಕರಿಸಿ ಎರಡನೆಯ ಸಮಾಧಾನವನ್ನು ಪ್ರಕೃತ ನಿರಾಕರಿಸುತ್ತಿದ್ದಾರೆ. ಸರ್ವಪಾಪರಾಹಿತ್ಯಾದಿಗಳನ್ನು ಬ್ರಹ್ಮನ ಧರ್ಮವೆಂದು ಅದ್ವೈತಿಗಳು ಹೇಳುತ್ತಾರೆ. ರೂಪಾದಿಗಳನ್ನು ಜೀವನ ಧರ್ಮವೆನ್ನುತ್ತಾರೆ. ಜೀವ ಮತ್ತು ಬ್ರಹ್ಮರಿಗೆ ಉಪಾದಾನ ಉಪಾದೇಯಭಾವದಿಂದ ಅಭೇದವನ್ನು ಒಪ್ಪುತ್ತಾರೆ. ಅಭೇದವಿರುವುದರಿಂದ ಜೀವನಲ್ಲಿರುವ ರೂಪಾದಿಗಳನ್ನು ಬ್ರಹ್ಮನಲ್ಲಿ ವ್ಯವಹರಿಸಬಹುದೆಂದು ಅದ್ವೈತಿಗಳ ವಾದ. ಆದರೆ ಇದೇ ಅದ್ವೈತಿಗಳು ಬ್ರಹ್ಮನಲ್ಲಿರುವ ಸರ್ವಪಾಪರಾಹಿತ್ಯಾದಿಧರ್ಮಗಳನ್ನು ಅಭೇದವಿದ್ದರೂ ಸಹ ಜೀವನಲ್ಲಿ ಒಪ್ಪಲಾರರು. ಆದರೆ ಇದು ಹೇಗೆ ಸರಿ? ಎಂಬುದೇ ಅದ್ವೈತಿಗಳಿಗೆ ನಮ್ಮ ಪ್ರಶ್ನೆ. ಕಾರ್ಯಕಾರಣಗಳಿಗೆ ಅಭೇದವಿದ್ದಾಗ ಕಾರ್ಯದಲ್ಲಿರುವ ಧರ್ಮವು ಕಾರಣದಲ್ಲಿ ಬರುವುದಾದರೆ ಕಾರಣದಲ್ಲಿರುವ ಧರ್ಮವು ಕಾರ್ಯದಲ್ಲಿಯೂ ಬರಲೇಬೇಕಲ್ಲವೇ? ಹೀಗೆ ಅದ್ವೈತಿಗಳಿಗೆ ಜೀವನಲ್ಲಿ ಬ್ರಹ್ಮನ ಧರ್ಮವನ್ನು ಒಪ್ಪುವುದು ಅನಿವಾರ್ಯವಾಗುತ್ತದೆ. ಇದರಿಂದ ಅದ್ವೈತಿಗಳಿಗೆ ಸಿದ್ಧಾಂತಸ್ಥಾಪನೆಯು ಸಾಧ್ಯವಾಗುವುದಿಲ್ಲ.

ಶಂಕೆ - ಸಮಾರೋಪ್ಯಸ್ಯ ಧರ್ಮೇಣ ವಿಷಯೋ ರೂಪವಾನ್ಭವೇತ್ ।
ವಿಷಯಸ್ಯ ತು ರೂಪೇಣ ಸಮಾರೋಪ್ಯಂ ನ ರೂಪವತ್ ।।
*ಅಂತಸ್ಥತ್ವಾಧಿಕರಣ*

ಅಧಿಷ್ಠಾನವು ಆರೋಪ ಮಾಡುವ ಧರ್ಮದಿಂದ ಧರ್ಮವುಳ್ಳದ್ದಾಗುತ್ತದೆ. ಆದರೆ ಆರೋಪ್ಯವು ಅಧಿಷ್ಠಾನದಲ್ಲಿರುವ ಧರ್ಮದಿಂದ ಧರ್ಮವುಳ್ಳದ್ದಾಗುವುದಿಲ್ಲ. ಹೀಗೆ ಅಂಗೀಕರಿಸುವುದರಿಂದ ಅಧಿಷ್ಠಾನದಲ್ಲಷ್ಟೇ ಆರೋಪ್ಯದ ಧರ್ಮವನ್ನು ಹೇಳಬಹುದು. ಪ್ರಕೃತ ಅಧಿಷ್ಠಾನನಾದ ಬ್ರಹ್ಮನಲ್ಲಿ ಆರೋಪ್ಯರಾದ ಜೀವರಲ್ಲಿರುವ ಧರ್ಮವನ್ನು ಹೇಳಬಹುದಷ್ಟೇ ಹೊರತು ಅಧಿಷ್ಠಾನನಾದ ಬ್ರಹ್ಮನಲ್ಲಿರುವ ಧರ್ಮಗಳನ್ನು ಆರೋಪ್ಯನಾದ ಜೀವನಲ್ಲಿ ಹೇಳಲಾಗದು.

ಸಮಾಧಾನ - 'ಏತದಧಿಕರಣಪ್ರತಿಪಾದ್ಯಂ ಸವಿಶೇಷಂ ಬ್ರಹ್ಮ' ಎಂದು ಅನುವಾದ ಮಾಡಿ 'ನಚ ಶರೀರಾದಿ ಬ್ರಹ್ಮಾಧಿಷ್ಠಾನಮ್' ಎಂದು ನಿಷೇಧಿಸಿದ್ದಾರೆ. ಅಂದರೆ ಈ ಅಧಿಕರಣದಿಂದ ಪ್ರತಿಪಾದ್ಯನಾದ ಬ್ರಹ್ಮನಿಗೆ ಅಧಿಷ್ಠಾನತ್ವ ಕೂಡುವುದಿಲ್ಲ. ಅಥವಾ ಅಧಿಷ್ಠಾನತ್ವವನ್ನು ಬ್ರಹ್ಮನಲ್ಲಿ ಅಂಗೀಕರಿಸಿದರೂ ಸಹ ಜೀವನಲ್ಲಿರುವ ಧರ್ಮವನ್ನು ಬ್ರಹ್ಮನಲ್ಲಿ ಆರೋಪ ಮಾಡಲಾಗದೆಂದು 'ಕಥಂಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.




ಕಾರ್ಯಕಾರಣಗಳಲ್ಲಿ ಅಭೇದವಿರುವುದರಿಂದ ಬ್ರಹ್ಮೋಪಾದಾನಕವಾದ ಕಾರ್ಯದಲ್ಲಿರುವ ರೂಪಾದಿಗಳನ್ನಿಟ್ಟುಕೊಂಡು ಬ್ರಹ್ಮನಲ್ಲಿ ರೂಪಾದಿಗಳ ವ್ಯವಹಾರವಿದೆ ಎಂದರೆ. ಅದೇ ನ್ಯಾಯದಿಂದ ಬ್ರಹ್ಮನ ಧರ್ಮಗಳು ಜೀವನಲ್ಲಿವೆ ಎನ್ನಲು ಬರುತ್ತದೆ. ಬ್ರಹ್ಮನು ಕಾರ್ಯರೂಪ ಪ್ರಪಂಚದ ಅಧಿಷ್ಠಾನ ಎಂದಾಗಿದ್ದರೆ ಕಾರ್ಯದ ಧರ್ಮ ಬ್ರಹನಲ್ಲಿ ಹೇಳಬಹುದು. ಬ್ರಹ್ಮನ ಧರ್ಮ ಕಾರ್ಯದಲ್ಲಿ ಹೇಳಲು ಬರುವುದಿಲ್ಲವೆನ್ನಬಹುದಿತ್ತು. ಮತ್ತು ನಿಮ್ಮ ರೀತಿಯಿಂದ ವ್ಯವಹಾರ ಕೂಡಿಸುವುದಾದರೆ. ಬ್ರಹ್ಮನು ವಿರುದ್ಧವಾದ ಅನೇಕ ಕಾರ್ಯಗಳಿಗೆ ಉಪಾದಾನನಾದ್ದರಿಂದ ಬ್ರಹ್ಮನ ಕುರಿತ ವಾಕ್ಯಗಳಲ್ಲಿ ವಿರೋಧ ಬಂದರೆ ಹೀಗೆಯೇ ಹೇಳಿ ಕೂಡಿಸಲು ಬರುವುದರಿಂದ ಅದಕ್ಕೋಸ್ಕರ ಮೀಮಾಂಸಾ ಶಾಸ್ತ್ರ ಹೊರಟಿದ್ದು ವ್ಯರ್ಥವಾಗುತ್ತದೆ.





## ಅದ್ವೈತಿಗಳ 'ಸವಿಶೇಷ ನಿರ್ವಿಶೇಷ' ಕಲ್ಪನೆಯ ವಿಸ್ತಾರ ನಿರಾಕರಣೆ

### तात्पर्यचन्द्रिका

**यच्चोक्तम् – सविशेषनिरूपणं मोक्षसाधननिर्विशेषज्ञानार्थमिति, तन्न, "उदेति ह वै सर्वेभ्यः पाप्मभ्यो य एवं वेद" इति श्रुतसर्वपापनिवृत्तिरूपमुक्तिफलहानस्य अश्रुतफलान्तरकल्पनस्य चायोगात् ।**

ಪರಿಪೂರ್ಣಚಂದ್ರಿಕಾ

किञ्च – किं सविशेषज्ञानं निर्विशेषज्ञानार्थम्, किं वा तस्य ज्ञानविजातीत्यवृत्यन्तररूपमारोपितविषयमुपासनापरपर्यायं ध्यानम् ।

नाद्यः, निर्विशेषशब्देन विशेषाभावविशिष्टस्योक्तौ त्वन्मते विशिष्टज्ञानस्य मोक्षाहेतुत्वात्, तदभावेनोपलक्षितस्योक्तौ च काकेन गृहे संस्थानविशेषस्येव विशेषाभावेन विशेष्यस्यैवोपलक्ष्यत्वे, तस्य विशिष्टग्राहिणा ज्ञानेन प्रागेव ज्ञातत्वात्, अन्यस्योपलक्ष्यस्याभावात् । उपलक्ष्यत्वाकारेण च ज्ञानस्य त्वन्मते मोक्षासाधनत्वात् । नच विशेषणाविषयं विशेष्यज्ञानं प्रागसिद्धमिति वाच्यम्, विशिष्टज्ञानस्य विशेषणज्ञानाभावार्थत्वायोगात् । तथा च –

विशिष्टब्रह्मधीस्साध्या शुद्धधीरित्यसङ्गतम् ।
विशिष्टप्रत्यये यस्माद्विशेष्यं भासतेतराम् ।।

किञ्च – सविशेषज्ञानं निर्विशेषज्ञानस्य न तावत् दृष्टद्वारा हेतुः, तद्विशिष्टज्ञानजन्येनाज्ञानध्वंसेन, चित्तवशीकरणेन वा तदभावविशिष्टज्ञानस्य, तदभावोपलक्षितज्ञानस्य वा, तद्विशेषणाज्ञानस्य वा काप्यदर्शनात् । रूपादियुक्तपराग्भूतसविशेषज्ञानेन तद्विपरीतनिर्विशेषज्ञानायोगाच्च । निषेधोपयोगिनो बुद्धिपूर्वकारोपस्यापि शब्दप्रमाणानपेक्षत्वात् । न ह्यत्र 'घटोऽस्ति' इत्युक्त्वा अत्र 'स नास्ति' इति वक्तव्यम् ।

नाप्यदृष्टद्वारा, विहितक्रिया जन्यत्वाददृष्टस्य त्वन्मते ज्ञानस्य अविधेयत्वात् । नापि ज्ञानप्रतिबन्धकदुरितनिवृत्तिद्वारा, तस्य नित्यादिकर्मणैव निवृत्तेः । नित्यादिकर्मणामपीहैव शास्त्रे निरूपणापत्तेश्च । त्वन्मते ज्ञानस्याज्ञानमात्रनिवर्तकत्वाच्च । न च व्यावहारिकं दुरितं व्यावहारिकसविशेषब्रह्माज्ञानकार्यम्, । येनाज्ञाननिवृत्त्या तत्कार्यं पापं निवर्तेत ।

एतेन – सविशेषज्ञानसन्तानरूपम् निदिध्यासनम् अदृष्टद्वारा वा दुरितनिवृत्तिद्वारा वा, चित्तवशीकरणद्वारा वा निर्विशेषज्ञानार्थमिति निरस्तम् । श्रुतहान्याद्यापातात् । सविशेषनिदिध्यासनस्यापि निर्विशेषनिदिध्यासनवत्

स्वविषयापरोक्षहेतुताया एव युक्तत्वाच्च । "दशमस्त्वमसि" इत्यादाविव शाब्दज्ञाने चित्तवशीकरणानपेक्षणाच्च । आपरोक्ष्यहेतुचित्तैकाग्र्यादेश्च निर्विशेषपरोक्षज्ञानाधीनतन्निदिध्यासनादेव सिद्धेः । चित्तवशीकरणाभावे सविशेषनिदिध्यासनस्यैव अयोगाच्च ।

नापि सविशेषध्यानं निर्विशेषज्ञानार्थमिति द्वितीयः, ज्ञानविशेषो ध्यानं इत्यन्यत्रोक्तत्वात् । इह "य एवं वेद" इति ज्ञानार्थविदधातुश्रवणाच्च । भगवति रूपं तात्त्विकमित्यन्यत्रोक्तत्वाच्च । "हिरण्मयः पुरुषो दृश्यते" इति अपरोक्षज्ञानविषयत्वोक्तेश्च । न हि 'योषित्यग्नित्वं' दृश्यते इत्युच्यते । किञ्च योषिदादेरग्नित्वाद्यभावेऽपि तथा ध्यानवत् निर्विशेषब्रह्मण एव हिरण्यश्मश्रुत्वादिना ध्यानसम्भवेन सविशेषब्रह्मणः साधकानुग्रहार्थमैच्छिकरूपपरिग्रहोक्तिरयुक्ता ।

तस्मान्न सविशेषनिरूपणं निर्विशेषज्ञानार्थम् । अन्यथा वैपरीत्यं स्यात् । "सत्यं ज्ञानं" इत्यादि सद्ब्रह्मनिरूपणमपि "असद्वा इदमग्र आसीत्" इत्यादिश्रुतिसिद्धासद्ब्रह्मज्ञानार्थं स्यात् ।

एवं च –

असद्रूपं परं ब्रह्म साक्षात्कर्तुमनीश्वराः ।
ये मन्दास्तेऽनुकम्प्यन्ते सद्ब्रह्मप्रतिपादनैः ।।

निर्विशेषं परं धर्ममनुष्ठातुमनीश्वराः ।
ये मन्दास्तेऽनुकम्प्यन्ते सविशेषनिरूपणैः ।।

इति स्यात् । शक्यं हि ब्रह्मकाण्डे लक्षणया निर्विशेषं ब्रह्मेव, कर्मकाण्डेऽप्यग्निहोत्रादिसविशेषधर्मविलक्षणः कश्चिन्निर्विशेषो धर्मः प्रतिपाद्यत इति वक्तुम् –

किञ्च –

आद्यसूत्रे धर्मशब्दात् द्वितीये भेदशब्दतः ।
निर्धर्मकत्वमैक्यं च निरस्तं परवस्तुनः ।।

**धर्मो भेदश्च मिथ्या चेत् श्रुतिसूत्राप्रमाणता ।**
**व्याख्याव्याजेन चोक्ता स्यात् त्वया सौगतसौहृदात् ॥**

**''अन्तर उपपत्तेः'' इत्यनेन पौनरुक्त्यं, स्वमते तदभावश्च तत्रैव वक्ष्यते ॥**

ಅನುವಾದ - ಸವಿಶೇಷಬ್ರಹ್ಮನ ನಿರೂಪಣೆಯು ಮೋಕ್ಷಸಾಧನವಾದ ನಿರ್ವಿಶೇಷಬ್ರಹ್ಮನ ಜ್ಞಾನಕ್ಕೋಸ್ಕರವೆಂದು ಅದ್ವೈತಿಗಳು ಹೇಳುತ್ತಾರೆ. ಇದು ಸಹ ತಪ್ಪು. ಹಾಗಾದಲ್ಲಿ ''ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ'' ಎಂಬ ಶ್ರುತಿಯಲ್ಲಿ ಸರ್ವಪಾಪನಿವೃತ್ತಿರೂಪವಾದ ಮೋಕ್ಷಪದವು ಕೇಳಿಸುತ್ತಿದೆ. ಇದು ತಪ್ಪಾದೀತು? ಸವಿಶೇಷಬ್ರಹ್ಮನ ಜ್ಞಾನದಿಂದ ಶ್ರುತವಾದ ಮೋಕ್ಷಫಲವನ್ನು ಬಿಡಬೇಕು. ಅಶ್ರುತವಾದ ನಿರ್ವಿಶೇಷಜ್ಞಾನವೆಂಬ ಫಲವನ್ನು ಕಲ್ಪಿಸಬೇಕು. ಹೀಗೆ ಶ್ರುತಹಾನ ಅಶ್ರುತಕಲ್ಪನೆ ಎಂಬ ದೋಷಗಳು ಬರುತ್ತವೆ.

ಸವಿಶೇಷಜ್ಞಾನವೇ ಫಲವೆಂದು ಹೇಳುವ ನಿಮ್ಮ ಅಭಿಪ್ರಾಯವೇನು? ಸವಿಶೇಷಜ್ಞಾನವು ನಿರ್ವಿಶೇಷಜ್ಞಾನಕ್ಕೆಂದೋ? ಅಥವಾ ಸವಿಶೇಷ ಧ್ಯಾನವು ನಿರ್ವಿಶೇಷಜ್ಞಾನಕ್ಕೆಂದೋ? ಧ್ಯಾನವಾದರೂ ಸಹ ಜ್ಞಾನಕ್ಕಿಂತ ವಿಜಾತೀಯ ವೃತ್ಯಂತರರೂಪವಾಗಿದೆ. ಮತ್ತು ಆರೋಪಿತವಿಷಯದ ಉಪಾಸನಾ ರೂಪವಾಗಿದೆ. ಈ ಎರಡು ವಿಕಲ್ಪಗಳಲ್ಲಿ ಮೊದಲನೆಯದ್ದು ತಪ್ಪು. ಏಕೆಂದರೆ ನಿರ್ವಿಶೇಷಶಬ್ದಕ್ಕೆ 'ವಿಶೇಷಾಭಾವವಿಶಿಷ್ಟ' ಎಂಬರ್ಥವನ್ನು ಹೇಳಬೇಕು. ಆವಾಗ ನಿರ್ವಿಶೇಷಜ್ಞಾನವೆಂದರೆ ವಿಶಿಷ್ಟಜ್ಞಾನವೆಂದಾಯಿತು. ವಿಶಿಷ್ಟಜ್ಞಾನವು ಮೋಕ್ಷಕ್ಕೆ ಕಾರಣವಲ್ಲವೆಂದು ನೀವೇ ಒಪ್ಪಿದ್ದೀರಿ.

ಇನ್ನು ನಿರ್ವಿಶೇಷಶಬ್ದಕ್ಕೆ ವಿಶೇಷಾಭಾವದಿಂದ ಉಪಲಕ್ಷಿತ ಎಂಬರ್ಥವನ್ನು ಹೇಳಬೇಕು. ಹಾಗೆ ಹೇಳಿದಾಗ ಮನೆಯಲ್ಲಿ ಕಾಗೆಯಿಂದ ಸಂಸ್ಥಾನವಿಶೇಷವನ್ನು ತಿಳಿಯುವಂತೆ ಇಲ್ಲಿಯೂ ಸಹ ಏನಾದರೂ ಒಂದು ಧರ್ಮವನ್ನು ಬ್ರಹ್ಮನಲ್ಲಿ ತಿಳಿಯಬೇಕು. ಆದರೆ ಬ್ರಹ್ಮನಲ್ಲಿ ಯಾವುದೇ ಧರ್ಮಗಳಿಲ್ಲವೆಂದು ನೀವೇ ಒಪ್ಪಿದಕಾರಣ ವಿಶೇಷ್ಯನಾದ ಬ್ರಹ್ಮನೇ ತಿಳಿಯಬೇಕು. ಅಂದರೆ ವಿಶೇಷ್ಯನಾದ ಶುದ್ಧಬ್ರಹ್ಮನೇ ಉಪಲಕ್ಷ್ಯನಾದ ಇಂತಹ ಶುದ್ಧಬ್ರಹ್ಮನು ಈಗಾಗಲೇ ವಿಶಿಷ್ಟಜ್ಞಾನದಿಂದ ತಿಳಿದಿದ್ದಾನೆ. ಶುದ್ಧಬ್ರಹ್ಮನನ್ನು ಬಿಟ್ಟು ಬೇರೆಯದನ್ನು ಉಪಲಕ್ಷ್ಯವೆಂದು ಹೇಳಲಾಗದು.

ಮತ್ತು ಉಪಲಕ್ಷ್ಯತ್ವಾಕಾರರೂಪದಲ್ಲಿರುವ ಜ್ಞಾನವು ಮೋಕ್ಷಸಾಧನವಲ್ಲವೆಂದು ನೀವೇ ಒಪ್ಪಿದ್ದೀರಿ. ಆದಕಾರಣ ನಿರ್ವಿಶೇಷಬ್ರಹ್ಮನನ್ನು ವಿಶಿಷ್ಟರೂಪನೆಂದಾಗಲಿ ಉಪಲಕ್ಷ್ಯರೂಪವೆಂದಾಗಲಿ ಹೇಳಲು ಬರುವುದಿಲ್ಲ.

ವಿಶೇಷಣಗಳಿಗೆ ವಿಷಯನಾಗದ ಶುದ್ಧಬ್ರಹ್ಮನ ಜ್ಞಾನವು ಮೊದಲು ಸಿದ್ಧವಾಗಿಲ್ಲವಲ್ಲ? ಎಂದು ಶಂಕಿಸಬಾರದು. ಏಕೆಂದರೆ ವಿಶಿಷ್ಟಜ್ಞಾನಕ್ಕೆ ನಿರ್ವಿಶೇಷಬ್ರಹ್ಮನ ಜ್ಞಾನವೇ ಪ್ರಯೋಜನವೆಂದು ನಿಮ್ಮ

ಸಿದ್ಧಾಂತ. ಈಗ ವಿಶೇಷಣಜ್ಞಾನಕ್ಕೋಸ್ಕರವೆಂದು ಹೇಳಿದರೆ ಅಪಸಿದ್ಧಾಂತ ಬರುತ್ತದೆ. ಆದ್ದರಿಂದ ಈ ದೋಷವನ್ನು ನೀವು ಎದುರಿಸಬೇಕು -

ವಿಶಿಷ್ಟಬ್ರಹ್ಮಧೀಸಾಧ್ಯಾ ಶುದ್ಧಧೀರಿತ್ಯಸಂಗತಮ್ ।
ವಿಶಿಷ್ಟಪ್ರತ್ಯಯೇ ಯಸ್ಮಾದ್ವಿಶೇಷ್ಯಂ ಭಾಸತೇತರಾಮ್ ॥ ೧ ॥

ವಿಶಿಷ್ಟಬ್ರಹ್ಮನ ಜ್ಞಾನದಿಂದ ಶುದ್ಧಬ್ರಹ್ಮನ ಜ್ಞಾನವು ಬರುತ್ತದೆಂಬುದು ಅಸಂಗತವಾಗಿದೆ. ಏಕೆಂದರೆ ವಿಶಿಷ್ಟಬ್ರಹ್ಮನ ಜ್ಞಾನದಲ್ಲಿಯೇ ವಿಶೇಷ್ಯನು (ಶುದ್ಧಬ್ರಹ್ಮನು) ತೋರುತ್ತಾನೆ.

ಸವಿಶೇಷಜ್ಞಾನವು ನಿರ್ವಿಶೇಷಬ್ರಹ್ಮನ ಜ್ಞಾನಕ್ಕೆ ದೃಷ್ಟದ್ವಾರಾ ಕಾರಣವಾಗುವುದಿಲ್ಲ. ಏಕೆಂದರೆ ವಿಶಿಷ್ಟಬ್ರಹ್ಮನ ಜ್ಞಾನದಿಂದ ಜ್ಞಾನಧ್ವಂಸವಾಗುತ್ತದೆ. ಅಥವಾ ಚಿತ್ತವು ವಶವಾಗುತ್ತದೆ. ತನ್ ಮೂಲಕವಾಗಿ ವಿಶೇಷಣಗಳ ಅಭಾವದಿಂದ ವಿಶಿಷ್ಟನಾದ ಬ್ರಹ್ಮನ ಜ್ಞಾನವು ಬರುತ್ತದೆಂದು ಹೇಳಬೇಕು.

ಅಥವಾ ವಿಶೇಷಣಗಳ ಅಭಾವದಿಂದ ಉಪಲಕ್ಷಿತನಾದ ಬ್ರಹ್ಮನ ಜ್ಞಾನವು ಬರುತ್ತದೆಂದು ಹೇಳಬೇಕು. ಅಥವಾ ವಿಶೇಷಣಗಳ ಜ್ಞಾನವು ನಾಶವಾಗುತ್ತದೆಂದು ಹೇಳಬೇಕು. ಆದರೆ ಈ ಮೂರುವಿಧ ಪ್ರಯೋಜನಗಳು ಉಂಟಾಗಿದ್ದು ಎಲ್ಲಿಯೂ ಕಂಡಿಲ್ಲ. ಮತ್ತು ರೂಪಾದಿಗುಣಗಳಿಂದ ಕೂಡಿರುವ ಪರಾಗ್ಭೂತನಾದ (ಹೊರಗಡೆ ಇರುವ) ಬ್ರಹ್ಮನ ಜ್ಞಾನದಿಂದ ರೂಪಾದಿಗುಣಗಳಿಲ್ಲದ ಪ್ರತ್ಯಗ್‌ಭೂತನಾದ (ಒಳಗಿರುವ) ನಿರ್ವಿಶೇಷಬ್ರಹ್ಮನ ಜ್ಞಾನವು ಬರುವುದಿಲ್ಲ. ಅಷ್ಟೇ ಅಲ್ಲದೆ ರೂಪಾದಿಗಳ ನಿಷೇಧಕ್ಕೆ ಉಪಯೋಗಿಯಾದದ್ದು ಬುದ್ಧಿಪೂರ್ವಕ ಆರೋಪಗಳು. ಈ ಆರೋಪಗಳಿಗೆ ಶಬ್ದಪ್ರಮಾಣವು ಬೇಕಾಗಿಲ್ಲ. ಏಕೆಂದರೆ ಇಲ್ಲಿ ಘಟ ಇದೆಯೆಂದು ಹೇಳಿ, ಪುನಃ ಘಟ ಇದೆಯೆಂದು ಹೇಳುವುದು ತಪ್ಪು. ಆದ್ದರಿಂದ ದೃಷ್ಟದ್ವಾರಾ ಸವಿಶೇಷಜ್ಞಾನವು ಕಾರಣವಾಗುವುದಿಲ್ಲ.

ಇನ್ನು ಅದೃಷ್ಟದ್ವಾರಾ ಸವಿಶೇಷಜ್ಞಾನವು ನಿರ್ವಿಶೇಷಜ್ಞಾನಕ್ಕೆ ಕಾರಣವೆಂದು ಹೇಳಬೇಕು. ಇದು ಕೂಡುವುದಿಲ್ಲ. ಏಕೆಂದರೆ ಅದೃಷ್ಟವು ವೇದವಿಹಿತವಾದ ಕ್ರಿಯೆಗಳಿಂದಷ್ಟೇ ಹುಟ್ಟಲು ಸಾಧ್ಯ. ಹೊರತು ಸವಿಶೇಷಜ್ಞಾನದಿಂದ ಅದೃಷ್ಟವು ಹುಟ್ಟುವುದಿಲ್ಲ. ಅಷ್ಟೇ ಅಲ್ಲದೆ ನಿಮ್ಮ ಮತದಲ್ಲಿ ಜ್ಞಾನವನ್ನು ವಿಧೇಯವಲ್ಲವೆನ್ನುತ್ತೀರಿ.

ಇನ್ನು ಸವಿಶೇಷಜ್ಞಾನವು ಜ್ಞಾನಪ್ರತಿಬಂಧಕಗಳಾದ ದುರಿತಾದಿಗಳನ್ನು ಪರಿಹರಿಸುವ ಮೂಲಕ ನಿರ್ವಿಶೇಷಜ್ಞಾನಕ್ಕೆ ಕಾರಣವೆನ್ನಬೇಕು. ಆದರೆ ನಿತ್ಯಕರ್ಮಾದಿಗಳಿಂದಲೇ ದುರಿತಾದಿಗಳು ನಿವೃತ್ತಿಯಾಗುತ್ತಿರುವುದರಿಂದ ಪುನಃ ಸವಿಶೇಷಜ್ಞಾನದ ಆವಶ್ಯಕತೆ ಇಲ್ಲ. ಮತ್ತು ನಿತ್ಯಕರ್ಮಾದಿಗಳನ್ನು ಈ ಶಾಸ್ತ್ರದಲ್ಲಿಯೇ ನಿರೂಪಿಸಬೇಕಾಗುತ್ತದೆ. ನಿರ್ವಿಶೇಷಜ್ಞಾನ ಬರಬೇಕಾದರೆ ಜ್ಞಾನಪ್ರತಿಬಂಧಕ ದುರಿತಾದಿಗಳ ನಿವೃತ್ತಿಯಾಗಬೇಕು. ದುರಿತಾದಿಗಳ ನಿವೃತ್ತಿಗಳಿಗೆ ನಿತ್ಯಕರ್ಮಾದಿಗಳನ್ನು ಈ ಶಾಸ್ತ್ರದಲ್ಲಿ ನಿರೂಪಿಸುವುದೇ ಸೂಕ್ತ; ಹೊರತು ಸವಿಶೇಷಬ್ರಹ್ಮನ ನಿರೂಪಣೆಯಲ್ಲ. ಮತ್ತು ಅದ್ವೈತಮತದಲ್ಲಿ

ಜ್ಞಾನವು ಕೇವಲ ಅಜ್ಞಾನಕ್ಕಷ್ಟೇ ನಿವರ್ತಕವೆಂದು ಒಪ್ಪಲಾಗಿದೆ. ಈಗ ದುರಿತಾದಿಗಳಿಗೆ ನಿವರ್ತಕವೆಂದರೆ ತಪ್ಪಾಗುತ್ತದೆ. ಮತ್ತು ವ್ಯಾವಹಾರಿಕವಾದ ದುರಿತವು ವ್ಯಾವಹಾರಿಕ ಸವಿಶೇಷಬ್ರಹ್ಮಜ್ಞಾನದ ಕಾರ್ಯವಲ್ಲ. ಅಜ್ಞಾನ ಹಾಗು ಅಜ್ಞಾನಕಾರ್ಯಗಳಿಗೆ ವಿಷಮಸತ್ತಾವನ್ನು ನೀವು ಹೇಳುತ್ತೀರಿ. ಒಂದುವೇಳೆ ದುರಿತವು ಸವಿಶೇಷಬ್ರಹ್ಮಜ್ಞಾನದ ಕಾರ್ಯವಾಗಿದ್ದರೆ, ಸವಿಶೇಷಬ್ರಹ್ಮಜ್ಞಾನದ ನಿವೃತ್ತಿಯಿಂದ ಅಜ್ಞಾನಕಾರ್ಯವಾದ ದುರಿತವು ನಿವೃತ್ತಿಯಾಗುತ್ತಿತ್ತು.

ಇದರಿಂದ ಅದ್ವೈತಿಗಳ ಮತ್ತೊಂದು ವಾದವನ್ನು ನಿರಾಕರಿಸಿದಂತಾಯಿತು. ಸವಿಶೇಷಬ್ರಹ್ಮಜ್ಞಾನದ ಸಂತಾನರೂಪವಾದ ನಿಧಿಧ್ಯಾಸನವು ನಿರ್ವಿಶೇಷಜ್ಞಾನಕ್ಕೆ ಸಾಧನವೆಂದು ಹೇಳಬೇಕು. ಆ ನಿಧಿಧ್ಯಾಸನವು ಅದೃಷ್ಟದ್ವಾರಾ ಕಾರಣವಾಗಬೇಕು. ಅಥವಾ ದುರಿತನಿವೃತ್ತಿದ್ವಾರಾ ಕಾರಣವಾಗಬೇಕು. ಅಥವಾ ಚಿತ್ತವನ್ನು ವಶೀಕರಿಸುವ ಮೂಲಕ ನಿರ್ವಿಶೇಷಜ್ಞಾನಕ್ಕೆ ಕಾರಣವೆನ್ನಬೇಕು. ಆದರೆ ಈ ಎಲ್ಲಾ ಪಕ್ಷಗಳಲ್ಲಿ ಶ್ರುತಹಾನ ಮತ್ತು ಅಶ್ರುತಕಲ್ಪನಾ ದೋಷಗಳು ಬರುತ್ತವೆ. ಮತ್ತು ಸವಿಶೇಷಬ್ರಹ್ಮನ ನಿಧಿಧ್ಯಾಸನವು ಸವಿಶೇಷಬ್ರಹ್ಮನ ಅಪರೋಕ್ಷಕ್ಕೆ ಕಾರಣವಾಗುತ್ತದೆ. ಯಾವರೀತಿಯಾಗಿ ನಿರ್ವಿಶೇಷಬ್ರಹ್ಮನ ನಿಧಿಧ್ಯಾಸನವು ನಿರ್ವಿಶೇಷಬ್ರಹ್ಮನ ಅಪರೋಕ್ಷಕ್ಕೆ ಕಾರಣವಾಗುತ್ತದೋ ಅದರಂತೆ ಸವಿಶೇಷಬ್ರಹ್ಮನ ನಿಧಿಧ್ಯಾಸನವು ನಿರ್ವಿಶೇಷಬ್ರಹ್ಮನ ನಿರ್ವಿಶೇಷಜ್ಞಾನಕ್ಕೆ ಕಾರಣವೆಂದು ಹೇಳಬಾರದು.

ಮತ್ತು 'ದಶಮಸ್ತ್ವಮಸಿ' ಇತ್ಯಾದಿ ಶಾಬ್ದ ಅಪರೋಕ್ಷಸ್ಥಳದಲ್ಲಿ ಚಿತ್ತದ ವಶಿಕರಣವು ಹೇಗೆ ಅನಾವಶ್ಯಕವೋ ಅದರಂತೆ ನಿರ್ವಿಶೇಷಜ್ಞಾನವು ಶಾಬ್ದಜ್ಞಾನವಾದ್ದರಿಂದ ಚಿತ್ತದ ವಶೀಕರಣವು ಬೇಕಾಗಿಲ್ಲ.

ಮತ್ತು ಅಪರೋಕ್ಷಜ್ಞಾನಕ್ಕೆ ಕಾರಣವಾದ ಚಿತ್ತೇಕಾಗ್ರತೆಯು ನಿರ್ವಿಶೇಷಬ್ರಹ್ಮನ ಪರೋಕ್ಷಜ್ಞಾನದ ಅಧೀನವಾದ ನಿರ್ವಿಶೇಷನ ನಿಧಿಧ್ಯಾಸನದಿಂದಷ್ಟೇ ಸಿದ್ಧವಾಗುತ್ತದೆ. ಹೊರತು ಸವಿಶೇಷಬ್ರಹ್ಮನ ನಿಧಿಧ್ಯಾಸದಿಂದ ಸಿದ್ಧವಾಗುವುದಿಲ್ಲ. ಮತ್ತು ಚಿತ್ತವು ವಶವಾಗದೆ ಸವಿಶೇಷಬ್ರಹ್ಮನ ನಿಧಿಧ್ಯಾಸನವೇ ಕೂಡುವುದಿಲ್ಲ. ಆದ್ದರಿಂದ ಸವಿಶೇಷಬ್ರಹ್ಮನ ಜ್ಞಾನಕ್ಕಿಂತ ಮೊದಲೇ ಸಿದ್ಧವಾಗಿರುವ ಚಿತ್ತೈಕಾಗ್ರತೆಯು ಸವಿಶೇಷಬ್ರಹ್ಮನ ಜ್ಞಾನದಿಂದ ಹುಟ್ಟಲು ಸಾಧ್ಯವಿಲ್ಲ. ಸವಿಶೇಷಜ್ಞಾನವು ನಿರ್ವಿಶೇಷಜ್ಞಾಕ್ಕೋಸ್ಕರ ಎಂಬ ಎರಡನೆಯ ಪಕ್ಷವು ತಪ್ಪು. ಜ್ಞಾನವು ಪರೋಕ್ಷಜ್ಞಾನದ ವಿಶೇಷವೆಂದು ಬೇರೆಕಡೆ ಸಮರ್ಥಿಸಿದ್ದೇವೆ. ಮತ್ತು 'ಯ ಏವಂ ವೇದ' ಎಂಬಲ್ಲಿರುವ 'ವಿದ್' ಧಾತುವು ಜ್ಞಾನ ಎಂಬರ್ಥದಲ್ಲಿದೆ ಎಂದು ಎಲ್ಲರೂ ಅಂಗೀಕರಿಸಿದ್ದಾರೆ. ಆದರೆ ಸವಿಶೇಷ ಜ್ಞಾನವಷ್ಠೇ ನಿರ್ವಿಶೇಷಜ್ಞಾನಕ್ಕೆ ಕಾರಣವೆಂದು ಹೇಳಿದರೆ ಇದಕ್ಕೆ ವಿರೋಧ ಬರುತ್ತದೆ. ಮತ್ತು ಮಿಥ್ಯಾಭೂತಗಳಾದ 'ಹಿರಣ್ಯಶ್ಮಶ್ರುತ್ವ' ಮೊದಲಾದ ಧರ್ಮಗಳು ಜ್ಞಾನಕ್ಕೆ ವಿಷಯವೆಂಬ ನಿಮ್ಮ ವಾದವು ಸರಿಯಿಲ್ಲ. ಏಕೆಂದರೆ ಭಗವಂತನ ರೂಪವು ಸತ್ಯವಾಗಿದೆಯೆಂದು ಬೇರೆ ಗ್ರಂಥಗಳಲ್ಲಿ (ನ್ಯಾಯಾಮೃತದಲ್ಲಿ) ಸಮರ್ಥಿಸಿದ್ದೇವೆ.

ಮತ್ತು ''ಹಿರಣ್ಮಯಃ ಪುರುಷೋ ದೃಶ್ಯತೇ'' ಎಂಬ ಶ್ರುತಿಯು ಭಗವಂತನಲ್ಲಿ

'ಅಪರೋಕ್ಷಜ್ಞಾನವಿಷಯತ್ವ'ವನ್ನು ಹೇಳುತ್ತಿದೆ. ಧ್ಯಾನವು ಆರೋಪಿತವಿಷಯವೆಂದರೆ 'ದೃಶ್ಯತೇ' ಎಂಬ ಪ್ರಯೋಗವು ತಪ್ಪಾಗುತ್ತದೆ. ಏಕೆಂದರೆ ಸ್ತ್ರೀಯನ್ನು ಅಗ್ನಿಯೆಂದು ಉಪಾಸನೆ ಮಾಡುವಾಗ ಸ್ತ್ರೀಯಲ್ಲಿ ಅಗ್ನಿತ್ವವು ಕಾಣಿಸುತ್ತದೆ. (ದೃಶ್ಯತೇ) ಎಂದು ಯಾರೂ ಹೇಳುವುದಿಲ್ಲ.

ಮತ್ತು ಸ್ತ್ರೀಯಲ್ಲಿ ಅಗ್ನಿತ್ವಧರ್ಮವು ಇಲ್ಲದಿದ್ದರೂ ಸಹ ಅಗ್ನಿಯೆಂದು ಧ್ಯಾನ ಮಾಡಬಹುದೆಂದು ಹೇಗೆ ಹೇಳುತ್ತೀರೋ; ಅದರಂತೆ ನಿರ್ವಿಶೇಷಬ್ರಹ್ಮನನ್ನು ಹಿರಣ್ಯಶ್ಮಶ್ರುತ್ವ ಮೊದಲಾದ ಧರ್ಮಗಳಿಂದ ಧ್ಯಾನ ಮಾಡಬಹುದಲ್ಲವೆ? ಇದನ್ನು ಬಿಟ್ಟು ಸವಿಶೇಷಬ್ರಹ್ಮನು ಸಾಧಕರನ್ನು ಅನುಗ್ರಹಿಸುವುದಕ್ಕೋಸ್ಕರ ಐಚ್ಛಿಕರೂಪವನ್ನು ತೆಗೆದುಕೊಳ್ಳುತ್ತಾನೆಂಬ ನಿಮ್ಮ ಕಲ್ಪನೆಯು ತಪ್ಪು. ಆದ್ದರಿಂದ ನಿರ್ವಿಶೇಷಬ್ರಹ್ಮನ ನಿರೂಪಣೆ ಎಂಬುದು ಸರಿಯಲ್ಲ. ಇಲ್ಲದಿದ್ದರೆ ಸವಿಶೇಷಬ್ರಹ್ಮನ ಜ್ಞಾನಕ್ಕೋಸ್ಕರ ನಿರ್ವಿಶೇಷಬ್ರಹ್ಮನನ್ನು ನಿರೂಪಣೆ ಮಾಡುತ್ತಾರೆಂದು ನಾವು ಪ್ರತಿಯಾಗಿ ಹೇಳಿದರೆ ನಿಮಗೆ ಉತ್ತರಿಸಲಾಗದು. ಅಷ್ಟೇ ಅಲ್ಲದೆ ''ಸತ್ಯಂ ಜ್ಞಾನಮ್'' ಇತ್ಯಾದಿ ಶ್ರುತಿಯಲ್ಲಿ ಸತ್ಯಭೂತನಾದ ಬ್ರಹ್ಮನ ನಿರೂಪಣೆಯು ''ಅಸದ್ವಾ ಇದಮಗ್ರ ಆಸೀತ್'' ಎಂಬ ಶ್ರುತಿಯಲ್ಲಿ ಪ್ರತಿಪಾದ್ಯನಾದ ಅಸದ್‌ಬ್ರಹ್ಮನ ಜ್ಞಾನಕ್ಕೋಸ್ಕರವೆಂದು ಆಗಬೇಕಾದೀತು. ಆದ್ದರಿಂದ

ಅಸದ್‌ರೂಪಂ ಪರಂ ಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಾಃ ।
ಯೇ ಮಂದಾಸ್ತೇನುಕಂಪ್ಯಂತೇ ಸದ್ಬ್ರಹ್ಮಪ್ರತಿಪಾದನೈಃ ॥ ೧ ॥

ಅಸದ್‌ರೂಪನಾದ ಪರಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಮಂದಾಧಿಕಾರಿಗಳು ಅಸಮರ್ಥರಾಗಿದ್ದಾರೆ. ಅವರ ಮೇಲಿನ ಅನುಕಂಪದಿಂದ ಸದ್‌ರೂಪನಾದ ಬ್ರಹ್ಮನ ನಿರೂಪಣೆಯನ್ನು ಶಾಸ್ತ್ರಗಳಲ್ಲಿ ಮಾಡಲಾಗಿದೆ.

ನಿರ್ವಿಶೇಷಂ ಪರಂ ಧರ್ಮಮನುಷ್ಠಾತುಮನೀಶ್ವರಾಃ ।
ಯೇ ಮಂದಾಸ್ತೇನುಕಂಪ್ಯಂತೇ ಸವಿಶೇಷನಿರೂಪಣೈಃ ॥ ೨ ॥

ನಿರ್ವಿಶೇಷನಾದ ಪರಬ್ರಹ್ಮನನ್ನು ಸಾಕ್ಷತ್ಕರಿಸಿಕೊಳ್ಳಲು ಮಂದರಿಗೆ ಸಾಧ್ಯವಿಲ್ಲ. ಸವಿಶೇಷಬ್ರಹ್ಮನನ್ನು ನಿರೂಪಿಸುವುದಕ್ಕೋಸ್ಕರ ಮಂದರು ಅನುಕಂಪಕ್ಕೆ ಅರ್ಹರಾಗಿದ್ದಾರೆಂದು ಆಗಬೇಕಾದೀತು. ಬ್ರಹ್ಮಕಾಂಡದಲ್ಲಿ ನಿರ್ವಿಶೇಷಬ್ರಹ್ಮನು ಲಕ್ಷಣಾವೃತ್ತಿಯಿಂದ ಹೇಗೆ ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಕರ್ಮಕಾಂಡದಲ್ಲಿಯೂ ಸಹ ಅಗ್ನಿಹೋತ್ರಾದಿಸವಿಶೇಷಧರ್ಮಗಳಿಗಿಂತ ವಿಲಕ್ಷಣವಾದ ಒಂದು ನಿರ್ವಿಶೇಷಧರ್ಮವು ಪ್ರತಿಪಾದ್ಯವಾಗುತ್ತದೆಂದು ಹೇಳುವುದು ಸುಲಭ. ಮತ್ತು

ಆದ್ಯಸೂತ್ರೇ ಧರ್ಮಶಬ್ದಾತ್ ದ್ವಿತೀಯೇ ಭೇದಶಬ್ದತಃ ।
ನಿರ್ಧರ್ಮಕತ್ವಮೈಕ್ಯಂ ಚ ನಿರಸ್ತಂ ಪರವಸ್ತುನಃ ॥ ೨ ॥
ಧರ್ಮೋ ಭೇದಶ್ಚ ಮಿಥ್ಯಾ ಚೇತ್ ಶ್ರುತಿಸೂತ್ರಾಪ್ರಮಾಣತಾ ।
ವ್ಯಾಖ್ಯಾವ್ಯಾಜೇನ ಚೋಕ್ತಾ ಸ್ಯಾತ್ತ್ವಯಾ ಸೌಗತಸೌಹೃದಾತ್ ॥ ೨॥

ಪರಿಪೂರ್ಣಚಂದ್ರಿಕಾ

"ಅಂತಸ್ತದ್ಧರ್ಮೋಪದೇಶಾತ್" ಎಂಬ ಸೂತ್ರದಲ್ಲಿ ಧರ್ಮ ಶಬ್ದದಿಂದ ನಿರ್ಧರ್ಮಕತ್ವವನ್ನು ಬ್ರಹ್ಮನಲ್ಲಿ ನಿರಾಕರಿಸಿದ್ದಾರೆ. ಎರಡನೆಯ ಭೇಧವ್ಯಪದೇಶಸೂತ್ರದಲ್ಲಿ ಭೇದ ಶಬ್ದದಿಂದ ಐಕ್ಯವನ್ನು ಪರಬ್ರಹ್ಮನಲ್ಲಿ ನಿರಾಕರಿಸಿದ್ದಾರೆ. ಈ ಧರ್ಮ ಮತ್ತು ಭೇದಗಳನ್ನು ಸುಳ್ಳೆಂದು ಹೇಳಿದರೆ ಶ್ರುತಿ ಹಾಗೂ ಸೂತ್ರಗಳಿಗೆ ಅಪ್ರಾಮಾಣ್ಯವನ್ನು ಅಂಗೀಕರಿಸಿದಂತಾಗುತ್ತದೆ. ಅಂದರೆ ಬೌದ್ಧರ ಜೊತೆಗೆ ಸ್ನೇಹವನ್ನು ಬೆಳೆಸಿ ಶ್ರುತಿ ಮತ್ತು ಸೂತ್ರಗಳಿಗೆ ವ್ಯಾಖ್ಯಾನ ಮಾಡುವ ನೆಪದಿಂದ ಅವುಗಳನ್ನು ಬೌದ್ಧರಂತೆ ನಿರಾಕರಿಸಿದ್ದೀರಿ.

ಅದ್ವೈತಮತದಲ್ಲಿ ಈ ಅಧಿಕರಣಕ್ಕೆ 'ಅಂತರ ಉಪಪತ್ತೇಃ' ಎಂಬ ಹಿಂದಿನ ಅಧಿಕರಣದಿಂದ ಪುನರುಕ್ತಿ ದೋಷ ಬರುತ್ತದೆ. ಸಿದ್ಧಾಂತದಲ್ಲಿ ಆ ದೋಷವಿಲ್ಲ. ಈ ವಿಷಯವನ್ನು ಮುಂದೆ ಅಂತರಧಿಕರಣದಲ್ಲೇ ಸಮರ್ಥಿಸುತ್ತವೆ.

**प्रकाशः** – एवं सिद्धान्ते रूपाद्युक्तेः द्वेधाऽपि गतिकथनं निरस्य, इदानीं, यदपि सविशेषनिरूपणस्य फलमुक्तं, तदपि श्रुतहानाश्रुतकल्पनादोषाभ्यां निरस्यति – **यच्चोक्तमिति** ।। अस्तु वा सविशेषनिरूपणं निर्विशेषज्ञानार्थमिति, तथाऽपि सविशेषज्ञानं वा तदर्थमुत सविशेषध्यानं वेति ध्यानस्वरूपं निरूपयन्नेव विकल्प्य निरस्यति – **किञ्चेति** ।।

**'तस्य'** सविशेषस्य । निर्विशेषशब्देन विशेषाभावविशिष्टमुच्यते तदुपलक्षितं वेति विकल्पौ हृदि कृत्वा, क्रमेण निरस्यति – **निर्विशेषेति** ।। उपलक्षणपक्षेऽपि विशेषाभावोपलक्ष्यं विशेष्यमात्रं वा ब्रह्मगतः कश्चिद्धर्मो वेति विकल्पौ हृदि कृत्वाऽऽह – **तदभावेनोपलक्षितस्योक्तौ चेति** ।। **'विशिष्टग्राहिणा'** सविशेष-ग्राहिणा । विशिष्टग्राहिणा स्वरूपस्य ग्रहणेऽपि उपलक्षणत्वेन तद्विशेषमात्रग्रहणं नेत्यत आह – **उपलक्ष्यत्वाकारेणेति** ।। **मोक्षासाधनत्वादिति** ।। निर्विकल्पकज्ञानस्यैव तथात्वादिति भावः ।

ननु विशिष्टज्ञानेन विशेष्यसिद्धावपि विशेषणाविषयकतया विशेष्यज्ञानार्थं तदित्यत आह – **न चेति** ।। उक्तं सङ्गृह्णाति – **तथा चेति** ।। एवं सविशेषज्ञानं न निर्विशेषज्ञानार्थमित्युक्तम् । अस्तु वा तत् । तथाऽपि सविशेषज्ञानं दृष्टद्वारा निर्विशेषज्ञाने हेतुरुत अदृष्टद्वारा, प्रतिबन्धकदुरितनिवृत्तिद्वारा वा । आद्येऽपि किं दृष्टमज्ञानध्वंसः, चित्तवशीकरणं वेति विकल्पान् हृदि निधाय क्रमेण निरस्यति –

किञ्चेति ।। ''तदभावविशिष्टज्ञानस्य वा'' इत्यादित्रितयं निर्विशेषज्ञानशब्दार्थः । अयुक्तं चेदं चित्तवशीकरणद्वारा तदर्थत्वमित्याह – रूपादीति ।। हिरण्यश्मश्रुत्वादि-रूपादियुक्तत्वात् पराग्भूतेत्यर्थः ।

ननु निषेधज्ञाने प्रतियोग्यारोपस्यावश्यकतया विशेषज्ञानं युक्तमेवेत्यत आह – **निषेधेति** ।। तदेवाह – **न हीति** ।। तथा च ब्रह्म निर्विशेषमिति वक्तुं रूपादिविशेषकथनं न युज्यत इति भावः । द्वितीयं निरस्यति – **नापीति** ।। अस्तु ज्ञानं विहितक्रियेत्यत आह – **त्वन्मते चेति** ।। तृतीयं निरस्यति – **नापीति** ।। दुरितनिवर्तकत्वं च ज्ञानस्य किं साक्षादुत अज्ञाननिवृत्तिद्वारा । नाद्य इत्याह – **तस्येति** ।। द्वितीय आह – **न च व्यावहारिकमिति** ।। एतेनेत्युक्तमेवाह – **श्रुतेति** ।। सर्वपापराहित्यरूपश्रुतफलहानिः, अश्रुतफलकल्पना चेत्याद्युक्तदोषा-निवृत्तेरित्यर्थः । अयुक्तं चान्यनिदिध्यासनेनान्यज्ञानमित्याह – **सविशेषेति** ।। चित्तवशीकरणोपयुक्ततया तन्निदिध्यासनं, न तु साक्षान्निर्विशेषज्ञानायेति चेत्, तत्किं शाब्दज्ञाने वा अपरोक्षज्ञाने वा ।

नाद्य इत्याह – **दशम इति** ।। न द्वितीय इत्याह – **आपरोक्ष्येति** ।। चित्तैकाग्र्यादेः प्रागेव सिद्धत्वान्न सविशेषज्ञानसाध्यत्वमित्याह – **चित्तेति** ।। एवं सविशेषज्ञानंनिर्विशेषज्ञानार्थमित्याद्यो निरस्तः ।

द्वितीयं निरस्यति – **नापीति** ।। 'अन्यत्र' न्यायामृते तृतीयपरिच्छेदे । तथा च प्रागुक्त एव दोष इति भावः ।। **इहेति** ।। ''उदेति ह वै सर्वेभ्यः पाप्मभ्यो य एवं वेद'' इति श्रवणादित्यर्थः ।

ननु 'हिरण्मयः' इत्याद्युक्तरूपस्य मिथ्यात्वात् तद्विषयकं ध्यानं कथं ज्ञानं स्यादविद्यमानस्य ज्ञानायोगेऽपि ''योषितमग्निं ध्यायीत'' इतिवद्ध्यानस्योपपत्तेरित्यत आह – **भगवतीति** ।। 'अन्यत्र' न्यायामृते । तात्त्विकत्वे विषयवाक्यस्थां युक्तिमाह – **हिरण्मय इति** ।। तावता कथं तात्त्विकत्वमित्यत आह – **न हीति** ।। यदि मिथ्याभूतस्यापि ध्यानं युक्तं, तर्हि सविशेषोक्तिरयुक्तेति दोषान्तरमाह – **किञ्चेति** ।। **अन्यथेति** ।। अन्यनिरूपणादन्यज्ञाने सतीत्यर्थः । निर्विशेषनिरूपणं

सविशेषज्ञानार्थं स्यादित्यर्थः । अतिप्रसङ्गान्तरमाह – **सत्यमिति** ।। 'अन्यथ' इत्यत्रापि सम्बध्यते । उक्तातिप्रसङ्गं सङ्गृह्णन् अतिप्रसङ्गान्तरमपि श्लोकेनाह – एवं चेति ।।

ननु निर्विशेषब्रह्मेव निर्विशेषधर्म एव नास्तीति कथमतिप्रसङ्ग इत्यत आह – शक्यं हीति ।। यथा अप्रतीयमानमपि निर्विशेषं लक्षणया प्रतिपाद्यतया कल्प्यते, तद्वदित्यर्थः । अत्राधिकरणे सूत्रद्वयमपि परस्य प्रतिकूलमित्याह – **किञ्चेति** ।। 'ऐक्यं' जीवात्मभिः । सूत्रितयोर्धर्मभेदयोर्व्यावहारिकत्वात्तादृशस्य मयाऽङ्गीकारात् को दोष इत्यत आह – **धर्म इति** ।। **श्रुतीति** ।। "सर्वेभ्यः पाप्मभ्य उदितः" परमतेऽस्याधिकरणस्य इत्यादित्वदुदाहृतश्रुतिसूत्रयोश्चेत्यर्थः ।

ननु कथं 'सौहृदात्' इति, "हृद्भगसिन्ध्वन्ते पूर्वपदस्य च" इत्युभयपदवृद्धौ 'सौहार्दात्' इति वाच्यमिति चेत्, अत्राह दुर्घटवृत्तिकारः – संज्ञापूर्वकविधेर-नित्यत्वात्' "हृद्भग" इत्युभयपदवृद्धेरप्रवृत्तेः "तद्धितेष्वचामादेः" इत्यादि-वृद्धिरेवेति । "अर्थवतो ग्रहणे नानर्थकस्य" इति परिभाषायाः "स्वं रूपं शब्दस्याशब्दसंज्ञा" इत्यत्र रूपग्रहणेन ज्ञापितत्वात्, "हृद्भग" इति सूत्रेऽर्थवत एव हृच्छब्दस्योपादानात्, "सुहृद्दुर्हृदौ मित्रामित्रयोः" इति निपातिते सुहृच्छब्दे समुदायस्यैवार्थवत्त्वेन तदवयवहृच्छब्दस्यानर्थकत्वात्तस्योभयपदवृद्धिर्न भवति, किन्त्वादिवृद्धिरेवेति । चान्द्रास्तु "हृद्भग" इत्यत्र प्रतिपदोक्तहृच्छब्दस्यैव हृदयपर्यायस्य ग्रहणं, नतु – "हृदयस्य हृल्लेखयदण्लासेषु" इत्युक्तहृदादेशस्य । 'सौहृदं' इत्यादौ तु हृदादेश एवेति मन्यन्ते । अत एव "क्षणभिन्नसौहृदः" इति कुमारसम्भवे प्रयोग इति । ननु सुधोक्तं पौनरुक्त्यदूषणं कस्मान्नोक्तमित्यत आह – परमत इति ।। इदं च पौनरुक्त्यं परमतद्वयेऽपि सममिति ध्येयम् ।

एतेन यत्केनचित्प्रलपितं, भामत्युक्तमेव वाक्यमुदाहृत्य, "एवमेवास्याक्षिणी" इति नयन-द्वयोपदेशाद्देवताविशेष एव आदित्यान्तस्थ इति प्राप्ते, "स एष सर्वेषां लोकानामीष्टे" इति सर्वलोकेश्वरत्वधर्मोपदेशात्तस्य च "एक एव रुद्रो न द्वितीयाय तस्थे" इति शिवनिष्ठत्वाच्छिव एवादित्यान्तस्थः । नयनद्वयोपादानं तु विकसितपुण्डरीकसादृश्यस्य द्वयोरेव भावात्तृतीयस्य मुकुलितत्वेन तदभावाद्युज्यत

इति, तन्न, उदाहरणानौचित्यस्योक्तत्वात् । पौनरुक्त्यस्य वक्ष्यमाणत्वात् । शिवस्य विरूपाक्षताप्रसिद्ध्या विष्णुलिङ्गतया प्रसिद्धत्वात्, "ध्येयस्सदा" इत्यादि-वचनविरुद्धत्वात् ।

तापनी पाचनी चैव शोषणी च प्रकाशनी ।
नैव राजन् रवेः शक्तिः शक्तिर्नारायण सा ।।

इति पाद्मवचनविरोधाच्च ।

यदादित्यगतं तेजो जगद्भासयतेऽखिलम् ।
यच्चन्द्रमसि यच्चाग्नौ तत्तेजो विद्धि मामकम् ।।

इति गीताविरोधाच्च । "अहं तत्तेजो रश्मीन्नारायणम्" इति,

वृत्रं यदिन्द्र शवसा वधीरहिमादित्सूर्यं दिव्यारोहयो दृशे ।
यत्सूर्यस्य हरितः पतन्तीः पुरस्सतीरु परा वीतशोकः ।
येनावृतं खं च दिवं महीं च येनादित्यस्तपति तेजसा भ्राजसा च ।

"यमन्तस्समुद्रे कवयो वयन्ति" इत्यादितैत्तिरीयभाष्ये "य एषः" इति वाक्यस्य वैष्णवत्वसमर्थनाच्च । छान्दोग्यभाष्ये विष्णुपरत्वेनैव प्रमाणै-र्व्याख्यातत्वात् । रुद्रादिशब्दानां "नामानि सर्वाणि" इत्यादिश्रुत्या "सोऽन्तकस्स रुद्रः स प्राणभृत्" इत्यादिश्रुत्या एतदधिकरणे भाष्यकृदुदाहृतवचनव्रातेन च विष्णुपरत्वाच्च । "तमेताः सप्ताक्षितय उपतिष्ठन्ते या इमा अक्षन् लोहिन्यो राजयस्ताभिरेनं रुद्रोऽन्वायत्तः" इत्यादौ रुद्रस्याक्षिस्थोपासकत्वोक्तेश्च । एतेन, यदप्युक्तं – महोपनिषदि "अन्तरादित्ये हिरण्मयः पुरुषः" इत्युक्त्वा, "एष पुरुष एष भूतानामधिपतिः" इति तस्य भूतपतित्वमुक्त्वा, "सर्वो वै रुद्रः" इत्यारभ्य "हिरण्यबाहवे हिरण्यपतयेऽम्बिकापतये" इत्युपसंहारेण तत्समाख्यानादत्रापि तथेति, तदपि निरस्तम् । रुद्रादिशब्दवाच्यत्वस्य विष्णावेव मुख्यत्वादिति दिक् ।

**गुरुराजीयम्** – सविशेषज्ञानस्य निर्विशेषज्ञानार्थत्वं किं मुक्तिफलार्थं वा फलान्तरार्थं वा । नोभयमपीत्याह – उदेतीति ।। तथा च निर्विशेषज्ञानार्थत्वस्योक्तत्वेन श्रुतमुक्तिरूपफलं परित्यज्याश्रुतकल्पने ज्योतिष्टोमादेरपि श्रुतस्वर्गरूपं फलं परित्यज्याश्रुतकल्पना स्यादिति भावः ।

ಪರಿಪೂರ್ಣಚಂದ್ರಿಕಾ

ननु न श्रुतहानाश्रुतकल्पने । सविशेषज्ञानस्य निर्विशेषज्ञानद्वारा श्रुतमुक्तिफलकत्वस्यैवाङ्गीकारादित्यत आह – **किञ्चेति** ।। निर्विषज्ञानार्थत्वेनोच्यमानं यत्सविशेषज्ञानं तत्किंज्ञानमेवोत ध्यानमिति विकल्पार्थः ।। **किं वा तस्येति** ।। सविशेषस्येत्यर्थः। आद्येपि सकृज्ज्ञानं वोत ज्ञानसन्ततिरूपं वा निदिध्यासनं वा ।

नाद्य इत्याह – **नाद्य इति** ।। तत्राऽपि सकृत्सविशेषनिर्विशेषज्ञानसाधनमिति प्रथमेपि द्रष्टव्यम् । निर्विशेषज्ञानं नाम विशेषाभावविशिष्टज्ञानं वा विशेषाभावोपलक्षितज्ञानं वा विशेषणाविषयकं ज्ञानं वा । तत्राद्यमनूद्य दूषयति – **निर्विशेषशब्देनेति** ।। द्वितीयमनुवदति – **तदिति** ।। विशेषाभावेनोपलक्ष्यः किं विशेषो वोतान्यद्वा । आद्यं दूषयति – **काकेनेति** ।। **तस्येति** ।। विशेषाभावेनोपलक्ष्यस्य विशेषस्येत्यर्थः । तथा चोपलक्षणीभूताद्विशेषाभावात् पूर्वमेव ज्ञातस्य न तदुपलक्ष्यत्वमिति भावः ।

द्वितीये द्वितीयं दूषयति – **अन्यस्य चेति** ।। किं च विशेषाभावेनोपलक्षितत्वेन तज्ज्ञानार्थं सविशेषज्ञानमिति वक्तव्यम् । अन्यथा स्वरूपमात्रस्य विशिष्टग्राहिणैव गृहीतत्वेन निर्विशेषज्ञानस्य वैयर्थ्यप्रसङ्गात् । विशेषाभावोपलक्षितत्वेन निर्विशेषज्ञानं च विशिष्टज्ञानत्वान्न मोक्षसाधनमिति न तत्साधनत्वं सविशेषज्ञानस्येत्याशयवानाह – **उपलक्ष्यत्वाकारेण चेति** ।। विशेषणाविषयं ज्ञानं निर्विशेषज्ञानमिति तृतीयमनूद्य दूषयति – **नचेति** ।।

नन्वत्र विशिष्टज्ञानस्य विशेषणाविषय-विशेष्यज्ञानार्थत्वस्यादृष्टत्वेपि ब्रह्मविषयविशिष्टज्ञानस्य केवलविशेष्यज्ञानार्थत्वमस्त्वित्यरुचेराह – **किञ्चेति** ।। सविशेषज्ञानस्य निर्विशेषज्ञानं प्रति हेतुत्वं परम्परया साक्षाद्वा । आद्येपि किं दृष्टद्वारा वा हेतुरदृष्टद्वारा वा ज्ञानप्रतिबन्धकदुरितनिवृत्तिद्वारा वा ।

नाद्य इत्याह – **न तावदिति** ।। दृष्टद्वारमप्यज्ञानध्वंसश्चित्तवशीकरणं वा । नोभयमपीत्याह – **तद्विशिष्टेति** ।। एवं निर्विशेषज्ञानमित्यत्र विशेषाभावविशिष्टज्ञानं वा तदभावोपलक्षितज्ञानं वा तद्विशेषणाज्ञानं वा । न त्रयमपीत्याह – **तदभावेति** ।। अन्यथाऽदृष्टकल्पनाप्रसङ्ग इति भावः । नन्वादावेव निराकारेऽन्तःकरणप्रवेशासम्भवेन प्रथमतः; साकारेऽन्तःकरणं प्रवेश्य पश्चान्निराकारेऽतःकरणं

प्रवेश्यत इत्यनेन प्रकारेण तस्य तत्र हेतुत्वमत आह – **रूपादीति** ।। तथाचानयोः परस्परं विरुद्धत्वान्न कार्यकारणभाव इति भावः ।

नन्वभावज्ञाने प्रतियोग्यधिकरणसंसर्गारोपस्य कारणत्वेन निर्विशेषज्ञानं प्रति सविशेषज्ञानस्य प्रतियोग्यधिकरणसंसर्गारोपत्वेन रूपेण साधनता भविष्यतीत्यत आह – **निषेधोपयोगिन इति** ।। निषेधबुद्धावारोपस्य हेतुत्वं नतु शब्दजन्यारोपस्येति भावः ।

ननु शाब्दनिषेधबोधे शब्दारोप एव हेतुरित्यत आह – **न हीति** ।। द्वितीयं दूषयति ।। **नापीति** ।। ज्ञानस्यापि विहितक्रियात्वाददृष्टजनकतेत्यत आह – **त्वन्मत इति** ।। ज्ञानसामान्यस्याविधेयत्वेपि तद्विशेषस्य विधेयत्वस्यास्माभिरङ्गीकारेपि न तत्परेणाङ्गीकर्तुं शक्यत इत्यभिप्रायेण त्वन्मत इत्युक्तम् । तृतीयं प्रत्याह – **नापीति** ।। **तस्येति** ।। निर्विशेषज्ञानप्रतिबन्धकदुरितस्येत्यर्थः ।

किञ्च यदि निर्विशेषज्ञानप्रतिबन्धकदुरितनिवर्तकत्वात्सविशेषनिरूपणं तर्हि नित्यकर्मादेरपि निरूपणं कर्तव्यं स्यात् । तस्यापि तज्ज्ञानप्रतिबन्धकदुरित-निवर्तकत्वाविशेषादित्याह – **नित्यादीति** ।।

ननु नित्यादिकर्मणां धर्ममीमांसायामेव निरूपितत्वान्न तेषामिह निरूपणम् । सविशेषस्य त्वन्यत्रानिरूपितत्वादिह तन्निरूपणं क्रियत इत्यत आह – **त्वन्मत इति** ।। ज्ञानमज्ञानस्यैव निवर्तकमिति त्वदभ्युपगमादिति भावः ।

ननु निर्विशेषज्ञानप्रतिबन्धकीभूतदुरितस्य सविशेषाज्ञानकार्यत्वेन सविशेष-ज्ञानेन सविशेषाज्ञाननिवृत्तौ उपादाननिवृत्तावुपादेयनिवृत्तेरावश्यकत्वाद्दुरितस्यापि निवृत्तिः सम्भवतीति तद्द्वारा निर्विशेषज्ञानार्थत्वं स्यादित्यत आह – **नचेति** ।। सर्वस्य ब्रह्माज्ञानकार्यत्वेन न सविशेषाज्ञानकार्यत्वमिति भावः ।

सविशेषज्ञानसन्ततिरूपं निदिध्यासनं निर्विशेषज्ञानार्थमित्याद्यद्वितीयपक्षं दूषयति – **एतेनेति** ।। **श्रुतेति** ।। श्रुतपापनिवृत्तिरूपफलत्यागाश्रुतनिर्विशेष-ज्ञानार्थत्वस्वीकारापातादित्यर्थः । सविशेषनिदिध्यासनस्यापि स्वविषयापरोक्ष्यस्य प्रयोजनान्तराभावाच्चित्तवशीकरणद्वारा निर्विशेषज्ञानार्थत्वमित्यत आह – दशम

इति ।। नन्वापरोक्ष्यस्य चित्तैकाग्र्यहेतुकत्वात् सविशेषध्यानाभावे चित्तैकाग्र्याभावेन निर्विशेषापरोक्ष्यं न स्यादित्यत आह – **आपरोक्ष्यहेत्विति** ।। **चित्तवशीकरणाभाव इति** ।। तथा च सविशेषज्ञानात् पूर्वं विद्यमानस्य न तदधीनत्वमिति भावः ।

किञ्च सविशेषज्ञानं विजातीयवृत्त्यन्तररूपमारोपितविषयमुपासनापरपर्यायं ध्यानमिति नोपपद्यते । तथासति भगवति रूपादिज्ञानार्थत्वमुक्तं न स्यात् । रूपादिज्ञानस्यारोपितविषयत्वाभावेन ध्यानत्वाभावात् । रूपादेस्तात्त्विकत्वस्यैवान्यत्र प्रतिपादितत्वादित्याह – **भगवतीति** ।। किञ्च रूपस्यापरोक्षज्ञानविषयत्वान्न तात्त्विकत्वमित्याह – **हिरण्मय इति** ।। अस्त्वतात्त्विकस्यापरोक्षज्ञानविषयतेत्यत आह – **न हीति** ।। य एष इत्यत्र ब्रह्मप्रतिपादने हिरण्मयत्वादिप्रतिपादकश्रुति-विरोध इत्युक्ते साधकानुग्रहार्थमैच्छिकं मायामयं वा रूपमङ्गीक्रियत इत्युक्तम् । तदयुक्तम् । तद्विज्ञानार्थं वा ध्यानार्थं वा । नाद्यः । केवलज्ञानस्य निष्प्रयोजन-त्वात् । न द्वितीयः । योषित्यग्नित्ववदविद्यमानस्यापि ध्यानोपपत्तेरित्याह – **किञ्चेति** ।।

**अन्यथेति** ।। एवमपि सविशेषनिरूपणस्य निर्विशेषज्ञानार्थत्व इत्यर्थः । वैपरीत्यमेव विशदयति – **सत्यमिति** ।।

ननु निर्विशेषधर्मस्य काप्यप्रतिपादितत्वेन तत्सत्वे प्रमाणाभावान्न सविशेषधर्मनिरूपणं निर्विशेषधर्मज्ञानार्थमित्यत आह – **शक्यं हीति** ।। किं चेदं सूत्रद्वयं परप्रतिकूलम् । परेण निर्धर्मकत्वस्य जीवब्रह्मैक्यस्य चाङ्गीकृतत्वात् । अत्र च सधर्मकत्वभेदयोरेव प्रतिपादनादित्याह – **किञ्चेति** ।।

ननु तयोर्मिथ्यात्वान्न सूत्रयोः प्रतिकूलत्वमित्यत आह – **धर्म इति** ।। नन्वन्तरउपपत्तेरित्यनेनास्याधिकरणस्य परमते पौनरुक्त्यं कुतो नोच्यत इत्यत आह – **परमत इति** ।।

ವಿವರಣೆ - ಅದ್ವೈತಸಿದ್ಧಾಂತದಲ್ಲಿ ಬ್ರಹ್ಮವಿಷಯಕವಾದ ನೀರೂಪತ್ವ ಸರೂಪತ್ವ ಶ್ರುತಿಗಳಿಗೆ ಬರುವ ಪರಸ್ಪರ ವಿರೋಧವನ್ನು ಎರಡು ಬಗೆಯಲ್ಲಿ ಇಲ್ಲಿಯ ತನಕ ನಿರಾಕರಿಸಿದ್ದಾಯಿತು. ಈಗ ಅದ್ವೈತಿಗಳು ಹೇಳುವ ಸವಿಶೇಷಬ್ರಹ್ಮನ ಜ್ಞಾನವು ನಿರ್ವಿಶೇಷಬ್ರಹ್ಮನ ಜ್ಞಾನಕ್ಕೋಸ್ಕರ ಎಂಬ ಮತ್ತೊಂದು ವಾದವನ್ನು ನಿರಾಕರಿಸಲು ಹೊರಟಿದ್ದಾರೆ. ಸವಿಶೇಷಬ್ರಹ್ಮನ ಜ್ಞಾನಕ್ಕೆ ನಿರ್ವಿಶೇಷಬ್ರಹ್ಮನೇ ಕಾರಣನಾದರೆ ಶ್ರುತಹಾನ

ಮತ್ತು ಅಶ್ರುತಹಾನ ದೋಷಗಳು ಬರುತ್ತವೆ. ಆದ್ದರಿಂದ ನಿರ್ವಿಶೇಷಬ್ರಹ್ಮನ ಜ್ಞಾನವು ಕಾರಣವೆಂದು ಹೇಳಬಾರದು. ಅಥವಾ ಸವಿಶೇಷಬ್ರಹ್ಮನ ನಿರೂಪಣೆಯು ನಿರ್ವಿಶೇಷಬ್ರಹ್ಮನ ಜ್ಞಾನಕ್ಕೋಸ್ಕರವೆಂದು ಅಂಗೀಕರಿಸೋಣ ಆದರೂ ಸಹ ಅದ್ವೈತವಾದವು ತಪ್ಪಾಗುತ್ತದೆ. ಏಕೆಂದರೆ ಸವಿಶೇಷಜ್ಞಾನವು ನಿರ್ವಿಶೇಷಜ್ಞಾನಕ್ಕೆ ಕಾರಣವೆಂದು ಹೇಳುತ್ತೀರೋ? ಅಥವಾ ಸವಿಶೇಷಬ್ರಹ್ಮನ ಧ್ಯಾನವು ನಿರ್ವಿಶೇಷಜ್ಞಾನಕ್ಕೆ ಕಾರಣವೆನ್ನುತ್ತೀರೋ? ಹೀಗೆ ವಿಕಲ್ಪಿಸುವಾಗ ಗ್ರಂಥಕಾರರು ಧ್ಯಾನದ ಲಕ್ಷಣವನ್ನು ನಿರೂಪಿಸುವ ಮೂಲಕ ವಿಕಲ್ಪ ಮಾಡಿ 'ಕಿಂಚ' ಇತ್ಯಾದಿಗ್ರಂಥದಿಂದ ನಿರೂಪಿಸುತ್ತಿದ್ದಾರೆ. ನಿರ್ವಿಶೇಷ ಶಬ್ದದಿಂದ ವಿಶೇಷಾಭಾವವಿಶಿಷ್ಟನು ಹೇಳಲ್ಪಟ್ಟಿದ್ದಾನೋ? ಅಥವಾ ವಿಶೇಷಾಭಾವದಿಂದ ಉಪಲಕ್ಷಿತನಾದ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೋ? ಎಂದೆರಡು ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು 'ನಿರ್ವಿಶೇಷ' ಇತ್ಯಾದಿ ಗ್ರಂಥದಿಂದ ಕ್ರಮವಾಗಿ ನಿರಾಕರಿಸುತ್ತಿದ್ದಾರೆ. ಉಪಲಕ್ಷಣದ ಪಕ್ಷದಲ್ಲಿಯೂ ವಿಶೇಷಭಾವದಿಂದ ಉಪಲಕ್ಷಿತನಾದವನು ಕೇವಲ ವಿಶೇಷ್ಯಬ್ರಹ್ಮನೋ ಅಥವಾ ಬ್ರಹ್ಮನಲ್ಲಿರುವ ಯಾವುದಾದರೊಂದು ಧರ್ಮವೋ? ಎಂಬೆರಡು ವಿಕಲ್ಪಗಳನ್ನು ಮನಸ್ಸಿಲ್ಲಿಟ್ಟುಕೊಂಡು 'ತದಭಾವ' ಎಂಬ ಗ್ರಂಥವು ಹೊರಟಿದೆ.

ವಿಶಿಷ್ಟಗ್ರಾಹಿಯಾದ ಬ್ರಹ್ಮನ ಸ್ವರೂಪವು ತಿಳಿದರೂ ಸಹ ಉಪಲಕ್ಷತ್ವದಿಂದ ಬ್ರಹ್ಮನನ್ನು ತಿಳಿಯಲು ಸಾಧ್ಯವಿಲ್ಲವಲ್ಲ? ಎಂಬ ಪ್ರಶ್ನೆಗೆ, 'ಉಪಲಕ್ಷ್ಯತ್ವಾಕಾರೇಣ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ವಿಶಿಷ್ಟಜ್ಞಾನದಿಂದ ವಿಶೇಷಜ್ಞಾನವು ಸಿದ್ಧವಾಗಿರಬಹುದು. ಆದರೆ ವಿಶೇಷವನ್ನು ವಿಶಿಷ್ಟೀಕರಿಸದ ವಿಶೇಷಜ್ಞಾನವು ಸಿದ್ಧವಾಗಿಲ್ಲ. ಆದಕ್ಕೋಸ್ಕರ ವಿಶಿಷ್ಟಜ್ಞಾನವು ಬೇಕೆಂದು ಅದ್ವೈತಿಗಳು ಹೇಳಿದರೆ 'ನಚ ವಿಶೇಷಣಾವಿಷಯಮ್' ಎಂಬ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. ತಾವು ಹೇಳಿದ್ದನ್ನೆಲ್ಲಾ ಒಂದೇ ಶ್ಲೋಕದಿಂದ ಸಂಗ್ರಹಿಸಿದ್ದಾರೆ.

ಸವಿಶೇಷಜ್ಞಾನವು ನಿರ್ವಿಶೇಷಜ್ಞಾನಕ್ಕೆಂದು ಹೇಳಿದಿರಿ, ಅದನ್ನು ಒಪ್ಪೋಣ. ಆದರೆ ಆ ಸವಿಶೇಷಜ್ಞಾನವು ದೃಷ್ಟದ್ವಾರಾ ವಿಶೇಷಜ್ಞಾನಕ್ಕೆ ಕಾರಣವಾಗಿದೆಯೋ? ಅಥವಾ ಅದೃಷ್ಟದ್ವಾರವೋ? ಅಥವಾ ಪ್ರತಿಬಂಧಕವಾದ ದುರಿತಾದಿಗಳನ್ನು ನಿವೃತ್ತಿ ಮಾಡುವ ಮೂಲಕವೋ? ಮೊದಲನೆಯ ಪಕ್ಷದಲ್ಲಿಯೂ ದೃಷ್ಟವಾದದ್ದು ಯಾವುದು? ಅಜ್ಞಾನಧ್ವಂಸವೋ? ಚಿತ್ತವನ್ನು ನಿಯಂತ್ರಿಸುವುದೋ? ಎಂದು ವಿಕಲ್ಪಿಸಿ ಕ್ರಮವಾಗಿ 'ಕಿಂಚ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

ವಿಶೇಷಣಾದಿಗಳನ್ನು ನಿರ್ವಿಶೇಷನಲ್ಲಿ ನಿಷೇಧ ಮಾಡಬೇಕೆಂದರೆ ಪ್ರತಿಯೋಗಿಯಾದ ಆರೋಪಗಳು ಆವಶ್ಯಕವಾಗಿವೆ. ಆದ್ದರಿಂದ ವಿಶೇಷಭಾವಜ್ಞಾನಕ್ಕೋಸ್ಕರ ಸವಿಶೇಷಜ್ಞಾನವು ಯುಕ್ತವಾಗಿದೆ ಎಂಬ ವಾದವನ್ನು 'ನಿಷೇಧ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ಅದೃಷ್ಟಾದ್ವಾರವೆಂಬ ಎರಡನೆಯ ಪಕ್ಷವನ್ನು 'ನಾಪಿ ಅದೃಷ್ಟದ್ವಾರಾ' ಎಂಬ ಗ್ರಂಥದಿಂದ, ಪ್ರತಿಬಂಧಕನಿವೃತ್ತಿದ್ವಾರಾ ಕಾರಣವಾಗಿದೆಯೆಂಬ ಮೂರನೆಯ ಪಕ್ಷವನ್ನು 'ನಾಪಿ ಜ್ಞಾನ' ಎಂಬ ಗ್ರಂಥದಿಂದ ನಿರಾಕರಿಸಿದ್ದಾರೆ. ದುರಿತನಿವರ್ತಕತ್ವವನ್ನು ಜ್ಞಾನಕ್ಕೆ ಸಾಕ್ಷಾತ್ತಾಗಿ ಹೇಳುತ್ತೀರೋ? ಅಥವಾ ಅಜ್ಞಾನನಿವೃತ್ತಿದ್ವಾರಾ ಹೇಳುತ್ತೀರೋ? ಮೊದಲನೆಯ ಪಕ್ಷಕ್ಕೆ 'ತಸ್ಯ' ಎಂಬ ವಾಕ್ಯದಿಂದ ಎರಡನೆಯ ಪಕ್ಷಕ್ಕೆ 'ನಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಏತೇನ' ಎಂಬ ಪದದ ಅರ್ಥವನ್ನೇ 'ಶ್ರುತ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ. ಸವಿಶೇಷನ, ನಿಧಿಧ್ಯಾಸನದಿಂದ ಸವಿಶೇಷನ

ಜ್ಞಾನವೇ ಬರಬೇಕು ಹೊರತು, ಮತ್ತೊಬ್ಬ ನಿರ್ವಿಶೇಷನ ಜ್ಞಾನವು ಬರುವುದಿಲ್ಲವೆಂದು 'ಸವಿಶೇಷ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ.

ಚಿತ್ತದ ವಶೀಕರಣಕ್ಕೆ ಉಪಯುಕ್ತವಾದದ್ದು ಸವಿಶೇಷನ ನಿಧಿಧ್ಯಾಸನವಾಗಿದೆ. ಈ ನಿಧಿಧ್ಯಾಸನವು ನಿರ್ವಿಶೇಷಜ್ಞಾನಕ್ಕೆ ಉಪಯುಕ್ತವಾಗಿದೆ. ಹೊರತು ನೇರವಾಗಿ ಸವಿಶೇಷಜ್ಞಾನವು ನಿರ್ವಿಶೇಷಜ್ಞಾನಕ್ಕೆ ಕಾರಣವಾಗಿಲ್ಲ. ಎಂದು ಅದ್ವೈತಿಗಳು ಹೇಳಿದರೆ ಆ ನಿರ್ವಿಶೇಷಜ್ಞಾನವು ಶಾಬ್ದಜ್ಞಾನವಾಗಿದೆಯೋ? ಅಥವಾ ಅಪರೋಕ್ಷಜ್ಞಾನರೂಪವಾಗಿದೆಯೋ? ಮೊದಲನೆಯ ಪಕ್ಷವನ್ನು 'ದಶಮಃ' ಎಂಬ ವಾಕ್ಯದಿಂದ ಎರಡನೆಯ ಪಕ್ಷವನ್ನು 'ಅಪರೋಕ್ಷ' ಎಂಬ ಗ್ರಂಥದಿಂದ ನಿರಾಕರಿಸಿದ್ದಾರೆ. ಚಿತ್ತೈಕಾಗ್ರತೆಯು ಸವಿಶೇಷಜ್ಞಾನಕ್ಕಿಂತ ಮೊದಲೇ ಸಿದ್ಧವಾದ್ದರಿಂದ ಸವಿಶೇಷಜ್ಞಾನದಿಂದ ಉಪಪಾದ್ಯವಾಗುವುದಿಲ್ಲವೆಂದು 'ಚಿತ್ತ' ಇತ್ಯಾದಿ ಗ್ರಂಥದಿಂದ ಹೇಳಿದ್ದಾರೆ.

ಎರಡನೆಯ ಗ್ರಂಥವನ್ನು 'ನಾಪಿ' ಇತ್ಯಾದಿ ಗ್ರಂಥದಿಂದ ನಿರಾಕರಿಸಲಾಗಿದೆ. ಧ್ಯಾನವು ಜ್ಞಾನರೂಪವಾದ್ದರಿಂದ ಮೊದಲನೆಯ ಪಕ್ಷದಲ್ಲಿಯೇ ಸೇರುತ್ತದೆ. ಅಲ್ಲಿ ಬರುವ ದೋಷಗಳೆಲ್ಲವು ಎರಡನೆಯ ಪಕ್ಷದಲ್ಲಿಯೂ ಸಮಾನ.

ಶ್ರುತಿಯಲ್ಲಿ 'ಹಿರಣ್ಮಯಃ' ಎಂದು ಹೇಳಿದರೂ ಅದು ಮಿಥ್ಯಾಭೂತವಾಗಿದೆ. ಅದನ್ನು ವಶೀಕರಿಸುವಂತಹದ್ದು ಧ್ಯಾನವೇ ಆಗುತ್ತದೆ; ಜ್ಞಾನವಾಗುವುದಿಲ್ಲ. ಇಲ್ಲದ ವಸ್ತುವನ್ನು ಜ್ಞಾನವು ವಿಷಯೀಕರಿಸದೇ ಇರಬಹುದು. ಆದರೆ ''ಯೋಷಿತಮಗ್ನಿಂ ಧ್ಯಾಯೀತ'' ಎಂಬಂತೆ ಧ್ಯಾನಕ್ಕೆ ವಿಷಯವಾಗುತ್ತದಲ್ಲವೇ? ಎಂಬ ಶಂಕೆಗೆ 'ಭಗವತೀತ್ಯಾದಿ' ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಬ್ರಹ್ಮನಿಗೆ ರೂಪವಿದೆ. ಮತ್ತು ಆ ರೂಪವು ಸಾತ್ವಿಕವಾಗಿದೆಯೆಂದು ನ್ಯಾಯಾಮೃತದಲ್ಲಿ 'ಪರಮತೇ ಬ್ರಹ್ಮಣಃ ನಿರಾಕಾರ ಭಂಗಃ' ಎಂಬ ಪ್ರಕರಣದಲ್ಲಿ ವಿವರಿಸಿದ್ದಾರೆ. ಬ್ರಹ್ಮನಲ್ಲಿರುವ ರೂಪವು ಸಾತ್ವಿಕವೆನ್ನಲು ವಿಷಯವಾಕ್ಯದಲ್ಲಿರುವ ಯುಕ್ತಿಯನ್ನೇ 'ಹಿರಣ್ಮಯಃ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಅದನ್ನೇ 'ನಹಿ' ಇತ್ಯಾದಿ ಗ್ರಂಥವು ವಿವರಿಸಿದೆ. ಒಂದುವೇಳೆ ಮಿಥ್ಯಾಭೂತವಾದದ್ದು ಧ್ಯಾನಕ್ಕೆ ವಿಷಯವಾದರೆ ಶಾಸ್ತ್ರಗಳಲ್ಲಿ ಸವಿಶೇಷಬ್ರಹ್ಮನ ನಿರೂಪಣೆಯು ವ್ಯರ್ಥವಲ್ಲವೇ? ಎಂಬ ಶಂಕೆಗೆ ಮತ್ತೊಂದು ದೋಷವನ್ನು 'ಕಿಂಚ' ಇತ್ಯಾದಿ ಗ್ರಂಥವು ಹೇಳಿದೆ. ಯಾವುದೋ ಒಂದು ಪದಾರ್ಥದ ನಿರೂಪಣೆಯಿಂದ ಮತ್ತೊಂದು ಪದಾರ್ಥದ ಜ್ಞಾನವು ಬರುವುದಾದರೆ ನಿರ್ವಿಶೇಷಬ್ರಹ್ಮನ ಜ್ಞಾನದಿಂದ ಸವಿಶೇಷಬ್ರಹ್ಮನ ಜ್ಞಾನವು ಬರಲಿ, ಸವಿಶೇಷಬ್ರಹ್ಮಜ್ಞಾನದಿಂದ ನಿರ್ವಿಶೇಷಬ್ರಹ್ಮಜ್ಞಾನವಷ್ಟೇ ಬರುತ್ತದೆಂಬುದು ತಪ್ಪು. ಮತ್ತೊಂದು ಅತಿಪ್ರಸಂಗವನ್ನು 'ಸತ್ಯಮ್' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಸದ್‌ಬ್ರಹ್ಮನ ನಿರೂಪಣೆಯಿಂದ ಅಸದ್ ಬ್ರಹ್ಮನ ಜ್ಞಾನವು ಬರಲಿ ಎಂದು.

ಹಿಂದಿನ ಅತಿಪ್ರಸಂಗವನ್ನು ಸಂಗ್ರಹಿಸುವ ಮೂಲಕ ಇನ್ನೊಂದು ಅತಿಪ್ರಸಂಗವನ್ನು ಶ್ಲೋಕದಿಂದ ಹೇಳುತ್ತಿದ್ದಾರೆ. ನಿರ್ವಿಶೇಷಧರ್ಮವನ್ನು ಅನುಷ್ಠಾನ ಮಾಡಲು ಸವಿಶೇಷಧರ್ಮವನ್ನು ನಿರೂಪಿಸಲಾಗಿದೆ ಎಂದಾಗಬೇಕಾದೀತು. ನಿರ್ವಿಶೇಷಬ್ರಹ್ಮನಂತೆ ನಿರ್ವಿಶೇಷಧರ್ಮ ಇರುವುದು ಕಂಡಿಲ್ಲ. ಆದ್ದರಿಂದ ಅತಿಪ್ರಸಂಗವನ್ನು ಹೇಗೆ ಹೇಳುತ್ತೀರಿ? ಎಂಬ ಶಂಕೆಗೆ 'ಶಕ್ಯಂ ಹಿ' ಎಂದು ಉತ್ತರಿಸುತ್ತಿದ್ದಾರೆ. ವಸ್ತುತಃ

ಯಾವುದೇ ಶಾಸ್ತ್ರಗಳಲ್ಲಿ ನಿರ್ವಿಶೇಷಬ್ರಹ್ಮನ ಪ್ರತಿಪಾದನೆಗಳು ಕಾಣಿಸುವುದಿಲ್ಲ. ಆದರೂ ಸಹ ಲಕ್ಷಣಾ ವೃತ್ತಿಯಿಂದ ನಿರ್ವಿಶೇಷಬ್ರಹ್ಮನು ಪ್ರತಿಪಾದ್ಯನೆಂದು ಹೇಗೆ ಹೇಳುತ್ತಿರೋ ಆದರಂತೆ ನಿರ್ವಿಶೇಷಧರ್ಮವೂ ಸಹ ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯವಾಗಬಹುದು.

ಈ ಅಧಿಕರಣದಲ್ಲಿರುವ ಎರಡೂ ಸೂತ್ರಗಳು ಅದ್ವೈತಿಗಳಿಗೆ ಪ್ರತಿಕೂಲವಾಗಿದೆಯೆಂದು 'ಕಿಂಚ' ಇತ್ಯಾದಿವಾಕ್ಯದಿಂದ ಹೇಳುತ್ತಿದ್ದಾರೆ. ಎರಡು ಸೂತ್ರಗಳಲ್ಲಿ ಹೇಳಲ್ಪಟ್ಟ ಕರ್ಮ ಹಾಗು ಭೋಗವನ್ನು ಅದ್ವೈತಿಗಳು ವ್ಯಾವಹಾರಿಕವೆಂದು ಒಪ್ಪಿರುವುದರಿಂದ ಹೇಗೆ ಪ್ರತಿಕೂಲವಾಗುತ್ತದೆ? ಎಂಬ ಪ್ರಶ್ನೆಗೆ 'ಧರ್ಮ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಅಂದರೆ 'ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ' ಅದ್ವೈತಿಗಳೇ ಉದಾಹರಿಸುವ ಶ್ರುತಿಗೂ ಸೂತ್ರಗಳಿಗೂ ಏಕಕಾಲದಲ್ಲಿ ಅಪ್ರಾಮಾಣ್ಯವನ್ನು ಒಪ್ಪಿದಂತಾಗುತ್ತದೆ.

## ವ್ಯಾಕರಣ ವಿಚಾರ

ಶಂಕೆ - ಗ್ರಂಥಕಾರರು ಸೌಗತಸೌಹೃದಾತ್ ಎಂದು ಹೇಗೆ ಪ್ರಯೋಗಿಸಿದರು? ಏಕೆಂದರೆ ''ಹೃದ್ಭಗಸಿಂಧ್ವಂತೇ ಪೂರ್ವಪದಸ್ಯ ಚ'' ಎಂಬ ಸೂತ್ರದಂತೆ ಸೌಹಾರ್ದಾತ್ ಎಂದಾಗಬೇಕು. ''ಹೃತ್ ಭಗ ಸಿಂಧು'' ಈ ಮೂರು ಶಬ್ದಗಳು ಕೊನೆಯಲ್ಲಿ ಇದ್ದಾಗ ಹಿಂದಿನ ಪದಕ್ಕೂ ವೃದ್ಧಿ ಬರುತ್ತದೆಂದು ಪೂರ್ವಪದಕ್ಕೆ ಮತ್ತು ಉತ್ತರ ಪದಕ್ಕೆ ಏಕಕಾಲದಲ್ಲಿ ವೃದ್ಧಿಯನ್ನು ಸೂತ್ರವು ವಿಧಿಸುತ್ತಿದೆ. ಪ್ರಕೃತ ಸುಹೃತ್ ಎಂಬಲ್ಲಿ ಸು ಎಂಬ ಪೂರ್ವಪದಕ್ಕೆ ಮತ್ತು ಹೃತ್ ಎಂಬ ಉತ್ತರಪದಕ್ಕೆ ವೃದ್ಧಿ ಬಂದರೆ ಸೌಹಾರ್ದ ಎಂದಾಗುತ್ತದೆ. ಸೌಹೃದ ಎಂದಾಗುವುದಿಲ್ಲ.

ಸಮಾಧಾನ - ಈ ಶಂಕೆಗೆ ದುರ್ಘಟವೃತ್ತಿಕಾರನು ಹೀಗೆ ಉತ್ತರಿಸಿದ್ದಾನೆ'' ಸಂಜ್ಞಾಪೂರ್ವಕವಾದ ವಿಧಿಯು ಅನಿತ್ಯವಾಗಿದೆ. 'ಹೃದ್‌ಬಲ' ಇತ್ಯಾದಿ ಸೂತ್ರದಲ್ಲಿ ಮಾಡಲ್ಪಟ್ಟ ವಿಧಿಯು ವೃದ್ಧಿಯೆಂಬ ಸಂಜ್ಞಾಪೂರ್ವಕವಾಗಿದೆ. ಆದ್ದರಿಂದ ಇದನ್ನು ಮಾಡಲೇಬೇಕೆಂಬ ನಿಯಮವಿಲ್ಲ. ಹೃತ್, ಭಗ, ಸಿಂಧು ಪದಗಳು ಯಾವ ಪದಗಳ ಹಿಂದಿರುತ್ತವೋ ಆ ಸ್ಥಳದಲ್ಲಿ ಏಕಕಾಲದಲ್ಲಿ ಉಭಯಪದವೃದ್ಧಿಯು ಬರುವುದಿಲ್ಲ. ಆವಾಗ 'ತದ್ಧಿತೇಷ್ವಚಾಮಾದೇಃ' ಎಂಬ ಸೂತ್ರದಿಂದ ಕೇವಲ ಆದಿವೃದ್ಧಿಯು ಬರುತ್ತದೆ. ಆದ್ದರಿಂದ 'ಸೌಹೃದಾತ್' ಎಂಬ ಪದವು ಸಾಧುವಾಗುತ್ತದೆ.

''ಅರ್ಥವತೋ ಗ್ರಹಣೇ ನಾನರ್ಥಕಸ್ಯ'' ಎಂಬ ಪರಿಭಾಷೆಯು ಅರ್ಥವುಳ್ಳ ಶಬ್ದವನ್ನು ಸ್ವೀಕರಿಸಲು ಬರುವಾಗ ಅರ್ಥವಿಲ್ಲದ ಶಬ್ದವನ್ನು ಸ್ವೀಕರಿಸಬಾರದು ಎಂದು ಹೇಳುತ್ತಿದೆ. ''ಸ್ವಂ ರೂಪಂ ಶಬ್ದಸ್ಯಾಶಬ್ದಸಂಜ್ಞಾ'' ಎಂಬ ಸೂತ್ರದಲ್ಲಿ ರೂಪವೆಂಬ ಶಬ್ದದಿಂದ ಈ ಪರಿಭಾಷೆಯನ್ನು ಸೂಚಿಸಿದ್ದಾರೆ. ಪ್ರಕೃತದಲ್ಲಿ 'ಹೃದ್‌ಭಗ' ಎಂಬ ಸೂತ್ರದಲ್ಲಿ ಸಾರ್ಥಕವಾದ 'ಹೃದ್' ಶಬ್ದವನ್ನೇ ಗ್ರಹಣ ಮಾಡಿದ್ದಾರೆ. ಹೊರತು ನಿರರ್ಥಕವಾದ 'ಸುಹೃತ್' ಶಬ್ದವನ್ನು ಗ್ರಹಣ ಮಾಡಿಲ್ಲ. ''ಸುಹೃದ್ದುರ್ಹೃದೌ ಮಿತ್ರಾಮಿತ್ರಯೋಃ'' ಎಂಬಲ್ಲಿ ಮಿತ್ರ ಎಂಬರ್ಥದಲ್ಲಿ ಸುಹೃತ್ ಶಬ್ದವನ್ನು ದ್ವೇಷಿ ಎಂಬರ್ಥದಲ್ಲಿ ದುರ್ಹೃದ್ ಶಬ್ದವನ್ನು ನಿಪಾತ ಮಾಡಿದ್ದಾರೆ. ನಿಪಾತಶಬ್ದಗಳ ಸಮುದಾಯಕ್ಕೆ ಅರ್ಥವಿರುತ್ತದೆ ಹೊರತು ಅವಯವಗಳಿಗೆ ಅರ್ಥವಿರುವುದಿಲ್ಲ. ಆದ್ದರಿಂದ ಪ್ರಕೃತ ಗ್ರಂಥಕಾರರು ಪ್ರಯೋಗಿಸಿದ 'ಸುಹೃದ್' ಎಂಬ ಶಬ್ದವು ಮಿತ್ರನೆಂಬರ್ಥವುಳ್ಳ ನಿಪಾತ ಶಬ್ದವಾಗಿದೆ. ಆದ್ದರಿಂದ ಉಭಯಪದ ವೃದ್ಧಿಯು ಬರುವುದಿಲ್ಲ. ಹೊರತಾಗಿ ಆದಿವೃದ್ಧಿಯಷ್ಟೇ ಬರುತ್ತದೆ.

ಚಾಂದ್ರವ್ಯಾಕರಣ ಪ್ರಕಾರ ಹೀಗೆ ಪರಿಹಾರ - ಹೃದ್ಭಗ ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಹೃದ್ ಶಬ್ದವು ಹೃದಯ ಶಬ್ದದ ಪರ್ಯಾಯವಾಗಿದೆ. ''ಹೃದಯಸ್ಯ ಹೃಲ್ಲೇಖಯದಣ್‌ಲಾಸೇಷು'' ಎಂಬಲ್ಲಿ ಹೃದಯ ಶಬ್ದಕ್ಕೆ 'ಹೃತ್' ಎಂಬ ಆದೇಶವನ್ನು ಹೇಳಿದ್ದಾರೆ. ಪ್ರಕೃತ ಗ್ರಂಥಕಾರರು ಪ್ರಯೋಗಿಸಿದ ಸೌಹೃದ ಶಬ್ದವು ಹೃದಯಶಬ್ದಕ್ಕೆ 'ಹೃತ್' ಎಂಬ ಆದೇಶ ಬಂದು ನಿಷ್ಪನ್ನವಾಗಿದೆ. ಹೊರತು ಹೃತ್ ಶಬ್ದಕ್ಕೆ ಹೃದಯ ಎಂಬ ಆದೇಶ ಬಂದು ನಿಷ್ಪನ್ನವಾದ್ದಲ್ಲ. 'ಹೃದ್‌ಭಗ' ಎಂಬ ಸೂತ್ರದಲ್ಲಿ ಹೇಳಿರುವ ಹೃದ್ ಶಬ್ದವು ಹೃದಯ ಶಬ್ದದ ಪರ್ಯಾಯವಾಗಿದೆ. ಆದ್ದರಿಂದ ಪ್ರಕೃತ ಉಭಯಪದವೃದ್ಧಿಯು ಬರುವುದಿಲ್ಲ. ಆದ್ದರಿಂದಲೇ ಕುಮಾರಸಂಭವದಲ್ಲಿ ''ಕ್ಷಣಭಿನ್ನಸೌಹೃದಃ'' ಎಂದು ಕಾಳಿದಾಸನು ಸೌಹೃದ ಶಬ್ದವನ್ನು ಪ್ರಯೋಗಿಸಿದ್ದಾನೆ.

ಸುಧೆಯಲ್ಲಿ ಹೇಳಿದ ಪುನರುಕ್ತಿಯನ್ನು ಇಲ್ಲೇಕೇ ಹೇಳಲಿಲ್ಲ? ಎಂಬ ಪ್ರಶ್ನೆಗೆ 'ಪರಮತೇ' ಎಂದು ಉತ್ತರಿಸಿದ್ದಾರೆ. ಅಂತರಧಿಕರಣದಲ್ಲಿ ವಿವರಿಸಿರುವುದರಿಂದ ಇಲ್ಲಿ ಅದರ ವಿವರಣೆ ಅನಾವಶ್ಯಕ. ಈ ಪುನರುಕ್ತಿಯು ಅದ್ವೈತಿಗಳಿಗೆ ಮಾತ್ರವಲ್ಲ ವಿಶಿಷ್ಟಾದ್ವೈತಿಗಳಿಗೂ ಬರುತ್ತದೆ.

## ಶೈವಮತನಿರಾಸ

''ಏವಮೇವಾಸ್ಯಾಕ್ಷಿಣೀ'' ಎಂಬ ಭಾಮತಿಯಲ್ಲಿ ಉದಾಹರಿಸಿದ ವಾಕ್ಯವನ್ನೇ ಶೈವರು ವಿಷಯವಾಕ್ಯವೆನ್ನುತ್ತಾರೆ. ಈ ವಿಷಯವಾಕ್ಯದಲ್ಲಿ 'ಅಕ್ಷಿಣೀ' ಎಂದು ದ್ವಿವಚನ ಪ್ರಯೋಗವಿದೆ. ರುದ್ರನಿಗೆ ಮೂರು ಕಣ್ಣುಗಳಿರುವುದರಿಂದ ಈ ವಾಕ್ಯದಿಂದ ರುದ್ರನು ಪ್ರತಿಪಾದ್ಯನಾಗಲಾರ. ಆದ್ದರಿಂದ ಇತರ ದೇವತೆಗಳೇ 'ಏವಮೇವ' ಎಂಬ ವಾಕ್ಯದಿಂದ ಪ್ರತಿಪಾದ್ಯರಾಗಿದ್ದಾರೆ. ಅವರೇ ಅಂತಸ್ಥರಾಗಿದ್ದಾರೆಂದು ಪೂರ್ವಪಕ್ಷ

''ಸ ಏಷ ಸರ್ವೇಷಾಂ ಲೋಕಾನಾಮೀಷ್ಟೇ'' ಇತ್ಯಾದಿ ವಾಕ್ಯಗಳಲ್ಲಿ ಸರ್ವಲೋಕೇಶ್ವರತ್ವ ಧರ್ಮಗಳನ್ನು ಹೇಳಲಾಗಿದೆ. ಈ ಧರ್ಮಗಳು ''ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ'' ಎಂಬ ಶ್ರುತಿ ಹೇಳುವಂತೆ ರುದ್ರನಲ್ಲಿ ಮಾತ್ರ ಬರಲು ಸಾಧ್ಯ. ಆದ್ದರಿಂದ ರುದ್ರನೇ ಆದಿತ್ಯಾದಿಗಳ ಅಂತಸ್ಥನಾಗಿದ್ದಾನೆ. ಹಾಗಾದರೆ 'ಅಕ್ಷಿಣೀ' ಎಂಬ ದ್ವಿವಚನಪ್ರಯೋಗವನ್ನು ಮೂರು ಕಣ್ಣುಗಳಿರುವ ರುದ್ರನಲ್ಲಿ ಹೇಗೆ ಕೂಡಿಸುವುದು? ಎಂಬ ಶಂಕೆಗೂ ಅವಕಾಶವಿಲ್ಲ. ಅಕ್ಷಿಣೀ ಎಂಬ ಪದವು ಅರಳಿದ ಕಮಲದ ಸಾದೃಶ್ಯವನ್ನು ರುದ್ರನ ಕಣ್ಣಿನಲ್ಲಿ ಹೇಳುತ್ತಿದೆ. ರುದ್ರನಿಗೆ ಮೂರು ಕಣ್ಣುಗಳಿದ್ದರೂ ಸಹ ಎರಡು ಕಣ್ಣುಗಳಷ್ಟೇ ಯಾವಾಗಲು ತೆರೆದಿರುತ್ತವೆ. ಮೂರನೇ ಕಣ್ಣು ಮುಚ್ಚಿರುತ್ತದೆ (ಸಂಹಾರಕಾಲದಲ್ಲಷ್ಟೇ ತೆರೆದಿರುತ್ತದೆ). ಆದ್ದರಿಂದ ದ್ವಿವಚನ ಪ್ರಯೋಗಕ್ಕೂ ಅವಕಾಶವಿದೆಯೆಂದು ಸಿದ್ಧಾಂತ ಮಾಡಿದ್ದಾರೆ.

ಇದು ತಪ್ಪು. ಭಾಮತಿ ಮತವನ್ನು ನಿರಾಸಮಾಡುವಾಗಲೇ ಶೈವರು ಉದಾಹರಿಸಿದ ವಿಷಯವಾಕ್ಯವನ್ನು ಅನುಚಿತವೆಂದು ಸಮರ್ಥಿಸಿದ್ದಾಗಿದೆ. ಅಷ್ಟೇ ಅಲ್ಲದೆ ಅಂತರಧಿಕರಣದಿಂದ ಪೂರ್ವಪಕ್ಷವನ್ನು ಮುಂದೆ ಹೇಳುವವರಿದ್ದೇವೆ. ಅಷ್ಟೇ ಅಲ್ಲದೆ ಶಿವನನ್ನು ಎಲ್ಲರೂ ವಿರೂಪಾಕ್ಷನೆಂದು ಕರೆಯುತ್ತಾರೆ ಪುಂಡರೀಕಾಕ್ಷನೆನ್ನುವುದಿಲ್ಲ. ಪುಂಡರೀಕಾಕ್ಷತ್ವವು ವಿಷ್ಣುವಿನ ಧರ್ಮವೆಂದು ಪ್ರಸಿದ್ಧವಾಗಿದೆ. ಮತ್ತು ''ಧ್ಯೇಯ ಽಸ್ಸದಾಸವಿತೃಮಂಡಲಮಧ್ಯವರ್ತಿ'' ಇತ್ಯಾದಿಯಾಗಿ ಶ್ರುತಿಗಳಲ್ಲಿ ನಾರಾಯಣನೇ ಸೂರ್ಯಮಂಡಲದಲ್ಲಿ ಇದ್ದಾನೆಂದು ಪ್ರಮಾಣಸಿದ್ಧವಾಗಿದೆ.

ತಾಪನೀ ಪಾಚನೀ ಚೈವ ಶೋಷಣೀಚ ಪ್ರಕಾಶಿನೀ ।
ನೈವ ರಾಜನ್ರವೇಃಶಕ್ತಿಃ ಶಕ್ತಿರ್ನಾರಾಯಣಸ್ಯ ಚ ॥

ಎಲೈ ರಾಜನೇ ! ತಾಪವನ್ನು ಉಂಟುಮಾಡುವಿಕೆ ಜೀರ್ಣಮಾಡುವಿಕೆ ಒಣಗಿಸುವಿಕೆ ಮತ್ತು ಪ್ರಕಾಶಪಡಿಸುವಿಕೆ. ಈ ಎಲ್ಲ ಶಕ್ತಿಗಳು ಸೂರ್ಯನೊಳಗಿರುವ ನಾರಾಯಣನದ್ದೇ ಹೊರತು ಸೂರ್ಯನದ್ದಲ್ಲ. ಎಂಬ ಪದ್ಮಪುರಾಣದ ಮಾತೂ ಕೂಡ ಸೂರ್ಯಮಂಡಲದಲ್ಲಿರುವವನು ನಾರಾಯಣನೆಂದೇ ಹೇಳುತ್ತಿದೆ.

''ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ।

''ಸೂರ್ಯ ಚಂದ್ರ ಮತ್ತು ಅಗ್ನಿ ಇವರಲ್ಲಿ ಸಮಸ್ತ ಜಗತ್ತನ್ನು ಬೆಳಗಿಸುವ ಪ್ರಕಾಶಶಕ್ತಿ ಇದೆ. ಆದರೆ ಆ ಪ್ರಕಾಶಶಕ್ತಿಯು ನನ್ನ (ವಿಷ್ಣುವಿನ) ಅಧೀನವೆಂದು ತಿಳಿ''.

ಗೀತೆಯ ಈ ಮಾತಿನಿಂದ ಆದಿತ್ಯನಲ್ಲಿ ಅಂತರ್ಗತನಾಗಿ ಪ್ರಕಾಶ ನೀಡುವವನು ವಿಷ್ಣುವೆಂದು ತಿಳಿಯುತ್ತದೆ. ನೀವು ರುದ್ರನು ಆದಿತ್ಯಾಂತರ್ಗತನೆಂದು ಹೇಳಿದರೆ ಗೀತಾವಿರೋಧ ತಪ್ಪಿದ್ದಲ್ಲ.

''ಅಹಂ ತತ್ತೇಜೋ ರಶ್ಮೀನ್ನಾರಾಯಣಮ್'' ನಾನೇ ಸೂರ್ಯನ ರಶ್ಮಿಗಳಲ್ಲಿ ನಿಂತಿರುವ ನಾರಾಯಣನು.

''ವೃತ್ರಂ ಯದಿಂದ್ರ ಶವಸಾ ವಧೀರಹಿಮಾದಿತ್ಸೂರ್ಯಂ ದಿವ್ಯಾರೋಹಯೋದೃಶೇ ।
ಯತ್ಸೂರ್ಯಸ್ಯ ಹರಿತಃ ಪತಂತೀಃ ಪುರಸ್ಸತೀರುಪರಾ ವೀತಶೋಕಃ ।
ಯೇನಾವೃತಂ ಖಂಚ ದಿವಂ ಮಹೀಂ ಚ ಯೇನಾದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ''
''ಯಮಂತಸ್ಸಮುದ್ರೇ ಕವಯೋ ವಯಂತಿ''

ಇತ್ಯಾದಿಯಾಗಿ ತೈತ್ತಿರೀಯಭಾಷ್ಯದಲ್ಲಿ 'ಯ ಏಷಃ' ಎಂಬ ವಾಕ್ಯವನ್ನು ವಿಷ್ಣುಪರವೆಂದು ಸಮರ್ಥಿಸಿದ್ದಾರೆ. ಛಾಂದೋಗ್ಯಭಾಷ್ಯದಲ್ಲಿಯೂ ಕೂಡ ಅನೇಕ ಪ್ರಮಾಣಗಳಿಂದ 'ಯ ಏಷಃ' ಎಂಬ ವಾಕ್ಯವು ವಿಷ್ಣುಪರವೆಂದು ಸಮರ್ಥಿಸಿದ್ದಾರೆ. ಮತ್ತು ರುದ್ರಾದಿಶಬ್ದಗಳೆಲ್ಲವೂ ವಿಷ್ಣುಪರವಾಗಿವೆಯೆಂದು ''ನಾಮಾನಿ ಸರ್ವಾಣಿ'' ಎಂಬ ಶ್ರುತಿಯಿಂದ ಮತ್ತು ''ಸೋಂತಕಸ್ಸ ರುದ್ರಃಸ್ಸ ಪ್ರಾಣಭೃತ್'' ಎಂಬ ಶ್ರುತಿಯಿಂದ ಮತ್ತು ಈ ಅಧಿಕರಣದ ಭಾಷ್ಯದಲ್ಲಿ ಉದಾಹರಿಸಿದ ಅನೇಕ ಪ್ರಮಾಣಗಳಿಂದಲೂ ಸಿದ್ಧವಾಗುತ್ತದೆ. ''ತಮೇತಾಸ್ಸಪ್ತಾಕ್ಷಿತಯ ಉಪತಿಷ್ಠಂತೇ ಯಾ ಇಮಾ ಅಕ್ಷನ್ಲೋಹಿನ್ಯೋ ರಾಜಯಸ್ತಾಭಿರೇನಂ ರುದ್ರೋಽನ್ವಾಯತ್ತಃ'' ಎಂಬ ಶ್ರುತಿಯಲ್ಲಿ ರುದ್ರನು ಕಣ್ಣಿನಲ್ಲಿರುವ ಭಗವಂತನನ್ನು ಉಪಾಸನೆ ಮಾಡುತ್ತಾನೆಂದು ಹೇಳಿದ್ದಾರೆ. ಹೀಗಿರುವಾಗ ರುದ್ರನೇ ಅಕ್ಷಿಸ್ಥನಾಗಲು ಸಾಧ್ಯವಿಲ್ಲ.

ಹೀಗೆ ಹೇಳಿದ್ದರಿಂದ ಶೈವರ ಮತ್ತೊಂದು ಆಕ್ಷೇಪವು ಪರಿಹಾರವಾಯಿತು - ''ಅಂತರಾದಿತ್ಯೇ ಹಿರಣ್ಮಯಃ ಪುರುಷಃ'' ಎಂದು ಮಹಾನಾರಾಯಣೋಪನಿಷತ್ತಿನಲ್ಲಿ ಸೂರ್ಯನ ಒಳಗಡೆ ಹಿರಣ್ಮಯನಾದ ಪುರುಷನು ಇರುವನೆಂದು ಹೇಳಲಾಗಿದೆ. ''ಏಷ ಪುರುಷ ಏಷ ಭೂತಾನಾಮಧಿಪತಿಃ'' ಎಂದು

ಭೂತಪತಿತ್ವಧರ್ಮವು ಅವನಲ್ಲೇ ಶ್ರುತವಾಗಿದೆ, ಮತ್ತು "ಸರ್ವೋ ವೈ ರುದ್ರಃ" ಎಂದು ಪ್ರಾರಂಭಿಸಿ "ಹಿರಣ್ಯಬಾಹವೇ ಹಿರಣ್ಯಪತಯೇಽಂಬಿಕಾಪತಯೇ" ಎಂದು ಉಪಸಂಹಾರದ ತನಕ ರುದ್ರನ ವಿಚಾರವೇ ಪ್ರಸಕ್ತವಾಗಿದೆ. ಹೀಗೆ ಆದಿತ್ಯನಲ್ಲಿ ಇರುವ ಹಿರಣ್ಮಯಪುರುಷನು ರುದ್ರನೇ ಆಗಿದ್ದಾನೆಂದು ನಿರ್ಣಯವಾಗುತ್ತದೆ. ಇದರ ಸಮಾಖ್ಯಾದಿಂದ 'ಯ ಏಷಃ' ಎಂಬ ವಾಕ್ಯದಲ್ಲಿಯೂ ರುದ್ರನೇ ಪ್ರತಿಪಾದ್ಯನಾಗಬೇಕು" ಎಂದು.

ಈ ಆಕ್ಷೇಪಕ್ಕೂ ಈಗ ಆಸ್ಪದವಿಲ್ಲ. ಏಕೆಂದರೆ ರುದ್ರಾದಿಸಕಲಶಬ್ದಗಳಿಂದ ವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆಂದು ಇಲ್ಲಿಯ ತನಕ ಹೇಳಿದಂತೆ ಮಹಾನಾರಾಯಣೋಪನಿಷತ್ತಿನಲ್ಲಿಯೂ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಶೈವರ ವಾದದಲ್ಲಿ ಸ್ವಲ್ಪವೂ ಹುರುಳಿಲ್ಲ.




ಮೋಕ್ಷಸಾಧನವಾದ ನಿರ್ವಿಶೇಷಜ್ಞಾನಕ್ಕೋಸ್ಕರ ಮಂದರಿಗೆ ಸವಿಶೇಷದ (ಸಗುಣ ಬ್ರಹ್ಮನ) ನಿರೂಪಣೆ ಮಾಡಿದ್ದಾರೆಂದು ಹೇಳುವುದು ಸರಿಯಲ್ಲ. ಶ್ರುತಿಯಲ್ಲಿ ಹೇಳಿರುವ ಫಲವನ್ನು ಬಿಟ್ಟು ಬೇರೆಯದನ್ನು ಕಲ್ಪನೆ ಮಾಡುವುದು ಸರಿಯಲ್ಲ, ಮತ್ತು ಸವಿಶೇಷಬ್ರಹ್ಮನ ಜ್ಞಾನ ನಿರ್ವಿಶೇಷಬ್ರಹ್ಮನ ಜ್ಞಾನಕ್ಕೆ ಎಂದರೆ ವಿಶಿಷ್ಟಜ್ಞಾನಕ್ಕಿಂತಲೂ ಪೂರ್ವದಲ್ಲಿ ವಿಶಿಷ್ಟಜ್ಞಾನವಿರುವುದು ನಿಯಮವಾದ್ದರಿಂದ ನಿರ್ವಿಶೇಷದ ಜ್ಞಾನ ಪೂರ್ವದಲ್ಲಿಯೇ ಬಂದಿದೆ, ಮತ್ತು ಈ ಎರಡು ಜ್ಞಾನಗಳಿಗೆ ನಿಮ್ಮ ಮತದಂತೆ ಕಾರ್ಯಕಾರಣಭಾವವೂ ಕೂಡುವುದಿಲ್ಲ. ಇನ್ನು ಬ್ರಹ್ಮನ ಧ್ಯಾನಕ್ಕೆ ಎಂದು ಹೇಳುವುದಾದರೆ ಧ್ಯಾನವೆಂದರೆ ಅದೂ ಒಂದು ಜ್ಞಾನದ ಪ್ರಕಾರವೇ ಆಗಿದೆಯಾದ್ದರಿಂದ ಹಿಂದಿನ ಪಕ್ಷದಲ್ಲಿ ಹೇಳಿದ ದೋಷಗಳು ಇದ್ದೇ ಇವೆ, ಮತ್ತು ಧ್ಯಾನವನ್ನು ಕಲ್ಪಿಸಿಯೂ ಮಾಡಬಹುದಾದ್ದರಿಂದ ಅದಕ್ಕೋಸ್ಕರ ರೂಪವನ್ನು ಬ್ರಹ್ಮನು ಸ್ವೀಕರಿಸಿದ ಎಂದು ಹೇಳುವುದೂ ಸರಿಯಲ್ಲ. ಸವಿಶೇಷ ಬ್ರಹ್ಮನ ಜ್ಞಾನಕ್ಕೋಸ್ಕರವೇ ನಿರ್ವಿಶೇಷ ಬ್ರಹ್ಮನ ನಿರೂಪಣೆ ಮಾಡಿದ್ದಾರೆಂದೂ ವಿಪರೀತವಾಗಿ ಹೇಳಬಹುದು. ಆದ್ದರಿಂದ ಹೀಗೆ ಹೇಳುವುದು ಸರಿಯಲ್ಲ.

ಈ ಅಧಿಕರಣದಲ್ಲಿ ಮಾಯವಾದಿಗಳ ರೀತಿಯಲ್ಲಿ ಅರ್ಥೈಸಿದಾಗ ಅಂತರಧಿಕರಣದಿಂದ ಗತಾರ್ಥತ್ವವಿದೆ. ನಮ್ಮ ರೀತಿಯಿಂದ ವ್ಯಾಖ್ಯಾನ ಮಾಡಿದರೆ ಇಲ್ಲ ಎನ್ನುವುದನ್ನು ಅಂತರಧಿಕರಣದಲ್ಲಿ ತೋರಿಸಿದೆ.



## ತತ್ವಪ್ರಕಾಶಿಕಾದ ವಾಕ್ಯಾರ್ಥನಿರೂಪಣೆ

**तात्पर्यचन्द्रिका –**

**।। टीकाक्षरार्थस्तु – प्राबल्याद्यविवेकेनेति ।। श्रुतिलिङ्गाधिकरणसिद्धान्तात्, प्रागिव, श्रुतिः प्रबला, लिङ्गं तु दुर्बलमित्यविवेकेनेत्यर्थः ।**

**यद्वा – श्रुतेः स्वतो बलवत्त्वात्, लिङ्गस्य च निरवकाशत्वेन बलवत्त्वात्, इदं**

प्रबलं इदं दुर्बलमित्यविवेकेनेत्यर्थः ।।

सङ्गतत्वाद्ग्रहणमिति ।। अल्पाक्षरे सूत्र एकलिङ्गसमन्वयोक्त्या अनेकनाम-समन्वयस्य आर्थिकसिद्धेरेव सङ्गतत्वात्, अनेकसमन्वयोक्त्या त्वेकसमन्वयस्य आर्थिकसिद्धेरसङ्गतत्वात्, एकनामसमन्वयोक्त्या चोदाहरणवाक्यस्थसजातीयनाम-समन्वयाक्षेपस्य विजातीयलिङ्गसमन्वयाक्षेपस्य च सति गत्यन्तरे गौरवापादकतया क्लिष्टत्वेनासङ्गतत्वात्, सजातीयस्योपलक्षणं विजातीयस्य त्वाक्षेप इत्यस्यापि वैरूप्येणासङ्गतत्वादित्यर्थः ।

यद्वा – यत्रैकं साक्षादन्यदर्थादिति नामलिङ्गात्मकमुभयं समन्वेतव्यं, तत्र अन्यत्र निरूढनामसमन्वयस्य प्रथमं बुद्धावनारोहात् न तन्मुखेन लिङ्गसमन्वयः सङ्गतः । अनिरूढलिङ्गमुखेन तु नामसमन्वयस्सङ्गतः । अत एव पूर्वं आनन्दमय-लिङ्गसमन्वयमुखेनानन्दादिनामसमन्वय उक्तः यस्तु द्वितीयपादे वैश्वानराधिकरणे नामसमन्वयमुखेन लिङ्गसमन्वयः, स प्रथमपाद अन्यत्र निरूढनामसमन्वय-स्योक्तत्वेन बुद्धावारोहात् पाचकत्वादिलिङ्गानामन्यत्र निरूढत्वात् बहुत्वाच्च युक्त इत्यर्थः ।

यद्वा – अन्तस्स्थनिष्ठतया श्रुतेन समुद्रस्थत्वादिना अन्तस्स्थस्यैव विष्णुत्वसाधने सामानाधिकरण्येन सङ्गतिः, इन्द्रादेस्तु तत्साधने वैयधिकरण्येन असङ्गतिस्स्यादित्यर्थः । यद्वा – अन्तस्स्थस्य अविष्णुतया आनन्दमयस्यापि विष्णुत्वाक्षेपो युक्तः, तद्धर्मस्य अदृश्यत्वस्य अन्तस्स्थे साक्षाच्छ्रवणात् । न त्विन्द्रादेरविष्णुत्वेन, तत्रादृश्यत्वाश्रवणात् । ततश्च पूर्वाधिकरणसङ्गत्यर्थं लिङ्ग-ग्रहणमित्यर्थः ।। छ ।। अन्तस्स्थत्वाधिकरणं सम्पूर्णम् ।। ७ ।।

।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां
तात्पर्यचन्द्रिकायाम् अन्तस्थत्वाधिकरणं सम्पूर्णम् ।।७।।

ಅನುವಾದ - ಟೀಕೆಯ ಕಠಿಣಪದಾರ್ಥ - ಟೀಕೆಯಲ್ಲಿ "ಪ್ರಾಬಲ್ಯಾದ್ಯವಿವೇಕೇನ" ಎಂಬ ಪದಕ್ಕೆ ಹೀಗೆ ಅರ್ಥ. ಪೂರ್ವಮೀಮಾಂಸೆಯ ಶ್ರುತಿಲಿಂಗಾಧಿಕರಣದಲ್ಲಿ ಶ್ರುತಿಯು ಪ್ರಬಲ; ಲಿಂಗವು

ದುರ್ಬಲವೆಂದು ನಿರ್ಣಯಿಸಲಾಗಿದೆ. ಈ ವಿಚಾರವನ್ನು ಹಿಂದೆಯೇ ವಿವರಿಸಲಾಗಿದೆ. ಆದರ ಪ್ರಕಾರ ಶ್ರುತಿಯು ಪ್ರಬಲವೆಂದು ಲಿಂಗವು ದುರ್ಬಲವೆಂದು ತಿಳಿಯಬೇಕು. ಹೀಗೆ ತಿಳಿಯದಿರುವುದರಿಂದ ಎಂದರ್ಥ. ಅಥವಾ ಶ್ರುತಿಯು ಸ್ವಾಭಾವಿಕವಾಗಿ ಬಲಿಷ್ಠವಾಗಿದೆ. ಲಿಂಗವು ನಿರವಕಾಶಪ್ರಯುಕ್ತವಾಗಿ ಬಲಿಷ್ಠವಾಗಿದೆ. ಹೀಗೆ ಎರಡೂ ಬಲಿಷ್ಠವಾದ್ದರಿಂದ ಯಾವುದು ಪ್ರಬಲ ಯಾವುದು ದುರ್ಬಲವೆಂದು ತಿಳಿಯದಿರುವುದರಿಂದ ಎಂದೂ ಅರ್ಥೈಸಬಹುದು.

''ಸಂಗತತ್ವಾದ್ ಗ್ರಹಣಮ್'' - ಟೀಕೆಯ ಈ ಪದಕ್ಕೆ ಬಹಳಷ್ಟು ಅರ್ಥವಿದೆ. ಅದು ಹೀಗೆ - ಅಲ್ಪಾಕ್ಷರವಾದ ಈ ಸೂತ್ರದಲ್ಲಿ ಒಂದು ಲಿಂಗದ ಸಮನ್ವಯದಿಂದ ಅನೇಕ ನಾಮಸಮನ್ವಯವು ಅರ್ಥಾತ್ ಸಿದ್ಧವಾಗುತ್ತದೆಂದು ಹೇಳುವುದೇ ಯೋಗ್ಯವಾದ್ದರಿಂದ ಸೂತ್ರದಲ್ಲಿ ಲಿಂಗದ ನಿರ್ದೇಶವಿದೆ. ಇನ್ನು ಅನೇಕ ನಾಮಗಳ ಸಮನ್ವಯಗಳಿಂದ ಒಂದು ಲಿಂಗದ ಸಮನ್ವಯವನ್ನು ಹೇಳಬೇಕು. ಆದರೆ ಅದು ಅಸಂಗತ. ಇನ್ನು ಒಂದು ನಾಮದ ಸಮನ್ವಯದಿಂದ ಉದಾಹರಣೆ ವಾಕ್ಯದಲ್ಲಿರುವ ಸಜಾತೀಯವಾದ ನಾಮಗಳೆಲ್ಲವು ಅರ್ಥಾತ್ ಸಮನ್ವಯವಾಗುತ್ತವೆ. ವಿಜಾತೀಯವಾದ ಲಿಂಗಗಳೂ ಸಹ ಅರ್ಥಾತ್ ಸಮನ್ವಯವಾಗುತ್ತವೆಂದು ಹೇಳಬೇಕು. ಆದರೆ ಬೇರೆ ಗತಿಯಿಲ್ಲದಾಗ ಹೀಗೆ ಹೇಳುವುದು ತಪ್ಪಲ್ಲ. ಬೇರೆ ರೀತಿಯಾಗಿ ಹೇಳಲು ಬರುವಾಗ ಇದು ಗೌರವವೆನಿಸುತ್ತದೆ. ಆದ್ದರಿಂದ ಹೀಗೆ ಕ್ಲಿಷ್ಟವಾದ್ದರಿಂದ ಇದು ಅಸಂಗತ. ಸಜಾತೀಯವಾದ ನಾಮಗಳನ್ನು ಉಪಲಕ್ಷಣವಾಗಿ ವಿಜಾತೀಯ ಲಿಂಗಗಳನ್ನು ಅರ್ಥಾತ್ ಇಟ್ಟುಕೊಳ್ಳಬೇಕೆಂಬುದು ಕೂಡ ವ್ಯಧಿಕರಣವಾದ್ದರಿಂದ ತಪ್ಪು.

ಅಥವಾ ಯಾವ ಸ್ಥಳದಲ್ಲಿ ಸಾಕ್ಷಾತ್ತಾಗಿ ಮತ್ತು ಆಕ್ಷೇಪದಿಂದ ನಾಮ ಹಾಗು ಲಿಂಗಗಳೆರಡು ಪ್ರಸಕ್ತವಾಗಿರುತ್ತವೋ ಆ ಸ್ಥಳದಲ್ಲಿ ಅನ್ಯತ್ರ ನಿರೂಢವಾದ ನಾಮಸಮನ್ವಯವು ಮೊದಲು ಬುದ್ಧಿಯಲ್ಲಿ ಪ್ರಸಕ್ತವಾಗುವುದಿಲ್ಲ. ಹಾಗಾಗಿ ನಾಮಸಮನ್ವಯದ ಮೂಲಕ ಲಿಂಗಸಮನ್ವಯವು ಅಸಂಗತವಾಗುತ್ತದೆ. ಅನ್ಯತ್ರ ನಿರೂಢವಾಗದ ಲಿಂಗಸಮನ್ವಯದ ಮೂಲಕ ನಾಮಸಮನ್ವಯವು ಸಂಗತವಾಗುತ್ತದೆ. ಆದ್ದರಿಂದಲೇ ಹಿಂದಿನ ಆನಂದಮಯಾಧಿಕರಣದಲ್ಲಿ ಆನಂದಮಯವೆಂಬ ಲಿಂಗಸಮನ್ವಯದಿಂದ 'ಆನಂದ' ಮೊದಲಾದ ನಾಮಸಮನ್ವಯಗಳು ಸಂಮಜಸವಾಗಿವೆ. ಹಾಗಾದರೆ ದ್ವಿತೀಯಪಾದದ ವೈಶ್ವಾನರಾಧಿಕರಣದಲ್ಲಿ ನಾಮಸಮನ್ವಯದ ಮೂಲಕ ಲಿಂಗಸಮನ್ವಯ ಮಾಡಿದ್ದು ತಪ್ಪಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಪ್ರಥಮಪಾದದಲ್ಲಿ ಅನ್ಯತ್ರ ನಿರೂಢವಾದ ನಾಮಸಮನ್ವಯವನ್ನು ಮಾಡಿದ್ದಾಗಿದೆ. ಆದ್ದರಿಂದ ಬುದ್ಧಿಯಲ್ಲಿ ನಾಮಸಮನ್ವಯವು ಪ್ರಸಕ್ತವಾದ್ದರಿಂದ ನಾಮಲಿಂಗಗಳ ನಡುವೆ ನಾಮಸಮನ್ವಯವೇ ವೈಶ್ವಾನರಾಧಿಕರಣದಲ್ಲಿ ಸ್ವರಸ. ಮತ್ತು ಪಾಚಕತ್ವಾದಿಲಿಂಗಗಳು ಅನ್ಯತ್ರ ನಿರೂಢವಾದ್ದರಿಂದ ಲಿಂಗಸಮನ್ವಯವು ಅಲ್ಲಿ ಕ್ಲಿಷ್ಟವಾಗಿದೆ. ಮತ್ತು ನಾಮಲಿಂಗಗಳ ನಡುವೆ ಲಿಂಗಗಳು ಅನೇಕವಿರುವುದರಿಂದ ಒಂದು ನಾಮಸಮನ್ವಯವೇ ಸ್ವರಸವಾಗಿದೆ.

ಅಂತಸ್ಥತ್ವಾಧಿಕರಣ

ಅಥವಾ ಸಮುದ್ರಾಂತಸ್ಥತ್ವಾದಿಲಿಂಗಗಳು ಅಂತಸ್ಥನಲ್ಲಿ ಶ್ರುತವಾಗಿವೆ. ಈ ಅಂತಸ್ಥನಲ್ಲಿ ವಿಷ್ಣುತ್ವವನ್ನು ಸಾಧನೆ ಮಾಡಿದರೆ ಸಾಮಾನಾಧಿಕರಣ್ಯ ಬರುತ್ತದೆ. ಅಂದರೆ ವಿಷ್ಣುವು ಅಂತಸ್ಥನಾಗಿದ್ದಾನೆ. ಸಮುದ್ರಾಂತಸ್ಥತ್ವ ಮೊದಲಾದ ಲಿಂಗಗಳಿರುವುದರಿಂದ ಎಂದು. ಆದರೆ ಇಂದ್ರಾದಿಗಳಲ್ಲಿ ಸಮುದ್ರಾಂತಸ್ಥತ್ವಮೊದಲಾದ ಲಿಂಗಗಳು ಇಲ್ಲದ ಕಾರಣ ಅಂತಸ್ಥತ್ವವನ್ನು ಸಾಧನೆ ಮಾಡಿದರೆ ವೈಯ್ಯಧಿಕರಣ್ಯ ಬರುವುದರಿಂದ ಅಸಂಗತವಾಗುತ್ತದೆ. ಈ ಕಾರಣದಿಂದ ಲಿಂಗಸಮನ್ವಯವೇ ಸ್ವರಸ.

ಅಥವಾ ಅಂತಸ್ಥನು ವಿಷ್ಣುವಲ್ಲದ ಕಾರಣ ಆನಂದಮಯನೂ ಸಹ ವಿಷ್ಣುವಲ್ಲವೆಂದು ಆಕ್ಷೇಪ ಮಾಡಬಹುದು. ಇದರಿಂದ ಸಂಗತಿಯನ್ನು ತೋರಿಸಿದಂತಾಗುತ್ತದೆ. ಏಕೆಂದರೆ ಆನಂದಮಯನ ಧರ್ಮವಾದ ಅದೃಶ್ಯತ್ವವು ಅಂತಸ್ಥನಲ್ಲಿ ನೇರವಾಗಿ ಕೇಳಿಸುತ್ತಿದೆ ಹೊರತು ಇಂದ್ರಾದಿಗಳಲ್ಲಿ ಅಲ್ಲ.

ಇಂದ್ರಾದಿಗಳು ವಿಷ್ಣುವಲ್ಲದ ಕಾರಣ ಇಂದ್ರಾದಿಗಳಲ್ಲಿ ಅದೃಶ್ಯತ್ವವು ಕೇಳಿಸುತ್ತಿಲ್ಲ. ಹೀಗೆ ಹಿಂದಿನ ಅಧಿಕರಣದಿಂದ ಸಂಗತಿ ತೋರಿಸುವುದಕ್ಕಾಗಿಯೂ ಲಿಂಗ ಸಮನ್ವಯ ಮಾಡಿದ್ದು ಸ್ವರಸವಾಗಿದೆ.

ಇಲ್ಲಿಗೆ ಶ್ರೀವ್ಯಾಸತೀರ್ಥರು ವಿರಚಿಸಿದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಂತಸ್ಥತ್ವಾಧಿಕರಣವು ಸಂಪೂರ್ಣವಾಯಿತು.

**प्रकाशः** – ''अदृश्यत्वलिङ्गमिन्द्रादिश्रुतिश्च प्राबल्याद्यविवेकेन सन्देहबीजम्'' इति वाक्ये अविवेकशब्दमप्रतीतेर्द्वेधा व्याचष्टे – **श्रुतिलिङ्गेति** ।। पूर्वतन्त्रीयं श्रुतिलिङ्गाधिकरणं प्रागुक्तम् । ''नामनिर्णयेन लिङ्गनिर्णयेऽपि लिङ्गस्य सङ्गतत्वात् ग्रहणम्'' इत्यत्र नाम्नोऽसङ्गतत्वादग्रहणमिति सूचितम् । तत्कथं सङ्गतत्वासङ्गतत्वे इत्यतोऽनेकप्रकारेणाह – **अल्पाक्षर इति** ।। तर्ह्येकमेव नाम समन्वीयतां अनेक-नामलिङ्गसमन्वयार्थमित्यत आह – **एकनामेति** ।।

ननु न गौरवं, अनेकनाम्नामुपलक्षणत्वेनैकनामोपादानात्, लिङ्गस्य चार्थादेव समन्वयसिद्धेरित्यत आह – **सजातीयस्येति** ।। **आनन्दमयलिङ्गेति** ।। तत्त्वप्रदीपा-नुसारेणेयमुक्तिरिति ध्येयम् ।

एवं तर्हि वैश्वानराधिकरणविरोध इत्यत आह – **यस्त्विति** ।। 'इन्द्रादेस्तु, इन्द्रादिशब्दार्थस्य तु, 'तत्साधने' अन्तस्स्थत्वसाधने, 'इन्द्रादिस्तद्धर्मोपदेशात्' इत्युक्ताविति यावत् । ''समुद्रे अन्तः कवयो विचक्षते'' इत्यस्यान्तस्स्थनिष्ठतयेन्द्रादि-निष्ठत्वाभावादसङ्गतिरित्यर्थः ।। **अविष्णुत्वेनेति** ।। 'आनन्दमयस्य विष्णुत्वाक्षेपः' इति सम्बध्यते । शिष्टमुपन्यासमुखेनैव विवृतमिति भावः ।।७

**।। इति श्रीमद्राघवेन्द्रयतिकृते भावदीपे अन्तःस्थत्वाधिकरणम् ।।**

ಪರಿಪೂರ್ಣಚಂದ್ರಿಕಾ

**गुरुराजीयम्** – प्राबल्याद्यविवेकेनेति टीकोक्तं प्राबल्याद्यविवेकं दर्शयति – **श्रुतीति** ।। ननु श्रुतिर्यदि प्रबला लिङ्गं दुर्बलमिति श्रुतिलिङ्गयोः प्राबल्यं न निश्चितं तर्हि श्रुत्यादिभ्यो लिङ्गमात्रस्य दुर्बलत्वादित्यादिपूर्वपक्षानुपपत्तिरित्यत आह – **यद्वेति** ।।

नन्वेवं वैश्वानराधिकरणे नामसमन्वयेन लिङ्गसमन्वयोक्तिरयुक्ता स्यात् । उक्तानुपपत्तेस्तत्रापि वक्तुं शक्यत्वादित्यत आह – **यद्वेति** ।।

यद्वा ननु सजातीयस्योपलक्षणाभावेप्यन्तस्स्थनिष्ठतया श्रुतस्यादित्यादि-शब्दानामिन्द्रपरत्वाभावे तत्समानाधिकरणेन्द्रादिशब्दस्यापि तत्परत्वानुपपत्ते-स्तदुपादानेनार्थादेव सजातीयाग्निसवित्रादिशब्दानां विजातीयान्तस्स्थत्वलाभान्न वैरूप्यमित्यत आह – **यद्वेति** ।। आनन्दमयाधिकरणे लिङ्गविचारादिति तत्व-प्रदीपानुसारादाह – **अत एवेति** ।। लिङ्गस्य निरूढत्वादेवेत्यर्थः ।

नन्वेवं वैश्वानराधिकरणेपि नामसमन्वयो न वक्तव्यः । नाम्नो निरूढत्वा-ल्लिङ्गस्यानिरूढत्वात्तन्मुखेनैव वक्तव्य इत्यत आह – **यस्त्विति** ।। नन्वानन्द-मयाधिकरणन्यायेन नामसमन्वयस्य सिद्धत्वान्नाम्नोपि प्रथमं बुद्धावारोहो युक्त इत्यत आह – **यद्वेति** ।।

ननु सहैव सन्तं न विजानन्ति देवा इत्यन्तस्स्थे श्रुतस्यादृश्यत्वस्याऽ-न्यनिष्ठत्वेऽदृश्येऽनात्म्य इत्यादिनोक्तमप्यदृश्यत्वमन्यस्यैवेति कुतः । नियामका-भावात् । तथा चाक्षेपानुपपत्तिरिति चेन्न वाक्यद्वयस्यापि समानत्वात् । सहैव सन्तमित्यत्रेन्द्रादिश्रुत्याऽदृश्यत्वस्यान्यनिष्ठत्ववत् आनन्दादिश्रुत्यादिनाऽदृश्येनात्म्य इत्यत्राप्यदृश्यत्वस्यानिष्ठत्वोपपत्तेः । यदि च निरवकाशलिङ्गेन श्रुतेस्तत्र बाधस्तर्हि न विजानन्तीति वाक्येपि समानम् ।

यदि च निरवकाशत्वप्रयुक्तप्राबल्यापेक्षयापि स्वभावप्रयुक्तप्राबल्यस्यैव बलवत्त्वात् सहैवेत्यत्रान्यनिष्ठत्वं तदैतददृश्य इति वाक्ये सममित्याक्षेपो युक्त एव । अत एवोत्तराधिकरणे तथैव वक्ष्यति मूलकारः । नच यथा सिद्धान्ते आकाश इति होवाचेत्यत्राकाशशब्दस्य ब्रह्मपरत्वेऽपीत्यादिना । तत्रत्यमेवमुत्तरत्रापि द्रष्टव्यमिति वाक्यं तूपलक्षणपरतया व्याख्येयम् । न्यायसाम्यादिति द्रष्टव्यम् ।

ಅಂತಸ್ಥತ್ವಾಧಿಕರಣ

यथा पूर्वमीमांसायां श्रुतिलिङ्गवाक्यप्रकरणस्थानसमाख्यानां समवाये परदौर्बल्यमिति श्रुतिलिङ्गाधिकरणे श्रुतेलिङ्गापेक्षया प्रबलत्वनिश्चयेपि ततः प्राक् तदनिश्चयेन श्रुतिलिङ्गयोः संशयबीजत्वं तथात्राऽपि शब्दादेव प्रमित इति श्रुतिलिङ्गाधिकरणे श्रुतेर्लिङ्गापेक्षया प्राबल्यनिश्चयेपि ततः प्राक् तदनिश्चयेन श्रुतिर्लिङ्गयोः सहबीजत्वोपपत्तिरिति भावः ।।छ।।

।। इति श्रीशर्कराश्रीनिवासविरचितायां वाक्यार्थमञ्जर्याम्
अन्तस्स्थत्वाधिकरणं सम्पूर्णम् ।। ७ ।।

ವಿವರಣೆ - "ಅದೃಶ್ಯತ್ವಲಿಂಗಮಿಂದ್ರಾದಿಶ್ರುತಿಶ್ಚ ಪ್ರಾಬಲ್ಯಾದ್ಯವಿವೇಕೇನ ಸಂದೇಹಬೀಜಮ್" ಅದೃಶ್ಯತ್ವಲಿಂಗ ಹಾಗು ಇಂದ್ರಾದಿ ಶ್ರುತಿಗಳಲ್ಲಿ ಯಾವುದು ಪ್ರಬಲವೆಂದು ತಿಳಿಯದಿರುವುವಿಕೆಯು ಸಂದೇಹ ಬೀಜ ಎಂದು ಟೀಕೆಯ ವಾಕ್ಯ. ಈ ವಾಕ್ಯದಲ್ಲಿ ಅವಿವೇಕ ಎಂಬ ಶಬ್ದಕ್ಕೆ ಎರಡು ಬಗೆಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ.

ಪೂರ್ವಮೀಮಾಂಸೆಯ ಶ್ರುತಿಲಿಂಗಾಧಿಕರಣದಲ್ಲಿ ಶ್ರುತಿಯೇ ಪ್ರಬಲವೆಂದು ಸಮರ್ಥಿಸಿದ್ದೇವೆ. ಅದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಅಂತಸ್ಥತ್ವಾಧಿಕರಣದಲ್ಲಿ ಅಂತಸ್ಥತ್ವವೆಂಬ ಒಂದು ಲಿಂಗದ ಸಮನ್ವಯದಿಂದ ಇಂದ್ರ ಮೊದಲಾದ ಅನೇಕ ನಾಮಗಳನ್ನು ಸಮನ್ವಯ ಮಾಡಲಾಗಿದೆ. ವಸ್ತುತಃ ಇದು ನಾಮಪಾದವಾದ್ದರಿಂದ ಲಿಂಗಸಮನ್ವಯವು ಅಸಂಗತ. ಆದರೂ ಕೂಡ "ಅಂತಸ್ಥತ್ವ"ಎಂಬ ಲಿಂಗಸಮನ್ವಯವನ್ನು ಸಂಗತವೆನ್ನಲು ಟೀಕೆಯಲ್ಲಿ "ಸಂಗತ್ವಾತ್‌ಗ್ರಹಣಮ್" ಎಂದಿದ್ದಾರೆ. ಟೀಕೆಯ ಈ ಮಾತಿಗೆ ಅನೇಕ ಮುಖಗಳಿಂದ ಗ್ರಂಥಕಾರರು ವ್ಯಾಖ್ಯಾನಿಸುತ್ತಿದ್ದಾರೆ. ನಾಮಸಮನ್ವಯದಿಂದಲೂ ಸಹ ಲಿಂಗಸಮನ್ವಯ ಮಾಡಬಹುದು. ಆದರೆ ಇದು ಲಿಂಗಸಮನ್ವಯವಾಗಿದೆ. ನಾಮಸಮನ್ವಯವು ಈ ಅಧಿಕರಣದಲ್ಲಿ ಅಸಂಗತವಾಗಿದೆ ಎಂದು ಟೀಕೆಯಲ್ಲಿ ಸೂಚಿಸಿದ್ದಾರೆ. ಮೊದಲನೆಯ ಅರ್ಥವನ್ನು 'ಅಲ್ಪಾಕ್ಷರ' ಎಂಬ ಗ್ರಂಥದಿಂದ ಹೇಳಿದ್ದಾರೆ. ಒಂದೇ ನಾಮಸಮನ್ವಯದಿಂದ ಅನೇಕ ನಾಮಗಳ ಸಮನ್ವಯಗಳು ಮತ್ತು ಅನೇಕ ಲಿಂಗಗಳ ಸಮನ್ವಯವು ಸಿದ್ಧವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ 'ಏಕನಾಮ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ಒಂದು ನಾಮಸಮನ್ವಯದಿಂದ ಅನೇಕ ನಾಮಗಳ ಮತ್ತು ಲಿಂಗಗಳ ಸಮನ್ವಯ ಮಾಡಿದರೆ ಗೌರವ ಬರುತ್ತದಲ್ಲ? ಎಂದು ಪ್ರಶ್ನಿಸಬಾರದು ಅನೇಕ ನಾಮಗಳನ್ನು ಉಪಲಕ್ಷಣವಾಗಿ ಅನೇಕ ಲಿಂಗಗಳನ್ನು ಆಕ್ಷೇಪದಿಂದ ಸಮನ್ವಯ ಮಾಡುತ್ತವೆ. ಆದ್ದರಿಂದ ಗೌರವಕ್ಕೆ ಅವಕಾಶವಿಲ್ಲ ಎಂಬ ಶಂಕೆಗೆ "ಸಜಾತೀಯ" ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ.

ಆನಂದಮಯಾಧಿಕರಣದಲ್ಲಿ ಆನಂದಮಯವೆಂಬ ಲಿಂಗದ ಸಮನ್ವಯವನ್ನು ಹೇಳಿದ್ದು 'ತತ್ವಪ್ರದೀಪಕ್ಕೆ' ಅನುಗುಣವಾಗಿ ಎಂದು ತಿಳಿಯಬೇಕು. ನಾಮ, ಲಿಂಗಗಳ ಮಧ್ಯೆ ಲಿಂಗಸಮನ್ವಯವು ಸ್ವರಸವಾದರೆ ವೈಶ್ವಾನರಾಧಿಕರಣದಲ್ಲಿ ನಾಮಸಮನ್ವಯ ಮಾಡಿದ್ದು ತಪ್ಪಾಗುತ್ತದಲ್ಲವೆ? ಎಂಬ ಪ್ರಶ್ನೆಗೆ "ಯಸ್ತು" ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. "ಸಮುದ್ರೇಂತಃ ಕವಯೋ ವಿಚಕ್ಷತೇ" ಎಂಬಲ್ಲಿ ಅಂತಸ್ಥನಿಷ್ಠನಾಗಿ

'ಸಮುದ್ರಾಂತಸ್ಥತ್ವವು' ಕೇಳಿಸುತ್ತಿದೆ. ಹೊರತು ಇಂದ್ರನಲ್ಲಿ ಕೇಳಿಸುತ್ತಿಲ್ಲವಾದ್ದರಿಂದ ಅಸಂಗತವಾಗಿದೆ. 'ಅವಿಷ್ಣುತ್ವೇನ' ಎಂಬ ಪದವನ್ನು ಆನಂದಮಯಸ್ಯ ವಿಷ್ಣುತ್ವಾಕ್ಷೇಪಃ ಎಂಬಲ್ಲಿ ಅನ್ವಯ ಮಾಡಬೇಕು. ಇಷ್ಟು ಟೀಕೆಯ ಕಠಿಣಪದಾರ್ಥ.

ಉಳಿದ ಟೀಕೆಯ ಕಠಿಣಪದಾರ್ಥವನ್ನು ಉಪನ್ಯಾಸ ಮುಖದಿಂದಲೇ ವ್ಯಾಖ್ಯಾನಿಸುವಾಗ ಗ್ರಂಥಕಾರರು ಹೇಳಿದ್ದಾರೆ. ಅದನ್ನು ಗಮನಿಸಿ ತಿಳಿಯಬೇಕು.

ಇಲ್ಲಿಗೆ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಂತಸ್ಥತ್ವಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಅಂತಸ್ಥತ್ವಾಧಿಕರಣ

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣಪಂಚಿಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿಃ,
ಸೂತ್ರಾರ್ಥರತ್ನಾವಳಿಃ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## अन्तःस्थत्वाधिकरणम्

न्यायविवरणम् – नच,

"ब्रह्मेन्द्रमग्निं जगतः प्रतिष्ठां दिव आत्मानं सवितारं बृहस्पतिम् ।
चतुर्होतारं प्रदिशोऽनुक्लृप्तं वाचो वीर्यं तपसाऽन्वविन्दत्"

इत्यादि शब्दानामन्यविषयत्वम् । श्रुतिसन्देहेऽनन्यथासिद्धलिङ्गेन निर्णयोपपत्तेः ।।७।।

'ಬ್ರಹ್ಮೇಂದ್ರಮಗ್ನಿಂ ಜಗತಃ ಪ್ರತಿಷ್ಠಾಂ ದಿವ ಆತ್ಮಾನಂ ಸವಿತಾರಂ ಬೃಹಸ್ಪತಿಮ್ ।
ಚತುರ್ಹೋತಾರಂ ಪ್ರದಿಶೋಽನುಕ್ಲೃಪ್ತಂ ವಾಚೋ ವೀರ್ಯಂ ತಪಸಾಽನ್ವವಿಂದತ್ ॥'

ಎಂದು ಅಂತಸ್ಥನಲ್ಲಿ ಪ್ರಯೋಗಿಸಿರುವ ಇಂದ್ರಾದಿಶಬ್ದಗಳು ಇಂದ್ರಾದಿದೇವತೆಗಳನ್ನು ಹೇಳುತ್ತವೆ ಎನ್ನುವುದು ಸರಿಯಲ್ಲ. ಒಂದೇ ಪ್ರಕರಣದಲ್ಲಿ ಬೇರೆ ಬೇರೆಯವರನ್ನು ಹೇಳುವ ಅನೇಕ ಶ್ರುತಿಗಳಿದ್ದು ಸಂದೇಹ ಬಂದಾಗ ಅನನ್ಯಥಾಸಿದ್ಧವಾದ ಲಿಂಗದಿಂದ ಈ ಪ್ರಕರಣವು ಯಾರಿಗೆ ಸಂಬಂಧಿಸಿದ್ದು ಎಂದು ನಿರ್ಣಯ ಮಾಡಲು ಬರುತ್ತದೆ.

न्यायविवरणटीका –

ॐ अन्तस्तद्धर्मोपदेशात् ॐ ।। न च ब्रह्मेति ।। अन्तःस्थपुरुषविषयतया हीन्द्रादिशब्दाः श्रूयन्ते । तथा हि । जगतः प्रतिष्ठां, आश्रयम् । चतुर्होतारं, अन्तःकरणचतुष्टये विषयाणां होतारम् । प्रदिशः, प्रतिदिशं, अनुक्लृप्तं, व्यवस्थितम् । वाचो वेदस्य, वीर्यं सारं, मुख्यार्थम् । इन्द्रं, अग्निं, दिवो देव्या, आत्मानं स्वामिनं, वायुं, सवितारं, बृहस्पतिं, ब्रह्मा हिरण्यगर्भः, तपसा

अन्वविन्दल्लब्धवानिति । आदिशब्देन भाष्योदाहृतानां ग्रहणम् । इन्द्रादिशब्दानां च भगवदन्यविषत्वं रूढ्या योगेन च प्रसिद्धमेव । न चाऽत्र तत्त्यागे बाधकं किञ्चित् ।

एकोऽन्तःस्थो, बहव इन्द्रादय इति चेन्न, तेषां परमेश्वरविभूतित्वेन भेदाऽभावात् । अत एवाऽदृश्यत्वमपि तेषु युज्यते । नचैवं, विनिगमने कारणाभावः । कार्याऽवस्थायाः कारणेभावात् । अतोऽन्तःस्थत्वमिन्द्रादीनामेवेति कुतो नेति चेत्, समुद्राऽन्तःस्थात्वाऽऽदिभगवल्लिङ्गश्रवणात् ॥

ಅಂತಸ್ಥಪುರುಷನ ವಿಷಯಕವಾಗಿ ಇಂದ್ರಾದಿಶಬ್ದಗಳು ಶ್ರುತವಾಗಿವೆ. ಅದು ಹೀಗಿದೆ – ಜಗತಃ ಪ್ರತಿಷ್ಠಾಮ್ = ಜಗತ್ತಿಗೆ ಆಶ್ರಯನು, ಚತುರ್ಹೋತಾರಂ = ಅಂತಃಕರಣಚತುಷ್ಟಯದಲ್ಲಿ ವಿಷಯ ಪದಾರ್ಥಗಳನ್ನು ಹೋಮಿಸುವ, ಪ್ರದಿಶಃ = ಪ್ರತಿಯೊಂದು ದಿಕ್ಕಿನಲ್ಲಿ, ಅನುಕ್ಲೃಪ್ತಂ = ವಿಶೇಷವಾಗಿ ಇರುವ, ವಾಚಃ = ವೇದದ, ವೀರ್ಯಂ = ಸಾರವಾದ (ಮುಖ್ಯಾರ್ಥನಾದ), ಇಂದ್ರಂ = ಇಂದ್ರನನ್ನು, ಅಗ್ನಿಂ = ಅಗ್ನಿಯನ್ನು, ದಿವಃ = ಲಕ್ಷ್ಮೀದೇವಿಗೆ, ಆತ್ಮಾನಂ = ಸ್ವಾಮಿಯಾದ, ವಾಯುಂ = ವಾಯುವನ್ನು, ಸವಿತಾರಂ = ಸೂರ್ಯನನ್ನು, ಅನ್ವವಿಂದತ್ = ಪಡೆದನು. ''ಆದಿ''ಶಬ್ದದಿಂದ ಭಾಷ್ಯದಲ್ಲಿ ಹೇಳಿರುವ ಪ್ರಮಾಣಗಳನ್ನು ಸ್ವೀಕರಿಸಬೇಕು. ಇಂದ್ರಾದಿಶಬ್ದಗಳು ರೂಢಿಯಿಂದ ಮತ್ತು ಯೋಗದಿಂದ ಭಗವಂತನನ್ನು ಬಿಟ್ಟು ಬೇರೆಯವರನ್ನು ಹೇಳುತ್ತವೆನ್ನುವುದು ಪ್ರಸಿದ್ಧವೇ ಆಗಿದೆ. ಈ ಶ್ರುತಿಯಲ್ಲಿ ಇಂದ್ರಾದಿಶಬ್ದಗಳಿಂದ ಅವರನ್ನು ಬಿಡಲು ಏನೂ ಬಾಧಕವಿಲ್ಲ. (ಆದ್ದರಿಂದ ಈ ಶ್ರುತಿಯಲ್ಲಿ ಇಂದ್ರಾದಿಶಬ್ದಗಳಿಂದ ಇಂದ್ರಾದಿಗಳೇ ವಾಚ್ಯರು).

ಅಂತಸ್ಥನು ಒಬ್ಬನೇ, ಆದರೆ ಇಂದ್ರಾದಿದೇವತೆಗಳು ಅನೇಕರಿದ್ದಾರಲ್ಲ. ಹಾಗಾಗಿ ಪ್ರಸಿದ್ಧಇಂದ್ರಾದಿ-ದೇವತೆಗಳನ್ನು ಬಿಡಲು ಇದೇ ಬಾಧಕ ಎನ್ನಕೂಡದು. ಅವರು ಭಗವಂತನ ವಿಭೂತಿರೂಪಗಳಾದ್ದರಿಂದ ಭಗವಂತನಿಂದ ಭೇದವಿಲ್ಲ. (ಹಾಗಾಗಿ ಅನೇಕರು ಎನ್ನುವ ಬಾಧಕವಿಲ್ಲ). ಆ ಭಗವಂತನ ವಿಭೂತಿರೂಪರಾದ್ದರಿಂದಲೇ ಅವರಿಗೆ ಅದೃಶ್ಯತ್ವವೂ ಕೂಡುತ್ತದೆ. ಹೀಗೆ ಇಂದ್ರಾದಿದೇವತೆಗಳಿಗೆ ಮತ್ತು ಭಗವಂತನಿಗೂ ಅಭೇದವಿರುವುದಾದರೆ ಅವರೇ ಅಂತಸ್ಥರು. ಭಗವಂತನಲ್ಲ ಎನ್ನುವುದೇಕೆ? ಅಭೇದವಿರುವುದರಿಂದ ಅಂತಸ್ಥನು ಭಗವಂತನೇ ಎಂದು ಏಕೆ ಹೇಳಬಾರದು? ಎಂದರೆ, ಕಾರಣರೂಪನಾದ ಭಗವಂತನೊಂದಿಗೆ ಕಾರ್ಯರೂಪರಾದ ಇಂದ್ರಾದಿದೇವತೆಗಳಿಗೆ ಅಭೇದವಿದ್ದರೂ ಕಲ್ಪಿತಭೇದವಿದೆ. ಆದ್ದರಿಂದ ಕಾರ್ಯದಲ್ಲಿರುವ ಗುಣಗಳು ಕಾರಣದಲ್ಲಿ ಇರಬೇಕೆಂಬ ನಿಯಮವಿಲ್ಲವಾದ್ದರಿಂದ. ಇಂದ್ರಾದಿದೇವತೆಗಳಲ್ಲಿರುವ ಅಂತಸ್ಥತ್ವವು ವಿಷ್ಣುವಿನಲ್ಲಿ ಅಭೇದವಿದ್ದರೂ ಬರುವುದಿಲ್ಲ.

ಇದು ತಪ್ಪು. ಸಮುದ್ರಾಂತಸ್ಥತ್ವ ಮೊದಲಾದ ವಿಷ್ಣುವಿನ ಲಿಂಗಗಳಿರುವುದರಿಂದ ಅಂತಸ್ಥನು ವಿಷ್ಣುವೇ ಆಗಿದ್ದಾನೆ.

ननु, श्रुतिभिर्लिङ्गैश्च पूर्वपक्षिते कथं लिङ्गेन निर्णयः, श्रुत्यपेक्षया लिङ्गस्य दुर्बलत्वाल्लिङ्गापेक्षया समबलत्वान्नहि दुर्बलं प्रबलस्य बाधकं भविष्यति, नाऽपि समबलं समबलस्येत्यत आह ।। **श्रुतीति** ।। श्रुतिग्रहणं लिङ्गस्याऽप्युपलक्षकम् । श्रुतौ विषये, श्रुत्या सन्देहः श्रुतिसन्देहः ।

इन्द्राऽदिश्रुतयो हि पुरन्दरादीनामिव भगवतोऽपि वाचकाः । "स ब्रह्मा स शिवः स इन्द्रः" इत्यादिवैदिकशब्दप्रयोगबलेन रुढत्वसिद्धेः, परमैश्वर्यादिमत्त्वेन योगस्याऽपि सम्भवात् । लिङ्गं च सप्ताश्वयुक्तरथवत्त्वाऽऽदिकं सूर्याद्यधिष्ठानस्य भगवतोऽपि सम्भवत्येव । ततश्चोभयसाधारणे श्रुत्यादौ, किमिह पुरन्दरादिविषयमुत भगवद्विषयमिति सन्देह एव स्यात् । साधारणेन वा, श्रुत्यादिना किमत्र विवक्षितमिति सन्देह एव स्यात् । समुद्राऽन्तःस्थितत्वाऽदिकं तु लिङ्गमनन्यथासिद्धं भगवन्निष्ठत्वादन्येन प्रकारेणाऽन्यनिष्ठतया न प्रमितम् । निरवकाशेन दुर्बलेनाऽपि, सावकाशस्य प्रबलस्याऽपि बाधः प्रसिद्ध एव । अतः, श्रुतिसन्देहे, अनन्यथासिद्धेन लिङ्गेन निर्णय उपपद्यते । श्रुत्यादिकं भगवत्येव मुख्यममुख्यं पुरन्दरादिषु । परमैश्वर्यादिकं हि तत्प्रवृत्तिनिमित्तं, ईश्वरे निरवधिकमपराऽधीनं च । पुरन्दरादिषु तु, तत्सावकाशं ईश्वराऽऽयत्तं च । रूढिरपि तेषु, मुख्यार्थभगवत्सन्निधाननिमित्त-मुख्यैव । न च भगवत्यन्यनिमित्ता । अत्र चाऽनेके श्रुतिसंवादाः साक्षिणाः । मुख्याऽमुख्ययोश्च मुख्ये संप्रत्ययः । सति चैवमभ्युपगमवादेनैव "तद्धर्मोपदेशात्" इत्युक्तमिति ।।७।।

ಅನೇಕಶ್ರುತಿಗಳಿಂದ ಹಾಗೂ ಲಿಂಗಗಳಿಂದ ಪೂರ್ವಪಕ್ಷ ಮಾಡಿದಾಗ ಲಿಂಗದಿಂದ ನಿರ್ಣಯಿಸಲು ಹೇಗೆ ಸಾಧ್ಯ? ಏಕೆಂದರೆ ಲಿಂಗವು ಶ್ರುತಿಗಿಂತಲೂ ದುರ್ಬಲವಾಗಿರುತ್ತದೆ. ಇನ್ನು ಎರಡನ್ನೂ ಸಮಾನಬಲವುಳ್ಳವುಗಳೆಂದು ವಿವಕ್ಷಿಸಿದರೂ ಸಮಬಲವು ಮತ್ತೊಂದು ಸಮಬಲವನ್ನು ಬಾಧಿಸ-ಲಾರದಲ್ಲವೇ? ಎಂಬ ಪ್ರಶ್ನೆಗೆ "ಶ್ರುತಿ" ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. "ಶ್ರುತಿ"ಶಬ್ದದಿಂದ ಲಿಂಗವನ್ನೂ ಸಹ ಉಪಲಕ್ಷಣವಾಗಿ ಇಟ್ಟುಕೊಳ್ಳಬೇಕು. ಶ್ರುತಿಯಿಂದ ಬರುವ ಸಂಶಯವನ್ನು "ಶ್ರುತಿಸಂದೇಹ" ಎನ್ನುತ್ತಾರೆ.

ಇಂದ್ರಾದಿಶ್ರುತಿಗಳಾದರೂ ಪುರಂದರಾದಿಗಳನ್ನು ಪ್ರತಿಪಾದಿಸುವಂತೆ ಭಗವಂತನನ್ನೂ ಪ್ರತಿಪಾದಿಸುತ್ತವೆ. 'ಸ ಬ್ರಹ್ಮಾ ಸ ಶಿವಃ ಸ ಇಂದ್ರಃ' ಇತ್ಯಾದಿಯಾದ ವೈದಿಕಶಬ್ದಗಳ ಪ್ರಯೋಗ-ಬಾಹುಲ್ಯದಿಂದ ರೂಢತ್ವವು ಸಿದ್ಧವಾಗುತ್ತದೆ. ಪರಮೈಶ್ವರ್ಯಾದಿಗಳಿರುವುದರಿಂದ ಯೋಗವೂ ಸಹ ಸಿದ್ಧವಾಗುತ್ತದೆ. ಇನ್ನು 'ಸಪ್ತಾಶ್ವಯುಕ್ತರಥವತ್ವ ಸೂರ್ಯಾಧಿಷ್ಠಾನತ್ವಾದಿಲಿಂಗಗಳು ಭಗವಂತನಲ್ಲಿಯೂ ಬರುತ್ತವೆ. ಹೀಗೆ ಶ್ರುತಿಲಿಂಗಗಳು ಎರಡೂ ಕಡೆ ಸಮಾನವಾಗಿವೆ. ಆದ್ದರಿಂದ ಶ್ರುತ್ಯಾದಿಗಳಿಗೆ ಪುರಂದರಾದಿಗಳು ವಿಷಯರಾಗಿದ್ದಾರೋ? ಅಥವಾ ಭಗವಂತನು ವಿಷಯ-ನಾಗಿದ್ದಾನೋ ಎಂದಷ್ಟೇ ಸಂದೇಹವು ಬರುತ್ತದೆ.

ಆದರೆ ಸಮುದ್ರಾಂತಸ್ಥಿತತ್ವ ಮೊದಲಾದ ಲಿಂಗಗಳು ಅನ್ಯಥಾಸಿದ್ಧಗಳಾಗಿಲ್ಲ. ಭಗವಂತನನ್ನು ಹೊರತು ಪಡಿಸಿ ಬೇರೆಡೆ ಪ್ರಮಿತವಾಗಿಲ್ಲ. ಆದ್ದರಿಂದ ದುರ್ಬಲವಾಗಿದ್ದರೂ ನಿರವಕಾಶದಿಂದ ಪ್ರಬಲವಾಗಿದ್ದರೂ ಸಾವಕಾಶವಾದದ್ದಕ್ಕೆ ಬಾಧ ಬರುತ್ತದೆ. ಆದ್ದರಿಂದ ಶ್ರುತಿಯಲ್ಲಿ ಸಂದೇಹ ಬಂದಾಗ ಅನನ್ಯಥಾಸಿದ್ಧವಾದ ಲಿಂಗದಿಂದ ನಿರ್ಣಯವಾಗಬಹುದು.

ಶ್ರುತ್ಯಾದಿಗಳಾದರೋ ಭಗವಂತನಲ್ಲಿಯೇ ಮುಖ್ಯವಾಗಿವೆ. ಪುರಂದರಾದಿಗಳಲ್ಲಿ ಅಮುಖ್ಯ-ವಾಗಿವೆ. ಪರಮೈಶ್ವರ್ಯಾದಿಗಳು ಈಶ್ವರನಲ್ಲಿ ನಿರವಧಿಕವಾಗಿವೆ ಮತ್ತು ಅಪರಾಧೀನವಾಗಿವೆ. ರೂಢಿಯೂ ಸಹ ಮುಖ್ಯಾರ್ಥನಾದ ಭಗವಂತನ ಸಾನ್ನಿಧ್ಯ ಇರುವುದರಿಂದಷ್ಟೇ ಹೇಳಲು ಸಾಧ್ಯ. ಆದರೆ ಭಗವಂತನಲ್ಲಿ ಈ ಸ್ಥಿತಿಯಲ್ಲ. ಈ ವಿಷಯದಲ್ಲಿ ಅನೇಕಶ್ರುತಿಗಳ ಸಂವಾದವಿದೆ.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣಟೀಕೆಯ
ಕನ್ನಡಾನುವಾದದಲ್ಲಿ ಅಂತಃಸ್ಥತ್ವಾಧಿಕರಣವು ಸಮಾಪ್ತವಾಯಿತು.

* * * * *

श्रीमदानन्दतीर्थभगवत्पादाचार्यविरचितम्

# अणुभाष्यम्

## अन्तःस्थत्वाधिकरणम्

**अणुभाष्यम् – ..... ..... .. पूर्णानन्दोऽन्तरः खवत् ।
प्रणेता ज्योतिरित्याद्यैः प्रसिद्धैरन्यवस्तुषु ।
उच्यते विष्णुरेवैकः सर्वैः सर्वगुणत्वतः ।।**

ಮಹಾವಿಷ್ಣುವು ಪರಿಪೂರ್ಣವಾದ ಆನಂದವುಳ್ಳವನು. ಎಲ್ಲರ ಅಂತರ್ಯಾಮಿಯು. ಅವಕಾಶಪ್ರದನಾದ್ದರಿಂದ ಆಕಾಶನೂ ಸಕಲಕ್ಕೂ ಪ್ರೇರಕನೂ, ಜ್ಯೋತಿಯೂ ಆಗಿದ್ದಾನಾದ್ದರಿಂದ ಈ ಶಬ್ದಗಳಿಂದೆಲ್ಲಾ ಪ್ರತಿಪಾದ್ಯನಾಗಿದ್ದಾನೆ. ಬೇರೆ ವಸ್ತುಗಳಲ್ಲಿ ಪ್ರಸಿದ್ಧವಾದ ಎಲ್ಲಾ ಶಬ್ದಗಳಿಂದ ವಿಷ್ಣು ಒಬ್ಬನೇ ಪ್ರಸಿದ್ಧನಾಗಿದ್ದಾನೆ. ಏಕೆಂದರೆ ಎಲ್ಲಾ ಶಬ್ದಗಳು ಹೇಳುವ ಗುಣಗಳು ಅವನಲ್ಲಿ ಮಾತ್ರ ಇರುವುದರಿಂದ.

श्री राघवेन्द्रतीर्थविरचिता

# तत्वमञ्जरी

## अन्तस्थत्वाधिकरणम्

नन्विदमयुक्तम् । 'अदृश्येऽनात्म्ये' इत्युक्तानंदमयधर्मस्यादृश्यत्वस्य 'अंतश्चंद्रमसि मनसा चरंतं सहैव संतं न विजानंति देवाः' इत्यंतस्थस्योक्तेः । 'देवा अपि न जानंति किम्वन्ये' इत्यदृश्यत्वस्य कैमुत्येन प्रतीतेरंतस्थस्य च 'इन्द्रो राजे'त्यादिनि रवकार्शेद्रश्रुत्यादिबलेनेंद्रादित्वात् तस्यैवादृश्यत्वात् पूर्णानंदत्वाच्चेत्यतः प्राप्तम् अंतस्तद्धर्मोपदेशादित्यादियोगद्वयम् ।

'ಪೂರ್ಣಾನಂದವುಳ್ಳವನು ವಿಷ್ಣುವೇ' ಎಂದು ಹಿಂದಿನ ಅಧಿಕರಣದಲ್ಲಿ ಹೇಳಿದ್ದು ಸರಿಯಲ್ಲ. 'ಅದೃಶ್ಯೇಽನಾತ್ಮ್ಯೇ' ಎಂದು ಶ್ರುತಿಯಲ್ಲಿ ಆನಂದಮಯನ ಧರ್ಮವೆಂದು ಹೇಳಲ್ಪಟ್ಟ ಅದೃಶ್ಯತ್ವವು 'ಅಂತಶ್ಚಂದ್ರಮಸಿ ಮನಸಾ ಚರಂತಂ ಸಹೈವ ಸಂತಂ ನ ವಿಜಾನಂತಿ ದೇವಾಃ' ಎಂದು ಬೇರೆ ಶ್ರುತಿಯಲ್ಲಿ ಅಂತಸ್ಥನಿಗೆ ಹೇಳಲ್ಪಟ್ಟಿದೆ. ಈ ಶ್ರುತಿಯಲ್ಲಿ ದೇವತೆಗಳೇ ತಿಳಿಯುವುದಿಲ್ಲ. ಹಾಗಿರುವಾಗ

ಬೇರೆಯವರು ತಿಳಿಯಲು ಹೇಗೆ ಸಾಧ್ಯ? ಎಂದು ಕೈಮುತ್ಯನ್ಯಾಯದಿಂದ ಅದೃಶ್ಯತ್ವವು ಅಂತಸ್ಥನಲ್ಲಿದೆಯೆಂದು ತಿಳಿಯುತ್ತದೆ. ಆ ಅಂತಸ್ಥನು ಯಾರೆಂದರೆ 'ಇಂದ್ರೋ ರಾಜಾ' ಎಂಬಿತ್ಯಾದಿ ನಿರವಕಾಶಶ್ರುತ್ಯಾದಿಗಳ ಬಲದಿಂದ ಇಂದ್ರಾದಿದೇವತೆಗಳೆಂದು ಸಿದ್ಧವಾಗುತ್ತದೆಯಾದ್ದರಿಂದ ಅವರೇ ಅದೃಶ್ಯರು. ಮತ್ತು ಪೂರ್ಣಾನಂದರು ಎಂದು ಹೇಳಿದರೆ ''ಅಂತಸ್ತದ್ಧರ್ಮೋಪದೇಶಾತ್'' ಎಂಬಿತ್ಯಾದಿ ಎರಡು ಸೂತ್ರಗಳು ಹೊರಟಿವೆ.

तदर्थः ''अंतरः'' इति । ''प्रसिद्धेः'' इति त्रिपाद्यन्वेति । अंतरुपपदादत-सातत्यगमन इति धातोर्डप्रत्ययेऽन्तरः अंतस्थ इति यावत् । यद्वा 'अन्योंऽतर आत्मे'त्यादाविवांतरशब्दोंतस्थवाची । 'अंतःप्रविष्टकर्तारमीशमंतश्चंद्रमसि मनसा चरंतं' 'अंतःप्रविष्टः शास्ते'त्यादिना श्रुतोंतरोंतस्थः एको विष्णुरेव नत्वनेकः । तथाचान्यवस्तुषु इन्द्रादिषु प्रसिद्धैर्लोकतो निरूढैरिंद्राद्यशेषधिदैवगतैर्नामभि-र्विष्णुरेवोच्यते । अंतस्थस्य विष्णुत्वे तन्निष्ठत्वेन श्रुतेंद्रादिनाम्नामपि तद्वाचित्वनियमादिति भावः ।

ಈ ಸೂತ್ರಗಳ ಅರ್ಥವನ್ನೇ ಅಣುಭಾಷ್ಯದಲ್ಲಿ ''ಅಂತರಃ'' ಎನ್ನುವ ಪದ. ''ಪ್ರಸಿದ್ಧೈರನ್ಯ-ವಸ್ತುಷು'' ಇತ್ಯಾದಿ ಮೂರು ಪಾದವನ್ನು ಇಲ್ಲಿ ಸೇರಿಸಿಕೊಳ್ಳಬೇಕು. 'ಅಂತಃ'ಎನ್ನುವ ಉಪಪದವುಳ್ಳ 'ಅತ ಸಾತತ್ಯಗಮನೇ' ಎನ್ನುವ ಧಾತುವಿನ ಮೇಲೆ 'ಡ'ಪ್ರತ್ಯಯವಿಟ್ಟುಕೊಂಡಾಗ 'ಅಂತರಃ' ಎಂದು ರೂಪವಾಗುತ್ತದೆ. ಅದರ ಅರ್ಥ ಅಂತಸ್ಥನಾದವನು ಎಂದು.

ಅಥವಾ 'ಅನ್ಯೋಽಂತರ ಆತ್ಮಾ' ಇತ್ಯಾದಿ ಶ್ರುತಿಯಲ್ಲಿ ಹೇಳಿದಂತೆ ಅಂತರಶಬ್ದಕ್ಕೆ ಅಂತಸ್ಥ ಎಂದು ಅರ್ಥ. 'ಅಂತಃಪ್ರವಿಷ್ಟಕರ್ತಾರಮೀಶಮಂತಶ್ಚಂದ್ರಮಸಿ ಮನಸಾ ಚರಂತಮ್' 'ಅಂತಃಪ್ರವಿಷ್ಟಃ ಶಾಸ್ತಾ' ಇತ್ಯಾದಿ ಶ್ರುತಿಗಳಲ್ಲಿ ಶ್ರುತರಾದ ಅಂತರ ಮತ್ತು ಅಂತಸ್ಥ ಇವರಿಬ್ಬರೂ ಒಬ್ಬನೇ ವಿಷ್ಣು ಹೊರತು ಬೇರೆ ಬೇರೆಯವರಲ್ಲ (ಅನೇಕರಲ್ಲ). ಹಾಗಾಗಿ ಅನ್ಯವಸ್ತುಷು ಪ್ರಸಿದ್ಧೈಃ = ಲೋಕದಲ್ಲಿ ಬಹುಕಾಲದಿಂದ ರೂಢಿಯಿಂದಿರುವ ಇಂದ್ರ ಮೊದಲಾದ ಎಲ್ಲಾ ದೇವತೆಗಳನ್ನು ಹೇಳುವ ಹೆಸರುಗಳಿಂದ ವಿಷ್ಣುವೇ ಹೇಳಲ್ಪಡುತ್ತಾನೆ. ಏಕೆಂದರೆ ಅಂತಸ್ಥನು ವಿಷ್ಣುವೆಂದಾದರೆ ಅಂತಸ್ಥನಲ್ಲಿ ಶ್ರುತವಾದ ಇಂದ್ರಾದಿನಾಮಗಳೂ ಅವನನ್ನೇ ಹೇಳಬೇಕಾಗುತ್ತದೆ ಎಂದು ಅಭಿಪ್ರಾಯ.

तदेव कुतः? सर्वगुणत्वतः । 'समुद्रेंऽतः' 'यस्यांडकोशं शुष्ममाहुः' इत्याद्येतत् प्रकरणश्रुतसमुद्रांतस्थत्व ब्रह्मांडवीर्यत्वादिसर्वगुणवत्त्वात् तस्येत्यर्थः; लिंगानामिंद्राद्रौ निरवकाशत्वादिति भावः ।

ಅಂತಸ್ಥನಾದವನು ವಿಷ್ಣುವೆಂದಾದರೆ ಇಂದ್ರಾದಿನಾಮಗಳು ಅವನನ್ನೇ ಹೇಳುತ್ತವೆ ಎನ್ನುವುದು ಸರಿ, ಆದರೆ ಅಂತಸ್ಥನು ವಿಷ್ಣುವೇ ಎಂದು ಹೇಗೆ ಸಿದ್ಧವಾಗುತ್ತದೆ? ಎಂದರೆ ಅದಕ್ಕೂ ''ಸರ್ವಗುಣತ್ವತಃ'' ಎನ್ನುವುದೇ ಉತ್ತರ. 'ಸಮುದ್ರೇಂತಃ' 'ಯಸ್ಯಾಂಡಕೋಶಂ ಶುಷ್ಮಮಾಹುಃ' ಇತ್ಯಾದಿ ಈ ಪ್ರಕರಣದಲ್ಲಿ ಶ್ರುತವಾದ ಸಮುದ್ರಾಂತಸ್ಥತ್ವ, ಬ್ರಹ್ಮಾಂಡವೀರ್ಯತ್ವ ಮೊದಲಾದ ಸರ್ವಗುಣವುಳ್ಳವನಾದ್ದರಿಂದ ಅಂತಸ್ಥನು ವಿಷ್ಣುವೇ. ಈ ಲಿಂಗಗಳು ಇಂದ್ರಾದಿದೇವತೆಗಳಲ್ಲಿ ನಿರವಕಾಶಗಳಾಗಿವೆ (ಅವರಲ್ಲಿ ಯೋಜಿಸಲು ಬರುವುದಿಲ್ಲವೆಂದರ್ಥ) ಎಂದು ಅಭಿಪ್ರಾಯ.

न च श्रुतीनामपि विष्णौ निरवाकशत्वादुभयाबाधाय तादात्म्यमेवेंद्रादिभिर्विष्णोरस्त्विति शंक्यम् । सर्वगुणत्वतः । सर्वे इन्द्रादयो गुणाः अप्रधानाः यस्य तस्य गावस्तस्मात् । सर्वस्वामित्वेन तेभ्योऽतरो विविक्त एव सन् न तैरभिन्नः सन्नंतरोऽतस्थो विष्णुः 'इंद्रस्यात्मा निहितः' 'वायोरात्मान' मित्यादावुच्यत इत्यर्थः । अस्मिन्पक्षे एवकारोंऽतर एवेत्यन्वेति ।

'अंतरमवकाशावधिपरिधानांतर्धिभेदासादृश्ये' इत्यमरोक्त्या भेदवाचिनः क्लीबत्वेऽप्यर्शआद्यच्प्रत्ययांतत्वेन 'य आत्मनोंतरो' 'यो विज्ञशनादंतर' इत्यादाविवात्र पुंलिंगांतरशब्दो विविक्तवाच्यपि ध्येयः । अन्यथांऽतःस्थ इत्येवावक्ष्यत् । तेन भेदसूत्रार्थोऽपि दर्शितः । श्रुतयस्तु विष्णुपरा इति भावः ।

''ಇಂದ್ರಾದಿಶ್ರುತಿಗಳೂ ಕೇವಲ ಇಂದ್ರಾದಿಗಳನ್ನಷ್ಟೇ ಹೇಳುತ್ತವೆ. ವಿಷ್ಣುವಿನಲ್ಲಿ ನಿರವಕಾಶಗಳಾಗಿವೆ. ಹಾಗಾಗಿ ಶ್ರುತಿ ಮತ್ತು ಲಿಂಗ ಎರಡೂ ನಿರವಕಾಶವಾದ್ದರಿಂದ ಎರಡನ್ನೂ ಮಾನ್ಯ ಮಾಡಬೇಕಾದರೆ ವಿಷ್ಣುವಿಗೆ ಇಂದ್ರಾದಿಗಳೊಂದಿಗೆ ಅಭೇದವಿದೆ ಎನ್ನೋಣ'' ಎಂದು ಶಂಕಿಸಿದರೆ ಅದಕ್ಕೂ ''ಸರ್ವಗುಣತ್ವತಃ'' ಎಂದೇ ಉತ್ತರ. ಯಸ್ಯ = ಯಾರಿಗೆ, ಸರ್ವೇ = ಇಂದ್ರಾದಿ ಎಲ್ಲಾ ದೇವತೆಗಳೂ, ಗುಣಾಃ = ಅಪ್ರಧಾನರು. ಅವನು ಸರ್ವಗುಣನು = ಅವನ ಧರ್ಮವೇ ಸರ್ವಗುಣತ್ವ. ಆ ಸರ್ವಗುಣತ್ವವುಳ್ಳವನಾದ್ದರಿಂದ; ಅಂದರೆ ಎಲ್ಲಾ ದೇವತೆಗಳಿಗೂ ಒಡೆಯನಾದ್ದರಿಂದ ಅವರ ಒಳಗಿದ್ದು ನಿಯಮಕನಾಗಿ, ಅವರಿಂದ ಅಭಿನ್ನನಾಗಿರದೆ ಭಿನ್ನನಾಗಿಯೇ ಇರುವನು ಎಂದು ''ಇಂದ್ರಸ್ಯಾತ್ಮಾ ನಿಹಿತಃ' 'ವಾಯೋರಾತ್ಮಾನಂ' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಡುತ್ತಾನೆ ಎಂದರ್ಥ.

ವಸ್ತುತಃ 'ಅಂತರಮವಕಾಶಮವಧಿಪರಿಧಾನಾಂತರ್ಧಿಭೇದಸಾದೃಶ್ಯೇ' ಎಂಬ ಅಮರಕೋಶ-ವಾಕ್ಯದಂತೆ ಭೇದಾರ್ಥಕವಾದ ಅಂತರಶಬ್ದವು ನಪುಂಸಕಲಿಂಗವಾಗಿದ್ದರೂ 'ಅರ್ಶಾದ್ಯಚ್ ಎಂಬ ಸೂತ್ರದಂತೆ ಅಚ್‌ಪ್ರತ್ಯಯಾಂತವಾದ್ದರಿಂದ 'ಯ ಆತ್ಮನೋಽಂತರಃ' 'ಯೋ ವಿಜ್ಞಾನಾದಂತರಃ' ಇತ್ಯಾದಿ ಶ್ರುತಿಗಳಲ್ಲಿರುವಂತೆ ಪುಲ್ಲಿಂಗ ಅಂತರಶಬ್ದವೂ ಭೇದಾತ್ಮಕವೇ ಆಗಿದೆ. ಈ

ಅಭಿಪ್ರಾಯವಿರದಿದ್ದರೆ ಆಚಾರ್ಯರು ಈ ಅಧಿಕರಣವನ್ನು ಸಂಗ್ರಹಿಸಲು 'ಅಂತಸ್ಥ' ಎಂದೇ ಹೇಳುತ್ತಿದ್ದರು. 'ಅಂತರ'ಶಬ್ದವನ್ನು ಸ್ವೀಕರಿಸಿದ್ದರಿಂದ (ಅಂತರಶಬ್ದಕ್ಕೆ ಭೇದಾರ್ಥವನ್ನು ಸ್ವೀಕರಿಸಿದಾಗ) 'ಭೇದವ್ಯಪದೇಶಾಚ್ಚ' ಎನ್ನುವ ಸೂತ್ರಾರ್ಥವನ್ನು ಸಂಗ್ರಹಿಸಿದಂತಾಗುತ್ತದೆ. ಆ ಶ್ರುತಿಗಳನ್ನು ವಿಷ್ಣುಪರವಾಗಿಯೂ ಅರ್ಥೈಸಬಹುದಾದ್ದರಿಂದ ನಿರವಕಾಶಗಳಾಗಿಲ್ಲ ಎಂದಭಿಪ್ರಾಯ. ಶ್ರುತ್ಯರ್ಥವಾದರೋ ವಿಷ್ಣುಪರವಾಗಿದೆ ಎಂದು ಭಾವ.

न चेंद्रादिषु योगरूढिभ्यां प्रवृत्तानां तासां हरावमुख्यतेति वाच्यम् । परमैश्वर्यादेर्विष्णौ निरवधिकत्वेनान्यगतप्रवृत्तिनिमित्तस्यापि विष्णवधीनत्वाच्चेत्याह । **सर्वगुणत्वत इति** । सर्वे गुणा यस्मिन्निति व्युत्पत्त्या इन्द्रादितत्तच्छब्दप्रवृत्तिनिमित्तसर्वगुणत्वात्सर्वं गुणभूतं यस्येति व्युत्पत्त्या सर्वस्वातन्त्र्याच्च विष्णोरित्यर्थः ।

महायोगोक्त्या विद्वद्रूढिरपि दर्शिता । 'विद्वद्रूढिर्वैदिका स्यात्सा योगादेव लभ्यते' इत्युक्तेः ।

'इंद्रं मित्रं यमिंद्रं स प्रथमः संकृतिस्तथा ।
नामधाः सर्वदेवानामेक इत्यादिका श्रुतिः'

इत्यनुभाष्योक्त्यादिशा 'इंद्रं मित्रं वरुणमग्निमाहु'रितिप्रयोगबाहुल्यरूपरूढेः श्रौतत्वाच्चेति ।

ಇಂದ್ರಾದಿಶ್ರುತಿಗಳು ಯೋಗ ಮತ್ತು ರೂಢಿ ಇವೆರಡು ವೃತ್ತಿಗಳಿಂದ ಇಂದ್ರಾದಿದೇವತೆಗಳನ್ನು ಹೇಳುತ್ತವೆ ಹೊರತು ವಿಷ್ಣುವನ್ನಲ್ಲ; ಆದುದರಿಂದ ಇಂದ್ರಾದಿಶ್ರುತಿಗಳು ವಿಷ್ಣುವಿನಲ್ಲಿ ಅಮುಖ್ಯ ಎಂದು ಹೇಳಬಾರದು. ಏಕೆಂದರೆ ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತವಾದ ಪರಮೈಶ್ವರ್ಯ ಮೊದಲಾದ ಧರ್ಮಗಳು, ಹಾಗೂ ಬೇರೆ ದೇವತೆಗಳ ಪ್ರವೃತ್ತಿನಿಮಿತ್ತಗಳೂ ವಿಷ್ಣುವಿನಲ್ಲಿ ನಿರವಧಿಕವಾದ್ದರಿಂದ ವಿಷ್ಣುವಿನ ಅಧೀನವಾಗಿವೆ ಎಂಬುದನ್ನು "ಸರ್ವಗುಣತ್ವತಃ" ಎಂಬುದರಿಂದಲೇ ಹೇಳುತ್ತಾರೆ. ಯಾರಲ್ಲಿ ಎಲ್ಲಾ ಗುಣಗಳಿವೆಯೋ ಅವನು ('ಸರ್ವೇ ಗುಣಾಃ ಯಸ್ಮಿನ್') ಸರ್ವಗುಣನು ಎಂಬ ವ್ಯುತ್ಪತ್ತಿಯಿಂದ ವಿಷ್ಣುವು ಇಂದ್ರಾದಿ ಆಯಾಯ ಶಬ್ದಗಳ ಪ್ರವೃತ್ತಿನಿಮಿತ್ತಗಳಾದ ಸಕಲಗುಣವುಳ್ಳವನಾಗಿದ್ದಾನೆ.

ಯಸ್ಯ = ಯಾರವಿಷಯದಲ್ಲಿ, ಸರ್ವಂ = ಎಲ್ಲವೂ, ಗುಣಭೂತಂ = ಅಪ್ರಧಾನವಾಗಿದೆಯೋ ಅವನು ಸರ್ವಗುಣ ಎಂಬ ವ್ಯುತ್ಪತ್ತಿಯಿಂದ ವಿಷ್ಣುವು ಸರ್ವಸ್ವತಂತ್ರನಾಗಿದ್ದರಿಂದ ಎಂದೂ ತಿಳಿಯುತ್ತದೆ. ಆದ್ದರಿಂದ ಇಂದ್ರಾದಿಶಬ್ದಗಳು ಅವನಲ್ಲೇ ಮುಖ್ಯವಾಗಿವೆ.

ವಿಷ್ಣುವಿನಲ್ಲಿ ಇಂದ್ರಾದಿಶಬ್ದಗಳ ಮುಖ್ಯತ್ವವನ್ನು ನಿರೂಪಿಸಲು ಮಹಾಯೋಗವನ್ನು ಈ ರೀತಿಯಾಗಿ ಹೇಳಿದ್ದರಿಂದ ವಿದ್ವದ್‌ರೂಢಿಯನ್ನು ತೋರಿಸಿದಂತಾಯಿತು. ಹೇಗೆಂದರೆ 'ವಿದ್ವದ್ ರೂಢಿರ್ವೈದಿಕಾ ಸ್ಯಾತ್ ಸಾ ಯೋಗಾದೇವ ಲಭ್ಯತೇ' (ವಿದ್ವದ್‌ರೂಢಿಯೆಂದರೆ ವೇದದಲ್ಲಿ ಹೇಳುವ ರೂಢಿ ಎಂದರ್ಥ. ಅದಾದರೋ ಮಹಾಯೋಗದಿಂದ ಸಿಗುತ್ತದೆ) ಎಂದು ಪ್ರಮಾಣವಿರುವುದರಿಂದ.

'ಇಂದ್ರಂ ಮಿತ್ರಂ ಯಮಿಂದ್ರಂ ಸ ಪ್ರಥಮಃ ಸಂಕೃತಿಸ್ತಥಾ ।
ನಾಮಧಾ ಸರ್ವ ದೇವಾನಾಮೇಕ ಇತ್ಯಾದಿಕಾ ಶ್ರುತಿಃ ॥'

ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದರಿಂದ ಮತ್ತು 'ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ' ಎಂದು ಬಹಳ ಪ್ರಯೋಗವೆಂಬ ರೂಢಿಯು ಶ್ರುತ್ಯುಕ್ತವಾಗಿದೆ.

**ननु कथं सर्वगतस्यापि विष्णोरल्पदेशे चन्द्राद्यंतरवस्थानम् । न हि सर्षपांतर्ब्रह्मांडस्यावस्थानं सम्भवदुक्तिकमित्यतोऽपि अंतर इति । खवदितीहाप्यन्वेति । खवत् आकाशवत् । अंतरोंऽतःस्थः । यथा व्याप्तोऽप्याकाश एकदेशे वर्तते तथा विष्णुरपीत्यर्थः । तदुक्तं सप्तमस्कंधे । 'कोऽतिप्रयासोसुरबालका हरेरुपासने स्वे हृदि छिद्रवत्सत' इति । एतच्च लिंगपादीयाद्यनये 'निचाय्ययत्वादेवं व्योमवच्च' इति सूत्रे व्युत्पाद्यमपीह शिष्यहिताय प्रसंगादुक्तम् । विवृतं चैतद्वैशेषिकनयानुभाष्ये**

**'महतोऽल्पत्वमपि हि व्योमवत् प्राह वेदवित् ।**
**यद्यल्पदेशसंस्थानं न सर्वत्रापि नो भवेत् ।**
**स्थितस्य ह्यल्पदेशेषु सर्वगत्वं भवेद्ध्रुवम्'**

**इत्यादिनेति । एतेन व्योमवदित्युक्तमन्यत्राप्यनुसन्धेयमित्युक्तं भवति ।।७।।**

"ಸರ್ವಗತನಾದ ವಿಷ್ಣುವು ಚಂದ್ರ ಮುಂತಾದ ದೇವತೆಗಳ ಒಳಗೆ ಅಲ್ಪದೇಶದಲ್ಲಿ ಹೇಗಿರುತ್ತಾನೆ? ವ್ಯಾಪ್ತವಾದ ಬ್ರಹ್ಮಾಂಡವು ಸಾಸಿವೆಕಾಳಿನ ಒಳಗೆ ಹೇಗೆ ಇರಲು ಸಾಧ್ಯವಿಲ್ಲವೋ ಹಾಗೆ" ಎಂದರೆ "ಅಂತರಃ" ಎಂದು ಹೇಳುತ್ತಾರೆ. "ಖವತ್" ಎಂಬ ಹಿಂದೆ ಹೇಳಿದ ಅಂಶವನ್ನು ಇಲ್ಲಿಯೂ ಅನುವೃತ್ತಿ ಮಾಡಿಕೊಳ್ಳಬೇಕು. ಖವತ್ = ಆಕಾಶದಂತೆ, ಅಂತರಃ = ಅಂತಸ್ಥನು ಹೇಗೆ ವ್ಯಾಪ್ತವಾದ ಆಕಾಶವು ಒಂದು ಭಾಗದಲ್ಲಿ ಹೇಗೆ ಇರುತ್ತದೋ ಹಾಗೆ ವಿಷ್ಣುವೂ ಅಲ್ಪದೇಶದಲ್ಲಿ ಇರುತ್ತಾನೆ ಎಂದರ್ಥ. ಭಾಗವತ ಸಪ್ತಮಸ್ಕಂಧದಲ್ಲಿ ಅದನ್ನೇ "ಕೋಽತಿಪ್ರಯಾಸೋಸುರಬಾಲಕಾ ಹರೇರು-ಪಾಸನೇ ಸ್ವೇ ಹೃದಿ ಛಿದ್ರವತ್ ಸತಃ" (ಎಲೈ ಬಾಲಕರೇ! ನಮ್ಮ ಹೃದಯದಲ್ಲಿ ಆಕಾಶದಂತೆ ಇರುವ ಹರಿಯ ಉಪಾಸನೆಗೆ ಯಾಕೆ ಕಷ್ಟ?') ಎಂದು ಹೇಳಿದ್ದಾರೆ. ಇದನ್ನು ಪ್ರಥಮಾಧ್ಯಾಯದ

ಎರಡನೆಯದಾದ ಲಿಂಗಪಾದದಲ್ಲಿ 'ನಿಚಾಯ್ಯತ್ವಾದೇವಂ ವ್ಯೋಮವಚ್ಚ' ಎಂಬ ಸೂತ್ರದಲ್ಲಿ ಹೇಳ-ಬೇಕಾಗಿದ್ದರೂ ಶಿಷ್ಯರ ಹಿತಕ್ಕೋಸ್ಕರ ಪ್ರಸಂಗಾತ್ ಇಲ್ಲಿ ಹೇಳಿದ್ದಾರೆ. ಇದನ್ನು ವೈಶೇಷಿಕಾಧಿಕರಣದ ಅನುವ್ಯಾಖ್ಯಾನದಲ್ಲಿ ವಿವರವಾಗಿ ಹೇಳಿದ್ದಾರೆ.

'ಮಹತೋಽಲ್ಪತ್ವಮಪಿ ಹಿ ವ್ಯೋಮವತ್ ಪ್ರಾಹ ವೇದವಿತ್ ।
ಯದಲ್ಪದೇಶಸಂಸ್ಥಾನಂ ನ ಸರ್ವತ್ರಾಪಿ ನೋ ಭವೇತ್ ।
ಸ್ಥಿತಸ್ಯ ಹ್ಯಲ್ಪದೇಶೇಷು ಸರ್ವಗತ್ವಂ ಭವೇದ್ ಧ್ರುವಮ್ ॥

(ಮಹತ್ತಾದ ವಸ್ತುವಿಗೆ ಆಕಾಶದಂತೆ ಅಲ್ಪದೇಶಸ್ಥಿತತ್ವವನ್ನು ವೇದವ್ಯಾಸದೇವರು ಹೇಳಿದ್ದಾರೆ. ಒಂದು ವೇಳೆ ಅಲ್ಪದೇಶದಲ್ಲಿ ಆ ವಸ್ತುವು ಇಲ್ಲವೆನ್ನುವುದಾದರೆ ಎಲ್ಲಾ ಕಡೆಯಲ್ಲೂ ಅದು ಇರಲು ಸಾಧ್ಯವಿಲ್ಲ. ಏಕೆಂದರೆ ಅಲ್ಪದೇಶದಲ್ಲಿ ಇದ್ದರೆ ಮಾತ್ರ ಅದು ಸರ್ವಗತ(ಎಲ್ಲಕಡೆ ಇರಲು)ವಾಗಲು ಸಾಧ್ಯ) ಹೀಗೆ ಲಿಂಗಪಾದದಲ್ಲಿ ಹೇಳಿದ 'ವ್ಯೋಮವತ್' ಎಂಬ ವಿಷಯವನ್ನು ಈ ಅಧಿಕರಣದಲ್ಲಿ ಅನುಸಂಧಾನ ಮಾಡಿದ್ದರಿಂದ 'ಬೇರೆ ಕಡೆಯಲ್ಲಿಯೂ ಹೀಗೆಯೇ ಅನುಸಂಧಾನಮಾಡಿಕೊಳ್ಳಬೇಕು' ಎಂದು ಸೂಚಿಸಿದಂತಾಯಿತು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
ತತ್ವಮಂಜರಿಯ ಕನ್ನಡಾನುವಾದದಲ್ಲಿ ಅಂತಸ್ಥತ್ವಾಧಿಕರಣವು ಮುಗಿಯಿತು.

* * * * *

।।श्रीः ।।

श्रीराघवेन्द्रतीर्थविरचिता

# तन्त्रदीपिका

## अन्तःस्थत्वाधिकरणम्

।। ॐ अन्तस्तद्धर्मोपदेशात् ॐ ।। १-१-२०

अत्र नयेऽन्तस्थत्वलिङ्गद्वाराऽधिदैवगतसर्वनामसमन्वयः क्रियते । तत्त्विति वर्तते । श्रुतमिति शेषः । ''अन्तःप्रविष्टं कर्तारम्'' ''अन्तश्चन्द्रमसि'' इति तैत्तिरीयेऽन्तः श्रुतं ब्रह्मैव न त्विन्द्रादिः । तस्य ब्रह्मणो धर्माणां समुद्रस्थत्व-ब्रह्माण्डवीर्यत्वादिरूपाणां तत्रान्तः श्रुते ''अन्तः समुद्रे'', ''यस्याण्डकोशम्'' इत्यादिनोपदेशादित्यर्थः । धर्मोपदेशादित्येव पूर्तौ तदित्युक्तिस्तेषां ब्रह्माव्यभि-चारित्वपक्षधर्मत्वयोः प्रदर्शनार्था । अन्तस्तदिति तन्त्रम् । एवमग्रेऽपि ।

ಈ ಅಧಿಕರಣದಲ್ಲಿ ಅಂತಸ್ಥತ್ವಲಿಂಗಸಮನ್ವಯಮಾಡುವ ಮೂಲಕವಾಗಿ ಅಧಿದೈವಗತವಾದ ಎಲ್ಲಾ ನಾಮಗಳನ್ನೂ ಸಮನ್ವಯಮಾಡುತ್ತಾರೆ. 'ತತ್ ತು' ಎನ್ನುವುದನ್ನು ಅನುವೃತ್ತಿ ಮಾಡಿಕೊಳ್ಳ-ಬೇಕು. 'ಅಂತಃಪ್ರವಿಷ್ಟಕರ್ತಾರಂ' 'ಅಂತಶ್ಚಂದ್ರಮಸಿ' ಎಂಬಿತ್ಯಾದಿ ತೈತ್ತಿರೀಯೋಪನಿಷತ್ತಿನಲ್ಲಿ ಅಂತಸ್ಥತ್ವೇನ ಶ್ರುತನಾದವನು ಬ್ರಹ್ಮನೇ ಹೊರತು ಇಂದ್ರಾದಿದೇವತೆಗಳಲ್ಲ. ಏಕೆಂದರೆ ಆ ಶ್ರುತಿಯಲ್ಲಿ ಅಂತಸ್ಥನಿಗೆ ಬ್ರಹ್ಮನ ಧರ್ಮಗಳಾದ ಸಮುದ್ರಾಂತಸ್ಥತ್ವ, ಬ್ರಹ್ಮಾಂಡವೀರ್ಯತ್ವಾದಿ ಬ್ರಹ್ಮನ ಲಿಂಗಗಳು 'ಅಂತಃಸಮುದ್ರೇ' 'ಯಸ್ಯಾಂಡಕೋಶಮ್' ಇತ್ಯಾದಿಯಾಗಿ ಉಪದೇಶಿಸಲ್ಪಟ್ಟಿವೆ. 'ಧರ್ಮೋ-ಪದೇಶಾತ್' ಎಂದಿಷ್ಟೇ ಹೇಳಿದ್ದರೂ ಸಾಕಾಗುತ್ತಿತ್ತು; ಆದರೂ 'ತತ್' ಎಂದು ಹೇಳಿದ್ದು ಆ ಧರ್ಮಗಳು ಬ್ರಹ್ಮಾವ್ಯಭಿಚಾರಿಗಳಾಗಿವೆ (ಬ್ರಹ್ಮನನ್ನು ಬಿಟ್ಟು ಬೇರೆ ಕಡೆ ಇಲ್ಲ) ಮತ್ತು ಪಕ್ಷಧರ್ಮತ್ವ ಅಂತಸ್ಥನಲ್ಲಿ ಇದೆಯೆಂದು ಎಂದು ತೋರಿಸುವುದಕ್ಕಾಗಿ. ಅಂತಃ, ತತ್ ಎಂಬ ಪದಗಳು ತಂತ್ರಗಳಾಗಿವೆ (ಒಂದು ಬಾರಿ ಹೇಳಿದ್ದರೂ; ಎರಡು ಬಾರಿ ಇಟ್ಟುಕೊಳ್ಳುವುದು ಎಂಬುದಾಗಿ ತಂತ್ರ). ಈ ಮುಂದಿನ ಅಧಿಕರಣಗಳಲ್ಲಿಯೂ ಈ ರೀತಿಯಾಗಿ ತಿಳಿಯಬೇಕು.

नन्वत्रेन्द्रादिश्रुतीनामपि सत्त्वात् श्रुतिलिङ्गानुरोधेनेन्द्रादेरन्तस्थेन ब्रह्मणा अभेदा दिन्द्रादिरप्यन्तस्थोऽस्त्वित्यत आह –

।। ॐ भेदव्यपेदशाच्चान्यः ॐ ।। १-१-२१

चः समुच्चये । तदिति वर्तते । इन्द्रादिभ्य इति योग्यतया लभ्यते । न केवलं तच्छब्दार्थो विष्णुरन्तः श्रुतः किन्त्विन्द्रादिभ्योऽन्यश्च । कुतः? ''इन्द्रस्यात्मा'' ''वायोरात्मानम्'' इत्यादौ इन्द्राद्यन्तर्यामित्वाद्युक्त्या भेदव्यपदेशादित्यर्थः । श्रुतयस्तु ब्रह्मणि नेया इति भावः । तदित्यनुवृत्तेरन्यदिति वाच्ये पुंनिर्देशः श्रौतात्मपदानुसारात् ।।७।।

ವಿಷಯವಾಕ್ಯವಾಗಿ ಸ್ವೀಕರಿಸಿದ ಶ್ರುತಿಯಲ್ಲಿ ಇಂದ್ರಾದಿಶಬ್ದಗಳು ಇರುವುದರಿಂದ; ಶ್ರುತಿ ಮತ್ತು ಲಿಂಗ ಇವೆರಡನ್ನೂ ಅನುಸರಿಸಿ ಅಂತಸ್ಥನಾದ ಬ್ರಹ್ಮನೊಂದಿಗೆ ಇಂದ್ರಾದಿಗಳಿಗೆ ಅಭೇದವನ್ನು ಹೇಳಬೇಕಾಗಿ ಬರುವುದರಿಂದ ಇಂದ್ರಾದಿಗಳೂ ಅಂತಸ್ಥರಾಗಲಿ ಎಂದರೆ;

''ಭೇದವ್ಯಪದೇಶಾಚ್ಚಾನ್ಯಃ'' ಎಂಬ ಸೂತ್ರದಿಂದ ಉತ್ತರಿತ್ತಾರೆ. 'ಚ'ಶಬ್ದವು ಸಮುಚ್ಚಯವನ್ನು ಹೇಳುತ್ತಿದೆ. 'ತತ್' ಎಂಬುದನ್ನು ಅನುವೃತ್ತಿಮಾಡಿಕೊಳ್ಳಬೇಕು. ಇಂದ್ರಾದಿಭ್ಯಃ(ಇಂದ್ರಾದಿಗಳು) ಎನ್ನುವುದು ಯೋಗ್ಯತಯಾ (ಪ್ರಸಂಗಾತ್ ಅನ್ವಯಯೋಗ್ಯವಾಗಿರುವುದರಿಂದ) ಲಭ್ಯವಾಗುತ್ತದೆ. 'ತದ್ಧರ್ಮೋಪದೇಶಾತ್' ಎನ್ನುವಲ್ಲಿ ತತ್ ಶಬ್ದವಾಚ್ಯನಾದ ವಿಷ್ಣುವು ಅಂತಸ್ಥನು ಎಂದಷ್ಟೇ ಅಲ್ಲ, ಇಂದ್ರಾದಿಗಳಿಗಿಂತ ಭಿನ್ನನು ಆಗಿದ್ದಾನೆಂದೂ ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ. ಏಕೆಂದರೆ 'ಇಂದ್ರಸ್ಯಾತ್ಮಾ' 'ವಾಯೋರಾತ್ಮಾನಮ್' ಇತ್ಯಾದಿ ಶ್ರುತಿಗಳಲ್ಲಿ ಇಂದ್ರಾದಿ ದೇವತೆಗಳ ಅಂತರ್ಯಾಮಿತ್ವೇನ ವರ್ಣಿಸಲ್ಪಟ್ಟಿರುವುದರಿಂದ ಇಂದ್ರಾದಿಗಳಿಂದ ಭೇದವು ಹೇಳಲ್ಪಟ್ಟಿದೆ ಎಂದರ್ಥ. ಶ್ರುತಿಗಳನ್ನಾದರೋ ಬ್ರಹ್ಮನಲ್ಲಿ ಅನ್ವಯವುಳ್ಳದ್ದನ್ನಾಗಿ ಯೋಜಿಸಬೇಕು ಎಂದು ಭಾವ. (ಇಂದ್ರಾದಿಶಬ್ದಗಳಿಂದ ವಾಚ್ಯನು ಬ್ರಹ್ಮನೇ ಎಂದು ಉಪಪಾದನೆ ಮಾಡಬೇಕು).

ಬ್ರಹ್ಮನನ್ನು ಹೇಳುವ 'ತತ್' ಎಂದು ನಪುಂಸಕಲಿಂಗಪದವನ್ನು ಅನುವೃತ್ತಿ ಮಾಡಿಕೊಂಡಿರುವುದರಿಂದ ಸೂತ್ರದಲ್ಲಿ 'ಅನ್ಯತ್' ಎಂಬ ಅದೇ ಲಿಂಗದ ಪದವನ್ನು ಹೇಳಬೇಕಾಗಿತ್ತು. ಆದರೆ ಶ್ರುತಿಯಲ್ಲಿ ಪುಲ್ಲಿಂಗವುಳ್ಳ ಆತ್ಮಶಬ್ದವಿರುವುದರಿಂದ, ಶ್ರುತ್ಯನುಸಾರಿಯಾಗಿ ಸೂತ್ರದಲ್ಲಿ ಅನ್ಯಃ ಎಂದು ಪುಲ್ಲಿಂಗಪದವನ್ನು ಹೇಳಿದ್ದಾರೆ.

॥ ಇಲ್ಲಿಗೆ ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಅಂತಃಸ್ಥತ್ವಾಧಿಕರಣವು ಮುಗಿಯಿತು ॥

श्रीराघवेन्द्रयतिकृता

# न्यायमुक्तावळिः

## अन्तःस्थत्वाधिकरणम्

।। ॐ अन्तस्तद्धर्मोपदेशात् ॐ ।। ७ ।।

।। ॐ भेदव्यपदेशाच्चान्तयः ॐ ।।

'अदृश्येऽनात्म्ये' इति श्रुतस्यानन्दमयधर्मस्यादृश्यत्वस्य अन्तस्थे श्रवणात् तस्य चाविष्णुत्वात् सोऽपि न विष्णुरिति पूर्वाक्षेपात्सङ्गतिः । 'अन्तःप्रविष्टं कर्तारमेतमन्तश्चन्द्रमसि मनसा चरन्तम् । सहैव सन्तं न विजानन्ति देवाः' इति तैत्तिरीये (तै.आ.३-११) अदृश्यत्वादिगुणयुक्तोऽन्तस्थः श्रुतः । देवा अपि न जानन्ति किम्वन्ये? इति कैमुत्यलब्धत्वाददृश्यत्वस्य । सोऽन्तस्थः किं विष्णुरुत इन्द्रादिरन्य इति सन्देहः ।

'ಅದೃಶ್ಯೇಽನಾತ್ಮ್ಯೇ' ಎಂದು ಶ್ರುತಿಯಲ್ಲಿ ಅದೃಶ್ಯತ್ವವು ಆನಂದಮಯನ ಧರ್ಮವೆಂದು ಶ್ರುತವಾಗಿದೆ. ಅದು ಅಂತಸ್ಥನಲ್ಲಿ ಶ್ರುತವಾಗಿದೆ. ಅಂತಸ್ಥನು ವಿಷ್ಣುವಲ್ಲದ್ದರಿಂದ ಆ ಧರ್ಮವುಳ್ಳ ಆನಂದಮಯನೂ ವಿಷ್ಣುವಲ್ಲ ಎಂದು ಹಿಂದಿನ ಅಧಿಕರಣದ ಮೇಲೆ ಆಕ್ಷೇಪಮಾಡಿ ಹೊರಟಿರುವುದರಿಂದ ಈ ಅಧಿಕರಣಕ್ಕೆ (ಆಕ್ಷೇಪಕೀ)ಸಂಗತಿಯಿದೆ. 'ಅಂತಃಪ್ರವಿಷ್ಟಂ ಕರ್ತಾರಮೇತ-ಮಂತಶ್ಚಂದ್ರಮಸಿ ಮನಸಾ ಚರಂತಮ್ । ಸಹೈವ ಸಂತಂ ನ ವಿಜಾನಂತಿ ದೇವಾಃ' ಎಂದು ತೈತ್ತಿರೀಯಶ್ರುತಿಯಲ್ಲಿ ಅದೃಶ್ಯತ್ವಾದಿಗುಣವುಳ್ಳವನಾಗಿ ಅಂತಸ್ಥನು ಶ್ರುತವಾಗಿದ್ದಾನೆ. ದೇವತೆಗಳೂ ತಿಳಿಯುವುದಿಲ್ಲವೆಂದು ಶ್ರುತಿಯಲ್ಲಿ ಹೇಳಿದ್ದರಿಂದ ಬೇರೆಯವರು ತಿಳಿಯುವುದಿಲ್ಲ ಎಂದು ಕೈಮುತ್ಯನ್ಯಾಯದಿಂದ ಸಿದ್ಧವಾಗುವುದರಿಂದ ಅದೃಶ್ಯತ್ವವು ಅಂತಸ್ಥನಲ್ಲಿದೆಯೆಂದು ಸಿದ್ಧವಾಗುತ್ತದೆ. ಆ ಅಂತಸ್ಥನು ವಿಷ್ಣುವೋ ಅಥವಾ ಇಂದ್ರಾದಿ ಬೇರೆ ದೇವತೆಯೋ? ಎಂದು ಸಂದೇಹ.

इन्द्रादिरिति पूर्वः पक्षः । 'इन्द्रो राजा' 'ब्रह्मेन्द्रमग्निम्' इत्यादीन्द्रश्रुतेः ।। 'सप्त युञ्जन्ति रथमेकचक्रम्' इति सूर्यलिङ्गात् 'अपां नेतारम्' इति वरुणलिङ्गात् 'त्वष्टारं रूपाणि विकुर्वन्तम्' इति त्वष्टृश्रुतेः । अदृश्यत्वादिविष्णुलिङ्गानां निरूढेन्द्रादिश्रुतिलिङ्गेभ्यो दुर्बलत्वात् ।

विष्णुलिङ्गानां बहुत्वेऽपि श्रुतेः स्वभावप्रयुक्तप्राबल्यस्य बलवत्त्वात् ''तयोः स्वभावो बलवान्'' इत्युक्तेः निरवकाशत्वेन लिङ्गानामपि बलीयस्त्वे तदुत्तरश्रुति-लिङ्गोभयानुरोधेन इन्द्रादेर्विष्ण्वैक्यमस्तु । तावताऽपि विष्णुलिङ्गानामनुपहितरूपा-भिप्रायेणोपपत्त्या कल्पितभेद इन्द्रादिरेवान्तस्थ इति ॥

ಇಂದ್ರಾದಿ ಬೇರೆ ದೇವತೆಯೇ ಎಂದು ಪೂರ್ವಪಕ್ಷ. 'ಇಂದ್ರೋ ರಾಜಾ' 'ಬ್ರಹ್ಮೇಂದ್ರಮಗ್ನಿಮ್' ಇತ್ಯಾದಿ ಇಂದ್ರನ ಶ್ರುತಿಯಿರುವುದರಿಂದ; 'ಸಪ್ತ ಯುಂಜಂತಿ ರಥಮೇಕಚಕ್ರಮ್' ಎಂದು ಸೂರ್ಯಲಿಂಗವಿರುವುದರಿಂದ, 'ಅಪಾಂ ನೇತಾರಮ್' ಎಂದು ವರುಣಲಿಂಗವಿರುವುದರಿಂದ, 'ತ್ವಷ್ಟಾರಂ ರೂಪಾಣಿ ವಿಕುರ್ವಂತಮ್' ಎಂದು ತ್ವಷ್ಟೃಲಿಂಗವಿರುವುದರಿಂದ ಅಂತಸ್ಥನು ಇಂದ್ರ ಮುಂತಾದ ಬೇರೆ ದೇವತೆಯೇ. ಅದೃಶ್ಯತ್ವ ಮೊದಲಾದ ವಿಷ್ಣುಲಿಂಗವಿರುವುದರಿಂದ ವಿಷ್ಣುವೆನ್ನಲು ಬರುವುದಿಲ್ಲ. ಬಹುಕಾಲದಿಂದ ಲೋಕಪ್ರಸಿದ್ಧವಾದ ಇಂದ್ರ ಮೊದಲಾದ ಶ್ರುತಿ ಮತ್ತು ಲಿಂಗಗಳಿಗಿಂತಲೂ ಈ ವಿಷ್ಣುಲಿಂಗವು ದುರ್ಬಲವಾಗಿದೆ.

ಕೇವಲ ಲಿಂಗವಾಗಿದ್ದರೂ ವಿಷ್ಣುವನ್ನು ಹೇಳುವ ಬಹು ಲಿಂಗಗಳಿರುವುದರಿಂದ ಲಿಂಗಬಾಹುಲ್ಯ-ಪ್ರಯುಕ್ತ ಪ್ರಾಬಲ್ಯವಿರುವುದರಿಂದ ಅಂತಸ್ಥನು ವಿಷ್ಣುವೇ ಎಂದು ಹೇಳಕೂಡದು; ಶ್ರುತಿಯು ಸ್ವಾಭಾವಿಕವಾಗಿಯೇ ಪ್ರಬಲವಾಗಿದೆ. ಆದ್ದರಿಂದ 'ತಯೋಃ ಸ್ವಭಾವೋ ಬಲವಾನ್' ಎಂದು ಪ್ರಮಾಣವಿರುವುದರಿಂದ ಶ್ರುತಿ ಪ್ರಬಲವಾಗಿದೆ. ಹೀಗೆ ಎರಡೂ ಬಲಿಷ್ಠವಾಗಿವೆ. ಆದ್ದರಿಂದ ಶ್ರುತಿ ಮತ್ತು ಲಿಂಗಗಳೆರಡರ ಅನುಗುಣವಾಗಿ ಇಂದ್ರಾದಿಗಳಿಗೆ ವಿಷ್ಣುವಿನ ಅಭೇದವನ್ನು ಹೇಳೋಣ. (ಅಷ್ಟು ಹೇಳಿದ ವಿಷ್ಣುಲಿಂಗಗಳು ಉಪಾಧಿವಿಶಿಷ್ಟವಲ್ಲದ ಭಗವಂತನ ರೂಪಗಳನ್ನಿಟ್ಟುಕೊಂಡು ಹೇಳಿದ್ದು ಎಂದು ಕೂಡಿಸಲು ಬರುವುದರಿಂದ) ಕಲ್ಪಿತಭೇದವುಳ್ಳ ಇಂದ್ರಾದಿಗಳೇ ಅಂತಸ್ಥರು ಎಂದು ಪೂರ್ವಪಕ್ಷ.

सिद्धान्तस्तु ॥ 'अन्तःसमुद्रे मनसा चरन्तं' 'यस्याण्डकोशं शुष्ममाहुः' 'ब्रह्मान्वविन्दद्दशहोतारमर्णे' इति श्रुतसमुद्रान्तःस्थत्वब्रह्माण्डवीर्यत्वादिब्रह्मलिङ्गानां भाष्योक्तश्रुत्यादिनाऽनवकाशत्वात्; 'इन्द्रस्यात्मा' 'वायोरात्मानं' 'अन्तरादित्यः' इत्यादिना अस्मिन्नेव प्रकरणे अन्तस्थस्येन्द्रादिभिर्भेदव्यपदेशोनैक्यायोगाच्च; इन्द्रादिशब्दानामैश्वर्यादिप्रवृत्तिनिमित्तस्य विष्णावपि सत्त्वादन्यगतस्य तदधीनत्वेन तदधीनत्वन्यायाच्च; महायोगेन 'इन्द्रं मित्रं वरुणमग्निमाहुः' इत्यादिश्रुत्या विद्वद्रूढ्या च सप्ताश्वत्वाद्यन्यलिङ्गानां च शास्त्रदृष्ट्येतिन्यायेन विष्णावपि प्रवृत्तिसम्भवेनान्तस्थो विष्णुरिति । फले तु पूर्वाक्षेपसमाधी ॥७॥

ಸಿದ್ಧಾಂತವಾದರೋ ಹೀಗಿದೆ — 'ಅಂತಃಸಮುದ್ರೇ ಮನಸಾ ಚರಂತಮ್' 'ಯಸ್ಯಾಂಡಕೋಶಂ ಶುಷ್ಮಮಾಹುಃ' 'ಬ್ರಹ್ಮಾನ್ವವಿಂದದ್‌ದಶಹೋತಾರಮರ್ಣೇ' ಎಂದು ಶ್ರುತಿಯಲ್ಲಿ ಹೇಳಿದ ಸಮುದ್ರಸ್ಥತ್ವ, ಬ್ರಹ್ಮಾಂಡವೀರ್ಯತ್ವ ಮೊದಲಾದ ಬ್ರಹ್ಮಲಿಂಗಗಳು ಭಾಷ್ಯೋಕ್ತಶ್ರುತಿಗಳಿಂದ ನಿರವಕಾಶಗಳಾದ್ದರಿಂದ;

ಮತ್ತು 'ಇಂದ್ರಸ್ಯಾತ್ಮಾ' 'ವಾಯೋರಾತ್ಮಾನಂ' 'ಅಂತರಾದಿತ್ಯಃ' ಇತ್ಯಾದಿಯಾಗಿ ಇದೇ ಪ್ರಕರಣದಲ್ಲಿ ಇಂದ್ರಾದಿದೇವತೆಗಳಿಗೆ ಅಂತಸ್ಥನಿಂದ ಭೇದವನ್ನು ಹೇಳಿದ್ದಾರೆ. ಆದ್ದರಿಂದ ವಿಷ್ಣು-ವಿನೊಂದಿಗೆ ಇಂದ್ರಾದಿಗಳಿಗೆ ಐಕ್ಯವನ್ನು ಹೇಳಲು ಬರುವುದಿಲ್ಲ;

ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತಗಳಾದ ಐಶ್ವರ್ಯ ಮೊದಲಾದವುಗಳು ವಿಷ್ಣುವಿನಲ್ಲಿ ಇರುವುದರಿಂದ ಹಾಗೂ ಇಂದ್ರಾದಿಗಳಲ್ಲಿರುವ (ಅನ್ಯಗತಸ್ಯ) ಪ್ರವೃತ್ತಿನಿಮಿತ್ತವೂ ಆ ವಿಷ್ಣುವಿನ ಅಧೀನವಾಗಿದ್ದರಿಂದ, ತದಧೀನತ್ವನ್ಯಾಯದಿಂದ;

ಮತ್ತು ಮಹಾಯೋಗವೃತ್ತಿಯಿಂದ 'ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ' ಇತ್ಯಾದಿಶ್ರುತಿ-ಯಿರುವುದರಿಂದ ವಿದ್ವದ್ ರೂಢಿಯಿಂದಲೂ, ಸಪ್ತಾಶ್ವತ್ವ ಮೊದಲಾದ ಬೇರೆ ದೇವತೆಗಳನ್ನು ಹೇಳುವ ಲಿಂಗಗಳೂ 'ಶಾಸ್ತ್ರದೃಷ್ಟ್ಯಾ' ಎನ್ನುವ ನ್ಯಾಯದಂತೆ ವಿಷ್ಣುವಿನಲ್ಲೂ ಹೇಳಲು ಬರುವುದರಿಂದ ಅಂತಸ್ಥನಾದವನು ವಿಷ್ಣುವೇ – ಎಂದು.

ಈ ಅಧಿಕರಣದ ಫಲವಾದರೋ ಪೂರ್ವಾಧಿಕರಣದ ಆಕ್ಷೇಪ ಮತ್ತು ಸಮಾಧಾನ.

॥ ಇಲ್ಲಿಗೆ ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಅಂತಸ್ಥತ್ವಾಧಿಕರಣವು ಮುಗಿಯಿತು॥

# सूत्रार्थरत्नावलिः

## ।। ॐ अन्तस्तद्धर्मोपदेशात् ॐ ।।

अत्राधिदैवगतान्यत्रप्रसिद्धेन्द्रादिनामसमन्वयसिद्ध्यर्थं देहान्तःस्थत्वरूपलिङ्गसमन्वयः क्रियते ।

नन्वन्तःस्तत्वेन श्रुत्योच्यमान इन्द्रो भवेत् । इन्द्रश्रुतेः । (तै.आ.३/११/६) सूर्यो वा । दिवस्पतिलिङ्गात् । वरुणलिङ्गाद् वरुणो वा । त्वष्टृश्रुतेः त्वष्टा वा । अग्निबृहस्पतिश्रुतिभ्यामग्निबृहस्पती वा । न चेन्द्रादिशब्दा अन्यत्र नेतुं शक्यन्ते । तेषां देवेष्वेव रूढत्वात् । तेषामैश्वर्यादिशब्दप्रवृत्तिनिमित्तत्वाच्च । न चादृश्यत्वादिलिङ्गाद् अन्तःस्थो विष्णुः । श्रुत्यादिभ्यो लिङ्गमात्रस्य दुर्बलत्वात् । इति प्राप्ते, सूत्रमाह –

ॐ अन्तस्तद्धर्मोपदेशादिति ।। अस्यार्थः । अन्तः 'अन्तःप्रविष्टम्' इति हृदयान्तः श्रुतं ब्रह्मैव नेन्द्रादिः । कुतः? तद्धर्मोपदेशात् । तस्मिन् अन्तःश्रुतेः क्षीराब्धिमध्यवर्तित्वप्रलयोदधिस्थितत्वब्रह्माण्डवीर्यत्वादिरूपविष्णुधर्माणाम् 'अन्तः समुद्रे' इत्यादौ श्रुतत्वादित्यर्थः ।

एवञ्च निरवकाशलिङ्गैः सावकाशान्यप्रापकश्रुतिलिङ्गानां बाधोपपत्तेरयमन्तःस्थो विष्णुरेवेति सिद्धम् ।

## ।। ॐ भेदव्यपदेशाच्चान्यः ॐ ।।

ननु समुद्रस्थत्वादिलिङ्गादन्तःस्तो विष्णुः, तर्हि तेनान्तःस्थत्वेन विष्णुनेन्द्रादीनामभेदोऽस्तु । इन्द्रादिप्रापकश्रुत्यादेरपि सद्भावात् । श्रुत्यादेश्च स्वभावतो लिङ्गस्य निरवकाशतया बलवत्त्वेनान्यतरबाधेनान्यतरपक्षनिर्णयायोगात् । ततश्च पूर्वोत्तरपक्षद्वये अन्योन्यं बाध्यबाधकभावशून्ये सति तदन्यथाऽनुपपत्त्याऽन्तःस्थेन विष्णुनेन्द्रादीनामभेदः प्राप्तः, इत्याशङ्कां परिहरत् सूत्रमुपन्यस्यति –

ॐ भेदव्यपदेशाच्चान्यः ॐ ।। अस्यार्थः । न केवलमन्तःस्तो विष्णुः । किन्त्विन्द्रादिभ्योऽन्यश्च । कुतः? भेदव्यपदेशात् । तस्य तदन्तर्यामित्वतत्प्रेरकत्वादिरूपभेदकधर्मश्रवणादित्यर्थः ।

एवञ्च 'इन्द्रस्यात्मा' (तै.आ.३/११/३), 'वायोरात्मानम्' (तै.आ. ३/११/४) 'अन्तरादित्ये' (तै.आ. ३/११/६) इत्यादिश्रुतिषु भेदकधर्मश्रवणात् । नचोभयप्रापकान्यथाऽनुपपत्त्यैतत् कल्प्यम् । निरवकाशेन विष्णुलिङ्गेन सावकाशान्यप्रापकश्रुतिलिङ्गानां बाधोपपत्तेः । तस्मादयमन्तःस्तो विष्णुरेवेति सिद्धम् ।

॥ इति सूत्रार्थरत्नावळ्याम् अन्तःस्थत्वाधिकरणम् ॥

॥ಇಲ್ಲಿಗೆ ಪರಿಪೂರ್ಣಚಂದ್ರಿಕಾದಲ್ಲಿ
ಅಂತಸ್ಥತ್ವಾಧಿಕರಣವು ಸಮಾಪ್ತವಾಯಿತು ॥



## ಬನ್ನಿ... ಸಮನ್ವಯ ಪ್ರಾರಂಭಿಸೋಣ...

''ವಿಷ್ಣು ಎಂದರೆ ವಿಷ್ಣು.... ಸರಿ.
''ಇಂದ್ರ'' ಅಂದರೆ ? .... ''ದೇವೇಂದ್ರ'' ಅಲ್ಲ; ಹೊರತು ಮಹಾವಿಷ್ಣುವೆ.
ಯಾವ ಶಬ್ದವನ್ನಾದರೂ ಕೇಳಿ..... ಅದರರ್ಥ ''ಮಹಾವಿಷ್ಣು''.
''ಇದು'' ಅತಿಯಾಯಿತು ಅನ್ನಬೇಡಿ. ಇದೇ ಸತ್ಯ..... ಭಕ್ತಿಯ ಹುಚ್ಚಲ್ಲಿ ಹೇಳಿದ್ದಲ್ಲ.
ಸಮನ್ವಯಕಾರರೇ ಖುದ್ದಾಗಿ ಸಾಬೀತು ಮಾಡುತ್ತಿರುವ ......
ಆತ್ಯಂತಿಕವಿಚಾರ....ಪಾರಮಾರ್ಥಿಕ ರಹಸ್ಯ.
ಸಂಶಯಾತೀತವಾಗಿ ಮನದಟ್ಟಾಗುವಂತೆ ನಿಮ್ಮ ಮುಂದಿಡುವುದೇ ಸಮನ್ವಯಕಾರರ
ದೊಡ್ಡ ಸವಾಲು.

ಎಲ್ಲರಿಗೂ ಬೇಕಾದದ್ದು ಆನಂದ. ಆನಂದಮಯ ಅಂದರೆ ಬೇರೆ ಯಾರೂ ಅಲ್ಲ;
ಮಹಾವಿಷ್ಣು. ಇವನು ಬಾಲನೂ ಅಲ್ಲ, ಬ್ರಹ್ಮಶಬ್ದ ಮಹಾವಿಷ್ಣುವಿಗಷ್ಟೇ ಭೂಷಣ.
ಇವನೇ ಆನಂದಮಯ. ಇದನ್ನು ಪ್ರತಿಪಾದಿಸುವುದಕ್ಕಾಗಿಯೇ ॥ ಓಂ ಆನಂದಮಯೋಽಭ್ಯಾಸಾತ್ ॥
ಮೊದಲಾದ ಏಳು ಸೂತ್ರಗಳು ಹೊರಟಿವೆ.

''ಒಳಗಿರುವಿಕೆ'' ಎಂಬುದು ತುಂಬಾ ತುಂಬಾ ವಿಶೇಷ ಗುಣ.
ಅಂದ್ರೆ ಬಚ್ಚಿಟ್ಟುಕೊಂಡಿರುವುದು ಎಂದರ್ಥವಲ್ಲ.
ಹೊರಗಿರುವವರನ್ನು ನಿಯಂತ್ರಿಸುವ ಪ್ರಚಂಡಸಾಮರ್ಥ್ಯ ಎಂದರ್ಥ.
ಸಮುದ್ರದಲ್ಲಿ ಪವಡಿಸಿರುವಿಕೆ...ಬ್ರಹ್ಮಾಂಡದ ಹುಟ್ಟುವಿಕೆಗೆ ಬೇಕಾದ ವೀರ್ಯವನ್ನು ಧರಿಸಿರುವಿಕೆ...
ಎಲ್ಲರ ಹೃದಯದಲ್ಲಿರುವಿಕೆ...
ಇಂತಿಂಥ ಗುಣಗಳೆಲ್ಲ ಇರುವುದು ಮಹಾವಿಷ್ಣುವಿನಲ್ಲಿ ಅಲ್ಲವೇ !! ಎನ್ನುತ್ತಿವೆ
॥ ಓಂ ಅಂತಸ್ತದ್ಧರ್ಮೋಪದೇಶಾತ್ ಓಂ ॥ ಎಂಬೆರಡು ಸೂತ್ರಗಳು.

ಆದ್ದರಿಂದ ................

ಪ್ರಕಾಶಕರು : ಶ್ರೀಪಾದರಾಜಮಠ, ಮುಳಬಾಗಿಲು